ಶ್ರೀ ಚಾಮರಾಜೋಕ್ತಿವಿಲಾಸವೆಂಬ

# ಕನ್ನಡ ರಾಮಾಯಣ



ಪಂಡಿತರಿಂದ ಪರಿಷ್ಕೃತವಾದ ಪ್ರಥಮ ಮುದ್ರಣ



ಸಂಪುಟ ೧

**ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ ಮತ್ತು ಕಿಷ್ಕಿಂಧಾಕಾಂಡ**

ಪ್ರಧಾನ ಸಂಪಾದಕರು

**ವಿದ್ವಾನ್ ಎನ್. ರಂಗನಾಥಶರ್ಮಾ**

**ಶ್ರೀಮದ್ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿ**

**ಬೆಂಗಳೂರು—೪**

ಐದು ಸಾವಿರ ಪ್ರತಿಗಳು



ಪ್ರಥಮ ಸಂಪುಟ ಹನ್ನೆರಡು ರೂಪಾಯಿ

ದ್ವಿತೀಯ ಸಂಪುಟ ಹನ್ನೆರಡು ರೂಪಾಯಿ

ಒಂದೇ ಸಂಪುಟದಲ್ಲಿ ಇಪ್ಪತ್ತು ರೂಪಾಯಿ
( ಎರಡೂ ಸೇರಿ )



ಪ್ರಕಾಶಕರು
ಶ್ರೀಮದ್ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿ
ಶ್ರೀ ಚಂದ್ರಶೇಖರ ಭಾರತೀ ಕಲ್ಯಾಣ ಮಂದಿರ, ಪಂಪಮಹಾಕವಿ ರಸ್ತೆ
ಬೆಂಗಳೂರು—೪

ಮುದ್ರಕರು
ಶ್ರೀ ಎಂ. ಎಚ್. ಕೌಜಲಗಿ, ಬೃಂದಾವನ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್
ಚಾಮರಾಜಪೇಟೆ, ಬೆಂಗಳೂರು—೧೮

೧೯೬೭

# ಶ್ರೀಮದ್ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿ

ಮಹಾಪೋಷಕರು
ಶ್ರೀ ಜಯಚಾಮರಾಜ ಒಡೆಯರ್
ಮಹಾಪ್ರಭುಗಳವರು

ಪೋಷಕರು
ಶ್ರೀ ಎಸ್. ನಿಜಲಿಂಗಪ್ಪನವರು
ಮೈಸೂರು ರಾಜ್ಯದ ಮುಖ್ಯಮಂತ್ರಿಗಳು

ಅಧ್ಯಕ್ಷರು
ಶ್ರೀ ವಿ ವೆಂಕಟಪ್ಪನವರು, ಎಂ ಎಲ್ ಸಿ
ಮಾಜಿ ಮಂತ್ರಿಗಳು

ಕೋಶಾಧ್ಯಕ್ಷರು
ಶ್ರೀ ಯಾದಾಳಂ ಎನ್. ಗಂಗಾಧರಶೆಟ್ಟಿಯವರು
ಸುಪ್ರಸಿದ್ಧ ಕೈಗಾರಿಕೋದ್ಯಮಿಗಳು

ಕಾರ್ಯದರ್ಶಿಗಳು
ಶ್ರೀ ವಿ. ಎಸ್. ಕೃಷ್ಣಯ್ಯರ್
ಬೆಂಗಳೂರು ನಗರದ ಮಾಜಿ ಮೇಯರ್‌ರವರು

ಶ್ರೀ ಜಿ. ನಾರಾಯಣ
ಬೆಂಗಳೂರು ನಗರದ ಮಾಜಿ ಮೇಯರ್‌ರವರು

ಸದಸ್ಯರುಗಳು
ಶ್ರೀ ಹಾಮಂಡಿ ಸುಬ್ಬರಾಮ ಶೆಟ್ಟಿಯವರು
ಮಾಜಿ ಮಂತ್ರಿಗಳು

ಶ್ರೀ ಕೆ. ಪುಟ್ಟಸ್ವಾಮಿಯವರು
ಆರೋಗ್ಯ ಖಾತೆ ಮಂತ್ರಿಗಳು

ಶ್ರೀ ಎಸ್. ಎಲ್ ಮನ್ನಾಜಿರಾವ್‌ರವರು
ಸುಪ್ರಸಿದ್ಧ ವ್ಯಾಪಾರಿಗಳು

ಶ್ರೀ ಎಚ್. ಕೆ. ವೀರಣ್ಣಗೌಡರು
ಮಾಜಿ ಮಂತ್ರಿಗಳು

ಡಾ|| ಡಿ. ವಿ ಗುಂಡಪ್ಪನವರು
ಸುಪ್ರಸಿದ್ಧ ಸಾಹಿತಿಗಳು



## ಸಂಪಾದಕ ಮಂಡಲಿ

ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರವರು (ಪ್ರಧಾನ ಸಂಪಾದಕರು)
ವಿದ್ವಾನ್ ಶ್ರೀ ಜಿ. ಆರ್. ಶ್ರೀನಿವಾಸ ಅಯ್ಯಂಗಾರ್ಯರವರು
ವಿದ್ವಾನ್ ಶ್ರೀ ಎನ್. ಟಿ. ಶ್ರೀನಿವಾಸ ಅಯ್ಯಂಗಾರ್ಯರವರು
ವಿದ್ವಾನ್ ಶ್ರೀ ಎಸ್. ವೆಂಕಟನಾರಾಯಣಶಾಸ್ತ್ರಿಗಳವರು
ವಿದ್ವಾನ್ ಶ್ರೀ ಕೆ. ನರಸಿಂಹಶಾಸ್ತ್ರಿಗಳವರು

# ಪ್ರಾರ್ಥನೆ



ಕೂಜಂತಂ ರಾಮರಾಮೇತಿ ಮಧುರಂ ಮಧುರಾಕ್ಷರಮ್ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿಕೋಕಿಲಮ್ ॥

ವಾಲ್ಮೀಕಿಗಿರಿಸಂಭೂತಾ ರಾಮಸಾಗರಗಾಮಿನೀ ।
ಪುನಾತು ಭುವನಂ ಪುಣ್ಯಾ ರಾಮಾಯಣಮಹಾನದೀ ॥

ಗೋಷ್ಪದೀಕೃತವಾರಾಶಿಂ ಮಶಕೀಕೃತರಾಕ್ಷಸಮ್ ।
ರಾಮಾಯಣಮಹಾಮಾಲಾರತ್ನಂ ವಂದೇಽನಿಲಾತ್ಮಜಮ್ ॥

ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಮ್ ।
ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಮ್ ॥

ವಿಶ್ವಾಮಿತ್ರಾಂತರಂಗಾಯ ಮಿಥಿಲಾನಗರೀಪತೇಃ ।
ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ ಮಂಗಲಮ್ ॥



|| ಶ್ರೀರಾಮಚಂದ್ರಪರಬ್ರಹ್ಮಣೇ ನಮಃ ||



ಹನುಮಲ್ಲಕ್ಷ್ಮಣಸೇವಿತಮಮರಮಜಂ ಕಿಮಪಿ ಜಾನಕೀಭಾಗ್ಯಮ್ ।
ಧ್ಯಾಯಾಮಿ ನಿಗಮವೇದ್ಯಂ ಮಾನುಷಭಾವಾಶ್ರಿತಂ ತತ್ತ್ವಮ್ ॥



ಮೈಸೂರು ಅರಮನೆ
ಮೈಸೂರು
ತಾ|| ೧೩-೧-೧೯೩೭

ಶ್ರೀಃ

# ಮುನ್ನುಡಿ

ವಾಲ್ಮೀಕಿಮಹರ್ಷಿಗಳಿಂದ ರಚಿತವಾದ ಶ್ರೀಮದ್ರಾಮಾಯಣವು ಭಾರತೀಯ ಸಾಹಿತ್ಯ ಸಾಮ್ರಾಜ್ಯದಲ್ಲಿ ಅತ್ಯುನ್ನತಸ್ಥಾನವನ್ನು ಗಳಿಸಿದೆ. ಈ ಮಹಾಕಾವ್ಯಕ್ಕೆ "ಆದಿಕಾವ್ಯ"ವೆಂದೂ, ಇದರ ಕರ್ತೃವಿಗೆ "ಆದಿಕವಿ" ಎಂದೂ ಸಾರ್ಥಕವಾದ ವಿಶೇಷಣಗಳು ಬಹುಕಾಲದಿಂದ ಪ್ರಸಿದ್ಧಿಗೆ ಬಂದಿವೆ. ಇಲ್ಲಿನ ಕಥಾವಸ್ತುವು ಸಹೃದಯನ ರಸಜ್ಞತೆಯನ್ನು ಇಮ್ಮಡಿಸುವುದಲ್ಲದೆ, ಆತನ ಶ್ರೇಯಸ್ಸಿನ ಸಂಪಾದನೆಗೂ ಸಹಾಯಮಾಡುವುದೆಂದು ಭಾರತದ ಜನರೆಲ್ಲರ ನ್ಯಾಯವಾದ ನಂಬಿಕೆಯಾಗಿದೆ. ವಾಲ್ಮೀಕಿಮಹರ್ಷಿಗಳು ಈ ಮಹಾಕಾವ್ಯದಲ್ಲಿ ಪ್ರಧಾನಪಾತ್ರಗಳಾದ ಶ್ರೀರಾಮ, ಸೀತಾ, ಲಕ್ಷ್ಮಣ, ಭರತ, ಆಂಜನೇಯ ಮುಂತಾದವರ ಸ್ವರೂಪವನ್ನು ದಕ್ಷತೆಯಿಂದಲೂ, ಗೌಣಪಾತ್ರಗಳಾದ ಕೌಸಲ್ಯಾ, ತ್ರಿಜಟಾ, ಮಂಥರಾ, ಜನಕ ಮುಂತಾದವರನ್ನು ಸೂಕ್ಷ್ಮ ದೃಷ್ಟಿಯಿಂದಲೂ ಚಿತ್ರಿಸಿದ್ದಾರೆ ಕಥಾವಸ್ತುವು ಉದಾತ್ತವಾಗಿ ಶೋಭಿಸುವಂತೆ, ಕಥಾಪಾತ್ರಗಳು ವಿವಿಧವಾಗಿ ಮೆರೆಯುವಂತೆ, ಕಥಾನಿರೂಪಣೆಯು ಕುಶಲತೆಯಿಂದ ಕೂಡಿ ಆಕರ್ಷಣೀಯವಾಗಿದೆ. ರಮಣೀಯವಾದ ಈ ಸಾಹಿತ್ಯಾಂಶಗಳ ಬಹುಳತೆಯಿಂದ ಇತಿಹಾಸಗ್ರಂಥವು ಕಾಳಿದಾಸ, ಭವಭೂತಿ ಮತ್ತು ಭೋಜರಾಜರಂತಹ ಕವಿವರ್ಯರಿಗೂ ಸ್ಫೂರ್ತಿದಾಯಕವಾಯಿತು, ಅನೇಕ ಇತರ ಪ್ರಮುಖ ಕಾವ್ಯಕರ್ತರ ಮೆಚ್ಚುಗೆಯನ್ನೂ ಪಡೆಯಿತು. ಇಲ್ಲಿನ ರಸಪ್ರತಿಪಾದನರೀತಿಯಂತೂ ಸಾಹಿತ್ಯಮೀಮಾಂಸಕರ ಹೊಗಳಿಕೆಗೆ ಪಾತ್ರವಾಯಿತು. ಅಂತೂ ಶ್ರೀಮದ್ರಾಮಾಯಣವು ಭಾರತೀಯ ಸಂಸ್ಕೃತಿಯ ಆಧಾರಗ್ರಂಥವೆಂದು ಪರಿಗಣಿತವಾಯಿತು. ಇಷ್ಟಲ್ಲದೆ ಈ ಕಾವ್ಯದ ಸಂದೇಶವಾದರೋ ಸತ್ಯಸಂಧತೆಯ ಆವಶ್ಯಕತೆ, ಧರ್ಮದೃಷ್ಟಿಯ ಪ್ರಭಾವ, ಪಾತಿವ್ರತ್ಯದ ವೈಭವ ಮತ್ತು ಭ್ರಾತೃವಾತ್ಸಲ್ಯದ ಮಹತ್ತ್ವವಾದುದರಿಂದ ಈ ಮಹಾಕಾವ್ಯಕ್ಕೆ ಅಮರತ್ವವು ಪ್ರಾಪ್ತವಾಗಿ "ಎಂದಿನವರೆವಿಗೆ ಪರ್ವತಗಳು ಈ ಭೂಮಿಯ ಮೇಲೆ ಇರುವುವೋ, ಎಂದಿನವರೆವಿಗೆ ನದಿಗಳು ಈ ಭೂಮಿಯಮೇಲೆ ಪ್ರವಹಿಸುವುವೋ, ಅಂದಿನವರೆವಿಗೆ ಈ ರಾಮಾಯಣದ ಕಥೆಯು ಪ್ರಚಲಿತವಾಗಿರುತ್ತದೆ" ಎಂಬ ನುಡಿಯು ಮನೆಮಾತಾಗಿ ನಿಂತಿದೆ :

ಯಾವತ್ ಸ್ಥಾಸ್ಯನ್ತಿ ಗಿರಯಃ ಸರಿತಶ್ಚ ಮಹೀತಲೇ ।
ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ ॥

[ ಬಾಲಕಾಂಡ, ಸರ್ಗ ೨ ೩೬–೩೭ ]

ಇಂತಹ ಗಂಭೀರವೂ ಮತ್ತು ಶಾಶ್ವತವೂ ಆದ ಕಾವ್ಯರತ್ನವು ಗೀರ್ವಾಣಭಾಷೆಯಲ್ಲಿದ್ದುದರಿಂದ ಸಾಮಾನ್ಯ ಜನರಿಗೆ ಅದನ್ನು ಓದಿ ಆನಂದಪಡಲು ಕಷ್ಟವಾಯಿತು ಆದುದರಿಂದ ಇದರ ಮಹತ್ತ್ವವನ್ನೂ ರುಚಿಯನ್ನೂ ಸಕಲರಿಗೂ ತಿಳಿಸುವ ಪ್ರಯತ್ನವು ಭಾರತದ ಅನೇಕ ಪ್ರದೇಶಗಳಲ್ಲಿ ಪ್ರಾರಂಭವಾದಂತೆ ಕನ್ನಡ ರಾಜ್ಯದಲ್ಲಿಯೂ ಬಹುವರ್ಷಗಳ ಹಿಂದೆ ಪ್ರಾರಂಭವಾಯಿತು ಇಂತಹ ಪ್ರಯತ್ನದಲ್ಲಿ ತೊಡಗಿದವರೆಂದರೆ ನಮ್ಮ ಪೂರ್ವಜರೂ, ವಿದ್ಯಾಪ್ರಿಯರೂ, ವಿದ್ಯಾಪೋಷಕರೂ ಆದ ಶ್ರೀಮನ್ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್ ಮಹಾಪ್ರಭುಗಳವರು ಆ ರಾಜರ ಪ್ರತಿಭೆ ಮತ್ತು ಪ್ರೋತ್ಸಾಹದ ಪರಿಣಾಮವಾಗಿ ರಾಮಾಯಣ, ಭಾರತ ಮತ್ತು ಭಾಗವತ ಗ್ರಂಥಗಳು ಗೀರ್ವಾಣ ಭಾಷೆಯಿಂದ ಕನ್ನಡ ಭಾಷೆಗೆ ಪರಿವರ್ತನ ಹೊಂದಿದವು. ಕನ್ನಡ ರಾಮಾಯಣಕ್ಕೆ ರಾಜರು 'ಶ್ರೀ ಚಾಮರಾಜೋಕ್ತಿವಿಲಾಸ" ಎಂಬುದಾಗಿ ನಾಮಕರಣವನ್ನು ದಯಪಾಲಿಸಿ, ತಮ್ಮ ತೀರ್ಥರೂಪರವರಲ್ಲಿ ತಮಗಿದ್ದ ಗೌರವ–ಭಕ್ತಿಗಳನ್ನು ಹೊರಪಡಿಸಿದರು. ಮುಂದೆ ಗ್ರಂಥಪೋಷಣೆಯಲ್ಲಿ ಇವರಷ್ಟೇ ಮಮತೆ ಹೊಂದಿದ್ದ ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಅವರು ಈ ರಾಮಾಯಣ ಮತ್ತು ಮಹಾಭಾರತಗಳ ಪ್ರಕಟನೆಯಲ್ಲಿ ತೊಡಗಿದ್ದವರನ್ನು ಬಹುವಾಗಿ ಪ್ರೋತ್ಸಾಹಿಸಿದರು. ಇದರ ಫಲವಾಗಿ "ಶ್ರೀ ಚಾಮರಾಜೋಕ್ತಿವಿಲಾಸ" ವೆಂಬ ಕನ್ನಡ ರಾಮಾಯಣವು ಬೆಳಕಿಗೆ ಬಂದಿತು.

ಆದರೆ ಬಹುವರ್ಷಗಳ ಹಿಂದೆ ಮುದ್ರಿತವಾದ ಶ್ರೀ ಚಾಮರಾಜೋಕ್ತಿವಿಲಾಸ ರಾಮಾಯಣವನ್ನು ಈಗ ಪರಿಷ್ಕಾರಮಾಡಿ ಪ್ರಕಟಪಡಿಸುವ ಸ್ಥಿತಿಯೊದಗಿದೆ ಹಿಂದಿನ ಮುದ್ರಿತ ಪ್ರತಿಗಳು ದುರ್ಲಭವಾಗಿರುವುದರಿಂದಲೂ, ಗ್ರಂಥದ ಭಾಷೆಯು ಅಭಿರುಚಿಯನ್ನು ಹುಟ್ಟಿಸಬೇಕಾದಲ್ಲಿ ಈಗಿನ ಕನ್ನಡ ಭಾಷೆಗೆ ಅನುಗುಣವಾಗಿರಬೇಕಾದುದರಿಂದಲೂ, ಪುನಃ ಮುದ್ರಿಸುವ ಕಾರ್ಯವನ್ನು ಶ್ರೀಮದ್ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿಯವರು ಈಗ ಕೈಕೊಂಡಿರುವರು ನಾಡಿನ ಹಿರಿಯರೂ ಪ್ರಸಿದ್ಧವಿದ್ವನ್ಮಣಿಗಳೂ ಆದ ಶ್ರೀಮಾನ್ ಡಿ. ವಿ ಗುಂಡಪ್ಪನವರ ನೇತೃತ್ವದಲ್ಲಿಯೂ ಮತ್ತು ಕಾವ್ಯವಿಚಾರಪರರೂ ವಿದ್ವಾಂಸರೂ ಆದ ಶ್ರೀಯುತ ಎನ್. ರಂಗನಾಥಶರ್ಮಾರವರ ಪ್ರಧಾನ ಸಂಪಾದಕತ್ವದಲ್ಲಿಯೂ ಈ ಕಾರ್ಯವು ದಕ್ಷತೆಯಿಂದ ಸಾಗಿ, ಈಗ ರಸವತ್ತರವಾಗಿ ವಾಚಕರ ಕೈಯನ್ನು ಸೇರುತ್ತಲಿದೆ.

ಇಂತಹ ಗುರುತರವಾದ ಸಂಶೋಧನೆ ಮತ್ತು ಪ್ರಕಟನೆಯ ಕಾರ್ಯವನ್ನು ಕುಶಲತೆಯಿಂದ ನಿರ್ವಹಿಸಿ, ಕನ್ನಡ ಜನರಿಗೆ ಶ್ರೀಮದ್ರಾಮಾಯಣದ ಸವಿಯೂಟವನ್ನು ಮಾಡಿಸಿರುವ ಪ್ರಕಟನ ಸಮಿತಿಗೆ ನಮ್ಮ ಹೃತ್ಪೂರ್ವಕವಾದ ವಂದನೆ ಮತ್ತು ಧನ್ಯವಾದಗಳು ಸಮಿತಿಯವರು ಶೀಘ್ರದಲ್ಲಿಯೇ ಇನ್ನೂ ಇದೇ ತೆರನಾದ ಇತರ ಕಾವ್ಯರಾಶಿಯನ್ನೂ ಪ್ರಕಟಪಡಿಸಲೆಂದು ಹಾರೈಸುತ್ತೇವೆ.

ಜಯಚಾಮರಾಜ ಒಡೆಯರ್
ಮೈಸೂರು ಶ್ರೀಮನ್ಮಹಾರಾಜರವರು

# ಪ್ರಕಾಶಕರ ಬಿನ್ನಹ

ವಿಶ್ವಕವಿಗಳ ಪಂಕ್ತಿಯಲ್ಲಿ ವಿರಾಜಿಸುತ್ತಿರುವ ವಾಲ್ಮೀಕಿ, ವ್ಯಾಸ, ಕಾಳಿದಾಸರ ಕೃತಿಗಳು ಭಾರತದ ಪರಮ ಭಾಗ್ಯ, ಅವು ಇಡೀ ಪ್ರಪಂಚದ ಭಾಗ್ಯವೆಂದರೂ ಅತಿಶಯೋಕ್ತಿಯಲ್ಲ. ಈ ಮೂವರು ಕವಿಶ್ರೇಷ್ಠರ ಕೃತಿಗಳಲ್ಲಿ ಭಾರತೀಯ ಸಂಸ್ಕೃತಿಯ ಸಮಗ್ರ ಚರಿತ್ರೆಯೇ ಅಡಕವಾಗಿವೆಯೆಂದೂ, ಅವು ಮಾತ್ರ ಉಳಿದುಕೊಂಡು ಭಾರತದ ಇತರ ಸಮಸ್ತ ಗ್ರಂಥಗಳೂ ಕಳೆದುಹೋದರೂ ಭಾರತೀಯ ಸಂಸ್ಕೃತಿಯ ಸಮಗ್ರ ಚರಿತ್ರೆಯನ್ನರಿಯಲು ಕೊರತೆಯುಂಟಾಗದೆಂದೂ ಭಾರತದ ಮಹಾಪುರುಷರಲ್ಲೊಬ್ಬರಾದ ಅರವಿಂದ ಯೋಗಿಗಳು ಅಭಿಪ್ರಾಯಪಟ್ಟಿದ್ದಾರೆ. ಅತ್ಯಂತ ಪ್ರಾಚೀನ ಕಾಲದಿಂದ ಶ್ರೀಮದ್ರಾಮಾಯಣವೂ ಶ್ರೀಮನ್ಮಹಾಭಾರತವೂ ನಮ್ಮ ದೇಶದ ಧಾರ್ಮಿಕ ಜೀವನವನ್ನು ರೂಪಿಸುವುದರಲ್ಲಿ ಇತರ ಯಾವುದೇ ಗ್ರಂಥಗಳಿಗಿಂತಲೂ ಹೆಚ್ಚು ಪ್ರಭಾವಶಾಲಿಗಳಾಗಿವೆಯೆಂದರೆ ಉತ್ಪ್ರೇಕ್ಷೆಯಾಗಲಾರದು ಧಾರ್ಮಿಕತೆಯೊಂದ ಮಾತ್ರಕ್ಕೆ ಐಹಿಕ ಸುಖ ಸಂಪತ್ತುಗಳನ್ನೆಲ್ಲ ಸರ್ವಥಾ ಅಲಕ್ಷ್ಯಮಾಡತಕ್ಕದ್ದೆಂಬುದು ರಾಮಾಯಣ ಮಹಾಭಾರತಗಳ ಆಶಯವಲ್ಲವೆಂದು ಧಾರಾಳವಾಗಿ ಹೇಳಬಹುದು ಅರ್ಥವಾಗಲಿ ಭೋಗವಾಗಲಿ ಧರ್ಮಕ್ಕೆ ವಿರುದ್ಧವಾಗಕೂಡದೆಂಬುದೂ ಜೀವನದ ಸಮಸ್ತಕಾರ್ಯಗಳೂ ಧರ್ಮಸಂಮತವಾಗಿರಬೇಕೆಂಬುದೂ ಅವುಗಳ ಆಶಯ. ವಾಲ್ಮೀಕಿರಾಮಾಯಣದಲ್ಲಿ ಸತ್ಯ ಧರ್ಮಗಳಿಗೂ ನಯ ನೀತಿಗಳಿಗೂ ಪ್ರಾಧಾನ್ಯ; ರವೀಂದ್ರನಾಥ ಠಾಕೂರರೂ ಅರವಿಂದರೂ ಆಧುನಿಕ ಭಾರತ ನಿರ್ಮಾಪಕರಾದ ಇತರ ಅನೇಕ ಮಹಾಪುರುಷರೂ ಸ್ವತಂತ್ರ ಭಾರತ ಪಿತಾಮಹರಾದ ಮಹಾತ್ಮಾ ಗಾಂಧಿಯವರೂ ವಾಲ್ಮೀಕಿರಾಮಾಯಣವನ್ನು ಮನವಾರೆ ಕೊಂಡಾಡಿರುವುದು ಈ ಕಾರಣಕ್ಕಾಗಿಯೇ ರಾಮಭಕ್ತಿಯೇ ಮಹಾತ್ಮಾ ಗಾಂಧಿಯವರ ತಾರಕಶಕ್ತಿ "ರಘುಪತಿ ರಾಘವ ರಾಜಾರಾಮ್, ಪತಿತ ಪಾವನ ಸೀತಾರಾಮ್" ಮುಂತಾದ "ರಾಮಧುನ್" ವಾಕ್ಯಗಳೇ ಮಹಾತ್ಮಾ ಗಾಂಧಿಯವರ ಜಪ. ಸ್ವತಂತ್ರಭಾರತದಲ್ಲಿ ಮತ್ತೆ ರಾಮರಾಜ್ಯಸ್ಥಾಪನೆಯಾಗಬೇಕೆಂಬುದೇ ಅವರ ಉದಾತ್ತ ಧ್ಯೇಯವಾಗಿತ್ತು. ರಾಮಾಯಣದಲ್ಲಿಯ ಶ್ರೇಷ್ಠ ಆದರ್ಶಗಳನ್ನೂ ತತ್ತ್ವಗಳನ್ನೂ ಜೀವನದಲ್ಲಿ ಅನುಗೊಳಿಸಿ ಸತ್ಯಕ್ಕೂ ಧರ್ಮಕ್ಕೂ ಪ್ರಾಧಾನ್ಯವಿರುವಂತೆ ವರ್ತಿಸುವುದೇ ಭಾರತೀಯರನ್ನುದ್ಧರಿಸುವ ಸಾಧನವೆಂಬುದು ಮಹಾತ್ಮಾ ಗಾಂಧಿಯವರು ಅನುಸರಿಸಿದ ಮೂಲ ಸೂತ್ರ ರಾಮಾಯಣದಲ್ಲಿ ಸೂಚಿತವಾಗಿರುವ ನೀತಿಧರ್ಮಗಳನ್ನು ಜೀವನದಲ್ಲಿ ಅನುಗೊಳಿಸಿಕೊಂಡರೆ ಅವು ಭಾರತೀಯರನ್ನು ಮಾತ್ರವಲ್ಲದೆ ಜಗತ್ತಿನ ಇತರ ದೇಶಗಳವರನ್ನೂ ಉದ್ಧರಿಸಬಲ್ಲವೆಂದು ಆಧುನಿಕಕಾಲದ ಪಾಶ್ಚಾತ್ಯಪ್ರಾಜ್ಞರನೇಕರು ಅಭಿಪ್ರಾಯಪಟ್ಟಿದ್ದಾರೆ.

ಜೀವನರಹಸ್ಯಗಳನ್ನು ಪ್ರಕಾಶಗೊಳಿಸಿ ಉದಾತ್ತ ಜೀವನಧ್ಯೇಯಗಳನ್ನು ಮನೋಹರವಾಗಿ ನಿರೂಪಿಸಿ ಜನತೆಗೆ ಮಾರ್ಗದರ್ಶನ ನೀಡುವ ರಾಮಾಯಣ ಮಹಾಭಾರತ ಕಾವ್ಯಜ್ಯೋತಿಗಳ ಕಾಂತಿಯು ಕನ್ನಡನಾಡಿನ ಮನೆಮನೆಯಲ್ಲೂ ಬೆಳಗುವಂತಾಗಬೇಕೆಂಬ ಮಹೋದ್ದೇಶದಿಂದ ಈಗ್ಗೆ ಸುಮಾರು ನೂರೈವತ್ತು ವರ್ಷಗಳ ಹಿಂದೆ ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಮಹಾಪ್ರಭುಗಳವರು ರಾಮಾಯಣ ಮಹಾಭಾರತಗಳನ್ನು ತಮ್ಮ ಆಸ್ಥಾನದ ವಿದ್ವಾಂಸರುಗಳಿಂದ ಲಲಿತಗಂಭೀರವಾದ ಕನ್ನಡ ಗದ್ಯರೂಪಕ್ಕೆ ಅನುವಾದ ಮಾಡಿಸಿದರು.

ಅವರ ಕುಮಾರರು ಶ್ರೀ ಚಾಮರಾಜೇಂದ್ರ ಒಡೆಯರ್ ಮಹಾಪ್ರಭುಗಳವರು ಈ ಕನ್ನಡ ಗ್ರಂಥಗಳನ್ನು ಜನೋಪಕಾರಾರ್ಥವಾಗಿ ಪ್ರಕಟಪಡಿಸಲು ಅನುಜ್ಞೆಯನ್ನು ಆಗ ಬೆಂಗಳೂರಿನಲ್ಲಿ ಪ್ರಸಿದ್ಧ ಫಲಪುಷ್ಪ ವ್ಯಾಪಾರಿಗಳಾಗಿದ್ದ ಶ್ರೀ ಎಮ್ ರುದ್ರಪ್ಪನವರಿಗೆ ದಯಪಾಲಿಸಿದರು. ಶ್ರೀ ಎಮ್. ರುದ್ರಪ್ಪ ಅಂಡ್ ಸನ್ಸ್ ಅವರು "ಶ್ರೀ ಕೃಷ್ಣರಾಜ ವಾಣೀವಿಲಾಸ" ನಾಮಾಂಕಿತದಲ್ಲಿ ಕನ್ನಡ ವಚನ ಭಾರತದ ಹದಿನೆಂಟು ಪರ್ವಗಳನ್ನೂ "ಶ್ರೀ ಚಾಮರಾಜೋಕ್ತಿವಿಲಾಸ" ನಾಮಾಂಕಿತದಲ್ಲಿ ಕನ್ನಡ ವಚನ ರಾಮಾಯಣದ ಏಳು ಕಾಂಡಗಳನ್ನೂ ಪ್ರಕಟಪಡಿಸಿದರು ಮಹಾಜನರು ಈ ಗ್ರಂಥಗಳನ್ನು ಕೃತಜ್ಞತೆಯಿಂದಲೂ ಉತ್ಸಾಹದಿಂದಲೂ ಸ್ವಾಗತಿಸಿ ಅವುಗಳ ವ್ಯಾಸಂಗದಿಂದ ಹರ್ಷಿಸಿ ಲಾಭಪಡೆದರು.

ಈ ಗ್ರಂಥಗಳ ಮೊದಲಚ್ಚಿನ ಪ್ರತಿಗಳು ಮುಗಿದುಹೋಗಿ ಅನೇಕ ವರ್ಷಗಳಾಗಿವೆ. ಈ ಗ್ರಂಥಗಳ ಪುನರ್ಮುದ್ರಣ ಅವಶ್ಯವೆಂದು ಅನೇಕರು ಸಾರಿದ್ದಾರೆ ಬೆಂಗಳೂರಿನ ಅಂದಿನ ಮೇಯರಾಗಿದ್ದ ಶ್ರೀ ಜಿ. ನಾರಾಯಣ ಅವರು ಈ ವಿಷಯವನ್ನು ನನ್ನಲ್ಲಿ ಪ್ರಸ್ತಾಪ ಮಾಡಿದರು. ಗ್ರಂಥಗಳು ಆದಷ್ಟು ಬೇಗ ಪುನರ್ಮುದ್ರಣವಾಗಬೇಕೆಂದು ನಿರ್ಣಯಿಸಿದೆವು. ಗ್ರಂಥಪರಿಷ್ಕರಣಾದಿ ಕಾರ್ಯಕ್ಕಾಗಿ ನಮಗೆ ವಿದ್ವಾಂಸರ ನೆರವನ್ನೊದಗಿಸಿ ಮಾರ್ಗದರ್ಶನ ನೀಡಬಲ್ಲ ಸಮರ್ಥ ವಿದ್ವದ್ರಸಿಕರೊಬ್ಬರ ಬೆಂಬಲ ಬೇಕಾಯಿತು ವಿದ್ವನ್ಮಣಿಗಳಾದ ಡಾ|| ಡಿ. ವಿ ಗುಂಡಪ್ಪನವರು ಈ ಕಾರ್ಯವನ್ನು ವಹಿಸಿಕೊಂಡು ನೆರವಾಗುವುದಾದರೆ ನಮ್ಮ ಪ್ರಯತ್ನ ಸಾಂಗವಾಗಿ ನೆರವೇರುತ್ತದೆಂದು ತೀರ್ಮಾನಿಸಿದೆವು. ಅವರು ಔದಾರ್ಯದಿಂದ ಒಪ್ಪಿಕೊಂಡರು. ಹಲವರು ಗಣ್ಯ ಮಹನೀಯರನ್ನೊಳಗೊಂಡ ಸಮಿತಿಯೊಂದನ್ನು ರಚಿಸಿದ್ದಾಯಿತು ಅಲ್ಲದೆ ಶ್ರೀಮನ್ಮಹಾರಾಜರು ಶ್ರೀ ಜಯಚಾಮರಾಜೇಂದ್ರ ಒಡೆಯರ್ ಮಹಾಪ್ರಭುಗಳವರನ್ನು ಸಮಿತಿಯ ಮಹಾಪೋಷಕರಾಗಿರಬೇಕೆಂದೂ ಸಂಸ್ಥಾನದ ಮುಖ್ಯಮಂತ್ರಿಗಳಾದ ಶ್ರೀಮಾನ್ ಎಸ್. ನಿಜಲಿಂಗಪ್ಪನವರನ್ನು ಪೋಷಕರಾಗಿರಬೇಕೆಂದೂ ಪ್ರಾರ್ಥಿಸಿಕೊಂಡೆವು ಆ ಇಬ್ಬರು ಮಹನೀಯರೂ ಅದಕ್ಕೆ ಸಂಮತಿಸಿ ನಮಗೆ ಉತ್ತೇಜನ ಕೊಟ್ಟರು. ಅವರಿಬ್ಬರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಗ್ರಂಥವು ಪ್ರಕಟನೆಗೆ ಸಿದ್ಧವಾದಾಗ ಮಹಾಪೋಷಕರೂ ಜನಹಿತೈಷಿಗಳೂ ಸತ್ಕಾರ್ಯ ಪಕ್ಷಪಾತಿಗಳೂ ಆದ ಶ್ರೀ ಜಯಚಾಮರಾಜ ಒಡೆಯರ್ ಮಹಾಸ್ವಾಮಿಗಳವರ ಶುಭಾಶಂಸನೆಯನ್ನು ಕೋರಲಾಯಿತು ತಮ್ಮ ಕಾರ್ಯಬಾಹುಳ್ಯದ ನಡುವೆ ಅವಕಾಶಮಾಡಿಕೊಂಡು ಪ್ರಭುಗಳವರು ವೈದುಷ್ಯಪೂರ್ಣವೂ ಅತ್ಯಂತ ಸ್ಫೂರ್ತಿದಾಯಕವೂ ಆದ ಮುನ್ನುಡಿಯನ್ನು ದಯಪಾಲಿಸಿದರು. ಸಮಿತಿಯ ಉದ್ದೇಶಗಳನ್ನು ಸ್ಪಷ್ಟೀಕರಿಸುವುದೂ ಶ್ರೀಮದ್ರಾಮಾಯಣದ ಬಹುಮುಖವಾದ ಮಹತ್ತ್ವವನ್ನು ಎತ್ತಿತೋರಿಸುವುದೂ ಆದ ಈ ಪ್ರೌಢರೀತಿಯ ಭೂಮಿಕೆಯೊಂದಿಗೆ ಈ ಸಂಪುಟವನ್ನು ಪ್ರಕಟಿಸಲಾಗಿರುವುದು ಸಮಿತಿಗೆ ಹೆಮ್ಮೆಯ ವಿಷಯವಾಗಿದೆ. ಇದಕ್ಕಾಗಿ ಮಹಾಸ್ವಾಮಿಯವರಿಗೆ ಸಮಿತಿಯು ಧನ್ಯವಾದಗಳನ್ನು ಸಲ್ಲಿಸುತ್ತದೆ

ಸಮಿತಿಯ ಕೋಶಾಧ್ಯಕ್ಷರಾದ ಶ್ರೀ ಯಾದಾಳಂ ಎನ್. ಗಂಗಾಧರ ಶೆಟ್ಟರವರೂ ಕಾರ್ಯದರ್ಶಿಗಳಾದ ಶ್ರೀ ವಿ. ಎಸ್. ಕೃಷ್ಣಯ್ಯರ್ ಮತ್ತು ಶ್ರೀ ಜಿ. ನಾರಾಯಣ ಅವರೂ ಆರಂಭದಿಂದಲೂ ತೋರಿರುವ ಉತ್ಸಾಹವನ್ನೂ ಕಾರ್ಯಶ್ರದ್ಧೆಯನ್ನೂ ಕೃತಜ್ಞತೆಯಿಂದ ಸ್ಮರಿಸುವುದು ನನ್ನ ಸಂತೋಷದ ಕರ್ತವ್ಯವಾಗಿದೆ. ಇವರಿಗೂ ಸಮಿತಿಯ ಇತರ ಸದಸ್ಯಮಿತ್ರರಿಗೂ ನಾನು ಋಣಿ.

ಪುನರ್ಮುದ್ರಣ ಯೋಜನೆಯ ಆರಂಭೋತ್ಸವ ತಾ || ೮–೭–೧೯೬೪ ರಂದು ಬೆಂಗಳೂರಿನ ಶಂಕರಮಠದ ಆವರಣದಲ್ಲಿ ನಡೆಯಿತು. ಆಗ ಮೈಸೂರಿನ ರಾಜ್ಯಪಾಲರಾಗಿದ್ದ ಜನರಲ್

ಶ್ರೀ ಎಸ್. ಎಮ್ ಶ್ರೀನಗೇಶ್ ಅವರು ನಮ್ಮ ಪ್ರಯತ್ನಕ್ಕೆ ಯಶಸ್ಸನ್ನು ಕೋರಿ ಸಮಿತಿಯ ಕಾರ್ಯವನ್ನು ಉದ್ಘಾಟಿಸಿದರು ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರೂ ಆ ಸಂದರ್ಭದಲ್ಲಿ ಮಾತನಾಡಿ ಸಮಿತಿಯು ಕೈಕೊಂಡಿರುವ ಕಾರ್ಯವು ಪ್ರಶಂಸನೀಯವೆಂದು ಹೇಳಿದರು

ಸಮಿತಿಯ ಕೆಲಸಕಾರ್ಯಗಳಿಗಾಗಿ ಒಂದು ಸ್ಥಳ ಬೇಕಾಗಿದ್ದುದರಿಂದ ಶೃಂಗಗಿರಿ ಜಗದ್ಗುರುಗಳವರನ್ನು ಪ್ರಾರ್ಥಿಸಿಕೊಂಡೆವು. ಅವರು ಬೆಂಗಳೂರಿನಲ್ಲಿ ನಿರ್ಮಿಸಿರುವ ಶ್ರೀ ಚಂದ್ರಶೇಖರ ಭಾರತೀ ಕಲ್ಯಾಣಮಂದಿರದಲ್ಲಿ ಒಂದು ಕೊಠಡಿಯನ್ನು ನಮ್ಮ ಉಪಯೋಗಕ್ಕಾಗಿ ಬಿಡಿಸಿಕೊಟ್ಟರು. ಈ ಉಪಕಾರಕ್ಕಾಗಿ ಸಮಿತಿಯು ಶ್ರೀಶ್ರೀಗಳವರಿಗೆ ಚಿರಋಣಿಯಾಗಿದೆ.

ಗ್ರಂಥಪರಿಷ್ಕರಣಾದಿ ಕಾರ್ಯಕ್ಕೂ ಕಚೇರಿಯ ನಿರ್ವಹಣೆಗೂ ಬೇಕಾದ ಮೇಜು, ಕುರ್ಚಿ ಮೊದಲಾದವನ್ನು ಮೈಸೂರು ಬಾಯ್ಸ್ ಇಂಡಸ್ಟ್ರೀಸ್ ಸಂಸ್ಥೆಯವರು ದಾನವಾಗಿ ಕೊಟ್ಟರು. ಅವರ ಉಪಕಾರಕ್ಕಾಗಿ ವಂದನೆ

ಸಮಿತಿಯ ಕಾರ್ಯದ ಪ್ರಾರಂಭದಶೆಯಲ್ಲಿ ನಾವು ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರ ಸಹಾಯವನ್ನು ಕೋರಿದೆವು. ಅವರಿಂದ ನಮಗೆ ಅನೇಕ ವಿಧದಲ್ಲಿ ನೆರವು ದೊರೆತಿದೆ ಸಮಿತಿಯು ಕೈಕೊಂಡಿರುವ ಕಾರ್ಯದ ಮುಖ್ಯತೆಯನ್ನೂ ಸಹಾಯಾರ್ಹತೆಯನ್ನೂ ಹಲವಾರು ಗಣ್ಯರ ಹಾಗೂ ಔದ್ಯಮಿಕ ಸಂಸ್ಥೆಗಳ ಗಮನಕ್ಕೆ ತರಲು ಶ್ರೀ ನಿಜಲಿಂಗಪ್ಪನವರು ಕಾರಣರಾದರು. ಅವರ ಸಲಹೆಯ ಮೇರೆಗೆ ಸಮಿತಿಯ ಕಾರ್ಯಕ್ಕೆ ವೆಸ್ಟ್ ಕೋಸ್ಟ್ ಪೇಪರ್ ಮಿಲ್ಸ್ ಸಂಸ್ಥೆಯು ಉದಾರ ನೆರವು ನೀಡಿತು. ಆ ಸಂಸ್ಥೆಯ ಬೆಂಗಳೂರಿನ ಪ್ರತಿನಿಧಿಗಳಾದ ಶ್ರೀ ಛೋಟುಭಾಯ್ ದೇಸಾಯ್ ಅವರು ಸಮಿತಿಯ ಕಾರ್ಯದಲ್ಲಿ ಆಸಕ್ತಿವಹಿಸಿದರು. ಗ್ರಂಥಮುದ್ರಣಕ್ಕೆ ಬೇಕಾದ ಉತ್ತಮ ದರ್ಜೆಯ ಕಾಗದವನ್ನು ಸಕಾಲದಲ್ಲಿ ಒದಗಿಸಿದುದಕ್ಕಾಗಿ ಶ್ರೀ ಛೋಟುಭಾಯ್ ದೇಸಾಯ್ ಅವರಿಗೆ ನಮ್ಮ ಕೃತಜ್ಞತೆ ಸಲ್ಲುತ್ತದೆ.

ವಿದ್ವಾಂಸರುಗಳು ಏನು ಕೆಲಸ ಮಾಡಿದ್ದಾರೆಂಬುದನ್ನೂ ಎಷ್ಟು ಶ್ರಮಸಾಧ್ಯವಾದ ಕೆಲಸವನ್ನು ಅವರು ನಿರ್ವಹಿಸಿದ್ದಾರೆಂಬುದನ್ನೂ ಡಾ|| ಡಿ. ವಿ. ಗುಂಡಪ್ಪನವರ ಪ್ರಸ್ತಾವನೆಯಿಂದಲೂ ಪ್ರಧಾನ ಸಂಪಾದಕರಾದ ವಿದ್ವಾನ್ ಶ್ರೀ ಎನ್. ರಂಗನಾಥಶರ್ಮಾರವರ ನಿವೇದನೆಯಿಂದಲೂ ತಿಳಿಯಬಹುದು. ವಿದ್ವಾನ್ ಶ್ರೀ ಶರ್ಮಾರವರು ಗ್ರಂಥಪರಿಷ್ಕರಣದ ಮತ್ತು ಮುದ್ರಣದ ಕಾರ್ಯದಲ್ಲಿ ಬಹುವಾಗಿ ಶ್ರಮಿಸಿದ್ದಾರೆ ಈ ವಿದ್ವದ್ವರ್ಗಕ್ಕೆ ಸಮಿತಿಯ ಕೃತಜ್ಞತೆಯ ಧನ್ಯವಾದಗಳು.

ಶ್ರೀ ಎಸ್. ಆರ್ ರಾಮಸ್ವಾಮಿಗಳು ಅಂತಿಮ ಕರಡುಗಳನ್ನು ಶೋಧಿಸಿಕೊಟ್ಟು ಮುದ್ರಣ ವಿನ್ಯಾಸವನ್ನು ಉತ್ತಮಪಡಿಸಲು ಬಹಳ ಸಹಾಯ ಮಾಡಿದ್ದಾರೆ. ಇವರಿಗೆ ಪ್ರಕಟನ ಸಮಿತಿಯು ಕೃತಜ್ಞತೆಯ ವಂದನೆಗಳನ್ನರ್ಪಿಸುತ್ತದೆ.

ಗ್ರಂಥವನ್ನು ಅಂದಗೊಳಿಸಲು ಕಾರಣವಾದ ಸೊಗಸಾದ ಚಿತ್ರಗಳನ್ನು ಶ್ರಮವಹಿಸಿ ತಯಾರಿಸಿಕೊಟ್ಟ ಚಿತ್ರಕಾರರು ಶ್ರೀ ಎಚ್ ಎಸ್. ಇನಾಮತಿಯವರೂ ಶ್ರೀ ಎಸ್. ಟಿ ವಿ. ರಾವ್ ಅವರೂ ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಪ್ರಕಟನ ಸಮಿತಿಯ ಕಚೇರಿಯ ವಹಿವಾಟನ್ನೆಲ್ಲ ಅದು ತಮ್ಮದೇ ಕಾರ್ಯವೆಂಬಂತೆ ಆಸ್ಥೆಯಿಂದ ನಿರ್ವಹಿಸಿ ನೆರವಾಗಿರುವವರು ಶ್ರೀ ಜಿ. ಕೆ. ಗುಂಡೂರಾವ್ ಅವರು. ಅವರ ಉಪಕಾರ ಸ್ಮರಣೀಯವಾಗಿದೆ.

ಗ್ರಂಥದ ಮುದ್ರಣಕಾರ್ಯವನ್ನು ನಿರ್ವಹಿಸಿಕೊಟ್ಟ ಬೃಂದಾವನ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಸಂಸ್ಥೆಯ ಮಾಲೀಕರಾದ ಶ್ರೀ ಎಮ್ ಎಚ್ ಕೌಜಲಗಿಯವರನ್ನೂ ಅವರ ಕಾರ್ಯವರ್ಗವನ್ನೂ ವಂದಿಸಲು ನಮಗೆ ಮಾತುಗಳು ಸಾಲದಾಗಿವೆ ಮುದ್ರಣಕಾರ್ಯವನ್ನು ಅವರು ಅತ್ಯಂತ ಸುಂದರವಾಗಿ ನಿರ್ವಹಿಸಿದ್ದಾರೆಂಬುದನ್ನು ಪುಸ್ತಕವೇ ಹೇಳುತ್ತದೆ ನಾವು ಕೊಟ್ಟ ಶ್ರಮವನ್ನೆಲ್ಲ ಅವರು ತಾಳ್ಮೆಯಿಂದ ಸಹಿಸಿ ಸಹಕರಿಸಿದ್ದಾರೆ. ಅವರಿಗೆ ನಾವು ಋಣಿಗಳು

ಗ್ರಂಥಪ್ರಕಟನೆಗಾಗಿ ಧನಸಹಾಯ ಮಾಡಿದ ಮಹನೀಯರ ಹೆಸರುಗಳನ್ನು ದ್ವಿತೀಯ ಸಂಪುಟದಲ್ಲಿ ಕೊಟ್ಟಿದೆ ಈ ಅನೇಕ ಸಹೃದಯರ ಔದಾರ್ಯವಿಲ್ಲದಿದ್ದಲ್ಲಿ ಗ್ರಂಥವನ್ನು ಈಗಿಟ್ಟಿರುವ ಬೆಲೆಗೆ ಮಾರುವುದು ಶಕ್ಯವಿರುತ್ತಿರಲಿಲ್ಲ. ಸತ್ಕಾರ್ಯೋತ್ಸಾಹಿಗಳಾದ ಈ ಉದಾರಿಗಳೆಲ್ಲರಿಗೂ ಸಮಿತಿಯು ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುತ್ತದೆ

ಪ್ರಕಟನ ಸಮಿತಿಯು ಮಾಡಬೇಕಾಗಿರುವ ಕೆಲಸಗಳು ಇನ್ನೂ ಬಹುವಾಗಿವೆ. ಇದುವರೆಗೆ ಆಗಿರುವ ಕೆಲಸವನ್ನು ಮಹಾಜನರ ಗಮನಕ್ಕೆ ತಂದು ಅವರಿಂದ ಮುಂದಿನ ಕಾರ್ಯಕ್ಕೆ ಉದಾರ ಸಹಾಯವನ್ನು ಕೋರುವ ಉದ್ದೇಶದಿಂದ ಶ್ರೀ ಚಾಮರಾಜೋಕ್ತಿವಿಲಾಸವನ್ನು ಈಗ ಬಿಡುಗಡೆ ಮಾಡುತ್ತಿದ್ದೇವೆ ಮಹಾಜನರು ಇದನ್ನು ಆದರದಿಂದ ಬರಮಾಡಿಕೊಂಡು ಮುಂದಿನ ಕಾರ್ಯಕೆ ಉದಾರ ಸಹಾಯ ನೀಡಿ ಉಪಕಾರ ಮಾಡಬೇಕೆಂದು ಪ್ರಾರ್ಥಿಸುತ್ತೇವೆ

ಪ್ರಕಟನಕಾರ್ಯವು ಮುಂದೆಯೂ ವ್ಯವಸ್ಥಿತ ರೀತಿಯಲ್ಲಿ ನಡೆಯಲೆಂಬ ಉದ್ದೇಶದಿಂದ ಈಗಿರುವ ಸಮಿತಿಯನ್ನು ಒಂದು ಟ್ರಸ್ಟ್ (ಧರ್ಮನ್ಯಾಸ ನಿಧಿ) ಆಗಿ ಮಾಡಿ ಪ್ರಕಟನಾದಿ ಕಾರ್ಯದಲ್ಲಿ (೧) ಗ್ರಂಥಗಳನ್ನು ಕೂಡಿದಷ್ಟು ಕಡಮೆ ಬೆಲೆಗೆ ದೊರಕಿಸಬೇಕೆಂದೂ (೨) ಬಂದ ಲಾಭವನ್ನು ಯಾರೊಬ್ಬರ ಸ್ವಂತ ಪ್ರಯೋಜನಕ್ಕೂ ಕೊಡದೆ ಸಮಿತಿಯ ಮೂಲಧನಕ್ಕೇ ಸೇರಿಸಿ ಧರ್ಮಗ್ರಂಥ ಪ್ರಾಚುರ್ಯಕ್ಕೆ ವಿನಿಯೋಗಿಸಬೇಕೆಂದೂ ಸಂಕಲ್ಪಿಸಿದ್ದೇವೆ. ಹೀಗಿರುವುದರಿಂದ ಧರ್ಮಾಭಿಮಾನಿಗಳೂ ಸದ್ಗ್ರಂಥಪ್ರೇಮಿಗಳೂ ಆದ ಮಹಾಜನರು ತಾವಾಗಿ ಉದಾರ ಮನಸ್ಸಿನಿಂದ ಮುಂದೆ ಬಂದು ದ್ರವ್ಯಸಹಾಯ ನೀಡಿಯಾರೆಂದು ಸಮಿತಿ ಹಾರೈಸುತ್ತದೆ. ಎಷ್ಟು ಕೊಂಚದ ಮೊಬಲಗನ್ನಾದರೂ ಕೃತಜ್ಞತೆಯಿಂದ ಸ್ವೀಕರಿಸಲಾಗುವುದು ಸಮಿತಿಯ ವಶಕ್ಕೆ ಬಂದ ಎಲ್ಲ ಹಣಕ್ಕೂ ರಶೀತಿ ಕೊಡಲಾಗುವುದು.

ಬೆಂಗಳೂರು
೨೦–೩–೧೯೬೭

ಪ್ರಕಟನ ಸಮಿತಿಯ ಪರವಾಗಿ,
ವಿ. ವೆಂಕಟಪ್ಪ,
ಅಧ್ಯಕ್ಷ

# ಪ್ರ ಸ್ತಾ ವ ನೆ

ಶ್ರೀಮದ್ವಾಲ್ಮೀಕಿಮಹರ್ಷಿಗಳ ಮುಖದಿಂದ ಭಗವತ್ಪ್ರಸಾದವಾಗಿ ಜಗತ್ತಿಗೆ ದೊರೆತಿರುವ ಶ್ರೀಮದ್ರಾಮಾಯಣವೂ, ಶ್ರೀಮದ್ವೇದವ್ಯಾಸಮಹರ್ಷಿಗಳ ದಿವ್ಯವಾಣಿಯಾಗಿ ಬಂದಿರುವ ಶ್ರೀಮನ್ಮಹಾಭಾರತವೂ ಎಷ್ಟೋ ಸಹಸ್ರ ವರ್ಷಗಳಿಂದ ನಮ್ಮ ಜನದ ಅಂತರಂಗದ ಕಣ್ಣಿಗೆ ಮಹಾಜ್ಯೋತಿಗಳಾಗಿಯೂ, ಕಿವಿಗೆ ಗಂಧರ್ವಗಾನವಾಗಿಯೂ, ಅಪರ ಜೀವಕ್ಕೆ ಅಮೃತಭೋಜನ ವಾಗಿಯೂ ಪ್ರಸಿದ್ಧಿಗೊಂಡಿವೆ ಆ ಮಹಾಪ್ರಪಂಚಗಳ ಸ್ತ್ರೀಪುರುಷವ್ಯಕ್ತಿವಿಭೂತಿಗಳು ನಮ್ಮಲ್ಲಿ ಆಬಾಲಗೋಪಾಲವಾಗಿ, ಪಂಡಿತೋತ್ತಮಪರ್ಯಂತವಾಗಿ ಸಮಸ್ತರಿಗೂ ಪರಿಚಿತರೂ ಪ್ರಿಯರೂ ಆಗಿದ್ದಾರೆ ಪ್ರೀತಿವಂತರಾದ ಅಣ್ಣತಮ್ಮಂದಿರನ್ನು ನೋಡಿದಾಗ “ ಇವರು ರಾಮಲಕ್ಷ್ಮಣರು ! ” ಎನ್ನುತ್ತೇವೆ ಪತಿವ್ರತಾಶಿರೋಮಣಿಯನ್ನು ಕಂಡಾಗ “ ಈಕೆ ಸಾಕ್ಷಾತ್ ಸೀತಮ್ಮ !” ಎನ್ನುತ್ತೇವೆ ಸ್ವಾರ್ಥತ್ಯಾಗವನ್ನು ಕಂಡಾಗ “ ಭರತನ ಪುಣ್ಯವೇ ಪುಣ್ಯ ! ” ಎನ್ನುತ್ತೇವ ಸ್ವಾಮಿಭಕ್ತಿಯ ಪ್ರಶಂಸೆ ಬಂದಾಗ “ ಇದು ಆಂಜನೇಯನ ತಪಸ್ಸಿದ್ಧಿ ! ” ಎನ್ನುತ್ತೇವೆ ಕೃತ್ರಿಮಿ ಮನುಷ್ಯನನ್ನು ಕಂಡಾಗ “ ಇವನು ಮಾರೀಚ !” ಎನ್ನುತ್ತೇವೆ, “ ಶಕುನಿ “ ಎನ್ನುತ್ತೇವೆ ಹೀಗೆ ರಾಮಾಯಣ ಭಾರತ ಪ್ರಪಂಚಗಳ ವಿಶೇಷವ್ಯಕ್ತಿಗಳು ನಮಗೆ ಪ್ರತಿದಿವಸವೂ ನೆರೆಹೊರೆಯಲ್ಲಿ ಕಾಣುವ ಜನಕ್ಕಿಂತ ಹೆಚ್ಚು ವಾಸ್ತವವಾಗಿ ಒಡನಾಡಿಗಳಾಗಿದ್ದಾರೆ ಇದು ಮಹಾಕವಿಯ ಮಹಾಸಿದ್ಧಿ ಆತನ ಸೃಷ್ಟಿ ನಮ್ಮ ಲೋಕಕ್ಕಿಂತ ಹೆಚ್ಚು ನಿಜವೆನಿಸುತ್ತದೆ ನಮ್ಮ ಅಂತರಂಗದಲ್ಲಿ ಅದು ಹಾಗೆನಿಸುವಂತೆ ಮಾಡುವ ಶಕ್ತಿ ಕಾವ್ಯಕ್ಕಿರುವುದರಿಂದಲೇ ಅದು ನಮಗೆ ಜೀವೋದ್ಧಾರಕವಾಗುತ್ತದೆ ರಾಮಾಯಣ ಭಾರತಗಳನ್ನು ತಮ್ಮ ಅಂತರಂಗದಲ್ಲಿ ತುಂಬಿಕೊಳ್ಳುವ ಗ್ರಹಣಶಕ್ತಿ ನಮ್ಮ ಜನಕ್ಕೆ ಇನ್ನೂ ಇರುವುದರಿಂದ ಭಾರತ ಜನಾಂಗಕ್ಕೆ ಜಗತ್ತಿನಲ್ಲಿ ಒಳ್ಳೆಯ ಭವಿಷ್ಯವುಂಟೆಂಬ ಭರವಸೆ ನಿರಾಧಾರವಲ್ಲ ವೆಂದೆನಿಸುತ್ತದೆ

ಭಾರತ ದೇಶದ ಭಾಗ್ಯದಲ್ಲಿ ಎಲ್ಲಕ್ಕೂ ಮೊದಲಾಗಿ, ಎಲ್ಲಕ್ಕೂ ಮೇಲಾಗಿ ಶೋಭಿಸುತ್ತಿರುವ ಭಾಗ್ಯನಿಧಿಯು ವೇದಸಾಹಿತ್ಯ ಆದರೆ ಅದು ಸಾಮಾನ್ಯಜನರ ಕೈಗೆ ಎಟುಕದಷ್ಟು ಎತ್ತರದಲ್ಲಿ ಫಲಹೊತ್ತಿರುವ ಮಹಾವೃಕ್ಷ ‐ಆದರ ಸ್ವಾರಸ್ಯವನ್ನು ಸವಿಯಬಲ್ಲವರು ಸಮಾಜದ ಮೇಲಂತಸ್ತಿನಲ್ಲಿ ನೂರರಲ್ಲಿ ನಾಲ್ವರೈವರು ಇದ್ದಾರು ಮಿಕ್ಕ ತೊಂಬತ್ತು ಮಂದಿಗೆ ವೇದಸಾರ ವನ್ನು ದೊರಕಿಸಿಕೊಟ್ಟಿರುವವರು ವಾಲ್ಮೀಕಿ ವ್ಯಾಸರುಗಳು ಯಾವ ಒಂದು ಪವಿತ್ರ ಮನೋ ಭಾವದಿಂದ,—ಎಂಥ ದೀಕ್ಷಾಬುದ್ಧಿಯಿಂದ,—ಜೀವನವನ್ನು ನಡಸಿದರೆ ಮಾನವಜನ್ಮವು ಸಫಲ ವಾದೀತೋ ಆ ಧರ್ಮವಿಧಾನದ ಮೂಲಬೋಧನೆ ಇರುವುದು ವೇದದಲ್ಲಿ ಅದು ಗಹನವಾದ ತತ್ತ್ವವಿಚಾರಗಳ ಕಲಾಪ ಆ ಸೂಕ್ಷ್ಮತತ್ತ್ವಗಳನ್ನು ಸಾಮಾನ್ಯಜನಕ್ಕೆ ಸುಲಭಗ್ರಾಹ್ಯವಾದ ಪ್ರತ್ಯಕ್ಷಾಕಾರವೃತ್ತಿಗಳಲ್ಲಿ ತೋರಿಸಿಕೊಟ್ಟಿರುವವರು ವಾಲ್ಮೀಕಿ ವ್ಯಾಸರು.

ಈ ತತ್ತ್ವವನ್ನು ನಮ್ಮ ದೇಶದ ಎಲ್ಲ ವಿದ್ವಾಂಸರೂ ತತ್ತ್ವವಿಚಾರಿಗಳೂ ಕವಿಕಲಾಭಿಜ್ಞರೂ ಏಕಪ್ರಕಾರವಾಗಿ ಅಂಗೀಕರಿಸಿಕೊಂಡು ಬಂದಿದ್ದಾರೆ. ನಮ್ಮ ನಾನಾ ದೇಶ್ಯಭಾಷೆಗಳಲ್ಲಿ ರಾಮಾಯಣ ಭಾರತಗಳನ್ನವಲಂಬಿಸಿಕೊಂಡು ಬಗೆಬಗೆಯ ಕಾವ್ಯಗಳೂ ನಾಟಕಗಳೂ ಚಂಪೂಗಳೂ ಯಕ್ಷಗಾನಗಳೂ ಇತರ ಗೇಯ ಪ್ರಬಂಧಗಳೂ ಲೆಕ್ಕಕ್ಕೆ ಸಿಕ್ಕದಷ್ಟು ಹುಟ್ಟಿ, ಇನ್ನೂ ಹೊಸಹೊಸದಾಗಿ ಹುಟ್ಟುತ್ತಲೇ

ಇವೆ ಹೊಸಹೊಸ ಶಿಲ್ಪಿಗಳೂ ಹೊಸಹೊಸ ಚಿತ್ರಕಾರರೂ ರಾಮಾಯಣ ಭಾರತ ವ್ಯಕ್ತಿಗಳ ಮೂರ್ತಿಗಳನ್ನು ಬಗೆಬಗೆಯಾಗಿ ರೂಪಗೊಳಿಸುತ್ತಿದ್ದಾರೆ. ಶ್ರೀರಾಮದೇವಾಲಯಗಳೂ ರಾಮ ಭಜನ ಮಂದಿರಗಳೂ ಹೊಸಹೊಸದಾಗಿ ನಿರ್ಮಾಣವಾಗುತ್ತಲೇ ಇವೆ ಹೀಗೆ ಜನತೆಗೆ ಪ್ರಾಣ ಪ್ರಿಯವಾಗಿರುವ ರಾಮಾಯಣದ ಕೃತಿಯನ್ನು ಕನ್ನಡಿಗರಿಗೆ ಒದಗಿಸಬೇಕೆಂಬ ಉದ್ದೇಶ ಎಷ್ಟೋ ಕಾಲದ ಹಿಂದಿನಿಂದ ಬಂದಿದೆ. ಹಾಗಿದ್ದರೂ ಆ ಪ್ರಯತ್ನಗಳೆಲ್ಲ ವಿಶೇಷವಾಗಿ ಛಂದೋಬದ್ಧವಾದ ಕಾವ್ಯರೂಪದಲ್ಲಿದ್ದಂಥವು ಅವು ಬಹುಮಟ್ಟಿಗೆ ಆಯಾ ಕವಿಗಳ ಸ್ವತಂತ್ರ ರಚನೆಗಳು. ಅವರು ವಾಲ್ಮೀಕಿಗಳ ಮೂಲ ಕಾವ್ಯವನ್ನು ದೃಷ್ಟಿಯಲ್ಲಿರಿಸಿಕೊಂಡು ತಮ್ಮ ತಮ್ಮ ಸ್ವಂತ ಯುಕ್ತಿಯಂತೆಯೂ ಸ್ವಂತ ವಾಕ್ಸರಣಿಯಂತೆಯೂ ಕೃತಿರಚನೆ ಮಾಡಿದರು ವಾಲ್ಮೀಕಿಗಳ ಲೋಕದ ಪ್ರತಿಬಿಂಬವನ್ನು ಕನ್ನಡದಲ್ಲಿ ಯಥಾವತ್ತಾಗಿ,—ಸಂಸ್ಕೃತದಲ್ಲಿ ಅವರು ಹೇಗೆ ನುಡಿದರೋ ಹಾಗೆ,—ಜನಸಾಮಾನ್ಯಕ್ಕೆ ಗ್ರಾಹ್ಯವಾಗುವ ಸುಲಭ ಶೈಲಿಯಲ್ಲಿ ನಿರೂಪಣ ಮಾಡಿಸಬೇಕೆಂಬ ಆಶಯವು ಮೊದಲು ಉತ್ಪನ್ನವಾದದ್ದು ಮೈಸೂರು ರಾಜ್ಯವನ್ನು ಆಳಿದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಉದಾರ ಮನಸ್ಸಿನಲ್ಲಿ ಎಂದು ತೋರುತ್ತದೆ. ಆ ಮಹಾರಾಜರು ಭಗವದ್ಭಕ್ತರೂ, ವಿದ್ವದಭಿಮಾನಿಗಳೂ, ಸಂಗೀತಸಾಹಿತ್ಯರಸಿಕರೂ, ಪೂರ್ವಧರ್ಮತತ್ಪರರೂ, ಉದಾರಿಗಳೂ, ಪ್ರಜಾಭಿಮಾನಿಗಳೂ ಆಗಿದ್ದರೆಂಬ ಸಂಗತಿ ಲೋಕಪ್ರಸಿದ್ಧವಾದದ್ದು. ಅವರ ಆಸ್ಥಾನದಲ್ಲಿ ಮಹಾ ಮಹಾ ಪಂಡಿತರು ನೆರೆದಿದ್ದರು. ರಾಮಾಯಣ ಭಾರತಾದಿ ಶ್ರೇಷ್ಠ ಗೀರ್ವಾಣಸಾಹಿತ್ಯವನ್ನು ಕನ್ನಡಿಗರಿಗೆ ದೊರಕಿಸಿಕೊಡಬೇಕೆಂಬ ಸಂಕಲ್ಪ ಅಂಥಾ ಪ್ರಭುಚಿತ್ತದಲ್ಲಿ ತಲೆದೋರಿದ್ದು ಸ್ವಾಭಾವಿಕವೇ ಆಗಿದೆ. ರಾಜರು ಸಾಹಿತ್ಯೋತ್ಸಾಹಿಗಳಾಗಿದ್ದದ್ದು ಹಿಂದೂ ಜನದ ಚರಿತ್ರೆಯಲ್ಲಿ ಅಪರೂಪವಾದ ಸಂಗತಿಯಲ್ಲ. ವಿಜಯನಗರ ಸಾಮ್ರಾಜ್ಯವು ಮಹೋನ್ನತ ದಶೆಯಲ್ಲಿದ್ದಾಗ ಬುಕ್ಕಸಾರ್ವಭೌಮನು ಮಾಧವಸಾಯಣ ಸಹೋದರರಿಗೆ ವೇದಭಾಷ್ಯರಚನೆಗೆ ಪ್ರೇರಣೆ ಕೊಟ್ಟನಲ್ಲವೆ ?

ಆದಿಶನ್ಮಾಧವಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ||

ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರವರು ಆ ಮೇಲ್ಪಂಕ್ತಿಯನ್ನನುಸರಿಸಿದವರು. ಅವರ ಪ್ರೇರಣೆ ಪ್ರೋತ್ಸಾಹಗಳಿಂದ ರಾಮಾಯಣ ಭಾರತ ಭಾಗವತಾದಿ ಬಹು ಗ್ರಂಥಗಳು ಸಂಸ್ಕೃತದಿಂದ ಕನ್ನಡಕ್ಕೆ ಪರಿವರ್ತನೆಯಾದವೆಂದು ಆ ಕಾಲದ ಹಿರಿಯರು ಹೇಳಿದ್ದಾರೆ. ಆ ವಿಸ್ತಾರವಾದ ಸಂಸ್ಕೃತಮೂಲದ ಕನ್ನಡ ಗ್ರಂಥಗಳಲ್ಲಿ ಪ್ರಕಟವಾಗಿರುವ ಗ್ರಂಥಗಳು ಶ್ರೀ ಚಾಮರಾಜೋಕ್ತಿವಿಲಾಸವೆಂಬ ರಾಮಾಯಣ ಮತ್ತು ಶ್ರೀ ಕೃಷ್ಣರಾಜ ವಾಣೀವಿಲಾಸವೆಂಬ ಭಾರತ. ಪ್ರಕೃತದಲ್ಲಿ ನಮ್ಮ ಮುಂದಿರುವುದು ಮೊದಲನೆಯದು.

ಶ್ರೀ ಚಾಮರಾಜೋಕ್ತಿವಿಲಾಸವೆಂಬ ಅಂಕಿತದಲ್ಲಿ ಕಾಣುವ "ಚಾಮರಾಜ" ಎಂಬ ಹೆಸರು ಮುಮ್ಮಡಿ ಕೃಷ್ಣರಾಜ ಒಡೆಯರವರ ತಂದೆಗಳ ಹೆಸರು. ಅವರೇ ಖಾಸಾ ಚಾಮರಾಜ ಒಡೆಯರವರು. ಯದುರಾಜರ ವಂಶದಲ್ಲಿ ಚಾಮರಾಜ ನಾಮದಿಂದ ವಿಖ್ಯಾತರಾದವರಲ್ಲಿ ಅವರು ಒಂಬತ್ತನೆಯವರು. ಇವರು ರಾಜಪದವಿಯಲ್ಲಿದ್ದ ಕಾಲ ಕ್ರಿಸ್ತಶಕ ೧೭೭೬ ರಿಂದ ೧೭೯೬ ರ ವರೆಗೆ. ಮೈಸೂರು ಜಿಲ್ಲೆಯ ಚಾಮರಾಜನಗರ ಇವರ ಜ್ಞಾಪಕವನ್ನುಳಿಸಿದೆ. ಅಲ್ಲಿಯ ಶ್ರೀ ಚಾಮರಾಜೇಶ್ವರ ದೇವಾಲಯವೂ ಹಾಗೆಯೇ ಸರಿ. ನವಮ ಚಾಮರಾಜ ಒಡೆಯರವರ ಕಾಲದಲ್ಲಿ ಅವರು ಸಿಂಹಾಸನಾಧಿಕಾರಿಗಳಾಗಿದ್ದರೂ ಸ್ವಶಕ್ತಿಯಿಂದ ಪ್ರಬಲಿಸಿ ರಾಜ್ಯಭಾರ ನಡಸುತ್ತಿದ್ದಾತನು ನವಾಬ್ ಹೈದರ್ ಆಲಿ. ಬ್ರಿಟಿಷರು ಶ್ರೀರಂಗಪಟ್ಟಣವನ್ನು ಗೆದ್ದು ರಾಜ್ಯದ

ಬಗ್ಗೆ ಪುನರ್ವ್ಯವಸ್ಥೆ ಮಾಡ ಹೊರಟಾಗ, ನವಮ ಚಾಮರಾಜ ಒಡೆಯರವರ ಕುಮಾರರಾದ ಮುಮ್ಮಡಿ ಕೃಷ್ಣರಾಜ ಒಡೆಯರವರನ್ನು ಸಿಂಹಾಸನಕ್ಕೆ ತಂದು ಪಟ್ಟ ಕಟ್ಟಿಸಿದರು. ಹೀಗೆ ಶ್ರೀ ಕೃಷ್ಣರಾಜ ಒಡೆಯರವರು ರಾಜ್ಯಭಾರ ನಡಸುತ್ತಿದ್ದಾಗ ತಮ್ಮ ಪಿತೃಭಕ್ತಿಗೆ ಯಥೋಚಿತವಾಗಿ ಶಾಶ್ವತರೂಪ ಕೊಟ್ಟದ್ದು ಸಹಜ ತಾನೆ? ಹೀಗೆ ಲೋಕಕ್ಕೆ ದೊರೆತದ್ದು ಶ್ರೀಚಾಮರಾಜೋಕ್ತಿ ವಿಲಾಸ ರಾಮಾಯಣ.

ಆದರೆ ಗ್ರಂಥವು ಆ ಮಹಾರಾಜರ ಕಾಲದಲ್ಲಿ ಮುದ್ರಿತವಾದಂತಿಲ್ಲ. ಅದರ ತಾಳೆಯೋಲೆಗಳ ಪುಸ್ತಕಗಳು ಅರಮನೆಯ ಸರಸ್ವತೀಭಂಡಾರದಲ್ಲಿದ್ದುವು. ಅದು ಹೊರಕ್ಕೆ ಬಂದದ್ದರ ಕಥೆ ಸ್ವಾರಸ್ಯವುಳ್ಳದ್ದಾಗಿದೆ ಅದನ್ನು ನನಗೆ ಹೇಳಿದವರು ಈ ಮುಂದೆ ಪ್ರಸ್ತಾವಿತರಾಗುವ ಶ್ರೀ ಎಮ್ ಸುಬ್ಬಯ್ಯನವರು. ಆ ಲಿಖಿತ ಗ್ರಂಥಗಳು ಅರಮನೆಯ ಭಂಡಾರದಲ್ಲಿದ್ದ ಸಂಗತಿ ಕೆಲಮಂದಿಗೆ ತಿಳಿದಿತ್ತೆಂದು ತೋರುತ್ತದೆ. ಅದು ಹೇಗೋ ಬೆಂಗಳೂರಿನಲ್ಲಿದ್ದ ದಿವಂಗತ ಶ್ರೀ ಎಚ್. ರಾಮಯ್ಯನವರಿಗೆ ತಿಳಿದಿತ್ತು. ಶ್ರೀ ಎಚ್. ರಾಮಯ್ಯನವರು ದಿವಾನ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಸೋದರಮಾವಂದಿರು. ಅವರು ೧೮೭೧ ರಿಂದ ಬಹುಶಃ ೧೯೦೬ ರ ವರೆಗೂ ಅಠಾರಾ (ಸೆಕ್ರೆಟೇರಿಯಟ್) ಕಚೇರಿಯಲ್ಲಿ ಉದ್ಯೋಗಸ್ಥರಾಗಿದ್ದರು ಅವರಿಗೂ ಬೆಂಗಳೂರು ಲಾಲ್‌ಬಾಗ್ ಬಳಿಯ ಶ್ರೀ ಮಾವುಹಳ್ಳಿಯ ರುದ್ರಪ್ಪನವರಿಗೂ ತುಂಬ ಸ್ನೇಹವಿತ್ತು. ಶ್ರೀ ರುದ್ರಪ್ಪನವರು ಎಮ್. ರುದ್ರಪ್ಪ ಅಂಡ್ ಸನ್ಸ್ ಎಂಬ ಹೆಸರಿನ ಫಲಪುಷ್ಪ ವ್ಯಾಪಾರಸಂಸ್ಥೆಯ ಮಾಲಿಕರು ಅವರು ಧರ್ಮಿಷ್ಠರೆಂದೂ ಸಮರ್ಥರೆಂದೂ ಹೆಸರುವಾಸಿಯಾಗಿದ್ದವರು ೧೮೮೪–೮೫ ರ ಸುಮಾರಿನಲ್ಲಿ ಮಹಾರಾಜ ಶ್ರೀ ಚಾಮರಾಜ ಒಡೆಯರವರು ತಿಂಗಳಿಗೊಮ್ಮೆ, ಎರಡು ತಿಂಗಳಿಗೊಮ್ಮೆ ಬೆಂಗಳೂರಿಗೆ ಬಂದು ಮೂರು ನಾಲ್ಕು ದಿನ ಇಲ್ಲಿ ಅರಮನೆಯಲ್ಲಿರುತ್ತಿದ್ದರು. ಬೆಂಗಳೂರಿನಲ್ಲಿದ್ದಾಗ ಒಂದೊಂದು ದಿನ ಸಾಯಂಕಾಲ ಉದ್ಯಾನವಿಹಾರಕ್ಕಾಗಿ ಲಾಲ್‌ಬಾಗ್ ತೋಟಕ್ಕೆ ಬಂದು ಹೋಗುತ್ತಿದ್ದರು. ಅಂಥ ಒಂದು ಸಂಜೆ ಶ್ರೀ ಮಾವಳ್ಳಿ ರುದ್ರಪ್ಪನವರು, ಶ್ರೀ ರಾಮಯ್ಯನವರ ಸಲಹೆಯ ಮೇರೆಗೆ, ಎರಡು ತಟ್ಟೆಗಳಲ್ಲಿ ಗಂಧ ಪುಷ್ಪ ಫಲಗಳನ್ನಿರಿಸಿಕೊಂಡು ತಮ್ಮ ಸಂಸ್ಥೆಯ ಮುಂದೆ ನಿಂತಿದ್ದರು. ಮಹಾರಾಜರ ಸವಾರಿ ಆ ಸ್ಥಳಕ್ಕೆ ಬಂದಾಗ ರುದ್ರಪ್ಪನವರು ಕೈಮುಗಿದು ಹೂವಿನ ಹಾರವನ್ನು ಸಮರ್ಪಿಸುವ ಉದ್ದೇಶ ತೋರಿಸಿದರು. ಮಹಾರಾಜರು ಅಲ್ಲಿ ನಿಂತು ಆ ಗೌರವವನ್ನು ಸ್ವೀಕರಿಸಿದರು ಮೂರುನಾಲ್ಕು ದಿವಸಗಳಾದ ಬಳಿಕ ಮತ್ತೊಮ್ಮೆ ಹಾಗೆ ನಡೆಯಿತು. ಆಮೇಲೆ ಇನ್ನೂ ಒಂದು ಸಲ ಹಾಗೆ ಆಯಿತು. ಈ ರೀತಿ ರುದ್ರಪ್ಪನವರ ಗೌರವ ಮೂರುನಾಲ್ಕುಸಲ ಸಂದಮೇಲೆ ಮಹಾರಾಜ ಚಾಮರಾಜ ಒಡೆಯರವರು ರುದ್ರಪ್ಪನವರಿಗೆ ತಮ್ಮ ಸಂತೋಷವನ್ನು ತಿಳಿಯಪಡಿಸಿ, ಮನೋಗತವೇನೆಂದು ವಿಚಾರಿಸಿದರು. ಆಗ ರುದ್ರಪ್ಪನವರು ಅರಮನೆಯ ಸರಸ್ವತೀಭಂಡಾರದಲ್ಲಿದ್ದ ಕನ್ನಡ ರಾಮಾಯಣ ಭಾರತಗಳ ತಾಳೆಯೋಲೆ ಪುಸ್ತಕಗಳ ವಿಷಯವನ್ನು ಪ್ರಸ್ತಾವಿಸಿ, ಆ ಗ್ರಂಥಗಳ ಪ್ರಕಟನೆಯ ಬಗ್ಗೆ ತಮಗೆ ರಾಜಾಜ್ಞೆಯೂ ರಾಜಾಶ್ರಯವೂ ಅನುಗ್ರಹವಾಗಬೇಕೆಂದು ಬೇಡಿದರು. ಮಹಾರಾಜರವರು ಸಂತೋಷಭರಿತರಾಗಿ ಒಪ್ಪಿ ಭರವಸೆ ಕೊಟ್ಟು, ನಾಲ್ಕಾರು ವಾರಗಳೊಳಗಾಗಿ ಪುಸ್ತಕಗಳನ್ನು ರುದ್ರಪ್ಪನವರ ವಶಕ್ಕೆ ದಯಪಾಲಿಸಿದರು. ಅದರ ಜೊತೆಗೆ ಗ್ರಂಥಮುದ್ರಣಕ್ಕಾಗಿ ಕೆಲವು ಸಹಸ್ರ ರೂಪಾಯಿಗಳಷ್ಟು ಸಹಾಯದ್ರವ್ಯವನ್ನೂ ಕೊಡಿಸಿದರು. ಹಾಗೆ ಸ್ಥಾಪಿತವಾದುದು ಎಮ್. ರುದ್ರಪ್ಪ ಅಂಡ್ ಸನ್ಸ್ ಅವರ ಶ್ರೀ ಚಾಮುಂಡೇಶ್ವರೀ ಮುದ್ರಾಕ್ಷರ ಶಾಲೆ ಅದು ಶ್ರೀಮನ್ಮಹಾರಾಜರ ಕುಲದೈವ ನಾಮಾಂಕಿತವಾದದ್ದು.

ಆ ಮುದ್ರಣಾಲಯದಲ್ಲಿ ಮೊದಲು ಅಚ್ಚಾಗಿ ಪ್ರಕಟವಾದದ್ದು ಶ್ರೀ ಕೃಷ್ಣರಾಜ ವಾಣೀವಿಲಾಸ ಭಾರತ ಆ ಪ್ರಕಟನೆ ಕೂಡಲೆ ಮಹಾಜನರ ಆದರಣೆಗೆ ಪಾತ್ರವಾಯಿತು ಶೃಂಗೇರಿಯ ಜಗದ್ಗುರು ಸ್ವಾಮಿಗಳವರು ಶ್ರೀ ರುದ್ರಪ್ಪನವರನ್ನು ಅಭಿನಂದಿಸಿ ಆಶೀರ್ವದಿಸಿದರು. ದಿವ್ಯಜ್ಞಾನ ಸಮಾಜದ (ತಿಯೊಸಾಫಿಕಲ್ ಸೊಸೈಟಿಯ) ಪ್ರಮುಖೆಯಾದ ಲೋಕವಿಖ್ಯಾತೆ ಶ್ರೀ ಆನಿ ಬೆಸಂಟ್ (Mrs. Annie Besant) ರುದ್ರಪ್ಪನವರ ಈ ಕಾರ್ಯವನ್ನು ಮೆಚ್ಚಿ ಪ್ರಶಂಸಿಸಿದಳು

ಶ್ರೀ ಕೃಷ್ಣರಾಜ ವಾಣೀವಿಲಾಸ ಮಹಾಭಾರತದ ಕಾರ್ಯವು ಯಶಸ್ವಿಯಾಗಿ ಪೂರ್ತಿಯಾದ ಬಳಿಕ ಬಂದದ್ದು ಶ್ರೀ ಚಾಮರಾಜೋಕ್ತಿವಿಲಾಸ ರಾಮಾಯಣ ಅದರಲ್ಲಿ ಮೊದಲು ಪ್ರಕಟವಾದದ್ದು ಸುಂದರಕಾಂಡ ಅದು ೧೮೯೪ರಲ್ಲಿ, ಶ್ರೀ ಚಾಮರಾಜ ಒಡೆಯರ್ ಮಹಾರಾಜರ ಪಟ್ಟಾಭಿಷೇಕದ ವರ್ಷ ವರ್ಧಂತಿಯ ಶುಭಸಮಯದಲ್ಲಿ.

ಈ ಕಾರ್ಯದಲ್ಲಿ ಪ್ರೋತ್ಸಾಹ ಕೊಟ್ಟು ಸಹಾಯ ಮಾಡಿದ ಮಹನೀಯರನ್ನು ಶ್ರೀ ರುದ್ರಪ್ಪ ನವರು ಪೀಠಿಕೆಯಲ್ಲಿ ಸ್ಮರಿಸಿದ್ದಾರೆ

ದಿವಾನ್ (ಸರ್) ಕುಮಾರಪುರಂ ಶೇಷಾದ್ರಯ್ಯರವರು
ದರಬಾರ್ ಭಕ್ಷಿ ಅಂಬಿಲ್ ನರಸಿಂಹಯ್ಯಂಗಾರ್ಯರು
ಮುಜರಾಯ್ ಸೂಪರಿಂಟೆಂಡೆಂಟ್ ಆರ್ಕಾಟು ಶ್ರೀನಿವಾಸಾಚಾರ್ಯರು
ಎಜ್ಯುಕೇಷನ್ ಸೆಕ್ರೆಟರಿ ಭಾಭಾ ಸಾಹೇಬರು
ಅಂಡರ್-ಸೆಕ್ರೆಟರಿ ಅನಂತಸ್ವಾಮಿರಾಯರು
ಮೈಸೂರು ನಾರಾಯಣರಾಯರು

ಈ ಕಾಲದಲ್ಲಿ ಶ್ರೀ ಎಚ್ ರಾಮಯ್ಯನವರು ದಿವಾನರ ಕಚೇರಿಯಲ್ಲಿ ರೆವೆನ್ಯೂ ಇಲಾಖೆ ಯಲ್ಲಿ ಹೆಡ್ ಅಕೌಂಟೆಂಟರಾಗಿದ್ದರು ಅವರ ಪ್ರೋತ್ಸಾಹ ರುದ್ರಪ್ಪನವರಿಗೆ ಎಂದಿನಂತೆ ಯಥೇಷ್ಟವಾಗಿತ್ತು.

ರಾಮಾಯಣದ ಏಳು ಕಾಂಡಗಳ ಪ್ರಕಟನೆಯ ಕಾಲಕ್ರಮ ಈ ರೀತಿ

೧. ಬಾಲಕಾಂಡ · ಕ್ರಿಸ್ತಶಕ ೧೮೯೪ ಜಯನಾಮ ಸಂವತ್ಸರ
೨. ಅಯೋಧ್ಯಾಕಾಂಡ : ,, ೧೮೯೫ (ಬಹುಶಃ) ಮನ್ಮಥ ಸಂವತ್ಸರ
೩. ಅರಣ್ಯಕಾಂಡ · ,, ೧೮೯೫ ,,
೪ ಕಿಷ್ಕಿಂಧಾಕಾಂಡ : ,, ೧೮೯೫ ,,
೫ ಸುಂದರಕಾಂಡ : ,, ೧೮೯೪ ಜಯ ಸಂವತ್ಸರ
೬. ಯುದ್ಧಕಾಂಡ · ,, ೧೮೯೬ (ಬಹುಶಃ) ಮನ್ಮಥ ಸಂವತ್ಸರ
೭ ಉತ್ತರಕಾಂಡ · ,, ೧೮೯೬ ,, ದುರ್ಮುಖಿ ಸಂವತ್ಸರ

ಕೈಕೊಂಡ ಈ ಮಹಾಕಾರ್ಯವು ಹೀಗೆ ನಿರ್ವಿಘ್ನವಾಗಿ ಪರಿಸಮಾಪ್ತವಾದದ್ದರಿಂದ ರುದ್ರಪ್ಪ ನವರಿಗೆ ಅತ್ಯಂತ ಸಂತೃಪ್ತಿಯಾದದ್ದು ಸ್ವಾಭಾವಿಕವಲ್ಲವೆ ? ಆಗಾಗ ಅನೇಕ ವಿಧದ ತೊಡಕುಗಳು ಬಂದಿದ್ದಿರಬೇಕು. ಅಯೋಧ್ಯಾಕಾಂಡವು ಮುದ್ರಣದಲ್ಲಿದ್ದಾಗ ಆಶ್ರಯದಾತರಾದ ಶ್ರೀ ಚಾಮರಾಜ ಒಡೆಯರ್ ಮಹಾರಾಜರು ಲೋಕಾಂತರವನ್ನೈದಿದರು, ಅರಣ್ಯಕಾಂಡವನ್ನು ಮುದ್ರಿಸುವ ಕಾಲದಲ್ಲಿ "ನಮಗೆ ಅನೇಕ ವಿಪತ್ತುಗಳು ಸಂಭವಿಸಿದವು." ಉತ್ತರಕಾಂಡದ ವೇಳೆಗೆ ಶುಭಪರಂಪರೆ

ಪ್ರಾರಂಭಿಸಿತ್ತು. ಮಹಾರಾಜ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರವರ ಉಪನಯನ, ಅವರ ಎರಡನೆಯ ಸೋದರಿಯವರ ವಿವಾಹ ಮೈಸೂರು, ಬರೋಡಾ, ತಿರುವಾಂಕೂರು, ರಾಜಾಸ್ಥಾನಗಳಿಂದ ಸನ್ಮಾನಗಳು, ವಿದ್ಯಾನಿಧಿ ವಾಸುದೇವಶಾಸ್ತ್ರಿಗಳವರು ಮೊದಲಾದ ಶ್ರೋತ್ರಿಯ ಪಂಡಿತಪ್ರಕಾಂಡರುಗಳಿಂದ ಆಶೀರ್ವಚನವೈಭವ—ಹೀಗೆ ಸರ್ವತ್ರ ಸನ್ಮಂಗಲವೃದ್ಧಿ

ರಾಮಾಯಣದ ಅನಂತರ ಶ್ರೀ ಕೃಷ್ಣರಾಜ ವಾಣೀವಿಲಾಸ ಭಾಗವತದ ದಶಮಸ್ಕಂಧವನ್ನು ಪ್ರಕಟಿಸತಕ್ಕದೆಂದು ರುದ್ರಪ್ಪನವರು ಸಂಕಲ್ಪಿಸಿದ್ದರು ಅದು ಎಷ್ಟುಮಟ್ಟಿಗೆ ಕಾರ್ಯಕ್ಕೆ ಬಂತೋ ನನಗೆ ತಿಳಿಯಲಾಗಲಿಲ್ಲ

ಶ್ರೀ ಕೃಷ್ಣರಾಜ ವಾಣೀವಿಲಾಸ ಭಾರತವನ್ನು ಆಮೂಲಾಗ್ರವಾಗಿ ನನ್ನ ತಾತಂದಿರು ನನ್ನಿಂದ ಬಾಲ್ಯದಲ್ಲಿ ಓದಿಸಿದ್ದರು ಅದು ನನ್ನ ಮನಸ್ಸಿನ ಮೇಲೆ ಒಂದು ತೀವ್ರವೂ ಗಾಢವೂ ಆದ ಮಹದದ್ಭುತ ದರ್ಶನದ ಪರಿಣಾಮವನ್ನುಂಟು ಮಾಡಿತು ಅಲ್ಲಿಂದ ಕೆಲವು ವರ್ಷಗಳಾದ ಮೇಲೆ ನನಗೆ ದೊರೆತದ್ದು ಶ್ರೀ ಚಾಮರಾಜೋಕ್ತಿವಿಲಾಸ ರಾಮಾಯಣ ಆ ವೇಳೆಗೆ ಸಂಸ್ಕೃತ ಶ್ರೀಮದ್ರಾಮಾಯಣವನ್ನು ನಾನು ಒಂದೆರಡು ಸಾರಿ ನೋಡಿದ್ದೆನಾದದ್ದರಿಂದ ಕನ್ನಡ ರಾಮಾಯಣವನ್ನು ಇಲ್ಲಿಷ್ಟು ಅಲ್ಲಷ್ಟು ಮಾತ್ರ ನೋಡಿದೆ ೧೯೧೫–೧೬ರ ಸುಮಾರಿನಲ್ಲಿ ಶ್ರೀ ಎಮ್ ರುದ್ರಪ್ಪನವರ ಕುಮಾರರಾದ ಶ್ರೀ ಮಾವಳ್ಳಿ ಸುಬ್ಬಯ್ಯನವರ ಸ್ನೇಹ ನನಗೆ ದೊರಕಿತು. (ಅವರು ನನಗೆ ಹೇಳಿದವು ನಾನು ಮೇಲೆ ಅರಿಕೆ ಮಾಡಿರುವ ಸಂಗತಿಗಳು.) ಆ ವೇಳೆಗೆ ವಾಣೀವಿಲಾಸ ಭಾರತದ ಪ್ರತಿಗಳೆಲ್ಲ ಮುಗಿದುಹೋಗಿ ಪೂರ್ತಿ ಗ್ರಂಥ ಸಿಕ್ಕುವುದು ಕಷ್ಟವಾಗಿತ್ತು ಅಷ್ಟು ಒಳ್ಳೆಯ ಗ್ರಂಥ ದುರ್ಲಭವಾಯಿತಲ್ಲ!–ಎಂಬ ಕೊರತೆಯಿಂದ ಆ ಗ್ರಂಥದ ಪುನರ್ಮುದ್ರಣಕ್ಕಾಗಿ ನನ್ನಿಂದ ಸಾಧ್ಯವಾದಷ್ಟು ಪ್ರಯತ್ನಮಾಡಿ ನೋಡಿದೆ. ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ–ಬಹುಶಃ ದಾವಣಗೆರೆಯಲ್ಲಿ–ಆ ಬಗ್ಗೆ ಒಂದು ಒಂದು ಬೇಡಿಕೆಯ ನಿರ್ಣಯವನ್ನೂ ಮಾಡಿಸಿದ್ದಾಯಿತು ಅಲ್ಲಿಂದೀಚೆಗೆ ಆ ವಿಷಯಕ್ಕೆ ಸಂಬಂಧಪಟ್ಟವರೊಡನೆ ಪತ್ರವ್ಯವಹಾರದಲ್ಲಿ ವಿಚಾರಮಾಡಿದ್ದಾಯಿತು. ಪ್ರಯತ್ನವು ಫಲಕ್ಕೆ ಬರುವ ಸೂಚನೆ ತೋರಲಿಲ್ಲ

ಈಗ್ಗೆ ಮೂರು ವರ್ಷಗಳ ಹಿಂದೆ ಕಾಲ ಒದಗಿಬಂತೆಂದು ತೋರುತ್ತದೆ ಆಗ ಒಂದು ದಿನ, ಅಂದು ಬೆಂಗಳೂರಿನ ಮೇಯರ್ ಆಗಿದ್ದ ದೇಶಹಳ್ಳಿ ಶ್ರೀ ಜಿ ನಾರಾಯಣ ಅವರೂ ನಾನೂ ನಮ್ಮ ದೇಶ, ನಮ್ಮ ಜನ, ನಮ್ಮ ಸಾಹಿತ್ಯ, ನಮ್ಮ ಸಂಸ್ಕೃತಿ—ಈ ಸಮಾಚಾರಗಳನ್ನು ಕುರಿತು ಮಾತನಾಡುತ್ತಿದ್ದಾಗ, ರಾಮಾಯಣದ ಮಹಾಧರ್ಮಸ್ಫೂರ್ತಿಯ ವಿಚಾರವೂ ಕನ್ನಡ ಜನತೆಗೆ ಆ ದಿವ್ಯಗ್ರಂಥದ ಆವಶ್ಯಕತೆಯ ವಿಚಾರವೂ ಮಾತಿಗೆ ಬಂದವು. ಆಗ ಚಾಮರಾಜೋಕ್ತಿವಿಲಾಸದ ಪ್ರಸ್ತಾವವೂ ಬಂದಿತು ಶ್ರೀ ಜಿ ನಾರಾಯಣ ಅವರಿಗೆ ಆ ಪ್ರಸ್ತಾಪದಿಂದ ಶುಭಸ್ಫೂರ್ತಿ ಬಂತೆಂದು ತೋರುತ್ತದೆ ಅವರು ಆ ಕೂಡಲೆ ಉತ್ಸಾಹದಿಂದ ಆ ಯೋಚನೆಯನ್ನು ತಮ್ಮದನ್ನಾಗಿ ಮಾಡಿಕೊಂಡರು; ಅವರ ಮಿತ್ರರೊಡನೆ ಮಾತನಾಡಿ ಸಹಾಯಕರ್ತರನ್ನು ದೊರಕಿಸಿಕೊಂಡು, ಅವರೆಲ್ಲ ಸೇರಿ ಕಾರ್ಯಾರಂಭ ಮಾಡತಕ್ಕದ್ದೆಂದು ತೀರ್ಮಾನಿಸಿದರು "ಶ್ರೀಮದ್ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿ" ಎಂಬ ಸಂಸ್ಥೆಯನ್ನು ಸ್ಥಾಪಿಸಲು ನಿಶ್ಚಯಿಸಿದ್ದಾಯಿತು.

ಈ ಸಮಿತಿಯವರು ಗ್ರಂಥವನ್ನು ಮುದ್ರಣಕ್ಕೆ ಸಿದ್ಧಪಡಿಸುವ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ಅಪೇಕ್ಷಿಸಲಾಗಿ, ನಾನು ಆ ಜವಾಬ್ದಾರಿಯ ಕೆಲಸವನ್ನು ಒಂದು ಪಂಡಿತಗೋಷ್ಠಿಗೆ

ಒಪ್ಪಿಸತಕ್ಕದ್ದೆಂದು ಸೂಚನೆ ಮಾಡಿದೆ ಆ ಸೂಚನೆಯನ್ನು ಪ್ರಕಟನ ಸಮಿತಿಯು ಒಪ್ಪಿಕೊಂಡಿತು. ಈ ವಿದ್ವಾಂಸರುಗಳು ಕನ್ನಡ ಸಂಸ್ಕೃತಗಳೆರಡರಲ್ಲೂ ಪಾಂಡಿತ್ಯ ಪಡೆದವರಾಗಿ, ಹೈಸ್ಕೂಲು ಕಾಲೇಜುಗಳಲ್ಲಿ ಕಾವ್ಯಪಾಠ ಮಾಡಿಸಿದವರಾಗಿ, ಗ್ರಂಥಲೇಖನ ಕಾರ್ಯದಲ್ಲಿ ಅನುಭವ ಸಂಪಾದಿಸಿ ಕೊಂಡಿದ್ದವರು.

ಮೊದಲು ಚಾಮರಾಜೋಕ್ತಿವಿಲಾಸ ಗ್ರಂಥವನ್ನು ಭಾಗಗಳಾಗಿ ವಿಂಗಡಿಸಿ ಆ ಪಂಡಿತರಲ್ಲಿ ಹಂಚಿದ್ದಾಯಿತು ಅವರ ಶೋಧನಕಾರ್ಯಕ್ಕೆ ಅವಶ್ಯವಾದ ನಿಯಮಗಳ ಬಗ್ಗೆ ಒಂದು ಒಮ್ಮತವನ್ನು ಮಾಡಿಕೊಂಡದ್ದಾಯಿತು. ಅದರ ಮೇರೆಗೆ ಪಂಡಿತರು ಮಾಡಬೇಕಾಗಿದ್ದ ಕೆಲಸದ ವಿವರನಿಷ್ಕರ್ಷೆ ಹೀಗೆ .

(೧) ಕನ್ನಡ ವಚನವನ್ನು ಸಂಸ್ಕೃತ ಮೂಲದೊಡನೆ ಹೋಲಿಸಿ ನೋಡಿ, ಕಂಡುಬಂದ ವ್ಯತ್ಯಾಸಗಳನ್ನು ಗುರುತುಮಾಡಿಕೊಳ್ಳುವುದು.

(೨) ಮೂಲದ ಮುಖ್ಯ ಭಾಗಗಳು ಬಿಟ್ಟುಹೋಗಿದ್ದಲ್ಲಿ ಅವುಗಳನ್ನು ಸೇರಿಸುವುದು.

(೩) ಮೂಲದಿಂದ ವ್ಯತ್ಯಾಸವಾಗಿದ್ದಲ್ಲಿ ಗ್ರಂಥವನ್ನು ಮೂಲಕ್ಕನುಸಾರವಾಗಿ ತಿದ್ದುವುದು

(೪) ಭಾಷಾಪ್ರಯೋಗಗಳಲ್ಲಿ ಕಂಡ ದೋಷಗಳನ್ನು ತಿದ್ದುವುದು.

(೫) ವಾಕ್ಯವು ಅತಿದೀರ್ಘವಾಗಿಯಾಗಲಿ ಜಡೆಜಡೆಯಾಗಿಯಾಗಲಿ ಇದ್ದಕಡೆ ಅದನ್ನು ಸರಳಪಡಿಸುವುದು.

(೬) ಒಟ್ಟಿನಲ್ಲಿ, ಗ್ರಂಥದ ಮೂಲಾಕಾರವನ್ನು ಕೂಡಿದಮಟ್ಟಿಗೂ ಹಾಗೆಯೇ ಉಳಿಸಿ, ಅದು ಈಹೊತ್ತಿನ ಸಾಮಾನ್ಯ ಕನ್ನಡ ಜನಕ್ಕೆ ಸುಲಭವೂ ರುಚಿಕರವೂ ಆಗುವಂತೆ ಪರಿಷ್ಕರಣ ಮಾಡುವುದು.

ನಮ್ಮ ಪಂಡಿತರುಗಳು ಈ ಸೂತ್ರಗಳನ್ನನುಸರಿಸಿ ಅವರವರಿಗೆ ಒಪ್ಪಿಸಿದ್ದ ಭಾಗಗಳಲ್ಲಿ ಚಾಮರಾಜೋಕ್ತಿವಿಲಾಸದ ಮೂಲವನ್ನು ಪರಿಶೋಧಿಸಿ ಕೊಟ್ಟರು ಹಾಗಾದಮೇಲೂ ಪರಿಷ್ಕರಣದ ಕೆಲಸ ಇನ್ನೂ ಉಳಿದುಕೊಂಡಿತ್ತು. ಆ ಜವಾಬ್ದಾರಿಯನ್ನು ಪ್ರಧಾನ ಸಂಪಾದಕರಾದ ವಿದ್ವಾನ್ ಶ್ರೀ ಎನ್ ರಂಗನಾಥಶರ್ಮಾ ಅವರು ನಿರ್ವಹಿಸಬೇಕಾಯಿತು ವಾಚಕರ ದೃಷ್ಟಿ ಯಿಂದ ಗ್ರಂಥ ಸೊಗಸೆನಿಸಬೇಕಾದರೆ ಅದು ಮೊದಲಿನಿಂದ ಕಡೆಯ ವರೆಗೂ ಒಂದೇ ಕೈವಾಡದ್ದಾ ಗಿರಬೇಕಲ್ಲವೆ ? ಶ್ರೀಮಾನ್ ರಂಗನಾಥಶರ್ಮಾ ಅವರ ರಸಪರಿಪಾಕದೃಷ್ಟಿಯೂ ಉಭಯಭಾಷಾ ಪ್ರಾವೀಣ್ಯವೂ ಸತ್ಕಾರ್ಯಶ್ರದ್ಧೆಯೂ ಅವರ ಕಾರ್ಯವನ್ನು ಸಫಲಗೊಳಿಸಿವೆಯೆಂದು ಹೇಳುವ ಸಂತೋಷ ಈಗ ನನ್ನದಾಗಿದೆ.

ಶ್ರೀ ಚಾಮರಾಜೋಕ್ತಿವಿಲಾಸವನ್ನು ಬರೆದ ಪಂಡಿತರು ಯಾರೋ ಅವರ ಪಾಂಡಿತ್ಯ ಎಂಥಾದ್ದೋ ಅಥವಾ ಆ ಪಂಡಿತರು ಶಿಷ್ಯರಿಂದ ಬರೆಯಿಸಿದರೋ ಈಗ ತಿಳಿಯಬರುವಂತಿಲ್ಲ. ಬಾಲಕಾಂಡಕ್ಕೆ ಸೇರಿದ "ಗ್ರಂಥಕರ್ತರ ಪೀಠಿಕೆ" ಶ್ರೀ ವಿಷ್ವಕ್ಸೇನ ವಿಘ್ನೇಶ್ವರ ದೇವರುಗಳನ್ನು ಉದ್ದೇಶಿಸಿದ ಧ್ಯಾನಶ್ಲೋಕಗಳಿಂದ ಪ್ರಾರಂಭವಾಗಿದೆ. ಇದರಿಂದ ಶ್ರೀವೈಷ್ಣವ ಸ್ಮಾರ್ತ ವಿದ್ವಾಂಸರುಗಳು ಆ ಕಾರ್ಯದಲ್ಲಿ ಸೇರಿದ್ದರೆಂದು ಊಹಿಸಬಹುದಾಗಿದೆ. ಅದೇ ಪೀಠಿಕೆಯಲ್ಲಿ "ವಿರೂಪಾಕ್ಷೇಣ ಧೀಮತಾ ವಿದುಷಾ" ಎಂದು ಇದೆ. ಆ ಧೀಮಂತ ವಿದ್ವಾಂಸರು ಯಾರೆಂದು

ತಿಳಿಯುದು ಗ್ರಂಥ ಅಚ್ಚಾಗುತ್ತಿದ್ದಾಗ ಕೋಲಾರದ ರಾಮಶಾಸ್ತ್ರಿಗಳೆಂಬವರೂ ಚಿಕ್ಕಮಗಳೂರಿನ ರಾಘವೇಂದ್ರಾಚಾರ್ಯರೆಂಬವರೂ ಅಚ್ಚಿನ ಕರಡು-(ಪ್ರೂಫ್)ಗಳನ್ನು ತಿದ್ದಿದರೆಂದು ಬೇರೆಬೇರೆ ಪೀಠಿಕೆಗಳಲ್ಲಿ ಹೇಳಿದೆ ಮೂಲಲೇಖಕರು ಯಾರೇ ಆಗಿರಲಿ, ಶೋಧನಕರ್ತರು ಯಾರೇ ಇರಲಿ, ಪ್ರಮಾದಗಳಂತೂ ಹೇಗೋ ಬಂದಿದ್ದುದು ಸ್ಪಷ್ಟವಾಗಿ ಕಾಣುತ್ತದೆ. ಎಷ್ಟೋ ಕಡೆ ಮೂಲ ತಪ್ಪಿಹೋಗಿದೆ ಭಾಷೆಯೊಳಕ್ಕೆ ಅಶುದ್ಧಗಳು ನುಣುಚಿಕೊಂಡಿವೆ ವಾಕ್ಯರಚನೆಯಲ್ಲಿ ನವುರು ನಾಜೂಕುಗಳ ಕಡೆ ಗಮನ ಸಾಕಷ್ಟಿದ್ದಂತೆ ತೋರುವುದಿಲ್ಲ ಎಷ್ಟೋ ಕಡೆ ವಿಪರೀತಾರ್ಥಗಳು ಬಂದಿರುವುದೂ ಉಂಟು ಶ್ರೀಮಾನ್ ರಂಗನಾಥಶರ್ಮಾ ಅವರು ಕಣ್ಣಿನಲ್ಲಿ ಕಣ್ಣಿಟ್ಟುಕೊಂಡು ಹುಡುಕಿ ಎಲ್ಲವನ್ನೂ ಪರಿಷ್ಕಾರ ಮಾಡಿದ್ದಾರೆ. ಅವರಿಗೂ ಸಹಾಯಕ ಪಂಡಿತರಿಗೂ ನನ್ನ ಕೃತಜ್ಞತೆಯ ನಮಸ್ಕಾರಗಳನ್ನು ಸಂತೋಷದಿಂದ ಸಮರ್ಪಿಸುತ್ತೇನೆ

ಈ ಪರಿಷ್ಕರಣದಿಂದ ಗ್ರಂಥದ ಮೊದಲಿನ ರೂಪರಚನಗೆ ವ್ಯತ್ಯಾಸವೇನೂ ಆಗಿಲ್ಲ ಅದು ಹಿಂದಿನ ಪಂಡಿತರು ಕೊಟ್ಟಿದ್ದ ಆಕಾರವನ್ನು ಉಳಿಸಿಕೊಂಡು ಅದೇ ಶರೀರದಿಂದ ಮತ್ತಷ್ಟು ಸೊಗಯಿಸುವಂತಾಗಿದೆ. ಉದ್ದಿಷ್ಟ ಜನವರ್ಗಕ್ಕೆ ಗ್ರಂಥವು ಈಗ ಹೆಚ್ಚು ಆದರಣೀಯವಾಗುತ್ತದೆ ಯೆಂದು ನಾನು ನಂಬಿದ್ದೇನ ಭಾಷೆಯು ಶುದ್ಧವಾಗಿ, ಶೈಲಿಯು ಲಲಿತವಾಗಿ, ಕಥಾನಿರೂಪಣೆಯು ಸರಸ ಗಂಭೀರವಾಗಿ, ಎಲ್ಲ ದೃಷ್ಟಿಗಳಿಂದಲೂ ಗ್ರಂಥವು ರಮಣೀಯವಾಗಿ, ಎಲ್ಲರನ್ನೂ ಮೆಚ್ಚಿಸು ವಂತಿದೆಯೆಂದು ನಾನು ತಿಳಿದಿದ್ದೇನೆ

ಈ ಗ್ರಂಥವು ಪುನಃಪ್ರಕಟನೆಗೆ ಬರುತ್ತಿದೆಯಲ್ಲ ಎಂಬ ಸಮಾಧಾನ ನನ್ನ ಮನಸ್ಸಿನಲ್ಲಿ ತುಂಬಿದೆ. ಕನ್ನಡದಲ್ಲಿ ರಾಮಾಯಣ ಗ್ರಂಥಗಳು ನೂರಾರು ಇದ್ದರೂ ಈ ಚಾಮರಾಜೋಕ್ತಿ ರಾಮಾಯಣಕ್ಕೆ ನಮ್ಮ ವಾಚಕಪ್ರಪಂಚದಲ್ಲಿ ಒಂದು ನಿರ್ದಿಷ್ಟವಾದ ಸ್ಥಾನವುಂಟೆಂದು ನಾನು ಭಾವಿಸಿದ್ದೇನೆ. ನಮ್ಮ ವಾಚಕವರ್ಗದಲ್ಲಿ ನಾಲ್ಕಾರು ಅಂತಸ್ತುಗಳಿರುತ್ತವೆ ಸಂಸ್ಕೃತ ಮೂಲವನ್ನೇ ಓದುವವರಿದ್ದಾರೆ ಆ ಮೂಲದ ಜೊತೆಗೆ ಪ್ರತಿಪದಾರ್ಥವನ್ನವೇಕ್ಷಿಸುವವರಿದ್ದಾರೆ ಇನ್ನೂ ಅವರ ಜೊತೆಗೆ ವಚನತಾತ್ಪರ್ಯ ಬೇಕೆನ್ನುವವರೂ ಇದ್ದಾರ ಈ ಮೂರು ವರ್ಗಗಳವರಿಂದಲೂ ವ್ಯಾಸಂಗವು ಅಷ್ಟಿಷ್ಟು ಕಾಲವ್ಯಯವನ್ನಪೇಕ್ಷಿಸುತ್ತದೆ ನಾಲ್ಕನೆಯ ವರ್ಗ ಒಂದುಂಟು ಅವರು ಅಕ್ಷರಸ್ಥರಾದರೂ ಹೆಚ್ಚಿನ ಭಾಷಾಪಾಂಡಿತ್ಯವಿಲ್ಲದವರು , ಅವರ ಕಾವ್ಯಾಭ್ಯಾಸವೂ ಮಿತವಾದದ್ದು ಗ್ರಂಥಕುತೂಹಲದಲ್ಲಿ ಅವರು ಗಣ್ಯರಾದವರು. ಅವರಿಗಿರುವ ಕಾಲವ್ಯವಧಾನವೂ ತೀರಾ ಸ್ವಲ್ಪದ್ದು ಅಂಥವರನ್ನು ಮುಖ್ಯವಾಗಿ ದೃಷ್ಟಿಯಲ್ಲಿರಿಸಿಕೊಂಡಿರುವುದು ಈ ಶ್ರೀ ಚಾಮರಾಜೋಕ್ತಿವಿಲಾಸ ರಾಮಾಯಣ. ಹಳೆಯ ಲೋಯರ್ ಸೆಕೆಂಡರಿ ಮಟ್ಟದ ಭಾಷಾಜ್ಞಾನವಿರುವ ಜನರು— ವಿಶೇಷವಾಗಿ ಹೆಣ್ಣುಮಕ್ಕಳು—ಈ ಗ್ರಂಥವನ್ನೋದಿ ಸಂತೋಷಿಸಿಯಾರೆಂದು ನನಗೆ ನಂಬಿಕೆಯಿದೆ.

ಶ್ರೀರಾಮಚರಿತೆ ಮನೆಮನೆಯನ್ನೂ ಬೆಳಗಬಲ್ಲ ದಿವ್ಯದೀಪ ಇದು ಯಾರಿಗೆ ಬೇಡ ? ಪ್ರತಿಯೊಬ್ಬರೂ ಪಾರಾಯಣ ಮಾಡಿ ಜೀವಕ್ಕೆ ಸಂಸ್ಕಾರಮಾಡಿಕೊಳ್ಳಬಹುದಾದ ಗ್ರಂಥ ಇದು. ಪ್ರತಿಯೊಬ್ಬರಿಗೂ ಅವರವರ ಭಾಷಾಪರಿಚಯಕ್ಕೆ ತಕ್ಕಂತೆ, ಅವರವರ ಲೋಕಾನುಭವಕ್ಕೆ ತಕ್ಕಂತೆ ಅವರವರ ಅಭಿರುಚಿಗೆ ತಕ್ಕಂತೆ, ಅವರವರ ಮನೋಬುದ್ಧಿ ಪರಿಪಾಕಕ್ಕೆ ತಕ್ಕಂತೆ ರಾಮಾಯಣವನ್ನು ಒದಗಿಸಬೇಕಾದದ್ದು ಜನಾಭಿಮಾನಿಗಳ ಕರ್ತವ್ಯ ಅಂಥ ಒಂದು ಕರ್ತವ್ಯವನ್ನು ಈಗೆ

ಶ್ರೀಮದ್ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿಯವರು ನೆರವೇರಿಸಿದ್ದಾರೆ. ಅವರಿಗೆ ನನ್ನ ಅಭಿನಂದನೆ.

ನಮ್ಮ ಮಹಾಪ್ರಭುಗಳಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್‌ರವರು ತಮ್ಮ ಪೂರ್ವಿಕರ ಈ ಸತ್ಕೃತಿಯ ಪುನಃಪ್ರಕಟನೆಯ ವಿಷಯದಲ್ಲಿ ಮೆಚ್ಚುಗೆ ತೋರಿರುವುದು ಉಚಿತವಾಗಿರುವಂತೆ, ನಮಗೆಲ್ಲ ಭೂಷಣವಾಗಿಯೂ ಇದೆ. ಶ್ರೀಮನ್ಮಹಾರಾಜರವರು ಕುಲಕ್ರಮಾಗತವಾದ ಸಂಪ್ರದಾಯವನ್ನು ಅನುಸರಿಸಿ ಆರ್ಯಜನಸಂಸ್ಕೃತಿಯ ಜ್ಯೋತಿಯನ್ನು ದೇಶವಿದೇಶಗಳಲ್ಲಿ ಬೆಳಗಿಸಿ ಭರತಭೂಮಿಯ ಕೀರ್ತಿಯನ್ನು ಪಸರಿಸುತ್ತಿದ್ದಾರೆ. ಭಗವಂತನು ಇವರಿಗೆ ಆಯುರಾರೋಗ್ಯವನ್ನು ಕರುಣಿಸಿ, ಇವರಿಂದ ಚಿರಕಾಲ ಸರ್ವತೋಮುಖವಾಗಿ ಸ್ವದೇಶಸೇವೆಯನ್ನು ನಡೆಸಲು ಅವಕಾಶಗಳನ್ನು ಅನುಗ್ರಹಿಸಲಿ.

ದೂರದ ಯಾತ್ರೆಗೆ ದೊರೆವುದು ।
ವಾರಾಣಸಿಯುತ್ಕಲದಮರಗಂಗಾತೀರ್ಥಂ ॥
ಶ್ರೀರಾಮಾಯಣಗಂಗಾ- ।
ಪೂರಂ ಮನೆಮನೆಗಮಪ್ಪುದಮೃತಲಸ್ವಾದಂ ॥

ಡಿ. ವಿ. ಜಿ.



# ನಿವೇದನೆ

ನಮ್ಮ ಭಾರತೀಯರ ಚಿತ್ತಭೂಮಿಕೆಯಲ್ಲಿ ಶ್ರೀಮದ್ರಾಮಾಯಣ ಮತ್ತು ಶ್ರೀಮನ್ಮಹಾಭಾರತ — ಈ ಎರಡು ಗ್ರಂಥಗಳು ಅತಿಶಯವಾದ ಪ್ರಭಾವಮುದ್ರೆಯನ್ನೊತ್ತಿವೆ ರಾಮಾಯಣವು ಆದಿಕಾವ್ಯವೆನಿಸಿದರೆ ಮಹಾಭಾರತವು ಪಂಚಮವೇದವೆನಿಸಿದೆ ರಾಮಾಯಣವು ಗ್ರಂಥಪರಿಮಾಣದಲ್ಲಿ, ಕಥಾವೈವಿಧ್ಯದಲ್ಲಿ ಪರಿಮಿತ ಭಾರತವಾದರೋ ಬಹುದೊಡ್ಡದು ಅದರಲ್ಲಿಯ ಕಥೆಗಳ ಮತ್ತು ಪ್ರತಿಪಾದ್ಯವಸ್ತುಗಳ ವೈವಿಧ್ಯ ಅತಿವಿಸ್ತೃತ ಅದು ಒಂದು ಮಹಾಸಾಗರವಿದ್ದಂತೆ ಅದರಲ್ಲಿ ಸಾಧನಸಂಪತ್ತಿಲ್ಲದೆ ಪ್ರವೇಶಿಸುವುದು ಅಶಕ್ಯ ದರ್ಶನಶಾಸ್ತ್ರದ ಬಿರುಗಾಳಿಯಿಂದೆದ್ದ ವಿಚಾರತರಂಗಗಳ ಪರಂಪರೆಯು ಸಾಮಾನ್ಯಬುದ್ಧಿಗೆ ದುಃಸಹ ಆಳದಲ್ಲಿರುವ ಮುತ್ತುರತ್ನಗಳನ್ನೆತ್ತಿಕೊಳ್ಳಲು ಧೈರ್ಯಸಾಹಸಗಳು ಬೇಕು ಅದು ಶಾಸ್ತ್ರಕಾವ್ಯ

ಶ್ರೀಮದ್ರಾಮಾಯಣವು ಪಂಪಾಸರೋವರವಿದ್ದಂತೆ ಈಜುವವನಿಗೆ ಆಪ್ಯಾಯನಕಾರಿ ಕಾಂತಾಸಂಹಿತೆಯ ತಂಗಾಳಿಯಿಂದೇಳುವ ವಿಚಾರತರಂಗಗಳು ಮೃದುವಾದವು, ಹಿತಕಾರಿಯಾದವು. ಸುಲಭವಾಗಿ ದೊರೆಯುವ ತಾವರೆಗಳ ಕಂಪು, ನೀರುಹಕ್ಕಿಗಳ ಇಂಪು ಚಿತ್ತವನ್ನು ಉಲ್ಲಾಸಗೊಳಿಸುತ್ತದೆ ಇದು ಧ್ವನಿಕಾವ್ಯ.

ಶ್ರೀರಾಮಚಂದ್ರನ ದಿವ್ಯಕಥೆ ಇದು ಮನುಷ್ಯನಾಗಿ ಅವತರಿಸಿ ತನ್ನ ಸೌಜನ್ಯದಿಂದ, ಧರ್ಮಶ್ರದ್ಧೆಯಿಂದ, ತಪಸ್ಸಿನಿಂದ, ಗುರುಹಿರಿಯರ ಸೇವೆಯಿಂದ, ಅದಮ್ಯಶೌರ್ಯಸಾಹಸಗಳಿಂದ ದೇವತ್ವಕ್ಕೇರಿದ ಮಹಾಮಹಿಮನ ಕಥೆ. ಅವನ ಮಾತಾಪಿತೃಭಕ್ತಿ, ಗುರುದೇವತೆಗಳಲ್ಲಿಯೂ ಶಿಷ್ಟಾಚಾರದಲ್ಲಿಯೂ ಇದ್ದ ಅಪರಿಮಿತವಾದ ಶ್ರದ್ಧೆ, ಧರ್ಮನಿಷ್ಠೆ, ಭ್ರಾತೃವಾತ್ಸಲ್ಯ, ಪತ್ನೀಪ್ರೇಮ, ಕಷ್ಟಸಹಿಷ್ಣುತೆ, ಕಷ್ಟವನ್ನು ಲೀಲೆಯಿಂದ ಎದುರಿಸುವ ಮನಃಪರಿಪಾಕ, ಎಲ್ಲಕ್ಕೂ ಮಿಗಿಲಾಗಿ ರಾಜಧರ್ಮವನ್ನರಿತು ನಡೆಯುವ ಲೋಕಾರಾಧನತತ್ಪರತೆ—ಈ ಲೋಕೋತ್ತರ ಗುಣಗಳು ಸರ್ವಕಾಲದಲ್ಲಿಯೂ ಸರ್ವರ ಮನಸ್ಸನ್ನೂ ಆಕರ್ಷಿಸುತ್ತವೆ. ಸೀತೆಯ ಮುಗ್ಧಮಧುರ ಸ್ವಭಾವ, ಪತಿಪರಾಯಣತೆ, ಅನಿತರಸಾಧಾರಣವಾದ ಪತಿಪ್ರೇಮ—ಇವು ಅವಳನ್ನು ಆದರ್ಶಮಹಿಳೆಯನ್ನಾಗಿ ಮಾಡಿವೆ. ಶ್ರೀರಾಮನಿಗೆ ಪಟ್ಟಾಭಿಷೇಕವು ತಪ್ಪಿಹೋಯಿತೆಂದು ತಿಳಿದಾಗ ಅವಳಿಗೆ ಎಂಥ ಆಶಾಭಂಗವಾಗಿರಬೇಡ ಮನಸ್ಸು ಎಷ್ಟು ನೊಂದಿರಬೇಡ. ಆಗ ಸೀತೆಯು ಕೈಕೇಯಿಯ ದೌರ್ಜನ್ಯವನ್ನು ಕುರಿತಾಗಲಿ, ದಶರಥನ ಸ್ತ್ರೀವಶ್ಯತೆಯನ್ನು ಉದ್ದೇಶಿಸಿಯಾಗಲಿ ಒಂದು ಮಾತನ್ನಾದರೂ ಎತ್ತಿದಳೆ ? ತನ್ನ ಪತಿಯೊಡನೆ ಕಾಡಿಗೆ ಹೋಗಬೇಕೆಂದು ಥಟ್ಟನೆ ನಿರ್ಧರಿಸಿದಳಲ್ಲದೆ ಇನ್ನೊಂದು ಚಿಂತೆ ಅವಳ ಮನಸ್ಸಿನಲ್ಲಿ ಸುಳಿಯಲಿಲ್ಲ.

ಲಕ್ಷ್ಮಣನು ಆಪದ್ಬಾಂಧವನಾಗಿ ಅಣ್ಣನೊಡನೆ ವನವಾಸವನ್ನು ಅನುಭವಿಸುವುದು, ಭರತನು ತಾನಾಗಿ ಬಂದ ರಾಜ್ಯಪದವಿಯನ್ನು ತೃಣಕ್ಕೆ ಕಡೆಯಾಗಿ ಅಲ್ಲಗಳೆದು ವಲ್ಕಲಧಾರಿಯಾಗುವುದು ಭ್ರಾತೃವಾತ್ಸಲ್ಯದ ಧರ್ಮನಿಷ್ಠೆಯ ಪರಮೋದಾಹರಣೆಗಳು ದಶರಥಮಹಾರಾಜನು ದೀರ್ಘಕಾಲದವರೆಗೆ ವೈಭವದಿಂದ ರಾಜ್ಯವಾಳಿದನು. ಆದರೆ ಕಡೆಗೆ ಧರ್ಮದ ಇಕ್ಕಳದಲ್ಲಿ ಸಿಕ್ಕಿ ಕೊರಗಿ ಕೊರಗಿ ಪ್ರಾಣಬಿಡುವ ಸಂನಿವೇಶ ಕಾಮಮೋಹಗಳ ಅತಿಯಿಂದಾಗುವ ಅನರ್ಥವನ್ನು ತೋರಿಸುವುದಲ್ಲದೆ

ಐಶ್ವರ್ಯ ವೈಭವ ಅಧಿಕಾರಗಳು ಎಷ್ಟು ಅಸ್ಥಿರವೆಂಬುದನ್ನೂ ಕರ್ಮಫಲ ಒಂದಲ್ಲದೆ ಇನ್ನಾವುದೂ ಮನುಷ್ಯನ ರಕ್ಷಣೆಗೆ ಬರುವುದಿಲ್ಲವೆಂಬುದನ್ನೂ ಮನದಟ್ಟಾಗುವಂತೆ ಚಿತ್ರಿಸುತ್ತದೆ.

ಆಂಜನೇಯನ ಪರಾಕ್ರಮ, ಸ್ವಾಮಿನಿಷ್ಠೆ, ಕಾರ್ಯಸಾಧನೆಯ ಚಾತುರ್ಯ, ಸಮಯೋಚಿತ ನಿರ್ಣಯಗಳು ಅಸದೃಶವಾದವು ಹಾಗೆಯೇ ವಾಲಿ, ಸುಗ್ರೀವ, ರಾವಣ ಮುಂತಾದ ಮಹಾಪಾತ್ರಗಳ ವ್ಯಕ್ತಿತ್ವ, ಕಾರ್ಯಸಾಹಸ, ನೀತಿದೌರ್ಬಲ್ಯ, ಉನ್ನತಿ ಅವನತಿಗಳನ್ನು ಚಿತ್ರಿಸುವ ಆದಿಕವಿಯ ಸಾಮರ್ಥ್ಯ ಅನ್ಯತ್ರ ದುರ್ಲಭ

ವಾಲ್ಮೀಕಿಮುನಿಗಳು ಸ್ವತಃ ಶಬ್ದಗಳಿಂದ ನಿರೂಪಿಸದೆ ಸಹೃದಯರ ಊಹೆಗೆ ಬಿಟ್ಟಿರುವ ಸಂದರ್ಭಗಳು ಹಲವಾರು ಶ್ರೀರಾಮನ ಕಥಾಪ್ರವಾಹದಲ್ಲಿ ಅವುಗಳ ಸ್ಥಾನ ಗೌಣವೆಂದು ಕವಿಯ ಆಶಯವಿರಬಹುದು ಉದಾಹರಣೆಗೆ, ಲಕ್ಷ್ಮಣನು ಊರ್ಮಿಳೆಯನ್ನು ಬೀಳ್ಕೊಂಡು ಅರಣ್ಯಕ್ಕೆ ಹೊರಡುವ ಸಂನಿವೇಶ—ವಿರಹಕಾಲದಲ್ಲಿ ಊರ್ಮಿಳೆಯ ಭಾವತರಂಗಗಳು—ಲಕ್ಷ್ಮಣನಿಗೆ ಕಾಂತಾವಿರಹದಿಂದುಂಟಾದ ತಳಮಳ—ಭರತನು ತನ್ನ ಪಟ್ಟಾಭಿಷೇಕವನ್ನು ಧಿಕ್ಕರಿಸಿ ನಂದಿಗ್ರಾಮದಲ್ಲಿ ನಿಂತಾಗ ಕೈಕೇಯಿಯ ಮನಸ್ಸಿನಲ್ಲಿ ಉದಯಿಸಿರಬಹುದಾದ ಅನುತಾಪ—ಸೀತೆಯ ವನವಾಸದ ಸುದ್ದಿಯನ್ನು ಕೇಳಿ ಜನಕರಾಜನಿಗುಂಟಾದ ಕಳವಳ ಇವು ಕಾವ್ಯದಲ್ಲಿ ರಮಣೀಯ ಸಂದರ್ಭಗಳು ವಾಲ್ಮೀಕಿರಾಮಾಯಣದ ಹಿನ್ನೆಲೆಯಲ್ಲಿ ಈ ಸಂದರ್ಭಗಳನ್ನು ಯಾವ ಕುಮಾರವಾಲ್ಮೀಕಿಗಳೂ ಇದುವರೆಗೆ ವರ್ಣಿಸಿದಂತೆ ಕಾಣುವುದಿಲ್ಲ ಇವುಗಳನ್ನು ಚಿತ್ರಿಸಲು ಪುನಃ ವಾಲ್ಮೀಕಿಮುನಿಗಳೇ ಅವತರಿಸಿ ಬರಬೇಕಾಗಿದೆ

ಸೀತಾರಾಮರ ವೃತ್ತಾಂತ ಸರ್ವರಿಗೂ ತಿಳಿದಿರುವ ಪ್ರಚುರವಾದ ಕಥೆ ಸ್ತ್ರೀಪುರುಷರು, ಬಾಲವೃದ್ಧರು, ಪಂಡಿತಪಾಮರರು ಮೆಚ್ಚಿ ತಲೆದೂಗಿದ ಕಥೆ ಇದು. ರಾಮಾಯಣದ ಆಧಾರದಿಂದ ಹುಟ್ಟಿದ ಕಾವ್ಯ ನಾಟಕ ಚಂಪೂಪ್ರಬಂಧಗಳೆಷ್ಟು! ಪ್ರಬಂಧ ವಿಮರ್ಶೆಗಳೆಷ್ಟು! ಹಾಡು ಪರಿವರ್ತನೆಗಳೆಷ್ಟು! ನಿರೂಪಕರಣಗಳೆಷ್ಟು! ಎಷ್ಟು ಸಲ ನಾವು ಈ ಕಥೆಯನ್ನು ಕೇಳಿಲ್ಲ? ಆದರೂ ಬೇಸರವಿಲ್ಲದೆ ಇದರ ವಿಷಯದಲ್ಲಿ ಜನರಿಗೆ ನವನವೋತ್ಸಾಹವು ಮೂಡುತ್ತಲೇ ಇದೆ ಇದೇ ಶ್ರೀಮದ್ರಾಮಾಯಣದ ಹಿರಿಮೆಗೆ ಮಹಾಸಾಕ್ಷಿ ರಾಮಾಯಣಕ್ಕೆ ಆದಿ ಇದೆ ಇದು ಸಾದಿ ಆದರೆ ಅನಂತ

ವಾಲ್ಮೀಕಿಮುನಿಗಳು ಸಂಸ್ಕೃತಭಾಷೆಯಲ್ಲಿ ರಚಿಸಿದ ಈ ರಾಮಾಯಣವನ್ನು ಗದ್ಯರೂಪದಲ್ಲಿ ಪರಿವರ್ತಿಸಲು ಆಗಿನ ಮೈಸೂರು ಶ್ರೀಮನ್ಮಹಾರಾಜರವರು ನಡೆಸಿದ ಈ ಪ್ರಯತ್ನವೇ ಕನ್ನಡದಲ್ಲಿ ಮೊದಲನೆಯದೆಂದು ತೋರುತ್ತದೆ ಆ ಪ್ರಭುಗಳ ಉದಾರಾಶ್ರಯದಿಂದ ಪಂಡಿತರು ಕನ್ನಡಿಸಿದ ಈ ಗ್ರಂಥ ಚಾಮರಾಜೋಕ್ತಿವಿಲಾಸವೆಂಬ ಹೆಸರಿನಿಂದ ಕನ್ನಡಿಗರ ಮನೆಯಲ್ಲಿ ಜ್ಯೋತಿಯಾಗಿ ಬೆಳಗುತ್ತ ಬಂದಿದೆ.

ಶ್ರೀಮದ್ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿಯವರು ಈ ಗ್ರಂಥವನ್ನು ಪರಿಷ್ಕರಿಸಿ ಪ್ರಕಟಿಸಬೇಕೆಂಬ ನಿರ್ಧಾರವನ್ನು ತೆಗೆದುಕೊಂಡು, ಇದರ ಪರಿಷ್ಕರಣಕಾರ್ಯವನ್ನು ನಡೆಸಿಕೊಡಬೇಕೆಂದು ಪ್ರಸಿದ್ಧವಿದ್ವಾಂಸರೂ ಹಿರಿಯ ಸಾಹಿತಿಗಳೂ ಆದ ಡಾ|| ಡಿ ವಿ. ಗುಂಡಪ್ಪನವರನ್ನು ಪ್ರಾರ್ಥಿಸಿದರು. ಆದರಂತೆ ಶ್ರೀ ಡಿ. ವಿ. ಜಿ. ಯವರು ತಮ್ಮ ಅಧ್ಯಕ್ಷತೆಯಲ್ಲಿ ಪಂಡಿತಸದಸ್ಯರುಳ್ಳ ಒಂದು ಸಂಪಾದಕಮಂಡಲಿಯನ್ನು ಪರಿಷ್ಕರಣಕಾರ್ಯಕ್ಕಾಗಿ ಗೊತ್ತು ಪಡಿಸಿದರು.

ಈ ಸಂಪಾದಕ ಮಂಡಲಿಯು ಶ್ರೀ ಡಿ ವಿ ಜಿ ಯವರ ಅಧ್ಯಕ್ಷತೆಯಲ್ಲಿ ತಾ॥ ೨೭–೯–೧೯೬೯ರಂದು ಸಭೆ ಸೇರಿ ಪರಿಷ್ಕರಣಕಾರ್ಯವನ್ನು ಹೇಗೆ ನಡೆಸಬೇಕೆಂದು ವಿಶದವಾಗಿ ಚರ್ಚಿಸಿ ಕೆಲವು ನಿಯಮಗಳನ್ನು ಗೊತ್ತುಪಡಿಸಿತು ಅದರ ಮುಖ್ಯ ವಿವರಗಳನ್ನು ಶ್ರೀ ಡಿ ವಿ ಜಿ ಯವರು ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ

ಪರಿಷ್ಕರಣಕಾರ್ಯಕ್ಕಾಗಿ 'ಶ್ರೀಚಾಮರಾಜೋಕ್ತಿವಿಲಾಸವೆಂಬ ಕನ್ನಡ ರಾಮಾಯಣ'ದ (ಈ ಗ್ರಂಥದ) ಮೂಲ ಪ್ರತಿಯೊಂದನ್ನು ನರಸಿಂಹರಾಜ ಕಾಲೋನಿಯಲ್ಲಿರುವ ಗೋಖಲೆ ಸಾರ್ವಜನಿಕ ಸಂಸ್ಥೆಯವರು ಉದಾರಮನಸ್ಸಿನಿಂದ ಸಂಪಾದಕಮಂಡಲಿಗೆ ಒಪ್ಪಿಸಿದರು ಆ ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಪರಿಷ್ಕರಣಕಾರ್ಯವನ್ನು ಆರಂಭಿಸಲಾಯಿತು

ಪ್ರಧಾನಸಂಪಾದಕನಾದ ನಾನು ಸಂಪಾದಕಮಂಡಲಿಯ ಇತರ ವಿದ್ವಾಂಸರಿಗೆ ಚಾಮರಾಜೋಕ್ತಿವಿಲಾಸವನ್ನು ಕಾಂಡಶಃ ವಿಭಾಗಿಸಿಕೊಟ್ಟು ಶ್ರೀ ಡಿ. ವಿ ಜಿ ಯವರ ಸೂಚನೆಯಂತೆ ತಮ್ಮ ಕಾರ್ಯವನ್ನು ಆರಂಭಿಸಬೇಕೆಂದು ಪ್ರಾರ್ಥಿಸಿದೆ

ಮುಂದಿನ ನಮ್ಮ ಕಾರ್ಯಸರಣಿ ಹೀಗೆ ಏರ್ಪಟ್ಟಿತು .

೧ ವಾರಕ್ಕೊಂದು ಸಲ ಸಂಪಾದಕ ಮಂಡಲಿಯು ಸಭೆ ಸೇರುವುದು

೨ ಪ್ರತಿಯೊಬ್ಬ ಪರಿಷ್ಕರ್ತರೂ ತಮ್ಮ ಭಾಗದ ಗ್ರಂಥವನ್ನು ನಿಯಮಾನುಸಾರವಾಗಿ ಶೋಧಿಸಿ, ಶೋಧಿಸಿದ ಭಾಗವನ್ನು ಸಭೆಗೆ ತರುವುದು

೩ ಸಭೆಯಲ್ಲಿ ಎಲ್ಲರೂ ಸೇರಿ ಆ ವಾರದಲ್ಲಿ ನಡೆದ ಕಾರ್ಯವನ್ನು ಪರಿಶೀಲಿಸುವುದು ಸಂದಿಗ್ಧವಿಷಯಗಳನ್ನು ಚರ್ಚಿಸಿ ಒಮ್ಮತಕ್ಕೆ ಬಂದು ಅದರಂತೆ ಶೋಧನಕಾರ್ಯವನ್ನು ಮುಂದುವರಿಸುವುದು

೪. ಒಂದು ವೇಳೆ ವಿಷಯವು ಗಂಭೀರವಾಗಿದ್ದು ಸಂಪಾದಕಮಂಡಲಿಯು ಅದನ್ನು ಬಗೆಹರಿಸಿಕೊಳ್ಳಲು ಸಾಧ್ಯವಾಗದಿದ್ದಲ್ಲಿ ಅಧ್ಯಕ್ಷರಾದ ಶ್ರೀ ಡಿ ವಿ ಜಿ ಯವರಿಂದ ಮಾರ್ಗದರ್ಶನವನ್ನು ಪಡೆಯುವುದು.

ಈ ಸರಣಿಯಲ್ಲಿ ಕಾರ್ಯವು ನಡದು ಪರಿಷ್ಕರಣದ ಒಂದು ಘಟ್ಟವು ಮುಗಿಯಿತು ಸಂಪಾದಕ ಮಂಡಲಿಯ ವಿದ್ವಾಂಸರು ಈ ಗ್ರಂಥವನ್ನು ಯುಕ್ತವಾದ ರೀತಿಯಲ್ಲಿ ತಿದ್ದಿದರು , ಗ್ರಂಥದಲ್ಲಿರುವ ದೋಷಗಳನ್ನು ತೋರಿಸಿದರು ಈ ವಿದ್ವಾಂಸರು ತಮ್ಮ ಕಾರ್ಯವನ್ನು ನಿರ್ವಹಿಸಿ ನನಗೆ ಬಹಳ ಉಪಕಾರ ಮಾಡಿದ್ದಾರೆ. ನನ್ನ ಶ್ರಮವನ್ನು ಬಹುಮಟ್ಟಿಗೆ ಕಡಿಮೆ ಮಾಡಿದ್ದಾರೆ ಈ ಮಹನೀಯರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಪರಿಷ್ಕರಣದ ಎರಡನೆಯ ಘಟ್ಟ ನನ್ನ ಪಾಲಿಗೆ ಬಂದಿತು ಗ್ರಂಥವನ್ನು ಮುದ್ರಣ ಕಾರ್ಯಕ್ಕೆ ಸಿದ್ಧಪಡಿಸಬೇಕಾಯಿತು ಮುದ್ರಣಕಾರ್ಯವನ್ನಾರಂಭಿಸುವಾಗ ಪ್ರತಿಯೊಂದು ವಾಕ್ಯ, ಶಬ್ದ, ಅಕ್ಷರಗಳನ್ನು ನಾನು ಗಮನಿಸಿ ನೋಡಿ ತಿದ್ದಬೇಕಾಯಿತು. ಈ ಕಾರ್ಯ ಸುಲಭವಾಗಿರಲಿಲ್ಲ

ಈ ಗ್ರಂಥವನ್ನು ಒಬ್ಬರೇ ಕನ್ನಡಕ್ಕೆ ಪರಿವರ್ತಿಸಿ ಬರೆದರೆ ? ಅಥವಾ ಈ ಕಾರ್ಯವನ್ನು ಅನೇಕರು ವಿಭಾಗಿಸಿಕೊಂಡಿದ್ದರೆ ? ಎಂಬ ಸಂದೇಹಕ್ಕೆ ಅವಕಾಶವಿದೆ ಸಂಸ್ಕೃತ ರಾಮಾಯಣದಲ್ಲಿ ಸೂಕ್ಷ್ಮಾರ್ಥವುಳ್ಳ ಭಾಗ ಯಾವುದೋ—ಯಾವುದು ಕೇವಲ ವ್ಯಾಖ್ಯಾಗಮ್ಯವೋ—ಅದು ಈ ಕನ್ನಡ ರಾಮಾಯಣದಲ್ಲಿ ಅನೇಕ ಸ್ಥಳಗಳಲ್ಲಿ ಸ್ಪಷ್ಟವಾಗಿ ಬಂದಿದೆ ವಾಲ್ಮೀಕಿರಾಮಾಯಣವನ್ನು

ಚೆನ್ನಾಗಿ ಪರಿಶೀಲಿಸಿದವರೇ ಈ ಭಾಗವನ್ನು ಕನ್ನಡಿಸಿದ್ದಾರೆಂದು ಹೇಳಲಡ್ಡಿಯಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಸಂಸ್ಕೃತಮೂಲದ ಪರಿವರ್ತನೆ ತಪ್ಪಾಗಿರುವುದು ಕಂಡುಬರುತ್ತದೆ ಆದ್ದರಿಂದ ಈ ಗ್ರಂಥರಚನೆಯಲ್ಲಿ ಅನೇಕರ ಕೈವಾಡವಿರಬಹುದೆಂಬ ಶಂಕೆಗೆ ಅವಕಾಶ ಉಂಟು ಹಾಗಿದ್ದರೂ ಇದನ್ನು ಮುದ್ರಣಕ್ಕೆ ಮೊದಲು ಪರಿಷ್ಕರಿಸುವಾಗ ಕೆಲವು ನ್ಯೂನತೆಗಳು ಉಳಿದುಕೊಂಡಿದ್ದವು

ಸಾಮಾನ್ಯವಾಗಿ ಗ್ರಂಥದಲ್ಲಿ ಬರಬಹುದಾದ ದೋಷಗಳು ಎರಡು ಜಾತಿಯುವು. ಒಂದು ಅನಿತ್ಯದೋಷ, ಇನ್ನೊಂದು ನಿತ್ಯದೋಷ

೧. ವಾಕ್ಯಗಳ ಅತಿದೀರ್ಘತೆ —ಇದು ಓದುಗನಿಗೆ ಹೆಚ್ಚು ಶ್ರಮವನ್ನು ಕೊಡುತ್ತದೆ ಅರ್ಥಪರಿಚ್ಛೇದವು ಸುಲಭವಾಗಿ ಆಗದೆ ರಸಭಂಗಕ್ಕೆ ಕಾರಣವಾಗುತ್ತದೆ. ಇದು ಕಾವ್ಯದಲ್ಲಿ ಒಂದು ದೋಷ ಆದರೆ ದೀರ್ಘವಾಕ್ಯಗಳು ಗ್ರಂಥರಚನೆಯಾಗಿದ್ದ ಕಾಲದಲ್ಲಿ ಜನಪ್ರಿಯವಾಗಿದ್ದಿರಬಹುದು. ಈಗಲೂ ಕೆಲವು ವರ್ಗದ ಜನರಿಗೆ ಅತಿದೀರ್ಘತೆಯು ರುಚಿಸಬಹುದು

೨. ಕರ್ಮಣಿ ಪ್ರಯೋಗ -ಕನ್ನಡದಲ್ಲಿ ಈ ಪ್ರಯೋಗಗಳು ವಿರಳ. ಸಂಭಾಷಣೆಯಲ್ಲಿ ಇಲ್ಲವೆಂದೇ ಹೇಳಬಹುದು. ಆದ್ದರಿಂದ ಗ್ರಂಥದಲ್ಲಿ ಈ ಪ್ರಯೋಗಗಳು ವಿಲಕ್ಷಣವಾಗಿ ತೋರುತ್ತವೆ. ಒಂದು ಅಸ್ವಾಭಾವಿಕತೆ ಅನುಭವಗೋಚರವಾಗುತ್ತದೆ. ಇದು ಕಾವ್ಯಮಾರ್ಗದಲ್ಲಿ ರಸಭಾವಗಳ ಅಪಕರ್ಷಕ್ಕೆ ಕಾರಣ ಆದರೆ ಸಂಸ್ಕೃತಭಾಷೆಗೆ ಕರ್ಮಣಿಪ್ರಯೋಗವು ಅಸ್ವಾಭಾವಿಕವಲ್ಲ ಕನ್ನಡದ ನುಡಿಗಟ್ಟನ್ನು ತಿಳಿಯದ ಸಂಸ್ಕೃತ ಭಾಷಾ ಪರಿಣತರಿಗೆ ಈ ದೋಷ ಗೋಚರಿಸುವುದಿಲ್ಲ.

ಈ ಎರಡನ್ನು ಅನಿತ್ಯದೋಷಗಳೆನ್ನಬಹುದು.

ಶ್ರುತಿಕಟು, ಪುನರುಕ್ತಿಗಳು ಕೆಲವು ಸಂದರ್ಭಗಳಲ್ಲಿ ದೋಷಗಳಾಗವು. ಅಪಶಬ್ದ, ಗ್ರಾಮ್ಯ ಶಬ್ದ, ಅಶ್ಲೀಲ, ಅನುಚಿತ, ನಿರಾಧಾರ, ಮೂಲವಿರುದ್ಧ—ಮುಂತಾದವು ನಿತ್ಯದೋಷಗಳು.

ಈ ಚಾಮರಾಜೋಕ್ತಿವಿಲಾಸದ ಪ್ರಥಮ ಮುದ್ರಣದಲ್ಲಿದ್ದ ಈ ಬಗೆಯ ದೋಷಗಳನ್ನು ಸಾಧ್ಯವಾದಮಟ್ಟಿಗೆ ತಿದ್ದಲಾಗಿದೆ ಮೊದಲು ಇದ್ದ ಕೆಲವು ದೋಷಗಳನ್ನು ವಾಚಕರ ಅವಗಾಹನೆಗೋಸ್ಕರ ಇಲ್ಲಿ ಉದಾಹರಿಸಿದ್ದೇನೆ

೧ ಅಪಶಬ್ದ : - ಕುಮಾರ್ತೆ, ಪ್ರೇಮೆ, ಬಿರುಘಾಳಿ, ಪರ್ಯಂತರ, ನಂತರ ಇತ್ಯಾದಿ

೨ ಗ್ರಾಮ್ಯಶಬ್ದ :—ಹ್ಯಾಗೆ, ಸಮ್ಮಂದ, ಹಸ, ತಕ್ಕೊ, ಆಮರಿಸು ಇತ್ಯಾದಿ.

೩. ಶ್ರುತಿಕಟು :—ಕಟ್ಟುಪಟ್ಟು, ಇದ್ದದ್ದಾದ್ದರಿಂದ ಇತ್ಯಾದಿ, ಅಕಟ ಎಂಬ ಭಾವ ಸೂಚಕಪದಕ್ಕೆ ಬದಲಾಗಿ ' ಕಟಕಟ ' ಎಂದು ಪ್ರಯೋಗಿಸುವುದು.

೪. ಶಬ್ದಾವೃತ್ತಿ :—ಮುನೀಶ್ವರ, ಸಮಸ್ತ, ಒಪ್ಪುತ್ತಿತ್ತು, ಆ ಬಳಿಕ, ಯಜ್ಞಪುರುಷ— ಇತ್ಯಾದಿ ಶಬ್ದಗಳನ್ನೇ ಬಾರಿಬಾರಿಗೂ ಉಪಯೋಗಿಸುವುದು ; ಇವುಗಳ ಪರ್ಯಾಯ ಪದಗಳನ್ನು ಬಳಸದಿರುವುದು.

೫. ಪುನರುಕ್ತ :—ತಾವರೇಕಮಲ, ಪರಶುಕೊಡಲಿ, ಗಿರಿಪರ್ವತಗಳು, ಮನಸ್ಸು ಅಂತರಂಗಶುದ್ಧವಾಗಿಲ್ಲ ( ಅರ. ೬೩ ), ಮನುಷ್ಯರಲ್ಲಿ ಪುರುಷೋತ್ತಮನು ( ಅಯೋ ೮೧ ) ಇತ್ಯಾದಿ.

೬ ಅತಿದೀರ್ಘವಾಕ್ಯ .—ಬಾಲಕಾಂಡದಲ್ಲಿ ಅಯೋಧ್ಯಾಪಟ್ಟಣದ ವರ್ಣನೆ ಇಲ್ಲಿ ಹದಿನೆಂಟು ಶ್ಲೋಕಗಳ ಅರ್ಥ ಒಂದು ವಾಕ್ಯವಾಗಿ ಬೆಳೆದಿದೆ ಮುಂದೆ ದಶರಥನ ರಾಜ್ಯಪಾಲನಕ್ರಮವನ್ನು ವರ್ಣಿಸುವ ಏಳನೆಯ ಅಧ್ಯಾಯ ಒಂದೇ ವಾಕ್ಯವಾಗಿ ಲಂಬಿಸಿದೆ ಇಂಥ ದೀರ್ಘವಾಕ್ಯಗಳ ಶೃಂಖಲೆ ಪ್ರತಿಯೊಂದು ಪುಟದಲ್ಲಿಯೂ ಗೋಚರವಾಗುತ್ತದೆ

೭ ಅನುಚಿತ —ವಿಶ್ವಾಮಿತ್ರನು ರಾಜನಾಗಿದ್ದಾಗ ಸೇನಾಸಮೇತನಾಗಿ ವಸಿಷ್ಠರ ಆಶ್ರಮಕ್ಕೆ ಬರುತ್ತಾನಷ್ಟೆ ಆಗ ರಾಜನಾಗಿದ್ದ ವಿಶ್ವಾಮಿತ್ರನನ್ನು ವಿಶ್ವಾಮಿತ್ರ ಮುನೀಶ್ವರನೆಂದು ವ್ಯವಹರಿಸುವುದು ಸ್ವಯಂಪ್ರಭೆಯ ಹೆಸರು ಪರಿಚಯಗಳನ್ನರಿಯದ ಹನುಮಂತನು ‘ಎಲೈ ಸ್ವಯಂಪ್ರಭೆಯೇ ಕೇಳು’ ಎಂದು ಆಕೆಯನ್ನು ಸಂಬೋಧಿಸಿ ಮಾತನಾಡುವುದು, ಬಾಲಕನಾದ ಶ್ರೀರಾಮನು ವಿಶ್ವಾಮಿತ್ರಮುನಿಗಳನ್ನು ‘ಎಲೈ ವಿಶ್ವಾಮಿತ್ರಮುನೀಶ್ವರನೆ’ ಎಂದು ಕರೆಯುವುದು ಇತ್ಯಾದಿ.

೮ ಅಶ್ಲೀಲ —ಬಾಲಕಾಂಡದ ನಲವತ್ತೆಂಟನೆಯ ಅಧ್ಯಾಯದಲ್ಲಿ ಅಹಲ್ಯಾದೇವೇಂದ್ರರ ವೃತ್ತಾಂತವನ್ನು ಹೇಳುವ ವಾಕ್ಯರಚನೆ ಇದಕ್ಕೆ ಉದಾಹರಣೆ. ಕಪಿನಾಯಕರು ಪರಾಕ್ರಮಿಗಳಾದ ಕುಮಾರರನ್ನು ಹುಟ್ಟಿಸುತ್ತಿದ್ದರು (ಬಾಲ ಪು ೨೯), ಸುಲಕ್ಷಣಲಕ್ಷಿತವಾದ ಮುಸುಡುಳ್ಳವನಾಗಿ (ಬಾಲ. ಪು ೨) ಎಂಬುದೂ ಈ ಗುಂಪಿಗೆ ಸೇರುತ್ತದೆ

೯ ಅಸಮರ್ಥ —ವಿವಕ್ಷಿತಾರ್ಥವನ್ನು ಬೋಧಿಸಲು ಅಸಮರ್ಥವಾದ ಶಬ್ದ . ಕುಶಲ ಎಂಬ ಅರ್ಥದಲ್ಲಿ ‘ಪರಿಣಾಮಸ್ಥಿತಿ’, ಈ ರೀತಿ ಎಂಬ ಅರ್ಥದಲ್ಲಿ ‘ಈ ಮರ್ಯಾದೆ’, ಸಮೃದ್ಧಿ ಎಂಬ ಅರ್ಥದಲ್ಲಿ ‘ಪರಿಪೂರ್ಣಾರ್ಥ’ ಇತ್ಯಾದಿ

೧೦ ನಿರಾಧಾರ —ವಾಲ್ಮೀಕಿರಾಮಾಯಣದಲ್ಲಿ ಇಲ್ಲದ ಕೆಲವು ಅಂಶಗಳು ಈ ಗ್ರಂಥದಲ್ಲಿ ಕಂಡು ಬಂದವು. ಉಪಲಬ್ಧವಾದ ಹಲವಾರು ಪ್ರತಿಗಳಲ್ಲಿ ಹುಡುಕಿದರೂ ಇವುಗಳಿಗೆ ಮೂಲ ದೊರೆಯಲಿಲ್ಲ ಉದಾ ವಿಶ್ವಾಮಿತ್ರನು ಕಿವಿಗಿಂಪಾದ ಕೋಗಿಲೆಯ ಸ್ವರವನ್ನು ಕೇಳಿ ‘ಋಷಭರಾಜನು ಕಾಮೋದ್ರೇಕದಿಂದ ಹಸುವನ್ನು ನೋಡುವ ಮರ್ಯಾದೆಯಲ್ಲಿ’ (ಬಾಲ ಪು. ೮೫), ‘ಅವರಿಬ್ಬರಿಗೂ (ವಾಲಿಸುಗ್ರೀವರಿಗೆ) ತಾರಾದೇವಿ ಎಂಬವಳು ಪತ್ನಿಯು, ಅವಳ ನಿಮಿತ್ತವಾಗಿ ಅವರಿಬ್ಬರಿಗೂ ಕಲಹವಾಗಲು’ (ಅರ ಪು ೧೦೩), ‘ನಿನ್ನ (ವಾಲಿಯ) ಕುಮಾರನಾದ ಅಂಗದನ ಸ್ತ್ರೀಯಾದ ನಿನ್ನ ಸೊಸೆಯಲ್ಲಿಯೂ ನೀನು ಆಸಕ್ತನಾಗಿದ್ದೆ’ (ಕಿಷ್ಕಿ ಪು ೧೮) ಇತ್ಯಾದಿ

೧೧ ಮೂಲವಿರುದ್ಧ .—

| ಚಾಮರಾಜೋಕ್ತಿವಿಲಾಸ | ವಾಲ್ಮೀಕಿ ರಾಮಾಯಣ |
|---|---|
| ೧. ನೀನು ಕೇಳಿದ ಕೃತ್ಯಗಳೆಲ್ಲವನ್ನೂ ಮಾಡಿದೆನು (ಬಾಲ ಪು ೧೦೨) (ಈಗಿನ ಪರಿಷ್ಕೃತ ಮುದ್ರಣ ಪು ೧೧೩). | ಶ್ರುತವಾನಸ್ಮಿ ಯತ್ಕರ್ಮ ಕೃತವಾನಸಿ ಭಾರ್ಗವ ॥ (ಬಾಲ. ೭೬-೨) |

| ಜಾನಕೀರಾಜೋಕ್ತಿ ವಿಲಾಸ | ವಾಲ್ಮೀಕಿ ರಾಮಾಯಣ |
|---|---|
| ೨ ಭೃಗುಮುನೀಶ್ವರನ ಕೋಪದಿಂದ ತಿರಸ್ಕರಿಸಲ್ಪಟ್ಟ ರೇಣುಕಾದೇವಿಯು (ಬಾಲ. ೭೦, ಪರಿ ೭೮) | ಸಂಗತಾ ಮುನಿನಾ ಪತ್ನೀ ಭಾರ್ಗವೇಣೇವ ರೇಣುಕಾ ॥ (ಬಾಲ ೫೧-೧೧) |
| ೩ ರಾಜ್ಯಾಧಿಪತ್ಯದಲ್ಲಿ ಇಚ್ಛೆಯುಂಟಾದರೆ ತನ್ನ ತಾಯಾದ ಕೌಸಲ್ಯಾದೇವಿಯನ್ನು ಕಂಡಂತೆ ವಿಶ್ವಾಸದಿಂದ ಕಾಣುತ್ತಿದ್ದ ಶ್ರೀರಾಮನು ಪಾಪಸ್ವರೂಪಳಾದ ನಿನ್ನನ್ನು ಬಿಟ್ಟುಬಿಡುವನು (ಅಯೋ ೧೨೭, ಪರಿ ೨೫೫) | ನ ಮೇ ವಿಕಾಂಕ್ಷಾ ಜಾಯೇತ ತ್ಯಕ್ತ್ವಾಂ ತ್ವಾಂ ಪಾಪನಿಶ್ಚಯಾಮ್ । ಯದಿ ರಾಮಸ್ಯ ನಾಕಾಂಕ್ಷಾ ತ್ವಯಿ ಸ್ಯಾನ್ಮಾತೃವತ್ ಸದಾ ॥ (ಅಯೋ. ೭೩-೧೮) |
| ೪ ಹುಲ್ಲೆಗಳಿಂದ ಸಿಂಹಕ್ಕೆ ಭಯವು ಬಂದಂತೆ ಶ್ರೀರಾಮನಿಗೆ ರಾಕ್ಷಸರಿಂದ ಭಯ ಉಂಟಾಯಿತು. (ಅರ ೬೩, ಪರಿ ೩೮೩) | ರಕ್ಷಸಾಂ ವಶಮಾಪನ್ನಂ ಸಿಂಹಾನಾಮಿವ ಗೋವೃಷಮ್ ॥ (ಅರ ೪೫-೪) |
| ೫. ವಸ್ತ್ರಗಳನ್ನು ಪರಿತ್ಯಾಗಮಾಡುವಂತೆ ತಾನು ಅಲಂಕರಿಸಿಕೊಂಡಿದ್ದ ಪುಷ್ಪಸರಗಳನ್ನು ತೆಗೆದು ಹಾಕಿ. (ಕಿಷ್ಕಿ. ೬೫, ಪರಿ. ೪೯೬) | ಲಕ್ಷ್ಮಣಾತ್ ಸುಮಹತ್ರಾಸಂ ಕ್ಲಿನ್ನಂ ವಸ್ತ್ರಮಿವಾತ್ಯಜತ್ ॥ (ಕಿಷ್ಕಿ ೩೬-೨) |

೧೨ ಅನುಚಿತತಾತ್ಪರ್ಯ.—(ದಶರಥನು ಶ್ರೀರಾಮನ ವಿವಾಹಕ್ಕಾಗಿ ಮಿಥಿಲೆಗೆ ಹೊರಡುವಾಗ ಹೇಳುವ ಮಾತು) 'ಇಂದು ಧನಾಢ್ಯರಾದ ಶೆಟ್ಟಿವರ್ತಕರು ಮೊದಲಾದ ಪಟ್ಟಣದ ಸ್ವಾಮಿಗಳು ತಮ್ಮಲ್ಲಿರುವ ದ್ರವ್ಯಗಳನ್ನೂ ರತ್ನಗಳನ್ನೂ ತೆಗೆದುಕೊಂಡು ಮುಂದೆ ಬೇಹಾರಿಗಳೊಡನೆ **ಅಂಗಡಿಯನ್ನಿಡುವುದಕ್ಕೆ** ಹೋಗಲಿ' (ಬಾಲ ೯೧. ಪರಿ. ೧೦೨) ಇದರ ಮೂಲ ಹೀಗಿದೆ.

ಅದ್ಯ ಸರ್ವೇ ಧನಾಧ್ಯಕ್ಷಾ ಧನಮಾದಾಯ ಪುಷ್ಕಲಮ್ ।
ವ್ರಜಂತ್ವಗ್ರೇ ಸುವಿಹಿತಾ ನಾನಾರತ್ನಸಮನ್ವಿತಾಃ ॥
(ಬಾಲ ೬೯-೨)

೧೩. ಶಿಥಿಲಬಂಧ.—ಅರ್ಥಪುಷ್ಟಿಯಾಗಿ ರಸೋದಯವಾಗಬೇಕಾದರೆ ಶಬ್ದಾರ್ಥಗಳಲ್ಲಿ ಪ್ರಸಾದಮಾಧುರ್ಯ ಮತ್ತು ಓಜೋಗುಣಗಳಿರಬೇಕು. ಅದಿಲ್ಲದಿದ್ದರೆ ಶಿಥಿಲಬಂಧವಾಗುತ್ತದೆ ಉದಾ:

ಕಾಲುವೇಗವುಳ್ಳ (ವೇಗಶಾಲಿಗಳಾದ) (ಬಾಲ –ಪು ೨೧), ಅನೇಕ ಹರ್ಷವನ್ನುಂಟುಮಾಡುತ್ತ (ಬಾಲ-೧೦೫), ನನ್ನ ಕೂಡೆ ಕೂಡಿಕೊಂಡು ವನವನ್ನೈದು (ಅಯೋ-೫೫), ನನ್ನನ್ನು ಬೆದರಿಸು

ವುದಕ್ಕಿದ್ದಾಳೆ (ಅಯೋ-೮೧), ಅನೇಕ ಮಾಂಗಲ್ಯವಾದ ಸಿನ್ನನ್ನು (ಅಯೋ-೧೦೧), ಶಿರಸ್ತ್ಯಾಗ (ಶಿರಚ್ಛೇದ) (ಅರ-೪೦), ಒಡಂಬಡಿಕೆಯನ್ನು ಹೇಳುತ್ತಿದ್ದನು (ಸಮಾಧಾನವನ್ನು ಹೇಳಿದನು) (ಕಿಷ್ಕಿ-೪೯) ಇತ್ಯಾದಿ

ಪತ್ನಿಯನ್ನು ಸ್ತ್ರೀ ಎನ್ನುವುದು, ಪತಿಯನ್ನು ಪುರುಷನೆನ್ನುವುದು ಕಾವ್ಯಮಾರ್ಗದಲ್ಲಿ ಉತ್ತಮ ಪ್ರಯೋಗಗಳಲ್ಲ.

'ಅತಿಶಾಂತ, ಅತಿವೀರ, ಅತಿವಿಶ್ವಾಸ, ಅತಿತಪಸ್ಸು, ಅತಿಸೊಬಗು'ಗಳಲ್ಲಿ ಅತಿ ಯಿಂದ ಅರ್ಥಹತಿಯೇ ಆಗುತ್ತದೆ

೧೪ ಅನಾವಶ್ಯಕ ವಿಸ್ತರ —'ಪುಷ್ಯೇ ನಕ್ಷತ್ರಯೋಗೇ ಚ ರಾಮೋ ರಾಜ್ಯಮವಾಪ್ಸ್ಯಯಾತ್' (ಅಯೋ ೧೪-೪೩) ಎಂದು ರಾಮಾಯಣದಲ್ಲಿ ಮೂಲವಿದೆ ಅದಕ್ಕೆ 'ಶುಭನಕ್ಷತ್ರ, ಶುಭಯೋಗ, ಶುಭಕರಣ, ಶುಭವಾರ, ಶುಭಲಗ್ನದಲ್ಲಿ' ಎಂದು ಅರ್ಥಮಾಡಿದ್ದಾರೆ. (ಅಯೋ-೩೧)

೧೫ ಮುದ್ರಣದೋಷ —ಅಯೋಧ್ಯಾಕಾಂಡದಲ್ಲಿ ೧೦೦ನೆಯ ಅಧ್ಯಾಯವಾದಮೇಲೆ ೧೦೧ನೆಯ ಅಧ್ಯಾಯ ಎಂಬ ಹೆಸರಿನಿಂದ ೧೦೪ನೆಯ ಅಧ್ಯಾಯ ಮುದ್ರಿತವಾಗಿದೆ.

೧೦೧ನೆಯದು ೧೦೨ನೆಯ ಅಧ್ಯಾಯವಾಗಿದೆ.

೧೦೨ನೆಯದು ೧೦೩ನೆಯ ಅಧ್ಯಾಯವಾಗಿದೆ

೧೦೩ನೆಯದು ೧೦೪ನೆಯ ಅಧ್ಯಾಯವಾಗಿದೆ

೧೬ ವಕ್ತವ್ಯತ್ಯಾಗ —ಶ್ರೀಮದ್ರಾಮಾಯಣದಲ್ಲಿ ಸರಸ-ನೀರಸ ಎಂಬ ವಿಭಾಗವೇ ಇಲ್ಲ ವಾಲ್ಮೀಕಿಮುನಿಗಳ ನುಡಿಯೆಲ್ಲವೂ ರಸಭರಿತವೇ. ಮುಟ್ಟಿದ್ದೆಲ್ಲವೂ ಚಿನ್ನವೇ. ಕೆಲವು ನುಡಿಮುತ್ತುಗಳು ಅತ್ಯಂತ ಚೇತೋಹಾರಿಯಾದವು. ಅಂಥ ಕೆಲವು ನುಡಿಗಳನ್ನು ಈ ಕನ್ನಡಗ್ರಂಥದಲ್ಲಿ ಕೈಬಿಟ್ಟಿದ್ದಾರೆ. ಇದು ವಕ್ತವ್ಯತ್ಯಾಗ. ಉದಾ

೧ ಸ್ವಯಂ ತು ಭಾರ್ಯಾಂ ಕೌಮಾರೀಂ ಚಿರಮಧ್ಯುಷಿತಾಂ ಪ್ರಿಯಾಮ್ ।
ಶೈಲೂಷ ಇವ ಮಾಂ ರಾಮ ಪರೇಭ್ಯೋ ದಾತುಮಿಚ್ಛಸಿ ॥ (ಅಯೋ ೩೦-೮)

೨ ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ ।
ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್ ॥ (ಕಿಷ್ಕಿ ೬-೨೨)

ಹೀಗೆ ದೋಷಗಳು ಅಲ್ಲಲ್ಲಿ ಕಂಡು ಬಂದರೂ ಹಿಂದಿನ ಬರವಣಿಗೆಯಲ್ಲಿ ಗುಣಾಂಶಗಳು ಕಡಿಮೆಯಾಗಿಲ್ಲ. ಆ ಬರವಣಿಗೆಯ ಶೈಲಿ ಆಕರ್ಷಕವಾದದ್ದು, ರಸಭರಿತವಾದದ್ದು

ಇದ್ದ ದೋಷಗಳನ್ನು ಯಥಾಮತಿಯಾಗಿ ಶೋಧಿಸಿ ಸರಿಪಡಿಸಿದೆ ದೋಷಶೋಧನವಾದ ಮೇಲೆ ಗುಣಾಧಾನವಾಗಬೇಕಲ್ಲವೆ? ರೋಗರಹಿತನೆಂದರೆ ದೃಢಕಾಯನೆಂದು ತಿಳಿಯಬೇಕಾಗಿಲ್ಲ

ಈ ಪರಿಷ್ಕೃತ ಮುದ್ರಣದಲ್ಲಿ ಯಥಾಶಕ್ತಿ ಗುಣಾಧಾನವನ್ನು ಮಾಡಲು ಪ್ರಯತ್ನಿಸಿದ್ದೇನೆ. ವಾಕ್ಯರಚನೆಯನ್ನು ಬಹುಸ್ಥಳಗಳಲ್ಲಿ ತಿದ್ದಿದ್ದೇನೆ. ಹೊಸ ವಾಕ್ಯಗಳನ್ನು ಬರೆದು ಸೇರಿಸಿದ್ದೇನೆ. ಕೆಲವು ವಾಕ್ಯಖಂಡಗಳನ್ನೂ (Paragraphs) ಅಧ್ಯಾಯಗಳನ್ನೂ ಹೊಸದಾಗಿ ಬರೆದು ಸೇರಿಸಲಾಯಿತು.

ಅವು ಯಾವುವೆಂದರೆ —

| | | |
|---|---|---|
| ೧ | ಅಯೋಧ್ಯಾಕಾಂಡ | ೧೫ನೆಯ ಅಧ್ಯಾಯದಲ್ಲಿ ೧ನೆಯ ವಾಕ್ಯಖಂಡ |
| ೨. | ,, | ೭೭ನೆಯ ಅಧ್ಯಾಯ ಪೂರ್ತಿ |
| ೩ | ,, | ೧೧೪ನೆಯ ಅಧ್ಯಾಯದಲ್ಲಿ ಕಡೆಯ ವಾಕ್ಯಖಂಡ |
| ೪ | ಅರಣ್ಯಕಾಂಡ | ೧೭ನೆಯ ಅಧ್ಯಾಯದಲ್ಲಿ ೧ನೆಯ ವಾಕ್ಯಖಂಡ |
| ೫ | ,, | ೩೨ನೆಯ ಅಧ್ಯಾಯ ಪೂರ್ತಿ |
| ೬ | ,, | ೩೫ನೆಯ ಅಧ್ಯಾಯ ಪೂರ್ತಿ |
| ೭ | ,, | ೭೦ನೆಯ ಅಧ್ಯಾಯ ಪೂರ್ತಿ |

ಹೀಗೆ ಹೊಸದಾಗಿ ಬರೆಯುವಾಗಲೂ ತಿದ್ದುವಾಗಲೂ ಹೆಚ್ಚು ಭೇದವು ತೋರದಿರಲೆಂದು ಮೂಲಗ್ರಂಥದ ಶೈಲಿಯನ್ನು ಅವಲಂಬಿಸಿದ್ದೇನೆ. ಕರ್ಮಣಿ ಪ್ರಯೋಗಗಳನ್ನು ಬಹುಮಟ್ಟಿಗೆ ಕರ್ತರಿ ಪ್ರಯೋಗಕ್ಕೆ ತಿರುಗಿಸಿದ್ದೇನೆ ಆದಷ್ಟು ಪರ್ಯಾಯಪದಗಳನ್ನು ಅಲ್ಲಲ್ಲಿ ಸೇರಿಸಲು ಪ್ರಯತ್ನಿಸಿದ್ದೇನೆ ಸೀತಾದೇವಿ ಎಂಬ ಅರ್ಥದಲ್ಲಿ ಸೀತೆ, ವೈದೇಹಿ, ಜಾನಕಿ, ಮೈಥಿಲಿ ಎಂಬ ಶಬ್ದಗಳು ಕಾವ್ಯಸೌಂದರ್ಯವನ್ನು ಹೆಚ್ಚಿಸುತ್ತವೆ ಎಂದು ನನ್ನ ಭಾವನೆ. ಒಪ್ಪುತ್ತಿತ್ತು ಎಂಬುದಕ್ಕೆ ಶೋಭಿಸಿತು, ವಿರಾಜಿಸಿತು, ಪ್ರಕಾಶಿಸಿತು, ಬೆಳಗಿತು ಎಂಬ ಪರ್ಯಾಯಪದಗಳನ್ನು ಅಲ್ಲಲ್ಲಿ ಬಳಸುವುದು ಯುಕ್ತವೆಂದು ನನ್ನ ನಂಬಿಕೆ. ಶ್ರೀರಾಮನು ತನ್ನ ತಾಯಿಯನ್ನು 'ಎಲೆ ಕೌಸಲ್ಯಾದೇವಿಯೆ ' ಎಂದು ಸಂಬೋಧಿಸುವುದು ಅನುಚಿತವೆಂದು ನನ್ನ ತಿಳಿವಳಿಕೆ.

ಭ್ರಮಪ್ರಮಾದಗಳು ಸಕಲರಲ್ಲಿಯೂ ಸಹಜ. ಸಂಪಾದಕ ಮಂಡಲಿಯವರಾದ ನಾವು ಎಷ್ಟು ಎಚ್ಚರಿಕೆಯನ್ನು ವಹಿಸಿದ್ದರೂ ದೋಷ ಉಳಿದಿರಬಹುದು. ನಮ್ಮ ತಿದ್ದುಪಡಿಯಲ್ಲಿಯೂ ಅದು ಶಕ್ಯಸಂಭವ. ಸಹೃದಯರು ಗುಣಗ್ರಾಹಿಗಳಾಗಿರಬೇಕೆಂದು ನಮ್ಮ ಸವಿನಯ ಪ್ರಾರ್ಥನೆ.

ಒಟ್ಟಿನಲ್ಲಿ ಇದು ಹಳೆಮನೆಯ ರಿಪೇರಿ ಕೆಲಸ ಗಾಳಿ ಬೆಳಕು ಸಾಲದೆಂದು ಗೋಡೆಯನ್ನೊಡೆದು ಕಿಟಕಿಗಳನ್ನಿಡಬಹುದು ಸೋರುವುದನ್ನು ಸರಿಪಡಿಸಬಹುದು. ಬಿರುಕುಗಳನ್ನು ಮುಚ್ಚಬಹುದು. ನೆಲವನ್ನು ಅಚ್ಚುಕಟ್ಟು ಮಾಡಬಹುದು. ಹೊಸ ಬಣ್ಣವನ್ನು ಬಳಿಯಬಹುದು. ಆದರೆ ಗೋಡೆಗಳನ್ನು ಉರುಳಿಸಿ ಬೇರೆ ಗೋಡೆಗಳನ್ನೆಬ್ಬಿಸಿ, ಕಂಭಗಳನ್ನು ಕಿತ್ತು ಬೇರೆ ಕಂಭಗಳನ್ನು ನೆಟ್ಟರೆ ಅದು ರಿಪೇರಿಯಾಗಲಿಲ್ಲ; ಹೊಸ ಮನೆಯೇ ಆಯಿತು. ಅದಕ್ಕಿಂತ ಇನ್ನೊಂದು ಮನೆಯನ್ನು ಕಟ್ಟುವುದು ಲೇಸು.

ಈ ಹಳೆಯ ಮನೆಯಾದರೊ ನಮಗೆ ಅತ್ಯಂತ ಪವಿತ್ರವಾದದ್ದು ನಮ್ಮ ತಾತ ಮುತ್ತಾತಂದಿರು ಈ ಮನೆಯಲ್ಲಿ ಸುಖಸಂತೋಷಗಳಿಂದ ನಲಿದಾಡಿದ್ದರು. ಅವರ ಸಂಪರ್ಕ ಕಾರಣದಿಂದ ಹಳೆಯ ಮನೆಯೇ ನಮಗೆ ಅತ್ಯಂತ ಪ್ರಿಯವಾಗಿದೆ

ಹಾಗೆ ಹೊಸದಾಗಿ ಈ ಗ್ರಂಥವನ್ನು ಬರೆಯುವುದಾಗಲಿ ಸಕಲವಿಧದಲ್ಲಿಯೂ ಗ್ರಂಥವನ್ನು ಮಾರ್ಪಡಿಸುವುದಾಗಲಿ ಈ ರಾಮಾಯಣ ಮಹಾಭಾರತಾದಿ ಪ್ರಕಟನ ಸಮಿತಿಯ ಉದ್ದೇಶವಾಗಿರಲಿಲ್ಲ. ಹಳೆಯ ಶೈಲಿಯನ್ನು ಸಾಧ್ಯವಾದಷ್ಟು ಮಟ್ಟಿಗೆ ಉಳಿಸಿಕೊಳ್ಳುವುದು ಸಮಿತಿಯ ಉದ್ದೇಶವಾಗಿತ್ತು. ಇದು ಅರಮನೆಯ ಗ್ರಂಥವೆಂಬ ಒಂದು ಮನ್ನಣೆಯನ್ನೂ, ಒಂದು ಕಾಲದಲ್ಲಿ ಜನಾದರಕ್ಕೆ ಪಾತ್ರವಾಗಿತ್ತೆಂಬ ಗೌರವವನ್ನೂ ನಾವು ಸಲ್ಲಿಸಿ ಪರಿಷ್ಕರಣದ ಕಾರ್ಯವನ್ನು

ನಡೆಸಬೇಕಾಗಿತ್ತು. ಆದರೆ ವಾಚಕರು ಪ್ರಾಚೀನ ಕಾಲದವರಷ್ಟೇ ಅಷ್ಟೆ ? ಈ ಕಾಲದಲ್ಲಿ ಜನರ ಅಭಿರುಚಿ ಎಂತಹದೆಂಬುದನ್ನು ಗಮನಿಸಿದರೆ ಸಮರಸವಾದ ಹಳದು-ಹೊಸದರ ಬೆರಕೆ ಅಪೇಕ್ಷಣೀಯ ವೆಂದು ನಮಗನ್ನಿಸಿತು ಆದರಂತೆ ಈ ಕಾರ್ಯವನ್ನು ಸಾಧ್ಯವಾದಷ್ಟು ಪ್ರಯತ್ನದಿಂದ ಸಂಪಾದಕ ಮಂಡಲಿ ನೆರವೇರಿಸಿದೆ ಗ್ರಂಥವನ್ನು ಕೈಯಲ್ಲಿ ಹಿಡಿದಾಗ ಇದೊಂದು ಪ್ರಾಚೀನ ಗ್ರಂಥವೆಂಬ ಆದರ ಜನರ ಮನಸ್ಸಿನಲ್ಲುದಯಿಸಲೆಂಬುದು ಸಂಪಾದಕ ಮಂಡಲಿಯ ಆಶಯ

ಮೈಸೂರು ಶ್ರೀಮನ್ಮಹಾರಾಜರವರಾದ ಶ್ರೀ ಜಯಚಾಮರಾಜ ಒಡೆಯರ್ ಮಹಾ ಪ್ರಭುಗಳವರು ಈ ಪರಿಷ್ಕರಣಕಾರ್ಯವನ್ನು ಮೆಚ್ಚಿ ಕೃಪೆಯಿಂದ ಮುನ್ನುಡಿಯನ್ನು ಅನುಗ್ರಹಿಸಿ ಪ್ರೋತ್ಸಾಹಿಸಿದ್ದಾರೆ. ಮಹಾಪ್ರಭುಗಳವರಿಗೆ ನಾನು ಕೃತಜ್ಞನಾಗಿದ್ದೇನೆ

ನನಗೆ ಗುರುಸ್ಥಾನದಲ್ಲಿರತಕ್ಕವರು ಡಾ॥ ಡಿ. ವಿ ಗುಂಡಪ್ಪನವರು ಅವರ ನಿರಂತರವಾದ ವಿಶ್ವಾಸಗಳೂ ಸತ್ಕಾರ್ಯಪ್ರೋತ್ಸಾಹವೂ ದೊರಕಿರುವುದು ನನ್ನ ಒಂದು ಭಾಗ್ಯ ಅವರ ಮಾರ್ಗದರ್ಶನವಿಲ್ಲದೆ ಈ ಕಾರ್ಯ ನನ್ನಿಂದ ಸಾಧ್ಯವಾಗುತ್ತಿರಲಿಲ್ಲ ವಾಲ್ಮೀಕಿಮುನಿಗಳ ಶ್ರೀಮದ್ರಾಮಾಯಣವೆಂದರೆ ಅವರಿಗೆ ರೋಮಾಂಚವಾಗುತ್ತದೆ ಈ ಮಹನೀಯರು ತಮ್ಮ ದೈಹಿಕ ಕ್ಲೇಶಗಳನ್ನು ಲೆಕ್ಕಿಸದೆ ನನಗೆ ದಾರಿತೋರಿಸಿದ್ದಾರೆ ಇವರು ನನ್ನ ಹೃದಯದಲ್ಲಿ ಸದಾ ನೆಲೆಸಿರುವರು.

ಸಮಿತಿಯ ಕಾರ್ಯದರ್ಶಿಗಳಾದ ದೇಶಹಳ್ಳಿ ಶ್ರೀ ಜಿ ನಾರಾಯಣ ಅವರು ಈ ಗ್ರಂಥದ ಪ್ರಕಟನೆಯಲ್ಲಿ ಅತ್ಯಂತ ಶ್ರದ್ಧೆಯನ್ನು ವಹಿಸಿ, ಪರಿಷ್ಕರಣಕಾರ್ಯದಲ್ಲಿ ನನಗೆ ಆವಶ್ಯಕವೆನಿಸಿದ ಸಕಲ ಸೌಕರ್ಯಗಳನ್ನು ಒದಗಿಸಿಕೊಟ್ಟಿದ್ದಾರೆ. ಅವರ ಉತ್ಸಾಹದ ಫಲವಾಗಿ ಸಂಪಾದಕಮಂಡಲಿಯು ತನ್ನ ಕಾರ್ಯವನ್ನು ತೃಪ್ತಿಕರವಾಗಿ ನೆರವೇರಿಸಿದೆ ಶ್ರೀ ಜಿ. ನಾರಾಯಣ ಅವರಿಗೆ ಸಂಪಾದಕ ಮಂಡಲಿಯ ಪರವಾಗಿ ನಾನು ಅನಂತ ವಂದನೆಗಳನ್ನು ಅರ್ಪಿಸುತ್ತೇನೆ

ಪ್ರಕಟನಸಮಿತಿಯ ಅಧ್ಯಕ್ಷರೂ ಸಕಲಸದಸ್ಯರೂ ನಮ್ಮಲ್ಲಿ ಆದರವಿಶ್ವಾಸಗಳನ್ನಿಟ್ಟು ಪರಿಷ್ಕರಣಕಾರ್ಯವನ್ನು ನಮಗೆ ವಹಿಸಿ ಪ್ರೋತ್ಸಾಹಿಸಿದ್ದಾರೆ. ಈ ಮಹನೀಯರೆಲ್ಲರಿಗೂ ಸಂಪಾದಕ ಮಂಡಲಿಯು ಗೌರವಪೂರ್ವಕವಾಗಿ ಪ್ರಣಾಮವನ್ನರ್ಪಿಸುತ್ತದೆ

ಶ್ರೀ ಎಸ್. ಆರ್ ರಾಮಸ್ವಾಮಿಗಳು ಅಂತಿಮ ಕರಡುಗಳನ್ನು (Final proofs) ದಯಮಾಡಿ ಶೋಧಿಸಿಕೊಟ್ಟಿದ್ದಾರೆ. ಅವರು ಮುದ್ರಣಕಲೆಯನ್ನು ಚೆನ್ನಾಗಿ ಬಲ್ಲವರು ಈ ಗ್ರಂಥವು ಇಷ್ಟು ಸುಂದರವಾಗಿ ಬರಲು ಅವರೇ ಮುಖ್ಯಕಾರಣ. ಅವರ ಸಹಾಯದಿಂದ ನಾನು ಹೊತ್ತ ಭಾರ ಹಗುರವಾಯಿತು. ಈ ಸಮಯದಲ್ಲಿ ಶ್ರೀ ಎಸ್ ಆರ್ ರಾಮಸ್ವಾಮಿಗಳಿಂದಾದ ಉಪಕಾರವನ್ನು ನಾನು ವಿಶೇಷವಾಗಿ ಸ್ಮರಿಸಿಕೊಳ್ಳುತ್ತಿದ್ದೇನೆ

ಈ ಗ್ರಂಥವನ್ನು ಬೆಂಗಳೂರಿನ ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ (ಪ್ರೈ) ಲಿಮಿಟೆಡ್ ಇವರು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ ನಾವು ಅವರಿಗೆ ಒದಗಿಸಿದ್ದ ಮೂಲಗ್ರಂಥವು ಬಹಳ ತಿದ್ದುಪಡಿಗಳಿಂದ ಕೂಡಿ ಮುದ್ರಣಕಾರ್ಯಕ್ಕೆ ಬಹಳ ಅಸೌಕರ್ಯವನ್ನು ಮಾಡಿತ್ತು ಆದರೂ ಅವರು ವಿಶೇಷವಾದ ಶ್ರಮವನ್ನು ವಹಿಸಿ ತಾಳ್ಮೆಯಿಂದ ಈ ಕಾರ್ಯ

ವನ್ನು ನೆರವೇರಿಸಿಕೊಟ್ಟಿದ್ದಾರೆ ಅದಕ್ಕಾಗಿ ಈ ಮುದ್ರಣಸಂಸ್ಥೆಯ ನಿರ್ವಾಹಕರಿಗೂ ಕೆಲಸಗಾರರಿಗೂ ನನ್ನ ವಂದನೆಗಳು ಸಲ್ಲುತ್ತವೆ

ಬೆಂಗಳೂರು
೨೨–೨–೧೯೬೭

**ಎನ್. ರಂಗನಾಥಶರ್ಮಾ**
ಪ್ರಧಾನ ಸಂಪಾದಕ



# ಅ ನು ಕ್ರ ಮ ಣಿ ಕೆ





## ಬಾ ಲ ಕಾಂ ಡ

---

## ಅಯೋಧ್ಯಾಕಾಂಡ

## ಅ ರ ಣ್ಯ ಕಾ ೦ ಡ

---

## ಕಿಷ್ಕಿಂಧಾಕಾಂಡ

---

## ಚಿತ್ರಗಳು







ವಾಲ್ಮೀಕಿಮುನಿಗಳು ಕುಶಲವರಿಗೆ ರಾಮಾಯಣವನ್ನು ಉಪದೇಶಿಸಿದರು

“ ವೇದೋಪಬೃಂಹಣಾರ್ಥಾಯ ತಾವಗ್ರಾಹಯತ ಪ್ರಭುಃ ”

ಶ್ರೀಃ





ಶ್ರೀರಾಮಚಂದ್ರಾಯ ನಮಃ

ಶ್ರೀಚಾಮರಾಜೋಕ್ತಿವಿಲಾಸವೆಂಬ

# ಕನ್ನಡ ರಾಮಾಯಣ



## ಬಾಲಕಾಂಡ

---

೧ನೆಯ ಅಧ್ಯಾಯ

### ಸಂಕ್ಷೇಪರಾಮಾಯಣ

**ತಪಃಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಮ್ ।**
**ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥**

ಒಂದು ಕಾಲದಲ್ಲಿ ಪರಮತಪಸ್ವಿಯಾದ ವಾಲ್ಮೀಕಿಮಹಾಮುನಿಯು ತಪಸ್ಸಿನಲ್ಲಿಯೂ ಸ್ವಾಧ್ಯಾಯದಲ್ಲಿಯೂ ನಿರಂತರಪರಿಶೀಲನವುಳ್ಳವನೂ ಸದುಕ್ತಿವಿಲಾಸಗಳಲ್ಲಿ ಪಟುತರಬುದ್ಧಿಯುಳ್ಳವನೂ ನುಡಿಜಾಣ್ಮೆಯುಳ್ಳವನೂ ಮಹಾಮುನಿಗಳಲ್ಲಿ ಉತ್ತಮನೂ ಆದ ನಾರದಮುನಿಗೆ ಸದ್ವಿನಯಭಯಭಕ್ತಿಗಳಿಂದ ಅಭಿವಂದಿಸಿ ಆತನನ್ನು ಕುರಿತು "ನಾರದಮುನೀಶ್ವರರೆ, ಈಗ ಲೋಕದಲ್ಲಿ ಜ್ಞಾನಾದಿಸಕಲಸದ್ಗುಣಯುಕ್ತನೂ ಅತಿಪರಾಕ್ರಮಶಾಲಿಯೂ ಧರ್ಮರಹಸ್ಯವನ್ನು ಬಲ್ಲವನೂ ಮಾಡಿದ ಉಪಕಾರವನ್ನು ಮರೆಯದವನೂ ಸತ್ಯಸಂಧನೂ ದೃಢವ್ರತನೂ ಸಚ್ಚರಿತ್ರೆಗಳುಳ್ಳವನೂ ಸಮಸ್ತ ಪ್ರಾಣಿಗಳಲ್ಲಿಯೂ ಹಿತವನ್ನೇ ಬಯಸುವವನೂ ವಿದ್ವಾಂಸನೂ ಸಮರ್ಥನೂ ದರ್ಶನಯೋಗ್ಯನೂ ಜಿತೇಂದ್ರಿಯನೂ ಅತ್ಯಂತ ಕಾಂತಿಯುಕ್ತನೂ ಅಸೂಯಾರಹಿತನೂ ಆಗಿರುವ ಪುಣ್ಯಪುರುಷನಾರು ? ಯುದ್ಧರಂಗದಲ್ಲಿ ಕೋಪಹುಟ್ಟಿದರೆ ಸಮಸ್ತ ದೇವತೆಗಳೂ ಯಾವ ಪುಣ್ಯ

ಪುರುಷನಿಗೆ ಅಂಜುವರು ? ಇಂತಹ ಪುಣ್ಯಪುರುಷನ ಕಥಾಪ್ರಸಂಗವನ್ನು ಕೇಳುವುದಕ್ಕೆ ನನ್ನ ಮನಸ್ಸಿಗೆ ಲವಲವಿಕೆಯಾಗುತ್ತದೆ, ಇಂತಹ ಪುರುಷನನ್ನು ನೀವು ಒಬ್ಬರು ಬಲ್ಲಿರಿ ಮತ್ತೊಬ್ಬರು ತಿಳಿಯಲಾರರು ” ಎಂದು ಕೇಳಿದನು

ಆ ಮಾತನ್ನು ಕೇಳಿ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕದ ವೃತ್ತಾಂತಗಳನ್ನೂ ಬಲ್ಲವನಾದ ನಾರದ ಮಹಾಮುನಿಯು ಅತ್ಯಂತ ಸಂತೋಷದಿಂದ ಆತನನ್ನು ನೋಡಿ “ ವಾಲ್ಮೀಕಿ ಮುನಿಗಳೇ, ನೀವು ಹೇಳುವಂತಹ ಸದ್ಗುಣಗಳು ಈ ಮರ್ತ್ಯಲೋಕದಲ್ಲಿ ಅತ್ಯಂತ ದುರ್ಲಭ ವಾಗಿರುವುವು. ಆದರೂ ಅಂತಹ ದುರ್ಲಭಗಳಾದ ಸದ್ಗುಣಗಳಿಂದ ಪರಿಪೂರ್ಣನಾದ ಪರಮಪುರುಷ ನನ್ನು ಹೇಳುತ್ತೇನೆ, ಕೇಳಿರಿ ‘—ಇಕ್ಷ್ವಾಕುವಂಶದಲ್ಲಿ ಅವತರಿಸಿದ ರಘುನಾಥನು ನೀವು ಹೇಳಿದ ಸದ್ಗುಣ ಗಳಿಂದ ಯುಕ್ತನಾಗಿ’ ಮಹಾಪ್ರಸಿದ್ಧನಾಗಿರುವನು. ಆತನು ಆತ್ಮಜ್ಞಾನಸಂಪನ್ನನೂ ಮಹಾ ಪರಾಕ್ರಮಿಯೂ ಅತ್ಯಂತ ದೇಹಸೌಂದರ್ಯವುಳ್ಳವನೂ ಜಿತೇಂದ್ರಿಯನೂ ಸಮಸ್ತ ಕೃತ್ಯಾಕೃತ್ಯ ವಿವೇಕವುಳ್ಳವನೂ ನೀತಿಶಾಸ್ತ್ರಕೋವಿದನೂ ಆಗಿದ್ದಾನೆ. ಆತನು ನುಡಿಜಾಣ್ಮೆಯುಳ್ಳವನೂ ಐಶ್ವರ್ಯವಂತನೂ ಸಮಸ್ತ ಶತ್ರುಸಂಘವನ್ನು ಜಯಿಸುವವನೂ ವಿಶಾಲವಾದ ಮುಡಹುಗಳುಳ್ಳ ವನೂ ದೀರ್ಘವಾದ ತೋಳುಗಳುಳ್ಳವನೂ ಶಂಖದಂತೆ ವೃತ್ತವಾದ ಕೊರಳುಳ್ಳವನೂ ಸುಲಕ್ಷಣ [redacted]ಕ್ಷಿತವಾದ ಮುಖವುಳ್ಳವನೂ ಆಗಿದ್ದಾನೆ. ಮತ್ತು ವಿಶಾಲವಾದ ವಕ್ಷಃಸ್ಥಳವುಳ್ಳವನೂ ಲಕ್ಷಣಯುಕ್ತ [redacted] ಹೆಗಲುಳ್ಳವನೂ ಶತ್ರುಗಳನ್ನು ನಿಗ್ರಹಿಸುವಂಥವನೂ ಆಗಿದ್ದಾನೆ. ಆತನು ಮೊಳಕಾಲು ಪರ್ಯಂತ ಲಂಬಾಯಮಾನವಾದ ಹಸ್ತಗಳುಳ್ಳವನಾಗಿ, ಶೋಭನವಾದ ಲಕ್ಷಣಗಳುಳ್ಳ ಶಿರಸ್ಸೂ ಲಲಾಟಪ್ರದೇಶವೂ ಉಳ್ಳವನಾಗಿ ಮಹಾಪರಾಕ್ರಮವುಳ್ಳವನಾಗಿ, ಸರ್ವಸಮನಾಗಿ, ಅತ್ಯುನ್ನತವಲ್ಲದೆ ಅತಿಹ್ರಸ್ವವಲ್ಲದೆ ಇರುವ ಹಸ್ತಪಾದಗಳುಳ್ಳವನಾಗಿ, ಮನೋಹರವಾದ ಶರೀರಕಾಂತಿಯುಳ್ಳವನಾಗಿ ಪ್ರತಾಪಶಾಲಿಯಾಗಿ ಇದ್ದಾನೆ. ಆ ರಘುನಾಥನು ಹೊಂಬಣ್ಣವಾದ ವಕ್ಷಃಸ್ಥಳವುಳ್ಳವನು, ವಿಶಾಲವಾದ ಕಣ್ಣುಗಳನ್ನುಳ್ಳವನು. ಸಾಮುದ್ರಿಕ ಶಾಸ್ತ್ರೋಕ್ತವಾದ ಮೂವತ್ತೆರಡು ಲಕ್ಷಣಗಳುಳ್ಳವನು. ಧರ್ಮರಹಸ್ಯವನ್ನು ಬಲ್ಲವನು. ಸತ್ಯಪ್ರತಿಜ್ಞನು. ಪ್ರಜಾಪರಿಪಾಲನಾಸಕ್ತನು. ಆತನು ಕೀರ್ತಿ ವಂತನೂ ಸುಜ್ಞಾನಿಯೂ ಶುಚಿಯಾದವನೂ ಸಮಸ್ತಪ್ರಾಣಿಗಳಿಗೂ ಸುಲಭನೂ ಚಿತ್ತೈಕಾಗ್ರತೆ ಯುಳ್ಳವನೂ ಬ್ರಹ್ಮದೇವನಿಗೆ ಸಮಾನವಾದ ಸಂಪತ್ತುಳ್ಳವನೂ ಆಗಿದ್ದಾನೆ. ಆ ರಘುನಾಥನು ಸಮಸ್ತ ಪ್ರಾಣಿಗಳಿಗೂ ರಕ್ಷಕನಾಗಿ, ಧರ್ಮವಿರೋಧಿಗಳನ್ನು ಸಂಹರಿಸುವವನಾಗಿ, ಕ್ಷತ್ರಿಯಧರ್ಮ ವನ್ನು ಪರಿಪಾಲಿಸುವವನಾಗಿದ್ದಾನೆ ಅವನು ಸಕಲವರ್ಣಧರ್ಮಸಂರಕ್ಷಕನೂ ಸ್ವಜನರನ್ನು ಅನುಗ್ರಹಿಸಿ ರಕ್ಷಿಸುವವನೂ ಸಮಸ್ತ ವೇದಗಳು ಮತ್ತು ಶಿಕ್ಷಾ ಕಲ್ಪ ವ್ಯಾಕರಣ ಜ್ಯೋತಿಷ ಛಂದಸ್ಸು ನಿರುಕ್ತಗಳೆಂಬ ಷಡಂಗಗಳ ತತ್ತ್ವವನ್ನು ಬಲ್ಲವನೂ ಧನುರ್ವೇದದಲ್ಲಿ ಅತಿಕುಶಲನೂ ಶಬ್ದ ತರ್ಕ ಮೊದಲಾದ ಸಮಸ್ತ ಶಾಸ್ತ್ರಗಳ ತತ್ತ್ವರಹಸ್ಯವನ್ನು ಬಲ್ಲವನೂ ಉತ್ತಮವಾದ ಸ್ಮರಣಶಕ್ತಿಯುಳ್ಳ ವನೂ ಉತ್ತರೋತ್ತರ ಪಲ್ಲವಿಸುವ ಬುದ್ಧಿಯುಳ್ಳವನೂ ಸರ್ವಜನಪ್ರಿಯನೂ ಆಗಿದ್ದಾನೆ. ಅವನು ಸಮಸ್ತ ಪುಣ್ಯನದಿಗಳಿಂದ ಮೆರೆಯುವ ಸಮುದ್ರರಾಜನಂತೆ ಯಾವಾಗಲೂ ಸಮಸ್ತ ಸತ್ಪುರುಷರಿಂದ ಸೇವಿಸಲ್ಪಡುತ್ತಿರುವನು ಆ ರಘುನಾಥನು ಮಹಾಪೂಜ್ಯನಾದವನು ; ಸಮಸ್ತ ಪ್ರಾಣಿಗಳಲ್ಲಿಯೂ ಸಮದೃಷ್ಟಿಯುಳ್ಳವನು ; ಯಾವಾಗಲೂ ನೋಡುವುದಕ್ಕೆ ಆನಂದವನ್ನು ಕೊಡತಕ್ಕವನು. ಈ ಪ್ರಕಾರವಾಗಿ ಸಮಸ್ತ ಸದ್ಗುಣಶಾಲಿಯಾದ ಶ್ರೀರಾಮನು ಮಾತೆಯಾದ ಕೌಸಲ್ಯಾದೇವಿಗೆ ಅತಿ

ಹರ್ಷವನ್ನುಂಟುಮಾಡುವವನು , ಗಾಂಭೀರ್ಯಗುಣದಲ್ಲಿ ಸಮುದ್ರಕ್ಕೆ ಸರಿಯಾದವನು ; ಧೈರ್ಯದಲ್ಲಿ ಹಿಮವತ್ಪರ್ವತಕ್ಕೆ ಸಮಾನನು ; ಪರಾಕ್ರಮದಲ್ಲಿ ವಿಷ್ಣುವಿಗೆ ಸರಿಯಾದವನು , ದರ್ಶನದಲ್ಲಿ ಚಂದ್ರನ ಹಾಗೆ ಮನೋಹರನಾಗಿರುವವನು , ಕೋಪದಲ್ಲಿ ಕಾಲಾಗ್ನಿಗೆ ಸದೃಶನಾದವನು ; ಕ್ಷಮೆಯಲ್ಲಿ ಭೂಮಿಗೆ ಸಮಾನನಾದವನು , ತ್ಯಾಗದಲ್ಲಿ ಕುಬೇರನಿಗೆ ಸಮಾನನು ; ಸತ್ವದಲ್ಲಿ ಸಾಕ್ಷಾತ್ ಧರ್ಮದೇವತೆಯ ಸ್ವರೂಪನು ; ಇಂಥ ಸಕಲಸದ್ಗುಣ ಸಂಪನ್ನನೂ ಸತ್ಯಪರಾಕ್ರಮಿಯೂ ಜ್ಞಾನಾದಿಗುಣಯುಕ್ತನೂ ಜ್ಯೇಷ್ಠಪುತ್ರನೂ ಅತಿಪ್ರಿಯನೂ ಆದ ರಘುನಾಥನು ತನ್ನ ಪ್ರಧಾನಿಗಳ ಹಿತೋಪದೇಶಗಳನ್ನು ಪರಿಪಾಲಿಸುವಂಥವನೆಂದು ತಿಳಿದು, ದಶರಥಮಹಾರಾಜನು ಆ ಪ್ರಧಾನಿಗಳಿಗೂ ಸಮಸ್ತಪ್ರಜೆಗಳಿಗೂ ಸಂತೋಷವಾಗುವ ಪ್ರಕಾರದಲ್ಲಿ, ಆತನಿಗೆ ಪಟ್ಟವನ್ನು ಕಟ್ಟಬೇಕೆಂದು ಪ್ರೀತಿಯಿಂದ ಪಟ್ಟಾಭಿಷೇಕಕ್ಕೆ ಯೋಗ್ಯವಾದ ಸಕಲವಸ್ತುಗಳನ್ನು ತರಿಸಿ ಪಟ್ಟಾಭಿಷೇಕಕ್ಕೆ ಪ್ರಯತ್ನ ಮಾಡುತ್ತಿದ್ದನು , ಆ ವೃತ್ತಾಂತವನ್ನು ಕೇಳಿ ಕೈಕೇಯಿದೇವಿಯು, ಪೂರ್ವದಲ್ಲಿ ದಶರಥರಾಯನು ತನಗೆ ಎರಡು ವರಗಳನ್ನು ಕೊಡುವುದಾಗಿ ಹೇಳಲು, ತಾನು ಆ ವರಗಳನ್ನು ತನಗೆ ಬೇಕಾದಾಗ ತೆಗೆದುಕೊಳ್ಳುವದಾಗಿ ಬಿನ್ನಹ ಮಾಡಿದವಳಾದ್ದರಿಂದ, ರಘುನಾಥನ ಪಟ್ಟಾಭಿಷೇಕ ಸಮಯದಲ್ಲಿ ಆ ಎರಡು ವರಗಳನ್ನು ಬೇಡಿಕೊಳ್ಳುವುದಕ್ಕಾಗಿ ದಶರಥಮಹಾರಾಜನ ಬಳಿಗೆ ಹೋಗಿ ಆತನನ್ನು ಕುರಿತು- ರಘುನಾಥನನ್ನು ವನವಾಸಕ್ಕೆ ಕಳುಹಿಸುವುದು ಒಂದು ವರವು ; ತನ್ನ ಮಗನಾದ ಭರತನಿಗೆ ಪಟ್ಟಾಭಿಷೇಕ ಮಾಡುವುದು ಮತ್ತೊಂದು ವರವು—ಈ ಎರಡು ವರಗಳನ್ನು ಕೊಡಬೇಕೆಂದು ಬೇಡಿಕೊಂಡಳು. ಆ ಮಾತನ್ನು ಕೇಳಿ ದಶರಥರಾಯನು ಸತ್ಯಸಂಧನಾದ ಕಾರಣ ಧರ್ಮ[illegible] ಪರಿಪಾಲಿಸಬೇಕೆಂದು ಜ್ಯೇಷ್ಠಪುತ್ರನಾಗಿ ಪ್ರಿಯನಾದ ರಘುನಾಥನನ್ನು ವನವಾಸಕ್ಕೆ ಕಳುಹಿಸಿದನು ; ಪರಾಕ್ರಮಿಯಾದ ರಘುನಾಥನು ತಂದೆಯ ಪ್ರತಿಜ್ಞೆಯನ್ನು ಪರಿಪಾಲಿಸಬೇಕೆಂದೂ ತನ್ನ ಕಿರಿಯ ತಾಯಿಯಾದ ಕೈಕೇಯಿದೇವಿಯ ಇಷ್ಟಾರ್ಥವನ್ನು ಸಲ್ಲಿಸಬೇಕೆಂದೂ ವನವಾಸಕ್ಕೆ ತೆರಳಲು, ಸುಮಿತ್ರಾದೇವಿಯ ಕುಮಾರನಾಗಿ ವಿನಯಸಂಪನ್ನನಾಗಿ ರಘುನಾಥನಿಗೆ ಇಷ್ಟನಾದ ಲಕ್ಷ್ಮಣನು ಅತ್ಯಂತಸ್ನೇಹದಿಂದ ಆತನ ಹಿಂದೆ ಹೊರಟನು ; ಆಮೇಲೆ ಆದಿಪುರುಷನಿಗೆ ಆದಿಶಕ್ತಿಯು ಮರ್ಯಾದೆಯಲ್ಲಿ ನಿರ್ಮಿಸಲ್ಪಟ್ಟು ಜನಕಮಹಾರಾಜನ ವಂಶದಲ್ಲಿ ಅವತರಿಸಿ ಸಮಸ್ತ ದೇಹಕಾಂತಿಗಳಿಂದ ಅತಿಮನೋಹರೆಯಾಗಿ, ಸರ್ವಲಕ್ಷಣಸಂಪನ್ನೆಯಾಗಿ ಸಮಸ್ತಸ್ತ್ರೀಯರಲ್ಲಿಯೂ ಉತ್ತಮಳಾಗಿ ರಘುನಾಥನ ಪ್ರಾಣಕಾಂತೆಯಾದ ಸೀತಾದೇವಿಯು, ಪೂರ್ಣಿಮಾಚಂದ್ರನನ್ನು ರೋಹಿಣೀದೇವಿಯು ಬೆಂಬಿಡದೆ ಐದುವ ಹಾಗೆ ಆತನ ಹಿಂದೆ ತೆರಳಿದಳು , ಮತ್ತು ಅಯೋಧ್ಯಾ ಪಟ್ಟಣದಲ್ಲಿದ್ದ ಜನಗಳೂ ತಂದೆಯಾದ ದಶರಥರಾಯನೂ ಹಿಂದೆ ಬರುತ್ತಿರಲು, ರಥಾರೂಢನಾದ ರಘುನಾಥನು ಅತಿವೇಗದಿಂದ ಬಹುದೂರವನ್ನು ದಾಟಿ ಶೃಂಗವೇರವೆಂಬ ಪಟ್ಟಣದ ಬಳಿ ಗಂಗಾ ತೀರದಲ್ಲಿ ಅಂಬಿಗರಿಗೆ ಅಧಿಪತಿಯಾಗಿ ಅತ್ಯಂತ ಪ್ರಿಯಸಖನಾದ ಗುಹನೆಂಬ ಅಂಬಿಗನನ್ನು ಕಾಣಿಸಿಕೊಂಡು, ತನ್ನ ಸಾರಥಿಯನ್ನು ರಥದೊಡನೆ ಅಯೋಧ್ಯಾಪಟ್ಟಣಕ್ಕೆ ಕಳುಹಿಸಿದನು. ಅನಂತರ ಗುಹ ಲಕ್ಷ್ಮಣ ಸೀತಾದೇವಿಯರನ್ನು ಕೂಡಿಕೊಂಡು ಕಾಲುನಡಿಗೆಯಿಂದ ವನಕ್ಕೆ ಹೋಗಿ ಬಹುಜಲ ಪೂರ್ಣವಾದ ಅನೇಕ ನದಿಗಳನ್ನು ದಾಟಿ ಚಿತ್ರಕೂಟಕ್ಕೆ ಹೋದನು. ಶ್ರೀರಾಮನು ಭರದ್ವಾಜ ಮುನೀಶ್ವರನ ಆಶ್ರಮದಲ್ಲಿ ಆತನ ಅಪ್ಪಣೆಯಿಂದ ಮನೋಹರವಾದ ಪರ್ಣಶಾಲೆಯನ್ನು ಮಾಡಿಕೊಂಡು ಲಕ್ಷ್ಮಣ ಸೀತಾದೇವಿಯರೊಡನೆ ಸುಖವಾಗಿ ಅತ್ಯಂತ ವಿನೋದದಿಂದಿದ್ದನು.

ಇತ್ತಲಾಗಿ ಅಯೋಧ್ಯಾಪಟ್ಟಣದಲ್ಲಿ ತನ್ನ ಮಗನಾದ ಶ್ರೀರಾಮನನ್ನು ಕಾಣದೆ ಪುತ್ರವಿಯೋಗದಿಂದ ಹಂಬಲಿಸುತ್ತಿದ್ದ ದಶರಥಮಹಾರಾಯನು ಸ್ವರ್ಗಸ್ಥನಾದನು ಆಗ ರಾಜ್ಯಾಧಿಪತ್ಯವನ್ನು ಮಾಡಲು ತನ್ನ ಪುರೋಹಿತನಾದ ವಸಿಷ್ಠಮುನೀಂದ್ರನೂ ಬ್ರಾಹ್ಮಣರೂ ಆಜ್ಞಾಪಿಸಿದರೂ ಭರತನು ಮಹಾಪರಾಕ್ರಮಿಯಾಗಿದ್ದರೂ ರಾಜ್ಯಾಧಿಪತ್ಯವನ್ನು ಬಯಸದೆ ವನಾಂತರಕ್ಕೆ ಹೋಗಿ ಅಣ್ಣನಾದ ರಘುನಾಥನನ್ನು ಗುರುಭಾವದಿಂದ ಸತ್ಕರಿಸಿ "ಸ್ವಾಮಿ, ರಾಜ್ಯಾಧಿಪತ್ಯಕ್ಕೆ ನೀನೇ ಅಧಿಕಾರಿಯಲ್ಲದೆ ಮತ್ತೊಬ್ಬನಲ್ಲ" ಎಂದು ನುಡಿದನು. ಆ ಮಾತನ್ನು ಕೇಳಿ ಅತ್ಯಂತ ಉದಾರಗುಣವುಳ್ಳವನಾಗಿ ಸುಮುಖನಾದ ರಘುನಾಥನು ತನ್ನ ತಂದೆಯಾದ ದಶರಥರಾಜನ ಅನುಜ್ಞೆಯಿಂದ ರಾಜ್ಯದಲ್ಲಿ ಆಸಕ್ತಿಯಿಲ್ಲದವನಾದರೂ ರಾಜ್ಯಪಾಲನಕ್ಕೋಸ್ಕರ ಭರತನಿಗೆ ತನ್ನ ಪಾದುಕೆಗಳನ್ನು ಕೊಟ್ಟು ಕಳುಹಿಸಿದನು. ತನ್ನ ಅಣ್ಣನಾದ ರಘುನಾಥನು ರಾಜ್ಯಪಾಲನವನ್ನು ಮಾಡಬೇಕೆಂಬ ಇಷ್ಟಾರ್ಥವನ್ನು ಪಡೆಯುದ್ದರಿಂದ, ಭರತನು ನಂದಿಗ್ರಾಮದಲ್ಲಿ ಆ ಪಾದುಕೆಗಳನ್ನು ಮುಂದಿಟ್ಟುಕೊಂಡು ರಘುನಾಥನು ಯಾವಾಗ ಬರುವನೆಂದು ಅವನ ಆಗಮನವನ್ನು ನಿರೀಕ್ಷಿಸುತ್ತ ರಾಜ್ಯಪರಿಪಾಲನವನ್ನು ಮಾಡುತ್ತಿದ್ದನು.

ಅನಂತರದಲ್ಲಿ ಮಹಾತ್ಮನೂ ಸತ್ಯಸಂಧನೂ ಆದ ರಘುನಾಥನು ಪುರಜನ ಪರಿಜನಗಳನ್ನು ಪಟ್ಟಣಕ್ಕೆ ಕಳುಹಿಸಿ ಏಕಾಗ್ರಚಿತ್ತನಾಗಿ ದಂಡಕಾರಣ್ಯವನ್ನು ಪ್ರವೇಶಿಸಿ ವಿರಾಧನೆಂಬ ರಾಕ್ಷಸನನ್ನು ಕೊಂದು ಶರಭಂಗನೆಂಬ ಋಷೀಶ್ವರನನ್ನು ದರ್ಶನಮಾಡಿದನು. ಅನಂತರ ಸುತೀಕ್ಷ್ಣನನ್ನೂ ಅಗಸ್ತ್ಯಭ್ರಾತೃ*ವನ್ನೂ ಆತನ ಅಣ್ಣನಾದ ಅಗಸ್ತ್ಯಋಷೀಶ್ವರನನ್ನೂ ದರ್ಶನಮಾಡಿದನು. ಅಗಸ್ತ್ಯಮುನೀಶ್ವರನು ಅತ್ಯಂತಪ್ರೀತಿಯುಳ್ಳವನಾಗಿ ಅಕ್ಷಯಬಾಣಗಳುಳ್ಳ ಬತ್ತಳಿಕೆಗಳೆರಡನ್ನೂ ಇಂದ್ರದೇವತಾಕವಾದ ಬಿಲ್ಲನ್ನೂ ಬಾಣಗಳನ್ನೂ ಖಡ್ಗವನ್ನೂ ಕೊಡಲು ಅವುಗಳನ್ನು ತೆಗೆದುಕೊಂಡು ವನವಾಸಿಗಳೊಡನೆ ಅರಣ್ಯದಲ್ಲಿ ವಾಸವಾಗಿದ್ದನು. ಆಗ ಸಮಸ್ತ ಋಷಿಗಳೂ ಆತನ ಸಮೀಪಕ್ಕೆ ಬಂದು ಕಾಣಿಸಿಕೊಂಡು ರಾಕ್ಷಸರ ಉಪದ್ರವವನ್ನು ಬಿಡಿಸಬೇಕೆಂದು ಬಿನ್ನಹಮಾಡಿಕೊಂಡರು, ರಘುನಾಥನು ಆ ಋಷಿಗಳ ವಾಕ್ಯಗಳನ್ನು ಕೇಳಿ ಅವರನ್ನು ಕುರಿತು 'ಋಷಿಗಳಿರಾ, ರಣರಂಗದಲ್ಲಿ ಸಮಸ್ತರಾಕ್ಷಸರನ್ನೂ ಸಂಹಾರಮಾಡುತ್ತೇನೆ' ಎಂದು ನುಡಿದು, ಯಜ್ಞಪುರುಷನ ಮರ್ಯಾದೆಯಲ್ಲಿ ಅತಿಶುದ್ಧಾತ್ಮರಾಗಿ ದಂಡಕಾರಣ್ಯವಾಸಿಗಳಾದ ಆ ಋಷಿಗಳಿಗೆ ಅಭಯವನ್ನು ಕೊಟ್ಟು ಜನಸ್ಥಾನವೆಂಬ ಅರಣ್ಯದಲ್ಲಿ ಸಂಚರಿಸುತ್ತ ನಾನಾರೂಪಗಳಿಂದ ವಿಹರಿಸುತ್ತಿದ್ದ ಶೂರ್ಪಣಖಿಯೆಂಬ ರಾಕ್ಷಸಿಯ ನಾಸಿಕಾಛೇದನವನ್ನು ಮಾಡಿಸಿದನು; ಶೂರ್ಪಣಖಿಯು ತನ್ನ ಒಡಹುಟ್ಟಿದವರಾದ ಖರ ತ್ರಿಶಿರ ದೂಷಣರೆಂಬ ರಾಕ್ಷಸರಲ್ಲಿ ಮೊರೆಯಿಡಲು ಅವರು ಸಮಸ್ತ ರಾಕ್ಷಸರ ಬಲವನ್ನೂ ಕೂಡಿಕೊಂಡು ಯುದ್ಧಸನ್ನದ್ಧರಾಗಿ ಬಂದರು; ರಘುನಾಥನು ಖರ ತ್ರಿಶಿರ ದೂಷಣ ಮೊದಲಾಗಿ ಜನಸ್ಥಾನದಲ್ಲಿದ್ದ ಹದಿನಾಲ್ಕುಸಾವಿರ ರಾಕ್ಷಸರನ್ನೂ ವಧಿಸಿದನು. ಆಮೇಲೆ ರಾವಣನು ತನ್ನ ದಾಯಾದಿಗಳಾದ ರಾಕ್ಷಸರ ವಧೆಯನ್ನು ಕೇಳಿ ಕೋಪಾತಿಶಯಪರವಶನಾಗಿ ರಘುನಾಥನೊಡನೆ

---

* ಅಗಸ್ತ್ಯಮುನಿಯ ಸೋದರ. ಈ ಮುನಿಗೂ ಅಗಸ್ತ್ಯನೆಂಬ ಹೆಸರಿದ್ದಿತೆಂದು ಮಾರ್ಕಂಡೇಯ ಪುರಾಣದಲ್ಲಿ ಹೇಳಿದೆ. ಸನತ್ಕುಮಾರಸಂಹಿತೆಯಲ್ಲಿ ಸುದರ್ಶನ ಎಂಬ ಹೆಸರಿದೆ. ಈತನ ಹೆಸರು ಇಧ್ಮವಾಹನ ಎಂದು ಕೆಲವರು ಹೇಳುತ್ತಾರೆ. ಇಧ್ಮವಾಹ ಎಂಬುದು ಅಗಸ್ತ್ಯನ ಮಗನ ಹೆಸರೆಂದು ಬಾಣಭಟ್ಟನ ಕಾದಂಬರಿಯಲ್ಲಿ ಹೇಳಿದೆ.

ಯಯುದ್ಧಮಾಡಲು ಮಾರೀಚನೆಂಬ ರಾಕ್ಷಸನನ್ನು ಸಹಾಯಕನನ್ನಾಗಿ ಬಯಸಿದನು. ಮಾರೀಚನು ರಾವಣನನ್ನು ನೋಡಿ 'ಎಲೈ ರಾವಣನೆ, ಬಲವಂತನಾದ ರಘುನಾಥನೊಡನೆ ನಿನಗೆ ವಿರೋಧವು ಸಲ್ಲದು' ಎಂದು ಬಹಳವಾಗಿ ಹೇಳಿದನು, ರಾವಣನು ಕಾಲಬೋಧಿತನಾಗಿ ಆ ಮಾತನ್ನು ಕೇಳದೆ ಕನಕಮೃಗವಾದ ಮಾರೀಚನನ್ನು ಸಹಾಯಮಾಡಿಕೊಂಡು ರಘುನಾಥನಿದ್ದ ಆಶ್ರಮಕ್ಕೆ ಬಂದು, ಮೋಸದಿಂದ ರಾಮಲಕ್ಷ್ಮಣರನ್ನು ದೂರವಾಗಿ ಹೋಗುವಹಾಗೆ ಮಾಡಿ, ರಘುನಾಥನ ರಾಣಿಯಾದ ಸೀತಾದೇವಿಯನ್ನು ಅಪಹರಿಸಿಕೊಂಡು ಅಡ್ಡಲಾಗಿ ತಡೆದ ಜಟಾಯುವೆಂಬ ಪಕ್ಷಿಯನ್ನುಕೊಂದು ಲಂಕೆಗೆ ಹೋದನು.

ಇತ್ತಲಾಗಿ ರಘುನಾಥನು ತನ್ನ ಪರ್ಣಶಾಲೆಯಲ್ಲಿ ಸೀತಾದೇವಿಯನ್ನು ಕಾಣದೆ ಹುಡುಕಿಕೊಂಡು ಬರುತ್ತ ಗಾಯಪಡೆದು ಬಿದ್ದಿದ್ದ ಜಟಾಯುವನ್ನು ಕಾಣಲು ಆತನು ಸಂಜ್ಞೆಯಿಂದಲೂ ಅರೆಮಾತಿನಿಂದಲೂ ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಹೋದನೆಂಬ ವೃತ್ತಾಂತವನ್ನು ತಿಳುಹಿಸಿ ಶರೀರವನ್ನು ಬಿಟ್ಟನು; ಆ ವೃತ್ತಾಂತವನ್ನು ಕೇಳಿ ರಘುನಾಥನು ಶೋಕಾತಿಶಯದಿಂದ ಹಂಬಲಿಸಿ ಮೂರ್ಛಿತನಾಗಿ ಕೆಲವು ಹೊತ್ತಿಗೆ ಸ್ಮರಣೆಯನ್ನು ತಂದುಕೊಂಡು ಜಟಾಯುವಿಗೆ ಅಗ್ನಿಸಂಸ್ಕಾರ ಮೊದಲಾದ್ದನ್ನು ಮಾಡಿದನು. ಆಮೇಲೆ ಸೀತಾದೇವಿಯನ್ನು ಹುಡುಕಿಕೊಂಡು ಹೋಗುವಸಮಯದಲ್ಲಿ ಅತ್ಯಂತ ಘೋರಾಕಾರನಾಗಿ ವಿಕಾರಿಯಾದ ಕಬಂಧನೆಂಬ ರಾಕ್ಷಸನನ್ನು ಕೊಂದನು; ಕಬಂಧನು ರಘುನಾಥನ ಹಸ್ತಸ್ಪರ್ಶದಿಂದ ಸ್ವರ್ಗಸ್ಥನಾಗಿ ಅಂತರಿಕ್ಷಮಾರ್ಗದಲ್ಲಿ ನಿಂತುಕೊಂಡು 'ಎಲೈ ರಘುನಾಥನೆ, ಇಲ್ಲಿಗೆ ಸಮೀಪದಲ್ಲಿ ಅತ್ಯಂತ ಧರ್ಮಬುದ್ಧಿಯುಳ್ಳ ಶಬರಿ ಎಂಬ ಸ್ತ್ರೀ ಇದ್ದಾಳೆ, ಅವಳನ್ನು ಹೋಗಿ ನೋಡು' ಎಂದು ನುಡಿದನು ಬಳಿಕ ಶತ್ರುಸಂಹಾರಕನಾದ ರಘುನಾಥನು ಶಬರಿಯಬಳಿಗೈದಿ, ಆಕೆಯು ಅರ್ಘ್ಯಪಾದ್ಯಾಚಮನಾದಿಗಳಿಂದ ಸತ್ಕಾರಮಾಡಲು, ಆ ಪೂಜೆಯನ್ನು ಕೈಕೊಂಡು ಪಂಪಾತೀರಕ್ಕೆ ಬಂದು ಹನುಮಂತನನ್ನು ಕಂಡು ಆತನು ಸುಗ್ರೀವನ ವೃತ್ತಾಂತವನ್ನು ಬಿನ್ನಹಮಾಡಲು ರಾಮನು ಸುಗ್ರೀವನ ಬಳಿಗೆ ಹೋಗಿ ತಾನು ವನವಾಸಕ್ಕೆ ಬಂದ ವೃತ್ತಾಂತವನ್ನೂ ಸೀತಾದೇವಿಯ ವೃತ್ತಾಂತವನ್ನೂ ಹೇಳಿದನು, ಸುಗ್ರೀವನು ಅತ್ಯಂತ ಸಂತೋಷಪಟ್ಟು ರಘುನಾಥನೊಡನೆ ಅಗ್ನಿಸಾಕ್ಷಿಕವಾಗಿ ಸಖ್ಯವನ್ನು ಮಾಡಿಕೊಂಡು, ಸ್ನೇಹದಿಂದ, ತನ್ನ ಅಣ್ಣನಾದ ವಾಲಿಯೊಡನೆ ವಿರೋಧ ಉಂಟಾದ ವೃತ್ತಾಂತವನ್ನು ಬಿನ್ನಹಮಾಡಿದನು, ಆ ವೃತ್ತಾಂತವನ್ನು ಕೇಳಿ ರಘುನಾಥನು ವಾಲಿಯನ್ನು ಸಂಹಾರಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿದನು, ಸುಗ್ರೀವನು ವಾಲಿಯ ಭುಜಪರಾಕ್ರಮವನ್ನು ನೆನೆದು ರಘುನಾಥನಿಂದ ಆ ಕಾರ್ಯವು ಸಾಧ್ಯವಾಗುವುದೋ ಇಲ್ಲವೋ ಎಂದು ಸಂಶಯವುಳ್ಳವನಾಗಿ ಆತನ ಪರಾಕ್ರಮವನ್ನು ಪರೀಕ್ಷೆಮಾಡಬೇಕೆಂದು ದೊಡ್ಡ ಪರ್ವತಕ್ಕೆ ಸಮಾನವಾದ ದುಂದುಭಿಯೆಂಬ ರಾಕ್ಷಸನ ದೇಹವನ್ನು ತೋರಿಸಿದನು; ಅತ್ಯಂತ ಬಾಹುಬಲವುಳ್ಳ ರಘುನಾಥನು ಆ ಶುಷ್ಕವಾದ ಅಸ್ಥಿಯನ್ನು ನೋಡಿ ಮುಗುಳನಗೆಯುಳ್ಳವನಾಗಿ ತನ್ನ ಪಾದಾಂಗುಷ್ಠದಿಂದಲೇ ಆ ಶರೀರವನ್ನು ಹತ್ತುಗಾವುದ ದೂರದಲ್ಲಿ ಕೆಡಹಿ ಒಂದು ಬಾಣವನ್ನು ಬಿಲ್ಲಿನಲ್ಲಿ ತೊಟ್ಟು ಅಸಾಧ್ಯವಾದ ಏಳು ಓಲೆಮರಗಳನ್ನು ಕತ್ತರಿಸಿ ನಂಬಿಕೆಯನ್ನುಂಟುಮಾಡಿದನು. ಆಗ ಸುವರ್ಣದಹಾಗೆ ತನುಕಾಂತಿಯುಳ್ಳ ಸುಗ್ರೀವನು ಅತ್ಯಂತ ಸಂತುಷ್ಟನಾಗಿ ರಘುನಾಥನಲ್ಲಿ ಅತ್ಯಂತವಿಶ್ವಾಸವನ್ನು ಮಾಡಿ ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ವಾಲಿಯಿದ್ದ ಗುಹೆಯ ಸಮೀಪದಲ್ಲಿ ಸಿಂಹನಾದವನ್ನು ಮಾಡಿದನು. ಮಹತ್ತಾದ ಆ ಧ್ವನಿಯಿಂದ

ಕುಪಿತನಾದ ವಾಲಿಯು ತಾರೆಯನ್ನು ಸಂತವಿಟ್ಟು ಗುಹೆಯಿಂದ ಹೊರಟು ಯುದ್ಧಕ್ಕೆ ಬರಲು, ರಘುನಾಥನು ಸುಗ್ರೀವನನ್ನು ಆತನೊಡನೆ ಯುದ್ಧವನ್ನು ಮಾಡಿಸಿ, ಒಂದೇ ಬಾಣದಿಂದ ವಾಲಿಯನ್ನು ಕೊಂದು ಕಿಷ್ಕಿಂಧಾರಾಜ್ಯದ ಪಟ್ಟವನ್ನು ಸುಗ್ರೀವನಿಗೆ ಕಟ್ಟಿದನು , ವಾನರಶ್ರೇಷ್ಠನಾದ ಸುಗ್ರೀವನು ಸಮಸ್ತಕಪಿನಾಯಕರನ್ನೂ ಕರೆಕಳುಹಿಸಿ ಸೀತಾದೇವಿಯನ್ನು ಹುಡುಕುವುದಕ್ಕೋಸ್ಕರ ನಾನಾದಿಕ್ಕುಗಳಿಗೂ ಕಳುಹಿಸಿದನು ಹನುಮಂತನು ಅಂಗದಾದಿಗಳೊಡನೆ ಸೀತಾದೇವಿಯನ್ನು ಅರಸಿಕೊಂಡು ಹೋಗಿ ಜಟಾಯುವನ್ನು ಕೊಂದು ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡುಹೋದ ವೃತ್ತಾಂತವನ್ನು ಸಂಪಾತಿಗೆ ಹೇಳಿದನು. ಆತನು ಹೇಳಿದ ಪ್ರಕಾರದಲ್ಲಿ ನೂರುಗಾವುದ ಅಗಲವಾದ ಲವಣಸಮುದ್ರವನ್ನು ಅತಿವೇಗದಿಂದ ದಾಟಿ, ರಾವಣನಿಂದ ಪರಿಪಾಲಿಸಲ್ಪಟ್ಟ ತ್ರಿಕೂಟಾಚಲದ ಕೋಡುಗಲ್ಲಿನ ಮೇಲಿರುವಂಥ ಲಂಕಾಪಟ್ಟಣಕ್ಕೆ ಹೋದನು. ಅಲ್ಲಿ ರಘುನಾಥನನ್ನೇ ಧ್ಯಾನಮಾಡುತ್ತ ಅಶೋಕವನದಲ್ಲಿದ್ದ ಸೀತಾದೇವಿಯನ್ನು ಕಂಡು, ರಘುನಾಥನು ಕೊಟ್ಟ ಕುರುಹಿನ ಮುದ್ರೆಯುಂಗುರವನ್ನು ಕೊಟ್ಟು, ಆತನ ಕುಶಲವನ್ನು ಬಿನ್ನಹಮಾಡಿದನು ಸೀತಾದೇವಿಯು ಕೊಟ್ಟ ಚೂಡಾಮಣಿಯನ್ನು ತೆಗದುಕೊಂಡು ತಿರುಗಿ ಬರುವಾಗ ಅಶೋಕವನವನ್ನು ಮುರಿದು, ಎದುರಾಗಿ ಬಂದ ಐದುಮಂದಿ ಸೇನಾನಾಯಕರನ್ನೂ ಏಳುಮಂದಿ ಪ್ರಧಾನಕುಮಾರರನ್ನೂ ಮಹಾಪರಾಕ್ರಮಶಾಲಿಯಾದ ಅಕ್ಷಕುಮಾರನನ್ನೂ ಕೊಂದು, ಇಂದ್ರಜಿತ್ತಿನ ಬ್ರಹ್ಮಾಸ್ತ್ರದಿಂದ ಕಟ್ಟುಬಿದ್ದು, ಬ್ರಹ್ಮದೇವರ ವರದಿಂದ ಬಿಡುಗಡೆಯೈದಿ, ರಾವಣನನ್ನು ಕಂಡು ಮಾತನಾಡಿ, ಲಂಕಾಪಟ್ಟಣವನ್ನು ದಹನಮಾಡಿ, ಲಂಕಾಪಟ್ಟಣದಿಂದ ಮರಳಿ ಬಂದು, ರಘುನಾಥನನ್ನು ಕಂಡು ಪ್ರದಕ್ಷಿಣ ನಮಸ್ಕಾರವನ್ನು ಮಾಡಿ, ಸೀತಾದೇವಿಯನ್ನು ಕಂಡ ವೃತ್ತಾಂತವನ್ನು ಯಥಾರ್ಥವಾಗಿ ಬಿನ್ನವಿಸಿದನು.

ಆಮೇಲೆ ರಘುನಾಥನು ಸುಗ್ರೀವಸಹಿತನಾಗಿ ಲವಣಸಮುದ್ರತೀರಕ್ಕೆ ಬಿಜಯಂಗೈದು ಸೂರ್ಯಕಿರಣಗಳಿಗೆ ಸಮಾನಗಳಾದ ತೀಕ್ಷ್ಣಬಾಣಗಳಿಂದ ಸಮಸ್ತನದಿಗಳಿಗೂ ಅಧಿಪತಿಯಾದ ಸಮುದ್ರರಾಜನನ್ನು ಕಷ್ಟಪಡಿಸಿ, ಆತನ ಸಮ್ಮತಿಯಿಂದ ನಳನಿಂದ ಸೇತುವೆಯನ್ನು ಕಟ್ಟಿಸಿ ಲಂಕಾಪಟ್ಟಣಕ್ಕೆ ಹೋಗಿ, ಯುದ್ಧದಲ್ಲಿ ರಾವಣನನ್ನು ಕೊಂದು ಸೀತಾದೇವಿಯನ್ನು ಕಂಡು ಬಹಳ ಲಜ್ಜಿತನಾ*ಗಿದ್ದನು , ಪತಿವ್ರತೆಯಾದ ಸೀತಾದೇವಿಯು ಆತನ ನಿಷ್ಠುರೋಕ್ತಿಗಳನ್ನು ಸಹಿಸದೆ ರಘುನಾಥನಿಗೆ ವಿಶ್ವಾಸವು ಹುಟ್ಟುವುದಕ್ಕಾಗಿ ಅಗ್ನಿಪ್ರವೇಶಮಾಡಿದಳು ; ಆಗ ಯಜ್ಞೇಶ್ವರನು ಪ್ರತ್ಯಕ್ಷನಾಗಿ 'ಸೀತಾದೇವಿಯಲ್ಲಿ ಕಿಂಚಿನ್ಮಾತ್ರವಾದರೂ ಕಳಂಕವಿಲ್ಲ' ಎಂದು ನುಡಿದನು ; ಆ ವಾಕ್ಯವನ್ನು ಕೇಳಿ ರಘುನಾಥನು ಸೀತಾದೇವಿಯಲ್ಲಿ ಕಳಂಕವಿಲ್ಲವೆಂದು ಅವಳನ್ನು ಅಂಗೀಕರಿಸಲು ದೇವರ್ಷಿಗಣಸಹಿತರಾದ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಲೋಕತ್ರಯದವರೂ ಅತ್ಯಂತ ಸಂತೋಷಯುಕ್ತರಾದರು. ಆ ಬಳಿಕ ರಘುನಾಥನು ಸೀತಾಸಮೇತನಾಗಿ ಸಮಸ್ತ ದೇವತೆಗಳಿಂದ ಪೂಜಿಸಲ್ಪಟ್ಟು, ತನ್ನ ಭಕ್ತನಾಗಿ ರಾಕ್ಷಸಾಧಿಪತಿಯಾದ ವಿಭೀಷಣನಿಗೆ ಲಂಕಾರಾಜ್ಯಾಧಿಪತ್ಯವನ್ನು ಕೊಟ್ಟು ಕೃತಕೃತ್ಯನಾದನು ಅತಿಹರ್ಷದಿಂದ ಸಮಸ್ತ ದೇವತೆಗಳೂ ಕೊಟ್ಟ ವರಗಳನ್ನು ಅಂಗೀಕರಿಸಿ, ರಣಾಂಗಣದಲ್ಲಿ ರಾಕ್ಷಸರ ಆಯುಧಗಳಿಂದ ದೀರ್ಘನಿದ್ರೆಯನ್ನು ಮಾಡುತ್ತಿದ್ದ ಕಪಿಗಳನ್ನು ಆ ದೇವತೆಗಳ ವರದಿಂದ

* ರಾಕ್ಷಸಗೃಹದಲ್ಲಿ ಬಹುಕಾಲ ಇದ್ದ ಸೀತೆಯನ್ನು ಸ್ವೀಕರಿಸಿದರೆ ಲೋಕಾಪವಾದ ಉಂಟಾದೀತೆಂದು ಲಜ್ಜಿತನಾದನು.

ಎಬ್ಬಿಸಿ, ಕಪಿಸೇನೆಯನ್ನೂ ಸುಗ್ರೀವಾದಿ ಸಮಸ್ತಸಖರನ್ನೂ ಕೂಡಿಕೊಂಡು ಮನೋಹರವಾದ ಪುಷ್ಪಕವನ್ನು ಏರಿ ಭರದ್ವಾಜಾಶ್ರಮಕ್ಕೆ ಬಂದನು. ಅನಂತರ ಭರತನಿಗೆ ತಾನು ದಿಗ್ವಿಜಯಮಾಡಿ ಬಂದ ವೃತ್ತಾಂತವನ್ನು ಹೇಳುವುದಕ್ಕೋಸ್ಕರ ಹನುಮಂತನನ್ನು ಕಳುಹಿಸಿ, ತಾನು ವನದಲ್ಲಿ ಸಂಚರಿಸುತ್ತಿದ್ದ ಸಮಯದಲ್ಲಿ ಮಾಡಿದ ಪ್ರಯಾಣಗಳ ವೃತ್ತಾಂತವನ್ನು ತಿಳುಹಿಸುತ್ತ ಸುಗ್ರೀವ ಸಹಿತನಾಗಿ ನಂದೀಗ್ರಾಮಕ್ಕೆ ಬಂದು ಭರತನನ್ನು ನೋಡಿದನು ಆಮೇಲೆ ಜಟೆಗಳನ್ನು ತೆಗೆದು ಹಾಕಿ ಸೀತಾಸಮೇತನಾಗಿ ಅಯೋಧ್ಯಾಪಟ್ಟಣಕ್ಕೆ ಬಂದು ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪರಿಪಾಲಿಸುತ್ತಿದ್ದನು

ಆತನ ಆಳುವಿಕೆಯಲ್ಲಿ ಸಮಸ್ತಜನರೂ ಶರೀರಪುಷ್ಟಿಯುಳ್ಳವರಾಗಿ ಆತನ ಧರ್ಮದಿಂದ ಸಂತುಷ್ಟರಾಗಿ ಬಾಹ್ಯಾಭ್ಯಂತರ ರೋಗಗಳಿಲ್ಲದೆ ದುರ್ಭಿಕ್ಷಭಯರಹಿತರಾಗಿದ್ದರು , ರಘುನಾಥನು ಪರಿಪಾಲಿಸುತ್ತಿದ್ದ ರಾಜ್ಯದಲ್ಲಿ ಎಲ್ಲರೂ ಪುತ್ರಶೋಕವಿಲ್ಲದಿದ್ದರು ; ಸ್ತ್ರೀಯರು ಪತಿವಿಯೋಗ ವೆಂಬುದಿಲ್ಲದೆ ಪತಿವ್ರತೆಯರಾಗಿದ್ದರು , ಆತನ ರಾಜ್ಯದಲ್ಲಿ ಅಗ್ನಿಭಯವಿರಲಿಲ್ಲ , ಜಲದಿಂದಲೂ ಭಯವಿಲ್ಲ , ವಾತರೋಗ ಜ್ವರ ಚೋರಾದಿಗಳಿಂದಲೂ ಭಯವಿಲ್ಲ , ನಗರಗಳಲ್ಲಿಯೂ ರಾಜ್ಯ ಗಳಲ್ಲಿಯೂ ಧನಧಾನ್ಯಾಭಿವೃದ್ಧಿಯಾಗಿ ಕೃತಯುಗದ ಮರ್ಯಾದೆಯಲ್ಲಿ ಸಮಸ್ತಪ್ರಾಣಿ ಗಳಿಗೂ ಸಂತೋಷವಾಗಿತ್ತು. ರಘುನಾಥನು ನೂರು ಅಶ್ವಮೇಧಯಾಗಗಳನ್ನು ಮಾಡಿ ಬ್ರಾಹ್ಮಣರಿಗೆ ಬಹುಗೋದಾನ, ಬಹುದಕ್ಷಿಣೆ, ಅಸಂಖ್ಯಾತವಾದ ಧನಗಳನ್ನು ಕೊಟ್ಟು ಅತಿಕೀರ್ತಿವಂತನಾಗಿ ಬ್ರಹ್ಮ ಲೋಕವನ್ನು ಸಾಧಿಸಿ ಸದ್ಗುಣಗಳುಳ್ಳ ತನ್ನ ವಂಶದ ರಾಯರನ್ನು ಪ್ರತಿಷ್ಠೆಮಾಡಿದನು ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಯವರನ್ನೂ ತಮ್ಮ ತಮ್ಮ ಜಾತಿಧರ್ಮಗಳಲ್ಲಿಯೇ ನಡೆಯಿಸಿದನು.

ಈ ಪ್ರಕಾರದಲ್ಲಿ ಹನ್ನೊಂದುಸಾವಿರ ವರುಷಗಳು ರಾಜ್ಯವನ್ನು ಪರಿಪಾಲಿಸಿದಂಥ ರಘುನಾಥನ ಚರಿತ್ರವು ಸಮಸ್ತಪಾಪಕ್ಷಯವನ್ನು ಮಾಡುವಂಥದು, ಸಮಸ್ತವೇದಗಳಿಗೂ ಸಮಾನವಾದದ್ದು , ಆದಕಾರಣ ಯಾವನೊಬ್ಬನು ಈ ರಾಮಚರಿತ್ರವನ್ನು ಪಠಿಸುವನೋ ಆ ಪುಣ್ಯಾತ್ಮನು ಸಮಸ್ತ ಪಾಪಗಳಿಂದ ಬಿಡುಗಡೆಯೈದುವನು ಆಯುಷ್ಕರವಾದ ಈ ರಾಮಾಯಣ ಕಥೆಯನ್ನು ಪಠನಮಾಡುವ ಪುಣ್ಯಾತ್ಮನು ಈ ಮರ್ತ್ಯಲೋಕದಲ್ಲಿ ಪುತ್ರಪೌತ್ರರಿಂದಲೂ ಸಮಸ್ತ ಭೃತ್ಯವರ್ಗಗಳಿಂದಲೂ ಅನೇಕ ಸೌಖ್ಯಗಳನ್ನು ಅನುಭವಿಸಿ ಶರೀರಾಂತದಲ್ಲಿ ಸ್ವರ್ಗಲೋಕವನ್ನೈದು ವನು, ಈ ರಾಮಚರಿತ್ರವನ್ನು ಪಠನಮಾಡುವಂಥ ಬ್ರಾಹ್ಮಣನು ಇಷ್ಟಕಾಮಗಳನ್ನು ಪಡೆಯುವನು, ಕ್ಷತ್ರಿಯನು ಸಮಸ್ತ ಭೂಮಂಡಲಾಧಿಪತಿಯಾಗುವನು , ವೈಶ್ಯನು ವ್ಯಾಪಾರ ಮೊದಲಾದವುಗಳಿಂದ ಲಾಭವನ್ನು ಪಡೆಯುವನು , ಶೂದ್ರನು ಬಹು ದೊಡ್ಡವನಾಗುವನು " ಎಂದು ನಾರದಮುನೀ ಶ್ವರನು ವಾಲ್ಮೀಕಿ ಮುನಿಗಳಿಗೆ ರಾಮಾಯಣಕಥೆಯನ್ನು ಸಂಕ್ಷೇಪವಾಗಿ ನಿರೂಪಣಂಗೊಟ್ಟನು



## ೨ನೆಯ ಅಧ್ಯಾಯ

## ವಾಲ್ಮೀಕಿಯು ರಾಮಾಯಣವನ್ನು ರಚಿಸಿದ ಪ್ರಕಾರ

ಈ ಪ್ರಕಾರದಲ್ಲಿ ನಾರದನ ವಾಕ್ಯದಿಂದ ರಘುನಾಥನ ಮಾಹಾತ್ಮ್ಯವನ್ನು ತಿಳಿದು ವಾಕ್ಪ್ರೌಢಿಮೆಯುಳ್ಳವರೆಲ್ಲರಿಗೂ ಉತ್ತಮನಾದ ವಾಲ್ಮೀಕಿಮುನೀಶ್ವರನು ತನ್ನ ಶಿಷ್ಯರನ್ನು ಕೂಡಿಕೊಂಡು ನಾರದಮುನೀಶ್ವರನಿಗೆ ಅನೇಕ ಉಪಚಾರಗಳಿಂದ ಸತ್ಕಾರವನ್ನು ಮಾಡಿದನು, ನಾರದ ಮುನೀಶ್ವರನು ಆತನ ಪೂಜೆಯನ್ನು ಕೈಗೊಂಡು ಅತನಿಂದ ಕಳುಹಿಸಿಕೊಂಡು ಅಂತರಿಕ್ಷಮಾರ್ಗವಾಗಿ ಬಿಜಯಂಗೈದನು. ಆ ಬಳಿಕ ವಾಲ್ಮೀಕಿಮುನೀಶ್ವರನು ಕ್ಷಣಮಾತ್ರ ಧ್ಯಾನಾಸಕ್ತನಾಗಿ ಗಂಗಾನದಿಯ ಸಮೀಪದಲ್ಲಿರುವ ತಮಸಾನದೀತೀರಕ್ಕೆ ಬಂದನು ಆ ನದಿಯು ಮಹಾಮನೋಹರವಾಗಿ ಪ್ರಸನ್ನವಾದ ತೀರ್ಥವುಳ್ಳದ್ದಾಗಿ ಇಳಿಯುವುದಕ್ಕೆ ರಮ್ಯವಾದ ಸೋಪಾನವುಳ್ಳದ್ದಾಗಿರಲು, ತನ್ನ ಪ್ರಿಯಶಿಷ್ಯನಾದ ಭರದ್ವಾಜಮುನಿಯನ್ನು ಕರೆದು "ಎಲೈ ಭರದ್ವಾಜನೆ, ಈ ತಮಸಾನದೀತೀರ್ಥವು ರಮ್ಯವಾಗಿ ಸತ್ಪುರುಷರ ಮನಸ್ಸಿನೋಪಾದಿಯಲ್ಲಿದೆ; ಕಲಶವಸ್ತ್ರಗಳನ್ನು ಕೊಡು, ಇಲ್ಲಿ ನಾನು ಸ್ನಾನವನ್ನು ಮಾಡಬೇಕು" ಎಂದು ಹೇಳಿದನು. ಅನಂತರ ಆ ನದೀತೀರದಲ್ಲಿ ಮನೋಹರವಾದ ವನದಲ್ಲಿ ವಿಲಾಸಾರ್ಥವಾಗಿ ಸಂಚರಿಸುತ್ತ ಸಮೀಪದಲ್ಲಿ ಅತಿಮಧುರಸ್ವರವುಳ್ಳ ದಂಪತಿಗಳಾದ ಕ್ರೌಂಚಪಕ್ಷಿಗಳೆರಡನ್ನು ಕಂಡು ವಿನೋದದಿಂದ ನೋಡುತ್ತಿದ್ದನು; ಆಗ ಒಬ್ಬ ಬೇಡನು ಬಂದು ಆ ಎರಡು ಪಕ್ಷಿಗಳೊಳಗೆ ಪುರುಷಪಕ್ಷಿಯನ್ನು ಹೊಡೆಯಲು ಅದು ಘಾಯವಡೆದು ಶರೀರವೆಲ್ಲವೂ ರಕ್ತಮಯವಾಗಿ ಭೂಮಿಯಲ್ಲಿ ಹೊರಳುತ್ತಿತ್ತು; ಹೆಣ್ಣುಪಕ್ಷಿಯು, ಕೆಂಪಾದ ಕೊಕ್ಕುಳ್ಳದ್ದಾಗಿ ಮದಿಸಿದ್ದಂಥ ತನ್ನ ಪುರುಷಪಕ್ಷಿಯು ನೆಲದಲ್ಲಿ ಹೊರಳುತ್ತಿದ್ದುದನ್ನು ಕಂಡು, ಪುರುಷವಿಯೋಗದಿಂದ ಹಂಬಲಿಸುತ್ತಿತ್ತು; ಅತಿಕೃಪಾಳುವಾಗಿ ಧರ್ಮಾತ್ಮನಾದ ವಾಲ್ಮೀಕಿಮುನೀಶ್ವರನು ಅದನ್ನು ಕಂಡು ಮನಸ್ಸು ಕರಗಿ ಆ ಕಿರಾತನು ನಿರಪರಾಧಿಯಾದ ಪಕ್ಷಿಯನ್ನು ಕೊಂದದ್ದು ಬಹಳ ಅನ್ಯಾಯವೆಂದು ಆ ಹೆಣ್ಣುಪಕ್ಷಿಯನ್ನು ಸಂತವಿಟ್ಟು ಕಿರಾತನನ್ನು ನೋಡಿ—

**ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಸ್ಸಮಾಃ ॥**
**ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಮ್ ॥**

ಎಂದು ಕೋಪದಿಂದ ನುಡಿದನು. ಈ ಶ್ಲೋಕಕ್ಕೆ—

"ಎಲೈ ಕಿರಾತನೆ, ದಂಪತಿಗಳಾದ ಕ್ರೌಂಚಪಕ್ಷಿಗಳೆರಡೂ ಕಾಮಮೋಹಿತಗಳಾಗಿ ಆನಂದದಲ್ಲಿರುವಾಗ ಯಾವ ಕಾರಣವೂ ಇಲ್ಲದೆ ಪುರುಷಪಕ್ಷಿಯನ್ನು ಕೊಂದೆಯಲ್ಲಾ! ಆದಕಾರಣ ನೀನು ಜಗತ್ತಿನಲ್ಲಿ ಬಹುಕಾಲಪರ್ಯಂತ ಪ್ರತಿಷ್ಠೆಯನ್ನು ಹೊಂದಲಾರೆ" ಎಂದು ಒಂದರ್ಥವೂ—

"ಎಲೈ ಲಕ್ಷ್ಮೀದೇವಿಗೆ ಆವಾಸಸ್ಥಾನವಾದ ರಘುನಾಥನೆ, ನೀನು ಈ ಕ್ರೌಂಚಪಕ್ಷಿಗಳಹಾಗೆ ಕೂಡಿರುವ ರಾವಣ ಮಂಡೋದರಿಗಳಲ್ಲಿ ಅತಿಕಾಮುಕನಾದ ರಾವಣನನ್ನು ಕೊಂದು ಜಗತ್ತಿನಲ್ಲಿ ಬಹುಕಾಲಪರ್ಯಂತವಾಗಿ ಪ್ರತಿಷ್ಠೆಯನ್ನು ಪಡೆಯಲುಳ್ಳವನು!" ಎಂದು ಮತ್ತೊಂದರ್ಥವೂ ಸೂಚಿತವಾಗಿದೆ.

ಹೀಗೆ ಆ ಕಿರಾತನನ್ನು ನಿಷ್ಠುರವಾಗಿ ನುಡಿದು, ಘಾಯವಡೆದ ಪಕ್ಷಿಗಾಗಿ ಶೋಕದಿಂದ ಮನಸ್ಸಿನಲ್ಲಿ ಚಿಂತಿಸುತ್ತ ಆ ಹೆಣ್ಣುಪಕ್ಷಿಯ ದೈನ್ಯವನ್ನು ಕಂಡು ಆ ಕಿರಾತನನ್ನು ನಿಷ್ಠುರೋಕ್ತಿಯಿಂದ ನುಡಿದದ್ದು ಒಂದು ಗ್ರಂಥವಾಯಿತೆಂದು ತಿಳಿದು ತನ್ನ ಶಿಷ್ಯನಾದ ಭರದ್ವಾಜನನ್ನು ಕುರಿತು "ಎಲೈ ಭರದ್ವಾಜನೆ, ಒಂದೊಂದು ಪಾದಕ್ಕೆ ಎಂಟೆಂಟು ಅಕ್ಷರವಾಗಿ ಅಂಥ ಪಾದಗಳು ನಾಲ್ಕು ಸಮಾಕ್ಷರಗಳಾಗಿ ತಂತಿಗಳ ಲಯಕ್ಕೆ ಸರಿಬಂದಿರುವುದರಿಂದ ಶೋಕದಿಂದ ನುಡಿದದ್ದೇ ಒಂದು ಶ್ಲೋಕವಾಯಿತು" ಎಂದು ನುಡಿದನು

ಆತನು ತನ್ನ ಗುರುವಾದ ವಾಲ್ಮೀಕಿಮುನೀಶ್ವರನಿಂದ ನಿರ್ಮಿತವಾದ ಆ ವಾಕ್ಯವು ದೈವಾಧೀನದಿಂದ ಗ್ರಂಥವಾದದ್ದಕ್ಕೆ ಅತಿ ಸಂತೋಷಪಟ್ಟು ಗುರುವಾಕ್ಯವನ್ನು ಅಂಗೀಕರಿಸಿ ಮಹಾಪ್ರಸಾದವೆಂದು ಆ ಗ್ರಂಥವನ್ನು ಪಾರಮಾಡುತ್ತಿದ್ದನು ತನ್ನ ಮಾತನ್ನು ಅಂಗೀಕರಿಸಿದ ಶಿಷ್ಯನನ್ನು ಕಂಡು ವಾಲ್ಮೀಕಿಮುನಿಯು ಅತ್ಯಂತ ಸಂತೋಷಯುಕ್ತನಾಗಿ ಆತನನ್ನು ಕರೆದು 'ಎಲೈ ಭರದ್ವಾಜನೆ, ಈ ತಮಸಾನದೀತೀರದಲ್ಲಿ ಕಮಂಡಲುವನ್ನಿರಿಸು; ನಾರುಬಟ್ಟೆಯನ್ನು ತೆಗೆದುಕೊಂಡು ಬಾ; ಈ ತೀರ್ಥದಲ್ಲಿ ಸ್ನಾನಮಾಡಬೇಕು" ಎಂದು ಆಜ್ಞಾಪಿಸಿದನು

ಆ ಮಾತನ್ನು ಕೇಳಿ ಭರದ್ವಾಜಮುನಿಯು ಅತ್ಯಂತ ವಿನಯದಿಂದ ಬಂದು ನಾರುಬಟ್ಟೆಗಳನ್ನು ಕೊಡಲು ಆತನು ತಮಸಾನದೀತೀರದಲ್ಲಿ ಸ್ನಾನವನ್ನು ಮಾಡಿ ವಸ್ತ್ರಗಳನ್ನುಟ್ಟುಕೊಂಡು ಬ್ರಹ್ಮಯಜ್ಞ ಮಾಧ್ಯಾಹ್ನಿಕ ಜಪ ತಪ ಮೊದಲಾದ ನಿತ್ಯಕರ್ಮಾನುಷ್ಠಾನಗಳನ್ನು ತೀರಿಸಿಕೊಂಡು, ಭರದ್ವಾಜಮುನಿಯು ಕಮಂಡಲದಲ್ಲಿ ಉದಕವನ್ನು ತುಂಬಿಕೊಂಡು ಸಂಗಡ ಬರಲು, ತನ್ನ ಆಶ್ರಮಕ್ಕೆ ಬಂದು ಸುಖವಾಗಿ ಕುಳಿತುಕೊಂಡು ಕೆಲವು ಧರ್ಮಪ್ರಸಂಗಗಳನ್ನು ಹೇಳಿ ಆ ಬಳಿಕ ಧ್ಯಾನಾಸಕ್ತನಾಗಿದ್ದನು.

ಆ ಸಮಯದಲ್ಲಿ ಸಮಸ್ತಲೋಕಗಳಿಗೂ ಕರ್ತನಾದ ಬ್ರಹ್ಮದೇವನು ವಾಲ್ಮೀಕಿಮುನೀಶ್ವರನನ್ನು ನೋಡಬೇಕೆಂದು ಆತನ ಸಮೀಪಕ್ಕೆ ಬಂದನು; ಆತನು ಬ್ರಹ್ಮದೇವನನ್ನು ಕಂಡು ಶೀಘ್ರವಾಗಿ ಎದ್ದು ನಿಂತುಕೊಂಡು ಕೈಮುಗಿದುಕೊಂಡು, ವಿನಯದಿಂದಲೂ ಆಶ್ಚರ್ಯದಿಂದಲೂ ಆತನಿಗೆ ಅರ್ಘ್ಯ ಪಾದ್ಯಾಚಮನ ವಂದನೆ ಮೊದಲಾದ ಸತ್ಕಾರಗಳಿಂದ ವಿಧ್ಯುಕ್ತಪ್ರಕಾರದಲ್ಲಿ ಪೂಜೆಯನ್ನು ಮಾಡಿ ನಮಸ್ಕರಿಸಿ, ಮಣೆಯನ್ನು ಕೊಟ್ಟು ಕುಳ್ಳಿರಿಸಿ ಕುಶಲವನ್ನು ಕೇಳುತ್ತ ಆತನ ಅಪ್ಪಣೆಯಿಂದ ತಾನೂ ಸಮೀಪದಲ್ಲಿ ಕುಳಿತುಕೊಂಡನು. ಪೂರ್ವದಲ್ಲಿ ತಾನು ನೋಡಿದ ಪಕ್ಷಿಯ ಶೋಕವನ್ನು ನೆನೆದು ಆ ಪಾಪಿಷ್ಠನಾದ ಕಿರಾತನು ಮನೋಹರವಾಗಿ ಕಿವಿಗಿಂಪಾದ ಸ್ವರಗೈಯುತ್ತಿದ್ದ ಕ್ರೌಂಚಪಕ್ಷಿಯನ್ನು ನಿಷ್ಕಾರಣದಿಂದ ಕೊಂದನಲ್ಲ ಎಂದು ಮನಸ್ಸಿನಲ್ಲಿ ಚಿಂತಿಸುತ್ತ ಅಂತರಂಗದಲ್ಲಿ ಶೋಕವನ್ನು ಮಾಡುತ್ತಿದ್ದನು. ಆತನ ಅಂತರಂಗವನ್ನು ತಿಳಿದು ಬ್ರಹ್ಮದೇವನು ಮುಗುಳುನಗೆಯಿಂದ "ಎಲೈ ವಾಲ್ಮೀಕಿಮುನೀಶ್ವರನೆ, ನೀನು ಹೇಳಿದ ವಾಕ್ಯವು ಶ್ಲೋಕವಾಯಿತು; ಅದು ರಘುನಾಥನು ಮುಂದೆ ರಾವಣನನ್ನು ವಧೆಮಾಡುವುದಕ್ಕೆ ಸೂಚನೆ; ನನ್ನ ಛಂದೋದೇವತೆಯಾದ ಸರಸ್ವತಿಯು ನಿನ್ನ ಮುಖದಲ್ಲಿ ಅವತರಿಸಿ ಆ ಶ್ಲೋಕವನ್ನುಚ್ಚರಿಸಿದಳಲ್ಲದೆ ಮತ್ತೊಂದಲ್ಲ; ಆದಕಾರಣ ಲೋಕದಲ್ಲಿ ಅತಿಜ್ಞಾನಿಯಾಗಿ ಧರ್ಮಾತ್ಮನಾಗಿ ಗುಣಶೀಲನಾದ ರಘುನಾಥನ ಚರಿತ್ರವನ್ನು ನೀನು ಹೇಳಿದಂಥ ಶ್ಲೋಕದಿಂದಲೇ ವಿಸ್ತರಿಸು; ನಾರದಮುನೀಶ್ವರನು ಯಾವ ಪ್ರಕಾರದಲ್ಲಿ ರಘುನಾಥನ ಚರಿತ್ರವನ್ನು ನಿರೂಪಿಸಿದನೋ ಆ ಪ್ರಕಾರದಲ್ಲೇ ರಹಸ್ಯವಾದ ಆ ಸ್ವಾಮಿಯ ಚರಿತ್ರವನ್ನೂ ಲಕ್ಷ್ಮಣನ ಮಹಿಮೆಯನ್ನೂ ಸೀತಾದೇವಿಯ ಸದ್ವರ್ತನೆಗಳನ್ನೂ ಲೋಕದಲ್ಲಿ ವಿಸ್ತರಿಸು; ರಹಸ್ಯ

ವಾಗಿ ತಿಳಿಯಲಾಗದ ಅವರ ಚರಿತ್ರೆಗಳು ನಿನಗೆ ಪ್ರಕಾಶವಾಗುವುವು, ನೀನು ಮಾಡುವ ಕಾವ್ಯದಲ್ಲಿ ಒಂದು ಮಾತಾದರೂ ಸುಳ್ಳಾಗಲಾರದು, ಆದ್ದರಿಂದ ಅತಿಪವಿತ್ರವಾದ ರಾಮಕಥೆಯನ್ನು ಗ್ರಂಥಗಳಿಂದ ಪ್ರಕಾಶ ಮಾಡಿದರೆ, ಆ ಕಾವ್ಯವು ರಾಮಕಥೆಯಾದ ಕಾರಣ ಈ ಭೂಲೋಕದಲ್ಲಿ ಪರ್ವತಗಳೂ ಗಂಗಾದಿಪುಣ್ಯನದಿಗಳೂ ಎಷ್ಟುದಿವಸಗಳಿರುವುವೋ ಅಷ್ಟುಪರ್ಯಂತವೂ ಈ ಭೂಲೋಕದಲ್ಲಿ ಅತಿಪ್ರಸಿದ್ಧವಾಗಿರುವುದು ನೀನು ಅದುಪರ್ಯಂತವೂ ಭೂಲೋಕದಲ್ಲಿಯೂ ಸ್ವರ್ಗದಲ್ಲಿಯೂ ನನ್ನ ಲೋಕದಲ್ಲಿಯೂ ನಿತ್ಯವಾಗಿ ಇರುತ್ತೀಯೆ!" ಎಂದು ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವಾದನು.

ಆಮೇಲೆ ಶಿಷ್ಯರೊಡನೆ ವಾಲ್ಮೀಕಿಮುನೀಶ್ವರನು ಅತ್ಯಂತ ಆಶ್ಚರ್ಯಪಡುತ್ತಿರಲು ಭರದ್ವಾಜಮುನೀಶ್ವರನೇ ಮೊದಲಾದ ಶಿಷ್ಯರೆಲ್ಲರೂ ಅತ್ಯಂತ ಪ್ರೀತಿಯಿಂದ ಮತ್ತೆಮತ್ತೆ ಆ ಶ್ಲೋಕವನ್ನು ಪಠನಮಾಡುತ್ತಿದ್ದರು, ಆದಕಾರಣ ಬ್ರಹ್ಮದೇವರ ಅಪ್ಪಣೆಯಿಂದ ಸರಸ್ವತೀದೇವಿಯು ಬಂದು ನಿರೂಪಿಸಿದ ಸಮಾಕ್ಷರಗಳುಳ್ಳ ಶ್ಲೋಕವೇ ಲೋಕದಲ್ಲಿ ಗ್ರಂಥಬದ್ಧವಾಯಿತು. ಆಮೇಲೆ ವಾಲ್ಮೀಕಿಮುನೀಶ್ವರನು ಇಂಥ ಶ್ಲೋಕಗಳಿಂದಲೇ ರಾಮಾಯಣಕಥೆಯನ್ನು ಕಾವ್ಯವಾಗಿ ಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಉತ್ಕೃಷ್ಟವಾದ ಅರ್ಥಗರ್ಭಿತಗಳಾದ ಪದಗಳುಳ್ಳವಾಗಿ, ಮನೋಹರವಾದ ಗ್ರಂಥಗಳಿಂದ ರಾಮಚರಿತ್ರವನ್ನು ಕಾವ್ಯವಾಗಿ ಮಾಡಿದನು. ಆದ್ದರಿಂದ ಸಮಾಸಸಂಧಿಗಳೊಡನೆ ಕೂಡಿ ಮಾಧುರ್ಯಯುಕ್ತ ಅರ್ಥಗಳುಳ್ಳ ವಾಕ್ಯಗಳಿಂದ ವಾಲ್ಮೀಕಿಮುನೀಶ್ವರನಿಂದ ನಿರ್ಮಿಸಲ್ಪಟ್ಟ, ದಶಕಂಠನ ವಧೆಯಿಂದ ಕೂಡಿರುವ ರಘುನಾಥನ ಚರಿತ್ರವನ್ನು ಏಕಾಗ್ರಚಿತ್ತದಲ್ಲಿ ಕೇಳುವವರು ಕೃತಾರ್ಥರಾಗುವರು.



### ೩ ನೆಯ ಅಧ್ಯಾಯ

## ರಾಮಾಯಣ ಕಥಾವೃತ್ತಾಂತಗಳು

ಅನಂತರ ವಾಲ್ಮೀಕಿಮುನಿಯು ನಾರದಮುನಿಯ ವಾಕ್ಯದಿಂದಲೂ ಬ್ರಹ್ಮದೇವನ ವರದಿಂದಲೂ ಸಕಲಾರ್ಥಪ್ರತಿಪಾದಕವಾಗಿ ಸಂಕ್ಷೇಪವಾಗಿದ್ದ ರಾಮಕಥೆಯನ್ನು ಸವಿಸ್ತಾರವಾಗಿಯೂ ವ್ಯಕ್ತವಾಗಿಯೂ ಹೇಳುವದಕ್ಕುದ್ಯೋಗಿಸಿ ಸ್ನಾನವನ್ನು ಮಾಡಿ ದರ್ಭಾಸನವನ್ನು ಹಾಕಿಕೊಂಡು ಮೂಡಲುಮುಖವಾಗಿ ಕುಳಿತುಕೊಡು ಧ್ಯಾನವನ್ನು ಮಾಡಿದನು. ರಾಮ ಲಕ್ಷ್ಮಣ ಸೀತಾದೇವಿ ದಶರಥರಾಯ ಮೊದಲಾದವರ ನುಡಿ ಚಾರಿತ್ರ ಮೊದಲಾದ ವೃತ್ತಾಂತಗಳನ್ನೂ, ಸೀತಾಲಕ್ಷ್ಮಣಸಮೇತನಾಗಿ ಶ್ರೀರಾಮನು ವನವಾಸಕ್ಕೆ ಹೋಗಿ ರಾಕ್ಷಸವಧೆಯನ್ನು ಮಾಡಿ ಸೀತಾದೇವಿಯನ್ನು ಕರೆದುಕೊಂಡು ಅಯೋಧ್ಯಾಪಟ್ಟಣಪ್ರವೇಶಮಾಡಿದ ಪರ್ಯಂತವಾದ ಸಕಲ ವೃತ್ತಾಂತಗಳನ್ನೂ, ಧ್ಯಾನಯೋಗಸಾಮರ್ಥ್ಯದಿಂದಲೇ ಅಂಗೈಯಲ್ಲಿರುವ ನೆಲ್ಲೀಕಾಯಿಯಂತೆ ತಿಳಿದು ಧರ್ಮಾರ್ಥಕಾಮಮೋಕ್ಷಗಳಿಂದ ಪರಿಪೂರ್ಣವಾಗಿ ಪೂರ್ವದಲ್ಲಿ ದೇವರ್ಷಿಯಾದ ನಾರದಮುನೀಶ್ವರನು ಹೇಳಿದ ಶ್ರೀರಾಮಚರಿತ್ರವನ್ನು ವಿಸ್ತರಿಸಿ, ರಘುನಾಥನ ಅವತಾರ ಮೊದಲಾಗಿ ಜಗತ್ಪ್ರಖ್ಯಾತವಾದ ಆತನ ಚರಿತ್ರಗಳನ್ನು ಸಮಸ್ತ ಜನರಿಗೂ ತಿಳಿಯುವಂತೆ ಮಧುರಪದಗಳಿಂದ ನುಡಿದನು.

ರಾಮಚರಿತ್ರದಲ್ಲಿ ಶ್ರೀರಾಮನ ಕ್ಷಮೆದಮೆಗಳು, ಆತನ ಸದ್ವರ್ತನೆಗಳು, ಆತನ ವಿಚಿತ್ರವಾದ ಸತ್ಕಥೆಗಳು, ಆತನು ವಿಶ್ವಾಮಿತ್ರನ ಯಾಗಕ್ಕೆ ಸಹಾಯವಾದ ವೃತ್ತಾಂತ, ಜನಕರಾಯನ ಮನೆಯಲ್ಲಿ

ಬಿಲ್ಲನ್ನು ಮುರಿದು ಸೀತಾದೇವಿಯನ್ನು ವಿವಾಹವಾಗಿ ಬರುವ ಮಾರ್ಗದಲ್ಲಿ ಪರಶುರಾಮನೊಡನೆ ಸಂಭಾಷಣೆಮಾಡಿದ ವೃತ್ತಾಂತ, ದಶರಥರಾಯನು ಆತನ ವಿನಯಾದಿಗುಣಗಳನ್ನು ಕಂಡು ಆತನಿಗೆ ಪಟ್ಟಾಭಿಷೇಕಮಾಡಬೇಕೆಂದು ಯತ್ನ ಮಾಡಿದುದನ್ನು ಕೇಳಿ ಕೈಕೇಯಿದೇವಿಯು ಅದಕ್ಕೆ ವಿಘ್ನಮಾಡಿ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದ ವೃತ್ತಾಂತ, ಆತನು ತನ್ನ ಸಂಗಡ ಪ್ರಧಾನಿಗಳೂ ಪುರಜನಗಳೂ ಬರಲು ಗಂಗಾತೀರಕ್ಕೆ ಹೋಗಿ ಗುಹನೊಡನೆ ಸಖ್ಯವನ್ನು ಮಾಡಿಕೊಂಡು ಅವರೆಲ್ಲರನ್ನೂ ರಥಸಾರಥಿಸಹಿತವಾಗಿ ತಿರುಗಿ ಕಳುಹಿಸಿದ ವೃತ್ತಾಂತ, ದಶರಥರಾಯನು ಪುತ್ರಶೋಕದಿಂದ ಸ್ವರ್ಗಸ್ಥನಾದದ್ದು, ರಘುನಾಥನು ಗಂಗೆಯನ್ನು ದಾಟಿ ಭರದ್ವಾಜಮುನಿಯ ಆಶ್ರಮಕ್ಕೆ ಹೋಗಿ ಆತನ ಅಪ್ಪಣೆಯಿಂದ ಚಿತ್ರಕೂಟಕ್ಕೆ ಹೋಗಿ ಅಲ್ಲಿಂದ ಮುಂದೆ ದಂಡಕಾರಣ್ಯವನ್ನು ಪ್ರವೇಶಿಸಿ ವಿರಾಧನೆಂಬ ರಾಕ್ಷಸನನ್ನು ಕೊಂದು ಶರಭಂಗಮುನಿಯನ್ನು ಕಂಡು ಸುತೀಕ್ಷ್ಣಋಷಿಯನ್ನು ಕಾಣಿಸಿಕೊಂಡದ್ದು, ಸೀತಾದೇವಿಗೆ ಅನಸೂಯಾದೇವಿಯು ಕೊಟ್ಟ ಅಂಗರಾಗಾನುಲೇಪನದ ವೃತ್ತಾಂತ, ಶ್ರೀರಾಮನು ಶೂರ್ಪಣಖಿಯ ಕೂಡ ಸಂಭಾಷಣೆಮಾಡಿ ಅವಳ ನಾಸಿಕಾಛೇದನವನ್ನು ಮಾಡಿ ಖರ ದೂಷಣ ತ್ರಿಶಿರರೆಂಬ ರಾಕ್ಷಸರನ್ನು ಕೊಂದ ವೃತ್ತಾಂತ, ರಾವಣನು ಅತಿಕೋಪದಿಂದ ಮಾರೀಚನೆಂಬ ರಾಕ್ಷಸನ ಸಹಾಯದಿಂದ ಬರಲು ಮಾರೀಚನು ಹತನಾದ ವೃತ್ತಾಂತ, ರಾವಣನು ಸೀತಾದೇವಿಯನ್ನಪಹರಿಸಿಕೊಂಡು ಹೋದದ್ದು, ಸೀತಾದೇವಿಯ ವಿಯೋಗದಿಂದ ರಘುನಾಥನು ಹಂಬಲಿಸಿದ್ದು, ರಾವಣನು ಜಟಾಯುವನ್ನು ಕೊಂದದ್ದು, ರಘುನಾಥನು ಸೀತಾದೇವಿಯನ್ನು ಅರಸಿಕೊಂಡು ಹೋಗುವಾಗ ಅವನಿಂದ ಹತನಾದ ಕಬಂಧನೆಂಬ ರಾಕ್ಷಸನ ವೃತ್ತಾಂತ, ರಘುನಾಥನು ಪಂಪಾತೀರಕ್ಕೆ ಬಂದು ಋಷ್ಯಮೂಕದಲ್ಲಿ ಸುಗ್ರೀವನನ್ನು ಕಂಡು ಆತನಿಗೆ ಪಟ್ಟವನ್ನು ಕಟ್ಟಿ ಅಭಯವನ್ನು ಕೊಟ್ಟದ್ದು, ವಾಲಿಯನ್ನು ಕೊಂದ ಸಂಗತಿ, ತಾರಾದೇವಿಯು ಹಂಬಲಿಸಿದ್ದು, ರಘುನಾಥನು ವರ್ಷಾಕಾಲವನ್ನು ಕಳೆದದ್ದು, ರಘುನಾಥನು ಸುಗ್ರೀವನ ಮೇಲೆ ಕೋಪಿಸಿದ್ದು, ಸುಗ್ರೀವನು ಭಯಪಟ್ಟು ಕಪಿನಾಯಕರನ್ನು ಕರೆಕಳುಹಿಸಿ ನಾನಾದಿಕ್ಕುಗಳಿಗೆ ಕಳುಹಿಸಿದ್ದು, ರಘುನಾಥನು ಹನುಮಂತನ ಕೈಯಲ್ಲಿ ಸೀತಾದೇವಿಯ ಮುದ್ರೆಯುಂಗುರವನ್ನು ಕಳುಹಿಸುವಿಕೆ, ಕಪಿನಾಯಕರು ದಾರಿಕಾಣದೆ ಸ್ವಯಂಪ್ರಭಾಸ್ಥಾನವೆಂಬ ಬಿಲವನ್ನು ಪ್ರವೇಶಿಸಿ ಶರೀರವನ್ನು ಬಿಡಲು ಯತ್ನಮಾಡುವಾಗ ಸಂಪಾತಿಯದರ್ಶನ ಹನುಮಂತನು ಸಮುದ್ರವನ್ನು ದಾಟುವಾಗ ಮೈನಾಕಪರ್ವತವನ್ನು ಕಂಡು ಸಿಂಹಿಕೆಯೆಂಬ ರಾಕ್ಷಸಿಯನ್ನು ಕೊಂದು ಲಂಕಾಪಟ್ಟಣವನ್ನು ರಾತ್ರಿಯಲ್ಲಿ ಪ್ರವೇಶಿಸಿ ಸೀತಾದೇವಿಯನ್ನು ಕಾಣದೆ ಚಿಂತಿಸಿ, ರಾವಣನ ಮಧುಪಾನಮಂಟಪವನ್ನು ಪ್ರವೇಶಿಸಿ ಅಂತಃಪುರಸ್ತ್ರೀಯರನ್ನು ಕಂಡು, ಅಶೋಕವೆಂಬ ಉದ್ಯಾನವನದಲ್ಲಿ ಸೀತಾದೇವಿಯನ್ನು ಕಂಡು ಕುರುಹಿನ ಮುದ್ರೆಯುಂಗುರವನ್ನು ಕೊಟ್ಟ ವೃತ್ತಾಂತ, ರಾಕ್ಷಸಿಯರು ಸೀತಾದೇವಿಯನ್ನು ಬೆದರಿಸಿದ್ದು, ತ್ರಿಜಟೆಯೆಂಬ ರಾಕ್ಷಸಿಯ ಸ್ವಪ್ನ, ಸೀತಾದೇವಿಯು ಹನುಮಂತನ ಕೈಯಲ್ಲಿ ಕುರುಹಿನ ಚೂಡಾರತ್ನವನ್ನು ಕೊಟ್ಟದ್ದು, ಹನುಮಂತನು ಅಶೋಕವನವನ್ನು ಮುರಿದು ಆ ವನಪಾಲಕರನ್ನು ಕೊಂದು ಬ್ರಹ್ಮಾಸ್ತ್ರದಿಂದ ಕಟ್ಟಲ್ಪಟ್ಟು, ಕಟ್ಟುಬಿಡಿಸಿಕೊಂಡು ಲಂಕಾದಹನಮಾಡಿ ಸಮುದ್ರವನ್ನು ದಾಟಿಬಂದು ಮಧುವನವನ್ನು ಸೂರೆಯಿಟ್ಟು, ಸೀತಾದೇವಿಯು ಕೊಟ್ಟ ಚೂಡಾರತ್ನವನ್ನು ರಘುನಾಥನಿಗೆ ಒಪ್ಪಿಸಿ ಸಂತವಿಟ್ಟದ್ದು, ರಘುನಾಥನು ನಳನಿಂದ ಸಮುದ್ರದಮೇಲೆ ಸೇತುವೆಯನ್ನು ಕಟ್ಟಿಸಿ ಸಮುದ್ರವನ್ನು ದಾಟಿ ಲಂಕಾಪಟ್ಟಣವನ್ನು ಮುತ್ತಿಕೊಂಡು ವಿಭೀಷಣನನ್ನು ಕಂಡು ಆತನ ಕೂಡ ಸ್ನೇಹವನ್ನು ಮಾಡಿಕೊಂಡು ರಾವಣನನ್ನು ಕೊಲ್ಲುವ ಉಪಾಯವನ್ನು ವಿಚಾರಿಸಿ ಕುಂಭಕರ್ಣ ಇಂದ್ರಜಿತ್ತು ರಾವಣ ಮೊದಲಾದವರನ್ನು ಕೊಂದು ಸೀತಾದೇವಿಯನ್ನು ಕಂಡು

ವಿಭೀಷಣನಿಗೆ ಪಟ್ಟಾಭಿಷೇಕವನ್ನು ಮಾಡಿ, ಕುಬೇರನ ಪುಷ್ಪಕವಿಮಾನದಲ್ಲಿ ಸೀತಾಸಮೇತನಾಗಿ ಅಯೋಧ್ಯಾಪಟ್ಟಣಕ್ಕೆ ಬಂದು ಪಟ್ಟಾಭಿಷಿಕ್ತನಾಗಿ, ಸಂಗಡ ಬಂದ ಕಪಿಸೇನಾನಾಯಕರನ್ನು ಅವರ ಸ್ಥಾನಕ್ಕೆ ಕಳುಹಿಸಿ ತನ್ನ ರಾಜ್ಯವನ್ನು ಧರ್ಮದಿಂದ ಪರಿಪಾಲಿಸಿಕೊಂಡದ್ದು, ಸೀತಾದೇವಿಯನ್ನು ಪುನಃ ವನದಲ್ಲಿ ಬಿಟ್ಟುಬಂದದ್ದು, ಆ ಬಳಿಕ ರಘುನಾಥನು ಭೂಮಂಡಲದಲ್ಲಿ ನಡಯಿಸಿದ ಚಾರಿತ್ರ ಪ್ರಸಂಗಗಳು, ಉತ್ತರರಾಮಾಯಣದಲ್ಲಿ ಹೇಳಿರುವ ವೃತ್ತಾಂತಗಳು —ಇವು ಮೊದಲಾದ ಸಮಸ್ತ ಧರ್ಮಕಥಾಪ್ರಸಂಗಗಳನ್ನೂ ವಾಲ್ಮೀಕಿಮುನೀಶ್ವರನು ಜಗದ್ಧಿತಾರ್ಥವಾಗಿ ವಿಸ್ತಾರವಾಗಿ ನಿರೂಪಿಸಿದನು



## ೪ ನೆ ಯ ಅ ಧ್ಯಾ ಯ

## ಕು ಶ ಲ ವ ರು ರಾ ಮಾ ಯ ಣ ವ ನ್ನು ಹಾ ಡಿ ದು ದು

ಷಡ್ಗುಣೈಶ್ವರ್ಯಸಂಪನ್ನನಾದ ವಾಲ್ಮೀಕಿಮುನಿಯು, ಜಗದ್ಧಿತಾರ್ಥವಾಗಿ ಭೂಮಿಯಲ್ಲಿ ಅವತರಿಸಿ ಅಯೋಧ್ಯಾಪಟ್ಟಣದಲ್ಲಿ ಪಟ್ಟಾಭಿಷಿಕ್ತನಾಗಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದ ರಘುನಾಥನ ಚರಿತ್ರವನ್ನು ವಿಸ್ತಾರವಾಗಿ ಇಪ್ಪತ್ತುನಾಲ್ಕುಸಾವಿರ ಶ್ಲೋಕಗಳಿಂದ ರಚಿಸಿ, ಐನೂರು ಸರ್ಗಗಳುಳ್ಳ ಆರು ಕಾಂಡಗಳಾಗಿ ಮಾಡಿ, ಉತ್ತರ ರಾಮಾಯಣದಲ್ಲಿ ಮುಂದೆ ಆದಂಥ ವೃತ್ತಾಂತ ವನ್ನು ವಿಸ್ತಾರವಾಗಿ ನಿರೂಪಿಸಿದನು. ಅನಂತರ ಆ ಕಾವ್ಯವನ್ನು ಯಾರಿಗೆ ಉಪದೇಶಮಾಡಿದರೆ ಮುಂದೆ ಲೋಕದಲ್ಲಿ ಪ್ರಚಾರವನ್ನು ಮಾಡುವರೆಂದು ಚಿಂತಿಸಿದನು. ಅನಂತರ ರಘುನಾಥನ ಕುಮಾರರಾಗಿ ಸಮಸ್ತ ರಹಸ್ಯಗಳನ್ನು ಬಲ್ಲವರಾಗಿ ಮುನಿವೇಷವನ್ನು ಧರಿಸಿಕೊಂಡಿದ್ದ ಲವಕುಶ ರನ್ನು ಕಂಡು ಸಮಸ್ತ ವೇದಾರ್ಥಗಳನ್ನೂ ರಘುನಾಥನ ಮಾಹಾತ್ಮ್ಯವನ್ನೂ ಸೀತಾದೇವಿಯ ಚರಿತ್ರವನ್ನೂ ರಾವಣನ ವಧೆಯನ್ನೂ ವಿಸ್ತರಿಸುವ ರಾಮಾಯಣವೆಂಬ ಕಾವ್ಯವನ್ನು ಅವರಿಗೆ ಉಪದೇಶಮಾಡಿದನು.

ಆ ಬಳಿಕ ವಾಚನಮಾಡುವಲ್ಲಿಯೂ ಗಾನಮಾಡುವಲ್ಲಿಯೂ ಮನೋಹರವಾಗಿ, ದ್ರುತ, ಮಧ್ಯಮ, ವಿಲಂಬಿತಗಳೆಂಬ ಪ್ರಮಾಣತ್ರಯಸಿದ್ಧವಾದ್ದಾಗಿ, ನಿಷಾದ ಋಷಭ ಗಾಂಧಾರ ಷಡ್ಜ ಮಧ್ಯಮ ಧೈವತ ಪಂಚಮಗಳೆಂಬ ಸಪ್ತಸ್ವರಗಳಿಂದ ಬದ್ಧವಾದುದಾಗಿ, ತಂತಿಯ ಲಯಕ್ಕೆ ಸರಿಯಾಗಿ, ಶೃಂಗಾರರಸ ವೀರರಸ ಕರುಣರಸ ಅದ್ಭುತರಸ ಹಾಸ್ಯರಸ ರೌದ್ರರಸ ಭಯಾನಕರಸ ಭೀಭತ್ಸರಸ ಶಾಂತಿರಸಗಳೆಂಬ ನವರಸಗಳಿಂದ ಭರಿತವಾದ ರಾಮಾಯಣಕಾವ್ಯವನ್ನು ಗಾಂಧರ್ವ ಶಾಸ್ತ್ರದ ತತ್ತ್ವವನ್ನೂ ಭಾವಗಳನ್ನೂ ತಿಳಿದ ಗಂಧರ್ವರೋಪಾದಿಯಲ್ಲಿ ಅತ್ಯಂತ ಸ್ವರಜ್ಞಾನಿಗಳೂ, ರಘುನಾಥಸ್ವಾಮಿಯ ಪ್ರತಿಬಿಂಬಗಳಂತೆ ರೂಪಲಕ್ಷಣಸಂಪನ್ನರೂ ಮಧುರಭಾಷಿಗಳೂ, ರಾಜಪುತ್ರರೂ ಆದ ಲವಕುಶರು ಅತಿಮನೋಹರವಾಗಿ ಗಾನಮಾಡುತ್ತಿದ್ದರು ; ಒಂದು ಸಮಯದಲ್ಲಿ ಪರಮಾತ್ಮಜ್ಞಾನವುಳ್ಳ ಸತ್ಪುರುಷರಾದ ಬ್ರಹ್ಮಋಷಿಗಳ ಸಭೆಯಲ್ಲಿ ವಾಲ್ಮೀಕಿ ಮುನೀಶ್ವರನು ಉಪದೇಶಮಾಡಿದ ಪ್ರಕಾರದಲ್ಲಿ ರಾಮಾಯಣಕಾವ್ಯವನ್ನು ಕುಶಲವರು ಗಾನಮಾಡಿದರು. ಸಮಸ್ತ ಋಷಿಗಳೂ ಆ ಕಥೆಯನ್ನು ಕೇಳಿ ಆನಂದಬಾಷ್ಪಗಳಿಂದ ಕೂಡಿ ಮನೋಹರವಾಗಿದೆಯೆಂದು ಸಂತೋಷಪಟ್ಟು ಅತ್ಯಂತಹರ್ಷದಿಂದ "ಇವರು ರಾಮಾಯಣ ಶ್ಲೋಕಗಳನ್ನು ಗಾನಮಾಡುವ ಚಾತುರ್ಯವನ್ನು ಏನೆಂದು ಹೇಳಬೇಕು ! ಬಹುಕಾಲದ ವೃತ್ತಾಂತ

ವಾದರೂ ಇವರ ಗಾನಚಾತುರ್ಯದಿಂದ ಆ ಕಾವ್ಯವು ಈಗತಾನೇ ನಿರ್ಮಿತವಾದ ಪ್ರಕಾರದಲ್ಲಿದೆ, ಕವಿಯ ಹೃದಯವನ್ನು ತಿಳಿದು ಶ್ರೀರಾಮಚರಿತ್ರವನ್ನು ಸ್ವರಜ್ಞಾನದಿಂದ ಬಹು ಮನೋಹರವಾಗಿ ಗಾನಮಾಡುತ್ತಾರ" ಎಂದು ಕುಶಲವರನ್ನು ಕೊಂಡಾಡಿದರು, ಆ ಋಷಿಗಳೊಳಗೆ ಒಬ್ಬ ಮುನಿಯು ಸಂತೋಷವಟ್ಟು ಪ್ರೀತಿಯಿಂದ ಅವರಿಗೆ ಒಂದು ಕಮಂಡಲುವನ್ನು ಕೊಟ್ಟನು, ಅತಿಕೀರ್ತಿವಂತನಾದ ಮತ್ತೊಬ್ಬ ಮುನೀಶ್ವರನು ನಾರುಬಟ್ಟೆಗಳನ್ನು ಕೊಟ್ಟನು, ಈ ರೀತಿಯಲ್ಲಿ ಸಮಸ್ತ ಋಷಿಗಳೂ ರಾಮಾಯಣಕಥೆಯನ್ನು ಕೇಳಿ 'ವಾಲ್ಮೀಕಿಮುನಿಯು ಆಶ್ಚರ್ಯವಾದ ಈ ರಾಮಾಯಣಕಥೆಯನ್ನು ನಿರೂಪಿಸಿದನು, ಈ ಕಥೆಯು ಸಮಸ್ತಕವಿಗಳಿಗೂ ಆಧಾರವಾಗಿರುವಂಥಾದ್ದು, ಈ ಕಾವ್ಯವು ಸಮಸ್ತಗಾನಗಳಿಗೂ ಅತಿಪ್ರಸಿದ್ಧವಾಗುವ ರೀತಿಯಲ್ಲಿ ಕುಶಲರಾದ ಕುಶಲವರು ಗಾನಮಾಡಿದರಾದ ಕಾರಣ ವಿನೋದಾರ್ಥವಾಗಿ ಈ ಕಾವ್ಯವನ್ನು ಹೇಳಿದವರಿಗೂ ಕೇಳಿದವರಿಗೂ ದೀರ್ಘಾಯುಷ್ಯವುಂಟಾಗುವುದು, ಈ ಕಾವ್ಯವು ಅತ್ಯಂತ ಐಶ್ವರ್ಯಕರವಾಗಿ ಸಮಸ್ತ ವೇದಾರ್ಥಸಾರವಾಗಿರುವುದು!" ಎಂದು ನುಡಿದರು.

ಒಂದು ಸಲ ಕುಶಲವರು ರಾಜಮಾರ್ಗದ ಚೌಬೀದಿಗಳಲ್ಲಿ ರಾಮಾಯಣವನ್ನು ಗಾನಮಾಡುತ್ತಿರಲು ರಘುನಾಥನು ವಿನೋದಾರ್ಥವಾಗಿ ಬಂದು ಅವರು ಗಾನಮಾಡುವದನ್ನು ಕೇಳಿ ಹರ್ಷದಿಂದ ಆಶ್ಚರ್ಯವಟ್ಟನು. ಅವನು ಕುಶಲವರನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ ಮುನಿವೇಷದಿಂದಿದ್ದ ಕಾರಣ ಅರ್ಘ್ಯಪಾದ್ಯಾಚಮನಮೊದಲಾದ ಸತ್ಕಾರಗಳಿಂದ ಪೂಜೆಯನ್ನು ಮಾಡಿದನು ತಾನು ಮಣಿಖಚಿತ ಸಿಂಹಾಸನದ ಮೇಲೆ ಕುಳಿತುಕೊಂಡು ತಮ್ಮಂದಿರಾದ ಭರತ ಲಕ್ಷ್ಮಣ ಶತ್ರುಘ್ನರನ್ನೂ ಸಮಸ್ತಪ್ರಧಾನಿಗಳನ್ನೂ ಕರೆಯಿಸಿ ಕುಶಲವರನ್ನು ಕುಳ್ಳಿರಿಸಿ ಅವರ ರೂಪಲಾವಣ್ಯ ಗಾನ ಚಾತುರ್ಯವನ್ನು ಕಂಡು ಭರತ ಲಕ್ಷ್ಮಣ ಶತ್ರುಘ್ನರನ್ನು ಕುರಿತು "ಎಲೈ ತಮ್ಮಂದಿರೆ, ಗಂಧರ್ವರ ಹಾಗಿರುವ ಈ ಋಷಿಪುತ್ರರ ಗಾನವನ್ನು ಕೇಳಿರಿ, ಈ ಗಾನವು ವಿಚಿತ್ರಾರ್ಥವುಳ್ಳ ಪದಬಂಧಗಳೊಡನೆ ಕೂಡಿದೆ" ಎಂದು ಸಂತೋಷದಿಂದ ಹೇಳಿದನು. ಕುಶಲವರು ತಂತಿಗಳ ಲಯಕ್ಕೆ ಸರಿಬರುವ ಕ್ರಮದಲ್ಲಿಯೂ ಗೀತಾರ್ಥವು ಪ್ರಕಟಿತವಾಗುವ ರೀತಿಯಲ್ಲಿಯೂ ಆಸ್ಥಾನದಲ್ಲಿದ್ದ ಸಮಸ್ತ ಜನಗಳಿಗೂ ಸಂತೋಷವಾಗುವ ಪ್ರಕಾರದಲ್ಲಿಯೂ ಕಿವಿಗಿಂಪಾಗಿ ಮನೋಹರವಾಗಿ ಗಾನಮಾಡುತ್ತಿದ್ದರು, ರಘುನಾಥನು ತನ್ನ ತಮ್ಮಂದಿರನ್ನು ಕರೆದು "ಈ ಮುನಿ ಕುಮಾರರು ತಪಸ್ವಿಗಳಾದರೂ ರಾಜಕುಮಾರರ ಲಕ್ಷಣವುಳ್ಳವರಾಗಿದ್ದಾರೆ, ಇವರು ಮಾಡುವ ಗಾನವು ನನ್ನ ಚರಿತ್ರವಾಗಿ ಪ್ರತ್ಯಕ್ಷವಾಗಿ ತೋರುತ್ತಿದೆ!" ಎಂದು ನುಡಿದನು. ಕುಶಲವರು ಗಾನ ಮಾರ್ಗದಲ್ಲಿ ಗಾನಮಾಡುತ್ತಿರಲು ರಾಮನು ಹರ್ಷದಿಂದ ಅವರ ಗಾನವನ್ನು ಕೇಳಬೇಕೆಂದು ಅತ್ಯಂತ ಇಚ್ಛೆಯುಳ್ಳವನಾದನು. ಕುಶಲವರು ಮುಂದೆ ಬರುವ ಪ್ರಕಾರದಲ್ಲಿ ಗಾನಮಾಡಿದರು.



## ೫ನೆಯ ಅಧ್ಯಾಯ

## ಅಯೋಧ್ಯಾಪಟ್ಟಣದ ವರ್ಣನೆ

ವೈವಸ್ವತಮನುವಿನಿಂದ ಮೊದಲುಗೊಂಡು ಜಯಶಾಲಿಗಳಾಗಿ ಸಮಸ್ತಭೂಮಿಯನ್ನು ಆಳುತ್ತಿದ್ದ ಅರಸರುಳ್ಳ, ಸಮುದ್ರವನ್ನು ಅಗೆದು ಅರವತ್ತು ಸಾವಿರ ಮಕ್ಕಳಿಂದೊಡಗೂಡಿದ ಸಗರಚಕ್ರವರ್ತಿ ಮೊದಲಾದ ಮಹಾತ್ಮರುಳ್ಳ ಇಕ್ಷ್ವಾಕುವಂಶದವರ ಚರಿತ್ರವು ಈ ರಾಮಾಯಣದಲ್ಲಿ

ಹೇಳಲ್ಪಡುವುದು, ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನುಂಟು ಮಾಡುವ ಸಕಲವೇದಾರ್ಥಗಳ ಸಾರವಾದ ಈ ಪುಣ್ಯಕಥೆಯನ್ನು ಜಗದ್ಧಿತಾರ್ಥವಾಗಿ ವಿಸ್ತರಿಸುವೆನು ಎಲೈ ಜನಗಳಿರಾ, ನೀವು ಅಸೂಯೆಯಿಲ್ಲದೆ ಕೇಳಿ ಕೃತಾರ್ಥರಾಗಿರಿ.

ಮಹಾಸಂಪತ್ತುಗಳಿಂದ ಸಂಪೂರ್ಣವಾಗಿ ಅತಿಮನೋಹರವಾದ ಕೋಸಲದೇಶದಲ್ಲಿ, ಸರಯೂನದೀತೀರದಲ್ಲಿ ಧನಧಾನ್ಯಸಮೃದ್ಧಿಯುಳ್ಳ ಅಯೋಧ್ಯಾ ಎಂಬ ಪ್ರಸಿದ್ಧವಾದ ಮಹಾ ಪಟ್ಟಣವೊಂದುಂಟು, ಆ ಪಟ್ಟಣವು ಪೂರ್ವದಲ್ಲಿ ವೈವಸ್ವತಮನುವಿನಿಂದ ನಿರ್ಮಿಸಲ್ಪಟ್ಟದ್ದು. ಅದು ಹನ್ನೆರಡು ಗಾವುದ ನೀಳವಾಗಿ ಮೂರು ಗಾವುದ ಅಗಲವಾಗಿ ಇದ್ದಿತು ಪ್ರಸಿದ್ಧವಾದ ಛತ್ರದ ಗದ್ದೆಗಳುಳ್ಳದ್ದಾಗಿ, ವಿಶಾಲವಾದ ರಾಜಬೀದಿಗಳಿಂದ ಮನೋಹರವಾಗಿ, ಕದಗಳೂ ಹೆಬ್ಬಾಗಿಲುಗಳೂ ನಡುವಣ ಅಂಗಣಗಳೂ ಉಳ್ಳ ಉಪ್ಪರಿಗೆಗಳಿಂದಲೂ ಅನೇಕ ಶಿಲ್ಪಿಗಳಿಂದ ನಿರ್ಮಿತವಾದ ಫಿರಂಗಿ ಮೊದಲಾದ ಸೂತ್ರಾಯುಧಗಳಿಂದಲೂ ವಂಶಾವಳಿ ಬಿರುದಾವಳಿಗಳನ್ನು ಕೊಂಡಾಡುವ ಪಾಠಕಜನ ರಿಂದಲೂ ತುಂಬಿದ್ದಿತು ಅತ್ಯಂತೈಶ್ವರ್ಯಯುಕ್ತವಾಗಿ ಕಾಂತಿಯುಳ್ಳದ್ದಾಗಿ ಉನ್ನತವಾದ ಮುಗಿಲಟ್ಟಣೆಗಳಿಂದಲೂ ಟಕ್ಕೆಯಗಳಿಂದಲೂ ಹಂದಿಗೊರಡುಗಳಿಂದಲೂ ನಾಟ್ಯಸ್ತ್ರೀಯರಿಂದಲೂ ನರ್ತನನಾಯಕರಿಂದಲೂ ಮನೋಹರವಾಗಿ, ಅತ್ಯುನ್ನತವಾದ ಕೋಟೆಯಿಂದ ರಮಣೀಯವಾಗಿ, ದಾಟಲು ಶಕ್ಯವಲ್ಲದ ಅತ್ಯಂತ ಗಂಭೀರವಾದ ಅಗಳುಗಳಿಂದಲೂ ದುರ್ಗಗಳಿಂದಲೂ ಆನೆ ಕುದುರೆ ಒಂಟೆಗಳಿಂದಲೂ ಕಪ್ಪವನ್ನು ತಂದುಕೊಡುವ ನಾನಾ ದೇಶಗಳ ಅರಸರಿಂದಲೂ ನಾನಾ ದೇಶದಿಂದ ಬಂದ ಬೇಹುಗಾರರಿಂದಲೂ ರತ್ನಖಚಿತಗಳಾದ ಉಪ್ಪರಿಗೆಗಳಿಂದೂ ಕ್ರೀಡಾಪರ್ವತ ಗಳಿಂದಲೂ ಶಯ್ಯಾಗೃಹಗಳಿಂದಲೂ ಪ್ರಕಾಶಿಸುತ್ತ ದೇವೇಂದ್ರನ ಅಮರಾವತಿಯ ಹಾಗೆ ತೋರುತ್ತಿತ್ತು. ಆ ನಗರವು ಭಯಂಕರಾಕಾರರಾದ ದ್ವಾರಪಾಲಕರುಳ್ಳದ್ದಾಗಿ, ಚತುರಂಗದ ಹಲಗೆಯ ಹಾಗೆ ಇರುವ ಚೌಬೀದಿಗಳಿಂದಲೂ ಅತ್ಯಂತ ರೂಪಲಾವಣ್ಯಗಳುಳ್ಳ ಸ್ತ್ರೀಯರಿಂದಲೂ ನವರತ್ನ ಗಳಿಂದ ಪೂರ್ಣವಾದ ಮೇಲುಮಾಳಿಗೆ ಮನೆಗಳುಳ್ಳ ಬೀದಿಗಳಿಂದಲೂ ತುಂಬಿದ್ದಿತು. ಕಬ್ಬಿನ ಹಾಲಿನೋಪಾದಿಯಲ್ಲಿ ಸ್ವಾದುವಾದ ಉದಕವುಳ್ಳ ಕೊಳಗಳುಳ್ಳದ್ದಾಗಿ, ಭೇರಿ ಮದ್ದಳೆ ನಿಸ್ಸಾಳ ವೀಣೆ ವಾದ್ಯಧ್ವನಿಗಳಿಂದ ಅಪೂರ್ವವಾಗಿ, ತಪಸ್ವಿಗಳಿಂದಲೂ ಸಿದ್ಧರಿಂದಲೂ ಸಿಬಿಡವಾಗಿ, ದೇವಲೋಕದ ರೀತಿಯಲ್ಲಿ ಅತಿಸೌಖ್ಯಕರವಾದ ಮನೆಗಳುಳ್ಳದ್ದಾಗಿ, ಉತ್ತಮರಾದ ಭಟರ ಸಮೂಹವುಳ್ಳ ದ್ದಾಗಿ, ವನಾಂತರಗಳಲ್ಲಿರುವ ಅತಿಭಯಂಕರವಾದ ಸಿಂಹವ್ಯಾಘ್ರಗಳನ್ನೂ ಗರ್ಜಿಸುವ ಕಾಡುಹಂದಿ ಮೊದಲಾದ ದುಷ್ಟಪ್ರಾಣಿಗಳನ್ನೂ ಎಬ್ಬಿಸಿ ಅತಿವೇಗವಾದ ಹಸ್ತಚಾತುರ್ಯಗಳಿಂದಲೂ ಬಾಹುಬಲ ದಿಂದಲೂ ಸಂಹರಿಸುವ ಪರಾಕ್ರಮಿಗಳಿಂದ ಪರಿಪೂರ್ಣವಾದ್ದಾಗಿ, ಅಸಂಖ್ಯಾತರಾದ ಮಹಾರಥಿಕ ರಿಂದ ಇಟ್ಟಣಿಸಿದ್ದಾಗಿ ಸದ್ಗುಣವಂತರೂ ಸಾಂಗವೇದಾಧ್ಯಯನ ಸಂಪನ್ನರೂ ಆಹಿತಾಗ್ನಿಗಳೂ ಅತಿಥಿ ಗಳಿಗೆ ಬೇಡಿದ ವಸ್ತುಗಳನ್ನು ಕೊಡುವಂಥವರೂ ವಸಿಷ್ಠಾದಿ ಮಹಾಮುನಿಗಳಿಗೆ ಸಮಾನರೂ ಸತ್ಯಸಂಧರೂ ಆದ ಬ್ರಾಹ್ಮಣೋತ್ತಮರೂ ಕವಿಜನಗಳೂ ಉಳ್ಳದಾಗಿ ಮೆರೆಯುತ್ತಿತ್ತು! ಅಂಥಾ ಅಯೋಧ್ಯಾಪಟ್ಟಣವನ್ನು ಪರಿಪಾಲಿಸುತ್ತ, ಅತಿ ಪರಾಕ್ರಮಶಾಲಿಯಾದ ದಶರಥಮಹಾರಾಯನು ವಿರಾಜಿಸುತ್ತಿದ್ದನು.



## ೬ನೆಯ ಅಧ್ಯಾಯ

## ದಶರಥನ ರಾಜ್ಯವರ್ಣನೆ

ದಶರಥಮಹಾರಾಯನು ವೇದಾರ್ಥಗಳ ಸಕಲತತ್ತ್ವರಹಸ್ಯಗಳನ್ನೂ ಮುಂದೆ ಬರುವ ವೃತ್ತಾಂತಗಳನ್ನೂ ಬಲ್ಲವನಾಗಿ ಪ್ರಜೆಗಳಿಗೆ ಪ್ರಿಯನಾಗಿ ಅತ್ಯಂತ ತೇಜಸ್ಸುಳ್ಳವನಾಗಿ ವಿಧ್ಯುಕ್ತ ಪ್ರಕಾರದಲ್ಲಿ ಯಾಗಗಳನ್ನು ಮಾಡಿ ಜಿತೇಂದ್ರಿಯನಾಗಿದ್ದನು ಅವನು ಧರ್ಮಿಷ್ಠನಾಗಿ ಇಕ್ಷ್ವಾಕುವಂಶದ ರಾಯರಲ್ಲಿ ಮಹಾಪ್ರಸಿದ್ಧನಾಗಿ ವಸಿಷ್ಠಾದಿ ಮಹಾಮುನಿಗಳಿಗೆ ಸಮಾನವಾದ ಚರಿತ್ರವುಳ್ಳವನಾಗಿ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಪ್ರಸಿದ್ಧ ನಾಗಿದ್ದನು. ಮತ್ತು ಆತನು ಭುಜಬಲಪರಾಕ್ರಮವುಳ್ಳವನಾಗಿ ಸಮಸ್ತ ಶತ್ರು ಸಮೂಹವನ್ನೂ ಜಯಿಸಿ ಧನಧಾನ್ಯಾದಿ ಸಮಸ್ತ ವಸ್ತು ಸಂಗ್ರಹದಿಂದ ದೇವೇಂದ್ರ ಕುಬೇರರಿಗೆ ಸಮಾನನಾಗಿ ಪೂರ್ವದಲ್ಲಿ ವೈವಸ್ವತಮನುವು ಯಾವ ಪ್ರಕಾರದಲ್ಲಿ ಜಗತ್ತನ್ನು ಪರಿಪಾಲಿಸಿ ಮಹಾಕೀರ್ತಿ ವಂತನಾಗಿದ್ದನೋ, ಆ ಪ್ರಕಾರದಲ್ಲಿ ಸಮಸ್ತಭೂಮಂಡಲವನ್ನೂ ಪರಿಪಾಲಿಸುತ್ತಿದ್ದನು, ಈ ಪ್ರಕಾರದಲ್ಲಿ ಮೂರು ಪುರುಷಾರ್ಥಗಳನ್ನೂ ಪರಿಪಾಲಿಸಿ ದೇವೇಂದ್ರನು ಅಮರಾವತಿಯನ್ನು ರಕ್ಷಿಸುವ ರೀತಿಯಲ್ಲಿ ಅಯೋಧ್ಯಾಪಟ್ಟಣವನ್ನು ರಕ್ಷಿಸುತ್ತಿದ್ದನು. ಆಗ ಆ ಪಟ್ಟಣದಲ್ಲಿ ಸಮಸ್ತ ಜನರೂ ಅತ್ಯಂತ ಸಂತುಷ್ಟಚಿತ್ತರಾಗಿ ಧರ್ಮನಿಷ್ಠರಾಗಿ ವೇದಶಾಸ್ತ್ರಾರ್ಥತತ್ತ್ವಜ್ಞರಾಗಿದ್ದರು, ಸಮಸ್ತಜಾತಿಯವರೂ ತಮ್ಮ ತಮ್ಮ ಜಾತ್ಯಾಚಾರಗಳಿಂದಲೇ ನಡೆಯುವಂಥವರಾಗಿ ಸತ್ಯವಾದಿಗಳಾಗಿದ್ದರು, ಆ ಪಟ್ಟಣದಲ್ಲಿ ಒಬ್ಬನಾದರೂ ಅಲ್ಪಾಯುಷ್ಯವುಳ್ಳವನಿರಲಿಲ್ಲ, ಕುಟುಂಬಿಯಲ್ಲದವನೂ ಧನಧಾನ್ಯಗಳು ಮೊದಲಾದ ಇಷ್ಟವಸ್ತುಗಳಿಲ್ಲದವನೂ ಕಾಮಿಯೂ ನಿಂದಿತನೂ ಅಸತ್ಯವನ್ನು ನುಡಿಯುವವನೂ ಒಬ್ಬನೂ ಇರಲಿಲ್ಲ, ವಿದ್ವಾಂಸನಲ್ಲದೆ ನಾಸ್ತಿಕನಾಗಿ "ಧರ್ಮವಿಲ್ಲ ದೈವವಿಲ್ಲ" ಎಂಬುವವನೇ ಇರಲಿಲ್ಲ, ಅತ್ಯಂತ ವ್ಯಗ್ರಚಿತ್ತನಾಗಿ ಶಿಷ್ಟನಲ್ಲದೆಯೂ ಜಿತೇಂದ್ರಿಯನಲ್ಲದೆಯೂ ಇದ್ದವನು ಒಬ್ಬನೂ ಇರಲಿಲ್ಲ; ಈ ಪ್ರಕಾರದಲ್ಲಿ ಸಮಸ್ತರಾದ ಸ್ತ್ರೀಪುರುಷರೂ ಧರ್ಮಶೀಲರಾಗಿ ನಿಯಮಸ್ಥರಾಗಿದ್ದರು; ಕುಂಡಲವಿಲ್ಲದವನೂ ಕಿರೀಟ ವಿಲ್ಲದವನೂ ಕಂಠಮಾಲೆ ಮೊದಲಾದ ಭೂಷಣಗಳಿಲ್ಲದವನೂ ಅಲ್ಪಭೋಗವನ್ನು ಅನುಭವಿಸು ತ್ತಿದ್ದವನೂ ಮೃಷ್ಟಾನ್ನ ಭೋಜನಗಳಿಲ್ಲದಿದ್ದವನೂ ಸಮಸ್ತ ಸುಗಂಧಾನುಲೇಪನಗಳಿಲ್ಲದಿದ್ದವನೂ ಸತ್ಪಾತ್ರದಲ್ಲಿ ದಾನವನ್ನು ಕೊಡದಿದ್ದವನೂ ಆಹಿತಾಗ್ನಿಯಲ್ಲದವನೂ ಯಜ್ಞಮಾಡದವನೂ ಬಹುಶಾಸ್ತ್ರಾಭ್ಯಾಸವನ್ನುಮಾಡದಿದ್ದವನೂ ಇರಲಿಲ್ಲ; ಮತ್ತು ಆ ಪಟ್ಟಣದಲ್ಲಿ ಜಾತಿಸಂಕರ ವುಳ್ಳವನೇ ಇರಲಿಲ್ಲ, ಸಮಸ್ತಜನಗಳೂ ಜಿತೇಂದ್ರಿಯರಾಗಿ ಧರ್ಮದಲ್ಲಿ ನಿರತರಾಗಿ ಸದಾ ವೇದಾಧ್ಯಯನಪರರಾಗಿ ನಿಷ್ಠೆಯುಳ್ಳವರಾಗಿ ದಾನಪ್ರತಿಗ್ರಹಪರರಾಗಿದ್ದರು; ನಾಸ್ತಿಕನಾಗಿ ಹುಸಿಯನ್ನು ನುಡಿದು ಶಾಸ್ತ್ರಾಭ್ಯಾಸವನ್ನು ಮಾಡದೆ ಅಸೂಯೆಯುಳ್ಳವನಾಗಿ ವಿದ್ವಾಂಸನಲ್ಲದೆ ಮುರಾಸಕ್ತನಾಗಿದ್ದವನೇ ಇಲ್ಲ; ಶಿಕ್ಷಾಕಲ್ಪವ್ಯಾಕರಣಾದಿ ಷಡಂಗಗಳನ್ನು ಅರಿಯದವನೇ ಇಲ್ಲ; ದಾನ ಧರ್ಮಗಳಿಲ್ಲದೆ ಸಹಸ್ರಬ್ರಾಹ್ಮಣಭೋಜನಗಳನ್ನು ಮಾಡಿಸದೆ ಇದ್ದವನೇ ಇಲ್ಲ, ದೀನನಾಗಿ ಚಿಂತೆ ಯಿಂದ ವ್ಯಥೆಪಡುವ ಮನುಷ್ಯನೇ ಇಲ್ಲ; ಐಶ್ವರ್ಯವಿಲ್ಲದೆ ದೀನನಾಗಿ ಕುರೂಪಿಯಾಗಿದ್ದವನೇ ಇಲ್ಲ; ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಯವರೂ ದೇವಪೂಜೆ ಅತಿಥಿಸತ್ಕಾರಗಳನ್ನು

ಮಾಡಿ ವರರು ಮಾಡಿದ ಉಪಕಾರವನ್ನು ಮರೆಯದೆ, ದಾನಶೀಲರಾಗಿ ಪರಾಕ್ರಮಿಗಳಾಗಿ ದೀರ್ಘಾಯುಷ್ಮಂತರಾಗಿ ಧರ್ಮವನ್ನೂ ಸತ್ಯವನ್ನೂ ಆಶ್ರಯಿಸುವಂಥವರಾಗಿ ಮಕ್ಕಳು ಮೊಮ್ಮಕ್ಕಳೊಡನೆ ಕೂಡಿ ಸುಖದಿಂದಿದ್ದರು, ಸಮಸ್ತ ಜಾತಿಗಳವರೂ ತಮ್ಮ ಜಾತಿಧರ್ಮಗಳನ್ನೂ ಬಿಡದೆ ಸ್ವಧರ್ಮದಲ್ಲಿಯೇ ನಿರತರಾಗಿದ್ದರು, ಪೂರ್ವದಲ್ಲಿ ವೈವಸ್ವತಮನುವು ಭೂಮಂಡಲವನ್ನು ರಕ್ಷಿಸಿದ ಪ್ರಕಾರದಲ್ಲಿ, ದಶರಥಮಹಾರಾಯನು ಅಯೋಧ್ಯಾಪಟ್ಟಣದಲ್ಲಿದ್ದು ಕೊಂಡು ಭೂಮಂಡಲವನ್ನು ಪರಿಪಾಲಿಸುತ್ತಿದ್ದನು, ಆ ಪಟ್ಟಣವು ಪ್ರಳಯಕಾಲಾಗ್ನಿಗಳಿಗೆ ಸಮಾನರಾದ ಭಟರಿಂದ ಕೂಡಿ, ಮಹಾತ್ಮರಾದ ಋಷಿಗಳಿಂದ ಪರಿಪೂರ್ಣವಾಗಿ, ಅತ್ಯಂತ ಪರಾಕ್ರಮವುಳ್ಳ ಸಿಂಹಗಳಿಂದ ಗಂಭೀರವಾದ ಗುಹೆಯ ರೀತಿಯಲ್ಲಿ ಒಪ್ಪುತ್ತಿತ್ತು, ಕಾಂಭೋಜ ದೇಶದಲ್ಲಿಯೂ ವನಾಯುಜ ದೇಶದಲ್ಲಿಯೂ ಹುಟ್ಟಿದ ವಾಯುವೇಗವುಳ್ಳ ಉತ್ತಮಾಶ್ವಗಳಿಂದಲೂ ವಿಂಧ್ಯಪರ್ವತದಲ್ಲಿ ಹುಟ್ಟಿದ ಮದ್ದಾನೆಗಳಿಂದಲೂ ಮತಂಗದೇಶದಲ್ಲಿ ಹುಟ್ಟಿದ ಪರ್ವತಾಕಾರವಾದ ಅತಿ ಬಲಶಾಲಿಗಳಾದ ಮತ್ತಗಜಗಳಿಂದಲೂ ಐರಾವತ, ಮಹಾಪದ್ಮ, ಅಂಜನ, ವಾಮನ ಎಂಬ ದಿಗ್ಗಜಗಳ ಕುಲದಲ್ಲಿ ಹುಟ್ಟಿದ ಮದ್ದಾನೆಗಳಿಂದಲೂ, ಭದ್ರ-ಮಂದ್ರ-ಮೃಗ-ಭದ್ರಮಂದ್ರ-ಮೃಗಮಂದ್ರಗಳೆಂಬ ಹೆಸರುಗಳುಳ್ಳ ಪರ್ವತಾಕಾರವಾದ ಮದ್ದಾನೆಗಳಿಂದಲೂ, ಎರಡು ಗಾವುದದವರೆಗೂ ಪರಿಪೂರ್ಣವಾಗಿದ್ದುದರಿಂದ, ಆ ಪಟ್ಟಣವು ಒಬ್ಬರಿಗೂ ಯುದ್ಧದಲ್ಲಿ ಸೋಲಿಸಲು ಸಾಧ್ಯವಲ್ಲದೆ ಇತ್ತು! ಆದಕಾರಣ ಅಯೋಧ್ಯಾಪಟ್ಟಣವೆಂಬ ಹೆಸರಾಯಿತು; ಚಂದ್ರನು ತನ್ನ ತೇಜಸ್ಸಿನಿಂದ ಸಮಸ್ತವಾದ ನಕ್ಷತ್ರಗಳನ್ನೂ ಹೇಗೆ ಅಡಗಿಸಿರುವನೋ, ಆ ಪ್ರಕಾರದಲ್ಲಿ ಸಮಸ್ತ ಶತ್ರುಗಳನ್ನೂ ನಿಗ್ರಹಿಸುತ್ತಿಕೊಂಡು ಸಮಸ್ತ ಜಗತ್ತನ್ನೂ ಪರಿಪಾಲಿಸಿಕೊಂಡು ಅತ್ಯಂತ ದೃಢವಾದ ಹೆಬ್ಬಾಗಿಲುಗಳಿಂದಲೂ ಲಾಳವಿಂಡಿಗೆಗಳಿಂದಲೂ ವಿಚಿತ್ರವಾದ ಮನೆಗಳಿಂದಲೂ ಅತಿಶಯವಾಗಿ ಒಪ್ಪುತ್ತ ಮಾಂಗಲ್ಯವಾಗಿ ಸತ್ಪುರುಷರಿಂದ ಇಟ್ಟಣಿಸಿದ್ದ ಅಯೋಧ್ಯಾಪಟ್ಟಣವನ್ನು ದೇವೇಂದ್ರನಿಗೆ ಸಮಾನನಾದ ದಶರಥಮಹಾರಾಯನು ರಕ್ಷಿಸುತ್ತಿದ್ದನು.



## ೭ನೆಯ ಅಧ್ಯಾಯ

## ದಶರಥನ ರಾಜ್ಯಪರಿಪಾಲನ ಕ್ರಮ

ಈ ಪ್ರಕಾರದಲ್ಲಿ ದಶರಥಮಹಾರಾಯನು ಅಯೋಧ್ಯಾಪಟ್ಟಣದಲ್ಲಿ ರಾಜ್ಯಪರಿಪಾಲನ ಮಾಡಿಕೊಂಡಿರುವಾಗ, ಸಮಸ್ತಮಂತ್ರವಿಚಾರದಲ್ಲಿ ಕುಶಲರೂ ಆ ರಾಯನ ಇಂಗಿತವನ್ನು ಬಲ್ಲವರೂ ಆತನಿಗೆ ಹಿತರೂ ಪ್ರಿಯರೂ ಕಾರ್ಯಗಳಲ್ಲಿ ಆಸಕ್ತರೂ ಆದ ಧೃಷ್ಟಿ, ಜಯಂತ, ವಿಜಯ, ಸಿದ್ಧಾರ್ಥ, ಅರ್ಥಸಾಧಕ, ಅಶೋಕ, ಮಂತ್ರಪಾಲಕ, ಸುಮಂತ್ರ ಎಂಬ ಹೆಸರುಗಳುಳ್ಳ ಎಂಟು ಮಂದಿ ಪ್ರಧಾನಿಗಳಿದ್ದರು; ವಸಿಷ್ಠ ವಾಮದೇವ ಎಂಬ ಇಬ್ಬರು ಋಷೀಶ್ವರರು ಪುರೋಹಿತರಾಗಿದ್ದರು.. ಮತ್ತು ಸಮಸ್ತವಿದ್ಯೆಗಳಲ್ಲಿ ಪ್ರವೀಣರೂ ವಿನಯಗುಣಸಂಪನ್ನರೂ ಕುಶಲರೂ ಜಿತೇಂದ್ರಿಯರೂ ದೃಢವಾದ ಪರಾಕ್ರಮವುಳ್ಳವರೂ ಅತ್ಯಂತ ಕೀರ್ತಿವಂತರೂ ಅರಸನು ನಿರೂಪಿಸಿದ ಪ್ರಕಾರದಲ್ಲಿ ನಡೆಯುವಂಥವರೂ ಸಂಭಾಷಣೆ ಮಾಡುವಾಗ ವಿನಯಗೂಡಿದ ಮುಗುಳುನಗೆಯುಳ್ಳವರೂ ಕೋಪವಿಲ್ಲದವರೂ ಅಸತ್ಯವನ್ನು ನುಡಿಯದವರೂ ಸ್ವರಾಷ್ಟ್ರ ಪರರಾಷ್ಟ್ರಗಳಲ್ಲಿ ಮುಂದೆ ಮಾಡುವ ಕೃತ್ಯಗಳನ್ನೂ ಪೂರ್ವದಲ್ಲಿ ನಡೆದ ವೃತ್ತಾಂತಗಳನ್ನೂ

ಬೇಹುಗಾರರ ಕೃತ್ಯಗಳನ್ನೂ ತಿಳಿಯುವಂಥವರೂ ಸಮಸ್ತವಾದ ವ್ಯವಹಾರಗಳಲ್ಲಿಯೂ ಕೌಶಲ್ಯವುಳ್ಳವರೂ ನೀತಿಶಾಸ್ತ್ರಪಾಂಡಿತ್ಯವುಳ್ಳವರೂ ವಿಶ್ವಾಸಕ್ಕೆ ಪೂರ್ಣಯೋಗ್ಯರೂ ತಮ್ಮ ಮಕ್ಕಳಾದರೂ ಅಪರಾಧಮಾಡಿದಲ್ಲಿ ಕಾಲೋಚಿತವಾಗಿ ಶಿಕ್ಷಿಸುವವರೂ ಭಂಡಾರ ಚತುರಂಗಬಲಗಳನ್ನು ಕೂಡಿಸುವುದರಲ್ಲಿ ಅತಿಚತುರರೂ ಯಾವಾಗಲೂ ಉತ್ಸಾಹಶಕ್ತಿಯುಳ್ಳವರೂ ತಮ್ಮ ರಾಜ್ಯದ ಜನರ ವರ್ಣಾಶ್ರಮಗಳನ್ನು ಪರಿಪಾಲಿಸುವವರೂ ಪ್ರಜೆಗಳು ಹಿಂದನೆ ಅಸತ್ಯ ಪರಸ್ತ್ರೀಕಾಮ ಮೊದಲಾದವನ್ನು ಬಿಟ್ಟು ಉತ್ತಮವಾದ ವಸ್ತ್ರಾಭರಣಾಲಂಕಾರದಿಂದ ಸದ್ವರ್ತನದಲ್ಲಿರುವ ಹಾಗೆ ಪ್ರೇರಿಸತಕ್ಕವರೂ ಅರಸನಿಗೆ ಹಿತವನ್ನೇ ಬಯಸುವಂಥವರೂ ಪರಾಕ್ರಮಶಾಲಿಗಳೂ ಪರರಾಷ್ಟ್ರದವರಿಂದ ಕೊಂಡಾಡಿಸಿಕೊಳ್ಳುವವರೂ ಎಲ್ಲಾ ಕಾರ್ಯದಲ್ಲಿಯೂ ನಿಶ್ಚಯಬುದ್ಧಿಯುಳ್ಳವರೂ ಸಂಧಿ ವಿಗ್ರಹ ಯಾನ ಆಸನ ದ್ವೈಧೀಭಾವ ಸಮಾಶ್ರಯಗಳೆಂಬ ಷಡ್ಗುಣೈಶ್ವರ್ಯಗಳನ್ನು ಬಲ್ಲವರೂ ಪ್ರಿಯೋಕ್ತಿಗಳನ್ನೇ ನುಡಿಯುವವರೂ ಆದ ಅನೇಕ ಪ್ರಧಾನಿಗಳೊಡನೆ ಕೂಡಿಕೊಂಡು ದಶರಥರಾಯನು ಸಮಸ್ತ ರಾಜ್ಯವನ್ನೂ ಪರಿಪಾಲಿಸಿಕೊಂಡು ಬರುತ್ತಿದ್ದನು. ಅವನು ಪ್ರಜೆಗಳಲ್ಲಿ ದುಷ್ಟಶಿಷ್ಟವಿವೇಕಕ್ಕೋಸ್ಕರ ಬೇಹುಗಾರರ ಮುಖದಿಂದ ಸಮಸ್ತವನ್ನೂ ವಿಚಾರಿಸುತ್ತ ಸಮಸ್ತ ಪುರುಷರಲ್ಲಿಯೂ ಉತ್ತಮನಾಗಿ, ತನ್ನ ಪ್ರತಾಪದಿಂದ ಸಮಸ್ತ ಕಂಟಕಗಳನ್ನೂ ಪರಿಹರಿಸಿಕೊಂಡು ದೇವೇಂದ್ರನು ಹೇಗೆ ಸ್ವರ್ಗವನ್ನು ರಕ್ಷಿಸಿಕೊಂಡಿರುವನೋ ಆ ರೀತಿಯಲ್ಲಿ ಸಮಸ್ತ ಜನರನ್ನೂ ರಕ್ಷಿಸಿಕೊಂಡು ಅಂತರಿಕ್ಷಮಾರ್ಗದಲ್ಲಿ ಸೂರ್ಯನು ಹೇಗೆ ಅನೇಕ ಕಿರಣಗಳಿಂದ ಒಪ್ಪುತ್ತಿರುವನೋ ಆ ಪ್ರಕಾರದಲ್ಲಿ ಸಮಸ್ತಕಾರ್ಯನಿರ್ವಾಹ ಕುಶಲರಾದ ಮಂತ್ರಿಗಳೊಡನೆ ಕೂಡಿಕೊಂಡಿದ್ದನು.



## ೮ನೆಯ ಅಧ್ಯಾಯ

## ದಶರಥರಾಯನು ಅಶ್ವಮೇಧಯಾಗ ಮಾಡಲು ಉದ್ಯುಕ್ತನಾಗುವುದು

ಈ ಪ್ರಕಾರದಲ್ಲಿ ಅಯೋಧ್ಯಾಪಟ್ಟಣದಲ್ಲಿ ರಾಜ್ಯಪರಿಪಾಲನವನ್ನು ಮಾಡಿಕೊಂಡಿದ್ದ ದಶರಥ ಮಹಾರಾಯನು ಒಂದು ಸಲ ತನಗೆ ವಂಶಪ್ರವರ್ತಕನಾದ ಮಗನು ಜನಿಸಲಿಲ್ಲವೆಂದು ಯೋಚನೆಯನ್ನು ಮಾಡಿ ಅಶ್ವಮೇಧಯಾಗವನ್ನು ಮಾಡಬೇಕೆಂದು ನಿಶ್ಚಯಿಸಿದನು ಅನಂತರ ಸಮಸ್ತ ಮಂತ್ರಿಗಳೊಡನೆ ಆಲೋಚನೆಮಾಡಿ ಸುಮಂತ್ರನೆಂಬ ಮಂತ್ರಿಯನ್ನು ಕರೆದು “ಎಲೈ ಸುಮಂತ್ರನೆ, ಅಶ್ವಮೇಧಯಾಗವನ್ನು ಮಾಡಬೇಕೆಂದು ಸಂಕಲ್ಪಿಸಿದ್ದೇನೆ, ನೀನು ಶೀಘ್ರವಾಗಿ ಹೋಗಿ ನನ್ನ ಗುರುಗಳನ್ನು ಕರೆದುಕೊಂಡು ಬಾ ’ ಎಂದನು.

ಸುಮಂತ್ರನು ಮಹಾಪ್ರಸಾದವೆಂದು ದಶರಥರಾಯನ ಆಜ್ಞೆಯನ್ನು ಶಿರಸಾವಹಿಸಿ ಅಶ್ವಾರೂಢನಾಗಿ ವೇದವೇದಾಂಗತತ್ತ್ವಜ್ಞರಾದ ಸುಯಜ್ಞ ವಾಮದೇವ ಜಾಬಾಲಿ ಕಾಶ್ಯಪ ವಸಿಷ್ಠರು ಮೊದಲಾದ ಋಷಿಗಳನ್ನೂ ಮಹಾತ್ಮರಾದ ಬ್ರಾಹ್ಮಣರನ್ನೂ ಕರೆದುಕೊಂಡು ಬಂದನು, ದಶರಥರಾಯನು ಆ ಋಷಿಗಳನ್ನು ಎದುರುಗೊಂಡು ಅರಮನೆಗೆ ಕರೆದುಕೊಂಡು ಬಂದು ಅರ್ಘ್ಯಪಾದ್ಯಾಚಮನಗಳಿಂದ ಪೂಜೆಮಾಡಿದನು. ಅನಂತರ ಅತಿವಿನಯದಿಂದ ಧರ್ಮಾರ್ಥಸಹಿತವಾದ ಮಾತುಗಳಿಂದ ಅವರನ್ನು ಕುರಿತು “ಋಷಿಗಳಿರಾ, ಸಂತಾನಾರ್ಥವಾಗಿ ಹಂಬಲಿಸುತ್ತಿರುವವನಿಗೆ

ಚಿತ್ತಸ್ವಾಸ್ಥ್ಯವಿರುವುದಿಲ್ಲ. ಆದುದರಿಂದ ನಾನು ವಿಧ್ಯುಕ್ತಪ್ರಕಾರದಲ್ಲಿ ಅಶ್ವಮೇಧಯಾಗವನ್ನು ಮಾಡಬೇಕೆಂದು ಮನಸ್ಸಿನಲ್ಲಿ ಯೋಚನೆಮಾಡಿದ್ದೇನೆ, ನನಗೆ ಯಾವಪ್ರಕಾರದಲ್ಲಿ ಇಷ್ಟಾರ್ಥವಾಗುವುದೋ ಆ ಪ್ರಕಾರವನ್ನು ಆಲೋಚಿಸಿ ಹೇಳಬೇಕು" ಎಂದು ಹೇಳಿದನು.

ಆ ಋಷಿಗಳು ಆತನನ್ನು ಕುರಿತು "ಎಲೈ ರಾಯನೆ, ನೀನು ಮಾಡಿದ ಯೋಚನೆಯು ಬಹಳ ಒಳ್ಳೆಯದು; ಅಶ್ವಮೇಧಯಾಗವನ್ನು ಮಾಡಿದರೆ ಅವಶ್ಯವಾಗಿ ಮಕ್ಕಳಾಗುವರು, ಆ ಯಾಗಕ್ಕೆ ಸಾಮಗ್ರಿಗಳನ್ನು ಸಂಪಾದಿಸಿ ಕುದುರೆಯನ್ನು ಅರ್ಚಿಸು, ಸರಯೂನದಿಯ ಬಡಗಣತೀರದಲ್ಲಿ ಯಾಗಮಂಟಪವನ್ನು ಕಟ್ಟಿಸು, ಯಾಗಕ್ಕೆ ವಿಘ್ನಗಳು ಬಾರದಿರುವ ರೀತಿಯಲ್ಲಿ ಕಲ್ಪೋಕ್ತಪ್ರಕಾರವಾದ ಶಾಂತಿಯನ್ನು ಮಾಡಿಸು; ಈ ಕ್ರಮದಲ್ಲಿ ಮಾಡಿದರೆ ಅವಶ್ಯವಾಗಿ ನಿನ್ನ ಮನಸ್ಸಿಗೆ ಸಂತೋಷ ಕೊಡುವಂಥಾ ಮಕ್ಕಳನ್ನು ಪಡೆಯುವೆ; ನಿನಗೆ ಈ ಸದ್ಬುದ್ಧಿ ಹುಟ್ಟಿದ್ದು ಬಹಳ ಒಳ್ಳೆಯದೇ ಆಯಿತು" ಎಂದು ಹೇಳಿದರು.

ದಶರಥಮಹಾರಾಯನು ಅತ್ಯಂತ ಹರ್ಷದೊಡನೆ ಪ್ರಧಾನಿಗಳನ್ನು ಕರೆದು "ಪ್ರಧಾನಿಗಳಿರಾ, ಅಶ್ವಮೇಧಯಾಗಕ್ಕೆ ತಕ್ಕ ವಸ್ತುಗಳನ್ನು ತರಿಸಿರಿ; ಲಕ್ಷಣಯುಕ್ತವಾದ ಉತ್ತಮಾಶ್ವವನ್ನೂ ಪರಾಕ್ರಮಿಗಳಾದ ಗುರಿಕಾರರನ್ನೂ ಉಪಾಧ್ಯಾಯರನ್ನೂ ಕೂಡಿಸಿರಿ; ಸರಯೂನದಿಯ ಬಡಗಣ ತೀರದಲ್ಲಿ ಯಜ್ಞಶಾಲೆಯನ್ನು ಕಟ್ಟಿಸಿ ಅದಕ್ಕೆ ತಕ್ಕ ಶಾಂತಿಗಳನ್ನು ಕಲ್ಪೋಕ್ತಪ್ರಕಾರವಾಗಿ ಮಾಡಿಸಿರಿ, ಎಲ್ಲಾ ಅರಸರೂ ಈ ಯಜ್ಞವನ್ನು ಮಾಡುವುದಕ್ಕೆ ಶಕ್ತರಲ್ಲ; ಮಹಾಕಷ್ಟಗಳು ತೋರುವುವು; ಈ ಯಜ್ಞದಲ್ಲಿ ವಿದ್ವಾಂಸರಾದ ಬ್ರಹ್ಮರಾಕ್ಷಸರು ಊಣಯವನ್ನೆಣಿಸುತ್ತಿರುವರು; ಆ ಊಣಯದಿಂದ ಯಾಗಕ್ಕೆ ವಿಘ್ನಬಂದರೆ ಯಜ್ಞಕರ್ತೃವಿಗೆ ಆ ಕ್ಷಣದಲ್ಲಿಯೇ ಮೃತ್ಯುವುಂಟಾಗುವುದು; ಆದಕಾರಣ ಈ ಯಜ್ಞವು ನಿರ್ವಿಘ್ನವಾಗಿ ಪೂರ್ತಿಯಾಗುವಂತೆ ಯತ್ನಮಾಡಿರಿ; ನೀವು ಮಹಾಸಮರ್ಥರು" ಎಂದನು.

ಆ ವಾಕ್ಯವನ್ನು ಮಂತ್ರಿಗಳು ಶಿರಸಾವಹಿಸಿ ಆ ರಾಯನು ನಿರೂಪಂಗೊಟ್ಟ ಪ್ರಕಾರದಲ್ಲಿ ಯತ್ನಮಾಡುತ್ತಿದ್ದರು; ಆ ಬಳಿಕ ಸಮಸ್ತ ಋಷಿಗಳೂ ತಮ್ಮ ತಮ್ಮ ಆಶ್ರಮಕ್ಕೆ ಹೋಗಲು ದಶರಥರಾಯನು ತನ್ನ ಅರಮನೆಗೆ ಬಂದು ತನಗೆ ಇಷ್ಟರಾದ ಸ್ತ್ರೀಯರ ಕೂಡ ಆ ವೃತ್ತಾಂತವನ್ನು ಹೇಳಿ ಅವರನ್ನು ಕುರಿತು "ಕಾಂತೆಯರೇ, ಇಂದು ಮೊದಲಾಗಿ ನಾನು ಸಂತಾನವನ್ನು ಪಡೆಯಲು ಯಾಗದೀಕ್ಷೆಯನ್ನು ಕೈಗೊಳ್ಳುವೆನು" ಎಂದು ಹೇಳಿದನು. ಆ ಮಾತನ್ನು ಕೇಳಿ ಕೌಸಲ್ಯಾದೇವಿ ಮೊದಲಾದ ಸ್ತ್ರೀಯರ ಮುಖಗಳು ಸಂತೋಷದಿಂದ ಶರದೃತುವಿನಲ್ಲಿ ವಿಕಸಿತವಾದ ತಾವರೆಗಳಂತೆ ಒಪ್ಪಿದವು.



## ೯ನೆಯ ಅಧ್ಯಾಯ

## ಋಷ್ಯಶೃಂಗಮುನಿಯ ವೃತ್ತಾಂತ

ದಶರಥರಾಯನು ಸಂತಾನಾರ್ಥವಾಗಿ ಅಶ್ವಮೇಧಯಾಗವನ್ನು ಮಾಡಬೇಕೆಂದಿರುವ ವಿಷಯವನ್ನು ಕೇಳಿ ಸುಮಂತ್ರನು ಏಕಾಂತದಲ್ಲಿ ಆ ರಾಯನನ್ನು ಕುರಿತು "ಪೂರ್ವದಲ್ಲಿ ಅಶ್ವಮೇಧಯಾಗವನ್ನು ಮಾಡಿದರೆ ನಿನಗೆ ಸಂತಾನವಾಗುವುದೆಂದು ಸನತ್ಕುಮಾರನು ಋಷಿಗಳ ಸನ್ನಿಧಾನದಲ್ಲಿ

ಹೇಳಿದ ಕಥಾವೃತ್ತಾಂತವನ್ನು ನಾನು ಕೇಳಿದೆನು, ಆ ವೃತ್ತಾಂತವನ್ನು ನಿನಗೆ ಹೇಳುತ್ತೇನೆ ಕೇಳು: ಸನತ್ಕುಮಾರನು ಋಷಿಗಳನ್ನು ಕುರಿತು 'ಕಶ್ಯಪನಿಗೆ ವಿಭಾಂಡಕನೆಂಬ ಮಗನಾದನು, ವಿಭಾಂಡಕನಿಗೆ ಋಷ್ಯಶೃಂಗನೆಂದು ಪ್ರಸಿದ್ಧನಾದ ಮಗನಾದನು, ಋಷ್ಯಶೃಂಗನು ವನದಲ್ಲಿಯೇ ವಾಸಮಾಡಿ ಕೊಂಡು ಒಬ್ಬ ಸ್ತ್ರೀಯನ್ನಾದರೂ ಕಾಣದೆ ಯಾವಾಗಲೂ ತಂದೆಯ ಸೇವೆಯನ್ನು ಮಾಡಿಕೊಂಡು ಮಹಾತ್ಮನಾಗಿ ಜಿತೇಂದ್ರಿಯನಾಗಿ ವಿವಾಹವಿಲ್ಲದೆ ಸ್ವಾಭಾವಿಕವಾದ ಬ್ರಹ್ಮಚರ್ಯವ್ರತದಲ್ಲಿದ್ದು ಕೊಂಡು ಅಗ್ನಿಹೋತ್ರನ ಸೇವೆಯನ್ನು ಮಾಡಿಕೊಂಡಿದ್ದನು. ಕೆಲವು ಕಾಲವು ಕಳೆದಮೇಲೆ ಅಂಗದೇಶದಲ್ಲಿ ಮಹಾಪ್ರತಾಪಶಾಲಿಯಾಗಿ ಮಹಾಬಲವಂತನಾಗಿ ಪ್ರಸಿದ್ಧನಾದ ರೋಮಪಾದನೆಂಬ ಅರಸನು, ತನ್ನ ದುರಾಚಾರದಿಂದ ರಾಜ್ಯಕ್ಕೆ ಅನಾವೃಷ್ಟಿಯಾಗಿ ಆ ದೋಷವು ಘೋರವಾಗಿ ಸರ್ವಲೋಕಗಳಿಗೂ ಭಯವನ್ನುಂಟುಮಾಡುತ್ತಿರಲು, ಅತ್ಯಂತ ಪಶ್ಚಾತ್ತಾಪದಿಂದ ವೃದ್ಧರಾದ ಬ್ರಾಹ್ಮಣರನ್ನು ಕರೆಯಿಸಿ "ನೀವು ವೇದಾಧ್ಯಯನಸಂಪನ್ನರು; ಸರ್ವಜ್ಞರು; ಆದ್ದರಿಂದ ಈ ಅನಾವೃಷ್ಟಿದೋಷಕ್ಕೆ ಪ್ರಾಯಶ್ಚಿತ್ತವನ್ನು ಹೇಳಿ" ಎಂದು ಕೇಳಿದನು.

ವೇದಪಾರಕರಾದ ಆ ಬ್ರಾಹ್ಮಣರು ರೋಮಪಾದನನ್ನು ನೋಡಿ 'ಅರಸನೆ, ವಿಭಾಂಡಕ ಮುನಿಯ ಮಗನಾಗಿ ವೇದವೇದಾಂಗಪಾರಂಗತನಾದ ಋಷ್ಯಶೃಂಗಮುನೀಶ್ವರನನ್ನು ಉಪಾಯದಿಂದ ಸಂತವಿಟ್ಟು ಕರೆತಂದು ಆತನಿಗೆ ನಿನ್ನ ಮಗಳಾದ ಶಾಂತೆಯನ್ನು ವಿಧ್ಯುಕ್ತಪ್ರಕಾರದಲ್ಲಿ ವಿವಾಹವನ್ನು ಮಾಡಿಕೊಟ್ಟು ನಿನ್ನ ಪಟ್ಟಣದಲ್ಲಿರಿಸಿಕೊಂಡರೆ ಮಳೆಯು ಬಂದು ಸಂಪೂರ್ಣವಾಗಿ ಈ ಅನಾವೃಷ್ಟಿ ದೋಷವು ಶಾಂತವಾಗುವುದು' ಎಂದು ಹೇಳಿದರು.

ರೋಮಪಾದರಾಯನು ತನ್ನ ಮಂತ್ರಿಪುರೋಹಿತರನ್ನು ಕರೆದು ಋಷ್ಯಶೃಂಗನನ್ನು ಕರೆದು ಕೊಂಡು ಬರಹೇಳಿದನು; ಪ್ರಧಾನಿಪುರೋಹಿತರು ಆ ಋಷೀಶ್ವರನ ಭೀತಿಯಿಂದ ಚಿಂತಿಸಿ ತಲೆಬಾಗಿ 'ಎಲೈ ರಾಯನೇ, ನಾವು ಆತನನ್ನು ಕರೆತರಲು ಸಮರ್ಥರಲ್ಲ; ಗಣಿಕಾಸ್ತ್ರೀಯರನ್ನು ಕಳುಹಿಸಿದರೆ ಅವರು ಉಪಾಯದಿಂದ ಕರೆತಂದಾರು' ಎಂದು ಹೇಳಿದರು.

ಆಗ ರೋಮಪಾದರಾಯನು ಗಣಿಕಾಸ್ತ್ರೀಯರನ್ನು ಕರೆಯಿಸಿ ಋಷ್ಯಶೃಂಗಮುನೀಶ್ವರನನ್ನು ಉಪಾಯದಿಂದ ಕರೆತರಬೇಕೆಂದು ಹೇಳಿದನು; ಅವರು 'ಎಲೈ ರಾಯನೆ, ನಾವು ಋಷ್ಯಶೃಂಗ ಮುನೀಶ್ವರನನ್ನು ಕರೆದುಕೊಂಡು ಬರುವೆವು; ಅದರಿಂದ ದೋಷವಿಲ್ಲ' ಎಂದು ಹೇಳಿ ರಾಯನಿಂದ ಬೀಳ್ಕೊಂಡು ಋಷ್ಯಶೃಂಗಮುನೀಂದ್ರನ ಆಶ್ರಮಕ್ಕೆ ಹೋದರು

ಈ ಪ್ರಕಾರದಲ್ಲಿ ರೋಮಪಾದರಾಯನು ಗಣಿಕಾಸ್ತ್ರೀಯರಿಂದ ಋಷ್ಯಶೃಂಗಮುನೀಶ್ವರನನ್ನು ಕರೆತರಿಸಲು ದೇವೇಂದ್ರನು ಮಳೆಯನ್ನು ಸುರಿಸಿದನು; ಅನಾವೃಷ್ಟಿದೋಷವು ಶಾಂತವಾಯಿತು; ಆಮೇಲೆ ರೋಮಪಾದರಾಯನು ತನ್ನ ಮಗಳಾದ ಶಾಂತಾದೇವಿಯನ್ನು ಆತನಿಗೆ ವಿವಾಹ ಮಾಡಿದನು; ಈ ಋಷ್ಯಶೃಂಗಮುನೀಶ್ವರನು ದಶರಥರಾಯನ ಸಮೀಪಕ್ಕೆ ಬಂದು ಮಕ್ಕಳನ್ನು ಅನುಗ್ರಹಿಸಿ ಸಂತೋಷಪಡಿಸುವನು' ಎಂದು ಸನತ್ಕುಮಾರನು ಹೇಳಿದ ವೃತ್ತಾಂತವನ್ನು ನಾನು ನಿನಗೆ ಹೇಳಿದೆನು" ಎಂದು ನುಡಿದನು.

ದಶರಥರಾಯನು ಅದನ್ನು ಕೇಳಿ ಸಂತೋಷಪಟ್ಟು ಸುಮಂತ್ರನನ್ನು ಕುರಿತು "ರೋಮಪಾದ ರಾಯನು ಯಾವ ಉಪಾಯದಿಂದ ಋಷ್ಯಶೃಂಗನನ್ನು ಕರೆಯಿಸಿದನು?" ಎಂದು ಕೇಳಿದನು.



೧೦ ನೆಯ ಅಧ್ಯಾಯ

## ಋಷ್ಯಶೃಂಗಮುನಿಯು ಅಂಗದೇಶಕ್ಕೆ ಬಂದದ್ದು

ಸುಮಂತ್ರನು ದಶರಥರಾಯನನ್ನು ನೋಡಿ ಎಲೈ ರಾಯನೆ, ರೋಮಪಾದಮಹಾರಾಯನು ತಪಸ್ಸಿನಿಂದಲೂ ಅಧ್ಯಯನದಿಂದಲೂ ಕೂಡಿ ಚಂದನಪುಷ್ಪವನಿತಾದಿಗಳನ್ನರಿಯದಿದ್ದಂಥ ಋಷ್ಯಶೃಂಗಮುನೀಶ್ವರನ ಆಶ್ರಮಕ್ಕೆ ಗಣಿಕಾಸ್ತ್ರೀಯರನ್ನು ಕಳುಹಿಸಬೇಕೆಂದು ಹೇಳಿದ ಮಂತ್ರಿ ಪುರೋಹಿತರ ಮಾತನ್ನು ಅಂಗೀಕರಿಸಲು, ಅವರು ಆ ವೇಶ್ಯಾಸ್ತ್ರೀಯರನ್ನು ಕಳುಹಿಸಿದರು ; ಆ ಸ್ತ್ರೀಯರು ಆತನ ಚಿತ್ತಕ್ಕೆ ವಿಕಾರವನ್ನು ಹುಟ್ಟಿಸುವ ಹಾಗೆ ಸಮಸ್ತ ರೂಪಲಾವಣ್ಯಾತಿಶಯದಿಂದಲೂ ಸಕಲಾಲಂಕಾರಗಳಿಂದಲೂ ಕೂಡಿ ಋಷ್ಯಶೃಂಗನ ಆಶ್ರಮದ ಸಮೀಪಕ್ಕೆ ಹೋಗಿ ಆತನ ದರ್ಶನಕ್ಕೆ ಸಮಯವನ್ನು ಕಾದುಕೊಂಡಿದ್ದರು , ಆ ಮುನೀಶ್ವರನು ತನ್ನ ತಂದೆಯಾದ ವಿಭಾಂಡಕ ಮುನಿಯ ಸೇವೆಯನ್ನು ಮಾಡಿಕೊಂಡಿದ್ದನಲ್ಲದೆ ಆಶ್ರಮದಿಂದ ಹೊರಕ್ಕೆ ಹೋಗಿರಲಿಲ್ಲ ; ಹುಟ್ಟಿದ್ದು ಮೊದಲುಗೊಂಡು ಸ್ತ್ರೀರೂಪವನ್ನು ಕಂಡಿರಲಿಲ್ಲ ; ತನ್ನ ಆಶ್ರಮದ ಹೊರಗೆ ಇದ್ದ ವಸ್ತುಗಳನ್ನಾದರೂ ಕಂಡಿರಲಿಲ್ಲ : ಒಂದು ಸಮಯದಲ್ಲಿ ಆ ವೇಶ್ಯಾಸ್ತ್ರೀಯರು ಆ ಮುನೀಶ್ವರನನ್ನು ಕಂಡು ಸರ್ವಾಲಂಕಾರಭೂಷಿತೆಯರಾಗಿ ಆತನ ಸಮೀಪಕ್ಕೆ ಹೋಗಿ ಅತಿ ಮನೋಹರವಾದ ವೀಣಾಗಾನವನ್ನು ಮಾಡಿ ಆತನನ್ನು ' ಎಲೈ ಮುನೀಶ್ವರನೆ, ನೀನಾರು ? ಈ ವನದಲ್ಲಿ ನೀನು ಏನುಮಾಡಿಕೊಂಡಿದ್ದೀಯೆ ? ಮನುಷ್ಯಸಂಚಾರವಿಲ್ಲದ ಭಯಂಕರವಾದ ವನದಲ್ಲಿ ನೀನೊಬ್ಬನೇ ಏನು ಕಾರಣ ಸಂಚರಿಸುತ್ತಿದ್ದೀಯೆ ? ಇವಲ್ಲವನ್ನೂ ನಮಗೆ ತಿಳಿಯಹೇಳು' ಎಂದು ಕೇಳಿದರು.

ಆ ಋಷಿಯು ಎಂದೆಂದೂ ಕಾಣದ ಮನೋಹರೆಯರಾದ ಆ ಸ್ತ್ರೀಯರನ್ನು ಕಂಡು ಮನಕರಗಿ ಅವರನ್ನು ಕುರಿತು ' ನನ್ನ ತಂದೆಯು ವಿಭಾಂಡಕನೆಂಬ ಮುನೀಶ್ವರನು ; ನಾನು ಆತನ ಕುಮಾರನು ; ನನ್ನ ಹೆಸರು ಋಷ್ಯಶೃಂಗನು ; ನನ್ನ ಆಶ್ರಮವು ಇಲ್ಲಿಗೆ ಸಮೀಪದಲ್ಲಿದೆ ; ಅಲ್ಲಿಗೆ ಬನ್ನಿರಿ ; ನಿಮಗೆ ವಿಧ್ಯುಕ್ತಪ್ರಕಾರವಾಗಿ ಅರ್ಘ್ಯಪಾದ್ಯಾಚಮನಾದಿ ಪೂಜೆಗಳನ್ನು ಮಾಡಿ ಕೃತಾರ್ಥನಾಗುವೆನು ' ಎಂದು ಹೇಳಿದನು.

ಆ ವಾಕ್ಯವನ್ನು ಕೇಳಿ ಆ ಸ್ತ್ರೀಯರು ಅತಿ ಹರ್ಷದಿಂದ ಆತನ ಆಶ್ರಮಕ್ಕೆ ಹೋದರು. ಆತನು ಅರ್ಘ್ಯಪಾದ್ಯಾಚಮನಾದಿಗಳಿಂದ ಪೂಜೆಯನ್ನು ಮಾಡಿ ಕಂದಮೂಲ ಫಲಾದಿಗಳನ್ನು ಕೊಟ್ಟು ಸತ್ಕರಿಸಿದನು. ಆತನ ಸತ್ಕಾರವನ್ನು ಕೈಗೊಂಡು ಅತ್ಯಂತ ಸಂತೋಷಪಟ್ಟು ಆ ಸ್ತ್ರೀಯರು ಆತನ ತಂದೆಯಾದ ವಿಭಾಂಡಕಮುನೀಶ್ವರನು ಬಂದು ಕಂಡು ಕೋಪಿಸುವನಾದ್ದರಿಂದ ತಿರುಗಿ ಹೋಗಬೇಕೆಂದು ಮನಸ್ಸಿನಲ್ಲಿ ಆಲೋಚನೆಮಾಡಿ ಆತನನ್ನು ಕುರಿತು ' ಎಲೈ ಋಷ್ಯಶೃಂಗ ಮುನಿಯೆ, ನೀನು ಕೊಟ್ಟ ಫಲಾದಿಗಳನ್ನು ನಾವು ಅಂಗೀಕರಿಸಿದೆವು ; ಇನ್ನು ನೀನು ನಮ್ಮ ವಶದಲ್ಲಿರುವ ಫಲಾದಿಗಳನ್ನು ಅಂಗೀಕರಿಸಬೇಕು' ಎಂದು ಪ್ರಾರ್ಥಿಸಿ ತಾವು ತಂದ ನಾನಾವಿಧ ಭಕ್ಷ್ಯಗಳನ್ನು ಆತನಿಗೆ ಕೊಡುತ್ತಿದ್ದರು ; ಆ ಮುನಿಯು ಆ ಭಕ್ಷ್ಯಗಳನ್ನು ಫಲಾದಿಗಳೆಂದೆಣಿಸಿ ಭಕ್ಷಿಸಿ ಯಾವಾಗಲೂ ಕಂಡಂಥ ವಸ್ತುಗಳಲ್ಲದ್ದರಿಂದ ಸಂತೋಷಪಡುತ್ತಿದ್ದನು ; ಬಳಿಕ ಆ ವೇಶ್ಯಾಸ್ತ್ರೀಯರು ವಿಭಾಂಡಕಮುನೀಶ್ವರನ ಭಯದಿಂದ ಋಷ್ಯಶೃಂಗಮುನೀಂದ್ರನಿಂದ ಬೀಳ್ಕೊಂಡು ಮೊದಲು ತಾವು ಇದ್ದ ಸ್ಥಳಕ್ಕೆ ಹೋದರು.

ಋಷ್ಯಶೃಂಗನು ಆ ವೇಶ್ಯಾಸ್ತ್ರೀಯರು ಹೋದಮೇಲೆ ಸ್ನಾನಮಾಡಿ ಚಿತ್ತವಿಕಾರದಿಂದ ದುಃಖಾಕ್ರಾಂತನಾಗಿ ವನದಲ್ಲಿ ಸಂಚರಿಸುತ್ತ ಹೊತ್ತುಕಳೆದು ಮಾರನೆಯ ದಿವಸ ಆ ವೇಶ್ಯಾಸ್ತ್ರೀಯರಿದ್ದ ಕಡೆಗೆ ಅವರನ್ನೇ ಮನಸ್ಸಿನಲ್ಲಿ ನೆನೆಯುತ್ತ ಬರುತ್ತಿದ್ದನು ; ಆ ಸ್ತ್ರೀಯರು ತಮ್ಮೆಡೆಗೆ ಬರುವಂಥ ಋಷ್ಯಶೃಂಗನನ್ನು ಕಂಡು ಹರ್ಷದಿಂದ ಎದುರುಬಂದು ಆತನನ್ನು ನೋಡಿ ' ಎಲೈ ಋಷ್ಯಶೃಂಗಮುನೀಂದ್ರನೆ, ನಮ್ಮ ಆಶ್ರಮಕ್ಕೆ ನೀನು ಬಾ ; ಅಲ್ಲಿ ಫಲಾದಿಗಳು ನಿಮ್ಮ ಆಶ್ರಮದಲ್ಲಿರುವ ಫಲಗಳಿಗಿಂತಲೂ ವಿಶೇಷವಾಗಿರುವುವು ' ಎಂದರು

ಆ ಮಾತನ್ನು ಕೇಳಿ ಋಷ್ಯಶೃಂಗನು ಸಂತೋಷದಿಂದ ಅವರ ಆಶ್ರಮಕ್ಕೆ ಹೋಗಲು ಒಪ್ಪಿದನು. ಆಗ ವೇಶ್ಯಾಸ್ತ್ರೀಯರು ಆ ಮುನಿಯನ್ನು ರೋಮಪಾದರಾಯನ ಪಟ್ಟಣಕ್ಕೆ ಕರೆದುಕೊಂಡು ಬಂದರು , ಆತನು ಪಟ್ಟಣಕ್ಕೆ ಪ್ರವೇಶಿಸಿದಾಗಲೇ ದೇವೇಂದ್ರನು ಮಳೆಗರೆದು ಸಮಸ್ತ ಜಗತ್ತನ್ನೂ ತಂಪುಮಾಡಿದನು. ಆಗ ರೋಮಪಾದರಾಯನು ಋಷಿಯನ್ನು ಎದುರುಗೊಂಡು ನಮಸ್ಕರಿಸಿ ನಿಯಮಸ್ಥನಾಗಿ ವಿಧ್ಯುಕ್ತಪ್ರಕಾರದಲ್ಲಿ ಅರ್ಘ್ಯಪಾದ್ಯಾಚಮನಾದಿ ಸತ್ಕಾರಗಳನ್ನು ಮಾಡಿ ' ಋಷ್ಯಶೃಂಗಮುನೀಶ್ವರನೆ, ನಿನ್ನನ್ನು ಕರೆದುಕೊಂಡು ಬಂದದ್ದರಿಂದ ನಿನ್ನ ತಂದೆಯಾದ ವಿಭಾಂಡಕಮುನಿಗೆ ನನ್ನಲ್ಲಿ ಕೋಪವಿಲ್ಲದಹಾಗೆ ವರವನ್ನು ಕೊಡಬೇಕು ' ಎಂದು ಬೇಡಿಕೊಂಡು ಆ ಮುನೀಂದ್ರನನ್ನು ತನ್ನ ಅಂತಃಪುರಕ್ಕೆ ಬಿಜಯಮಾಡಿಸಿ ತನ್ನ ಕುಮಾರಿಯಾದ ಶಾಂತಾದೇವಿಯನ್ನು ಕೊಟ್ಟು ವಿಧ್ಯುಕ್ತಪ್ರಕಾರದಲ್ಲಿ ವಿವಾಹಮಾಡಿಸಿ ಅತ್ಯಂತ ಹರ್ಷದಿಂದಿದ್ದನು ಋಷ್ಯಶೃಂಗಮುನೀಶ್ವರನು ಅವಳೊಡನೆ ಅನೇಕವಿಧ ಭೋಗಗಳನ್ನು ಅನುಭವಿಸಿಕೊಂಡು ಬೇಕಾದ ವಸ್ತುಗಳಿಂದ ಸತ್ಕರಿಸಲ್ಪಟ್ಟವನಾಗಿ ಸುಖದಿಂದಿದ್ದಾನೆ " ಎಂದು ಹೇಳಿದನು.

---

## ೧೧ ನೆಯ ಅಧ್ಯಾಯ

## ಋಷ್ಯಶೃಂಗಮುನಿಯು ಅಯೋಧ್ಯಾಪಟ್ಟಣಕ್ಕೆ ಬಂದದ್ದು

ಸುಮಂತ್ರನು ದಶರಥರಾಯನನ್ನು ನೋಡಿ " ಮಹಾರಾಜ, ಸನತ್ಕುಮಾರನು ಮೊದಲು ಋಷಿಗಳನ್ನು ಕುರಿತು ' ಇಕ್ಷ್ವಾಕುವಂಶದಲ್ಲಿ ಸತ್ಯಸಂಧನೂ ಐಶ್ವರ್ಯಸಂಪನ್ನನೂ ಮತ್ತು ಧರ್ಮಿಷ್ಠನೂ ಆದ ದಶರಥನೆಂಬ ಮಹಾರಾಜನು ಅವತರಿಸಿ ಅಂಗದೇಶದ ರಾಜನಾದ ರೋಮಪಾದನೊಡನೆ ಸ್ನೇಹವನ್ನು ಮಾಡಿಕೊಂಡು ಆ ರಾಜನ ಬಳಿಗೆ ಹೋಗಿ ಆತನನ್ನು ಕುರಿತು — ' ಎಲೈ ರೋಮಪಾದರಾಜನೆ, ನಾನು ಸಂತಾನವಿಲ್ಲದಿರಬಾರದೆಂಬ ಬುದ್ಧಿಯಿಂದ ಅಶ್ವಮೇಧಯಾಗವನ್ನು ಮಾಡಬೇಕೆಂದಿದ್ದೇನೆ. ಯಾಗವನ್ನು ನೋಡುವುದಕ್ಕೆ ನಿನ್ನ ಮಗಳಾದ ಶಾಂತಾದೇವಿಯನ್ನೂ ಆಕೆಯ ಪತಿಯಾದ ಋಷ್ಯಶೃಂಗಮುನೀಶ್ವರನನ್ನೂ ಕಳುಹಿಸಿದೆಯಾದರೆ ನನ್ನ ಇಷ್ಟಾರ್ಥವು ಸಿದ್ಧಿಸುವುದು '— ಎಂದು ಕೇಳಿದರೆ ರೋಮಪಾದರಾಜನು ತನ್ನ ಮಗಳಾದ ಶಾಂತಾದೇವಿಯನ್ನೂ ಆಕೆಯ ಪತಿಯಾದ ಋಷ್ಯಶೃಂಗನನ್ನೂ ಕಳುಹಿಸುವನು. ಆಮೇಲೆ ದಶರಥರಾಜನು ಅವರನ್ನು ತನ್ನ ಪಟ್ಟಣಕ್ಕೆ ಕರೆತಂದು ಹರ್ಷದಿಂದ ಋಷ್ಯಶೃಂಗನಿಗೆ ಆರ್ತ್ವಿಜ್ಯವನ್ನು ಕೊಟ್ಟು ಯಾಗವನ್ನು ಸಮಾಪ್ತಿಮಾಡಿ ಸಂತಾನವನ್ನು ಪಡೆದು ತನ್ನ ಇಷ್ಟಾರ್ಥವನ್ನು ಸಲ್ಲಿಸಿಕೊಳ್ಳುವನು. ದಶರಥಮಹಾರಾಜನಿಗೆ ವಂಶೋದ್ಧಾರಕರಾಗಿ ಅಪರಿಮಿತ ಪರಾಕ್ರಮವುಳ್ಳವರಾಗಿ

ಸಮಸ್ತ ಲೋಕಗಳಲ್ಲಿಯೂ ಪ್ರಸಿದ್ಧರಾದ ನಾಲ್ಕು ಮಕ್ಕಳು ಅವತರಿಸುವರು ' ಎಂಬ ವೃತ್ತಾಂತವನ್ನು ಕೃತಯುಗದಲ್ಲಿ ಹೇಳಿದನು ಆ ವೃತ್ತಾಂತವನ್ನು ನಾನು ನಿನಗೆ ಬಿನ್ನಹಮಾಡಿದೆನು. ದಶರಥರಾಜನೆ, ಋಷ್ಯಶೃಂಗನು ಬರುವ ಉಪಾಯವನ್ನು ಕಂಡು ಆತನನ್ನು ಕರೆತಂದ ಪಕ್ಷದಲ್ಲಿ ನಿನ್ನ ಇಷ್ಟಾರ್ಥವು ಲಭಿಸುವುದು " ಎಂದು ಹೇಳಿದನು.

ದಶರಥರಾಜನು ಅತಿಸಂತೋಷದಿಂದ ವಸಿಷ್ಠಮುನೀಶ್ವರನಿಗೆ ಸತ್ಕಾರವನ್ನು ಮಾಡಿ ತನ್ನ ಸಂಗಡ ಅವರನ್ನು ಕರೆದುಕೊಂಡು ಪ್ರಧಾನಿಗಳು ಮತ್ತು ಚತುರಂಗಬಲದಿಂದ ಸಮೇತನಾಗಿ ಅನೇಕ ವನವನಾಂತರಗಳನ್ನು ದಾಟಿ ಋಷ್ಯಶೃಂಗಮುನೀಂದ್ರನಿರುವ ರೋಮಪಾದರಾಜನ ಪಟ್ಟಣಕ್ಕೆ ಹೋದನು ಮೊದಲು ಆ ಮುನೀಶ್ವರನನ್ನು ಕಂಡು ಆಮೇಲೆ ರೋಮಪಾದರಾಜನನ್ನು ಕಂಡನು. ಆತನು ದಶರಥರಾಜನಿಗೆ ಅರ್ಘ್ಯಪಾದ್ಯಾಚಮನಾದಿಗಳನ್ನು ಕೊಟ್ಟು ತನ್ನ ಅಳಿಯನಾದ ಋಷ್ಯಶೃಂಗಮುನಿಯು ಕೂಡ ಆ ರಾಜನ ಪೂರ್ವೋತ್ತರಗಳನ್ನೂ ಸಖ್ಯವನ್ನೂ ಬಂಧುತ್ವವನ್ನೂ ತಿಳುಹಿಸಲು ಆ ಮುನೀಶ್ವರನು ಆ ರಾಜನಿಗೆ ಅನೇಕ ಸತ್ಕಾರವನ್ನು ಮಾಡಿದನು, ಅವರ ಸತ್ಕಾರಗಳನ್ನು ಕೈಗೊಂಡು ದಶರಥರಾಜನು ಆ ರಾಜನ ಅರಮನೆಯಲ್ಲಿ ಎಂಟು ದಿವಸಗಳಿದ್ದು ಆಮೇಲೆ ರೋಮಪಾದರಾಜನನ್ನು ನೋಡಿ "ನಿನ್ನ ಮಗಳಾದ ಶಾಂತಾದೇವಿಯು ತನ್ನ ಪತಿಯಾದ ಋಷ್ಯಶೃಂಗನನ್ನು ಕರೆದುಕೊಂಡು ನನ್ನ ಪಟ್ಟಣಕ್ಕೆ ಬರಬೇಕು. ನಾನು ಮುಂದೆ ಇವರಿಂದ ಉದ್ಧಾರವಾದೇನು " ಎಂದು ಹೇಳಿದನು.

ರೋಮಪಾದರಾಜನು ತನ್ನ ಅಳಿಯನಾದ ಋಷ್ಯಶೃಂಗಮುನಿಯನ್ನು ಕರೆದು "ನೀನು ನಿನ್ನ ಪತ್ನೀಸಮೇತನಾಗಿ ಈ ರಾಜನ ಯಾಗವನ್ನು ಮಾಡಿಸುವುದಕ್ಕೆ ಹೋಗು " ಎಂದನು.

ಋಷ್ಯಶೃಂಗಮುನಿಯು ಸಂತೋಷಪಟ್ಟು ತನ್ನ ಪತ್ನೀಸಮೇತನಾಗಿ ಅಯೋಧ್ಯಾಪಟ್ಟಣಕ್ಕೆ ತೆರಳಿದನು. ದಶರಥರಾಜನು ರೋಮಪಾದರಾಜನಿಗೆ ಕೈಮುಗಿದು ತಬ್ಬಿಕೊಂಡು ಅವನ ಅಪ್ಪಣೆಯನ್ನು ಪಡೆದು ಅಯೋಧ್ಯಾಪಟ್ಟಣದ ಸಮೀಪಕ್ಕೆ ಬಂದು ಅತ್ಯಂತ ವೇಗವುಳ್ಳ ದೂತರನ್ನು ಪಟ್ಟಣವನ್ನು ಅಲಂಕಾರಮಾಡುವುದಕ್ಕಾಗಿ ಮೊದಲೇ ಕಳುಹಿಸಿದನು. ಆ ದೂತರು ಹೋಗಿ ಹೇಳಲು ಪೌರಜನಗಳು ಪಟ್ಟಣವನ್ನು ಶೃಂಗಾರಮಾಡಿದರು. ದಶರಥರಾಜನು ಋಷ್ಯಶೃಂಗಮುನಿಯನ್ನು ಮುಂದಿಟ್ಟುಕೊಂಡು ಶಂಖ ದುಂದುಭಿ ಭೇರಿ ನಿಸ್ಸಾಳ ಮೊದಲಾದ ಸಮಸ್ತ ವಾದ್ಯಧ್ವನಿಗಳು ವೋಳಗಲು, ಕುರುಜು ತೋರಣ ಮೇಲುಕಟ್ಟುಗಳಿಂದಲೂ ಅನೇಕ ಪಾರಕರ ಉಗ್ಗಡಣೆಗಳಿಂದಲೂ ಸಮಸ್ತ ಭೂಷಣಗಳಿಂದಲೂ ಅಲಂಕರಿಸಲ್ಪಟ್ಟ ಅಯೋಧ್ಯಾಪಟ್ಟಣವನ್ನು ಪ್ರವೇಶಿಸಿದನು. ಪುರಜನರು ಪುಷ್ಪಾಂಜಲಿಯಿಂದಲೂ ಮಾಂಗಲ್ಯಾರ್ಥವಾದ ಅರಳುಗಳಿಂದಲೂ ಸತ್ಕಾರವನ್ನು ಮಾಡುತ್ತಿರಲು ದೇವೇಂದ್ರನು ಅಮರಾವತೀಪಟ್ಟಣಕ್ಕೆ ಕಾಶ್ಯಪಮುನೀಂದ್ರನನ್ನು ಕರೆತಂದ ರೀತಿಯಲ್ಲಿ ಋಷ್ಯಶೃಂಗಮುನಿಯನ್ನು ಅಯೋಧ್ಯಾಪಟ್ಟಣಕ್ಕೆ ಕರೆತಂದು ತನ್ನ ಅಂತಃಪುರವನ್ನು ಸೇರಿಸಿ ಅರ್ಘ್ಯಪಾದ್ಯಾಚಮನಾದಿ ಪೂಜೆಗಳನ್ನು ಮಾಡಿದನು. ಆ ರಾಜನ ಅಂತಃಪುರದ ಸ್ತ್ರೀಯರು ಶಾಂತಾದೇವಿಗೆ ಅನೇಕ ವಸ್ತ್ರಾಭರಣಾದಿಗಳಿಂದ ಸತ್ಕಾರವನ್ನು ಮಾಡಲು ಋಷ್ಯಶೃಂಗಮುನಿಯು ಅವಳೊಡನೆ ಆ ರಾಜನ ಅರಮನೆಯಲ್ಲಿ ಕೆಲವು ಕಾಲ ಸುಖದಿಂದಿದ್ದನು.

## ೧೨ ನೆಯ ಅಧ್ಯಾಯ

# ದಶರಥನು ಅಶ್ವಮೇಧಯಾಗಮಾಡಲು ನಿಶ್ಚಯಿಸಿದ್ದು

ಕೆಲವು ದಿವಸಗಳಮೇಲೆ ದಶರಥನು ಋಷ್ಯಶೃಂಗಮುನೀಶ್ವರನಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಆತನನ್ನು ಕುರಿತು " ಮಹರ್ಷಿಗಳೆ, ನಾನು ಸಂತಾನಾರ್ಥವಾಗಿ ಮಾಡುವ ಅಶ್ವಮೇಧ ಯಾಗಕ್ಕೆ ನೀವು ಆರ್ತ್ವಿಜ್ಯವನ್ನು ಮಾಡಿ ರಕ್ಷಿಸಬೇಕು " ಎಂದು ಪ್ರಾರ್ಥಿಸಿದನು. ಆ ಮುನೀಶ್ವರನು ಸಂತೋಷಪಟ್ಟು " ಎಲೈ ದಶರಥರಾಯನೆ, ಅಶ್ವಮೇಧಯಾಗಕ್ಕೆ ಬೇಕಾದ ವಸ್ತುಗಳನ್ನು ತರಿಸು, ಲಕ್ಷಣವಾದ ಕುದುರೆಯನ್ನು ಬಿಡಿಸು ಮನೋಹರವಾದ ಸ್ಥಳದಲ್ಲಿ ಯಜ್ಞಶಾಲೆಯನ್ನು ಕಟ್ಟಿಸು " ಎಂದನು.

ಆಗ ಸುಮಂತ್ರನು ವೇದವೇದಾಂಗತತ್ತ್ವಜ್ಞರಾದ ಬ್ರಾಹ್ಮಣರನ್ನು ಕರೆಯಿಸಿದನು. ಸುಯಜ್ಞ ವಾಮದೇವ ಜಾಬಾಲಿ ಕಾಶ್ಯಪ ಪುರೋಹಿತನಾದ ವಸಿಷ್ಠ ಮತ್ತು ಉತ್ತಮರಾದ ಅನೇಕ ಬ್ರಾಹ್ಮಣರು ಸಮೀಪಕ್ಕೆ ಬರಲು, ದಶರಥನು ಆ ಋಷಿಗಳನ್ನು ಎದುರುಗೊಂಡು ಸತ್ಕಾರಮಾಡಿ ಧರ್ಮಾರ್ಥಸಹಿತವಾದ ಮಾತುಗಳಿಂದ ಅತಿವಿನಯವಾಗಿ " ಎಲೈ ಋಷಿಗಳಿರಾ, ಸಂತಾನಾರ್ಥವಾಗಿ ಚಿಂತೆಯುಳ್ಳವನಾದ ನನಗೆ ಸುಖವಿಲ್ಲ. ಆದಕಾರಣ ಸಂತಾನಾರ್ಥವಾಗಿ ಅಶ್ವಮೇಧಯಾಗವನ್ನು ಮಾಡುವುದಕ್ಕೆ ಯತ್ನಮಾಡಿದ್ದೇನೆ. ಋಷ್ಯಶೃಂಗಮುನೀಶ್ವರರ ಕೃಪೆಯಿಂದ ಯಾಗವನ್ನು ಪೂರೈಸಿ ಇಷ್ಟಾರ್ಥವನ್ನು ಪಡೆಯಲೆಣಿಸಿದ್ದೇನೆ " ಎಂದು ಹೇಳಿದನು

ಆ ಋಷಿಗಳು " ನೀನು ಮಾಡಿದ ಯತ್ನವು ತುಂಬ ಚೆನ್ನಾಗಿದೆ. ಅವಶ್ಯವಾಗಿ ನಾಲ್ಕು ಮಂದಿ ಕುಮಾರರನ್ನು ಪಡೆಯುವೆ ಈ ಬುದ್ಧಿ ನಿನಗೆ ಹುಟ್ಟಿದ್ದರಿಂದ ಮಹಾಶ್ರೇಯಸ್ಸಾದೀತು " ಎಂದು ಹೇಳಿದರು.

ಆ ವಾಕ್ಯವನ್ನು ಕೇಳಿ ದಶರಥನು ತನ್ನ ಪ್ರಧಾನಿಗಳನ್ನು ಕರೆದು " ಯಜ್ಞಕ್ಕೆ ಬೇಕಾದ ಸಮಸ್ತ ವಸ್ತುಗಳನ್ನೂ ತರಿಸಿರಿ ಬಲವಂತರಾದ ಗುರಿಕಾರರನ್ನೂ ಉಪಾಧ್ಯಾಯರನ್ನೂ ಕೂಡಿ ಕುದುರೆಯನ್ನು ಬಿಡಿಸಿರಿ. ಸರಯೂನದಿಯ ಬಡಗಣತೀರದಲ್ಲಿ ಯಾಗಮಂಟಪವನ್ನು ಕಟ್ಟಿಸಿರಿ. ಯಜ್ಞಕ್ಕೆ ವಿಘ್ನಗಳು ತಟ್ಟದಂತೆ ವಿಧ್ಯುಕ್ತವಾಗಿ ಶಾಂತಿಯನ್ನು ಮಾಡಿಸಿರಿ. ವಿಘ್ನವಿಲ್ಲದೆ ಯಾಗವು ನಡೆದರೆ ಅರಸುಗಳಿಗೆ ಶ್ರೇಯಸ್ಸಾಗುವುದು. ಯಾಗಕ್ಕೆ ವಿಘ್ನವಾದರೆ ಕರ್ತೃವಿಗೆ ಅಶ್ರೇಯಸ್ಸಾಗುವದು. ವಿದ್ವಾಂಸರಾದ ಬ್ರಹ್ಮರಾಕ್ಷಸರು ಯಾಗಾದಿ ಸತ್ಕರ್ಮಗಳಿಗೆ ಊಣೆಯನ್ನೇ ಬಯಸುತ್ತಿರುವರು ಯಜ್ಞಕ್ಕೆ ಊಣೆಯವು ಬಾರದಿರಲು ಹೇಗೆ ನಡೆಯಬೇಕೋ ಹಾಗೆ ನಡೆಯಿಸಿರಿ " ಎಂದು ಕಟ್ಟುಮಾಡಿದನು. ಮಂತ್ರಿಗಳು ಹಾಗೆಯೇ ಸನ್ನಾಹವನ್ನು ಮಾಡುತ್ತಿರಲು ಆ ಋಷಿಗಳು ತಮ್ಮ ತಮ್ಮ ಆಶ್ರಮಗಳಿಗೆ ಹೋದರು. ಆ ಬಳಿಕ ಮಹಾಪರಾಕ್ರಮಿಯಾದ ದಶರಥಮಹಾರಾಜನು ಮಂತ್ರಿಗಳನ್ನೂ ಬ್ರಾಹ್ಮಣರನ್ನೂ ಕಳುಹಿಸಿ ಉತ್ತಮವಾದ ರಥವನ್ನೇರಿ ಕೊಂಡು ತನ್ನ ಅರಮನೆಗೆ ಬಂದು ತನ್ನ ಸ್ತ್ರೀಯರೊಡನೆ ಆ ವೃತ್ತಾಂತವನ್ನು ಹೇಳುತ್ತಿದ್ದನು.



## ೧೩ ನೆಯ ಅಧ್ಯಾಯ

## ದಶರಥನು ಯಾಗದೀಕ್ಷೆಯನ್ನು ಹೊಂದಿದ್ದು

ಅನಂತರ ವಸಂತಋತುವು ಬಂದು ಸಂವತ್ಸರವು ಪೂರ್ತಿಯಾಗಲು ಸಂತಾನಾರ್ಥವಾಗಿ ಯಾಗವನ್ನು ಮಾಡಲಿಚ್ಛಿಸಿ ಅತಿಪರಾಕ್ರಮಿಯಾದ ದಶರಥಮಹಾರಾಯನು ವಸಿಷ್ಠಮುನೀಶ್ವರನಿಗೆ ಅಭಿವಂದಿಸಿ ಪೂಜೆಯನ್ನುಮಾಡಿ ಆತನ ಚಿತ್ತವನ್ನು ಪ್ರಸನ್ನವಾಗಿ ಮಾಡಬೇಕೆಂದು ಅತಿವಿನಯದಿಂದ ಸತ್ಕರಿಸಿ "ವಸಿಷ್ಠಮುನೀಶ್ವರರೆ, ನಾನು ಮಾಡುವ ಯಾಗವು ಸಾಂಗವಾಗಿ ಪೂರ್ತಿಯಾಗುವಂತೆ ನೀವು ಯತ್ನಮಾಡಬೇಕು, ಯಜ್ಞಭಾರವನ್ನು ವಹಿಸಿ ಈ ಯಾಗವು ಸಾಂಗವಾಗಿ ನಡೆಯುವ ಹಾಗೆ ಕೃಪೆಮಾಡಬೇಕು" ಎಂದು ಬಿನ್ನವಿಸಿದನು.

ವಸಿಷ್ಠಮುನೀಶ್ವರನು "ಹಾಗೆಯೇ ಆಗಲಿ! ನೀನು ತೊಡಗಿದ ಕಾರ್ಯವೇ ನನ್ನ ಕಾರ್ಯವು" ಎಂದು ನುಡಿದು, ಯಜ್ಞಕರ್ಮದಲ್ಲಿ ನಿಪುಣರಾದ ಬ್ರಾಹ್ಮಣರನ್ನೂ ಧರ್ಮಿಷ್ಠರಾದ ಹಿರಿಯರನ್ನೂ ಕರೆಯಿಸಿದನು. ಊಳಿಗದವರನ್ನು ಕಳುಹಿಸಿ ಶಿಲ್ಪಿ ಕಮ್ಮಾರ ಕಾಮಾಟಿದವರನ್ನೂ ಚಿತ್ರಕಾರರನ್ನೂ ನಟನರ್ತಕರನ್ನೂ ನಿಪುಣರಾದ ಪುರುಷರನ್ನೂ ವಿದ್ವಾಂಸರನ್ನೂ ಯಜ್ಞಕರ್ಮಪರೀಕ್ಷೆಯನ್ನು ಬಲ್ಲಂಥವರನ್ನೂ ಇಟ್ಟಿಗೆಗಾರರನ್ನೂ ಕರೆಯಿಸಿದನು ಚಯನಾದಿಗಳಿಗೆ ಇಟ್ಟಿಗೆಗಳನ್ನು ಬಹಳವಾಗಿ ತರಹೇಳಿದನು ಯಜ್ಞಕ್ಕೆ ಬಂದ ಬ್ರಾಹ್ಮಣರಿಗಾಗಿ ಮನೆಗಳನ್ನೂ ಕಟ್ಟಹೇಳಿ ಉತ್ತಮವಾದ ಭಕ್ಷ್ಯಗಳನ್ನೂ ರಸಾಯನಾದಿ ಪಾನದ್ರವ್ಯಗಳನ್ನೂ ಸಿದ್ಧಪಡಿಸುವಂತೆ ಹೇಳಿದನು. ಪಟ್ಟಣದಲ್ಲಿ ಪುರಜನರಿರುವ ರೀತಿಯಲ್ಲಿ ಬಹುವಿಸ್ತಾರವಾದ ಮಂಟಪಗಳನ್ನೂ ಗಜಾಶ್ವಶಾಲೆಗಳನ್ನೂ ಅರಸರು ಇರುವುದಕ್ಕೆ ಯೋಗ್ಯವಾದ ರಾಜಮಂದಿರಗಳನ್ನೂ ಶಯ್ಯಾಗೃಹಗಳನ್ನೂ ಭಟರು ಇರುವುದಕ್ಕೆ ಮನೆಗಳನ್ನೂ ಧರ್ಮಶಾಲೆಗಳನ್ನೂ ನಿರ್ಮಿಸಲು ಕಟ್ಟುಮಾಡಿದನು. ಸಮಸ್ತ ಪ್ರಜೆಗಳಿಗೂ ಮೃಷ್ಟಾನ್ನವನ್ನು ಯಥೇಚ್ಛವಾಗಿ ಕೊಡುವುದಕ್ಕೆ ತಕ್ಕ ವಸ್ತುಗಳನ್ನು ತರಿಸಿ ಸಮಸ್ತ ಜಾತಿಗಳೂ ಯಾವ ಪ್ರಕಾರದಿಂದ ಸಂತೋಷಪಡುವರೋ, ಆ ಕ್ರಮದಲ್ಲಿ ಸತ್ಕಾರಗಳನ್ನು ಮಾಡಬೇಕೆಂದೂ ಯಾರೂ ಕಾಮಕ್ರೋಧಾದಿಗಳಿಂದ ನಿಷ್ಠುರವಾಗಿ ನುಡಿಯಬಾರದೆಂದೂ ಯಜ್ಞಮಂಟಪದಲ್ಲಿ ಅತಿವೇಗದಿಂದ ಕಾರ್ಯವನ್ನು ಮಾಡುವ ಶಿಲ್ಪಿಗಳಿಗೆ ಯಥಾಕ್ರಮದಲ್ಲಿ ಸತ್ಕಾರವನ್ನು ಮಾಡಬೇಕೆಂದೂ ಯಜ್ಞಮಂಟಪದಲ್ಲಿ ಕೆಲಸಮಾಡುವಂಥವರಿಗೆ ಅನ್ನವನ್ನು ಬಡಿಸುತ್ತಿರಬೇಕೆಂದೂ ಅವರವರಿಗೆ ಸತ್ಕಾರೋದ್ಯೋಗಗಳನ್ನು ನೇಮಿಸಿದನು. ಆ ಬಳಿಕ ಸಮಸ್ತ ವಿನಿಯೋಗದವರೂ ತಮ್ಮ ತಮ್ಮ ಕಾರ್ಯಗಳು ಲೋಪವಿಲ್ಲದೆ ಪೂರ್ತಿಯಾದವೆಂದು ವಸಿಷ್ಠಮುನೀಶ್ವರನಿಗೆ ಬಿನ್ನವಿಸಿದರು. ಆಗ ಆ ಮುನೀಶ್ವರನು ಸುಮಂತ್ರನೆಂಬ ಪ್ರಧಾನಿಯನ್ನು ನೋಡಿ "ಭೂಲೋಕದಲ್ಲಿ ಧರ್ಮಿಷ್ಠರಾಗಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದವರನ್ನು ಕರೆಯಿಸು. ಮಹಾಸತ್ಯಸಂಧನೂ ಸಮಸ್ತ ವೇದಶಾಸ್ತ್ರಗಳಲ್ಲಿ ಪರಿಚಿತಿಯುಳ್ಳಂಥವನೂ ಅತಿಪರಾಕ್ರಮಿಯೂ ಮಿಥಿಲಾದೇಶಕ್ಕೆ ಅಧಿಪತಿಯೂ ಆದ ಜನಕರಾಯನನ್ನೂ ತೇಜಸ್ವಿಯಾದ ಕಾಶೀರಾಯನನ್ನೂ ದಶರಥರಾಯನಿಗೆ ಮಾವನಾದ ಕೇಕಯದೇಶಾಧಿಪತಿಯನ್ನೂ ಅಂಗದೇಶಕ್ಕೆ ಅಧಿಪತಿಯೂ ಮಹಾತ್ಮನೂ ಆದ ದಶರಥರಾಯನ ಸಖನಾದ ರೋಮಪಾದರಾಯನನ್ನೂ ನೀನೇ ಹೋಗಿ ಕರೆದುಕೊಂಡು ಬಾ. ಅದೇ ರೀತಿಯಲ್ಲಿ ಧರ್ಮಿಷ್ಠನಾದ ಕೋಸಲದೇಶದ ರಾಯನನ್ನೂ ಅತ್ಯಂತ ಉದಾರಗುಣವುಳ್ಳವ

ನಾಗಿ ಸಮಸ್ತ ಶಾಸ್ತ್ರಗಳಲ್ಲಿಯೂ ಪ್ರವೀಣನಾದ ಮಗಧದೇಶದ ರಾಯನನ್ನೂ ಗುರಿಕಾರರನ್ನು ಕಳುಹಿಸಿ ಕರೆಯಿಸು. ಮೂಡಣದಿಕ್ಕಿನ ಸಿಂಧು ಸಾವೀರ ಸೌರಾಷ್ಟ್ರದೇಶಗಳ ಅರಸರನ್ನೂ ತೆಂಕಣದಿಕ್ಕಿನ ರಾಯರನ್ನೂ ಮತ್ತು ಭೂಲೋಕದಲ್ಲಿ ಪ್ರಸಿದ್ಧರಾಗಿರುವವರೆಲ್ಲರನ್ನೂ ತಮ್ಮ ಬಲಗಳ ಸಮೇತವಾಗಿ ಬರುವಂತೆ ಹೇಳಲು ವೇಗಶಾಲಿಗಳಾದ ಭಟರನ್ನುಕಳುಹಿಸು" ಎಂದು ಆಜ್ಞಾಪಿಸಿದನು

ಸುಮಂತ್ರನು ವಸಿಷ್ಠಮುನಿಯ ಅಪ್ಪಣೆಯನ್ನು ಮಹಾಪ್ರಸಾದವೆಂದು ತಿಳಿದು ಅರಸರನ್ನು ಕರೆಯುವುದಕ್ಕೆ ತಕ್ಕ ಮನುಷ್ಯರನ್ನು ಕಳುಹಿಸಿ ತಾನು ಅಶ್ವಾರೂಢನಾಗಿ ಗೊತ್ತುಮಾಡಿದ ರಾಯರನ್ನು ಕರೆಯುವುದಕ್ಕೆ ಹೋದನು ಆ ಬಳಿಕ ಯಜ್ಞಮಂಟಪವನ್ನು ನಿರ್ಮಿಸುತ್ತಿದ್ದವರು ಹೊತ್ತುಹೊತ್ತಿಗೂ ಯಾಗಮಂಟಪದಲ್ಲಿ ಆಗುವ ಕಾರ್ಯದ ವೃದ್ಧಿಯನ್ನು ಬಿನ್ನಹಮಾಡುತ್ತಿರಲು ವಸಿಷ್ಠಮುನೀಶ್ವರನು ಅತಿಹರ್ಷಪಟ್ಟನು ಯಾಗಮಂಟಪದಲ್ಲಿ ಕೆಲಸಮಾಡುವಂಥ ಶಿಲ್ಪಿ ಮೊದಲಾದವರಿಗೆ ವಸ್ತುಗಳನ್ನು ಅಸಡ್ಡೆಯಿಂದ ಕೊಡಬಾರದು, ಮನ್ನಣೆಯಿಂದ ಕೊಟ್ಟರೆ ರಾಜಕಾರ್ಯವು ಕೆಡುವುದಿಲ್ಲವೆಂದು ಆ ಅಧಿಕಾರಿಗಳಿಗೆ ಹೇಳಿದನು ಆಮೇಲೆ ಕೆಲವು ದಿವಸಗಳೊಳಗೆ ನಾನಾದೇಶಗಳ ಸಮಸ್ತ ರಾಯರೂ ರತ್ನ ವಸ್ತು ವಾಹನಗಳನ್ನು ಕಾಣಿಕೆಯಾಗಿ ತೆಗೆದುಕೊಂಡು ಬರಲು ವಸಿಷ್ಠಮುನೀಶ್ವರನು ಅತಿಹರ್ಷದಿಂದ ಅವರನ್ನು ಎದುರುಗೊಂಡನು. ದಶರಥರಾಯನ ಸಮೀಪಕ್ಕೆ ಹೋಗಿ "ಸಮಸ್ತ ದೇಶದ ರಾಯರೂ ತಮ್ಮ ತಮ್ಮ ದೇಶಗಳ ವಸ್ತುಗಳನ್ನು ನಿನಗೆ ಕಾಣಿಕೆಯಾಗಿ ತಂದಿರುವರು. ಆ ಅರಸುಗಳಿಗೆ ಯಥಾಕ್ರಮದಲ್ಲಿ ಸತ್ಕಾರವನ್ನು ಮಾಡಿದೆನು. ಊಳಿಗದವರು ಯಾಗಮಂಟಪವನ್ನು ಅತಿವಿಚಿತ್ರವಾಗಿ ನಿರ್ಮಿಸಿರುವರು. ಬೇಕಾದ ವಸ್ತುಗಳಿಂದ ಯಾಗಮಂಟಪವು ಪರಿಪೂರ್ಣವಾಗಿದೆ ನೀನು ಯಾಗಮಂಟಪವನ್ನು ನೋಡಬೇಕು" ಎಂದು ವಸಿಷ್ಠನು ಹೇಳಿದನು.

ಆ ಬಳಿಕ ವಸಿಷ್ಠ ಮತ್ತು ಋಷ್ಯಶೃಂಗಮುನಿಗಳ ಆಜ್ಞೆಯಿಂದ ಶುಕ್ಲಪಕ್ಷದ ಶುಭದಿವಸದಲ್ಲಿ ಶುಭನಕ್ಷತ್ರ ಶುಭಯೋಗದಲ್ಲಿ ಸಮಸ್ತ ಭೂಮಂಡಲಕ್ಕೂ ಒಡೆಯನಾದ ದಶರಥಮಹಾರಾಯನು ಶಾಲಾಪ್ರವೇಶವನ್ನು ಮಾಡಿದನು. ವಸಿಷ್ಠಾದಿ ಸಮಸ್ತಋಷಿಗಳೂ ಋಷ್ಯಶೃಂಗಮುನೀಶ್ವರನನ್ನು ಮುಂದಿಟ್ಟುಕೊಂಡು ಶಾಸ್ತ್ರೋಕ್ತಪ್ರಕಾರದಲ್ಲಿ ಅಶ್ವಮೇಧಯಾಗವನ್ನು ಪ್ರಾರಂಭಿಸಿದರು ಆಗ ಅತ್ಯಂತ ವಿಭವದಿಂದ ದಶರಥನು ತನ್ನ ಸ್ತ್ರೀಯರೊಡನೆ ಯಾಗದೀಕ್ಷೆಯನ್ನು ಕೈಗೊಂಡನು.



## ೧೪ ನೆ ಯ ಅ ಧ್ಯಾ ಯ

## ದ ಶ ರ ಥ ನು ಅ ಶ್ವ ಮೇ ಧ ಯಾ ಗ ವ ನ್ನು ಮಾ ಡಿ ದ್ದು

ಅನಂತರ ಅಶ್ವಮೇಧಯಾಗಕ್ಕೋಸ್ಕರ ಬಿಟ್ಟ ಕುದುರೆಯು ಒಂದು ವರುಷದ ಮೇಲೆ ದಿಗ್ವಿಜಯಮಾಡಿಕೊಂಡು ತಿರುಗಿ ಬಂದಮೇಲೆ ಸರಯೂ ನದೀತೀರದಲ್ಲಿ ಅಶ್ವಮೇಧಯಾಗವು ಪ್ರವರ್ತಿತವಾಯಿತು. ವಸಿಷ್ಠ ಮೊದಲಾದ ಋಷಿಗಳು ಋಷ್ಯಶೃಂಗನನ್ನು ಮುಂದಿಟ್ಟುಕೊಂಡು ಯಾಗವನ್ನು ಮಾಡಿದರು. ವೇದವೇದಾಂಗತತ್ತ್ವಜ್ಞರಾದ ಋತ್ವಿಜರು ಹೋಮಾದಿ ಕರ್ಮಗಳನ್ನು ಮಾಡಿದರು. ಆಮೇಲೆ ಪ್ರವರ್ಗ್ಯಕರ್ಮಗಳನ್ನು ಮಾಡಿ ಉಳಿದ ಕರ್ಮಗಳನ್ನು ವಿಧ್ಯುಕ್ತ ಪ್ರಕಾರದಲ್ಲಿ ಸಮಾಪ್ತಿಗೊಳಿಸಿದರು. ದಶರಥರಾಯನಿಂದ ಅನೇಕ ಸತ್ಕಾರಗಳನ್ನು ಪಡೆದು

ಪ್ರಾತಸ್ಸವನವೆಂಬ ಸತ್ಕರ್ಮವನ್ನು ಮಾಡಿದರು. ಆಮೇಲೆ ಇಂದ್ರದೇವತಾಕವಾದ ಪುರೋಡಾಶವನ್ನು ವಿಧ್ಯುಕ್ತಪ್ರಕಾರದಲ್ಲಿ ಹೋಮಮಾಡಿ ಅಭಿಷವನವೆಂಬ ಸತ್ಕರ್ಮವನ್ನು ಸಮಾಪ್ತಿಗೊಳಿಸಿ ತೃತೀಯಸವನವೆಂಬ ಸತ್ಕರ್ಮವನ್ನು ಮಾಡಿದರು ಹೀಗೆ ಮಂತ್ರ ತಂತ್ರ ಕರ್ಮಗಳ ಲೋಪವಿಲ್ಲದೆ ಸಾಂಗವಾಗಿ ಸತ್ಕರ್ಮಗಳನ್ನು ಮಾಡುತ್ತಿರಲು, ಆ ಯಾಗಮಂಟಪವು ಸಾಕ್ಷಾತ್ಪರಬ್ರಹ್ಮಮಯವಾಗಿ ಮಂಗಳಕರವಾಗಿ ಪ್ರಕಾಶಿಸುತ್ತಿತ್ತು. ಆ ಯಾಗವನ್ನು ಮಾಡಿದ ದಿವಸಗಳಲ್ಲಿ ಅನ್ನಾದಿಗಳಿಲ್ಲದೆ ಬಳಲಿದವನಾಗಲಿ ಕ್ಷುಧೆಯಿಂದ ಕಂಗೆಟ್ಟವನಾಗಲಿ ಇರಲಿಲ್ಲ ಆ ಯಾಗಮಂಟಪದಲ್ಲಿ ವಿದ್ವಾಂಸನಲ್ಲದ ಬ್ರಾಹ್ಮಣನೇ ಇರಲಿಲ್ಲ. ಮಂತ್ರೋಚ್ಚಾರಣೆ ಮಾಡುವಲ್ಲಿ ಮಹಾಪಟುತ್ವವುಳ್ಳವರಲ್ಲದೆ ಹೀನ ಸ್ವರವುಳ್ಳವರೇ ಇರಲಿಲ್ಲ. ಅನ್ನಾರ್ಥಿಗಳಾಗಿ ಬಂದ ಬ್ರಾಹ್ಮಣರೂ ವೃದ್ಧರೂ ವ್ಯಾಧಿಗ್ರಸ್ತರೂ ಸ್ತ್ರೀಯರೂ ಬಾಲಕರೂ ಯಾವಾಗಲೂ ಭೋಜನಮಾಡುತ್ತಲೇ ಇದ್ದರು ಈ ರೀತಿಯಲ್ಲಿ ಎಲ್ಲರೂ ಭಕ್ಷ್ಯಭೋಜ್ಯ ಅನ್ನಪಾನಾದಿಗಳನ್ನು ದಣುವಿಲ್ಲದೆ ಭುಂಜಿಸುತ್ತಿದ್ದರು ಆ ಯಾಗ ಮಂಟಪದಲ್ಲಿದ್ದ ಅಧಿಕಾರಿಗಳು ಯಾವಾಗಲೂ "ಅನ್ನವನ್ನಿಕ್ಕಿ ! ವಸ್ತ್ರಗಳನ್ನು ಕೊಡಿ !" ಎಂಬ ನುಡಿಗಳನ್ನೇ ನುಡಿಯುತ್ತ ಕೊಡುತ್ತ ಇದ್ದರು ಪಾಕಶಾಲೆಗಳಲ್ಲಿ ಎಲ್ಲಿ ನೋಡಿದರೂ ಪರ್ವತ ಗಳಿಗೆ ಸಮಾನವಾದ ಅನ್ನರಾಶಿಗಳು ಸುರಿಯಲ್ಪಟ್ಟಿದ್ದವು. ಪ್ರತಿದಿನವೂ ಅನ್ನರಾಶಿಗಳಿಂದ ಸತ್ಕಾರಗಳನ್ನು ವಿಧ್ಯುಕ್ತವಾಗಿ ಮಾಡುತ್ತಿರಲು ನಾನಾದೇಶಗಳಿಂದ ಬಂದ ಸ್ತ್ರೀಯರೂ ಪುರುಷರೂ ಅನ್ನಪಾನಾದಿಗಳಿಂದ ಸಂತುಷ್ಟರಾಗಿ ಪದಾರ್ಥಗಳ ಮಾಧುರ್ಯವನ್ನು ಕೊಂಡಾಡುತ್ತ "ಎಲೈ ಅರಸನೆ, ನಾವು ನಿನ್ನ ಯಾಗದಲ್ಲಿ ಬಹಳ ಸಂತುಷ್ಟರಾಗಿದ್ದೇವೆ, ಇನ್ನೂ ನಿನಗೆ ಅಧಿಕವಾದ ಶ್ರೇಯಸ್ಸಾಗಲಿ !" ಎಂದು ಹರಸುತ್ತಿದ್ದರು. ದಶರಥರಾಯನ ಅಧಿಕಾರಿಗಳು ಸರ್ವಾಭರಣ ಭೂಷಿತರಾಗಿ ಅನೇಕ ಬ್ರಾಹ್ಮಣರಿಗೆ ಬೇಕಾದ ವಸ್ತುಗಳನ್ನು ಕೊಡುತ್ತಿದ್ದರು. ಆ ಯಾಗವು ನಡೆಯುತ್ತಿರುವ ಸಮಯದಲ್ಲಿ ಪ್ರಾಜ್ಞರಾದ ಕೆಲವು ವಿದ್ವಾಂಸರು ಒಬ್ಬರನ್ನೊಬ್ಬರು ವಾದಗಳಿಂದ ಜಯಿಸುವುದಕ್ಕಾಗಿ ತಮ್ಮ ವಿದ್ಯಾಸಾಮರ್ಥ್ಯವನ್ನು ತೋರಿಸಬೇಕೆಂಬ ತವಕದಿಂದ ಕರ್ಮಕಾಂಡದಲ್ಲಿ ಆಕ್ಷೇಪಣೆಗಳನ್ನು ಕಲ್ಪಿಸುತ್ತಿದ್ದರು. ಯಾಗಮಂಟಪದಲ್ಲಿ ವೇದಿಕೆಯ ಮೇಲೆ ದರ್ಭೆಗಳ ಪರಿಸ್ತರಣ ಗಳನ್ನು ಹಾಕುತ್ತ, ಅತಿಕುಶಲರಾದ ಬ್ರಾಹ್ಮಣರು ಶಾಸ್ತ್ರೋಕ್ತಪ್ರಕಾರದಲ್ಲಿ ಸಮಸ್ತವಾದ ಕರ್ಮ ಗಳನ್ನೂ ನಡೆಯಿಸುತ್ತಿದ್ದರು. ಅವರಲ್ಲಿ ಶಿಕ್ಷಾ ಕಲ್ಪ ವ್ಯಾಕರಣ ನಿರುಕ್ತ ಜ್ಯೌತಿಷ ಛಂದಸ್ಸೆಂಬ ಶಾಸ್ತ್ರಗಳ ಪ್ರಯೋಗಗಳನ್ನರಿಯದವರಾರೂ ಇರಲಿಲ್ಲ. ವ್ರತಸ್ಥರಲ್ಲದವರೂ ಬಹಳವಾಗಿ ಶಾಸ್ತ್ರ ಪರಿಚಿತಿಯಿಲ್ಲದವರೂ ಇರಲಿಲ್ಲ ಸದಸ್ಸಿಗೆ ಯೋಗ್ಯರಲ್ಲದವರೂ ಇರಲಿಲ್ಲ.

ಈ ಕ್ರಮದಲ್ಲಿ ಯಾಗವು ಪ್ರವರ್ತಿಸುತ್ತಿರಲು ಯಜ್ಞಕರ್ಮದಲ್ಲಿ ಕುಶಲರಾದ ಬ್ರಾಹ್ಮಣರ ಮಧ್ಯದಲ್ಲಿ ಅತ್ಯಂತ ಲಕ್ಷಣಲಕ್ಷಿತಗಳಾದ ಇಪ್ಪತ್ತೊಂದು ಯೂಪಸ್ತಂಭಗಳು ಶೋಭಾಯಮಾನ ವಾಗಿದ್ದವು. ಆ ಯೂಪಸ್ತಂಭಗಳಲ್ಲಿ ಬೆಲ್ಲವತ್ತ್ರದ ಯೂಪಗಳ ಸ್ತಂಭಗಳು ಆರು. ಕಗ್ಗಲಿಯ ಯೂಪಸ್ತಂಭಗಳು ಆರು. ಮುತ್ತುಗದ ಯೂಪಸ್ತಂಭಗಳು ಆರು. ಚಳೆಯ ಯೂಪಸ್ತಂಭ ಒಂದು. ದೇವದಾರು ಯೂಪಸ್ತಂಭಗಳು ಎರಡು—ಈ ಇಪ್ಪತ್ತೊಂದು ಯೂಪಸ್ತಂಭಗಳೂ ಇಪ್ಪತ್ತೊಂದು ಅರತ್ನಿಗಳ ಉದ್ದವುಳ್ಳಂಥವು. ಎಲ್ಲಾ ಯೂಪಗಳೂ ಎಂಟೆಂಟು ಅರಗುಗಳಾಗಿ ನಯವಾಗಿ ಶಿಲ್ಪಿಗಳಿಂದ ಕೆತ್ತಲ್ಪಟ್ಟಂಥವಾಗಿದ್ದುವು. ಒಂದೊಂದೂ ಇಪ್ಪತ್ತೊಂದು ವಸ್ತ್ರಗಳಿಂದ ಅಲಂಕರಿಸಲ್ಪಟ್ಟಂಥವಾಗಿ ಸ್ವರ್ಗಲೋಕದಲ್ಲಿ ದೇದೀಪ್ಯಮಾನರಾದ ಸಪ್ತಋಷಿಗಳ ರೀತಿಯಲ್ಲಿ ಒಪ್ಪುತ್ತಿದ್ದವು. ಅಶ್ವಮೇಧಯಾಗದಲ್ಲಿ ಅಗ್ನಿಚಯನವೆಂಬ ಯಾಗವಿಶೇಷವೊಂದುಂಟು. ಆ ಶಾಸ್ತ್ರೋಕ್ತಪ್ರಕಾರದಲ್ಲಿ ಗರುಡನ ಪಾದಾದಿಯಾದ ಅವಯವಗಳಿಗೆ ಸರಿಬರುವ ಕ್ರಮದಲ್ಲಿ

ಇಟ್ಟಿಗೆಗಳ ಅಚ್ಚುಗಳನ್ನು ಮಾಡಿಸಿ ಆ ಇಟ್ಟಿಗೆಗಳಿಂದ ಗರುಡನ ಆಕಾರದಂತೆ ಆರು ಚಯನಗಳನ್ನು ಮಾಡಿಸಿ ಒಂದೊಂದು ಚಯನವನ್ನು ಮೂರು ಮೂರು ಅಂತರವಾಗಿ ಮಾಡಬೇಕು ಆ ಆರು ಚಯನಗಳೂ ಹದಿನೆಂಟು ರೂಪಗಳಾಗಿ ಹದಿನೆಂಟೂ ಒಂದೇ ಆಕಾರವಾಗಿ ಗರುಡನ ಆಕಾರ ವಾಗಲು, ಆ ಗರುಡನಿಗೆ ಸುವರ್ಣಮಯವಾದ ಗರಿಗಳನ್ನು ಕಲ್ಪಿಸಿ ಮುಂದುಗಡೆಯಲ್ಲಿ ಯೂಪ ಸ್ತಂಭವನ್ನು ನಿಲ್ಲಿಸಬೇಕು. ಆ ಯೂಪಸ್ತಂಭದ ಸಮೀಪದಲ್ಲಿ ಇಂದ್ರಾದಿ ದೇವತೆಗಳಲ್ಲಿ ಯಾವ ಯಾವ ದೇವತೆಗೆ ಶಾಸ್ತ್ರದಲ್ಲಿ ಎಷ್ಟು ಪಶುಗಳುಂಟೋ ಅಷ್ಟು ಪಶುಗಳನ್ನು ನಿಯಮಿಸಿ, ಸರ್ಪಗಳು ಪಕ್ಷಿಗಳು ಜಲಚರಪ್ರಾಣಿಗಳು ಮೊದಲಾದ ಮುನ್ನೂರು ಪಶುಗಳನ್ನು ಅಲ್ಲಿ ನಿಲ್ಲಿಸಿ, ಶಾಮಿತ್ರಸ್ಥಾನ ವೆಂಬ ಸ್ಥಾನದಲ್ಲಿ ಕುದುರೆಯನ್ನು ಕಟ್ಟಲು ಕುದುರೆಯ ಸಹಿತವಾಗಿ ಮುನ್ನೂರೊಂದು ಪಶುಗಳಾಗು ವುವು. ಆ ಪಶುಗಳು ಗ್ರಾಮ್ಯಪಶುಗಳು. ಕುದುರೆ ಹೊರತಾಗಿ ಮಿಕ್ಕ ಪಶುಗಳನ್ನು ಅಭಿಮಂತ್ರಿಸಿ ಬಿಟ್ಟು ಅನಂತರ ಆ ಕುದುರೆಯನ್ನು ಚೆನ್ನಾಗಿ ರಕ್ಷಣೆಮಾಡಿಕೊಂಡು ಪೂಜೆಯನ್ನು ಮಾಡಿ ಸತ್ಕರಿಸಿಕೊಂಡಿರುವುದಕ್ಕಾಗಿ ಕೌಸಲ್ಯಾದೇವಿಗೆ ನಿಯಮಿಸಿ ಆ ಕುದುರೆಯ ಸಮೀಪದಲ್ಲಿಯೇ ಆ ದೇವಿಯು ಒಂದು ರಾತ್ರಿ ಇರುವಹಾಗೆ ಕಟ್ಟುಮಾಡಿ ಹೋತೃಗಳಾದ ಋತ್ವಿಜರೂ ಉದ್ಗಾತೃಗಳೆಂಬ ಸಾಮಗಾನದ ಋತ್ವಿಜರೂ ಅಧ್ವರ್ಯುಗಳೆಂಬ ಋತ್ವಿಜರೂ ಹೋಮವನ್ನು ಮಾಡಿದರು. ಆಮೇಲೆ ಯಜಮಾನನಾದ ದಶರಥಮಹಾರಾಯನನ್ನೂ ರಾಣಿಯಾದ ಕೌಸಲ್ಯಾದೇವಿಯನ್ನೂ ಮಿಕ್ಕ ಸ್ತ್ರೀಯರನ್ನೂ ಕರೆದು ಮಂತ್ರವನ್ನು ಹೇಳಿಸಿ ಆ ಅಶ್ವದ ಕಿಬ್ಬೊಟ್ಟೆಯನ್ನೂ, ಅದರ ಕೆಳಗಿದ್ದ ವಪೆಯನ್ನೂ, ಮಾಂಸವಿಶೇಷವನ್ನೂ ತೆಗೆದು ಮಹಾ ಜಿತೇಂದ್ರಿಯನಾದ ಋತ್ವಿಜನ ವಪಾಶ್ರವಣಿಯೆಂಬ ಗುಳದ ಮುಳ್ಳಿನ ಹೊರೆಯ ಮೇಲೆ ಆಜ್ಯಾಭಿಪೂರಣಮಾಡಿ, ಅಗ್ನಿಯಲ್ಲಿ ಕಾಯಿಸಿ, ವಪೆಯನ್ನು ವಿಸ್ತಾರವಾಗಿ ಹರಡಿ, ವಿಧ್ಯುಕ್ತ ಪ್ರಕಾರದಲ್ಲಿ ವಪಾಯಾಗವೆಂಬ ಹೋಮವನ್ನು ಮಾಡಲು ಮಾಂಗಲ್ಯವಾದ ಆ ವಪಾಯಾಗ ಧೂಮವನ್ನು ಆಘ್ರಾಣಿಸಿ ಸಮಸ್ತ ರಾಯರೂ ಅದರ ಪುಣ್ಯಪ್ರಭಾವಗಳಿಂದ ತಮ್ಮ ಪಾಪಗಳನ್ನು ಕಳೆದುಕೊಂಡರು. ಆಮೇಲೆ ಮಹಾಕ್ರೂರವಾದ ಅಲಗುಗಳುಳ್ಳ ಸ್ವಧಿತಿಯೆಂಬ ಹೆಸರುಳ್ಳ ಮೂರು ಚೂರಿಗಳಿಂದ ಆ ಅಶ್ವವನ್ನು ವಿಶಸನಮಾಡಿ, ಅದರ ಶರೀರದಲ್ಲಿ ಆಯಾ ಸ್ಥಾನಗಳಲ್ಲಿದ್ದ ಹವಿಸ್ಸು ಗಳನ್ನು ವಿಂಗಡಿಸಿ ಅಬ್ಬೇಗಿಡದ ಕೊನೆಯಲ್ಲಿರಿಸಿ, ಯಜ್ಞಕರ್ಮದಲ್ಲಿ ನಿಯಮಿಸಲ್ಪಟ್ಟ ಹದಿನಾರು ಮಂದಿ ಋತ್ವಿಜರಾದ ಬ್ರಾಹ್ಮಣರು ಪಾದಾದಿ ಸಮಸ್ತ ಅಂಗಗಳನ್ನೂ ಅಗ್ನಿಯಲ್ಲಿ ಹೋಮ ಮಾಡಿದರು. ಇತರ ಯಾಗಗಳಲ್ಲಿ ಪಶುಗಳ ಹವಿಸ್ಸನ್ನು ಬಸುರೆಯ ಮರದ ಕೊನೆಗಳನ್ನು ತಂದು ಅವುಗಳ ಎಲೆಗಳಲ್ಲಿ ವಿಭಾಗಮಾಡಿಸಿಕೊಳ್ಳಬೇಕೆಂಬ ವಿಧಿಯುಂಟು ಕಲ್ಪಸೂತ್ರಗಳ ಪ್ರಕಾರ ಈ ಅಶ್ವಮೇಧಯಾಗವು ಮೂರು ದಿವಸಗಳು ಮಾಡುವಂಥದು. ಮೊದಲನೆಯ ದಿನದಲ್ಲಿ ಅಗ್ನಿಷ್ಟೋಮವೆಂಬ ಕೃತ್ಯವೂ ಎರಡನೆಯ ದಿನದಲ್ಲಿ ಉಕ್ಥ್ಯವೆಂಬ ಹೋಮಕೃತ್ಯವೂ ಮೂರನೆಯ ದಿನದಲ್ಲಿ ಅತಿರಾತ್ರವೆಂಬ ಕರ್ಮವಿಶೇಷವೂ ನಡೆಯಬೇಕು.

ಈ ಪ್ರಕಾರದಲ್ಲಿ ಅಗ್ನಿಷ್ಟೋಮ ಆಯುಷ್ಟೋಮೋಷ್ಟಿ, ಅತಿರಾತ್ರ, ಅಭಿಜಿತ್, ವಿಶ್ವಜಿತ್, ಅಪ್ತೋರ್ಯಾಮಗಳೆಂಬ ಅಂಗಗಳುಳ್ಳ ಅಶ್ವಮೇಧಯಾಗವೆಂಬ ಆ ಮಹಾಯಾಗವನ್ನು ವಸಿಷ್ಠ ಮಹಾಮುನಿ ಮೊದಲಾದ ಋಷಿಗಳು ಋಷ್ಯಶೃಂಗಮುನಿಯನ್ನು ಮುಂದಿಟ್ಟುಕೊಂಡು ಸಾಂಗವಾಗಿ ಸಮಾಪ್ತಿಮಾಡಿದರು. ಆಮೇಲೆ ದೀಕ್ಷಿತನಾದ ದಶರಥಮಹಾರಾಯನು ಹೋತೃವಿಗೆ ಮೂಡಣದಿಕ್ಕಿನ ರಾಜ್ಯವನ್ನು ಸಮುದ್ರಪರ್ಯಂತವಾಗಿ ಕೊಟ್ಟನು. ಅಧ್ವರ್ಯುವಿಗೆ ಪಡುವಣ ದಿಕ್ಕಿನ ರಾಜ್ಯವನ್ನು ಕೊಟ್ಟನು. ಬ್ರಹ್ಮನೆಂಬ ಋತ್ವಿಕ್ಕಿಗೆ ತೆಂಕಣರಾಜ್ಯವನ್ನು ಕೊಟ್ಟನು.

ಉದ್ಗಾತೃವೆಂಬ ಸಾಮಗಾನದ ಋತ್ವಿಕ್ಕಿಗೆ ಬಡಗಣದಿಕ್ಕಿನ ರಾಜ್ಯವನ್ನು ದಕ್ಷಿಣೆಯಾಗಿ ಕೊಟ್ಟನು. ಪೂರ್ವದಲ್ಲಿ ಬ್ರಹ್ಮದೇವರಿಂದ ನಿರ್ಮಿಸಲ್ಪಟ್ಟ ಅಶ್ವಮೇಧವೆಂಬ ಯಾಗದಲ್ಲಿ ದೀಕ್ಷಿತನಾದ ಇಕ್ಷ್ವಾಕುವಂಶದಲ್ಲಿ ಅವತರಿಸಿದ ದಶರಥಮಹಾರಾಯನು ಈ ರೀತಿಯಲ್ಲಿ ನಾಲ್ಕು ದಿಕ್ಕಿನ ರಾಜ್ಯವನ್ನೂ ಋತ್ವಿಕ್ಕುಗಳಿಗೆ ಅತಿಹರ್ಷದಿಂದ ದಕ್ಷಿಣೆಯಾಗಿ ಕೊಟ್ಟು ಯಾಗವನ್ನು ಸಮಾಪ್ತಿಮಾಡಿ ಕೃತಕೃತ್ಯನಾಗಿ ಅತ್ಯಂತ ಸಂತೋಷದಿಂದಿದ್ದನು. ಆ ಋತ್ವಿಜರು ಆತನನ್ನು ಕುರಿತು "ಎಲೈ ದಶರಥರಾಯನೆ, ಈ ಭೂಮಿಯನ್ನಾಳುವುದಕ್ಕೆ ನೀನೇ ಯೋಗ್ಯನಲ್ಲದೆ ನಾವು ಸಮರ್ಥರಲ್ಲ ನಾವು ಅಧ್ಯಯನದಲ್ಲಿ ನಿಷ್ಠೆಯುಳ್ಳವರಾಗಿರಬೇಕಲ್ಲದೆ ಮತ್ತೊಂದರಲ್ಲಲ್ಲ ಆದಕಾರಣ ನೀನೇ ಈ ಭೂಮಿಯನ್ನು ಅನರ್ಘ್ಯವಾದ ರತ್ನ ಸುವರ್ಣಗಳನ್ನೂ ಉತ್ತಮ ಹಸುಗಳನ್ನೂ ಮೌಲ್ಯವಾಗಿ ಕೊಟ್ಟು ತೆಗೆದುಕೊ. ನಮಗೆ ಈ ಭೂಮಿಯಿಂದ ಪ್ರಯೋಜನ ವೇನು?" ಎಂದು ನುಡಿದರು. ಆ ಮಾತನ್ನು ಕೇಳಿ ಆ ರಾಯನು ಹತ್ತು ಲಕ್ಷ ಹಸುಗಳನ್ನೂ ಹತ್ತುಕೋಟಿ ಸುವರ್ಣಗಳನ್ನೂ ನಲವತ್ತುಕೋಟಿ ಬೆಳ್ಳಿಯ ನಾಣ್ಯಗಳನ್ನೂ ಕೊಡಲು ಆ ಬ್ರಾಹ್ಮಣರು ಅವುಗಳನ್ನು ತೆಗೆದುಕೊಂಡು ತಮಗೆ ದಕ್ಷಿಣೆಯಾಗಿ ಬಂದ ಭೂಮಂಡಲವನ್ನು ದಶರಥನಿಗೆ ಒಪ್ಪಿಸಿದರು. ಆಮೇಲೆ ಋಷ್ಯಶೃಂಗ ವಸಿಷ್ಠರು ಮೊದಲಾದ ಋಷಿಗಳು ತಮ್ಮ ತಮ್ಮ ಅಂಶಕ್ಕೆ ಶಾಸ್ತ್ರೋಕ್ತ ಪ್ರಕಾರದಲ್ಲಿ ಬಂದ ಭಾಗದ್ರವ್ಯಗಳನ್ನು ಹಂಚಿಕೊಂಡು ಅತ್ಯಂತ ಸಂತುಷ್ಟಚಿತ್ತರಾದರು. ಆ ರಾಯನು ನಾನಾ ದಿಕ್ಕಿನಿಂದ ಬಂದ ಬ್ರಾಹ್ಮಣರಿಗೆ ಒಂದು ಕೋಟಿ ದ್ರವ್ಯವನ್ನು ಭೂರಿದಕ್ಷಿಣೆಯಾಗಿ ಕೊಟ್ಟನು. ದರಿದ್ರರಾದ ಬ್ರಾಹ್ಮಣರಿಗೆ ಹಸ್ತಾಭರಣ ಕರ್ಣಾಭರಣ ಭೂಮಿ ಗೋಧನ ಮೊದಲಾದ ಬೇಡಿದ ವಸ್ತುಗಳನ್ನು ಕೊಟ್ಟನು. ಸಮಸ್ತರಿಗೂ ಸತ್ಕಾರವನ್ನು ಮಾಡಿ ಅವರಿಗೆಲ್ಲಾ ನಮಸ್ಕಾರವನ್ನು ಮಾಡಿ ಅವರ ಆಶೀರ್ವಾದಗಳನ್ನು ಕೈಕೊಂಡು ಋಷ್ಯಶೃಂಗಮುನಿಗೆ ಅಭಿವಂದಿಸಿ ಆ ಮುನಿಯನ್ನು "ಮಹಾತ್ಮರೆ, ನನಗೆ ಸಂತಾನವಾಗುವ ಪುತ್ರ ಕಾಮೇಷ್ಟಿಯನ್ನು ಮಾಡಿಸಿ ರಕ್ಷಿಸಬೇಕು" ಎಂದು ಪ್ರಾರ್ಥಿಸಿದನು.

ಆ ಮುನಿಯು ಆತನನ್ನು ನೋಡಿ "ಎಲೈ ರಾಯನೆ, ನಿನಗೆ ನಾಲ್ವರು ಉತ್ತಮರಾದ ಕುಮಾರರಾಗುವರು" ಎಂದು ನುಡಿದನು; ಆ ಮಾತನ್ನು ಕೇಳಿ ದಶರಥನು ಸಂತೋಷಪಟ್ಟನು.



೧೫ ನೆಯ ಅಧ್ಯಾಯ

## ದೇವತೆಗಳಿಗೆ ನಾರಾಯಣನು ಅಭಯ ಕೊಟ್ಟದ್ದು

ಬಳಿಕ ವೇದವೇದಾಂಗತತ್ತ್ವಜ್ಞನಾದ ಋಷ್ಯಶೃಂಗಮುನೀಶ್ವರನು ಸ್ವಾಮಿಯ ಧ್ಯಾನವನ್ನು ಮಾಡಿ ದಶರಥಮಹಾರಾಯನನ್ನು ಕುರಿತು "ದಶರಥಮಹಾರಾಯನೆ, ಅಥರ್ವಣವೇದದ ಉಪನಿಷತ್ತಿನಲ್ಲಿ ಸಂತಾನಪ್ರದವಾದ ಪುತ್ರಕಾಮೇಷ್ಟಿಯೆಂಬ ಇಷ್ಟಿಯೊಂದುಂಟು; ಅದನ್ನು ನಿನಗಾಗಿ ಮಾಡಿಸುತ್ತೇನೆ" ಎಂದು ಹೇಳಿ ವಿಧ್ಯುಕ್ತಪ್ರಕಾರದಲ್ಲಿ ಪುತ್ರಕಾಮೇಷ್ಟಿಯನ್ನು ಮಾಡಿಸಿದನು.

ಆ ಸಮಯದಲ್ಲಿ ದೇವತೆಗಳೂ ಗಂಧರ್ವರೂ ಸಿದ್ಧರೂ ಋಷಿಗಳೂ ಆ ಯಾಗದಲ್ಲಿ ಹವಿಸ್ಸಿನ ಭಾಗವನ್ನು ತೆಗೆದುಕೊಳ್ಳುವುದಕ್ಕಾಗಿ ಬಂದು ಸೇರಿದರು. ಅವರು ಬ್ರಹ್ಮದೇವನನ್ನು ಕುರಿತು

ಬ್ರಹ್ಮದೇವನೆ, ರಾವಣನು ನಿನ್ನ ವರಪ್ರಸಾದದಿಂದ ನಮ್ಮೆಲ್ಲರನ್ನೂ ತನ್ನ ಪ್ರತಾಪದಿಂದ ಬಾಧಿಸುತ್ತಿದ್ದಾನೆ, ನಾವು ಆತನಿಗೆ ಪ್ರತಿಯಾಗಿ ಬಾಧೆಯನ್ನು ಮಾಡುವುದಕ್ಕೆ ಸಮರ್ಥರಲ್ಲ, ಪೂರ್ವದಲ್ಲಿ ಆತನಿಗೆ ನೀನು ವರವನ್ನು ಕೊಟ್ಟಿಯಾದ್ದರಿಂದ ನಾವೆಲ್ಲರೂ ಆತನು ಮಾಡುವ ಉಪದ್ರವಗಳನ್ನು ಸಹಿಸಿಕೊಂಡಿದ್ದೇವೆ, ಅಜ್ಞಾನಿಯಾದ ರಾವಣನು ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳನ್ನೂ ಬಹಳವಾಗಿ ಬಾಧಿಸುತ್ತಿದ್ದಾನೆ, ತನಗಿಂತಲೂ ದೊಡ್ಡವರನ್ನು ದ್ವೇಷಿಸುತ್ತಾನೆ ಸ್ವರ್ಗಾಧಿಪತಿಯಾದ ದೇವೇಂದ್ರನನ್ನು ಸ್ವರ್ಗಲೋಕದಿಂದ ಹೊರಡಿಸಲು ಬಯಸಿರುತ್ತಾನೆ, ಋಷಿಗಳನ್ನೂ ಯಕ್ಷ ಕಿನ್ನರ ಗಂಧರ್ವರನ್ನೂ ದೇವತೆಗಳನ್ನೂ ಬ್ರಾಹ್ಮಣರನ್ನೂ ಅತಿಕ್ರಮಿಸಿ ನಿನ್ನ ವರಪ್ರಸಾದದಿಂದ ಬಹಳ ಮದಿಸಿದ್ದಾನೆ, ಸೂರ್ಯನು ಆತನಿಗೆ ತನ್ನ ಬಿಸಲಿನ ತಾಪವನ್ನು ಕೊಡುವುದಿಲ್ಲ, ವಾಯು ಮೊದಲಾದ ದಿಕ್ಪಾಲಕರೂ ಆತನ ಮುಂದೆ ಸಂಚರಿಸುವುದಕ್ಕೆ ಅಂಜುವರು, ಅತಿವೇಗದಿಂದ ಚಲಿಸುವ ಸಮುದ್ರವೂ ಅವನನ್ನು ಕಂಡು ನಡುಗುತ್ತದೆ, ಅತಿ ಭಯಂಕರನಾದ ರಾವಣನಿಂದ ನಮಗೂ ಅತ್ಯಂತ ಭಯವುಂಟಾಗಿದೆ, ಆದಕಾರಣ ಅವನನ್ನು ಕೊಲ್ಲುವ ಉಪಾಯವನ್ನು ಚಿಂತಿಸು" ಎಂದು ಮೊರೆಯಿಟ್ಟರು.

ಬ್ರಹ್ಮದೇವನು ಸ್ವಲ್ಪಹೊತ್ತು ಧ್ಯಾನಾಸಕ್ತನಾಗಿದ್ದು ಬಳಿಕ ಆ ದೇವತೆಗಳನ್ನು ನೋಡಿ "ಎಲೈ ದೇವತೆಗಳಿರಾ, ರಾವಣನನ್ನು ಕೊಲ್ಲುವ ಉಪಾಯವನ್ನು ಕಂಡೆನು, ಅವನು ಪೂರ್ವದಲ್ಲಿ ನನ್ನನ್ನು ಕುರಿತು ತಪಸ್ಸು ಮಾಡಿದನು; ಆಗ ನಾನು ಆತನ ಇಷ್ಟಾರ್ಥವನ್ನು ಕೇಳಲು ಆತನು ಗಂಧರ್ವ ಯಕ್ಷ ದೇವ ದಾನವ ರಾಕ್ಷಸರಿಂದ ತನಗೆ ಕೊಲೆಯಿಲ್ಲದಹಾಗೆ ವರವನ್ನು ಬೇಡಿದನು, ಹಾಗೆಯೇ ಆಗಲೆಂದು ವರವನ್ನು ಕೊಟ್ಟನು, ಆತನು ವರವನ್ನು ಕೇಳುವಾಗ ಮನುಷ್ಯನು ಎಷ್ಟರವನೆಂಬ ಉದಾಸೀನಬುದ್ಧಿಯಿಂದ ಮನುಷ್ಯರಿಂದ ಕೊಲೆಯಿಲ್ಲದಹಾಗೆ ಬೇಡಲಿಲ್ಲ; ಆದ್ದರಿಂದ ಅವನಿಗೆ ಮನುಷ್ಯರಲ್ಲದೆ ಮತ್ತೆ ಯಾರೂ ಮೃತ್ಯುವಾಗಲಾರರು" ಎಂದು ಸಂತೋಷ ವಾರ್ತೆಯನ್ನು ಹೇಳಿದನು.

ಆ ಮಾತನ್ನು ಕೇಳಿ ಋಷಿಗಳೂ ದೇವತೆಗಳೂ ಸಂತೋಷಪಟ್ಟರು. ಅದೇ ಸಮಯದಲ್ಲಿ ಸರ್ವವ್ಯಾಪಕನೂ ಅತ್ಯಂತ ಕಾಂತಿಯುಕ್ತನೂ ಶಂಖಚಕ್ರಗದೆಗಳನ್ನು ಧರಿಸಿ ಪೀತಾಂಬರವನ್ನುಟ್ಟು ಕೊಂಡಿರುವವನೂ ಜಗದೀಶ್ವರನೂ ಆದ ನಾರಾಯಣನು ಸೂರ್ಯಮಂಡಲದ ಮೇಲೆ ಕಾಣಿಸುವ ನೀಲಮೇಘದಂತೆ ಗರುಡಾರೂಢನಾಗಿ ರತ್ನಖಚಿತವಾದ ಬಾಹುಪುರಿಗಳಿಂದ ಒಪ್ಪುತ್ತ, ನಮಸ್ತ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಪಾದಾರವಿಂದಗಳುಳ್ಳವನಾಗಿ ಬ್ರಹ್ಮದೇವನನ್ನು ಕೂಡಿಕೊಂಡು, ಋಷ್ಯಶೃಂಗಮುನೀಶ್ವರನು ಪುತ್ರಕಾಮೇಷ್ಟಿಯನ್ನು ಮಾಡುತ್ತಿದ್ದ ಯಾಗಮಂಟಪಕ್ಕೆ ಬಂದನು. ಆ ಸ್ವಾಮಿಯನ್ನು ಕಂಡು ಸಮಸ್ತದೇವತೆಗಳೂ ಸ್ತೋತ್ರಮಾಡುತ್ತ ಆತನನ್ನು ಕುರಿತು "ಎಲೈ ನಾರಾಯಣನೆ, ನೀನು ಜಗದ್ಧಿತಾರ್ಥವಾಗಿ ಅಯೋಧ್ಯಾಧಿಪತಿಯೂ ಧರ್ಮಜ್ಞನೂ ದಾನಶೀಲನೂ ವಸಿಷ್ಠಮಹಾಮುನಿಗೆ ಸಮಾನವಾದ ಪ್ರಭಾವವುಳ್ಳವನೂ ಆದ ದಶರಥರಾಯನ ಸ್ತ್ರೀಯರಲ್ಲಿ ಹ್ರೀ ಶ್ರೀ ಕೀರ್ತಿಗಳೆಂಬ ದೇವತಾಸ್ತ್ರೀಯರಿಗೆ ಸಮಾನರಾದ ಕೌಸಲ್ಯಾದೇವಿ ಕೈಕೇಯೀದೇವಿ ಸುಮಿತ್ರಾದೇವಿ ಎಂಬ ಮೂವರು ಪತ್ನಿಯರಲ್ಲಿ ನಾಲ್ಕುಭಾಗ ಹಂಚಿಕೊಂಡು ಅವತರಿಸಿ ಲೋಕ ಕಂಟಕನೂ ವರಗರ್ವಿತನೂ ದೇವತೆಗಳಿಂದಲೂ ಕೊಲ್ಲುವುದಕ್ಕೆ ಅಸಾಧ್ಯನೂ ಆದ ರಾವಣನನ್ನು ಯುದ್ಧದಲ್ಲಿ ಸಂಹರಿಸು. ಮೂರ್ಖನಾದ ರಾವಣನು ಸಮಸ್ತ ದೇವಗಂಧರ್ವಸಿದ್ಧರನ್ನೂ ಉತ್ತಮರಾದ ಋಷಿಗಳನ್ನೂ ತನ್ನ ಪರಾಕ್ರಮಾತಿಶಯದಿಂದ ಬಾಧಿಸುತ್ತಿದ್ದಾನೆ ಸ್ವರ್ಗಲೋಕದಲ್ಲಿ

ದೇವೇಂದ್ರನ ನಂದನವನದಲ್ಲಿ ವಿಲಾಸಾರ್ಥವಾಗಿ ಕ್ರೀಡಿಸುತ್ತಿರುವ ಗಂಧರ್ವ ಅಪ್ಸರಃಸ್ತ್ರೀಯರನ್ನು ಬಾಧಿಸುತ್ತಾನೆ, ಆದ್ದರಿಂದ ರಾವಣನನ್ನು ಕೊಲ್ಲುವುದಕ್ಕೋಸ್ಕರ ಸಮಸ್ತ ಋಷಿಗಳನ್ನೂ ಕೂಡಿಕೊಂಡು ನಾವೆಲ್ಲರೂ ನಿನ್ನನ್ನು ಮರೆಹೊಕ್ಕೆವು; ನಮಗೆಲ್ಲರಿಗೂ ನೀನೇ ಗತಿಯಾದ್ದರಿಂದ ಮನುಷ್ಯಲೋಕದಲ್ಲಿ ದೇವತೆಗಳಿಗೆ ಶತ್ರುಗಳಾದ ರಾಕ್ಷಸರ ವಧೆಯನ್ನು ಮಾಡುವುದಕ್ಕೆ ಯತ್ನ ಮಾಡಬೇಕು, ಲೋಕಕಂಟಕನಾದ ರಾವಣನನ್ನು ಕೊಲ್ಲಬೇಕು " ಎಂದು ಪ್ರಾರ್ಥನೆ ಮಾಡಿದರು.

ಆಗ ಸಮಸ್ತ ದೇವತಗಳಿಗೂ ಒಡೆಯನೂ, ದೇವೋತ್ತಮನೂ, ಭಜಕರಿಗೆ ಸಕಲಾಭೀಷ್ಟ ವರಪ್ರದನೂ ಆದ ಶ್ರೀಮಹಾವಿಷ್ಣುವು ಬ್ರಹ್ಮನೇ ಮೊದಲಾದ ದೇವತೆಗಳನ್ನು ನೋಡಿ " ಎಲೈ ದೇವತೆಗಳಿರಾ, ನಿಮಗೆ ಇನ್ನು ಭಯವು ಬೇಡ, ಯುದ್ಧಾಂಗಣದಲ್ಲಿ ರಾವಣನನ್ನು ಪುತ್ರ ಪೌತ್ರ ಮಿತ್ರ ಜ್ಞಾತಿ ಬಾಂಧವರೊಡನೆ ಸಂಹರಿಸುವೆನು, ನಿಮಗೆ ಕ್ಷೇಮವಾದೀತು; ನಾನು ರಾಮಾವತಾರ ಮಾಡಿ ದುರಾತ್ಮನಾದ, ಅತ್ಯಂತ ಕ್ರೂರಬುದ್ಧಿಯುಳ್ಳವನಾದ, ದೇವತೆಗಳಿಗೂ ಋಷಿಗಳಿಗೂ ಭಯವನ್ನುಂಟುಮಾಡುವ ರಾವಣನನ್ನು ಕೊಂದು ಹನ್ನೊಂದುಸಾವಿರ ವರುಷಗಳು ಸಮಸ್ತ ಭೂಮಂಡಲವನ್ನೂ ಪರಿಪಾಲಿಸಿಕೊಂಡು ಮನುಷ್ಯಲೋಕದಲ್ಲಿರುವೆನು " ಎಂದು ಹೇಳಿ ಅಭಯವನ್ನು ಕೊಟ್ಟು, ತಾನು ಮನುಷ್ಯಜನ್ಮದಲ್ಲಿ ಅವತರಿಸಬೇಕೆಂದೂ ತನಗೆ ತಂದೆಯಾಗುವುದಕ್ಕೆ ದಶರಥರಾಯನೇ ಸರಿಯೆಂದೂ ಚಿಂತಿಸುತ್ತಿದ್ದನು

ಆಮೇಲೆ ಋಷಿಗಳು ಗಂಧರ್ವರು ದೇವತೆಗಳು ರುದ್ರಗಣಗಳು ಅಪ್ಸರೆಯರು ಮೊದಲಾದ ಸಮಸ್ತರೂ ಆತನನ್ನು ನೋಡಿ " ನಾರಾಯಣನೆ, ದೇವೇಂದ್ರನಿಗೆ ಶತ್ರುವಾಗಿ ಅತ್ಯಂತ ಪರಾಕ್ರಮ ವುಳ್ಳವನಾಗಿ ಸಾಧುಗಳಿಗೂ ತಪಸ್ವಿಗಳಿಗೂ ಕಂಟಕನೂ, ಅತಿಭಯಂಕರನೂ, ಲೋಕಕಂಟಕನೂ, ಅತ್ಯಂತ ಕ್ರೂರನೂ, ಉಗ್ರ ಪರಾಕ್ರಮವುಳ್ಳವನೂ, ಕೊಬ್ಬಿನಿಂದ ಹೆಚ್ಚಿದ ಪರಾಕ್ರಮವುಳ್ಳವನೂ ಆಗಿ, ಸಮಸ್ತ ಲೋಕಗಳನ್ನೂ ಮೊರೆಯಿಡಿಸುವಂಥ ರಾವಣನನ್ನು ರಾಕ್ಷಸರೊಡನೆ ಕೊಂದು ನಮ್ಮ ಮನಸ್ಸಿಗೆ ನಿಶ್ಚಿಂತೆಯನ್ನು ಉಂಟುಮಾಡು " ಎಂದು ಪ್ರಾರ್ಥನೆಮಾಡಿದರು.



೧೬ ನೆಯ ಅಧ್ಯಾಯ

## ದಶರಥನ ಹೆಂಡತಿಯರು ಗರ್ಭವನ್ನು ಧರಿಸಿದ್ದು

ಆಮೇಲೆ ಸರ್ವವ್ಯಾಪಕನಾದ ನಾರಾಯಣನು ಮನುಷ್ಯನಾಗಿ ಅವತರಿಸಿ ರಾವಣವಧೆಯನ್ನು ಮಾಡಬೇಕೆಂದು ಸಮಸ್ತ ದೇವತೆಗಳಿಂದಲೂ ಪ್ರಾರ್ಥಿಸಲ್ಪಟ್ಟವನಾಗಿ ರಾವಣನನ್ನು ಕೊಲ್ಲುವ ಉಪಾಯವನ್ನು ತಿಳಿದವನಾದರೂ ಆ ದೇವತೆಗಳನ್ನು ನೋಡಿ " ಎಲೈ ದೇವತೆಗಳಿರಾ, ದುರಾತ್ಮ ನಾಗಿ ಸಕಲ ಜನರಿಗೂ ಶತ್ರುವಾದ ರಾವಣನನ್ನು ಕೊಲ್ಲುವ ಉಪಾಯವು ಯಾವುದು ? " ಎಂದು ಕೇಳಿದನು.

ದೇವತೆಗಳು " ಸ್ವಾಮಿ, ಮನುಷ್ಯಾವತಾರಮಾಡಿ ಯುದ್ಧದಲ್ಲಿ ರಾವಣನನ್ನು ಕೊಲ್ಲಬೇಕು; ಆತನು ಬಹುಕಾಲ ತಪಸ್ಸುಮಾಡಿ ಸಮಸ್ತಲೋಕಪೂಜ್ಯನಾದ ಬ್ರಹ್ಮದೇವನನ್ನು ಮೆಚ್ಚಿಸಿ ಮನುಷ್ಯರು ಹೊರತಾಗಿ ಮತ್ತೆ ಯಾವ ಪ್ರಾಣಿಗಳಿಂದಲೂ ತನಗೆ ಕಂಟಕವಿಲ್ಲದಹಾಗೆ ವರವನ್ನು ಬೇಡಿಕೊಂಡನು. ಅಜ್ಞಾನಿಯಾದ ರಾವಣನು ಮನುಷ್ಯರನ್ನು ಇವರೆಷ್ಟರವರೆಂದು ಉದಾಸೀನ

ಮಾಡಿದನು, ಬ್ರಹ್ಮದೇವನಿಂದ ವರವನ್ನು ಪಡೆದು ಕೊಬ್ಬಿ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ಜಯಿಸಿ ಅಲ್ಲಲ್ಲಿರುವ ಉತ್ತಮರಾದ ಸ್ತ್ರೀಯರನ್ನು ಅಪಹರಿಸುತ್ತಿದ್ದಾನೆ, ಆದ್ದರಿಂದ, ಎಲೈ ಶತ್ರುಸಂಹಾರವನ್ನು ಮಾಡುವಂಥ ಸ್ವಾಮಿಯೆ, ಮನುಷ್ಯರಿಂದಲೇ ಆ ರಾಕ್ಷಸನಿಗೆ ಮರಣವಲ್ಲದೆ ಮತ್ತೊಬ್ಬರಿಂದಲ್ಲ" ಎಂದು ಬಿನ್ನಹಮಾಡಿದರು. ಆ ವಾಕ್ಯಗಳನ್ನು ಕೇಳಿ ಪರಮಾತ್ಮಸ್ವರೂಪನಾದ ಮಹಾವಿಷ್ಣುವು ದಶರಥರಾಯನನ್ನು ತಂದೆಯಾಗಿ ಭಾವಿಸಿದನು. ಅದೇಕಾಲದಲ್ಲಿ ಅತಿಪರಾಕ್ರಮಿಯಾದ ಆ ರಾಯನು ಸಂತಾನವಿಲ್ಲದೆ ಋಷ್ಯಶೃಂಗನಿಂದ ಪುತ್ರ ಕಾಮೇಷ್ಟಿಯನ್ನು ಮಾಡಿಸುತ್ತಿದ್ದನು. ಹೀಗೆ ಮನುಷ್ಯಾವತಾರವನ್ನೆತ್ತಲು ನಿಶ್ಚಯಿಸಿ ಅದನ್ನು ಬ್ರಹ್ಮದೇವನಿಗೆ ಹೇಳಿ ಸಮಸ್ತ ದೇವತೆಗಳೂ ಜಯ ಜಯ ! ಎಂದು ಕೊಂಡಾಡುತ್ತಿರಲು ಅಲ್ಲೇ ಮರೆಯಾದನು.

ಇತ್ತ ದಶರಥನು ಮಾಡುತ್ತಿದ್ದ ಪುತ್ರಕಾಮೇಷ್ಟಿಯ ಹೋಮಕುಂಡದಿಂದ ಅದ್ಭುತವಾದ ಮಹಾಬಲವುಳ್ಳದ್ದೂ, ಮಹಾಪರಾಕ್ರಮವುಳ್ಳದ್ದೂ, ಕೃಷ್ಣವರ್ಣವಾದ್ದೂ, ಕೆಂಪಿನ ಹೊದಿಕೆ ಯುಳ್ಳದ್ದೂ, ಕೆಂಪಾದ ಮುಖವುಳ್ಳದ್ದೂ, ಭೇರಿಯಂತೆ ಗಂಭೀರಧ್ವನಿಯುಳ್ಳದ್ದೂ, ಮಿಂಚಿನಂತೆ ಕಣ್ಣುಗಳುಳ್ಳದ್ದೂ, ಹೊಂಬಣ್ಣವಾದ ಶರೀರ ರೋಮಗಳುಳ್ಳದ್ದೂ, ಉದ್ದವಾದ ತಲೆಗೂದ ಲುಳ್ಳದ್ದೂ ಆಗಿ, ಆಭರಣಗಳಿಂದ ಅಲಂಕರಿಸಲ್ಪಟ್ಟ ಪರ್ವತದ ಕೋಡುಕಲ್ಲಿನಂತೆ ಅತ್ಯಂತ ಉದ್ದವಾಗಿ, ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಜ್ವಲಿಸುವ ಅಗ್ನಿಶಿಖಿಗೆ ಸಮಾನವಾಗಿ, ತೇಜೋಮಯವಾಗಿದ್ದ ಒಂದು ಆಕಾರವು ಉತ್ತಮವಾದ ಸುವರ್ಣಪಾತ್ರೆಯಲ್ಲಿ ದೇವನಿರ್ಮಿತವಾದ ಪಾಯಸವನ್ನಿರಿಸಿ ಅದರ ಮೇಲೆ ಬೆಳ್ಳಿಯ ಪಾತ್ರೆಯನ್ನು ಮುಚ್ಚಿಕೊಂಡು ತನಗೆ ಇಷ್ಟಳಾದ ಸ್ತ್ರೀಯನ್ನು ಕೈಹಿಡಿದು ಬರುವ ರೀತಿಯಲ್ಲಿ ಎದ್ದು ಬಂದಿತು ಆ ಪಾಯಸಪಾತ್ರೆಯನ್ನು ತೆಗೆದುಕೊಂಡು ದಶರಥರಾಯನ ಸಮೀಪಕ್ಕೆ ಬಂದು "ಎಲೈ ದಶರಥರಾಯನೆ, ನಾನು ಸಾಕ್ಷಾತ್ ಪ್ರಜಾಪತಿಯು ಕಳಿಸಿದ ಪುರುಷ ನೆಂದು ತಿಳಿ. ನಿನ್ನ ಸಮೀಪಕ್ಕೆ ಬಂದಿರುವೆನು" ಎಂದು ಹೇಳಲಾಗಿ, ಆಗ ಆ ರಾಯನು ಕೈಮುಗಿದು ಕೊಂಡು ಅತಿಹರ್ಷದಿಂದ ಮಹಾಪ್ರಸಾದವೆಂದು ಆ ದೇವನಿರ್ಮಿತವಾದ ಪಾಯಸದಿಂದ ಪರಿ ಪೂರ್ಣವಾದ ಸುವರ್ಣಪಾತ್ರೆಯನ್ನು ತೆಗೆದುಕೊಂಡು ಶಿರಸಾವಹಿಸಿ ಅದ್ಭುತ ತೇಜೋಮಯವಾದ ಆ ಪುರುಷಸ್ವರೂಪವನ್ನು ಸಂತೋಷದಿಂದ ಪ್ರದಕ್ಷಿಣಮಾಡಿ ನಮಸ್ಕರಿಸಿದನು. ದರಿದ್ರಪುರುಷನು ಧನವನ್ನು ಪಡೆದು ಯಾವ ಪ್ರಕಾರದಲ್ಲಿ ಸಂತೋಷಯುಕ್ತನಾಗುವನೋ ಆ ರೀತಿಯಲ್ಲಿ ಅತಿ ಹರ್ಷಪಟ್ಟು ಆ ತೇಜೋಮಯನಾದ ಮಹಾಪುರುಷನನ್ನು ಕುರಿತು "ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಪುರುಷನೆ, ನೀನು ಬಂದದ್ದು ಒಳ್ಳೆಯದಾಯಿತು ! ನಾನು ನಿನಗೆ ಮಾಡುವ ಸೇವೆ ಯಾವುದು ?" ಎಂದು ದಶರಥನು ಬಿನ್ನಹಮಾಡಿದನು.

ಆ ತೇಜೋಮಯನಾದ ಮಹಾಪುರುಷನು "ಎಲೈ ಅರಸನೆ, ನೀನು ಪುತ್ರಕಾಮೇಷ್ಟಿಯಾಗ ವನ್ನು ಮಾಡುವಾಗ ಹವಿರ್ಭಾಗವನ್ನು ತೆಗೆದುಕೊಂಡಂಥ ದೇವತೆಗಳು ಸುಪ್ರೀತರಾದರು. ಅದರಿಂದ ಈ ಪಾಯಸದಿಂದ ಕೂಡಿದ ಪಾತ್ರೆಯು ನಿನಗೆ ಬಂದಿತು ಈ ಪಾಯಸವು ದೇವತೆಗಳಿಂದ ನಿರ್ಮಿತವಾದುದು. ಸಂತಾನವನ್ನೂ ಮಹಾಧನಲಾಭವನ್ನೂ ಆರೋಗ್ಯವನ್ನೂ ಕೊಡುವಂಥದು. ಆದ್ದರಿಂದ ನೀನು ಈ ಪಾಯಸಪಾತ್ರವನ್ನು ತೆಗೆದುಕೊಂಡು ನಿನ್ನ ಸ್ತ್ರೀಯರಿಗೆ ಈ ಪಾಯಸವನ್ನು ಪಾನಮಾಡಲು ಕೊಟ್ಟರೆ ಆ ಸ್ತ್ರೀಯರ ಉದರದಿಂದ ನಿನ್ನ ಕೋರಿಕೆಗೆ ತಕ್ಕ ಮಕ್ಕಳಾಗುವರು !" ಎಂದು ಹೇಳಿ ಆ ಹೋಮಕುಂಡದಲ್ಲಿಯೇ ಅಂತರ್ಧಾನವಾದನು.

ಆಮೇಲೆ ದಶರಥರಾಯನು ಶರತ್ಕಾಲದಲ್ಲಿ ಚಂದ್ರಕಿರಣಗಳಿಂದ ಅಂತರಿಕ್ಷವು ಹೇಗೆ ಒಪ್ಪುತ್ತಿರುವುದೋ ಆ ರೀತಿಯಲ್ಲಿ ಹರ್ಷದ ಕಿರಣಗಳಿಂದ ಅತಿಪ್ರಕಾಶವಾಗಿ ಒಪ್ಪುತ್ತಿದ್ದ ತನ್ನ ಅಂತಃಪುರಕ್ಕೆ ಹೋಗಿ ಕೌಸಲ್ಯಾದೇವಿಯನ್ನು ಕರೆದು "ಸಂತಾನವನ್ನು ಕೊಡುವ ಈ ಪಾಯಸವನ್ನು ತೆಗೆದುಕೊ" ಎಂದು ಹೇಳಿ ಆ ದೇವಿಗೆ ಪಾಯಸದಲ್ಲಿ ಅರ್ಧಭಾಗವನ್ನು ಕೊಟ್ಟು ಉಳಿದ ಅರ್ಧ ಭಾಗವನ್ನು ಕೈಕೇಯಿಯೀ ದೇವಿಗೆ ಕೊಟ್ಟನು ಅವರಿಬ್ಬರೂ ತಮ್ಮ ತಮ್ಮ ಭಾಗದಲ್ಲಿ ಅರ್ಧಭಾಗ ವನ್ನು ಸುಮಿತ್ರಾದೇವಿಗೆ ಕೊಟ್ಟರು ಈ ರೀತಿಯಲ್ಲಿ ಪಾಯಸವನ್ನು ಪಡೆದು ಆ ರಾಜನ ಸ್ತ್ರೀಯರು ಮಹಾಪ್ರಸಾದವೆಂದು ಅತಿಹರ್ಷದಿಂದ ಅದನ್ನು ಸ್ವೀಕರಿಸಿ, ಯಜ್ಞಪುರುಷನಿಗೂ ಸೂರ್ಯನಿಗೂ ಸಮಾನವಾದ ಕಾಂತಿಯುಳ್ಳವರಾಗಿ ಶೀಘ್ರದಲ್ಲಿ ಗರ್ಭವನ್ನು ಧರಿಸಿದರು ದಶರಥ ಮಹಾರಾಯನು ಸ್ವರ್ಗಲೋಕದಲ್ಲಿ ಸಿದ್ಧಋಷಿಗಳಿಂದ ಸ್ತೋತ್ರಮಾಡಲ್ಪಡುವ ದೇವೇಂದ್ರ ನೋಪಾದಿಯಲ್ಲಿ ಪುತ್ರಕಾಮೇಷ್ಟಿಯಾಗವನ್ನು ಮಾಡಿ, ದೇವತೆಗಳ ವರದಿಂದ ಗರ್ಭವನ್ನು ಧರಿಸಿದ ತನ್ನ ಸ್ತ್ರೀಯರನ್ನು ಕೂಡಿ ಅತಿಹರ್ಷದಿಂದಿದ್ದನು.



## ೧೭ ನೆಯ ಅಧ್ಯಾಯ

## ದೇವತೆಗಳು ವಾನರರನ್ನು ಸೃಷ್ಟಿಸಿದ್ದು

ಈ ಪ್ರಕಾರದಲ್ಲಿ ಪರಮಪುರುಷನಾದ ನಾರಾಯಣನು ದಶರಥರಾಯನ ಕುಮಾರನಾಗಿ ಅವತರಿಸುವ ಸಮಯದಲ್ಲಿ ಬ್ರಹ್ಮದೇವನು ಸಮಸ್ತ ದೇವತೆಗಳನ್ನೂ ಕುರಿತು "ದೇವತೆಗಳಿರಾ, ಸತ್ಯಸಂಧನೂ ಧೈರ್ಯಗುಣಸಂಪನ್ನನೂ ಆದ ನಾರಾಯಣನಿಗೂ ನಿಮಗೂ ಹಿತವಾಗುವ ಹಾಗೆ ನೀವು ನಿಮ್ಮ ಅಂಶಗಳಿಂದ ಕಾಮರೂಪಧರರೂ ಅತ್ಯಂತ ಬಾಹುಪರಾಕ್ರಮವುಳ್ಳವರೂ ಮಹಾಶೂರರೂ ಮಾಯೆಯಲ್ಲಿ ಕುಶಲರೂ ನೀತಿಶಾಸ್ತ್ರಸಂಪನ್ನರೂ ಬುದ್ಧಿಶೀಲರೂ ಪರಾಕ್ರಮದಲ್ಲಿ ವಾಯುವಿಗೂ ವಿಷ್ಣುವಿಗೂ ಸಮಾನರೂ ಒಬ್ಬರಿಂದಲೂ ಗೆಲ್ಲುವುದಕ್ಕೆ ಅಸಾಧ್ಯರೂ ಉಪಾಯಜ್ಞರೂ ಸಮಸ್ತ ಆಯುಧಗಳಲ್ಲಿ ಕುಶಲರೂ ಜರಾಮರಣರಹಿತರೂ ಆದ ಕಪಿಗಳನ್ನು ಅಪ್ಸರಃಸ್ತ್ರೀಯರಲ್ಲಿಯೂ ಗಂಧರ್ವ ನಾಗಕನ್ಯೆಯರಲ್ಲಿಯೂ ಯಕ್ಷ ವಿದ್ಯಾಧರ ಕಿನ್ನರಸ್ತ್ರೀಯರಲ್ಲಿಯೂ ವಾನರಸ್ತ್ರೀಯ ರಲ್ಲಿಯೂ ನಿಮ್ಮ ನಿಮ್ಮ ಪರಾಕ್ರಮಕ್ಕೆ ಸಮಾನರಾದ ಮಕ್ಕಳನ್ನು ಸೃಷ್ಟಿಸಿರಿ ನಾನು ಮೊದಲೇ ಜಾಂಬವಂತನನ್ನು ಸೃಷ್ಟಿಸಿದ್ದೇನೆ; ನೀವೂ ವಾನರರನ್ನು ಸೃಷ್ಟಿಸಿರಿ" ಎಂದು ನುಡಿದನು.

ದೇವತೆಗಳು ಆತನ ಆಜ್ಞೆಯನ್ನು ಶಿರಸಾವಹಿಸಿ ಹಾಗೇ ಆಗಲೆಂದು ಅಲ್ಲಲ್ಲಿ ವಾನರರೂಪವುಳ್ಳ ಕುಮಾರರನ್ನು ಸೃಷ್ಟಿಸಿದರು; ಮಹಾತ್ಮರಾದ ಋಷಿಗಳೂ ಸಿದ್ಧರೂ ವಿದ್ಯಾಧರರೂ ನಾಗರೂ ಚಾರಣರೂ ಕಪಿಕುಮಾರರನ್ನು ಸೃಷ್ಟಿಸಿದರು; ದೇವೇಂದ್ರನು ತನಗೆ ಸಮಾನಬಲವುಳ್ಳವನಾಗಿ ಮಹಾಕೀರ್ತಿವಂತನಾದ ವಾನರಾಧಿಪತಿಯಾದ ವಾಲಿಯನ್ನು ಸೃಷ್ಟಿಸಿದನು; ಸೂರ್ಯನು ಸುಗ್ರೀವ ನನ್ನು ಸೃಷ್ಟಿಸಿದನು; ಬೃಹಸ್ಪತಿಯು ತಾರನೆಂಬ ಕಪಿಯನ್ನು ಸೃಷ್ಟಿಸಿದನು; ಕುಬೇರನು ಸಮಸ್ತ ಕಪಿಗಳಲ್ಲಿಯೂ ಬುದ್ಧಿವಂತನಾಗಿ ಸರ್ವಸಮರ್ಥನಾದ ಗಂಧಮಾದನನೆಂಬ ಕಪಿನಾಯಕನನ್ನು ಸೃಷ್ಟಿ ಸಿದನು; ವಿಶ್ವಕರ್ಮನು ನಳನೆಂಬ ಕಪಿನಾಯಕನನ್ನು ಸೃಷ್ಟಿಸಿದನು; ಯಜ್ಞೇಶ್ವರನು ತನಗೆ ಸಮಾನ ನಾದ ನೀಲನೆಂಬ ಕಪಿನಾಯಕನನ್ನು ಸೃಷ್ಟಿಸಿದನು; ನೀಲನು ಕೀರ್ತಿಯಿಂದಲೂ ಸಾಹಸದಿಂದಲೂ




ತೇಜೋಮಯವಾದ ಪುರುಷನು ದಶರಥನಿಗೆ ಪಾಯಸದ ಪಾತ್ರೆಯನ್ನು ನೀಡುವುದು

ಯಜ್ಞೇಶ್ವರನಿಗೂ ಅಧಿಕನೆನಿಸಿಕೊಂಡನು. ಅಶ್ವಿನೀದೇವತೆಗಳು ರೂಪಸಂಪನ್ನರಾಗಿ ದ್ರವ್ಯ ಸಂಪತ್ತುಳ್ಳವರಾದ ಮೈಂದ ದ್ವಿವಿದರೆಂಬ ಕಪಿನಾಯಕರನ್ನು ಸೃಜಿಸಿದರು ವರುಣನು ಸುಷೇಣ ನೆಂಬ ಕಪಿನಾಯಕನನ್ನು ಸೃಜಿಸಿದನು ಪ್ರದ್ಯುಮ್ನನು ಮಹಾಬಲವಂತನಾದ ಶರಭನನ್ನು ಸೃಜಿಸಿದನು. ವಾಯುವು ಮಹಾಬಲವಂತನಾಗಿ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನಾದ, ಯುದ್ಧದಲ್ಲಿ ಅತಿಕುಶಲನಾದ, ವೇಗದಲ್ಲಿ ಗರುಡನಿಗೆ ಸಮಾನನಾಗಿ ಬಲವಾದ ದೇಹವುಳ್ಳ ಹನುಮಂತನನ್ನು ಸೃಜಿಸಿದನು ಈ ರೀತಿಯಲ್ಲಿ ರಾವಣನ ವಧೆಯಲ್ಲಿ ಸಮರ್ಥರೂ ಅಪರಿಮಿತ ಬಲವುಳ್ಳವರೂ ಕಾಮರೂಪಿಗಳೂ ಮೇರುಪರ್ವತ ಮಂದರಪರ್ವತಗಳಿಗೆ ಸಮಾನವಾದ ಶರೀರ ವುಳ್ಳವರೂ ಮಹಾಬಲಪರಾಕ್ರಮಿಗಳೂ ಆದ ಕರಡಿ ವಾನರ ಮುಸುವುಗಳೆಂಬ ಭೇದದಿಂದ ಅನೇಕ ಕಪಿನಾಯಕರನ್ನು ಹೆಣ್ಣುಮುಸುವುಗಳಲ್ಲಿಯೂ ಹೆಣ್ಣು ಕರಡಿಗಳಲ್ಲಿಯೂ ಹೆಣ್ಣುಕಪಿಗಳಲ್ಲಿಯೂ ಋಷಿಗಳು ಗಂಧರ್ವರು ಗರುಡರು ಯಕ್ಷರು ನಾಗರು ಕಿನ್ನರರು ಕಿಂಪುರುಷರು ಸಿದ್ಧರು ವಿದ್ಯಾ ಧರರು ಚಾರಣರು ಮೊದಲಾದ ದೇವತೆಗಳು ಅಲ್ಲಲ್ಲಿ ಸೃಜಿಸಿದರು ಈ ಪ್ರಕಾರದಲ್ಲಿ ಅಪ್ಸರಃ ಸ್ತ್ರೀಯರಲ್ಲಿಯೂ ವಿದ್ಯಾಧರಸ್ತ್ರೀಯರಲ್ಲಿಯೂ ನಾಗಕನ್ಯೆಯರಲ್ಲಿಯೂ ಗಂಧರ್ವಸ್ತ್ರೀಯರ ಲ್ಲಿಯೂ ಜನಿಸಿದ ಕಪಿನಾಯಕರು ಕಾಮರೂಪಿಗಳಾಗಿ ಅತ್ಯಂತ ಬಲೋತ್ಸಾಹವುಳ್ಳವರೂ ಶಾಸ್ತ್ರಜ್ಞರೂ ಸಿಂಹಶಾರ್ದೂಲಗಳ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವರೂ ಪರ್ವತ ಗಳನ್ನೂ ವೃಕ್ಷಗಳನ್ನೂ ಬೇರುಸಹಿತವಾಗಿ ಕಿತ್ತು ಯುದ್ಧಮಾಡುವವರೂ ಆಗಿದ್ದರು. ಎಲ್ಲರಿಗೂ ಉಗುರುಗಳೇ ಆಯುಧಗಳು. ಕೋರೆಹಲ್ಲುಗಳೇ ಆಯುಧಗಳು. ಎಲ್ಲರೂ ಪರ್ವತಗಳನ್ನು ಚಲನ ಮಾಡುವಂಥವರಾಗಿದ್ದರು ಸಮಸ್ತ ಶಸ್ತ್ರಾಸ್ತ್ರಗಳಲ್ಲಿ ಕುಶಲರಾಗಿದ್ದರು. ದೃಢತರಗಳಾದ ಮರಗಳನ್ನು ಲೀಲಾಮಾತ್ರದಿಂದ ಮುರಿಯುವವರಾಗಿದ್ದರು. ತಮ್ಮ ವೇಗದಿಂದ ಶತ್ರುಗಳನ್ನು ಕಂಗೆಡಿಸುವವರಾಗಿದ್ದರು ಭೂಮಿಯನ್ನೂ ಬೆಟ್ಟವನ್ನೂ ಸೀಳಿ ಭಾಗಮಾಡುವವರಾಗಿದ್ದರು ಭೂಮಿಯನ್ನು ಸಮುದ್ರದಲ್ಲಿ ತೇಲಿಸುವವರಾಗಿದ್ದರು ಪಾತಾಳಲೋಕವನ್ನಾದರೂ ಪ್ರವೇಶಿಸು ವವರಾಗಿ ಮನಸ್ಸಿಗೆ ಬಂದ ರೂಪವನ್ನು ತಾಳುವವರಾಗಿದ್ದರು ಮತ್ತು ಆ ಕಪಿನಾಯಕರು ತಮಗೆ ಸಮಾನಪರಾಕ್ರಮಿಗಳಾದ ಕುಮಾರರಿಗೆ ಜನ್ಮಕೊಡುತ್ತಿದ್ದರು ಈ ಪ್ರಕಾರದಲ್ಲಿ ಬಹುಮಂದಿ ಮಕ್ಕಳನ್ನು ಪಡೆಯುತ್ತ ಪರ್ವತವನಾಂತರಗಳನ್ನು ಪ್ರವೇಶಿಸಿ ವಿನೋದಾರ್ಥವಾಗಿ ಸಂಚರಿಸುತ್ತ ಸೂರ್ಯನ ಪುತ್ರನಾದ ಸುಗ್ರೀವನನ್ನೂ ದೇವೇಂದ್ರನ ಪುತ್ರನಾದ ವಾಲಿಯನ್ನೂ ನಳ ನೀಲ ಹನುಮಂತ ಮತ್ತು ಇತರ ಕಪಿಸೇನಾನಾಯಕರನ್ನೂ ಕೂಡಿಕೊಂಡು ಅವರ ವಶವರ್ತಿಗಳಾಗಿ ಅವರು ಹೇಳಿದ ಕಾರ್ಯಗಳನ್ನು ನಿರ್ವಹಿಸಿಕೊಂಡಿದ್ದರು. ಇವರೆಲ್ಲರೂ ಗರುಡನಿಗೆ ಸಮಾನವಾದ ವೇಗವುಳ್ಳವರಾಗಿ ಯುದ್ಧದಲ್ಲಿ ಅತ್ಯಂತ ನಿಪುಣರಾಗಿ ಸಿಂಹ ವ್ಯಾಘ್ರ ಸರ್ಪಾದಿಗಳ ನ್ನೆಬ್ಬಿಸಿ ಬೆದರಿಸಿ ಕೊಲ್ಲುತ್ತ ವಿನೋದದಿಂದಿರಲು ಅತಿಪರಾಕ್ರಮಿಯಾದ ವಾಲಿಯು ತನ್ನ ಭುಜಬಲ ಪರಾಕ್ರಮದಿಂದ ಎಲ್ಲರನ್ನೂ ರಕ್ಷಿಸಿಕೊಂಡಿದ್ದನು. ಈ ಕಪಿಗಳಿಂದ ಪರ್ವತಗಳೂ ಕಾನನಗಳೂ ಸಮುದ್ರತೀರಗಳೂ ಭೂಮಂಡಲವೂ ಇಟ್ಟಣಿಸಿದ್ದುವು. ಈ ರೀತಿಯಲ್ಲಿ ನಾನಾಸ್ಥಾನಗಳಲ್ಲಿ ನಾನಾಸ್ವರೂಪದಿಂದ ಮಹಾಬಲಪರಾಕ್ರಮವುಳ್ಳವರಾಗಿ ಮೇಘಸಮೂಹಗಳಿಗೂ ಪರ್ವತದ ಕೋಡುಗಲ್ಲುಗಳಿಗೂ ಸಮಾನರಾಗಿ ಭಯಂಕರಾಕಾರರಾದ ಕಪಿಸೇನಾನಾಯಕರು ಶ್ರೀರಾಮನ ಸಹಾಯಾರ್ಥವಾಗಿ ಭೂಮಂಡಲದಲ್ಲೆಲ್ಲೆಲ್ಲಿಯೂ ವ್ಯಾಪಿಸಿದ್ದರು.



## ೧೮ನೆಯ ಅಧ್ಯಾಯ

## ರಾಮ ಲಕ್ಷ್ಮಣ ಭರತ ಶತ್ರುಘ್ನರು ಹುಟ್ಟಿ ಬೆಳೆದುದು

ಅಶ್ವಮೇಧಯಾಗವು ಸಮಾಪ್ತಿಯಾಗಿ ಆ ಯಾಗದಲ್ಲಿ ಹವಿರ್ಭಾಗವನ್ನು ತೆಗೆದುಕೊಂಡು ದೇವತೆಗಳು ತಮ್ಮ ಲೋಕಗಳಿಗೆ ಬಿಜಯಂಗೈಯಲು, ದಶರಥಮಹಾರಾಯನು ಯಾಗದೀಕ್ಷೆಯನ್ನು ಸಮಾಪ್ತಿಮಾಡಿ ಚತುರಂಗಬಲಸಮೇತನಾಗಿ ತನ್ನ ಪಟ್ಟಣಕ್ಕೆ ಹೋದನು. ಯಾಗಕ್ಕೆ ಬಂದಿದ್ದ ಸಮಸ್ತ ಅರಸರೂ ದಶರಥರಾಯನಿಂದ ಸತ್ಕಾರವನ್ನು ಪಡೆದು ಅತಿಹರ್ಷದಿಂದ ಋಷ್ಯಶೃಂಗ ಮುನೀಶ್ವರನಿಗೆ ನಮಸ್ಕಾರವನ್ನು ಮಾಡಿ ತಮ್ಮ ತಮ್ಮ ದೇಶಗಳಿಗೆ ಹೋದರು ಅವರ ಬಲಸಮೂಹಗಳು ಯಾಗದಲ್ಲಿ ಮೃಷ್ಟಾನ್ನಭೋಜನಗಳನ್ನು ಮಾಡಿ ಹೋಮಧೂಮವನ್ನು ಆಘ್ರಾಣಿಸಿದ್ದರಿಂದ ಪ್ರಕಾಶಮಾನವಾಗಿ ಅತಿಹರ್ಷದಿಂದ ಒಪ್ಪುತ್ತಿದ್ದುವು. ಸಮಸ್ತ ಅರಸರೂ ತಮ್ಮ ತಮ್ಮ ರಾಜ್ಯಗಳಿಗೆ ಹೋದಬಳಿಕ ದಶರಥರಾಜನು ಬ್ರಾಹ್ಮಣರನ್ನು ಮುಂದಿಟ್ಟುಕೊಂಡು ಅಯೋಧ್ಯಾಪಟ್ಟಣಕ್ಕೆ ಹಿಂತಿರುಗಿದನು ಆಗ ಋಷ್ಯಶೃಂಗನು ಶಾಂತಾದೇವಿಯೊಡನೆ ದಶರಥ ರಾಯನಿಂದ ಬೀಳ್ಕೊಂಡು ತನ್ನ ಸ್ಥಾನಕ್ಕೆ ತೆರಳಿದನು.

ಈರೀತಿಯಲ್ಲಿ ಸಮಸ್ತರನ್ನೂ ಕಳುಹಿಸಿ ದಶರಥರಾಯನು ನಿಶ್ಚಿಂತನಾಗಿ ತನಗೆ ಯಾವಾಗ ಸಂತಾನಪ್ರಾಪ್ತಿ ಆಗುವುದೆಂದು ನಿರೀಕ್ಷಿಸುತ್ತಿದ್ದನು. ಅನಂತರ ಯಜ್ಞಸಮಾಪ್ತಿಯಾದ ಹನ್ನೆರಡನೆಯ ತಿಂಗಳಾದ ಚೈತ್ರಮಾಸದ ಶುಕ್ಲಪಕ್ಷದ ನವಮಿದಿವಸದಲ್ಲಿ ಪುನರ್ವಸು ನಕ್ಷತ್ರದಲ್ಲಿ ಐದು ಶುಭಗ್ರಹ ಗಳು ಉಚ್ಚಕ್ಷೇತ್ರದಲ್ಲಿಯೂ ಬೃಹಸ್ಪತಿಯು ಚಂದ್ರನೊಡನೆಯೂ ಕೂಡಿ ಇರುವಾಗ, ಕರ್ಕಾಟಕ ಲಗ್ನದಲ್ಲಿ ಸಮಸ್ತ ಲೋಕಗಳಿಂದಲೂ ನಮಸ್ಕರಿಸಲ್ಪಟ್ಟ ಪಾದಾರವಿಂದಗಳುಳ್ಳ ಪರಮಪುರುಷನು ರಾಮನಾಗಿ ಅವತರಿಸಿದನು ಕೌಸಲ್ಯಾದೇವಿಯು ಸರ್ವಲಕ್ಷಣಸಂಪನ್ನನಾದ ನಾರಾಯಣನ ಅರ್ಧಾಂಶನಾಗಿ ಇಕ್ಷ್ವಾಕುಕುಲವರ್ಧನನಾದ ರಾಮಚಂದ್ರನನ್ನು ಪಡೆದಳು ! ಕೆಂಪಾದ ಮುಖವುಳ್ಳ, ಭೇರಿಯ ಹಾಗೆ ಗಂಭೀರಧ್ವನಿಯುಳ್ಳ, ಕೆಂಪಾದ ಕಣ್ಣುಗಳುಳ್ಳ ಕುಮಾರನನ್ನು ಪಡೆದು ಕೌಸಲ್ಯಾ ದೇವಿಯು ಅತ್ಯಂತ ಹರ್ಷವುಳ್ಳವಳಾಗಿ ದೇವೇಂದ್ರನನ್ನು ಪಡೆದ ಅದಿತಿಯ ಹಾಗೆ ಒಪ್ಪುತ್ತಿದ್ದಳು. ಆಮೇಲೆ ಕೈಕೇಯಿದೇವಿಯಲ್ಲಿ ಮಹಾಸತ್ಯಪರಾಕ್ರಮಿಯಾದ ಸಾಕ್ಷಾತ್ ನಾರಾಯಣನ ನಾಲ್ಕು ಅಂಶದೊಳಗೆ ಒಂದಂಶವಾದ ಭರತನು ಅವತರಿಸಿ ಸಮಸ್ತ ಸದ್ಗುಣಗಳಿಂದ ಪ್ರಕಾಶಮಾನನಾಗಿ ಒಪ್ಪುತ್ತಿದ್ದನು. ಆಮೇಲೆ ಸುಮಿತ್ರಾದೇವಿಯು ಸರ್ವಲಕ್ಷಣಸಂಪನ್ನರಾದ ಮಹಾಪರಾಕ್ರಮಿ ಗಳಾದ ವಿಷ್ಣುವಿನ ಅರ್ಧಾಂಶರಾದ ಲಕ್ಷ್ಮಣ ಶತ್ರುಘ್ನರೆಂಬ ಕುಮಾರರನ್ನು ಪಡೆದಳು. ಭರತನು ಪುಷ್ಯನಕ್ಷತ್ರದಲ್ಲಿ ಮೀನಲಗ್ನದಲ್ಲಿ ಮಹಾಪ್ರಸನ್ನವಾದ ಬುದ್ಧಿಯುಳ್ಳವನಾಗಿ ಅವತರಿಸಿದನು ಆಶ್ಲೇಷಾನಕ್ಷತ್ರದ ಕಡೆಯ ಪಾದದಲ್ಲಿ ಕರ್ಕಾಟಕಲಗ್ನದಲ್ಲಿ ಲಕ್ಷ್ಮಣ ಶತ್ರುಘ್ನರು ಉದಯಿಸಿದರು. ಈ ಪ್ರಕಾರದಲ್ಲಿ ದಶರಥಮಹಾರಾಯನಿಗೆ ಅತ್ಯಂತರೂಪಲಾವಣ್ಯಸೌಂದರ್ಯಾದಿ ಗುಣಗಳಿಂದ ಸಂಪನ್ನರಾದ ನಾಲ್ವರು ಕುಮಾರರು ಅವತರಿಸಲು, ಆಕಾಶದಲ್ಲಿ ದೇವತೆಗಳು ನೃತ್ಯವಾದ್ಯ ಪುಷ್ಪವೃಷ್ಟಿ ಮೊದಲಾದ ಉತ್ಸವಗಳನ್ನು ಮಾಡಿದರು. ಅಪ್ಸರಃಸ್ತ್ರೀಯರು ನರ್ತನ ಮಾಡಿದರು. ದಶರಥಮಹಾರಾಯನು ಮಂಗಲಪಾಠಕರಿಗೂ ಕೊಂಡಾಡುವವರಿಗೂ ಅನೇಕ ವಸ್ತುಗಳನ್ನು ಬಹುಮಾನವಾಗಿ ಕೊಟ್ಟು ಜಾತಕರ್ಮವೆಂಬ ಮಾಂಗಲ್ಯಕರ್ಮವನ್ನು ಮಾಡಿಸಿ ಬ್ರಾಹ್ಮಣರಿಗೆ

ಧನಧಾನ್ಯ ಗೋದಾನಾದಿಗಳನ್ನು ಬಹಳವಾಗಿ ಕೊಟ್ಟು ಹನ್ನೊಂದು ದಿವಸಗಳು ಕಳೆದಮೇಲೆ ನಾಮಕರಣ ಮಾಡಿಸಿದನು ಕೌಸಲ್ಯಾದೇವಿಯ ಕುಮಾರನಿಗೆ 'ರಾಮ' ಎಂಬ ನಾಮಧೇಯವನ್ನೂ, ಕೈಕೇಯಿದೇವಿಯ ಮಗನಿಗೆ 'ಭರತ' ಎಂಬ ಹೆಸರನ್ನೂ, ಸುಮಿತ್ರಾದೇವಿಯ ಮಕ್ಕಳಿಗೆ 'ಲಕ್ಷ್ಮಣ' 'ಶತ್ರುಘ್ನ' ಎಂಬ ಹೆಸರುಗಳನ್ನೂ ಇಟ್ಟು ಪುರೋಹಿತನಾದ ವಸಿಷ್ಠಮುನೀಶ್ವರನು ಆ ಹೆಸರುಗಳಿಂದ ಆ ಕುಮಾರರನ್ನು ಕರೆದನು. ಆಮೇಲೆ ದಶರಥನು ಬ್ರಾಹ್ಮಣಭೋಜನವನ್ನು ಮಾಡಿಸಿ ಸಮಸ್ತ ಪಟ್ಟಣದ ಪರಿವಾರಕ್ಕೂ ಅನ್ನವನ್ನು ಬಡಿಸಿ ಬ್ರಾಹ್ಮಣರಿಗೆ ಅನರ್ಘ್ಯಗಳಾದ ರತ್ನಗಳನ್ನೂ ವಸ್ತ್ರಾಭರಣಗಳನ್ನೂ ಕೊಟ್ಟು ನಾಲ್ಕನೆಯ ತಿಂಗಳಲ್ಲಿ ನಿಷ್ಕ್ರಮಣ (ಹೊಸ್ತಿಲುದಾಟವೆಂಬ) ಸತ್ಕರ್ಮವನ್ನೂ ಆರನೆಯ ತಿಂಗಳಲ್ಲಿ ಅನ್ನಪ್ರಾಶನ ಮೊದಲಾದ ಸಮಸ್ತ ಕರ್ಮಗಳನ್ನೂ ಕ್ರಮವಾಗಿ ಮಾಡಿಸಿದನು ಆ ನಾಲ್ವರು ಕುಮಾರರಲ್ಲಿ ಜ್ಯೇಷ್ಠಪುತ್ರನಾದ ರಾಮನು ಅತ್ಯುತ್ತಮನಾಗಿ ತಂದೆಯಾದ ದಶರಥರಾಯನಿಗೆ ಅತ್ಯಂತ ಪ್ರಿಯನಾಗಿ ಸಮಸ್ತ ಪ್ರಾಣಿಗಳಿಗೂ ಸಮ್ಮತನಾಗಿದ್ದನು. ಆ ನಾಲ್ವರು ಕುಮಾರರು ವೇದವೇದಾಂಗತತ್ತ್ವಜ್ಞರೂ ಮಹಾಪರಾಕ್ರಮಿಗಳೂ ಸಮಸ್ತ ಲೋಕಗಳಿಗೂ ಹಿತವನ್ನೇ ಬಯಸುವಂಥವರೂ ವಿನಯಾದಿಗುಣಸಂಪನ್ನರೂ ಅತಿಪರಾಕ್ರಮಿಗಳೂ ಸಮಸ್ತರಿಗೂ ಹಿತರಾಗಿ ಚಂದ್ರನೋಪಾದಿಯಲ್ಲಿ ಶಾಂತಗುಣವುಳ್ಳವರೂ ಅಶ್ವಾರೋಹಣ ಗಜಾರೋಹಣ ರಥಾರೋಹಣಗಳಲ್ಲಿ ಅತಿನಿಪುಣರೂ ಧನುರ್ವಿದ್ಯೆಯಲ್ಲಿ ಅತಿಕುಶಲರೂ ತಂದೆಯ ಸೇವೆಯಲ್ಲಿ ಅತ್ಯಂತ ಪ್ರೀತಿಯುಳ್ಳವರೂ ಆಗಿದ್ದರು. ಲಕ್ಷ್ಮಣನು ಹುಟ್ಟಿದ್ದು ಮೊದಲು ತನ್ನ ಹಿರಿಯಣ್ಣನಾಗಿ ಸಕಲಲೋಕಮನೋಹರನಾದ ರಾಮಚಂದ್ರನಲ್ಲಿ ಯಾವಾಗಲೂ ಅತಿಪ್ರೀತಿಯುಳ್ಳವನಾಗಿ ಆತನ ಶರೀರದಿಂದ ಹೊರಗೆ ಸಂಚರಿಸುವ ಪ್ರಾಣವೋ ಎಂಬಹಾಗೆ ಸರ್ವಗುಣಶೀಲಸಂಪನ್ನನಾಗಿ ಆತನ ಸೇವೆಯನ್ನೇ ಮಾಡಿಕೊಂಡಿದ್ದನು. ರಾಮನು ಲಕ್ಷ್ಮಣನನ್ನು ಬಿಟ್ಟು ಅನ್ನಪಾನಾದಿಗಳನ್ನು ತೆಗೆದುಕೊಳ್ಳದಿದ್ದನು. ಈ ರೀತಿಯಲ್ಲಿಯೇ ಶತ್ರುಘ್ನನು ಭರತನ ಮತ್ತೊಂದು ಪ್ರಾಣವೋ ಎಂಬ ಪ್ರಕಾರದಲ್ಲಿ ನಿತ್ಯದಲ್ಲಿಯೂ ಆತನಿಗೆ ಹಿತೋಪಚಾರವನ್ನು ಮಾಡುತ್ತಿದ್ದನು. ರಘುನಾಥನು ಬೇಟೆಗಾಗಿ ಹೊರಟರೆ ಲಕ್ಷ್ಮಣನು ತನ್ನ ಮನಸ್ಸನ್ನೂ ದೃಷ್ಟಿಯನ್ನೂ ಆತನ ಮೇಲೆಯೇ ಇರಿಸಿ ಧನುರ್ಬಾಣಗಳನ್ನು ತೆಗೆದುಕೊಂಡು ಬೆನ್ನ ಹಿಂದೆ ಹೋಗುತ್ತಿದ್ದನು. ಶತ್ರುಘ್ನನು ಅದೇ ರೀತಿಯಲ್ಲಿ ಭರತನ ಹಿಂದೆ ಹೋಗುತ್ತಿದ್ದನು. ಈ ಪ್ರಕಾರದಲ್ಲಿ ಆ ನಾಲ್ವರು ಕುಮಾರರೂ ಅನ್ಯೋನ್ಯವಾಗಿ ಒಬ್ಬರಮೇಲೊಬ್ಬರು ಪ್ರೀತಿಯುಳ್ಳವರಾಗಿ ತಮ್ಮ ತಂದೆಯಾದ ದಶರಥ ರಾಜನಿಗೆ ಅತ್ಯಂತ ಸಂತೋಷವನ್ನುಂಟುಮಾಡುತ್ತಿರಲು ಆತನು ದೇವತೆಗಳಿಂದ ಸೇವಿಸಲ್ಪಟ್ಟ ನಾರಾಯಣನ ಹಾಗೆ ಆನಂದದಲ್ಲಿದ್ದನು

ಹೀಗೆ ಅತ್ಯಂತ ಜ್ಞಾನಸಂಪನ್ನರೂ ಮುಂದಣ ಕಾರ್ಯಗತಿಗಳನ್ನು ತಿಳಿದವರೂ ಐಶ್ವರ್ಯ ಕೀರ್ತಿ ವಿನಯಗುಣಸಂಪನ್ನರೂ ಅತ್ಯಂತ ತೇಜಸ್ವಿಗಳೂ ಆಗಿದ್ದ ಕುಮಾರರ ಪ್ರಭಾವವನ್ನೂ ಅವರ ವೇದಾಧ್ಯಯನಾದಿ ಶಾಸ್ತ್ರಾಭ್ಯಾಸಗಳನ್ನೂ ಕಂಡು ದಶರಥನು ಅವರಿಗೆ ವಿವಾಹಮಾಡಬೇಕೆಂದು ಪುರೋಹಿತನಾದ ವಸಿಷ್ಠಮುನೀಶ್ವರನೊಡನೆಯೂ ಬಂಧುಗಳೊಡನೆಯೂ ಆಲೋಚನೆ ಮಾಡುತ್ತಿದ್ದನು. ಆ ಸಮಯದಲ್ಲಿ ವಿಶ್ವಾಮಿತ್ರಮುನೀಶ್ವರನು ದಶರಥರಾಯನನ್ನು ಕಾಣಬೇಕೆಂದು ಅರಮನೆಯ ಬಾಗಿಲಿಗೆ ಬಂದು ದ್ವಾರಪಾಲಕರನ್ನು ಕರೆದು "ಗಾಧಿಪುತ್ರನಾದ ವಿಶ್ವಾಮಿತ್ರಮುನಿಯು ಬಂದಿದ್ದಾನೆ" ಎಂದು ರಾಯನಿಗೆ ಹೇಳಬೇಕೆಂದನು. ಆ ದ್ವಾರಪಾಲಕರು ಅತ್ಯಂತ ಭಯದಿಂದ ವಿಶ್ವಾಮಿತ್ರನು ಬಂದಿರುವುದನ್ನು ರಾಯನಿಗೆ ಬಿನ್ನಹಮಾಡಲು ಆ ವಾಕ್ಯವನ್ನು ಕೇಳಿ ಆ ರಾಯನು ಪುರೋಹಿತನಾದ ವಸಿಷ್ಠನನ್ನು ಮುಂದಿಟ್ಟುಕೊಂಡು ದೇವೇಂದ್ರನು ಬ್ರಹ್ಮದೇವನನ್ನು ಎದುರುಗೊಳ್ಳುವ ಹಾಗೆ

ಅತ್ಯಂತ ವ್ರತಸಿದ್ಧನಾದ ವಿಶ್ವಾಮಿತ್ರಮುನಿಯನ್ನು ಎದುರುಗೊಂಡು ಅಭಿವಂದಿಸಿ ಅರ್ಘ್ಯಪಾದ್ಯಾಚಮನಾದಿಸತ್ಕಾರಗಳನ್ನು ಮಾಡಿದನು ಆತನು ಆ ಸತ್ಕಾರಗಳನ್ನು ಕೈಕೊಂಡು ಆ ರಾಯನ ಮತ್ತು ಅವನ ಕೋಶ ದೇಶ ಬಾಂಧವರು ಸುಹೃತ್ತುಗಳು ಮುಂತಾದ ಎಲ್ಲರ ಕುಶಲವನ್ನು ಕೇಳಿ ಪುರೋಹಿತನಾದ ವಸಿಷ್ಠಮುನೀಶ್ವರನ ಕ್ಷೇಮವನ್ನು ಕೇಳಿ ಮತ್ತು ಅಲ್ಲಿ ಇದ್ದ ಋಷಿಗಳ ಕ್ಷೇಮವನ್ನು ಕೇಳಲು ಆ ಋಷಿಗಳು ಸಂತುಷ್ಟಚಿತ್ತರಾಗಿದ್ದರು. ಬಳಿಕ ದಶರಥರಾಯನು ಅವರೆಲ್ಲರಿಗೂ ಯಥಾಕ್ರಮದಲ್ಲಿ ಅರ್ಘ್ಯಪಾದ್ಯಾದಿಸತ್ಕಾರಗಳನ್ನು ಮಾಡಿ ಕುಳಿತುಕೊಂಡು ಸಂತೋಷದಿಂದ ವಿಶ್ವಾಮಿತ್ರಮುನಿಯನ್ನು ಕುರಿತು "ಮುನೀಶ್ವರರೆ, ನೀವು ನನ್ನ ಅರಮನೆಗೆ ಬಿಜಯಂಗೈದದ್ದು ಸ್ವರ್ಗಲೋಕದಿಂದ ಬೃಹಸ್ಪತಿಯೇ ಬಂದಂತೆಯೂ, ಉದಕವಿಲ್ಲದ ಸ್ಥಳಕ್ಕೆ ಮಳೆಸುರಿದಂತೆಯೂ, ಪ್ರಿಯವಾದ ಕುಲಸ್ತ್ರೀಯಲ್ಲಿ ಕುಮಾರರು ಜನಿಸಿದಂತೆಯೂ ನನ್ನ ಅತ್ಯಂತ ಶ್ರೇಯಸ್ಸಿಗೆ ಕಾರಣವಾಯಿತು. ಸ್ವಾಮಿ, ನಿಮಗೆ ನಾನು ಮಾಡುವ ಸೇವೆ ಯಾವುದು ? ನಿಮ್ಮ ಮನಸ್ಸಿಗೆ ಪ್ರೀತಿ ಯಾವುದು ? ಸಮಸ್ತ ದಾನಾದಿಗಳಿಗೂ ಸತ್ಪಾತ್ರರಾದ ನೀವು ನನ್ನ ಭಾಗ್ಯದಿಂದ ನನ್ನ ಮನೆಗೆ ಬಂದಿರಿ ಆದ್ದರಿಂದ ನನ್ನ ಜನ್ಮವು ಸಫಲವಾಯಿತು. ಇಷ್ಟು ದಿವಸಗಳು ನಾನು ಬದುಕಿದ್ದಕ್ಕೆ ಈ ದಿವಸ ನನ್ನ ಪಿತೃಗಳು ಸುಕೃತಶಾಲಿಗಳಾದರು ನಿಮ್ಮ ದರ್ಶನದಿಂದ ಇಂದು ಸುದಿನವಾಯಿತು. ನೀವು ಪೂರ್ವದಲ್ಲಿ ತಪಸ್ಸಿನಿಂದ ಅತಿತೇಜಸ್ವಿಯಾಗಿ ರಾಜಋಷಿಯೆಂದು ಪ್ರಸಿದ್ಧಿಯನ್ನು ಪಡೆದಿರಿ. ಆಮೇಲೆ ತಪಸ್ಸಿನಿಂದ ಬ್ರಹ್ಮಋಷಿತ್ವವನ್ನು ಪಡೆದು ಪೂಜ್ಯರಾದ್ದರಿಂದ ನಮಗೆ ಮಹಾಪೂಜ್ಯರು ನನ್ನ ಮನೆಗೆ ನೀವು ಬಂದದ್ದು ಆಶ್ಚರ್ಯವಾಯಿತು ನಿಮ್ಮ ದರ್ಶನದಿಂದ ನಾನು ಪುಣ್ಯಭೂಮಿಯಲ್ಲಿರುವಂಥವನಾದೆನು ನನ್ನ ಶ್ರೇಯಸ್ಸಿಗೋಸ್ಕರ, ನೀವು ಬಂದ ಕಾರ್ಯವನ್ನು ಕೇಳಲಿಚ್ಛಿಸುತ್ತೇನೆ ನನ್ನಲ್ಲಿ ಅನುಗ್ರಹಿಸಿ ಬಂದಕಾರ್ಯವನ್ನು ನಿರೂಪಿಸಿರಿ, ನೀವು ನನಗೆ ಇಷ್ಟದೇವತೆಯಾದವರು. ಆದ್ದರಿಂದ ನಿಮ್ಮ ಕಾರ್ಯಕ್ಕೆ ನಾನು ಕರ್ತನು. ನನಗೆ ನಿಮ್ಮ ದರ್ಶನದಿಂದ ಅತ್ಯಂತ ಶ್ರೇಯಸ್ಸಾದೀತು" ಎಂದು ಮನಸ್ಸಿಗೆ ಸಂತೋಷಕರವಾದ ಕಿವಿಗಿಂಪಾದ ಮಾತುಗಳಿಂದ ವಿನಯದೊಡನೆಯೂ ಔದಾರ್ಯಗುಣದೊಡನೆಯೂ ಕೂಡಿ ಬಿನ್ನಹಮಾಡಿದನು.

---

೧೯ ನೆಯ ಅಧ್ಯಾಯ

## ವಿಶ್ವಾಮಿತ್ರನು ಶ್ರೀರಾಮನನ್ನು ಕರೆದದ್ದು

ಆಮೇಲೆ ಶ್ರೀರಾಮನನ್ನು ಸಮಸ್ತ ರಾಯರಿಗೂ ಉತ್ತಮನಾದ ದಶರಥಮಹಾರಾಯನ ಅತ್ಯದ್ಭುತವೂ ಸಂತೋಷದಿಂದ ವಿಸ್ತಾರವೂ ಆದ ವಾಕ್ಯಗಳನ್ನು ಕೇಳಿ ವಿಶ್ವಾಮಿತ್ರಮುನೀಶ್ವರನು ಆತನನ್ನು ಕುರಿತು "ಎಲೈ ದಶರಥರಾಯನೆ, ನನ್ನ ಇಷ್ಟಾರ್ಥವನ್ನು ಸಲ್ಲಿಸಿಕೊಡುವುದಾಗಿ ಹೇಳಿದ ಅದ್ಭುತವಾದ ವಾಕ್ಯವು ಇಕ್ಷ್ವಾಕುವಂಶದಲ್ಲಿ ಹುಟ್ಟಿದ ನಿನಗೆ ಈ ವಸಿಷ್ಠಮುನೀಶ್ವರನ ಕೃಪೆಯಿಂದ ಸಲ್ಲುವುದಲ್ಲದೆ ಈ ಭೂಲೋಕದಲ್ಲಿ ಮತ್ತಾರಿಗೂ ಸಲ್ಲದು. ಆದ್ದರಿಂದ ನನ್ನ ಅಂತರಂಗದಲ್ಲಿರುವ ಕಾರ್ಯವನ್ನು ಮಾಡಿಕೊಡಬೇಕು. ಎಲೈ ರಾಜಶಿರೋಮಣಿಯಾದ ದಶರಥರಾಯನೆ, ನೀನು ಸತ್ಯವಾದ ಪ್ರತಿಜ್ಞೆಯುಳ್ಳವನು.. ನಾನು ಪರಮೇಶ್ವರನಿಗೆ ಸಂತೋಷವಾಗಬೇಕೆಂದು ಒಂದು ನೇಮವನ್ನು ಮಾಡತೊಡಗಿದರೆ, ನನ್ನ ನೇಮಕ್ಕೆ ವಿಘ್ನವನ್ನು ಮಾಡಿ ಕೆಡಿಸುವ ಇಬ್ಬರು ರಾಕ್ಷಸರಿದ್ದಾರೆ. ಅವರು ಕಾಮರೂಪಿಗಳು , ಮಹಾಪರಾಕ್ರಮಿಗಳು ; ಶಸ್ತ್ರಾಸ್ತ್ರಗಳಲ್ಲಿ ಸಮರ್ಥರು. ಆ ಸುಬಾಹು ಮಾರೀಚ

ರೆಂಬ ರಾಕ್ಷಸರು ರಾವಣನಿಂದ ಕಳುಹಿಸಲ್ಪಟ್ಟವರಾದ್ದರಿಂದ ನಾನು ವ್ರತಾಚರಣೆಯನ್ನು ಮಾಡು ವಾಗ ಅದು ಸಮಾಪ್ತಿಯಾಗುವ ಸಮಯದಲ್ಲಿ ಮಾಂಸರಕ್ತಪ್ರವಾಹದಿಂದ ನಾನು ಮಾಡುವ ಯಾಗ ಮಂಟಪದ ಜಗುಲಿಯನ್ನೂ ಹೋಮವನ್ನೂ ಕೆಡಿಸುತ್ತಾರೆ ಆದ್ದರಿಂದ ನಾನು ಅತ್ಯಂತ ಪ್ರಯಾಸ ಪಟ್ಟು ಆ ಸ್ಥಳದಿಂದ ನಿನ್ನ ಬಳಿಗೆ ಹೊರಟು ಬಂದೆನು ನನಗೆ ಅವರಲ್ಲಿ ಕೋಪಮಾಡುವುದಕ್ಕೆ ಬುದ್ಧಿ ಹುಟ್ಟದು ಅವರು ಮಾಡುವುದು ದುರಾಚಾರವಾದರೂ ಅವರಿಗೆ ಶಾಪವನ್ನು ಕೊಡು ವುದಕ್ಕೆ ಮನಸ್ಸುಬಾರದು ಹಾಗಾದ್ದರಿಂದ ಆ ಕಾರ್ಯಕ್ಕೆ ನೀನು ಪ್ರತೀಕಾರವನ್ನು ಮಾಡಬೇಕು. ಅತ್ಯಂತ ಸತ್ಯಸಂಧನೂ ಪರಾಕ್ರಮಶಾಲಿಯೂ ಆದ ನೀನು ನಿನ್ನ ಜ್ಯೇಷ್ಠಪುತ್ರನಾದ ರಾಮಚಂದ್ರ ನನ್ನು ನನ್ನ ವಶಕ್ಕೆ ಕೊಡು ಹಾಗೆ ಕೊಟ್ಟರೆ ರಘುನಾಥನು ನನ್ನ ದಿವ್ಯವಾದ ತಪಸ್ಸಾಮರ್ಥ್ಯ ದಿಂದ ರಕ್ಷಿಸಲ್ಪಟ್ಟವನಾಗಿ, ನನ್ನ ಯಾಗಕ್ಕೆ ವಿಘ್ನಮಾಡುವ ರಾಕ್ಷಸರನ್ನು ಕೊಂದು ನನ್ನ ಕರ್ಮವನ್ನು ನೆರವೇರಿಸುವನು ನಿನ್ನ ಕುಮಾರನಾದ ರಾಮಚಂದ್ರನಿಗೆ ನಾನಾಪ್ರಕಾರವಾದ ಶ್ರೇಯಸ್ಸನ್ನು ಸಂಪಾದಿಸಿಕೊಡುವೆನು ನನ್ನ ಕೃಪೆಯಿಂದ ಆತನು ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಕೀರ್ತಿಯನ್ನು ಪಡೆಯುವನು ಅಂಥ ಭುಜಬಲಪರಾಕ್ರಮವುಳ್ಳ ರಾಕ್ಷಸರು ರಘುನಾಥನನ್ನು ಕೊಲ್ಲುವರೆಂದೆಣಿಸಬೇಡ ಆ ರಾಕ್ಷಸರು ಈತನ ಸಮೀಪಕ್ಕೆ ಬಂದು ಎದುರಾಗಿ ನಿಲ್ಲಲಾರರು ಆ ರಾಕ್ಷಸರನ್ನು ರಘುನಾಥನ ಹೊರತಾಗಿ ಕೊಲ್ಲುವ ಬೇರೆ ಪುರುಷನೇ ಇಲ್ಲ ಸುಬಾಹು ಮಾರೀಚರೆಂಬ ರಾಕ್ಷಸರು ಮಹಾಪರಾಕ್ರಮದಿಂದ ಕೊಬ್ಬಿದವರು ಅವರಿಗೆ ಕಾಲವು ಸಮೀಪವಾಯಿತು. ಲೋಕನಾಥನಾದ ರಾಮಚಂದ್ರನ ಗಣನೆಗೆ ಆ ರಾಕ್ಷಸರು ಯೋಗ್ಯರಲ್ಲ. ದಶರಥ, ಪಾಪಿಗಳಾದ ಆ ರಾಕ್ಷಸರೊಡನೆ ಹೋರಾಡುವುದಕ್ಕೆ ಈ ಹಸುಮಗುವನ್ನು ಕಳುಹಿಸುವುದು ಹೇಗೆಂದೆಣಿಸಬೇಡ ಪುತ್ರಸ್ನೇಹವನ್ನು ಬಿಡು ನಾನು ಒಂದು ಪ್ರತಿಜ್ಞೆಯನ್ನು ಮಾಡುತ್ತೇನೆ ಕೇಳು. ಈ ರಾಮನಿಂದ ರಾಕ್ಷಸರು ಹತರಾಗುವರೆಂದು ನಾನು ಬಲ್ಲೆನು ರಘುನಾಥನು ಮಹಾತ್ಮನು; ಸತ್ಯಸಂಧನು; ಪರಾಕ್ರಮಶಾಲಿಯು. ಇದರಿಂದ ನಿನಗೂ ಧರ್ಮಲಾಭವಾಗುವುದು. ನಿನ್ನ ಕೀರ್ತಿಯು ಭೂಲೋಕದಲ್ಲಿ ಸ್ಥಿರವಾಗಿನಿಲ್ಲುವುದು. ನಿನ್ನ ಮಗನನ್ನು ನನ್ನ ವಶಕ್ಕೆ ಕೊಡು ಈತನ ಮಹಿಮೆಯನ್ನು ನಿನ್ನ ಪುರೋಹಿತನಾದ ವಸಿಷ್ಠಮುನೀಶ್ವರನೂ ಮತ್ತು ಇಲ್ಲಿ ಇರುವ ತಪಸ್ವಿಗಳೂ ಬಲ್ಲರು. ಎಲೈ ದಶರಥರಾಯನೆ, ವಸಿಷ್ಠರು ಮೊದಲಾದ ಪುರೋಹಿತರೂ ನಿನ್ನ ಮಂತ್ರಿಗಳೂ ಈ ಕಾರ್ಯಕ್ಕೆ ಒಡಂಬಟ್ಟು ನಿನಗೆ ತಿಳುಹಿಸಿದರೆ, ನಿನ್ನ ಮನಸ್ಸಿಗೆ ತೃಪ್ತಿಮಾಡಿ ಕೊಂಡು ಪುಂಡರೀಕಾಕ್ಷನಾದ ರಘುನಾಥನನ್ನು ಹತ್ತುದಿವಸಗಳಪರ್ಯಂತ ಕಳುಹಿಸು. ಹಾಗಾದರೆ ನನ್ನ ಯಜ್ಞವು ಸಮಾಪ್ತಿಯಾಗುವುದು. ನಿನಗೆ ಅತ್ಯಂತ ಶ್ರೇಯಸ್ಸಾಗುವುದು ಇನ್ನು ನಿನ್ನ ಮನಸ್ಸಿಗೆ ಸರಿಬಂದಹಾಗೆ ಮಾಡು ವೃಥಾ ಮನಸ್ಸಿನಲ್ಲಿ ಶೋಕಮಾಡಬೇಡ" ಎಂದನು

ಅತಿತೇಜಸ್ವಿಯಾದ ವಿಶ್ವಾಮಿತ್ರನ ಮಾತನ್ನು ಕೇಳಿ ದಶರಥರಾಯನು ಅತ್ಯಂತ ಶೋಕ ಯುಕ್ತನಾಗಿ ಮೂರ್ಛೆಯನ್ನೈದಿ ಆಮೇಲೆ ಎಚ್ಚೆತ್ತು ಭಯದಿಂದ ಕಂಪಿಸ ತೊಡಗಿದನು



## ೨೦ನೆಯ ಅಧ್ಯಾಯ

## ದಶರಥನು ಶ್ರೀರಾಮನನ್ನು ಕಳುಹಿಸಲು ಒಪ್ಪದಿರುವುದು

ಈ ಪ್ರಕಾರದಲ್ಲಿ ರಾಜಶಿರೋಮಣಿಯಾದ ದಶರಥಮಹಾರಾಯನು ವಿಶ್ವಾಮಿತ್ರಮುನಿಯ ವಾಕ್ಯವನ್ನು ಕೇಳಿ ಮೂರ್ಛಿತನಾದನು. ಮರಳಿ ಎಚ್ಚೆತ್ತು ಆ ಮುನೀಶ್ವರನನ್ನು ಕುರಿತು "ವಿಶ್ವಾಮಿತ್ರಮುನೀಶ್ವರರೇ, ಕಮಲಗಳನ್ನು ಹೋಲುವ ಕಣ್ಣುಗಳುಳ್ಳ ಹದಿನೈದು ವರುಷ ವಯಸ್ಸುಳ್ಳ ರಾಮನು ಅತ್ಯಂತ ಭಯಂಕರಾಕಾರರಾದ ರಾಕ್ಷಸರೊಡನೆ ಯುದ್ಧಮಾಡುವುದಕ್ಕೆ ಸಮರ್ಥನಲ್ಲ ನನ್ನ ಸಮೀಪದಲ್ಲಿರುವ ಅಕ್ಷೌಹಿಣೀ ಸೇನೆಗಳ ಸಹಿತವಾಗಿ ನಾನೇ ಬಂದು ಆ ರಾಕ್ಷಸರ ಕೂಡ ಯುದ್ಧಮಾಡುವೆನು. ನನ್ನ ಸಮೀಪದಲ್ಲಿರುವ ಭಟರು ಮಹಾಪರಾಕ್ರಮಿಗಳು ಲೋಕವೆಲ್ಲವನ್ನೂ ಅತಿಕ್ರಮಿಸುವಂಥವರು, ಸಮಸ್ತ ಶಸ್ತ್ರಾಸ್ತ್ರಗಳಲ್ಲಿ ಕುಶಲರು, ರಾಕ್ಷಸರ ಕೂಡ ಯುದ್ಧಮಾಡುವದಕ್ಕೆ ಸಮರ್ಥರು; ಆದ್ದರಿಂದ ರಘುನಾಥನನ್ನು ಕರೆಯಬೇಡಿರಿ. ನಾನೇ ಧನುಶ್ಶರಗಳನ್ನು ಹಿಡಿದುಕೊಂಡು ನಿಮ್ಮ ಯಾಗವನ್ನು ಕಾಯುತ್ತೇನೆ. ರಾಕ್ಷಸರು ಕಾಣಿಸಿಕೊಂಡರೆ ಪ್ರಾಣ ಹೋಗುವವರೆಗೆ ಯುದ್ಧ ಮಾಡುವೆನು. ನಿಮ್ಮ ವ್ರತನಿಯಮವು ಸುರಕ್ಷಿತವಾಗಿ ನೆರವೇರುವುದು ರಾಮನು ಧನುರ್ವಿದ್ಯಾಭ್ಯಾಸಮಾಡಿದವನಲ್ಲ ಪರರ ಬಲಾಬಲಗಳನ್ನು ಅರಿತವನಲ್ಲ. ಇನ್ನೂ ಮಂತ್ರಾಸ್ತ್ರಾಭ್ಯಾಸವಿಲ್ಲವಾದ್ದರಿಂದ ಯುದ್ಧದಲ್ಲಿ ಅವನು ಪ್ರೌಢನಲ್ಲ. ರಾಕ್ಷಸರು ಕಪಟಯುದ್ಧ ಮಾಡುವಂಥವರು. ಅದಲ್ಲದೆ ನಾನು ಒಂದು ಕ್ಷಣಮಾತ್ರವಾದರೂ ರಘುನಾಥನನ್ನು ಬಿಟ್ಟಿರಲಾರೆನು. ಆದ್ದರಿಂದ, ಮುನೀಶ್ವರರೆ, ನನ್ನ ಪ್ರಾಣಕ್ಕೆ ಸಮಾನನಾದ ರಘುನಾಥನನ್ನು ಕರೆಯಬೇಡಿರಿ. ಹಾಗೆ ರಘುನಾಥನನ್ನು ಕರೆದುಕೊಂಡು ಹೋಗಬೇಕಾದ ಪಕ್ಷದಲ್ಲಿ ಚತುರಂಗಬಲಸಮೇತನಾಗಿ ನಾನೂ ಬರುತ್ತೇನೆ. ರಾಮನ ಸಂಗಡ ನನ್ನನ್ನೂ ಕರೆದುಕೊಂಡು ಹೋಗಿರಿ. ನನಗೆ ಅರವತ್ತುಸಾವಿರ ವರುಷಗಳಾದ ಮೇಲೆ ರಾಮಚಂದ್ರನು ಅವತರಿಸಿದನು ನಾಲ್ವರು ಮಕ್ಕಳಲ್ಲಿ ಧರ್ಮಬುದ್ಧಿಯುಳ್ಳ ರಾಮಚಂದ್ರನಲ್ಲಿ ನನಗೆ ಅತ್ಯಂತ ಪ್ರೀತಿಯುಂಟಾಗಿದೆ, ಆದ್ದರಿಂದ ಅತನನ್ನು ಕರೆಯಬೇಡಿರಿ, ಆ ರಾಕ್ಷಸರು ಯಾರು ? ಎಂಥ ಪರಾಕ್ರಮವುಳ್ಳವರು ? ಅವರನ್ನು ವಹಿಸಿ ರಕ್ಷಣೆಮಾಡಿಕೊಂಡಿರುವವರಾರು ? ಆ ರಾಕ್ಷಸರ ಯುದ್ಧದಲ್ಲಿ ಈ ಬಾಲಕನಿಂದಲೂ ನನ್ನಿಂದಲೂ ಆಗುವ ಕಾರ್ಯವೇನು ? ರಾಕ್ಷಸರು ಮಹಾಪರಾಕ್ರಮದಿಂದ ಕೊಬ್ಬಿದವರು ಅವರ ಮುಂದೆ ನಿಲ್ಲುವ ಬಗೆ ಯಾವುದು ? ಈ ವೃತ್ತಾಂತಗಳನ್ನು ನನಗೆ ತಿಳುಹಿಸಬೇಕು" ಎಂದು ನುಡಿದನು.

ವಿಶ್ವಾಮಿತ್ರನು ಆತನನ್ನು ನೋಡಿ "ದಶರಥರಾಜನೆ, ರಾಕ್ಷಸರ ಸ್ವರೂಪವನ್ನೂ ಅವರ ವೃತ್ತಾಂತವನ್ನೂ ಹೇಳುತ್ತೇನೆ ಕೇಳು. ಪುಲಸ್ತ್ಯಬ್ರಹ್ಮನೆಂಬ ಒಬ್ಬ ಮುನೀಶ್ವರನುಂಟು ಆತನ ವಂಶದಲ್ಲಿ ರಾವಣನು ಜನಿಸಿದನು. ಆತನು ಪೂರ್ವದಲ್ಲಿ ಬ್ರಹ್ಮದೇವನು ಕೊಟ್ಟ ವರಬಲದಿಂದ ಮೂರು ಲೋಕಗಳನ್ನೂ ಬಾಧಿಸುತ್ತಿದ್ದಾನೆ ಮಹಾಬಲಪರಾಕ್ರಮವುಳ್ಳವನು ಅನೇಕ ಮಂದಿ ಬಲವಂತರಾದ ರಾಕ್ಷಸರೊಡನೆ ಕೂಡಿಕೊಂಡಿದ್ದಾನೆ ಕುಬೇರನಿಗೆ ಒಡಹುಟ್ಟಿದನು. ವಿಶ್ರವಸ್ಸು ಎಂಬ ಮುನೀಶ್ವರನ ಮಗನು. ಸಮಸ್ತ ಯಜ್ಞಕರ್ಮಗಳಿಗೂ ತಾನೇ ಪ್ರಧಾನನಾಗಿ ವಿಘ್ನವನ್ನು ಮಾಡುವನು. ಅಂಥ ರಾವಣನಿಂದ ನಿಯಮಿಸಲ್ಪಟ್ಟ ಮಾರೀಚ ಸುಬಾಹುಗಳೆಂಬ ರಾಕ್ಷಸರು

ಮಹಾಬಲವಂತರು. ಘೋರವಾದ ಆಕಾರವುಳ್ಳವರು ಅವರು ನನ್ನ ಯಜ್ಞಕ್ಕೆ ವಿಘ್ನವನ್ನು ಮಾಡುತ್ತಾರೆ ” ಎಂದು ನುಡಿದನು.

ಆಗ ದಶರಥನು ಆ ಮುನೀಶ್ವರನನ್ನು ನೋಡಿ ‘ ಮಹರ್ಷಿಗಳೆ, ಅಂಥ ದುರಾತ್ಮರಾದ ರಾಕ್ಷಸರೊಡನೆ ಯುದ್ಧದಲ್ಲಿ ನಿಲ್ಲುವುದಕ್ಕೆ ಬಾಲನಾದ ನನ್ನ ಕುಮಾರನು ಶಕ್ತನಲ್ಲ ಆದಕಾರಣ ನನ್ನಲ್ಲಿ ಕೃಪೆಮಾಡಿ ಮಗನನ್ನು ರಕ್ಷಿಸಬೇಕು ಅಲ್ಪಭಾಗ್ಯನಾದವನಿಗೆ ಭಾಗ್ಯವು ಬಂದ ರೀತಿಯಲ್ಲಿ ನೀವು ಗುರುವಾಗಿ ಇಷ್ಟದೇವತಾಸ್ವರೂಪವಾಗಿ ಬಂದಿರಿ ಯಕ್ಷರಾಕ್ಷಸಗಂಧರ್ವರೂ ಇಂದ್ರಾದಿದೇವತೆಗಳೂ ರಾವಣನ ಕೂಡ ಯುದ್ಧವನ್ನು ಮಾಡುವುದಕ್ಕೆ ಸಮರ್ಥರಲ್ಲ ಸಾಕ್ಷಾತ್ ಸೂರ್ಯನ ಕುಮಾರನಾಗಿ ದಕ್ಷಿಣ ದಿಕ್ಕಿಗೆ ಒಡೆಯನಾದ ಯಮನನ್ನೂ ಗೆದ್ದ ರಾವಣನ ಭಟರ ಮುಂದೆ ಬಾಲಕನಾದ ರಾಮನನ್ನು ಹೇಗೆ ಕರೆಯುತ್ತೀರಿ ? ಯುದ್ಧದಲ್ಲಿ ಅತಿಪರಾಕ್ರಮಿಗಳಾದ ರಾಕ್ಷಸಬಲಗಳೊಡನೆ ನಾನು ನನ್ನ ಮಕ್ಕಳನ್ನು ಕೂಡಿಕೊಂಡಾದರೂ ಯುದ್ಧಮಾಡುವುದಕ್ಕೆ ಶಕ್ತನಲ್ಲ, ಹೀಗಿರುವಲ್ಲಿ ಯುದ್ಧಕ್ರಮವನ್ನರಿಯದ ಬಾಲಕನಾದ ರಘುನಾಥನನ್ನು ಹೇಗೆ ಕರೆಯುತ್ತಿದ್ದೀರಿ ? ಮಾರೀಚ ಸುಬಾಹು ಎಂಬ ರಾಕ್ಷಸರು ಸುಂದೋಪಸುಂದರೆಂಬ ರಾಕ್ಷಸರ ಮಕ್ಕಳು. ಸಾಕ್ಷಾತ್ ಕಾಲಯಮನಿಗೆ ಸಮಾನರಾದವರು. ಯಜ್ಞವಿಘ್ನವನ್ನು ಮಾಡುವಂಥವರು ಆ ರಾಕ್ಷಸರ ಕೂಡ ಯುದ್ಧಕ್ಕೆ ನನ್ನ ಮಗನಾದ ರಘುನಾಥನನ್ನು ಕಳುಹಿಸಲಾರೆನು. ಸುಹೃದ್ಬಲಸಹಿತನಾಗಿಯೂ ನಾನು ಅವರಿಬ್ಬರೊಳಗೆ ಒಬ್ಬರೊಡನೆ ಕೂಡ ಯುದ್ಧಮಾಡುವುದಕ್ಕೆ ಶಕ್ತನಲ್ಲ ” ಎಂದು ನುಡಿದನು.

ಈ ಪ್ರಕಾರವಾದ ದಶರಥನ ಮಾತನ್ನು ಕೇಳಿ ವಿಶ್ವಾಮಿತ್ರಮಹರ್ಷಿಗೆ ಕ್ರೋಧವು ತುಪ್ಪ ಸುರಿದ ಅಗ್ನಿಯಂತೆ ಅತ್ಯಂತವಾಗಿ ಹೆಚ್ಚಿತು



೨೧ ನೆಯ ಅಧ್ಯಾಯ

## ವಸಿಷ್ಠನು ಶ್ರೀರಾಮನನ್ನು ವಿಶ್ವಾಮಿತ್ರನ ಸಂಗಡ ಕಳುಹಿಸಲು ದಶರಥನಿಗೆ ಹೇಳಿದುದು

ಹೀಗೆ ಪುತ್ರಸ್ನೇಹದಿಂದ ಮಗನನ್ನು ಕಳುಹಿಸುವುದಿಲ್ಲವೆಂಬ ನಿಷ್ಠುರವಾದ ದಶರಥರಾಯನ ವಾಕ್ಯವನ್ನು ಕೇಳಿ, ಕೋಪಾಗ್ನಿಜ್ವಾಲೆಯೊಡನೆ ಕೂಡಿದ ವಿಶ್ವಾಮಿತ್ರನು “ ಎಲೈ ದಶರಥರಾಯನೆ, ಮೊದಲು ನನ್ನ ಇಷ್ಟಾರ್ಥವನ್ನು ಸಲ್ಲಿಸಿ ಕೊಡುವುದಾಗಿ ಪ್ರತಿಜ್ಞೆಯನ್ನು ಮಾಡಿ ಈಗ ಆ ಪ್ರತಿಜ್ಞೆಯನ್ನು ತಪ್ಪಲಿಚ್ಛಿಸುತ್ತಿದ್ದೀಯೆ ರಘುವಂಶದ ರಾಯರಿಗೆ ಇದು ಧರ್ಮವಲ್ಲ. ಹಾಗೆ ಧರ್ಮವನ್ನು ಬಿಡುವುದು ನಿನಗೆ ಉಚಿತವಾದ ಪಕ್ಷದಲ್ಲಿ ನಾನು ಹೋಗುತ್ತೇನೆ. ನೀನು ಪ್ರತಿಜ್ಞಾಭಂಗವುಳ್ಳವನಾಗಿ ನಿನ್ನ ಮಕ್ಕಳಸಹಿತನಾಗಿ ಸುಖವಾಗಿರು ” ಎಂದು ನುಡಿದನು

ಆಗ ವಿಶ್ವಾಮಿತ್ರನ ಕೋಪದಿಂದ ಜಗತ್ತ್ರಯವೂ ಭಯಪಟ್ಟು ಕಂಪಿಸುತ್ತಿರಲು ವಸಿಷ್ಠ ಮುನೀಶ್ವರನು ಜಗದ್ಧಿತಾರ್ಥವಾಗಿ ದಶರಥರಾಯನನ್ನು ಕುರಿತು “ ನೀನು ಇಕ್ಷ್ವಾಕುವಂಶದಲ್ಲಿ ಸಾಕ್ಷಾತ್ ಧರ್ಮಸ್ವರೂಪನಾಗಿ ಜನಿಸಿ ಸಮಸ್ತ ಧರ್ಮಶಾಸ್ತ್ರರಹಸ್ಯಗಳನ್ನೂ ಬಲ್ಲವನು. ನೀನು ಮಾಡಿದ ಪ್ರತಿಜ್ಞೆಯನ್ನು ತಪ್ಪಬಾರದು. ಮೂರುಲೋಕದಲ್ಲಿಯೂ ಮಹಾಧರ್ಮಾತ್ಮನೆಂದು ಪ್ರಖ್ಯಾತಿಪಡೆದೆ ನಿನ್ನ ಸ್ವಧರ್ಮವನ್ನು ಬಿಟ್ಟು ಅಧರ್ಮವನ್ನು ಕೈಗೊಳ್ಳಬೇಡ. ಈತನಿಗೆ

ಸಹಾಯಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿ ಅದನ್ನು ಸಲ್ಲಿಸದಿದ್ದರೆ ಇಷ್ಟಾಪೂರ್ತಗಳನ್ನು ಕೆಡಿಸಿದವನಾಗುವೆ ಆದಕಾರಣ ಶಸ್ತ್ರಾಸ್ತ್ರಗಳಲ್ಲಿ ಅಭ್ಯಾಸವುಳ್ಳವನಾದರೂ ಆಗದಿದ್ದವನಾದರೂ ಶ್ರೀರಾಮನನ್ನು ವಿಶ್ವಾಮಿತ್ರಮುನಿಯ ಕೂಡ ಕಳುಹಿಸು, ರಘುನಾಥನನ್ನು ರಾಕ್ಷಸರು ಕೊಲ್ಲುವುದಕ್ಕೆ ಸಮರ್ಥರಲ್ಲ ಅಗ್ನಿಜ್ವಾಲೆಯಿಂದ ಬಳಸಲ್ಪಟ್ಟ ವಸ್ತುವನ್ನು ಮತ್ತೊಬ್ಬರು ಹೇಗೆ ಮುಟ್ಟಲಾರರೋ ಹಾಗೆಯೇ ವಿಶ್ವಾಮಿತ್ರಮುನೀಶ್ವರನಿಂದ ರಕ್ಷಿಸಲ್ಪಡುವ ಶ್ರೀರಾಮನನ್ನು ಯಾರೂ ಕೆಣಕಲಾರರು ವಿಶ್ವಾಮಿತ್ರಮುನಿಯು ಸಾಕ್ಷಾತ್ ಧರ್ಮವೇ ಒಂದು ಆಕಾರವಾದವನು. ಮಹಾಪರಾಕ್ರಮಿಗಳಿಗೂ ಮೀರಿದ ಪರಾಕ್ರಮವುಳ್ಳವನು ಬುದ್ಧಿವಂತರಲ್ಲಿ ಶ್ರೇಷ್ಠನು. ತಪಸ್ಸಿಗೆ ನಿಕ್ಷೇಪಸ್ಥಾನವಾದವನು ಈತನು ಚರಾಚರಾತ್ಮಕವಾದ ಲೋಕಗಳಲ್ಲಿರುವ ಸಮಸ್ತ ಶಸ್ತ್ರಾಸ್ತ್ರ ಪ್ರಯೋಗಗಳನ್ನೂ ಬಲ್ಲವನು. ಈ ಮುನಿಯ ಮಹಿಮೆಯನ್ನು ಯಾರೂ ಅರಿತವರಿಲ್ಲ. ದೇವತೆಗಳು ಋಷಿಗಳು ರಾಕ್ಷಸರು ಅಸುರರು ಗಂಧರ್ವರು ಯಕ್ಷರು ನಾಗರು ಮೊದಲಾದವರೂ ಈತನ ಸಾಮರ್ಥ್ಯವನ್ನು ಅರಿಯರು ವಿಶ್ವಾಮಿತ್ರನು ರಾಜ್ಯವನ್ನಾಳುವಾಗ ಭೃಶಾಶ್ವನೆಂಬ ಬ್ರಹ್ಮಪುತ್ರನ ಮಕ್ಕಳು ಈತನಿಗೆ ವಶವರ್ತಿಗಳಾದರು. ಅವರು ಬ್ರಹ್ಮದೇವನಿಗೆ ಸಮಾನರಾದವರು. ಪುರುಷಸ್ವರೂಪರಾಗಿ ಶಸ್ತ್ರಾಸ್ತ್ರಸ್ವರೂಪರಾಗಿ ನಾನಾರೂಪವುಳ್ಳವರಾಗಿದ್ದರು ಮತ್ತು ಅವರು ಮಹಾತೇಜಸ್ವಿಗಳು, ಜಯಶೀಲರು ಭೃಶಾಶ್ವನಿಗೆ ಜಯಾ ಸುಪ್ರಭಾ ಎಂಬ ಇಬ್ಬರು ಸ್ತ್ರೀಯರಿದ್ದರು. ಆ ಸ್ತ್ರೀಯರು ದಕ್ಷಬ್ರಹ್ಮನ ಮಕ್ಕಳು. ಆ ಸ್ತ್ರೀಯರು ನೂರು ಪ್ರಕಾಶಮಾನವಾದ ಶಸ್ತ್ರಾಸ್ತ್ರಗಳನ್ನೇ ಪುತ್ರರನ್ನಾಗಿ ಪಡೆದರು. ಅವರಲ್ಲಿ ಜಯಾದೇವಿಯು ಅಸ್ತ್ರಸ್ವರೂಪರಾಗಿ ನಾನಾ ಸ್ವರೂಪಗಳನ್ನು ಹೊಂದಬಲ್ಲ ಐವತ್ತು ಮಂದಿ ಮಕ್ಕಳನ್ನು ಅಸುರಸೇನೆಗಳನ್ನು ಜಯಿಸುವುದ ಕ್ಕೋಸ್ಕರ ಪಡೆದಳು ಸುಪ್ರಭಾದೇವಿಯು ಕಾಮರೂಪರಾಗಿ ಶಸ್ತ್ರಾಸ್ತ್ರ ಸ್ವರೂಪರಾದ ಐವತ್ತು ಮಂದಿ ಮಕ್ಕಳನ್ನು ಪಡೆದಳು ಆ ಮಕ್ಕಳು ಸಂಹಾರರೆನಿಸಿಕೊಳ್ಳುವರು. ಮಹಾ ಬಲವಂತರು. ಯಾರಿಗೂ ಅತಿಕ್ರಮಿಸಲಶಕ್ಯರಾದವರು ಅವರ ಅನುಗ್ರಹದಿಂದ ಸಮಸ್ತ ಶಸ್ತ್ರಾಸ್ತ್ರಗಳನ್ನೂ ವಿಶ್ವಾಮಿತ್ರಮುನೀಶ್ವರನು ವಿಧ್ಯುಕ್ತಪ್ರಕಾರದಲ್ಲಿ ಕಲಿತನು ಅವುಗಳ ಪ್ರಯೋಗದ ಕೌಶಲವನ್ನೂ ಆತನು ಬಲ್ಲನು. ರಾಜ, ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿಯೂ ಈ ಮುನೀಶ್ವರನು ಅರಿಯದ ವೃತ್ತಾಂತವಿಲ್ಲ. ಈ ಮುನಿಯು ಮಹಾತೇಜಸ್ವಿಯು, ಮಹಾ ಪರಾಕ್ರಮಿಯು, ಅತ್ಯಂತ ಕೀರ್ತಿವಂತನು. ಆದ್ದರಿಂದ ರಘುನಾಥನನ್ನು ಕಳುಹಿಸುವುದಕ್ಕೆ ಸಂಶಯ ಪಡಬೇಡ. ರಾಕ್ಷಸರನ್ನು ನಿಗ್ರಹಿಸುವುದಕ್ಕೆ ವಿಶ್ವಾಮಿತ್ರನೇ ಸಮರ್ಥನು. ಈತನು ಬಿಲ್ಲುಗೊಂಡರೆ ಯುದ್ಧದಲ್ಲಿ ದೇವೇಂದ್ರನಾದರೂ ನಿಲ್ಲಲಾರನು. ಈ ಮುನೀಶ್ವರನು ನಿನ್ನ ಮಗನಿಗೆ ಹಿತವನ್ನು ಮಾಡಬೇಕೆಂಬ ಸದ್ಬುದ್ಧಿಯಿಂದ ಬಂದನಲ್ಲದೆ ಮತ್ತೊಂದಲ್ಲ !" ಎಂದು ತಿಳುಹಿಸಿದನು.

ಆ ಮಾತನ್ನು ಕೇಳಿ ದಶರಥರಾಯನು ಅತ್ಯಂತ ಹರ್ಷದಿಂದ ರಘುನಾಥನನ್ನು ವಿಶ್ವಾಮಿತ್ರ ಮುನಿಯ ಜೊತೆಗೆ ಕಳುಹಿಸಲು ನಿಶ್ಚಯಮಾಡಿಕೊಂಡನು.



## ೨೨ ನೆಯ ಅಧ್ಯಾಯ

## ರಾಮಲಕ್ಷ್ಮಣರು ವಿಶ್ವಾಮಿತ್ರನ ಹಿಂದೆ ಹೊರಟಿದ್ದು

ಆ ಬಳಿಕ ವಸಿಷ್ಠಮುನೀಶ್ವರನ ಮಾತನ್ನು ಕೇಳಿ ದಶರಥರಾಯನು ಸಂತೋಷಯುಕ್ತನಾಗಿ ಲಕ್ಷ್ಮಣಸಮೇತನಾದ ರಘುನಾಥನನ್ನು ಕರೆದು ಪ್ರಯಾಣಕಾಲೋಚಿತವಾದ ಶಾಂತಿಕರ್ಮಗಳನ್ನು ಮಾಡಿ ಕಳುಹಿಸಿದನು. ರಾಮಲಕ್ಷ್ಮಣರು ತಮ್ಮ ತಾಯಂದಿರಾದ ಕೌಸಲ್ಯಾ ಕೈಕೇಯಿ ಸುಮಿತ್ರಾದೇವಿಯರಿಗೆ ಅಭಿವಂದಿಸಿ ಅವರ ಆಶೀರ್ವಾದಗಳನ್ನು ಪಡೆದು ವಾಮದೇವಾದಿ ಋಷಿಗಳಿಗೆ ಅಭಿವಂದಿಸಿ ಅವರ ಆಶೀರ್ವಾದವನ್ನು ಪಡೆದರು ಅನಂತರ ಪ್ರಯಾಣಕ್ಕೆ ಅನುಕೂಲವಾಗಿ ಶೈತ್ಯ ಸೌರಭ್ಯ ಮಾಂದ್ಯಯುಕ್ತವಾದ ತಂಗಾಳಿಯು ತೀಡುತ್ತಿರಲು, ಬತ್ತಳಿಕೆಗಳನ್ನು ಧರಿಸಿಕೊಂಡು ಬಿಲ್ಲುಗಳನ್ನು ಕೈಗಳಲ್ಲಿ ಹಿಡಿದು ತಮ್ಮ ಶರೀರಕಾಂತಿಯಿಂದ ದಶದಿಕ್ಕುಗಳನ್ನೂ ಬೆಳಗಿಸುತ್ತ ಸಹಸ್ರ ಶಿರಸ್ಸುಗಳುಳ್ಳ ಶೇಷನೋ ಎಂಬಂತೆ ವಿಶ್ವಾಮಿತ್ರನ ಹಿಂದೆ ತೆರಳಿದರು. ಸರ್ವಲಕ್ಷಣಸಂಪನ್ನರೂ ಸರ್ವಾಲಂಕಾರವುಳ್ಳವರೂ ಅತ್ಯಂತತೇಜಸ್ವಿಗಳೂ ಆದ ರಾಮಲಕ್ಷ್ಮಣರು ತಮ್ಮ ಕಾಂತಿಯಿಂದ ವಿಶ್ವಾಮಿತ್ರಮುನೀಶ್ವರನನ್ನೂ ಪ್ರಕಾಶಗೊಳಿಸುತ್ತಿದ್ದರು. ಮುಂಗೈ ಬೆರಳುಗಳ ರಕ್ಷಣಾರ್ಥವಾಗಿ ಕೈಹೊಡೆಗಳನ್ನು ಕಟ್ಟಿಕೊಂಡು ಆಯುಧಗಳನ್ನು ಕೈಗಳಲ್ಲಿ ಹಿಡಿದುಕೊಂಡು ಖಡ್ಗಗಳನ್ನು ಹಿಡಿದು ಮಹಾತೇಜಸ್ವಿಗಳಾಗಿ ಮನೋಹರವಾದ ಶರೀರವುಳ್ಳ ರಾಮಲಕ್ಷ್ಮಣರು ವಿಶ್ವಾಮಿತ್ರಮುನೀಶ್ವರನ ಹಿಂದೆ ಹೋದರು. ಆಗ ಅವರು ಅಶ್ವಿನೀದೇವತೆಗಳು ಬ್ರಹ್ಮದೇವನ ಹಿಂದೆ ಹೋಗುವಂತೆಯೂ ವಿಘ್ನೇಶ್ವರ ಷಣ್ಮುಖರು ಅಪರಿಮಿತವಾದ ಮಹಿಮೆಯುಳ್ಳ ಪರಮೇಶ್ವರನ ಹಿಂದೆ ಹೋಗುವಂತೆಯೂ ಒಪ್ಪುತ್ತಿದ್ದರು,

ಬಳಿಕ ರಾಮಲಕ್ಷ್ಮಣಸಮೇತನಾಗಿ ವಿಶ್ವಾಮಿತ್ರಮುನೀಶ್ವರನು ಅರ್ಧಗಾವುದ ದೂರ ಹೋಗಿ ಸರಯೂನದೀತೀರದಲ್ಲಿ ನಿಂತು ರಾಮಚಂದ್ರನನ್ನು ನೋಡಿ "ರಾಮಚಂದ್ರ, ಈ ಸರಯೂ ನದಿಯಲ್ಲಿ ಉದಕವನ್ನು ತೆಗೆದುಕೊ ಕಾಲವನ್ನು ಅತಿಕ್ರಮಿಸಬೇಡ. ಬಲಾ ಅತಿಬಲಾ ಎಂಬ ಮಂತ್ರಗಳನ್ನು ಗ್ರಹಿಸಿಕೊ. ಆ ಮಂತ್ರಗಳಿಂದ ಎಷ್ಟುದಾರಿ ನಡೆದರೂ ಬಳಲಿಕೆಯು ಹುಟ್ಟುವುದಿಲ್ಲ; ದಗೆ ತೋರುವುದಿಲ್ಲ; ಶರೀರದ ಕಾಂತಿಯು ಪಲ್ಲಟವಾಗುವುದಿಲ್ಲ. ಮಲಗುವ ಸಮಯದಲ್ಲಾಗಲಿ ಮರವೆಯಾಗಿರುವ ವೇಳೆಯಲ್ಲಾಗಲಿ ರಾಕ್ಷಸರು ಬಂದು ಕಷ್ಟಪಡಿಸಲಾರರು. ಆ ಮಂತ್ರವನ್ನು ಜಪಮಾಡುವವರ ಬಾಹುಬಲಕ್ಕೆ ಸರಿಯಾದವರು ಒಬ್ಬರೂ ಇಲ್ಲ. ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರುಲೋಕಗಳಲ್ಲಿಯೂ ನಿನ್ನ ಸೌಭಾಗ್ಯಕ್ಕೂ ದಾಕ್ಷಿಣ್ಯಕ್ಕೂ ಸುಜ್ಞಾನಕ್ಕೂ ಸಮಾನರಾದವರೇ ಇರುವುದಿಲ್ಲ. ಲೋಕದಲ್ಲಿ ನಿನ್ನ ಮಾತಿಗೆ ಪ್ರತ್ಯುತ್ತರವನ್ನು ಕೊಡುವದಕ್ಕೆ ಸಮರ್ಥರೇ ಇರುವುದಿಲ್ಲ. ಈ ಬಲಾತಿಬಲಗಳೆಂಬ ಮಂತ್ರಗಳನ್ನು ಜಪಮಾಡಿದರೆ ನಿನಗೆ ಸಮಾನರಾದವರೇ ಇರುವುದಿಲ್ಲ. ಈ ಮಂತ್ರಗಳು ಸಮಸ್ತಜ್ಞಾನಕ್ಕೂ ತಾಯಿತಂದೆಗಳ ಹಾಗಿರುವುವು. ಈ ಮಂತ್ರಗಳನ್ನು ಮಾರ್ಗದಲ್ಲಿ ಜಪಿಸಿದರೆ ಹಸಿವು ಮೊದಲಾದವು ಹುಟ್ಟುವುದಿಲ್ಲ. ಈ ಮಂತ್ರಜಪ ಮಾಡಿದರೆ ಭೂಲೋಕದಲ್ಲಿ ವೆಗ್ಗಳವಾದ ಕೀರ್ತಿಯುಂಟಾಗುವುದು. ಆದ್ದರಿಂದ ಈ ಮಂತ್ರಗಳಿಗೆ ನೀನು ಅಧಿಕಾರಿಯಾಗಿದ್ದೀಯೆ. ಎಲೈ ರಘುನಾಥನೆ, ಧಾರ್ಮಿಕನಾದ ನಿನ್ನಲ್ಲಿ

ಅನೇಕ ಸದ್ಗುಣಗಳಿರುವುದಕ್ಕೆ ಸಂಶಯವಿಲ್ಲ ನೀನು ಈ ಮಂತ್ರಗಳನ್ನು ಜಪಮಾಡಿದರೆ ನಿನಗೆ ಈ ಮಂತ್ರಗಳು ನಾನಾಪ್ರಕಾರವಾದ ಫಲಗಳನ್ನು ಕೊಡುವುವು " ಎಂದು ನುಡಿದನು.

ಆಮೇಲೆ ರಘುನಾಥನು ಸರಯೂನದಿಯಲ್ಲಿ ಸ್ನಾನಮಾಡಿ ಶುಚಿಯಾಗಿ ಅತ್ಯಂತ ಸಂತುಷ್ಟ ಚಿತ್ತನಾಗಿ, ಪರಮಾತ್ಮಧ್ಯಾನವುಳ್ಳ ವಿಶ್ವಾಮಿತ್ರಮುನೀಶ್ವರನ ದೆಸೆಯಿಂದ ಆ ಮಂತ್ರಗಳ ಉಪದೇಶ ವನ್ನು ಪಡೆದನು. ಬಲಾತಿಬಲಗಳೆಂಬ ಮಂತ್ರಗಳ ಪ್ರಭಾವದಿಂದ ಅಪರಿಮಿತಪರಾಕ್ರಮವುಳ್ಳ ರಘುನಾಥನು ಶರತ್ಕಾಲದಲ್ಲಿ ಕಿರಣಗಳಿಂದ ದಹಿಸುವ ಸೂರ್ಯನ ಹಾಗೆ ಪ್ರಕಾಶಿಸುತ್ತಿದ್ದನು ಈ ಪ್ರಕಾರದಲ್ಲಿ ರಾಮಲಕ್ಷ್ಮಣರು ವಿಶ್ವಾಮಿತ್ರಮುನೀಶ್ವರನಿಂದ ಮಂತ್ರೋಪದೇಶವನ್ನು ಪಡೆದು ಆತನನ್ನು ಗುರುಭಾವದಿಂದೆಣಿಸುತ್ತ ಸರಯೂನದೀತೀರದಲ್ಲಿ ಒಂದು ರಾತ್ರಿ ಮಲಗಿದ್ದರು. ಎಂದೂ ಅಭ್ಯಾಸವಿಲ್ಲದ ಹುಲ್ಲುಹಾಸಿಗೆಯಲ್ಲಿ ಮಲಗಿದ್ದ ರಾಮಲಕ್ಷ್ಮಣರಿಗೆ ಆ ರಾತ್ರಿಯು ಕ್ಷಣದಂತೆ ಮಂಗಳಕರವಾಗಿ ಕಳೆದುಹೋಯಿತು



## ೨೩ ನೆಯ ಅಧ್ಯಾಯ

## ಕಾಮಾಶ್ರಮದ ವೃತ್ತಾಂತ

ಆ ರಾತ್ರಿಯು ಕಳೆದು ಪ್ರಾತಃಕಾಲದಲ್ಲಿ ವಿಶ್ವಾಮಿತ್ರಮುನೀಶ್ವರನು ತಳಿರ ಹಾಸಿಗೆಯ ಮೇಲೆ ಮಲಗಿದ್ದ ರಾಮಲಕ್ಷ್ಮಣರನ್ನು ನೋಡಿ " ರಾಮ, ನಿನ್ನ ತಾಯಿಯಾದ ಕೌಸಲ್ಯಾದೇವಿಯು ಸತ್ಪುತ್ರನನ್ನು ಪಡೆದವಳು. ಬೆಳಗಾಗುತ್ತಿದೆ, ಏಳು. ಸಂಧ್ಯಾವಂದನೆಯ ಸಮಯವಾಯಿತು " ಎಂದು ಹೇಳಿದನು. ರಾಮಲಕ್ಷ್ಮಣರು ಎದ್ದು ಸ್ನಾನ ಸಂಧ್ಯಾವಂದನೆ ಜಪಗಳನ್ನು ಮಾಡಿ ತಪಸ್ವಿಯಾದ ವಿಶ್ವಾಮಿತ್ರಮುನೀಶ್ವರನಿಗೆ ಅಭಿವಂದಿಸಿದರು ಅನಂತರ ಮಹಾಸಂತೋಷಚಿತ್ತರಾಗಿ ವಿಶ್ವಾಮಿತ್ರಮುನೀಶ್ವರನೊಡನೆ ಹೊರಟು ಸರಯೂ ಗಂಗಾ ನದಿಗಳ ಸಂಗಮದಲ್ಲಿ ಅತ್ಯಂತ ತೇಜಸ್ವಿಗಳಾದ ಋಷಿಗಳ ಪವಿತ್ರವಾದ ಆಶ್ರಮಗಳನ್ನು ಕಂಡು ವಿಶ್ವಾಮಿತ್ರಮುನೀಶ್ವರನನ್ನು ನೋಡಿ "ಸ್ವಾಮಿ, ಈ ಪುಣ್ಯಾಶ್ರಮವು ಗಂಗಾ ಸರಯೂ ನದಿಗಳ ಸಂಗಮದ ಸಮೀಪದಲ್ಲಿದೆ ಈ ಆಶ್ರಮ ದಲ್ಲಿ ಯಾವ ಪುಣ್ಯಪುರುಷನು ಇದ್ದಾನೆ ? ಆತನ ವೃತ್ತಾಂತವನ್ನು ತಿಳುಹಿಸಿರಿ " ಎಂದು ಕೇಳಿದರು

ವಿಶ್ವಾಮಿತ್ರಮುನಿಯು ಮುಗುಳುನಗೆಯಿಂದ "ಕೇಳೈ ರಘುನಾಥನೆ, ಪೂರ್ವದಲ್ಲಿ ಈ ಆಶ್ರಮ ದಲ್ಲಿ ಮನ್ಮಥನು ಸಾಕಾರನಾಗಿರುತ್ತಿದ್ದನು ಆತನನ್ನು ಕಾಮನೆಂದು ಹೇಳುವರು. ಆ ಕಾಮನು ಈ ಸ್ಥಳದಲ್ಲಿ ಪರಮೇಶ್ವರನಿಂದ ದಹಿಸಲ್ಪಟ್ಟನು. ಪೂರ್ವದಲ್ಲಿ ಪರಮೇಶ್ವರನು ಈ ಸ್ಥಳದಲ್ಲಿ ನಿಯಮ ದಿಂದ ಏಕಾಗ್ರಚಿತ್ತನಾಗಿ ತಪಸ್ಸನ್ನು ಮಾಡಿಕೊಂಡಿದ್ದನು. ಅವನು ಪಾರ್ವತೀದೇವಿಯನ್ನು ವಿವಾಹ ವಾಗಿ ಸಮಸ್ತ ದೇವತೆಗಳನ್ನೂ ಕೂಡಿಕೊಂಡು ಹೋಗುತ್ತಿರುವ ಸಮಯದಲ್ಲಿ ಮನ್ಮಥನು ಆತನನ್ನು ಕೆಣಕಿದನು. ಪರಮೇಶ್ವನು ಒಂದುಸಾರಿ ಹುಂಕಾರವನ್ನು ಮಾಡಿ ಅಜ್ಞಾನಿಯಾದ ಮನ್ಮಥನ ಶರೀರದ ಕರಚರಣಾದಿ ಸಮಸ್ತ ಅವಯವಗಳನ್ನೂ ತನ್ನ ಹಣೆಗಣ್ಣಿನಿಂದ ದಹಿಸಿದನು. ಆ ಮಹಾತ್ಮನ ಕೋಪದಿಂದ ಸಮಸ್ತ ಅಂಗಗಳೂ ದಗ್ಧವಾಗಿ ಶರೀರವಿಲ್ಲದವನಾದ್ದರಿಂದ ಮನ್ಮಥನು ಅನಂಗನೆಂಬ ಹೆಸರನ್ನು ಪಡೆದನು. ಪರಮೇಶ್ವರನ ಕ್ರೂರದೃಷ್ಟಿಯಿಂದ ಶರೀರವನ್ನು ಬಿಟ್ಟ ಮನ್ಮಥನ ಆಶ್ರಮವಾದ ಇದು ಮಹಾಪವಿತ್ರವಾದದ್ದು. ಈ ಮನ್ಮಥಾಶ್ರಮದಲ್ಲಿರುವ ಸಮಸ್ತ

ಋಷಿಗಳೂ ನನ್ನಲ್ಲಿ ಶಿಷ್ಯರ ಹಾಗೆ ನಡೆಯುತ್ತಿರುವರು. ಇಲ್ಲಿರುವ ಋಷಿಗಳಿಗೆ ಒಂದು ದಿಸವೂ ವಿಪತ್ತಿಲ್ಲ. ನಾವು ಈ ರಾತ್ರಿ ಇಲ್ಲಿದ್ದು ನಾಳೆ ಪ್ರಾತಃಕಾಲದಲ್ಲಿ ಈ ನದಿಯನ್ನು ದಾಟಿ ಸ್ನಾನ ಸಂಧ್ಯಾವಂದನ ಜಪಹೋಮಾದಿಗಳನ್ನು ತೀರಿಸಿಕೊಂಡು ಪವಿತ್ರವಾದ ನಮ್ಮ ಆಶ್ರಮಕ್ಕೆ ಹೋಗೋಣ " ಎಂದು ನುಡಿದನು

ಬಳಿಕ ಅಲ್ಲಿದ್ದ ಋಷಿಗಳು ಜ್ಞಾನದೃಷ್ಟಿಯಿಂದ ಇವರ ಮಹಿಮೆಯನ್ನು ಅರಿತು ಮನಸ್ಸಿನಲ್ಲಿ ಅತ್ಯಂತ ಹರ್ಷಪಟ್ಟು ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಫಲಾಹಾರಗಳನ್ನು ಕೊಟ್ಟರು ವಿಶ್ವಾಮಿತ್ರ ರಾಮಲಕ್ಷ್ಮಣರು ಅವರ ಸತ್ಕಾರಗಳನ್ನು ಪಡೆದು ಮನೋಹರವಾದ ಪುಣ್ಯಕಥೆಗಳನ್ನು ಹೇಳುತ್ತ, ಅಲ್ಲಿದ್ದ ಋಷಿಗಳಿಗೆ ಶ್ರವಣಾನಂದವನ್ನು ಮಾಡುತ್ತಲಿದ್ದರು ಹೀಗೆ ಸಾಯಂಕಾಲ ಪರ್ಯಂತ ಕಾಲವನ್ನು ಕಳೆದು, ಸಾಯಂಕಾಲ ಸಂಧ್ಯಾವಂದನೆ ಜಪಗಳನ್ನು ತೀರಿಸಿಕೊಂಡು ಏಕಾಗ್ರ ಚಿತ್ತರಾಗಿ ವ್ರತಸ್ಥರಾದ ಆ ಮುನಿಗಳೊಡನೆ ಕಾಮಾಶ್ರಮದಲ್ಲಿ ಮನೋಹರವಾದ ಕಥೆಗಳಿಂದ ಸಂಭಾಷಣೆ ಮಾಡುತ್ತ ಸುಖದಿಂದಿದ್ದರು.



## ೨೪ ನೆಯ ಅಧ್ಯಾಯ

## ಮಲದದೇಶ ಕರೂಶದೇಶಗಳ ವೃತ್ತಾಂತ

ಮಾರನೆಯ ದಿನ ಪ್ರಾತಃಕಾಲದಲ್ಲಿ ಸಮಸ್ತ ಶತ್ರುಗಳನ್ನೂ ಸಂಹಾರಮಾಡುವಂಥ ರಾಮ ಲಕ್ಷ್ಮಣರು ವಿಶ್ವಾಮಿತ್ರಮುನೀಶ್ವರನನ್ನು ಮುಂದಿಟ್ಟುಕೊಂಡು ಗಂಗಾತೀರಕ್ಕೆ ಬಂದು ಸ್ನಾನವನ್ನು ಮಾಡಿ ಸಂಧ್ಯಾವಂದನಾದಿ ಕರ್ಮಗಳನ್ನು ತೀರಿಸಿದರು. ಆಗ ಕಾಮಾಶ್ರಮದಿಂದ ಅವರನ್ನು ಕಳುಹಿಸಿಕೊಡಲು ಸಂಗಡ ಬಂದ ಋಷಿಗಳು ಒಂದು ದೋಣಿಯನ್ನು ತರಿಸಿ ವಿಶ್ವಾಮಿತ್ರ ಋಷಿಯನ್ನು ಕುರಿತು " ಮುನೀಶ್ವರರೆ, ರಾಮಲಕ್ಷ್ಮಣರನ್ನು ಕೂಡಿಕೊಂಡು ಈ ದೋಣಿಯನ್ನು ಹತ್ತಿ ತೆರಳಿರಿ. ನಿಮ್ಮ ಮಾರ್ಗವು ಶುಭವಾಗಲಿ ! " ಎಂದು ನುಡಿದರು

ವಿಶ್ವಾಮಿತ್ರನು ಸಂತೋಷಪಟ್ಟು ಆ ಋಷಿಗಳಿಗೆ ವಂದನಾದಿ ಸತ್ಕಾರಗಳನ್ನು ಮಾಡಿ, ರಾಮಲಕ್ಷ್ಮಣಸಹಿತನಾಗಿ ಗಂಗೆಯನ್ನು ದಾಟುತ್ತ ಆ ನದಿಯ ಮಧ್ಯಕ್ಕೆ ಬಂದ ಸಮಯದಲ್ಲಿ, ಒಂದು ಮಹತ್ತಾದ ಧ್ವನಿಯು ಕೇಳಿಸಿತು. ರಘುನಾಥನು ವಿಶ್ವಾಮಿತ್ರಮುನಿಯನ್ನು ನೋಡಿ " ಮಹರ್ಷಿಗಳೆ, ಇದೇನು ಮಹತ್ತಾದ ಧ್ವನಿಯು ಕೇಳಿಸುತ್ತದೆ ? ಇದು ನದಿಯ ತೆರೆಗಳ ಮೊರೆಯೊ ? " ಎಂದು ಕೇಳಿದನು

ಆಗ ವಿಶ್ವಾಮಿತ್ರನು " ಶ್ರೀರಾಮ, ಕೈಲಾಸಪರ್ವತದಲ್ಲಿ ಬ್ರಹ್ಮದೇವನು ತನ್ನ ಮನಸ್ಸಿನಲ್ಲಿ ಧ್ಯಾನಿಸಿ ಒಂದು ಕೊಳವನ್ನು ನಿರ್ಮಿಸಿದನು ಆ ಕೊಳವು ಮಾನಸಸರೋವರವೆನಿಸಿಕೊಳ್ಳುವುದು ಮಾನಸಸರೋವರದಿಂದ ಹೊರಟು ಸರಯೂ ನದಿಯು ಅಯೋಧ್ಯಾಪಟ್ಟಣವನ್ನು ಸುತ್ತಿಕೊಂಡು ಪ್ರವಹಿಸುತ್ತಿರುವುದು. ಸರಸ್ಸಿನಿಂದ ಬಂದ ಕಾರಣ ಈ ನದಿಯು ಸರಯೂನದಿ ಎನಿಸಿಕೊಂಡಿತು ಈ ನದಿಯ ಉದಕಪ್ರವಾಹವು ಇಲ್ಲಿ ಗಂಗೆಯನ್ನು ಕೂಡಿ ಅದರ ಪ್ರವಾಹವನ್ನು ವೆಗ್ಗಳವಾಗಿ ಮಾಡುವುದರಿಂದ ಹೀಗೆ ಧ್ವನಿಯಾಗುತ್ತದೆ ಶ್ರೀರಾಮ, ನೀನು ನಿಯಮಸ್ಥನಾಗಿ, ಸಂಗಮ ವಾಗುವ ಗಂಗಾ ಸರಯೂ ನದಿಗಳಿಗೆ ನಮಸ್ಕಾರವನ್ನು ಮಾಡು " ಎಂದನು.

ಧರ್ಮಬುದ್ಧಿಯುಳ್ಳ ರಾಮಲಕ್ಷ್ಮಣರು ಗಂಗಾ ಸರಯೂ ನದಿಗಳಿಗೆ ನಮಸ್ಕಾರವನ್ನು ಮಾಡಿ, ಗಂಗಾನದಿಯ ತೆಂಕಣ ತೀರಕ್ಕೆ ಹೋಗಿ ಅಲ್ಲಿ ಯಜ್ಞಾದಿ ಸತ್ಕರ್ಮಗಳಿಲ್ಲದಿದ್ದ ಘೋರಾಕಾರವಾದ ಒಂದು ವನವನ್ನು ಕಂಡು ವಿಶ್ವಾಮಿತ್ರಮುನೀಶ್ವರನನ್ನು ಕುರಿತು ' ಮುನೀಶ್ವರರೆ, ಈ ವನವು ಅತಿದುರ್ಗಮವಾಗಿ ಮನುಷ್ಯರು ಸಂಚರಿಸುವುದಕ್ಕ ಅಸಾಧ್ಯವಾಗಿದೆ ಅಲ್ಲದೆ, ಎಲ್ಲಿ ನೋಡಿದರೂ ತೋಳಗಳಿಂದಲೂ ಭಯಂಕರವಾದ ಪಕ್ಷಿಗಳಿಂದಲೂ ಇಟ್ಟಣಿಸಿದೆ ಸಿಂಹ ವ್ಯಾಘ್ರ ಕಾಡುಹಂದಿಗಳಿಂದ ಪರಿಪೂರ್ಣವಾಗಿದೆ, ತೆಂಗಿನ ಮರ ಪಾದರೀ ಮರ ಬೆಲವತ್ತದ ಮರ ಹುಣಸೆ ಯಲಚಿ ಯಲವತ್ತ ಮೊದಲಾದ ವೃಕ್ಷಜಾತಿಗಳಿಂದ ಭಯಂಕರವಾಗಿವೆ ಏನುಕಾರಣದಿಂದ ಈ ವನವು ಮಹಾಭೀಕರ ವಾಗಿದೆ ? " ಎಂದು ಕೇಳಿದರು

ವಿಶ್ವಾಮಿತ್ರಮಹರ್ಷಿಯು "ಕೇಳು ರಘುನಾಥ, ಈ ವನವು ಪೂರ್ವದಲ್ಲಿ ಫಲಪೂರಿತ ವಾಗಿದ್ದ ಮಲದದೇಶ ಕರೂಶದೇಶ ಎಂಬ ಎರಡು ದೇಶಗಳಾಗಿತ್ತು. ಇಲ್ಲಿ ದೇವೇಂದ್ರನು ವೃತ್ರಾ ಸುರನ ವಧೆಯನ್ನು ಮಾಡಲು ಇದು ಆತನ ರುಧಿರಮಾಂಸಾದಿಗಳಿಂದ ಪೂರಿತವಾಯಿತು ದೇವೇಂದ್ರನು ವೃತ್ರಾಸುರನನ್ನು ಕೊಂದದ್ದರಿಂದ ಬ್ರಹ್ಮಹತ್ಯಾದೋಷವು ಆತನಲ್ಲಿ ಪ್ರವೇಶಿಸಿತು. ಆಗ ಆ ದೇಶಗಳಲ್ಲಿದ್ದ ಋಷಿಗಳು ಪಾಪದಿಂದ ಮಲಿನವಾದ ಶರೀರವುಳ್ಳ ದೇವೇಂದ್ರನನ್ನು ಕಂಡು ಅನೇಕ ಕಲಶಗಳಲ್ಲಿ ಉದಕವನ್ನು ತುಂಬಿ ಅಭಿಮಂತ್ರಿಸಿ ಅಭಿಷೇಕವನ್ನು ಮಾಡಿ ಅವನ ಶರೀರದಲ್ಲಿದ್ದ ಮಲವನ್ನು ಪರಿಹರಿಸಿದರು ದೇವೇಂದ್ರನು ಅತಿಹರ್ಷಪಟ್ಟು ಮಲದದೇಶ ಕರೂಶದೇಶಗಳಿಗೆ ' ನನ್ನ ಶರೀರದ ಮಲದಿಂದ ನೆನೆಯಿಸಲ್ಪಟ್ಟ ಈ ದೇಶಗಳು ಪವಿತ್ರಗಳಾಗಿ ಸಮಸ್ತ ಐಶ್ವರ್ಯಗಳಿಂದ ಪರಿಪೂರ್ಣವಾಗಿರಲಿ ! ' ಎಂದು ವರವನ್ನು ಕೊಟ್ಟನು. ಈ ದೇಶಗಳ ಪೂಜ್ಯತೆಯನ್ನು ಕಂಡು ದೇವತೆಗಳು ಸಂತೋಷಪಟ್ಟರು ಅದು ಮೊದಲಾಗಿ ಈ ದೇಶಗಳು ನಿರ್ಮಲಗಳೂ ಮನೋಹರ ಗಳೂ ಆಗಿ ಧನಧಾನ್ಯಗಳಿಂದ ಪರಿಪೂರ್ಣವಾಗಿದ್ದವು. ಈಗ ಕಾಮರೂಪಿಣಿಯಾದ ಸಾವಿರ ಆನೆಗಳ ಸತ್ತ್ವವುಳ್ಳ ಸುಂದನೆಂಬ ಯಕ್ಷನ ಹೆಂಡತಿಯಾದ ತಾಟಕಿ ಎಂಬ ಯಕ್ಷಿಯು ಇಲ್ಲಿದ್ದಾಳೆ ಅವಳಿಗೆ ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಮಾರೀಚನೆಂಬುವವನು ಜನಿಸಿದನು. ಆ ರಾಕ್ಷಸನು ದುಂಡಾಗಿ ದೀರ್ಘವಾದ ತೋಳುಗಳುಳ್ಳವನು ದೊಡ್ಡ ಶಿರಸ್ಸುಳ್ಳವನು ಅತಿವಿಶಾಲವಾದ ಎದೆಕಟ್ಟುಳ್ಳವನು. ಮಹಾಭಯಂಕರವಾದ ಆಕಾರವುಳ್ಳವನು. ಆ ರಾಕ್ಷಸನು ಈ ದೇಶದಲ್ಲಿದ್ದ ಪ್ರಜೆಗಳೆಲ್ಲರನ್ನೂ ಸಂಹರಿಸಿ ಮಲದ ಕರೂಶದೇಶಗಳನ್ನು ಕೆಡಿಸಿದನು. ಆತನ ತಾಯಿಯಾದ ತಾಟಕಿಯು ಇಲ್ಲಿಗೆ ಅರೆಗಾವುದ ದಾರಿಯಲ್ಲಿ ವಾಸಮಾಡಿಕೊಂಡು ಮಾರ್ಗವನ್ನು ಅಡ್ಡಕಟ್ಟಿ ಕೊಂಡಿದ್ದಾಳೆ ಆದಕಾರಣ ನಾವು ಆ ವನಕ್ಕೆ ಹೋಗೋಣ ನಿನ್ನ ಭುಜಬಲಪರಾಕ್ರಮದಿಂದ ಆ ದುಷ್ಟೆಯಾದ ತಾಟಕಿಯನ್ನು ನನ್ನ ಅಪ್ಪಣೆಯಿಂದ ಸಂಹರಿಸಿ ಈ ದೇಶಗಳಿಗೆ ಉಪದ್ರವ ವಿಲ್ಲದಹಾಗೆ ಮಾಡು. ಈ ರಾಕ್ಷಸಿಯ ಭಯದಿಂದ ಈ ದೇಶಗಳಿಗೆ ಒಬ್ಬರೂ ಬರುವುದಿಲ್ಲ. ಆದಕಾರಣ ಈ ವನವು ಅತಿಭಯಂಕರವಾಗಿ ಘೋರಾರಣ್ಯವಾಗಿದೆ. ಈ ರಾಕ್ಷಸಿಯ ಭಯದಿಂದ ದೇಶತ್ಯಾಗಮಾಡಿ ಇದುವರೆಗೆ ಹೋದವರೊಬ್ಬರೂ ತಿರುಗಿ ಬಾರದಿದ್ದಾರೆ " ಎಂದು ನುಡಿದನು.



## ೨೫ ನೆಯ ಅಧ್ಯಾಯ

## ತಾಟಕಿಯ ವೃತ್ತಾಂತ

ಆಮೇಲೆ ರಘುನಾಥನು ವಿಶ್ವಾಮಿತ್ರಮುನೀಶ್ವರನನ್ನು ಕುರಿತು "ಮುನಿಗಳೆ, ತಾಟಕಿಯು ಸ್ತ್ರೀಯಾಗಿರುವಳು ಆಕೆಗೆ ಸಾವಿರ ಆನೆಗಳ ಸತ್ತ್ವವು ಹೇಗೆ ಬಂದಿತು ?" ಎಂದು ಕೇಳಿದನು

ಆ ಮುನೀಶ್ವರನು "ಶ್ರೀರಾಮ, ಪೂರ್ವದಲ್ಲಿ ಸುಕೇತುವೆಂಬ ಯಕ್ಷನು ಮಹಾಪರಾಕ್ರಮಿಯಾಗಿದ್ದನು. ಆತನು ಸಂತಾನವಿಲ್ಲದೆ ಬ್ರಹ್ಮದೇವನನ್ನು ಕುರಿತು ಮಹತ್ತಾದ ತಪಸ್ಸನ್ನು ಮಾಡಲು ಸುಕೇತುವಿನ ತಪಸ್ಸಿಗೆ ಸುಪ್ರೀತನಾಗಿ ಬ್ರಹ್ಮನು ಒಂದು ಕನ್ಯಾರತ್ನವನ್ನು ಕೊಟ್ಟು, ಆ ಕನ್ಯಕೆಯು ಸಾವಿರ ಆನೆಗಳ ಸಾಹಸವುಳ್ಳವಳಾಗಿರಲೆಂದು ವರವನ್ನು ಕೊಟ್ಟನು. ಗಂಡು ಸಂತಾನವನ್ನು ಕೊಡಲಿಲ್ಲ. ಆ ಕನ್ಯಕೆಯು ತಾಟಕಿ ಎಂಬ ಹೆಸರಿನಿಂದ ದಿನದಿನಕ್ಕೆ ಬೆಳೆದು ರೂಪ ಯೌವನದಿಂದ ಮೋಹನಾಕಾರವುಳ್ಳವಳಾದಳು. ಸುಕೇತುವು ತಾಟಕಿಯನ್ನು ಜಂಭನೆಂಬ ಯಕ್ಷನ ಮಗನಾದ ಸುಂದನಿಗೆ ಕೊಟ್ಟು ವಿವಾಹ ಮಾಡಿದನು ಕೆಲವು ಕಾಲದ ಮೇಲೆ ಅವಳು ಮಾರೀಚನೆಂಬ ಮಗನನ್ನು ಪಡೆದಳು. ಮಾರೀಚನು ಶಾಪದಿಂದ ರಾಕ್ಷಸನಾದನು. ಕೆಲವು ಕಾಲದ ಮೇಲೆ ತಾಟಕಿಯ ಗಂಡನಾದ ಸುಂದನು ಲೋಕಾಂತರವನ್ನೈದಿದನು. ಆಮೇಲೆ ತಾಟಕಿಯು ತನ್ನ ಮಗನಾದ ಮಾರೀಚನಿಂದ ಸಹಿತಳಾಗಿ ಸಂಚರಿಸುತ್ತ ಈ ವನದ ಸಮೀಪದಲ್ಲಿ ಆಶ್ರಮವನ್ನು ಮಾಡಿಕೊಂಡು ಕಾಮಬಾಣಗಳಿಂದ ನೊಂದವಳಾಗಿ ದಿಗಂಬರೆಯಾಗಿ ಮನೋಹರವಾದ ಗಾನವನ್ನು ಮಾಡುತ್ತ ಈ ವನದಲ್ಲಿದ್ದ ಅಗಸ್ತ್ಯಮುನೀಶ್ವರನ ಸಮೀಪಕ್ಕೆ ಬರುತ್ತಿದ್ದಳು. ಅಗಸ್ತ್ಯಮುನೀಶ್ವರನು ಮನೋಹರವಾದ ಸ್ವರೂಪವುಳ್ಳ ತಾಟಕಿಯನ್ನೂ ಅವಳ ಸಂಗಡ ಬರುತ್ತಿದ್ದ ಮಾರೀಚನನ್ನೂ ಕಂಡು ಅತಿಕೋಪದಿಂದ ಯಜ್ಞಪುರುಷನಿಗೆ ಸಮಾನನಾಗಿ 'ಎಲೈ ಮಾರೀಚನೆ, ನೀನು ರಾಕ್ಷಸತ್ವವನ್ನು ಅನುಭವಿಸು' ಎಂದು ಶಾಪವನ್ನು ಕೊಟ್ಟು ತಾಟಕಿಯನ್ನು ನೋಡಿ 'ಎಲೈ ತಾಟಕಿಯೆ, ನಿನ್ನ ಮನೋಹರವಾದ ಶರೀರವು ಕಾಮಿಗಳಾಗಿ ಯೌವನಸ್ಥರಾದ ಪುರುಷರಿಗೆ ಭಯಂಕರವಾಗಿ ತೋರಲಿ' ಎಂದು ಶಪಿಸಿದನು ಆ ಶಾಪದಿಂದ ಕಂಗೆಟ್ಟು ಕೋಪಾತಿಶಯದಿಂದ ಮೈಮರೆತವಳಾಗಿ ಅಗಸ್ತ್ಯಮುನೀಶ್ವರನು ವಾಸಮಾಡುತ್ತಿದ್ದ ಈ ದೇಶವನ್ನು ಹಾಳುಮಾಡುತ್ತಿದ್ದಾಳೆ. ಆದಕಾರಣ ಪಾಪಿಷ್ಠೆಯಾಗಿ ಯಾರಿಗೂ ಕೊಲ್ಲಲು ಸಾಧ್ಯವಲ್ಲದಿರುವ ತಾಟಕಿ ಎಂಬ ಯಕ್ಷಸ್ತ್ರೀಯನ್ನು ಗೋಬ್ರಾಹ್ಮಣಹಿತಾರ್ಥವಾಗಿ ಸಂಹರಿಸು ನಿನಗೆ ಹೊರತಾಗಿ ಅವಳು ಮತ್ತಾರಿಗೂ ಸಾಧ್ಯಳಲ್ಲ ! ರಾಮಚಂದ್ರ, ಸ್ತ್ರೀವಧೆಯನು ಮಾಡಬಾರದೆಂಬ ಕೃಪಾಳುತ್ವವನ್ನು ಬಿಡು. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಗಳಿಗೂ ಹಿತವನ್ನು ಮಾಡುವುದಕ್ಕಾಗಿಯೂ ಪ್ರಜೆಗಳನ್ನು ರಕ್ಷಿಸುವುದಕ್ಕಾಗಿಯೂ ಜಗತ್ತಿಗೆ ಉಪದ್ರವವನ್ನು ಮಾಡುವ ಪ್ರಾಣಿಯನ್ನು ಸಂಹರಿಸಬೇಕು. ರಾಜ್ಯಭಾರವನ್ನು ವಹಿಸಿದವರು ರಾಜ್ಯರಕ್ಷಣಾರ್ಥವಾಗಿ, ಕೊಲ್ಲುವುದಕ್ಕೆ ಯೋಗ್ಯರಾದರೂ ಅಯೋಗ್ಯರಾದರೂ ಅಧರ್ಮಿಗಳಾದವರನ್ನು ಸಂಹರಿಸಬೇಕು ಎಂಬ ಶಾಸ್ತ್ರವುಂಟು ; ತಾಟಕಿಯಲ್ಲಿ ಧರ್ಮವೆಂಬುದು ಲೇಶವೂ ಇಲ್ಲ ಅಧರ್ಮವೇ ಇವಳ ಸ್ವಭಾವ ; ಇವಳನ್ನು ಕೊಂದರೆ ಸ್ತ್ರೀವಧೆಯೆಂಬ ದೋಷವು ಬರುವುದಿಲ್ಲ. ಪೂರ್ವದಲ್ಲಿ ದೇವೇಂದ್ರನು ಭೂಮಿಯನ್ನು ಸಂಹರಿಸಲಿಚ್ಛಿಸಿದ ಮಂಥರೆ ಎಂಬ ಸ್ತ್ರೀಯನ್ನು

ಸ್ತ್ರೀಯೆಂದು ನೋಡದೆ ಸಂಹರಿಸಿದನು ಭೃಗುಮುನೀಶ್ವರನ ಹೆಂಡತಿಯಾದ ಶುಕ್ರಾಚಾರ್ಯನ ತಾಯಿಯು ಲೋಕದಲ್ಲಿ ಇಂದ್ರನಿಲ್ಲದ ಹಾಗೆ ಮಾಡಬೇಕೆಂದು ತಪಸ್ಸುಮಾಡುತ್ತಿರಲು, ಅವಳನ್ನು ನಾರಾಯಣನು ಸಂಹರಿಸಿದನು ಈ ಪ್ರಕಾರದಲ್ಲಿ ಅನೇಕ ಮಂದಿ ರಾಯರು ಅನೇಕ ದುಷ್ಟಸ್ತ್ರೀಯರನ್ನು ಸ್ತ್ರೀವಧೆಯೆಂದು ನೋಡದೆ ಸಂಹರಿಸಿದರು. ಆದಕಾರಣ ನೀನು ಈ ಸ್ತ್ರೀವಧೆಯನ್ನು ಮಾಡಬಹುದು. ಕೃಪಾಳುತ್ವವನ್ನು ಬಿಟ್ಟು ನನ್ನ ಮಾತನ್ನು ಕೇಳಿ ತಾಟಕಿಯನ್ನು ಸಂಹರಿಸು " ಎಂದು ಹೇಳಿದನು.



## ೨೬ ನೆಯ ಅಧ್ಯಾಯ

## ತಾಟಕಿಯ ಸಂಹಾರ

ಅನಂತರ ರಘುನಾಥನು ವಿಶ್ವಾಮಿತ್ರಮುನಿಯ ವಾಕ್ಯವನ್ನು ಅಂಗೀಕರಿಸಿ ಕೈಮುಗಿದು ಕೊಂಡು ಆತನನ್ನು ಕುರಿತು " ಮುನೀಶ್ವರರೆ, ನನ್ನ ತಂದೆಯಾದ ದಶರಥರಾಯನು ನನ್ನನ್ನು ನಿಮ್ಮ ಸಂಗಡ ಕಳುಹಿಸುವಾಗ ಅಯೋಧ್ಯಾಪಟ್ಟಣದಲ್ಲಿ ನಮ್ಮ ಗುರುಗಳಾದ ವಾಸುದೇವಾದಿ ಮುನೀಶ್ವರರ ಸನ್ನಿಧಿಯಲ್ಲಿಯೂ ನಮ್ಮ ತಾಯಂದಿರ ಸಮೀಪದಲ್ಲಿಯೂ ನನ್ನನ್ನು ಕುರಿತು ' ವಿಶ್ವಾಮಿತ್ರಮುನೀಶ್ವರರು ಯಾವ ಪ್ರಕಾರದಲ್ಲಿ ನಿರೂಪಂಗೊಡುವರೋ ಆ ಪ್ರಕಾರದಲ್ಲಿ ಅವರ ಆಜ್ಞೆಯನ್ನು ನಿರ್ವಹಿಸು ' ಎಂದು ಆಜ್ಞಾಪಿಸಿದ್ದರಿಂದ ನಿಮ್ಮ ವಾಕ್ಯವನ್ನು ನಾನು ಮೀರುವುದಿಲ್ಲ. ನಿಶ್ಚಯವಾಗಿಯೂ ಶಂಕೆಯಿಲ್ಲದೆ ತಾಟಕಿಯನ್ನು ಸಂಹರಿಸುವೆನು. ನಿಮ್ಮ ಮಾತನ್ನು ಅತಿಕ್ರಮಿಸುವುದಿಲ್ಲ " ಎಂದು ನುಡಿದನು

ಬಳಿಕ ಶ್ರೀರಾಮನು ಗೋಬ್ರಾಹ್ಮಣಹಿತಾರ್ಥವಾಗಿಯೂ ಸಮಸ್ತಜಗತ್ತಿನ ಸುಖಕ್ಕೋಸ್ಕರವಾಗಿಯೂ ಸಮಸ್ತ ದೇವತೆಗಳ ಬಾಧೆಯ ಪರಿಹಾರನಿಮಿತ್ತವಾಗಿಯೂ ಅಗಸ್ತ್ಯಮುನೀಶ್ವರನಿಗೆ ಸಂತೋಷವಾಗುವುದಕ್ಕಾಗಿಯೂ ವಿಶ್ವಾಮಿತ್ರಮುನೀಶ್ವರನ ವಾಕ್ಯವನ್ನು ಪರಿಪಾಲಿಸುವುದಕ್ಕಾಗಿಯೂ ತಾಟಕಿಯನ್ನು ಕೊಲ್ಲಬೇಕೆಂದು ನಿಶ್ಚಯಿಸಿದನು. ಅವನು ಬಿಲ್ಲನ್ನು ತೆಗೆದುಕೊಂಡು ಹೆದೆಯನ್ನೇರಿಸಿ ಟಂಕಾರಧ್ವನಿಯಿಂದ ಸಮಸ್ತ ದಿಕ್ಕುಗಳನ್ನೂ ಕಂಗೆಡಿಸಲು, ಆ ಸಮರಸಂಭ್ರಮವನ್ನು ಕಂಡು ವಿಶ್ವಾಮಿತ್ರಮುನೀಶ್ವರನು ಹರ್ಷಪಟ್ಟು ಬಹಳ ಚೆನ್ನಾಯಿತೆಂದು ನುಡಿದನು. ಆಗ ತಾಟಕಿಯು ಶ್ರೀರಾಮನ ಬಿಲ್ಲುನಾರಿಯ ಟಂಕಾರಧ್ವನಿಯನ್ನು ಕೇಳಿ ಸಿಡಿಲಿನ ಧ್ವನಿಯಹಾಗೆ ಭಯಂಕರವಾಗಿದ್ದ ಆ ಧ್ವನಿಯಿಂದ ಕಂಗೆಟ್ಟು, ಅತ್ಯಂತ ಕೋಪದಿಂದ ಆ ಧ್ವನಿಯು ಬಂದ ದೆಸೆಹಿಡಿದು, ಅತ್ಯಂತ ವಿಕಾರವಾದ ಮುಖವುಳ್ಳವಳಾಗಿ ನುಗ್ಗಿ ಬಂದಳು. ಅವಳನ್ನು ಕಂಡು ಶ್ರೀರಾಮನು ತಮ್ಮನಾದ ಲಕ್ಷ್ಮಣನನ್ನು ಕುರಿತು " ಲಕ್ಷ್ಮಣ, ಯಕ್ಷಸ್ತ್ರೀಯಾದ ತಾಟಕಿಯ ಭಯಂಕರವಾದ ಶರೀರವನ್ನು ನೋಡು. ಇವಳನ್ನು ಕಂಡು ಮೆಲ್ಲೆದೆಗಾರರಾದ ಸ್ತ್ರೀಪುರುಷರ ಮನಸ್ಸು ಕಂಗೆಡುವುದು. ಈಕೆಯ ಮೂಗು ಕಿವಿಗಳ ತುದಿಗಳನ್ನು ಹರಿಯುವ ಹಾಗೆ ಬಾಣವನ್ನೆಸೆದು ಇವಳು ಹಿಂತಿರುಗಿ ಹೋಗುವಂತೆ ಮಾಡುವೆನು, ನೋಡು. ಸ್ವಭಾವದಿಂದ ಇವಳು ಸ್ತ್ರೀಯು. ಆದ್ದರಿಂದ ಇವಳನ್ನು ಕೊಲ್ಲುವುದಕ್ಕೆ ನನಗೆ ಇಚ್ಛೆಯಿಲ್ಲ. ಈಕೆಯು ಅಂತರಿಕ್ಷಮಾರ್ಗದಲ್ಲಿ ಸಂಚರಿಸುವ ಮಾಯಾಸಾಮರ್ಥ್ಯವನ್ನು ನೋಡಿದರೆ ಕೊಲ್ಲಬೇಕೆಂಬ ಮನಸ್ಸಾಗುತ್ತಿದೆ " ಎಂದು ನುಡಿದನು.

ಆ ವಾಕ್ಯವನ್ನು ಕೇಳಿ ತಾಟಕಿಯು ಕೋಪಾತಿಶಯಪರವಶಳಾಗಿ ಬೊಬ್ಬಿಡುತ್ತ ಎರಡು ಕೈಗಳನ್ನೂ ಮೇಲಕ್ಕೆ ನೆಗೆಹಿಕೊಂಡು ರಘುನಾಥನಿಗೆ ಅಭಿಮುಖವಾಗಿ ಅಟ್ಟಿಕೊಂಡು ಬಂದಳು ವಿಶ್ವಾಮಿತ್ರಮುನೀಶ್ವರನು ಹುಂಕಾರದಿಂದ ಅವಳನ್ನು ತಡೆದು ನಿಲ್ಲಿಸಿ ರಾಮಲಕ್ಷ್ಮಣರಿಗೆ ಜಯವಾಗಲೆಂದು ಆಶೀರ್ವಾದಮಾಡಿದನು. ತಾಟಕಿಯು ಶ್ರೀರಾಮನಿಗೆ ಎದುರಾಗಿ ಸಮೀಪಕ್ಕೆ ಬರುತ್ತ ಧೂಳನ್ನು ಕೆದರಿ ಅದರಿಂದ ಮೇಘಮಂಡಲವು ಮುಚ್ಚಿದಂತೆ ಭ್ರಮೆಯನ್ನುಂಟುಮಾಡಿ ಮಾಯಾಸ್ವರೂಪಳಾಗಿ ಕಲ್ಲುಮಳೆಯನ್ನು ಸುರಿಸಿದಳು. ರಘುನಾಥನು ಅತ್ಯಂತ ಕೋಪದಿಂದ ಅಪರಿಮಿತವಾದ ಅಂಬುಗಳ ಮಳೆಯಿಂದ ಆ ಕಲ್ಲುಮಳೆಯನ್ನು ಹೋಗಲಾಡಿಸಿ, ಅಟ್ಟಿಸಿಕೊಂಡು ಬರುತ್ತಿದ್ದ ತಾಟಕಿಯ ಭುಜಗಳನ್ನು ಮೂರಂಬುಗಳಿಂದ ಕತ್ತರಿಸಿದನು ಭುಜರಹಿತಳಾದ ತಾಟಕಿಯು ಗರ್ಜಿಸುತ್ತ ಸಮೀಪಕ್ಕೆ ಬರುವುದನ್ನು ಕಂಡು ಲಕ್ಷ್ಮಣನು ಅತಿಕೋಪದಿಂದ ಆಕೆಯ ಕಿವಿ ಮೂಗುಗಳನ್ನು ಕತ್ತರಿಸಿದನು. ಆಗ ಕಾಮರೂಪಿಣಿಯಾದ ಆ ಯಕ್ಷಿಯು ಬಹುರೂಪಗಳನ್ನು ತಾಳಿದಳು. ಮೊದಲು ಶರೀರವನ್ನು ಮಾಯೆಯಿಂದ ಮರೆಸಿಕೊಂಡು ದೊಡ್ಡ ಕಲ್ಲುಮಳೆಗಳನ್ನು ಕರೆಯುತ್ತಿದ್ದಳು. ರಾಮಲಕ್ಷ್ಮಣರು ವಜ್ರಾಯುಧಕ್ಕೂ ಸಿಡಿಲಿಗೂ ಸಮಾನಗಳಾದ ಬಿಲ್ಲುಗಳಿಂದ ಟಂಕಾರಧ್ವನಿಗಳನ್ನು ಮಾಡಲು ತಾಟಕಿಯು ಮೂರ್ಛೆಯನ್ನೈದಿದಳು ಕ್ಷಣಮಾತ್ರದಲ್ಲಿ ಎಚ್ಚೆತ್ತು ಅನೇಕ ಶಸ್ತ್ರಾಸ್ತ್ರ ಸಮೂಹಗಳನ್ನು ಅವರ ಮೇಲೆ ಎಸೆಯುತ್ತಿದ್ದಳು ಆ ಯಕ್ಷಿಯು ಶಸ್ತ್ರಾಸ್ತ್ರಗಳಿಂದ ಮುಚ್ಚಲ್ಪಟ್ಟ ರಾಮಲಕ್ಷ್ಮಣರನ್ನು ಕಂಡು ವಿಶ್ವಾಮಿತ್ರಮುನೀಶ್ವರನು ಶ್ರೀರಾಮನನ್ನು ಕುರಿತು "ರಘುನಾಥ, ಇನ್ನು ಈ ತಾಟಕಿಯಲ್ಲಿ ಕೃಪೆಯನ್ನು ಸಾಕುಮಾಡು ಇವಳು ಮಹಾಸಾಹಸಿಯಾದವಳು, ಮಹಾದುಷ್ಟೆ. ಯಜ್ಞಾದಿ ಸತ್ಕರ್ಮಗಳಿಗೆ ವಿಘ್ನವನ್ನು ಮಾಡುವವಳು. ಸಾಯಂಕಾಲವಾದರೆ ಇವಳನ್ನು ಕೊಲ್ಲಲು ಶಕ್ಯವಲ್ಲ ರಾಕ್ಷಸರಿಗೆ ಸಾಯಂಕಾಲದಲ್ಲಿ ಬಲವು ಹೆಚ್ಚುವುದು. ಆಗ ಅವರನ್ನು ಜಯಿಸುವದಕ್ಕೆ ಯಾರಿಗೂ ಶಕ್ಯವಲ್ಲ ಆದ್ದರಿಂದ ಈಗಲೇ ಇವಳನ್ನು ಸಂಹರಿಸಬೇಕು" ಎಂದು ಹೇಳಿದನು

ಆ ವಾಕ್ಯವನ್ನು ಕೇಳಿ ಶ್ರೀರಾಮನು ಶಬ್ದವೇಧಿ ಎಂಬ ಬಾಣವನ್ನು ತೊಟ್ಟು ಅನೇಕ ಶರಗಳಿಂದ ತಾಟಕಿಯನ್ನು ಮುಚ್ಚಿದನು ಆ ಯಕ್ಷಿಯು ಮಾಯಾಸಾಮರ್ಥ್ಯದಿಂದ ಆ ಅಂಬುಗಳನ್ನು ತಪ್ಪಿಸಿಕೊಂಡು, ಲಕ್ಷ್ಮಣನ ಮೇಲೆ ಆರ್ಭಟಿಸಿ ಸಿಡಿಲಿನ ಹಾಗೆ ಅತಿವೇಗದಿಂದ ನುಗ್ಗಿ ಬರುವುದನ್ನು ಕಂಡು ರಘುನಾಥನು ಒಂದು ಶರವನ್ನು ತಾಟಕಿಯ ಎದೆಗೆ ಸಂಧಾನಮಾಡಿ ಎಸೆದನು. ತಾಟಕಿಯು ಆ ಬಾಣದಿಂದ ಎದೆಯೊಡೆದು ಬಿದ್ದು ಶರೀರವನ್ನು ಬಿಟ್ಟಳು. ಹಾಗೆ ಮಂಥರೆಗೆ ಸಮಾನಳಾದ ತಾಟಕಿಯು ಲೋಕಾಂತರಕ್ಕೈದಿದ ವೃತ್ತಾಂತವನ್ನು ಕಂಡಂಥ ದೇವೇಂದ್ರನೂ ಸಮಸ್ತ ದೇವತೆಗಳೂ ರಾಮಲಕ್ಷ್ಮಣರನ್ನು ಅನೇಕ ರೀತಿಯಲ್ಲಿ ಕೊಂಡಾಡಿದರು. ಅವರು ಅತ್ಯಂತ ಸಂತೋಷದಿಂದ ವಿಶ್ವಾಮಿತ್ರಮುನೀಂದ್ರನನ್ನು ಕುರಿತು "ಮುನೀಶ್ವರನೇ, ನಿನಗೆ ಅನೇಕ ಶ್ರೇಯಸ್ಸಾಗಲಿ! ಇಂದ್ರಾದಿ ದೇವತೆಗಳೂ ಏಕಾದಶರುದ್ರರೂ ಬೃಹಸ್ಪತಿಯೂ ಯಕ್ಷರಿಗೆ ಒಡೆಯನಾದ ಕುಬೇರನೂ ವಿಶ್ವೇದೇವತೆಗಳೂ ಋಷಿಗಳೂ ವರುಣನೂ ಪಿತೃದೇವತೆಗಳೂ ಮೊದಲಾದ ನಾವೆಲ್ಲರೂ ಕೂಡಿ ನಿನ್ನ ಚರಿತದಿಂದ ಸಂತೋಷಪಟ್ಟೆವು. ವಿಶ್ವಾಮಿತ್ರ, ಪೂರ್ವದಲ್ಲಿ ಭೃಶಾಶ್ವನೆಂಬ ರಾಯನಿಗೆ ಜನಿಸಿದ ನೂರೈವತ್ತು ಮಕ್ಕಳು ಮಂತ್ರಾಸ್ತ್ರಸ್ವರೂಪರಾಗಿ ನಿನ್ನ ವಶವರ್ತಿಗಳಾಗಿದ್ದಾರೆ. ಆ ಮಂತ್ರಾಸ್ತ್ರಗಳನ್ನು ರಘುನಾಥನಿಗೆ ಉಪದೇಶಮಾಡು. ನಿನ್ನ ಮಂತ್ರಜಾಲಕ್ಕೆ ಈತನೇ ಪಾತ್ರನು. ಈತನು ನಿನ್ನ ಸಂಗಡ ಬಂದಿದ್ದಾನೆ. ದಶರಥರಾಯನ ಕುಮಾರನಾದ ರಘುನಾಥನು ಸಮಸ್ತ ದೇವತೆಗಳ ಕಾರ್ಯಗಳನ್ನೂ ಸಾಧ್ಯಮಾಡಬೇಕು. ಆದ್ದರಿಂದ ನಿನ್ನ

ವಶವಾಗಿರುವ ಮಂತ್ರಾಸ್ತ್ರಗಳನ್ನು ಶ್ರೀರಾಮನಿಗೆ ಉಪದೇಶಮಾಡು " ಎಂದು ಹೇಳಿ ತಮ್ಮ ತಮ್ಮ ಲೋಕಗಳಿಗೆ ಬಿಜಯಂಗೈದರು.

ಆಮೇಲೆ ವಿಶ್ವಾಮಿತ್ರನು, ತನ್ನ ವಚನದಿಂದ ತಾಟಕಿಯನ್ನು ಕೊಂದು ಜಯಲಕ್ಷ್ಮೀ ಸಂಪನ್ನನಾದ ರಘುನಾಥನನ್ನು ನೋಡಿ ಅತ್ಯಂತ ಸಂತುಷ್ಟಚಿತ್ತನಾದನು ಆಮೇಲೆ ಸಾಯಂಕಾಲ ವಾಗುತ್ತಿರಲು ಆತನನ್ನು ಕುರಿತು ' ಎಲೈ ರಘುನಾಥನೆ, ಈ ಆಶ್ರಮದಲ್ಲಿ ಈ ರಾತ್ರಿಯನ್ನು ಕಳೆದು ನಾಳೆ ನಮ್ಮ ಆಶ್ರಮಕ್ಕೆ ಹೋಗೋಣ " ಎಂದು ಹೇಳಿ ರಾಮಲಕ್ಷ್ಮಣರೊಡನೆ ಆ ತಾಟಕಿಯವನದಲ್ಲಿ ಸುಖದಿಂದಿದ್ದನು ಆ ಯಕ್ಷಿಯನ್ನು ಕೊಂದುದರಿಂದ ಆಗ ಆ ವನವು ಶಾಪವಿಮೋಚನವನ್ನು ಹೊಂದಿ ಕುಬೇರನ ಚೈತ್ರರಥವೆಂಬ ಉದ್ಯಾನವನದಂತೆ ಮನೋಹರವಾಗಿ ಒಪ್ಪುತ್ತಿತ್ತು.



## ೨೭ ನೆಯ ಅಧ್ಯಾಯ

## ಶ್ರೀರಾಮನು ಅಸ್ತ್ರೋಪದೇಶವನ್ನು ಪಡೆದದ್ದು

ವಿಶ್ವಾಮಿತ್ರಮುನಿಯು ಮಾರನೆಯ ದಿವಸ ಪ್ರಾತಃಕಾಲದಲ್ಲಿ ರಘುನಾಥಸ್ವಾಮಿಯನ್ನು ಕೊಂಡಾಡುತ್ತ ಗಂಭೀರಧ್ವನಿಯಿಂದ ಆತನನ್ನು ಕುರಿತು " ಶ್ರೀರಾಮ, ನೀನು ಮಹಾತ್ಮನು ಮಹಾ ಕೀರ್ತಿವಂತನು. ನಿನ್ನ ಚರಿತ್ರದಿಂದ ನಾನು ಸುಪ್ರೀತನಾದೆನು. ಆದ್ದರಿಂದ ನನ್ನ ವಶವಾಗಿರುವ ಸಮಸ್ತ ಮಂತ್ರಾಸ್ತ್ರಗಳನ್ನೂ ಕೊಡುತ್ತೇನೆ ಆ ಅಸ್ತ್ರಗಳಿಂದ ಸಮಸ್ತ ದೇವಾಸುರ ಯಕ್ಷ ಗಂಧರ್ವರನ್ನೂ ಯುದ್ಧದಲ್ಲಿ ಪ್ರಯಾಸವಿಲ್ಲದೆ ಜಯಿಸಬಹುದು ಆದಕಾರಣ ನಿನಗೆ ಆ ಮಂತ್ರಾಸ್ತ್ರಗಳನ್ನು ಉಪದೇಶಮಾಡುತ್ತೇನೆ. ದಿವ್ಯವಾದ ದಂಡಚಕ್ರ ಧರ್ಮಚಕ್ರ ಕಾಲಚಕ್ರ ವಿಷ್ಣುಚಕ್ರ ಇಂದ್ರಚಕ್ರ ವಜ್ರಾಸ್ತ್ರ, ಶೈವಸಂಬಂಧವಾದ ತ್ರಿಶೂಲ, ಬ್ರಹ್ಮಶಿರಸ್ಸು ಐಷೀಕಾಸ್ತ್ರ ಬ್ರಹ್ಮಾಸ್ತ್ರ, ಮೋದಕೀಶಿಖರಿಗಳೆಂಬ ಎರಡು ಗದೆಗಳು, ಧರ್ಮಪಾಶ ಕಾಲಪಾಶ ವರುಣಪಾಶ ಶುಷ್ಕಾಶನಿ ಆರ್ದ್ರಾಶನಿ ಎಂಬ ಸಿಡಿಲಿನ ಅಸ್ತ್ರಗಳು, ಪೈನಾಕಾಸ್ತ್ರ ನಾರಾಯಣಾಸ್ತ್ರ ಆಗ್ನೇಯಾಸ್ತ್ರ ದೈವಾಸ್ತ್ರ ವಾಯುವ್ಯಾಸ್ತ್ರ ಹಯಗ್ರೀವಾಸ್ತ್ರ ಕ್ರೌಂಚಾಸ್ತ್ರ ಶಕ್ತಿದ್ವಯಾಸ್ತ್ರ ಕಂಕಾಳಾಸ್ತ್ರ ಮುಸಲಾಸ್ತ್ರ ಕಪಾಲಾಸ್ತ್ರ ಕಂಕಣಾಸ್ತ್ರ ವಿದ್ಯಾಧರಾಸ್ತ್ರ ನಂದನಾಸ್ತ್ರ ಅಸಿರತ್ನಾಸ್ತ್ರ ಗಂಧರ್ವಾಸ್ತ್ರ ದೈವತಾಸ್ತ್ರ ಮಾನವಾಸ್ತ್ರ ಪ್ರಸ್ವಾಪನಾಸ್ತ್ರ ಪ್ರಶಮನಾಸ್ತ್ರ ಸೌರಾಸ್ತ್ರ ದರ್ಪಣಾಸ್ತ್ರ ಶೋಷಣಾಸ್ತ್ರ ಸಂತಾಪನಾಸ್ತ್ರ ವಿಲಾಪನಾಸ್ತ್ರ ಮದನಾಸ್ತ್ರ ದುರ್ಧರ್ಷಾಸ್ತ್ರ ಕಂದರ್ಪಾಸ್ತ್ರ ಪೈಶಾಚಾಸ್ತ್ರ ಮೋಹನಾಸ್ತ್ರ ತಾಮಸಾಸ್ತ್ರ ಮೌಸಲಾಸ್ತ್ರ ಸಂವರ್ತಾಸ್ತ್ರ ಪೌಷ್ಕಳಾಸ್ತ್ರ ಸತ್ಯಾಸ್ತ್ರ ಮಾಯಾಧರಾಸ್ತ್ರ ತೇಜಃಪ್ರಭಾವಾಸ್ತ್ರ ಸೋಮಾಸ್ತ್ರ ಶಿಶಿರಾಸ್ತ್ರ, ಅತಿಭಯಂಕರವಾಗಿರುವಂಥ ತ್ವಾಷ್ಟ್ರಾಸ್ತ್ರ ದಾರುಣಾಸ್ತ್ರ ಶೀತೇಷ್ವಸ್ತ್ರ ಮೊದಲಾದ ಮಂತ್ರಾಸ್ತ್ರಗಳನ್ನು ತೆಗೆದುಕೊ " ಎಂದು ಹೇಳಿದನು.

ಶ್ರೀರಾಮನು ಸ್ನಾನವನ್ನು ಮಾಡಿ ಶುಚಿಯಾಗಿ ಮೂಡಣ ಮುಖವಾಗಿ ನಿಂತು ಸಮಸ್ತ ಮಂತ್ರಜಾಲವನ್ನೂ ಉಪದೇಶಮಾಡಿಸಿಕೊಂಡು ಜಪವನ್ನು ಮಾಡುತ್ತಿದ್ದನು ಆಗ ಸಮಸ್ತ ಮಂತ್ರಾಸ್ತ್ರಗಳೂ ರಘುನಾಥನ ಸಮೀಪಕ್ಕೆ ಬಂದು ಕೈಮುಗಿದುಕೊಂಡು ಅತ್ಯಂತ ಸಂತೋಷದಿಂದ ಆತನನ್ನು ಕುರಿತು " ಎಲೈ ರಘುನಾಥನೆ, ನಾವು ನಿನ್ನ ಸೇವಕರು. ನಿನ್ನ ಸಮೀಪಕ್ಕೆ ಬಂದೆವು. ನಾವು ಮಾಡಬೇಕಾದ ಕಾರ್ಯವನ್ನು ಅಪ್ಪಣೆಮಾಡು " ಎಂದು ಹೇಳಿ ಆತನ ವಶವಾದವು.

ಶ್ರೀರಾಮನು ಅತ್ಯಂತ ಪ್ರೀತಿಯಿಂದ ವಿಶ್ವಾಮಿತ್ರಮುನಿಗೆ ಅಭಿವಂದಿಸಿ ಆತನ ಸಂಗಡ ಮುಂದಕ್ಕೆ ಹೊರಟನು



## ೨೯ನೆಯ ಅಧ್ಯಾಯ

## ಶ್ರೀರಾಮನು ಅಸ್ತ್ರೋಪಸಂಹಾರವನ್ನು ಕಲಿತುದು

ಆಮೇಲೆ ಶ್ರೀರಾಮನು ವಿಶ್ವಾಮಿತ್ರಮುನೀಶ್ವರನನ್ನು ಕುರಿತು "ಮಹಾತ್ಮರೆ, ನಿಮ್ಮ ಕೃಪೆಯಿಂದ ಮಂತ್ರಾಸ್ತ್ರಗಳನ್ನು ಪಡೆದದ್ದರಿಂದ ಸಮಸ್ತ ದೇವತೆಗಳಿಂದಲೂ ಜಯಿಸಲು ಶಕ್ಯರಲ್ಲದವರನ್ನೂ ಜಯಿಸಲಾಪೆನು. ಈ ಮಂತ್ರಾಸ್ತ್ರಗಳನ್ನು ಯುದ್ಧದಲ್ಲಿ ಪ್ರಯೋಗಿಸಿ ತಿರುಗಿಸಿಕೊಳ್ಳುವ ಉಪಸಂಹಾರವನ್ನು ನಿರೂಪಿಸಬೇಕು" ಎಂದು ಕೇಳಿದನು

ಆಗ ವಿಶ್ವಾಮಿತ್ರನು ಆತನನ್ನು ಕುರಿತು "ಆ ಮಂತ್ರಾಸ್ತ್ರಗಳ ಉಪಸಂಹಾರದ ಅಧಿದೇವತೆಗಳ ಹೆಸರುಗಳನ್ನು ಹೇಳುತ್ತೇನೆ ಕೇಳು: ಸತ್ಯವಂತ, ಸತ್ಯಕೀರ್ತಿ, ಧೃಷ್ಟ, ರಭಸ, ಪ್ರತಿಹಾರ, ಪರಾಙ್ಮುಖ, ಅವಾಙ್ಮುಖ, ಲಕ್ಷ್ಯ, ಅಲಕ್ಷ್ಯ, ದೃಢನಾಭ, ಸುನಾಭ, ದಶಾಕ್ಷ, ಶತವಕ್ತ್ರ, ದಶಶೀರ್ಷ ಶತೋದರ, ಪದ್ಮನಾಭ, ಮಹಾನಾಭ, ದುಂದುನಾಭ, ಸುನಾಭ, ಜ್ಯೋತಿಷ, ಕೃಶನ, ನೈರಾಶ್ಯ, ವಿಮಲ, ಯೋಗಂಧರ, ಹರಿದ್ರ, ದೈತ್ಯಪ್ರಶಮನ, ಶುಚಿಬಾಹು, ಮಹಾಬಾಹು, ನಿಷ್ಕಲಿ, ವಿರುಚಿ, ಸಾರ್ಚಿರ್ಮಾಲಿ, ಧೃತಿರ್ಮಾಲಿ, ವೃತ್ತಿಮಾನ್, ರುಚಿರ, ಪಿತ್ರ್ಯ, ಸೌಮನಸ, ವಿಧೂತ, ಸುಕರ, ಕರವೀರಕರ, ಧನ, ಧಾನ್ಯ, ಕಾಮರೂಪ, ಕಾಮರುಚಿ, ಮೋಹ, ಆವರಣ, ಜೃಂಭಕ, ಸರ್ವನಾಭ, ಸಂಧಾನ, ವರಣ ಎಂಬ ಭೃಶಾಶ್ವನ ಮಕ್ಕಳಾಗಿ ಮಹಾಪ್ರಕಾಶಮಾನರೂ ಕಾಮರೂಪಿಗಳೂ ಆದ ಅಸ್ತ್ರೋಪಸಂಹಾರಾಧಿದೇವತೆಗಳನ್ನು ಪರಿಗ್ರಹಿಸು. ರಘುನಾಥ, ನೀನೇ ಇದಕ್ಕೆ ಸತ್ಪಾತ್ರನು" ಎಂದು ನುಡಿದನು.

ಶ್ರೀರಾಮನು ಮಹಾಪ್ರಸಾದವೆಂದು ಹರ್ಷದಿಂದ ಅವನ್ನು ಅಂಗೀಕರಿಸಲು ಮಂತ್ರೋಪ ಸಂಹಾರದ ಅಧಿದೇವತೆಗಳು ಸಾಕಾರವಾಗಿ ದಿವ್ಯಸ್ವರೂಪಗಳುಳ್ಳವೂ ಹೊಂಬಣ್ಣವಾದುವೂ ಕಣ್ಣುಗಳಿಗೆ ಅತಿಮನೋಹರವಾದ ರೂಪವುಳ್ಳವೂ ಕೆಂಡಗಳಿಗೆ ಸಮಾನವಾದ ಕಾಂತಿಯುಳ್ಳವೂ ಹೊಗೆಯ ಹಾಗೆ ಇರುವುವೂ ಚಂದ್ರಸೂರ್ಯರಿಗೆ ಸಮಾನವಾದ ಕಾಂತಿಯುಳ್ಳವೂ ಆಗಿ ನಾನಾ ರೂಪ ಗಳಿಂದ ಆತನ ಮುಂದೆ ಬಂದು ಕೈಮುಗಿದು ನಿಂತುಕೊಂಡು ಕಿವಿಗಿಂಪಾದ ನುಡಿಗಳಿಂದ ಆತನನ್ನು ಕುರಿತು "ಎಲೈ ರಘುನಾಥನೆ, ನಾವು ನಿನ್ನ ಸಮೀಪಕ್ಕೆ ಬಂದಿದ್ದೇವೆ. ನಮ್ಮಿಂದ ಆಗಬೇಕಾದ ಕಾರ್ಯವನ್ನು ಹೇಳು" ಎಂದು ನುಡಿದವು.

ಶ್ರೀರಾಮನು ಆ ಅಸ್ತ್ರದೇವತೆಗಳನ್ನು ಕುರಿತು "ಎಲೈ ದೇವತೆಗಳಿರಾ, ನನಗೆ ಯಾರೊಡನೆ ಯಾದರೂ ಯುದ್ಧವು ಬಂದಾಗ ನೆನಸಿದ ಕೂಡಲೆ ಬಂದು ನನ್ನ ಕಾರ್ಯವನ್ನು ಸಾಧ್ಯಮಾಡಿ ಕೊಡಿರಿ. ಈಗ ನಿಮ್ಮ ಮನಸ್ಸಿಗೆ ಬಂದ ಸ್ಥಳದಲ್ಲಿ ಸುಖವಾಗಿರಿ" ಎಂದು ಹೇಳಿ ಕಳುಹಿಸಿದನು.

ಬಳಿಕ ಆ ದೇವತೆಗಳು ಮಹಾಪ್ರಸಾದವೆಂದು ಅವನ ಮಾತನ್ನು ಅಂಗೀಕರಿಸಿ ಶ್ರೀರಾಮನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಬೀಳ್ಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ಹೋದವು. ರಘುನಾಥನು ವಿಶ್ವಾಮಿತ್ರಮುನೀಶ್ವರನ ಅಪ್ಪಣೆಯಿಂದ ಅನೇಕ ಅಸ್ತ್ರಗಳನ್ನೂ ಆ ಅಸ್ತ್ರೋಪ

ಸಂಹಾರಕ್ರಮಗಳನ್ನೂ ಲಕ್ಷ್ಮಣನಿಗೆ ಉಪದೇಶ ಮಾಡಿದನು. ಅವರೊಡನೆ ಮುಂದೆ ಹೋಗುತ್ತ ದಾರಿಯಲ್ಲಿ ವಿಶ್ವಾಮಿತ್ರಮುನೀಶ್ವರನನ್ನು ಕುರಿತು "ಮುನೀಶ್ವರರೆ, ಈ ಪರ್ವತದ ಸಮೀಪದಲ್ಲಿ ಸೂರ್ಯನ ರೀತಿಯಲ್ಲಿ ಪ್ರಕಾಶಮಾನವಾದ ವೃಕ್ಷಸಮೂಹಗಳಿಂದಲೂ ಅನೇಕ ಮೃಗಗಳಿಂದಲೂ ಅತ್ಯಂತ ಮಧುರ ಧ್ವನಿಯುಳ್ಳ ಪಕ್ಷಿಗಳಿಂದಲೂ ಮನೋಹರವಾಗಿರುವ ವನದ ಸ್ವರೂಪವನ್ನು ತಿಳಿಯಲು ನನ್ನ ಮನಸ್ಸಿಗೆ ಅತ್ಯಂತ ಇಚ್ಛೆಯುಂಟಾಗಿದೆ. ಮುನೀಶ್ವರರೆ, ಬಹಳ ವನಗಳನ್ನು ದಾಟಿ ಬಂದೆವು. ಈಗ ಮುಂದೆ ಕಾಣಿಸುವ ಆಶ್ರಮವು ಯಾವುದು ? ನಿಮ್ಮ ಯಜ್ಞಕ್ಕೆ ವಿಘ್ನವನ್ನು ಮಾಡುವ ಪಾಪಿಗಳಾದ ರಾಕ್ಷಸರು ಎಲ್ಲಿದ್ದಾರೆ ? ಈ ವನವು ಸಂಚರಿಸುವುದಕ್ಕೆ ಅನುಕೂಲವಾಗಿ ಅತ್ಯಂತ ಸಂಪತ್ತುಳ್ಳದ್ದಾಗಿದೆ. ಇದರ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿರಿ. ಇಂಥ ಇಷ್ಟಾಲಾಪಗಳಿಂದ ದಾರಿಯು ಸಾಗಲಿ. ನಿಮ್ಮ ಆಶ್ರಮವು ಯಾವ ಸ್ಥಳದಲ್ಲಿದೆ ? ಯಜ್ಞಶಾಲೆಯು ಎಲ್ಲಿದೆ ? ರಕ್ತಮಾಂಸಗಳನ್ನು ಚೆಲ್ಲುವಂಥ ಘೋರಸ್ವರೂಪರಾದ ರಾಕ್ಷಸರು ಎಲ್ಲಿದ್ದಾರೆ ? ನಾನು ಯಾವ ಸ್ಥಳದಲ್ಲಿ ನಿಂತು ಆ ರಾಕ್ಷಸರನ್ನು ಸಂಹರಿಸಿ ನಿಮ್ಮ ಯಾಗವನ್ನು ರಕ್ಷಿಸಬೇಕು ? ಸಮಸ್ತ ವೃತ್ತಾಂತಗಳನ್ನೂ ವಿಸ್ತಾರವಾಗಿ ಹೇಳಿರಿ" ಎಂದು ಹೇಳಿದನು.



## ೨೯ ನೆಯ ಅಧ್ಯಾಯ

## ಸಿದ್ಧಾಶ್ರಮದ ಮಹತ್ತ್ವ

ಆಮೇಲೆ ಅಪರಿಮಿತವಾದ ಮಹಿಮೆಯುಳ್ಳ ವಿಶ್ವಾಮಿತ್ರಮುನೀಶ್ವರನು "ರಘುನಾಥನೆ, ಈ ಸ್ಥಳದಲ್ಲಿ ಸರ್ವಾಂತರ್ಯಾಮಿಯಾಗಿ ಸರ್ವಲೋಕಗಳಿಗೂ ಕರ್ತನಾದ ನಾರಾಯಣನು ಸಮಸ್ತ ಪ್ರಾಣಿಗಳಿಗೂ ಹಿತವಾಗುವ ಹಾಗೆ ಅನೇಕ ಯುಗಗಳು ತಪಸ್ಸನ್ನು ಮಾಡುತ್ತಿದ್ದನು. ಇದು ವಾಮನಸ್ವರೂಪನಾದ ನಾರಾಯಣನಿಗೆ ಪೂರ್ವಾಶ್ರಮವಾದುದರಿಂದ ಸಿದ್ಧಾಶ್ರಮವೆಂದು ಪ್ರಸಿದ್ಧ ವಾಯಿತು. ಮೊದಲು ಮಹಾಶೀಲವಂತನೂ ವಿರೋಚನಪುತ್ರನೂ ಆದ ಬಲಿಚಕ್ರವರ್ತಿಯು ದೇವೇಂದ್ರನೇ ಮೊದಲಾದ ಸಮಸ್ತ ದೇವತೆಗಳನ್ನೂ ತನ್ನ ಭುಜಬಲಪರಾಕ್ರಮದಿಂದ ಜಯಿಸಿ ತನ್ನ ರಾಜ್ಯವನ್ನು ಪ್ರಸಿದ್ಧಪಡಿಸಿ ಮಹಾಸತ್ಯಸಂಧನಾಗಿ ಧರ್ಮಾತ್ಮನಾಗಿ ಸಮಸ್ತ ಅಸುರರಿಗೂ ಒಡೆಯನಾಗಿ ಒಂದು ಯಾಗವನ್ನು ಮಾಡುತ್ತಿದ್ದನು. ಆ ಸಮಯದಲ್ಲಿ ಯಜ್ಞೇಶ್ವರನೇ ಮೊದಲಾದ ಸಮಸ್ತ ದೇವತೆಗಳೂ ಈ ಆಶ್ರಮದಲ್ಲಿ ತಪಸ್ಸನ್ನು ಮಾಡುತ್ತಿದ್ದ ನಾರಾಯಣನ ಸಮೀಪಕ್ಕೆ ಬಂದು 'ಭಗವಂತನೆ, ವಿರೋಚನನ ಮಗನಾದ ಬಲಿಚಕ್ರವರ್ತಿಯು ಉತ್ತಮವಾದ ಯಾಗವನ್ನು ಮಾಡುತ್ತಾ ಇದ್ದಾನೆ. ಆ ಯಾಗವು ಸಮಾಪ್ತಿಯಾಗುವುದಕ್ಕೆ ಮೊದಲೇ ನಿನ್ನ ಕಾರ್ಯವನ್ನು ಸಾಧಿಸು. ಆ ಬಲೀಂದ್ರನು ಯಾರು ಬಂದು ಯಾವ ಕಾರ್ಯವಾಗಬೇಕೆಂದು ಕೇಳಿದರೂ ಅವರಿಗೆ ಆ ಕಾರ್ಯವನ್ನು ಮಾಡಿಕೊಡುತ್ತಾನೆ. ನೀನು ಸಮಸ್ತ ದೇವತೆಗಳ ಹಿತಾರ್ಥವಾಗಿ ಯೋಗ ಮಾಯೆಯನ್ನು ಆಶ್ರಯಿಸಿ ವಾಮನಸ್ವರೂಪವನ್ನು ತಾಳಿ ಕಾರ್ಯವನ್ನು ಸಾಧಿಸು' ಎಂದು ಬಿನ್ನಹಮಾಡಿದರು.

ಬಳಿಕ ನಾರಾಯಣನು ಯಜ್ಞಪುರುಷನಂತೆ ದೇದೀಪ್ಯಮಾನವಾದ ಕಾಂತಿಯುಳ್ಳವನಾಗಿ ತನ್ನ ಪತ್ನಿಯಾದ ಅದಿತಿದೇವಿಯೊಡನೆ ಸಾವಿರ ದೇವವರ್ಷಗಳ ಕಾಲ ತಪಸ್ಸನ್ನು ಮಾಡುತ್ತಿದ್ದ ಕಶ್ಯಪ

ಬ್ರಹ್ಮನಿಗೆ ಪ್ರಸನ್ನನಾದನು. ಆಗ ಆತನು ಸ್ತೋತ್ರಮಾಡುತ್ತ ನಾರಾಯಣನನ್ನು ಕುರಿತು 'ತಪಸ್ಸೇ ಮೂರ್ತಿಯಾಗಿ ಬಂದಂಥ ಸ್ವಾಮಿಯೆ, ತಪಸ್ಸುಗಳ ಆಕಾರವಾದ ಸ್ವಾಮಿಯೆ, ನಾನು ಕಷ್ಟಪಟ್ಟು ಮಾಡಿದ ತಪಸ್ಸಿನಿಂದ ನಿನ್ನನ್ನು ಕಂಡೆನು. ಪುರುಷೋತ್ತಮ, ನಿನ್ನ ಶರೀರದಲ್ಲಿ ಸಮಸ್ತ ಜಗತ್ತನ್ನು ಕಾಣುತ್ತಲಿದ್ದೇನೆ. ನೀನು ಅನಾದಿಪುರುಷನು. ಇಂಥ ಸ್ವರೂಪವೆಂದು ನಿನ್ನನ್ನು ಹೇಳಲು ಶಕ್ಯವಲ್ಲ. ನಾನು ನಿನ್ನ ಮರೆಹೊಕ್ಕೆನು' ಎಂದು ನುಡಿದನು.

ಆ ಮಾತಿಗೆ ಸಂತುಷ್ಟನಾದ ನಾರಾಯಣನು ದೋಷರಹಿತನಾದ ಕಶ್ಯಪಬ್ರಹ್ಮನನ್ನು ಕುರಿತು 'ಕಶ್ಯಪ, ನಿನ್ನ ತಪಸ್ಸಿಗೆ ನಾನು ಸುಪ್ರೀತನಾದೆನು. ನಿನ್ನ ಇಷ್ಟಾರ್ಥವು ನೆರವೇರಲಿ. ನಿನ್ನ ಮನಸ್ಸಿಗೆ ಬಂದ ವರವನ್ನು ಬೇಡಿಕೊ' ಎಂದು ನುಡಿದನು.

ಕಶ್ಯಪನು ಆತನನ್ನು ನೋಡಿ 'ಹೇ ದೇವ, ಅದಿತಿಗೂ ಸಮಸ್ತ ದೇವತೆಗಳಿಗೂ ನನಗೂ ಸುಪ್ರೀತನಾಗಿ ಒಂದು ವರವನ್ನು ಕೊಡಬೇಕು. ನನ್ನ ಪತ್ನಿಯಾದ ಅದಿತಿಯಲ್ಲಿ ನೀನು ಮಗನಾಗಿ ಜನಿಸಿ ದೇವೇಂದ್ರನಿಗೆ ಒಡಹುಟ್ಟಿದ ತಮ್ಮನಾಗಿ ರಾಕ್ಷಸರ ಬಾಧೆಗಳಿಂದ ಕಂಗೆಟ್ಟಿರುವ ದೇವತೆಗಳಿಗೆ ಸಹಾಯವನ್ನು ಮಾಡಬೇಕು. ಈ ಆಶ್ರಮವು ನನಗೆ ತಪಸ್ಸಿದ್ಧಿಯುಂಟುಮಾಡಿದ ಕಾರಣದಿಂದ ಸಿದ್ಧಾಶ್ರಮವೆಂದು ಲೋಕದಲ್ಲಿ ಪ್ರಸಿದ್ಧವಾಗಲಿ!' ಎಂದು ಹೇಳಿದನು.

ಈ ಪ್ರಕಾರದಲ್ಲಿ ಪ್ರಸಿದ್ಧವಾದ ಸಿದ್ಧಾಶ್ರಮವು ಇದು. ಬಳಿಕ ಕಶ್ಯಪನ ವಾಕ್ಯವನ್ನು ಕೇಳಿ ಪೀತಾಂಬರಧರನಾಗಿ ಸರ್ವಜ್ಞನಾದ ಪರಮಪುರುಷನು ಕಶ್ಯಪನ ಸ್ತ್ರೀಯಾದ ಅದಿತಿಯಲ್ಲಿ ವಾಮನ ಸ್ವರೂಪನಾಗಿ ದಂಡ ಕಮಂಡಲು ಛತ್ರ ಶಿಖಾಯಜ್ಞೋಪವೀತಸಹಿತನಾಗಿ ಅವತರಿಸಿದನು. ಆ ಮೇಲೆ ಬ್ರಾಹ್ಮಣರೂಪದಿಂದ ಬಲಿಚಕ್ರವರ್ತಿಯ ಸಮೀಪಕ್ಕೆ ಬಂದನು. ಬಲಿಯು ಆಶ್ಚರ್ಯಪಟ್ಟು ವಾಮನನ ಅಪೇಕ್ಷೆಯಂತೆ ಮೂರು ಹೆಜ್ಜೆಗಳುಳ್ಳ ಭೂಮಿಯನ್ನು ದಾನವಾಗಿ ಕೊಟ್ಟನು. ವಾಮನ ಸ್ವರೂಪನಾದ ನಾರಾಯಣನು ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ಮೂರು ಹೆಜ್ಜೆಗಳಿಗೆ ಅಡಕವಾಗಿ ಸರಿಮಾಡಿಕೊಂಡು ಬಲಿಚಕ್ರವರ್ತಿಯನ್ನು ಸ್ವಸ್ಥಾನದಿಂದ ತೊಲಗಿಸಿ ಸಮಸ್ತ ರಾಜ್ಯವನ್ನೂ ತನ್ನ ಅಣ್ಣನಾದ ದೇವೇಂದ್ರನ ವಶದಲ್ಲಿರಿಸಿದನು. ಈ ರೀತಿಯಲ್ಲಿ ಜಗನ್ಮಯನಾದ ನಾರಾಯಣನು ಸಮಸ್ತ ಲೋಕಗಳನ್ನೂ ಅನುಗ್ರಹಿಸಿದನು. ನಾನು ಆತನಲ್ಲಿ ಭಕ್ತಿ ಯಿಂದ ಈ ಆಶ್ರಮವನ್ನು ಸೇರಿದ್ದೇನೆ. ಈ ಆಶ್ರಮದಲ್ಲಿ ನಾನು ಮಾಡುವ ಯಾಗಾದಿ ಸತ್ಕರ್ಮ ಗಳಿಗೆ ರಾಕ್ಷಸರು ವಿಘ್ನಗಳನ್ನು ಮಾಡುತ್ತಾ ಇದ್ದಾರೆ. ಆದಕಾರಣ ನೀನು ಈ ಆಶ್ರಮದಲ್ಲಿ ನಿಂತು ರಾಕ್ಷಸರನ್ನು ಸಂಹರಿಸಬೇಕು. ನನ್ನ ಈ ಆಶ್ರಮವು ನನಗೆ ಹೇಗೆ ಸಂತೋಷ ಮಾಡುತ್ತಿರುವುದೋ ಹಾಗೆಯೇ ನಿನಗೂ ಸಂತೋಷವನ್ನು ಮಾಡುತ್ತದೆ" ಎಂದು ನುಡಿದು ಸುಪ್ರೀತನಾದ ವಿಶ್ವಾಮಿತ್ರನು ಲಕ್ಷ್ಮಣಸಹಿತನಾದ ರಘುನಾಥನನ್ನು ಕರೆದುಕೊಂಡು ಪುನರ್ವಸು ನಕ್ಷತ್ರಸಹಿತನಾದ ಶರತ್ಕಾಲದ ಚಂದ್ರನ ಹಾಗೆ ಅತಿ ಪ್ರಕಾಶಮಾನನಾಗಿ ತನ್ನ ಆಶ್ರಮವನ್ನು ಪ್ರವೇಶಿಸಿದನು.

ಅವರನ್ನು ಕಂಡು ಸಿದ್ಧಾಶ್ರಮವಾಸಿಗಳಾದ ಸಮಸ್ತ ಋಷಿಗಳೂ ಅತಿಹರ್ಷದಿಂದ ಸಮೀಪಕ್ಕೆ ಬಂದು ವಿಶ್ವಾಮಿತ್ರಮುನೀಶ್ವರನಿಗೆ ವಿಧ್ಯುಕ್ತಪ್ರಕಾರದಲ್ಲಿ ಅಭಿವಂದಿಸಿ, ಅರ್ಘ್ಯಪಾದ್ಯಾದಿ ಸತ್ಕಾರ ಗಳನ್ನು ಮಾಡಿ, ರಾಮಲಕ್ಷ್ಮಣರಿಗೂ ಸತ್ಕಾರಗಳನ್ನು ಮಾಡಿದರು. ರಾಮಲಕ್ಷ್ಮಣರು ಸ್ವಲ್ಪ ವಿಶ್ರಮಿಸಿಕೊಂಡು ದಾರಿ ನಡೆದುಬಂದ ಶ್ರಮವನ್ನು ಪರಿಹರಿಸಿಕೊಂಡು ವಿಶ್ವಾಮಿತ್ರಮುನೀಶ್ವರನಿಗೆ ಕೈಮುಗಿದು "ಮುನೀಶ್ವರರೆ, ಇಂದು ಯಾಗದೀಕ್ಷೆಯನ್ನು ಕೈಗೊಳ್ಳಿರಿ. ಈ ಆಶ್ರಮವು ಸಿದ್ಧಾಶ್ರಮವೆಂಬುದು ಸಿದ್ಧವಾಗಲಿ!" ಎಂದು ನುಡಿಯಲು ಆ ಮುನೀಶ್ವರನು ದೀಕ್ಷೆಯನ್ನು

ಕೈಗೊಂಡು ವ್ರತಸ್ಥನಾದನು ರಾಮಲಕ್ಷ್ಮಣರು ಆ ರಾತ್ರಿಯನ್ನು ಕಳೆದು ಮರುದಿವಸ ಪ್ರಾತಃ ಕಾಲದಲ್ಲಿ ಸ್ನಾನಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಯಾಗಶಾಲೆಯಲ್ಲಿದ್ದ ವಿಶ್ವಾಮಿತ್ರ ಮುನೀಶ್ವರನಿಗೆ ನಮಸ್ಕಾರವನ್ನು ಮಾಡಿದರು



೩೦ ನೆ ಯ ಅ ಧ್ಯಾ ಯ

## ಶ್ರೀ ರಾ ಮ ನು ಮಾ ರೀ ಚ ಸು ಬಾ ಹು ಗ ಳ ನ್ನು ನಿ ಗ್ರ ಹಿ ಸಿ ದ್ದು

ಆಮೇಲೆ ದೇಶಕಾಲಗಳನ್ನು ಬಲ್ಲವರಾಗಿ ಸಮಸ್ತ ಶತ್ರುಗಳನ್ನೂ ಜಯಿಸುವಂಥವರಾದ ರಾಮಲಕ್ಷ್ಮಣರು ವಿಶ್ವಾಮಿತ್ರಮುನೀಶ್ವರನನ್ನು "ಮಹರ್ಷಿಗಳೆ, ಮಾರೀಚ ಸುಬಾಹುಗಳೆಂಬ ರಾಕ್ಷಸರು ಯಾವ ಸಮಯದಲ್ಲಿ ಬರುವರೋ ಆ ಸಮಯವನ್ನು ಮೀರದೆ ಆ ರಾಕ್ಷಸರನ್ನು ಸಂಹರಿಸಿ ಯಜ್ಞರಕ್ಷಣೆ ಮಾಡಬೇಕು ಆದ್ದರಿಂದ ಅವರು ಬರುವ ಸಮಯವನ್ನು ಹೇಳಿರಿ" ಎಂದು ಕೇಳಿದರು.

ಅದನ್ನು ಕೇಳಿ ಸಮಸ್ತ ಋಷಿಗಳೂ ಸುಪ್ರೀತರಾಗಿ ರಾಮಲಕ್ಷ್ಮಣರನ್ನು ಕುರಿತು "ಎಲೈ ಅರಸುಮಕ್ಕಳಿರಾ, ಇಂದು ಮೊದಲಾಗಿ ಆರು ದಿವಸಗಳ ಪರ್ಯಂತ ವಿಶ್ವಾಮಿತ್ರಮುನಿಯು ಮೌನವ್ರತಧಾರಿಯಾದ್ದರಿಂದ ಮಾತನಾಡುವುದಿಲ್ಲ. ನೀವು ಈ ಆರು ದಿವಸಗಳೂ ಹಗಲಿರುಳೆನ್ನದೆ ನಿದ್ರೆಯನ್ನು ಬಿಟ್ಟು ಯಾಗವನ್ನು ರಕ್ಷಿಸಬೇಕು" ಎಂದು ನುಡಿದರು. ಆ ಮುನಿಗಳ ವಾಕ್ಯವನ್ನು ಕೇಳಿ ರಾಮಲಕ್ಷ್ಮಣರು ಬಿಲ್ಲಿಗೆ ಹೆದೆಯನ್ನೇರಿಸಿಕೊಂಡು ಸಾವಧಾನದಿಂದ ಯಾಗರಕ್ಷಣೆಮಾಡಿ ಕೊಂಡಿದ್ದರು. ಆಗ ಶ್ರೀರಾಮನು ಲಕ್ಷ್ಮಣನನ್ನು ನೋಡಿ "ಲಕ್ಷ್ಮಣ, ನಾವು ಮೊದಲು ಎಂದೂ ರಾಕ್ಷಸರೊಡನೆ ಯುದ್ಧಮಾಡಿದವರಲ್ಲ. ಇನ್ನು ಮುಂದೆ ರಾಕ್ಷಸರಿಗೂ ನಮಗೂ ಘೋರವಾದ ಯುದ್ಧವಾಗುವುದು, ಇದಕ್ಕೆ ಸಂದೇಹವಿಲ್ಲ. ಆದ್ದರಿಂದ ನೀನು ಸಾವಧಾನಚಿತ್ತನಾಗಿರು" ಎಂದು ಹೇಳಿದನು.

ರಾಮಲಕ್ಷ್ಮಣರು ಈ ಪ್ರಕಾರದಲ್ಲಿ ರಕ್ಷಣೆಮಾಡುತ್ತಿರಲು ಆ ಯಾಗಮಂಟಪದಲ್ಲಿ ಹೋಮ ವೇದಿಕೆಯು ಸ್ರುಕ್‌ಚಮಸಾದಿಗಳಿಂದಲೂ ಆಜ್ಯಸಮಿತ್ತುಗಳಿಂದಲೂ ದರ್ಭೆಗಳಿಂದಲೂ ಉಪಾಧ್ಯಾಯ ಪುರೋಹಿತರಿಂದಲೂ ಅಲಂಕರಿಸಲ್ಪಟ್ಟಿದ್ದಾಗಿರಲು ಆ ಹೋಮದಲ್ಲಿ ಯಜ್ಞಪುರುಷನು ಹವಿಸ್ಸು ಗಳಿಂದ ಪ್ರಜ್ವಲಿಸುತ್ತಿದ್ದನು. ಆ ಪ್ರಕಾರದಲ್ಲಿ ಯಜ್ಞಕರ್ಮವು ಜರುಗುತ್ತಿರಲು ಅಂತರಿಕ್ಷಮಾರ್ಗದಲ್ಲಿ ಅತಿಭಯಂಕರವಾದ ಧ್ವನಿಯಾಯಿತು! ಕೂಡಲೆ ವರ್ಷಾಕಾಲದಲ್ಲಿ ಮೇಘಗಳು ಆಕಾಶವನ್ನು ಮುಚ್ಚುವ ರೀತಿಯಲ್ಲಿ ಮಾರೀಚ ಸುಬಾಹುಗಳೆಂಬ ರಾಕ್ಷಸರು ಗಗನಮಾರ್ಗವನ್ನು ಮಾಯೆಯಿಂದ ಮುಚ್ಚಿ ಆ ಯಾಗವನ್ನು ಕೆಡಿಸಬೇಕೆಂಬ ಬುದ್ಧಿಯಿಂದ ಆರ್ಭಟಿಸಿಕೊಂಡು ಬಂದು ಮಹಾಭಯಂಕರ ವಾದ ರಕ್ತಪ್ರವಾಹವನ್ನು ಕರೆದರು ಆಗ ಲಕ್ಷ್ಮಣಸಹಿತನಾಗಿ ಪುಂಡರೀಕಾಕ್ಷನಾದ ರಘುನಾಥನು ಪ್ರಜ್ವಲಿಸುತ್ತಿದ್ದ ಆ ಹೋಮವೇದಿಕೆಯಲ್ಲಿ ರಕ್ತಬೀಳುತ್ತಿರುವುದನ್ನು ಕಂಡು ಅತ್ಯಂತ ಕೋಪ ಯುಕ್ತನಾಗಿ ಅಂತರಿಕ್ಷಮಾರ್ಗದಲ್ಲಿದ್ದ ರಾಕ್ಷಸರನ್ನು ಕಂಡು ಲಕ್ಷ್ಮಣನನ್ನು ನೋಡಿ "ಎಲೈ ಲಕ್ಷ್ಮಣ, ದುಷ್ಟರೂ ಕಾಮಚಾರಿಗಳೂ ಮಹಾಕ್ರೂರಕರ್ಮಿಗಳೂ ಮಾಂಸಭಕ್ಷಕರೂ ದೇವತೆಗಳಿಗೆ ಶತ್ರುಗಳೂ ಆಗಿರುವ, ಈ ಯಜ್ಞಕ್ಕೆ ವಿಘ್ನವನ್ನು ಮಾಡುವ ರಾಕ್ಷಸರು ನಾನು ಪ್ರಯೋಗಿಸುವ ಮಾನವಾಸ್ತ್ರ

ದಿಂದ, ಬಿರುಗಾಳಿಯಿಂದ ಮೇಘಗಳು ಚದರಿಹೋಗುವ ಹಾಗೆ ಕೆದರಿಹೋಗುತ್ತಾರೆ, ನೋಡು" ಎಂದು ನುಡಿದನು. ಆ ರಾಕ್ಷಸರು ಸುವರ್ಣಮಯವಾದ ಬಿಲ್ಲನ್ನು ಧರಿಸಿಕೊಂಡು ಬಾಲಕನಾಗಿದ್ದ ರಘುನಾಥನನ್ನೂ ಹೆದೆಯೇರಿಸಿದ ಬಿಲ್ಲುಳ್ಳ ಲಕ್ಷ್ಮಣನನ್ನೂ ಅಂತರಿಕ್ಷಮಾರ್ಗದಿಂದ ನೋಡಿ, ಅವರು ತಮ್ಮನ್ನು ಎದುರಿಸಲಾರರೆಂದು ಬಗೆದು, ಲಕ್ಷ್ಯಮಾಡದೆ ಯಾಗಮಾಡುತ್ತಿದ್ದ ಬ್ರಾಹ್ಮಣರನ್ನು ಬೆದರಿಸಲು ಯತ್ನಿಸಿದರು ರಘುನಾಥನು ಮಾರೀಚ ಸುಬಾಹುಗಳೆಂಬ ರಾಕ್ಷಸರನ್ನು ಕಂಡು ನಗುತ್ತ ಲೀಲಾಮಾತ್ರದಿಂದ ಮಾನವಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರವು ಮಾರೀಚನ ಎದೆಯನ್ನು ತಾಕಿ ಅವನನ್ನು ನೂರು ಗಾವುದ ಪರ್ಯಂತ ತಳ್ಳಿಕೊಂಡು ಹೋಗಿ ಸಮುದ್ರ ಮಧ್ಯದಲ್ಲಿ ಹಾಕಿತು.

ಆಮೇಲೆ ರಘುನಾಥನು ಲಕ್ಷ್ಮಣನನ್ನು ನೋಡಿ "ಲಕ್ಷ್ಮಣ, ವಾಯುದೇವತಾಕವಾದ ಮಾನವಾಸ್ತ್ರವನ್ನು ಪ್ರಯೋಗಿಸಲು ಆ ಅಸ್ತ್ರವು ಮಾರೀಚನನ್ನು ಕಂಗೆಡಿಸಿ ಬಹುದೂರ ತಳ್ಳಿಕೊಂಡು ಹೋಯಿತು, ಆತನ ಪ್ರಾಣವನ್ನು ಅಪಹರಿಸಲಿಲ್ಲ ಇನ್ನು ಉಳಿದಿರುವ ಕಾಮ ರೂಪಿಯಾಗಿ ದಯಾವಿವರ್ಜಿತನಾದ ಸುಬಾಹುವನ್ನು ಕೊಲ್ಲುತ್ತೇನೆ, ನೋಡು" ಎಂದು ನುಡಿದು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರವು ಸುಬಾಹುವಿನ ಎದೆಯಲ್ಲಿ ತಾಕಲು ಅವನು ಘಾಯಪಡೆದು ಭೂಮಿಯಲ್ಲಿ ಬಿದ್ದನು. ಆಮೇಲೆ ಶ್ರೀರಾಮನು ವಾಯವ್ಯಾಸ್ತ್ರಪ್ರಯೋಗ ದಿಂದ ಅವರ ಹಿಂದೆ ಬಂದ ರಾಕ್ಷಸರನ್ನು ಸಂಹರಿಸಿ ಸಮಸ್ತ ಋಷಿಗಳಿಗೂ ಅತ್ಯಂತ ಸಂತೋಷ ವನ್ನುಂಟುಮಾಡಿದನು. ಹೀಗೆ ವಿಶ್ವಾಮಿತ್ರಮುನಿಯ ಯಾಗಕ್ಕೆ ವಿಘ್ನಕಾರಿಗಳಾದ ರಾಕ್ಷಸರನ್ನು ಕೊಂದು ರಘುನಾಥನು ಸಮಸ್ತ ಋಷಿಗಳಿಂದಲೂ ಸ್ತೋತ್ರಮಾಡಲ್ಪಟ್ಟನು ವಿಶ್ವಾಮಿತ್ರ ಮುನೀಶ್ವರನು ಯಾಗವನ್ನು ಸಮಾಪ್ತಿಮಾಡಿ ರಘುನಾಥನನ್ನು ಕೃಪಾದೃಷ್ಟಿಯಿಂದ ನೋಡಿ "ಶ್ರೀರಾಮ, ನಿನ್ನ ಕೃಪೆಯಿಂದ ನಿರ್ವಿಘ್ನವಾಗಿ ಯಾಗವನ್ನು ಮಾಡಿ ಕೃತಾರ್ಥನಾದೆನು. ನೀನು ಗುರುವಾಕ್ಯವನ್ನು ಪರಿಪಾಲಿಸಿ ಈ ಆಶ್ರಮಕ್ಕೆ ಸಿದ್ಧಾಶ್ರಮ ಎಂಬ ಹೆಸರನ್ನು ಯಥಾರ್ಥವಾಗಿ ಮಾಡಿದೆ" ಎಂದು ಕೊಂಡಾಡಲು ರಾಮಲಕ್ಷ್ಮಣರು ಆ ಮುನೀಶ್ವರನ ಚರಣಗಳಿಗೆ ನಮಸ್ಕಾರ ವನ್ನು ಮಾಡಿದರು.



## ೩೧ ನೆಯ ಅಧ್ಯಾಯ

## ಶ್ರೀ ರಾ ಮ ಲ ಕ್ಷ್ಮ ಣ ರು ಮಿ ಥಿ ಲಾ ಪ ಟ್ಟ ಣ ಕ್ಕೆ ಹೊ ರ ಟ ದ್ದು

ಆಮೇಲೆ ಅತಿಪರಾಕ್ರಮಿಗಳಾಗಿ ಕೃತಾರ್ಥರಾದ ರಾಮಲಕ್ಷ್ಮಣರು ಅತ್ಯಂತ ಹರ್ಷದಿಂದ ಆ ರಾತ್ರಿ ವಿಶ್ವಾಮಿತ್ರನ ಸಿದ್ಧಾಶ್ರಮದಲ್ಲಿದ್ದು ಮಾರನೆಯ ದಿವಸ ಪ್ರಾತಃಕಾಲದಲ್ಲೆದ್ದು ಸ್ನಾನಾದಿ ನಿತ್ಯಕರ್ಮಗಳನ್ನು ಮಾಡಿ ವಿಶ್ವಾಮಿತ್ರಮುನೀಶ್ವರನೇ ಮೊದಲಾದ ಸಮಸ್ತ ಋಷಿಗಳಿಗೂ ಅಭಿವಂದಿಸಿ ವಿಶ್ವಾಮಿತ್ರಮುನಿಯನ್ನು ನೋಡಿ "ಮಹರ್ಷಿಗಳೆ, ಮುಂದೆ ನಾವು ಮಾಡುವ ಸೇವೆ ಯಾವುದು ? ಅದನ್ನು ಹೇಳಿರಿ" ಎಂದು ಕೇಳಿದರು.

ಆಗ ಯಾಗಕ್ಕೆ ಬಂದ ಋಷಿಗಳು ಯಜ್ಞಪುರುಷನ ರೀತಿಯಲ್ಲಿ ಅತ್ಯಂತ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ವಿಶ್ವಾಮಿತ್ರಮುನಿಯನ್ನು ಮುಂದಿಟ್ಟುಕೊಂಡು ಶ್ರೀರಾಮನನ್ನು ನೋಡಿ

" ಶ್ರೀರಾಮ, ಮಿಥಿಲಾದೇಶಕ್ಕೆ ಅಧಿಪತಿಯಾದ ಜನಕಮಹಾರಾಯನ ಯಾಗವು ನಡೆಯುತ್ತಿದೆ ಆ ಯಜ್ಞಕ್ಕೆ ನಾವೆಲ್ಲರೂ ಹೋಗುತ್ತೇವೆ, ನೀವೂ ನಮ್ಮ ಕೂಡ ಅವಶ್ಯವಾಗಿ ಬರಬೇಕು ; ಅಲ್ಲಿ ಒಂದು ಧನೂರತ್ನವಿದೆ , ಆ ಧನುಸ್ಸು ಆಶ್ಚರ್ಯಕರವಾದದ್ದು. ಆ ಬಿಲ್ಲನ್ನು ನೀನು ನೋಡಬೇಕು ; ಅದನ್ನು ಸಮಸ್ತ ದೇವತೆಗಳೂ ಯಜ್ಞಸಭೆಯಲ್ಲಿ ಜನಕರಾಯನಿಗೆ ಕೊಟ್ಟರು ; ಅದು ಅಪರಿಮಿತ ಸತ್ತ್ವವುಳ್ಳದ್ದಾಗಿ ಮಹಾಭಯಂಕರವಾದ್ದಾಗಿ ದೇದೀಪ್ಯಮಾನವಾಗಿರುವುದು. ಆ ಬಿಲ್ಲಿಗೆ ದೇವ ಗಂಧರ್ವ ಯಕ್ಷ ರಾಕ್ಷಸರು ಮೊದಲಾದವರೂ ಹೆದೆಯನ್ನೇರಿಸಲಶಕ್ತರು. ಹಾಗಿರುವಲ್ಲಿ ಮನುಷ್ಯರು ಏರಿಸಲಾರರು ಎಂದು ಹೇಳುವುದೇನು ! ಕೆಲವು ಅರಸರು ಆ ಬಿಲ್ಲಿಗೆ ಹೆದೆಯನ್ನೇರಿಸಿ ಅದರ ಸತ್ತ್ವವನ್ನು ನೋಡಬೇಕೆಂದು ಬಂದು ತಮ್ಮಿಂದ ತೀರದೆ ಹೊರಟುಹೋದರು. ಆದಕಾರಣ ನೀನು ಜನಕರಾಯನ ಯಜ್ಞಕ್ಕೆ ಬಂದರೆ ಆ ಬಿಲ್ಲನ್ನು ನೋಡಬಹುದು. ಜನಕರಾಜನು ತಾನು ಮಾಡಿದ ಯಜ್ಞಕ್ಕೆ ಫಲವಾಗಿ ಆ ಬಿಲ್ಲನ್ನು ಕೇಳಲು ದೇವತೆಗಳು ಅದನ್ನು ಯಜ್ಞಶಾಲೆಗೆ ತಂದುಕೊಟ್ಟರು. ಆ ರಾಯನು ಆ ಬಿಲ್ಲನ್ನು ತನ್ನ ಮನೆಯಲ್ಲಿರಿಸಿಕೊಂಡು ಷೋಡಶೋಪಚಾರಾದಿ ಪೂಜೆಗಳಿಂದರ್ಚಿಸಿ ಕೊಂಡಿದ್ದಾನೆ " ಎಂದು ಹೇಳಿದರು. ಅನಂತರ ವಿಶ್ವಾಮಿತ್ರಮುನಿಯು ಆ ಋಷಿಗಳನ್ನು ಕೂಡಿಕೊಂಡು ಸಿದ್ಧಾಶ್ರಮದಲ್ಲಿದ್ದ ಬ್ರಾಹ್ಮಣರನ್ನೂ ವನದೇವತೆಗಳನ್ನೂ ಕರೆದು " ನಿಮಗೆ ಅನೇಕ ಶ್ರೇಯಸ್ಸಾಗಲಿ ! ನಾನು ಗಂಗೆಯ ಬಡಗಣ ತೀರದಲ್ಲಿರುವ ಹಿಮವತ್ಪರ್ವತದ ಕಡೆಗೆ ಹೋಗಿ ಬರುತ್ತೇನೆ " ಎಂದು ಹೇಳಿ ಪ್ರಯಾಣವಾಗಿ ಹೊರಟನು. ಆಗ ಆತನ ಹಿಂದೆ ಬ್ರಹ್ಮವೇತ್ತೃಗಳಾದ ಅನೇಕ ಬ್ರಾಹ್ಮಣರೂ ಆ ಆಶ್ರಮದಲ್ಲಿದ್ದ ಮೃಗಪಕ್ಷಿಗಳು ಮೊದಲಾದವೂ ಬರುತ್ತಿರಲು, ವಿಶ್ವಾಮಿತ್ರಮುನೀಶ್ವರನು ಆ ಬ್ರಾಹ್ಮಣರನ್ನೂ ಮೃಗಪಕ್ಷಿಗಳನ್ನೂ ಕರೆದು " ನೀವು ನನ್ನ ಸಿದ್ಧಾಶ್ರಮವನ್ನು ರಕ್ಷಿಸಿಕೊಂಡಿರಿ ! " ಎಂದು ತಿರುಗಿ ಕಳುಹಿಸಿ, ತಾನು ಋಷಿಗಳನ್ನೂ ರಾಮ ಲಕ್ಷ್ಮಣರನ್ನೂ ಕರೆದುಕೊಂಡು ಬಡಗಣ ದಿಕ್ಕಿಗೆ ಹೋಗುತ್ತ ಮಧ್ಯಾಹ್ನವಾಗಲು ಶೋಣಾನದಿಯ ತೀರದಲ್ಲಿಳಿದು ಸ್ನಾನಾದಿ ನಿತ್ಯಕರ್ಮಾನುಷ್ಠಾನ ವೈಶ್ವದೇವ ಮೊದಲಾದ ಕೃತ್ಯಗಳನ್ನು ತೀರಿಸಿಕೊಂಡು ಆ ದಿವಸವನ್ನು ಅಲ್ಲಿಯೇ ಕಳೆದನು, ಸಾಯಂಕಾಲದಲ್ಲಿ ಲಕ್ಷ್ಮಣಸಹಿತನಾದ ಶ್ರೀರಾಮನು ಆ ಮುನಿಗಳಿಗೆ ವಂದನೆಮಾಡಿ ವಿಶ್ವಾಮಿತ್ರಮುನೀಶ್ವರನನ್ನು ಕುರಿತು " ಮಹರ್ಷಿಗಳೆ, ಇದು ಯಾವ ದೇಶ ? ಇಲ್ಲಿ ಅಪರಿಮಿತವಾದ ವನಗಳಿವೆ. ಇದರ ವೃತ್ತಾಂತವನ್ನು ವಿಸ್ತಾರವಾಗಿ ನಿರೂಪಿಸಬೇಕು " ಎಂದು ಕೇಳಿದನು



## ೩೨ನೆಯ ಅಧ್ಯಾಯ

## ಕುಶನಾಭನ ವೃತ್ತಾಂತ

ಆಮೇಲೆ ನುಡಿಜಾಣ್ಮೆಯುಳ್ಳ ವಿಶ್ವಾಮಿತ್ರಮುನೀಶ್ವರನು ರಘುನಾಥನನ್ನು ನೋಡಿ " ಎಲೈ ರಘುನಾಥನೆ, ಕೇಳು. ಪೂರ್ವದಲ್ಲಿ ಬ್ರಹ್ಮಪುತ್ರನಾಗಿ ಮಹಾತಪಸ್ವಿಯಾದ ಕುಶನೆಂಬ ರಾಯನಿದ್ದನು ಆ ರಾಯನು ಸಮಸ್ತ ವ್ರತಧರ್ಮರಹಸ್ಯಗಳನ್ನೂ ಬಲ್ಲನು. ಸತ್ಪುರುಷನಾದ ಆತನು ಸತ್ಕುಲದಲ್ಲಿ ಹುಟ್ಟಿದ ವೈದರ್ಭೀ ಎಂಬ ಹೆಂಡತಿಯಲ್ಲಿ ತನ್ನಂತೆ ಗುಣಶಾಲಿಗಳಾದ ನಾಲ್ಕು ಕುಮಾರರನ್ನು ಪಡೆದನು. ಒಂದು ಸಲ ಆತನು ಕುಶಾಂಬ, ಕುಶನಾಭ, ಅಧೂರ್ತರಜ, ವಸು ಎಂಬ ನಾಲ್ಕು ಮಕ್ಕಳನ್ನೂ ಕರೆದು ಕ್ಷತ್ರಿಯಧರ್ಮವನ್ನು ಪರಿಪಾಲಿಸಬೇಕೆಂಬ ಬುದ್ಧಿಯಿಂದ ಅವರನ್ನು ಕುರಿತು

'ನೀವು ಧರ್ಮಿಷ್ಠರಾಗಿ ಭೂಮಿಯನ್ನು ಪರಿಪಾಲಿಸಿ' ಎಂದು ಆಜ್ಞಾಪಿಸಿದನು ಆ ಮಾತನ್ನು ಕೇಳಿ ಆ ನಾಲ್ಕು ಮಕ್ಕಳೂ ತಮ್ಮ ತಮ್ಮ ಹೆಸರಿನಿಂದ ಒಂದೊಂದು ಪಟ್ಟಣವನ್ನು ನಿರ್ಮಿಸಿದರು. ಆ ನಾಲ್ವರೂ ಮಹಾಸಮರ್ಥರಾಗಿ ಕುಶನೆಂಬ ಆ ರಾಯನ ಮನೋರಥಗಳೋ ಎಂಬ ಹಾಗಿದ್ದರು. ಆ ಮಕ್ಕಳೊಳಗೆ ಅತಿತೇಜಸ್ವಿಯಾದ ಕುಶಾಂಬನು ಕೌಶಾಂಬೀಪಟ್ಟಣವನ್ನೂ ಕುಶನಾಭನು ಮಹೋದಯವೆಂಬ ಪಟ್ಟಣವನ್ನೂ ಅಧೂರ್ತರಜನು ಧರ್ಮಾರಣ್ಯವೆಂಬ ಪಟ್ಟಣವನ್ನೂ ವಸುವು ಗಿರಿವ್ರಜವೆಂಬ ಪಟ್ಟಣವನ್ನೂ ನಿರ್ಮಿಸಿದರು. ಈ ಭೂಮಿಯು ವಸುವೆಂಬ ಆ ನಾಲ್ಕನೇ ಕುಮಾರನ ವಶವಾಗಿರುವುದು. ಇಗೋ, ಇಲ್ಲಿ ಕಾಣಬರುವುದು ಮಗಧೆ ಎಂಬ ನದಿಯು. ಈ ನದಿಯು ಮಗಧದೇಶದಲ್ಲಿ ಪ್ರಸಿದ್ಧವಾಗಿರುವ ಐದು ಪರ್ವತಗಳ ಮಧ್ಯದಲ್ಲಿ ಹರಿದು ಆ ಪರ್ವತಗಳಿಗೆ ಕಂಠಮಾಲೆಯ ರೀತಿಯಲ್ಲಿ ಒಪ್ಪುತ್ತ ಮೂಡಣ ಸಮುದ್ರಕ್ಕೆ ಹೋಗಿ ಕೂಡುವುದು. ಈ ನದಿಯ ತೀರಗಳಲ್ಲಿ ತೋಟ ಗದ್ದೆಗಳು ವಿಧವಿಧವಾದ ಪೈರುಗಳಿಂದ ಒಪ್ಪುತ್ತಿರುವುವು. ಕುಶನಾಭನು ತನ್ನ ಹೆಂಡತಿಯಾದ ಘೃತಾಚೀ ಎಂಬವಳಲ್ಲಿ ನೂರು ಮಂದಿ ಹೆಣ್ಣು ಮಕ್ಕಳನ್ನು ಪಡೆದನು. ಆ ಹೆಣ್ಣುಮಕ್ಕಳು ರೂಪಲಾವಣ್ಯಸೌಂದರ್ಯವುಳ್ಳವರೂ ಮನೋಹರಾಕಾರರೂ ಯೌವನಸ್ಥರೂ ಸರ್ವಾಭರಣಭೂಷಿತೆಯರೂ ಆಗಿ ವರ್ಷಾಕಾಲದ ಮಿಂಚಿನಂತೆ ತಮ್ಮ ತನುಕಾಂತಿಯಿಂದ ಒಪ್ಪುತ್ತ, ವೀಣಾದಿಗಾನಗಳನ್ನು ಮಾಡುತ್ತ, ಅತ್ಯಂತ ಹರ್ಷದಿಂದ ಉದ್ಯಾನವನದ ಮಧ್ಯದಲ್ಲಿ ಅಂತರಿಕ್ಷ ಮಾರ್ಗದಲ್ಲಿರುವ ನಕ್ಷತ್ರಗಳ ಹಾಗೆ ಬೆಳಗುತ್ತಿದ್ದರು. ಆ ಸಮಯದಲ್ಲಿ ಸಮಸ್ತ ಪ್ರಾಣಿಗಳ ದೇಹದಲ್ಲಿಯೂ ಚರಿಸುವ ವಾಯುದೇವನು ಅವರನ್ನು ಕಂಡು ಮೋಹಿತನಾಗಿ ಅವರನ್ನು ಕುರಿತು 'ಕನ್ಯಾಶಿರೋಮಣಿಗಳಿರಾ, ನೀವೆಲ್ಲರೂ ನನ್ನನ್ನು ವರಿಸಿ ನನಗೆ ಪತ್ನಿಯರಾಗಿರಿ. ಈ ಮನುಷ್ಯ ಸ್ವರೂಪವನ್ನು ಬಿಟ್ಟು ದೀರ್ಘಾಯುಷ್ಯವನ್ನು ಪಡೆಯಿರಿ. ಯೌವನವೆಂಬುದು ಮನುಷ್ಯಜನ್ಮದಲ್ಲಿ ಸ್ಥಿರವಲ್ಲ. ಆದ್ದರಿಂದ ನೀವು ದೇವತ್ವವನ್ನು ಪಡೆದು ಎಂದಿಗೂ ಅಳಿವಿಲ್ಲದ ಯೌವನವನ್ನು ಪಡೆಯಿರಿ !' ಎಂದು ಹೇಳಿದನು.

ಮಹಾತ್ಮನಾದ ವಾಯುದೇವನ ಮಾತನ್ನು ಕೇಳಿ ಕುಶನಾಭನ ನೂರುಮಂದಿ ಕುಮಾರಿಯರೂ ಹಾಸ್ಯಮಾಡುತ್ತ ಆತನನ್ನು ಕುರಿತು 'ಎಲೈ ಮಾರುತನೆ, ನೀನು ಸಮಸ್ತ ಪ್ರಾಣಿಗಳ ಅಂತರಂಗದಲ್ಲಿ ಚರಿಸುವವನಾಗಿದ್ದೂ ನಮಗೆ ಯಾವ ಕಾರಣದಿಂದ ಅಪಕೀರ್ತಿಯನ್ನುಂಟುಮಾಡುತ್ತೀಯೆ ? ನಾವು ಕುಶನಾಭನ ಕುಮಾರಿಯರು. ನಮ್ಮ ಧರ್ಮವನ್ನು ಕಾದುಕೊಂಡಿದ್ದೇವೆ. ನಾವು ನಿನ್ನನ್ನೂ ಈ ಸ್ಥಾನದಿಂದ ಕದಲಿಸುವುದಕ್ಕೆ ಸಮರ್ಥೆಯರು. ನಮ್ಮ ತಂದೆಯಾದ ಕುಶನಾಭನು ಮಹಾ ಸತ್ಯವಾದಿಯು. ಆತನನ್ನು ನೀನು ತಿರಸ್ಕರಿಸಿದರೆ ಆತನೇ ನಿನಗೆ ಮೃತ್ಯುವಾಗುವನು. ನಾವು ಧರ್ಮಮಾರ್ಗದಿಂದ ಸ್ವಯಂವರಕ್ಕಾಗಿ ಕಾಯುತ್ತಿದ್ದೇವೆ. ನಮ್ಮ ತಂದೆಯು ಮನಸ್ಸು ಬಂದು ಯಾರಿಗೆ ಕೊಡುವನೋ ಆತನೇ ನಮಗೆ ಪತಿಯಾಗುವನು' ಎಂದು ನುಡಿದರು.

ಆ ಮಾತನ್ನು ಕೇಳಿ ವಾಯುದೇವನು ಕೋಪಯುಕ್ತನಾಗಿ ಆ ಕನ್ಯಕೆಯರ ಶರೀರಗಳನ್ನು ಪ್ರವೇಶಿಸಿ ಅವರ ಕರಚರಣಾದಿ ಸರ್ವಾಂಗಗಳನ್ನೂ ಸೆಳೆದನು. ಇದರಿಂದ ಆ ಸ್ತ್ರೀಯರು ಚೋಟುದ್ದ ಶರೀರಾಕಾರವುಳ್ಳವರಾಗಿ ಗರ್ವವು ಮುರಿದು ಮಹಾಭಯಗೊಂಡವರಾಗಿ ತಮ್ಮ ತಂದೆಯಾದ ಕುಶನಾಭನ ಮನೆಗೆ ಹೋಗಿ ಮಹಾಲಜ್ಜಿತೆಯರಾಗಿ ಆತನ ಪಾದಕ್ಕೆ ಎರಗಿದರು. ಕುಶನಾಭನು ಆ ಕುಮಾರಿಯರು ಕುಬ್ಜಾರೆಯರಾಗಿದ್ದುದನ್ನು ಕಂಡು ವ್ಯಥೆಪಟ್ಟು 'ಎಲೈ ಮಕ್ಕಳಿರಾ, ನಿಮಗೆ ಇದೇನು ಅವಸ್ಥೆಯು ಬಂದಿತು ? ನೀವು ಯಾವ ಕಾರಣದಿಂದ ಕುಬ್ಜಾರೆಯರಾದಿರಿ ? ಯಾವ

ಪಾಪದಿಂದ ಹೀಗಾದಿರಿ ? ಯಾವನು ನಿಮ್ಮನ್ನು ಹೀಗೆ ಮಾಡಿದನು ? ನೆಲದ ಮೇಲೆ ಹೊರಳಬೇಡಿ ; ನಿಮ್ಮ ವೃತ್ತಾಂತವನ್ನು ಹೇಳಿ ' ಎಂದು ಹೇಳಿ ಭಗವಂತನನ್ನು ಧ್ಯಾನಮಾಡುತ್ತಿದ್ದನು "



## ೩೩ ನೆಯ ಅಧ್ಯಾಯ

## ಬ್ರಹ್ಮದತ್ತನ ವೃತ್ತಾಂತ

" ಎಲೈ ಶ್ರೀರಾಮನೆ, ಬಳಿಕ ಕುಶನಾಭನ ಪಾದಗಳಿಗೆ ನಮಸ್ಕಾರವನ್ನು ಮಾಡಿ ಕುಬ್ಜಾರೆಯುರಾದ ಆ ಹೆಣ್ಣುಮಕ್ಕಳು ಆತನನ್ನು ಕುರಿತು ' ಎಲೈ ತಂದೆಯೆ, ಸರ್ವಾತ್ಮಕನಾದ ವಾಯುದೇವನು ಧರ್ಮಮಾರ್ಗವನ್ನು ಬಿಟ್ಟು ಅಧರ್ಮವನ್ನು ಕೈಕೊಂಡು ನಮ್ಮನ್ನು ವಿವಾಹಮಾಡಿಕೊಳ್ಳುವುದಾಗಿ ನುಡಿದನು. ನಾವು ಅತಿಕಾಮುಕನಾದ ವಾಯುದೇವನಿಗೆ — ನಾವು ಸ್ವತಂತ್ರರಲ್ಲ, ನಮ್ಮ ತಂದೆಯನ್ನು ನೀನು ಕೇಳು. ಆತನು ಕೊಟ್ಟರೆ ನಾವು ಅಂಗೀಕರಿಸುವೆವು ' — ಎಂದು ಪ್ರತ್ಯುತ್ತರವನ್ನು ಕೊಟ್ಟೆವು. ಆ ಅಪರಾಧದಿಂದ ನಮಗೆ ಈ ಅವಸ್ಥೆಯು ಬಂದಿತು ' ಎಂದು ನುಡಿದರು

ಆ ಮಕ್ಕಳ ಮಾತನ್ನು ಕೇಳಿ ಧರ್ಮಾತ್ಮನಾದ ಕುಶನಾಭನು ಅವರನ್ನು ಕುರಿತು ' ಮಕ್ಕಳಿ, ನಿಮ್ಮ ಮಾತು ಕ್ಷಮೆಯುಳ್ಳ ಪುಣ್ಯಾತ್ಮರಿಗೆ ಸಮ್ಮತವಾದದ್ದು. ನೀವೆಲ್ಲರೂ ಬುದ್ಧಿವಂತರಾಗಿ ನಿಮ್ಮ ಕುಲವನ್ನು ವಿಚಾರಿಸಿ ಕ್ಷಮೆಯನ್ನು ತಾಳಿ ಒಳ್ಳೆಯ ಮಾತನ್ನಾಡಿದಿರಿ. ಲೋಕದಲ್ಲಿ ಸ್ತ್ರೀಯರಿಗಾದರೂ ಪುರುಷರಿಗಾದರೂ ಕ್ಷಮೆಯೇ ಭೂಷಣವು. ಲೋಕದಲ್ಲಿ ಯಾರೊಡನೆಯೂ ನಿಷ್ಠುರವಾಗಿ ನುಡಿಯಬಾರದು. ಅದರೊಳಗೂ ದೇವತೆಗಳ ಕೂಡ ನಮ್ಮ ಪರಾಕ್ರಮವು ಸಲ್ಲದು. ಸಮಸ್ತ ಪ್ರಾಣಿಗಳಿಗೂ ಕ್ಷಮೆಯೇ ಭೂಷಣವು ಕ್ಷಮೆಯೇ ದಾನವು. ಕ್ಷಮೆಯೇ ಯಜ್ಞವು. ಕ್ಷಮೆಯೇ ಕೀರ್ತಿಯು. ಕ್ಷಮೆಯೇ ಧರ್ಮವು. ಈ ಜಗತ್ತು ಕ್ಷಮೆಯಿಂದಲೇ ಸುರಕ್ಷಿತವಾಗಿರುವುದು ' ಎಂದು ನುಡಿದು ಆ ಮಕ್ಕಳನ್ನು ಸಂತವಿಟ್ಟು ತನ್ನ ಮಂತ್ರಿಗಳೊಡನೆ ' ತನ್ನ ಕುಮಾರಿಯರನ್ನು ವಿವಾಹ ಮಾಡಿಕೊಡದೆ ಇರಬಾರದು. ಅವರಿಗೆ ತಕ್ಕ ವರನು ಯಾರು? ' ಎಂದು ಯೋಚನೆ ಮಾಡುತ್ತಿದ್ದನು.

ಶ್ರೀರಾಮ, ಪೂರ್ವದಲ್ಲಿ ಜಿತೇಂದ್ರಿಯನಾಗಿ ಸದಾಚಾರಸಂಪನ್ನನಾದ ಚೂಳಿ ಎಂಬ ಮಹಾ ಮುನಿಯು ಬ್ರಹ್ಮದೇವನನ್ನು ಕುರಿತು ತಪಸ್ಸನ್ನು ಮಾಡುತ್ತಿದ್ದನು. ಆಗ ಊರ್ಮಿಳೆ ಎಂಬವಳ ಮಗಳಾದ ಸೋಮದೆ ಎಂಬ ಗಂಧರ್ವಸ್ತ್ರೀಯು ಆ ಮುನೀಶ್ವರನಿಗೆ ಸೇವೆಯನ್ನು ಮಾಡಿಕೊಂಡಿದ್ದಳು ಆಕೆಯ ಸೇವೆ ಸತ್ಕಾರಗಳನ್ನು ಕಂಡು ಆತನು ಸುಪ್ರೀತನಾಗಿ ಅವಳನ್ನು ಕುರಿತು ' ಎಲೈ ಸ್ತ್ರೀಯೆ, ನಿನ್ನ ಸೇವೆ ಸತ್ಕಾರಗಳಿಂದ ನಾನು ಸಂತುಷ್ಟನಾದೆನು. ನಿನಗೆ ಬೇಕಾದ ವರವನ್ನು ಬೇಡಿಕೊ ' ಎಂದು ನುಡಿದನು.

ಸೋಮದೆಯು ಆ ಮುನೀಶ್ವರನ ಪ್ರೀತಿಯನ್ನು ಕಂಡು ಸಂತೋಷದಿಂದ ' ಮುನೀಶ್ವರ, ನೀನು ಹೇಗೆ ತಪಸ್ಸಾಮರ್ಥ್ಯದಿಂದುಂಟಾದ ತೇಜಸ್ಸಿನಿಂದ ಒಪ್ಪುತ್ತಿದ್ದೀಯೋ ಹಾಗೆ ಬ್ರಹ್ಮತೇಜಸ್ಸುಳ್ಳ ಮಗನನ್ನು ಬಯಸುತ್ತೇನೆ. ನನಗೆ ಪತಿಯಿಲ್ಲ. ನಾನು ವಿವಾಹವಾದವಳಲ್ಲ. ಆದಕಾರಣ ವೇದವೇದಾಂಗಪಾರಂಗತನಾದ ಮಗನನ್ನು ಕೊಡಬೇಕು ' ಎಂದು ಕೇಳಿದಳು. ಆಗ ಚೂಳಿ ಎಂಬ ಋಷೀಶ್ವರನು ಆಕೆಗೆ ಮನಶ್ಶಕ್ತಿಯಿಂದ ಬ್ರಹ್ಮದತ್ತನೆಂಬ ಕುಮಾರನನ್ನು ಕೊಟ್ಟನು. ಆ ಕುಮಾರನು ಕಾಂಪಿಲ್ಯವೆಂಬ ಪಟ್ಟಣದಲ್ಲಿ ರಾಜ್ಯವನ್ನು ಆಳಿಕೊಂಡು ದೇವೇಂದ್ರನಂತೆ ಅತ್ಯಂತ ಐಶ್ವರ್ಯವಂತನಾಗಿದ್ದನು.

ಇತ್ತ ಕುಶನಾಭನು ಮಂತ್ರಿಗಳೊಡನೆ ಯೋಚಿಸಿ ಬ್ರಹ್ಮದತ್ತನಿಗೆ ತನ್ನ ನೂರು ಮಂದಿ ಕುಮಾರಿಯರನ್ನು ಕೊಡಬೇಕೆಂದು ನಿಶ್ಚಯಿಸಿದನು. ಮತ್ತು ಆತನನ್ನು ಕರೆಯಿಸಿ ತನ್ನ ಕುಮಾರಿಯರನ್ನು ವಿಧ್ಯುಕ್ತ ಪ್ರಕಾರದಲ್ಲಿ ವಿವಾಹವನ್ನು ಮಾಡಿಕೊಟ್ಟನು ಬ್ರಹ್ಮದತ್ತನು ಕೈಹಿಡಿದ ಕೂಡಲೆ ಅವರ ಕುಬ್ಜತ್ವವು ಹೋಗಿ ಮೊದಲಿನ ರೀತಿಯಲ್ಲಿ ಮೋಹನವಾದ ತನುಸೊಬಗಿನಿಂದ ಒಪ್ಪಿದರು. ಅದನ್ನು ಕಂಡು ಕುಶನಾಭನು ಅತಿಹರ್ಷಪಟ್ಟು ತನ್ನ ಅಳಿಯನಾದ ಬ್ರಹ್ಮದತ್ತನಿಗೆ ಬಳುವಳಿಯನ್ನು ಕೊಟ್ಟು ಆತನ ಕೂಡ ತನ್ನ ಮಕ್ಕಳನ್ನು ಕಳುಹಿಸಿದನು. ಸೋಮದೆಯೆಂಬ ಗಂಧರ್ವಸ್ತ್ರೀಯು ತನ್ನ ಮಗನಾದ ಬ್ರಹ್ಮದತ್ತನನ್ನೂ ನೂರು ಮಂದಿ ಸೊಸೆಯರನ್ನೂ ಕಂಡು ಬಹಳ ಹರ್ಷಪಡುತ್ತಿದ್ದಳು. ಕುಶನಾಭನು ತನ್ನ ನೂರು ಮಂದಿ ಮಕ್ಕಳ ಕುಬ್ಜತ್ವವನ್ನು ಪರಿಹರಿಸಿ ಮೊದಲಿನ ಹಾಗೆಯೇ ರೂಪಲಾವಣ್ಯವನ್ನು ಅನುಗ್ರಹಿಸಿದ ಅಳಿಯನನ್ನು ಪಡೆದು ಹರ್ಷದಿಂದಿದ್ದನು."



## ೩೪ನೆಯ ಅಧ್ಯಾಯ

## ವಿಶ್ವಾಮಿತ್ರನ ವೃತ್ತಾಂತ

"ಬ್ರಹ್ಮದತ್ತನು ತನ್ನ ನೂರು ಮಂದಿ ಕುಮಾರಿಯರನ್ನು ಮದುವೆಯಾದ ಮೇಲೆ ಕುಶನಾಭನು ತನಗೆ ಗಂಡು ಸಂತಾನವಾಗಬೇಕೆಂದು ಪುತ್ರಕಾಮೇಷ್ಟಿಯನ್ನು ಮಾಡಿದನು. ಆಗ ಕುಶನೆಂಬ ಬ್ರಹ್ಮಪುತ್ರನು ಆ ಯಾಗಶಾಲೆಗೆ ಬಂದು ಕುಶನಾಭನನ್ನು ಕುರಿತು 'ಎಲೈ ಕುಶನಾಭನೆ, ನಿನಗೆ ಮಹಾಧರ್ಮಾತ್ಮನಾದ ಗಾಧಿಯೆಂಬ ಕುಮಾರನು ಜನಿಸುವನು. ಆ ಕುಮಾರನಿಂದ ನಿನ್ನ ಕೀರ್ತಿಯು ಪ್ರಕಾಶವಾಗುವುದು' ಎಂದು ನುಡಿದು ಅಂತರಿಕ್ಷಮಾರ್ಗವಾಗಿ ಬ್ರಹ್ಮಲೋಕವನ್ನೈದಿದನು, ಕೆಲವು ದಿವಸಗಳ ಮೇಲೆ ಕುಶನಾಭನಿಗೆ ಧರ್ಮಿಷ್ಠನಾದ ಗಾಧಿಯು ಜನಿಸಿದನು. ಆತನು ನನಗೆ ತಂದೆಯು. ನಾನು ಕುಶವಂಶದಲ್ಲಿ ಜನಿಸಿದವನಾದ ಕಾರಣ ನನಗೆ ಕೌಶಿಕನೆಂಬ ಹೆಸರಾಯಿತು" ಎಂದು ವಿಶ್ವಾಮಿತ್ರನು ರಘುನಾಥನಿಗೆ ಹೇಳಿದನು.

ಈ ಪ್ರಕಾರದಲ್ಲಿ ಶ್ರೀರಾಮನಿಗೆ ತನ್ನ ವಂಶಾವಳಿಯನ್ನು ಹೇಳಿ ವಿಶ್ವಾಮಿತ್ರನು ಮತ್ತೆ ಆತನನ್ನು ನೋಡಿ "ಕೇಳೈ ರಘುನಾಥನೆ, ನನ್ನ ಒಡಹುಟ್ಟಿದವಳಾದ ಸತ್ಯವತೀ ಎಂಬವಳು ನನಗಿಂತಲೂ ಹಿರಿಯವಳು ಆಕೆಯನ್ನು ನಮ್ಮ ತಂದೆಯಾದ ಗಾಧಿಯು ಋಚೀಕನೆಂಬ ಮುನಿಗೆ ವಿವಾಹಮಾಡಿಕೊಟ್ಟನು, ಸತ್ಯವತಿಯು ತನ್ನ ಪತಿಯನ್ನು ಕೂಡಿ ಶರೀರಸಹಿತಳಾಗಿ ಸ್ವರ್ಗವನ್ನೈದಿದಳು ಆಕೆಯು ಕುಶವಂಶದಲ್ಲಿ ಜನಿಸಿದವಳಾದ ಕಾರಣ ಕೌಶಿಕೀ ಎನಿಸಿಕೊಂಡಳು. ಆಕೆಯು ನದೀಸ್ವರೂಪಳಾಗಿ ಕೌಶಿಕೀ ಎನಿಸಿಕೊಂಡು ಜಗದ್ಧಿತಾರ್ಥವಾಗಿ ಪ್ರವಹಿಸುತ್ತಿದ್ದಾಳೆ. ಕೌಶಿಕಿಯು ನನ್ನ ಒಡಹುಟ್ಟಿದವಳಾದ ಕಾರಣ ಆ ನದಿಯು ಪ್ರವಹಿಸುವ ಬಳಿಯಲ್ಲಿ ಹಿಮವತ್ಪರ್ವತದ ತಪ್ಪಲಲ್ಲಿ ನಾನು ನಿಯಮಸ್ಥನಾಗಿದ್ದೆನು. ಕೌಶಿಕೀ ಎಂಬ ನದಿಯು ಪುಣ್ಯೋದಕವುಳ್ಳದ್ದು. ಅದನ್ನು ಒಂದು ನಿಯಮಕ್ಕಾಗಿ ಬಿಟ್ಟು ನಾನು ಸಿದ್ಧಾಶ್ರಮಕ್ಕೆ ಬಂದು ನನ್ನ ಸಾಮರ್ಥ್ಯದಿಂದ ಸಿದ್ಧನಾದೆನು! ಶ್ರೀರಾಮ, ಇದು ನನ್ನ ಪೂರ್ವವೃತ್ತಾಂತ. ಈಗ ನನ್ನ ಆಶ್ರಮಕ್ಕೆ ಬಂದೆವು. ಸಾಯಂಕಾಲವು ಕಳೆಯಿತು. ಈವರೆಗೂ ಕಥೆಗಳನ್ನು ಹೇಳುತ್ತಲೇ ಅರ್ಧರಾತ್ರಿ ಕಳೆದುಹೋಯಿತು.

ನಿದ್ದೆಮಾಡು. ಸಮಸ್ತ ದಿಕ್ಕುಗಳೂ ಅಂಧಕಾರದಿಂದ ವ್ಯಾಪ್ತವಾಗುತ್ತಲಿವೆ. ಸಮಸ್ತ ಮೃಗಪಕ್ಷಿಗಳೂ ನಿದ್ದೆಮಾಡುತ್ತಿವೆ ವೃಕ್ಷಗಳೂ ಚಲನವಿಲ್ಲದೆ ಇವೆ. ಆಕಾಶವು ಗ್ರಹನಕ್ಷತ್ರಗಳಿಂದ ಗಂಭೀರವಾಗಿ ಒಪ್ಪುತ್ತಿದೆ, ತನ್ನ ಕಾಂತಿಯಿಂದ ಸಮಸ್ತ ಲೋಕಗಳ ಅಂಧಕಾರವನ್ನೂ ತೊಲಗಿಸುತ್ತ ಶೀತಲವಾದ ಕಿರಣಗಳಿಂದ ಸಮಸ್ತ ಪ್ರಾಣಿಗಳಿಗೂ ತಂಪನ್ನುಂಟುಮಾಡುತ್ತಾ ಚಂದ್ರನು ಉದಯವಾಗುತ್ತಿದ್ದಾನೆ. ರಾತ್ರಿಯಲ್ಲಿ ಸಂಚರಿಸುವ ರಾಕ್ಷಸರೂ ಪಿಶಾಚಗಳೂ ಕಾಣುತ್ತಿದ್ದಾರೆ" ಎಂದು ನುಡಿದು ಮೌನವನ್ನು ತಾಳಿದನು. ಅಲ್ಲಿದ್ದ ಋಷಿಗಳು "ವಿಶ್ವಾಮಿತ್ರನ ವಂಶವು ಮಹಾಪ್ರಸಿದ್ಧವಾದುದು. ಈ ವಂಶದಲ್ಲಿ ಹುಟ್ಟಿದವರೆಲ್ಲರೂ ಮಹಾತ್ಮರು; ಬ್ರಹ್ಮದೇವನಿಗೆ ಸಮಾನರು; ಅವರೊಳಗೆ ಈ ವಿಶ್ವಾಮಿತ್ರನು ಮಹಾಕೀರ್ತಿವಂತನು. ಕೌಶಿಕೀನದಿಯು ಆತನ ವಂಶಕ್ಕೆ ಕೀರ್ತಿಯನ್ನುಂಟುಮಾಡುವಂಥದು!" ಎಂದು ಕೊಂಡಾಡುತ್ತಿರಲು ಕೌಶಿಕನು ಸುಖನಿದ್ರೆಗೈದನು. ಆಮೇಲೆ ಅತ್ಯಂತ ಆಶ್ಚರ್ಯದಿಂದ ವಿಶ್ವಾಮಿತ್ರನ ವೃತ್ತಾಂತವನ್ನು ಕೇಳಿದ ರಾಮಚಂದ್ರನೂ ಲಕ್ಷ್ಮಣಸಹಿತನಾಗಿ ನಿದ್ರೆಮಾಡಿದನು.



## ೩೫ನೆಯ ಅಧ್ಯಾಯ

## ಗಂಗಾದೇವಿಯ ವೃತ್ತಾಂತ

ಆಮೇಲೆ ವಿಶ್ವಾಮಿತ್ರನು ಶೋಣಾನದೀತೀರದಲ್ಲಿ ಆ ರಾತ್ರಿಯನ್ನು ಕಳೆದು ಮಾರನೆಯ ದಿವಸ ಪ್ರಾತಃಕಾಲದಲ್ಲೆದ್ದು ರಘುನಾಥನನ್ನು ಕರೆದು "ಶ್ರೀರಾಮ, ಏಳು; ಪ್ರಾತಃಕಾಲವಾಯಿತು. ಮುಂದೆ ತೆರಳಬೇಕು" ಎಂದನು.

ಅದನ್ನು ಕೇಳಿ ಶ್ರೀರಾಮನು ಎದ್ದು ಸಂಧ್ಯಾವಂದನಾದಿಕ್ರಿಯೆಗಳನ್ನು ತೀರಿಸಿಕೊಂಡು ಪ್ರಯಾಣಕ್ಕೆ ಸಿದ್ಧನಾಗಿ "ಮುನೀಶ್ವರರೆ, ಈ ಶೋಣಾನದಿಯು ನಿರ್ಮಲೋದಕವುಳ್ಳದ್ದಾಗಿ ಅತ್ಯಂತ ಗಂಭೀರವಾದ ಮಳಲೊಟ್ಟುಗಳಿಂದ ಅಲಂಕರಿಸಲ್ಪಟ್ಟಿದೆ ಈ ನದಿಯನ್ನು ಯಾವ ಮಾರ್ಗದಿಂದ ದಾಟಬೇಕು?" ಎಂದು ವಿಶ್ವಾಮಿತ್ರಮುನಿಯನ್ನು ಕೇಳಿದನು

ಆ ಮುನೀಶ್ವರನು "ರಘುನಾಥ, ಈ ದೇಶದಲ್ಲಿ ಋಷಿಗಳು ಸಂಚರಿಸುವ ಈ ಮಾರ್ಗದಲ್ಲಿ ಹೋಗೋಣ" ಎಂದು ನುಡಿದನು. ಆಮೇಲೆ ಆ ಮಾರ್ಗವಿಡಿದು ರಾಮಲಕ್ಷ್ಮಣರನ್ನೂ ಋಷಿಗಳನ್ನೂ ಕೂಡಿಕೊಂಡು ಶೋಣಾನದಿಯನ್ನು ದಾಟಿ ಮಾರ್ಗದಲ್ಲಿದ್ದ ನಾನಾಪ್ರಕಾರಗಳಾದ ವನಗಳನ್ನು ನೋಡುತ್ತ ಬಹುದೂರಪರ್ಯಂತ ನಡೆದು ಮಧ್ಯಾಹ್ನದಲ್ಲಿ ಗಂಗಾತೀರವನ್ನು ಕಂಡು ಹರ್ಷಪಟ್ಟನು. ಎಲ್ಲಿ ನೋಡಿದರೂ ಋಷಿಗಳ ಸಮೂಹಗಳಿಂದ ಸೇವಿಸಲ್ಪಟ್ಟ ಪುಣ್ಯತೀರ್ಥವುಳ್ಳದ್ದಾಗಿ, ಹಂಸ ಸಾರಸಪಕ್ಷಿಗಳ ಮನೋಹರವಾದ ಧ್ವನಿಗಳಿಂದ ರಮಣೀಯವಾದ ಆ ಗಂಗೆಯನ್ನು ಕಂಡು ರಾಮಲಕ್ಷ್ಮಣರು ಅತ್ಯಂತ ಸಂತೋಷಯುಕ್ತರಾದರು. ಆ ನದೀತೀರದಲ್ಲಿ ವಿಶ್ರಮಿಸಿಕೊಂಡು ಸ್ನಾನಾದಿ ನಿತ್ಯಕರ್ಮಾನುಷ್ಠಾನ ಅಗ್ನಿಹೋತ್ರಗಳನ್ನು ಮಾಡಿ ಹವಿಸ್ಸನ್ನು ಭಕ್ಷಿಸಿ ಶುದ್ಧಾತ್ಮರಾಗಿ ಪರಿಶುದ್ಧವಾದ ಗಂಗಾತೀರದಲ್ಲಿ ವಿಶ್ವಾಮಿತ್ರಮುನೀಶ್ವರನ ಸುತ್ತಲೂ ಯಥಾಕ್ರಮದಲ್ಲಿ ಕುಳಿತುಕೊಂಡು ಸಂತುಷ್ಟಚಿತ್ತರಾಗಿ ಆ ಮುನಿಯನ್ನು ಕುರಿತು "ಮಹಾತ್ಮರೆ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಪ್ರವಹಿಸುವ ಗಂಗೆಯು ಸಮುದ್ರವನ್ನು ಹೇಗೆ ಕೂಡಿತು? ಈ ವಿಷಯವನ್ನು ವಿಸ್ತರವಾಗಿ ನಿರೂಪಿಸಬೇಕು" ಎಂದು ಕೇಳಿದರು.

ವಿಶ್ವಾಮಿತ್ರನು ಅವರನ್ನು ನೋಡಿ " ರಘುನಾಥ, ಸ್ವರ್ಣಾದಿ ಸಮಸ್ತ ಧಾತುಗಳಿಗೂ ಉತ್ಪತ್ತಿ ಸ್ಥಾನವಾದ ಹಿಮವತ್ಪರ್ವತಕ್ಕೆ ರೂಪಲಾವಣ್ಯಗಳುಳ್ಳ ಇಬ್ಬರು ಕುಮಾರಿಯರಾದರು. ಹಿಮವಂತನ ಹೆಂಡತಿಯಾದ ಮೇನಕೆಯಲ್ಲಿ ಮೊದಲು ಗಂಗೆಯೆಂಬ ಹಿರಿಯ ಕುಮಾರಿಯು ಜನಿಸಿದಳು. ಆ ಗಂಗೆಯನ್ನು ದೇವತೆಗಳು ಜಗದ್ಧಿತಾರ್ಥವಾಗಿ ಬೇಡಿದರು ಆಕೆಯ ತಂದೆಯು ಭಕ್ತರ ಇಷ್ಟವನ್ನು ಸಲ್ಲಿಸಬೇಕೆಂದು ಗಂಗೆಯನ್ನು ದೇವತೆಗಳಿಗೆ ಕೊಟ್ಟನು. ಗಂಗೆಯು ಮೂರುಲೋಕಗಳನ್ನೂ ಪವಿತ್ರಮಾಡಬೇಕೆಂದು ದೇವತೆಗಳು ಬಯಸಿದರು ಎರಡನೆಯ ಕುಮಾರಿಯಾದ ಪಾರ್ವತೀದೇವಿಯು ಈಶ್ವರನನ್ನು ಕುರಿತು ತಪಸ್ಸು ಮಾಡಲು ಆಕೆಯನ್ನು ಈಶ್ವರನು ವಿವಾಹ ಮಾಡಿಕೊಂಡನು. ಈ ಇಬ್ಬರು ಕುಮಾರಿಯರೂ ಲೋಕಕ್ಕೆ ಜನನಿಯಾದರು. ಗಂಗಾನದಿಯು ಮೂರು ಲೋಕಗಳಲ್ಲಿಯೂ ಪ್ರವಾಹವುಳ್ಳವಳು. ಮೊದಲು ಆಕಾಶಮಾರ್ಗದಲ್ಲಿ ಪ್ರವಹಿಸಿ ಸ್ವರ್ಗಲೋಕವನ್ನು ಪವಿತ್ರಮಾಡಿದಳು " ಎಂದು ಹೇಳಿದನು.

---

## ೩೭ನೆಯ ಅಧ್ಯಾಯ

## ಪಾರ್ವತೀದೇವಿಯು ದೇವತೆಗಳನ್ನು ಶಪಿಸಿದುದು

ಈ ಪ್ರಕಾರದಲ್ಲಿ ಗಂಗೆಯ ವೃತ್ತಾಂತವನ್ನು ಕೇಳಿದ ರಾಮಲಕ್ಷ್ಮಣರು ಸಂತುಷ್ಟಚಿತ್ತರಾಗಿ " ಮುನಿಗಳೆ, ಗಂಗೆಯ ಉತ್ಪತ್ತಿಯನ್ನು ವಿಸ್ತಾರವಾಗಿ ನಿರೂಪಿಸಬೇಕು. ನೀವು ಸರ್ವಜ್ಞರು; ಸಮಸ್ತ ಪ್ರಾಣಿಗಳ ಉತ್ಪತ್ತಿಯನ್ನೂ ಬಲ್ಲಿರಿ. ಆಕಾಶದಲ್ಲಿದ್ದು ಈ ಲೋಕದಲ್ಲಿ ಯಾವ ಕಾರಣದಿಂದ ಪ್ರವಹಿಸಿದಳು ? ಹೇಗೆ ಪ್ರಸಿದ್ಧಳಾದಳು ? ಗಂಗೆಯ ಮಹಿಮೆಯು ಏನು ? " ಎಂದು ಕೇಳಿದರು.

ವಿಶ್ವಾಮಿತ್ರಮುನೀಶ್ವರನು ಶ್ರೀರಾಮನನ್ನು ನೋಡಿ " ರಾಮ, ಪೂರ್ವದಲ್ಲಿ ಪರಮೇಶ್ವರನು ಪಾರ್ವತಿಯನ್ನು ವಿವಾಹವಾಗಿ ಆಕೆಯೊಡನೆ ಕ್ರೀಡಿಸುತ್ತ ದೇವತೆಗಳ ನೂರುವರುಷಗಳನ್ನು ಕಳೆದನು. ಆಗ ಸಮಸ್ತ ದೇವತೆಗಳೂ ಕಂಗೆಟ್ಟು ಬ್ರಹ್ಮದೇವನನ್ನು ಮುಂದಿಟ್ಟುಕೊಂಡು ಆಲೋಚನೆಮಾಡಿ ಪರಮೇಶ್ವರನ ಸಮೀಪಕ್ಕೆ ಹೋಗಿ ನಮಸ್ಕರಿಸಿ ಆತನನ್ನು ಕುರಿತು " ದೇವದೇವ, ಸಮಸ್ತಲೋಕಗಳಿಗೂ ಹಿತವನ್ನು ಮಾಡುವ ಸರ್ವೇಶ್ವರ, ನಾವು ನಿನ್ನ ಶರಣುಹೊಕ್ಕೆವು. ನಮ್ಮಲ್ಲಿ ಕೃಪೆ ಮಾಡಬೇಕು. ನಿನ್ನಿಂದ ಗರ್ಭೋತ್ಪತ್ತಿಯಾದಪಕ್ಷದಲ್ಲಿ ಅದರ ತೇಜಸ್ಸನ್ನು ಯಾರೂ ಸಹಿಸಲಾರರು. ಆದ್ದರಿಂದ ನೀನು ಈ ಕೃತ್ಯವನ್ನು ಸಾಕುಮಾಡಿ ಜಗದ್ಧಿತಾರ್ಥವಾಗಿ ಪಾರ್ವತೀದೇವಿಯನ್ನು ಕೂಡಿಕೊಂಡು ತಪಸ್ಸನ್ನು ಮಾಡುತ್ತ ನಿನ್ನ ತೇಜಸ್ಸನ್ನು ನಿನ್ನ ತೇಜಸ್ಸಿನಲ್ಲಿಯೇ ಅಡಕಮಾಡಿಕೊ. ಸಮಸ್ತ ಲೋಕಗಳಿಗೂ ಭಯವನ್ನು ಪರಿಹರಿಸಿ ರಕ್ಷಿಸು " ಎಂದು ಪ್ರಾರ್ಥಿಸಿದರು

ಪರಮೇಶ್ವರನು 'ಎಲೈ ದೇವತೆಗಳಿರಾ, ಪಾರ್ವತಿಯನ್ನು ಕೂಡಿದ್ದರಿಂದ ಸ್ರವಿಸಿದ ತೇಜಸ್ಸನ್ನು ನನ್ನ ತೇಜಸ್ಸಿನಲ್ಲಿಯೇ ಧರಿಸುವೆನು ; ದೇವತೆಗಳೂ ಭೂಮಿಯೂ ಸುಖದಲ್ಲಿರಲಿ ! ಆದರೂ ನನ್ನ ತೇಜಸ್ಸನ್ನು ಧರಿಸುವುದಕ್ಕೆ ಸಮರ್ಥರಾದವರಿದ್ದರೆ ಹೇಳಿ ' ಎಂದು ನುಡಿದನು.

ಆಗ ದೇವತೆಗಳು ' ಪರಮೇಶ್ವರ, ನಿನ್ನ ತೇಜಸ್ಸನ್ನು ಈ ಭೂದೇವತೆಯು ಧರಿಸಬಲ್ಲಳು ' ಎಂದು ಹೇಳಿದರು. ಆ ದೇವತೆಗಳ ಮಾತನ್ನು ಕೇಳಿ ಪರಮೇಶ್ವರನು ತನ್ನ ತೇಜಸ್ಸನ್ನು ಭೂಮಿಯಲ್ಲಿ ಬಿಟ್ಟನು. ಆ ತೇಜಸ್ಸಿನಿಂದ ಭೂಮಿಯೆಲ್ಲವೂ ಪರಿಪೂರ್ಣವಾಗಲು ದೇವತೆಗಳು ಅಗ್ನಿಯನ್ನು

ಕರೆದು 'ಹೇ ಯಜ್ಞಪುರುಷ, ನೀನು ವಾಯುವನ್ನು ಸಹಾಯಮಾಡಿಕೊಂಡು ಈ ಭೂಮಿಯ ಮೇಲೆ ಪರಿಪೂರ್ಣವಾದ ತೇಜಸ್ಸನ್ನು ಧರಿಸು' ಎಂದರು. ಆ ಬಳಿಕ ಯಜ್ಞಪುರುಷನು ತನ್ನ ಜ್ವಾಲೆಯಿಂದ ಸುತ್ತಿಕೊಳ್ಳಲು ಭೂಮಿಯಮೇಲಿದ್ದ ಪರಮೇಶ್ವರನ ಆ ತೇಜಸ್ಸೆಲ್ಲವೂ ಒಟ್ಟುಗೂಡಿ ಶ್ವೇತಪರ್ವತವಾಯಿತು. ಯಜ್ಞಪುರುಷನಿಂದ ಧರಿಸಲ್ಪಟ್ಟ ಒಂದು ಭಾಗದ ತೇಜಸ್ಸು ದರ್ಭೆಯ ವನವಾಗಿ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳದ್ದಾಯಿತು. ಆ ವನದಲ್ಲಿ ಅಗ್ನಿಯ ದೆಸೆಯಿಂದ ಷಣ್ಮುಖನು ಹುಟ್ಟಿದನು ಆಗ ಸಮಸ್ತ ದೇವತೆಗಳೂ ಹರ್ಷಯುಕ್ತರಾಗಿ ಪಾರ್ವತೀ ಪರಮೇಶ್ವರರನ್ನು ವಿಶೇಷವಾಗಿ ಸ್ತುತಿಸಿ ಪೂಜೆಯನ್ನು ಮಾಡಿದರು. ಪಾರ್ವತಿಯು ಅತಿಕೋಪ ದಿಂದ ದೇವತೆಗಳನ್ನು ನೋಡಿ 'ಎಲೈ ದೇವತೆಗಳಿರಾ, ನೀವು ನನ್ನ ಇಷ್ಟವನ್ನು ಕೆಡಿಸಿದಿರಿ ಆದ ಕಾರಣ ನಿಮ್ಮ ಸ್ತ್ರೀಯರಲ್ಲಿ ನಿಮಗೆ ಸಂತಾನವಿಲ್ಲದೆ ಹೋಗಲಿ' ಎಂದು ಶಾಪವನ್ನು ಕೊಟ್ಟು ಭೂಮಿಯನ್ನು ನೋಡಿ 'ಎಲೈ ಭೂಮಿಯೆ, ನನ್ನಲ್ಲಿ ಸಂತಾನವಾಗಬೇಕೆಂಬ ಇಷ್ಟವನ್ನು ಕೆಡಿಸಿದೆ ಯಾದಕಾರಣ ನೀನು ಅನೇಕ ರೂಪವುಳ್ಳವಳಾಗಿ ಬಹುಮಂದಿಗೆ ಹೆಂಡತಿಯಾಗು ನಿನಗೆ ಮಕ್ಕಳಿಂದ ಆನಂದವಿಲ್ಲದಿರಲಿ" ಎಂದು ಶಪಿಸಿದಳು. ಆಮೇಲೆ ದೇವತೆಗಳು ಲಜ್ಜಿತರಾಗಲು ಪರಮೇಶ್ವರನು ಅವರನ್ನು ಸಂತವಿಟ್ಟು ವರುಣನಿಂದ ಪರಿಪಾಲಿಸಲ್ಪಟ್ಟ ಪಡುವಣ ದಿಕ್ಕಿಗೆ ಹೋಗಿ ಹಿಮವತ್ಪರ್ವತದ ಬಡಗಣ ದಿಕ್ಕಿನ ಕೋಡುಗಲ್ಲಿನ ಮೇಲೆ ಪಾರ್ವತೀದೇವೀಸಹಿತನಾಗಿ ತಪಸ್ಸನ್ನು ಮಾಡುತ್ತಿದ್ದನು. ಈ ರೀತಿಯಲ್ಲಿ ಪರ್ವತರಾಜನ ಕುಮಾರಿಯಾದ ಪಾರ್ವತಿಯ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದೆನು ಗಂಗಾಮಹಿಮೆಯನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು."



### ೩೭ ನೆಯ ಅಧ್ಯಾಯ

## ಕುಮಾರಸ್ವಾಮಿಯ ಜನನ

"ಸಮಸ್ತ ದೇವತೆಗಳಿಗೂ ಒಡೆಯನಾಗಿ ಮಹಾತ್ಮನಾದ ಪರಮೇಶ್ವರನು ಹಿಮವತ್ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿರಲು ಸಮಸ್ತದೇವತೆಗಳೂ ಋಷಿಗಳೂ ಕೂಡಿಕೊಂಡು, ದೈತ್ಯರೊಡನೆ ಯುದ್ಧಬಂದ ಸಮಯದಲ್ಲಿ ತನಗೆ ಒಬ್ಬ ಸೇನಾಧಿಪತಿಯಾಗಬೇಕೆಂದು ಬ್ರಹ್ಮದೇವನ ಸಮೀಪಕ್ಕೆ ಹೋಗಿ ನಮಸ್ಕಾರವನ್ನು ಮಾಡಿ ಆತನನ್ನು ಕುರಿತು 'ಬ್ರಹ್ಮದೇವ, ಪೂರ್ವದಲ್ಲಿ ನಮಗೆ ಒಬ್ಬ ಸೇನಾಧಿಪತಿಯನ್ನುಂಟುಮಾಡಿಕೊಡುವುದಾಗಿ ಅಪ್ಪಣೆಯನ್ನು ಕೊಟ್ಟೆ. ಈಗ ಪರಮೇಶ್ವರನು ಪಾರ್ವತೀದೇವಿಯನ್ನು ಕೂಡಿಕೊಂಡು ಹಿಮವತ್ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದಾನೆ. ನಾವು ಜಗದ್ಧಿತಾರ್ಥವಾಗಿ ಮುಂದೆ ಮಾಡುವ ಕಾರ್ಯವಾವುದೆಂದು ವಿಚಾರಿಸಬೇಕು. ನೀನು ಸರ್ವಜ್ಞನು. ನೀನೇ ನಮಗೆ ಗತಿಯಲ್ಲದೆ ಮತ್ತೊಬ್ಬರಿಲ್ಲ' ಎಂದು ಬಿನ್ನಹಮಾಡಿದರು.

ಬ್ರಹ್ಮದೇವನು ಮಧುರವಾಕ್ಯಗಳಿಂದ ದೇವತೆಗಳನ್ನು ಸಂತವಿಟ್ಟು ಅವರನ್ನು ಕುರಿತು 'ದೇವತೆಗಳಿರಾ, ಪೂರ್ವದಲ್ಲಿ ಪಾರ್ವತೀದೇವಿಯು ನಿಮಗೆ ನಿಮ್ಮ ಹೆಂಡತಿಯರಲ್ಲಿ ಸಂತಾನವಾಗದ ಹಾಗೆ ಶಾಪಕೊಟ್ಟಳು. ಆ ಶಾಪವು ತಪ್ಪದು. ಸಂಶಯವಿಲ್ಲ. ಈ ಆಕಾಶಗಂಗೆಯಲ್ಲಿ ಅಗ್ನಿಯು ಈಶ್ವರನ ವೀರ್ಯವನ್ನು ತಂದಿರಿಸಿ ಸೇನಾಪತಿಯನ್ನುಂಟುಮಾಡುವನು. ಹಿಮವತ್ಪರ್ವತನ ಹಿರಿಯ ಕುಮಾರಿಯಾದ ಗಂಗಾದೇವಿಯು ಅವನನ್ನು ಪ್ರೀತಿಯಿಂದ ಕಾಣುವಳು. ಪಾರ್ವತೀದೇವಿಗೂ

ಸಂತೋಷವಾಗುವುದು. ಆತನೇ ನಿಮಗೆ ಸೇನಾಪತಿಯಾಗುವನು, ಸಂಶಯವಿಲ್ಲ' ಎಂದು ನುಡಿದನು ಆ ಮಾತನ್ನು ಕೇಳಿ ದೇವತೆಗಳು ಸಂತೋಷದಿಂದ ಬ್ರಹ್ಮದೇವನಿಗೆ ನಮಸ್ಕಾರವನ್ನು ಮಾಡಿ ನಾನಾಧಾತುಗಳಿಂದ ಅಲಂಕರಿಸಲ್ಪಟ್ಟ ಕೈಲಾಸಪರ್ವತಕ್ಕೆ ಹೋಗಿ ಯಜ್ಞಪುರುಷನನ್ನು ಕಂಡು 'ನೀನು ಸಮಸ್ತ ದೇವತೆಗಳ ಕಾರ್ಯಾರ್ಥವಾಗಿ ಪರಮೇಶ್ವರನ ತೇಜಸ್ಸನ್ನು ಗಂಗೆಯಲ್ಲಿರಿಸು' ಎಂದು ಹೇಳಿದರು ಯಜ್ಞಪುರುಷನು ಆ ಮಾತನ್ನು ಅಂಗೀಕರಿಸಿ ಗಂಗೆಯ ಬಳಿಗೆ ಬಂದು 'ಹೇ ಗಂಗೆ, ಸಮಸ್ತ ದೇವತೆಗಳ ಹಿತಾರ್ಥವಾಗಿ ಪರಮೇಶ್ವರನ ತೇಜಸ್ಸನ್ನು ನಿನ್ನ ಗರ್ಭದಲ್ಲಿ ಧರಿಸಬೇಕು' ಎಂದು ಹೇಳಿದನು. ಗಂಗೆಯು ಮಹಾಪ್ರಸಾದವೆಂದು ಆ ದಿವ್ಯತೇಜಸ್ಸನ್ನು ಧರಿಸಿದಳು ಯಜ್ಞಪುರುಷನು ಗಂಗೆಯ ಮಹತ್ತ್ವವನ್ನು ಅರಿತು ಆ ಗಂಗೆಯ ಎಲ್ಲಾ ಕಡೆಯಲ್ಲಿಯೂ ಈಶ್ವರನ ತೇಜಸ್ಸನ್ನು ತುಂಬಿದನು. ಆಮೇಲೆ ಪರಮೇಶ್ವರನ ತೇಜಸ್ಸಿನಿಂದ ಗಂಗೆಯ ಇತ್ತಡಿಗಳೂ ಪೂರ್ಣವಾಗಿ ತುಂಬಿದುವು. ಆಗ ಅದನ್ನು ತಾಳಲಾರದೆ ತಪಿಸುತ್ತ ಬಹಳ ವ್ಯಥೆಪಟ್ಟು ಧರಿಸುವುದಕ್ಕೆ ಸಮರ್ಥಳಾಗದೆ ಸಮಸ್ತದೇವತೆಗಳಿಗೂ ಹವ್ಯವಾಹಕನಾದ ಅಗ್ನಿಯನ್ನು ಕುರಿತು 'ಯಜ್ಞಪುರುಷ, ಈ ಗರ್ಭವನ್ನು ಧರಿಸಲಾರೆನು' ಎಂದು ಹೇಳಿದಳು. ಆಗ ಅಗ್ನಿಯು 'ಗಂಗಾದೇವಿ, ಈ ಗರ್ಭವನ್ನು ನೀನು ಧರಿಸಲಾರದ ಪಕ್ಷದಲ್ಲಿ ಹಿಮವತ್ಪರ್ವತದ ತಪ್ಪಲಲ್ಲಿ ಕಳೆದುಬಿಡು' ಎಂದು ಹೇಳಿದನು. ಆ ಮಾತನ್ನು ಕೇಳಿ ಗಂಗೆಯು ತೇಜೋಮಯವಾದ ಗರ್ಭವನ್ನು ಹಿಮವತ್ಪರ್ವತದಲ್ಲಿ ಬಿಟ್ಟಳು. ಆ ನದಿಯ ಪ್ರವಾಹಗಳಿಂದ ಈ ತೇಜಸ್ಸು ಭೂಮಿಯನ್ನೈದಿ ಸುವರ್ಣವಾಯಿತು. ಆ ತೇಜಸ್ಸಿನ ಉಷ್ಣವು ತಾಗಿ ಭೂಮಿಯಲ್ಲಿದ್ದ ಇತರ ವಸ್ತುಗಳು ತಾಮ್ರ ಸೀಸ ತವರ ಉಕ್ಕು ಮೊದಲಾದ ನಾನಾ ಧಾತುಗಳಾದುವು ತೇಜೋಮಯವಾದ ಆ ಗರ್ಭವು ಹಿಮವತ್ಪರ್ವತದ ಸಮೀಪದಲ್ಲಿರಿಸಿದ ಮಾತ್ರದಲ್ಲಿ ಸುತ್ತಲಿದ್ದ ವನಗಳು ಸುವರ್ಣಮಯವಾದವು! ಆಗ ಸುವರ್ಣಕ್ಕೆ ಜಾತರೂಪ ಎಂಬ ಹೆಸರು ಪ್ರಸಿದ್ಧಿಗೆ ಬಂದಿತು. ಸುವರ್ಣವು ಈಶ್ವರನ ತೇಜಸ್ಸಿನಿಂದ ಹುಟ್ಟಿದಕಾರಣ ಯಜ್ಞಪುರುಷನ ಕಾಂತಿಗೆ ಸಮಾನವಾಯಿತು. ಆ ದೇಶದಲ್ಲಿದ್ದ ಬಳ್ಳಿ ಕಿರುಗಿಡಗಳೆಲ್ಲವೂ ಸುವರ್ಣಮಯವಾದವು!

ಹಿಮವತ್ಪರ್ವತದ ಸಮೀಪದಲ್ಲಿದ್ದ ಒಂದು ಚಿಕ್ಕಪರ್ವತದಲ್ಲಿ ಆ ತೇಜಸ್ಸು ಕುಮಾರಸ್ವಾಮಿಯಾಗಿ ಜನಿಸಲು, ಆ ಕುಮಾರನಿಗೆ ಸ್ತನ್ಯಪಾನ ಮಾಡಿಸುವುದಕ್ಕಾಗಿ ದೇವತೆಗಳು ಪ್ರಾರ್ಥಿಸಿದರು ಅವರು ತಮ್ಮ ಎದೆಗಳಲ್ಲಿ ಹಾಲು ಸ್ರವಿಸಲು ಕುಮಾರಸ್ವಾಮಿಯನ್ನು ಕಂಡು ಆತನು ತಮಗೆ ಕುಮಾರನೆಂದು ತಿಳಿದು ಎದೆಹಾಲನ್ನು ಕೊಟ್ಟರು. ಅದರಿಂದ ದೇವತೆಗಳು ಆ ಕುಮಾರನನ್ನು ಕಾರ್ತಿಕೇಯ ಎಂದು ಕರೆದರು. ಕುಮಾರಸ್ವಾಮಿಯು ಆ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧನಾದನು. ಮತ್ತು ಕುಮಾರಸ್ವಾಮಿಯು ಗರ್ಭಸ್ರಾವವಾಗಿ ಜನಿಸಿದಕಾರಣ ಸ್ಕಂದ ಎಂಬ ನಾಮಧೇಯದಿಂದ ಪ್ರಸಿದ್ಧನಾದನು. ಅನಂತರ ಅವನಿಗೆ ಸೇನಾಧಿಪತಿ ಪಟ್ಟದಲ್ಲಿ ಅಭಿಷೇಕವನ್ನು ಮಾಡಿದರು. ಕುಮಾರಸ್ವಾಮಿಯನ್ನು ಕಂಡು ಷಟ್ಕೃತ್ತಿಕೆಗಳೂ ಒಂದೇ ಸಾರಿ ಸ್ತನ್ಯಗಳನ್ನು ಕೊಡಲು ಆ ಆರುಮಂದಿಯ ಸ್ತನ್ಯಗಳನ್ನೂ ಆರು ಮುಖಗಳಿಂದ ಪಾನಮಾಡಿದಕಾರಣ ಷಣ್ಮುಖನೆನಿಸಿಕೊಂಡನು. ಅವನು ಅತ್ಯಂತ ಸುಕುಮಾರನಾಗಿ ಮಹಾಬಲವುಳ್ಳವನಾಗಿ ತನ್ನ ಪರಾಕ್ರಮದಿಂದ ಸಮಸ್ತ ರಾಕ್ಷಸರನ್ನೂ ಜಯಿಸಿದನು. ಅದರಿಂದ ದೇವತೆಗಳು ಷಣ್ಮುಖನನ್ನು ತಮ್ಮ ಸೇನಾಧಿಪತಿಯನ್ನಾಗಿ ಮಾಡಿಕೊಂಡರು. ಶ್ರೀರಾಮ, ಇದು ಗಂಗಾದೇವಿಯ ವೃತ್ತಾಂತ. ಷಣ್ಮುಖನ ಉತ್ಪತ್ತಿಯನ್ನು ಕುರಿತ ಈ ಕಥಾಪ್ರಸಂಗವು ಮಹಾಪವಿತ್ರವಾದದ್ದು. ಈ ಕಥಾಪ್ರಸಂಗವನ್ನು ಕೇಳುವ ಪುಣ್ಯಾತ್ಮನು ಆಯುಷ್ಮಂತನಾಗಿ ಮಕ್ಕಳು ಮೊಮ್ಮಕ್ಕಳ ಸಹಿತವಾಗಿ ಈ ಲೋಕದಲ್ಲಿ

ಅನೇಕ ಭೋಗಗಳನ್ನು ಅನುಭವಿಸಿ ಕಡೆಯಲ್ಲಿ ಷಣ್ಮುಖಸ್ವಾಮಿಯ ಸಾಲೋಕ್ಯವನ್ನು ಪಡೆಯುವನು."



೩೮ ನೆಯ ಅಧ್ಯಾಯ

## ಸಗರಚಕ್ರವರ್ತಿಯ ವೃತ್ತಾಂತ

"ರಘುನಾಥನೆ, ಪೂರ್ವದಲ್ಲಿ ಅಯೋಧ್ಯಾ ಪಟ್ಟಣದಲ್ಲಿ ಐಶ್ವರ್ಯಸಂಪನ್ನನಾಗಿ ಅತ್ಯಂತ ಧರ್ಮಪಾಲಕನಾದ ಸಗರನೆಂಬ ರಾಜನಿದ್ದನು. ಆತನು ಇಬ್ಬರು ಸ್ತ್ರೀಯರನ್ನು ಮದುವೆಯಾದನು. ವಿದರ್ಭದೇಶದ ರಾಜನ ಮಗಳಾದ ಕೇಶಿನೀ ಎಂಬವಳು ಹಿರಿಯ ಹೆಂಡತಿ ಅವಳು ಮಹಾಬುದ್ಧಿಶಾಲಿನಿಯೂ ಮಹಾಸತ್ಯವಾದಿನಿಯೂ ಆಗಿದ್ದಳು. ಅರಿಷ್ಟನೇಮಿಯೆಂಬ ರಾಜನ ಮಗಳಾದ ಸುಮತಿ ಎಂಬವಳು ಮನೋಹರವಾದ ರೂಪಲಾವಣ್ಯಗಳುಳ್ಳವಳಾಗಿ ಆತನಿಗೆ ಎರಡನೆಯ ಹೆಂಡತಿಯಾಗಿದ್ದಳು. ಸಗರಚಕ್ರವರ್ತಿಯು ಆ ಇಬ್ಬರು ಸ್ತ್ರೀಯರಲ್ಲಿಯೂ ಸಂತಾನವಿಲ್ಲದ್ದರಿಂದ, ಆ ಸ್ತ್ರೀಯರ ಸಹಿತ ಪುತ್ರಸಂತಾನಕ್ಕೋಸ್ಕರ ಹಿಮವತ್ಪರ್ವತಕ್ಕೆ ಹೋಗಿ ಭೃಗುಮುನೀಶ್ವರನ ಆಶ್ರಮದಲ್ಲಿ ನೂರು ವರ್ಷಗಳ ಪರ್ಯಂತ ತಪಸ್ಸನ್ನು ಮಾಡಿದನು. ಶತವರ್ಷ ಪೂರ್ಣವಾದ ಬಳಿಕ ಆತನ ತಪಸ್ಸಿಗೆ ಸಂತೋಷಪಟ್ಟು ಭೃಗುಮುನೀಶ್ವರನು ಸಗರಚಕ್ರವರ್ತಿಯನ್ನು ಕುರಿತು 'ಎಲೈ ಚಕ್ರವರ್ತಿಯೆ, ನಿನಗೆ ಮಹಾ ಶ್ರೇಯಸ್ಕರವಾದ ಪುತ್ರಲಾಭವುಂಟಾಗುವುದು. ಲೋಕದಲ್ಲಿ ನಿನಗೆ ಅಧಿಕವಾದ ಕೀರ್ತಿಯುಂಟಾಗುವದು. ನಿನ್ನ ಸ್ತ್ರೀಯರಲ್ಲಿ ಒಬ್ಬಳು ವಂಶೋದ್ಧಾರಕನಾದ ಒಬ್ಬ ಮಗನನ್ನು ಪಡೆಯುವಳು. ಮತ್ತೊಬ್ಬಳು ಅರವತ್ತು ಸಾವಿರ ಮಂದಿ ಮಕ್ಕಳನ್ನು ಪಡೆಯುವಳು' ಎಂದು ಹೇಳಿದನು ಆಗ ಸಗರಚಕ್ರವರ್ತಿಯ ಸ್ತ್ರೀಯರು ಭೃಗುಮುನೀಶ್ವರನನ್ನು ಪ್ರಾರ್ಥಿಸಿ ಆತನ ಅಭಿಮುಖವಾಗಿ 'ನಮ್ಮಿಬ್ಬರಲ್ಲಿ ಯಾರಿಗೆ ಒಬ್ಬ ಕುಮಾರನು ಜನಿಸುವನು? ಯಾರಿಗೆ ಬಹುಮಂದಿ ಮಕ್ಕಳು ಜನಿಸುವರು?' ಎಂದು ಕೇಳಿದರು. ಭೃಗುಮುನೀಶ್ವರನು 'ಎಲೈ ಸ್ತ್ರೀಯರೆ, ನಿಮ್ಮೊಳಗೆ ಯಾರಿಗೆ ಒಬ್ಬ ಮಗನಾಗಬೇಕೆಂದೂ ಯಾರಿಗೆ ಬಹುಮಂದಿ ಮಕ್ಕಳಾಗಬೇಕೆಂದೂ ಇಚ್ಛೆ ಇರುವುದೋ ತಿಳಿಸಿ' ಎಂದನು. ಆ ಮಾತನ್ನು ಕೇಳಿ ಕೇಶಿನಿಯು ತನಗೆ ವಂಶೋದ್ಧಾರಕನಾದ ಒಬ್ಬ ಮಗನು ಸಾಕೆಂದು ಬೇಡಿಕೊಂಡಳು. ಗರುಡನ ಒಡಹುಟ್ಟಿದವಳಾದ ಸುಮತಿಯು ತನಗೆ ಅರವತ್ತು ಸಾವಿರ ಮಂದಿ ಮಕ್ಕಳಾಗಬೇಕೆಂದು ಬೇಡಿಕೊಂಡಳು. ಆಮೇಲೆ ಸಗರನು ಭೃಗುಮುನೀಶ್ವರನಿಗೆ ಅಭಿವಂದಿಸಿ ತನ್ನ ಇಬ್ಬರು ಸ್ತ್ರೀಯರನ್ನು ಕೂಡಿಕೊಂಡು ತನ್ನ ಪಟ್ಟಣಕ್ಕೆ ಬಂದು ಕೆಲವುಕಾಲ ಕಳೆದ ನಂತರ ಕೇಶಿನಿಯು ಅಸಮಂಜನೆಂಬ ಒಬ್ಬ ಕುಮಾರನನ್ನು ಪಡೆದಳು. ಸುಮತಿಯು ಗರ್ಭವನ್ನು ಧರಿಸಿ ಒಂದು ಗರ್ಭಪಿಂಡವನ್ನು ಹಡೆದಳು. ಅದು ಒಡೆದು ಹೋಗಲು ಅರವತ್ತು ಸಾವಿರ ಮಂದಿ ಮಕ್ಕಳನ್ನು ಪಡೆದಳು. ದಾದಿಯರು ಆ ಶಿಶುಗಳನ್ನು ಘೃತಪೂರಿತವಾದ ಕೊಪ್ಪರಿಗೆಗಳಲ್ಲಿರಿಸಿಕೊಂಡು ರಕ್ಷಣೆ ಮಾಡಿದರು. ಅನಂತರ ಆ ಮಕ್ಕಳು ಯೌವನೋದಯವಾಗಿ ರೂಪಲಾವಣ್ಯದಿಂದ ಒಪ್ಪುತ್ತಿದ್ದರು. ಹಿರಿಯವಳಾದ ಸುಕೇಶಿನಿಯ ಮಗನಾದ ಅಸಮಂಜನೆಂಬ ಹಿರಿಯ ಕುಮಾರನು ಆ ಪಟ್ಟಣದೊಳಗೆ ಆಡುತ್ತಿದ್ದ ಶಿಶುಗಳನ್ನು ಸರಯೂನದಿಯಲ್ಲಿ ಎಸೆದು ಮುಳುಗಿಸಿ ನಗುತ್ತ ನಿಂತುಕೊಂಡು ನೋಡುತ್ತಿದ್ದನು. ಈ ಪ್ರಕಾರದಲ್ಲಿ ಪಾಪಿಯಾದ ಅಸಮಂಜನು

ಪಟ್ಟಣದ ಜನಗಳಿಗೆ ಬಾಧೆಯನ್ನು ಮಾಡುತ್ತಿರಲು ಅವರೆಲ್ಲರೂ ಕೂಡಿಕೊಂಡು ಅರಸನಿಗೆ ಹೇಳಿದರು ಆತನು ಅಸಮುಂಜನನ್ನು ಪಟ್ಟಣದಿಂದ ಹೊರಡಿಸಿದನು. ಆ ಸಮಯದಲ್ಲಿ ಅವನ ಪತ್ನಿಯು ಗರ್ಭಿಣಿಯಾಗಿದ್ದುದರಿಂದ ಅಂಶುಮಂತನೆಂಬ ಕುಮಾರನನ್ನು ಪಡೆದಳು. ಆ ಕುಮಾರನು ಮಹಾಪರಾಕ್ರಮಿಯಾಗಿ ಸಮಸ್ತ ಪ್ರಾಣಿಗಳಿಗೂ ಪ್ರಿಯನಾಗಿ ಧರ್ಮಬುದ್ಧಿಯಿಂದ ಸರ್ವಜನ ಸಮ್ಮತನಾಗಿದ್ದನು ಆಮೇಲೆ ಸಗರಚಕ್ರವರ್ತಿಯು ಯಜ್ಞಮಾಡಬೇಕೆಂದು ನಿಶ್ಚಯಿಸಲು ಆತನ ಪುರೋಹಿತನು ಯಜ್ಞಕರ್ಮದಲ್ಲಿ ನಿಪುಣರಾದ ಬ್ರಾಹ್ಮಣರನ್ನು ಕರೆಯಿಸಿ ಯಾಗವನ್ನು ಮಾಡುವುದಕ್ಕೆ ಯತ್ನಮಾಡುತ್ತಿದ್ದನು."

---

## ೪೯ ನೆ ಯ ಅ ಧ್ಯಾ ಯ

## ಸ ಗ ರ ಕು ಮಾ ರ ರು ಭೂ ಮಿ ಯ ನ್ನು ಅ ಗೆ ದ ದ್ದು

"ಶ್ರೀರಾಮ್ಮ, ಮಹಾತ್ಮನಾದ ಸಗರಚಕ್ರವರ್ತಿಯ ಮಹಿಮೆಯು ಅಪರಿಮಿತವಾದದ್ದು. ಪರಮೇಶ್ವರನ ಮಾವನಾಗಿ ಸಮಸ್ತ ಪರ್ವತಗಳಿಗೂ ಉತ್ತಮನಾದವನು ಹಿಮವತ್ಪರ್ವತರಾಜನು. ದೇವೇಂದ್ರನ ವರವನ್ನು ಪಡೆದು ಪಟ್ಟಾಭಿಷಿಕ್ತನಾದವನು ವಿಂಧ್ಯಪರ್ವತರಾಜನು. ಅವರಿಬ್ಬರೂ ಒಬ್ಬರಿಗೊಬ್ಬರು ನಾನು ಹೆಚ್ಚು ತಾನು ಹೆಚ್ಚು ಎಂದು ಹೋರಾಡುತ್ತಿರುವರು! ಹಿಮವತ್ಪರ್ವತಗಳ ಮಧ್ಯದೇಶವು ಮಹಾಪುಣ್ಯಭೂಮಿಯಾದ್ದರಿಂದ ಅಲ್ಲಿ ಯಾಗಾದಿ ಸತ್ಕರ್ಮಗಳು ಯಾವಾಗಲೂ ಪ್ರವರ್ತಿಸುತ್ತಿರುವುವು! ಅಲ್ಲಿ ಸಗರಚಕ್ರವರ್ತಿಯು, ತನ್ನ ಮೊಮ್ಮಗನಾದ ಅಂಶುಮಂತನು ರಕ್ಷಿಸುತ್ತಿರಲು ಅಶ್ವಮೇಧಯಾಗವನ್ನು ಮಾಡಲಾರಂಭಿಸಿದನು. ಒಂದು ದಿವಸ ಸಗರಚಕ್ರವರ್ತಿಯ ಅಶ್ವಮೇಧಯಾಗಾಂಗವಾದ ಕುದುರೆಯನ್ನು ದೇವೇಂದ್ರನು ರಾಕ್ಷಸವೇಷವನ್ನು ತಾಳಿ ಅಪಹರಿಸಿದನು. ಆಗ ಋತ್ವಿಜರು ಸಗರಚಕ್ರವರ್ತಿಯನ್ನು ಕುರಿತು 'ರಾಜ, ಯಜ್ಞಾಂಗವಾದ ಕುದುರೆಯನ್ನು ಯಾರು ಹಿಡಿದುಕೊಂಡುಹೋದರೋ ತಿಳಿಯಲಿಲ್ಲ. ಆ ಕುದುರೆಯನ್ನು ಕದ್ದವನನ್ನು ಸಂಹರಿಸು. ಇಲ್ಲದಿದ್ದರೆ ಈ ಯಜ್ಞವು ನಡೆಯಲಾರದು ಯಾಗ ವಿಘ್ನವಾದರೆ ನಮಗೆಲ್ಲರಿಗೂ ಕಷ್ಟವಾಗುವುದು. ಅದಕಾರಣ ಈ ಯಾಗಕ್ಕೆ ವಿಘ್ನವು ಬಾರದಹಾಗೆ ಉಪಾಯವನ್ನು ಮಾಡು' ಎಂದು ಹೇಳಿದರು. ಆ ಮಾತನ್ನು ಕೇಳಿ ಸಗರಚಕ್ರವರ್ತಿಯು ಆ ಯಾಗಶಾಲೆಯಲ್ಲಿದ್ದ ತನ್ನ ಅರವತ್ತು ಸಾವಿರ ಕುಮಾರರನ್ನು ಕುರಿತು 'ಮಕ್ಕಳಿರಾ, ರಾಕ್ಷಸರ ಕಪಟಮಾರ್ಗವನ್ನು ಅರಿಯಲಾಗದು. ಸಮಸ್ತ ಮಂತ್ರಗಳಿಂದ ಪವಿತ್ರವಾದ ಈ ಯಾಗವು ಉಪಕ್ರಮಿಸಲ್ಪಟ್ಟಿತು. ನೀವು ಶೀಘ್ರದಲ್ಲಿ ಕುದುರೆಯನ್ನು ಹುಡುಕಿ ಹಿಡಿದುಕೊಂಡು ಬನ್ನಿರಿ. ಒಬ್ಬೊಬ್ಬರು ಒಂದೊಂದು ಗಾವುದದಂತೆ ಹುಡುಕಿ ಕುದುರೆಯನ್ನು ಹೇಗಾದರೂ ಶೋಧಿಸಿರಿ. ಪಾತಾಳಲೋಕವನ್ನು ಪ್ರವೇಶಿಸಿ ದಿಗ್ಗಜಗಳನ್ನೂ ಮಹಾಶೇಷನನ್ನೂ ಕಂಡು ಗರುತ್ಮಂತನ ಸಹಾಯವನ್ನು ಪಡೆದು ಉದಯಗಿರಿ ಮೊದಲಾಗಿ ಅಸ್ತಾದ್ರಿಪರ್ಯಂತ ಸಂಚರಿಸಿ ಬಳಿಕ ಬ್ರಹ್ಮಲೋಕಕ್ಕೆ ಹೋಗಿ ಹೇಗಾದರೂ ಕುದುರೆಯನ್ನು ಹುಡುಕಿರಿ. ಈ ಪುರೋಹಿತನೂ ನನ್ನ ಮೊಮ್ಮಗನಾದ ಅಂಶುಮಂತನೂ ನಾವೆಲ್ಲರೂ ನೀವು ಕುದುರೆಯನ್ನು ತರುವ ಪರ್ಯಂತ ಇಲ್ಲಿಯೇ ಇರುವೆವು' ಎಂದು ನಿರೂಪಿಸಿದನು. ಆ ಮಕ್ಕಳು ಮಹಾ ಪ್ರಸಾದವೆಂದು ತಮ್ಮ ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಆತನಿಗೆ ನಮಸ್ಕಾರವನ್ನು ಮಾಡಿ ಸಕಲವಾದ ಭೂಮಿಯನ್ನು ಒಬ್ಬೊಬ್ಬರು ಒಂದೊಂದು ಗಾವುದದಂತೆ ಹುಡುಕಿದರು. ಅಶ್ವವನ್ನು

ಎಲ್ಲಿಯೂ ಕಾಣದೆ ಪೃಥ್ವಿಯನ್ನು ಅಗಿಯಲಾರಂಭಿಸಿದರು. ಅವರು ಸಿಡಿಲಿಗೆ ಸಮಾನಗಳಾದ ತ್ರಿಶೂಲಗಳಿಂದಲೂ ಅತಿನಿಶಿತಗಳಾದ ನೇಗಿಲುಗಳಿಂದಲೂ ವಜ್ರಾಯುಧಕ್ಕೆ ಸಮಾನಗಳಾದ ಉಗುರುಗಳಿಂದಲೂ ಅಗೆಯಲಾಗಿ ಆ ಹೊಡೆತಗಳಿಂದ ನೊಂದು ಭೂಮಿಯು ಭೋರಿಡುತ್ತಿತ್ತು. ಅದರಲ್ಲಿದ್ದ ಆನೆಗಳು ರಾಕ್ಷಸರು ಮೊದಲಾದ ಸಮಸ್ತ ಪ್ರಾಣಿಗಳೂ ಗೋಳಿಡುತ್ತಿದ್ದವು! ಈ ರೀತಿಯಲ್ಲಿ ಪರ್ವತಸಹಿತವಾದ ಜಂಬೂದ್ವೀಪವನ್ನು ಅಗೆದು ಸಂಚರಿಸುತ್ತಿರಲು ದೇವತೆಗಳೂ ನಾಗಲೋಕದವರೂ ಕಂಗೆಟ್ಟು ಬ್ರಹ್ಮಲೋಕಕ್ಕೆ ಹೋಗಿ ಮಹಾಖಿನ್ನರಾಗಿ ಬ್ರಹ್ಮದೇವನಿಗೆ ಅಭಿವಂದಿಸಿ 'ಬ್ರಹ್ಮದೇವ, ಸಮಸ್ತ ಲೋಕವನ್ನೂ ಅಗೆಯುತ್ತಿರುವ ಸಗರಚಕ್ರವರ್ತಿಯ ಮಕ್ಕಳಿಂದ ಲೋಕದಲ್ಲಿರುವ ಪ್ರಾಣಿಗಳು ಹತರಾದರು. ವರುಣನ ಮಕ್ಕಳು ಸಮಸ್ತ ದಾನವರ ಸಹಿತವಾಗಿ ಚೂರ್ಣೀಕೃತರಾದರು, ಸಮಸ್ತ ಪರ್ವತಗಳೂ ಜರ್ಝರಿತವಾದವು! ಅಶ್ವವನ್ನು ಹುಡುಕುವ ನಿಮಿತ್ತದಿಂದ ಬಹುಪ್ರಾಣಿಗಳನ್ನು ಸಂಹರಿಸಿದರು' ಎಂದು ನುಡಿದರು."



## ೪೦ ನೆಯ ಅಧ್ಯಾಯ

## ಸಗರಕುಮಾರರು ಕಪಿಲಮುನಿಯಿಂದ ಭಸ್ಮವಾದದ್ದು

"ಆಮೇಲೆ ಬ್ರಹ್ಮದೇವನು ದೇವತೆಗಳ ವಾಕ್ಯವನ್ನು ಕೇಳಿ 'ಎಲೈ ದೇವತೆಗಳಿರಾ, ಈ ಭೂಮಿಯು ಪರಮಪುರುಷನಾದ ನಾರಾಯಣನ ಪತ್ನಿಯು. ಆತನು ಇದಕ್ಕೆ ತಕ್ಕ ಉಪಾಯವನ್ನು ಮಾಡುವನು. ನಾರಾಯಣನು ಕಪಿಲಮುನೀಶ್ವರನ ಸ್ವರೂಪದಿಂದ ಪಾತಾಳಲೋಕದಲ್ಲಿದ್ದಾನೆ, ಈ ಜಗತ್ತಿಗೆ ಕರ್ತನಾದ ನಾರಾಯಣನು ನಮಗೆಲ್ಲರಿಗೂ ಕರ್ತನು. ಆತನ ಕೋಪಾಗ್ನಿಯಿಂದ ಸಗರಚಕ್ರವರ್ತಿಯ ಮಕ್ಕಳು ದಗ್ಧರಾಗುವರು' ಎಂದು ಹೇಳಿದನು. ಆ ಮಾತನ್ನು ಕೇಳಿ ಸಮಸ್ತ ದೇವತೆಗಳೂ ತಮ್ಮ ತಮ್ಮ ಲೋಕಗಳಿಗೆ ಹೋದರು.

ಇತ್ತ ಅಗ್ನಿಸಮಾನರೂ ಮಹಾಬಲವಂತರೂ ಮಹಾತ್ಮರೂ ಆದ ಸಗರಚಕ್ರವರ್ತಿಯ ಮಕ್ಕಳು ಅರವತ್ತುಸಾವಿರಮಂದಿಯು ಎಲ್ಲಿಯೂ ಕುದುರೆಯನ್ನು ಕಾಣದೆ ಬೊಬ್ಬಿಡುತ್ತ ಭೂಮಿಯನ್ನು ಅಗೆದು ಪಾತಾಳಲೋಕವನ್ನು ಹೊಕ್ಕು ನಾನಾದಿಕ್ಕಿನಲ್ಲಿಯೂ ತಿರುಗಿ ಕುದುರೆಯನ್ನು ಕಾಣದೆ ತಮ್ಮ ತಂದೆಯಾದ ಸಗರಚಕ್ರವರ್ತಿಯ ಸಮೀಪಕ್ಕೆ ಬಂದು ನಮಸ್ಕರಿಸಿ 'ಎಲೈ ತಂದೆಯೆ, ಸಮಸ್ತ ಭೂಮಂಡಲವನ್ನೂ ಹುಡುಕಿದೆವು; ನಮಗೆದುರಾಗಿ ಬಂದ ಬಲವಂತರಾದ ದೇವದಾನವ ಕಿನ್ನರ ಕಿಂಪುರುಷರನ್ನು ಗೆದ್ದು ನಾಶಪಡಿಸಿದೆವು. ಎಲ್ಲಿಯೂ ಕುದುರೆಯನ್ನು ಕಾಣಲಿಲ್ಲ; ಇನ್ನು ನಾವು ಮಾಡುವ ಕಾರ್ಯವಾವುದು?' ಎಂದು ಬಿನ್ನಹಮಾಡಿದರು. ಸಗರಚಕ್ರವರ್ತಿಯು ಕೋಪಯುಕ್ತನಾಗಿ ಅವರನ್ನು ಕುರಿತು 'ಇನ್ನು ಭೂಮಿಯನ್ನು ನಾಲ್ಕುದಿಕ್ಕಿನಲ್ಲಿಯೂ ಅಗೆದು ಕುದುರೆಯನ್ನು ಹಿಡಿದುಕೊಂಡು ಹೋದವನು ಎಲ್ಲಿದ್ದರೂ ಆತನನ್ನು ಹಿಡಿದು ಕಾರ್ಯವನ್ನು ಸಾಧಿಸಿರಿ' ಎಂದು ಆಜ್ಞಾಪಿಸಿದನು,

ಸಗರಚಕ್ರವರ್ತಿಯ ಮಾತನ್ನು ಕೇಳಿ ಆ ಅರವತ್ತುಸಾವಿರ ಮಕ್ಕಳೂ ಭೂಮಿಯನ್ನು ಬಗೆದು ಪಾತಾಳಲೋಕವನ್ನು ಪ್ರವೇಶಿಸಿ ಅಲ್ಲಿ ಪರ್ವತಕ್ಕೆ ಸಮಾನವಾಗಿ ಭೂಮಿಯನ್ನು ಧರಿಸಿಕೊಂಡಿದ್ದ ವಿರೂಪಾಕ್ಷ ಎಂಬ ಆನೆಯನ್ನು ಕಂಡು ಆಶ್ಚರ್ಯಪಟ್ಟರು. ಆ ಆನೆಯು ಎಂದಾದರೂ ಒಂದು

ಸಾರಿ ಅಮಾವಾಸ್ಯೆ ಅಥವಾ ಪೂರ್ಣಿಮೆ ಎಂಬ ಪರ್ವಕಾಲದಲ್ಲಿ ಶಿರಸ್ಸನ್ನು ಕೊಡಹುವರೆ ಆ ಸಮಯದಲ್ಲಿ ಭೂಕಂಪವಾಗುವುದು. ಅಂಥ ಆನೆಯನ್ನು ಪ್ರದಕ್ಷಿಣಮಾಡಿ ಅಭಿವಂದಿಸಿ ಸಗರಪುತ್ರರು ಮೂಡಣ ದಿಕ್ಕಿನಿಂದ ತೆಂಕಣ ದಿಕ್ಕಿಗೆ ಪಾತಾಳವನ್ನು ಹೊಕ್ಕು ಆ ದಿಕ್ಕನ್ನು ಧರಿಸಿಕೊಂಡಿದ್ದ ಮಹಾಪದ್ಮ ಎಂಬ ಆನೆಯನ್ನು ಕಂಡು ವಿಸ್ಮಯಂಬಟ್ಟು, ಅದಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಅಲ್ಲಿಂದ ಪಡುವಣ ದಿಕ್ಕಿಗೆ ಬಂದು ಸೌಮನಸ ಎಂಬ ಗಜವನ್ನು ಕಂಡು ಅದಕ್ಕೂ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಯೋಗಕ್ಷೇಮವನ್ನು ಕೇಳಿ, ಅಲ್ಲಿಂದ ಬೀಳ್ಕೊಂಡು ಬಡಗಣ ದಿಕ್ಕಿಗೆ ಬಂದು ಅಲ್ಲಿದ್ದ ಭದ್ರ ಎಂಬ ದಿಗ್ಗಜವನ್ನು ಕಂಡು ಅದಕ್ಕೂ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಈಶಾನ್ಯ ದಿಕ್ಕನ್ನು ಅಗೆದು ಪಾತಾಳವನ್ನು ಪ್ರವೇಶಿಸಿದರು. ಅಲ್ಲಿ ಪರಮಪುರುಷನ ಅಂಶಾವತಾರನಾದ ಕಪಿಲ ಮಹಾಮುನಿಯನ್ನು ಕಂಡು ಆತನ ಸಮೀಪದಲ್ಲಿ ತಮ್ಮ ಕುದುರೆಯು ಸಂಚರಿಸುತ್ತಿದ್ದುದನ್ನು ಕಂಡರು. ಆತನೇ ಅಶ್ವವನ್ನು ಕದ್ದವನೆಂದೂ ಕದಿಯದವನ ಹಾಗೆ ತಪಸ್ಸನ್ನು ಮಾಡುವವನ ಹಾಗಿದ್ದಾನೆಂತಲೂ ನಿಶ್ಚಯಿಸಿ ನೇಗಿಲು ಮರಗಳು ಕಲ್ಲುಗಳು ಮೊದಲಾದುವನ್ನು ಎತ್ತಿ ಹಿಡಿದುಕೊಂಡು ಅಟ್ಟಿಸಿಕೊಂಡು ಹೋಗಿ 'ಎಲೈ ಅಜ್ಞಾನಿಯೆ, ನಮ್ಮ ಯಜ್ಞಾರ್ಥವಾದ ಕುದುರೆಯನ್ನು ಕದ್ದುಕೊಂಡು ಬರಬಹುದೆ ? ನಾವು ಸಗರನ ಮಕ್ಕಳೆಂದು ಅರಿಯೆಯಾ ?' ಎಂದು ಆರ್ಭಟಿಸುತ್ತಿದ್ದರು. ಅವರ ಮಾತನ್ನು ಕೇಳಿ ಕಪಿಲಮಹಾಮುನಿಯು ಕೋಪದಿಂದ ಹೂಂಕಾರವನ್ನು ಮಾಡಿದನು. ಆ ಹೂಂಕಾರದಿಂದ ಅಗ್ನಿಯು ಹುಟ್ಟಲು ಸಗರಚಕ್ರವರ್ತಿಯ ಅರುವತ್ತುಸಾವಿರ ಮಕ್ಕಳೂ ಉರಿದು ಭಸ್ಮರಾಶಿಯಾದರು ! ಇತ್ತ ಯಾಗಶಾಲೆಯಲ್ಲಿ ಸಗರಚಕ್ರವರ್ತಿಯು ಅದ್ಭುತಗಳಾದ ದುರ್ನಿಮಿತ್ತಗಳನ್ನು ಕಂಡು ಆಶ್ಚರ್ಯಪಟ್ಟು ಧ್ಯಾನಾರೂಢನಾಗಿದ್ದನು."



## ೪೧ನೆಯ ಅಧ್ಯಾಯ

## ಸಗರಚಕ್ರವರ್ತಿಯು ಸ್ವರ್ಗಸ್ಥನಾದದ್ದು

ಆಮೇಲೆ ಸಗರಚಕ್ರವರ್ತಿಯು, ಕುದುರೆಯನ್ನು ಹುಡುಕುವುದಕ್ಕೆ ಹೋದ ತನ್ನ ಮಕ್ಕಳು ಬಹುಕಾಲವಾದರೂ ಬರದಿರಲು ಮನಸ್ಸಿನಲ್ಲಿ ವ್ಯಥೆಪಟ್ಟು ತನ್ನ ಮೊಮ್ಮಗನಾದ ಅಂಶುಮಂತನನ್ನು ಕರೆದು 'ಅಂಶುಮಂತ, ನೀನು ಮಹಾಪರಾಕ್ರಮಿಯೂ ಸಕಲವಿದ್ಯಾಪ್ರವೀಣನೂ ಸಾಮರ್ಥ್ಯದಲ್ಲಿ ಪೂರ್ವದ ರಾಯರಿಗೆ ಸಮಾನನೂ ಆಗಿದ್ದೀಯೆ. ನಿನ್ನ ತಂದೆಯ ಸೋದರರು ಕುದುರೆಯನ್ನು ಹುಡುಕುವುದಕ್ಕೆ ಹೋಗಿ ಬಹುಕಾಲವಾದರೂ ತಿರುಗಿ ಬರಲಿಲ್ಲ. ಆ ಕುದುರೆಯನ್ನು ಯಾರು ತೆಗೆದುಕೊಂಡು ಹೋದರೋ ತಿಳಿಯಲಿಲ್ಲ. ನೀನು ಆ ಕುದುರೆಯನ್ನು ಹುಡುಕಿಕೊಂಡು ಹೋಗಿ ನಿನ್ನ ಚಿಕ್ಕತಂದೆಗಳು ಏಕೆ ಬರಲಿಲ್ಲವೆಂಬ ವೃತ್ತಾಂತವನ್ನು ತಿಳಿದು ಬಾ. ದಾರಿಯಲ್ಲಿ ಯಾರಾದರೂ ನಿನಗೆ ಎದುರಾದರೆ ಅವರನ್ನು ನಿಗ್ರಹಿಸುವುದಕ್ಕಾಗಿ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಹೋಗು. ಹೋಗುವ ಸ್ಥಳಗಳಲ್ಲಿರುವ ಪೂಜ್ಯರಾದವರಿಗೆ ಅಭಿವಂದಿಸು. ನಿನಗೆ ಎದುರಾದವರನ್ನು ಯುದ್ಧದಲ್ಲಿ ಸಂಹರಿಸು ಅಶ್ವವನ್ನು ಹುಡುಕಿ ಕೆಲಸಮಾಡಿಕೊಂಡು ನನ್ನ ಯಾಗವು ನೆರವೇರುವಹಾಗೆ ಯತ್ನವನ್ನು ಮಾಡು' ಎಂದು ಹೇಳಿದನು

ಅಂಶುಮಂತನು ಮಹಾಪ್ರಸಾದವೆಂದು ತನ್ನ ಪಿತಾಮಹನ ವಾಕ್ಯವನ್ನು ಶಿರಸಾವಹಿಸಿ ಬಿಲ್ಲು ಬಾಣ ಖಡ್ಗಗಳನ್ನು ತೆಗೆದುಕೊಂಡು ತನ್ನ ಚಿಕ್ಕಪ್ಪಂದಿರು ಭೂಮಿಯನ್ನು ಅಗೆದು ಪಾತಾಳಕ್ಕೆ

ಪ್ರವೇಶಿಸಿದ ದಾರಿಹಿಡಿದು ಆ ಲೋಕವನ್ನು ಪ್ರವೇಶಿಸಿದನು ಅಲ್ಲಿ ದೈತ್ಯ ದಾನವ ಪಿಶಾಚ ನಾಗರು ಜಯ ಜಯ ! ಎಂದು ಕೊಂಡಾಡುತ್ತಿರಲು ಅವರ ಸನ್ಮಾನಗಳನ್ನು ಪಡೆದು, ಪಡುವಣ ದಿಕ್ಕಿನಲ್ಲಿದ್ದ ದಿಗ್ಗಜವನ್ನು ಕಂಡು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ತನ್ನ ಪಿತಾಮಹನ ಅಶ್ವಮೇಧಾಂಗವಾದ ಕುದುರೆಯನ್ನು ಯಾರು ಹಿಡಿದುಕೊಂಡು ಹೋದರೆಂದು ಕೇಳಿದನು ಆ ದಿಗ್ಗಜವು ನೀನು ಕೃತಾರ್ಥನೆಂದೂ ಅಶ್ವಮೇಧಾಂಗವಾದ ಕುದುರೆಯನ್ನು ಕಂಡು ಅದರ ಸಹಿತ ಶೀಘ್ರದಲ್ಲಿ ಬರುವೆಯೆಂದೂ ನುಡಿದು ಸನ್ಮಾನವನ್ನು ಮಾಡಿ ಕಳುಹಿಸಿತು. ಅನಂತರ ಮುಂದಕ್ಕೆ ಹೋಗಿ ಮಿಕ್ಕ ದಿಗ್ಗಜಗಳನ್ನೂ ಕಂಡು ಯಥಾಕ್ರಮದಲ್ಲಿ ತನ್ನ ತಂದೆಯ ಸೋದರರ ವೃತ್ತಾಂತವನ್ನೂ ಯಾಗದ ಕುದುರೆಯ ವರ್ತಮಾನವನ್ನೂ ಕೇಳಲು, ಆ ದಿಗ್ಗಜಗಳು ಸನ್ಮಾನವನ್ನು ಮಾಡಿ ತನ್ನ ಮುತ್ತಯ್ಯನ ಅಶ್ವಮೇಧಾಂಗದ ಕುದುರೆಯ ಸಹಿತ ಅವನು ಶೀಘ್ರದಲ್ಲಿ ಬರುವನೆಂದು ಹೇಳಿದುವು ಆಮೇಲೆ ಈಶಾನ್ಯದಿಕ್ಕಿಗೆ ಹೋಗಿ ಅಲ್ಲಿ ತನ್ನ ಚಿಕ್ಕಪ್ಪಂದಿರಾದ ಸಗರಚಕ್ರವರ್ತಿಯ ಅರುವತ್ತು ಸಾವಿರ ಮಕ್ಕಳೂ ಕಪಿಲಮಹಾಮುನೀಶ್ವರನ ಕೋಪಾಗ್ನಿಯಿಂದ ದಗ್ಧರಾಗಿ ಭಸ್ಮರಾಶಿಯಾಗಿರುವುದನ್ನು ಕಂಡು, ಬಹುದುಃಖದಿಂದ ಹಂಬಲಿಸುತ್ತ ಆ ಸ್ಥಳದಲ್ಲಿ ಸಂಚರಿಸುತ್ತಿದ್ದ ಕುದುರೆಯನ್ನು ಕಂಡು ಶೋಕಾಕ್ರಾಂತನಾದನು ಮೃತರಾದ ತನ್ನ ಚಿಕ್ಕಪ್ಪಂದಿರಿಗೆ ಸಂಸ್ಕಾರವನ್ನು ಮಾಡಬೇಕೆಂದು ಉದಕವನ್ನು ವಿಚಾರಿಸಿ ಎಲ್ಲಿಯೂ ಕಾಣದೆ ಅಂತರಿಕ್ಷಮಾರ್ಗವನ್ನು ನೋಡಲಾಗಿ ದೈವಾಧೀನದಿಂದ ಅಲ್ಲಿ ತನ್ನ ಸೋದರಮಾವನಾದ ಗರುತ್ಮಂತನನ್ನು ಕಂಡನು ಗರುತ್ಮಂತನು ಅಂಶುಮಂತನನ್ನು ನೋಡಿ ' ಎಲೈ ಅಂಶುಮಂತನೆ, ಇವರ ವಧೆಯು ಸರ್ವಲೋಕಕ್ಕೂ ಹಿತಕರವಾದದ್ದು ಆದಕಾರಣ ನೀನು ದುಃಖಪಡಬೇಡ.* ಸಗರಚಕ್ರವರ್ತಿಯ ಮಕ್ಕಳು ಮಹಾಮಹಿಮೆಯುಳ್ಳ ಕಪಿಲಮಹಾಮುನಿಯ ಕೋಪಾಗ್ನಿಯಿಂದ ದಗ್ಧರಾದರು ದುರ್ಮರಣದಲ್ಲಿ ಹೋದವರಿಗೆ ಲೌಕಿಕಜಲದಿಂದ ಉತ್ತರಕ್ರಿಯೆಗಳನ್ನು ಮಾಡಬಾರದೆಂಬ ಆಚಾರವುಂಟು. ಆದ್ದರಿಂದ ನೀನು ನಿನ್ನ ಚಿಕ್ಕಪ್ಪಂದಿರಿಗೆ ಸಂಸ್ಕಾರವನ್ನು ಮಾಡಬೇಡ. ಹಿಮವತ್ಪರ್ವತನ ಜ್ಯೇಷ್ಠಪುತ್ರಿಯಾದ ಗಂಗೆಯಲ್ಲಿ ತೀರ್ಥಸ್ನಾನವನ್ನು ಮಾಡಿಸು ಆ ದೇವಿಯು ಈ ಭಸ್ಮರಾಶಿಯಾದವರನ್ನು ಪವಿತ್ರಮಾಡುವಳು ಪವಿತ್ರವಾದ ಗಂಗೆಯಿಂದ ಸಗರಚಕ್ರವರ್ತಿಯ ಅರುವತ್ತುಸಾವಿರ ಮಕ್ಕಳೂ ಸ್ವರ್ಗವನ್ನೈದುವರು. ಗಂಗೆಯು ಸ್ವರ್ಗಲೋಕದಲ್ಲಿದ್ದಾಳೆ. ಆಕೆಯನ್ನು ಭೂಲೋಕಕ್ಕೆ ಕರೆದುಕೊಂಡು ಬಂದರೆ ಆಕೆಯು ಅರುವತ್ತುಸಾವಿರ ಮಂದಿ ಸಗರಚಕ್ರವರ್ತಿಯ ಮಕ್ಕಳನ್ನೂ ಸ್ವರ್ಗವನ್ನೈದಿಸುವಳು ನೀನು ಈ ಕುದುರೆಯನ್ನು ಹಿಡಿದುಕೊಂಡು ಹೋಗಿ ನಿನ್ನ ಮುತ್ತಯ್ಯನಾದ ಸಗರಚಕ್ರವರ್ತಿಯ ಅಶ್ವಮೇಧಯಾಗವನ್ನು ನೆರವೇರಿಸು ' ಎಂದು ಹೇಳಿದನು

ಆ ಮಾತನ್ನು ಕೇಳಿ ಮಹಾಪರಾಕ್ರಮಿಯಾದ ಅಂಶುಮಂತನು ದೀಕ್ಷಿತನಾಗಿದ್ದ ಸಗರಚಕ್ರವರ್ತಿಯ ಸಮೀಪಕ್ಕೆ ಕುದುರೆಯೊಡನೆ ಬಂದು ಅದನ್ನು ಒಪ್ಪಿಸಿ ತನ್ನ ಚಿಕ್ಕಪ್ಪಂದಿರ ವೃತ್ತಾಂತವನ್ನು ಹೇಳಿದನು. ಘೋರವಾದ ಆ ಅಶುಭವಾರ್ತೆಯನ್ನು ಕೇಳಿ ಸಗರಚಕ್ರವರ್ತಿಯು ಯಜ್ಞದೀಕ್ಷೆಯಾಗಿರುವಲ್ಲಿ ವೃದ್ಧಿಕ್ಷಯಾದಿ ಸೂತಕಗಳು ಬಂದರೂ ಆ ಯಜ್ಞವನ್ನು ನೆರವೇರಿಸಬೇಕೆಂಬ ಧರ್ಮಶಾಸ್ತ್ರವನ್ನು ಆಲೋಚಿಸಿ ಯಾಗವನ್ನು ವಿಧ್ಯುಕ್ತಪ್ರಕಾರದಲ್ಲಿ ಮುಗಿಸಿದನು. ಅನಂತರ ಗಂಗೆಯನ್ನು ತರಬೇಕೆಂದು ಆಲೋಚನೆ ಮಾಡಿದನಾದರೂ ದೃಢಚಿತ್ತವಿಲ್ಲದೆ ಮೂವತ್ತುಸಾವಿರ ವರುಷಗಳ ಪರ್ಯಂತ ರಾಜ್ಯವನ್ನು ಪರಿಪಾಲಿಸಿ ಸ್ವರ್ಗಸ್ಥನಾದನು."



---

*** ಏಕೆಂದರೆ, ಈ ಮೂಲಕ ಲೋಕಪಾವನೆಯಾದ ಗಂಗೆಯು ಭೂಮಿಗೆ ಇಳಿದು ಬರುತ್ತಾಳೆ.**

೪೨ ನೆಯ ಅಧ್ಯಾಯ

## ಭಗೀರಥನು ಬ್ರಹ್ಮದೇವನಿಂದ ವರವನ್ನು ಪಡೆದದ್ದು

' ಶ್ರೀರಾಮ, ಕೇಳು ಸಗರಚಕ್ರವರ್ತಿಯು ಸ್ವರ್ಗಾರೋಹಣಾನಂತರದಲ್ಲಿ ಆತನ ಪ್ರಧಾನಿಗಳು ಧರ್ಮಿಷ್ಠನಾದ ಅಂಶುಮಂತನಿಗೆ ಪಟ್ಟವನ್ನು ಕಟ್ಟಿದರು. ಆತನು ಧರ್ಮದಿಂದ ಪ್ರಜಾಪಾಲನವನ್ನು ಮಾಡುತ್ತ ರಾಜ್ಯವನ್ನಾಳಿಕೊಂಡಿರಲು ದಿಲೀಪನೆಂಬ ಕುಮಾರನು ಜನಿಸಿದನು. ಅವನು ಪ್ರಬುದ್ಧನಾಗಲು ಆತನಿಗೆ ಪಟ್ಟಾಭಿಷೇಕವನ್ನು ಮಾಡಿ ರಾಜ್ಯಭಾರವನ್ನು ಬಿಟ್ಟು ಹಿಮವತ್ಪರ್ವತಕ್ಕೆ ಹೋಗಿ ಆ ಪರ್ವತದ ಕೋಡುಗಲ್ಲಿನಲ್ಲಿ ಮೂವತ್ತೆರಡುಸಾವಿರ ವರುಷಗಳ ಪರ್ಯಂತ ಉಗ್ರವಾದ ತಪಸ್ಸನ್ನು ಮಾಡಿ ಅಂಶುಮಂತನು ಸ್ವರ್ಗಲೋಕವನ್ನೈದಿದನು ಆಮೇಲೆ ದಿಲೀಪಮಹಾರಾಯನು ತನ್ನ ಮುತ್ತಜ್ಜಂದಿರಾದ ಆ ಅರುವತ್ತುಸಾವಿರ ಮಂದಿಯು ಶಾಪದಗ್ಧರಾದ ವೃತ್ತಾಂತವನ್ನು ಕೇಳಿ, ಅವರನ್ನು ಸ್ವರ್ಗಕ್ಕೆ ಕಳುಹಿಸಲು ಗಂಗೆಯನ್ನು ತರುವ ಉಪಾಯವಾವುದೆಂದು ಚಿಂತಿಸುತ್ತ ಕಾಲವನ್ನು ಕಳೆದನು. ಆ ರಾಜನಿಗೆ ಭಗೀರಥನೆಂಬ ಕುಮಾರನು ಜನಿಸಿದನು. ದಿಲೀಪಮಹಾರಾಯನು ಅನೇಕ ಯಜ್ಞಗಳನ್ನು ಮಾಡಿ ಮೂವತ್ತುಸಾವಿರ ವರುಷಗಳು ರಾಜ್ಯವನ್ನಾಳಿದನು ಅವನು ಅವಶ್ಯವಾಗಿ ಗಂಗೆಯನ್ನು ತರಬೇಕೆಂದು ನಿಶ್ಚಯಿಸಿ ಭಗೀರಥನಿಗೆ ಪಟ್ಟಾಭಿಷೇಕವನ್ನು ಮಾಡಿ ಗಂಗೆಯನ್ನು ತರುವುದಕ್ಕಾಗಿ ತಪಸ್ಸಿಗೆ ಹೋಗಲೆಣಿಸಿದ ಸಮಯದಲ್ಲಿ ವ್ಯಾಧಿಗ್ರಸ್ತನಾಗಿ ಶರೀರವನ್ನು ಬಿಟ್ಟು ತಾನು ಮಾಡಿದ ಪುಣ್ಯಪ್ರಭಾವದಿಂದ ಇಂದ್ರಲೋಕವನ್ನೈದಿದನು. ಬಳಿಕ ಧರ್ಮಾತ್ಮನಾಗಿ ರಾಜರ್ಷಿಯಾದ ಭಗೀರಥನು ಸಂತಾನವಿಲ್ಲದವನಾಗಿ ರಾಜ್ಯಭಾರವನ್ನು ಮಂತ್ರಿಗಳ ವಶಮಾಡಿ ಗಂಗೆಯನ್ನು ತರುವುದಕ್ಕಾಗಿ ಗೋಕರ್ಣವೆಂಬ ಪುಣ್ಯಕ್ಷೇತ್ರಕ್ಕೆ ಹೋಗಿ ಮಾಸೋಪವಾಸವೆಂಬ ನಿಯಮವ್ರತವನ್ನು ಮಾಡಿಕೊಂಡು ಜಿತೇಂದ್ರಿಯನಾಗಿ ಪಂಚಾಗ್ನಿಮಧ್ಯದಲ್ಲಿ ಎರಡು ತೋಳುಗಳನ್ನೂ ಮೇಲಕ್ಕೆ ನೆಗಹಿಕೊಂಡು ಸಾವಿರವರುಷಗಳ ಪರ್ಯಂತ ತಪಸ್ಸನ್ನು ಮಾಡಿದನು. ಆತನ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವನು ಸಮಸ್ತದೇವತೆಗಳ ಸಹಿತ ಪ್ರಸನ್ನನಾಗಿ ' ಎಲೈ ಭಗೀರಥನೆ, ನಿನ್ನ ತಪಸ್ಸಿನಿಂದ ನಾನು ಸುಪ್ರೀತನಾದೆನು ನಿನಗೆ ಬೇಕಾದ ವರವನ್ನು ಬೇಡಿಕೊ ' ಎಂದನು.

ಮಹಾತೇಜಸ್ವಿಯಾದ ಭಗೀರಥನು ಕೈಮುಗಿದುಕೊಂಡು ಬ್ರಹ್ಮದೇವನನ್ನು ಕುರಿತು ' ಹೇ ಬ್ರಹ್ಮದೇವ, ನೀನು ಸುಪ್ರೀತನಾಗಿ ನನ್ನ ತಪಸ್ಸಿಗೆ ತಕ್ಕ ವರವನ್ನು ಕೊಡುವಪಕ್ಷದಲ್ಲಿ ನನ್ನ ಮನೋರಥವನ್ನು ಕೇಳು ಕಪಿಲಮಹಾಮುನಿಯ ಕೋಪಾಗ್ನಿಯಿಂದ ದಗ್ಧರಾದ ನನ್ನ ಪಿತೃಗಳು ಗಂಗಾತೀರ್ಥದಿಂದ ಉದಕಕ್ರಿಯೆಗಳನ್ನು ಪಡೆಯಬೇಕು. ಯಾವ ತೀರ್ಥದಲ್ಲಿ ಸತ್ತವರ ಭಸ್ಮವು ಕಲೆತರೆ ಆ ಘಳಿಗೆಯಲ್ಲಿಯೇ ಅವರು ಸ್ವರ್ಗಲೋಕವನ್ನೈದುವರೋ, ಅಂಥ ತೀರ್ಥವುಳ್ಳ ಗಂಗಾನದಿಯು ಭೂಲೋಕಕ್ಕೆ ಬರುವಹಾಗೆ ಕೃಪೆಮಾಡು. ನನಗೆ ಸಂತಾನವಿಲ್ಲ ; ಮುಂದೆ ನನ್ನ ವಂಶವು ಅಭಿವೃದ್ಧಿಯಾಗುವಂತೆ ಸಂತಾನವನ್ನು ಕೊಡು ; ಇದೇ ನನಗೆ ಬೇಕಾದ ವರವು. ಇಕ್ಷ್ವಾಕುವಂಶದ ರಾಯರಿಗೆ ಬೇಕಾದ ವರವು ಇದೇ ; ಈ ವರವನ್ನು ಪಾಲಿಸಿ ರಕ್ಷಿಸಬೇಕು ' ಎಂದು ಬಿನ್ನಹಮಾಡಿದನು.

ಬ್ರಹ್ಮದೇವನು ಮಧುರೋಕ್ತಿಯಿಂದ ಭಗೀರಥರಾಯನನ್ನು ನೋಡಿ ' ಎಲೈ ಭಗೀರಥನೆ, ನೀನು ಇಕ್ಷ್ವಾಕುವಂಶವನ್ನು ಉದ್ಧರಿಸತಕ್ಕವನು. ನಿನಗೆ ಬಹು ಶ್ರೇಯಸ್ಸಾಗುವುದು. ನಿನ್ನ ಮನೋರಥವು ಸಲ್ಲುವುದು. ಗಂಗೆಯು ಸ್ವರ್ಗಲೋಕದಿಂದ ಭೂಲೋಕಕ್ಕೆ ಬರುವಳು. ಆಕೆಯನ್ನು

ಭೂಮಿಯು ಧರಿಸಲಾರದು ಸ್ವರ್ಗಲೋಕದಿಂದ ಭೂಲೋಕಕ್ಕೆ ಬೀಳುವ ಗಂಗೆಯ ವೇಗವನ್ನು ತಾಳಲು ಪರಮೇಶ್ವರನು ಹೊರತಾಗಿ ಮತ್ತಾರೂ ಶಕ್ತರಲ್ಲ. ಆದ್ದರಿಂದ ಗಂಗೆಯನ್ನು ಧರಿಸಬೇಕೆಂದು ಪರಮೇಶ್ವರನನ್ನು ಪ್ರಾರ್ಥನೆಮಾಡಿಕೊ ' ಎಂದು ನಿರೂಪಿಸಿ ಗಂಗೆಯನ್ನು ಒಡಂಬಡಿಸಿ ಸಮಸ್ತ ದೇವತೆಗಳನ್ನೂ ಕೂಡಿಕೊಂಡು ಬ್ರಹ್ಮಲೋಕವನ್ನೈದಿದನು "



೪೩ ನೆಯ ಅಧ್ಯಾಯ

## ಭಗೀರಥನು ಗಂಗೆಯನ್ನು ಭೂಮಿಗೆ ತಂದದ್ದು

" ಆಮೇಲೆ ಭಗೀರಥನು ಅಂಗುಷ್ಠಾಗ್ರದಲ್ಲಿ ಭೂಮಿಯಮೇಲೆ ನಿಂತುಕೊಂಡು ಒಂದು ವರುಷ ಈಶ್ವರನನ್ನು ಕುರಿತು ತಪಸ್ಸನ್ನು ಮಾಡಲು, ಪಾರ್ವತೀರಮಣನಾದ ಪರಮೇಶ್ವರನು ಆತನಿಗೆ ಪ್ರಸನ್ನನಾಗಿ ' ನಿನ್ನ ತಪಸ್ಸಿನಿಂದ ನಾನು ಸುಪ್ರೀತನಾದೆನು ನಿನ್ನ ಇಷ್ಟಾರ್ಥವನ್ನು ಸಲ್ಲಿಸಿ ಕೊಡುವೆನು ' ಎಂದು ಹೇಳಿದನು. ಭಗೀರಥನು ಆ ಸ್ವಾಮಿಯನ್ನು ಕುರಿತು ' ಹೇ ಸ್ವಾಮಿ, ಸ್ವರ್ಗಲೋಕದಿಂದ ಅವತರಿಸಿ ಬರುವ ಗಂಗೆಯನ್ನು ನೀನು ಧರಿಸಬೇಕು ' ಎಂದು ಬೇಡಿಕೊಂಡನು. ಪರಮೇಶ್ವರನು ಹಿಮವತ್ಪರ್ವತರಾಜನ ಹಿರಿಯ ಕುಮಾರಿಯಾದ ಗಂಗಾದೇವಿಯನ್ನು ಶಿರಸ್ಸಿನಲ್ಲಿ ಧರಿಸುವುದಾಗಿ ನುಡಿದನು. ಆ ಮಾತನ್ನು ಕೇಳಿ ಗಂಗೆಯು ಅನೇಕರೂಪಳಾಗಿ, ಯಾರಿಗೂ ಸಹಿಸಲು ಶಕ್ಯವಲ್ಲದ ವೇಗವುಳ್ಳವಳಾಗಿ, ಸಮಸ್ತಲೋಕಗಳೂ ನಮಸ್ಕರಿಸಲು ಯೋಗ್ಯನಾದ ಪರಮೇಶ್ವರನ ಮಹಿಮೆಯನ್ನು ಅಜ್ಞಾನದಿಂದ ವಿಚಾರಿಸದೆ, ತನ್ನ ಅತಿವೇಗವಾದ ಪ್ರವಾಹದಲ್ಲಿ ಆತನನ್ನು ಮುಳುಗಿಸಿ ಪಾತಾಳಲೋಕಕ್ಕೆ ಸೆಳೆದುಕೊಂಡುಹೋಗಬೇಕೆಂದು ರಭಸದಿಂದ ಬರುತ್ತಿದ್ದಳು. ಆಕೆಯ ಅಹಂಕಾರವನ್ನು ಕಂಡು ಪರಮೇಶ್ವರನು ಅತ್ಯಂತ ಕೋಪಯುಕ್ತನಾಗಿ ಅವಳ ಗರ್ವವನ್ನು ಪರಿಹರಿಸಬೇಕೆಂದು ತನ್ನ ಜಟಾಮಕುಟದಲ್ಲಿ ಗಂಗೆಯನ್ನು ಅಡಕಮಾಡಿಕೊಂಡನು ಆಗ ಗಂಗೆಯು ಹಿಮವತ್ಪರ್ವತಕ್ಕೆ ಸಮಾನವಾಗಿ ಅತಿಪವಿತ್ರವಾದ ಪರಮೇಶ್ವರನ ಜಟಾಮಕುಟದಲ್ಲಿ ಬಿದ್ದು ಭೂಲೋಕದಲ್ಲಿ ಪ್ರವಹಿಸುವುದಕ್ಕೆ ಸಮರ್ಥಳಲ್ಲದೆ ಬಹುಕಾಲಪರ್ಯಂತ ಆ ಜಟಾಮಕುಟ ದಲ್ಲಿಯೇ ಪ್ರವಹಿಸುತ್ತ ಭೂಲೋಕಕ್ಕೆ ಇಳಿಯಲು ದಾರಿಯನ್ನು ಕಾಣದೆ ಇದ್ದಳು. ಭಗೀರಥನು ಅದು ಪರಮೇಶ್ವರನ ಮಾಯೆಯೆಂದು ತಿಳಿದು ಮತ್ತೂ ತಪಸ್ಸು ಮಾಡುತ್ತಿದ್ದನು.

ಆ ಬಳಿಕ ಪರಮೇಶ್ವರನು ಭಗೀರಥನಿಗೆ ಪ್ರಸನ್ನನಾಗಿ ತನ್ನ ಜಟಾಮಕುಟದಿಂದ ಗಂಗೆಯನ್ನು ಬಿಟ್ಟನು. ಗಂಗೆಯು ಹಿಮವತ್ಪರ್ವತದಲ್ಲಿರುವ ಬಿಂದುಸರಸ್ಸು ಎಂಬ ಕೊಳದಲ್ಲಿ ಬಿದ್ದು ಅಲ್ಲಿಂದ ಏಳು ಪ್ರವಾಹಗಳಾದಳು. ಅವುಗಳಲ್ಲಿ ಹ್ಲಾದಿನೀ ಪಾವನೀ ನಳಿನೀ ಎಂಬ ಮೂರು ಪ್ರವಾಹಗಳು ಮೂಡಣ ದಿಕ್ಕಿಗೆ ತೆರಳಿದವು. ಸುಚಕ್ಷು ಸೀತಾ ಸಿಂಧು ಎಂಬ ಮೂರು ಪ್ರವಾಹಗಳು ಪಡುವಣ ದಿಕ್ಕಿಗೆ ನಡೆದವು ಏಳನೆಯ ಪ್ರವಾಹವಾದ ಅಲಕನಂದೆಯು ರಾಜರ್ಷಿಯಾದ ಭಗೀರಥನು ಯಾವ ಮಾರ್ಗ ದಲ್ಲಿ ನಡೆದನೋ ಆ ಮಾರ್ಗದಲ್ಲೇ ಆತನ ಬೆನ್ನು ಹಿಡಿದು ನಡೆದಳು ! ಈ ಪ್ರಕಾರದಲ್ಲಿ ಗಂಗೆಯು ಸ್ವರ್ಗಲೋಕದಿಂದ ಪರಮೇಶ್ವರನ ಜಟಾಮಕುಟದಲ್ಲಿ ಬಿದ್ದು ಭೂಮಿಗೆ ಇಳಿದು ಮಹತ್ತಾದ ಧ್ವನಿಯೊಡನೆ ಕೂಡಿ ಭೂಮಿಯಲ್ಲಿ ಪ್ರವಹಿಸಿದಳು. ಗಂಗೆಯು ಆಕಾಶದಿಂದ ಬೀಳುವಾಗ ಮತ್ಸ್ಯಗಳು ನೀರಾನೆಗಳು ಮೊದಲಾದ ಜಲಚರಪ್ರಾಣಿಗಳಿಂದ ವಿಶೇಷವಾಗಿ ಒಪ್ಪುತ್ತಿತ್ತು.

ದೇವತೆಗಳು ದೇವರ್ಷಿಗಳು ಯಕ್ಷರು ರಾಕ್ಷಸರು ಮೊದಲಾದವರು ಅತಿ ಮನೋಹರಗಳಾದ ವಿಮಾನಗಳನ್ನೇರಿಕೊಂಡು ಆಕಾಶದಿಂದ ಬೀಳುತ್ತಿದ್ದ ದೇವಗಂಗೆಯನ್ನು ನೋಡುತ್ತಿದ್ದರು. ಈ ರೀತಿಯಲ್ಲಿ ಗಂಗಾದೇವಿಯ ಅವತರಣವು ಅದ್ಭುತವಾಗಿತ್ತು. ಆಕಾಶದಿಂದ ಬೀಳುತ್ತಿದ್ದ ಗಂಗೆಯ ನೊರೆಗಳು ಹಂಸಸಮೂಹಗಳೋಪಾದಿಯಲ್ಲಿ ವ್ಯಾಪಿಸಿ ಆಕಾಶದಲ್ಲಿ ಶರತ್ಕಾಲದ ಮೇಘಗಳು ಹರಡಿವೆಯೋ ಎಂಬಹಾಗೆ ಒಪ್ಪುತ್ತಿದ್ದವು! ಒಂದುಕಡೆಯಲ್ಲಿ ಅತಿವೇಗವಾದ ಪ್ರವಾಹವುಳ್ಳದ್ದಾಗಿ, ಒಂದುಕಡೆಯಲ್ಲಿ ಡೊಂಕಾಗಿ, ಒಂದುಕಡೆಯಲ್ಲಿ ನಿಡಿದಾಗಿ, ಒಂದುಕಡೆಯಲ್ಲಿ ಒಳಗಡೆಗೆ ಬಾಗಿ, ಒಂದುಕಡೆಯಲ್ಲಿ ಕೆದರಿಕೊಂಡು, ಮತ್ತೊಂದು ದಿಕ್ಕಿನಲ್ಲಿ ಮೆಲ್ಲಗೆ, ಒಂದು ದಿಕ್ಕಿನಲ್ಲಿ ಉದಕವು ಎದುರಾಗಿ ಒಂದಕ್ಕೊಂದು ಹೊಯ್ಯಲ್ಪಟ್ಟು, ಮತ್ತೊಂದು ಕಡೆಯಲ್ಲಿ ಭೂಮಿಗೆ ಬಿದ್ದು, ಮೇಲುಮುಂದಾಗಿ ಪ್ರವಹಿಸುತ್ತಿತ್ತು! ಈ ಪ್ರಕಾರವಾಗಿ ಗಂಗೆಯು ಆಕಾಶದಿಂದ ಪರಮೇಶ್ವರನ ಜಟಾಮಕುಟಕ್ಕೆರಗಿ ಆ ಜಟಾಮಕುಟದಿಂದ ಭೂಮಿಗೆರಗಿ ಪರಮೇಶ್ವರನ ಜಟಾಮಕುಟಸ್ಪರ್ಶನದಿಂದ ಅತಿನಿರ್ಮಲವಾಗಿ ಒಪ್ಪುತ್ತಿತ್ತು. ಭೂಮಿಯಲ್ಲಿ ಸಂಚರಿಸುತ್ತಿದ್ದ ಋಷಿಗಳೂ ಗಂಧರ್ವರೂ ಈಶ್ವರನ ಜಟಾಮಕುಟದಲ್ಲಿದ್ದ ಗಂಗೆಯು ಮಹಾಪವಿತ್ರವೆಂದು ಅದರಲ್ಲಿ ಸ್ನಾನಮಾಡಿ ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನೈದಿದರು. ಪುಣ್ಯಕರ್ಮದಿಂದ ಸ್ವರ್ಗಲೋಕದಲ್ಲಿದ್ದು ಪುಣ್ಯಕ್ಷಯವಾಗಿ ಭೂಲೋಕಕ್ಕೆ ಬಂದವರು ಗಂಗೆಯಲ್ಲಿ ಸ್ನಾನಮಾಡಿ ಪಾಪರಹಿತರಾಗಿ ಪುನಃ ಪುಣ್ಯಲೋಕಗಳಿಗೆ ಹೋದರು! ಈ ರೀತಿಯಲ್ಲಿ ಸಮಸ್ತಲೋಕಗಳವರೂ ಗಂಗೆಯಲ್ಲಿ ಸ್ನಾನಮಾಡಿ ನಿರ್ಮಲಸ್ವರೂಪರಾದರು.

ಬಳಿಕ ಭಗೀರಥಮಹಾರಾಯನು ರಥಾರೂಢನಾಗಿ ಮುಂದೆ ಹೋಗುತ್ತಿರಲು, ಗಂಗೆಯು ದೇವ ಋಷಿ ದೈತ್ಯ ದಾನವ ಯಕ್ಷ ರಾಕ್ಷಸ ಗಂಧರ್ವ ಕಿನ್ನರೋರಗ ಕಿಂಪುರುಷ ಅಪ್ಸರೆಯರು ಮೊದಲಾದ ಸಮಸ್ತ ಪ್ರಾಣಿಗಳೂ ನೋಡುತ್ತಿರಲು ಆತನ ಬೆನ್ನುಹಿಡಿದು ಪ್ರವಹಿಸುತ್ತ, ಮಾರ್ಗದಲ್ಲಿ ಜಹ್ನು ಮಹಾಮುನಿಯ ಯಾಗಶಾಲೆಯನ್ನು ಹೊಕ್ಕು ಅಲ್ಲಿದ್ದ ವಸ್ತುಗಳನ್ನು ತೇಲಿಸಲು, ಜಹ್ನು ಮಹಾಮುನಿಯು ಅತ್ಯಂತ ಕೋಪಯುಕ್ತನಾಗಿ ಗಂಗಾಪ್ರವಾಹವನ್ನು ಪಾನಮಾಡಿದನು. ಅದನ್ನು ನೋಡಿ ಸಮಸ್ತ ದೇವತೆಗಳೂ ಅತ್ಯಾಶ್ಚರ್ಯಪಟ್ಟು ಜಹ್ನುಮುನಿಯನ್ನು ಪ್ರಾರ್ಥಿಸಿ ಸ್ತೋತ್ರಮಾಡಿ ಗಂಗೆಯು ಜಹ್ನು ಮುನಿಯ ಮಗಳಾಗಿ ಅವತರಿಸಲೆಂದು ಬೇಡಿಕೊಂಡರು. ಅದರಿಂದ ಸುಪ್ರೀತನಾಗಿ ಜಹ್ನು ಮಹಾಮುನಿಯು, ಭಗೀರಥನು ಆಕೆಯನ್ನು ತಂದ ವೃತ್ತಾಂತವನ್ನು ತಿಳಿದು ಭಗೀರಥನಿಗೂ ದೇವತೆಗಳಿಗೂ ಯಥಾಕ್ರಮದಲ್ಲಿ ಉಪಚಾರವನ್ನು ಮಾಡಿ ತನ್ನ ಕಿವಿಗಳಿಂದ ಗಂಗೆಯನ್ನು ಬಿಟ್ಟು ತನ್ನ ಯಾಗಶಾಲೆಗೆ ಹೋದನು. ಗಂಗೆಯು ಜಹ್ನುಮುನೀಶ್ವರನ ಕಿವಿಯಲ್ಲಿ ಹುಟ್ಟಿದ ಕಾರಣ ಜಾಹ್ನವೀ ಎಂದು ಲೋಕದಲ್ಲಿ ಪ್ರಸಿದ್ಧಳಾದಳು. ಗಂಗೆಯು ಅಲ್ಲಿಂದ ಮುಂದೆ ಭಗೀರಥನ ರಥದ ದಾರಿಗೊಂಡು ಹೋಗಿ ಸಮುದ್ರಮಾರ್ಗದಿಂದ ಪಾತಾಳವನ್ನು ಪ್ರವೇಶಿಸಿದಳು. ಭಗೀರಥನು ರಥಾರೂಢನಾಗಿ ಈಶಾನ್ಯದಿಕ್ಕಿನಲ್ಲಿ ತನ್ನ ಪಿತಾಮಹರ ಭಸ್ಮರಾಶಿಯ ಸಮೀಪಕ್ಕೆ ಅತಿಪ್ರಯಾಸದಿಂದ ಕರೆದುಕೊಂಡು ಹೋಗಲು, ಗಂಗೆಯು ಆ ಭಸ್ಮರಾಶಿಗಳನ್ನು ಕದಡಿ ಸಗರಚಕ್ರವರ್ತಿಯ ಅರುವತ್ತು ಸಾವಿರ ಮಂದಿ ಮಕ್ಕಳನ್ನೂ ಪರಿಶುದ್ಧಮಾಡಿ ಸ್ವರ್ಗಲೋಕವನ್ನೈದಿಸಿದಳು."

---

## ೪೪ ನೆಯ ಅಧ್ಯಾಯ

## ಗಂಗಾಮಹತ್ತ್ವ

"ರಾಮಚಂದ್ರ, ಈ ಪ್ರಕಾರದಲ್ಲಿ ಭಗೀರಥನು ಗಂಗೆಯನ್ನು ಕರೆದುಕೊಂಡು ಪಾತಾಳವನ್ನು ಪ್ರವೇಶಿಸಿ ತನ್ನ ಪಿತೃಗಳ ಭಸ್ಮರಾಶಿಯನ್ನು ಗಂಗಾಪ್ರವಾಹದಿಂದ ತೊಳೆದು ಅವರನ್ನು ಸ್ವರ್ಗಲೋಕಕ್ಕೆ ಕಳುಹಿಸಿದನು. ಆ ಸಮಯದಲ್ಲಿ ಬ್ರಹ್ಮದೇವನು ಆ ರಾಜನ ಸಮೀಪಕ್ಕೆ ಬಂದು ಆತನನ್ನು ಕುರಿತು 'ಭಗೀರಥ, ನಿನ್ನಂಥ ಪುಣ್ಯವಂತನು ಹುಟ್ಟಿದ್ದರಿಂದ ಮಹಾತ್ಮನಾದ ಸಗರಚಕ್ರವರ್ತಿಯ ಅರುವತ್ತುಸಾವಿರ ಕುಮಾರರು ಪಾಪಗಳಿಂದ ಬಿಡುಗಡೆಯನ್ನೈದಿ ಸ್ವರ್ಗಲೋಕವನ್ನೈದಿದರು. ಆ ಪುಣ್ಯದಿಂದ, ನಿನ್ನ ವಂಶದವರಾಗಿ ಹುಟ್ಟಿದ ಸಗರಚಕ್ರವರ್ತಿಯ ಮಕ್ಕಳು, ಈ ಸಮುದ್ರ ಜಲವು ಎಷ್ಟುಪರ್ಯಂತ ಲೋಕದಲ್ಲಿರುವುದೋ ಅಷ್ಟುಪರ್ಯಂತ ದೇವತೆಗಳ ಹಾಗೆ ಸ್ವರ್ಗಲೋಕದಲ್ಲಿರುವರು. ಗಂಗೆಯು ನಿನ್ನ ಹಿರಿಯ ಮಗಳಾಗಿ ಭಾಗೀರಥೀ ಎಂಬ ಹೆಸರಿನಿಂದ ಪ್ರಸಿದ್ಧಳಾಗುವಳು. ಈ ಗಂಗಾಜಲದಿಂದ ನಿನ್ನ ಪಿತಾಮಹರಿಗೆ ತಿಲತರ್ಪಣವನ್ನು ಕೊಡು. ನಿನ್ನ ಪ್ರಸಿದ್ಧಪ್ರತಿಜ್ಞೆಯನ್ನು ಮೀರಬೇಡ. ಸಗರಚಕ್ರವರ್ತಿಯೂ ನಿನ್ನ ಹಾಗೆ ಕೀರ್ತಿಯನ್ನು ಪಡೆಯಲಿಲ್ಲ. ನಿನ್ನ ಅಜ್ಜನಾದ ಅಂಶುಮಂತನು ಗಂಗೆಯನ್ನು ತರುವುದಾಗಿ ಪ್ರತಿಜ್ಞೆಯನ್ನು ಮಾಡಿ ಆ ಪ್ರತಿಜ್ಞೆಯನ್ನು ನೆರವೇರಿಸಲು ಶಕ್ತನಾಗಲಿಲ್ಲ. ನಿನ್ನ ತಂದೆಯಾದ ದಿಲೀಪಮಹಾರಾಯನೂ ಆ ರೀತಿಯಲ್ಲಿಯೇ ಗಂಗೆಯನ್ನು ತರುವುದಾಗಿ ಪ್ರತಿಜ್ಞೆಯನ್ನು ಮಾಡಿ ತರುವುದಕ್ಕೆ ಶಕ್ತನಾಗದೆ ಸ್ವರ್ಗಸ್ಥನಾದನು. ನೀನು ಆ ಪ್ರತಿಜ್ಞೆಯನ್ನು ವಹಿಸಿ ಪರಿಪಾಲಿಸಿ ಲೋಕದಲ್ಲಿ ಮಹಾಪ್ರಖ್ಯಾತಿಯನ್ನು ಪಡೆದೆ ನೀನು ಗಂಗೆಯನ್ನು ತಂದು ಮಹತ್ತಾದ ಧರ್ಮವನ್ನು ಸಾಧಿಸಿದೆ. ಪವಿತ್ರವಾದ ಗಂಗಾಜಲದಲ್ಲಿ ಸ್ನಾನವನ್ನು ಮಾಡಿ ಪಿತೃತರ್ಪಣಗಳನ್ನು ಕೊಟ್ಟು ಅಪರಿಮಿತವಾದ ಪುಣ್ಯಫಲಗಳನ್ನು ಅನುಭವಿಸು. ನಿನಗೆ ಅನೇಕ ಶ್ರೇಯಸ್ಸಾಗಲಿ! ನಾನು ಸ್ವರ್ಗಲೋಕಕ್ಕೆ ಹೋಗುತ್ತೇನೆ. ನೀನು ನಿನ್ನ ಪಟ್ಟಣಕ್ಕೆ ಹೋಗು' ಎಂದು ಹೇಳಿ ಭಗೀರಥನನ್ನು ಕಳುಹಿಸಿ ತನ್ನ ಲೋಕಕ್ಕೆ ಬಿಜಯಂಗೈದನು.

ಬಳಿಕ ಭಗೀರಥನು ಗಂಗೆಯಲ್ಲಿ ಸ್ನಾನವನ್ನು ಮಾಡಿ ತನ್ನ ಪಿತೃಪಿತಾಮಹಪ್ರಪಿತಾಮಹಾದಿಗಳಿಗೆ ತರ್ಪಣಾದಿಗಳನ್ನು ಕೊಟ್ಟು ಶುಚಿಯಾಗಿ, ರಥಾರೂಢನಾಗಿ ತನ್ನ ಪಟ್ಟಣವನ್ನು ಪ್ರವೇಶಿಸಿ ಸಮಸ್ತವಸ್ತುಗಳಿಂದ ಸಂಪನ್ನನಾಗಿ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಆತನ ರಾಜ್ಯದಲ್ಲಿದ್ದ ಪ್ರಜೆಗಳು ವ್ಯಾಧಿ ಶೋಕಾದಿಗಳಿಲ್ಲದೆ ಧನಧಾನ್ಯಸಂಪನ್ನರಾಗಿ ಸುಖದಲ್ಲಿದ್ದರು ರಘುನಾಥ, ಗಂಗೆಯ ಮಹಿಮೆಯನ್ನು ವಿಸ್ತಾರವಾಗಿ ನಿನಗೆ ಹೇಳಿದೆನು. ನಿನಗೆ ಅನೇಕ ಶ್ರೇಯಸ್ಸಾಗಲಿ! ಸಂಧ್ಯಾಕಾಲವಾಯಿತು. ಈ ಪುಣ್ಯಕಥೆಯು ಧನಧಾನ್ಯಗಳನ್ನೂ ಕೀರ್ತಿಯನ್ನೂ ಆಯುಷ್ಯವನ್ನೂ ಮಕ್ಕಳನ್ನೂ ಸ್ವರ್ಗಫಲವನ್ನೂ ಕೊಡುವಂಥದು. ಆದ್ದರಿಂದ ಯಾವ ಪುಣ್ಯಾತ್ಮನು ಬ್ರಾಹ್ಮಣರ ಸಭೆಯಲ್ಲಿಯೂ ಭಕ್ತರಾದ ಇತರ ಜನರ ಸಮೂಹಗಳಲ್ಲಿಯೂ ಈ ಪುಣ್ಯಕಥೆಯನ್ನು ಕೇಳಿಸುವನೋ ಆತನ ಪಿತೃಗಳು ತೃಪ್ತರಾಗುವರು ಸಮಸ್ತದೇವತೆಗಳೂ ಸಂತುಷ್ಟರಾಗುವರು. ಈ ಪುಣ್ಯಕಥೆಯನ್ನು ಯಾವನು ಏಕಾಗ್ರಚಿತ್ತದಲ್ಲಿ ಕೇಳುವನೋ ಆ ಪುಣ್ಯಾತ್ಮನು ಸಮಸ್ತ ಇಷ್ಟಾರ್ಥವನ್ನೂ ಪಡೆಯುವನು. ಅದರಿಂದ ಸಮಸ್ತಪಾಪಗಳೂ ಕ್ಷಯವಾಗುವುವು. ಆಯುಷ್ಯವೂ ಕೀರ್ತಿಯೂ ದಿನದಿನಕ್ಕೆ ಹೆಚ್ಚುವುವು" ಎಂದು ವಿಶ್ವಾಮಿತ್ರಮುನೀಶ್ವರನು ನಿರೂಪಿಸಿದನು.

೪೫ ನೆಯ ಅಧ್ಯಾಯ

## ಸುರಾಸುರರು ಸಮುದ್ರಮಥನೆ ಮಾಡಿದುದು

ಆಮೇಲೆ ರಘುನಾಥನು ಲಕ್ಷ್ಮಣಸಮೇತನಾಗಿ ವಿಶ್ವಾಮಿತ್ರಮುನೀಶ್ವರನ ವಾಕ್ಯವನ್ನು ಕೇಳಿ ಹರ್ಷದಿಂದ ಆಶ್ಚರ್ಯಪಡುತ್ತ "ವಿಶ್ವಾಮಿತ್ರಮುನಿಗಳೆ, ಗಂಗೆಯು ಸ್ವರ್ಗಲೋಕದಿಂದ ಬಂದ ವೃತ್ತಾಂತವನ್ನೂ ಸಮುದ್ರವು ಪರಿಪೂರ್ಣವಾದ ವೃತ್ತಾಂತವನ್ನೂ ನಿಮ್ಮಿಂದ ಕೇಳಿದೆನು. ಈ ಕಥಾ ವೃತ್ತಾಂತವನ್ನು ಕೇಳಿ ಸಂತೋಷವಾಯಿತು" ಎಂದು ಹೇಳಿದನು. ಅಷ್ಟರಲ್ಲಿಯೇ ಸಾಯಂಕಾಲ ವಾಗಲು ಲಕ್ಷ್ಮಣಸಮೇತನಾಗಿ ಗಂಗಾಮಹತ್ತ್ವವನ್ನು ಅನುಸಂಧಾನಮಾಡುತ್ತ, ಆ ರಾತ್ರಿಯನ್ನು ಕಳೆದನು ಪ್ರಾತಃಕಾಲದಲ್ಲೆದ್ದು ಸ್ನಾನಸಂಧ್ಯಾವಂದನೆಗಳನ್ನು ತೀರಿಸಿಕೊಂಡು ವಿಶ್ವಾಮಿತ್ರ ಮುನಿಯನ್ನು ಕುರಿತು "ಸ್ವಾಮಿ, ನೀವು ಹೇಳಿದ ಕಥೆಯನ್ನು ಧ್ಯಾನಮಾಡುತ್ತಿದ್ದ ನನಗೆ ರಾತ್ರಿಯು ಒಂದು ಕ್ಷಣವಾಗಿ ಕಳೆಯಿತು. ಇನ್ನು ನಾವು ಗಂಗೆಯನ್ನು ದಾಟಿಹೋಗೋಣ" ಎಂದು ನುಡಿದು ಅಲ್ಲಿದ್ದ ಸಮಸ್ತ ಋಷಿಗಳನ್ನೂ ನೋಡಿ ಅವರಿಂದ ಸತ್ಕಾರಗಳನ್ನು ಪಡೆದು ಅವರಿಗೆ ಅಭಿವಾದನೆ ಗಳನ್ನು ಮಾಡಿದನು. ಅನಂತರ ಅವರೆಲ್ಲರೂ ಬಿಳುಪಾದ ಪರ್ವತದೋಪಾದಿಯಲ್ಲಿ ಅತ್ಯುನ್ನತವಾದ ಗಂಗಾತೀರದ ಮಳಲ ರಾಶಿಯನ್ನು ಹತ್ತಿ ಆ ಸ್ಥಳದಲ್ಲಿ ಋಷಿಗಳು ನಾವೆಗಳನ್ನು ತರಿಸಲು, ಆ ನಾವೆಗಳ ಮೇಲೆ ಗಂಗೆಯನ್ನು ದಾಟಿ ಬಡಗಣ ತೀರಕ್ಕೆ ಹೋಗಿ ಸೇರಿದರು ಅಲ್ಲಿ ಅತಿಮನೋಹರ ವಾಗಿ ಅಮರಾವತಿಗೆ ಸಮಾನವಾಗಿದ್ದ ವಿಶಾಲ ಎಂಬ ಪಟ್ಟಣವನ್ನು ಕಂಡು ಶ್ರೀರಾಮನು ಕೈಮುಗಿದುಕೊಂಡು ವಿಶ್ವಾಮಿತ್ರಮುನಿಯನ್ನು ಕುರಿತು "ಮಹಾತ್ಮರೆ, ಈ ಉತ್ತಮವಾದ ವಿಶಾಲಪುರಿಯ ಮಹಿಮೆಯನ್ನೂ ಈ ನಗರದಲ್ಲಿರುವ ರಾಜನ ಚರಿತ್ರವನ್ನೂ ಕೇಳುವುದಕ್ಕೆ ನನಗೆ ಇಚ್ಛೆಯಾಗುತ್ತದೆ" ಎಂದು ನುಡಿದನು,

ಆ ವಾಕ್ಯವನ್ನು ಕೇಳಿದಂಥ ವಿಶ್ವಾಮಿತ್ರಮುನೀಶ್ವರನು ಹೀಗೆ ಹೇಳಿದನು: "ಶ್ರೀರಾಮ, ಕೃತಯುಗದಲ್ಲಿ ಮಹಾಬಲವಂತರೂ ಅತಿಪರಾಕ್ರಮಿಗಳೂ ಧಾರ್ಮಿಕರೂ ಆದ ಅದಿತಿಯ ಮಕ್ಕಳೂ ದಿತಿಯ ಮಕ್ಕಳೂ ಇದ್ದರು. ಅವರು ಇತ್ತಂಡದವರೂ ಒಂದುಗೂಡಿ ಸಮುದ್ರಮಥನವನ್ನು ಮಾಡಿ ಅಮೃತವನ್ನು ಪಡೆದು ಅದರಿಂದ ಜರಾಮರಣರಹಿತರಾಗಬೇಕೆಂದು ನಿಶ್ಚಯಿಸಿ ಮಂದರವೆಂಬ ಪರ್ವತವನ್ನು ಕಡೆಗೋಲಾಗಿಯೂ ವಾಸುಕಿಯನ್ನು ಹಗ್ಗವಾಗಿಯೂ ಮಾಡಿಕೊಂಡು ಕ್ಷೀರಸಮುದ್ರವನ್ನು ಮಥನಮಾಡುತ್ತಿರಲು, ಸಾವಿರ ವರ್ಷಗಳಾದ ಮೇಲೆ ದಂಡಕಮಂಡಲುಸಹಿತನಾಗಿ ಧನ್ವಂತರಿಯು ಅವತರಿಸಿದನು. ಆಮೇಲೆ ಅತ್ಯಂತ ರೂಪಲಾವಣ್ಯ ಗಳುಳ್ಳ ಅರುವತ್ತುಕೋಟಿ ಮಂದಿ ಅಪ್ಸರಃಸ್ತ್ರೀಯರು ಜನಿಸಿದರು. ಅವರು ಸಮುದ್ರೋದಕ ಸಾರದಿಂದ ಜನಿಸಿದ್ದರಿಂದ ಅಪ್ಸರಸ್ಸುಗಳೆಂದು ಪ್ರಸಿದ್ಧರಾದರು. ಬಳಿಕ ಆ ಸ್ತ್ರೀಯರಿಗೆ ಚಾಕರಿ ಮಾಡುವಂಥ ಸ್ತ್ರೀಯರು ಲೆಕ್ಕವಿಲ್ಲದೆ ಜನಿಸಿದರು. ಆ ಅಪ್ಸರಃಸ್ತ್ರೀಯರನ್ನು ದೇವದಾನವರು ತಮ್ಮ ಪತ್ನಿಯರೆಂದು ವಿಶಿಷ್ಟರೀತಿಯಲ್ಲಿ ಅಂಗೀಕರಿಸಲಿಲ್ಲ. ಆದ್ದರಿಂದ ಅವರು ಎಲ್ಲರಿಗೂ ಸಾಧಾರಣ ಸ್ತ್ರೀಯರಾದರು. ಆಮೇಲೆ ವರುಣನ ಮಗಳಾದ ವಾರುಣಿ ಎಂಬವಳು ಜನಿಸಿ ತನಗೊಬ್ಬ ಒಡೆಯನಾಗಬೇಕೆಂದು ಮನಸ್ಸಿನಲ್ಲಿ ಚಿಂತಿಸಿದಳು ಅವಳೇ ಸುರೆಯು. ಅವಳನ್ನು ಅದಿತಿಯ ಮಕ್ಕಳು ಅಂಗೀಕರಿಸಿದರು. ದಿತಿಯ ಮಕ್ಕಳು ಅಂಗೀಕರಿಸಲಿಲ್ಲ. ಆದಕಾರಣ

ಸುರಾಸ್ವರೂಪಳಾದ ವಾರುಣಿಯನ್ನು ಅಂಗೀಕರಿಸಿದ ಅದಿತಿಯ ಮಕ್ಕಳು ಸುರರಾದರು. ಅಂಗೀಕರಿಸದೆ ಇದ್ದ ದಿತಿಯ ಮಕ್ಕಳು ಅಸುರರಾದರು ಈ ರೀತಿಯಲ್ಲಿ ಅದಿತಿಯ ಮಕ್ಕಳು ವಾರುಣಿಯನ್ನು ಪರಿಗ್ರಹಿಸಿ ಸಂತೋಷವನ್ನು ಪಡೆದರು ಆಮೇಲೆ ಉಚ್ಚೈಃಶ್ರವಸ್ಸೆಂಬ ಅಶ್ವರತ್ನವೂ ಮಣಿರತ್ನವಾದ ಕೌಸ್ತುಭವೂ ಹುಟ್ಟಿದವು. ಅನಂತರದಲ್ಲಿ ಅಮೃತವು ಹುಟ್ಟಿತು ಆ ಅಮೃತಕ್ಕೋಸ್ಕರ ಸುರರಿಗೂ ಅಸುರರಿಗೂ ಮಹಾ ಭಯಂಕರವಾಗಿ, ಮೂರು ಲೋಕಗಳಿಗೂ ಅತ್ಯದ್ಭುತವಾದ ಯುದ್ಧವಾಯಿತು ಆ ಸಮಯದಲ್ಲಿ ಮಹಾಬಲವಂತನಾದ ನಾರಾಯಣನು ಮೋಹಿನೀರೂಪವನ್ನು ತಾಳಿ ಅಮೃತವನ್ನು ಕದ್ದುಕೊಂಡು ಹೋದನು. ಆ ಬಳಿಕ ನಿತ್ಯ ಸ್ವರೂಪನಾಗಿ ಪರಮಪುರುಷನಾದ ನಾರಾಯಣನೊಡನೆ ಕೂಡಿ ಅದಿತಿಯ ಮಕ್ಕಳಾದ ದೇವತೆಗಳು ದಿತಿಯ ಮಕ್ಕಳಾದ ಅಸುರರನ್ನು ಯುದ್ಧದಲ್ಲಿ ಸಂಹರಿಸಲು ದೇವೇಂದ್ರನು ಸಿದ್ಧಚಾರಣರು ಮೊದಲಾದ ದೇವತೆಗಳನ್ನು ಕೂಡಿಕೊಂಡು ಅಮರಾವತೀ ಪಟ್ಟಣದಲ್ಲಿ ಸ್ವರ್ಗಲೋಕವನ್ನು ಪಾಲಿಸಿಕೊಂಡು ಸುಖದಿಂದಿದ್ದನು."



೪೬ ನೆಯ ಅಧ್ಯಾಯ

## ದಿತೀದೇವಿಯ ತಪಸ್ಸು

"ಈ ಪ್ರಕಾರವಾಗಿ ಅಸುರರು ಕ್ಷಯವನ್ನೈದಲು ಅವರ ತಾಯಿಯಾದ ದಿತಿಯು ಪುತ್ರಶೋಕದಿಂದ ದುಃಖಾಕ್ರಾಂತಳಾಗಿ, ಮರೀಚಿಬ್ರಹ್ಮನ ಮಗನಾಗಿ ತನಗೆ ಗಂಡನಾದ ಕಶ್ಯಪನನ್ನು ನೋಡಿ 'ಸ್ವಾಮೀ, ನಿಮ್ಮ ಮಕ್ಕಳೂ ಮಹಾಬಲವಂತರೂ ಆದ ದೇವತೆಗಳಿಂದ ನನ್ನ ಮಕ್ಕಳಾದ ಅಸುರರು ಹತರಾದರು. ಅದರಿಂದ ನಾನು ಮಕ್ಕಳಿಲ್ಲದವಳಾದೆನು. ನನಗೆ ದೇವೇಂದ್ರನನ್ನು ಕೊಲ್ಲುವಂಥವನೂ ದೀರ್ಘಾಯುಷ್ಮಂತನೂ ಮಹಾಪರಾಕ್ರಮಿಯೂ ಆದ ಒಬ್ಬ ಮಗನನ್ನು ಕೊಡಬೇಕು ನಾನು ಸ್ವಾಮಿಯನ್ನು ಕುರಿತು ತಪಸ್ಸನ್ನು ಮಾಡುವೆನು. ನನಗೆ ಉತ್ತಮನೂ ಬಲವಂತನೂ ಸಕಲಸ್ಥಿತಿಯನ್ನು ಬಲ್ಲಂಥವನೂ ದೇವೇಂದ್ರನನ್ನು ಸಂಹರಿಸುವಂಥವನೂ ಆದ ಮಗನನ್ನು ಕೊಡಬೇಕು' ಎಂದು ಕೇಳಿದಳು. ಕಶ್ಯಪನು ಹಾಗೆಯೇ ಆಗಲೆಂದು ಅಂಗೀಕರಿಸಿ ದಿತಿಯನ್ನು ಕುರಿತು 'ನೀನು ಅತ್ಯಂತ ಶುಚಿಯಾಗಿ ತಪಸ್ಸನ್ನು ಮಾಡು. ಸಾವಿರ ವರುಷಗಳು ಶುಚಿಯಾಗಿ ತಪಸ್ಸನ್ನು ಮಾಡಿದರೆ ಬಲವಂತನಾಗಿ ಯುದ್ಧರಂಗದಲ್ಲಿ ದೇವೇಂದ್ರನನ್ನು ಕೊಲ್ಲುವಂಥ ಸಾಮರ್ಥ್ಯವುಳ್ಳ ಮಗನನ್ನು ಪಡೆಯುವೆ. ನಿನಗೆ ಶ್ರೇಯಸ್ಸಾಗಲಿ!' ಎಂದು ನುಡಿದು ತಪಸ್ಸಿಗೆ ತೆರಳಿದನು.

ಆಮೇಲೆ ದಿತಿಯು ಅತಿಹರ್ಷಪಟ್ಟು ಕುಶಪ್ಲವ ಕ್ಷೇತ್ರದಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದಳು. ಆಗ ದೇವೇಂದ್ರನು ತನ್ನ ಬಲತಾಯಿಯ ಸಮೀಪಕ್ಕೆ ಬಂದು ಆಕೆಗೆ ಸೇವಾ ಸತ್ಕಾರಗಳನ್ನು ಅತಿವಿನಯದಿಂದ ಮಾಡುತ್ತ ನಿತ್ಯದಲ್ಲಿಯೂ ಫಲ ಪುಷ್ಪ ದರ್ಭೆ ಕಾಷ್ಠ ಉದಕ ಅಗ್ನಿ ಮೊದಲಾದ ವಸ್ತುಗಳನ್ನು ತಂದುಕೊಡುತ್ತ ಆಕೆಯ ಬಳಲಿಕೆಯನ್ನು ಪರಿಹರಿಸುತ್ತಿದ್ದನು. ಈ ಪ್ರಕಾರದಲ್ಲಿ ಹತ್ತು ವರುಷ ಕಡಿಮೆಯಾಗಿ ಸಾವಿರ ವರುಷಗಳು ಕಳೆಯಲು ದಿತಿಯು ತನ್ನ ಸವತಿಯಾದ ಅದಿತಿಯ ಮಗನಾದ ದೇವೇಂದ್ರನು ಮಾಡುತ್ತಿದ್ದ ಸೇವೆಯನ್ನು

ಕಂಡು ಅತಿಹರ್ಷಪಟ್ಟು ಆತನನ್ನು ಕುರಿತು 'ದೇವೇಂದ್ರ, ನಾನು ಮಕ್ಕಳಿಲ್ಲದೆ ನಿನ್ನ ತಂದೆಯಾದ ಕಶ್ಯಪನನ್ನು ಪ್ರಾರ್ಥನೆ ಮಾಡಿ ಸಂತಾನವಾಗಬೇಕೆಂದು ಬೇಡಿಕೊಳ್ಳಲು ಆತನು ಸಾವಿರ ವರುಷಗಳು ಶುಚಿಯಾಗಿ ತಪಸ್ಸನ್ನು ಮಾಡಿದರೆ ಮಗನಾಗುವನೆಂದು ವರವನ್ನು ಕೊಟ್ಟನು. ಆದ್ದರಿಂದ ನಿನಗೆ ಸಹಾಯಕನಾಗಿ ತ್ರಿಲೋಕಗಳನ್ನೂ ಜಯಿಸುವಂಥ ಕುಮಾರನಾಗಬೇಕೆಂದು ತಪಸ್ಸನ್ನು ಮಾಡುತ್ತಾ ಇದ್ದೇನೆ. ಆ ಸಾವಿರ ವರುಷಗಳಿಗೆ ಇನ್ನು ಹತ್ತು ವರುಷಗಳು ಕಡಿಮೆಯಾಗಿವೆ. ಆ ಹತ್ತು ವರುಷಗಳಾದ ಮೇಲೆ ನಿನಗೆ ಒಬ್ಬ ತಮ್ಮನು ಜನಿಸುವನು' ಎಂದು ನುಡಿದು ಮಧ್ಯಾಹ್ನ ಕಾಲದಲ್ಲಿ ನಿದ್ರಾತಿಶಯದಿಂದ ಕಾಲನ್ನು ನೀಡುವ ಕಡೆಯಲ್ಲಿ ಶಿರಸ್ಸನ್ನಿರಿಸಿಕೊಂಡೂ ತಲೆದಿಂಬಿನ ಮೇಲೆ ಕಾಲನ್ನು ನೀಡಿಕೊಂಡೂ ನಿದ್ರೆಮಾಡಿದಳು. ಈ ರೀತಿಯಲ್ಲಿ ನಿದ್ರೆಮಾಡುವುದು ಧರ್ಮಶಾಸ್ತ್ರದಲ್ಲಿ ನಿಷಿದ್ಧವು. ಹಾಗೆಯೇ ಆಕೆಯು ಅಶುಚಿಯಾಗಿರುವುದನ್ನು ನೋಡಿ ದೇವೇಂದ್ರನು ಆಕೆಯ ಗರ್ಭಕ್ಕೆ ವಿಘ್ನವನ್ನು ಮಾಡಬೇಕೆಂದೆಣಿಸಿ ಆಕೆಯ ಶರೀರವನ್ನು ಹೊಕ್ಕು ಹೊಟ್ಟೆಯಲ್ಲಿದ್ದ ಗರ್ಭವನ್ನು ಏಳುಭಾಗಗಳಾಗಿ ತನ್ನ ವಜ್ರಾಯುಧದಿಂದ ಕತ್ತರಿಸಿ ರೋದನ ಮಾಡುತ್ತಿದ್ದ ಆ ಗರ್ಭವನ್ನು ಭೇದಿಸಿದನು! ಆಮೇಲೆ ದಿತಿಯು ಎಚ್ಚತ್ತು ಗರ್ಭವನ್ನು ಕೊಲ್ಲಬಾರದೆಂದು ನುಡಿಯಲು ದೇವೇಂದ್ರನು ತಾಯಿಯ ಮಾತನ್ನು ಕೇಳಿ ಗರ್ಭವನ್ನು ಅಲ್ಲಿಯೇ ಇರಿಸಿ ಹೊರಕ್ಕೆ ಬಂದು ವಜ್ರಾಯುಧಸಹಿತನಾಗಿ ನಿಂತುಕೊಂಡು ಆಕೆಯನ್ನು ಕುರಿತು 'ತಾಯೆ, ನೀನು ತಲೆದಿಂಬಿನಮೇಲೆ ಪಾದವನ್ನು ನೀಡಿಕೊಂಡೂ ಪಾದಗಳನ್ನು ನೀಡುವ ಕಡೆಗೆ ಶಿರಸ್ಸನ್ನಿರಿಸಿಕೊಂಡೂ ಮಲಗಿದುದು ಶಾಸ್ತ್ರವಿರುದ್ಧವಾದ್ದರಿಂದ ನಿನ್ನ ಶರೀರವು ಅಶುಚಿಯಾಯಿತು. ಇದುವರೆಗೂ ನೀನು ನನ್ನ ತಂದೆಯು ನಿರೂಪಿಸಿದ ರೀತಿಯಲ್ಲಿ ಶುಚಿಯಾಗಿದ್ದದ್ದರಿಂದ ನಾನು ಸಮಯವನ್ನು ನೋಡಿಕೊಂಡಿದ್ದೆನು. ಈಗ ಸಮಯವು ಕೂಡಿದ್ದರಿಂದ ಯುದ್ಧರಂಗದಲ್ಲಿ ದೇವೇಂದ್ರನನ್ನು ಕೊಲ್ಲುವುದಕ್ಕಾಗಿ ಉಂಟಾದ ಗರ್ಭವನ್ನು ಏಳುಭಾಗವಾಗಿ ವಜ್ರಾಯುಧದಿಂದ ಕತ್ತರಿಸಿದೆನು. ನನ್ನ ಅಪರಾಧವನ್ನು ಕ್ಷಮಿಸು' ಎಂದು ಸಂತವಿಟ್ಟನು."



## ೪೭ ನೆಯ ಅಧ್ಯಾಯ

## ಸಪ್ತಮರುತ್ತುಗಳ ವೃತ್ತಾಂತ

"ಆಮೇಲೆ ದಿತಿಯು ತನ್ನ ಗರ್ಭವು ಏಳುಭಾಗವಾಗಿ ಕತ್ತರಿಸಿಹೋದುದಕ್ಕಾಗಿ ಅತ್ಯಂತ ದುಃಖಿತಳಾಗಿ 'ಎಲೈ ದೇವೇಂದ್ರನೆ, ಈ ಗರ್ಭವು ನನ್ನ ಅಪರಾಧದಿಂದಲೇ ಏಳು ಭಾಗಗಳಾಗಿ ನಿಷ್ಫಲವಾಯಿತಲ್ಲದೆ ನಿನ್ನಲ್ಲಿ ಅಪರಾಧವಿಲ್ಲ. ಈ ಗರ್ಭದ ಏಳು ಭಾಗಗಳೂ ಮರುತ್ತುಗಳೆಂಬ ದೇವತೆಗಳಾಗಿ ಏಳು ಸ್ಥಾನಗಳಲ್ಲಿ ಸಂಚರಿಸುತ್ತ ದೇವಲೋಕದಲ್ಲಿರಲಿ. ಈ ಏಳು ಭಾಗಗಳೂ ಏಳು ದಿವ್ಯಸ್ವರೂಪಗಳುಳ್ಳವರಾಗಲಿ. ಅವರೊಳಗೆ ಒಬ್ಬನು ಬ್ರಹ್ಮಲೋಕಕ್ಕೆ ಹೋಗಲಿ; ಮತ್ತೊಬ್ಬನು ಇಂದ್ರಲೋಕಕ್ಕೆ ಹೋಗಲಿ, ಮೂರನೆಯವನು ದಿವ್ಯವಾಯುವೆನ್ನಿಸಿಕೊಂಡು ಸ್ವರ್ಗಲೋಕದಲ್ಲಿರಲಿ; ಮಿಕ್ಕ ನಾಲ್ವರು ಮೂಡಲಾದಿಯಾಗಿ ನಾಲ್ಕು ದಿಕ್ಕುಗಳಿಗೂ ಹೋಗಲಿ! ಈ ಕ್ರಮದಲ್ಲಿ ಈ ಏಳು ಭಾಗಗಳೂ ಮರುತ್ತುಗಳಾಗಿ ಏಳು ಸ್ಥಾನಗಳನ್ನು ಪರಿಪಾಲಿಸಿಕೊಂಡಿರಲಿ! ನೀನು ನನ್ನ ಗರ್ಭದಲ್ಲಿರುವಾಗ ಏಳುಭಾಗಗಳಾದ ಗರ್ಭವನ್ನು 'ಮಾ ರುದಃ' * ಎಂದು ನುಡಿದೆಯಾದ್ದರಿಂದ ಲೋಕದಲ್ಲಿ ಇದರಿಂದ ಹುಟ್ಟುವ ಏಳು ಮಂದಿಗೂ ಮರುತ್ತುಗಳು ಎಂದು ಹೆಸರಾಗಲಿ' ಎಂದು ಹೇಳಿದಳು.

* ಮಾ ರುದಃ—ಅಳಬೇಡ.

ದೇವೇಂದ್ರನು ತನ್ನ ಬಲತಾಯಿಯಾದ ದಿತಿಯ ಮಾತನ್ನು ಕೇಳಿ ಕೈಮುಗಿದುಕೊಂಡು 'ತಾಯೆ, ನಿನ್ನ ಗರ್ಭದಲ್ಲಿ ಜನಿಸುವ ಏಳು ಮಂದಿಯೂ ಮರುತ್ತುಗಳೆಂಬ ಹೆಸರಿನಿಂದ ಏಳು ಸ್ಥಾನಗಳನ್ನು ರಕ್ಷಿಸಿಕೊಂಡಿರಲಿ!' ಎಂದು ಹೇಳಿ ಕೃತಕೃತ್ಯನಾಗಿ ಸ್ವರ್ಗಲೋಕಕ್ಕೆ ಹೋಗಿ ಸುಖದಿಂದಿದ್ದನು. ರಘುನಾಥ, ಈ ದೇಶದಲ್ಲಿ ದೇವೇಂದ್ರನು ತನ್ನ ತಾಯಿಯಾದ ದಿತಿಯ ಸೇವೆಯನ್ನು ಮಾಡಿಕೊಂಡಿದ್ದದ್ದರಿಂದ ಈ ಸ್ಥಾನವು ಮಹಾಪವಿತ್ರವಾದುದು. ಇಕ್ಷ್ವಾಕು ಎಂಬ ರಾಜನಿಗೆ ಅಲಂಬುಸಾ ಎಂಬ ಸ್ತ್ರೀಯಲ್ಲಿ ವಿಶಾಲನೆಂಬ ಕುಮಾರನು ಜನಿಸಿದನು. ಆತನು ಮಹಾ ಪ್ರಸಿದ್ಧನು. ಆತನು ತನ್ನ ಹೆಸರಿನಿಂದ ವಿಶಾಲಪುರೀ ಎಂಬ ಪಟ್ಟಣವನ್ನು ನಿರ್ಮಿಸಿ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದನು ವಿಶಾಲನಿಗೆ ಪ್ರಸಿದ್ಧನೂ ಬಲವಂತನೂ ಆದ ಹೇಮಚಂದ್ರನು ಜನಿಸಿದನು ಹೇಮಚಂದ್ರರಾಯನಿಗೆ ಪ್ರಖ್ಯಾತನಾದ ಸುಚಂದ್ರನೆಂಬ ಮಗನು ಉದಯಿಸಿದನು. ಸುಚಂದ್ರನಿಗೆ ಧೂಮ್ರಾಶ್ವನೆಂಬ ಮಗನು ಜನಿಸಿದನು. ಆತನು ಮಹಾವಿಖ್ಯಾತನು ಧೂಮ್ರಾಶ್ವನಿಗೆ ಸೃಂಜಯನೆಂಬ ಮಗನಾದನು. ಸೃಂಜಯನಿಗೆ ಮಹಾಪ್ರತಾಪಶಾಲಿಯಾಗಿ ಐಶ್ವರ್ಯವಂತನಾದ ಸಹದೇವನೆಂಬ ಕುಮಾರನು ಜನಿಸಿದನು. ಸಹದೇವನಿಗೆ ಅತ್ಯಂತ ಧರ್ಮಾತ್ಮನಾದ ಕುಶಾಶ್ವನೆಂಬ ಮಗನು ಜನಿಸಿದನು. ಕುಶಾಶ್ವನಿಗೆ ಅತ್ಯಂತ ತೇಜಸ್ವಿಯಾದ ಸೋಮದತ್ತನೆಂಬ ಕುಮಾರನು ಹುಟ್ಟಿದನು. ಸೋಮದತ್ತನಿಗೆ ಕಾಕುತ್ಸ್ಥನೆಂಬ ಪುತ್ರನು ಜನಿಸಿದನು. ಕಾಕುತ್ಸ್ಥನಿಗೆ ದೇವೇಂದ್ರ ಸಮಾನನಾಗಿ ಪರಾಕ್ರಮಿಯಾದ ಸುಮತಿಯೆಂಬ ರಾಜನು ಜನಿಸಿ ಈಗ ವಿಶಾಲಪುರಿಯಲ್ಲಿ ರಾಜ್ಯವನ್ನಾಳಿಕೊಂಡಿದ್ದಾನೆ. ಇಕ್ಷ್ವಾಕುವಿನ ಕೃಪೆಯಿಂದ ವಿಶಾಲಪುರಿಯ ಅರಸುಗಳೆಲ್ಲರೂ ಧರ್ಮಾತ್ಮರಾಗಿ ಅತಿಪರಾಕ್ರಮಿಗಳಾಗಿ ದೀರ್ಘಾಯುಷ್ಮಂತರಾಗಿರುವರು. ಇದೀಗ ಈ ದೇಶದ ವೃತ್ತಾಂತವು! ರಘುನಾಥ, ನಾವು ಈ ರಾತ್ರಿ ವಿಶಾಲಪುರಿಯಲ್ಲಿದ್ದು ನಾಳೆ ಜನಕರಾಯನ ಪಟ್ಟಣಕ್ಕೆ ಹೋಗಿ ಆತನನ್ನು ನೋಡಿಕೊಂಡು ಬರೋಣ" ಎಂದು ವಿಶ್ವಾಮಿತ್ರನು ನುಡಿದನು

ಆ ಸಮಯದಲ್ಲಿ ವಿಶಾಲಪುರಿಯಲ್ಲಿದ್ದ ಸುಮತಿ ಎಂಬ ರಾಜನು, ವಿಶ್ವಾಮಿತ್ರಮುನೀಶ್ವರನು ಬಂದ ವೃತ್ತಾಂತವನ್ನು ಕೇಳಿ ತನ್ನ ಪುರೋಹಿತ ಬಂಧುಗಳ ಸಹಿತ ಇದಿರುಗೊಂಡು ಅಭಿವಂದಿಸಿದನು. ಅನಂತರ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಕುಶಲವಾರ್ತೆಯನ್ನು ಕೇಳಿ ಕೈಮುಗಿದುಕೊಂಡು "ಮುನೀಶ್ವರರೆ, ನಿಮ್ಮ ಬರುವಿಕೆಯಿಂದ ನಿಮ್ಮ ಕೃಪೆಗೆ ನಾನು ಪಾತ್ರನಾಗಿ ಧನ್ಯನಾದೆನು ನೀವು ನನ್ನ ದೃಷ್ಟಿಗೋಚರರಾದ ಕಾರಣ ಲೋಕದಲ್ಲಿ ನನ್ನಂಥ ಪುಣ್ಯಾತ್ಮನಿಲ್ಲ" ಎಂದು ನುಡಿದು ಅತಿಥಿ ಸತ್ಕಾರಗಳನ್ನು ಮಾಡಿದನು



## ೪೪ನೆಯ ಅಧ್ಯಾಯ

## ಅಹಲ್ಯಾದೇವಿಗೆ ಶಾಪಬಂದ ವೃತ್ತಾಂತ

ಅನಂತರ ಸುಮತಿಯು ವಿಶ್ವಾಮಿತ್ರನನ್ನು ಕುರಿತು "ಮುನೀಶ್ವರರೆ, ಇವರು ಯಾರು? ಈ ಕುಮಾರರು ದೇವೇಂದ್ರನಿಗೆ ಸಮಾನ ಪರಾಕ್ರಮವುಳ್ಳವರಾಗಿ ಗಜಸಿಂಹಗಳ ಹಾಗೆಯೂ ವೃಷಭ ಹೆಬ್ಬುಲಿಗಳ ಹಾಗೆಯೂ ಇದ್ದಾರೆ ಇವರು ಮಹಾಪರಾಕ್ರಮವುಳ್ಳವರಾಗಿ ಕಾಣುತ್ತಾರೆ. ಕಮಲದ ಎಸಳುಗಳೋಪಾದಿಯಲ್ಲಿ ವಿಶಾಲವಾದ ಕಣ್ಣುಗಳುಳ್ಳವರಾಗಿ, ಖಡ್ಗ ಬಿಲ್ಲು ಬತ್ತಳಿಕೆ

ಗಳನ್ನು ಧರಿಸಿಕೊಂಡಿದ್ದಾರೆ ರೂಪದಲ್ಲಿ ಅಶ್ವಿನೀದೇವತೆಗಳ ಹಾಗೆ ನವಯೌವನಸಂಪನ್ನ ರಾಗಿದ್ದಾರೆ ದೇವಲೋಕದಿಂದಿಳಿದು ಬಂದು ಭೂಲೋಕದಲ್ಲಿರುವ ದೇವತೆಗಳ ಹಾಗಿದ್ದಾರ ಮಾಂದಳಿರಿನ ಹಾಗೆ ಇರುವ ಕೆಂಪಾದ ವಸ್ತ್ರಗಳಿಂದ ಅಲಂಕರಿಸಲ್ಪಟ್ಟವರಾಗಿ ಬಾಲಸೂರ್ಯನನ್ನು ಹೋಲುವ ಕಾಂತಿಯುಳ್ಳವರಾಗಿ ಚಂದ್ರನ ಹಾಗೆ ಕಣ್ಣುಗಳಿಗೆ ಮನೋಹರರಾಗಿದ್ದಾರೆ ಚಂದ್ರ ಸೂರ್ಯರು ತಮ್ಮ ಪ್ರಕಾಶದಿಂದ ಅಂತರಿಕ್ಷಮಾರ್ಗವನ್ನು ಬೆಳಗಿಸುವಂತೆ ಈ ಕುಮಾರರು ತಮ್ಮ ತನುಕಾಂತಿಯಿಂದ ಈ ಪ್ರದೇಶವನ್ನು ಪ್ರಕಾಶಮಾಡುತ್ತಿದ್ದಾರೆ ಇವರು ಕಾಲುನಡೆಯಿಂದ ಹೇಗೆ ಬಂದರು ? ಇವರಿಬ್ಬರೂ ಅನ್ಯೋನ್ಯ ರೂಪಲಾವಣ್ಯಗಳಿಂದ ಸಮಾನರಾಗಿದ್ದಾರೆ ಉತ್ತಮ ವಾದ ಆಯುಧಗಳನ್ನು ಧರಿಸಿಕೊಂಡು ಇವರು ಯಾವಕಾರಣದಿಂದ ಇಲ್ಲಿಗೆ ಬಂದರು ? ಇವರ ವೃತ್ತಾಂತವೆಲ್ಲವನ್ನೂ ನಿರೂಪಿಸಿರಿ " ಎಂದು ಕೇಳಿದನು

ಆ ಮಾತನ್ನು ಕೇಳಿ ವಿಶ್ವಾಮಿತ್ರನು ರಾಮಲಕ್ಷ್ಮಣರ ವೃತ್ತಾಂತಗಳನ್ನೂ ಸಿದ್ಧಾಶ್ರಮಕ್ಕೆ ಬಂದು ರಾಕ್ಷಸರನ್ನು ಕೊಂದು ತನ್ನ ಯಾಗವನ್ನು ರಕ್ಷಿಸಿದ ವೃತ್ತಾಂತವನ್ನೂ ವಿಸ್ತಾರವಾಗಿ ನಿರೂಪಿಸಿದನು ಆ ಪ್ರಸಂಗವನ್ನು ಕೇಳಿ ಸುಮತಿರಾಯನು ಅತಿಹರ್ಷಪಟ್ಟು ರಾಮಲಕ್ಷ್ಮಣರಿಗೆ ಅನೇಕ ಸತ್ಕಾರ ಗಳನ್ನು ಮಾಡಿ ವಿಧ್ಯುಕ್ತಪ್ರಕಾರದಲ್ಲಿ ಅತಿಥಿಪೂಜೆಯನ್ನು ಮಾಡಿದನು. ಆಗ ಪೂಜೆಗೆ ಯೋಗ್ಯರೂ ಮಹಾಬಲವಂತರೂ ಸಿಂಹದ ಹೆಕ್ಕತ್ತಿನೋಪಾದಿಯಿರುವ ಹೆಕ್ಕತ್ತುಳ್ಳವರೂ ವಿಶಾಲವಾಗಿ ಮನೋಹರವಾದ ಕಣ್ಣುಗಳುಳ್ಳವರೂ ಆಗಿ ತಮ್ಮ ತನುಕಾಂತಿಯಿಂದ ಸುತ್ತಲಿರುವ ವಸ್ತುಗಳನ್ನು ದೇದೀಪ್ಯಮಾನವಾಗಿ ಬೆಳಗಿಸುತ್ತಿದ್ದ ರಾಮಲಕ್ಷ್ಮಣರು, ಆ ರಾಯನು ಮಾಡಿದ ಸತ್ಕಾರಗಳನ್ನು ಕೈಗೊಂಡು ಆತನ ಅರಮನೆಯಲ್ಲಿ ಒಂದು ರಾತ್ರಿಯನ್ನು ಕಳೆದು, ಅಲ್ಲಿಂದ ಮುಂದೆ ಮಿಥಿಲಾ ಪಟ್ಟಣಕ್ಕೆ ತೆರಳಿದರು. ಅನಂತರ ವಿಶ್ವಾಮಿತ್ರಮುನೀಶ್ವರನು ಮುನಿಗಳೊಡನೆ ಮನೋಹರವಾದ ಮಿಥಿಲಾಪಟ್ಟಣವನ್ನು ಕಂಡು ಆ ಪಟ್ಟಣದ ಸೌಂದರ್ಯವನ್ನು ಕೊಂಡಾಡುತ್ತ ಆ ಪಟ್ಟಣದ ಸಮೀಪದಲ್ಲಿ ಒಂದು ಉದ್ಯಾನವನದಲ್ಲಿ ಒಂದು ಆಶ್ರಮವನ್ನು ಕಂಡನು. ಆ ಆಶ್ರಮದಲ್ಲಿ ಮನುಷ್ಯರು ಒಬ್ಬರೂ ಇಲ್ಲದಿರಲು ರಘುನಾಥನು ಅದಕ್ಕೇನು ಕಾರಣವೆಂದು ಕೇಳಿದನು. ಆಗ ವಿಶ್ವಾಮಿತ್ರನು ಶ್ರೀರಾಮನಿಗೆ ಹೇಳಿದನು: " ರಘುನಾಥ, ಈ ಆಶ್ರಮವು ಪೂರ್ವದಲ್ಲಿ ಮಹಾತ್ಮನಾದ ಗೌತಮಮುನೀಶ್ವರನದು. ಇದಕ್ಕೆ ಗೌತಮಮುನೀಶ್ವರನು ಕೋಪದಿಂದ ಶಾಪವನ್ನು ಕೊಟ್ಟನು. ಈ ಆಶ್ರಮವು ದಿವ್ಯತೇಜಸ್ಸುಳ್ಳದ್ದು. ಸಮಸ್ತ ದೇವತೆಗಳಿಂದಲೂ ಪೂಜಿಸಲ್ಪಟ್ಟದ್ದು. ಈ ಆಶ್ರಮದಲ್ಲಿ ಗೌತಮಮುನೀಶ್ವರನು ಅನೇಕ ವರುಷಗಳು ಅಹಲ್ಯಾದೇವಿಯೊಡನೆ ತಪಸ್ಸನ್ನು ಮಾಡುತ್ತಿರುವಾಗ ದೇವೇಂದ್ರನು ಆ ಮುನಿಯಿಲ್ಲದ ಸಮಯದಲ್ಲಿ ಆತನ ಆಕಾರವನ್ನು ತಾಳಿ ಅಹಲ್ಯಾದೇವಿಯ ಸಮೀಪಕ್ಕೆ ಹೋಗಿ ಸಂಗಮಾರ್ಥವಾಗಿ ಸಮೀಪಕ್ಕೆ ಕರೆಯುತ್ತ ಆಕೆಯನ್ನು ಕುರಿತು 'ಸುಂದರಿ, ಈಗ ನಿನ್ನೊಡನೆ ಸಂಗಮಿಸಬೇಕೆಂದು ನನಗೆ ಇಚ್ಛೆಯಾಗಿದೆ' ಎಂದು ನುಡಿದನು.

ಅಹಲ್ಯೆಯು ಆತನು ದೇವೇಂದ್ರನೆಂದು ತಿಳಿದು ಸಂತೋಷದಿಂದ ಅಂಗೀಕರಿಸಿದಳು ದೇವೇಂದ್ರನು ಹರ್ಷದಿಂದ ಅಹಲ್ಯಾದೇವಿಯನ್ನು ಭೋಗಿಸಿ ಆ ಪರ್ಣಶಾಲೆಯಿಂದ ಹೊರಟು ಗೌತಮಮುನೀಶ್ವರನು ಎಲ್ಲಿ ಕಾಣುವನೋ ಎಂದು ಮಹಾಭಯದಿಂದ ಶೀಘ್ರವಾಗಿ ಹೋಗುವಾಗ ಗೌತಮಮುನಿಯು ಎದುರಾದನು. ಆತನು ತೀರ್ಥದಲ್ಲಿ ಸ್ನಾನಮಾಡಿ ಯಜ್ಞಪುರುಷನೋಪಾದಿ ಯಲ್ಲಿ ತನ್ನ ಪ್ರಭಾವದಿಂದ ಸುತ್ತಲೂ ಪ್ರಕಾಶವನ್ನುಂಟುಮಾಡುತ್ತಾ ಶಾಪಾನುಗ್ರಹಸಾಮರ್ಥ್ಯ ವುಳ್ಳವನಾಗಿ ಕೈಯಲ್ಲಿ ದರ್ಭೆಸಮಿತ್ತುಗಳನ್ನು ತೆಗೆದುಕೊಂಡು ಬರುತ್ತಿರುವುದನ್ನು ಕಂಡು

ದೇವೇಂದ್ರನ ಮುಖಕಾಂತಿಯು ಕುಂದಿತು ಆ ಋಷಿಯು ದುಷ್ಟನಾದ ದೇವೇಂದ್ರನನ್ನು ಕಂಡು ಮನಸ್ಸಿನಲ್ಲಿ ಸಂಶಯಪಟ್ಟು, ದೇವೇಂದ್ರನು ತನ್ನ ಆಕಾರವನ್ನು ತಳೆದಿದ್ದುದರಿಂದ ತನ್ನ ಮನೆಗೆ ಹೋಗಿದ್ದನೆಂದು ನಿಶ್ಚಯಿಸಿ ಮಹಾಕೋಪದಿಂದ 'ಎಲೈ ದುರ್ಬುದ್ಧಿಯುಳ್ಳ ದೇವೇಂದ್ರನೆ, ನನ್ನ ಸ್ವರೂಪದಿಂದ ಮಾಡಬಾರದ ಕೃತ್ಯವನ್ನು ಮಾಡಿದೆಯಾದ್ದರಿಂದ ನಿನ್ನ ವೃಷಣವು ಕತ್ತರಿಸಿ ಬೀಳಲಿ!' ಎಂದು ಶಾಪವನ್ನು ಕೊಟ್ಟನು. ಆ ಕ್ಷಣದಲ್ಲಿಯೇ ದೇವೇಂದ್ರನ ವೃಷಣವು ಕತ್ತರಿಸಿ ನೆಲಕ್ಕೆ ಬಿತ್ತು! ಗೌತಮಮುನೀಶ್ವರನು ದೇವೇಂದ್ರನನ್ನು ಶಪಿಸಿದಮೇಲೆ ತನ್ನ ಸತಿಯಾದ ಅಹಲ್ಯಾದೇವಿಯನ್ನು ನೋಡಿ 'ಅಹಲ್ಯೆ, ನೀನು ಅನೇಕಸಾವಿರ ವರುಷಗಳು ವಾಯುವನ್ನೇ ಆಹಾರವನ್ನಾಗಿ ಮಾಡಿಕೊಂಡು ಅನ್ನಾದಿಗಳಿಲ್ಲದೆ ಭಸ್ಮದ ಮೇಲೆ ಮಲಗಿಕೊಂಡು ತಪಸ್ಸು ಮಾಡುತ್ತಾ ಯಾರಿಗೂ ಗೋಚರವಾಗದೆ ಬಿದ್ದಿರು. ದಶರಥರಾಯನ ಕುಮಾರನಾಗಿ ಮಹಾ ಪರಾಕ್ರಮಿಯಾದ ರಘುನಾಥನು ಈ ಘೋರವಾದ ವನವನ್ನು ಪ್ರವೇಶಿಸಿದಾಗ ನಿನ್ನ ಶಾಪ ವಿಮೋಚನವಾಗುವುದು ನೀನು ರಘುನಾಥನನ್ನು ಕಂಡು ಅಂತರಂಗಶುದ್ಧಿಯಿಂದ ಆತನಿಗೆ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿದರೆ ನೀನು ಪುನಃ ಉತ್ತಮವಾದ ದೇಹವನ್ನು ಪಡೆಯುವೆ' ಎಂದು ಶಾಪವನ್ನು ಕೊಟ್ಟು ಈ ಆಶ್ರಮವನ್ನು ಬಿಟ್ಟು ಸಮಸ್ತದೇವತೆಗಳೂ ಗಂಧರ್ವರೂ ದೇವರ್ಷಿಗಳೂ ಇರುವಂಥ ಹಿಮವತ್ಪರ್ವತಕ್ಕೆ ಹೋಗಿ ಆ ಪರ್ವತದ ಕೋಡುಗಲ್ಲಿನಲ್ಲಿ ತಪಸ್ಸನ್ನು ಮಾಡುತ್ತಿದ್ದನು."



## ೪೯ ನೆಯ ಅಧ್ಯಾಯ

## ಅಹಲ್ಯಾಶಾಪವಿಮೋಚನೆ

"ಶ್ರೀರಾಮ, ಆಮೇಲೆ ವೃಷಣರಹಿತನಾದ ದೇವೇಂದ್ರನು ಯಜ್ಞಪುರುಷ ಸಿದ್ಧ ಚಾರಣ ಗಂಧರ್ವರು ಮೊದಲಾದ ದೇವತೆಗಳ ಬಳಿಗೆ ಹೋಗಿ 'ದೇವತೆಗಳಿರಾ, ಗೌತಮಮುನೀಶ್ವರನಿಗೆ ಕೋಪವನ್ನು ಹುಟ್ಟಿಸಿ ಆತನ ತಪಸ್ಸಿಗೆ ವಿಘ್ನಮಾಡಿ ದೇವತೆಗಳ ಕಾರ್ಯವನ್ನು ಸಾಧಿಸಿದೆನು ಅದರಿಂದ ಆ ಮುನೀಶ್ವರನು ಕೋಪಗೊಂಡು ಶಪಿಸಲು ನಾನು ವೃಷಣರಹಿತನಾದೆನು. ಅಹಲ್ಯಾದೇವಿಯು ಆ ಮುನೀಶ್ವರನಿಂದ ನಿರಾಕರಿಸಲ್ಪಟ್ಟವಳಾದಳು. ಎಲೈ ದೇವತೆಗಳಿರಾ, ನಿಮ್ಮ ಕಾರ್ಯಕ್ಕಾಗಿ ಶಾಪವನ್ನು ಪಡೆದು ವೃಷಣವನ್ನು ಕಳೆದುಕೊಂಡ ನನಗೆ ಮೊದಲಿನ ಹಾಗೆಯೇ ವೃಷಣವುಂಟಾಗುವಂತೆ ಯತ್ನಮಾಡಿರಿ' ಎಂದು ಹೇಳಿದನು

ಆ ದೇವತೆಗಳು ಪಿತೃದೇವತೆಗಳ ಸಮೀಪಕ್ಕೆ ಹೋಗಿ 'ಪಿತೃದೇವತೆಗಳಿರಾ, ದೇವೇಂದ್ರನಿಗೆ ಗೌತಮಮುನೀಶ್ವರನ ಶಾಪದಿಂದ ವೃಷಣವು ಬಿದ್ದುಹೋಯಿತು. ಆತನಿಗೆ ಟಗರಿನ ವೃಷಣವನ್ನು ಕಿತ್ತು ಹತ್ತಿಸಿದರೆ ವೃಷಣಗಳಿಲ್ಲದ ಟಗರುಗಳಿಂದ ನಿಮಗೆ ಅನೇಕ ಇಷ್ಟಾರ್ಥಗಳುಂಟಾಗುವುವು. ಹೇಗೆಂದರೆ, ಯುಗಾಂತರದಲ್ಲಿ ಮನುಷ್ಯರು ವೃಷಣರಹಿತವಾದ ಟಗರಿನ ಮಾಂಸವನ್ನು ಪಚನಮಾಡಿ ಪಿತೃಗಳಿಗೆ ಶ್ರಾದ್ಧವನ್ನು ಮಾಡುವರು ವೃಷಣರಹಿತವಾದ ಟಗರಿನ ಮಾಂಸವನ್ನು ಕೊಟ್ಟರೆ ಪಿತೃಗಳಾದ ನಿಮಗೆ ತೃಪ್ತಿಯಾಗುವುದು ನೀವು ಆ ಶ್ರಾದ್ಧವನ್ನು ಮಾಡಿದವರಿಗೆ ಅವರ ಇಷ್ಟಾರ್ಥಗಳನ್ನು ಕೊಡಿರಿ' ಎಂದು ಹೇಳಿದರು.




ಶ್ರೀರಾಮಲಕ್ಷ್ಮಣರು ಅಹಲ್ಯಾದೇವಿಯನ್ನು ಕಂಡರು

ಆ ಮಾತನ್ನು ಕೇಳಿ ಪಿತೃದೇವತೆಗಳು ಟಗರಿನ ವೃಷಣವನ್ನು ಕಿತ್ತು ದೇವೇಂದ್ರನ ವೃಷಣ ಸ್ಥಾನದಲ್ಲಿ ಸೇರಿಸಿದರು. ಅಂದುಮೊದಲಾಗಿ ದೇವತೆಗಳು ವೃಷಣವಿಲ್ಲದ ಟಗರಿನ ಮಾಂಸವನ್ನು ಭುಜಿಸುತ್ತಾರೆ. ಆ ಫಲಪೈತೃಕವನ್ನು ಮಾಡಿದ ಮನುಷ್ಯರಿಗೆ ಪಿತೃದೇವತೆಗಳು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವರು. ದೇವೇಂದ್ರನು ಅಂದುಮೊದಲಾಗಿ ಮೇಷವೃಷಣ ಎಂದು ಪ್ರಸಿದ್ಧನಾದನು. ಶ್ರೀರಾಮ, ಗೌತಮಮಹರ್ಷಿಯು ಮಾಡಿದ ತಪೋಬಲದಿಂದ ಈ ಸ್ಥಳಕ್ಕೆ ನೀನು ಬಂದೆ. ಪುಣ್ಯಾತ್ಮನಾದ ಗೌತಮಮುನಿಯ ಆಶ್ರಮವನ್ನು ಪ್ರವೇಶಿಸಿ ದೇವತಾಸ್ವರೂಪಳಾದ ಅಹಲ್ಯಾದೇವಿಯ ಶಾಪವನ್ನು ವಿಮೋಚನಮಾಡು' ಎಂದು ವಿಶ್ವಾಮಿತ್ರನು ಹೇಳಿದನು.

ರಾಮಲಕ್ಷ್ಮಣರು ವಿಶ್ವಾಮಿತ್ರಮುನಿಯ ಮಾತನ್ನು ಕೇಳಿ ಆತನನ್ನು ಮುಂದಿಟ್ಟುಕೊಂಡು ತಪಸ್ಸಿನಿಂದ ದೇದೀಪ್ಯಮಾನವಾದ ತನುಕಾಂತಿಯುಳ್ಳವಳಾಗಿ ದೇವತೆಗಳಿಂದಲೂ ಲೋಕದ ಜನಗಳಿಂದಲೂ ಕಾಣಲು ಶಕ್ಯಳಲ್ಲದ ಅಹಲ್ಯಾದೇವಿಯನ್ನು ಕಂಡರು. ಬ್ರಹ್ಮದೇವನು ಅತಿಯತ್ನದಿಂದ ನಿರ್ಮಿಸಿದ ಮಾಯಾಮಯಳಾದ ದಿವ್ಯಾಂಗನೆಯೋ, ಮೇಘೋದಯವಾಗಿ ಇಬ್ಬನಿಯಿಂದ ಮರೆಸಲ್ಪಟ್ಟ ಚಂದ್ರಕಾಂತಿಯೋ, ಉದಕಪ್ರವಾಹದ ಮಧ್ಯದಲ್ಲಿ ಹೊಳೆಯುತ್ತಲಿರುವ ಸೂರ್ಯನ ಪ್ರಭೆಯೋ, ಹೊಗೆಯಿಂದ ಸುತ್ತುವರಿಯಲ್ಪಟ್ಟ ಅಗ್ನಿಜ್ವಾಲೆಯೋ ಎಂಬಂತೆ ಕಾಣುತ್ತಿದ್ದ ಅಹಲ್ಯಾದೇವಿಯನ್ನು ರಘುನಾಥನು ಕಂಡನು. ಅವಳು ಗೌತಮಮುನೀಶ್ವರನ ಶಾಪದಿಂದ ತ್ರೈಲೋಕ್ಯದಲ್ಲಿರುವ ಸಮಸ್ತಪ್ರಾಣಿಗಳಿಗೂ ಕಾಣಲು ಶಕ್ಯಳಾಗಿರಲಿಲ್ಲ. ಆ ದೇವಿಯು ಆತನ ದರ್ಶನವಾದಾಗಲೇ ಸಮಸ್ತಪ್ರಾಣಿಗಳ ದೃಷ್ಟಿಗಳಿಗೂ ಗೋಚರಳಾದಳು. ರಾಮಲಕ್ಷ್ಮಣರು ಆಕೆಯ ಪಾದಗಳಿಗೆ ನಮಸ್ಕಾರಮಾಡಿದರು. ಅಹಲ್ಯಾದೇವಿಯು ಗೌತಮಮುನೀಶ್ವರನ ವಾಕ್ಯವನ್ನು ಸ್ಮರಿಸಿ ರಾಮಲಕ್ಷ್ಮಣರಿಗೆ ಅರ್ಘ್ಯಪಾದ್ಯಾಚಮನಗಳನ್ನು ಕೊಟ್ಟು ವಿಧ್ಯುಕ್ತಪ್ರಕಾರದಲ್ಲಿ ಪೂಜಿಸಿದಳು. ಆ ಸಮಯದಲ್ಲಿ ದೇವತೆಗಳು ಸ್ವರ್ಗದಿಂದ ಪುಷ್ಪವೃಷ್ಟಿಯನ್ನು ಕರೆದರು. ದೇವದುಂದುಭಿಗಳು ಮೊಳಗಿದವು. ಅಪ್ಸರಃಸ್ತ್ರೀಯರು ಜಯ ಜಯ! ಎಂದು ಘೋಷಿಸಿ ತಪಸ್ಸಿನಿಂದ ಪವಿತ್ರಾಂಗಿಯಾದ ಅಹಲ್ಯಾದೇವಿಯನ್ನು ಪೂಜಿಸಿದರು. ಆಮೇಲೆ ಗೌತಮಮುನಿಯು ಅಲ್ಲಿಗೆ ಬಂದು ತಪಸ್ಸಿನಿಂದ ಪರಿಶುದ್ಧಳಾದ ಅಹಲ್ಯಾದೇವಿಯನ್ನು ಕೂಡಿಕೊಂಡು ರಘುನಾಥನಿಗೆ ಅಭಿವಂದಿಸಿ ತಪಸ್ಸಿಗೆ ತೆರಳಿದನು. ರಘುನಾಥನು ಮಹಾತ್ಮನಾದ ಗೌತಮಮಹಾಮುನಿಯ ಪೂಜೆಯನ್ನು ಕೈಗೊಂಡು ವಿಶ್ವಾಮಿತ್ರಮುನೀಶ್ವರನನ್ನು ಮುಂದಿಟ್ಟುಕೊಂಡು ಮಿಥಿಲಾಪಟ್ಟಣಕ್ಕೆ ತೆರಳಿದನು.



## ೫೦ನೆಯ ಅಧ್ಯಾಯ

## ರಾಮಲಕ್ಷ್ಮಣರು ಮಿಥಿಲಾಪಟ್ಟಣಕ್ಕೆ ಹೋದದ್ದು

ಅನಂತರ ಮಿಥಿಲಾಪಟ್ಟಣವನ್ನು ಪ್ರವೇಶಿಸಿ ಲಕ್ಷ್ಮಣಸಮೇತನಾದ ಶ್ರೀರಾಮನು ವಿಶ್ವಾಮಿತ್ರಮುನಿಯ ಸಂಗಡ ಈಶಾನ್ಯದಿಕ್ಕಿನಲ್ಲಿದ್ದ ಯಾಗಶಾಲೆಯನ್ನು ಪ್ರವೇಶಿಸಿ ಆತನನ್ನು ಕುರಿತು "ಮುನೀಶ್ವರರೆ, ಜನಕಚಕ್ರೇಶ್ವರನ ಯೋಗಸಂಪತ್ತನ್ನು ನೋಡಿದಿರಾ! ನಾನಾದೇಶದಿಂದ ಅನೇಕ ಮಂದಿ ಬ್ರಾಹ್ಮಣರೂ ವೇದಾಧ್ಯಯನಸಂಪನ್ನರಾದವರೂ ಬಂದಿದ್ದಾರೆ. ಎಲ್ಲಿ ನೋಡಿದರೂ ಋಷಿಗಳ ಆವಾಸಸ್ಥಾನವಾಗಿದೆ. ಅನೇಕ ಬಂಡಿಗಳಿಂದ ಪರಿಪೂರ್ಣವಾಗಿದೆ. ನಾವು ಇರುವುದಕ್ಕೆ ಒಂದು ಸ್ಥಳವನ್ನು ತೋರಿಸಿರಿ" ಎಂದು ಕೇಳಿದನು.

ವಿಶ್ವಾಮಿತ್ರನು ಏಕಾಂತವಾಗಿ ನಿರ್ಮಲೋದಕವುಳ್ಳ ಸ್ಥಳವನ್ನು ಗೊತ್ತುಮಾಡಿದನು ಆಗ ವಿಶ್ವಾಮಿತ್ರರು ಬಂದ ವೃತ್ತಾಂತವನ್ನು ಕೇಳಿ ಜನಕರಾಯನು ತನ್ನ ಪುರೋಹಿತನಾದ ಶತಾನಂದ ಮುನೀಶ್ವರನನ್ನು ಮುಂದಿಟ್ಟುಕೊಂಡು ಆ ಯಾಗಮಂಟಪದಲ್ಲಿದ್ದ ಋತ್ವಿಕ್ಕುಗಳನ್ನು ಕರೆದುಕೊಂಡು ಆ ಮುನೀಶ್ವರನನ್ನಿದಿರುಗೊಂಡು ಅರ್ಘ್ಯಪಾದ್ಯಾದಿ ಪೂಜೆಗಳನ್ನು ಮಾಡಿ ಆತನಿಗೆ ಅಭಿವಂದಿಸಿ ಅತ್ಯಂತ ವಿನಯದಿಂದ ಸತ್ಕರಿಸಿದನು ವಿಶ್ವಾಮಿತ್ರನು ಜನಕರಾಯನು ಮಾಡಿದ ಪೂಜೆಯನ್ನು ಕೈಗೊಂಡು ಆತನ ಕುಶಲವನ್ನು ಕೇಳಿ ಶತಾನಂದನ ಮತ್ತು ಅಲ್ಲಿದ್ದ ಋತ್ವಿಜರ ಕ್ಷೇಮಸಮಾಚಾರ ವನ್ನು ಕೇಳುತ್ತ ಜನಕರಾಯನು ಕೊಟ್ಟ ರತ್ನಖಚಿತವಾದ ಸುವರ್ಣಪೀಠದಲ್ಲಿ ಕುಳಿತನು ಆಗ ಆ ರಾಯನು ಆತನನ್ನು ನೋಡಿ ಕೈಮುಗಿದುಕೊಂಡು "ವಿಶ್ವಾಮಿತ್ರಮುನಿಗಳೆ, ನಿಮ್ಮ ದರ್ಶನದಿಂದ ನನ್ನ ಯಾಗವು ಸಫಲವಾಯಿತು. ಸಮಸ್ತದೇವತೆಗಳೂ ಪ್ರಸನ್ನರಾದರು ನಾನು ಕೃತಾರ್ಥನಾದೆನು ನಿಮ್ಮ ಕೃಪೆಗೆ ಪಾತ್ರನಾದೆನು. ಇನ್ನು ಹನ್ನೆರಡು ದಿವಸಗಳಲ್ಲಿ ನನ್ನ ಯಾಗವು ಸಮಾಪ್ತಿಯಾಗುವುದು ಈ ಯಾಗದಲ್ಲಿ ಹವಿಸ್ಸಿನ ಭಾಗವನ್ನು ತೆಗೆದುಕೊಳ್ಳುವ ದೇವತೆಗಳನ್ನು ನೀವು ನೋಡಬಹುದು" ಎಂದು ನುಡಿದನು ಮತ್ತೆ ಕೈಮುಗಿದುಕೊಂಡು "ವಿಶ್ವಾಮಿತ್ರ ಮುನೀಶ್ವರರೆ, ಇವರಾರು ? ಈ ಕುಮಾರರು ದೇವತೆಗಳಿಗೆ ಸಮಾನ ಪರಾಕ್ರಮವುಳ್ಳವರಾಗಿಯೂ ಮದ್ದಾನೆ ಸಿಂಹಗಳ ಹಾಗೆ ಗಮನಚಾತುರ್ಯವುಳ್ಳರಾಗಿಯೂ ಮಹಾವೃಷಭ ಮತ್ತು ಕೊಬ್ಬಿದ ವ್ಯಾಘ್ರದಂತೆ ಪರಾಕ್ರಮವುಳ್ಳವರಾಗಿಯೂ ಕಮಲದ ಎಸಳುಗಳಂತೆ ವಿಶಾಲವಾದ ಕಣ್ಣುಗಳುಳ್ಳವ ರಾಗಿಯೂ, ಖಡ್ಗ ಬಿಲ್ಲು ಬತ್ತಳಿಕೆಗಳನ್ನು ಧರಿಸಿಕೊಂಡು ರೂಪಿನಲ್ಲಿ ಅಶ್ವಿನೀದೇವತೆಗಳಿಗೆ ಸಮಾನರಾಗಿ ನವಯೌವನವುಳ್ಳವರಾಗಿಯೂ ದೈವಗತಿಯಿಂದ ಸ್ವರ್ಗಲೋಕದಿಂದ ಬಂದ ದೇವತೆ ಗಳಂತೆಯೂ ಪ್ರಕಾಶಿಸುತ್ತಿದ್ದಾರೆ. ಇವರು ಯಾರ ಮಕ್ಕಳು ? ಏನುಕಾರಣ ಇಲ್ಲಿಗೆ ಬಂದರು ? ಸೂರ್ಯಚಂದ್ರರು ಅಂತರಿಕ್ಷಮಾರ್ಗವನ್ನು ಬೆಳಗಿಸುವಂತೆ ಇವರು ತಮ್ಮ ತನುಕಾಂತಿಯಿಂದ ದಶದಿಕ್ಕು ಗಳನ್ನೂ ಬೆಳಗಿಸುತ್ತಿದ್ದಾರೆ. ಆಕಾರದಿಂದಲೂ ಮನೋಭಾವದಿಂದಲೂ ನಡತೆಯಿಂದಲೂ ಇವರಿಬ್ಬರೂ ಅನ್ಯೋನ್ಯಸಮಾನರಾಗಿದ್ದಾರೆ. ಇವರು ಯಾರೆಂಬುದನ್ನು ತಿಳುಹಿಸಬೇಕು" ಎಂದು ಕೇಳಿದನು.

ಆಗ ವಿಶ್ವಾಮಿತ್ರನು ಆತನನ್ನು ನೋಡಿ "ಎಲೈ ಜನಕರಾಯನೆ, ಈ ಕುಮಾರರು ದಶರಥ ರಾಯನ ಮಕ್ಕಳು. ಇವರನ್ನು ನನ್ನ ಯಾಗರಕ್ಷಣಾರ್ಥವಾಗಿ ಕರೆತಂದೆನು" ಎಂದು ನುಡಿದು ಅವರ ಪೂರ್ವೋತ್ತರಗಳನ್ನೂ ಸಿದ್ಧಾಶ್ರಮಕ್ಕೆ ಬಂದ ವೃತ್ತಾಂತವನ್ನೂ ರಾಕ್ಷಸರ ಸಂಹಾರವನ್ನು ಮಾಡಿದ ಬಗೆಯನ್ನೂ ವಿಶಾಲಪುರಿಯಲ್ಲಿ ಒಂದು ರಾತ್ರಿ ಇದ್ದ ವೃತ್ತಾಂತವನ್ನೂ ಅಹಲ್ಯಾದರ್ಶನ ಮಾಡಿದ ಪ್ರಸ್ತಾವವನ್ನೂ ಗೌತಮಮುನಿಯೊಡನೆ ಸಂಭಾಷಣೆ ಮಾಡಿದ ವೃತ್ತಾಂತವನ್ನೂ ಹೇಳಿದನು. ಅನಂತರ "ಇವರು ನಿನ್ನ ಬಳಿಯಲ್ಲಿರುವ ಧನುಸ್ಸಿನ ಸತ್ತ್ವವನ್ನು ನೋಡಬೇಕೆಂದು ಬಂದರು" ಎಂದು ನುಡಿದು ಸುಮ್ಮನಾದನು.



## ೫೧ ನೆಯ ಅಧ್ಯಾಯ

## ವಿಶ್ವಾಮಿತ್ರನು ವಸಿಷ್ಠನ ಬಳಿಗೆ ಹೋದ ವೃತ್ತಾಂತ

ಮಹಾತ್ಮನಾದ ವಿಶ್ವಾಮಿತ್ರನ ಮಾತನ್ನು ಕೇಳಿ ಮಹಾತಪಸ್ವಿಯಾದ ಗೌತಮಮುನೀಶ್ವರನ ಹಿರಿಯಮಗನಾದ ಶತಾನಂದಮುನಿಯ ಶರೀರವೆಲ್ಲವೂ ಪುಲಕಿತವಾಯಿತು. ಆತನು ಸುಖವಾಗಿ ಕುಳಿತಿದ್ದ ರಾಮಲಕ್ಷ್ಮಣರನ್ನು ನೋಡುತ್ತ ವಿಶ್ವಾಮಿತ್ರಮುನೀಶ್ವರನನ್ನು ಕುರಿತು " ಮುನೀಶ್ವರರೆ. ಬಹುಕಾಲ ತಪಸ್ಸು ಮಾಡಿ ಮಹಾಕೀರ್ತಿವಂತೆಯಾದ ನನ್ನ ತಾಯಿ ಅಹಲ್ಯಾದೇವಿಯನ್ನು ರಘುನಾಥನಿಗೆ ತೋರಿಸಿದಿರಾ ? ಆಕೆಯು ಶ್ರೀರಾಮನಿಗೆ ಕಂದಮೂಲಫಲಾಹಾರಗಳಿಂದ ಸತ್ಕಾರ ಗಳನ್ನು ಮಾಡಿದಳೆ ? ನನ್ನ ತಾಯಿಗೆ ದೇವೇಂದ್ರನು ಮಾಡಿದ ಉಪದ್ರವವನ್ನು ಈತನಿಗೆ ತಿಳುಹಿಸಿದಿರಾ ? ಅಹಲ್ಯಾದೇವಿಯು ರಘುನಾಥನ ದರ್ಶನವಾದಮೇಲೆ ನಮ್ಮ ತಂದೆಯಾದ ಗೌತಮಮುನೀಶ್ವರನನ್ನು ಸೇರಿದಳೆ ? ತನ್ನ ಪತ್ನೀಸಹಿತನಾಗಿ ಗೌತಮಮುನೀಶ್ವರನು ಶ್ರೀರಾಮನಿಗೆ ಸತ್ಕಾರಗಳನ್ನು ಮಾಡಿದನೆ ? ಈತನು ಮಹಾತ್ಮನಾದ ಗೌತಮಮುನಿಯು ಮಾಡಿದ ಸತ್ಕಾರಗಳನ್ನು ಅಂತರಂಗಪೂರ್ವಕವಾಗಿ ಕೈಗೊಂಡನೆ ? ಶ್ರೀರಾಮನು ಗೌತಮಮುನೀಶ್ವರನಿಗೆ ಅಭಿವಂದಿಸಿದನೆ?" ಎಂದು ನಾನಾ ಪ್ರಶ್ನೆಗಳನ್ನು ಕೇಳಿದನು

ವಿಶ್ವಾಮಿತ್ರಮುನಿಯು ಶತಾನಂದನನ್ನು ಕುರಿತು " ಶತಾನಂದಮುನಿಗಳೆ, ನಿಮ್ಮ ತಂದೆಯಾದ ಗೌತಮಮುನೀಶ್ವರನ ಆಶ್ರಮದಲ್ಲಿ ನನ್ನಿಂದ ಆಗುವ ಕೃತ್ಯಗಳನ್ನು ಆಗಮಾಡಿದೆನು. ನಿನ್ನ ತಾಯಿಯಾದ ಅಹಲ್ಯಾದೇವಿಯು, ಪೂರ್ವದಲ್ಲಿ ಜಮದಗ್ನಿಯ ಕೋಪದಿಂದ ತಿರಸ್ಕರಿಸಲ್ಪಟ್ಟ ರೇಣುಕಾದೇವಿಯು ಆ ಮುನೀಶ್ವರನ ಕೋಪವು ಶಾಂತವಾದ ಮೇಲೆ ತನ್ನ ಪತಿಯೊಡನೆ ಕೂಡಿದ ಹಾಗೆ, ಶ್ರೀರಾಮನ ಕೃಪಾಕಟಾಕ್ಷದಿಂದ ಶಾಪಮುಕ್ತಳಾಗಿ ತನ್ನ ಪತಿಯಾದ ಗೌತಮ ಮುನೀಶ್ವರನೊಡನೆ ಕೂಡಿ ಸುಖದಿಂದಿದ್ದಾಳೆ " ಎಂದು ಹೇಳಿದನು.

ಆ ಮಾತನ್ನು ಕೇಳಿ ಶತಾನಂದನು ಹರ್ಷದಿಂದ ಶ್ರೀರಾಮನಿಗೆ ಹೀಗೆಂದನು : " ಶ್ರೀರಾಮ, ತಪಸ್ಸಿನಿಂದ ಯಾರಿಗೂ ಕೆಣಕುವುದಕ್ಕೆ ಅಸಾಧ್ಯನಾದ ವಿಶ್ವಾಮಿತ್ರಮುನೀಶ್ವರನನ್ನು ಮುಂದಿಟ್ಟು ಕೊಂಡು ದೈವಾಧೀನದಿಂದ ಇಲ್ಲಿಗೆ ಬಂದೆ. ವಿಶ್ವಾಮಿತ್ರಮುನೀಶ್ವರನು ತಪಸ್ಸಿನಿಂದ ಅಪರಿಮಿತವಾದ ಮಹಿಮೆಯುಳ್ಳವನು. ಈತನೇ ಪರಮಗತಿಯೆಂದು ತಿಳಿ. ಲೋಕದಲ್ಲಿ ನೀನೇ ಪುಣ್ಯವಂತನಲ್ಲದೆ ನಿನಗೆ ಅಧಿಕನಾದವನಿಲ್ಲ. ಅದೇನು ಕಾರಣವೆಂದರೆ : ಮಹಾತಪಸ್ವಿಯಾದ ವಿಶ್ವಾಮಿತ್ರ ಮುನೀಶ್ವರನೇ ನಿನಗೆ ರಕ್ಷಕನಾಗಿದ್ದಾನೆ. ಈ ಮಹರ್ಷಿಯ ವೃತ್ತಾಂತವನ್ನು ಹೇಳುತ್ತೇನೆ ಕೇಳು : ಪೂರ್ವದಲ್ಲಿ ಈ ವಿಶ್ವಾಮಿತ್ರನು ರಾಜನಾಗಿದ್ದನು. ಆಗ ಧರ್ಮದಿಂದ ಪ್ರಜೆಗಳನ್ನು ಪರಿಪಾಲಿಸಿ ಕೊಂಡು ಬಹುಕಾಲ ರಾಜ್ಯವನ್ನಾಳಿದನು. ಈತನು ಮಹಾತ್ಮನು. ಸಮಸ್ತವಿದ್ಯೆಗಳನ್ನೂ ಧರ್ಮ ರಹಸ್ಯಗಳನ್ನೂ ಬಲ್ಲವನು. ಯಾವಾಗಲೂ ಸಮಸ್ತಪ್ರಾಣಿಗಳಿಗೂ ಹಿತವನ್ನೇ ಬಯಸುವವನು. ಈತನ ಪೂರ್ವಿಕನು ಬ್ರಹ್ಮದೇವನ ಮಗನಾದ ಕುಶನೆಂಬ ರಾಯನು. ಆತನ ಮಗನಾದ ಕುಶನಾಭ ನೆಂಬವನು ಮಹಾಬಲವಂತನು; ಧರ್ಮಿಷ್ಠನು ಕುಶನಾಭನ ಮಗನಾದ ಗಾಧಿ ಎಂಬವನು ಪ್ರಸಿದ್ಧ ನಾದವನು. ಆ ರಾಯನಿಂದ ಈ ಮುನೀಶ್ವರನು ಉದಯಿಸಿದನು. ಮಹಾಪ್ರತಾಪಶಾಲಿಯಾಗಿ ಅನೇಕಸಾವಿರ ವರುಷಗಳ ಪರ್ಯಂತ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದನು. ಈ ವಿಶ್ವಾಮಿತ್ರ

ರಾಜನು ಒಂದು ಸಮಯದಲ್ಲಿ ಒಂದು ಅಕ್ಷೌಹಿಣೀ ಸೇನೆಯನ್ನು ಕೂಡಿಕೊಂಡು ಭೂಪ್ರದಕ್ಷಿಣೆಯನ್ನು ಮಾಡುತ್ತ ಅನೇಕ ಜಲದುರ್ಗ ವನದುರ್ಗ ಗಿರಿದುರ್ಗಗಳನ್ನೂ ಅನೇಕ ಪಟ್ಟಣಗಳನ್ನೂ ಋಷಿಗಳ ಆಶ್ರಮಗಳನ್ನೂ ಸಂಚರಿಸಿ ನಾನಾಪುಷ್ಪಫಲಗಳುಳ್ಳ ವೃಕ್ಷಗಳಿಂದಲೂ ನಾನಾಮೃಗಗಳಿಂದಲೂ ಸಿದ್ಧ ಚಾರಣ ದೇವ ದಾನವ ಗಂಧರ್ವ ಕಿನ್ನರ ಕಿಂಪುರುಷರಿಂದಲೂ ಒಪ್ಪುತ್ತ, ಹುಲ್ಲೆಗಳಿಂದಲೂ ಪಕ್ಷಿಗಳಿಂದಲೂ ಇಟ್ಟಣಿಸಿ ಬ್ರಹ್ಮರ್ಷಿ ದೇವರ್ಷಿಗಳ ತಪಸ್ಸಿನಿಂದ ಸೇವಿಸಲ್ಪಟ್ಟ ಉದಕ ವಾಯು ತರಗೆಲೆ ಕಂದ ಮೂಲ ಫಲ ಮೊದಲಾದ ಆಹಾರಗಳಿಂದ ಜಿತೇಂದ್ರಿಯರಾಗಿ ತಪಸ್ಸನ್ನು ಮಾಡಿಕೊಂಡಿದ್ದ ಋಷಿಗಳಿಂದಲೂ ವಾಲಖಿಲ್ಯರಿಂದಲೂ ಸ್ನಾನ ಸಂಧ್ಯಾವಂದನ ಜಪ ಹೋಮ ತರ್ಪಣ ದೇವತಾರ್ಚನೆ ಮೊದಲಾದ ಸತ್ಕರ್ಮಗಳಲ್ಲಿ ನಿಷ್ಠೆಯುಳ್ಳ ಗೃಹಸ್ಥರಿಂದಲೂ ಪ್ರಕಾಶಿಸುತ್ತ ಎರಡನೆಯ ಬ್ರಹ್ಮಲೋಕವೋ ಎಂಬ ಹಾಗೆ ಅತಿಮನೋಹರವಾದ ವಸಿಷ್ಠ ಮುನೀಶ್ವರನ ಆಶ್ರಮವನ್ನು ಕಂಡು ಅಲ್ಲಿಗೆ ಹೋದನು. ”



## ೫೨ ನೆಯ ಅಧ್ಯಾಯ

## ವಿಶ್ವಾಮಿತ್ರನಿಗೆ ವಸಿಷ್ಠನು ಔತಣ ಮಾಡಿಸಿದ್ದು

“ ಆಮೇಲೆ ವಿಶ್ವಾಮಿತ್ರನು ವಸಿಷ್ಠಮುನೀಶ್ವರನಿಗೆ ನಮಸ್ಕಾರವನ್ನು ಮಾಡಲು ಆ ಮುನೀಶ್ವರನು ಕುಶಲವನ್ನು ಕೇಳಿ ಆಸನವನ್ನು ಕೊಟ್ಟನು ಆತನು ಸುಖದಿಂದ ಕುಳಿತಿರಲು ಅರ್ಘ್ಯಪಾದ್ಯಾಚಮನಾದಿ ಸತ್ಕಾರಗಳನ್ನು ಮಾಡಿ ಕಂದ ಮೂಲ ಫಲಾಹಾರಗಳನ್ನು ಕೊಟ್ಟನು. ವಿಶ್ವಾಮಿತ್ರನು ವಸಿಷ್ಠ ಮುನೀಶ್ವರನ ಸತ್ಕಾರಗಳನ್ನು ಕೈಗೊಂಡು ಆ ಮುನೀಶ್ವರನ ಕುಶಲವನ್ನು ಕೇಳುತ್ತಾ ಆತನನ್ನು ಕುರಿತು ‘ ವಸಿಷ್ಠಮುನೀಶ್ವರರೆ, ನಿಮ್ಮ ತಪೋವನದಲ್ಲಿರುವ ವೃಕ್ಷ ಗುಲ್ಮ ಲತೆಗಳಿಗೂ ಇಲ್ಲಿ ವಾಸಮಾಡಿಕೊಂಡಿರುವ ತಪಸ್ವಿಗಳಿಗೂ ನಾನಾ ವಿಧವಾದ ಮೃಗಸಮೂಹಗಳಿಗೂ ನಿಮಗೂ ಯಾರಿಂದಲೂ ಉಪದ್ರವಾದಿಗಳಿಲ್ಲದೆ ಸುಖವಾಗಿದೆಯೆ ? ’ ಎಂದು ಕೇಳಿದನು. ಆಗ ಸಮಸ್ತತಪಸ್ವಿಗಳಿಗೂ ಉತ್ತಮನಾದ ಬ್ರಹ್ಮಪುತ್ರನಾದ ವಸಿಷ್ಠಮುನೀಶ್ವರನು ‘ ಎಲೈ ವಿಶ್ವಾಮಿತ್ರನೆ, ಸಮಸ್ತವೂ ಸುಖವಾಗಿದೆ ’ ಎಂದು ಹೇಳಿ, ಸುಖವಾಗಿ ಕುಳಿತಿದ್ದ ವಿಶ್ವಾಮಿತ್ರನನ್ನು ಕುಶಲಪ್ರಶ್ನೆಯನ್ನು ಕೇಳುತ್ತ ‘ ಎಲೈ ವಿಶ್ವಾಮಿತ್ರ, ನೀನು ಸಮಸ್ತಪ್ರಜೆಗಳನ್ನೂ ಪರಿಪಾಲಿಸಿಕೊಂಡು ಸರ್ವಸಮ್ಮತನಾಗಿ ಧರ್ಮದಿಂದ ರಾಜ್ಯವನ್ನು ರಕ್ಷಿಸಿಕೊಂಡಿದ್ದೀಯೊ ? ನಿನ್ನ ಭೃತ್ಯರೆಲ್ಲರೂ ನಿನ್ನ ಆಜ್ಞೆಗೊಳಗಾಗಿದ್ದಾರೆಯೆ ? ಸಮಸ್ತಶತ್ರುಗಳನ್ನೂ ಜಯಿಸಿ ವಶಮಾಡಿಕೊಂಡಿದ್ದೀಯೊ ? ನಿನ್ನ ಭಂಡಾರ ಮಿತ್ರವರ್ಗ ಚತುರಂಗಬಲ ಮಕ್ಕಳು ಮೊಮ್ಮಕ್ಕಳು ಮೊದಲಾದವರು ಚೆನ್ನಾಗಿದ್ದಾರೆಯೆ ? ’ ಎಂದು ಕೇಳಿದನು.

ವಿಶ್ವಾಮಿತ್ರನು ಸಮಸ್ತರೂ ಕುಶಲರೆಂದು ನುಡಿದನು. ಈ ರೀತಿಯಲ್ಲಿ ಎರಡು ಕಡೆಯವರೂ ಅನ್ಯೋನ್ಯವಾಗಿ ಕುಶಲಸಮಾಚಾರಗಳನ್ನು ಕೇಳಿ ಸಂತೋಷವಾಗಿರುವಾಗ ವಸಿಷ್ಠ ಮುನೀಶ್ವರನು ನಗುತ್ತ ವಿಶ್ವಾಮಿತ್ರನನ್ನು ಕುರಿತು ‘ ಎಲೈ ಮಹಾಪರಾಕ್ರಮವುಳ್ಳ ವಿಶ್ವಾಮಿತ್ರನೆ, ನಿನಗೆ ಔತಣವನ್ನು ಮಾಡಬೇಕೆಂದು ಮನಸ್ಸಿನಲ್ಲಿ ಲವಲವಿಕೆಯಾಗಿದೆ. ಆದಕಾರಣ ನನ್ನ ಮೇಲೆ ದಯೆಯಿಟ್ಟು ನಾನು ಮಾಡುವ ಸತ್ಕಾರವನ್ನು ಅಂಗೀಕರಿಸಬೇಕು. ನೀನು ಮಹಾಪುಣ್ಯಾತ್ಮನು. ನಿನಗೆ ಪ್ರಯತ್ನದಿಂದಲಾದರೂ ಪೂಜೆಯನ್ನು ಮಾಡಬೇಕು ’ ಎಂದು ನುಡಿದನು.

ವಿಶ್ವಾಮಿತ್ರನು 'ವಸಿಷ್ಠ ಮುನೀಶ್ವರರೆ, ನೀವು ನನಗೆ ಸತ್ಕಾರವನ್ನು ಮಾಡಬೇಕೆಂದು ಹೇಳಿದ ಮಾತ್ರದಿಂದಲೇ ಸಂತುಷ್ಟನಾದೆನು. ನೀವು ಮಹಾಪೂಜ್ಯರು. ನನಗೆ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಕಂದಮೂಲ ಫಲಾಹಾರಗಳನ್ನು ಕೊಟ್ಟು, ಆ ಫಲಾಹಾರದಿಂದಲೂ ನಿಮ್ಮ ದರ್ಶನದಿಂದಲೂ ನಾನು ಸುಪ್ರೀತನಾದೆನು. ಮುಂದೆ ತೆರಳಲು ಅಪ್ಪಣೆಯನ್ನು ಕೊಡಬೇಕು' ಎಂದು ನುಡಿದನು. ಆಗ ವಸಿಷ್ಠ ಮುನೀಶ್ವರನು 'ವಿಶ್ವಾಮಿತ್ರ, ಹೇಗಾದರೂ ನನ್ನ ಅತಿಥಿ ಸತ್ಕಾರವನ್ನು ಕೈಗೊಂಡು ಮುಂದೆ ತೆರಳಬೇಕು' ಎಂದು ಮತ್ತೂ ಹೇಳಿದನು. ವಿಶ್ವಾಮಿತ್ರನು ಆತನ ವಾಕ್ಯವನ್ನಂಗೀಕರಿಸಿ 'ವಸಿಷ್ಠ ಮುನೀಶ್ವರರೆ, ನಿಮ್ಮ ಚಿತ್ತಕ್ಕೆ ಬಂದಹಾಗೆ ಮಾಡಿರಿ' ಎಂದು ಹೇಳಿದನು.

ಆಗ ವಸಿಷ್ಠ ಮುನೀಶ್ವರನು ತನ್ನಲ್ಲಿದ್ದ ಮಹಾಪವಿತ್ರವಾದ ಕಪಿಲವರ್ಣದ ಕಾಮಧೇನುವಿನ ಮಗಳನ್ನು ಕರೆದು 'ಎಲೌ ಶಬಳೆ, ರಸದ್ರವ್ಯಗಳಿಂದ ಭುಜಿಸುವುದಕ್ಕೆ ಯೋಗ್ಯವಾದ ಅನ್ನ ಉತ್ತಮವಾದ ಪಾನದ್ರವ್ಯಗಳು ಶೀಕರಣೆಗಳು ಭಕ್ಷ್ಯಭೋಜ್ಯಾದಿ ಪಾಯಸಗಳು ಇವುಗಳಿಂದ ಕೂಡಿದ ಷಡ್ರಸೋಪೇತವಾದ ಅನ್ನಸಮೂಹಗಳಿಂದ ಈ ರಾಯನಿಗೆ ಶೀಘ್ರವಾಗಿ ಭೋಜನ ವಾಗುವ ಹಾಗೆ ನಿನ್ನ ಸಾಮರ್ಥ್ಯದಿಂದ ಏರ್ಪಡಿಸು' ಎಂದು ಆಜ್ಞಾಪಿಸಿದನು."



## ೫೩ ನೆಯ ಅಧ್ಯಾಯ

## ಶಬಳೆಗಾಗಿ ವಿಶ್ವಾಮಿತ್ರ ವಸಿಷ್ಠರಿಗೆ ಕಲಹ

"ಆ ಮೇಲೆ ವಸಿಷ್ಠ ಮುನೀಶ್ವರನಿಂದ ಆಜ್ಞಾಪಿಸಲ್ಪಟ್ಟ ಶಬಳೆ ಎಂಬ ಆ ಕಾಮಧೇನುವಿನ ಮಗಳು ಜೇನುತುಪ್ಪ ಕಬ್ಬಿನ ಹಾಲು ಮೊದಲಾದ ಪಾನದ್ರವ್ಯಗಳನ್ನೂ ಸ್ವಾದುವಾದ ಭಕ್ಷ್ಯಗಳನ್ನೂ ಬಿಸಿಯಾದ ಪರ್ವತಾಕಾರವಾದ ಅನ್ನರಾಶಿಗಳನ್ನೂ ಸೂಪ ಘೃತ ಮೊಸರು ಸಂಡಿಗೆಗಳನ್ನೂ ಮತ್ತು ಆತನಿಗೆ ಯಾವ ವಸ್ತುಗಳಲ್ಲಿ ಇಚ್ಛೆಯಾಗಿತ್ತೋ ಅಂಥ ವಸ್ತುಗಳನ್ನೂ ಮೃಷ್ಟಾನ್ನಗಳನ್ನೂ ಆಜ್ಯಪ್ರವಾಹಗಳನ್ನು ನಿರ್ಮಿಸಲು, ಆ ವಸ್ತುಗಳನ್ನು ವಿಶ್ವಾಮಿತ್ರನೂ ಆತನ ಸಮಸ್ತವಾದ ಬಲಗಳೂ ಆತನ ಸ್ತ್ರೀಯರೂ ಪುರೋಹಿತರೂ ಮಂತ್ರಿಗಳೂ ಬ್ರಾಹ್ಮಣರೂ ಭುಜಿಸಿ ತೃಪ್ತಿಪಡೆದು ಸಂತೋಷದಿಂದಿದ್ದರು. ಆ ಮೇಲೆ ವಿಶ್ವಾಮಿತ್ರನು ವಸಿಷ್ಠ ಮುನೀಶ್ವರನನ್ನು ನೋಡಿ 'ವಸಿಷ್ಠ ಮುನಿಗಳೆ, ಒಂದು ಲಕ್ಷ ದ್ರವ್ಯವನ್ನು ಕೊಡುತ್ತೇನೆ. ಶಬಳೆ ಎಂಬ ಈ ಕಾಮಧೇನುವಿನ ಮಗಳನ್ನು ನನಗೆ ಕೊಡಿರಿ. ಇದು ಗೋರತ್ನ. ಇಂತಹ ವಸ್ತು ಅರಸರ ಮನೆಯಲ್ಲಿರಬೇಕಲ್ಲದೆ ಮತ್ತೊಬ್ಬರ ಮನೆಯಲ್ಲಿರಸಲ್ಲದು. ಆದಕಾರಣ ಈ ಧೇನುವು ನ್ಯಾಯವಾಗಿ ನನಗೆ ಸಲ್ಲಬೇಕು' ಎಂದನು.

ವಸಿಷ್ಠ ಮುನೀಶ್ವರನು ವಿಶ್ವಾಮಿತ್ರನನ್ನು ನೋಡಿ 'ಎಲೈ ವಿಶ್ವಾಮಿತ್ರನೆ, ನೀನು ಲಕ್ಷ ದ್ರವ್ಯವನ್ನು ಕೊಡುವುದಾಗಿ ಹೇಳಿದೆ. ಆ ಲಕ್ಷ ದ್ರವ್ಯವು ಹಾಗಿರಲಿ, ನೂರು ಕೋಟಿ ದ್ರವ್ಯವನ್ನು ಕೊಟ್ಟರೂ ಈ ಧೇನುವನ್ನು ಬಿಡಲಾರೆನು. ಲೋಕದಲ್ಲಿ ಅಭಿಮಾನಿಯಾದವನಿಗೆ ಕೀರ್ತಿಯು ಹೇಗೆ ಶಾಶ್ವತವಾಗಿರುವುದೊ ಹಾಗೆ ನನಗೆ ಈ ಕಾಮಧೇನುವು ಶಾಶ್ವತವಾದದ್ದು. ನನ್ನ ಹವ್ಯಕವ್ಯಾದಿಗಳೂ ಅಗ್ನಿಹೋತ್ರ ವೈಶ್ವದೇವ ಸ್ವಾಹಾಕಾರ ವಷಟ್ಕಾರಾದಿ ನಾನಾ ಪ್ರಕಾರ ಗಳಾದ ವಿದ್ಯೆಗಳೆಲ್ಲವೂ ಈ ಕಾಮಧೇನುವಿನ ಅಧೀನವಾಗಿರುವುವು. ನನ್ನ ಸಮಸ್ತವಾದ ಸಂಸಾರ

ಸ್ಥಿತಿಯೂ ಈ ಧೇನುವಿನಿಂದಲೇ ನಡೆಯುವುದು ಈ ವಿಷಯದಲ್ಲಿ ಸಂಶಯವಿಲ್ಲ ಆದಕಾರಣ ಈ ಕಾಮಧೇನುವನ್ನು ಕೊಡಲಾರೆನು ' ಎಂದು ನುಡಿದನು,

ಆ ಮಾತನ್ನು ಕೇಳಿ ಅತ್ಯಂತ ಕೋಪಯುಕ್ತನಾದ ವಿಶ್ವಾಮಿತ್ರನು ವಸಿಷ್ಠನನ್ನು ನೋಡಿ ' ಎಲೈ ವಸಿಷ್ಠ ಮುನಿಗಳೆ, ನಿಮಗೆ ಸುವರ್ಣದ ಕೊರಳ ಸರಪಣಿಗಳುಳ್ಳ ಚಿನ್ನದ ಅಂಕುಶಗಳಿಂದ ಅಲಂಕರಿಸಲ್ಪಟ್ಟು ಮನೋಹರಗಳಾದ ಹದಿನಾಲ್ಕು ಸಾವಿರ ಆನೆಗಳನ್ನು ಕೊಡುತ್ತೇನೆ. ಆದಲ್ಲದೆ ಸುವರ್ಣಮಯವಾದ ರಥಗಳನ್ನೂ ಸುವರ್ಣದ ಕಿರುಘಂಟೆಗಳ ಧ್ವನಿಯಿಂದ ಮನೋಹರವಾಗಿ ರತ್ನಖಚಿತಗಳಾಗಿ ಸುವರ್ಣಾಭರಣಗಳಿಂದ ಅಲಂಕರಿಸಲ್ಪಟ್ಟ ನಾಲ್ಕು ಬಿಳಿಯಕುದುರೆಗಳಿಂದ ಒಪ್ಪುತ್ತಿರುವ ಎಂಟು ನೂರು ರಥಗಳನ್ನೂ ಕೊಡುವೆನು. ವನಾಯುಜದೇಶ ಬಾಹ್ಲಿಕದೇಶ ಮೊದಲಾದ ದೇಶಗಳಲ್ಲಿ ಉಚ್ಚೈಶ್ರವಸ್ಸೆಂಬ ಕುದುರೆಯ ಜಾತಿಯಲ್ಲಿ ಹುಟ್ಟಿದ ಹತ್ತು ಸಾವಿರ ಕುದುರೆಗಳನ್ನು ಕೊಡುವೆನು. ಮತ್ತು ನಾನಾ ವರ್ಣಗಳಾಗಿ ಯೌವನವುಳ್ಳ ಒಂದು ಕೋಟಿ ಗೋವುಗಳನ್ನು ಕೊಡುವೆನು. ಅವುಗಳನ್ನು ತೆಗೆದುಕೊಂಡು ಈ ಕಾಮಧೇನುವನ್ನು ಕೊಡಿರಿ. ಮತ್ತು ನಿಮಗೆ ಎಷ್ಟು ಸುವರ್ಣಬೇಕು ? ಎಷ್ಟು ರತ್ನಗಳು ಬೇಕು ? ಅಷ್ಟನ್ನೂ ಕೊಡುವೆನು. ಈ ಶಬಳೆಯನ್ನು ಕೊಡಿರಿ ' ಎಂದು ಕೇಳಿದನು.

ಆ ಮಾತನ್ನು ಕೇಳಿ ವಸಿಷ್ಠ ಮುನೀಶ್ವರನು ವಿಶ್ವಾಮಿತ್ರನನ್ನು ಕುರಿತು ' ಎಲೈ ವಿಶ್ವಾಮಿತ್ರನೆ, ಕೇಳು , ನೀನು ಎಷ್ಟು ಪ್ರಯಾಸಪಟ್ಟರೂ ಈ ಶಬಳೆಯನ್ನು ಕೊಡಲಾರೆನು. ನನಗೆ ಈ ಕಾಮಧೇನುವೇ ರತ್ನವು. ಇದೇ ನನಗೆ ಸರ್ವಸ್ವವು ಇದೇ ನನ್ನ ಜೀವನ. ಇದೇ ನನ್ನ ದರ್ಶೇಷ್ಟಿ; ಪೌರ್ಣಮಾಸೇಷ್ಟಿ. ಇದೇ ವಿಧ್ಯುಕ್ತವಾದ ಸಮಸ್ತ ದಕ್ಷಿಣಾ ಸಹಿತವಾದ ಯಾಗವು. ಈ ಧೇನುವು ನನ್ನ ನಾನಾಪ್ರಕಾರವಾದ ಸತ್ಕರ್ಮವು ಈ ಅರ್ಥದಲ್ಲಿ ಸಂಶಯವಿಲ್ಲ ಇನ್ನು ಬಹಳವಾಗಿ ಹಂಬಲಿಸುವದರಿಂದ ಪ್ರಯೋಜನವೇನು ! ಸರ್ವಥಾ ಈ ಕಾಮಧೇನುವನ್ನು ಕೊಡಲಾರೆನು ' ಎಂದು ನುಡಿದನು.

---

## ೫೪ ನೆಯ ಅಧ್ಯಾಯ

## ಶಬಳೆಯು ವಿಶ್ವಾಮಿತ್ರನ ಸೈನ್ಯವನ್ನು ಪರಾಜಯಗೊಳಿಸಿದ್ದು

ಈ ಪ್ರಕಾರದಲ್ಲಿ ವಿವಿಧವಾಗಿ ಬೇಡಿದರೂ ವಸಿಷ್ಠ ಮುನೀಶ್ವರನು ಕಾಮಧೇನುವನ್ನು ಕೊಡದಿರಲು, ವಿಶ್ವಾಮಿತ್ರನು ಬಲಾತ್ಕರಿಸಿ ಕಾಮಧೇನುವನ್ನು ಸೆಳೆದನು. ಆ ಕಾಮಧೇನುವು ಮಹಾಚಿಂತೆಯಿಂದ ದುಃಖಪಡುತ್ತ ಮನಸ್ಸಿನಲ್ಲಿ ' ಅಕಟಕಟಾ ! ಮಹಾತ್ಮನಾದ ವಸಿಷ್ಠ ಮುನೀಶ್ವರನು ನನ್ನನ್ನು ಉಪೇಕ್ಷೆಮಾಡಿದನು. ನಾನು ಆ ಮುನೀಶ್ವರನ ಒಡವೆ ಯಾವುದನ್ನು ಅಪಹರಿಸಿದೆನೊ ! ಅಪರಾಧವಿಲ್ಲದಿದ್ದರೆ ನನ್ನನ್ನು ಧರ್ಮಿಷ್ಠನಾದ ವಸಿಷ್ಠ ಮುನೀಶ್ವರನು ಏಕೆ ಬಿಡುತ್ತಾನೆ ! ' ಎಂದು ಚಿಂತಿಸಿ ವಿಶ್ವಾಮಿತ್ರನನ್ನು ಅತಿಕ್ರಮಿಸಿ ವಿಶ್ವಾಮಿತ್ರನ ಭಟರನ್ನು ಕೊಡಹಿ ಬಿಡಿಸಿಕೊಂಡು ಅತಿವೇಗದಿಂದ ವಸಿಷ್ಠ ಮುನೀಶ್ವರನ ಪಾದಗಳ ಸಮೀಪಕ್ಕೆ ಬಂದು ಅಳುತ್ತಾ ಕಣ್ಣೀರು ಸುರಿಸುತ್ತಾ ಗಂಭೀರಸ್ವರದಿಂದ ಆತನನ್ನು ಕುರಿತು ಷಡ್ಗುಣೈಶ್ವರ್ಯ ಸಂಪನ್ನರಾದ ವಸಿಷ್ಠ ಮುನೀಶ್ವರರೆ, ಯಾವ ಕಾರಣದಿಂದ ನನ್ನನ್ನು ಬಿಟ್ಟಿರಿ ? ನಾನು ನಿಮ್ಮ ಒಡವೆ

ಯಾವುದನ್ನು ಅಪಹರಿಸಿದೆನು ? ಏಕೆ ವಿಶ್ವಾಮಿತ್ರನ ಭಟರು ನನ್ನನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋಗುತ್ತಲಿದ್ದಾರೆ ? ' ಎಂದು ಕೇಳಿತು.

ವಸಿಷ್ಠ ಮುನೀಶ್ವರನು ಆ ಶಬಳೆಯನ್ನು ನೋಡಿ ದುಃಖದಿಂದ ರೋದನ ಮಾಡುತ್ತಿರುವ ಒಡಹುಟ್ಟಿದವಳನ್ನು ಸಂತವಿಡುವಂತೆ ' ಎಲೈ ಕಾಮಧೇನುವೆ, ನಾನು ನಿನ್ನನ್ನು ಬಿಟ್ಟುಬಿಡಲಿಲ್ಲ. ನೀನು ನನ್ನ ಒಡವೆ ಯಾವುದನ್ನೂ ಅಪಹರಿಸಿಲ್ಲ. ವಿಶ್ವಾಮಿತ್ರನು ಮಹಾಬಲವಂತನು ಈತನಿಗೆ ಸಮಾನವಾದ ಬಲವು ನನಗಿಲ್ಲ. ಈತನು ಕ್ಷತ್ರಿಯನು. ರಾಜ್ಯಾಧಿಪತಿಯು. ಈತನಿಗೆ ಒಂದು ಅಕ್ಷೌಹಿಣೀ ಚತುರಂಗಬಲವಿದೆ. ಈತನಿಗಿಂತಲೂ ಬಲವಂತರಿನ್ನೊಬ್ಬರಿಲ್ಲ ' ಎಂದು ನುಡಿದನು.

ಆ ಶಬಳೆಯು ವಸಿಷ್ಠ ಮುನೀಶ್ವರನನ್ನು ನೋಡಿ ' ಮುನೀಶ್ವರರೆ, ನಿಮ್ಮ ಬಲವು ಅಪರಿಮಿತವಾದದ್ದು. ನಿಮಗಿಂತಲೂ ಅಧಿಕವಾದ ಬಲವಂತರಿಲ್ಲ. ಲೋಕದಲ್ಲಿ ಕ್ಷತ್ರಿಯರೇ ಬಲವಂತರೆಂದು ಹೇಳುವರು. ಆದರೂ, ವಸಿಷ್ಠ ಮುನೀಶ್ವರರೆ, ದಿವ್ಯವಾದ ಬ್ರಹ್ಮಬಲವು ಕ್ಷತ್ರಿಯ ಬಲಕ್ಕಿಂತಲೂ ಅಧಿಕವಾದದ್ದು. ವಿಶ್ವಾಮಿತ್ರನು ಮಹಾಪರಾಕ್ರಮಿಯಾದರೂ ನಿಮ್ಮ ತೇಜಸ್ಸು ಯಾರಿಗೂ ಸಹಿಸುವದಕ್ಕೆ ಶಕ್ಯವಲ್ಲ ಆದ್ದರಿಂದ ನೀವು ನನಗೆ ಅಪ್ಪಣೆಯನ್ನು ಕೊಡಿರಿ. ನಿಮ್ಮ ಬ್ರಹ್ಮಬಲದಿಂದ ವಿಶ್ವಾಮಿತ್ರನ ಗರ್ವವನ್ನು ಮುರಿಯುತ್ತೇನೆ ' ಎಂದು ನುಡಿಯಿತು.

ಆಗ ಮಹಾಕೀರ್ತಿವಂತನಾದ ವಸಿಷ್ಠ ಮುನೀಶ್ವರನು ' ಎಲೈ ಶಬಳೆ, ನೀನು ನಿನ್ನ ಸಾಮರ್ಥ್ಯದಿಂದ ವಿಶ್ವಾಮಿತ್ರನ ಬಲವನ್ನು ಮುರಿಯುವ ಬಲಗಳನ್ನು ಸೃಷ್ಟಿಸು ' ಎಂದು ಹೇಳಿದನು. ಆ ಮಾತನ್ನು ಕೇಳಿ ಆ ಕಾಮಧೇನುವು ಹುಂಭಾರವವನ್ನು ಮಾಡಲು ಆದರಿಂದ ಅನೇಕ ಮಂದಿ ವ್ಯಾಧರು ಜನಿಸಿ ವಿಶ್ವಾಮಿತ್ರನ ಸಮ್ಮುಖದಲ್ಲಿಯೇ ಆತನ ಬಲವನ್ನು ಸಂಹರಿಸಿದರು. ವಿಶ್ವಾಮಿತ್ರನು ತನ್ನ ಬಲವು ನಾಶವಾದದ್ದನ್ನು ಕಂಡು ಅತಿಕೋಪಯುಕ್ತನಾಗಿ ಕಣ್ಣುಗಳನ್ನು ತಿರುಗಿಸುತ್ತ ತನ್ನ ಶಸ್ತ್ರಗಳಿಂದ ಆ ವ್ಯಾಧರನ್ನು ಸಂಹರಿಸಿದನು. ಆಮೇಲೆ ಕಾಮಧೇನುವು ತನ್ನಬಲವು ವಿಶ್ವಾಮಿತ್ರನಿಂದ ಹತವಾದುದನ್ನು ಕಂಡು ಘೋರರಾದ ಜೋನಿಗರನ್ನೂ ಹಬ್ಬಿಸಿಗರನ್ನೂ ಸೃಷ್ಟಿಸಿತು. ಅವರಿಂದ ಭೂಮಿಯು ಪರಿಪೂರ್ಣವಾಯಿತು. ಆ ಜೋನಿಗರೂ ಹಬ್ಬಿಸಿಗರೂ ಸುವರ್ಣಮಯವಾದ ವಸ್ತ್ರಗಳನ್ನೂ ಪರಶುವೆಂಬ ಆಯುಧವನ್ನೂ ಧರಿಸಿಕೊಂಡು ಹೊಂದಾವರೆಗಳ ಮಧ್ಯದಲ್ಲಿರುವ ಕೇಸರಗಳ ಹಾಗೆ ಹೊಂಬಣ್ಣವುಳ್ಳವರಾಗಿ ವಿಶ್ವಾಮಿತ್ರನ ಬಲವನ್ನು ಯಜ್ಞೇಶ್ವರನು ದಹಿಸುವ ಹಾಗೆ ಸಂಹರಿಸಿದರು. ಆದನ್ನು ನೋಡಿ ವಿಶ್ವಾಮಿತ್ರನು ಶಸ್ತ್ರಾಸ್ತ್ರಗಳಿಂದ ಆ ಜೋನಿಗರನ್ನೂ ಹಬ್ಬಿಸಿಗರನ್ನೂ ಸಂಹರಿಸಿದನು. "

---

೫೫ ನೆ ಯ ಅ ಧ್ಯಾ ಯ

## ವಿ ಶ್ವಾ ಮಿ ತ್ರ ನು ವ ಸಿ ಷ್ಠ ನ ಆ ಶ್ರ ಮ ವ ನ್ನು ನಾ ಶ ಮಾ ಡಿ ದು ದು

" ಆಮೇಲೆ ವಸಿಷ್ಠ ಮುನೀಶ್ವರನು ವಿಶ್ವಾಮಿತ್ರನಿಂದ ಹತವಾದ ತನ್ನ ಬಲವನ್ನು ಕಂಡು ಶಬಳೆಯನು ಕರೆದು ಎಲೈ ಶಬಳೆ, ಕಾಲೋಚಿತವಾಗಿ ಬಲಗಳನ್ನು ನಿರ್ಮಿಸು ' ಎಂದು ಹೇಳಿದನು. ಆ ಕಾಮಧೇನುವು ತನ್ನ ಹುಂಭಾರವದಿಂದ ಕಾಂಭೋಜರೆಂಬ ಭಟರನ್ನೂ ತನ್ನ ಕೆಚ್ಚಲಿನಿಂದ

ಶಸ್ತ್ರಪಾಣಿಗಳಾದ ಪಲ್ಲವರೆಂಬ ಭಟರನ್ನೂ ಯೋನಿಪ್ರದೇಶದಿಂದ ಯವನರನ್ನೂ ಗುದಸ್ಥಾನದಿಂದ ಶಕರೆಂಬ ಭಟರನ್ನೂ ರೋಮಕೂಪಗಳಿಂದ ಮ್ಲೇಚ್ಛರು ಹಾರೀತರು ಕಿರಾತರು ಮೊದಲಾದವರನ್ನೂ ನಿರ್ಮಿಸಿತು. ಅವರು ವಿಶ್ವಾಮಿತ್ರನ ಚತುರಂಗಬಲವನ್ನು ಕ್ಷಣಮಾತ್ರದಲ್ಲಿ ಸಂಹರಿಸಿದರು. ಆಮೇಲೆ ವಿಶ್ವಾಮಿತ್ರನ ಸೇನೆಯು ಪಲಾಯನಮಾಡಿದ ವೃತ್ತಾಂತವನ್ನು ತಿಳಿದು ನಾನಾ ಪ್ರಕಾರವಾದ ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರಾದ ಆತನ ನೂರು ಮಂದಿ ಮಕ್ಕಳು ವಸಿಷ್ಠ ಮುನೀಶ್ವರನನ್ನು ಎದುರಿಸಿದರು. ವಸಿಷ್ಠ ಮುನೀಶ್ವರನು ತನ್ನ ಹುಂಕಾರದಿಂದ ಅವರೆಲ್ಲರನ್ನೂ ದಹಿಸಿ ಭಸ್ಮಮಾಡಿದನು. ಈ ರೀತಿಯಲ್ಲಿ ತನ್ನ ನೂರು ಮಂದಿ ಮಕ್ಕಳೂ ಚದುರಂಗ ಬಲಗಳೂ ವಸಿಷ್ಠ ಮುನೀಶ್ವರನಿಂದ ಭಸ್ಮವಾದ್ದನ್ನು ಕಂಡು ವಿಶ್ವಾಮಿತ್ರನು ಪುತ್ರಶೋಕದಿಂದ ಲಜ್ಜಿತನಾಗಿ ತಲೆಬಾಗಿ ಚಿಂತಾಕ್ರಾಂತನಾದನು. ಆತನು ಚಲಿಸದಿರುವ ಸಮುದ್ರದಂತೆಯೂ ಹಲ್ಲಿಲ್ಲದ ಸರ್ಪದಂತೆಯೂ ಮುಖಕಾಂತಿ ಗುಂದಿ ಪುತ್ರಶೋಕದಿಂದ ಉತ್ಸಾಹಹೀನನಾಗಿ ಒಬ್ಬ ಮಗನನ್ನು ಕ್ಷತ್ರಧರ್ಮದಲ್ಲಿ ರಾಜ್ಯವನ್ನು ಪರಿಪಾಲಿಸಿಕೊಂಡಿರಲು ಕಟ್ಟುಮಾಡಿ ತಾನು ಹಿಮವತ್ಪರ್ವತದ ತಪ್ಪಲಿಗೆ ಹೋಗಿ ಸಮಸ್ತ ದೇವರ್ಷಿಗಳಿಂದ ಸೇವಿಸಲ್ಪಟ್ಟ ಆ ಹಿಮವತ್ಪರ್ವತದಲ್ಲಿ ಈಶ್ವರನನ್ನು ಕುರಿತು ತಪಸ್ಸನ್ನು ಮಾಡಲಾರಂಭಿಸಿದನು.

ಕೆಲವು ಕಾಲವಾದಮೇಲೆ ಆತನ ತಪಸ್ಸಿಗೆ ಮೆಚ್ಚಿ ಪರಮೇಶ್ವರನು ಪ್ರತ್ಯಕ್ಷನಾಗಿ 'ಎಲೈ ಅರಸನೆ, ನೀನು ಯಾವ ಕಾರಣದಿಂದ ತಪಸ್ಸನ್ನು ಮಾಡುತ್ತಿದ್ದೀಯೆ ? ನಿನ್ನ ಮನಸ್ಸಿನಲ್ಲಿ ಇರುವ ಕಾರ್ಯವೇನು ? ನಿನ್ನ ಇಷ್ಟಾರ್ಥವನ್ನು ಕೊಡುತ್ತೇನೆ' ಎಂದು ನುಡಿದನು. ವಿಶ್ವಾಮಿತ್ರನು ಪರಮೇಶ್ವರನಿಗೆ ನಮಸ್ಕಾರವನ್ನು ಮಾಡಿ 'ಪರಮೇಶ್ವರನೆ, ನೀನು ಪ್ರಸನ್ನನಾಗಿ ವರವನ್ನು ಕೊಡುವ ಪಕ್ಷದಲ್ಲಿ ಸಾಂಗೋಪಾಂಗವಾಗಿ ಧನುರ್ವೇದದ ರಹಸ್ಯಗಳನು. ಕೊಡು. ಸಮಸ್ತ ದೇವದಾನವ ರಲ್ಲಿಯೂ ಸಮಸ್ತ ಋಷಿಗಳಲ್ಲಿಯೂ ಗಂಧರ್ವ ಯಕ್ಷರಾಕ್ಷಸರಲ್ಲಿಯೂ ಇರುವ ಮಂತ್ರಾಸ್ತ್ರ ಗಳೆಲ್ಲವೂ ನಿನ್ನ ಕೃಪೆಯಿಂದ ನನಗೆ ವಶವರ್ತಿಗಳಾಗಲಿ' ಎಂದು ಬೇಡಿಕೊಂಡನು.

ಪರಮೇಶ್ವರನು ಕೃಪೆಯಿಂದ 'ಹಾಗೆಯೇ ಆಗಲಿ' ಎಂದು ವರವನ್ನು ಕೊಟ್ಟು ಮರೆಯಾದನು. ಆಮೇಲೆ ಮಹಾತಪಸ್ವಿಯಾಗಿ ರಾಜರ್ಷಿಯಾದ ವಿಶ್ವಾಮಿತ್ರನು ಪರಮೇಶ್ವರನಿಂದ ಸಮಸ್ತ ಮಂತ್ರಾಸ್ತ್ರಗಳನ್ನೂ ಪಡೆದು ಗರ್ವಿತನಾಗಿ ಪರ್ವಕಾಲದ ಸಮುದ್ರದಂತೆ ಪರಾಕ್ರಮದಿಂದ ಹೆಚ್ಚುತ್ತ ಇನ್ನು ತನ್ನಿಂದ ವಸಿಷ್ಠಮುನೀಶ್ವರನು ಹತನಾದನೆಂದು ಮನಸ್ಸಿನಲ್ಲಿ ನಿಶ್ಚಯಿಸಿದನು. ಅನಂತರ ವಸಿಷ್ಠಮುನೀಶ್ವರನ ಆಶ್ರಮಕ್ಕೆ ಹೋಗಿ ತನ್ನ ಮಂತ್ರಾಸ್ತ್ರಗಳನ್ನು ಪ್ರಯೋಗಿಸಲು ಆ ಮಂತ್ರಾಸ್ತ್ರ ಗಳ ತೇಜಸ್ಸಿನಿಂದ ವಸಿಷ್ಠಮುನಿಯ ಆಶ್ರಮವು ದಗ್ಧವಾಯಿತು. ಆತನ ಮಂತ್ರಾಸ್ತ್ರಗಳ ಬಲವನ್ನು ಕಂಡು ಅಲ್ಲಿದ್ದ ಮುನಿಗಳೂ ವಸಿಷ್ಠಮುನೀಶ್ವರನ ಶಿಷ್ಯರೂ ಮೃಗಪಕ್ಷಿಗಳೂ ಭಯಪಟ್ಟು ನಾನಾದಿಕ್ಕುಗಳಲ್ಲಿ ಪಲಾಯನವಾಗಿ ಹೋಗಲು ವಸಿಷ್ಠಮುನಿಯ ಆಶ್ರಮವು ಕ್ಷಣಮಾತ್ರದಲ್ಲಿ ಕಲ್ಲುಭೂಮಿಯಂತೆ ಸರ್ವಶೂನ್ಯವಾಯಿತು! ಆಗ ಸಮಸ್ತ ತಪಸ್ವಿಗಳಿಗೂ ಉತ್ತಮನೂ ಸೂರ್ಯನಿಗೆ ಸಮಾನನೂ ಅತಿತೇಜಸ್ವಿಯೂ ಆದ ವಸಿಷ್ಠಮುನೀಶ್ವರನು ತನ್ನ ಆಶ್ರಮದಿಂದ ಓಡಿಹೋಗುತ್ತಿದ್ದ ಪ್ರಾಣಿಗಳನ್ನು ಕಂಡು 'ಹೋಹೋ ನಿಲ್ಲಿ ನಿಲ್ಲಿ! ಅಂಜಬೇಡಿರಿ!' ಎಂದು ಅವರಿಗೆ ಸಹಾಯವಾಗಿ ಬಂದು, ಅತಿಕೋಪದಿಂದ ವಿಶ್ವಾಮಿತ್ರನನ್ನು ನೋಡಿ 'ಎಲೈ ವಿಶ್ವಾಮಿತ್ರನೆ, ಬಹುಕಾಲದಿಂದಲೂ ಜನಸಮೃದ್ಧಿಯಿಂದ ಸೊಂಪಾಗಿ ಮನೋಹರವಾಗಿದ್ದ ಈ ಆಶ್ರಮವನ್ನು ಕೆಡಿಸಿದೆ; ಆದ್ದರಿಂದ ನೀನು ಕೊಲ್ಲಲು ಯೋಗ್ಯನು' ಎಂದು ನುಡಿದು ಹೊಗೆ

ಯಿಲ್ಲದ ಪ್ರಳಯಕಾಲಾಗ್ನಿರೂಪವಾದ ಎರಡನೆಯ ಯಮದಂಡವೋ ಎಂಬ ಪ್ರಕಾರದಲ್ಲಿದ್ದ ತನ್ನ ಬ್ರಹ್ಮದಂಡವನ್ನು ನೆಗಹಿಕೊಂಡು ವಿಶ್ವಾಮಿತ್ರನ ಸಮೀಪಕ್ಕೆ ಬಂದನು.”



## ೫೬ನೆಯ ಅಧ್ಯಾಯ

## ವಿಶ್ವಾಮಿತ್ರನ ಪರಾಜಯ

“ ಆಗ ವಿಶ್ವಾಮಿತ್ರನು ಆಗ್ನೇಯಾಸ್ತ್ರವನ್ನು ಮೇಲಕ್ಕೆ ನೆಗಹಿ ‘ ಎಲೇ ವಸಿಷ್ಠ, ನಿಲ್ಲು ನಿಲ್ಲು ’ ಎಂದು ನುಡಿದನು. ಆ ಮಾತನ್ನು ಕೇಳಿ ವಸಿಷ್ಠನು ಅತಿಕೋಪದಿಂದ ಕಾಲದಂಡದಂತಿರುವ ದಂಡ ಕಾಷ್ಠವನ್ನು ಮೇಲಕ್ಕೆ ನೆಗಹಿ ವಿಶ್ವಾಮಿತ್ರನನ್ನು ನೋಡಿ ‘ ಎಲೇ ಕ್ಷತ್ರಿಯಾಭಾಸನೆ, ನಾನು ಎದುರಾಗಿ ನಿಂತು ನಿನ್ನ ಬಲವನ್ನೂ ಗರ್ವವನ್ನೂ ಅಸ್ತ್ರಬಲವನ್ನೂ ಮುರಿಯುತ್ತೇನೆ ; ನನ್ನ ಬ್ರಹ್ಮ ಬಲದ ಮುಂದೆ ನಿನ್ನ ಕ್ಷತ್ರಿಯಬಲವು ಎತ್ತಣದು ! ನನ್ನ ಬ್ರಹ್ಮಬಲವನ್ನು ನೋಡು ’ ಎಂದು ವಿಶ್ವಾಮಿತ್ರನ ಆಗ್ನೇಯಾಸ್ತ್ರವನ್ನು ಉದಕದಿಂದ ಅಗ್ನಿಯನ್ನು ಶಮನಮಾಡುವ ಹಾಗೆ ತನ್ನ ಬ್ರಹ್ಮದಂಡದಿಂದ ಶಮನಮಾಡಿದನು. ಆಮೇಲೆ ವಿಶ್ವಾಮಿತ್ರನು ವಸಿಷ್ಠಮುನೀಶ್ವರನಮೇಲೆ ವಾರುಣಾಸ್ತ್ರ ರೌದ್ರಾಸ್ತ್ರ ಪಾಶುಪತಾಸ್ತ್ರ ಐಷೀಕಾಸ್ತ್ರ ಮಾನವಾಸ್ತ್ರ ಮೋಹನಾಸ್ತ್ರ ಗಂಧರ್ವಾಸ್ತ್ರ ತಾಪನಾಸ್ತ್ರ ಜೃಂಭಣಾಸ್ತ್ರ ವಜ್ರಾಸ್ತ್ರ ದುರ್ಜಯಾಸ್ತ್ರ ಬ್ರಹ್ಮಪಾಶಾಸ್ತ್ರ ವರುಣಪಾಶಾಸ್ತ್ರ ಕಾಲ ಪಾಶಾಸ್ತ್ರ ಪಿನಾಕಾಸ್ತ್ರ ಕಾಲಚಕ್ರಾಸ್ತ್ರ ಪೈಶಾಚಾಸ್ತ್ರ ಕ್ರೌಂಚಾಸ್ತ್ರ ಧರ್ಮಚಕ್ರಾಸ್ತ್ರ ವಿಷ್ಣುಚಕ್ರಾಸ್ತ್ರ ವಾಯವ್ಯಾಸ್ತ್ರ ಮದನಾಸ್ತ್ರ ಶಕ್ತಿದ್ವಯಾಸ್ತ್ರ ಕಂಕಾಳಾಸ್ತ್ರ ವಿದ್ಯಾಧರಾಸ್ತ್ರ ಕಾಲಾಸ್ತ್ರ ತ್ರಿಶೂಲಾಸ್ತ್ರ ಘೋರಾಸ್ತ್ರ ಕಪಾಲಾಸ್ತ್ರ ಮೊದಲಾದ ಮಂತ್ರಾಸ್ತ್ರಗಳನ್ನು ಪ್ರಯೋಗಿಸಿದನು. ಬ್ರಹ್ಮಪುತ್ರನಾದ ವಸಿಷ್ಠನು ಆ ಅಸ್ತ್ರಗಳನ್ನು ಒಂದೇಸಾರಿ ತನ್ನ ಬ್ರಹ್ಮದಂಡದಿಂದ ಲಯಮಾಡಿದನು. ವಿಶ್ವಾಮಿತ್ರನು ತನ್ನ ಅಸ್ತ್ರಗಳೆಲ್ಲವೂ ಲಯವಾಗಲು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು ; ಆಗ ಸಮಸ್ತ ದೇವತೆ ಗಳೂ ವಸಿಷ್ಠನಮೇಲೆ ಪ್ರಯೋಗಿಸಲ್ಪಟ್ಟ ಬ್ರಹ್ಮಾಸ್ತ್ರವನ್ನು ಕಂಡು ಕಂಗೆಡುತ್ತಿದ್ದರು. ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳೂ ಕಂಗೆಟ್ಟವು. ಆ ಸಮಯದಲ್ಲಿ ವಸಿಷ್ಠ ಮುನೀಶ್ವರನು ತನ್ನಮೇಲೆ ಬರುತ್ತಿದ್ದ ಬ್ರಹ್ಮಾಸ್ತ್ರವನ್ನು ತನ್ನ ಬ್ರಹ್ಮದಂಡದಿಂದ ನುಂಗಲು ಆತನ ಸಾಮರ್ಥ್ಯವನ್ನು ಕಂಡು ತ್ರಿಲೋಕಗಳೂ ಬೆರಗಾದವು ! ಆಮೇಲೆ ವಸಿಷ್ಠಮುನೀಶ್ವರನು ಕೋಪಾತಿಶಯದಿಂದ, ರೋಮಕೂಪಗಳಿಂದ ಸೂರ್ಯಕಿರಣಗಳ ಹಾಗೆ ಹೊಗೆಯಸಹಿತವಾದ ಅಗ್ನಿ ಕಿಡಿಗಳು ಹೊರಡುತ್ತಿರಲು, ವಿಶ್ವಾಮಿತ್ರನಮೇಲೆ ತನ್ನ ಬ್ರಹ್ಮದಂಡವನ್ನು ನೆಗಹಲು ಆ ದಂಡವು ಹೊಗೆಯಿಲ್ಲದ ಪ್ರಳಯಕಾಲಾಗ್ನಿಯಂತೆಯೂ ಎರಡನೆಯ ಯಮದಂಡದಂತೆಯೂ ಹೊಳೆಯು ತ್ತಿದ್ದಿತು. ಅದನ್ನು ಕಂಡು ದೇವತೆಗಳು ವಸಿಷ್ಠಮುನೀಶ್ವರನನ್ನು ಜಯಜಯ ಎಂದು ಕೊಂಡಾಡುತ್ತ ಆತನನ್ನು ಕುರಿತು ‘ ವಸಿಷ್ಠಮುನೀಶ್ವರನೆ, ನಿನ್ನ ಬ್ರಹ್ಮದಂಡವು ಅಮೋಘ ವಾದದ್ದು ; ಅದನ್ನು ಬಿಟ್ಟರೆ ಯಾವುದೂ ತಡೆಯುವುದಿಲ್ಲ. ಆದಕಾರಣ ಅದನ್ನು ನಿನ್ನ ಬ್ರಹ್ಮ ತೇಜಸ್ಸಿನಲ್ಲಿಯೇ ಅಡಕಮಾಡಿಕೊ. ಮಹಾಬಲವಂತನಾದ ವಿಶ್ವಾಮಿತ್ರನು ನಿನಗೆ ಸೋತನು ; ನೀನು ಪ್ರಸನ್ನನಾಗು ; ಸಮಸ್ತಲೋಕಗಳೂ ಸುಖವನ್ನು ಪಡೆಯಲಿ ’ ಎಂದು ಪ್ರಾರ್ಥಿಸಿದರು.

ಆ ಮಹಾತಪಸ್ವಿಯು ದೇವತೆಗಳ ಮಾತನ್ನು ಕೇಳಿ ಶಾಂತಕೋಪನಾಗಿ ಬ್ರಹ್ಮದಂಡವನ್ನು ಉಪಸಂಹಾರಮಾಡಿದನು. ವಿಶ್ವಾಮಿತ್ರನು ವಸಿಷ್ಠಮುನೀಶ್ವರನಿಗೆ ಸೋತವನಾಗಿ ದುಃಖದಿಂದ

'ಲೋಕದಲ್ಲಿ ಬ್ರಹ್ಮಬಲವೇ ಬಲವು ಆದರವುುಂದೆ ಕ್ಷತ್ರಿಯ ಬಲವನ್ನು ಸುಡಬೇಕು. ಒಂದು ಬ್ರಹ್ಮದಂಡದಿಂದ ನನ್ನ ಸಮಸ್ತ ಮಂತ್ರಾಸ್ತ್ರಗಳೂ ನಿಷ್ಫಲವಾಗಿ ಹೋದವು. ಇದನ್ನು ಕಂಡಂಥ ನಾನು ಇನ್ನು ದೃಢಚಿತ್ತನಾಗಿ ಬ್ರಹ್ಮತೇಜಸ್ಸು ಬರುವಂತೆ ತಪಸ್ಸನ್ನು ಮಾಡಬೇಕು' ಎಂದು ನಿಶ್ಚಯಿಸಿದನು."



೫೭ ನೆಯ ಅಧ್ಯಾಯ

## ತ್ರಿಶಂಕುರಾಜನ ವೃತ್ತಾಂತ

ಈ ಪ್ರಕಾರವಾಗಿ ವಸಿಷ್ಠಮುನೀಶ್ವರನಿಂದಾದ ಅಪಜಯವನ್ನು ಸ್ಮರಿಸುತ್ತ ನಿಟ್ಟುಸುರು ಬಿಡುತ್ತ ಮಹಾತ್ಮನಾದ ವಿಶ್ವಾಮಿತ್ರನು ತನ್ನ ಪತ್ನಿಯನ್ನು ಕೂಡಿಕೊಂಡು ತೆಂಕಣದಿಕ್ಕಿಗೆ ಹೋಗಿ ಅಲ್ಲಿ ಕಂದ ಮೂಲ ಫಲಾಹಾರಗಳಿಂದ ಮನಸ್ಸನ್ನು ನಿಗ್ರಹಿಸಿ ಮಹಾಘೋರವಾದ ತಪಸ್ಸನ್ನು ಮಾಡಿದನು. ಆಮೇಲೆ ಆತನಿಗೆ ಹವಿಷ್ಯಂದ ಮಧುಷ್ಯಂದ ಧೃಡನೇತ್ರ ಮಹಾರಥ ಎಂಬ ನಾಲ್ವರು ಮಕ್ಕಳಾದರು. ಆಮೇಲೆ ಸಾವಿರ ವರುಷಗಳು ತಪಸ್ಸಿನಿಂದ ಕಳೆಯಲು ಲೋಕಕರ್ತನಾದ ಬ್ರಹ್ಮದೇವನು ವಿಶ್ವಾಮಿತ್ರನಿಗೆ ಪ್ರಸನ್ನನಾಗಿ ಮಧುರವಾದ ಮಾತುಗಳಿಂದ ಆತನನ್ನು ಕುರಿತು 'ವಿಶ್ವಾಮಿತ್ರ, ನೀನು ಇಂದು ಮೊದಲಾಗಿ ರಾಜರ್ಷಿಯೆನಿಸಿಕೊಂಡು ಮಹಾಪ್ರಸಿದ್ಧನಾಗಿ ರಾಜರ್ಷಿಗಳ ಲೋಕದಲ್ಲಿ ಸಂಚರಿಸುತ್ತಿರು!' ಎಂದು ವರವನ್ನು ಕೊಟ್ಟು ಸಮಸ್ತ ದೇವತೆಗಳನ್ನೂ ಕೂಡಿಕೊಂಡು ತನ್ನ ಲೋಕಕ್ಕೆ ಬಿಜಯಂಗೈದನು. ಆಮೇಲೆ ವಿಶ್ವಾಮಿತ್ರನು ಲಜ್ಜೆಯಿಂದ ತಲೆಬಾಗಿಸಿ ಅತ್ಯಂತ ದುಃಖಿತನಾಗಿ ಮಹಾಕೋಪದಿಂದ 'ಅಕಟಕಟಾ! ನಾನು ಮಹಾದುಷ್ಕರವಾದ ತಪಸ್ಸನ್ನು ಮಾಡಿದೆನು. ಹಾಗಾದರೂ ಸಮಸ್ತ ದೇವತೆಗಳೂ ನನ್ನನ್ನು ರಾಜಋಷಿಯೆಂದು ಹೇಳಿದರಲ್ಲದೆ ಬ್ರಹ್ಮಋಷಿಯೆಂದು ಹೇಳಲಿಲ್ಲ. ನನ್ನ ತಪಸ್ಸು ವ್ಯರ್ಥವಾಯಿತು' ಎಂದು ಅತ್ಯಂತ ಕೋಪಗೊಂಡು ತನ್ನ ತಪೋಜ್ವಾಲೆಯಿಂದ ಸಮಸ್ತ ಲೋಕಗಳನ್ನೂ ವ್ಯಥೆಪಡಿಸುತ್ತ ಪುನಃ ಮಹಾ ಘೋರವಾದ ತಪಸ್ಸನ್ನು ಮಾಡುತ್ತಿದ್ದನು!

ಆ ಸಮಯದಲ್ಲಿ ತ್ರಿಶಂಕುವೆಂಬ ಇಕ್ಷ್ವಾಕುವಂಶದ ರಾಜನು ತಾನು ಯಾಗವನ್ನು ಮಾಡಿ ಶರೀರಸಹಿತ ಸ್ವರ್ಗಲೋಕಕ್ಕೆ ಹೋಗಬೇಕೆಂದು ಯೋಚನೆಮಾಡಿ ತನ್ನ ಪುರೋಹಿತನಾದ ವಸಿಷ್ಠನೊಡನೆ ಹೇಳಲು ಆ ಮುನೀಶ್ವರನು ತ್ರಿಶಂಕುಮಹಾರಾಜನನ್ನು ಕುರಿತು 'ಎಲೈ ತ್ರಿಶಂಕು ಮಹಾರಾಜನೆ, ಯಾಗವನ್ನು ಮಾಡಿ ಶರೀರ ಸಹಿತವಾಗಿ ಸ್ವರ್ಗಲೋಕವನ್ನೈದಬೇಕೆಂಬ ಆಲೋಚನೆಯು ಅಸಾಧ್ಯವು' ಎಂದು ಹೇಳಿ ಅವನ ಪ್ರಾರ್ಥನೆಯನ್ನು ನಿರಾಕರಿಸಿದನು. ಹಾಗೆ ನಿರಾಕರಿಸಲ್ಪಟ್ಟ ತ್ರಿಶಂಕುಮಹಾರಾಜನು ತೆಂಕಣದಿಕ್ಕಿನಲ್ಲಿ ತಪಸ್ಸನ್ನು ಮಾಡುತ್ತಿದ್ದ ವಸಿಷ್ಠ ಮುನೀಶ್ವರನ ನೂರು ಮಂದಿ ಮಕ್ಕಳ ಸಮೀಪಕ್ಕೆ ಹೋಗಿ ತನ್ನ ಗುರುಪುತ್ರರಾದ ಆ ನೂರು ಮಂದಿಯನ್ನೂ ಕಂಡು ಅಭಿವಂದಿಸಿ ಲಜ್ಜೆಯಿಂದ ತಲೆಬಾಗಿಸಿ ಕೈಮುಗಿದುಕೊಂಡು ಅವರನ್ನು ಕುರಿತು 'ಗುರುಪುತ್ರರುಗಳಿರಾ, ನಾನು ಯಜ್ಞವನ್ನು ಮಾಡಿ ಶರೀರಸಹಿತವಾಗಿ ಸ್ವರ್ಗಪದವಿಯನ್ನು ಪಡೆಯಬೇಕೆಂದು ನನ್ನ ಕುಲಗುರುವಾದ ವಸಿಷ್ಠ ಮುನೀಶ್ವರನಿಗೆ ಅಭಿವಂದಿಸಿ ಹೇಳಿದೆನು. ಆತನು ಅದು ಸಾಧ್ಯವಾದ ಕೃತ್ಯವಲ್ಲವೆಂದು ನಿರಾಕರಿಸಿ ಕಳುಹಿಸಿದನು. ಆ ಮೇಲೆ ನೀವೇ ಗತಿಯೆಂದು ನಿಮಗೆ ಅಭಿವಂದಿಸಿ ನಿಮ್ಮ ಶರಣು ಹೊಕ್ಕೆನು. ನೀವು ನನ್ನ ಕೈಯಲ್ಲಿ ಯಾಗವನ್ನು ಮಾಡಿಸಿ

ನನ್ನನ್ನು ಶರೀರಸಹಿತವಾಗಿ ಸ್ವರ್ಗಲೋಕಕ್ಕೆ ಕಳುಹಿಸುವ ಕೃಪೆಮಾಡಿರಿ. ನಿಮ್ಮ ತಂದೆಯು ನನ್ನನ್ನು ನಿರಾಕರಿಸಿದಮೇಲೆ ನನಗೆ ನೀವೇ ಗತಿಯಲ್ಲದೆ ಮತ್ತೊಬ್ಬರು ರಕ್ಷಕರಿಲ್ಲ. ಯಾಕೆಂದರೆ ಇಕ್ಷ್ವಾಕುವಂಶದ ರಾಯರಿಗೆ ನೀವೇ ಪುರೋಹಿತರು ಈ ವಂಶದ ರಾಜರಿಗೆ ಸರ್ವಜ್ಞಾನೋಪದೇಶ ಹಿತೋಪದೇಶಗಳಿಂದ ಸರ್ವಸೌಖ್ಯಗಳನ್ನುಂಟುಮಾಡಿ ಕಡೆಹಾಯಿಸುವವರು ನೀವೆ ಆದ್ದರಿಂದ ನಾನು ನಿಮ್ಮ ಮರೆಹೊಕ್ಕೆನು' ಎಂದು ಬಿನ್ನಹಮಾಡಿದನು."



## ೫೮ನೆಯ ಅಧ್ಯಾಯ

## ವಿಶ್ವಾಮಿತ್ರನಿಗೆ ತ್ರಿಶಂಕುವಿನ ಶರಣಾಗತಿ

"ಆ ಮೇಲೆ ತ್ರಿಶಂಕುಮಹಾರಾಜನ ಮಾತನ್ನು ಕೇಳಿ ವಸಿಷ್ಠ ಮುನೀಶ್ವರನ ನೂರು ಮಂದಿ ಮಕ್ಕಳೂ ಆ ಮಹಾರಾಯನನ್ನು ನೋಡಿ 'ಎಲೈ ರಾಜನೆ, ಮಹಾಜ್ಞಾನಿಯೂ ಮಹಾತ್ಮನೂ ಗುರುವೂ ಆದ ವಸಿಷ್ಠ ಮುನೀಶ್ವರನು ಈ ಕಾರ್ಯವು ಸಾಧ್ಯವಲ್ಲವೆಂದು ನಿರಾಕರಿಸಿದ ಮೇಲೆ, ನೀನು ಮತ್ತೊಬ್ಬರ ಸಮೀಪಕ್ಕೆ ಹೋಗುವುದು ಉಚಿತವಲ್ಲ. ಇಕ್ಷ್ವಾಕುವಂಶದ ಮಹಾರಾಜರಿಗೆ ವಸಿಷ್ಠ ಮುನೀಶ್ವರನು ಪುರೋಹಿತನು. ಆತನೇ ಗುರುವು. ಸತ್ಯಸಂಧನಾದ ವಸಿಷ್ಠ ಮುನೀಶ್ವರನ ಮಾತನ್ನು ಯಾರೂ ಅತಿಕ್ರಮಿಸಬಾರದು. ಷಡ್ಗುಣೈಶ್ವರ್ಯಸಂಪನ್ನನಾದ ವಸಿಷ್ಠ ಮಹರ್ಷಿಯು ಈ ಕಾರ್ಯವು ಸಾಧ್ಯವಾದದ್ದಲ್ಲವೆಂದು ನಿರಾಕರಿಸಿದಮೇಲೆ ನಾವು ಆತನನ್ನತಿಕ್ರಮಿಸಿ ನಿನ್ನ ಯಾಗವನ್ನು ಮಾಡಿಸುವದಕ್ಕೆ ಸಮರ್ಥರಲ್ಲ. ವಸಿಷ್ಠ ಮುನೀಶ್ವರನು ಸ್ವರ್ಗ ಮರ್ತ್ಯ ಪಾತಾಳಗಳಲ್ಲಿಯೂ ಯಾಗವನ್ನು ಮಾಡಿಸುವುದಕ್ಕೆ ಸಮರ್ಥನು. ಆತನನ್ನು ಅತಿಕ್ರಮಿಸುವುದಕ್ಕೆ ನಾವು ಸಮರ್ಥರಲ್ಲ. ಆದ್ದರಿಂದ ನೀನು ಈ ಮಕ್ಕಳಾಟದ ಬುದ್ಧಿಯನ್ನು ಬಿಟ್ಟು ಸುಖದಿಂದ ನಿನ್ನ ಪಟ್ಟಣಕ್ಕೆ ಹೋಗು' ಎಂದು ನುಡಿದರು.

ಅವರ ಮಾತನ್ನು ಕೇಳಿ ತ್ರಿಶಂಕುಮಹಾರಾಜನು ಕೋಪದಿಂದ 'ಗುರುಪುತ್ರರೆ, ನನ್ನನ್ನು ಗುರುವಾದ ವಸಿಷ್ಠ ಮುನೀಶ್ವರನು ನಿರಾಕರಿಸಿದನು. ಆಮೇಲೆ ನಿಮ್ಮ ಸಮೀಪಕ್ಕೆ ಬಂದರೆ ನೀವೂ ನಿರಾಕರಿಸಿದಿರಿ. ಇನ್ನು ನಾನು ಮತ್ತೊಂದು ದಾರಿಯನ್ನು ಕಂಡುಕೊಳ್ಳುವೆನು' ಎಂದು ನುಡಿದನು.

ಆ ಮಾತನ್ನು ಕೇಳಿ ವಸಿಷ್ಠ ಮುನೀಶ್ವರನ ಮಕ್ಕಳು ತ್ರಿಶಂಕುಮಹಾರಾಜನಿಗೆ 'ನೀನು ಚಂಡಾಲನಾಗು!' ಎಂದ ಶಾಪವನ್ನು ಕೊಟ್ಟು ತಮ್ಮ ಆಶ್ರಮಕ್ಕೆ ಹೋದರು. ಆ ರಾತ್ರಿಯು ಕಳೆಯಲು ಮಾರನೆಯ ದಿವಸ ತ್ರಿಶಂಕುವು ಚಂಡಾಲನಾಗಿದ್ದನು. ಆತನ ಶರೀರವು ಪೂರ್ವದ ಕಾಂತಿಯನ್ನು ಕಳೆದುಕೊಂಡು ಕಪ್ಪಾಗಿತ್ತು. ಅವನು ಮಲಿನವಸ್ತ್ರವನ್ನು ಧರಿಸಿಕೊಂಡು ಕೆದರಿದ ತಲೆಯುಳ್ಳವನಾಗಿ ನಾನಾವರ್ಣದ ಪುಷ್ಪಮಾಲಿಕೆಯನ್ನು ಧರಿಸಿಕೊಂಡು ಕಬ್ಬಿಣದ ಆಭರಣಗಳಿಂದಲಂಕರಿಸಿಕೊಂಡಿದ್ದನು. ಹಾಗೆ ಚಂಡಾಲಸ್ವರೂಪನಾಗಿರಲು ಆತನ ಸಮೀಪದಲ್ಲಿದ್ದ ಮಂತ್ರಿಗಳೂ ಪುರಜನಗಳೂ ಆತನನ್ನು ಬಿಟ್ಟು ಹೋದರು. ಆ ಬಳಿಕ ತ್ರಿಶಂಕುರಾಯನು ಆ ಶಾಪದಿಂದ ದಿವಾರಾತ್ರಗಳಲ್ಲಿಯೂ ಚಿಂತಿಸುತ್ತ ವಿಶ್ವಾಮಿತ್ರಮುನೀಶ್ವರನ ಸಮೀಪಕ್ಕೆ ಹೋದನು. ಧಾರ್ಮಿಕನಾಗಿ ಅತಿತೇಜಸ್ವಿಯಾದ ವಿಶ್ವಾಮಿತ್ರಮುನಿಯು ತ್ರಿಶಂಕುರಾಜನಿಗೆ ಯಾಗವು ಕೈಗೂಡದೆ ಚಂಡಾಲತ್ವವು ಬಂದದ್ದನ್ನು ಕೇಳಿ ಕನಿಕರಗೊಂಡನು. ಆ ರಾಜನನ್ನು ನೋಡಿ 'ಎಲೈ ಅಯೋಧ್ಯಾ

ಪಟ್ಟಣಕ್ಕೆ ಅಧಿಪತಿಯಾದ ತ್ರಿಶಂಕುರಾಜನೆ, ಶಾಪದಿಂದ ಚಂಡಾಲತ್ವವು ಬರಲು ನೀನು ಇಲ್ಲಿಗೆ ಬಂದ ಕಾರಣವೇನು ? ' ಎಂದು ಕೇಳಿದನು.

ಚಂಡಾಲಸ್ವರೂಪನಾದ ತ್ರಿಶಂಕುರಾಜನು ಕೈಮುಗಿದುಕೊಂಡು ವಿಶ್ವಾಮಿತ್ರನನ್ನು ಕುರಿತು " ವಿಶ್ವಾಮಿತ್ರಮುನೀಶ್ವರರೆ, ನಾನು ಯಾಗಮಾಡಿ ಶರೀರಸಹಿತವಾಗಿ ಸ್ವರ್ಗಲೋಕಕ್ಕೆ ಹೋಗಬೇಕೆಂದು ಮನಸ್ಸಿನಲ್ಲೆಣಿಸಿ ನನ್ನ ಗುರುವಾದ ವಸಿಷ್ಠಮುನೀಶ್ವರನೊಡನೆ ಹೇಳಲು ಆತನು ಅದು ಸಾಧ್ಯವಲ್ಲವೆಂದು ನಿರಾಕರಿಸಿದನು. ಆಮೇಲೆ ಆ ಗುರುವಿನ ಮಕ್ಕಳ ಸಮೀಪಕ್ಕೆ ಹೋಗಿ ಕೇಳಲು ಅವರೂ ನಿರಾಕರಿಸಿದರು ಆಮೇಲೆ ನಾನು ಮತ್ತೊಬ್ಬರ ಸಮೀಪಕ್ಕೆ ಹೋಗಿ ನನ್ನ ಗತಿಯನ್ನು ಕಂಡುಕೊಳ್ಳುವೆನೆಂದು ನುಡಿಯಲು, ಆ ಗುರುಪುತ್ರರು ಕೋಪಿಸಿಕೊಂಡು ನಾನು ಚಂಡಾಲನಾಗಬೇಕೆಂದು ಶಾಪವನ್ನು ಕೊಟ್ಟರು. ಆದ್ದರಿಂದ ನನಗೆ ಈ ವಿಪತ್ತು ಬಂದಿತು ವಿಶ್ವಾಮಿತ್ರಮುನೀಶ್ವರರೆ, ನಿಮ್ಮ ದರ್ಶನದಿಂದಲೇ ನಾನು ಶರೀರಸಹಿತ ಸ್ವರ್ಗಲೋಕವನ್ನೈದುವೆನು. ನಾನು ಮೊದಲು ನೂರು ಯಾಗಗಳನ್ನು ಮಾಡಿದೆನು ಹಾಗಾದರೂ ನನಗೆ ಸ್ವರ್ಗ ಪ್ರಾಪ್ತಿಯೆಂಬ ಫಲವಿಲ್ಲದಿದೆ. ನಾನು ಒಂದುಸಾರಿಯಾದರೂ ಅಸತ್ಯವನ್ನು ಆಡಿದವನಲ್ಲ. ಎಂಥ ಆಪತ್ತು ಬಂದ ಸಮಯದಲ್ಲಿಯಾದರೂ ಕ್ಷತ್ರಿಯ ಧರ್ಮವನ್ನು ಬಿಟ್ಟಿರಲಿಲ್ಲ. ಇದಕ್ಕೆ ನಿಮ್ಮ ಪಾದಗಳೇ ಸಾಕ್ಷಿ. ನಾನು ಅನೇಕ ಯಜ್ಞಗಳನ್ನು ಮಾಡಿದೆನು ಸಮಸ್ತ ಪ್ರಜೆಗಳನ್ನೂ ಧರ್ಮದಿಂದ ಪರಿಪಾಲಿಸಿದೆನು. ನನ್ನ ಸದ್ವರ್ತನೆಗಳಿಂದ ಗುರುಗಳನ್ನು ಸಂತೋಷಪಡಿಸಿದೆನು. ನಾನು ಧರ್ಮದಲ್ಲಿ ಪ್ರವರ್ತಿಸಿ ಯಾಗವನ್ನು ಮಾಡಬೇಕೆಂದು ಯತ್ನಮಾಡಿದರೆ ನನ್ನ ಗುರುಗಳು ಅಂಗೀಕರಿಸಲಿಲ್ಲ. ದೈವವೇ ಪ್ರಬಲವಾದುದು. ಮನುಷ್ಯಯತ್ನವು ಅಪ್ರಯೋಜಕವು. ಲೋಕದಲ್ಲಿ ಸಮಸ್ತವೂ ದೈವಾಧೀನವಾಗಿಯೇ ಇರುವುದು. ದೈವವೇ ಪರಮಗತಿಯಲ್ಲದೆ ಮತ್ತೊಂದಿಲ್ಲ. ನಾನು ಈರೀತಿಯಲ್ಲಿ ದೈವದಿಂದ ಕೆಡಿಸಲ್ಪಟ್ಟವನಾಗಿ ಮಹಾದುಃಖಾಕ್ರಾಂತನಾಗಿ ನಿಮ್ಮ ಕೃಪೆಯನ್ನು ಬಯಸಿ ನಿಮ್ಮ ಸಮೀಪಕ್ಕೆ ಬಂದೆನು. ನೀವೇ ನನ್ನನ್ನು ಅನುಗ್ರಹಿಸಿ ರಕ್ಷಿಸಬೇಕಲ್ಲದೆ ನನಗೆ ಬೇರೆ ಗತಿಯಿಲ್ಲ. ನನಗೆ ಬಂದಿರುವ ಈ ಶಾಪವನ್ನು ನಿಮ್ಮ ಸಾಮರ್ಥ್ಯದಿಂದ ತೊಲಗಿಸಿ ರಕ್ಷಿಸಬೇಕು ' ಎಂದು ಪ್ರಾರ್ಥಿಸಿದನು. "



## ೫೯ ನೆಯ ಅಧ್ಯಾಯ

## ವಿಶ್ವಾಮಿತ್ರನು ತ್ರಿಶಂಕುರಾಜನಿಂದ ಯಾಗಮಾಡಿಸಲು ಉಪಕ್ರಮಿಸಿದುದು

" ಆಮೇಲೆ ವಿಶ್ವಾಮಿತ್ರನು ಚಂಡಾಲಸ್ವರೂಪನಾದ ತ್ರಿಶಂಕುಮಹಾರಾಜನನ್ನು ಕುರಿತು ' ತ್ರಿಶಂಕುರಾಜನೆ, ನೀನು ಮಹಾಧರ್ಮಾತ್ಮನು. ನಾನು ನಿನಗೆ ರಕ್ಷಕನಾದೆನು. ಅಂಜಬೇಡ. ನಾನು ಯಜ್ಞಕರ್ಮದಲ್ಲಿ ನಿಪುಣರಾದ ಪುಣ್ಯಾತ್ಮರನ್ನೂ ಯಜ್ಞಸಹಕಾರಿಗಳಾದ ಋತ್ವಿಜರನ್ನೂ ಕರೆಸುತ್ತೇನೆ. ನೀನು ಸುಖವಾಗಿ ಯಜ್ಞಕರ್ಮಗಳನ್ನು ಮಾಡಿ ದೇಹಸಹಿತವಾಗಿ ಸ್ವರ್ಗಕ್ಕೆ ಹೋಗು ! ತ್ರಿಶಂಕುರಾಜ, ನಿನಗೆ ಸ್ವರ್ಗಪ್ರಾಪ್ತಿಯನ್ನು ಹಸ್ತಗತವಾಗಿ ಮಾಡಿದೆನೆಂದು ನಿಶ್ಚಯಿಸು. ನನ್ನ ಮಾತು ನಿಶ್ಚಯ. ನನ್ನ ಮರೆಹೊಕ್ಕಮೇಲೆ ನಾನೇ ನಿನ್ನ ಕಾರ್ಯವನ್ನು ಸಾಧ್ಯಮಾಡಿಕೊಡುವೆನು ' ಎಂದು ನಂಬಿಕೆಯನ್ನು ಕೊಟ್ಟು, ಧರ್ಮಿಷ್ಠರೂ ಅತಿತೇಜಸ್ವಿಗಳೂ ಆದ ತನ್ನ ಮಕ್ಕಳನ್ನು ಕರೆದು

' ಮಕ್ಕಳಿರಾ, ತ್ರಿಶಂಕುರಾಜನ ಯಜ್ಞಕ್ಕೆ ಬೇಕಾದ ವಸ್ತುಗಳನ್ನು ಸಂಪಾದಿಸಿರಿ ' ಎಂದು ಆಜ್ಞಾಪಿಸಿ ತನ್ನ ಶಿಷ್ಯರನ್ನು ಕರೆದು ' ನೀವು ಯಜ್ಞಕರ್ಮದಲ್ಲಿ ನಿಪುಣರಾಗಿ ಶಾಸ್ತ್ರಜ್ಞರಾದ ಋತ್ವಿಜರನ್ನೂ ಸಮಸ್ತ ಬ್ರಾಹ್ಮಣರನ್ನೂ ಬೇಕಾದ ಸ್ನೇಹಿತರನ್ನೂ ಕರೆದುಕೊಂಡು ಬನ್ನಿರಿ ' ಎಂದು ನಿರೂಪಿಸಿದನು.

ಶಿಷ್ಯರು ನಾನಾದಿಕ್ಕುಗಳಿಗೂ ಹೋಗಿ ಅಲ್ಲಲ್ಲಿದ್ದ ಬ್ರಾಹ್ಮಣರನ್ನೂ ಬ್ರಹ್ಮಜ್ಞಾನಿಗಳಾದ ಋಷಿಗಳನ್ನೂ ಕರೆದುಕೊಂಡು ಬಂದು ಯಜ್ಞಪುರುಷನ ಹಾಗೆ ಪ್ರಜ್ವಲಿಸುತ್ತಿದ್ದ ವಿಶ್ವಾಮಿತ್ರ ಮುನೀಶ್ವರನನ್ನು ಕುರಿತು ' ಗುರುಗಳೆ, ನಾನಾದೇಶಗಳಿಗೂ ಹೋಗಿ ಅಲ್ಲಲ್ಲಿದ್ದ ಋಷಿಗಳನ್ನೂ ಬ್ರಾಹ್ಮಣರನ್ನೂ ಕರೆದು ಬಂದೆವು ; ಅವರೆಲ್ಲರೂ ಬರುತ್ತಾ ಇದ್ದಾರೆ. ಮಹೋದಯ ಮತ್ತು ವಸಿಷ್ಠಮುನೀಶ್ವರನ ನೂರು ಮಕ್ಕಳು ಹೊರತಾಗಿ ಮಿಕ್ಕವರೆಲ್ಲರೂ ಬರುತ್ತಾ ಇದ್ದಾರೆ. ಆ ವಸಿಷ್ಠಪುತ್ರರು ' ಕ್ಷತ್ರಿಯನು ಯಾಗಮಾಡಿಸುವವನು ! ಯಜ್ಞಕರ್ತೃವು ಚಂಡಾಲನು ! ಕ್ಷತ್ರಿಯನಿಗೆ ಯಾಗವನ್ನು ಮಾಡಿಸುವುದಕ್ಕೆ ಅಧಿಕಾರವೆಲ್ಲಿ ? ಅದರೊಳಗೂ ಚಂಡಾಲನಿಂದ ಯಾಗವನ್ನು ಮಾಡಿಸಿದರೆ ಆ ಯಾಗದಲ್ಲಿ ದೇವರ್ಷಿಗಳು ಹೇಗೆ ಹವಿಸ್ಸನ್ನು ಕೊಳ್ಳುವರು ? ಆ ಚಂಡಾಲನು ವಿಶ್ವಾಮಿತ್ರನಿಂದ ರಕ್ಷಿಸಲ್ಪಟ್ಟು ಸ್ವರ್ಗಲೋಕವನ್ನು ಹೇಗೆ ಐದುವನು ? ' ಎಂದು ನಿಷ್ಠುರವನ್ನಾಡಿದರು ' ಎಂದು ನುಡಿದರು.

ಆ ಮಾತನ್ನು ಕೇಳಿ ವಿಶ್ವಾಮಿತ್ರಮುನಿಯು ಅತ್ಯಂತ ಕೋಪಯುಕ್ತನಾಗಿ ' ಎಲೈ ಶಿಷ್ಯರೆ, ಉಗ್ರವಾದ ತಪಸ್ಸನ್ನು ಮಾಡಿ ದೋಷರಹಿತನಾದ ನನ್ನನ್ನು ದೂಷಿಸುವವರೆಲ್ಲರೂ ಭಸ್ಮವಾಗಿ ಹೋಗುವರು ! ಸಂಶಯವಿಲ್ಲ. ನನ್ನನ್ನು ದೂಷಿಸಿದವರು ಈ ಕ್ಷಣದಲ್ಲೇ ಯಮಪಾಶಬದ್ಧರಾಗಿ ಯಮಲೋಕವನ್ನೈದಿ ಏಳುನೂರು ವರುಷಗಳ ಪರ್ಯಂತ ಹೆಣವನ್ನು ತಿನ್ನುವವರಾಗಿಯೂ ನಾಯಿಗಳ ಮಾಂಸವನ್ನು ಭಕ್ಷಿಸುವವರಾಗಿಯೂ ಮುಷ್ಟಿಕರೆಂಬ ಹೆಸರುಳ್ಳವರಾಗಿಯೂ ಸಮಸ್ತ ಪ್ರಾಣಿಗಳನ್ನೂ ಕೊಲ್ಲುವಂತ ಘಾತುಕರಾಗಿಯೂ ವಿಕಾರವಾದ ಆಕಾರವುಳ್ಳವರಾಗಿಯೂ ಲೋಕದವರೆಲ್ಲರಿಗೂ ನಿಂದಿತರೂ ಆಗಲಿ ! ಅಜ್ಞಾನಿಯಾದ ಮಹೋದಯನು ನನ್ನನ್ನು ದೂಷಿಸಿದನಾದ ಕಾರಣ ಅವನು ಸಮಸ್ತಲೋಕಗಳಲ್ಲಿಯೂ ನಿಂದಿತನಾಗಿ ಹುಟ್ಟಿ ಕಿರಾತನಾಗಿ ಪ್ರಾಣಾವಸಾನ ಪರ್ಯಂತ ನಿರ್ದಯನಾಗಿದ್ದು ನರಕವನ್ನು ಪಡೆಯಲಿ ! ' ಎಂದು ಶಾಪವನ್ನು ಕೊಟ್ಟು ಸಮಸ್ತ ಋಷಿಗಳನ್ನೂ ಕರೆದುಕೊಂಡು ತ್ರಿಶಂಕುರಾಯನಿಂದ ಯಾಗವನ್ನು ಮಾಡಿಸಲುಪಕ್ರಮಿಸಿದನು "



## ೬೦ನೆಯ ಅಧ್ಯಾಯ

## ತ್ರಿಶಂಕುರಾಜನು ದೇಹಸಹಿತವಾಗಿ ಸ್ವರ್ಗವನ್ನೇರುವುದು

" ಈ ಪ್ರಕಾರದಲ್ಲಿ ವಿಶ್ವಾಮಿತ್ರಮುನೀಶ್ವರನು ತನ್ನ ತಪೋಬಲದಿಂದ ಮಹೋದಯನನ್ನೂ ಮತ್ತು ವಸಿಷ್ಠಮುನೀಶ್ವರನ ನೂರು ಮಂದಿ ಮಕ್ಕಳನ್ನೂ ಶಪಿಸಿ ಸಮಸ್ತ ಋಷಿಗಳನ್ನೂ ಕುರಿತು ' ಋಷಿಗಳಿರಾ, ತ್ರಿಶಂಕುರಾಜನು ಇಕ್ಷ್ವಾಕುವಂಶದಲ್ಲಿ ಜನಿಸಿದನು. ಮಹಾಧರ್ಮಿಷ್ಠನು ; ಅತ್ಯಂತ ದಾನಶೀಲನು ; ಅಲ್ಲದೆ ನನ್ನನ್ನು ಶರಣುಹೊಕ್ಕಿದ್ದಾನೆ. ಈ ರಾಜನು ಯಾಗವನ್ನು ಮಾಡಿ ಆ ಯಾಗಫಲದಿಂದ ಶರೀರಸಹಿತವಾಗಿ ಸ್ವರ್ಗಲೋಕಕ್ಕೆ ಹೋಗುವಂತೆ ನೀವೆಲ್ಲರೂ ನನ್ನನ್ನು ಕೂಡಿಕೊಂಡು ಯಾಗವನ್ನು ಮಾಡಿರಿ ' ಎಂದು ನುಡಿದನು. ಆ ಮಾತನ್ನು ಕೇಳಿ ಧರ್ಮಾರ್ಥರಹಸ್ಯ

ವನ್ನು ಬಲ್ಲ ಆ ಋಷಿಗಳು ತಮ್ಮೊಳು ತಾವೇ 'ವಿಶ್ವಾಮಿತ್ರಮುನಿಯು ಹೇಳಿದಂತೆ ಯಾಗವನ್ನು ಮಾಡಿಸಬೇಕು ಈ ಕುಶಿಕಪುತ್ರನು ಮಹಾಕೋಪಿಯು. ಈತನು ಯಾವ ಕಾರ್ಯವನ್ನು ಹೇಳಿದರೂ ಆ ಕಾರ್ಯವನ್ನು ಮಾಡಬೇಕಲ್ಲದೆ ಈತನ ಕಾರ್ಯಕ್ಕೆ ಪ್ರತಿಕೂಲವಾಗಿದ್ದರೆ ಪ್ರಳಯಕಾಲಾಗ್ನಿಗೆ ಸಮಾನನಾಗಿ ಶಾಪವನ್ನು ಕೊಡುವನು ವಿಶ್ವಾಮಿತ್ರನು ಹೇಳಿದ ಪ್ರಕಾರದಲ್ಲಿ ಯಾಗವನ್ನು ಮಾಡಿಸೋಣ ಚಂಡಾಲಸ್ವರೂಪನಾದ ತ್ರಿಶಂಕುರಾಜನು ವಿಶ್ವಾಮಿತ್ರನ ಸಾಮರ್ಥ್ಯದಿಂದ ಶರೀರಸಹಿತನಾಗಿ ಸ್ವರ್ಗವನ್ನೈದಲಿ!' ಎಂದು ನಿಶ್ಚಯಿಸಿಕೊಂಡು ತ್ರಿಶಂಕುರಾಜನ ಯಾಗಕ್ಕೆ ಉದ್ಯೋಗಿಸಿದರು. ವಿಶ್ವಾಮಿತ್ರನು ತಾನೇ ಅಧ್ವರ್ಯುವೆಂಬ ಪ್ರಧಾನಋತ್ವಿಜನಾಗಿರಲು ಮಿಕ್ಕ ಋಷಿಗಳು ಯಥಾಕ್ರಮವಾಗಿ ಋತ್ವಿಜರಾಗಿ ಸಮಸ್ತ ಯಜ್ಞಕರ್ಮಗಳನ್ನೂ ವಿಧ್ಯುಕ್ತಪ್ರಕಾರದಲ್ಲಿ ಮಾಡಿದರು. ಆಮೇಲೆ ವಿಶ್ವಾಮಿತ್ರಮುನೀಶ್ವರನು ಯಾಗದಲ್ಲಿ ಹವಿರ್ಭಾಗವನ್ನು ತೆಗೆದು ಕೊಳ್ಳುವುದಕ್ಕೆ ದೇವತೆಗಳನ್ನು ಮಂತ್ರಗಳಿಂದ ಕರೆದಾಗ ಅವರು ಬಾರದೇಹೋಗಲು, ಮಹಾಕೋಪ ಯುಕ್ತನಾಗಿ ಹೋಮಮಾಡುತ್ತಿದ್ದ ಸ್ರುವ ಎಂಬ ಯಜ್ಞಪಾತ್ರವನ್ನು ಮೇಲಕ್ಕೆ ಎತ್ತಿ ತ್ರಿಶಂಕು ರಾಜನನ್ನು ಕುರಿತು 'ಎಲೈ ತ್ರಿಶಂಕುರಾಯನೆ, ನನ್ನ ತಪಸ್ಸಾಮರ್ಥ್ಯವನ್ನು ನೋಡು ನಾನು ಗಳಿಸಿರುವ ಪುಣ್ಯವನ್ನು ನೋಡು ನಿನ್ನನ್ನು ಈ ಶರೀರಸಹಿತವೇ ಸ್ವರ್ಗಕ್ಕೆ ಕಳುಹಿಸುತ್ತೇನೆ. ನೀನು ಯಾರಿಗೂ ಪ್ರವೇಶಿಸುವುದಕ್ಕೆ ಶಕ್ಯವಲ್ಲದ ಸ್ವರ್ಗಲೋಕವನ್ನು ಶರೀರಸಹಿತನಾಗಿ ಪ್ರವೇಶಿಸು!' ಎಂದು ನುಡಿದನು,

ಅಷ್ಟರಲ್ಲಿ ತ್ರಿಶಂಕುರಾಜನು ಸಮಸ್ತ ಋಷಿಗಳೂ ನೋಡುತ್ತಿರಲು ಶರೀರಸಹಿತವಾಗಿ ಸ್ವರ್ಗಲೋಕಕ್ಕೆ ಏರಿದನು. ಆಗ ಸಮಸ್ತ ದೇವತೆಗಳನ್ನೂ ಕೂಡಿಕೊಂಡಿದ್ದ ದೇವೇಂದ್ರನು ಸ್ವರ್ಗಲೋಕಕ್ಕೆ ಬಂದ ತ್ರಿಶಂಕುರಾಯನನ್ನು ಕಂಡು 'ಎಲೈ ತ್ರಿಶಂಕುವೆ, ನಿನಗೆ ಸ್ವರ್ಗಲೋಕದಲ್ಲಿರು ವುದಕ್ಕೆ ಅಧಿಕಾರವಿಲ್ಲ. ನೀನು ಗುರುಶಾಪದಿಂದ ಪತಿತನಾದೆ. ಆದಕಾರಣ ನೀನು ತಲೆಕೆಳಗಾಗಿ ಭೂಮಿಯಲ್ಲಿ ಬೀಳು' ಎಂದು ನುಡಿದನು.

ತ್ರಿಶಂಕುರಾಜನು ವಿಶ್ವಾಮಿತ್ರನಿಗೆ ಮೊರೆಯಿಡುತ್ತಾ ತಲೆಕೆಳಗಾಗಿ ಭೂಮಿಯಲ್ಲಿ ಬೀಳುವ ಸಮಯದಲ್ಲಿ ವಿಶ್ವಾಮಿತ್ರನು ಆ ಧ್ವನಿಯನ್ನು ಕೇಳಿ ಅತ್ಯಂತ ಕೋಪಯುಕ್ತನಾಗಿ ಸಮಸ್ತ ಋಷಿಗಳ ಮಧ್ಯದಲ್ಲಿ ಎರಡನೆಯ ಬ್ರಹ್ಮದೇವನ ಹಾಗೆ ಸ್ವರ್ಗಲೋಕದಿಂದ ಬೀಳುತ್ತಿದ್ದ ತ್ರಿಶಂಕು ರಾಜನನ್ನು ಕುರಿತು 'ನಿಲ್ಲು ನಿಲ್ಲು! ಅಂಜಬೇಡ!' ಎಂದು ಅಭಯವನ್ನು ಕೊಟ್ಟನು. ಮತ್ತು ತನ್ನ ಸಾಮರ್ಥ್ಯದಿಂದ ತೆಂಕಣ ದಿಕ್ಕಿನಲ್ಲಿ ಪ್ರತಿಸ್ವರ್ಗವನ್ನೂ ಸಪ್ತಋಷಿಗಳನ್ನೂ ನಕ್ಷತ್ರಗಳನ್ನೂ ಕೆಲವು ದೇವತೆಗಳನ್ನೂ ನಿರ್ಮಿಸಿ ಮತ್ತು ಕೋಪಾತಿಶಯದಿಂದ 'ಮತ್ತೊಬ್ಬ ದೇವೇಂದ್ರನನ್ನು ಸೃಷ್ಟಿಸುವೆನು. ಅಲ್ಲದಿದ್ದರೆ ದೇವೇಂದ್ರನೇ ಇಲ್ಲದಹಾಗೆ ಮಾಡುವೆನು. ಮಿಕ್ಕ ದೇವತೆಗಳನ್ನೂ ಪ್ರತಿಯಾಗಿ ಸೃಷ್ಟಿಸುವೆನು' ಎಂದು ನುಡಿದನು, ಆಗ ಸಮಸ್ತ ದೇವತೆಗಳೂ ಕಂಗೆಟ್ಟು ವಿಶ್ವಾಮಿತ್ರ ಮುನೀಶ್ವರನನ್ನು ಕುರಿತು 'ವಿಶ್ವಾಮಿತ್ರ, ತ್ರಿಶಂಕುರಾಜನು ಗುರುಶಾಪದಿಂದ ಪತಿತನಾದವನು. ಆದ್ದರಿಂದ ಶರೀರಸಹಿತನಾಗಿ ಸ್ವರ್ಗಲೋಕಕ್ಕೆ ಹೋಗಬಾರದು' ಎಂದು ನುಡಿದರು. ಆ ಮಾತನ್ನು ಕೇಳಿ ವಿಶ್ವಾಮಿತ್ರಮುನೀಶ್ವರನು ಅವರನ್ನು ಕುರಿತು 'ಎಲೈ ದೇವತೆಗಳಿರಾ, ತ್ರಿಶಂಕುರಾಜನನ್ನು ಶರೀರಸಹಿತವಾಗಿ ಸ್ವರ್ಗಲೋಕಕ್ಕೆ ಕಳುಹಿಸುವೆನೆಂದು ಪ್ರತಿಜ್ಞೆಮಾಡಿದೆನು. ನನ್ನ ಪ್ರತಿಜ್ಞೆಗೆ ಹಾನಿಬರಬಾರದು. ಆದಕಾರಣ ಅಂತರಿಕ್ಷಮಾರ್ಗದಲ್ಲಿ ಧ್ರುವಾದಿನಕ್ಷತ್ರಗಳು ಎಷ್ಟು ದಿವಸಗಳವರೆಗೆ ಸಮಸ್ತ ಲೋಕಗಳನ್ನು ಧರಿಸಿಕೊಂಡಿರುವುವೋ ಅಲ್ಲಿಯ ವರೆಗೆ ತ್ರಿಶಂಕುಮಹಾರಾಜನು ಸಶರೀರ ನಾಗಿ ಸ್ವರ್ಗಲೋಕದಲ್ಲಿ ಶಾಶ್ವತನಾಗಿರಲಿ. ಈ ಪ್ರಾರ್ಥನೆಯನ್ನು ನೀವು ಅಂಗೀಕರಿಸಿ' ಎಂದನು.

ಆ ಮಾತನ್ನು ಅಂಗೀಕರಿಸಿ ಸಮಸ್ತ ದೇವತೆಗಳೂ 'ಎಲೈ ವಿಶ್ವಾಮಿತ್ರನೆ, ನೀನು ಹೇಳಿದ ಮಾತನ್ನು ನಾವು ಅಂಗೀಕರಿಸಿದೆವು ಯಜ್ಞಪುರುಷನು ಸಂಚರಿಸುವ ಮಾರ್ಗದ ಹೊರಗೆ ಅಂತರಿಕ್ಷ ಮಾರ್ಗದಲ್ಲಿ ತ್ರಿಶಂಕು ಮಹಾರಾಜನು ತಲೆಕೆಳಗಾಗಿ ದೇವತೆಗಳಿಗೆ ಸಮಾನನಾಗಿರಲಿ ! ಅಲ್ಲಿ ಅನೇಕ ನಕ್ಷತ್ರಗಳು ಬೆಳಗುತ್ತಿರಲಿ. ಆ ನಕ್ಷತ್ರಗಳು ಈ ರಾಜನ ಹಿಂದೆ ಸಂಚರಿಸುತ್ತಿರಲಿ. ತ್ರಿಶಂಕುರಾಜನು ಕೃತಾರ್ಥನಾಗಿ ಮಹಾಕೀರ್ತಿವಂತನಾಗಿ ಸುಖದಲ್ಲಿರಲಿ !' ಎಂದು ನುಡಿದು ವಿಶ್ವಾಮಿತ್ರನಿಂದ ಬೀಳ್ಕೊಂಡು ತಮ್ಮ ತಮ್ಮ ಲೋಕಗಳಿಗೆ ತೆರಳಿದರು."



## ೬೧ ನೆ ಯ ಅ ಧ್ಯಾ ಯ

## ಅ ೦ ಬ ರೀ ಷ ರಾ ಯ ನ ನ ರ ಮೇ ಧ ಯಾ ಗ

ಆಮೇಲೆ ವಿಶ್ವಾಮಿತ್ರಮುನೀಶ್ವರನು ತನ್ನಿಂದ ಬೀಳ್ಕೊಂಡು ಪ್ರಯಾಣವಾಗಿ ಹೊರಟ ಋಷಿಗಳನ್ನು ಕುರಿತು 'ಋಷಿಗಳಿರಾ, ನನ್ನ ತಪಸ್ಸಿಗೆ ಈ ಸ್ಥಳದಲ್ಲಿ ಬಹುವಿಘ್ನಗಳು ಬಂದವಾದ್ದರಿಂದ ನಾನು ಈ ಸ್ಥಳದಲ್ಲಿರಬಾರದು. ಇನ್ನೊಂದು ಸ್ಥಳಕ್ಕೆ ಹೋಗುತ್ತೇನೆ. ಎಲ್ಲಿ ಪರಮೇಶ್ವರನು ನಿತ್ಯವಾಸವಾಗಿರುವನೋ ಅಲ್ಲಿ ಆಹಾರ ನಿಯಮವನ್ನು ಮಾಡಿಕೊಂಡು ತಪಸ್ಸನ್ನು ಮಾಡಿಕೊಂಡಿರುತ್ತೇನೆ' ಎಂದು ಹೇಳಿ ಅವರನ್ನು ಕಳುಹಿಸಿದನು. ಅನಂತರ ಪಡುವಣ ದಿಕ್ಕಿನಲ್ಲಿ ವಹ್ನಿಪುಷ್ಕರಣಿ ಅರ್ಕಪುಷ್ಕರಣಿ ಚಂದ್ರಪುಷ್ಕರಣಿ ಎಂಬ ಮೂರು ಪುಷ್ಕರಣಿಗಳಿರುವ ಸ್ಥಳದಲ್ಲಿ ತಪಸ್ಸನ್ನು ಮಾಡಲು ನಿಶ್ಚಯಿಸಿಕೊಂಡು, ಅಲ್ಲಿಗೆ ಹೋಗಿ ಕಂದಮೂಲಫಲಾಹಾರಗಳನ್ನು ಮಾಡಿಕೊಂಡು ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ಆ ಸಮಯದಲ್ಲಿ ಅಯೋಧ್ಯಾ ಪಟ್ಟಣಕ್ಕೆ ಅಧಿಪತಿಯಾದ ಅಂಬರೀಷನೆಂಬ ರಾಜನು ಯಾಗವನ್ನು ಮಾಡಲು ಸಂಕಲ್ಪಿಸಿ ಋತ್ವಿಜರನ್ನು ಕರೆಯಿಸಿ ಯಾಗವನ್ನು ಮಾಡುತ್ತಿರುವ ಸಮಯದಲ್ಲಿ, ದೇವೇಂದ್ರನು ಆ ಯಾಗಪಶುವನ್ನು ಅಪಹರಿಸಿಕೊಂಡು ಹೋದನು. ಆಗ ಅಂಬರೀಷರಾಜನ ಪುರೋಹಿತನು ಆತನ ಸಮೀಪಕ್ಕೆ ಬಂದು 'ಎಲೈ ರಾಜನೆ, ನೀನು ಎಚ್ಚರಿಕೆಯಿಂದ ಇಲ್ಲದೇ ಇದ್ದುದರಿಂದ ಪಶುವು ನಷ್ಟವಾಗಿಹೋಯಿತು. ಲೋಕದಲ್ಲಿ ಎಚ್ಚರಿಕೆಯಿಲ್ಲದ ಅರಸುಗಳಿಗೆ ದೋಷವು ಬರುವುದು. ನಿನ್ನ ಯಾಗಾರ್ಥವಾದ ಪಶುವು ನಾಶವಾದ ಕಾರಣ ಮಹತ್ತಾದ ಪ್ರಾಯಶ್ಚಿತ್ತವನ್ನು ಮಾಡಬೇಕು. ಈಗ ಒಂದು ನರಪಶುವನ್ನು ಹುಡುಕಿ ಶೀಘ್ರವಾಗಿ ಕರೆದುಕೊಂಡು ಬಾ' ಎಂದು ಹೇಳಿದನು.

ಆ ಮಾತನ್ನು ಕೇಳಿ ಅಂಬರೀಷರಾಜನು ಒಂದು ಲಕ್ಷ ಹಸುಗಳನ್ನು ಕೊಟ್ಟು ಒಂದು ನರಪಶುವನ್ನು ತರುವುದಾಗಿ ಹೇಳಿ ಸಮಸ್ತದೇಶಗಳನ್ನೂ ಆಶ್ರಮಗಳನ್ನೂ ಅರಸಿಕೊಂಡುಹೋದನು. ಒಂದು ಸ್ಥಳದಲ್ಲಿ ಋಚೀಕನೆಂಬ ಬ್ರಾಹ್ಮಣನು ಮೂರು ಮಂದಿ ಮಕ್ಕಳೊಡನೆ ತನ್ನ ಸ್ತ್ರೀಸಹಿತನಾಗಿ ಮಹಾದರಿದ್ರನಾಗಿ ಭೃಗುತುಂಗವೆಂಬ ಆಶ್ರಮದಲ್ಲಿದ್ದನು. ಅಂಬರೀಷನು ಆತನನ್ನು ಕಂಡು ನಮಸ್ಕರಿಸಿ 'ಎಲೈ ಋಷೀಶ್ವರನೆ, ನೀನು ಒಂದು ಲಕ್ಷ ಹಸುಗಳನ್ನು ತೆಗದುಕೊಂಡು ಒಬ್ಬ ಕುಮಾರನನ್ನು ಯಾಗಪಶುವಾಗಿ ಕೊಟ್ಟರೆ ನಾನು ಕೃತಾರ್ಥನಾಗುವೆನು. ಒಂದು ಪಶುನಿಮಿತ್ತವಾಗಿ ಬಹುದೇಶಗಳನ್ನು ತಿರುಗಿ ಎಲ್ಲಿಯೂ ಯೋಗ್ಯವಾದ ಪಶುವನ್ನು ನೋಡಲಿಲ್ಲ. ಆದಕಾರಣ ಲಕ್ಷ ಹಸುಗಳನ್ನು ಕ್ರಯವಾಗಿ ತೆಗೆದುಕೊಂಡು ಒಬ್ಬ ಮಗನನ್ನು ಕೊಡು ಎಂದು ಹೇಳಿದನು.

ಆ ಮಾತನ್ನು ಕೇಳಿ ಋಚೀಕನು 'ಎಲೈ ಅಂಬರೀಷನೆ, ನಾನು ನನ್ನ ಹಿರಿಯಮಗನನ್ನು ಕ್ರಯಕ್ಕೆ ಕೊಡಲಾರೆನು' ಎಂದು ಹೇಳಿದನು. ಋಚೀಕನ ಭಾರ್ಯೆಯು ಆ ರಾಜನನ್ನು ಕುರಿತು 'ಅಂಬರೀಷರಾಜನೆ, ನಿನಗೆ ನನ್ನ ಪ್ರಿಯನಾದ ಶುನಕನೆಂಬ ಕನಿಷ್ಠ ಪುತ್ರನನ್ನು ಕೊಡಲಾರೆನು ಯಾಕೆಂದರೆ, ಲೋಕದಲ್ಲಿ ತಂದೆಗೆ ಹಿರಿಯ ಮಗನಲ್ಲಿ ಪ್ರೀತಿ ಇರುವುದು. ತಾಯಿಗೆ ಕಿರಿಯ ಮಗನಲ್ಲಿ ಪ್ರೀತಿಯಿರುವುದು' ಎಂದು ನುಡಿದಳು.

ಈ ಪ್ರಕಾರದಲ್ಲಿ ಜ್ಯೇಷ್ಠಪುತ್ರನನ್ನು ಕೊಡುವದಿಲ್ಲವೆಂಬ ತಂದೆಯ ಮಾತನ್ನೂ ಕಿರಿಯ ಮಗನನ್ನು ಕೊಡುವದಿಲ್ಲವೆಂಬ ತಾಯಿಯ ಮಾತನ್ನೂ ಕೇಳಿ ಮಧ್ಯಮ ಪುತ್ರನಾದ ಶುನಃಶೇಫನು ಅಂಬರೀಷರಾಜನನ್ನು ಕುರಿತು 'ಅಂಬರೀಷರಾಜನೆ, ನಮ್ಮ ತಾಯಿ ಕಿರಿಯ ಮಗನನ್ನು ಕೊಡುವ ದಿಲ್ಲವೆಂದಳು. ತಂದೆಯು ಹಿರಿಯ ಮಗನನ್ನು ಕೊಡುವದಿಲ್ಲವೆಂದನು ಆದ್ದರಿಂದ ಮಿಕ್ಕಿರುವ ನಡುವಣ ಮಗನಾದ ನಾನು ಕ್ರಯಕ್ಕೆ ಯೋಗ್ಯನಾದೆನು. ಒಳ್ಳೆಯದು. ನಮ್ಮ ತಂದೆಯ ವಶಕ್ಕೆ ನನ್ನ ಕ್ರಯವನ್ನು ಕೊಟ್ಟು ಕರೆದುಕೊಂಡು ಹೋಗು, ಎಂದು ನುಡಿದನು. ಆಮೇಲೆ ಮಹಾ ಕೀರ್ತಿವಂತನಾದ ಅಂಬರೀಷರಾಜನು ಋಚೀಕನೆಂಬ ಮುನೀಶ್ವರನಿಗೆ ಅನೇಕ ಸುವರ್ಣಗಳನ್ನೂ ರತ್ನರಾಶಿಗಳನ್ನೂ ಒಂದು ಲಕ್ಷ ಹಸುಗಳನ್ನೂ ಕೊಟ್ಟು ಶುನಃಶೇಫನನ್ನು ಕ್ರಯಕ್ಕೆ ತೆಗೆದುಕೊಂಡು ಮಹಾ ಸಂತೋಷದಿಂದ ರಥದಮೇಲೆ ಕುಳ್ಳಿರಿಸಿಕೊಂಡು ತನ್ನ ಪಟ್ಟಣಕ್ಕೆ ತೆರಳಿದನು."



## ೬೨ ನೆಯ ಅಧ್ಯಾಯ

## ಶುನಃಶೇಫನು ದೀರ್ಘಾಯುಷ್ಯವನ್ನು ಪಡೆದುದು

"ಎಲೈ ರಘುನಾಥನೇ ಕೇಳು: ಈ ಪ್ರಕಾರದಲ್ಲಿ ಅಂಬರೀಷರಾಜನು ಶುನಃಶೇಫನನ್ನು ಕರೆದುಕೊಂಡು ಹೋಗುತ್ತ ಮಧ್ಯಾಹ್ನ ಕಾಲವಾಗಲು ಪುಷ್ಕರಗಳೆಂಬ ಕೊಳಗಳ ಸಮೀಪದಲ್ಲಿ ರಥದಿಂದಿಳಿದನು. ಶುನಃಶೇಫನು ಪುಷ್ಕರ ತೀರದಲ್ಲಿ ಋಷಿಗಳೊಡನೆ ಕೂಡಿಕೊಂಡು ತಪಸ್ಸನ್ನು ಮಾಡುತ್ತಿದ್ದ ತನ್ನ ಸೋದರ ಮಾವನಾದ ವಿಶ್ವಾಮಿತ್ರಮುನೀಂದ್ರನನ್ನು ಕಂಡು ಬಳಲಿಕೆಯಿಂದ ಕಂದಿದ ಮುಖವುಳ್ಳವನಾಗಿ ಲಜ್ಜೆಯಿಂದ ದೈನ್ಯಭಾವವುಳ್ಳವನಾಗಿ ಆತನ ಸಮೀಪಕ್ಕೆ ಹೋಗಿ ಅಭಿವಂದಿಸಿ 'ವಿಶ್ವಾಮಿತ್ರ ಮುನೀಂದ್ರನೆ, ನನಗೆ ತಾಯಿ ತಂದೆ ಜ್ಞಾತಿ ಬಾಂಧವರಾರೂ ಇಲ್ಲ. ನನ್ನನ್ನು ಧರ್ಮದಿಂದ ರಕ್ಷಿಸು. ನೀನು ಸಮಸ್ತ ಪ್ರಾಣಿಗಳಿಗೂ ರಕ್ಷಕನು. ನೀನು ಸರ್ವಜ್ಞನು. ನರಪಶುವಾಗಬೇಕೆಂದು ನನ್ನನ್ನು ಕ್ರಯಕ್ಕೆ ತಂದ ಅಂಬರೀಷರಾಜನು ನರಮೇಧಯಾಗದ ಸಂಪೂರ್ಣ ಫಲವನ್ನು ಪಡೆದು ಕೃತಾರ್ಥನಾಗುವಹಾಗೆಯೂ ನಾನು ದೀರ್ಘಾಯುಷ್ಯವಂತನಾಗಿ ಉತ್ತಮವಾದ ತಪಸ್ಸನ್ನು ಮಾಡಿ ಸ್ವರ್ಗಲೋಕವನ್ನು ಪಡೆಯುವಹಾಗೆಯೂ ಅನುಗ್ರಹಿಸು. ಅನಾಥನಾದ ನನ್ನನ್ನು ಮಗನನ್ನು ರಕ್ಷಿಸುವಂತೆ ರಕ್ಷಿಸಬೇಕು' ಎಂದು ಬೇಡಿಕೊಂಡನು.

ಆಗ ವಿಶ್ವಾಮಿತ್ರನು ಶುನಃಶೇಫನನ್ನು ಅಂಜಬೇಡವೆಂದು ಸಂತವಿಟ್ಟು ತನ್ನ ಮಕ್ಕಳನ್ನು ಕರೆದು 'ಮಕ್ಕಳಿರಾ, ಲೋಕದಲ್ಲಿ ಶ್ರೇಯಸ್ಸನ್ನು ಪಡೆಯುವಂಥ ಪುಣ್ಯಾತ್ಮರು ಯಾವ ಪರಲೋಕಸಾಧನಾರ್ಥವಾಗಿ ಮಕ್ಕಳನ್ನು ಬಯಸುವರೋ ಅಂಥ ಪರಲೋಕಸಾಧನ ಕೃತ್ಯವನ್ನು ಮಾಡುವ ಸಮಯವು ಬಂದಿದೆ. ಈ ಋಚೀಕಮುನೀಶ್ವರನ ಮಗನು ಬಾಲಕನು. ನನ್ನನ್ನು

ಶರಣುಹೊಕ್ಕನು ಈತನ ಪ್ರಾಣವನ್ನು ಉಳಿಸಿ ನನ್ನ ಇಷ್ಟವನ್ನು ನೆರವೇರಿಸಿರಿ. ನೀವು ಮಹಾಕೃತಾರ್ಥರು ನೀವು ಧರ್ಮಬುದ್ಧಿಯುಳ್ಳವರು ಆದ್ದರಿಂದ ನೀವು ಅಂಬರೀಷರಾಜನ ನರಮೇಧಯಾಗದಲ್ಲಿ ಪಶುಗಳಾಗಿ ಯಜ್ಞೇಶ್ವರನಿಗೆ ತೃಪ್ತಿಯನ್ನುಮಾಡಿರಿ ಅನಾಥನಾದ ಶುನಃಶೇಫನು ನಿಮ್ಮಿಂದ ಜೀವಿತನಾಗಿ ಬದುಕಲಿ. ಅಂಬರೀಷರಾಜನ ಯಾಗವು ನಿರ್ವಿಘ್ನವಾಗಿ ನೆರವೇರಲಿ. ಆ ಯಾಗದಲ್ಲಿ ಹವಿರ್ಭಾಗಗಳನ್ನು ಭುಜಿಸುವ ದೇವತೆಗಳು ಸಂತುಷ್ಟರಾಗಲಿ, ನನ್ನ ಮಾತು ಸತ್ಯವಾಗಲಿ ' ಎಂದು ನುಡಿದನು.

ಆ ಮಾತನ್ನು ಕೇಳಿ ಆ ಮಕ್ಕಳು ತಮ್ಮ ತಂದೆಯಾದ ವಿಶ್ವಾಮಿತ್ರಮುನೀಶ್ವರನನ್ನು ನೋಡಿ ' ಎಲೈ ತಂದೆಯೆ, ತಮ್ಮ ಮಕ್ಕಳನ್ನು ಬಿಟ್ಟು ಪರರ ಮಕ್ಕಳನ್ನು ರಕ್ಷಿಸುವುದು ಲೋಕದಲ್ಲಿಲ್ಲ. ಶ್ವಮಾಂಸವನ್ನು ಭಕ್ಷಣೆಮಾಡುವಂತೆ ತನ್ನ ಮಕ್ಕಳನ್ನು ಪಶುನಿಮಿತ್ತವಾಗಿ ಕೊಡುವುದು ಅನುಚಿತವು ' ಎಂದು ದೇಹಾಭಿಮಾನದಿಂದ ನಗುತ್ತ ಅಂಗಚೇಷ್ಟೆ ಮಾಡುತ್ತಾ ನುಡಿದರು.

ಆ ಮಾತನ್ನು ಕೇಳಿ ವಿಶ್ವಾಮಿತ್ರಮುನೀಶ್ವರನು ಅತ್ಯಂತ ಕೋಪಯುಕ್ತನಾಗಿ ತನ್ನ ಮಕ್ಕಳಾದ ಮಧುಷ್ಯಂದಾದಿಗಳನ್ನು ಕುರಿತು ' ಎಲೈ, ನನ್ನ ಮಾತನ್ನತಿಕ್ರಮಿಸಿ, ಕೇಳುವಂಥವರಿಗೆ ರೋಮಾಂಚವಾಗುವ ಮಾತನ್ನು ಭಯವಿಲ್ಲದೆ ಲೋಕದಲ್ಲಿ ಧರ್ಮಕ್ಕೆ ವಿರುದ್ಧವಾದ ರೀತಿಯಲ್ಲಿ ನುಡಿದಿರಿ. ಆದ್ದರಿಂದ ನೀವು ವಸಿಷ್ಠನ ಮಕ್ಕಳಂತೆ ನಾಯಿಯ ಮಾಂಸವನ್ನು ಭುಜಿಸುತ್ತಾ ಒಂದು ಸಾವಿರ ವರುಷಗಳು ಭೂಮಿಯಲ್ಲಿ ಸಂಚರಿಸಿಕೊಂಡಿರಿ ' ಎಂದು ಶಾಪವನ್ನು ಕೊಟ್ಟನು. ಶುನಃಶೇಫನಿಗೆ ಅಭಯವನ್ನು ಕೊಟ್ಟು ಆತನನ್ನು ಕುರಿತು ' ಶುನಶ್ಶೇಫ, ಅಂಬರೀಷರಾಜನು ಯಾಗದಲ್ಲಿ ನಿನ್ನನ್ನು ಪವಿತ್ರವಾದ ದರ್ಭೆಯ ಹಗ್ಗಗಳಿಂದ ಕಟ್ಟಿ ಕೆಂಪಾದ ಪುಷ್ಪಮಾಲಿಕೆಗಳಿಂದ ಅಲಂಕರಿಸಿ ವಿಷ್ಣುದೇವತಾಕವಾದ ಯೂಪಸ್ತಂಭದಲ್ಲಿ ಕಟ್ಟುವ ಸಮಯದಲ್ಲಿ ಎರಡು ರಹಸ್ಯವಾದ ಋಕ್ಕುಗಳಿಂದ ಯಜ್ಞಪುರುಷನನ್ನು ಸ್ತೋತ್ರಮಾಡು. ಆ ಋಕ್ಕುಗಳನ್ನು ನಿನಗೆ ಉಪದೇಶ ಮಾಡುತ್ತೇನೆ ' ಎಂದು ನುಡಿದು ಉಪದೇಶವನ್ನು ಮಾಡಿದನು. ಹೀಗೆ ಆತನಲ್ಲಿ ಅನುಗ್ರಹಿಸಿ ' ಶುನಃಶೇಫ, ಅಂಬರೀಷರಾಜನ ಯಾಗದಲ್ಲಿ ಈ ಋಕ್ಕುಗಳನ್ನು ಜಪಿಸಿ ಸಿದ್ಧಿಯನ್ನು ಪಡೆ ' ಎಂದು ಹೇಳಿ ಆತನ ಕೈಹಿಡಿದು ಧೈರ್ಯ ಹೇಳಿ ಕಳುಹಿಸಿದನು.

ಆ ಮೇಲೆ ಶುನಃಶೇಫನು ವಿಶ್ವಾಮಿತ್ರನಿಂಧ ಮಂತ್ರೋಪದೇಶವನ್ನು ಪಡೆದು ಅಂಬರೀಷ ರಾಜನನ್ನು ಕುರಿತು ' ಎಲೈ ರಾಜನೆ, ನಾವು ಯಜ್ಞಶಾಲೆಗೆ ಹೋಗೋಣ. ನೀನು ಯಾಗದೀಕ್ಷೆ ಯನ್ನು ಕೈಗೊಳ್ಳು. ಈ ಯಾಗವು ಆಗಲಿ ' ಎಂದು ಹೇಳಿದನು.

ಆ ಮಾತನ್ನು ಕೇಳಿ ಆ ರಾಜನು ಅತ್ಯಂತ ಸಂತೋಷಯುಕ್ತನಾಗಿ ಆಲಸ್ಯವಿಲ್ಲದೆ ಯಜ್ಞ ಶಾಲೆಯನ್ನು ಪ್ರವೇಶಿಸಿ ಶುನಃಶೇಫನನ್ನು ರಕ್ತವಸ್ತ್ರ ರಕ್ತಪುಷ್ಪ ಮಾಲಿಕೆಗಳಿಂದಲಂಕರಿಸಿ ದರ್ಭೆಯ ಹಗ್ಗದಿಂದ ಯೂಪಸ್ತಂಭದಲ್ಲಿ ಕಟ್ಟಿದನು. ಆ ಸಮಯದಲ್ಲಿ ಶುನಶ್ಶೇಫನು ವಿಶ್ವಾಮಿತ್ರಮುನಿಯು ಉಪದೇಶಮಾಡಿದ ಮಂತ್ರಗಳಿಂದ ಯಜ್ಞಾಧಿದೇವತೆಗಳನ್ನು ಸ್ತೋತ್ರಮಾಡಲು ಅವರು ಆತನು ಮಾಡಿದ ಸ್ತೋತ್ರದಿಂದ ಸಂತುಷ್ಟರಾದರು. ಆಗ ದೇವೇಂದ್ರನು ಶುನಃಶೇಫನಿಗೆ ದೀರ್ಘಾಯುಷ್ಯ ವನ್ನು ಕೊಟ್ಟು ಅಂಬರೀಷರಾಜನಿಗೆ ಕೃಪೆಯಿಂದ ಸಾಂಗವಾದ ನರಮೇಧಯಾಗಫಲವನ್ನು ಕೊಟ್ಟು ಯಾಗಸಮಾಪ್ತಿಯನ್ನು ಮಾಡಿಸಿದನು ! ಆ ಬಳಿಕ ಧರ್ಮಾತ್ಮನಾದ ವಿಶ್ವಾಮಿತ್ರಮುನೀಶ್ವರನು ಅರ್ಕಪುಷ್ಕರಣಿ ಚಂದ್ರಪುಷ್ಕರಣಿ ವಹ್ನಿಪುಷ್ಕರಣಿ ಎಂಬ ಆ ಮೂರು ಪುಷ್ಕರಣಿಗಳ ತೀರಗಳಲ್ಲಿ ಸಾವಿರ ವರುಷಗಳು ತಪಸ್ಸನ್ನು ಮಾಡಿದನು. "

---

## ೬೩ ನೆಯ ಅಧ್ಯಾಯ

## ಮೇನಕೆಯಿಂದ ವಿಶ್ವಾಮಿತ್ರನ ತಪೋಭಂಗ

"ಈ ಪ್ರಕಾರದಲ್ಲಿ ಪುಷ್ಕರಣಿಗಳ ತೀರಗಳಲ್ಲಿ ತಪಸ್ಸನ್ನು ಮಾಡುತ್ತಿದ್ದ ವಿಶ್ವಾಮಿತ್ರ ಮುನೀಶ್ವರನಿಗೆ ಸಾವಿರ ವರುಷಗಳು ಕಳೆಯಲು ಬ್ರಹ್ಮದೇವನೇ ಮೊದಲಾದ ಸಮಸ್ತ ದೇವತೆಗಳೂ ತಪಸ್ಸಿನ ಫಲವನ್ನು ಕೊಡುವುದಕ್ಕಾಗಿ ಪ್ರಸನ್ನರಾದರು ಆಗ ಬ್ರಹ್ಮದೇವನು ಆ ಮುನೀಶ್ವರನನ್ನು ನೋಡಿ 'ವಿಶ್ವಾಮಿತ್ರ, ನೀನು ಮಾಡಿದ ತಪಸ್ಸುಗಳಿಂದ ನೀನು ಋಷಿಯಾಗು' ಎಂದು ನುಡಿದು ಬ್ರಹ್ಮಲೋಕಕ್ಕೆ ತೆರಳಿದನು. ಆ ಮೇಲೆ ವಿಶ್ವಾಮಿತ್ರನು ತನ್ನ ಮನಸ್ಸಿನಲ್ಲಿ 'ನಾನು ಎಷ್ಟು ತಪಸ್ಸು ಮಾಡಿದರೂ ಬ್ರಹ್ಮದೇವನು ಸಾಮಾನ್ಯ ಋಷಿಯಾಗಲೆಂದು ನುಡಿದನಲ್ಲದೆ ಬ್ರಹ್ಮಋಷಿ ಯಾಗಲೆಂದು ವರವನ್ನು ಕೊಡಲಿಲ್ಲ. ಆದಕಾರಣ ಇನ್ನೂ ವಿಶೇಷವಾಗಿ ತಪಸ್ಸುಮಾಡುವೆನು' ಎಂದು ಚಿಂತಿಸಿ ಪುಷ್ಕರಣೀ ತೀರದಲ್ಲಿ ಮತ್ತೆಯೂ ತಪಸ್ಸನ್ನು ಮಾಡುತ್ತಿದ್ದನು. ಆಗ ದೇವೇಂದ್ರನು ಆತನ ತಪಸ್ಸಿಗೆ ವಿಘ್ನವನ್ನು ಮಾಡಬೇಕೆಂದೆಣಿಸಿ ಮೇನಕೆಯನ್ನು ಕಳುಹಿಸಿದನು. ಆ ಅಪ್ಸರಃ ಸ್ತ್ರೀಯು ಆ ಕೊಳದಲ್ಲಿ ಸ್ನಾನವನ್ನು ಮಾಡುವುದಕ್ಕೆ ಯತ್ನಮಾಡುತ್ತಿರಲು ತಪಸ್ಸನ್ನು ಮಾಡಿಕೊಂಡಿದ್ದ ವಿಶ್ವಾಮಿತ್ರಮುನೀಶ್ವರನು ಮೇಘಮಂಡಲದಲ್ಲಿರುವ ಮಿಂಚಿನಹಾಗೆ ತನುಕಾಂತಿಯುಳ್ಳ ಮೇನಕೆಯನ್ನು ಕಂಡು ಮನ್ಮಥನಿಗೊಳಗಾಗಿ ಅವಳನ್ನು ನೋಡಿ 'ಸುಂದರಿ ಮೇನಕೆ, ನೀನು ಬಂದದ್ದು ಸಂತೋಷಕರ. ನಾನು ಮದನಬಾಣಗಳಿಗೆ ಒಳಗಾದೆನು. ನನ್ನನ್ನು ನೀನು ಅನುಗ್ರಹಿಸಬೇಕು' ಎಂದು ಹೇಳಿ ಒಡಂಬಡಿಸಿದನು ಆ ಮೇನಕೆಯು ಹಾಗೆಯೇ ಆಗಲೆಂದು ವಿಶ್ವಾಮಿತ್ರನನ್ನು ಸೇರಲು ಆತನ ತಪಸ್ಸಿಗೆ ವಿಘ್ನವಾಯಿತು. ಆ ಅಪ್ಸರಃ ಸ್ತ್ರೀಯು ವಿಶ್ವಾಮಿತ್ರಮುನೀಶ್ವರನ ಆಶ್ರಮದಲ್ಲಿ ಆತನೊಡನೆ ಕ್ರೀಡಿಸಿಕೊಂಡು ಹತ್ತು ವರುಷ ಗಳನ್ನು ಕಳೆಯಲು ವಿಶ್ವಾಮಿತ್ರಮುನೀಶ್ವರನು ಲಜ್ಜೆಯಿಂದ ಚಿಂತಾಕ್ರಾಂತನಾದನು, ಆತನು ದುಃಖಪಡುತ್ತ ತನ್ನ ಮನಸ್ಸಿನಲ್ಲಿ 'ನನಗೆ ಈ ವ್ಯಾಮೋಹವು ಹುಟ್ಟಿ ತಪಸ್ಸು ಕ್ಷಯವಾದದ್ದು ದೇವತೆಗಳಿಂದಲೇ ಸರಿ. ಬಹುಕಾಲ ತಪಸ್ಸುಮಾಡಿ ಈಗ ಅಜ್ಞಾನದಿಂದ ಕಾಮಾಸಕ್ತನಾದೆನು. ಅದರಿಂದ ತಪೋವಿಘ್ನವು ಬಂದಿತು' ಎಂದು ಚಿಂತಿಸುತ್ತ ನಿಟ್ಟುಸುರುಬಿಡುತ್ತಿದ್ದನು. ಆಗ ಆತನನ್ನು ನೋಡಿ ಮೇನಕೆಯು ಭಯದಿಂದ ನಡುಗುತ್ತಾ ಕೈ ಮುಗಿದು ನಿಂತುಕೊಂಡಳು. ಆಕೆಯನ್ನು ವಿಶ್ವಾಮಿತ್ರಮುನೀಶ್ವರನು ಮೃದುನುಡಿಗಳಿಂದ ಸಂತವಿಟ್ಟು ಕಳುಹಿಸಿ ಬಡಗಣ ದಿಕ್ಕಿನ ಪರ್ವತಕ್ಕೆ ಹೋಗಿ ದೃಢಬುದ್ಧಿಯಿಂದ ಕಾಮನನ್ನು ಜಯಿಸಿ ಕೌಶಿಕೀನದಿಯ ತೀರದಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ಆಗ ದೇವತೆಗಳಿಗೆ ಮಹತ್ತಾದ ಭಯ ಹುಟ್ಟಲು ಎಲ್ಲರೂ ಕೂಡಿ ಕೊಂಡು ಬ್ರಹ್ಮದೇವನನ್ನು ಕುರಿತು 'ಬ್ರಹ್ಮದೇವ, ವಿಶ್ವಾಮಿತ್ರನು ಬಹಳವಾಗಿ ತಪಸ್ಸನ್ನು ಮಾಡಿದನು, ಆದ್ದರಿಂದ ಆತನು ಲೋಕದಲ್ಲಿ ಮಹರ್ಷಿಯೆನಿಸಿಕೊಳ್ಳಲಿ' ಎಂದು ನುಡಿದರು.

ಬ್ರಹ್ಮದೇವನು ಹಾಗೆಯೇ ಆಗಲೆಂದು ವಿಶ್ವಾಮಿತ್ರಮುನೀಶ್ವರನನ್ನು ಮಧುರವಚನಗಳಿಂದ ಸಂತವಿಟ್ಟು 'ಎಲೈ ವಿಶ್ವಾಮಿತ್ರನೆ, ನೀನು ಇಂದುಮೊದಲಾಗಿ ಮಹರ್ಷಿಯಾದೆ. ನಿನಗೆ ಮಹತ್ತ್ವ ವನ್ನು ಕೊಟ್ಟೆನು' ಎಂದು ನುಡಿದನು. ಆ ಮಾತನ್ನು ಕೇಳಿ ವಿಶ್ವಾಮಿತ್ರನು ಕೈ ಮುಗಿದುಕೊಂಡು ಬ್ರಹ್ಮದೇವನನ್ನು ನೋಡಿ 'ಬ್ರಹ್ಮದೇವ, ನನಗೆ ಬ್ರಹ್ಮರ್ಷಿಪದವಿಯನ್ನು ಕೊಡು; ನಾನು

ಜಿತೇಂದ್ರಿಯನಾಗಿ ತಪಸ್ಸನ್ನು ಮಾಡಿದ ಫಲದಿಂದ ನನ್ನನ್ನು ಬ್ರಹರ್ಷಿಯೆಂದು ಕರೆಯುವ ಕೃಪೆ ಮಾಡಬೇಕು ' ಎಂದು ನುಡಿದನು. ಬ್ರಹ್ಮದೇವನು ' ವಿಶ್ವಾಮಿತ್ರ, ನೀನು ಇನ್ನೂ ತಪಸ್ಸಿದ್ಧಿಯನ್ನು ಹೊಂದುವವರ್ಯಂತ ಬ್ರಹ್ಮರ್ಷಿಪದವಿಯು ನಿನಗೆ ಬರಲಾರದು ' ಎಂದು ಹೇಳಿ ಸತ್ಯಲೋಕಕ್ಕೆ ಬಿಜಯಂಗೈದನು ಹೀಗೆ ಬ್ರಹ್ಮದೇವನು ಹೋದಮೇಲೆ ವಿಶ್ವಾಮಿತ್ರಮುನೀಶ್ವರನು ತೋಳು ಗಳನ್ನು ಮೇಲಕ್ಕೆ ನೆಗೆಹಿಕೊಂಡು ವಾಯುವನ್ನೇ ಆಹಾರವಾಗಿ ಸೇವಿಸುತ್ತಾ ಬೇಸಿಗೆಯ ಕಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿಯೂ ವರ್ಷಾಕಾಲದಲ್ಲಿ ಬಯಲಲ್ಲಿಯೂ ಶೀತಕಾಲದಲ್ಲಿ ಜಲಮಧ್ಯದಲ್ಲಿಯೂ ನಿಂತುಕೊಂಡು ಹಗಲಿರಳುಗಳಲ್ಲಿಯೂ ಸಾವಿರ ವರುಷಗಳ ಪರ್ಯಂತ ಘೋರವಾದ ತಪಸ್ಸನ್ನು ಮಾಡುತ್ತಿದ್ದನು ಆದರಿಂದ ಸಮಸ್ತ ದೇವತೆಗಳೂ ಕಂಗೆಟ್ಟರು ಆಗ ದೇವೇಂದ್ರನು ರಂಭೆ ಯೆಂಬ ಅಪ್ಸರಃಸ್ತ್ರೀಯನ್ನು ಕರೆದು ' ರಂಭೆ, ನೀನು ನಮಗೆ ಹಿತವಾಗುವ ಹಾಗೆ ವಿಶ್ವಾಮಿತ್ರನ ತಪಸ್ಸಿಗೆ ವಿಘ್ನವನ್ನು ಮಾಡು ' ಎಂದು ಹೇಳಿ ಕಳುಹಿಸಿದನು "



## ೬೪ ನೆಯ ಅಧ್ಯಾಯ

## ರಂಭೆಗೆ ವಿಶ್ವಾಮಿತ್ರನ ಶಾಪ

" ಶ್ರೀರಾಮ ಆಮೇಲೆ ದೇವೇಂದ್ರನಿಂದ ಕಳುಹಿಸಲ್ಪಟ್ಟ ರಂಭೆಯು ಲಜ್ಜಿತೆಯಾಗಿ ಕೈಮುಗಿದು ಕೊಂಡು ಆತನನ್ನು ಕುರಿತು ' ದೇವೇಂದ್ರ, ವಿಶ್ವಾಮಿತ್ರನು ಮಹಾಕೋಪಿಷ್ಠನು. ನಾನು ಸಂಮೋಹನ ಗಳಾದ ವಿದ್ಯೆಗಳನ್ನು ತೋರಿಸಿದರೆ ನನ್ನಮೇಲೆ ಕೋಪಿಸಿಕೊಂಡು ಶಾಪವನ್ನು ಕೊಡುವನು. ಸಂದೇಹವಿಲ್ಲ. ಆದಕಾರಣ ನಾನು ಭಯಪಡುತ್ತೇನೆ. ಆದ್ದರಿಂದ ನನಗೆ ಭಯವಿಲ್ಲದ ಹಾಗೆ ಕೃಪೆಮಾಡಬೇಕು ' ಎಂದು ನುಡಿದು ನಡುಗುತ್ತ ನಿಂತುಕೊಂಡಿದ್ದಳು.

ದೇವೇಂದ್ರನು ' ರಂಭೆ, ನೀನು ಅಂಜಬೇಡ ನಾನು ಹೇಳಿದ ರೀತಿಯಲ್ಲಿ ಮಾಡು. ನಾನು ವಸಂತಕಾಲದ ಕೋಗಿಲೆಯಾಗಿ ತಳಿರುಗಳುಳ್ಳ ಮಾವಿನಮರವನ್ನೇರಿಕೊಂಡು ಮನ್ಮಥನಸಹಿತನಾಗಿ ವಿಶ್ವಾಮಿತ್ರನ ಸಮೀಪಕ್ಕೆ ಬರುತ್ತೇನೆ. ನೀನು ನಿನ್ನ ಸ್ವರೂಪವನ್ನು ಮಹಾಮನೋಹರವಾಗಿ ಮಾಡಿಕೊಂಡು ವಿಶ್ವಾಮಿತ್ರನ ಸಮೀಪಕ್ಕೆ ಹೋಗಿ ತಪಸ್ಸಿಗೆ ವಿಘ್ನವನ್ನು ಮಾಡು ' ಎಂದು ಹೇಳಿದನು.

ಆ ಬಳಿಕ ರಂಭೆಯು ತುಂಬ ಸೊಬಗುಳ್ಳರೂಪವನ್ನು ಧರಿಸಿ, ಮುಗುಳುನಗೆಯೊಡನೆ ವಿಶ್ವಾಮಿತ್ರನ ಸಮೀಪದಲ್ಲಿ ನಿಂತಿರಲು ದೇವೇಂದ್ರನು ಕೋಗಿಲೆಯಾಗಿ ಮನೋಹರಧ್ವನಿಯಿಂದ ಸ್ವರಗೈಯುತ್ತಿದ್ದನು. ವಿಶ್ವಾಮಿತ್ರನು ಕಿವಿಗಿಂಪಾದ ಕೋಗಿಲೆಯ ಸ್ವರವನ್ನು ಕೇಳಿ ಅತಿಹರ್ಷದಿಂದ ರಂಭೆಯನ್ನು ನೋಡುತ್ತಾ ಇರಲು ಮನಸ್ಸಿನಲ್ಲಿ ಸಂದೇಹವುಂಟಾಯಿತು. ಒಂದು ಕ್ಷಣಮಾತ್ರ ಸ್ವಾಮಿಯ ಧ್ಯಾನವನ್ನು ಮಾಡಿದನು. ಅದರಿಂದ ಎಚ್ಚರಿಕೆಯುಂಟಾಗಿ ಕೋಲಿನಿಂದ ಕೆಣಕಲ್ಪಟ್ಟ ಸರ್ಪದಹಾಗೆ ಕೋಪವು ಹೆಚ್ಚಿತು. ರಂಭೆಯು ಬಂದ ವೃತ್ತಾಂತವು ದೇವೇಂದ್ರನ ಕೃತ್ಯವೆಂದು ತಿಳಿದು ಆಕೆಯನ್ನು ಕುರಿತು ' ಎಲೆ ರಂಭೆ, ನಾನು ಕ್ರೋಧವನ್ನು ಜಯಿಸಬೇಕೆಂದಿರಲು ನನಗೆ ಚಿತ್ತಭ್ರಮೆಯನ್ನು ಮಾಡಿದೆ. ಆದ್ದರಿಂದ ನೀನು ಹತ್ತುಸಾವಿರ ವರುಷಗಳವರೆಗೆ ಶಿಲಾಪ್ರತಿಮೆ ಯಾಗಿರು. ಮುಂದೆ ತಪೋಬಲವುಳ್ಳ ಋಷಿಗಳು ನನ್ನ ಕೋಪದಿಂದ ಶಪಿಸಲ್ಪಟ್ಟ ನಿನ್ನನು ಶಾಪ

ದಿಂದ ಬಿಡುಗಡೆ ಮಾಡುವರು ! ' ಎಂದು ಶಾಪವನ್ನು ಕೊಟ್ಟನು. ರಂಭೆಯು ವಿಶ್ವಾಮಿತ್ರನ ಶಾಪ ದಿಂದ ಶಿಲಾಪ್ರತಿಮೆಯಾದಳು. ಮನ್ಮಥನು ರಂಭೆಗೆ ಶಾಪವು ಬಂದುದನ್ನು ಕಂಡು ಓಡಿಹೋದನು.

ಹೀಗೆ ವಿಶ್ವಾಮಿತ್ರನು ತನ್ನ ಕೋಪವನ್ನು ಸಹಿಸಿಕೊಂಡು ಕ್ಷಮೆಯನ್ನು ತೋರಲಾರದೆ ರಂಭೆಯನ್ನು ಶಪಿಸಿದ್ದರಿಂದ ತಪಸ್ಸು ಕ್ಷಯವಾಯಿತು ಅದರಿಂದ ಬಹಳವಾಗಿ ತನ್ನ ಮನಸ್ಸಿನಲ್ಲಿ ಚಿಂತಿಸಿ ' ಇನ್ನುಮೇಲೆ ಕೋಪವನ್ನು ಮಾಡೆನು. ಯಾರನ್ನೂ ಶಪಿಸೆನು ನಿಟ್ಟುಸುರನ್ನಾದರೂ ಬಿಡೆನು. ಇಂದಿನಿಂದ ಜಿತೇಂದ್ರಿಯನಾಗಿ ಶರೀರವನ್ನು ದಂಡಿಸಿಕೊಂಡು ನನಗೆ ಎಷ್ಟರವರೆಗೆ ಬ್ರಹ್ಮರ್ಷಿತ್ವವು ಬಾರದಿರುವುದೋ ಅಷ್ಟರವರೆಗೆ ಆಹಾರವನ್ನು ಬಿಟ್ಟು ಬಹುಕಾಲವಾದರೂ ತಪಸ್ಸನ್ನು ಮಾಡುವೆನು. ತಪಸ್ಸುಮಾಡುವವನಿಗೆ ತಪೋಬಲದಿಂದ ಕರಚರಣಾದಿ ಅವಯವಗಳು ಕ್ಷಯವಸ್ನೈದವು ' ಎಂದು ಪ್ರತಿಜ್ಞೆಯನ್ನು ಮಾಡಿಕೊಂಡನು "



೬೫ ನೆಯ ಅಧ್ಯಾಯ

## ವಿಶ್ವಾಮಿತ್ರನು ಬ್ರಹ್ಮರ್ಷಿಯಾದದ್ದು

" ಆಮೇಲೆ ವಿಶ್ವಾಮಿತ್ರಮುನೀಶ್ವರನು ಹಿಮವತ್ಪರ್ವತದ ಉತ್ತರದಿಕ್ಕನ್ನು ಬಿಟ್ಟು ಪೂರ್ವ ದಿಕ್ಕಿಗೆ ಹೋಗಿ ಸಾವಿರಾರು ವರುಷಗಳಪರ್ಯಂತ ಮೌನವ್ರತವನ್ನು ಹಿಡಿದು ಲೋಕದಲ್ಲಿ ಯಾರಿಗೂ ಶಕ್ಯವಲ್ಲದ ತಪಸ್ಸನ್ನು ಆಚರಿಸುತ್ತಿದ್ದನು. ಸಾವಿರ ವರುಷಗಳು ಪೂರ್ತಿಯಾಗುವ ವರೆಗೂ ಬಹುವಿಧವಾದ ವಿಘ್ನಗಳನ್ನೂ ಉಪದ್ರವಗಳನ್ನೂ ಮಾಡಿದರೂ ಕಾಷ್ಠದ ಹಾಗೆ ಅಂತರಂಗದಲ್ಲಿ ಕೋಪವು ಹುಟ್ಟಲಿಲ್ಲ. ಆಗ ಆ ಮುನೀಶ್ವರನು ತನಗೆ ಕೋಪವು ಶಾಂತ ವಾಯಿತೆಂದು ನಿಶ್ಚಯಿಸಿ ಸಾವಿರ ವರುಷಗಳಾದಮೇಲೆ ನಿರಾಹಾರವ್ರತವನ್ನು ಸಮಾಪ್ತಿಮಾಡಿ ಅನ್ನವನ್ನು ಭುಜಿಸಬೇಕೆಂದು ಪ್ರಯತ್ನಿಸುತ್ತಿದ್ದನು. ಆ ಸಮಯದಲ್ಲಿ ದೇವೇಂದ್ರನು ಬ್ರಾಹ್ಮಣ ರೂಪದಿಂದ ಬಂದು ಗ್ರಾಸವನ್ನು ಬೇಡಲು ವಿಶ್ವಾಮಿತ್ರನು ಆತನಿಗೆ ಅನ್ನವನ್ನಿಕ್ಕಿದನು. ಪಾಕಮಾಡಿದ್ದ ಅನ್ನವೆಲ್ಲವನ್ನೂ ಆ ಬ್ರಾಹ್ಮಣನು ನಿಶ್ಶೇಷವಾಗಿ ಭುಜಿಸಿದನು ಮೌನವ್ರತದಲ್ಲಿದ್ದ ವಿಶ್ವಾಮಿತ್ರನು ಏನೂ ನುಡಿಯದೆ ಪುನಃ ನಿಟ್ಟುಸುರುಬಿಡುವುದಿಲ್ಲವೆಂಬ ವ್ರತವನ್ನು ಮಾಡಿಕೊಂಡು ಮತ್ತೂ ಸಾವಿರ ವರುಷಗಳು ತಪಸ್ಸನ್ನು ಮಾಡಿದನು. ಈ ರೀತಿಯಲ್ಲಿ ಸಾವಿರ ವರುಷಗಳು ವಾಯುನಿರೋಧವನ್ನು ಮಾಡಿಕೊಂಡು ನಿಟ್ಟುಸುರು ಬಿಡದೆ ಮೌನವ್ರತದಿಂದ ತಪಸ್ಸನ್ನು ಮಾಡುತ್ತಿರಲು ವಿಶ್ವಾಮಿತ್ರಮುನೀಶ್ವರನ ಬ್ರಹ್ಮರಂಧ್ರದಲ್ಲಿ ಹೊಗೆಯೆದ್ದು ಮೂರುಲೋಕ ಗಳಲ್ಲಿಯೂ ಅದು ಹರಡಿತು. ಆಗ ದೇವ ದಾನವ ಗಂಧರ್ವ ಯಕ್ಷ ಕಿನ್ನರ ಕಿಂಪುರುಷರೆಲ್ಲರೂ ವಿಶ್ವಾಮಿತ್ರಮುನೀಶ್ವರನ ಬ್ರಹ್ಮರಂಧ್ರದಿಂದೆದ್ದ ಉರಿಯಿಂದ ಕಂಗೆಟ್ಟು ಮುಖಕಾಂತಿಗುಂದಿ ಕಪ್ಪಾಗಿ ಬ್ರಹ್ಮದೇವನನ್ನು ಕುರಿತು ' ಬ್ರಹ್ಮದೇವ, ನಾವು ನಾನಾ ಉಪಾಯಗಳಿಂದ ವಿಶ್ವಾಮಿತ್ರನಿಗೆ ಕೋಪವು ಹುಟ್ಟುವುದಕ್ಕಾಗಿ ಎಷ್ಟು ಉಪದ್ರವಗಳನ್ನು ಮಾಡಿದರೂ ಆತನು ಕೋಪವಿಲ್ಲದೆ ಮತ್ತೂ ವಿಶೇಷವಾಗಿ ತಪಸ್ಸನ್ನು ಮಾಡುತ್ತಾ ಇದ್ದಾನೆ. ಆತನ ತಪಸ್ಸಿಗೆ ನಿಲುಗಡೆಯಿಲ್ಲ. ಆತನಲ್ಲಿ ಕಿಂಚಿತ್ತಾದರೂ ಊಣಯವಿಲ್ಲ. ಇಷ್ಟರಮೇಲೆ ಆತನ ಮನಸ್ಸಿನ ಇಷ್ಟಾರ್ಥವನ್ನು ಕೊಡದಿದ್ದರೆ ಆತನ ತಪೋಜ್ವಾಲೆಯು ಚರಾಚರಾತ್ಮಕವಾದ ಜಗತ್ತನ್ನು ಲಯಮಾಡುವುದು. ವಿಶ್ವಾಮಿತ್ರ ಮುನೀಶ್ವರನು ಮಂಜುಮುಸುಕಿದ ಸೂರ್ಯನಂತೆ ಅಂತರಂಗದಲ್ಲಿ ಬಹುಕುಪಿತನಾಗಿದ್ದಾನೆ. ಆದ

ಕಾರಣ ಯಜ್ಞಪುರುಷನಿಗೆ ಸಮಾನನಾದ ವಿಶ್ವಾಮಿತ್ರನಿಗೆ ಕೋಪವು ಹುಟ್ಟಿ ಜಗತ್ತೆಲ್ಲವನ್ನೂ ನಾಶ ಮಾಡಬೇಕೆಂಬ ಬುದ್ಧಿ ಹುಟ್ಟುವುದಕ್ಕಿಂತಲೂ ಮೊದಲೇ ಆತನನ್ನು ಸಂತವಿಡಬೇಕು. ಅಲ್ಲದಿದ್ದರೆ ಪ್ರಳಯಕಾಲಾಗ್ನಿಯಿಂದ ತ್ರಿಲೋಕಗಳೂ ಹೇಗೆ ಲಯವಾಗುವುವೋ ಹಾಗೆ ಆತನ ಕೋಪದಿಂದ ಲೋಕವೆಲ್ಲವೂ ಲಯವಾಗುವುದು. ಆದ್ದರಿಂದ ಈತನಿಗೆ ಕೋಪವು ಹುಟ್ಟುವುದಕ್ಕಿಂತಲೂ ಮೊದಲೇ ಆತನ ಇಷ್ಟಾರ್ಥವನ್ನು ಕೊಡಬೇಕು' ಎಂದು ನುಡಿದರು. ಸಮಸ್ತದೇವತೆಗಳೂ ಋಷಿಗಳೂ ಬ್ರಹ್ಮದೇವನೊಡನೆ ವಿಶ್ವಾಮಿತ್ರಮುನಿಯ ಬಳಿಗೆ ಬಂದು ಆತನನ್ನು ಕುರಿತು 'ಎಲೈ ಬ್ರಹ್ಮರ್ಷಿ! ನಿನ್ನ ತಪಸ್ಸಿನಿಂದ ನಾವು ಸಂತುಷ್ಟರಾದೆವು. ನೀನು ಉಗ್ರವಾದ ತಪಸ್ಸನ್ನು ಮಾಡಿ ಬ್ರಾಹ್ಮಣ್ಯವನ್ನು ಪಡೆದೆ. ನೀನು ಇಂದು ಮೊದಲು ಬ್ರಹ್ಮರ್ಷಿಯಾದೆ. ನಿನಗೆ ನಾವು ದೀರ್ಘಾಯುಷ್ಯವನ್ನು ಕೊಟ್ಟೆವು! ನಿನಗೆ ಅಧಿಕವಾದ ಶ್ರೇಯಸ್ಸಾದೀತು! ನೀನು ನಿನ್ನ ರಾಜ್ಯಕ್ಕೆ ಸುಖವಾಗಿ ಹೋಗು' ಎಂದು ಹೇಳಿದರು

ಅವರ ಮಾತುಗಳನ್ನು ಕೇಳಿ ವಿಶ್ವಾಮಿತ್ರನು ಅತ್ಯಂತ ಸಂತುಷ್ಟಚಿತ್ತನಾಗಿ ಆ ದೇವತೆಗಳಿಗೆ ನಮಸ್ಕಾರವನ್ನು ಮಾಡಿ 'ದೇವತೆಗಳಿರಾ, ನನಗೆ ಬ್ರಹ್ಮರ್ಷಿತ್ವವನ್ನೂ ದೀರ್ಘಾಯುಷ್ಯವನ್ನೂ ಕೊಟ್ಟ ಪಕ್ಷದಲ್ಲಿ ನನಗೆ ಓಂಕಾರ ವಷಟ್ಕಾರ ದೇವತೆಗಳೂ ತಮಗೆ ತಾವೇ ಪ್ರಸನ್ನರಾಗಿ ತೋರಲಿ! ಸಮಸ್ತ ಬ್ರಹ್ಮಜ್ಞಾನಿಗಳಿಗೂ ಕ್ಷತ್ರಧರ್ಮವನ್ನು ಬಲ್ಲವರಿಗೂ ಉತ್ತಮನಾಗಿ ಬ್ರಹ್ಮಪುತ್ರನಾದ ವಸಿಷ್ಠಮುನಿಯು ನೀವು ಹೇಳಿದ ಪ್ರಕಾರ ನನ್ನನ್ನು ಬ್ರಹ್ಮರ್ಷಿಯೆಂದು ಕರೆಯಲಿ. ಇದೇ ನನ್ನ ಇಷ್ಟಾರ್ಥ! ಇದನ್ನು ಸಲ್ಲಿಸಿ ನಿಮ್ಮ ಲೋಕಗಳಿಗೆ ಹೋಗಿ' ಎಂದು ಹೇಳಿದನು. ಬಳಿಕ ಋಷಿಗಳೂ ಬ್ರಹ್ಮದೇವಸಹಿತರಾದ ಸಕಲದೇವತೆಗಳೂ ವಸಿಷ್ಠಮುನೀಶ್ವರನ ಸಮೀಪಕ್ಕೆ ಹೋಗಿ 'ವಸಿಷ್ಠಮುನೀಶ್ವರನೆ, ನೀನು ವಿಶ್ವಾಮಿತ್ರನನ್ನು ಬ್ರಹ್ಮರ್ಷಿಯೆಂದು ಕರೆದು ಆತನನ್ನು ಅಂಗೀಕರಿಸಬೇಕು' ಎಂದ ಹೇಳಿದರು. ವಸಿಷ್ಠಮಹರ್ಷಿಯು ಹಾಗೆಯೇ ಆಗಲೆಂದು ವಿಶ್ವಾಮಿತ್ರ ಮುನಿಯ ಸಮೀಪಕ್ಕೆ ಹೋಗಿ ಆತನೊಡನೆ ಸ್ನೇಹವನ್ನು ಬೆಳೆಯಿಸಿ ವಿನಯದಿಂದ 'ವಿಶ್ವಾಮಿತ್ರ ಮುನೀಶ್ವರನೆ, ಇಂದು ಮೊದಲಾಗಿ ಬ್ರಹ್ಮರ್ಷಿಯಾಗಿರುವೆ. ನಿನ್ನ ಮನೋರಥವೆಲ್ಲವೂ ಸಂದಿತು' ಎಂದು ನುಡಿದನು.

ಈ ಪ್ರಕಾರದಲ್ಲಿ ವಸಿಷ್ಠಮುನಿಯೂ, ಸಕಲದೇವತೆಗಳೂ ವಿಶ್ವಾಮಿತ್ರನಿಗೆ ಬ್ರಹ್ಮರ್ಷಿತ್ವ ವನ್ನು ಕೊಟ್ಟು ತಮ್ಮ ತಮ್ಮ ಲೋಕಗಳಿಗೆ ಬಿಜಯಂಗೈದರು. ವಿಶ್ವಾಮಿತ್ರಮಹರ್ಷಿಯು ಬ್ರಾಹ್ಮಣ್ಯವನ್ನು ಪಡೆದು ನಿಖಿಲತಪಸ್ವಿಗಳಿಗೂ ಉತ್ತಮನಾದ ವಸಿಷ್ಠಮುನೀಶ್ವರನಿಗೆ ಅಭಿವಂದಿಸಿ ಅನೇಕ ಸತ್ಕಾರಗಳನ್ನು ಮಾಡಿ ಕೃತಕೃತ್ಯನಾಗಿ ಭೂಮಂಡಲದಲ್ಲಿ ಸಂಚರಿಸಿಕೊಂಡು ಅಲ್ಲಲ್ಲಿ ತಪಸ್ಸನ್ನು ಮಾಡಿಕೊಂಡು ಇದ್ದಾನೆ" ಎಂದು ಶತಾನಂದನು ನುಡಿದನು.

ಈ ಪ್ರಕಾರದಲ್ಲಿ ರಾಮಲಕ್ಷ್ಮಣರಿಗೆ ಶತಾನಂದನು ಹೇಳಿದ ವಾಕ್ಯಗಳನ್ನು ಕೇಳಿ ಜನಕಮಹಾ ರಾಜನು ಕೈಮುಗಿದುಕೊಂಡು ವಿಶ್ವಾಮಿತ್ರಮುನೀಶ್ವರನನ್ನು ನೋಡಿ "ವಿಶ್ವಾಮಿತ್ರರೆ, ನೀವು ರಾಮಲಕ್ಷ್ಮಣರನ್ನು ಕೂಡಿಕೊಂಡು ನನ್ನ ಯಾಗಶಾಲೆಗೆ ಬಂದದ್ದರಿಂದ ನಾನು ನಿಮ್ಮ ಕೃಪೆಗೆ ಪಾತ್ರನಾಗಿ ಕೃತಾರ್ಥನಾಗಿ ಪರಮಪವಿತ್ರನಾದೆನು. ವಿಶ್ವಾಮಿತ್ರಮುನೀಶ್ವರರೆ, ನೀವು ಸಮಸ್ತ ಋಷಿಗಳಿಗೂ ಮಾನ್ಯರು. ನಿಮ್ಮ ಸಂದರ್ಶನದಿಂದ ನನಗೆ ಬಹಳ ಶ್ರೇಯಸ್ಸಾಯಿತು. ಶತಾನಂದರು ನಿಮ್ಮ ಮಹಿಮೆಯನ್ನು ಬಹಳವಾಗಿ ಹೇಳಲು ನಿಮ್ಮ ಸದ್ಗುಣಗಳನ್ನೂ ನಿಮ್ಮ ಮಹಿಮೆಯನ್ನೂ ಶ್ರೋತ್ರಾನಂದವಾಗುವಂತೆ ಕೇಳಿದೆನು. ಮಹಾತ್ಮರಾದ ರಾಮಲಕ್ಷ್ಮಣರೂ ಕೇಳಿದರು. ನಿಮ್ಮ

ಗುಣಗಳು ಅಪರಿಮಿತವಾದವು. ನಿಮ್ಮ ಮಹಿಮೆಯು ಅನಂತವಾದದ್ದು ನಿಮ್ಮ ಬಲವು ಅಪರಿಮಿತ ವಾದದ್ದು. ನಿಮ್ಮಂಥ ಪುಣ್ಯಾತ್ಮರ ಕಥಾಶ್ರವಣದಿಂದ ನನಗೆ ಆನಂದವಾಯಿತು ನನಗೆ ಅಗ್ನಿ ಹೋತ್ರದ ಸಮಯವಾಯಿತು. ನಾಳೆ ಪ್ರಾತಃಕಾಲ ನಿಮ್ಮ ಸಮೀಪಕ್ಕೆ ಬರುತ್ತೇನೆ ನನಗೆ ಅಪ್ಪಣೆ ಯನ್ನು ದಯಪಾಲಿಸಿ ಕಳುಹಿಸಿ" ಎಂದನು ವಿಶ್ವಾಮಿತ್ರನು ಸುಪ್ರೀತನಾಗಿ ಜನಕರಾಯನಿಗೆ ಅಪ್ಪಣೆಕೊಡಲು ಆತನು ಆ ಮುನೀಶ್ವರನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ತನ್ನ ಯಜ್ಞ ಶಾಲೆಗೆ ಹೋಗಿ ಔಪಾಸನವನ್ನು ಮಾಡುತ್ತಿದ್ದನು ಧರ್ಮಾತ್ಮನಾದ ವಿಶ್ವಾಮಿತ್ರಮುನೀಶ್ವರನು ರಾಮಲಕ್ಷ್ಮಣರನ್ನು ಕೂಡಿಕೊಂಡು ಎಲ್ಲ ಋಷಿಗಳೂ ಜಯ ಜಯ ಎಂದು ಕೊಂಡಾಡುತ್ತಿರಲು ತನ್ನ ಪರ್ಣಶಾಲೆಗೆ ಹೋದನು.



## ೬೬ ನೆಯ ಅಧ್ಯಾಯ

## ಜನಕನು ಪರಮೇಶ್ವರನ ಬಿಲ್ಲಿಗೆ ಹೆದೆಯೇರಿಸಿದವರಿಗೆ ಸೀತಾದೇವಿಯನ್ನು ಕೊಡುವುದಾಗಿ ಹೇಳಿದ್ದು

ಮಾರನೆಯ ದಿವಸ ಪ್ರಾತಃಕಾಲದಲ್ಲಿ ಜನಕಮಹಾರಾಜನು ಸ್ನಾನಸಂಧ್ಯಾವಂದನಾದಿ ಸತ್ಕರ್ಮ ಗಳನ್ನು ತೀರಿಸಿಕೊಂಡು ವಿಶ್ವಾಮಿತ್ರಮುನೀಶ್ವರನನ್ನು ಶಾಸ್ತ್ರೋಕ್ತಪ್ರಕಾರದಲ್ಲಿ ಪೂಜಿಸಿ ರಾಮ ಲಕ್ಷ್ಮಣರನ್ನು ಮನ್ನಿಸಿ ವಿಶ್ವಾಮಿತ್ರಮುನೀಶ್ವರನನ್ನು ಕುರಿತು "ಮಹರ್ಷಿಗಳೆ, ನಾನು ನಿಮಗೆ ಯಾವ ಸೇವೆಯನ್ನು ಮಾಡಲಿ ? ನಾನು ನಿಮ್ಮ ಸೇವಕನು" ಎಂದು ಹೇಳಿದನು.

ನುಡಿಜಾಣ್ಮೆಯುಳ್ಳ ವಿಶ್ವಾಮಿತ್ರನು ಆ ರಾಜನನ್ನು ಕುರಿತು "ಜನಕರಾಜ, ಈ ತರುಣರು ದಶರಥರಾಜನ ಕುಮಾರರು, ಕ್ಷತ್ರಿಯರು. ಮೂರುಲೋಕದಲ್ಲಿಯೂ ಪ್ರಸಿದ್ಧರು. ನಿನ್ನ ಮನೆ ಯಲ್ಲಿರುವ ಉತ್ತಮವಾದ ಧನುಸ್ಸನ್ನು ನೋಡಬೇಕೆಂದು ಇಲ್ಲಿಗೆ ಬಂದರು. ಆ ಧನುಸ್ಸನ್ನು ಇವರಿಗೆ ತೋರಿಸು" ಎಂದು ನುಡಿದನು.

ಆ ಮಾತನ್ನು ಕೇಳಿ ಜನಕರಾಜನು 'ಮಹಾತ್ಮರೆ, ಆ ಧನುಸ್ಸು ನನ್ನ ಮನೆಯಲ್ಲಿದೆ ಪೂರ್ವದಲ್ಲಿ ನಿಮಿಚಕ್ರವರ್ತಿಯಿಂದ ಆರನೆಯವನಾದ ದೇವರಾತನೆಂಬ ನಮ್ಮ ವಂಶದ ರಾಜನು ಮಂತ್ರನ್ಯಾಸಪೂರ್ವಕವಾಗಿ ತನ್ನ ಹಸ್ತದಿಂದಿರಿಸಿದ ಧನುಸ್ಸಿದು. ಪರಮೇಶ್ವರನು ದಕ್ಷಯಜ್ಞವನ್ನು ನಾಶಮಾಡುವಾಗ ಈ ಧನುಸ್ಸನ್ನು ಹೆದೆಯೇರಿಸಿ ದೇವತೆಗಳನ್ನು ಕುರಿತು 'ಎಲೈ ದೇವತೆಗಳಿರಾ, ನೀವು ಯಾಗದಲ್ಲಿ ಹವಿರ್ಭಾಗಗಳನ್ನು ತೆಗೆದುಕೊಂಡಾಗ ನನಗೆ ಭಾಗವನ್ನು ಕೊಡದೆಹೋದದ್ದರಿಂದ ನಿಮ್ಮ ಶಿರಸ್ಸುಗಳನ್ನು ಈ ಧನುಸ್ಸಿನಿಂದ ಛೇದಿಸುತ್ತೇನೆ' ಎಂದು ನುಡಿದನು. ಆ ದೇವತೆಗಳು ಕಂಗೆಟ್ಟು ತ್ರಾಹಿ ತ್ರಾಹಿ ಎಂದು ಆತನನ್ನು ಮರೆಹೋಗಲು ಪರಮೇಶ್ವರನು ಪ್ರಸನ್ನನಾಗಿ ದೇವತೆ ಗಳಿಗೆ ಆ ಧನುಸ್ಸನ್ನು ಕೊಟ್ಟನು. ಆ ಧನುಸ್ಸನ್ನು ದೇವತೆಗಳು ನಮ್ಮ ಆರನೆಯ ತಲೆಯ ದೇವರಾತನೆಂಬ ರಾಜನಿಗೆ ನ್ಯಾಸಪೂರ್ವಕವಾಗಿ ಕೊಟ್ಟರು. ಅದುಮೊದಲು ಆ ಬಿಲ್ಲು ನಮ್ಮ ಮನೆಯಲ್ಲಿಯೇ ಇದೆ. ಇನ್ನು ನನ್ನ ಕುಮಾರಿಯಾದ ಸೀತಾದೇವಿಯ ವೃತ್ತಾಂತವನ್ನು ಹೇಳುವೆನು, ಕೇಳಿ, ನಾನು ಯಾಗಮಂಟಪವನ್ನು ಕಟ್ಟುವುದಕ್ಕೋಸ್ಕರ ಭೂಮಿಯನ್ನು ಶೋಧಿಸಿ ಉಳಿಸು ತ್ತಿರಲು ಉಳುಮೆಯ ಸಾಲಿನಲ್ಲಿ ಕಾಣಿಸಿಕೊಂಡು ಆಕೆಯು ಅವತರಿಸಿದಳು. ನೇಗಿಲಿನಿಂದ ಉತ್ತ

ಸಾಲಿನಲ್ಲಿ ಹುಟ್ಟಿದ ಆ ಕುಮಾರಿಯು ಸೀತೆಯೆಂಬ ಹೆಸರಿನಿಂದ ಪ್ರಸಿದ್ಧಳಾಗಿ ನನ್ನ ಕುಮಾರಿಯಾಗಿ ದಿನದಿನಕ್ಕೆ ಅಭಿವೃದ್ಧಿಯಾದಳು. ಆ ಕನ್ಯಕೆಯನ್ನು ಈ ಧನುಸ್ಸಿನ ಹೆದೆಯನ್ನೇರಿಸಿದವನಿಗೆ ಕೊಡುವುದಾಗಿಯೂ ಈ ಧನುಸ್ಸಿನ ಹೆದೆಯನ್ನೇರಿಸುವ ಪರಾಕ್ರಮವೇ ಆ ಕನ್ಯಕೆಗೆ ತೆರದ ಹಣವೆಂದೂ ನೇಮಿಸಿದೆನು ನಾನು ಭೂಮಿಯಲ್ಲಿ ಹುಟ್ಟಿದ ಆ ಕುಮಾರಿಯನ್ನು ಈ ಧನುಸ್ಸಿನ ಹೆದೆಯನ್ನೇರಿಸಿದವನಿಗಲ್ಲದೆ ಮತ್ತೊಬ್ಬನಿಗೆ ಕೊಡುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಲು ನಾನಾ ದಿಕ್ಕಿನಲ್ಲಿರುವ ರಾಜರು ನನ್ನ ಪಟ್ಟಣಕ್ಕೆ ಬಂದು ಈ ಧನುಸ್ಸಿನ ಸಾಮರ್ಥ್ಯವನ್ನು ನೋಡಬೇಕೆಂದು ತರಿಸಿ ಎತ್ತಿ ನೋಡಿ ಕದಲಿಸುವುದಕ್ಕೂ ಸಮರ್ಥರಲ್ಲದೆ ಹೋದರು. ನಾನು ಅವರ ಭುಜಬಲಗಳನ್ನು ಕಂಡು ಕನ್ಯಕೆಯನ್ನು ಕೊಡುವುದಿಲ್ಲವೆಂದು ತಿರುಗಿ ಕಳುಹಿಸಲು ಅವರೆಲ್ಲರೂ ಕೋಪದಿಂದ ನನ್ನ ಮಿಥಿಲಾ ಪಟ್ಟಣಕ್ಕೆ ಮುತ್ತಿಗೆ ಹಾಕಿದರು ಅವರ ಉಪದ್ರವದಿಂದ ಒಂದು ವರುಷದಲ್ಲಿ ನನ್ನ ಪಟ್ಟಣದಲ್ಲಿದ್ದ ಸಂವರಣೆಗಳೆಲ್ಲಾ ತೀರಿದವು. ಆಮೇಲೆ ನಾನು ಬಹುಚಿಂತೆಯಿಂದ ದುಃಖಿಸಿ ದೇವತೆಗಳನ್ನು ಪ್ರಾರ್ಥಿಸಲು, ದೇವತೆಗಳು ಪ್ರಸನ್ನರಾಗಿ ನನಗೆ ಗಜತುರಗಾದಿ ಚತುರಂಗಬಲವನ್ನು ಕೊಟ್ಟರು. ನಾನು ಆ ಬಲಗಳಿಂದ ಮುತ್ತಿಗೆ ಹಾಕಿದ ಸಮಸ್ತರಾಜರನ್ನೂ ನೋಯಿಸಲು ಪಾಪಾತ್ಮರಾದ ಆ ಅರಸರು ತಮ್ಮ ಪ್ರಧಾನಿಗಳನ್ನು ಕೂಡಿಕೊಂಡು ಇನ್ನಿಲ್ಲಿದ್ದರೆ ವಿಪತ್ತು ಬರುವುದೆಂದು ನಾನಾ ದಿಕ್ಕಿಗೂ ಓಡಿದರು! ವಿಶ್ವಾಮಿತ್ರರೆ, ಇದೀಗ ನನ್ನ ಬಿಲ್ಲಿನ ಸಾಮರ್ಥ್ಯ. ಈ ಬಿಲ್ಲನ್ನು ರಾಮಲಕ್ಷ್ಮಣರಿಗೆ ತೋರಿಸುವೆನು. ಶ್ರೀರಾಮನು ಈ ಬಿಲ್ಲನ್ನು ಹೆದೆಯೇರಿಸಿದರೆ ನನ್ನ ಮಗಳಾದ ಸೀತಾದೇವಿಯನ್ನು ಕೊಡುವೆನು" ಎಂದು ನುಡಿದನು

---

## ೬೭ ನೆಯ ಅಧ್ಯಾಯ

## ಶ್ರೀರಾಮನು ಜನಕರಾಜನ ಬಿಲ್ಲನ್ನು ಮುರಿದದ್ದು

ಆಮೇಲೆ ವಿಶ್ವಾಮಿತ್ರನು ಜನಕರಾಜನನ್ನು ಕುರಿತು "ಎಲೈ ರಾಜನೆ, ನಿನ್ನ ಮನೆಯಲ್ಲಿರುವ ಬಿಲ್ಲನ್ನು ಶ್ರೀರಾಮನಿಗೆ ತೋರಿಸು" ಎಂದನು. ಆ ರಾಜನು ಆಗ ತನ್ನ ಮಂತ್ರಿಗಳನ್ನು ಕರೆದು "ನನ್ನ ಮನೆಯಲ್ಲಿರುವ ದಿವ್ಯವಾದ ಬಿಲ್ಲನ್ನು ಗಂಧಪುಷ್ಪಾಕ್ಷತೆಗಳಿಂದ ಪೂಜಿಸಿ ಅಲಂಕಾರವನ್ನು ಮಾಡಿ ತೆಗೆದುಕೊಂಡು ಬನ್ನಿ" ಎಂದು ಹೇಳಿದನು. ಆ ಪ್ರಧಾನಿಗಳು ಶೀಘ್ರದಲ್ಲಿ ಪಟ್ಟಣಕ್ಕೆ ಹೋಗಿ ಆ ಧನುಸ್ಸನ್ನು ಗಂಧಪುಷ್ಪಾಕ್ಷತೆಗಳಿಂದ ಅಲಂಕರಿಸಿ ಐದುನೂರು ಆಳುಗಳಿಂದ ಎಂಟು ಗಾಲಿಗಳಿರುವ ಕಬ್ಬಿಣದ ಪೆಟ್ಟಿಗೆಯಲ್ಲಿ ಹೂಡಿಸಿಕೊಂಡು ಬಂದು ಜನಕರಾಜನನ್ನು ಕುರಿತು "ಬಿಲ್ಲು ಇರುವ ಪೆಟ್ಟಿಗೆಯು ಬಂದಿತು. ಸಮಸ್ತ ಅರಸರಿಂದಲೂ ಪೂಜಿಸಲ್ಪಟ್ಟ ಈ ಧನುಸ್ಸನ್ನು ನಿನ್ನ ಚಿತ್ತಕ್ಕೆ ಸರಿಬಂದಂತೆ ತೋರಿಸು" ಎಂದು ನುಡಿದರು. ಜನಕರಾಜನು ರಾಮಲಕ್ಷ್ಮಣರು ಕೇಳುತ್ತಿರಲು ಮಹಾತ್ಮನಾದ ವಿಶ್ವಾಮಿತ್ರಮುನಿಗೆ ಕೈಮುಗಿದುಕೊಂಡು "ಮುನೀಶ್ವರರೆ, ಮಹಾ ವಿಕ್ರಮವುಳ್ಳದ್ದೂ ಹೆದೆಯನ್ನೇರಿಸುವದಕ್ಕೆ ಅಶಕ್ಯವಾದದ್ದೂ ನಮ್ಮ ಪೂರ್ವದ ಅರಸರಿಂದ ಪೂಜಿಸಲ್ಪಟ್ಟದ್ದೂ ಆದ ಧನುಸ್ಸು ಇದು. ಈ ಧನುಸ್ಸಿನ ಹೆದೆಯನ್ನೇರಿಸುವುದಕ್ಕೆ ದೇವತೆಗಳು ಗಂಧರ್ವರು ಯಕ್ಷರಾಕ್ಷಸರು ಕಿನ್ನರಕಿಂಪುರುಷರು ನಾಗರು ಮೊದಲಾದವರೂ ಸಮರ್ಥರಲ್ಲದೆ ಹೋದರು. ಹಾಗಿರುವಲ್ಲಿ ಈ ಬಿಲ್ಲನ್ನು ಎತ್ತುವುದಕ್ಕಾಗಲಿ ಹೆದೆಯನ್ನೇರಿಸುವುದಕ್ಕಾಗಲಿ ಝುಂಕಾರಮಾಡುವುದಕ್ಕಾಗಲಿ ಅಂಬನ್ನು ಹೂಡುವುದಕ್ಕಾಗಲಿ ಮನುಷ್ಯರಿಗೆ ಅಸಾಧ್ಯವೆಂದು

ಹೇಳುವುದೇನು! ಈ ಬಿಲ್ಲನ್ನು ರಾಮಲಕ್ಷ್ಮಣರು ನೋಡಲಿ" ಎಂದು ಹೇಳಿದನು. ಆ ಮಾತನ್ನು ಕೇಳಿ ಧರ್ಮಾತ್ಮನಾದ ವಿಶ್ವಾಮಿತ್ರಮುನೀಶ್ವರನು ಶ್ರೀರಾಮನನ್ನು ಕುರಿತು 'ಧನುಸ್ಸನ್ನು ನೋಡು" ಎಂದು ನುಡಿದನು. ಶ್ರೀರಾಮನು ಬಿಲ್ಲಿದ್ದ ಪೆಟ್ಟಿಗೆಯ ಸಮೀಪಕ್ಕೆ ಬಂದು ಮುಚ್ಚಳವನ್ನು ತೆಗೆದು ವಿಶ್ವಾಮಿತ್ರಮುನಿಯನ್ನು ಕುರಿತು "ಮುನೀಂದ್ರರೆ, ಈ ಬಿಲ್ಲನ್ನು ಕೈಯಿಂದೆತ್ತಿ ನೋಡುತ್ತೇನೆ" ಎಂದು ನುಡಿದನು. ವಿಶ್ವಾಮಿತ್ರಮುನೀಂದ್ರನು "ಹಾಗೆಯೇ ಮಾಡು" ಎಂದು ಅಪ್ಪಣೆ ಕೊಟ್ಟನು.

ಆ ಬಳಿಕ ಶ್ರೀರಾಮನು ಆ ಬಿಲ್ಲನ್ನು ಮಧ್ಯದಲ್ಲಿ ಹಿಡಿದು ಲೀಲಾಮಾತ್ರದಿಂದ ಮೇಲಕ್ಕೆ ಎತ್ತಿ ಎಲ್ಲರೂ ನೋಡುತ್ತಿರಲು ಹೆದೆಯನ್ನೇರಿಸಿ ಕಿವಿಯ ಪರ್ಯಂತ ನಾರಿಯನ್ನೆಳೆಯಲು ಹಾಗೆ ಎಳೆದ ರಭಸಕ್ಕೆ ಬಿಲ್ಲು ನರಿಗುಟ್ಟಿಕೊಂಡು ಮುರಿಯಿತು! ಆ ಧನುಸ್ಸು ಮುರಿದ ಧ್ವನಿಯು ಬರಸಿಡಿಲಿನ ಹಾಗೆ ಅತಿಭಯಂಕರವಾಗಲು ಭೂಮಿಯು ನಡುಗಿತು! ಆ ಧ್ವನಿಯು ಒಡೆದುಬೀಳುವ ಪರ್ವತ ಧ್ವನಿಯ ಮರ್ಯಾದೆಯಲ್ಲಿ ಮಹಾಭಯಂಕರವಾಗಿ ಕೇಳಿಸಲು ಜನಕರಾಜ, ವಿಶ್ವಾಮಿತ್ರಮುನೀಶ್ವರ, ರಾಮಲಕ್ಷ್ಮಣರು—ಈ ನಾಲ್ವರು ಹೊರತಾಗಿ ಮಿಕ್ಕಾದವರೆಲ್ಲರೂ ಸಿಡಿಲಿನಿಂದ ಹೊಡೆಯಲ್ಪಟ್ಟ ಹಾಗೆ ಮೂರ್ಛಿತರಾಗಿ ಬಿದ್ದರು!

ಅನಂತರ ಬಿದ್ದವರೆಲ್ಲರೂ ಎಚ್ಚತ್ತು ಚೇತರಿಸಿಕೊಂಡಮೇಲೆ ಜನಕರಾಯನು ತನ್ನ ಮನಸ್ಸಿನಲ್ಲಿದ್ದ ಚಿಂತೆಯನ್ನು ಬಿಟ್ಟು ಕೈಮುಗಿದುಕೊಂಡು ವಿಶ್ವಾಮಿತ್ರಮುನಿಯನ್ನು ಕುರಿತು "ಮುನೀಶ್ವರ, ಶ್ರೀರಾಮನ ವಿಕ್ರಮವನ್ನು ಕಂಡೆನು. ಈತನ ಪರಾಕ್ರಮವು ಇಷ್ಟುಅಷ್ಟೆಂದು ಹೇಳುವುದಕ್ಕೆ ಶಕ್ಯವಲ್ಲ. ನನ್ನ ಮಗಳಾದ ಸೀತಾದೇವಿಯು ದಶರಥರಾಜನ ಕುಮಾರನಾದ ಶ್ರೀರಾಮನನ್ನು ಪತಿಯಾಗಿ ಪಡೆದು ನನ್ನ ವಂಶಕ್ಕೆ ಬಹುಕೀರ್ತಿಯನ್ನುಂಟುಮಾಡುವಳು. ನನ್ನ ಮಗಳಾದ ಸೀತಾದೇವಿಯನ್ನು ಈ ಬಿಲ್ಲನ್ನು ಜಯಿಸಿದ ಪರಾಕ್ರಮಿಗಲ್ಲದೆ ಮತ್ತೊಬ್ಬನಿಗೆ ಕೊಡುವುದಿಲ್ಲವೆಂಬ ನನ್ನ ಪ್ರತಿಜ್ಞೆಯು ಸಂದಿತು! ಮುನೀಶ್ವರರೆ, ನಿಮ್ಮ ಅನುಮತಿಯಿಂದ ನಾನು ತ್ರಿಕರಣ ಶುದ್ಧನಾಗಿ ರಘುನಾಥನಿಗೆ ನನ್ನ ಮಗಳನ್ನು ಕೊಟ್ಟೆನು! ನನ್ನ ಮಂತ್ರಿಗಳು ಅಯೋಧ್ಯಾಪಟ್ಟಣಕ್ಕೆ ರಥಾರೂಢರಾಗಿ ಹೋಗಿ ದಶರಥರಾಜನಿಗೆ ವಿನಯೋಕ್ತಿಗಳಿಂದ ಈ ವಿಷಯವನ್ನು ತಿಳಿಸಲಿ. ಸೀತಾದೇವಿಯನ್ನು ಶ್ರೀರಾಮನಿಗೆ ಕೊಡಬೇಕೆಂಬ ನನ್ನ ಅಭಿಪ್ರಾಯವನ್ನೂ ರಘುನಾಥನು ನಿಮ್ಮ ಕೃಪೆಯಿಂದ ಲಕ್ಷ್ಮಣಸಹಿತನಾಗಿ ಕುಶಲಿಯಾಗಿದ್ದಾನೆ ಎಂಬ ಶುಭವಾರ್ತೆಯನ್ನೂ ಈತನು ನನ್ನ ಮನೆಯಲ್ಲಿದ್ದ ಧನುಸ್ಸಿನ ಹೆದೆಯನ್ನೇರಿಸಿದನೆಂಬ ವೃತ್ತಾಂತವನ್ನೂ ಹೇಳಿ ಆ ರಾಜನನ್ನು ಶೀಘ್ರದಲ್ಲಿ ಕರೆತರಲಿ!" ಎಂದು ಹೇಳಿದನು. ವಿಶ್ವಾಮಿತ್ರಮುನೀಶ್ವರನು ಹಾಗೆಯೇ ಆಗಲಿ ಎಂದು ನುಡಿದನು. ಜನಕರಾಜನು ಮಂತ್ರಿಗಳನ್ನು ಕರೆದು "ಶ್ರೀರಾಮನು ಶಿವಧನುಸ್ಸನ್ನು ಮುರಿದ ವೃತ್ತಾಂತವನ್ನು ದಶರಥಮಹಾರಾಜನಿಗೆ ತಿಳಿಸಿ ಆತನನ್ನು ಆದರದಿಂದ ಕರೆದುಕೊಂಡು ಬನ್ನಿರಿ" ಎಂದು ನುಡಿದು ಆ ಮಂತ್ರಿಗಳನ್ನು ಅಯೋಧ್ಯಾಪಟ್ಟಣಕ್ಕೆ ಕಳುಹಿಸಿದನು. ಜನಕರಾಜನು ಮನಸ್ಸಿನಲ್ಲಿದ್ದ ಚಿಂತೆಯನ್ನು ಬಿಟ್ಟು ಸಂತೋಷಯುಕ್ತನಾಗಿ ತನ್ನ ದೂತರನ್ನು ಅಯೋಧ್ಯಾ ಪಟ್ಟಣಕ್ಕೆ ಕಳುಹಿಸಲು, ಅವರು ಅಯೋಧ್ಯೆಗೆ ಪ್ರಯಾಣಮಾಡಿದರು.



## ೩೮ ನೆಯ ಅಧ್ಯಾಯ

## ಜನಕರಾಜನು ದಶರಥರಾಯನನ್ನು ಕರೆಕಳುಹಿಸಿದ್ದು

ಅನಂತರ ಜನಕಚಕ್ರೇಶ್ವರನ ಮಂತ್ರಿಗಳು ವಾಹನಗಳನ್ನು ಹತ್ತಿಕೊಂಡು ಮಧ್ಯಮಾರ್ಗದಲ್ಲಿ ಮೂರು ರಾತ್ರಿಗಳು ನಿಂತು ಅಯೋಧ್ಯಾಪಟ್ಟಣವನ್ನು ಪ್ರವೇಶಿಸಿ ದಶರಥರಾಜನ ಅರಮನೆಗೆ ಹೋಗಿ ದ್ವಾರಪಾಲಕರನ್ನು ಕಂಡು "ಎಲೈ ದ್ವಾರಪಾಲಕರುಗಳಿರಾ, ನಾವು ಜನಕರಾಜನ ದೂತರು, ಜನಕರಾಜನು ನಿಮ್ಮ ರಾಜನ ಬಳಿಗೆ ಕಳುಹಿಸಿದ್ದಾನೆ. ನಾವು ಬಂದ ವೃತ್ತಾಂತವನ್ನು ನಿಮ್ಮ ರಾಜನಿಗೆ ಬಿನ್ನಹಮಾಡಿರಿ" ಎಂದು ಹೇಳಿದರು. ಆ ದ್ವಾರಪಾಲಕರು ಶೀಘ್ರದಲ್ಲಿ ಅರಮನೆಯ ಒಳಗೆ ಹೋಗಿ ಆಸ್ಥಾನಮಂಟಪದಲ್ಲಿದ್ದ ದಶರಥರಾಜನಿಗೆ ಇವರು ಬಂದುದನ್ನು ಬಿನ್ನಹಮಾಡಿದರು.

ದಶರಥಮಹಾರಾಜನು ಶೀಘ್ರದಲ್ಲಿ ಕರೆದುಕೊಂಡು ಬರಹೇಳಲು ಆ ದ್ವಾರಪಾಲಕರು ಬಾಗಿಲಿಗೆ ಬಂದು ಜನಕರಾಜನ ದೂತರನ್ನು ಒಳಗೆ ಕರೆದುಕೊಂಡುಹೋದರು. ಆ ದೂತರು ಒಡ್ಡೋಲಗದಲ್ಲಿದ್ದ ದಶರಥರಾಜನನ್ನು ಕಂಡು ವಿನಯದಿಂದ ಆತನನ್ನು ಕುರಿತು "ಮಹಾರಾಜ, ನಮ್ಮ ಒಡೆಯನಾದ ಜನಕರಾಜನು ನಿನ್ನ ಮತ್ತು ನಿನ್ನ ಪುರೋಹಿತ ಪುರಜನರ ಕ್ಷೇಮವನ್ನೂ ವಿಚಾರಿಸಿ ವಿಶ್ವಾಮಿತ್ರಮುನೀಶ್ವರನ ಅಪ್ಪಣೆಯಿಂದ ನಿಮ್ಮನ್ನು ಕರೆದುಕೊಂಡು ಬರಹೇಳಿ ನಿನ್ನ ಸಮೀಪಕ್ಕೆ ನಮ್ಮನ್ನು ಕಳುಹಿಸಿದ್ದಾನೆ. ನಮ್ಮ ಜನಕಮಹಾರಾಜನ ಬಳಿಯಲ್ಲಿ ಒಂದು ಮಹಾಧನುಸ್ಸು ಇದ್ದುದು ನಿನಗೆ ಗೊತ್ತಷ್ಟೆ. ಯಾವ ವೀರನು ಆ ಧನುಸ್ಸಿಗೆ ಹೆದೆಯನ್ನು ಏರಿಸುವನೋ ಆತನಿಗೆ ತನ್ನ ಮಗಳಾದ ಸೀತಾದೇವಿಯನ್ನು ವಿವಾಹ ಮಾಡಿಕೊಡುವುದಾಗಿ ನಮ್ಮ ರಾಜನು ಪ್ರತಿಜ್ಞೆಮಾಡಿದ್ದನು ಆ ಸೀತಾದೇವಿಯನ್ನು ವಿವಾಹವಾಗಬೇಕೆಂದು ಅನೇಕ ದೇಶಗಳ ರಾಜರು ಬಂದು ಆ ಬಿಲ್ಲನ್ನು ಎತ್ತಲೂ ಆಗದೆ ಅವಮಾನದಿಂದ ತಲೆಬಾಗಿ ಹೋದರು. ಈಗ ಅದೃಷ್ಟವಶದಿಂದ ವಿಶ್ವಾಮಿತ್ರಮುನೀಶ್ವರನು ನಿನ್ನ ಕುಮಾರರಾದ ರಾಮಲಕ್ಷ್ಮಣರನ್ನು ಕರೆದುಕೊಂಡು ಬರಲು, ಜನಕರಾಜನು ತನ್ನ ಮನೆಯಲ್ಲಿದ್ದ ಧನುಸ್ಸನ್ನು ಸಭೆಯಲ್ಲಿರಿಸಿ ರಾಮಲಕ್ಷ್ಮಣರಿಗೆ ತೋರಿಸಿದನು. ಶ್ರೀರಾಮನು ಆ ಬಿಲ್ಲನ್ನು ನೋಡಿ ಕೈಯಲ್ಲಿ ತೆಗೆದುಕೊಂಡು ಸಭಾಮಧ್ಯದಲ್ಲಿ ಸಮಸ್ತ ಜನರೂ ನೋಡುತ್ತಿರಲು ಅದಕ್ಕೆ ಹೆದೆಯನ್ನೇರಿಸಿ ತನ್ನ ಕರ್ಣಪರ್ಯಂತ ಸೆಳೆಯಲು ಆ ಬಿಲ್ಲು ಭಗ್ನವಾಯಿತು ಪೂರ್ವದಲ್ಲಿ ದೇವದಾನವರೂ ಕದಲಿಸಲಾರದೇ ಇದ್ದ ಆ ಬಿಲ್ಲನ್ನು ಶ್ರೀರಾಮನು ಹೆದೆಯನ್ನೇರಿಸಿ ಟಂಕಾರಧ್ವನಿಮಾಡಿ ಮುರಿದದ್ದನ್ನು ನೋಡಿ ನಮ್ಮ ರಾಜನು ಅಂಥ ಪರಾಕ್ರಮವು ಜಗತ್ತಿನಲ್ಲೆಲ್ಲೂ ಕಂಡದ್ದಿಲ್ಲವೆಂದು ಶ್ರೀರಾಮನಿಗೆ ತನ್ನ ಮಗಳಾದ ಸೀತಾದೇವಿಯನ್ನು ಕೊಡಲು ನಿಶ್ಚಯಿಸಿ ನಿನ್ನನ್ನು ಕರೆತರಲು ನಮ್ಮನ್ನು ಕಳುಹಿಸಿದನು. ನೀನು ನಿನ್ನ ಪುರೋಹಿತ ಪುರಜನ ಪರಿವಾರಸಹಿತನಾಗಿ ಬಂದು ಶ್ರೀರಾಮನಿಗೆ ವಿವಾಹವನ್ನು ಮಾಡಿಸು" ಎಂದು ಹೇಳಿದರು.

ಆ ಮಾತನ್ನು ಕೇಳಿ ದಶರಥರಾಜನು ಆನಂದದಲ್ಲಿ ಮುಳುಗಿದನು. ಅವನು ತನ್ನ ಮಂತ್ರಿಗಳನ್ನೂ ಪುರೋಹಿತರನ್ನೂ ಕೂಡಿಕೊಂಡು ಆಲೋಚನೆಮಾಡುತ್ತ ಅವರನ್ನು ಕುರಿತು "ಮಂತ್ರಿಗಳಿರಾ, ವಿಶ್ವಾಮಿತ್ರಮುನೀಶ್ವರನು ತನ್ನ ಯಜ್ಞಾರ್ಥವಾಗಿ ಕರೆದುಕೊಂಡು ಹೋಗಲು, ಆ ಯಾಗಸಂರಕ್ಷಣೆಯನ್ನು ಮಾಡಿ ಈಗ ಶ್ರೀರಾಮನು ಮಿಥಿಲಾಪಟ್ಟಣದಲ್ಲಿದ್ದಾನೆ. ಮಿಥಿಲಾಪಟ್ಟಣದ ದೊರೆಯಾದ ಜನಕರಾಜನು ಶ್ರೀರಾಮನ ಪರಾಕ್ರಮವನ್ನು ಕಂಡು ಕುಲಶೀಲವನ್ನು

ವಿಚಾರಿಸಿ ತನ್ನ ಮಗಳಾದ ಸೀತಾದೇವಿಯನ್ನು ಶ್ರೀರಾಮನಿಗೆ ವಿವಾಹಮಾಡಿಕೊಡಲು ನಿಶ್ಚಯಿಸಿ ನಮ್ಮನ್ನು ವಿವಾಹಕ್ಕೆ ಕರೆಕಳುಹಿಸಿದ್ದಾನೆ ನಿಮ್ಮ ಮನಸ್ಸಿಗೆ ಸಮ್ಮತವಾದರೆ ಕಾಲವಿಳಂಬಮಾಡದೆ ಶೀಘ್ರದಲ್ಲಿ ಮಿಥಿಲಾಪಟ್ಟಣಕ್ಕೆ ಹೋಗೋಣ " ಎಂದು ಹೇಳಿದನು

ಆ ಮಂತ್ರಿಗಳು ಹರ್ಷದಿಂದ ಅದಕ್ಕೆ ಸಮ್ಮತಿಸಿದರು. ದಶರಥರಾಜನು ಮಾರನೆಯ ದಿವಸ ಪಯಣವೆಂದು ಸಾರಿಸಲು ಕಟ್ಟುಮಾಡಿದನು ಮಂತ್ರಿಗಳು ಆ ರಾತ್ರಿಯೇ ಪಯಣಕ್ಕೆ ಸನ್ನಾಹ ವನ್ನು ಮಾಡಿ ದಶರಥರಾಜನಿಗೆ ಬಿನ್ನಹಮಾಡಿದರು.



೬೯ ನೆಯ ಅಧ್ಯಾಯ

## ದಶರಥರಾಜನು ಮಿಥಿಲಾಪುರಿಗೆ ಬಂದದ್ದು

ಆ ಬಳಿಕ ರಾತ್ರಿಯು ಕಳೆದು ಪ್ರಾತಃಕಾಲವಾಗಲು ದಶರಥರಾಜನು ತನ್ನ ಮಂತ್ರಿ ಪುರೋಹಿತ ಬಂಧುಗಳನ್ನು ಕೂಡಿಕೊಂಡು ಅತ್ಯಂತ ಸಂತೋಷದಿಂದ ಸುಮಂತ್ರನೆಂಬ ಪ್ರಧಾನಿ ಯನ್ನು ಕರೆದು "ಸುಮಂತ್ರ, ಎಲ್ಲ ಕೋಶಾಧಿಕಾರಿಗಳೂ ಪುಷ್ಕಳವಾದ ಧನರಾಶಿಯನ್ನೂ, ನಾನಾ ರತ್ನಗಳನ್ನೂತೆಗೆದುಕೊಂಡು ಪ್ರಯಾಣಮಾಡತಕ್ಕದ್ದು ಚತುರಂಗಬಲಗಳು ಅವರ ಹಿಂದೆ ಹೊರಡಲಿ. ವಸಿಷ್ಠ, ವಾಮದೇವ, ಜಾಬಾಲಿ, ಕಾಶ್ಯಪ, ಮಾರ್ಕಂಡೇಯ, ಕಾತ್ಯಾಯನರೇ ಮೊದಲಾದವರು ಅವರ ಹಿಂದೆ ತೆರಳಲಿ. ನನ್ನ ರಥವನ್ನು ಸಜ್ಜುಗೊಳಿಸು. ಕಾಲವಿಳಂಬವಿಲ್ಲದೆ ಶೀಘ್ರದಲ್ಲಿ ಎಲ್ಲರನ್ನೂ ಕಳುಹಿಸು " ಎಂದು ಹೇಳಿದನು

ಈ ಪ್ರಕಾರದಲ್ಲಿ ದಶರಥಮಹಾರಾಜನು ರಥಾರೂಢನಾಗಿ ಪ್ರಯಾಣಮಾಡಿ ಮಾರ್ಗದಲ್ಲಿ ಮೂರು ರಾತ್ರಿಗಳು ನಿಂತು ನಾಲ್ಕನೆಯ ದಿವಸ ಮಿಥಿಲಾಪಟ್ಟಣವನ್ನು ಪ್ರವೇಶಿಸಿದನು ದಶರಥ ರಾಜನು ಬಂದ ವೃತ್ತಾಂತವನ್ನು ಕೇಳಿ ಜನಕರಾಜನು ಆತನನ್ನು ಇದಿರುಗೊಂಡು ಅತಿಹರ್ಷದಿಂದ "ಮಹಾರಾಜ, ನಿನಗೆ ಸ್ವಾಗತ, ನಿನ್ನ ಆಗಮನದಿಂದ ನನಗೆ ಆನಂದವಾಯಿತು. ನಿನ್ನ ಮಕ್ಕಳ ಪರಾಕ್ರಮವನ್ನು ನೋಡಿ ಮಹಾಸಂತೋಷವಾಯಿತು ದೇವೇಂದ್ರನು ಸಮಸ್ತದೇವತೆಗಳನ್ನೂ ಕೂಡಿಕೊಂಡು ಬರುವ ಹಾಗೆ ವಿಶ್ವಾಮಿತ್ರಮುನೀಶ್ವರನು ಸಮಸ್ತ ಋಷಿಗಳನ್ನು ಕೂಡಿಕೊಂಡು ಅದೃಷ್ಟವಶದಿಂದ ಇಲ್ಲಿಗೆ ಬಂದನು. ನನಗೆ ಬಂದ ವಿಘ್ನಗಳು ದೇವರ ಕೃಪೆಯಿಂದ ಪರಿಹಾರ ವಾದವು. ನನಗೆ ಮಹಾಪರಾಕ್ರಮಿಗಳೂ ಮಹಾತ್ಮರೂ ಆದ ರಘುವಂಶದ ರಾಜರ ಸಂಬಂಧವು ದೊರಕಿತು ! ನನ್ನ ಯಜ್ಞವು ಸಮಾಪ್ತಿಯಾದಮೇಲೆ ಸಮಸ್ತ ಋಷಿಗಳಿಗೂ ಸಮ್ಮತವಾಗುವ ಪ್ರಕಾರದಲ್ಲಿ ವಿವಾಹವನ್ನು ಮಾಡಿಸು " ಎಂದು ಹೇಳಿದನು.

ಆಗ ದಶರಥರಾಜನು ಜನಕರಾಜನನ್ನು ಕುರಿತು "ಮಹಾರಾಜ, ಲೋಕದಲ್ಲಿ ದಾನವೂ ಪ್ರತಿಗ್ರಹವೂ ಕೊಡುವವರ ಅಧೀನವಲ್ಲದೆ ಮತ್ತೊಂದಲ್ಲ. ಧರ್ಮಿಷ್ಠನಾದ ನೀನು ಹೇಗೆ ಹೇಳುವೆಯೋ ಹಾಗೆ ನಾನು ಕೇಳುತ್ತೇನೆ " ಎಂದು ಹೇಳಿದನು.

ಸತ್ಯಸಂಧನಾದ ದಶರಥರಾಜನ ಮಾತನ್ನು ಕೇಳಿ ಜನಕಮಹಾರಾಜನು ಸಂತೋಷಿಸಿದನು ಆಗ ಅಲ್ಲಿದ್ದ ಋಷಿಗಳು ಜನಕರಾಜನಿಗೂ ದಶರಥರಾಜನಿಗೂ ಅನ್ಯೋನ್ಯ ಬಂಧುತ್ವವಾದದ್ದಕ್ಕೆ ಅತ್ಯಂತ ಹರ್ಷಪಟ್ಟರು ದಶರಥರಾಜನು ತನ್ನ ಕುಮಾರರಾದ ರಾಮಲಕ್ಷ್ಮಣರ ಪರಾಕ್ರಮ

ಗಳನ್ನು ಕೇಳಿ ಅತಿಹರ್ಷಗೊಂಡು ಜನಕರಾಜನಿಂದ ಸತ್ಕಾರಗಳನ್ನು ಪಡೆದು ತನ್ನ ಬಿಡಾರಕ್ಕೆ ಬಿಜಯಂಗೈದನು

ಆಮೇಲೆ ಕ್ರಿಯಾಕಾಂಡವನ್ನೂ ಧರ್ಮರಹಸ್ಯಗಳನ್ನೂ ಬಲ್ಲವನಾದ ಜನಕರಾಜನು ಯಜ್ಞ ಸಮಾಪ್ತಿಮಾಡಿ ಸಮಸ್ತ ಅರಸರನ್ನೂ ಋಷಿಗಳನ್ನೂ ಸತ್ಕರಿಸಿ ಯಜ್ಞಶಾಲೆಯಿಂದ ತನ್ನ ಮನೆಗೆ ಬಂದು ಸುಖದಿಂದ ಆ ರಾತ್ರಿಯನ್ನು ಕಳೆದನು.



## ೭೦ನೆಯ ಅಧ್ಯಾಯ

## ದಶರಥರಾಯನ ವಂಶಾವಳಿ

ಮಾರನೆಯ ದಿವಸ ಪ್ರಾತಃಕಾಲದಲ್ಲಿ ಸಂಧ್ಯಾವಂದನಾದಿ ನಿಖಿಲ ಕರ್ಮಗಳನ್ನು ತೀರಿಸಿಕೊಂಡು ಋಷಿಗಳನ್ನು ಕೂಡಿಕೊಂಡು ಜನಕರಾಯನು ತನ್ನ ಪುರೋಹಿತನಾದ ಶತಾನಂದನನ್ನು ಕುರಿತು "ನನ್ನ ಒಡಹುಟ್ಟಿದ ತಮ್ಮನೂ ಅತ್ಯಂತ ಧಾರ್ಮಿಕನೂ ಆದ ಕುಶಧ್ವಜನು ಸಾಂಕಾಶ್ಯ ಎಂಬ ಪಟ್ಟಣದಲ್ಲಿ ರಾಜ್ಯವನ್ನಾಳಿಕೊಂಡಿದ್ದಾನೆ ಬೇಲದಮರ ನೇರಳೆಮರ ತೆಂಗಿನಮರ ಮೊದಲಾದ ಮರಗಳುಳ್ಳ ವನಗಳಿಂದ ಮನೋಹರವಾದ ಆ ಪಟ್ಟಣದ ಸಮೀಪದಲ್ಲಿ ಇಕ್ಷು ಎಂಬ ನದಿಯುಂಟು. ಆ ನದಿಯ ಉದಕವು ಕಬ್ಬಿನ ಹಾಲಿನ ಹಾಗಿದೆ. ಅಂಥ ನದಿಯಿಂದ ಪವಿತ್ರವಾದ ಆ ಪಟ್ಟಣದಲ್ಲಿರುವ ನನ್ನ ತಮ್ಮನಾದ ಕುಶಧ್ವಜನನ್ನು ನೋಡಬೇಕೆಂದು ಇಚ್ಛೆಯಾಗುತ್ತಿದೆ. ಆತನು ನನ್ನ ಯಜ್ಞಾದಿ ಸತ್ಕರ್ಮಗಳಿಗೆ ರಕ್ಷಕನು ಆತನಿಗೂ ನನ್ನನ್ನು ನೋಡಬೇಕೆಂಬ ಪ್ರೀತಿಯುಂಟು" ಎಂದು ನುಡಿದನು.

ಶತಾನಂದನು ಸಮೀಪದಲ್ಲಿದ್ದ ಸೇವಕರನ್ನು ಕರೆದು ಕುಶಧ್ವಜರಾಯನನ್ನು ಕರೆತರಲು ಆಜ್ಞಾಪಿಸಿದನು. ಆ ದೂತರು ಕುದುರೆಗಳನ್ನು ಹತ್ತಿಕೊಂಡು ದೇವೇಂದ್ರನ ಆಜ್ಞೆಯಿಂದ ನಾರಾಯಣನನ್ನು ಕರೆತರುವುದಕ್ಕೆ ಹೋಗುವ ದೇವದೂತರಂತೆ ಸಾಂಕಾಶ್ಯವೆಂಬ ಪಟ್ಟಣಕ್ಕೆ ಹೋಗಿ ಕುಶಧ್ವಜನಿಗೆ ಜನಕರಾಯನು ಹೇಳಿದ ವೃತ್ತಾಂತವನ್ನು ಹೇಳಿದರು. ಕುಶಧ್ವಜರಾಯನು ಆ ದೂತರನ್ನು ಕಳುಹಿಸಿ ತನ್ನ ಚತುರಂಗಬಲಸಮೇತನಾಗಿ ಅಂತಃಪುರದಲ್ಲಿದ್ದ ಪಟ್ಟದರಾಣಿಯನ್ನೂ ಮಕ್ಕಳನ್ನೂ ಕೂಡಿಕೊಂಡು ಮಿಥಿಲಾಪಟ್ಟಣಕ್ಕೆ ಬಂದು ಧರ್ಮರಹಸ್ಯವನ್ನು ಬಲ್ಲ ಜನಕ ರಾಯನನ್ನೂ ಶತಾನಂದಮುನೀಶ್ವರನನ್ನೂ ಕಂಡು ಯಥಾಕ್ರಮದಲ್ಲಿ ಅಭಿವಂದಿಸಿ ರಾಜಯೋಗ್ಯವಾದ ಸಿಂಹಾಸನದ ಮೇಲೆ ಕುಳಿತುಕೊಂಡು ಕುಶಲಪ್ರಶ್ನೆಗಳನ್ನು ಮಾಡಿದನು. ಆಗ ಜನಕರಾಯನು ತನ್ನ ಮಂತ್ರಿಶ್ರೇಷ್ಠನಾದ ಸುದಾಮನನ್ನು ಕರೆದು "ಎಲೈ ಸುದಾಮನೆ, ನೀನು ಮಹಾಪ್ರತಾಪಶಾಲಿ ಯಾದ ದಶರಥರಾಜನನ್ನೂ ಆತನ ಮಕ್ಕಳನ್ನೂ ವಸಿಷ್ಠಮುನೀಶ್ವರನನ್ನೂ ಶೀಘ್ರದಲ್ಲಿ ಕರೆದು ಕೊಂಡು ಬಾ" ಎಂದು ಹೇಳಿ ಕಳುಹಿಸಿದನು.

ಸುದಾಮನು ದಶರಥರಾಯನ ಬಿಡಾರಕ್ಕೆ ಬಂದು ಆತನನ್ನು ಕಂಡು ಅಭಿವಂದಿಸಿ "ದಶರಥರಾಯನೆ, ನಿನ್ನನ್ನು ಕರೆತರಹೇಳಿ ನಮ್ಮ ಅರಸನಾದ ಜನಕರಾಯನು ನನ್ನನ್ನು ಕಳುಹಿಸಿದ್ದಾನೆ. ನೀನು ನಿನ್ನ ಪುರೋಹಿತರೊಡನೆಯೂ ಕುಮಾರರೊಡನೆಯೂ ಬರಬೇಕು" ಎಂದು ಹೇಳಿದನು.

ದಶರಥರಾಯನು ತನ್ನ ಪುರೋಹಿತನಾದ ವಸಿಷ್ಠನನ್ನೂ ತನ್ನ ಸಂಗಡ ಬಂದ ಬಂಧುಗಳನ್ನೂ ತನ್ನ ಕುಮಾರರಾದ ರಾಮಲಕ್ಷ್ಮಣಭರತಶತ್ರುಘ್ನರನ್ನೂ ಕೂಡಿಕೊಂಡು ಜನಕರಾಯನ ಸಮೀಪಕ್ಕೆ ಹೋಗಿ ಆ ರಾಯನನ್ನು ಕಂಡು "ಎಲೈ ಜನಕರಾಯನೆ, ನೀನು ಸಮಸ್ತವನ್ನೂ ಬಲ್ಲವನು ನಮ್ಮ ಇಕ್ಷ್ವಾಕುವಂಶದ ರಾಯರಿಗೆ ವಸಿಷ್ಠಮುನೀಶ್ವರನು ಕುಲಸ್ವಾಮಿಯು. ಯಾವ ಕಾರ್ಯವನ್ನೂ ಆತನೇ ತಿಳಿಸಬೇಕು ವಸಿಷ್ಠಮುನೀಶ್ವರನು ವಿಶ್ವಾಮಿತ್ರಮುನೀಶ್ವರನ ಅಪ್ಪಣೆಯಿಂದ ನಮ್ಮ ವಂಶಾವಳಿಯನ್ನೂ ಕುಲಧರ್ಮಗಳನ್ನೂ ಹೇಳುವನು" ಎಂದು ರಾಜಸಭಾಮಧ್ಯದಲ್ಲಿ ನುಡಿದನು

ಆ ಮಾತನ್ನು ಕೇಳಿ ಷಡ್ಗುಣೈಶ್ವರ್ಯಸಂಪನ್ನನಾದ ವಸಿಷ್ಠಮಹರ್ಷಿಯು, ಕುಶಧ್ವಜನೇ ಮೊದಲಾದವರು ಕೇಳುತ್ತಿರಲು, ವಾಗ್ವಿಶಾರದನಾದ ಜನಕರಾಯನನ್ನು ಕುರಿತು "ಎಲೈ ಜನಕರಾಯನೆ, ದಶರಥರಾಯನ ವಂಶವನ್ನು ಆದಿಯಿಂದ ಹೇಳುತ್ತೇನೆ, ಕೇಳು ಮೊದಲು ಅಪರಿಮಿತವಾದ ಪ್ರಭಾವವುಳ್ಳವನಾಗಿ ನಿತ್ಯಸ್ವರೂಪನಾದ ಬ್ರಹ್ಮದೇವನಿಗೆ ಮರೀಚಿಬ್ರಹ್ಮನೆಂಬ ಕುಮಾರನು ಹುಟ್ಟಿದನು. ಮರೀಚಿಬ್ರಹ್ಮನಿಗೆ ಕಶ್ಯಪನು ಜನಿಸಿದನು. ಕಶ್ಯಪನಿಗೆ ವಿವಸ್ವಂತನೆಂಬವನುದಯಿಸಿದನು. ವಿವಸ್ವಂತನಿಗೆ ವೈವಸ್ವತನೆಂಬವನೂ ವೈವಸ್ವತಮನುವಿಗೆ ಇಕ್ಷ್ವಾಕು ಎಂಬ ರಾಯನೂ ಉದಯಿಸಿದರು. ಇಕ್ಷ್ವಾಕುರಾಯನು ಅಯೋಧ್ಯಾಪಟ್ಟಣದಲ್ಲಿ ರಾಜ್ಯವನ್ನಾಳುತ್ತಿದ್ದನು. ಇಕ್ಷ್ವಾಕುವಿನ ಮಗನು ಕುಕ್ಷಿಯೆಂಬವನು ಕುಕ್ಷಿಯ ಮಗನು ವಿಕುಕ್ಷಿ ವಿಕುಕ್ಷಿಯ ಮಗನು ಬಾಣನೆಂಬವನು. ಮಹಾಪ್ರತಾಪಶಾಲಿಯಾದ ಬಾಣನಿಗೆ ಅನರಣ್ಯನೆಂಬವನು ಜನಿಸಿದನು ಅನರಣ್ಯನ ಕುಮಾರನು ಪೃಥು. ಪೃಥುವಿನ ಮಗನು ತ್ರಿಶಂಕುಮಹಾರಾಯನು. ತ್ರಿಶಂಕುವಿನ ಮಗನು ಧುಂಧುಮಾರನು ಧುಂಧುಮಾರನ ಮಗನು ಯುವನಾಶ್ವನು. ಯುವನಾಶ್ವನ ಕುಮಾರನು ಮಾಂಧಾತಚಕ್ರವರ್ತಿಯು. ಮಾಂಧಾತನ ಕುಮಾರನು ಸುಸಂಧಿ ಸುಸಂಧಿಗೆ ಧ್ರುವಸಂಧಿ ಮತ್ತು ಪ್ರಸೇನಜಿತ್ತು ಎಂಬ ಇಬ್ಬರು ಕುಮಾರರಾದರು ಧ್ರುವಸಂಧಿ ಎಂಬ ಹಿರಿಯ ಕುಮಾರನಿಗೆ ಭರತನೆಂಬ ಕುಮಾರನು ಜನಿಸಿದನು ಭರತನಿಗೆ ಅಸಿತನೆಂಬ ಕುಮಾರನಾದನು ಆತನಿಗೆ ಸುತ್ತಲಿದ್ದ ರಾಯರೆಲ್ಲರೂ ಶತ್ರುಗಳಾಗಿ ಮಹಾಬಲವಂತರಾಗಿ ಆತನೊಡನೆ ಯುದ್ಧವನ್ನು ಮಾಡಿ ಅವನನ್ನು ಸ್ವಸ್ಥಾನದಿಂದ ಹೊರಡಿಸಿದರು. ಅಸಿತನು ತನ್ನ ಇಬ್ಬರು ಸ್ತ್ರೀಯರನ್ನೂ ತನ್ನ ಮಂತ್ರಿಗಳನ್ನೂ ಮಿಕ್ಕಿದ್ದ ಅಲ್ಪಬಲವನ್ನೂ ಕೂಡಿಕೊಂಡು ಹಿಮವತ್ಪರ್ವತಕ್ಕೆ ಹೋಗಿ ವಾಸಮಾಡುತ್ತಿದ್ದನು. ಅವನು ಅಲ್ಲಿ ಮೃತಿಹೊಂದಿದನು. ಆ ಸಮಯದಲ್ಲಿ ಅವನ ಇಬ್ಬರು ಹೆಂಡತಿಯರೂ ಗರ್ಭಿಣಿಯರಾಗಿದ್ದರು. ಅವರಲ್ಲೊಬ್ಬಳು ತನ್ನ ಸವತಿಯ ಗರ್ಭವು ನಾಶವಾಗಲೆಂದು ಅವಳಿಗೆ ವಿಷವನ್ನಿತ್ತಳು ಆ ಸಮಯದಲ್ಲಿ ಭೃಗುವಂಶೋತ್ಪನ್ನನಾದ ಚ್ಯವನನೆಂಬ ಮುನೀಶ್ವರನು ಸಮಸ್ತಪರ್ವತಗಳಿಗೂ ಉತ್ತಮವಾದ ಹಿಮವತ್ಪರ್ವತಕ್ಕೆ ಬರಲು, ಆ ಸ್ತ್ರೀಯರೊಳಗೆ ಕಾಳಿಂದಿ ಎಂಬವಳು ಅತಿತೇಜಸ್ವಿಯಾದ ಚ್ಯವನಮುನೀಶ್ವರನನ್ನು ಕಂಡು ಒಳ್ಳೆಯ ಸಂತಾನವಾಗಬೇಕೆಂದು ಪ್ರಾರ್ಥಿಸಿ ಆ ಮುನಿಯನ್ನು ಅಭಿವಂದಿಸಿದಳು ಚ್ಯವನಮುನೀಶ್ವರನು ಪುತ್ರಾಭಿಲಾಷೆಯಿಂದಿದ್ದ ಕಾಳಿಂದಿಯನ್ನು ಕುರಿತು ಮಾತನಾಡುತ್ತಾ 'ಎಲೈ ಸ್ತ್ರೀಯೆ, ನಿನ್ನ ಗರ್ಭದಲ್ಲಿ ಮಹಾಬಲಪರಾಕ್ರಮಿಯೂ ಅತಿತೇಜಸ್ವಿಯೂ ಬಹಳ ಐಶ್ವರ್ಯವಂತನೂ ಅತ್ಯಂತ ಶುಚಿಯೂ ಆದ ಕುಮಾರನು ವಿಷದೊಡನೆ ಕೂಡಿಕೊಂಡು ಜನಿಸುವನು' ಎಂದು ಹೇಳಿದನು. ಆಮೇಲೆ ಪತಿವ್ರತೆಯಾದ ಕಾಳಿಂದಿಯು ತನ್ನ ಪತಿಯನ್ನೇ ಧ್ಯಾನಮಾಡುತ್ತ ಮಿಂಚಿನಂತೆ ಮಹಾಕಾಂತಿಯುಳ್ಳ ಒಬ್ಬ ಮಗನನ್ನು ಪಡೆದಳು. ತನ್ನ ಸವತಿಯಾದವಳು

ಗರ್ಭವನ್ನು ಕರಗಿಸಬೇಕೆಂದು ವಿಷವನ್ನಿಕ್ಕಿದ್ದರಿಂದ ಆ ಮಗನು ವಿಷಸಹಿತವಾಗಿ ಹುಟ್ಟಿದನು. ಆದರಿಂದ ಆ ಕುಮಾರನು ಸಗರನೆಂಬ ಹೆಸರುಳ್ಳವನಾಗಿ ಮಹಾಪ್ರಸಿದ್ಧನಾದನು.

ಸಗರನಿಗೆ ಅಸಮಂಜನೆಂಬ ಮಗನಾದನು. ಅಸಮಂಜನಿಗೆ ಅಂಶುಮಾನನೆಂಬ ಕುಮಾರನೂ ಅಂಶುಮಾನನಿಗೆ ದಿಲೀಪನೂ ದಿಲೀಪನಿಗೆ ಭಗೀರಥನೂ ಭಗೀರಥನಿಗೆ ಕಾಕುತ್ಸ್ಥನೂ ಕಾಕುತ್ಸ್ಥನಿಗೆ ರಘುಮಹಾರಾಜನೂ ಹುಟ್ಟಿದರು. ರಘುವಿನ ಕುಮಾರನು ಪ್ರವೃದ್ಧನು. ಪ್ರವೃದ್ಧನ ಮಗನು ಪುರುಷಾದಕ. ಪುರುಷಾದಕನ ಮಗನು ಕಲ್ಮಾಷಪಾದ. ಕಲ್ಮಾಷಪಾದನ ಮಗನು ಶಂಖಣ. ಶಂಖಣನ ಮಗನು ಸುದರ್ಶನ. ಸುದರ್ಶನನ ಮಗನು ಅಗ್ನಿವರ್ಣ. ಅಗ್ನಿವರ್ಣನ ಮಗನು ಶೀಘ್ರ. ಆತನ ಮಗನು ಮರುತ್ತು. ಮರುತ್ತಿನ ಮಗನು ಪ್ರಶುಶ್ರುಕ. ಪ್ರಶುಶ್ರುಕನ ಮಗನು ಅಂಬರೀಷ. ಅಂಬರೀಷನ ಮಗನು ನಹುಷ. ನಹುಷನ ಮಗನು ಯಯಾತಿ. ಯಯಾತಿಯ ಮಗನು ನಾಭಾಗ. ನಾಭಾಗನ ಮಗನು ಅಜ. ಅಜನ ಕುಮಾರನು ಈ ದಶರಥನು. ಈ ದಶರಥಮಹಾರಾಯನ ಮಕ್ಕಳು ರಾಮಲಕ್ಷ್ಮಣಭರತಶತ್ರುಘ್ನರು ! ಈ ರೀತಿಯಲ್ಲಿ ವಂಶಪರಂಪರೆಯಿಂದ ಶುದ್ಧಾತ್ಮರೂ ಧರ್ಮಿಷ್ಠರೂ ಮಹಾಪರಾಕ್ರಮಿಗಳೂ ಸತ್ಯಸಂಧರೂ ಆದ ಇಕ್ಷ್ವಾಕುವಿನ ಸಂತತಿಯಲ್ಲಿ ಜನಿಸಿದ ರಾಮಲಕ್ಷ್ಮಣರಿಗೆ ನಿನ್ನ ಕುಮಾರಿಯರಾದ ಸೀತಾದೇವಿಯನ್ನೂ ಊರ್ಮಿಳೆಯನ್ನೂ ಕೊಡು. ಆ ಕನ್ಯಕೆಯರ ರೂಪ ಲಾವಣ್ಯ ಸೌಂದರ್ಯ ಕುಲ ಯೌವನಗಳಿಗೆ ಸದೃಶವಾದ ವರಸಂಪತ್ತಿಯುಳ್ಳವರು ಈ ರಾಮಲಕ್ಷ್ಮಣರು !" ಎಂದು ನುಡಿದನು.

## ೭೧ ನೆಯ ಅಧ್ಯಾಯ

## ಜನಕರಾಯನ ವಂಶಾವಳಿ

ಆಮೇಲೆ ಶ್ರೀರಾಮನ ವಂಶಾವಳಿಯನ್ನು ಕೇಳಿ ಜನಕಮಹಾರಾಯನು ವಸಿಷ್ಠಮುನೀಶ್ವರನನ್ನು ಕುರಿತು "ವಸಿಷ್ಠಮುನೀಶ್ವರರೆ, ನನ್ನ ವಂಶಾವಳಿಯನ್ನು ಆದಿಯಿಂದ ಹೇಳುತ್ತೇನೆ, ಕೇಳಿರಿ ; ಲೋಕದಲ್ಲಿ ವಿವಾಹವಾಗುವ ಸಮಯದಲ್ಲಿ ಕೊಡುವವರೂ ಕೊಳ್ಳುವವರೂ ಅನ್ಯೋನ್ಯ ಸಂಬಂಧಗಳನ್ನು ತಿಳುಹಿಸಿ ಕೊಟ್ಟುಕೊಳ್ಳಬೇಕು. ಆದಕಾರಣ ನನ್ನ ವಂಶವೃತ್ತಾಂತವನ್ನು ಹೇಳುತ್ತೇನೆ. ವಸಿಷ್ಠಮುನೀಶ್ವರರೆ, ಪೂರ್ವದಲ್ಲಿ ನಿಮಿಯೆಂಬ ಚಕ್ರವರ್ತಿಯಿದ್ದನು. ಆತನು ಮಹಾಧರ್ಮಾತ್ಮನು. ಮಹಾಬಲವಂತನು. ತನ್ನ ಸಚ್ಚರಿತ್ರಗಳಿಂದ ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದನು. ನಿಮಿಚಕ್ರವರ್ತಿಯ ಕುಮಾರನು ಮೊದಲನೆಯ ಜನಕರಾಯನು. ಜನಕರಾಯನ ಮಗನು ಉದಾವಸು. ಉದಾವಸುವಿನ ಮಗನು ನಂದಿವರ್ಧನ. ನಂದಿವರ್ಧನನ ಮಗನು ಸುಕೇತು. ಸುಕೇತುವಿನ ಮಗನು ದೇವರಾತ. ದೇವರಾತನ ಮಗನು ಬೃಹದ್ರಥ. ಬೃಹದ್ರಥನ ಮಗನು ಮಹಾವೀರ. ಮಹಾವೀರನ ಮಗನು ಧೃತಿಮಾನನೆಂಬವನು. ಧೃತಿಮಾನನ ಮಗನು ಸುಧೃತಿಯೆಂಬವನು. ಸುಧೃತಿಯ ಮಗನು ಧೃಷ್ಟಕೇತು. ಆತನ ಮಗನು ಹರ್ಯಶ್ವ. ಆತನ ಮಗನು ಮರುವೆಂಬವನು. ಆತನ ಮಗನು ಪ್ರತೀಂಧಕನು. ಆತನ ಮಗನು ಕೀರ್ತಿರಥನು. ಕೀರ್ತಿರಥನ ಮಗನು ದೇವಮೀಢನು. ದೇವಮೀಢನ ಮಗನು. ವಿಬುಧನು. ಆತನ ಮಗನು ಮಹೀಧ್ರಕ. ಆತನ ಮಗನು ಕೀರ್ತಿರಾತ. ಆತನ ಮಗನು ಮಹಾರೋಮ. ಆತನ ಮಗನು ಸ್ವರ್ಣರೋಮ. ಆತನ ಮಗನು ಹ್ರಸ್ವರೋಮ. ಹ್ರಸ್ವರೋಮರಾಯನಿಗೆ ಕುಮಾರರಿಬ್ಬರು. ಅವರೊಳಗೆ ಜ್ಯೇಷ್ಠಪುತ್ರನು ನಾನು. ನನ್ನ ತಮ್ಮನು

ಕುಶಧ್ವಜನು. ನಮ್ಮ ತಂದೆಯಾದ ಹ್ರಸ್ವರೋಮರಾಯನು ನನಗೆ ಪಟ್ಟಾಭಿಷೇಕವನ್ನು ಮಾಡಿ ಕುಶಧ್ವಜನನ್ನು ನನ್ನ ಕೈಯಲ್ಲಿ ಕೊಟ್ಟು ವನವಾಸಕ್ಕೆ ಹೋಗಿ ಅಲ್ಲಿ ದಿವಂಗತನಾದನು. ನಾನು ರಾಜ್ಯಭಾರವನ್ನು ವಹಿಸಿ ಧರ್ಮದಿಂದ ಪ್ರಜಾಪರಿಪಾಲನಮಾಡಿಕೊಂಡು ನನ್ನ ತಮ್ಮನಾದ ಕುಶಧ್ವಜನನ್ನು ಸ್ನೇಹಿತನ ಹಾಗೆ ಸಂಮಾನಿಸಿಕೊಂಡಿದ್ದೆನು. ಆ ಸಮಯದಲ್ಲಿ ಸಾಂಕಾಶ್ಯಾಧಿಪತಿಯಾದ ಸುಧನ್ವನೆಂಬ ರಾಯನು ನನ್ನ ಕುಮಾರಿಯೂ, ಮಹಾಲಕ್ಷ್ಮೀಸ್ವರೂಪಳೂ ಆದ ಸೀತಾದೇವಿಯನ್ನು ತನಗೆ ಕೊಡಬೇಕೆಂದು ಕೇಳಲು ನಾನು ಕೊಡುವುದಿಲ್ಲವೆಂದು ಹೇಳಿದೆನು. ಸುಧನ್ವನು ನನ್ನ ಕೂಡ ವೈರವನ್ನು ಬೆಳೆಸಿ ಮಿಥಿಲಾಪಟ್ಟಣವನ್ನು ಮುತ್ತಿಗೆ ಹಾಕಲು ಸುಧನ್ವನಿಗೂ ನನಗೂ ಯುದ್ಧವಾಯಿತು. ನಾನು ಯುದ್ಧದಲ್ಲಿ ಸುಧನ್ವನನ್ನು ಮುರಿದು ಆತನನ್ನು ಕೊಂದೆನು. ಆಮೇಲೆ ಈ ಕುಶಧ್ವಜನಿಗೆ ಸಾಂಕಾಶ್ಯಪಟ್ಟಣದಲ್ಲಿ ಪಟ್ಟವನ್ನು ಕಟ್ಟಿದೆನು. ಈತನು ನನ್ನ ತಮ್ಮನು. ನಾನು ಜ್ಯೇಷ್ಠನು. ನನ್ನ ಹಿರಿಯ ಮಗಳಾದ ಸೀತಾದೇವಿಯನ್ನು ಶ್ರೀರಾಮನಿಗೂ ಎರಡನೆಯ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ ಕೊಡುತ್ತೇನೆ. ಎಲೈ ದಶರಥರಾಯನೆ, ರಾಮಲಕ್ಷ್ಮಣರಿಗೆ ವಿವಾಹಪೂರ್ವಕವಾದ ಗೋದಾನಾದಿವ್ರತಗಳನ್ನೂ ಪಿತೃವಿಂದಾಗತಕ್ಕ ಉತ್ಸವಗಳನ್ನೂ ಮಾಡಿಸು. ಇಂದಿಗೆ ಮೂರನೆಯ ದಿವಸದಲ್ಲಿ ಉತ್ತರಾನಕ್ಷತ್ರದಲ್ಲಿ ವಿವಾಹವನ್ನು ಮಾಡೋಣ" ಎಂದು ಹೇಳಿದನು.



## ೭೨ನೆಯ ಅಧ್ಯಾಯ

## ರಾಮ ಲಕ್ಷ್ಮಣ ಭರತ ಶತ್ರುಘ್ನರ ವಿವಾಹ ನಿಶ್ಚಯ

ಆಮೇಲೆ ವಿಶ್ವಾಮಿತ್ರಮುನೀಶ್ವರನು ಜನಕರಾಯನನ್ನು ಕುರಿತು "ಎಲೈ ಜನಕರಾಯನೆ, ವಿದೇಹರಾಜ್ಯಕ್ಕಧಿಪತಿಯಾದ ನಿನಗೂ ಇಕ್ಷ್ವಾಕುವಂಶದ ದಶರಥರಾಯನಿಗೂ ಸಮಾನನಾದವನು ಲೋಕದಲ್ಲಿ ಒಬ್ಬನೂ ಇಲ್ಲ. ನಿನ್ನ ಕುಮಾರಿಯರಾದ ಸೀತಾದೇವಿಯನ್ನೂ ಊರ್ಮಿಳಾದೇವಿಯನ್ನೂ ರಾಮಲಕ್ಷ್ಮಣರಿಗೆ ಕೊಡುವುದಾಗಿ ನೀನು ಹೇಳಿದೆ. ಈ ಸಂಬಂಧವು ಧರ್ಮಸಮ್ಮತವಾದದ್ದು. ವಯೋರೂಪ ಕುಲಶೀಲಗಳಿಂದ ದಂಪತಿಗಳು ಸಮಾನರಾಗಿರುವರು! ಇನ್ನೊಂದು ಮಾತನ್ನು ಹೇಳುತ್ತೇನೆ ಕೇಳು. ನಿನ್ನ ತಮ್ಮನಾದ ಕುಶಧ್ವಜರಾಜನ ಕುಮಾರಿಯರು ರೂಪಲಾವಣ್ಯಗಳಿಂದ ಮನೋಹರವಾಗಿದ್ದಾರೆ. ಅವರ ಸೌಂದರ್ಯಲಾವಣ್ಯಗಳಿಗೆ ಅನುರೂಪರಾದ ಭರತಶತ್ರುಘ್ನರಿಗೆ ಅವರನ್ನು ಕೊಟ್ಟು ವಿವಾಹಮಾಡು. ರಾಮಲಕ್ಷ್ಮಣಭರತಶತ್ರುಘ್ನರು ರೂಪ ಯೌವನ ಪರಾಕ್ರಮಗಳಿಂದ ಅಸದೃಶರಾದವರು. ಇಂದ್ರಾದಿ ಲೋಕಪಾಲಕರಿಗೆ ಸಮಾನರಾದವರು. ಆದ್ದರಿಂದ ನಿನಗೂ ದಶರಥರಾಯನಿಗೂ ಸಂಬಂಧವುಂಟಾಗಲಿ. ನಿಮ್ಮಿಬ್ಬರ ಪುಣ್ಯಗಳಿಂದ ನಿಮ್ಮ ವಂಶಗಳು ಅತಿಪವಿತ್ರವಾಗುವುವು!" ಎಂದು ವಸಿಷ್ಠಮುನೀಶ್ವರನ ಸಮ್ಮತಿಯಿಂದ ನುಡಿದನು.

ಆ ಮಾತನ್ನು ಕೇಳಿ ಜನಕಮಹಾರಾಯನು ಅತಿಹರ್ಷದಿಂದ ಕೈಮುಗಿದುಕೊಂಡು ವಿನಯದಿಂದ ವಸಿಷ್ಠ ವಿಶ್ವಾಮಿತ್ರರನ್ನು ಕುರಿತು "ಮುನಿಗಳಿರಾ, ನಮ್ಮಿಬ್ಬರ ವಂಶಗಳು ನಿಮ್ಮ ಅನುಗ್ರಹದಿಂದ ಮಹಾಪವಿತ್ರವಾದವು. ನಮ್ಮ ವಂಶಪರಂಪರೆಯನ್ನು ನೀವು ನಿರೂಪಿಸಿದ್ದರಿಂದ ನಾವು

ಕೃತಾರ್ಥರಾದೆವು. ನೀವು ಹೇಳಿದ ವಾಕ್ಯವು ನನಗೆ ಸಮ್ಮತವು, ನನ್ನ ತಮ್ಮನಾದ ಕುಶಧ್ವಜನ ಮಕ್ಕಳಿಬ್ಬರನ್ನೂ ಭರತಶತ್ರುಘ್ನರಿಗೆ ಕೊಟ್ಟು ವಿವಾಹ ಮಾಡುತ್ತೇನೆ. ಒಂದೇ ದಿನದಲ್ಲಿ ದಶರಥರಾಯನ ನಾಲ್ವರು ಕುಮಾರರಿಗೂ ನಮ್ಮ ನಾಲ್ವರು ಕುಮಾರಿಯರಿಗೂ ವಿವಾಹವಾಗಲಿ ! ಉತ್ತರಾನಕ್ಷತ್ರದಲ್ಲಿ ವಿವಾಹವು ಉತ್ತಮವಾದದ್ದೆಂದು ಬಲ್ಲವರು ಹೇಳುವರು ! ಮುನಿಗಳೆ, ನೀವು ನನಗೆ ಮಹಾಧರ್ಮವನ್ನು ಸಂಪಾದಿಸಿಕೊಟ್ಟಿರಿ. ನನಗೆ ಧರ್ಮೋಪದೇಶವನ್ನು ಮಾಡಿದ ಕಾರಣ ದಿಂದ ನೀವೇ ನನಗೆ ಗುರುಗಳು. ದಶರಥರಾಯನ ನಾಲ್ವರು ಕುಮಾರರಾದ ರಾಮಲಕ್ಷ್ಮಣ ಭರತಶತ್ರುಘ್ನರು ಅಯೋಧ್ಯಾಪಟ್ಟಣಕ್ಕೆ ಹೇಗೆ ಅಧಿಪತಿಗಳೋ ಆ ರೀತಿಯಲ್ಲಿಯೇ ನನ್ನ ರಾಜ್ಯಕ್ಕೂ ಅಧಿಪತಿಗಳಾಗಿರಲಿ " ಎಂದು ನುಡಿದನು.

ಆ ಮಾತನ್ನು ಕೇಳಿ ಸಮಸ್ತಜಗತ್ತಿಗೂ ಅಧಿಪತಿಯಾಗಿ ತೇಜಸ್ವಿಯಾದ ದಶರಥರಾಯನು ಹರ್ಷಗೊಂಡು ಮುಗುಳುನಗೆಯಿಂದ ಜನಕರಾಯನನ್ನು ನೋಡಿ " ಜನಕಮಹಾರಾಯನೆ, ಮಿಥಿಲಾ ಪಟ್ಟಣಕ್ಕೆ ಅಧಿಪತಿಗಳಾಗಿ ಅಣ್ಣತಮ್ಮಂದಿರಾದ ನೀವು ಮಹಾಸದ್ಗುಣವುಳ್ಳಂಥವರು. ವಿನಯ ಸಂಪತ್ತಿಯುಳ್ಳವರು. ಬಹುಮಂದಿ ಋಷಿಗಳಿಗೆ ವಂದನಾದಿ ಸತ್ಕಾರಗಳನ್ನು ಮಾಡಿದವರು. ಆದ್ದರಿಂದ ನಿಮಗೆ ಅನೇಕ ಮಾಂಗಲ್ಯವಾಗಲಿ ! ನಾವು ವಿಧ್ಯುಕ್ತಪ್ರಕಾರದಲ್ಲಿ ನನ್ನ ಕುಮಾರರಿಗೆ ಅಭ್ಯುದಯ ಮೊದಲಾದ ಮಾಂಗಲ್ಯವ್ರತಗಳನ್ನು ಮಾಡಬೇಕು " ಎಂದು ನುಡಿದು ಆ ರಾಯನಿಂದ ಬೀಳ್ಕೊಂಡು ಅತ್ಯಂತ ಕೀರ್ತಿಸಂಪನ್ನರಾದ ವಸಿಷ್ಠ ವಿಶ್ವಾಮಿತ್ರಮುನಿಗಳನ್ನು ಮುಂದಿಟ್ಟುಕೊಂಡು ತನ್ನ ಬಿಡಾರಕ್ಕೆ ಬಂದನು. ಅಲ್ಲಿ ಕುಮಾರರಾದ ರಾಮಲಕ್ಷ್ಮಣಭರತಶತ್ರುಘ್ನರಿಗೆ ಮಾಂಗಲ್ಯಸ್ನಾನಾದಿ ನಿತ್ಯಕರ್ಮಗಳನ್ನೂ ಸತ್ಕರ್ಮಗಳನ್ನೂ ವಿಧ್ಯುಕ್ತಪ್ರಕಾರವಾಗಿ ಮಾಡಿಸಿ ಮಾರನೆಯ ದಿವಸದಲ್ಲಿ ಗೋದಾನವ್ರತ ಮೊದಲಾದ ಸಮಾವರ್ತನಗಳನ್ನು ಮಾಡಿಸಿದನು. ಆ ಗೋದಾನವ್ರತದಲ್ಲಿ ಒಬ್ಬೊಬ್ಬ ಕುಮಾರನಿಗಾಗಿ ಒಂದೊಂದುಲಕ್ಷ ಅಲಂಕರಿಸಲ್ಪಟ್ಟ ಗೋವುಗಳನ್ನು ದಾನಮಾಡಿದನು ! ಪುಷ್ಟಾಂಗವುಳ್ಳವೂ ಎಳೆಯಕರುಗಳುಳ್ಳವೂ ಚಿನ್ನದ ಕೊಂಬುಗಳೂ ಬೆಳ್ಳಿಯ ಕೊಂಬುಗಳೂ ಕಂಚಿನ ಹಾಲುಕರೆಯುವ ಪಾತ್ರೆಗಳುಳ್ಳವೂ ಆದ ನಾಲ್ಕುಲಕ್ಷ ಗೋವುಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ದಾನಮಾಡಿದನು. ಸುವರ್ಣದಾನಗಳನ್ನು ಬ್ರಾಹ್ಮಣರಿಗೆ ಕೊಟ್ಟು ಗೋದಾನವ್ರತವನ್ನು ನಾಲ್ಕು ಮಂದಿ ಕುಮಾರರಿಗೂ ಮಾಡಿಸಿ ಆ ನಾಲ್ವರು ಕುಮಾರರಿಂದ ಬ್ರಹ್ಮದೇವನು ಇಂದ್ರಾದಿ ನಾಲ್ವರು ದಿಕ್ಪಾಲಕರಿಂದ ಒಪ್ಪುವ ರೀತಿಯಲ್ಲಿ ಒಪ್ಪುತ್ತಿದ್ದನು !



## ೭೩ ನೆಯ ಅಧ್ಯಾಯ

## ಸೀತಾಕಲ್ಯಾಣ

ಅನಂತರದಲ್ಲಿ ದಶರಥರಾಯನು ತನ್ನ ಕುಮಾರರಾದ ರಾಮಲಕ್ಷ್ಮಣಭರತಶತ್ರುಘ್ನರಿಗೆ ಗೋದಾನವ್ರತವನ್ನು ಮಾಡಿಸುವ ದಿವಸದಲ್ಲಿ ಕೇಕಯರಾಜನ ಕುಮಾರನೂ ಭರತನಿಗೆ ಸೋದರ ಮಾವನೂ ಆದ ಯುಧಾಜಿದ್ರಾಯನು ಬಂದು ದಶರಥರಾಯನನ್ನು ಕಂಡನು. ಅನಂತರ ಆತನ ಕುಶಲವನ್ನು ಕೇಳಿ ತನ್ನ ಕುಶಲವನ್ನು ಹೇಳುತ್ತ " ಎಲೈ ದಶರಥರಾಯನೆ, ನಿನ್ನ ಕೃಪೆಯಿಂದ ನಾವೆಲ್ಲರೂ ಕ್ಷೇಮವಾಗಿದ್ದೇವೆ. ನಾನು ನನ್ನ ಒಡಹುಟ್ಟಿದವಳಾದ ಕೈಕೇಯೀದೇವಿಯ ಕುಮಾರನಾದ

ಭರತನನ್ನು ನೋಡಬೇಕೆಂಬ ಪ್ರೀತಿಯಿಂದ ಅಯೋಧ್ಯಾಪಟ್ಟಣಕ್ಕೆ ಬಂದೆನು. ಅಲ್ಲಿ ನಿನ್ನ ಮಕ್ಕಳ ವಿವಾಹದ ನಿಮಿತ್ತವಾಗಿ ನೀನು ನಾಲ್ವರು ಮಕ್ಕಳನ್ನು ಕರೆದುಕೊಂಡು ಮಿಥಿಲಾಪಟ್ಟಣಕ್ಕೆ ಬಂದದ್ದನ್ನು ಕೇಳಿ ಅತ್ಯಂತ ಸಂತೋಷದಿಂದ ನನ್ನ ಸೋದರಳಿಯನಾದ ಭರತನ ವಿವಾಹವನ್ನು ನೋಡಬೇಕೆಂದು ಇಲ್ಲಿಗೆ ಬಂದೆನು " ಎಂದು ಹೇಳಿದನು.

ಯುಧಾಜಿತ್ತಿನ ಮನೋಹರವಾದ ವಾಕ್ಯವನ್ನು ಕೇಳಿ ದಶರಥರಾಯನು ಅತಿಹರ್ಷಪಟ್ಟು ತನ್ನ ಮೈದುನನಿಗೆ ಅನೇಕ ಸತ್ಕಾರಗಳನ್ನು ಮಾಡಿ ಆ ರಾತ್ರಿಯನ್ನು ಕಳೆದು ಮಾರನೆಯ ದಿವಸ ಪ್ರಾತಃ ಕಾಲದಲ್ಲಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ವಸಿಷ್ಠ ವಿಶ್ವಾಮಿತ್ರರು ಮೊದಲಾದ ಋಷಿಗಳನ್ನು ಮುಂದಿಟ್ಟುಕೊಂಡು ವಿವಾಹಮಂಟಪಕ್ಕೆ ಬಂದನು. ಆಗ ಅತಿತೇಜಸ್ವಿಯಾದ ಶ್ರೀರಾಮನು ಸರ್ವಾಭರಣಭೂಷಿತರಾದ ತಮ್ಮಂದಿರನ್ನು ಕೂಡಿಕೊಂಡು ವಿವಾಹಕಾಲೋಚಿತವಾದ ಅಲಂಕಾರ ಗಳನ್ನು ಮಾಡಿಕೊಂಡು ವಸಿಷ್ಠಮುನೀಶ್ವರನನ್ನು ಮುಂದಿಟ್ಟುಕೊಂಡು ತನ್ನ ತಂದೆಯಾದ ದಶರಥ ರಾಯನ ಸಮೀಪದಲ್ಲಿ ನಿಂತಿದ್ದನು. ವಸಿಷ್ಠಮುನೀಶ್ವರನು ಜನಕರಾಯನನ್ನು ಕುರಿತು " ಎಲೈ ಜನಕ ಮಹಾರಾಯನೆ, ದಶರಥರಾಯನು ತನ್ನ ಕುಮಾರರಿಗೆ ವಿವಾಹಕಾಲೋಚಿತವಾದ ಮಾಂಗಲ್ಯ ಕೃತ್ಯಗಳನ್ನು ಮಾಡಿಸಿ ವಿವಾಹಲಗ್ನದ ಸಮಯವಾಯಿತೆಂದು ಅವರನ್ನು ಕರೆದುಕೊಂಡು ಬಂದಿದ್ದಾನೆ. ಕನ್ಯಾದಾನವನ್ನು ತೆಗೆದುಕೊಳ್ಳುವವರಿಗೂ ಕೊಡುವವರಿಗೂ ಮಹಾಶ್ರೇಯಸ್ಸುಂಟಾಗುವುದು ! ಈಗ ವಿವಾಹಮುಹೂರ್ತವು. ಈ ಮುಹೂರ್ತದಲ್ಲಿ ವಿವಾಹವನ್ನು ಮಾಡಿಸು " ಎಂದು ನುಡಿದನು.

ಜನಕಮಹಾರಾಯನು " ವಸಿಷ್ಠಮುನೀಶ್ವರರೆ, ನಾನು ವಿವಾಹವನ್ನು ಮಾಡಿಸುವುದಕ್ಕೆ ಸ್ವತಂತ್ರನೇನು ! ಈ ರಾಜ್ಯವೂ ಈ ಪಟ್ಟಣವೂ ಈ ಅರಮನೆಯೂ ನಿಮ್ಮದೇ ಸರಿ. ಕರ್ತರಾಗಿರು ವಂಥ ನಿಮಗೆ ಅಪ್ಪಣೆಯನ್ನು ಕೊಡುವುದಕ್ಕೆ ನಾನು ಸಮರ್ಥನಲ್ಲ. ನೀವೇ ಮದುವೆಮಾಡಿಸಿರಿ. ನಾನು ಹಸೆಯಜಗಲಿಯನ್ನಲಂಕರಿಸಿ ಆ ಜಗಲಿಯ ಮೇಲೆ ನನ್ನ ಕುಮಾರಿಯರನ್ನು ಕುಳ್ಳಿರಿಸಿ ಕೊಂಡಿರುತ್ತೇನೆ. ನನ್ನ ಕುಮಾರಿಯರು ಪ್ರಕಾಶಮಾನವಾದ ಯಜ್ಞಪುರುಷನಂತೆ ತೇಜಸ್ವಿಗಳಾಗಿ ಅತಿಕಾಂತಿಯುಳ್ಳವರಾಗಿದ್ದಾರೆ. ನಾನು ಹಸೆಯಜಗಲಿಯ ಮೇಲೆ ಕುಳಿತುಕೊಂಡು ನಿಮ್ಮ ಬರುವಿಕೆಯನ್ನು ಕಾಯ್ದುಕೊಂಡಿದ್ದೇನೆ. ನೀವು ಏಕೆ ಕಾಲವಿಳಂಬವನ್ನು ಮಾಡುತ್ತಿದ್ದೀರಿ ? ಶೀಘ್ರದಲ್ಲಿ ವಿವಾಹವನ್ನು ನಡೆಸಿರಿ " ಎಂದು ಹೇಳಿದನು. ಆಮೇಲೆ ವಸಿಷ್ಠಮುನೀಶ್ವರನು ದಶರಥರಾಯನ ಕುಮಾರರನ್ನೂ ಋಷಿಗಳನ್ನೂ ವಿವಾಹಮಂಟಪಕ್ಕೆ ಕರೆದುಕೊಂಡು ಬಂದನು. ಜನಕರಾಯನು ವಸಿಷ್ಠಮುನೀಶ್ವರನನ್ನು ಕುರಿತು " ಸುಮುಹೂರ್ತದಲ್ಲಿ ಸಮಸ್ತಲೋಕ ಮನೋಹರನಾದ ಶ್ರೀರಾಮನಿಗೆ ವಿವಾಹವನ್ನು ಮಾಡಿಸಿರಿ. ನೀವು ಸರ್ವಜ್ಞರು. ನೀವು ಅರಿಯದ ಕೃತ್ಯವೇ ಇಲ್ಲ, ಆದ್ದರಿಂದ ಸಮಸ್ತವನ್ನೂ ನೀವೇ ಮಾಡಿಸಬೇಕು " ಎಂದು ಹೇಳಿದನು.

ಷಡ್ಗುಣೈಶ್ವರ್ಯಸಂಪನ್ನನಾದ ವಸಿಷ್ಠಮುನಿಯು ವಿಶ್ವಾಮಿತ್ರನನ್ನೂ ಪುರೋಹಿತನಾದ ಶತಾನಂದಮುನಿಯನ್ನೂ ಮುಂದಿಟ್ಟುಕೊಂಡು ವಿವಾಹಮಂಟಪದ ಸಭಾಮಧ್ಯದಲ್ಲಿ ವಿವಾಹದ ಜಗಲಿಯನ್ನು ಮುತ್ತು ಮಾಣಿಕ್ಯ ಮೊದಲಾದ ನವರತ್ನಗಳಿಂದಲೂ ಸುವರ್ಣಮಯವಾದ ಅರಳೆಲೆ ಗಳಿಂದಲೂ ಅಲಂಕರಿಸಿ ಪೂರ್ಣಕಲಶಗಳನ್ನಿರಿಸಿ ಸುವರ್ಣಮಯವಾದ ಪಾಲಿಕೆಗಳಿಂದ ಅಂಕುರಾರ್ಪಣ ವಿಧಿಯನ್ನು ಮಾಡಿಸಿ ಶಂಖಗಳಿಂದಲೂ ಸ್ರುಕ್‌ಸ್ರುವಾದಿ ಹೋಮಪಾತ್ರೆಗಳಿಂದಲೂ ಮಂತ್ರೋಕ್ತ ಕ್ರಮದಂತೆ ಅಲಂಕರಿಸಿ, ಆ ವಿವಾಹವೇದಿಕಾಮಧ್ಯದಲ್ಲಿ ಹೋಮಾರ್ಥವಾಗಿ ಯಜ್ಞಪುರುಷನನ್ನು ಪ್ರತಿಷ್ಠೆಮಾಡಿ ವಿಧ್ಯುಕ್ತಪ್ರಕಾರದಲ್ಲಿ ಹೋಮವನ್ನು ಮಾಡಿದನು. ಆಗ ಸಾಕ್ಷಾತ್ ಪರಮ

ಪುರುಷನಾದ ನಾರಾಯಣನ ವಾಮಭಾಗದ ವಕ್ಷಃಸ್ಥಳದಿಂದಿಳಿದುಬರುವ ಮಹಾಲಕ್ಷ್ಮಿಯೋ ಎಂಬ ಹಾಗೆ ಮಿಂಚಿನ ಹೊಳೆಯನ್ನನುಕರಿಸುವ ನಯನಗಳೂ ಕೊಂಕಾದ ಕುರುಳುಗಳೂ ಉಳ್ಳ,ಹೊಂಬಣ್ಣದ ಅಂಚಿನ ಬಿಳಿಯ ಪಟ್ಟೆ ಸೀರೆಯನ್ನುಟ್ಟು, ತಾವರೆ ಎಸಳುಗಳ ಹಾಗೆ ವಿಶಾಲವಾದ ಕಣ್ಣುಗಳುಳ್ಳ ಸರ್ವಾಭರಣಭೂಷಿತೆಯಾದ ಸೀತಾದೇವಿಯನ್ನೂ ರಘುನಾಥನನ್ನೂ ತನ್ನ ಎದುರಾಗಿ ನಿಲ್ಲಿಸಿಕೊಂಡು ಜನಕರಾಯನು "ಎಲೈ ರಘುನಾಥನೆ, ನನ್ನ ಮಗಳಾದ ಸೀತಾದೇವಿಯನ್ನು ಕೈಹಿಡಿದು ವಿವಾಹವಾಗಿ ಧರ್ಮದಿಂದ ರಕ್ಷಿಸು. ಸೀತಾದೇವಿಯು ಮಹಾಪತಿವ್ರತೆಯಾಗಿ ನಿನ್ನ ನೆರಳಂತೆ ನಿನಗೆ ಅನುಕೂಲಳಾಗಿ ನಡೆಯುವಳು!" ಎಂದು ನುಡಿದು ಅಗ್ನಿಸಾಕ್ಷಿಕವಾಗಿಯೂ ಧಾರಾಪೂರ್ವಕವಾಗಿಯೂ ಶ್ರೀರಾಮನಿಗೆ ವಿವಾಹಮಾಡಿಕೊಟ್ಟನು. ಆ ಸಮಯದಲ್ಲಿ ಸಮಸ್ತದೇವತೆಗಳೂ ಋಷಿಗಳೂ "ಚೆನ್ನಾಯಿತು! ಚೆನ್ನಾಯಿತು!" ಎಂದು ನುಡಿಯಲು ಆ ಧ್ವನಿಯು ದಶ ದಿಕ್ಕುಗಳಲ್ಲಿಯೂ ಮೊಳಗುತ್ತಿತ್ತು! ಅಂತರಿಕ್ಷಮಾರ್ಗದಲ್ಲಿ ದೇವದುಂದುಭಿಗಳು ಮೊಳಗಿದವು! ದೇವತೆಗಳು ಪುಷ್ಪವೃಷ್ಟಿಗಳನ್ನು ಕರೆದರು! ಈ ರೀತಿಯಲ್ಲಿ ಜನಕಮಹಾರಾಯನು ಅತಿಹರ್ಷದಿಂದ ತನ್ನ ಮಗಳಾದ ಸೀತಾದೇವಿಯನ್ನು ಧಾರೆಯೆರೆದು ಕೊಟ್ಟು, ಆಮೇಲೆ ಲಕ್ಷ್ಮಣನನ್ನು ಕರೆದು "ಎಲೈ ಲಕ್ಷ್ಮಣ, ನನ್ನ ಎರಡನೆಯ ಮಗಳಾದ ಊರ್ಮಿಳಾದೇವಿಯನ್ನು ಕೈಹಿಡಿದು ಧರ್ಮದಿಂದ ಪರಿಪಾಲಿಸು" ಎಂದು ಹೇಳಿ ಊರ್ಮಿಳಾದೇವಿಯನ್ನು ಲಕ್ಷ್ಮಣನಿಗೆ ಧಾರೆಯೆರೆದು ಕೊಟ್ಟನು. ಆಮೇಲೆ ಭರತನನ್ನು ಕರೆದು "ಎಲೈ ಭರತನೆ, ನನ್ನ ತಮ್ಮನಾದ ಕುಶಧ್ವಜರಾಯನ ಹಿರಿಯ ಮಗಳಾದ ಮಾಂಡವಿ ಎಂಬ ಕುಮಾರಿಯನ್ನು ನಿನಗೆ ಕೊಟ್ಟೆನು. ನೀನು ಆಕೆಯನ್ನು ಕೈಹಿಡಿದು ಧರ್ಮದಿಂದ ಪರಿಪಾಲಿಸು" ಎಂದು ಹೇಳಿ, ಕುಶಧ್ವಜನ ಮಗಳಾದ ಮಾಂಡವಿಯನ್ನು ಭರತನಿಗೆ ಧಾರೆಯೆರೆದುಕೊಟ್ಟನು. ಆಮೇಲೆ ಶತ್ರುಘ್ನನನ್ನು ಕರೆದು "ಎಲೈ ಶತ್ರುಘ್ನನೆ, ನನ್ನ ತಮ್ಮನಾದ ಕುಶಧ್ವಜರಾಯನ ಎರಡನೆಯ ಕುಮಾರಿಯಾದ ಶ್ರುತಕೀರ್ತಿಯನ್ನು ನಿನಗೆ ಕೊಟ್ಟೆನು. ಆಕೆಯನ್ನು ಕೈಹಿಡಿದು ಧರ್ಮದಿಂದ ಪರಿಪಾಲಿಸು" ಎಂದು ಹೇಳಿ ಕುಶಧ್ವಜನ ಎರಡನೆಯ ಕುಮಾರಿಯಾದ ಶ್ರುತಕೀರ್ತಿಯನ್ನು ಧಾರೆಯೆರೆದುಕೊಟ್ಟನು. ಅನಂತರ ಅತಿಹರ್ಷದಿಂದ ದಶರಥರಾಯನ ಕುಮಾರರಾದ ರಾಮಲಕ್ಷ್ಮಣಭರತಶತ್ರುಘ್ನರನ್ನು ಕುರಿತು "ಎಲೈ ಕುಮಾರರೆ, ನೀವು ಶೌರ್ಯ ದಾಕ್ಷಿಣ್ಯ ಸಚ್ಚರಿತ್ರಾದಿ ಗುಣಗಳಿಂದ ಸಂಪನ್ನರಾದವರು. ನಿಮ್ಮ ಪತ್ನಿಯರನ್ನು ಧರ್ಮದಿಂದ ಪರಿಪಾಲಿಸಿರಿ" ಎಂದು ನುಡಿದನು.

ಆ ಬಳಿಕ ಶ್ರೀರಾಮನು ಮೊದಲಾದ ನಾಲ್ಕೂ ಮಂದಿ ರಾಜಕುಮಾರರು ತಮ್ಮ ತಮ್ಮ ಪತ್ನಿಯರನ್ನು ಕೈಹಿಡಿದುಕೊಂಡು ಹೋಮಾಗ್ನಿಯನ್ನು ಪ್ರದಕ್ಷಿಣೆಮಾಡಿದರು. ಬಳಿಕ ಸಮಸ್ತ ಋಷಿಗಳಿಗೂ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದರು. ಹೀಗೆ ವಿಧ್ಯುಕ್ತಪ್ರಕಾರದಲ್ಲಿ ವಿವಾಹ ಹೋಮವನ್ನು ಸಮಾಪ್ತಿ ಮಾಡಿ ತಮ್ಮ ತಮ್ಮ ಪತ್ನೀಸಮೇತರಾಗಿ ತಮ್ಮ ತಮ್ಮ ಅರಮನೆಗಳಿಗೆ ಹೋದರು. ಆ ರಾಜಕುಮಾರರನ್ನು ಕಂಡು ದಶರಥರಾಯನು ಅತಿಹರ್ಷಗೊಂಡನು. ಆಮೇಲೆ ಸಮಸ್ತ ಋಷಿಗಳನ್ನೂ ಬಂಧುಗಳನ್ನೂ ಮೆರವಣಿಗೆಯಲ್ಲಿ ಕರೆದುಕೊಂಡು ಅರಮನೆಯನ್ನು ಪ್ರವೇಶಿಸಿದನು.



೭೪ ನೆಯ ಅಧ್ಯಾಯ

## ಪರಶುರಾಮನು ಶ್ರೀರಾಮನನ್ನು ಅಡ್ಡಗಟ್ಟಿದ್ದು

ಮಾರನೆಯ ದಿವಸ ಪ್ರಾತಃಕಾಲದಲ್ಲಿ ವಿಶ್ವಾಮಿತ್ರಮುನೀಶ್ವರನು ದಶರಥರಾಯನಿಗೂ ಜನಕರಾಯನಿಗೂ ಆಶೀರ್ವಾದಗಳನ್ನು ಮಾಡಿ ಬೀಳ್ಕೊಂಡು ರಾಮಲಕ್ಷ್ಮಣಭರತಶತ್ರುಘ್ನರಿಗೂ ಆಶೀರ್ವಾದಗಳನ್ನು ಮಾಡಿ ಹಿಮವತ್ಪರ್ವತಕ್ಕೆ ಹೊರಟುಹೋದನು. ಆಮೇಲೆ ಅಯೋಧ್ಯಾಪತಿಯಾದ ದಶರಥಮಹಾರಾಯನು ಮಿಥಿಲಾಧಿಪತಿಯಾದ ಜನಕರಾಯನಿಂದ ಅನುಮತಿಯನ್ನು ಪಡೆದು ತನ್ನ ಕುಮಾರರನ್ನೂ ಸೊಸೆಯರನ್ನೂ ಕೂಡಿಕೊಂಡು ಅಯೋಧ್ಯಾಪಟ್ಟಣಕ್ಕೆ ತೆರಳಿದನು. ಜನಕರಾಯನು ತನ್ನ ಕುಮಾರಿಯರಿಗೆ ಬಳುವಳಿಯಾಗಿ ಒಬ್ಬೊಬ್ಬರಿಗೆ ಲಕ್ಷಗಟ್ಟಲೆ ಅಪರಂಜಿ ನಾಣ್ಯಗಳು ಒಂದೊಂದು ಲಕ್ಷ ಹಸುಗಳು ಒಂದೊಂದು ಕೋಟಿ ರತ್ನ ಕಂಬಳಿಗಳು ಚೀನಾಂಬರಗಳು ವಸ್ತ್ರಗಳು ಆನೆ ಕುದುರೆ ರಥ ಕಾಲಾಳೆಂಬ ಚತುರಂಗಬಲಗಳು ಅನೇಕಾಭರಣಯುಕ್ತರಾದ ದಾಸೀಜನಗಳು ಮೊದಲಾದ ಅನೇಕ ವಸ್ತುಗಳನ್ನು ಕೊಟ್ಟು ಆಶೀರ್ವಾದಗಳನ್ನು ಮಾಡಿದನು. ಹಾಗೆಯೇ ತನ್ನ ಅಳಿಯಂದಿರಾದ ರಾಮಲಕ್ಷ್ಮಣಭರತಶತ್ರುಘ್ನರಿಗೂ ಆಶೀರ್ವಾದಗಳನ್ನು ಮಾಡಿ ಪ್ರಯಾಣಮಾಡಿಸಿ ದಶರಥರಾಯನನ್ನೂ ಕಳುಹಿಸಿ ಮಿಥಿಲಾಪಟ್ಟಣದಲ್ಲಿದ್ದನು.

ಬಳಿಕ ದಶರಥರಾಯನು ತನ್ನ ಮಕ್ಕಳನ್ನು ಕೂಡಿಕೊಂಡು ಪುರೋಹಿತನಾದ ವಸಿಷ್ಠಮುನಿ ಮೊದಲಾದ ಋಷಿಗಳನ್ನು ಮುಂದಿಟ್ಟುಕೊಂಡು ಸಮಸ್ತಬಲಸಹಿತನಾಗಿ ಅಯೋಧ್ಯಾಪಟ್ಟಣಕ್ಕೆ ಬರುತ್ತಿರಲು ಮಧ್ಯಮಾರ್ಗದಲ್ಲಿ ಪಕ್ಷಿಗಳು ಭಯಂಕರವಾಗಿ ಕೂಗತೊಡಗಿದವು. ಮೃಗಗಳು ಪ್ರದಕ್ಷಿಣವಾಗಿ ಬರುತ್ತಿದ್ದವು. ಅದನ್ನು ನೋಡಿ ದಶರಥರಾಯನು ವಸಿಷ್ಠಮುನಿಯನ್ನು ಕುರಿತು "ಎಲೈ ವಸಿಷ್ಠಮುನೀಶ್ವರರೆ, ಪಕ್ಷಿಗಳು ಭಯಂಕರವಾಗಿ ಕೂಗುತ್ತಿವೆ. ಮೃಗಗಳು ಪ್ರದಕ್ಷಿಣವಾಗಿ ಬರುತ್ತಿವೆ. ಇದು ಏನು ಕಾರಣದಿಂದಲೋ ತಿಳಿಯಲಿಲ್ಲ. ನನ್ನ ಮನಸ್ಸಿನಲ್ಲಿ ಮಹಾಭಯವಾಗುತ್ತದೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ವಸಿಷ್ಠಮುನಿಯು ದಶರಥನನ್ನು ಕುರಿತು "ಎಲೈ ದಶರಥರಾಯನೆ, ಭಯಂಕರವಾಗಿ ಕೂಗುವ ಪಕ್ಷಿಗಳು ಮುಂದಣ ಭಯವನ್ನು ಸೂಚಿಸುತ್ತವೆ. ಪ್ರದಕ್ಷಿಣವಾಗಿ ಬರುವ ಮೃಗಗಳು ಆ ಭಯಕ್ಕೆ ಪ್ರತೀಕಾರವನ್ನು ಸೂಚಿಸುತ್ತವೆ" ಎಂದು ಸಂತವಿಡುತ್ತಿದ್ದನು. ಆ ಸಮಯದಲ್ಲಿ ಸೂರ್ಯನನ್ನು ಮಂಜು ಮುಸುಕುತ್ತಿತ್ತು. ಬಿರುಗಾಳಿಯು ಸುಳಿಗಾಳಿಯಾಗಿ ಬೀಸುತ್ತಿತ್ತು. ಸಮಸ್ತ ದಿಕ್ಕುಗಳೂ ಭಯಂಕರವಾಗಿ ತೋರುತ್ತಿದ್ದವು. ಆ ಬಿರುಗಾಳಿಯಿಂದೆದ್ದ ಧೂಳಿಯು ದಶರಥರಾಯನ ಸೇನೆಯನ್ನು ಮುಚ್ಚಲು ಆ ಸೇನೆಯು ಕಂಗೆಡುತ್ತಿತ್ತು. ವಸಿಷ್ಠಮುನೀಶ್ವರನೂ ದಶರಥರಾಯನೂ ರಾಮಲಕ್ಷ್ಮಣಭರತಶತ್ರುಘ್ನರೂ ಋಷಿಗಳೂ ಮಾತ್ರವೇ ಚೈತನ್ಯವಿದ್ದಂತೆ ಕಂಡರು. ಉಳಿದ ಸಮಸ್ತ ಜನಸಮೂಹವೂ ನಿಶ್ಚೇಷ್ಟವಾಗಿ ತೋರಿತು. ಆ ಸಮಯದಲ್ಲಿ ದಶರಥರಾಯನು ಯಾರಿಗೂ ಕಣ್ಣಿಕುವುದಕ್ಕೆ ಅಶಕ್ಯನಾಗಿ, ಪ್ರಳಯಕಾಲಾಗ್ನಿಯ ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದಂಥವನಾಗಿ, ಸಮಸ್ತ ಜನರಿಗೂ ನೋಡುವುದಕ್ಕೆ ಅಶಕ್ಯನಾಗಿ, ಬಿಳುಪಾದ ಜಡೆಗಳನ್ನು ಧರಿಸಿಕೊಂಡಿದ್ದ ಸಮಸ್ತ ಕ್ಷತ್ರಿಯಕುಲಸಂಹಾರಕನಾದ ಪರಶುರಾಮನನ್ನು

ಕಂಡನು. ಕೈಲಾಸಪರ್ವತದಂತೆ ಯಾರಿಗೂ ಕೆಣಕುವುದಕ್ಕೆ ಶಕ್ಯನಲ್ಲದವನಾಗಿ ಹೆಗಲಮೇಲೆ ಕೊಡಲಿಯನ್ನೂ ಮಿಂಚುಬಳ್ಳಿಯೋಪಾದಿಯಲ್ಲಿದ್ದ ಧನುಸ್ಸನ್ನೂ ಧರಿಸಿಕೊಂಡು ಕೈಯಲ್ಲಿ ಅಂಬನ್ನು ಹಿಡಿದುಕೊಂಡು ತ್ರಿಪುರಸಂಹಾರವನ್ನು ಮಾಡಿದ ಪರಮೇಶ್ವರನ ಹಾಗೆ ಭಯಂಕರನಾಗಿ ಪ್ರಳಯಕಾಲದಲ್ಲಿ ಪ್ರಜ್ವಲಿಸುವ ಯಜ್ಞಪುರುಷನಿಗೆ ಸಮಾನನಾಗಿದ್ದ ಪರಶುರಾಮನನ್ನು ಋಷಿಗಳು ಕಂಡರು. ಅವರು ಆಗ ಜಪಹೋಮಗಳನ್ನು ಮಾಡತೊಡಗಿದರು. ಪೂರ್ವದಲ್ಲಿ ತನ್ನ ತಂದೆಯಾದ ಜಮದಗ್ನಿ ಮುನೀಶ್ವರನನ್ನು ಕ್ಷತ್ರಿಯನಾದ ಕಾರ್ತವೀರ್ಯನು ಕೊಲ್ಲಲು ಆ ಕೋಪದಿಂದ ಕ್ಷತ್ರಿಯವಂಶವನ್ನು ಸಂಹಾರ ಮಾಡಿ ಕ್ಷತ್ರಿಯರ ರಕ್ತದಿಂದ ಪಿತೃಗಳಿಗೆ ತರ್ಪಣವನ್ನು ಕೊಟ್ಟು ಕೃತಕೃತ್ಯನಾಗಿ ತಪಸ್ಸನ್ನು ಕೈಗೊಂಡು ಪುನಃ ಕ್ಷತ್ರಿಯರನ್ನು ಸಂಹಾರ ಮಾಡಬೇಕೆಂದು ಬಂದ ಪರಶುರಾಮನನ್ನು ಕಂಡು ಆ ಋಷಿಗಳು ಆತನನ್ನೆದುರುಗೊಂಡು ಅರ್ಘ್ಯಪಾದ್ಯಾದಿಸತ್ಕಾರಗಳನ್ನು ಮಾಡಿ ಸತ್ಕರಿಸಿದರು. ಪರಶುರಾಮನು ಆ ಋಷಿಗಳು ಮಾಡಿದ ಸತ್ಕಾರಗಳನ್ನು ಕೈಗೊಂಡು ರಾಮನನ್ನು ಎದುರಿಸಿ ನಿಂತನು. ಅದನ್ನು ನೋಡಿ ಮಹಾಬಲಪರಾಕ್ರಮವುಳ್ಳ ದಶರಥರಾಯನ ಚತುರಂಗಬಲವು ಭಯಪಟ್ಟು ಕಂಗೆಡುತ್ತಿತ್ತು.



## ೭೫ ನೆಯ ಅಧ್ಯಾಯ

## ಪರಶುರಾಮನ ಆತ್ಮಶ್ಲಾಘನೆ

ಆಮೇಲೆ ಪರಶುರಾಮನು ಶ್ರೀರಾಮನನ್ನು ಕುರಿತು "ಎಲೈ ದಾಶರಥಿಯೆ, ಅತ್ಯದ್ಭುತವಾದ ನಿನ್ನ ಪರಾಕ್ರಮವನ್ನು ಕೇಳಿದೆನು. ನೀನು ಜನಕರಾಯನ ಮನೆಯಲ್ಲಿದ್ದ ಬಿಲ್ಲನ್ನು ಮುರಿದ ವೃತ್ತಾಂತವು ಅತ್ಯದ್ಭುತವಾದುದು ; ಇಷ್ಟೆಂದು ಹೇಳುವುದಕ್ಕೆ ಶಕ್ಯವಲ್ಲದ್ದು. ಅದನ್ನು ನಾನು ಕೇಳಿ ನಿನ್ನ ಸಮೀಪಕ್ಕೆ ಬಂದೆನು. ನೀನು ನನ್ನ ಕೈಯಲ್ಲಿರುವ ಮಹಾಭಯಂಕರವಾದ ಈ ಬಿಲ್ಲಿಗೆ ಹೆದೆಯನ್ನೇರಿಸಿ ಕಿವಿಯವರೆಗೆ ಎಳೆದು ಅಂಬನ್ನು ಹೂಡಿ ನಿನ್ನ ಸಾಮರ್ಥ್ಯವನ್ನು ನನಗೆ ತೋರಿಸು. ನೀನು ನನ್ನ ಬಿಲ್ಲಿಗೆ ಹೆದೆಯನ್ನೇರಿಸಿ ಟಂಕಾರವನ್ನು ಮಾಡಿದರೆ ನಾನು ಈ ಧನುಸ್ಸನ್ನು ಬಿಟ್ಟು ನಿನ್ನೊಡನೆ ದ್ವಂದ್ವಯುದ್ಧವನ್ನು ಮಾಡಿ ನನ್ನ ಸಾಮರ್ಥ್ಯವನ್ನು ತೋರಿಸುವೆನು. ನೀನು ನನ್ನ ಬಿಲ್ಲಿಗೆ ಹೆದೆಯನ್ನೇರಿಸಲಾರದಿದ್ದರೂ ನನ್ನ ಜೊತೆಯಲ್ಲಿ ಮುಷ್ಟಿಯುದ್ಧವನ್ನು ಮಾಡಲು ಭೀತನಾದ ಪಕ್ಷದಲ್ಲಿಯೂ ನನಗೆ ಸೋತದ್ದಾಗಿ ನುಡಿ. ಅಲ್ಲದಿದ್ದರೆ ನಿನ್ನ ಕೂಡ ಮುಷ್ಟಿಯುದ್ಧವನ್ನು ಮಾಡುವೆನು" ಎಂದು ನುಡಿದನು.

ಅದನ್ನು ಕೇಳಿ ದಶರಥರಾಯನು ಕಂಗೆಟ್ಟು ಕೈಮುಗಿದುಕೊಂಡು ಅತ್ಯಂತ ವಿನಯೋಕ್ತಿಯಿಂದ "ಎಲೈ ಪರಶುರಾಮನೆ, ನೀನು ಬ್ರಾಹ್ಮಣನು. ಮಹಾಕೀರ್ತಿವಂತನು. ಕ್ಷಾತ್ರಕೋಪವನ್ನು ಬಿಟ್ಟು ಶಾಂತಿಮಾರ್ಗವನ್ನು ಕೈಗೊಂಡೆ. ವೇದಾಧ್ಯಯನಸಂಪನ್ನರಾದ ಭೃಗುವಂಶದ ಬ್ರಾಹ್ಮಣರ ಕುಲದಲ್ಲಿ ಜನಿಸಿದೆ. ಆದಕಾರಣ ಬಾಲಕರಾದ ನನ್ನ ಮಕ್ಕಳಿಗೆ ಅಭಯವನ್ನು ಕೊಟ್ಟು ರಕ್ಷಿಸು. ಅದಲ್ಲದೆ ನೀನು ಯಾಗವನ್ನು ಮಾಡಿ ಆ ಯಾಗದಲ್ಲಿ ದಕ್ಷಿಣೆಯಾಗಿ ಸಕಲ ಭೂಮಿಯನ್ನು ಕಾಶ್ಯಪನಿಗೆ ಕೊಟ್ಟು ಶಸ್ತ್ರಸಂನ್ಯಾಸವನ್ನು ಮಾಡಿದೆ. ದೇವೇಂದ್ರನ ಸಭೆಯಲ್ಲಿ, ಇನ್ನು ಕ್ಷತ್ರಿಯರನ್ನು ಎಂದಿಗೂ ಸಂಹರಿಸುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿ, ಮಹೇಂದ್ರಪರ್ವತದಲ್ಲಿ

ಆಶ್ರಮವನ್ನು ಮಾಡಿಕೊಂಡು ತಪಸ್ಸನ್ನು ಮಾಡುತಲಿದ್ದೀಯೆ. ಅಂಥ ನೀನು ನನ್ನನ್ನು ನಾಶ ಮಾಡುವುದಕ್ಕೆ ಯತ್ನಮಾಡುತ್ತಿದ್ದೀಯೆ. ಈ ಬಾಲಕರಾದ ನನ್ನ ಮಕ್ಕಳನ್ನು ಕೊಂದೆಯಾದರೆ ನಾವು ಯಾರೂ ಜೀವಿಸಲಾರೆವು" ಎಂದು ನುಡಿದನು.

ಆ ಮಾತನ್ನು ಲೆಕ್ಕಿಸದೆ ಮಹಾಪರಾಕ್ರಮಶಾಲಿಯಾದ ಪರಶುರಾಮನು ಶ್ರೀರಾಮನನ್ನು ಕುರಿತು ತುಟಿಗಳನ್ನು ಅದುರಿಸುತ್ತ "ಎಲೈ ದಶರಥರಾಮನೆ, ಪೂರ್ವದಲ್ಲಿ ದೇವತೆಗಳಿಂದ ನಿರ್ಮಿಸಲ್ಪಟ್ಟ ಎರಡು ಬಿಲ್ಲುಗಳು ಲೋಕದಲ್ಲಿ ಮಹಾಪೂಜ್ಯವಾದವು, ಮಹಾಸತ್ತ್ವವುಳ್ಳವು. ಮಹಾದೃಢವಾದವು. ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟಂಥವು. ಆ ಎರಡು ಬಿಲ್ಲುಗಳಲ್ಲಿ ಒಂದು ಬಿಲ್ಲನ್ನು ತ್ರಿಪುರಸಂಹಾರ ಮಾಡುವುದಕ್ಕಾಗಿ ದೇವತೆಗಳು ಪರಮೇಶ್ವರನಿಗೆ ಕೊಟ್ಟರು. ಆ ಬಿಲ್ಲನ್ನು ನೀನು ಮುರಿದೆ! ಎರಡನೆಯ ಬಿಲ್ಲನ್ನು ದೇವತೆಗಳು ನಾರಾಯಣನಿಗೆ ಕೊಟ್ಟರು. ಆ ವಿಷ್ಣು ಧನಸ್ಸೇ ಈಗ ನನ್ನ ಕೈಯಲ್ಲಿರುವುದು. ಹೊಂಬಣ್ಣವುಳ್ಳ ಈ ಧನುಸ್ಸು ಜನಕರಾಯನ ಮನೆಯಲ್ಲಿ ನೀನು ಮುರಿದ ಪರಮೇಶ್ವರನ ಬಿಲ್ಲಿಗೆ ಸಮಾನವಾದಂಥಾದ್ದು. ವಿಶ್ವಕರ್ಮನು ನಿರ್ಮಿಸಿದ ಎರಡು ಬಿಲ್ಲುಗಳಲ್ಲಿ ಒಂದನ್ನು ದೇವತೆಗಳು ಪರಮೇಶ್ವರನಿಗೂ ಮತ್ತೊಂದನ್ನು ನಾರಾಯಣನಿಗೂ ಕೊಟ್ಟರು. ಪೂರ್ವದಲ್ಲಿ ದಕ್ಷಬ್ರಹ್ಮನ ಯಾಗದಲ್ಲಿ ದೇವತೆಗಳು ಪರಮೇಶ್ವರ ನಾರಾಯಣರ ಬಲಾಬಲಗಳನ್ನು ನೋಡಬೇಕೆಂದು ಬ್ರಹ್ಮದೇವನಿಗೆ ಹೇಳಿದರು. ನಾರಾಯಣನಿಗೂ ಪರಮೇಶ್ವರನಿಗೂ ಭೇದಹುಟ್ಟಿಸಬೇಕೆಂದು ಆಲೋಚನೆಯನ್ನು ಮಾಡುತ್ತಿರಲು ಆ ದೇವತೆಗಳ ಅಭಿಪ್ರಾಯವನ್ನು ತಿಳಿದು ಬ್ರಹ್ಮದೇವನು ನಾರಾಯಣನಿಗೂ ಪರಮೇಶ್ವರನಿಗೂ ಅನ್ಯೋನ್ಯ ವೈರವನ್ನು ಹುಟ್ಟಿಸಿದನು. ಆಗ ಪರಮೇಶ್ವರನಿಗೂ ನಾರಾಯಣನಿಗೂ ಅನ್ಯೋನ್ಯ ಯುದ್ಧ ವಾಯಿತು. ಅವರು ಒಬ್ಬರನ್ನೊಬ್ಬರು ಜಯಿಸಬೇಕೆಂಬ ಬುದ್ಧಿಯಿಂದ ಅತ್ಯದ್ಭುತವಾದ ಯುದ್ಧವನ್ನು ಮಾಡಿದರು. ಆ ಸಮಯದಲ್ಲಿ ಮಹಾಪರಾಕ್ರಮವುಳ್ಳ ಈಶ್ವರನ ಕೈಯಲ್ಲಿದ್ದ ಧನುಸ್ಸು ಸಿಡಿದು ಬಿತ್ತು. ಆಗ ಪರಮೇಶ್ವರನು ಅತ್ಯಂತ ಕೋಪಯುಕ್ತನಾಗಲು ನಾರಾಯಣನು ತನ್ನ ಹುಂಕಾರದಿಂದ ಆತನ ಕೋಪವನ್ನು ನಿಲ್ಲಿಸಿದನು. ಈ ಪ್ರಕಾರದಲ್ಲಿ ನಾರಾಯಣನಿಗೂ ಪರಮೇಶ್ವರನಿಗೂ ಅತಿಭಯಂಕರವಾದ ಯುದ್ಧವಾಗುತ್ತಿರಲು ದೇವತೆಗಳೂ ಋಷಿಗಳೂ ಸಿದ್ಧಚಾರಣರೂ ಕೂಡಿಕೊಂಡು ಅವರಿಬ್ಬರನ್ನೂ ಕುರಿತು 'ನಿಮ್ಮಿಬ್ಬರ ಯುದ್ಧದಿಂದ ಸಮಸ್ತ ಲೋಕಗಳು ಕಂಗೆಡುತ್ತಿವೆ. ಈ ಯುದ್ಧವನ್ನು ಸಾಕುಮಾಡಬೇಕು' ಎಂದು ಪ್ರಾರ್ಥಿಸಿದರು. ಆ ಮಾತನ್ನು ಕೇಳಿ ನಾರಾಯಣನೂ ಪರಮೇಶ್ವರನೂ ಯುದ್ಧವನ್ನು ನಿಲ್ಲಿಸಿದರು. ಆಮೇಲೆ ಇಂದ್ರಾದಿ ದೇವತೆಗಳು ಪರಮೇಶ್ವರನ ಬಿಲ್ಲು ಸಿಡಿದದ್ದನ್ನು ಕಂಡು ನಾರಾಯಣನೇ ಅಧಿಕನೆಂದು ತಿಳಿದು ನಾರಾಯಣನನ್ನೂ ಪರಮೇಶ್ವರನನ್ನೂ ಪೂಜಿಸಿ ಅಭಿವಂದಿಸಿ ಅವರಿಂದ ಬೀಳ್ಕೊಂಡು ಬ್ರಹ್ಮದೇವನನ್ನು ಕೂಡಿಕೊಂಡು ತಮ್ಮ ತಮ್ಮ ಲೋಕಗಳಿಗೆ ಹೋದರು. ದೇವತೆಗಳಲ್ಲಿ ಶ್ರೇಷ್ಠನಾದ ಪರಮೇಶ್ವರನು ತನ್ನ ಧನುಸ್ಸನ್ನು ವಿದೇಹದೇಶದ ರಾಯರ ವಂಶದಲ್ಲಿ ಜನಿಸಿದ ದೇವರಾತನೆಂಬ ರಾಜಋಷಿಗೆ ಶರಸಹಿತವಾಗಿ ಕೊಟ್ಟನು. ದೇವರಾತನು ಪರಮೇಶ್ವರನು ಕೊಟ್ಟ ಬಿಲ್ಲನ್ನು ಶಿರಸಾವಹಿಸಿ ಮಹಾಪ್ರಸಾದವೆಂದು ತೆಗೆದುಕೊಂಡು ಪೂಜೆಮಾಡಿಕೊಂಡಿದ್ದನು. ಆ ಬಿಲ್ಲನ್ನು ನೀನು ಮುರಿದೆ. ಅದು ಹಾಗಿರಲಿ. ಈ ವೈಷ್ಣವಧನುಸ್ಸು ನನ್ನ ಕೈಗೆ ಬಂದ ವೃತ್ತಾಂತವನ್ನು ಹೇಳುತ್ತೇನೆ ಕೇಳು: ಪೂರ್ವದಲ್ಲಿ ನಾರಾಯಣನು ನಮ್ಮ ವಂಶದಲ್ಲಿ ಜನಿಸಿದ ಋಚೀಕನೆಂಬ ಮುನೀಶ್ವರನಿಗೆ ಇದನ್ನು ಅಸ್ತ್ರೋಪಸಂಹಾರಪೂರ್ವಕವಾಗಿ ಕೊಟ್ಟನು. ಋಚೀಕ ಮುನೀಶ್ವರನು ತನ್ನ ಮಗನಾದ ಪ್ರತಿಕರ್ಮನಿಗೆ ಕೊಟ್ಟನು. ಪ್ರತಿಕರ್ಮನು ತನ್ನ ಮಗನಾದ

ಜಮದಗ್ನಿಮುನೀಶ್ವರನಿಗೆ ಕೊಟ್ಟನು. ನನ್ನ ತಂದೆಯಾದ ಜಮದಗ್ನಿಮುನೀಶ್ವರನು ಶಸ್ತ್ರಸಂನ್ಯಾಸವನ್ನು ಮಾಡಿ ತಪಸ್ಸು ಮಾಡುತ್ತಿದ್ದನು. ಆಗ ಕಾರ್ತವೀರ್ಯನು ಆತನ ವಶದಲ್ಲಿ ಒಂದು ಕಾಮಧೇನುವು ಇದ್ದುದನ್ನು ಕೇಳಿ ಆತನ ಸಮೀಪಕ್ಕೆ ಬಂದು ಆ ಕಾಮಧೇನುವನ್ನು ಕೇಳಿದನು. ಆ ಮುನೀಶ್ವರನು ಅದನ್ನು ಕೊಡದಿರಲು ಹೀನಬುದ್ಧಿಯಿಂದ ಆತನನ್ನು ಕೊಂದು ಆ ಧೇನುವನ್ನು ಅಪಹರಿಸಿಕೊಂಡು ಹೋದನು. ಆಮೇಲೆ ನನ್ನ ತಾಯಿಯಾದ ರೇಣುಕಾದೇವಿಯು ಪತಿವಿಯೋಗದಿಂದುಂಟಾದ ದುಃಖದಿಂದ ನನ್ನ ಇದಿರಾಗಿ ಎದೆಯನ್ನು ಬಡಿದುಕೊಂಡು ಬರುತ್ತಿದ್ದಳು. ನಾನು ಆಕೆಯ ಉರಸ್ತಾಡನಗಳನ್ನು ಇಪ್ಪತ್ತೊಂದುಸಾರಿ ಎಣಿಸಿ 'ನಿಲ್ಲು! ಇಪ್ಪತ್ತೊಂದುಸಾರಿ ಕ್ಷತ್ರಿಯವಂಶವನ್ನು ಸಂಹಾರಮಾಡುತ್ತೇನೆ!' ಎಂದು ಪ್ರತಿಜ್ಞೆಯನ್ನು* ಮಾಡಿ ನನ್ನ ತಾಯಿಯನ್ನು ಸಂತವಿಟ್ಟು ಅತಿಕೋಪದಿಂದ ಈ ಬಿಲ್ಲನ್ನು ತೆಗೆದುಕೊಂಡು ಕ್ಷತ್ರಿಯರೆಲ್ಲರನ್ನೂ ಇಪ್ಪತ್ತೊಂದುಸಾರಿ ಸಂಹರಿಸಿದೆನು. ಹೀಗೆ ಸಮಸ್ತ ಭೂಮಂಡಲವನ್ನೂ ಕಶ್ಯಪನಿಗೆ ಕೊಟ್ಟು ಸಮಸ್ತ ದೇವಋಷಿಗಳಿಂದಲೂ ಸೇವಿಸಲ್ಪಟ್ಟ ಮಹೇಂದ್ರಪರ್ವತದಲ್ಲಿ ಆಶ್ರಮವನ್ನು ಮಾಡಿಕೊಂಡು ತಪಸ್ಸನ್ನು ಮಾಡುತ್ತಿದ್ದೆನು. ಈ ಪ್ರಕಾರದಲ್ಲಿ ವಿರಕ್ತನಾಗಿ ತಪಸ್ಸನ್ನು ಮಾಡಿಕೊಂಡಿದ್ದ ನಾನು ಅಂತರಿಕ್ಷಮಾರ್ಗದಲ್ಲಿ ಸಮಸ್ತ ದೇವತೆಗಳೂ 'ಅಕಟಕಟಾ! ದಶರಥರಾಮನು ಜನಕರಾಯನ ಮನೆಯಲ್ಲಿದ್ದ ಈಶ್ವರನ ಬಿಲ್ಲನ್ನು ಮುರಿದನು. ಆ ಬಿಲ್ಲು ಯಾರಿಗೂ ಸಾಧ್ಯವಲ್ಲದಿತ್ತು. ರಘುನಾಥನು ಮಹಾಪರಾಕ್ರಮಿಯು. ಆತನಿಗೆ ಸಮಾನರಾದ ಬಲವಂತರಿಲ್ಲ' ಎಂದು ನುಡಿದದ್ದನ್ನು ಕೇಳಿ ಅತ್ಯಂತ ಕೋಪಾವಿಷ್ಟನಾಗಿ ನಿನ್ನ ಸಮೀಪಕ್ಕೆ ಬಂದೆನು. ನನ್ನ ಪಿತೃಪಿತಾಮಹಪ್ರಪಿತಾಮಹಾದಿಗಳಿಂದ ಬಂದದ್ದಾಗಿ ಸಮಸ್ತ ಶತ್ರುವೃಂದಗಳೂ ಜಯಿಸಬಲ್ಲ ನನ್ನ ಕೈಯಲ್ಲಿರುವ ಈ ವಿಷ್ಣುಧನುಸ್ಸಿಗೆ ನೀನು ಕ್ಷತ್ರಧರ್ಮವನ್ನು ತಾಳಿ ಹೆದೆಯನ್ನೇರಿಸಿ ಅಂಬನ್ನು ಹೂಡುವುದಕ್ಕೆ ಸಮರ್ಥನಾಗಿದ್ದರೆ ಇದನ್ನು ತೆಗೆದುಕೊ. ಇಲ್ಲದಿದ್ದರೆ ನನ್ನ ಸಂಗಡ ದ್ವಂದ್ವಯುದ್ಧಕ್ಕೆ ಸಿದ್ಧನಾಗು" ಎಂದು ನುಡಿದನು.



## ೭೬ ನೆಯ ಅಧ್ಯಾಯ

## ಶ್ರೀ ರಾ ಮ ನು ಪ ರ ಶು ರಾ ಮ ನ ನ್ನು ಜ ಯಿ ಸಿ ದ್ದು

ಅನಂತರ ತನ್ನ ತಂದೆಯಾದ ದಶರಥರಾಯನ ಸಮೀಪದಲ್ಲಿ ಹೆಚ್ಚು ಮಾತುಗಳನ್ನು ನುಡಿಯಬಾರದೆಂದು ಮೌನದಲ್ಲಿದ್ದ ಶ್ರೀರಾಮನು ಪರಶುರಾಮನ ವಾಕ್ಯಗಳು ಮುಗಿದಮೇಲೆ ಆತನನ್ನು ಕುರಿತು "ಎಲೈ ಪರಶುರಾಮನೆ, ನಾನು ಬಿಲ್ಲನ್ನು ಮುರಿದ ವೃತ್ತಾಂತವನ್ನು ಕೇಳಿದ್ದಾಗಿ ನುಡಿದೆ. ನೀನು ಹೇಳಿದ್ದು ಸತ್ಯವು. ನೀನು ಮಾಡಿದ ಕೃತ್ಯಗಳೆಲ್ಲವನ್ನೂ ಕೇಳಿದ್ದೇನೆ. ನೀನು ನಿನ್ನ ತಂದೆಯ ಋಣವನ್ನು ತೀರಿಸಬೇಕೆಂದು ಅನೇಕ ಕ್ಷತ್ರಿಯರನ್ನು ಸಂಹಾರಮಾಡಿದ್ದಾಗಿ ನುಡಿದೆ. ಆ ಕ್ಷತ್ರಿಯರು ನಮ್ಮ ವಂಶದವರಲ್ಲದೆ ಇತರರಲ್ಲ. ಹಾಗಾದರೂ ಆ ಮಾತನ್ನು ತಡೆದುಕೊಂಡೆನು. ಎಲೈ ಪರಶುರಾಮನೆ, ನನ್ನನ್ನು ಕ್ಷತ್ರಧರ್ಮದಲ್ಲಿ ಆಸಕ್ತನೂ ಪರಾಕ್ರಮಿಯೂ

---

* ರೇಣುಕೆಯು ಎದೆ ಬಡಿದುಕೊಳ್ಳುವುದನ್ನು ಎಣಿಸಿ ಇಪ್ಪತ್ತೊಂದುಸಾರಿ ಕ್ಷತ್ರಿಯಸಂಹಾರ ಮಾಡುತ್ತೇನೆಂಬ ಪರಶುರಾಮನ ಪ್ರತಿಜ್ಞೆಯು ಉಪಲಬ್ಧವಾದ ರಾಮಾಯಣಗಳಲ್ಲಿ ಕಂಡುಬರುವುದಿಲ್ಲ.

ಅಲ್ಲವೆಂದು ಅರಿಯದೆ ನುಡಿದೆ. ಆದ್ದರಿಂದ ಈಗ ನನ್ನ ಪರಾಕ್ರಮವನ್ನು ನೋಡು" ಎಂದು ನುಡಿದನು. ಕೂಡಲೇ ಕೋಪಾಟೋಪದಿಂದ ಪರಶುರಾಮನ ಕೈಯಲ್ಲಿದ್ದ ಬಿಲ್ಲನ್ನೂ ಬಾಣವನ್ನೂ ತೃಣಪ್ರಾಯವಾಗಿ ಬಗೆದು ಅವನ್ನು ತೆಗೆದುಕೊಂಡು ಆ ಬಿಲ್ಲಿಗೆ ಹೆದೆಯನ್ನೇರಿಸಿ ಪರಶುರಾಮನನ್ನು ನೋಡಿ "ಎಲೈ ಪರಶುರಾಮನೆ, ನೀನು ಬ್ರಾಹ್ಮಣನಾದ್ದರಿಂದಲೂ ವಿಶ್ವಾಮಿತ್ರನ ಸಂಬಂಧಿ* ಯಾದ್ದರಿಂದಲೂ ನಿನ್ನ ಅಪರಾಧವನ್ನು ಸಹಿಸಿಕೊಂಡೆನು. ಆದ್ದರಿಂದ ನನ್ನ ಬಾಣಪ್ರಯೋಗ ದಿಂದ ನಿನ್ನನ್ನು ಸಂಹರಿಸಬಾರದು. ರಾಮಬಾಣವು ಸಮಸ್ತ ಶತ್ರುಸಂಘವನ್ನೂ ಜಯಿಸು ವಂಥಾದ್ದು. ವಿಷ್ಣುದೇವತಾಕವಾದ ಬಾಣವು ವ್ಯರ್ಥವಾಗಲಾರದು. ಆದಕಾರಣ ಈ ಬಾಣದಿಂದ ನಿನ್ನ ಸಂಚಾರವನ್ನು ನಿಲ್ಲಿಸಲೊ—ಅಲ್ಲದಿದ್ದರೆ ನೀನು ಅನೇಕ ಸತ್ಕರ್ಮಗಳನ್ನು ಮಾಡಿ ಸಂಪಾದಿಸಿರುವ ಪುಣ್ಯಲೋಕಗಳನ್ನು ಕೆಡಿಸಲೊ ? ಈ ಎರಡು ಕೃತ್ಯಗಳೊಳಗೆ ಒಂದನ್ನು ನಿನ್ನ ಮನಸ್ಸಿಗೆ ಬಂದಹಾಗೆ ನನ್ನ ಬಾಣಕ್ಕೆ ಗುರಿಮಾಡದಿದ್ದರೆ ಶತ್ರುವರ್ಗವನ್ನು ಸಂಹರಿಸುವಂಥ ನನ್ನ ಬಾಣವು ವ್ಯರ್ಥವಾಗಿ ನೆಲಕ್ಕೆ ಬೀಳದು" ಎಂದು ಕೋಪಿಸಿಕೊಂಡು ನುಡಿದನು.

ಆ ಸಮಯದಲ್ಲಿ ಇಂದ್ರಾದಿದೇವತೆಗಳೂ ಋಷಿಗಳೂ ಬ್ರಹ್ಮದೇವನನ್ನು ಮುಂದಿಟ್ಟು ಕೊಂಡು, ಬಿಲ್ಲಿನಲ್ಲಿ ಅಂಬನ್ನು ಹೂಡಿಕೊಂಡು ಸನ್ನದ್ಧನಾಗಿದ್ದ ಶ್ರೀರಾಮನ ಸಮೀಪಕ್ಕೆ ಬಂದು ಆತನ ಅದ್ಭುತವಾದ ಚರಿತ್ರವನ್ನು ಕಂಡು ವಿಸ್ಮಯದಿಂದ ನೋಡುತ್ತಿದ್ದರು ! ಪರಶುರಾಮನು ರಘುನಾಥನ ಪರಾಕ್ರಮಾತಿಶಯದಿಂದ ಕಾಂತಿಗುಂದಿ ಶಕ್ತಿಹೀನನಾಗಿ ಪ್ರಜ್ಞೆತಪ್ಪಿ ಆತನನ್ನೇ ನೋಡುತ್ತ ತನ್ನ ಕೋಪವು, ಬಡಬಾಗ್ನಿಜ್ವಾಲೆಯಿಂದ ಗಂಗಾಪ್ರವಾಹದ ವೇಗವು ಶಮನವಾಗುವ ರೀತಿಯಲ್ಲಿ ಶಾಂತವಾಗಲು, ಲಜ್ಜಿತನಾಗಿ ಮುಖಕಾಂತಿಗುಂದಿ ಕಮಲದಳಾಕ್ಷನಾದ ಶ್ರೀರಾಮನನ್ನು ಕುರಿತು "ಶ್ರೀರಾಮ, ನನ್ನನ್ನು ರಕ್ಷಿಸು. ನನ್ನ ಮಾತನ್ನು ಕೇಳು ; ನಾನು ರಾಜಸೂಯಯಾಗವನ್ನು ಮಾಡಿ ಆ ಯಾಗದಲ್ಲಿ ದಕ್ಷಿಣಾಂಗವಾಗಿ ಸಮಸ್ತ ಭೂಮಂಡಲವನ್ನೂ ಕಶ್ಯಪನಿಗೆ ಕೊಟ್ಟೆನು. ಆ ಮುನಿಯು ತನಗೆ ಕೊಟ್ಟ ಭೂಮಿಯಲ್ಲಿ ನಾಸಿರಕೂಡದೆಂದು ನನ್ನನ್ನು ಹೊರಡಿಸಿದನು. ಆತನ ಮಾತು ಗುರು ವಾಕ್ಯವೆಂದು ತಿಳಿದು ಆತನ ಮುಂದೆ ಭೂಮಿಯಲ್ಲೆಲ್ಲಿಯೂ ಇರುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿದೆನು. ನೀನು ನಿನ್ನ ಬಾಣದಿಂದ ನನ್ನ ಸಂಚಾರವನ್ನು ನಿಲ್ಲಿಸಿದರೆ ನನಗೆ ಮತ್ತೊಂದು ಗತಿಯಿಲ್ಲ. ಆದಕಾರಣ, ನಾನು ತಪಸ್ಸನ್ನು ಮಾಡಿ ಅನೇಕ ಪುಣ್ಯಲೋಕಗಳನ್ನು ಸಂಪಾದಿಸಿದ್ದೇನೆ— ಆ ಪುಣ್ಯಲೋಕಗಳ ಮಾರ್ಗವನ್ನು ನಿನ್ನ ಅಮೋಘವಾದ ಬಾಣದಿಂದ ನಿಲ್ಲಿಸು. ಕಾಲವಿಳಂಬವನ್ನು ಮಾಡಬೇಡ. ನೀನು ಅನೇಕ ಪಾಪರಾಶಿಗಳನ್ನು ತೊಲಗಿಸುವಂಥವನು. ನೀನು ಪುರುಷೋತ್ತಮ ನಾದ ವಿಷ್ಣು. ನಿನ್ನ ವೃತ್ತಾಂತವನ್ನು ಈ ನಿನ್ನ ಬಿಲ್ಲನ್ನು ಹಸ್ತಕ್ಕೆ ತೆಗೆದುಕೊಂಡಾಗಲೇ ತಿಳಿದೆನು ! ನಿನಗೆ ಅನೇಕ ಶ್ರೇಯಸ್ಸಾಗಲಿ ! ಸಮಸ್ತ ದೇವತೆಗಳೂ ಋಷಿಗಳೂ ಬ್ರಹ್ಮದೇವನು ಮೊದಲಾದವರೂ ಯುದ್ಧರಂಗದಲ್ಲಿ ಪ್ರತಿಯಿಲ್ಲದ ನಿನ್ನನ್ನು ನೋಡುತ್ತಾ ಇದ್ದಾರೆ. ತ್ರೈಲೋಕ್ಯಾಧಿ ಪತಿಯಾದ ನಿನ್ನಿಂದ ನಾನು ಪರಾಜಿತನಾದರೆ ನನಗೆ ಅವಮಾನವಲ್ಲ. ನಿನ್ನ ಬಾಣವನ್ನು ಪ್ರಯೋಗಿಸು. ನಿನ್ನ ಬಾಣದ ಪ್ರಯೋಗಾನಂತರ ನಾನು ಸ್ವಸ್ಥಚಿತ್ತನಾಗಿ ಮಹೇಂದ್ರಪರ್ವತಕ್ಕೆ ಹೋಗುತ್ತೇನೆ" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ತನ್ನ ಅಮೋಘವಾದ ಬಾಣವನ್ನು ಪ್ರಯೋಗಿಸಿ, ಪರಶುರಾಮನು ತನ್ನ ಯಜ್ಞಾದಿಪುಣ್ಯಕರ್ಮಗಳಿಂದ ಸಂಪಾದಿಸಿದ್ದ ಪುಣ್ಯಲೋಕವನ್ನು ಸಂಹರಿಸಿ

---

* ವಿಶ್ವಾಮಿತ್ರರ ಅಕ್ಕನಾದ ಸತ್ಯವತಿಯ ಮಗ ಜಮದಗ್ನಿ. ಆತನ ಮಗ ಪರಶುರಾಮ.

ದನು. ಅನಂತರ ಪರಶುರಾಮನು ಶ್ರೀರಾಮನನ್ನು ಅನೇಕ ಮಧುರೋಕ್ತಿಗಳಿಂದ ಸಂತವಿಟ್ಟು ಪ್ರದಕ್ಷಿಣವನ್ನು ಮಾಡಿ ಅನುಮತಿಯನ್ನು ಪಡೆದು ಮಹೇಂದ್ರಪರ್ವತಕ್ಕೆ ಹೋದನು. ಆಮೇಲೆ ಸಮಸ್ತ ದಿಕ್ಕುಗಳೂ ಪ್ರಸನ್ನವಾದವು. ಅವರಿಬ್ಬರ ದ್ವಂದಯುದ್ಧಸನ್ನಾಹದಿಂದ ಕಂಗೆಟ್ಟು ಮೊರೆಯಿಡುತ್ತಿದ್ದ ಸಮಸ್ತ ಲೋಕದವರೂ ಮನೋಹರ್ಷವನ್ನು ಪಡೆದರು. ಬ್ರಹ್ಮದೇವನು ಮೊದಲಾದ ನಿಖಿಲ ದೇವತೆಗಳೂ ಋಷಿಗಳೂ ಧನುರ್ವಿದ್ಯಾವಿಶಾರದನಾದ ರಘುನಾಥನನ್ನು "ಜಯ ಜಯ!" ಎಂದು ಕೊಂಡಾಡುತ್ತಿದ್ದರು.



## ೭೭ ನೆಯ ಅಧ್ಯಾಯ

## ಶ್ರೀರಾಮನು ಅಯೋಧ್ಯಾಪಟ್ಟಣದಲ್ಲಿ ಸಂತೋಷದಿಂದ ವಿಹರಿಸಿದ್ದು

ಆಮೇಲೆ ಶ್ರೀರಾಮನು ಪರಶುರಾಮನು ಕೊಟ್ಟ ಬಿಲ್ಲನ್ನು ವರುಣದೇವನಲ್ಲಿರಿಸಿ ವಸಿಷ್ಠ ಮಹಾಮುನಿ ಮೊದಲಾದ ಋಷಿಗಳಿಗೆ ನಮಸ್ಕಾರವನ್ನು ಮಾಡಿ ಪರಶುರಾಮನ ಭಯದಿಂದ ಕಂಗೆಟ್ಟಿದ್ದ ತನ್ನ ತಂದೆಯಾದ ದಶರಥರಾಯನನ್ನು ಮಧುರೋಕ್ತಿಗಳಿಂದ ಸಂತವಿಟ್ಟು "ತಂದೆಯೆ, ಪರಶುರಾಮನು ಮಹೇಂದ್ರಪರ್ವತಕ್ಕೆ ಹೋದನು. ನಮ್ಮ ಸೇನೆಗಳು ಚಾತಕಪಕ್ಷಿಗಳು ಮಳೆಯ ಹನಿಯನ್ನು ಬಯಸುವ ರೀತಿಯಲ್ಲಿ ನಿನ್ನ ಅನುಜ್ಞೆಯನ್ನು ಬಯಸುತ್ತಿವೆ. ನೀನು ಅವರಿಗೆ ಅಪ್ಪಣೆಯನ್ನು ಕೊಟ್ಟು ಅಯೋಧ್ಯಾಪಟ್ಟಣಕ್ಕೆ ತೆರಳುವಂತೆ ಮಾಡು" ಎಂದು ಬಿನ್ನಹಮಾಡಿದನು.

ಪರಶುರಾಮನು ಹೋದ ವೃತ್ತಾಂತವನ್ನು ಕೇಳಿ ದಶರಥರಾಯನು ಅತಿಹರ್ಷಪಟ್ಟು ತನ್ನ ಕುಮಾರನಾದ ಶ್ರೀರಾಮನನ್ನು ಪುತ್ರವಾತ್ಸಲ್ಯದಿಂದ ತಬ್ಬಿಕೊಂಡು ಶಿರಸ್ಸನ್ನಾಘ್ರಾಣಿಸಿ ತಮಗೆ ಪುನರ್ಜನ್ಮವಾಯಿತೆಂದು ಮನಸ್ಸಿನಲ್ಲಿ ತಿಳಿದನು. ಸೇನೆಯನ್ನು ಅಯೋಧ್ಯಾಪಟ್ಟಣಕ್ಕೆ ಹೊರಡಿಸಿ ತನ್ನ ಕುಮಾರರಾದ ರಾಮಲಕ್ಷ್ಮಣ ಭರತಶತ್ರುಘ್ನರನ್ನೂ ಸೊಸೆಯರಾದ ಸೀತಾದೇವಿ, ಊರ್ಮಿಳಾ, ಮಾಂಡವಿ, ಶ್ರುತಕೀರ್ತಿ ಎಂಬ ನಾಲ್ಕುಮಂದಿಯನ್ನೂ ವಸಿಷ್ಠಮುನಿ ಮೊದಲಾದ ಋಷಿಗಳನ್ನೂ ಕರೆದುಕೊಂಡು ರಂಗವಲ್ಲಿ ಕುಸುಮ ತೋರಣ ಪತಾಕೆ ಮೊದಲಾದವುಗಳಿಂದ ಅಲಂಕರಿಸಲ್ಪಟ್ಟ ರಾಜಬೀದಿಗಳಿಂದ ಒಪ್ಪುತ್ತಿರುವ ಅಯೋಧ್ಯಾಪಟ್ಟಣವನ್ನು ತಲುಪಿದನು; ಪುರಜನರೂ ವರ್ತಕರೂ ಅನೇಕ ಪಾಠಕರೂ ಸತ್ಪುರುಷರಾದ ಬ್ರಾಹ್ಮಣರೂ ಅನೇಕ ಸುಮಂಗಲಿಯರೂ ಇದಿರುಗೊಂಡು ಬರಲು, ಪುರಪ್ರವೇಶಮಾಡಿದನು; ರಾಜಬೀದಿಯನ್ನು ತನ್ನ ತನುಕಾಂತಿಯಿಂದ ಬೆಳಗಿಸುತ್ತ ತಮ್ಮನ್ನು ನೋಡುವ ತವಕದಿಂದಿದ್ದ ಸಮಸ್ತ ಜನರಿಗೂ ಸಮೀಪದರ್ಶನೋತ್ಸವವನ್ನಿತ್ತು ಮನ್ನಿಸುತ್ತ, ಹಿಮವತ್ಪರ್ವತದೋಪಾದಿಯಲ್ಲಿ ಶುಭವಾಗಿದ್ದ ತನ್ನ ಅರಮನೆಯನ್ನು, ಶುಭಲಗ್ನ ಶುಭನಕ್ಷತ್ರದಲ್ಲಿ, ಅನೇಕೋತ್ಸವದಿಂದ ಸುಮಂಗಲಿಯರು ಎತ್ತಿದ್ದ ಮುತ್ತಿನ ಆರತಿಗಳನ್ನು ನೋಡುತ್ತ ಅವರ ಆಶೀರ್ವಾದಗಳನ್ನು ಕೈಕೊಳ್ಳುತ್ತ ತನ್ನ ಅಂತಃಪುರದ ಸ್ತ್ರೀಯರಾದ ಕೌಸಲ್ಯಾದೇವಿ ಮೊದಲಾದ ಸ್ತ್ರೀಯರ ಪ್ರತ್ಯುತ್ಥಾನಾದಿಗಳಿಂದ ಸತ್ಕರಿಸಲ್ಪಟ್ಟು ಅತಿಸಂತೋಷದಿಂದ ಪ್ರವೇಶಿಸಿದನು! ಆಗ ಕೌಸಲ್ಯಾದೇವಿ ಮೊದಲಾದ ದಶರಥರಾಯನ ಸ್ತ್ರೀಯರು ಸೀತಾದೇವಿ ಮೊದಲಾದ ಸೊಸೆಯರನ್ನು ಬಂದು ನೋಡಿದರು. ಅನಂತರ ಅವರು ಸೊಸೆಯರ ನಮಸ್ಕಾರಗಳನ್ನೂ ಶ್ರೀರಾಮನು ಮೊದಲಾದ ಮಕ್ಕಳ ವಂದನೆಗಳನ್ನೂ ಕೈಗೊಂಡು

ಅವರಿಗೆ ಆಶೀರ್ವಾದಗಳನ್ನು ಮಾಡಿದರು. ಆಮೇಲೆ ಅಲಂಕಾರವನ್ನು ಮಾಡಿಕೊಂಡು ಸ್ತ್ರೀಯರ ಮಾಂಗಲ್ಯಾರ್ಥವಾದ ಶೋಭಾನಪದಗಳೂ ಶಿಷ್ಟರಾದ ಬ್ರಾಹ್ಮಣರ ಮಂಗಳ ಸೂಕ್ತಗಳೂ ಮೊರೆಯುತ್ತಿರಲು. ತಮ್ಮ ಮಕ್ಕಳನ್ನೂ ಸೊಸೆಯರನ್ನೂ ಜೊತೆಮಾಡಿ ತಮ್ಮ ಮನೆಗಳಲ್ಲಿರುವ ಇಷ್ಟದೇವತೆಗಳಿಗೂ ಗುರುಹಿರಿಯರಿಗೂ ನಮಸ್ಕಾರಗಳನ್ನು ಮಾಡಿಸಿದರು. ತಮ್ಮ ಮನೆಗಳಲ್ಲಿ ಗೃಹಪ್ರವೇಶಮಾಡಿಸಿ ಬ್ರಾಹ್ಮಣರಿಗೆ ಗೋದಾನ ಮೊದಲಾದ ದಾನಗಳಿಂದ ಸಂತರ್ಪಣೆ ಯನ್ನು ಮಾಡಿಸಿ ಸಂತೋಷದಿಂದಿರುತ್ತಿದ್ದರು. ದಶರಥರಾಯನ ಕುಮಾರರು ತಮ್ಮ ಸ್ತ್ರೀಯರ ಜೊತೆಯಲ್ಲಿ ಇಷ್ಟಾಲಾಪವಿಹಾರಗಳಿಂದ ಸುಖದಿಂದಿದ್ದರು. ಆ ಸ್ತ್ರೀಯರು ತಮ್ಮ ತಮ್ಮ ಪತಿಗಳಿಗೆ ಇಷ್ಟವಸ್ತುಗಳನ್ನು ಕೊಡುತ್ತ ತತ್ಕಾಲೋಚಿತವಾದ ವಿನಯೋಕ್ತಿಗಳಿಂದ ಅತ್ಯಂತ ಸತ್ಕಾರಗಳನ್ನು ಮಾಡಿಕೊಂಡು ಸಂತೋಷದಿಂದಿದ್ದರು. ಶ್ರೀರಾಮನೇ ಮೊದಲಾದ ಕುಮಾರರು ಅನೇಕ ಭಯಭಕ್ತಿ ವಿನಯಾದಿ ಸದ್ಗುಣಗಳಿಂದ ತಮ್ಮ ತಂದೆತಾಯಿಗಳನ್ನು ಸೇವಾಸತ್ಕಾರಗಳಿಂದ ಸಂತೋಷಪಡಿಸಿಕೊಂಡಿದ್ದರು.

ಒಂದು ದಿವಸ ಕಮಲದಳಲೋಚನನೂ ಶ್ಯಾಮಲವರ್ಣನೂ ಸತ್ಕಾರ್ಯಪ್ರವರ್ತಕನೂ ಮಹಾಪರಾಕ್ರಮಿಯೂ ಪರಸೈನ್ಯಸಂಹಾರಕನೂ ವಿನಯಾದಿಸದ್ಗುಣಗಳೇ ಒಂದು ದೇಹಾ ಕಾರವಾಗಿ ಅವತರಿಸಿದವೋ ಎಂಬಂತೆಯೂ ಇದ್ದ ಭರತನು ತನ್ನ ತಂದೆಯಾದ ದಶರಥರಾಯನಿಗೆ ನಮಸ್ಕಾರವನ್ನು ಮಾಡಬೇಕೆಂದು ಬರಲು ಆತನು ಭರತನನ್ನು ಕುರಿತು "ಭರತ, ಕೇಕಯರಾಯನ ಮಗನಾದ ನಿನ್ನ ಸೋದರಮಾವ ಯುಧಾಜಿತ್ತುರಾಯನು ನಿನ್ನನ್ನು ಕರೆದುಕೊಂಡು ಹೋಗ ಬೇಕೆಂದು ಮಿಥಿಲಾಪಟ್ಟಣಕ್ಕೆ ಬಂದನು. ಆತನನ್ನು ವಿವಾಹವಾಗುವ ಪರ್ಯಂತ ನಿಲ್ಲಬೇಕೆಂದು ಪ್ರಾರ್ಥಿಸಿ ನಿಲ್ಲಿಸಿಕೊಂಡೆನು. ನೀನು ಆತನ ಕೂಡ ಆತನ ಊರಿಗೆ ಹೋಗಿ ಅವನ ಇಷ್ಟವನ್ನು ಸಲ್ಲಿಸು" ಎಂದು ಹೇಳಿದನು.

ಭರತನು ಮಹಾಪ್ರಸಾದವೆಂದು ಆ ಮಾತನ್ನು ಅಂಗೀಕರಿಸಿ ದಶರಥರಾಯನಿಗೆ ನಮಸ್ಕರಿಸಿ ತನ್ನ ಅಣ್ಣನಾದ ರಘುನಾಥನಿಗೆ ಅಭಿವಂದಿಸಿ ತಮ್ಮನಾದ ಲಕ್ಷ್ಮಣನನ್ನು ತಬ್ಬಿಕೊಂಡು ತನ್ನ ತಂದೆಯ ಅಪ್ಪಣೆಯನ್ನು ಪಡೆದು ತಮ್ಮನಾದ ಶತ್ರುಘ್ನನೊಡನೆ ಸೋದರಮಾವನ ಸಂಗಡ ತೆರಳುವುದಕ್ಕೆ ಸಿದ್ಧನಾದನು. ಆಗ ಆತನು ತನ್ನ ಸೋದರಳಿಯನಾದ ಭರತನನ್ನೂ ಶತ್ರುಘ್ನನನ್ನೂ ಕರೆದುಕೊಂಡು ತನ್ನ ಪಟ್ಟಣಕ್ಕೆ ಹೋಗಿ ತನ್ನ ತಂದೆಯಾದ ಕೇಕಯರಾಯನಿಗೆ ಅಭಿವಂದಿಸಿದನು. ಆ ರಾಯನು ತನ್ನ ಮೊಮ್ಮಕ್ಕಳಾದ ಭರತಶತ್ರುಘ್ನರನ್ನು ಕಂಡು ಅತಿಸಂತೋಷವಟ್ಟು ಅವರಿಗೆ ಅನೇಕ ಸತ್ಕಾರಗಳನ್ನು ಮಾಡಿಕೊಂಡಿದ್ದನು.

ಇತ್ತಲಾ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನೊಡನೆ ತನ್ನ ತಂದೆಯಾದ ದಶರಥ ರಾಯನಿಗೆ ಅಭಿವಂದಿಸಿ ಕಾಲೋಚಿತವಾದ ಸೇವಾಸತ್ಕಾರಗಳಿಂದ ಆತನಿಗೆ ಸಂತೋಷವನ್ನುಂಟು ಮಾಡಿಕೊಂಡು ಆತನ ಅಪ್ಪಣೆಯಿಂದ ಪಟ್ಟಣದ ವಾರುಪತ್ಯವನ್ನು ವಿಚಾರಿಸಿಕೊಂಡಿದ್ದನು. ಮತ್ತು ತಮ್ಮ ತಾಯಿಗಳಿಗೆ ಬೇಕಾದ ವಸ್ತುಗಳನ್ನು ತರಿಸಿಕೊಡುತ್ತ, ವಸಿಷ್ಠಮುನಿ ಮೊದಲಾದ ಗುರುಗಳಿಗೆ ಸತ್ಕಾರಗಳನ್ನು ಮಾಡಿಕೊಂಡು, ಶಿಷ್ಟರಾದ ಬ್ರಾಹ್ಮಣರನ್ನು ಪರಿಪಾಲಿಸಿಕೊಂಡಿದ್ದನು. ದಶರಥ ರಾಯನು ತನ್ನ ಮಕ್ಕಳಾದ ರಾಮಲಕ್ಷ್ಮಣರ ಗುಣಶೀಲಾದಿಗಳಿಂದ ಸಂತುಷ್ಟನಾಗಿದ್ದನು. ಆ ಕಾಲದಲ್ಲಿ ದಶರಥರಾಯನ ರಾಜ್ಯದಲ್ಲಿದ್ದ ಸಮಸ್ತ ಜನರೂ ಭೂಲೋಕಕ್ಕೆ ಬ್ರಹ್ಮದೇವನೇ ಪ್ರಜಾಪಾಲನಾರ್ಥವಾಗಿ ರಾಮಾವತಾರವಾಗಿ ಅವತರಿಸಿದನು ಎಂದು ಹರ್ಷದಿಂದ ಸುಖವಾಗಿದ್ದರು.

ಈ ರೀತಿಯಲ್ಲಿ ಶ್ರೀರಾಮನು ಸಮಸ್ತ ಪ್ರಜೆಗಳನ್ನೂ ರಕ್ಷಿಸಿಕೊಂಡು ಸೀತಾಸಮೇತನಾಗಿ ಅನೇಕ ಸತ್ಕಥಾವಿನೋದಗಳಿಂದ ಸೀತೆಯನ್ನು ಸಂತೋಷಪಡಿಸುತ್ತ ಅವಳ ಮನಸ್ಸಿನಲ್ಲಿದ್ದ ಇಷ್ಟ ವಸ್ತುಗಳನ್ನು ತರಿಸಿಕೊಡುತ್ತಿದ್ದನು. ಸೀತಾದೇವಿಯು ರೂಪಲಾವಣ್ಯ ವಿನಯಾದಿ ಗುಣಗಳಿಂದ ಸಂಪನ್ನನಾದ ರಘುನಾಥನಿಗೆ ತನ್ನ ತಂದೆಯು ತನ್ನನ್ನು ಕೊಟ್ಟು ವಿವಾಹಮಾಡಿದ್ದಕ್ಕೆ ಮನಸ್ಸಿನಲ್ಲಿ ಅತ್ಯಂತ ಪ್ರೀತಿಯನ್ನು ಪಡೆದಳು. ತನ್ನ ಪತಿಗೆ ನಿತ್ಯವೂ ಹರ್ಷವನ್ನುಂಟುಮಾಡುತ್ತ ಆತನ ಮನಃಪ್ರೀತಿಯನ್ನು ತನ್ನ ಅಂತರಂಗದಲ್ಲಿ ತಿಳಿದು ಪರಮಪುರುಷನಿಗೆ ಮಹಾಲಕ್ಷ್ಮಿಯು ಸೇವೆ ಮಾಡುವ ರೀತಿಯಲ್ಲಿ ಹರ್ಷದಿಂದ ಪತಿಸೇವೆಯನ್ನು ಮಾಡಿಕೊಂಡಿದ್ದಳು. ರಘುನಾಥನು ಕ್ಷತ್ರಿಯೋತ್ತಮನಾದ ಜನಕರಾಯನ ಮಗಳಾದ ಮಹಾಮನೋಹರೆಯಾದ ಸೀತಾದೇವಿಯೊಡನೆ ಕೂಡಿ ಲಕ್ಷ್ಮೀಸಮೇತನಾದ ನಾರಾಯಣನಂತೆ ಅತ್ಯಂತ ಮನೋಹರನಾಗಿ ಒಪ್ಪುತ್ತಿದ್ದನು.

ಈ ಪ್ರಕಾರದಲ್ಲಿ ಆದಿಪುರುಷನಾದ ನಾರಾಯಣನ ಅವತಾರಸ್ವರೂಪನಾಗಿ ಅತ್ಯಂತ ಮನೋಹರನಾದ ಶ್ರೀರಾಮನು ವಿಶ್ವಾಮಿತ್ರಮುನೀಶ್ವರನ ಯಾಗವನ್ನು ನಿರ್ವಿಘ್ನವಾಗಿ ರಕ್ಷಿಸಿ, ಶತ್ರುಗಳಾದ ರಾಕ್ಷಸರನ್ನು ಸಂಹರಿಸಿ, ಅಹಲ್ಯಾದೇವಿಯ ಶಾಪವಿಮೋಚನವನ್ನು ಮಾಡಿ, ಜನಕ ರಾಯನ ಮನೆಯಲ್ಲಿ ಪರಮೇಶ್ವರನ ಧನುಸ್ಸನ್ನು ಮುರಿದು, ಸೀತಾದೇವಿಯನ್ನು ವಿವಾಹವಾಗಿ, ಬರುವ ಮಾರ್ಗಮಧ್ಯದಲ್ಲಿ ಅಡ್ಡಗಟ್ಟಿ ಯುದ್ಧಕ್ಕೆ ಬಂದ ಪರಶುರಾಮನನ್ನು ಜಯಿಸಿ ಸೀತಾ ಸಮೇತನಾಗಿ ಅತಿಸಂಭ್ರಮದಿಂದ ಅಯೋಧ್ಯಾಪಟ್ಟಣವನ್ನು ಪ್ರವೇಶಿಸಿ, ಸಮಸ್ತಪ್ರಜೆಗಳನ್ನೂ ಧರ್ಮಶಾಸ್ತ್ರದಲ್ಲಿ ಹೇಳಿರುವಂತೆ ಪರಿಪಾಲಿಸಿಕೊಂಡು ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಮಾಡಿ ಕೊಂಡು ತಾಯಿತಂದೆಗಳಿಗೆ ಸತ್ಕಾರಗಳನ್ನು ಮಾಡಿಕೊಂಡು ಸುಖವಾಗಿದ್ದನು.

ಇಂತು ಉತ್ತಮ ಕ್ಷತ್ರಿಯ ಕುಲೋದ್ಭವ, ಬಿರುದೆಂತೆಂಬರ ಗಂಡ, ಗಜಬೇಂಟೆಕಾರ, ಸಮಸ್ತ ಶತ್ರು ಸಂಘ
ಜೀಮೂತ ಜಂಝಾಮಾರುತ, ಪ್ರತ್ಯರ್ಥಿ ಪೃಥ್ವೀಪತಿ ವನ ದಾವಾನಲ, ಸಮಸ್ತ ವಿದ್ವಜ್ಜನ ಸಮುದಾಯ
ಕಲ್ಪಭೂಜಾತ, ಆಶ್ರಿತಜನ ಸುರಧೇನು, ಕಾಮಿನೀಜನ ನೂತನ ಪಂಚಬಾಣ, ಚೌಷಷ್ಟಿ
ಕಲಾಪ್ರವೀಣ, ಮಹಿಷಾಪುರವರಾಧೀಶ, ಚಾಮರಾಜವಂಶೋದ್ಧಾರಕ, ತಿಮ್ಮರಾಜ
ತನೂಜ ನರಸರಾಜ ಗರ್ಭಮುಗ್ಧ ಸಿಂಧು ಸುಧಾಕರ, ಶ್ರೀಲಕ್ಷ್ಮೀಕಾಂತ ಪಾದಾರ
ವಿಂದ ದ್ವಂದ್ವನಿಷ್ಯಂದಾಮಂದ ಮಕರಂದ ಬಿಂದುಸಂದೋಹಾಸ್ವಾದನ
ನಿರ್ಮಲೀಕೃತಾಂತಃಕರಣ, ತ್ರಿಣಯನೇಶ್ವರ ಸದ್ಭಕ್ತಿಯುಕ್ತ
ಮಹಾಬಲಾಚಲಾವಾಸ, ಶ್ರೀಚಾಮುಂಡಿಕಾಂಬಾಸದ್ಭಕ್ತಿ
ಮಂಡಿತರಾದ ಶ್ರೀಚಾಮರಾಜ ಒಡೆಯರವರಿಂದ
ಲೋಕೋಪಕಾರಾರ್ಥವಾಗಿ ಬುಧಜನಸಮ್ಮತಿ
ಯಿಂದ ಕರ್ಣಾಟಕಭಾಷಾವಚನ ರಚನೆ
ಯಾದ ಶ್ರೀಚಾಮರಾಜೋಕ್ತಿ
ವಿಲಾಸವೆಂಬ ಕನ್ನಡ
ರಾಮಾಯಣದಲ್ಲಿ

# ಬಾಲಕಾಂಡವು ಸಮಾಪ್ತವಾಯಿತು

**ಕಾಕಪಕ್ಷಧರಂ ದೇವಂ ವನಮಾಲಾವಿಭೂಷಿತಮ್ ।**
**ಶ್ರೀರಾಮಂ ಬಾಲಕಂ ಧ್ಯಾಯೇದ್ಬಾಲಕಾಂಡೇ ಮುನೀಶ್ವರ ॥**



ಕಲ್ಯಾಣಾನಾಂ ನಿಧಾನಂ ಕಲಿಮಲಮಥನಂ ಪಾವನಂ ಪಾವನಾನಾಂ
ಪಾಥೇಯಂ ಯನ್ಮುಮುಕ್ಷೋಃ ಸಪದಿ ಪರಪದಪ್ರಾಪ್ತಯೇ ಪ್ರಸ್ಥಿತಸ್ಯ ।
ವಿಶ್ರಾಮಸ್ಥಾನಮೇಕಂ ಕವಿವರವಚಸಾಂ ಜೀವನಂ ಸಜ್ಜನಾನಾಂ
ಬೀಜಂ ಧರ್ಮದ್ರುಮಸ್ಯ ಪ್ರಭವತು ಭವತಾಂ ಭೂತಯೇ ರಾಮನಾಮ ॥

ಕಲ್ಯಾಣೋಲ್ಲಾಸಸೀಮಾ ಕಲಯತು ಕುಶಲಂ ಕಾಲಮೇಘಾಭಿರಾಮಾ
ಕಾಚಿತ್ಸಾಕೇತಧಾಮಾ ಭವಗಹನಗತಿಕ್ಲಾಂತಿಹಾರಿಪ್ರಣಾಮಾ ।
ಸೌಂದರ್ಯಹ್ರೀಣಕಾಮಾ ಧೃತಜನಕಸುತಾಸಾದರಾಪಾಂಗದಾಮಾ
ದಿಕ್ಷು ಪ್ರಖ್ಯಾತಭೂಮಾ ದಿವಿಷದಭಿನುತಾ ದೇವತಾ ರಾಮನಾಮಾ ॥

ಕನಕನಿಕಷಭಾಸಾ ಸೀತಯಾಲಿಂಗಿತಾಂಗೋ
ನವಕುವಲಯದಾಮಶ್ಯಾಮವರ್ಣಾಭಿರಾಮಃ ।
ಅಭಿನವ ಇವ ವಿದ್ಯುನ್ಮಂಡಿತೋ ಮೇಘಖಂಡಃ
ಶಮಯತು ಮಮ ತಾಪಂ ಸರ್ವತೋ ರಾಮಚಂದ್ರಃ ॥

ಶ್ರೀಃ





ಶ್ರೀರಾಮಚಂದ್ರಾಯ ನಮಃ

# ಅಯೋಧ್ಯಾಕಾಂಡ

## ೧ ನೆಯ ಅಧ್ಯಾಯ

## ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಲು ದಶರಥನ ಆಲೋಚನೆ

ಭರತನು ತನ್ನ ಸೋದರಮಾವನ ಮನೆಗೆ ಹೋಗುವಾಗ ಶತ್ರುಸಂಹಾರಕನಾದ ಶತ್ರುಘ್ನನನ್ನು ಅತ್ಯಂತ ಪ್ರೀತಿಯಿಂದ ತನ್ನೊಡನೆ ಕೇಕಯದೇಶಕ್ಕೆ ಕರೆದುಕೊಂಡು ಹೋದನು. ಅಶ್ವಪತಿಯಾದ ಯುಧಾಜಿತ್ತೆಂಬ ಸೋದರಮಾವನು ಪುತ್ರನ ಮರ್ಯಾದೆಯಲ್ಲಿ ಇಷ್ಟವಾದ ವಸ್ತುಗಳನ್ನು ಕೊಟ್ಟು ಸತ್ಕರಿಸಲು ಅಲ್ಲಿ ಸುಖವನ್ನು ಅನುಭವಿಸಿಕೊಂಡಿದ್ದನು. ವೃದ್ಧನಾದ ತನ್ನ ತಂದೆ ದಶರಥ ರಾಯನನ್ನು ನೆನೆಯುತ್ತಾ ಮಾವನ ಮನೆಯಲ್ಲಿರಲು, ಅಯೋಧ್ಯಾಪಟ್ಟಣದಲ್ಲಿ ಅತ್ಯಂತ ಕೀರ್ತಿ ವಂತನಾದ ದಶರಥರಾಯನು ಇಂದ್ರ ವರುಣರಿಗೆ ಸಮಾನರಾದ ಭರತಶತ್ರುಘ್ನರು ಸ್ಥಳಾಂತರಕ್ಕೆ ಹೋಗಿ ಹೇಗೆ ಇದ್ದಾರೆಯೋ ಎಂದು ಚಿಂತಿಸುತ್ತಿದ್ದನು. ದಶರಥರಾಯನಿಗೆ ಪುರುಷಶ್ರೇಷ್ಠರಾದ ನಾಲ್ವರು ಕುಮಾರರೂ ಆತನ ಶರೀರದ ನಾಲ್ಕು ಭುಜಗಳೋ ಎಂಬಂತೆ ಅತ್ಯಂತ ಪ್ರೀತಿಯನ್ನುಂಟು ಮಾಡುವಂಥವರು. ಆ ನಾಲ್ಕುಮಂದಿ ಕುಮಾರರಲ್ಲಿ ಶ್ರೀರಾಮನು ದಶರಥನಿಗೆ ಅತ್ಯಂತ ಪ್ರೀತಿಪಾತ್ರನು. ಆತನು ಪೂರ್ವದಲ್ಲಿ ರಾವಣನ ಉಪದ್ರವದಿಂದ ಕಂಗೆಟ್ಟ ಇಂದ್ರಾದಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟು ಜಗದ್ಧಿತಾರ್ಥವಾಗಿ ಮನುಷ್ಯಲೋಕದಲ್ಲಿ ಅವತರಿಸಿದ ಪರಮಪುರುಷನಾದ ನಾರಾಯಣನು. ಅತ್ಯಂತ ತೇಜಸ್ವಿಯಾದ ಆ ಶ್ರೀರಾಮನಿಂದ ಕೌಸಲ್ಯಾದೇವಿಯು ದೇವೇಂದ್ರನಿಂದ ಸಂತೋಷಪಡಿಸಲ್ಪಟ್ಟ ದೇವಮಾತೆಯಾದ ಅದಿತಿಯೋಪಾದಿಯಲ್ಲಿ ಒಪ್ಪುತ್ತಿದ್ದಳು. ಶ್ರೀರಾಮನು ಅತ್ಯಂತ ಸೌಂದರ್ಯವುಳ್ಳವನು. ಮಹಾಪರಾಕ್ರಮಿಯು. ಅಸೂಯೆ ಇಲ್ಲದವನು. ಅನೇಕ ಸದ್ಗುಣಗಳಿಂದ ತನ್ನ ತಂದೆಯಾದ ದಶರಥರಾಯನಿಗೆ ಸಮಾನನಾದವನು. ಯಾವಾಗಲೂ ಶಾಂತಗುಣವುಳ್ಳವನು. ಸಂಭಾಷಣೆ ಮಾಡುವಲ್ಲಿ ಮೃದುನುಡಿಗಳನ್ನೇ ನುಡಿಯುವವನು. ನಿಷ್ಠುರವಾದ ನುಡಿಯನ್ನು ಆಡುವವರಿಗೂ ನಿಷ್ಠುರವಾಗಿ ಪ್ರತ್ಯುತ್ತರವನ್ನು ಕೊಡುವವನಲ್ಲ

ಅವನು ಮಹಾಪರಾಕ್ರಮಿ. ಮಹಾಸಾಹಸಿಯಾದರೂ ಗರ್ವವಿಲ್ಲದವನು. ವಿದ್ವಾಂಸ. ಬಲ್ಲವರನ್ನು ಸತ್ಕರಿಸುವವನು. ಪ್ರಜೆಗಳಿಗೆ ಸಂತೋಷವನ್ನುಂಟು ಮಾಡಿ ತಾನೂ ಸಂತೋಷ ಪಡುವವನು. ಮಹಾಕೃಪಾಳು. ಕ್ರೋಧವಿಲ್ಲದವನು. ದೇವಬ್ರಾಹ್ಮಣರ ಪೂಜೆಯನ್ನು ಮಾಡುವವನು. ಬಡವರಲ್ಲಿ ಅತ್ಯಂತ ದಯೆಯುಳ್ಳವನು. ಧರ್ಮರಹಸ್ಯವನ್ನು ಬಲ್ಲವನು. ಯಾವಾಗಲೂ ನಿಯತನಾಗಿರುವವನು. ಅತ್ಯಂತ ಶುಚಿಯಾಗಿರುವವನು. ಕುಲೋಚಿತಾಚಾರದಲ್ಲಿ ನಿಷ್ಠೆಯುಳ್ಳವನು. ಕ್ಷತ್ರಿಯಧರ್ಮವನ್ನೇ ಉತ್ತಮವೆಂದು ಭಾವಿಸುವವನು. ಕೀರ್ತಿಯೇ ಸ್ವರ್ಗ ಸಾಧನವೆಂದೆಣಿಸುವವನು. ಅಪಕೀರ್ತಿಯಲ್ಲಿ ಪರಾಙ್ಮುಖನಾಗಿರುವವನು. ಧರ್ಮವಿರುದ್ಧವಾದ ವಾರ್ತೆಯಲ್ಲಿ ರುಚಿಯಿಲ್ಲದವನು. ಉತ್ತರ ಪ್ರತ್ಯುತ್ತರಗಳಲ್ಲಿ ಬೃಹಸ್ಪತಿಗೆ ಸಮಾನನು. ರೋಗ ರಹಿತನಾಗಿಯೂ ತರುಣನಾಗಿಯೂ ನುಡಿಯಲ್ಲಿ ಜಾಣ್ಮೆಯುಳ್ಳವನಾಗಿಯೂ ದೇಶಕಾಲಜ್ಞನಾಗಿಯೂ ಮಹಾಪೌರುಷಶಾಲಿಯಾಗಿಯೂ ಸತ್ಪುರುಷನಾಗಿಯೂ ಪ್ರಜಾನುರಂಜಕವಾದ ಸದ್ಗುಣ ಗಳಿಂದೊಪ್ಪುವವನು. ಸದ್ವಿದ್ಯಾನಿರತನು. ವಿಧ್ಯುಕ್ತವಾಗಿ ವೇದವೇದಾಂಗಗಳನ್ನು ಬಲ್ಲವನು. ಧನುರ್ವೇದದಲ್ಲಿಯೂ ಮಂತ್ರಾಸ್ತ್ರಪ್ರಯೋಗದಲ್ಲಿಯೂ ಬಹುಚತುರನು. ಸತ್ಕುಲಪ್ರಸೂತನು. ಧರ್ಮಶಾಸ್ತ್ರಜ್ಞರಾದ ಹಿರಿಯರಿಂದ ಶಿಕ್ಷಿಸಲ್ಪಟ್ಟವನು. ಧರ್ಮಕಾಮಾರ್ಥಗಳೆಂಬ ಮೂರು ಪುರುಷಾರ್ಥಗಳ ರಹಸ್ಯವನ್ನು ಬಲ್ಲವನು. ಅತ್ಯಂತ ಎಚ್ಚರವುಳ್ಳವನು. ಲೌಕಿಕಾಚಾರ ಸಮಯಾಚಾರ ಗಳಲ್ಲಿ ಸಂಶಯವಿಲ್ಲದವನು. ಮಹಾವಿಚಕ್ಷಣನಾದವನು. ಧರ್ಮಬುದ್ಧಿಯುಳ್ಳವನು. ಅತ್ಯಂತ ಮನೋಹರವಾದ ಆಕಾರವುಳ್ಳವನು. ಗೋಪ್ಯವಾದ ರಾಜಕಾರ್ಯಾಲೋಚನೆಯುಳ್ಳವನು. ವ್ಯರ್ಥವಾಗದ ಕ್ರೋಧಹರ್ಷಗಳುಳ್ಳವನು. ತ್ಯಾಗಮಾಡುವ ಕಾಲವಿಶೇಷವನ್ನು ಬಲ್ಲವನು. ದೇವಬ್ರಾಹ್ಮಣರಲ್ಲಿ ದೃಢವಾದ ಭಕ್ತಿಯುಳ್ಳವನು. ಆಗದ ಕಾರ್ಯವನ್ನು ಕೈಹಿಡಿಯುವವನಲ್ಲ. ದುರ್ವಾಕ್ಯವನ್ನು ನುಡಿಯುವವನಲ್ಲ. ಆಲಸ್ಯವಿಲ್ಲದವನು. ಮೈಮರೆತಿರುವವನಲ್ಲ. ತನ್ನ ದೋಷ ಪರದೋಷಗಳನ್ನು ವಿಚಾರಿಸುವವನು. ತನಗೆ ಮಾಡಿದ ಉಪಕಾರವನ್ನು ಮರೆಯದವನು. ಮನುಷ್ಯರ ತಾರತಮ್ಯವನ್ನು ಬಲ್ಲವನು. ಯಥಾನ್ಯಾಯವಾಗಿ ಮಿತ್ರರ ಸಂಗ್ರಹಾನುಗ್ರಹಗಳಲ್ಲಿ ಸಮರ್ಥನು. ಶತ್ರುಗಳ ನಿಗ್ರಹಾನುಗ್ರಹದಕ್ಷನು. ಆದಾಯ ಬರುವ ಕಾರ್ಯಗಳ ಉಪಾಯವನ್ನು ಬಲ್ಲವನು. ಆದಾಯ ವೆಚ್ಚಗಳ ಗುಣಾವಗುಣಗಳನ್ನು ಬಲ್ಲವನು. ಪರಸ್ಪರವಿರುದ್ಧವಾದ ಶಾಸ್ತ್ರ ಗಳಲ್ಲಿಯೂ ನಿಶ್ಚಿತವಾದ ಜ್ಞಾನವಿದ್ದವನು. ಆಲಸ್ಯವಿಲ್ಲದೆ ಅರ್ಥ ಧರ್ಮಗಳನ್ನು ಸಂಗ್ರಹಿಸುವವನು. ರಮ್ಯವಾದ ಚಿತ್ರಗಳ ಮತ್ತು ಶಿಲ್ಪಗಳ ವಿಭಾಗಗಳನ್ನು ಬಲ್ಲವನು. ಆನೆ ಕುದುರೆಗಳನ್ನೇರು ವುದರಲ್ಲಿಯೂ ಅವುಗಳನ್ನು ತಿದ್ದುವುದರಲ್ಲಿಯೂ ಮಹಾವಿಚಕ್ಷಣನು. ಲೋಕದಲ್ಲಿ ಧನುರ್ವೇದ ವನ್ನು ಬಲ್ಲವರೆಲ್ಲರಿಗೂ ಶ್ರೇಷ್ಠನು. ಮಹಾರಥಿಕನು. ಶರಣುಹೊಕ್ಕವರನ್ನು ಕೈಬಿಡುವವನಲ್ಲ. ಸೇನೆ ಯನ್ನು ನಡೆಯಿಸುವುದರಲ್ಲಿಯೂ ಪರಿಪಾಲಿಸುವದರಲ್ಲಿಯೂ ಸಮರ್ಥನು. ರಣರಂಗದಲ್ಲಿ ಕುಪಿತ ನಾದರೆ ಇಂದ್ರಾದಿದೇವತೆಗಳಿಗೂ ಅಸಾಧ್ಯನು. ಕ್ರೋಧವಿಲ್ಲದವನು. ರಾಜ್ಯಕೋಶಸಂಗ್ರಹದಲ್ಲಿ ಇಚ್ಛೆಯುಳ್ಳವನು. ಯಾರಿಗೂ ಅವಮಾನ ಮಾಡದವನು. ಪ್ರತಿಜ್ಞೆಯನ್ನು ಬಿಟ್ಟು ಸಮಯಕ್ಕೆ ತಕ್ಕಹಾಗೆ ನಡೆಯುವವನಲ್ಲ. ಸಮಸ್ತ ಪ್ರಾಣಿಗಳಿಗೂ ಸಮನಾದವನು. ಕ್ಷಮೆಯಲ್ಲಿ ಭೂಮಿಗೆ ಸಮಾನನು. ಬುದ್ಧಿಯಲ್ಲಿ ಬೃಹಸ್ಪತಿಗೆ ಸಮಾನನು. ತನ್ನ ತಂದೆಗೆ ಸಂತೋಷವುಂಟುಮಾಡುವ ಚರಿತ್ರವುಳ್ಳವನು. ಹೀಗೆ ಅನೇಕ ಸದ್ಗುಣಗಳಿಂದ ಸಹಸ್ರಕಿರಣಗಳುಳ್ಳ ಸೂರ್ಯನೋಪಾದಿ ಯಲ್ಲೊಪ್ಪುತ್ತ ಶತ್ರುಗಳಿಗೆ ಸಹಿಸಲು ಶಕ್ಯವಲ್ಲದ ಪರಾಕ್ರಮವುಳ್ಳ ಅಷ್ಟದಿಕ್ಪಾಲಕರಿಗೆ ಸಮಾನನಾದ ಶ್ರೀರಾಮನು ತನಗೆ ಪತಿಯಾಗಬೇಕೆಂದು ಭೂದೇವಿಯು ಬಯಸಿದಳು.

ಈ ಪ್ರಕಾರದಲ್ಲಿ ಸದ್ಗುಣಸಂಪನ್ನನಾದ ಶ್ರೀರಾಮನನ್ನು ನೋಡಿ ವೃದ್ಧನಾದ ದಶರಥ ರಾಯನು ತನ್ನ ಮನಸ್ಸಿನಲ್ಲಿ "ನಾನು ಜೀವಿಸಿರುವಾಗಲೇ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಬೇಕು. ನನ್ನ ಪ್ರಿಯಪುತ್ರನೂ ಸರ್ವಭೂತದಯಾಪರನೂ ಮಳೆಯನ್ನು ಕರೆಯುವ ಪರ್ಜನ್ಯನ ಸಮಾನನಾದವನೂ ಪರಾಕ್ರಮದಲ್ಲಿ ದೇವೇಂದ್ರನಿಗೂ ಧೈರ್ಯದಲ್ಲಿ ಹಿಮವತ್ಪರ್ವತಕ್ಕೂ ಸಮಾನನಾದವನೂ ನನಗಿಂತಲೂ ಅಧಿಕ ಗುಣಸಂಪನ್ನನೂ ಆದ ಶ್ರೀರಾಮನಲ್ಲಿ ಸಮಸ್ತ ಭೂಭಾರವನ್ನು ಇರಿಸಿ ಪಟ್ಟಾಭಿಷಿಕ್ತನಾದ ಆತನನ್ನು ಒಂದುಸಾರಿಯಾದರೂ ನೋಡಿದಮೇಲೆ ನಾನು ಸ್ವರ್ಗಲೋಕವನ್ನೈದುವೆನು " ಎಂದು ಯೋಚಿಸಿದನು; ಅರಸುಗಳಿಗುಚಿತವೂ ಅಪರಿಮಿತವೂ ಪವಿತ್ರಕರವೂ ಆದ ಸದ್ಗುಣಗಳಿಂದ ಯುಕ್ತನಾದ ಆ ಕುಮಾರನಿಗೆ ಯುವರಾಜಪಟ್ಟವನು ಕಟ್ಟಬೇಕೆಂದು ಪ್ರಧಾನಿಗಳ ಕೂಡ ಆಲೋಚನೆಯನ್ನು ಮಾಡಿ ನಿಶ್ಚಯಿಸಿದನು. ಅವರನ್ನು ಕುರಿತು "ನನಗೆ ಭೂಮಿಯಲ್ಲಿಯೂ ಅಂತರಿಕ್ಷದಲ್ಲಿಯೂ ಭಯಗಳೂ ಉತ್ಪಾತಗಳೂ ತೋರುತ್ತಿವೆ. ನನ್ನ ಶರೀರದಲ್ಲಿ ಮುಪ್ಪು ತಲೆದೋರಿದೆ. ಪೂರ್ಣಚಂದ್ರನಂತೆ ಮುಖವುಳ್ಳ ಶ್ರೀರಾಮನು ನನ್ನ ಮನಸ್ಸಿನ ಚಿಂತೆಯನ್ನು ಪರಿಹರಿಸುವನು. ಆತನು ಸಮಸ್ತ ಪ್ರಜೆಗಳಿಗೂ ನನಗೂ ಇಷ್ಟನಾದವನು. ಪ್ರಜೆಗಳ ಶ್ರೇಯಸ್ಸಿಗೂ ನನ್ನ ಶ್ರೇಯಸ್ಸಿಗೂ ಕಾರಣನಾದವನು " ಎಂದು ನುಡಿದನು. ಅನಂತರ ಕಾಲೋಚಿತವನ್ನರಿತು ಧರ್ಮಾತ್ಮನಾದ ಆ ರಾಯನು ತನ್ನ ಕುಮಾರನಾದ ಶ್ರೀರಾಮನ ಮೇಲಣ ಪ್ರೀತಿಯಿಂದ ತನ್ನ ದೇಶದಲ್ಲಿ ನಾನಾ ಪ್ರಾಂತಗಳಲ್ಲಿಯೂ ದುರ್ಗಗಳಲ್ಲಿಯೂ ಇದ್ದ ಪ್ರಧಾನ ಪುರುಷರನ್ನು ಕರೆಯಿಸಿ, ಅವರನ್ನು ಅನೇಕ ಬಿಡಾರಗಳಲ್ಲಿ ಇರಿಸಿ ಅಲಂಕಾರವಾದ ಉಡುಗೊರೆಗಳಿಂದ ಸತ್ಕರಿಸಿದನು. ಜನಕರಾಯನೂ ಕೇಕಯರಾಯನೂ ಶ್ರೀರಾಮನಿಗೆ ಪಟ್ಟಾಭಿಷೇಕವಾಗುವುದನ್ನು ಅನಂತರ ಕೇಳುವರೆಂದು ಭಾವಿಸಿ, ತ್ವರಾವಿಷ್ಟನಾದ್ದರಿಂದ ಅವರನ್ನು ಕರೆಯಿಸದೆ ಪಟ್ಟಾಭಿಷೇಕಕ್ಕೆ ಯತ್ನಮಾಡಿದನು. ಆಮೇಲೆ ಸಮೀಪದಲ್ಲಿ ಕುಳಿತಿದ್ದ ತನ್ನ ದೇಶದ ರಾಯರಿಂದಲೂ ಅನೇಕ ವಿನಯಗುಣಸಂಪನ್ನರಾದ ಪರರಾಯರಿಂದಲೂ ತೇಜಸ್ವಿಗಳಾದ ಪುರಜನಗಳಿಂದಲೂ ಪರಿವೃತನಾಗಿ ದಶರಥರಾಯನು ಸಿಂಹಾಸನಾರೂಢನಾಗಿ ದೇವಸಭೆಯಲ್ಲಿ ಸಮಸ್ತ ದೇವತೆಗಳಿಂದ ಪರಿವೃತನಾದ ದೇವೇಂದ್ರನಂತೆ ಒಪ್ಪುತ್ತ ಆಲೋಚನೆಮಾಡುತ್ತಿದ್ದನು.



## ೨ನೆಯ ಅಧ್ಯಾಯ

## ಶ್ರೀರಾಮನ ಪಟ್ಟಾಭಿಷೇಕಕ್ಕೆ ಸಕಲಜನಗಳೂ ಸಮ್ಮತಿಸಿದ್ದು

ಆಮೇಲೆ ದಶರಥರಾಯನು ತನ್ನ ಆಸ್ಥಾನಮಂಟಪದಲ್ಲಿದ್ದ ಸಮಸ್ತ ಪ್ರಜೆಗಳನ್ನೂ ಸಂಬೋಧಿಸಿ ಭೇರೀಧ್ವನಿಯಂತೆ ಗಂಭೀರವೂ ರಾಜಲಕ್ಷಣಯುಕ್ತವೂ ಆದ ಸ್ವರದಿಂದ ಹೀಗೆಂದನು : "ಎಲೈ ಪ್ರಜೆಗಳಿರಾ, ನಮ್ಮ ವಂಶದ ಪೂರ್ವದ ನೃಪಾಲರು ಮಕ್ಕಳನ್ನು ಪರಿಪಾಲಿಸುವಂತೆ ತಮ್ಮ ಪ್ರಜೆಗಳನ್ನು ರಕ್ಷಿಸುತ್ತಿದ್ದರು. ನಾನೂ ಈ ರಾಜ್ಯಕ್ಕೆ ಶ್ರೇಯಸ್ಸುಂಟಾಗುವಂತೆ ಇಕ್ಷ್ವಾಕು ಮೊದಲಾದ ರಾಯರ ಹಾಗೆಯೇ ಅಧಿಕವಾದ ಯತ್ನವನ್ನು ಮಾಡುತ್ತ, ನಮ್ಮ ಪೂರ್ವದ ನೃಪಾಲರಂತೆ ಲೇಶಮಾತ್ರವಾದರೂ ಧರ್ಮವನ್ನು ಮೀರದೆ ನನ್ನ ಶಕ್ತ್ಯನುಸಾರವಾಗಿ ರಕ್ಷಿಸುತ್ತಿದ್ದೇನೆ. ಸಕಲಲೋಕಗಳಿಗೂ ಹಿತವನ್ನು ಬಯಸುವ ಈ ನನ್ನ ಶರೀರವು ಬೆಳ್ಗೊಡೆಯ

ನೆಳಲಿನಲ್ಲಿ ವಾರ್ಧಕ್ಯವನ್ನೈದಿತು. ನಾನು ಅನೇಕ ಸಾವಿರ ವರುಷಗಳು ಬದುಕಿದೆನು. ಈಗ ನನ್ನ ಶರೀರಕ್ಕೆ ವಿಶ್ರಾಂತಿಯನ್ನು ಬಯಸುತ್ತಲಿದ್ದೇನೆ. ಸಜ್ಜನರಾದ ನರೇಂದ್ರರಿಂದ ಧರಿಸಲ್ಪಟ್ಟು ದುಷ್ಟರಾದವರಿಂದ ಧರಿಸಲಶಕ್ಯವಾಗಿ ಮಹತ್ತಾದ ಈ ಭೂಮಿಯ ಭಾರವನ್ನು ಪ್ರಜೆಗಳ ಹಿತಾರ್ಥವಾಗಿ ನನ್ನ ಕುಮಾರನಾದ ಶ್ರೀರಾಮನಲ್ಲಿರಿಸಿ ಭಾರವನ್ನು ಪರಿಹರಿಸಿಕೊಂಡು ಸುಖದಿಂದಿರ ಬೇಕೆಂದು ಬಯಸುತ್ತೇನೆ. ಶ್ರೀರಾಮನು ನನಗಿಂತಲೂ ಅಧಿಕವಾದ ಸದ್ಗುಣಗಳುಳ್ಳವನು. ಪರಾಕ್ರಮದಲ್ಲಿ ದೇವೇಂದ್ರನಿಗೆ ಸಮಾನನು. ಸಮಸ್ತ ಶತ್ರುರಾಯರ ದುರ್ಗಗಳನ್ನು ಜಯಿಸ ಬಲ್ಲವನು. ಪುಷ್ಯನಕ್ಷತ್ರದೊಡನೆ ಕೂಡಿದ ಚಂದ್ರನಂತಿರುವವನು. ಅತ್ಯಂತ ಧರ್ಮಿಷ್ಠನಾದ ಶ್ರೀರಾಮನಿಗೆ ಯುವರಾಜಪಟ್ಟವನ್ನು ಕಟ್ಟಬೇಕೆಂದು ಮನಸ್ಸಿನಲ್ಲಿ ಯೋಚಿಸಿದ್ದೇನೆ. ಅವನು ನಿಮಗೆ ಸಮ್ಮತನಾದವನು. ಶಾಶ್ವತವಾದ ತೇಜಸ್ಸುಳ್ಳವನು. ಮೂರು ಲೋಕಗಳನ್ನೂ ರಕ್ಷಿಸಲು ಶಕ್ತನು. ಆದಕಾರಣ ನಿಮಗೆಲ್ಲರಿಗೂ ಶ್ರೇಯಸ್ಸಾಗಬೇಕೆಂದು ಸಮಸ್ತ ಭೂಭಾರವನ್ನು ಶ್ರೀರಾಮನಲ್ಲಿರಿಸಿ ನಾನು ಪ್ರಯಾಸವಿಲ್ಲದೆ ಸುಖವಾಗಿರುತ್ತೇನೆ. ಶ್ರೀರಾಮನು ನಿಮಗೆಲ್ಲರಿಗೂ ರಾಜನಾಗಲಿ. ಈ ವಿಷಯವು ನಿಮಗೆಲ್ಲರಿಗೂ ಸಮ್ಮತವಾದರೆ ನನ್ನ ಮನೋರಥವು ಸಿದ್ಧಿಸುವುದು. ನನಗೆ ಇದೇ ಸೂಕ್ತವಾಗಿ ತೋರುತ್ತದೆ. ನಿಮಗೂ ಒಳ್ಳೆಯದೆಂದು ತೋರಿದರೆ ಸಮ್ಮತಿಸಬಹುದು. ಪರಸ್ಪರ ಆಲೋಚಿಸಿ ಮುಂದಿನ ಕರ್ತವ್ಯವನ್ನು ತಿಳುಹಿಸಿ " ಎಂದು ನುಡಿದನು.

ಅದನ್ನು ಕೇಳಿ, ಗುಡುಗುತ್ತಾ ಮಳೆಗರೆಯುತ್ತಿರುವ ಮೋಡಗಳ ಗರ್ಜನೆಗಳನ್ನು ಕೇಳಿ ನವಿಲುಗಳು ಆನಂದದಿಂದ ಪ್ರತಿಧ್ವನಿ ಮಾಡುವ ಹಾಗೆ, ಅಲ್ಲಿದ್ದ ಜನಸಮೂಹವು ಆನಂದದಿಂದ ಆಸ್ಥಾನಮಂಟಪದಲ್ಲಿ ಕೋಲಾಹಲಧ್ವನಿಯನ್ನು ಹುಟ್ಟಿಸಿತು. ಆಗ ದಶರಥರಾಯನ ಧರ್ಮಾರ್ಥಸಹಿತವಾದ ಅಭಿಪ್ರಾಯವನ್ನು ತಿಳಿದು ಸಮಸ್ತ ಬ್ರಾಹ್ಮಣರೂ ಪುರಜನರೂ ಏಕವಾಕ್ಯತೆಯಿಂದ ವೃದ್ಧನಾದ ದಶರಥರಾಯನನ್ನು ಕುರಿತು " ಮಹಾರಾಜ, ನೀನು ಅನೇಕ ಸಾವಿರ ವರುಷಗಳು ಬದುಕಿ ಬಹುವೃದ್ಧನಾದೆ. ನಾವು ಪರಾಕ್ರಮಿಯಾದ ಶ್ರೀರಾಮನು ಪಟ್ಟಾಭಿಷಿಕ್ತನಾಗಿ ಗಜಾರೂಢನಾಗಿ ಬಿಳೀಸತ್ತಿಗೆಯ ನೆಳಲಿನಲ್ಲಿ ಬರುವುದನ್ನು ನೋಡಲಪೇಕ್ಷಿಸುತ್ತೇವೆ. ನೀನು ಆತನಿಗೆ ಯುವರಾಜಪಟ್ಟವನ್ನು ಕಟ್ಟು. ಕಾಲವಿಳಂಬವನ್ನು ಮಾಡಬೇಡ " ಎಂದು ನುಡಿದರು.

ದಶರಥರಾಯನು ಅವರನ್ನು ಕುರಿತು " ಎಲೈ ಪ್ರಜೆಗಳೆ, ನಾನು ಶ್ರೀರಾಮನಿಗೆ ಪಟ್ಟವನ್ನು ಕಟ್ಟಬೇಕೆಂದು ನುಡಿಯಲು ನೀವು ಹಾಗೆ ಮಾಡಬೇಕೆಂದು ಹೇಳುತ್ತೀರಿ. ನಾನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿರಲು ನೀವು ಶ್ರೀರಾಮನು ಪಟ್ಟಾಭಿಷಿಕ್ತನಾಗಿ ಆನೆಯ ಮೇಲೆ ಶ್ವೇತಚ್ಛತ್ರದ ನೆರಳಲ್ಲಿ ಮೆರವಣಿಗೆಯಾಗಿ ಬರುವುದನ್ನು ನೋಡಬೇಕೆಂದು ಹೇಳುತ್ತೀರಿ. ನನಗೆ ಸಂಶಯ ಉಂಟಾಗಿದೆ. ನಿಮ್ಮ ನಿಜವಾದ ಅಭಿಪ್ರಾಯವನ್ನು ನನಗೆ ತಿಳಿಸಬೇಕು " ಎಂದು ನುಡಿದನು.

ಆ ಮಾತನ್ನು ಕೇಳಿ ಸಭೆಯಲ್ಲಿದ್ದ ಜನರು ಹೀಗೆಂದರು : " ಮಹಾರಾಜ, ನಿನ್ನ ಮಗನಾದ ಶ್ರೀರಾಮನಲ್ಲಿ ಅನೇಕ ಕಲ್ಯಾಣಗುಣಗಳುಂಟು. ದೇವೇಂದ್ರನಿಗೆ ಸಮಾನನಾಗಿಯೂ ಅತ್ಯಂತ ಬುದ್ಧಿವಂತನಾಗಿಯೂ ಇರುವ ಆತನ ಕಲ್ಯಾಣಗುಣಗಳು ಸಮಸ್ತ ಜನರನ್ನೂ ಸಂತೋಷ ಪಡಿಸುವುವು. ಶ್ರೀರಾಮನು ದಿವ್ಯಸದ್ಗುಣಗಳಿಂದ ದೇವೇಂದ್ರನಿಗೆ ಸಮಾನನಾದವನು. ವಿನಯಾದಿ ಸುಗುಣಗಳಿಂದ ಇಕ್ಷ್ವಾಕುವಂಶದ ರಾಜರೆಲ್ಲರಿಗೂ ಅಧಿಕನಾದವನು. ಲೋಕದಲ್ಲಿ ಆತನು ಸತ್ಪುರುಷನು. ಸದ್ಧರ್ಮಪರಾಯಣನು. ಆತನಿಂದಲೇ ಧರ್ಮವೂ ಐಶ್ವರ್ಯವೂ ಉಂಟಾಗುವುವು. ಆತನು ಪ್ರಜೆಗಳಿಗೆ ಸಂತೋಷವನ್ನುಂಟುಮಾಡುವಲ್ಲಿ ಚಂದ್ರನಿಗೂ, ಕ್ಷಮೆಯಲ್ಲಿ

ಭೂಮಿಗೂ, ಬುದ್ಧಿಯಲ್ಲಿ ಬೃಹಸ್ಪತಿಗೂ, ಪರಾಕ್ರಮದಲ್ಲಿ ದೇವೇಂದ್ರನಿಗೂ ಸಮಾನನಾದವನು. ಧರ್ಮಜ್ಞನು ; ಸತ್ಯಸಂಧನು ; ಸಚ್ಚಾರಿತ್ರನು ; ಅಸೂಯೆ ಇಲ್ಲದವನು : ಕ್ಷಮೆಯುಳ್ಳವನು ; ಮಾಡಿದ ಉಪಕಾರವನ್ನು ಮರೆಯದವನು. ಜಿತೇಂದ್ರಿಯ ; ಋಜುಮಾರ್ಗವುಳ್ಳವನು: ಸ್ಥಿರಚಿತ್ತ. ಸಮಸ್ತ ಪ್ರಾಣಿಗಳಲ್ಲಿಯೂ ಪ್ರೀತಿಯುಳ್ಳವನು. ಪ್ರಿಯವನ್ನೇ ನುಡಿಯುವವನು ; ಸತ್ಯವಾದಿ ; ವೇದಶಾಸ್ತ್ರಸಂಪನ್ನರಾದ ವೃದ್ಧಬ್ರಾಹ್ಮಣರನ್ನು ಸೇವಿಸುವುದರಿಂದ ಈತನ ಕೀರ್ತಿ ತೇಜಸ್ಸುಗಳು ವೃದ್ಧಿಯನ್ನೈದುವುವು. ದೇವಾಸುರ ಮಾನವರಿಗಿಂತಲೂ ಶಸ್ತ್ರಾಸ್ತ್ರಗಳಲ್ಲಿ ಶ್ರೇಷ್ಠನು. ಸಾಂಗವಾಗಿ ವೇದಾಧ್ಯಯನವನ್ನು ಮಾಡಿ ಗುರುವಿನ ಅಪ್ಪಣೆಯಿಂದ ಸ್ನಾತಕವ್ರತವನ್ನು ಮಾಡಿ ವಿವಾಹ ವಾದವನು. ಗಾಂಧರ್ವವಿದ್ಯೆಯಲ್ಲಿ ವಿಶಾರದನು. ಉಭಯವಂಶಗಳಿಂದಲೂ ಪರಿಶುದ್ಧನು. ಸಮಸ್ತ ಶತ್ರುಗಳನ್ನೂ ಜಯಿಸಿ ಸಂಭ್ರಮದಿಂದಿರುವವನು. ರಥಗಜಾರೋಹಣಗಳಲ್ಲಿ ನಿಪುಣ. ದೈನ್ಯಬುದ್ಧಿ ಇಲ್ಲದವನು. ಮಹಾಜ್ಞಾನಿ. ಉತ್ತಮರಾದ ಬ್ರಾಹ್ಮಣರಿಂದ ಶಿಕ್ಷಿಸಲ್ಪಟ್ಟು ಧರ್ಮಾರ್ಥಗಳನ್ನು ತಿಳಿದವನು. ಪರಮಂಡಲವನ್ನು ಜಯಿಸಬೇಕೆಂದು ಲಕ್ಷ್ಮಣನೊಡನೆ ಹೊರಟರೆ ಜಯಿಸದೆ ಹಿಂದಿರುಗುವವನಲ್ಲ. ಸಂಭ್ರಮದಿಂದ ರಥಾರೂಢನಾಗಿಯಾಗಲಿ ಗಜಾರೂಢ ನಾಗಿಯಾಗಲಿ ರಾಜಬೀದಿಯಲ್ಲಿ ಬರುವಾಗ ಪುರಜನರನ್ನು ತನ್ನ ಬಂಧುಗಳ ಹಾಗೆ ಕಂಡು 'ನಿಮ್ಮ ಅಗ್ನಿಹೋತ್ರವು ನಿರ್ವಿಘ್ನದಲ್ಲಿ ನಡೆಯುತ್ತಿದೆಯೆ ? ನಿಮ್ಮ ಮಕ್ಕಳೂ ಸ್ತ್ರೀಯರೂ ಶಿಷ್ಯರೂ ಸೇವಕರೂ ಪರಿಜನರೂ ಸುಖದಿಂದಿರುವರೊ ? ' ಎಂದು ತಂದೆಯು ಮಕ್ಕಳನ್ನು ಕೇಳುವಂತೆ ಯೋಗಕ್ಷೇಮಗಳನ್ನು ವಿಚಾರಿಸುತ್ತಾನೆ. ಪ್ರಜೆಗಳಿಗೆ ಆಪತ್ತು ಬಂದಲ್ಲಿ ತಾನು ಬಹಳವಾಗಿ ದುಃಖಪಡುತ್ತಾನೆ. ಅವರಿಗೆ ಮಹೋತ್ಸವಗಳುಂಟಾದರೆ ತಂದೆಯಂತೆ ಸಂತೋಷಪಡುತ್ತಾನೆ. ಆತನು ಮಹಾಸತ್ಯವಾದಿ. ಧಾನುಷ್ಕನು. ವೃದ್ಧಸೇವಿ. ಎಲ್ಲರೊಡನೆ ಸಂತೋಷದಿಂದಲೂ ಮುಗುಳುನಗೆಯೊಡನೆಯೂ ಮಾತನಾಡುತ್ತಾನೆ. ಸರ್ವದಾ ಧರ್ಮವನ್ನೇ ಅವಲಂಬಿಸಿ ಶ್ರೇಯಸ್ಸನ್ನು ಬಯಸುತ್ತಾನೆ. ಬೃಹಸ್ಪತಿಯಂತೆ ಉತ್ತರಕ್ಕೆ ತಕ್ಕ ಪ್ರತ್ಯುತ್ತರಗಳನ್ನು ಕೊಡಬಲ್ಲನು. ಶೋಭನವಾದ ಹುಬ್ಬುಗಳುಳ್ಳವನಾಗಿ ಕೆಂಪಾದ ಕಡೆಗಣ್ಣುಳ್ಳವನಾಗಿ ಸಾಕ್ಷಾತ್ ನಾರಾಯಣನಂತೆ ಶೌರ್ಯ ವೀರ್ಯ ಪರಾಕ್ರಮಗಳುಳ್ಳವನು. ಶ್ರೀರಾಮನು ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳನ್ನೂ ರಕ್ಷಿಸಲು ಸಮರ್ಥನಾಗಿರುವಾಗ ಈ ಭೂಮಂಡಲವನ್ನು ರಕ್ಷಿಸಬಲ್ಲನೆಂದು ಹೇಳಬೇಕೆ ! ಈತನ ಕೋಪಪ್ರಸಾದಗಳು ವ್ಯರ್ಥವಾಗುವವಲ್ಲ. ದಂಡಾರ್ಹರನ್ನು ಧರ್ಮದಿಂದ ಶಿಕ್ಷಿಸುವನು. ಸಂತುಷ್ಟನಾದರೆ ಅಭೀಷ್ಟಗಳನ್ನು ಕೊಡುವನು. ಪ್ರಜಾನುರಂಜಕಗಳಾದ ಶಮದಮಾದಿಗುಣಗಳಿಂದ ಸೂರ್ಯನು ಕಿರಣಗಳಿಂದ ಬೆಳಗುವಂತೆ ಒಪ್ಪುತ್ತಿದ್ದಾನೆ. ಇಂಥ ಸದ್ಗುಣಗಳಿಂದ ಪರಿಪೂರ್ಣನಾಗಿ ಸತ್ಯಪರಾಕ್ರಮಿಯಾದ ಶ್ರೀರಾಮನು ತನಗೆ ಪತಿಯಾಗ ಬೇಕೆಂದು ಭೂದೇವಿಯು ಬಯಸಿದ್ದಾಳೆ ! ಎಲೈ ದಶರಥರಾಜನೆ, ಕಶ್ಯಪನು ಮರೀಚಿಗೆ ಹುಟ್ಟಿದಂತೆ ನಿನಗೆ ಸರ್ವಗುಣಸಂಪತ್ತುಳ್ಳ ಶ್ರೀರಾಮನು ಹುಟ್ಟಿದ್ದಾನೆ. ಆತನಿಗೆ ಆಯುರಾರೋಗ್ಯ ಬಲಗಳು ಪರಿಪೂರ್ಣವಾಗಿವೆ. ದೇವತೆಗಳೂ ಅಸುರರೂ ಗಂಧರ್ವರೂ ನಿನ್ನ ರಾಜ್ಯದಲ್ಲಿರುವ ಸಮಸ್ತ ಜನರೂ ಶ್ರೀರಾಮನನ್ನು ಕೊಂಡಾಡುತ್ತಿರುವರು. ನಾಡಜನರೂ ವೃದ್ಧರೂ ಸ್ತ್ರೀಯರೂ ಪ್ರಾತಃಕಾಲ ಸಾಯಂಕಾಲಗಳಲ್ಲಿ ಆತನಿಗೆ ಶ್ರೇಯಸ್ಸಾಗಬೇಕೆಂದು ದೇವತಾನಮಸ್ಕಾರಗಳನ್ನು ಮಾಡುತ್ತಿದ್ದಾರೆ. ಅವರ ಶ್ರೇಯಃಪ್ರಾರ್ಥನೆಯು ನಿನ್ನ ಪ್ರಸಾದದೊಡನೆ ವೃದ್ಧಿಯನ್ನು ಹೊಂದಲಿ ! ಇಂದೀವರಶ್ಯಾಮನಾಗಿ ಶತ್ರುಸಂಹಾರಕನಾದ ನಿನ್ನ ಮಗನಿಗೆ ಯುವರಾಜ್ಯಾಭಿಷೇಕ ಮಾಡುವುದನ್ನು ನಾವು ನೋಡಿ ಸಂತೋಷಪಡುವೆವು. ಆದ್ದರಿಂದ ಸರ್ವಲೋಕಹಿತನಾಗಿ

ಉದಾರನಾದ ನಿನ್ನ ಮಗನಿಗೆ ನಮ್ಮ ಹಿತಾರ್ಥವಾಗಿ ಪಟ್ಟಾಭಿಷೇಕವನ್ನು ಸಂತೋಷದಿಂದ ಮಾಡಿಸು " ಎಂದು ನುಡಿದರು.



೩ನೆಯ ಅಧ್ಯಾಯ

## ಪಟ್ಟಾಭಿಷೇಕಕ್ಕೆ ಬೇಕಾದ ವಸ್ತುಗಳನ್ನು ಸಿದ್ಧಪಡಿಸಿದ್ದು

ಆಮೇಲೆ ದಶರಥರಾಯನು ಶ್ರೀರಾಮನ ಪಟ್ಟಾಭಿಷೇಕಕ್ಕೆ ಸಮ್ಮತಿಸಿದ ಸಮಸ್ತ ದೊರೆಗಳನ್ನೂ ಪ್ರಜೆಗಳನ್ನೂ ನೋಡಿ "ಸಮಸ್ತ ಪ್ರಜೆಗಳ ಶ್ರೇಯಸ್ಸಿಗೋಸ್ಕರ ನನ್ನ ಕುಮಾರನಾದ ಶ್ರೀರಾಮನಿಗೆ ಯುವರಾಜಪಟ್ಟ ಕಟ್ಟುವುದಕ್ಕೆ ನೀವೆಲ್ಲರೂ ಏಕವಾಕ್ಯತೆಯಿಂದಂಗೀಕರಿಸಿದ್ದರಿಂದ ನಾನು ಸುಪ್ರೀತನಾದೆನು. ನಿಮ್ಮಿಂದ ಲೋಕದಲ್ಲಿ ನಾನು ಧನ್ಯನಾದೆನು " ಎಂದು ನುಡಿದು ವಸಿಷ್ಠ ವಾಮದೇವಾದಿ ಪುರೋಹಿತರನ್ನು ಕುರಿತು "ಗುರುಗಳೆ, ಮಹಾಪುಣ್ಯಕರವಾದ ಚೈತ್ರ ಮಾಸವು ಬಂದಿದೆ. ಈಗ ಸಮಸ್ತ ವೃಕ್ಷಗಳೂ ಎಳದಳಿರುಳ್ಳವಾಗಿ ಪುಷ್ಪಿತಗಳಾಗಿವೆ. ಇಂಥ ಸಮಯವು ಶ್ರೀರಾಮನ ಪಟ್ಟಾಭಿಷೇಕಕ್ಕೆ ಯೋಗ್ಯವಾಗಿದೆ. ಆದುದರಿಂದ ಬೇಕಾದ ವಸ್ತುಗಳನ್ನು ತರಿಸಿರಿ " ಎಂದು ಅಯೋಧ್ಯಾಪಟ್ಟಣದವರಿಗೂ ಸಮಸ್ತ ದೇಶಗಳಿಂದ ಬಂದವರಿಗೂ ಕೇಳುವ ಹಾಗೆ ಹೇಳಿದನು.

ಆಮೇಲೆ ವಸಿಷ್ಠಮುನೀಶ್ವರನು ದಶರಥರಾಯನ ಸೇವಾರ್ಥವಾಗಿ ಕೈಮುಗಿದುಕೊಂಡು ನಿಂತಿದ್ದ ಪ್ರಧಾನಿಗಳನ್ನು ಕರೆದು "ಎಲೈ ಪ್ರಧಾನಿಗಳಿರಾ, ಅನರ್ಘ್ಯ ರತ್ನಗಳು, ಪೂಜಾಯೋಗ್ಯವಾದ ಪುಷ್ಪಮಾಲಿಕೆಗಳು, ಸಕಲೌಷಧಗಳು, ತುಪ್ಪ, ಜೇನುತುಪ್ಪ, ಗಂಧಾಕ್ಷತೆ, ಆಯುಧಗಳು, ಮೆರವಣಿಗೆ ಮಾಡುವುದಕ್ಕೆ ಸುಲಕ್ಷಣಲಕ್ಷಿತವಾದ ಆನೆ, ಚಾಮರಗಳೆರಡು, ಬೆಳ್ಗೊಡೆ, ನೂರು ಪೊಂಗೊಡೆಗಳು, ಚಿನ್ನದ ಕೊಂಬಿನ ವೃಷಭಗಳು, ವ್ಯಾಘ್ರಚರ್ಮ ಮೊದಲಾದ ಸಮಸ್ತ ವಸ್ತುಗಳನ್ನೂ ತಂದು ದಶರಥರಾಯನ ಯಾಗಮಂಟಪದ ಸಮೀಪದಲ್ಲಿರಿಸಿರಿ. ಸುಗಂಧಪುಷ್ಪಗಳಿಂದ ನಗರದ ಹೆಬ್ಬಾಗಿಲಿಗೂ ಅರಮನೆಯ ಬಾಗಿಲುಗಳಿಗೂ ತೋರಣಗಳನ್ನು ಕಟ್ಟಿಸಿರಿ. ಶ್ರೀಗಂಧೋದಕಗಳಿಂದ ಚೌಬೀದಿಗಳಲ್ಲಿ ಸೇಚನ ಮಾಡಿಸಿರಿ. ಸಾಂಬ್ರಾಣಿ ಧೂಪದ ಹೊಗೆಯನ್ನು ಹರಡಿಸಿರಿ. ಬಲ ವೃದ್ಧಿಯನ್ನು ಮಾಡುವ ಹಾಲು ಮೊಸರು ತುಪ್ಪ ಮೊದಲಾದ ರಸದ್ರವ್ಯಗಳಿಂದ ಅತ್ಯಂತ ಸ್ವಾದುಗುಣಯುಕ್ತವಾದ ಷಡ್ರಸೋಪೇತವಾದ ಅನ್ನವನ್ನು ಸಿದ್ಧಪಡಿಸಿರಿ. ನಾಳೆ ಪ್ರಾತಃಕಾಲದಲ್ಲಿ ಪುಣ್ಯಾಹವನ್ನು ಮಾಡಬೇಕಾದ್ದರಿಂದ ಹಾಲು ಮೊಸರು ತುಪ್ಪ ಪುಷ್ಪಮಾಲಿಕೆಗಳು ಗಂಧಾಕ್ಷತೆಗಳು ಮೊದಲಾದ ಮಂಗಳದ್ರವ್ಯಗಳನ್ನು ಸೂರ್ಯೋದಯದ ಹೊತ್ತಿಗೆ ತರಿಸಿರಿ. ಶಿಷ್ಟರಾದ ಬ್ರಾಹ್ಮಣರನ್ನು ಕರೆಯಿಸಿರಿ. ಅವರು ಕುಳ್ಳಿರುವುದಕ್ಕೆ ಅನೇಕ ಪೀಠಗಳನ್ನು ತರಿಸಬೇಕು. ರಾಜಮಾರ್ಗದಲ್ಲಿ ನೀರು ಚೆಲ್ಲಿಸಿ ಪತಾಕೆಗಳನ್ನು ಕಟ್ಟಿಸಬೇಕು. ತಾಳಮದ್ದಳೆಗಳ ಲಯಕ್ಕೆ ಸರಿಯಾದ ಗಾನವಿದ್ಯಾವಿಶಾರದರಾದ ಗಾಯಕರನ್ನೂ ನರ್ತಕರನ್ನೂ ಕುಶಲಿನಿಯರಾಗಿ ಸರ್ವಾಭರಣಭೂಷಿತೆಯರಾದ ಗಣಿಕಾಸ್ತ್ರೀಯರನ್ನೂ ಕರೆಯಿಸಬೇಕು. ಅವರು ಅರಮನೆಯ ಎರಡನೆಯ ಕಕ್ಷ್ಯದಲ್ಲಿರಬೇಕು. ದೇವಾಲಯಗಳಲ್ಲಿ ಅಭಿಷೇಕ ನೈವೇದ್ಯಗಳು ನಡೆಯಬೇಕು. ಬ್ರಾಹ್ಮಣಭೋಜನಗಳನ್ನು ಮಾಡಿಸಬೇಕು. ಪ್ರತಿದೇವಾಲಯವನ್ನೂ ಕುರಜು ಮೇಜುಕಟ್ಟುಗಳಿಂದ ಅಲಂಕಾರ ಮಾಡಿಸಿರಿ. ಆಯುಧ

ಗಳನ್ನು ಧರಿಸಿಕೊಂಡು ವಸ್ತ್ರಾಭರಣಗಳಿಂದ ಅಲಂಕರಿಸಿಕೊಂಡು ಅರಮನೆಯ ಬಾಗಿಲಿಗೆ ಬರುವ ಹಾಗೆ ಭಟರಿಗೆ ಕಟ್ಟುಮಾಡಿರಿ. ಈ ರೀತಿಯಲ್ಲಿ ಸಮಸ್ತ ವಸ್ತುಗಳನ್ನು ತರಿಸಿ ಸನ್ನಾಹಮಾಡಿ ದಶರಥರಾಯನ ಸಮೀಪಕ್ಕೆ ಬಂದು ಬಿನ್ನಹ ಮಾಡಿರಿ" ಎಂದು ಕಟ್ಟುಮಾಡಿದನು.

ಆಮೇಲೆ ವಸಿಷ್ಠ ವಾಮದೇವರ ಅಪ್ಪಣೆಯಿಂದ ಆ ಪ್ರಧಾನಿಗಳು ಪಟ್ಟಾಭಿಷೇಕಕ್ಕೆ ಬೇಕಾದ ಸಮಸ್ತ ಸಾಮಗ್ರಿಗಳನ್ನೂ ತರಿಸಿ ದಶರಥರಾಯನ ಸಮೀಪಕ್ಕೆ ಬಂದು ಕೈಮುಗಿದು "ಸ್ವಾಮಿ, ಪಟ್ಟಾಭಿಷೇಕಕ್ಕೆ ಬೇಕಾದ ವಸ್ತುಗಳೆಲ್ಲವೂ ಸಿದ್ಧವಾಗಿವೆ" ಎಂದು ಬಿನ್ನಹಮಾಡಿದರು. ದಶರಥ ರಾಯನು ಸುಮಂತ್ರನೆಂಬ ಪ್ರಧಾನಿಯನ್ನು ಕರೆದು ಶೀಘ್ರದಲ್ಲಿ ಶ್ರೀರಾಮನನ್ನು ಕರೆದುಕೊಂಡು ಬರಹೇಳಿದನು. ಆತನು ಮಹಾಪ್ರಸಾದವೆಂದು ದಶರಥನ ಆಜ್ಞೆಯನ್ನು ಶಿರಸಾವಹಿಸಿ ಶ್ರೀರಾಮನ ಬಳಿಗೆ ಹೋದನು. ಮೂಡಣ ಪಡುವಣ ತೆಂಕಣ ಬಡಗಣ ದಿಕ್ಕುಗಳ ರಾಯರೂ ಗಿರಿದುರ್ಗ ವನದುರ್ಗಗಳ ಮ್ಲೇಚ್ಛಾದಿ ದೊರೆಗಳೂ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಬಂದು ಕಾಣಿಸಿಕೊಳ್ಳಲು ಆ ದೊರೆಗಳ ಮಧ್ಯದಲ್ಲಿ ಸಮಸ್ತ ದೇವತೆಗಳ ಮಧ್ಯದಲ್ಲಿ ಪ್ರಕಾಶಿಸುವ ದೇವೇಂದ್ರನ ಮರ್ಯಾದೆಯಲ್ಲಿ ದಶರಥಮಹಾರಾಜನು ಒಪ್ಪುತ್ತಿದ್ದನು.

ಆ ಬಳಿಕ ರಘುನಾಥನು ರಥಾರೂಢನಾಗಿ ರಾಜಬೀದಿಯಲ್ಲಿ ಬರುತ್ತಿದ್ದನು. ಉಪ್ಪರಿಗೆಯ ಮೇಲಿದ್ದ ದಶರಥರಾಯನು ಆತನನ್ನು ಕಂಡು ಅತ್ಯಂತ ಸಂತೋಷಪಡುತ್ತಿದ್ದನು. ರಘುನಾಥನು ಸಾಕ್ಷಾತ್ ಗಂಧರ್ವಪತಿಯ ಹಾಗೆ ಲೋಕದಲ್ಲಿ ಅತ್ಯಂತ ಪ್ರಸಿದ್ಧನಾದವನು. ನಿಡಿದಾದ ತೋಳುಗಳುಳ್ಳವನೂ ಮದ್ದಾನೆಯ ನಡೆಯುಳ್ಳವನೂ ಚಂದ್ರನಂತೆ ಮನೋಹರವಾದ ಮುಖ ಮಂಡಲವುಳ್ಳವನೂ ನೋಡುವ ಜನರಿಗೆ ಅತ್ಯಂತ ಪ್ರಿಯದರ್ಶನನಾಗಿ ರೂಪಲಾವಣ್ಯಗಳುಳ್ಳವನೂ ಬಾಡಿದ ಸಸ್ಯಾದಿಗಳನ್ನು ಮಳೆಗರೆದು ಚಿಗುರಿಸುವ ಪರ್ಜನ್ಯನೋಪಾದಿಯಲ್ಲಿ ಸಮಸ್ತ ಪ್ರಜೆಗಳನ್ನೂ ತನ್ನ ಕೃಪಾದೃಷ್ಟಿಯಿಂದಲೇ ತೃಪ್ತಿಪಡಿಸುವಂಥವನೂ ಆದ ಶ್ರೀರಾಮನನ್ನು ಕಂಡು ಸರ್ವರೂ ಸಂತೋಷಪಟ್ಟರು. ಆಮೇಲೆ ಅರಮನೆಯನ್ನು ಸೇರಿ ರಥದಿಂದಿಳಿದು ಸಾರಥಿಯೂ ಮಂತ್ರಿಯೂ ಆದ ಸುಮಂತ್ರನು ಶ್ರೀರಾಮನನ್ನು ದಶರಥರಾಯನ ಸಮೀಪಕ್ಕೆ ಕರೆತಂದನು. ಶ್ರೀರಾಮನು ಕೈಲಾಸಪರ್ವತದ ಕೋಡುಗಲ್ಲಿನಂತೆ ಅತ್ಯಂತ ಬಿಳುಪಾದ ಉಪ್ಪರಿಗೆಯನ್ನು ಹತ್ತಿ ಸುಮಂತ್ರನೊಡನೆ ತಂದೆಯ ಸಮೀಪಕ್ಕೆ ಹೋಗಿ ತನ್ನ ಗೋತ್ರನಾಮಗಳನ್ನು ಹೇಳಿ ಅಭಿವಂದಿಸಿದನು. ಆ ರಾಯನು ತನಗೆ ನಮಸ್ಕಾರವನ್ನು ಮಾಡಿ ಕೈಮುಗಿದುಕೊಂಡು ಸಮೀಪದಲ್ಲಿ ನಿಂತಿದ್ದ ಮಗನನ್ನು ಕೈ ಹಿಡಿದೆತ್ತಿ ಬಿಗಿದಪ್ಪಿ ರತ್ನಖಚಿತವಾದ ಗದ್ದುಗೆಯನ್ನು ಹಾಕಿಸಿ ಕುಳಿತುಕೊಳ್ಳೆಂದು ಹೇಳಿದನು. ಆಗ ತಂದೆಯ ಆಜ್ಞೆಯಿಂದ ಆ ಗದ್ದುಗೆಯಲ್ಲಿ ಕುಳಿತಿದ್ದ ಶ್ರೀರಾಮನು ಉದಯಪರ್ವತವನ್ನೇರಿದ ಸೂರ್ಯನು ತನ್ನ ಕಾಂತಿಗಳಿಂದ ಲೋಕಗಳನ್ನು ಬೆಳಗಿಸುವ ರೀತಿಯಲ್ಲಿ ದಶರಥರಾಯನ ಸಭೆಯನ್ನು ಪ್ರಕಾಶ ಗೊಳಿಸುತ್ತಿದ್ದನು. ಆ ಸಭೆಯು ಪೂರ್ಣಿಮಾಚಂದ್ರನಿಂದೊಪ್ಪುವ ನಿರ್ಮಲವಾದ ಆಕಾಶದಂತೆ ಪ್ರಕಾಶಿಸುತ್ತಿತ್ತು. ಆಗ ದಶರಥರಾಯನು ಸಮಸ್ತಾಲಂಕಾರಗಳಿಂದ ಕೂಡಿದ ತನ್ನ ಶರೀರವೇ ಕನ್ನಡಿಯಲ್ಲಿ ಪ್ರತಿಬಿಂಬಿಸಿತೋ ಎಂಬ ಹಾಗಿದ್ದ ಶ್ರೀರಾಮನನ್ನು ಕಂಡು ಅತ್ಯಂತ ಸಂತೋಷದಿಂದ ಕಶ್ಯಪಬ್ರಹ್ಮನು ದೇವೇಂದ್ರನ ಸಂಗಡ ಮಾತನಾಡುವ ಹಾಗೆ ಆತನನ್ನು ಕುರಿತು "ಶ್ರೀರಾಮ, ನೀನು ನನ್ನ ಜ್ಯೇಷ್ಠಪತ್ನಿಯಾದ ಕೌಸಲ್ಯಾದೇವಿಯಲ್ಲಿ ನನ್ನ ಗುಣರೂಪಾದಿಗಳಿಗೆ ಸಮಾನನಾಗಿ ಅತ್ಯಂತ ಪ್ರಿಯಕುಮಾರನಾಗಿ ಜನಿಸಿದೆ. ನಿನ್ನಿಂದ ಸಮಸ್ತ ಪ್ರಜೆಗಳೂ ಸಂತುಷ್ಟರಾದರು. ಆದಕಾರಣ ನಾನು ನಾಳೆ ಪುಷ್ಯನಕ್ಷತ್ರದಲ್ಲಿ ನಿನಗೆ ಪಟ್ಟಾಭಿಷೇಕವನ್ನು ಮಾಡುವೆನು. ಸಮಸ್ತ ಪ್ರಜೆಗಳೂ ನಿನ್ನ ವಿನಯಾದಿಗುಣಗಳಿಂದ ನಿನಗೆ ಅನುಕೂಲರಾಗಿರುವರು. ಎಲೈ ಮಗನೆ, ನೀನು

ಗುಣವಂತನಾದ ಕಾರಣ ಪಿತೃಸ್ನೇಹದಿಂದ ನಿನಗೆ ಹಿತವನ್ನು ಹೇಳುತ್ತೇನೆ ಕೇಳು. ವಿನಯಗುಣ ಸಂಪನ್ನನಾಗಿ ಜಿತೇಂದ್ರಿಯನಾಗಿರು. ಕಾಮಕ್ರೋಧಾಸೂಯೆಗಳು ಪರಸ್ತ್ರೀ ಜೂಜು ಬೇಟೆ ಮದ್ಯಪಾನ ವಾಕ್ಪಾರುಷ್ಯ ದೂಷಣೆ ಮೊದಲಾದ ವ್ಯಸನಗಳನ್ನು ದೂರವಿಡು. ಪ್ರತ್ಯಕ್ಷದಲ್ಲಿ ಕಂಡದ್ದನ್ನಾದರೂ ವಿಚಾರಿಸಿ ನೋಡು. ಪ್ರಧಾನಿಗಳನ್ನು ಸಂತೋಷಪಡಿಸು. ಗೋಶಾಲೆಗಳನ್ನೂ ಆಯುಧಶಾಲೆಗಳನ್ನೂ ಬಹಳವಾಗಿ ಸಂಗ್ರಹಿಸು. ಪ್ರಜೆಗಳನ್ನು ಸಂತೋಷಪಡಿಸಿ ಭೂಮಿಯನ್ನು ಆಳುವವನಿಗೆ, ಸಮಸ್ತ ಪ್ರಜೆಗಳೂ ಅಮೃತವನ್ನು ಪಡೆದ ದೇವತೆಗಳಂತೆ ಸಂತೋಷಪಟ್ಟು ಮಿತ್ರರಾಗುವರು. ಆದಕಾರಣ, ಶ್ರೀರಾಮ, ನೀನು ಈ ರೀತಿಯಾಗಿ ಮನೋನಿಗ್ರಹದಿಂದ ನಡೆ" ಎಂದು ಹೇಳಿದನು.

ಆ ಸಮಯದಲ್ಲಿ ಶ್ರೀರಾಮನಿಗೆ ಪಟ್ಟಾಭಿಷೇಕವಾಗುವ ವೃತ್ತಾಂತವನ್ನು ಆತನ ಸೇವಕರು ಕೇಳಿ ಶೀಘ್ರದಲ್ಲಿ ಕೌಸಲ್ಯಾದೇವಿಯ ಸಮೀಪಕ್ಕೆ ಬಂದು ಆ ಸುದ್ದಿಯನ್ನು ಹೇಳಿದರು. ಆ ದೇವಿಯು ತನ್ನ ಮಗನ ಪಟ್ಟಾಭಿಷೇಕವಾರ್ತೆಯನ್ನು ಕೇಳಿ ಆ ಶುಭವಾರ್ತೆಯನ್ನು ಹೇಳಿದವರಿಗೆ ಅನೇಕ ರತ್ನಾಭರಣಗಳನ್ನು ಉಡುಗೊರೆಯಾಗಿ ಕೊಟ್ಟಳು. ಶ್ರೀರಾಮನು ದಶರಥರಾಯನಿಗೆ ಕೈಮುಗಿದು ರಥಾರೂಢನಾಗಿ ಸಮಸ್ತ ಪರಿಜನ ಪುರಜನರಿಂದ ಸತ್ಕರಿಸಲ್ಪಟ್ಟು ತನ್ನ ಅರಮನೆಗೆ ಹೋದನು, ಸಮಸ್ತ ಪ್ರಜೆಗಳೂ ದಶರಥರಾಯನಿಂದ ಬೀಳ್ಕೊಂಡು ತಮ್ಮ ತಮ್ಮ ಮನೆಗಳಿಗೆ ಹೋಗಿ ಶ್ರೀರಾಮನಿಗೆ ಪಟ್ಟಾಭಿಷೇಕವಾಗಬೇಕೆಂದು ತಮ್ಮ ಇಷ್ಟದೇವತಾಪ್ರಾರ್ಥನೆಗಳನ್ನು ಮಾಡುತ್ತಿದ್ದರು.



೪ನೆಯ ಅಧ್ಯಾಯ

## ಶ್ರೀರಾಮನು ಪಟ್ಟಾಭಿಷೇಕಕ್ಕಾಗಿ ತಂದೆತಾಯಿಗಳಿಂದ ಆಶೀರ್ವಾದವನ್ನು ಪಡೆದದ್ದು

ಅನಂತರ ಸಕಲಶಾಸ್ತ್ರನಿರ್ಣಯವನ್ನೂ ಬಲ್ಲ ದಶರಥರಾಯನು ತನ್ನಮಂತ್ರಿಗಳೊಡನೆ ಆಲೋಚನೆ ಮಾಡಿ ತನ್ನ ಕುಮಾರನಾದ ಶ್ರೀರಾಮನಿಗೆ ಪಟ್ಟವನ್ನು ಕಟ್ಟಲು ನಿಶ್ಚಯಿಸಿ ತನ್ನ ಪ್ರಧಾನನಾದ ಸುಮಂತ್ರನನ್ನು ಕರೆದು "ನಾಳೆ ಪುಷ್ಯನಕ್ಷತ್ರದ ಶುಭಲಗ್ನದಲ್ಲಿ ಕೆಂದಾವರೆ ಹೂವಿನ ಎಸಳುಗಳಂತೆ ಕೆಂಪಾದ ಕಣ್ಣುಗಳುಳ್ಳ ಶ್ರೀರಾಮನಿಗೆ ಪಟ್ಟವನ್ನು ಕಟ್ಟಬೇಕು. ನೀನು ಅತಿಶೀಘ್ರದಲ್ಲಿ ಆತನ ಅರಮನೆಗೆ ಹೋಗಿ ಆತನನ್ನು ಕರೆದುಕೊಂಡು ಬಾ" ಎಂದು ಆಜ್ಞಾಪಿಸಿದನು.

ಸುಮಂತ್ರನು ಶೀಘ್ರದಲ್ಲಿ ಶ್ರೀರಾಮನ ಅರಮನೆಗೆ ಹೋಗಿ ಬಾಗಿಲು ಕಾಯುವವನ ಮೂಲಕ ಹೇಳಿ ಕಳುಹಿಸಲು ಆ ಬಾಗಿಲವರು ಒಳಕ್ಕೆ ಹೋಗಿ ಸುಮಂತ್ರನು ಬಂದಿರುವುದನ್ನು ಶ್ರೀರಾಮನಿಗೆ ಬಿನ್ನಯಿಸಿದರು. ಶ್ರೀರಾಮನು ಆತನು ಬಂದ ವೃತ್ತಾಂತವನ್ನು ಕೇಳಿ ಒಳಗೆ ಕರೆಯಿಸಿ ಆತನನ್ನು ಕುರಿತು "ಎಲೈ ಸುಮಂತ್ರನೆ, ನೀನು ಏನುಕಾರಣವಾಗಿ ಬಂದೆ?" ಎಂದು ಕೇಳಿದನು.

ಸುಮಂತ್ರನು "ಶ್ರೀರಾಮ, ದಶರಥರಾಯನು ನಿನ್ನನ್ನು ಕರೆತರಹೇಳಿದನು. ನೀನು ಶೀಘ್ರದಲ್ಲಿ ಹೊರಡು" ಎಂದು ಹೇಳಿದನು.

ಅದನ್ನು ಕೇಳಿ ಶ್ರೀರಾಮನು ತನ್ನ ತಂದೆಯ ಸಮೀಪಕ್ಕೆ ಅತಿಶೀಘ್ರದಲ್ಲಿ ಹೋದನು. ಆ ರಾಯನು ಪ್ರೀತಿಯಿಂದ ಒಳಗೆ ಬರಹೇಳಲು ಅರಮನೆಯ ಒಳಗೆ ಹೋಗಿ ಆತನನ್ನು ಕಂಡು

ಕೈಮುಗಿದುಕೊಂಡು ಸಮೀಪಕ್ಕೆ ಹೋಗಿ ನಮಸ್ಕಾರವನ್ನು ಮಾಡಿದನು. ಆ ರಾಯನು ಮಗನನ್ನು ಬಿಗಿದಪ್ಪಿ ಗದ್ದುಗೆಯನ್ನು ಕೊಟ್ಟು ಸಮೀಪದಲ್ಲಿ ಕುಳ್ಳಿರಿಸಿಕೊಂಡು "ಶ್ರೀರಾಮ, ನಾನು ದೀರ್ಘಾಯುಷ್ಯವಂತನಾಗಿ ಬಹುಕಾಲ ಅನೇಕ ಭೋಗಗಳನ್ನು ಅನುಭವಿಸಿದೆನು. ನನಗೆ ಉತ್ತಮನಾದ ಕುಮಾರನಾಗಿ ನೀನು ಜನಿಸಿದೆ. ನಾನು ಅನೇಕ ವೇದಶಾಸ್ತ್ರಗಳನ್ನು ಪಠಿಸಿದೆನು. ಅನೇಕ ದಾನಗಳನ್ನು ಯಜ್ಞಗಳನ್ನೂ ಮಾಡಿದೆನು. ನಾನಾ ಬಗೆಯ ಭೋಗಗಳಿಂದ ಸುಖವನ್ನನುಭವಿಸಿದೆನು. ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನಸಂಪತ್ತಿನಿಂದ ಋಷಿಗಳ ಋಣವನ್ನು ಕಳೆದುಕೊಂಡೆನು. ಯಜ್ಞಾದಿಸತ್ಕರ್ಮಗಳಿಂದ ದೇವತೆಗಳ ಋಣವನ್ನು ಕಳೆದುಕೊಂಡೆನು. ಸಂತಾನವನ್ನು ಪಡೆದು ಪಿತೃಗಳ ಋಣವನ್ನು ಕಳೆದುಕೊಂಡೆನು. ಹೀಗೆ ಋಣತ್ರಯದಿಂದ ವಿಮುಕ್ತನಾದ ನನಗೆ ನಿನ್ನ ಪಟ್ಟಾಭಿಷೇಕವನ್ನು ಮಾಡುವ ಕಾರ್ಯವಲ್ಲದೆ ಮತ್ತೊಂದು ಕಾರ್ಯವಿಲ್ಲ. ಆದಕಾರಣ ನಾನು ಹೇಳುವ ಕಾರ್ಯವನ್ನಂಗೀಕರಿಸು. ಸಮಸ್ತ ಪ್ರಧಾನಿಗಳೂ ನೀನೇ ಅರಸನಾಗಬೇಕೆಂದು ಬಯಸುತ್ತಾರೆ. ಆದಕಾರಣ ನಿನಗೆ ಯುವರಾಜಪಟ್ಟವನ್ನು ಕಟ್ಟಬೇಕೆಂದು ನಿಶ್ಚಯಿಸಿದ್ದೇನೆ. ಅದಲ್ಲದೆ ನಾನು ಸ್ವಪ್ನಗಳಲ್ಲಿ ಬಹುಭಯಂಕರಗಳಾದ ಅಮಂಗಳಸೂಚಕಗಳನ್ನು ಕಾಣುತ್ತಿದ್ದೇನೆ. ಬರಸಿಡಿಲು ಗುಡುಗಿಕೊಂಡು ಎರಗುವುದು, ಅಂತರಿಕ್ಷಮಾರ್ಗದಿಂದ ಕಿಡಿಗಳುದುರುವುದು ಮೊದಲಾದ ಅದ್ಭುತಗಳನ್ನು ಕಾಣುತ್ತೇನೆ. ನನ್ನ ನಕ್ಷತ್ರದಲ್ಲಿಯೂ ಜನ್ಮರಾಶಿಯಲ್ಲಿಯೂ ಸೂರ್ಯ ಅಂಗಾರಕ ರಾಹುಗಳ ಯೋಗಗಳೂ ಕೂಡಿವೆ. ಇಂಥ ಅದ್ಭುತಗಳಾದರೆ ಅರಸನಿಗೆ ಮೃತ್ಯುವೆಂದು ದೈವಜ್ಞರು ಹೇಳುತ್ತಾರೆ. ಆದ್ದರಿಂದ ಮೊದಲು ನಿನಗೆ ಪಟ್ಟಾಭಿಷೇಕವನ್ನು ಮಾಡಿ ನೋಡಬೇಕು. ಲೋಕದಲ್ಲಿ ಮನುಷ್ಯರಿಗೆ ಬುದ್ಧಿಯು ಮಹಾಚಂಚಲವಾದದ್ದಲ್ಲದೆ ಸ್ಥಿರವಿಲ್ಲ. ಚಂದ್ರನು ಪುನರ್ವಸುನಕ್ಷತ್ರಕ್ಕೆ ಬರುತ್ತಿದ್ದಾನೆ. ನಾಳೆ ಪುಷ್ಯಚಂದ್ರನ ಯೋಗವೆಂದು ಜ್ಯೌತಿಷ್ಕರು ಹೇಳುತ್ತಾರೆ. ಆ ಪುಷ್ಯಚಂದ್ರನ ಯೋಗದಲ್ಲಿ ನಿನಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದು ನನ್ನ ಮನಸ್ಸಿನಲ್ಲಿ ಲವಲವಿಕೆಯಿದೆ. ಆದಕಾರಣ ನೀನು ನಿನ್ನ ಹೆಂಡತಿಯಾದ ಸೀತಾದೇವಿಯ ಸಂಗಡ ದರ್ಭೆಯ ಹಾಸಿಗೆಯಲ್ಲಿ ನಿಯಮಸ್ಥನಾಗಿರು. ಈ ರಾತ್ರಿಯಲ್ಲಿ ನಿನಗಾಪ್ತರಾದ ಮಿತ್ರರು ನಿನ್ನನ್ನು ಸಾವಧಾನವಾಗಿ ರಕ್ಷಿಸಿಕೊಂಡಿರಲಿ. ಇಂಥ ಶುಭಕಾರ್ಯಗಳಿಗೆ ಬಹು ವಿಘ್ನಗಳುಂಟಾಗುವುವು. ಈಗ ಭರತನು ವಿದೇಶಕ್ಕೆ ಹೋಗಿದ್ದಾನೆ. ಇದೇ ನಿನಗೆ ಪಟ್ಟಾಭಿಷೇಕಕ್ಕೆ ಸಮಯವು. ಭರತನು ನಿನಗೆ ಸಮ್ಮತನಾಗಿ ಸದ್ವರ್ತನೆಯಲ್ಲಿದ್ದಾನೆ. ಆತನಿಗೆ ನಿನ್ನಲ್ಲಿ ಜ್ಯೇಷ್ಠಭ್ರಾತೃವೆಂಬ ಬುದ್ಧಿಯಿಂದ ಕಾಮಕ್ರೋಧಗಳಿಲ್ಲದಿದ್ದರೂ ಲೋಕದಲ್ಲಿ ಮನುಷ್ಯರ ಅಂತಃಕರಣವನ್ನರಿಯುವುದಕ್ಕೆ ಶಕ್ಯವಲ್ಲವೆಂದು ನನ್ನ ಮನಸ್ಸಿಗೆ ತೋರುತ್ತದೆ. ಸತ್ಪುರುಷರು ಮನಸ್ಸಿನಲ್ಲಿ ಯಾವಾಗಲೂ ಪರಹಿತವನ್ನೇ ಚಿಂತಿಸುತ್ತಾರಲ್ಲದೆ ಮತ್ತೊಂದನ್ನು ಚಿಂತಿಸುವುದಿಲ್ಲ. ನೀನು ಈಹೊತ್ತು ನಿನ್ನ ಭಾರ್ಯೆಯೊಡನೆ ನಿಯಮದಿಂದಿದ್ದು ನಾಳೆ ಶುಭಲಗ್ನದಲ್ಲಿ ಪಟ್ಟಾಭಿಷೇಕಕ್ಕೆ ಸಿದ್ಧನಾಗು" ಎಂದು ಹೇಳಿಕಳುಹಿಸಿದನು.

ಶ್ರೀರಾಮನು ಮಹಾಪ್ರಸಾದವೆಂದು ಆ ರಾಯನಿಗೆ ನಮಸ್ಕಾರವನ್ನು ಮಾಡಿ ಬೀಳ್ಕೊಂಡು ತನ್ನ ಅರಮನೆಗೆ ಹೋದನು. ಆತನಿಗೆ ಪಟ್ಟಾಭಿಷೇಕವಾಗುವುದೆಂದು ಕೌಸಲ್ಯಾದೇವಿಯು ನಿಯಮದಿಂದ ತನ್ನ ದೇವಪೂಜೆಯ ಮನೆಯಲ್ಲಿ ದೇವತಾರ್ಚನೆಯನ್ನು ಮಾಡುತ್ತ ಧ್ಯಾನಾಸಕ್ತೆಯಾಗಿದ್ದಳು. ಆಕೆಯ ಸಮೀಪದಲ್ಲಿ ಸೇವಾರ್ಥವಾಗಿ ಸುಮಿತ್ರಾದೇವಿಯು ತನ್ನ ಮಗನಾದ ಲಕ್ಷ್ಮಣನ ಸಹಿತವಾಗಿ ಕಾದಿದ್ದಳು. ಸೀತಾದೇವಿಯು ತನ್ನ ಪ್ರಾಣಕಾಂತನಾದ ಶ್ರೀರಾಮನ ಪಟ್ಟಾಭಿಷೇಕವಾರ್ತೆಯನ್ನು ಕೇಳಿ ತನ್ನ ಅತ್ತೆಯಾದ ಕೌಸಲ್ಯಾದೇವಿಯ ಸಮೀಪದಲ್ಲಿ ಸೇವಾಸತ್ಕಾರಗಳನ್ನು ಮಾಡಿಕೊಂಡಿದ್ದಳು. ಆಗ ಶ್ರೀರಾಮನು ತನ್ನ ತಾಯಿಯಾದ ಕೌಸಲ್ಯಾದೇವಿಯ

ಸಮೀಪಕ್ಕೆ ಹೋಗಿ ಸಮಸ್ಕಾರವನ್ನು ಮಾಡಿದನು. ಆ ದೇವಿಯು ಪ್ರಾಣಾಯಾಮವನ್ನು ಮಾಡುತ್ತ ಅಂತರಂಗದಲ್ಲಿ ಪರಮಪುರುಷನಾದ ನಾರಾಯಣನ ಧ್ಯಾನವನ್ನು ಮಾಡುತ್ತ ಕಣ್ಣುಗಳನ್ನು ಮುಚ್ಚಿಕೊಂಡಿದ್ದಳು. ಶ್ರೀರಾಮನು ಆಕೆಗೆ ನಮಸ್ಕರಿಸಿ ಆ ದೇವಿಯನ್ನು ಕುರಿತು "ಅಮ್ಮಾ, ನನ್ನ ತಂದೆಯಾದ ದಶರಥರಾಯನು ಪ್ರಜಾಪಾಲನಕ್ಕೋಸ್ಕರ ನಾಳೆ ಪುಷ್ಯನಕ್ಷತ್ರದಲ್ಲಿ ನನಗೆ ಪಟ್ಟಾಭಿಷೇಕವನ್ನು ಮಾಡುವುದಾಗಿ ಹೇಳಿದನು. ಈ ರಾತ್ರಿ ನಾನು ಸೀತೆಯೊಡನೆ ಉಪವಾಸ ಮಾಡಬೇಕೆಂದು ಗುರುಗಳಾದ ವಸಿಷ್ಠ ವಾಮದೇವಾದಿಗಳು ಹೇಳಲು ನನ್ನ ತಂದೆಯೂ ಹಾಗೆ ಮಾಡಬೇಕೆಂದು ಆಜ್ಞಾಪಿಸಿದನು. ನೀನು ನನಗೆ ಮಾಡುವ ಮಾಂಗಲ್ಯೋತ್ಸವಗಳನ್ನು ಮಾಡು. ಸೀತೆಗೂ ಕಾಲೋಚಿತವಾದ ಅಲಂಕಾರಗಳನ್ನು ಮಾಡು" ಎಂದು ನುಡಿದನು.

ಕೌಸಲ್ಯಾದೇವಿಯು ತನ್ನ ಮನಸ್ಸಿನಲ್ಲಿದ್ದ ಇಷ್ಟಾರ್ಥವು ಸಂದಿತೆಂದು ಅತಿಹರ್ಷಪಟ್ಟು ಶ್ರೀರಾಮನನ್ನು ಕುರಿತು "ರಾಮ, ನೀನು ಆಯುಷ್ಮಂತನಾಗಿರು. ನಿನ್ನ ಸಮಸ್ತ ಶತ್ರುಗಳೂ ಲಯವಾಗಲಿ. ಸುಮಿತ್ರಾದೇವಿಯ ಕುಮಾರನಾದ ಲಕ್ಷ್ಮಣನೂ ನೀನೂ ಶುಭನಕ್ಷತ್ರ ಶುಭಲಗ್ನದಲ್ಲಿ ಜನಿಸಿದಿರಿ. ಲಕ್ಷ್ಮಣನು ನಿನಗೆ ಸಮಾನವಾದ ಐಶ್ವರ್ಯವನ್ನು ಪಡೆಯಲಿ. ನಿಮ್ಮ ತಂದೆಯಾದ ದಶರಥರಾಯನು ನಿಮ್ಮ ಸದ್ಗುಣಗಳಿಂದ ಅತ್ಯಂತ ಸಂತುಷ್ಟನಾದನು. ಮಹಾತ್ಮನಾದ ಆ ರಾಯನ ವಾಕ್ಯವು ವ್ಯರ್ಥವಾಗದು. ಇಕ್ಷ್ವಾಕುವಂಶದ ರಾಯರ ಸಮಸ್ತ ಸಂಪತ್ತುಗಳೂ ನಿನ್ನಲ್ಲಿ ಸೇರುವುವು" ಎಂದು ಆಶೀರ್ವಾದವನ್ನು ಮಾಡಿದಳು.

ಶ್ರೀರಾಮನು ಕೌಸಲ್ಯಾದೇವಿಯ ಆಶೀರ್ವಾದವನ್ನು ಕೈಗೊಂಡು ಸಮೀಪದಲ್ಲಿ ಕೈಮುಗಿದು ಕೊಂಡು ನಿಂತಿದ್ದ ಲಕ್ಷ್ಮಣನನ್ನು ನೋಡಿ "ಲಕ್ಷ್ಮಣ, ನೀನು ನನ್ನ ಎರಡನೆಯ ಶರೀರದ ಹಾಗೆ ಸಮಸ್ತ ಭೂಮಂಡಲವನ್ನೂ ಪರಿಪಾಲಿಸು. ಸಕಲ ರಾಜಸುಖವನ್ನೂ ಅನುಭವಿಸು. ನಾನು ನಿನಗೋಸ್ಕರವೇ ಈ ರಾಜ್ಯಾಧಿಪತ್ಯವನ್ನು ಬಯಸುತ್ತೇನೆ" ಎಂದು ಹೇಳಿದನು. ಆಮೇಲೆ ಸೀತಾದೇವಿಯನ್ನು ಉಪವಾಸವ್ರತಸ್ಥೆಯಾಗಿರಲು ತಿಳಿಸಿ ಕೌಸಲ್ಯಾದೇವಿಗೆ ನಮಸ್ಕರಿಸಿ ಅವಳ ಅನುಜ್ಞೆ ಪಡೆದು ತನ್ನ ಅರಮನೆಗೆ ಹೋದನು.



## ೫ನೆಯ ಅಧ್ಯಾಯ

## ಶ್ರೀರಾಮನು ಪಟ್ಟಾಭಿಷೇಕಕ್ಕಾಗಿ ವ್ರತವನ್ನಾಚರಿಸಿದ್ದು

ಇತ್ತ ದಶರಥರಾಯನು ಪುರೋಹಿತನಾದ ವಸಿಷ್ಠಮುನೀಶ್ವರನನ್ನು ಕುರಿತು "ವಸಿಷ್ಠ ಮುನೀಶ್ವರರೆ, ನೀವು ಶ್ರೀರಾಮನ ಐಶ್ವರ್ಯಕೀರ್ತಿಗಳು ಹೆಚ್ಚುವುದಕ್ಕಾಗಿ ಆತನಿಗೂ ಸೀತಾದೇವಿಗೂ ಪಟ್ಟಾಭಿಷೇಕವ್ರತಾಂಗವಾದ ಉಪವಾಸವನ್ನು ಮಾಡಿಸಿರಿ" ಎಂದು ಹೇಳಿದನು.

ಮಹಾವಾಗ್ವಿಶಾರದನಾಗಿ ಮಂತ್ರಾರ್ಥರಹಸ್ಯವನ್ನು ಬಲ್ಲ ವಸಿಷ್ಠಮುನೀಶ್ವರನು ಬೃಹದ್ರಥ ವನ್ನೇರಿಕೊಂಡು ಶ್ರೀರಾಮನ ಅರಮನೆಗೆ ಹೋದನು. ರಾಮನು ವಸಿಷ್ಠಮುನೀಶ್ವರನು ಬಂದ ವೃತ್ತಾಂತವನ್ನು ಕೇಳಿ, ಎದುರುಗೊಂಡು ಬಂದು ಅಭಿವಂದಿಸಿದನು. ವಸಿಷ್ಠಮುನಿಯು ಹರ್ಷ ಯುಕ್ತನಾಗಿ ಆತನನ್ನು ನೋಡಿ "ಶ್ರೀರಾಮ, ನಿನ್ನ ತಂದೆಯಾದ ದಶರಥರಾಯನು ನಿನ್ನ ವಿನಯಾದಿಸುಗುಣಗಳನ್ನು ಕಂಡು ಅಧಿಕವಾದ ಪ್ರೀತಿಯಿಂದ ನಿನಗೆ ನಾಳೆ ಪಟ್ಟಾಭಿಷೇಕವನ್ನು ಮಾಡು

ವೃದಕ್ಕಾಗಿ ಈ ಹೊತ್ತು ಸೀತಾಸಮೇತನಾಗಿ ನಿನಗೆ ಪಟ್ಟಾಭಿಷೇಕಾಂಗವಾದ ಉಪವಾಸವ್ರತವನ್ನು ಮಾಡಿಸಲು ನನ್ನನ್ನು ಕಳುಹಿಸಿದನು. ಪೂರ್ವದಲ್ಲಿ ನಹುಷನು ಯಯಾತಿರಾಯನಿಗೆ ಪಟ್ಟವನ್ನು ಕಟ್ಟಿದ ಮರ್ಯಾದೆಯಲ್ಲಿ ನಿನ್ನ ತಂದೆಯು ನಾಳೆ ನಿನಗೆ ಪಟ್ಟಾಭಿಷೇಕವನ್ನು ಮಾಡುವನು. ಆದ್ದರಿಂದ ನೀನು ಸೀತಾಸಮೇತನಾಗಿ ಇಂದು ವ್ರತೋಪವಾಸವನ್ನು ಮಾಡು" ಎಂದು ನುಡಿದನು. ಅನಂತರ ಸೀತಾಸಮೇತನಾದ ಶ್ರೀರಾಮನಿಗೆ ವ್ರತನಿಯಮವನ್ನು ವಿಧ್ಯುಕ್ತಪ್ರಕಾರವಾಗಿ ಮಾಡಿಸಿ ಅವರಿಂದ ಸತ್ಕರಿಸಲ್ಪಟ್ಟು ದಶರಥರಾಯನ ಸಮೀಪಕ್ಕೆ ಹೋದನು. ಶ್ರೀರಾಮನು ತನ್ನ ಸಮೀಪದಲ್ಲಿದ್ದ ಸುಹೃತ್ತುಗಳಿಗೆ ಸಾವಧಾನರಾಗಿ ಕಾದುಕೊಂಡಿರಲು ಆಜ್ಞಾಪಿಸಿ ತನ್ನ ಮನೆಯಲ್ಲಿ ಸೀತಾಸಮೇತನಾಗಿ ವ್ರತನಿಯಮದಿಂದಿದ್ದನು. ಸೀತಾದೇವಿಯು ತನ್ನ ಕಾಂತಿಯಿಂದ ಮೆರೆಯುತ್ತ ಸಖಿಯರೊಡನೆ ಕೂಡಿಕೊಂಡಿರಲು ಆ ಸ್ತ್ರೀಯರಿಂದ ಆ ಅರಮನೆಯು ಪುಷ್ಪರಸಾಸ್ವಾದನದಿಂದ ಮದಿಸಿರುವ ಅನೇಕ ಪಕ್ಷಿಗಳುಳ್ಳ ಕೊಳದಹಾಗೆ ಮನೋಹರವಾಗಿ ಒಪ್ಪುತ್ತಿತ್ತು.

ಆ ಬಳಿಕ ವಸಿಷ್ಠಮಹರ್ಷಿಯು ಶ್ರೀರಾಮನ ಅರಮನೆಯಿಂದ ದಶರಥರಾಯನ ಮನೆಗೆ ಬರುವಾಗ ಚೌಬೀದಿಮಾರ್ಗಗಳಲ್ಲಿ ಶ್ರೀರಾಮನ ಪಟ್ಟಾಭಿಷೇಕಮಹೋತ್ಸವವನ್ನು ನೋಡಬೇಕೆಂದು ಬಂದು ಇಟ್ಟಣಿಸಿದ್ದ ಜನಸಮೂಹದ ಸಂತೋಷಾತಿಶಯದಿಂದುಂಟಾದ ಕಲಕಲಧ್ವನಿಗಳು ಸುತ್ತಲೂ ಹರಡಿರಲು ಅಯೋಧ್ಯಾಪಟ್ಟಣವು ಸಮುದ್ರರಾಜನಂತೆ ಒಪ್ಪುತ್ತಿತ್ತು. ಆ ಪಟ್ಟಣವು ಮೇಲ್ಕಟ್ಟುಗಳೂ ತೋರಣಗಳೂ ಪರಿಮಳೋದಕ ರಂಗವಲ್ಲಿ ಪುಷ್ಪಮಾಲಿಕೆಗಳೂ ಉಳ್ಳದ್ದಾಗಿ ಅತ್ಯಂತ ಮನೋಹರವಾಗಿ ಒಪ್ಪುತ್ತಿತ್ತು. ಅಲ್ಲಿದ್ದ ಸ್ತ್ರೀಜನ ಪರಿಜನ ಪುರಜನಗಳು ಮೊದಲಾದ ಸಮಸ್ತ ಪ್ರಜೆಗಳೂ "ಯಾವಾಗ ಸೂರ್ಯೋದಯವಾಗುವುದೊ! ಯಾವಾಗ ಶ್ರೀರಾಮನು ಪಟ್ಟಾಭಿಷಿಕ್ತನಾಗಿ ಸರ್ವಾಭರಣಭೂಷಿತನಾಗಿ ಬರುವನೊ! ಯಾವಾಗ ಆತನನ್ನು ಕಣ್ಣುಗಳೂ ಮನಸ್ಸೂ ದಣಿಯುವಂತೆ ನೋಡುವೆವೊ!" ಎಂದು ಅತ್ಯಂತ ಲವಲವಿಕೆಯಿಂದ ಕಾಯುತ್ತಿದ್ದರು. ಹೀಗೆ ಇಟ್ಟಣಿಸಿದ್ದ ರಾಜಮಾರ್ಗಗಳಿಂದ ಅಯೋಧ್ಯಾಪಟ್ಟಣವು ಅತ್ಯಂತ ಮನೋಹರವಾಗಿರಲು, ವಸಿಷ್ಠಮುನೀಶ್ವರನು ಆ ಜನಸಮೂಹಗಳಲ್ಲಿ ದಾರಿಮಾಡಿಕೊಂಡು ದಶರಥರಾಯನ ಅರಮನೆಗೆ ಬಂದು ಕೈಲಾಸಪರ್ವತದ ಕೋಡುಗಲ್ಲಿನಂತೆ ಬಹಳ ಉನ್ನತವಾಗಿ ಹಾಲುಗಾರೆಯಿಂದ ಅತ್ಯಂತ ಬಿಳುಪಾಗಿದ್ದ ಉಪ್ಪರಿಗೆಯನ್ನು ಹತ್ತಿ ಆ ರಾಯನನ್ನು ಕಂಡನು. ದೇವೇಂದ್ರನು ತನ್ನ ಗುರುವಾದ ಬೃಹಸ್ಪತಿಯನ್ನು ಕಂಡು ಪ್ರತ್ಯುತ್ಥಾನಾದಿಗಳನ್ನೂ ವಂದನೆಯನ್ನೂ ಮಾಡುವಂತೆ ದಶರಥನು ವಸಿಷ್ಠಮುನೀಶ್ವರನನ್ನು ಕಂಡು ನಮಸ್ಕರಿಸಿ "ಮುನೀಶ್ವರರೆ, ಶ್ರೀರಾಮನಿಗೆ ಪಟ್ಟಾಭಿಷೇಕಾಂಗವಾದ ವ್ರತನಿಯಮವನ್ನೂ ಉಪವಾಸವನ್ನೂ ಮಾಡಿಸಿದಿರಾ ?" ಎಂದು ಆತನನ್ನು ಕೇಳಿದನು.

ಆ ಮುನೀಶ್ವರನು "ಎಲೈ ರಾಯನೆ, ಶ್ರೀರಾಮನಿಗೆ ಸಾಂಗವಾಗಿ ವ್ರತೋಪವಾಸನಿಯಮವನ್ನು ಉಪದೇಶಮಾಡಿ ಬಂದೆನು" ಎಂದು ಹೇಳಿದನು.

ದಶರಥನು ಅತ್ಯಂತ ಹರ್ಷದಿಂದ ವಸಿಷ್ಠಮುನೀಶ್ವರನಿಗೆ ಆಸನವನ್ನು ಕೊಟ್ಟು ಕುಳ್ಳಿರಿಸಿ ತಾನೂ ಸಿಂಹಾಸನಾರೂಢನಾಗಿರಲು, ಆ ಆಸ್ಥಾನಮಂಟಪದಲ್ಲಿದ್ದ ಸಮಸ್ತ ದೊರೆಗಳೂ ಒಬ್ಬೊಬ್ಬರಾಗಿ ವಸಿಷ್ಠಮುನೀಶ್ವರನಿಗೆ ಅಭಿವಂದಿಸಿದರು. ಆಮೇಲೆ ದಶರಥರಾಯನು ಆ ದೊರೆಗಳನ್ನೂ ಸಮಸ್ತ ಪುರಜನ ಪರಿಜನರನ್ನೂ ಕಳುಹಿಸಿ ಗುರುಗಳ ಅಪ್ಪಣೆಯಿಂದ, ಸಿಂಹರಾಜನು ತನ್ನ ಪರ್ವತದ ಗುಹೆಯನು ಪ್ರವೇಶಿಸುವ ಹಾಗೆಯೂ ನಕ್ಷತ್ರಸಮೂಹದಿಂದಿಟ್ಟಣಿಸಿರುವ ಅಂತರಿಕ್ಷಮಾರ್ಗವನ್ನು ಚಂದ್ರನು ಪ್ರವೇಶಿಸುವ ಹಾಗೆಯೂ ಸಮಸ್ತಾಭರಣಭೂಷಿತೆಯರಾದ

ಸ್ತ್ರೀಜನರಿಂದ ಇಟ್ಟಣಿಸಿ ದೇವೇಂದ್ರನ ಅರಮನೆಗೆ ಸಮಾನವಾಗಿ ಮನೋಹರವಾದ ತನ್ನ ಅಂತಃಪುರವನ್ನು ಪ್ರವೇಶಿಸಿದನು.



೬ನೆಯ ಅಧ್ಯಾಯ

## ಅಯೋಧ್ಯಾಪಟ್ಟಣವನ್ನು ಅಲಂಕರಿಸಿದ್ದು

ಪುರೋಹಿತನಾದ ವಸಿಷ್ಠಮಹಾಮುನಿಯು ಹೊರಟು ಹೋದ ಬಳಿಕ ರಘುನಂದನನು ಕಾಯಶುದ್ಧಿಗೋಸುಗ ಸ್ನಾನವನ್ನು ಮಾಡಿ ವಿಶಾಲಾಕ್ಷಿಯಾದ ಸೀತಾದೇವಿಯೊಡನೆ ಶ್ರೀಮನ್ನಾರಾಯಣನನ್ನು ಉಪಾಸಿಸಿದನು. ದಶರಥನಂದನನಾದ ಶ್ರೀರಾಮನು ಆ ವೇಳೆಯಲ್ಲಿ ಹವಿಸ್ಸಿನ ಪಾತ್ರೆಯನ್ನು ಶಿರಸ್ಸಿನಲ್ಲಿ ಧರಿಸಿ ಮಹಾಮಹಿಮೆಯುಳ್ಳ ಶ್ರೀಮನ್ನಾರಾಯಣನನ್ನು ಕುರಿತು ಪ್ರಜ್ವಲಿಸುವ ಅಗ್ನಿಯಲ್ಲಿ ಯಥಾವಿಧಿಯಾಗಿ ಹೋಮಮಾಡಿ, ಆ ಹವಿಃಶೇಷವನ್ನು ಭುಜಿಸಿ ಶ್ರೀಮನ್ನಾರಾಯಣನನ್ನು ಧ್ಯಾನಿಸುತ್ತಾ ಮೌನವ್ರತವುಳ್ಳವನಾಗಿಯೂ, ನಿಶ್ಚಂಚಲವಾದ ಮನಸ್ಸುಳ್ಳವನಾಗಿಯೂ ಜಿತೇಂದ್ರಿಯನಾಗಿಯೂ ದರ್ಭಾಸನದಲ್ಲಿ ಸೀತಾದೇವಿಯೊಡನೆ ದೇವರ ಮನೆಯಲ್ಲಿ ಮಲಗಿದ್ದನು.

ಆ ಬಳಿಕ ಪ್ರಾತಃಕಾಲವಾಗುವುದಕ್ಕೆ ಒಂದು ಜಾವ ಮುಂಚಿತವಾಗಿ ಎಚ್ಚರಗೊಂಡು ಮನೆಗೆ ಅಲಂಕಾರವಿಧಾನಗಳನ್ನು ಮಾಡಿಸಿ ಪೌರಾಣಿಕರೂ ವಂಶಾವಳಿಯನ್ನು ಸ್ತುತಿಸುವವರೂ ಸ್ತುತಿಪಾಠಕರೂ ಹೇಳುತ್ತಿದ್ದ ಕರ್ಣಸುಖಗಳಾದ ವಚನಗಳನ್ನು ಕೇಳುತ್ತಾ ಪ್ರಾತಸ್ಸಂಧ್ಯಾದಿ ದೇವತೆಗಳನ್ನು ಧ್ಯಾನಿಸಿ ಸೂರ್ಯೋಪಾಸನೆಯನ್ನು ಮಾಡಿ ಗಾಯತ್ರೀಜಪವನ್ನು ಮಾಡಿ ಶಿರಸಾ ಪ್ರಣಮಿಸಿ ನಿರ್ಮಲ ವಸ್ತ್ರವನ್ನು ಧರಿಸಿ ಬ್ರಾಹ್ಮಣೋತ್ತಮರಿಂದ ಸ್ವಸ್ತಿವಾಚನವನ್ನು ಮಾಡಿಸಿದನು. ಆ ಸಮಯದಲ್ಲಿ ಗಂಭೀರವಾಗಿಯೂ ಮಧುರವಾಗಿಯೂ ಇರುವ ಆ ಬ್ರಾಹ್ಮಣರ ಪುಣ್ಯಾಹವಾಚನದ ಘೋಷವು ತೂರ್ಯಾದಿಘೋಷದಿಂದ ಪ್ರತಿಧ್ವನಿಯನ್ನುಂಟುಮಾಡುತ್ತ ಆ ಪುರದಲ್ಲೆಲ್ಲಾ ತುಂಬಿತು. ರಘುನಂದನನು ಸೀತಾಸಮೇತನಾಗಿ ಯೌವರಾಜ್ಯಪಟ್ಟಾಭಿಷೇಕಕ್ಕಾಗಿ ಉಪವಾಸಮಾಡಿದನೆಂಬ ವಾರ್ತೆಯನ್ನು ಕೇಳಿ, ಅಯೋಧ್ಯಾಪುರವಾಸಿಗಳಾದ ಜನರೆಲ್ಲರೂ ಅತಿಸಂತೋಷವುಳ್ಳವರಾದರು. ಅವರು ಬೆಳಗಾಗುತ್ತಿರುವುದನ್ನು ಕಂಡು ಪುರವನ್ನು ಶೃಂಗಾರಮಾಡಿದರು. ಆ ಸಮಯದಲ್ಲಿ ಬಿಳಿಯ ಮೋಡಗಳ ಶೃಂಗಗಳಂತೆ ಕಾಂತಿಯುಳ್ಳ ದೇವಾಲಯಗಳಲ್ಲಿಯೂ ನಾಲ್ಕು ಬೀದಿಗಳು ಸೇರಿರುವ ಸ್ಥಳಗಳಲ್ಲಿಯೂ ರಾಜಬೀದಿಗಳಲ್ಲಿಯೂ ಚೌದ್ಧಾಲಯಗಳಲ್ಲಿಯೂ ಕಾಳಗಕ್ಕೋಸುಗ ಕೋಟೆಯ ಮೇಲ್ಭಾಗದಲ್ಲಿ ಕಟ್ಟಲ್ಪಟ್ಟ ಮಂಟಪಗಳಲ್ಲಿಯೂ ನಾನಾಬಗೆಯಾದ ಪದಾರ್ಥಗಳಿಂದ ಸಮೃದ್ಧವಾದ ಮಳಿಗೆಗಳಲ್ಲಿಯೂ ಮಹೈಶ್ವರ್ಯವುಳ್ಳ ಕುಟುಂಬಿಗಳ ಮಂದಿರಗಳಲ್ಲಿಯೂ ಸಭಾಸ್ಥಾನಗಳಲ್ಲಿಯೂ ಎಲ್ಲ ಕಡೆಯಲ್ಲಿಯೂ ಕಾಣಿಸುತ್ತಿರುವ ಉನ್ನತಗಳಾದ ವೃಕ್ಷಗಳಲ್ಲಿಯೂ ಮತ್ಸ್ಯಮಕರಾದಿಚಿಹ್ನಿತಗಳಾದ ದೊಡ್ಡ ಧ್ವಜಗಳನ್ನೂ ಚಿಕ್ಕ ನಿಶಾನಿಗಳನ್ನೂ ಕಟ್ಟಿದರು. ಆ ಪುರವಾಸಿಗಳಾದ ಜನರೆಲ್ಲರೂ, ಅಲ್ಲಲ್ಲಿ ನಟ ನರ್ತಕ ಗಾಯಕರು ಮನಸ್ಸಂತೋಷಕರವಾಗಿ ನೃತ್ಯ ಗೀತ ವಾದ್ಯಾದಿಗಳನ್ನು ನಡೆಯಿಸುತ್ತಿರಲು ಅಂಗಳಗಳಲ್ಲಿಯೂ ಮಂದಿರಗಳಲ್ಲಿಯೂ ಪಟ್ಟಾಭಿಷೇಕಕ್ಕೆ ಸಂಬಂಧಿಸಿದ ಕಥೆಗಳನ್ನು ಹೇಳುತ್ತಿದ್ದರು. ಮತ್ತು ಮನೆಗಳ ಬಾಗಿಲುಗಳಲ್ಲಿ

ಆಡುತ್ತಿದ್ದ ಬಾಲಕರೂ ಕೂಡ ರಾಮಾಭಿಷೇಕಕ್ಕೆ ಉಚಿತವಾದ ಕಥೆಗಳನ್ನು ಒಬ್ಬರಿಗೊಬ್ಬರು ಹೇಳುತ್ತಿದ್ದರು. ಆ ವೇಳೆಯಲ್ಲಿ ರಾಜಬೀದಿಯು ಪುಷ್ಪಗಳಿಂದ ಪೂಜಿಸಲ್ಪಟ್ಟದ್ದಾಗಿ ಧೂಪಗಳಿಂದಲೂ ಗಂಧಪರಿಮಳದಿಂದಲೂ ಸುಗಂಧವನ್ನು ಬೀರತೊಡಗಿತು. ಶ್ರೀರಾಮನ ಪಟ್ಟಾಭಿಷೇಕ ಮಹೋತ್ಸವವು ಪೂರ್ತಿಯಾಗುವುದರೊಳಗಾಗಿ ರಾತ್ರಿಯು ಸಂಭವಿಸಬಹುದೆಂದು ರಾಜಬೀದಿಗಳು ಪ್ರಕಾಶಮಾನವಾಗಿರುವುದಕ್ಕೋಸ್ಕರ ವೃಕ್ಷಾಕಾರವಾದ ದೀಪಸ್ತಂಭಗಳನ್ನು ಅಲ್ಲಲ್ಲಿ ಇಟ್ಟರು. ಆ ಪುರವಾಸಿಗಳೆಲ್ಲರೂ ಈ ಪರಿ ಪಟ್ಟಣಾಲಂಕಾರಮಂಗೈದು ಶ್ರೀರಾಮನ ಯೌವರಾಜ್ಯಪಟ್ಟಾಭಿಷೇಕ ಮಹೋತ್ಸವವನ್ನು ನಿರೀಕ್ಷಿಸುತ್ತ ಅಂಗಳಗಳಲ್ಲಿಯೂ ಸಭೆಗಳಲ್ಲಿಯೂ ಗುಂಪಾಗಿ ಸೇರಿ ದಶರಥ ರಾಯನನ್ನು ಪ್ರಶಂಸಿಸುತ್ತಾ ಒಬ್ಬರಿಗೊಬ್ಬರು "ಆಹಾ! ಎಷ್ಟು ಆಶ್ಚರ್ಯ! ರಘುಕುಲವನ್ನು ಸಂತೋಷಗೊಳಿಸುತ್ತಿರುವ ಮಹಾತ್ಮನಾದ ದಶರಥರಾಯನು ತನಗೆ ವೃದ್ಧಾಪ್ಯವು ಪ್ರಾಪ್ತವಾಯಿತೆಂದರಿತು ಶ್ರೀರಾಮನಿಗೆ ಯೌವರಾಜ್ಯಪಟ್ಟಾಭಿಷೇಕವನ್ನು ಮಾಡುತ್ತಾನೆ. ನಮಗೆ ರಘುನಂದನನು ಒಡೆಯನಾಗುವನಾದಕಾರಣ ನಾವು ದೇವತೆಗಳಿಂದ ಅನುಗ್ರಹಿಸಲ್ಪಟ್ಟೆವು. ಮಹಾತ್ಮನಾದ ಶ್ರೀರಾಮನು ಲೋಕದಲ್ಲಿರುವ ಉತ್ತಮವಸ್ತುಗಳನ್ನೂ ಹೇಯವಸ್ತುಗಳನ್ನೂ ಚೆನ್ನಾಗಿ ಅರಿತವನಾಗಿಯೂ ಸಹೋದರರಲ್ಲಿ ಹೇಗೆ ಪ್ರೇಮವುಳ್ಳವನೋ ಹಾಗೆಯೇ ನಮ್ಮಲ್ಲಿಯೂ ಮಹಾ ಪ್ರೇಮವುಳ್ಳವನಾಗಿಯೂ ಅಹಂಕಾರಶೂನ್ಯವಾದ ಮನಸ್ಸುಳ್ಳವನಾಗಿಯೂ ತಿಳಿವಳಿಕೆಯುಳ್ಳವನಾಗಿಯೂ ಧರ್ಮಾತ್ಮನಾಗಿಯೂ ಭ್ರಾತೃಸೌಹಾರ್ದವುಳ್ಳವನಾಗಿಯೂ ಇರುವನು. ಈ ಮಹಾನುಭಾವನು ಬಹುಕಾಲ ನಮಗೆ ರಾಯನಾಗಿರಲಿ. ದಶರಥರಾಯನ ಅನುಗ್ರಹದಿಂದ ಪಟ್ಟಾಭಿಷಿಕ್ತನಾದ ಶ್ರೀರಾಮನನ್ನು ನಾವೆಲ್ಲರೂ ನೋಡುವೆವು. ಮಹಾತ್ಮನಾಗಿ ಪಾಪರಹಿತನಾದ ದಶರಥರಾಯನು ಬಹುಕಾಲ ಬದುಕಲಿ!" ಎಂಬುದಾಗಿ ಮಾತಾಡಿಕೊಳ್ಳುತ್ತಿದ್ದರು.

ಆ ವೇಳೆಯಲ್ಲಿ ಶ್ರೀರಾಮನ ಪಟ್ಟಾಭಿಷೇಕಮಹೋತ್ಸವವನ್ನು ನೋಡುವುದಕ್ಕೋಸ್ಕರ ಆ ಪುರದಲ್ಲಿ ದಿಕ್ಕುದಿಕ್ಕುಗಳಿಂದಲೂ ಜನರು ಬಂದು ತುಂಬಿಕೊಂಡರು. ಆಗ ಅಯೋಧ್ಯಾಪುರಿಗೆ ಬರುತ್ತಿದ್ದ ಜನಗಳಿಂದ ಸಂಭೂತವಾದ ಮಹಾಧ್ವನಿಯು ಪರ್ವಕಾಲಗಳಲ್ಲಿ ಕಡುವೇಗವುಳ್ಳ ಕಡಲಿನ ಧ್ವನಿಯೋ ಎಂಬಂತೆ ಕೇಳುತ್ತಿತ್ತು. ಇಂದ್ರನ ಮಂದಿರಕ್ಕೆ ಸಮಾನವಾದ ಆ ಪಟ್ಟಣವು ನೋಡಲಿಚ್ಛೆಯುಳ್ಳವರಾಗಿ ದೇಶದೇಶಗಳಿಂದ ಬಂದ ಜನಗಳಿಂದ ತುಂಬಿ, ಜಲಜಂತುಗಳಿಂದ ಶಬ್ದಾಯಮಾನವಾದ ಸಮುದ್ರೋದಕದಂತೆ ಪ್ರಕಾಶಿಸುತ್ತಿತ್ತು.



## ೭ ನೆ ಯ ಅ ಧ್ಯಾ ಯ

## ಮಂಥರೆಯು ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನ ಮಾಡಲು ಪಕ್ರಮಿಸಿದ್ದು

ಭರತನ ತಾಯಿಯಾದ ಕೈಕೇಯಿದೇವಿಗೆ ಮಂಥರೆ ಎಂಬ ದಾಸಿಯು ಇದ್ದಳು. ಅವಳು ಕೇಕಯರಾಯನ ಮನೆಯಲ್ಲಿದ್ದು ಕೈಕೇಯಿದೇವಿಗೆ ಮದುವೆಯಾದಾಗ ಆಕೆಯ ಸಂಗಡ ಬಂದವಳು. ಅವಳು ಶ್ರೀರಾಮನ ಪಟ್ಟಾಭಿಷೇಕಸಮಯದಲ್ಲಿ ಚಂದ್ರಕಾಂತಿಯ ಶಿಲೆಯ ಹಾಗೆ ಮನೋಹರವಾದ ಉಪ್ಪರಿಗೆಯನ್ನೇರಿ ಅಲಂಕರಿಸಲ್ಪಟ್ಟಿದ್ದ ಅಯೋಧ್ಯಾಪಟ್ಟಣವನ್ನು ನೋಡುತ್ತಿದ್ದಳು. ಅದು

ಕೇರಿಕೇರಿಗಳಲ್ಲಿ ಎಲ್ಲಿ ನೋಡಿದರೂ ತಾವರೆ ಮೊದಲಾದ ಹೂಗಳ ಮಾಲಿಕೆಗಳಿಂದ ಅಲಂಕರಿಸಲ್ಪಟ್ಟಿತ್ತು. ಆ ಪಟ್ಟಣವು ಸರ್ವಾಭರಣಭೂಷಿತರಾದ ಜನರಿಂದ ಇಟ್ಟಣಿಸಿತ್ತು. ಶ್ರೀರಾಮನು ಪಟ್ಟಾಭಿಷಿಕ್ತನಾಗಿ ಮೆರವಣಿಗೆಯಾಗಿ ಬರುವಾಗ ಹರಸಿ ಶೇಷೆಯನ್ನಿಕ್ಕಬೇಕೆಂದು ಕೈಗಳಲ್ಲಿ ಮೋದಕಗಳನ್ನೂ ಪುಷ್ಪಮಾಲಿಕೆಗಳನ್ನೂ ತೆಗೆದುಕೊಂಡು ಸುಮಂಗಳೆಯರು ನಿಂತಿದ್ದರು. ಉದ್ಯಾನವನವು ಇಂಪಾಗಿ ಧ್ವನಿಗೈಯುತ್ತಿದ್ದ ನವಿಲು ಪಾರಾವತ ಹಂಸ ಕೋಗಿಲೆ ಮೊದಲಾದ ಪಕ್ಷಿಗಳ ಕಲಕಲಧ್ವನಿಗಳಿಂದ ಮನೋಹರವಾಗಿತ್ತು. ದೇವಾಲಯಗಳು ಹಾಲುಗಾರೆಯುಳ್ಳ ಬಿಳಿಯ ಗೋಪುರಗಳಿಂದಲೂ ತಾಳ ಮದ್ದಳೆಗಳ ಮತ್ತು ಗಾಯಕ ನರ್ತಕ ಸ್ತ್ರೀಯರ ಮಾಂಗಲ್ಯ ಧ್ವನಿಗಳಿಂದಲೂ ಪ್ರಕಾಶಿಸುತ್ತಿದ್ದವು. ಸರ್ವಾಭರಣಭೂಷಿತರಾಗಿ ಸಂತೋಷಯುಕ್ತರಾದ ಜನರಿಂದಲೂ ಮಂಗಲಸೂಕ್ತಗಳನ್ನು ಹೇಳುವ ಬ್ರಾಹ್ಮಣರಿಂದಲೂ ಹರ್ಷದಿಂದ ಮೈಯುಬ್ಬಿದ ಆನೆಕುದುರೆಗಳಿಂದಲೂ ಗುಟರುಹಾಕುತ್ತಿದ್ದ ಕೊಬ್ಬಿದ ಗೂಳಿಗಳಿಂದಲೂ ಮನೋಹರವಾಗಿದ್ದ ಅಯೋಧ್ಯಾಪಟ್ಟಣವನ್ನು ಕಂಡು ಮಂಥರೆಯು ಆಶ್ಚರ್ಯಪಟ್ಟು, ತನ್ನ ಸಮೀಪದಲ್ಲಿ ಬಿಳಿಯ ಪಟ್ಟೆಯ ಸೀರೆಯನ್ನುಟ್ಟು ಅತಿಹರ್ಷಿತೆಯಾಗಿದ್ದ ಒಬ್ಬ ದಾಸಿಯನ್ನು ನೋಡಿ "ಎಲೇ ದಾಸಿ, ಕೌಸಲ್ಯಾದೇವಿಯು ಅತಿಹರ್ಷದಿಂದ ತನ್ನ ಸಖಿಯರಿಗೂ ಊಳಿಗದವರಿಗೂ ಅನೇಕ ವಸ್ತ್ರಾಭರಣಗಳನ್ನು ಕೊಡುತ್ತಿದ್ದಾಳೆ. ಈ ಪಟ್ಟಣದೊಳಗೆ ಯಾರನ್ನು ನೋಡಿದರೂ ಹರ್ಷದಿಂದಲೇ ಇದ್ದಾರೆ. ದಶರಥರಾಯನು ಏನು ಮಾಡುತ್ತಿದ್ದಾನೆ ? ಈ ವೃತ್ತಾಂತವನ್ನು ನನಗೆ ತಿಳುಹಿಸಬೇಕು" ಎಂದು ಕೇಳಿದಳು.

ಆ ದಾಸಿಯು ಅತ್ಯಂತ ಸಂತೋಷದಿಂದ ಮನಸ್ಸು ಉಬ್ಬಿ ಮಂಥರೆಯನ್ನು ನೋಡಿ "ಎಲೈ ಮಂಥರೆ, ನಾಳೆ ಪುಷ್ಯನಕ್ಷತ್ರದ ಶುಭಲಗ್ನದಲ್ಲಿ ದಶರಥರಾಯನು ಅತ್ಯಂತ ವಿನಯಾದಿ ಸಂಪತ್ತುಗಳುಳ್ಳ ತನ್ನ ಜ್ಯೇಷ್ಠಪುತ್ರನಾದ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕೆ ಸನ್ನಾಹಮಾಡಿಕೊಂಡಿದ್ದಾನೆ" ಎಂದು ಹೇಳಿದಳು.

ಆ ಮಾತನ್ನು ಕೇಳಿ ಅತ್ಯಂತ ಪಾಪಬುದ್ಧಿಯುಳ್ಳ ಮಂಥರೆಯು ತನ್ನ ಒಡತಿಯಾದ ಕೈಕೇಯಿದೇವಿಗೆ ಸವತಿಯಾದ ಕೌಸಲ್ಯಾದೇವಿಯ ಕುಮಾರನಿಗೆ ಪಟ್ಟವಾಗಬಹುದೇ ಎಂಬ ಮಾತ್ಸರ್ಯಾತಿಶಯದಿಂದ ಅತ್ಯಂತ ಕೋಪಯುಕ್ತೆಯಾಗಿ ಉಪ್ಪರಿಗೆಯಿಂದ ಅತಿಶೀಘ್ರವಾಗಿಳಿದು ತನ್ನ ಒಡತಿಯಾದ ಕೈಕೇಯಿದೇವಿಯ ಸಮೀಪಕ್ಕೆ ಬಂದು ಭೋಜನಾನಂತರದಲ್ಲಿ ಸುಖಶಯನ ಮಾಡಿಕೊಂಡಿದ್ದ ಆ ದೇವಿಯನ್ನು ಕುರಿತು "ಎಲೇ ಮೂಢೆಯಾದ ಕೈಕೇಯಿದೇವಿಯೆ, ನಿನಗೆ ಬಂದ ಉಪದ್ರವವನ್ನರಿಯದೆ ಮೈಮರತಿದ್ದೀಯೆ ! ನಿನಗೆ ಬಹು ಆಪತ್ತುಗಳು ಬಂದಿವೆ. ಮುಂದೆ ಹಾಳಾಗುವ ಐಶ್ವರ್ಯದಿಂದ ಯಾಕೆ ಉಬ್ಬುತ್ತಿದ್ದೀಯೆ ? ಸಾಕು ಸಾಕು. ನಿನ್ನ ಐಶ್ವರ್ಯವು ಗ್ರೀಷ್ಮಕಾಲದಲ್ಲಿ ನದಿಗಳು ತಗ್ಗುವಂತೆ ದಿನದಿನಕ್ಕೆ ಕ್ಷೀಣಿಸಿಹೋಗುತ್ತದೆ" ಎಂದು ಅತ್ಯಂತ ನಿಷ್ಠುರವಾಗಿ ನುಡಿದಳು.

ಕಠಿಣವಾಗಿ ಮಾತನಾಡಿದ ಕುಬ್ಜೆಯಾದ ಮಂಥರೆಯನ್ನು ನೋಡಿ ಕೈಕೇಯಿದೇವಿಯು "ಎಲೇ ಮಂಥರೆ, ನೀನು ಅತ್ಯಂತ ದುಃಖಾಕ್ರಾಂತೆಯಾಗಿರುವೆ. ನಿನ್ನ ಮುಖ ಕಂದಿದೆ. ಕಾರಣವೇನು ?" ಎಂದು ಕೇಳಿದಳು.

ಮಂಥರೆಯು ಅತ್ಯಂತ ಕೋಪಯುಕ್ತೆಯಾಗಿ ತನ್ನ ಒಡತಿಯಾದ ಕೈಕೇಯಿದೇವಿಗೆ ಹಿತವನ್ನು ಬಯಸಿ, ಶ್ರೀರಾಮನ ವಿಷಯದಲ್ಲಿ ಭೇದಭಾವ ಹುಟ್ಟುವಂತೆಯೂ ಕೈಕೇಯಿದೇವಿಗೆ ಅತ್ಯಂತ

ಮನೋವ್ಯಥೆ ಹುಟ್ಟುವಹಾಗೂ ಆಕೆಯನ್ನು ಕುರಿತು ಹೀಗೆಂದಳು· " ಕೈಕೇಯಿದೇವಿ, ಎಂದಿಗೂ ಕೇಡಿಲ್ಲದಿದ್ದ ಐಶ್ವರ್ಯಕ್ಕೆ ಈಗ ಒಂದು ವಿಘ್ನವು ಪ್ರಾಪ್ತವಾಯಿತು. ದಶರಥರಾಯನು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕೆ ಪ್ರಯತ್ನಮಾಡಿಕೊಂಡಿದ್ದಾನೆ. ಆದ್ದರಿಂದ ನಾನು ಯಜ್ಞ ಪುರುಷನ ಜ್ವಾಲೆಯಿಂದ ದಹಿಸಲ್ಪಟ್ಟಂತೆ ಅತ್ಯಂತ ದುಃಖಸಾಗರದಲ್ಲಿ ಮುಳುಗಿದವಳಾಗಿ ನಿನ್ನ ಸಮೀಪಕ್ಕೆ ಬಂದೆನು ನೀನು ನನ್ನ ಒಡತಿಯಾದ್ದರಿಂದ ನಿನ್ನ ಅಭಿವೃದ್ಧಿಯೇ ನನ್ನ ಅಭಿವೃದ್ಧಿಯು, ನಿನ್ನ ಹಾನಿಯೇ ನನ್ನ ಹಾನಿಯು, ಸಂಶಯವಿಲ್ಲ. ನೀನು ಉತ್ತಮಕ್ಷತ್ರಿಯವಂಶದಲ್ಲಿ ಜನಿಸಿದವಳು. ಉತ್ತಮ ಕ್ಷತ್ರಿಯನಾದ ದಶರಥರಾಯನ ಪಟ್ಟದ ರಾಣಿ. ಲೋಕದಲ್ಲಿ ರಾಜಧರ್ಮವೆಂಬುದು ಬಹಳ ಉಗ್ರವಾದದ್ದು. ಅದನ್ನು ನೀನು ಅರಿತವಳಲ್ಲ. ನಿನ್ನ ಪತಿಯಾದ ದಶರಥರಾಯನು ನೋಡುವುದಕ್ಕೆ ಧರ್ಮವನ್ನೇ ನುಡಿಯುವಂಥವನಾಗಿ ತೋರುತ್ತಾನೆ. ಅಂತರಂಗದಲ್ಲಿ ವಿಚಾರಿಸಿದರೆ ಧರ್ಮವಿರುದ್ಧನಾಗಿದ್ದಾನೆ. ಅತ್ಯಂತ ಕ್ರೂರನಾಗಿದ್ದರೂ ಕಾಲೋಚಿತವಾಗಿ ಮೃದುನುಡಿಗಳನ್ನು ನುಡಿಯುತ್ತಾನೆ. ನೀನು ಕಪಟವರಿಯದ ಮನಸ್ಸುಳ್ಳವಳಾದುದರಿಂದ ಈ ವಿಷಯವನ್ನು ಅರಿಯದೆ ಆತನಲ್ಲಿ ವಿಶ್ವಾಸವನ್ನು ಮಾಡಿಕೊಂಡಿದ್ದೀಯೆ. ಕಾಲಕ್ಕೆ ತಕ್ಕಂತೆ ಪ್ರಯೋಜನವಿಲ್ಲದ ಸವಿನುಡಿ ಗಳನ್ನು ಮಾತ್ರ ನಿನಗೆ ಹೇಳುತ್ತಾ, ಆತನು ಸಮಸ್ತ ವಸ್ತುಗಳನ್ನೂ ಕೌಸಲ್ಯಾದೇವಿಯ ಅಧೀನ ಮಾಡುತ್ತಿದ್ದಾನೆ. ಇದಕ್ಕೋಸ್ಕರ ನಿನ್ನ ಮಗನಾದ ಭರತನನ್ನು ಸೋದರಮಾವನ ಮನೆಗೆ ಕಳುಹಿಸುವ ನೆವದಿಂದ ಸ್ಥಳಾಂತರಕ್ಕೆ ಹೊರಡಿಸಿದನು. ಈಗ ನಿಷ್ಕಂಟಕವಾದ ರಾಜ್ಯವನ್ನು ಶ್ರೀರಾಮನ ಅಧೀನಮಾಡುವುದಕ್ಕೆ ಯತ್ನಮಾಡಿದ್ದಾನೆ. ದಶರಥನು ಪತಿಯ ರೂಪದಲ್ಲಿ ನಿನಗೆ ಶತ್ರುವಾದನು. ನೀನು ಸರ್ಪವನ್ನು ತೊಡೆಯಮೇಲಿಟ್ಟುಕೊಂಡು ಲಾಲಿಸಿದಂತಾಯಿತು. ದಶರಥನು ಉಪೇಕ್ಷಿತನಾದ ಶತ್ರುವಿನಂತೆಯೂ ಸರ್ಪದಂತೆಯೂ ನಿನಗೂ ನಿನ್ನ ಮಗನಿಗೂ ಮೋಸಮಾಡಿದನು. ಕೈಕೇಯಿದೇವಿ, ಪಾಪಿಷ್ಠನಾಗಿ ಕಪಟಸ್ನೇಹವನ್ನು ಮಾಡಿಕೊಂಡಿರುವ ದಶರಥರಾಯನು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡುವನು. ಇಷ್ಟುದಿವಸ ಸುಖ ವನ್ನನುಭವಿಸಿಕೊಂಡಿದ್ದ ನೀನು ಆತನನ್ನು ನಂಬಿ ಕೆಡುತ್ತಿದ್ದೀಯೆ, ಆದಕಾರಣ ಈಗ ಕಾಲೋಚಿತ ವನ್ನು ಯೋಚಿಸಿ ನಿನ್ನ ಮಗನಾದ ಭರತನನ್ನು ರಕ್ಷಿಸಿಕೊಂಡು ಬದುಕು " ಎಂದು ನುಡಿದಳು.

ಕೈಕೇಯಿದೇವಿಯು ಆ ಮಾತುಗಳನ್ನು ಕೇಳಿ ಅತ್ಯಂತ ಹರ್ಷದಿಂದ ಶರತ್ಕಾಲದ ಚಂದ್ರಲೇಖೆ ಯಂತೆ ಎದ್ದು ಕುಳಿತುಕೊಂಡು ಮಂಥರೆಗೆ ಅನೇಕ ವಸ್ತ್ರಾಭರಣಗಳನ್ನು ಕೊಟ್ಟು ಸಂತವಿಟ್ಟಳು. ಮತ್ತು ಅವಳನ್ನು ಕುರಿತು " ಎಲೈ ಮಂಥರೆ, ನೀನು ಹೇಳಿದ ಮಾತು ನನಗೆ ಹಿತವಲ್ಲದೆ ಮತ್ತೊಂದಲ್ಲ. ನಾನು ಇದುವರೆಗೆ ಶ್ರೀರಾಮನೂ ಭರತನೂ ಸಮಾನರೆಂದೇ ಇದ್ದೆನಲ್ಲದೆ ನನ್ನ ಮಗನಾದ ಭರತನಲ್ಲಿ ಪಕ್ಷಪಾತವನ್ನು ಮಾಡಿದವಳಲ್ಲ! ಮಂಥರೆ, ನೀನು ಶ್ರೀರಾಮನಿಗೆ ಪಟ್ಟಾಭಿಷೇಕವಾಗುತ್ತದೆ ಎಂಬ ಪ್ರಸಂಗವನ್ನು ಹೇಳಿದೆ. ನನಗೆ ಇದಕ್ಕಿಂತಲೂ ಅಧಿಕವಾದ ಪ್ರಿಯವಾರ್ತೆಯಿಲ್ಲ. ನೀನು ನನಗೆ ಪ್ರಿಯವಾದ ವಾರ್ತೆಯನ್ನು ಹೇಳಿದೆಯಾದ್ದರಿಂದ ನಿನಗೆ ಇಷ್ಟವಾದ ವಸ್ತುವನ್ನು ಕೇಳು. ಉಡುಗೊರೆಯಾಗಿ ಕೊಡುತ್ತೇನೆ " ಎಂದು ನುಡಿದಳು.



## ೮ನೆಯ ಅಧ್ಯಾಯ

## ಕೈಕೇಯೀದೇವಿಗೆ ಮಂಥರೆಯ ದುರ್ಬೋಧನೆ

ಆಮೇಲೆ ಮಂಥರೆಯು ಬಹಳವಾಗಿ ಕೋಪಿಸಿಕೊಂಡು ಕೈಕೇಯಿದೇವಿಯು ಉಡುಗೊರೆಯಾಗಿ ಕೊಟ್ಟ ವಸ್ತ್ರಾಭರಣಗಳನ್ನು ಬಿಸುಟು ಅತಿದುಃಖಾಕ್ರಾಂತೆಯಾಗಿ ಆ ದೇವಿಯನ್ನು ಕುರಿತು ಹೇಳಿದಳು : "ಕೈಕೇಯಿ, ನೀನು ಅಜ್ಞಾನಿ. ಶೋಕವೆಂಬ ಸಮುದ್ರದಲ್ಲಿ ಮುಳುಗಿದ ನಿನ್ನನ್ನು ನೀನು ಅರಿಯದೇ ಇದ್ದೀಯೆ. ನಿಷ್ಕಾರಣವಾಗಿ ಸಂತೋಷಪಡುತ್ತಿದ್ದೀಯೆ. ಅಧಿಕವಾದ ದುಃಖವನ್ನು ನೀನು ಹೇಗೆ ಸಹಿಸುವೆಯೆಂದು ವಿಸ್ಮಯಪಡುತ್ತಿದ್ದೇನೆ. ನೀನು ದುಃಖಿಸಲು ಯೋಗ್ಯವಾದ ಕಾಲದಲ್ಲಿ ಸಂತೋಷಪಡುತ್ತಿದ್ದೀಯೆ. ನಿನ್ನನ್ನು ಕಂಡು ನಾನು ದುಃಖಿಸುತ್ತಿರಲು ನೀನು ಯಾವ ಧೈರ್ಯದಿಂದ ಸಂತೋಷಪಡುತ್ತಿದ್ದೀಯೋ ತಿಳಿಯಲಿಲ್ಲ. ನಿನ್ನ ಸವತಿಯ ಮಗನಾಗಿ ಶತ್ರುವಾದ ಶ್ರೀರಾಮನ ಅಭಿವೃದ್ಧಿಯು ನಿನಗೆ ಮೃತ್ಯುವೆಂದು ತಿಳಿ. ಈ ರಾಜ್ಯವು ರಾಮನಿಗೂ ಭರತನಿಗೂ ಸಮವಾಗಿರಲು ಶ್ರೀರಾಮನಿಗೆ ಪಟ್ಟಾಭಿಷೇಕವಾದ ಪಕ್ಷದಲ್ಲಿ ಭರತನಿಂದ ರಾಮನಿಗೆ ಭಯವುಂಟಾಗುವುದು. ಆ ಪಕ್ಷದಲ್ಲಿ ರಾಮನು ಭರತನಿಗೆ ಉಪದ್ರವವನ್ನು ಮಾಡದಿರನು. ಭರತನಿಗೆ ಉಪದ್ರವವು ಬಂದರೆ ನಿನಗೆ ಹಾನಿಯಾಗುವುದು. ನಿನಗೆ ಹಾನಿಬರುವುದನ್ನು ನೋಡಲಾರೆನೆಂದು ಚಿಂತಿಸುತ್ತಿದ್ದೇನೆ. ಲಕ್ಷ್ಮಣನು ರಾಮನಿಗೆ ಅಂತರಂಗಶುದ್ಧನಾಗಿ ಅನುಕೂಲನಾಗಿದ್ದಾನೆ. ಆತನು ಶ್ರೀರಾಮನಿಗೆ ಅನುಕೂಲನಾಗಿರುವ ಹಾಗೆಯೇ ಶತ್ರುಘ್ನನು ಭರತನಿಗೆ ಅನುಕೂಲನಾಗಿದ್ದಾನೆ. ಜನನಕ್ರಮದಿಂದ ನೋಡಿದರೆ ಶ್ರೀರಾಮನಿಗಾದ ಮೇಲೆ ಭರತನಿಗೆ ರಾಜ್ಯಾಭಿಷೇಕವಾಗಬೇಕು. ಆದ್ದರಿಂದ ಉತ್ತರಾಧಿಕಾರಿಯಾದ ಭರತನಿಗೆ ರಾಮನಿಂದ ಭಯವುಂಟು. ಕ್ಷತ್ರಿಯಧರ್ಮದಲ್ಲಿ ಚತುರನಾಗಿ ಕಾಲೋಚಿತವಾದ ಕಾರ್ಯಗಳನ್ನು ಮಾಡುವುದರಲ್ಲಿ ರಾಮನು ಸಮರ್ಥನಾದ್ದರಿಂದ ನಾನು ಭರತನ ಗತಿಯನ್ನು ಚಿಂತಿಸಿ ನಡುಗುತ್ತಲಿರುವೆನು. ನಾಳೆ ಪುಷ್ಯನಕ್ಷತ್ರದಲ್ಲಿ ಶ್ರೀರಾಮನಿಗೆ ಪಟ್ಟಾಭಿಷೇಕವಾದರೆ ಆತನ ತಾಯಿಯಾದ ಕೌಸಲ್ಯೆಯು ಎಷ್ಟು ಪುಣ್ಯಮಾಡಿದವಳೊ! ನಿಷ್ಕಂಟಕವಾಗಿ ಮಹತ್ತಾದ ಅಭಿವೃದ್ಧಿಯನ್ನು ಪಡೆದು ಅತಿಹರ್ಷದಿಂದಿರುವ ಆ ದೇವಿಯನ್ನನುಸರಿಸಿಕೊಂಡು ನೀನು ದಾಸಿಯಾಗಿರಬೇಕಾಗುತ್ತದೆ. ನಿನ್ನ ಸೊಸೆಯು ಕೌಸಲ್ಯಾದೇವಿಗೆ ದಾಸಿಯಾಗಿ ಭರತನ ಮನೆಯಲ್ಲಿ ದುಃಖಿಸಬೇಕಾಗುವುದು. ನಿನ್ನ ಮಗನಾದ ಭರತನು ಶ್ರೀರಾಮನ ಊಳಿಗದವನಾಗಿರಬೇಕಾಗುತ್ತದೆ. ಹೀಗೆ ನಿನಗೆ ಬಂದ ದುಃಖವನ್ನರಿಯದೆ ನೀನು ಹೇಗೆ ಸಂತೋಷಪಡುತ್ತಿದ್ದೀಯೆ!" ಎಂದು ನುಡಿದಳು.

ಕೈಕೇಯಿದೇವಿಯು ಮಂಥರೆಯ ಮಾತಿಗೊಳಗಾಗದೆ ಶ್ರೀರಾಮನ ಸದ್ಗುಣಗಳನ್ನು ಕೊಂಡಾಡುತ್ತ ಅವಳನ್ನು ನೋಡಿ "ಮಂಥರೆ, ಶ್ರೀರಾಮನು ವಸಿಷ್ಠರೇ ಮೊದಲಾದ ಗುರುಗಳಿಂದ ಹಿತೋಪದೇಶವನ್ನು ಹೊಂದಿದವನು. ಸಮಸ್ತ ಧರ್ಮರಹಸ್ಯಗಳನ್ನೂ ಬಲ್ಲವನು. ಮಹಾ ಸತ್ಯವಂತ, ಮಾಡಿದ ಉಪಕಾರವನ್ನು ಮರೆಯದವನು, ಸಮಸ್ತ ಲೋಕಕ್ಕೂ ಹಿತನಾದವನು, ದಶರಥರಾಯನ ಜ್ಯೇಷ್ಠಪುತ್ರನು, ಯುವರಾಜಪಟ್ಟಕ್ಕೆ ಯೋಗ್ಯ. ಆತನು ಪಟ್ಟಾಭಿಷಿಕ್ತನಾಗಿ

ದೀರ್ಘಾಯುಷ್ಮಂತನಾಗಿ ಸುಖದಿಂದ ತನ್ನ ತಮ್ಮಂದಿರಾದ ಭರತಾದಿಗಳನ್ನು ಮಕ್ಕಳ ಹಾಗೆ ರಕ್ಷಿಸುವನು. ಮಂಥರೆ, ನೀನು ಯಾವ ಕಾರಣದಿಂದ ಶ್ರೀರಾಮನ ಪಟ್ಟಾಭಿಷೇಕವಾರ್ತೆಯನ್ನು ಕೇಳಿ ದುಃಖಪಡುತ್ತಿದ್ದೀಯೆ? ನನ್ನ ಮಗನಾದ ಭರತನು ನೂರು ವರ್ಷದ ಮೇಲಾದರೂ ತನ್ನ ತಂದೆಯ ರಾಜ್ಯಕ್ಕೆ ಒಡೆಯನಾಗುವನು, ಸಂಶಯವಿಲ್ಲ. ಇದರಿಂದ ನನಗೂ ಶ್ರೇಯಸ್ಸಾಗುವುದು. ಹೀಗಿರುವಲ್ಲಿ ನೀನು ಯಾವ ಕಾರಣದಿಂದ ವೇದನೆ ಪಡುತ್ತಿದ್ದೀಯೆ ? ನನಗೆ ನನ್ನ ಮಗನಾದ ಭರತನ ಮೇಲೆ ಎಷ್ಟು ವಾತ್ಸಲ್ಯವುಂಟೋ ಅದಕ್ಕಿಂತಲೂ ಇಮ್ಮಡಿಯಾದ ವಾತ್ಸಲ್ಯವು ಶ್ರೀರಾಮನಲ್ಲುಂಟು. ಆತನು ತನ್ನ ತಾಯಿಯಾದ ಕೌಸಲ್ಯಾದೇವಿಗಿಂತಲೂ ಅಧಿಕವಾಗಿ ನನಗೆ ಸೇವಾಸತ್ಕಾರಗಳನ್ನು ಮಾಡುತ್ತಿದ್ದಾನೆ. ಆದ್ದರಿಂದ ಆತನಿಗೆ ಪಟ್ಟಾಭಿಷೇಕವಾಗುವುದು ನನ್ನ ಮಗನಾದ ಭರತನಿಗೆ ಪಟ್ಟಾಭಿಷೇಕವಾದ ಹಾಗೆಯೇ. ಶ್ರೀರಾಮನು ತನ್ನ ತಮ್ಮಂದಿರಾದ ಭರತಾದಿಗಳನ್ನು ತನಗೆ ಸಮನಾಗಿಯೇ ನೋಡಿಕೊಳ್ಳುವನು " ಎಂದು ನುಡಿದಳು.

ಆ ಮಾತನ್ನು ಕೇಳಿ ಮಂಥರೆಯು ಅತ್ಯಂತ ವ್ಯಾಕುಲಿತಚಿತ್ತೆಯಾಗಿ ತನ್ನ ಅಂತರಂಗದಲ್ಲಿದ್ದ ಕೋಪಾಗ್ನಿಜ್ವಾಲೆಯಿಂದ ಬಿಸುಸುಯ್ದು ಕೈಕೇಯಿದೇವಿಯನ್ನು ನೋಡಿ " ಎಲೇ ಕೈಕೇಯಿ, ನೀನು ಅತ್ಯಂತ ಮೂರ್ಖತನದಿಂದ ಮುಂದೆ ಬರುವ ಅಪಾಯವನ್ನು ಯೋಚಿಸದೆ ಮುಂದೆ ಆಗಲುಳ್ಳ ಅನೇಕವಾದ ಉಪದ್ರವಗಳಿಂದ ದುಃಖವೆಂಬ ಸಮುದ್ರದಲ್ಲಿ ಮುಳುಗುತ್ತೀಯೆ. ನಿನ್ನನ್ನು ನೀನು ಅರಿಯೆ. ರಾಮನು ರಾಜ್ಯಕ್ಕೆ ಅರಸಾಗಿ ನಿನ್ನ ಮಗನಾದ ಭರತನನ್ನು ರಾಜ್ಯದಿಂದ ತೊಲಗಿಸುವನು. ಅರಸನಿಗೆ ಬಹುಮಂದಿ ಮಕ್ಕಳಾದರೆ ಎಲ್ಲರೂ ರಾಜ್ಯಕ್ಕೆ ಒಡೆಯರಾಗಲಾರರು. ಲೋಕದಲ್ಲಿ ಬಹುಮಂದಿಗೆ ಆಧಿಪತ್ಯವನ್ನು ಕೊಡುವುದು ರಾಜನೀತಿಯಲ್ಲ. ಗುಣವಂತರಾದ ಮಕ್ಕಳು ಅನೇಕ ಮಂದಿ ಇದ್ದರೂ ಜ್ಯೇಷ್ಠಪುತ್ರನಿಗೆ ಆಧಿಪತ್ಯವನ್ನು ಮಾಡುವರಲ್ಲದೆ ಎಲ್ಲರಿಗೂ ಆಧಿಪತ್ಯವನ್ನು ಕೊಡಲಾರರು. ದಶರಥರಾಯನು ರಾಮನಿಗೆ ಪಟ್ಟಾಭಿಷೇಕವನ್ನು ಮಾಡಿದರೆ ನಿನ್ನ ಮಗನಾದ ಭರತನಿಗೆ ರಾಜ್ಯಾಧಿಪತ್ಯವಿಲ್ಲ. ಆಗ ರಾಮನು ಆತನನ್ನು ದೇಶಾಂತರವನ್ನೈದಿಸುವನು. ಅದಲ್ಲದಿದ್ದರೆ ಲೋಕಾಂತರವನ್ನೈದಿಸುವನು. ನಿನ್ನ ಮಗನನ್ನು ಬಾಲ್ಯಾವಸ್ಥೆಯಲ್ಲಿಯೇ ನೀನು ಮಾವನ ಮನೆಗೆ ಕಳುಹಿಸಿದೆ. ಲೋಕದಲ್ಲಿ ಸ್ಥಾವರಾದಿ ವೃಕ್ಷಗಳು ಮೊದಲಾಗಿ ಸಮೀಪದಲ್ಲಿದ್ದರೆ ಅನ್ಯೋನ್ಯವಾಗಿ ಕೂಡಿರುವುವು. ಲಕ್ಷ್ಮಣನು ಶ್ರೀರಾಮನಿಗೆ ಅನುಕೂಲನಾಗಿರುವ ಹಾಗೆ ಶತ್ರುಘ್ನನು ಭರತನಿಗೆ ಅನುಕೂಲನಾಗಿ ಆತನ ಸಂಗಡ ಆತನ ಸೋದರಮಾವನ ಮನೆಗೆ ಹೋದನು. ಲೋಕದಲ್ಲಿ ಕಿರಾತರು ಮೊದಲಾಗಿ ಛೇದಿಸಲು ಯೋಗ್ಯವಾದ ವೃಕ್ಷವಾದರೂ ಸಮೀಪದಲ್ಲಿದ್ದರೆ ಅದನ್ನು ಹುಲ್ಲುಗಳಿಂದ ಮರೆಯಿಸಿ ರಕ್ಷಿಸುವರು. ಆದ್ದರಿಂದ ಶ್ರೀರಾಮನು ತನ್ನ ಸಮೀಪದಲ್ಲಿರುವ ಲಕ್ಷ್ಮಣನಿಗೆ ರಕ್ಷಕನಾಗಿಯೂ ಲಕ್ಷ್ಮಣನು ಶ್ರೀರಾಮನಿಗೆ ರಕ್ಷಕನಾಗಿಯೂ ಇರುವರು. ಈ ರೀತಿಯಲ್ಲಿ ಅವರು ಅನ್ಯೋನ್ಯರಕ್ಷಕರಾಗಿರುವುದರಿಂದ ರಾಮ ಲಕ್ಷ್ಮಣರು ಅಶ್ವಿನೀದೇವತೆಗಳ ಮರ್ಯಾದೆಯಲ್ಲಿ ಮಹಾಪ್ರಸಿದ್ಧರಾಗಿರುವರು. ಶ್ರೀರಾಮನು ಲಕ್ಷ್ಮಣನಿಗೆ ಕಿಂಚಿತ್ತಾದರೂ ದ್ರೋಹವನ್ನೆಣಿಸನು ; ದೂರದಲ್ಲಿರುವುದರಿಂದ ಭರತನಿಗೆ ದ್ರೋಹವನ್ನೆಣಿಸುವನು. ಇದಕ್ಕೆ ಸಂಶಯವಿಲ್ಲ. ನಿನ್ನ ಮಗನಾದ ಭರತನು ತನ್ನ ಮಾವನ ಮನೆಯಿಂದಲೇ ವನಾಂತರವನ್ನೈದುವುದು ಒಂದು ಬಗೆಯಲ್ಲಿ ಒಳ್ಳೆಯದು. ನಿನಗೆ ಹಿತವನ್ನು ಹೇಳಿದೆನು. ಕಾರ್ಯಹಾನಿಯಾದವನು ಕಾರ್ಯಸಿದ್ಧಿಯಾದವನ ವಶದಲ್ಲಿರಲಾರನು. ಆದಕಾರಣ ಭರತನು ರಾಜ್ಯಾಧಿಪತ್ಯವನ್ನು ಕಳೆದುಕೊಂಡು, ರಾಜ್ಯಪರಿಪಾಲನವನ್ನು ಮಾಡುವ ಶ್ರೀರಾಮನ ವಶದಲ್ಲಿರಲಾರನು. ಅರಣ್ಯದಲ್ಲಿ ಮಹಾಪ್ರಬಲವಾದ ಸಿಂಹರಾಜನಿಂದ ಅಟ್ಟಲ್ಪಟ್ಟ ಸಲಗನಂತೆ ಶ್ರೀರಾಮ

ನಿಂದ ಪರಾಭವಿಸಲ್ಪಡುವನು. ಪೂರ್ವದಲ್ಲಿ ಕೌಸಲ್ಯಾದೇವಿಯನ್ನು ನೀನು ಗರ್ವದಿಂದ ತಿರಸ್ಕಾರವನ್ನು ಮಾಡಿದೆ. ನಿನ್ನ ತಿರಸ್ಕಾರವನ್ನು ಸಹಿಸಿದ್ದ ಆ ದೇವಿಯು ನಿನ್ನಲ್ಲಿ ವೈರವನ್ನು ಬೆಳೆಸದೆ ಸುಮ್ಮನಿರುವವಳಲ್ಲ. ಯಾವಾಗ ಶ್ರೀರಾಮನು ಪರ್ವತ ಸಮುದ್ರ ನಗರಗಳಿಂದ ಸಹಿತವಾದ ಭೂಮಿಯನ್ನು ಆಳುವನೋ ಆಗ ನೀನು ಭರತಸಹಿತಳಾಗಿ ದುಃಖವನ್ನನುಭವಿಸಬೇಕಾಗುತ್ತದೆ. ಆದಕಾರಣ ನೀನು ನಿನ್ನ ಮಗನಿಗೆ ರಾಜ್ಯವೂ ಶ್ರೀರಾಮನಿಗೆ ವನವಾಸವೂ ಆಗಬೇಕೆಂದು ಯತ್ನಮಾಡು" ಎಂದು ಹೇಳಿದಳು.



## ೯ನೆಯ ಅಧ್ಯಾಯ

## ಕೈಕೇಯೀದೇವಿಯು ಮಂಥರೆಯ ದುರ್ಬೋಧನೆಗೊಳಗಾದದ್ದು

ಹೀಗೆ ಮಂಥರೆಯ ಮಾತನ್ನು ಕೇಳುತ್ತಲಿದ್ದ ಕೈಕೇಯೀದೇವಿಯು ಕೋಪಾಗ್ನಿಯಿಂದ ಜ್ವಲಿಸುತ್ತ ಬಿಸುಸುಯ್ದು "ಎಲೇ ಮಂಥರೆ, ನಾನು ನಿನ್ನ ಮಾತನ್ನು ಮೀರುವವಳಲ್ಲ. ಈಗಲೇ ಭರತನಿಗೆ ಪಟ್ಟಾಭಿಷೇಕವನ್ನು ಮಾಡಿಸುವೆನು. ಶ್ರೀರಾಮನಿಗೆ ದೇಶತ್ಯಾಗವನ್ನು ಮಾಡಿಸುವೆನು. ನೀನು ಇದಕ್ಕೆ ತಕ್ಕ ಉಪಾಯವನ್ನು ಯೋಚಿಸಿ ಹೇಳು" ಎಂದು ಕೇಳಿದಳು.

ಪಾಪಸ್ವರೂಪಿಯಾದ ಮಂಥರೆಯು ಶ್ರೀರಾಮನ ಪಟ್ಟಾಭಿಷೇಕಕ್ಕೆ ಅಡ್ಡಿಯನ್ನು ಯೋಚಿಸಿ ಕೈಕೇಯೀದೇವಿಯನ್ನು ಕುರಿತು ನುಡಿದಳು. "ಕೈಕೇಯೀದೇವಿ, ನಿನ್ನ ಮಗನಾದ ಭರತನಿಗೆ ರಾಜ್ಯಾಭಿಷೇಕವೂ ಶ್ರೀರಾಮನಿಗೆ ದೇಶತ್ಯಾಗವೂ ಆಗುವ ಉಪಾಯವನ್ನು ಹೇಳುತ್ತೇನೆ ಕೇಳು: ಪೂರ್ವವೃತ್ತಾಂತವು ಒಂದುಂಟು. ಅದನ್ನು ನೀನು ಮರತೆಯೋ—ಅಲ್ಲದೆ ಗೋಪ್ಯವಾಗಿ ಇಟ್ಟಿದ್ದೀಯೋ ತಿಳಿಯದು. ನಾನು ನಿನಗೆ ಹಿತವಾಗಿ ಒಂದು ಮಾತನ್ನು ಹೇಳುತ್ತೇನೆ. ಆ ಮಾತು ನಿನಗೆ ಸಮ್ಮತವಾದರೆ ಹಾಗೆ ಮಾಡು. ಪೂರ್ವದಲ್ಲಿ ದೇವದಾನವರ ಯುದ್ಧದಲ್ಲಿ ದಶರಥರಾಯನು ಸಮಸ್ತ ರಾಜರ್ಷಿಗಳ ಸಂಗಡ ನಿನ್ನನ್ನು ಕರೆದುಕೊಂಡು ದೇವೇಂದ್ರನಿಗೆ ಸಹಾಯಕನಾಗಿ ದಂಡಕಾರಣ್ಯದೇಶಗಳನ್ನು ಕಳೆದು ತೆಂಕಣ ರಾಜ್ಯಕ್ಕೆ ತೆರಳಿದನು. ಅಲ್ಲಿ ಅತಿ ಮಾಯಾವಿಯಾದ ಶಂಬರನೆಂಬ ಮಹಾರಾಕ್ಷಸನಿದ್ದ ವೈಜಯಂತವೆಂಬ ಪಟ್ಟಣಕ್ಕೆ ಹೋದನು. ಆಗ ಶಂಬರಾಸುರನು ದೇವೇಂದ್ರಾದಿದೇವತೆಗಳಿಗೆ ಸಹಾಯಕನಾಗಿ ಹೋದ ದಶರಥರಾಯನ ಸೇನೆಯು ಮಲಗಿರುವ ಸಮಯದಲ್ಲಿ ಮೋಸದಿಂದ ಎಲ್ಲರನ್ನೂ ಸಂಹರಿಸಲು ನಿನ್ನ ಪತಿಯಾದ ದಶರಥರಾಯನು ಮಹತ್ತಾದ ಯುದ್ಧವನ್ನು ಮಾಡಿ ಆ ರಾಕ್ಷಸನ ಅಸ್ತ್ರಗಳಿಂದ ಗಾಯಪಟ್ಟು ಮೂರ್ಛಿತನಾದನು. ಆಗ ನೀನು ಆ ರಾಯನನ್ನು ರಣರಂಗದಿಂದ ದೂರ ಒಯ್ದು ರಕ್ಷಿಸಿದೆ. ಆತನು ನಿನ್ನನ್ನು ಮೆಚ್ಚಿ ಸಂತೋಷದಿಂದ ಎರಡು ವರಗಳನ್ನು ಕೊಡುವುದಾಗಿ ಹೇಳಿದನು. ನೀನು ನಿನಗೆ ಮನಸ್ಸುಬಂದಾಗ ಬೇಡಿಕೊಳ್ಳುವುದಾಗಿಯೂ, ಅದುವರೆಗೂ ಆ ಎರಡು ವರಗಳೂ ಆತನ ವಶದಲ್ಲಿಯೇ ಇರಲೆಂದೂ ಹೇಳಿದೆ. ದಶರಥರಾಯನು ಹಾಗೆಯೇ ಆಗಲೆಂದು ಅಂಗೀಕರಿಸಿದನು. ಈ ವೃತ್ತಾಂತವನ್ನು ನೀನೇ ನನಗೆ ಹೇಳಿದ್ದೀಯೆ. ನೀನು ಅದನ್ನು ಮರತೆ. ನಾನು ನಿನ್ನ ಮೇಲಣ ಪ್ರೀತಿಯಿಂದ ಮನಸ್ಸಿನಲ್ಲಿಟ್ಟುಕೊಂಡಿದ್ದೇನೆ. ಈಗ ಆ ಎರಡು ವರಗಳನ್ನು ಕೊಡೆಂದು ನಿನ್ನ ಪತಿಯನ್ನು ಬೇಡಿಕೊ. ಒಂದು ವರದಿಂದ ಭರತನಿಗೆ ಪಟ್ಟಾಭಿಷೇಕವನ್ನು ಮಾಡಿಸು, ಮತ್ತೊಂದು ವರದಿಂದ ಶ್ರೀರಾಮನಿಗೆ ಹದಿನಾಲ್ಕು ಸಂವತ್ಸರ ಪರ್ಯಂತ ವನವಾಸವಾಗುವ ಹಾಗೆ ಮಾಡು. ಶ್ರೀರಾಮನು

ವನಕ್ಕೆ ಹೋಗಿ ಭರತನಿಗೆ ಪಟ್ಟಾಭಿಷೇಕವಾದರೆ ಸಮಸ್ತ ಪ್ರಜೆಗಳೂ ನಿಮಗೆ ಅನುಕೂಲರಾಗಿ ನಡೆಯುವರು. ಅದರಿಂದ ನಿನ್ನ ಮಗನಿಗೆ ರಾಜ್ಯಾಧಿಪತ್ಯವು ಸ್ಥಿರವಾಗಿರುವುದು. ಈಗ ನೀನು ಅಂತಃಪುರದ ಕ್ರೋಧಾಗಾರದಲ್ಲಿ ಕುಪಿತೆಯಾಗಿ ಶ್ರೇಷ್ಠವಾದ ವಸ್ತ್ರಾಭರಣಗಳನ್ನು ಕಳಚಿಹಾಕಿ ಮಲಿನವಸ್ತ್ರಗಳನ್ನು ಧರಿಸಿಕೊಂಡು ಮಾತನಾಡದೆ ಮುಖವನ್ನು ತಿರುಗಿಸಿಕೊಂಡು ಮಲಗಿರು. ದಶರಥ ರಾಯನು ಬಂದರೆ ದುಃಖಾತಿಶಯದಿಂದ ರೋದನವನ್ನು ಮಾಡುತ್ತಿರು. ಆ ರಾಯನಿಗೆ ನೀನೊಬ್ಬಳೇ ಮೋಹದ ಸತಿಯಲ್ಲದೆ ಮತ್ತೊಬ್ಬಳಿಲ್ಲ. ಆದ್ದರಿಂದ ಆತನು ನಿನ್ನ ಮನಸ್ಸನ್ನು ನೋಯಿಸಲಾರನು. ಅವನು ನಿನಗಾಗಿ ಅಗ್ನಿಪ್ರವೇಶವನ್ನಾದರೂ ಮಾಡಿಯಾನು. ಪ್ರಾಣಗಳನ್ನಾದರೂ ತೊರೆದಾನು. ಅನೇಕವಾಗಿ ಬಂಗಾರ, ರತ್ನ, ಮುತ್ತು ಮೊದಲಾದ ವಸ್ತುಗಳನ್ನು ಕೊಡುವನು. ನೀನು ಆ ವಸ್ತುಗಳಿಗೆ ಮನಸೋಲಬೇಡ. ಪೂರ್ವದಲ್ಲಿ ದೇವಾಸುರಯುದ್ಧದಲ್ಲಿ ಆ ರಾಯನು ಕೊಟ್ಟ ವರಗಳನ್ನು ಜ್ಞಾಪಕಕ್ಕೆತಂದರೆ ಆತನು ಆಡಿದ ಮಾತು ತಪ್ಪುವುದಿಲ್ಲವಾದ್ದರಿಂದ ಆ ವರಗಳನ್ನು ಕೊಡುವುದಾಗಿ ಹೇಳುವನು. ಕೂಡಲೆ ನೀನು ಒಂದು ವರದಿಂದ ಭರತನಿಗೆ ಪಟ್ಟಾಭಿಷೇಕವನ್ನೂ ಮತ್ತೊಂದು ವರದಿಂದ ಶ್ರೀರಾಮನಿಗೆ ಹದಿನಾಲ್ಕು ವರುಷಗಳ ಪರ್ಯಂತ ವನವಾಸವನ್ನೂ ಬೇಡು. ರಾಮನು ವನಕ್ಕೆ ಹೋದರೆ ಭರತನು ರಾಜ್ಯವನ್ನು ವಹಿಸಿ ಬೇರುಬಿಟ್ಟುಕೊಂಡು ಸ್ಥಿರವಾಗಿ ನಿಂತು ಸರ್ವಾಭೀಷ್ಟಗಳನ್ನು ಪಡೆಯುವನು. ರಾಮನ ಕಾರ್ಯಕ್ಕೆ ಸಹಾಯವಿಲ್ಲದೆ ಹೋಗುವುದು. ನಿನ್ನ ಮಗನು ಶತ್ರುರಹಿತನಾಗಿ ರಾಜನಾಗುವನು. ವನವಾಸಕ್ಕೆ ತೆರಳುವ ರಾಮನು ತಿರುಗಿ ಬರುವಷ್ಟ ರೊಳಗೆ ಭರತನು ಬುದ್ಧಿವಂತರಾದ ಅನೇಕ ಮಿತ್ರರನ್ನು ಸಂಪಾದಿಸಿಕೊಂಡು ಸಮಸ್ತ ಪ್ರಜೆಗಳನ್ನೂ ಕೈವಶಮಾಡಿಕೊಂಡು ರಾಜ್ಯದಲ್ಲಿ ಸ್ಥಿರವಾಗಿ ನಿಲ್ಲುವನು : ಪರರ ಭಯವಿಲ್ಲದೆ ಬಹುಕಾಲ ರಾಜ್ಯ ಪರಿಪಾಲನವನ್ನು ಮಾಡುವನು. ಆದಕಾರಣ ನೀನು ಶ್ರೀರಾಮನಿಗೆ ಪಟ್ಟಾಭಿಷೇಕಮಾಡುವುದನ್ನು ನಿಲ್ಲಿಸು" ಎಂದು ಹೇಳಿದಳು.

ಆ ಮಾತನ್ನು ಕೇಳಿ ಕೈಕೇಯಿದೇವಿಯು ಶ್ರೀರಾಮನು ವನವಾಸಕ್ಕೆ ಹೋದರೆ ಮುಂದೆ ತನಗೆ ಹಾನಿಯುಂಟಾಗುವುದೆಂಬ ವಿಚಾರವಿಲ್ಲದೆ ಮಂಥರೆಯ ಮಾತಿಗೊಳಗಾಗಿ ಬಹಳ ಸಂತೋಷದಿಂದ ಅವಳನ್ನು ಕುರಿತು ಹೀಗೆಂದಳು : "ಮಂಥರೆ, ನೀನು ಕಾರ್ಯಸ್ಥಿತಿಯನ್ನು ಬಲ್ಲವಳು. ಇದುವರೆಗೆ ನಿನ್ನ ಬುದ್ಧಿಸಾಮರ್ಥ್ಯವನ್ನು ನಾನು ತಿಳಿಯಲಿಲ್ಲ. ನೀನು ಬುದ್ಧಿವಂತೆಯಾಗಿ ನನಗೆ ಯಾವಾಗಲೂ ಹಿತವನ್ನು ಬಯಸುವಂಥವಳು. ದಶರಥರಾಯನು ಶ್ರೀರಾಮನ ಪಟ್ಟಾಭಿಷೇಕಕ್ಕೆ ಯತ್ನ ಮಾಡಿ ಕೊಂಡಿದ್ದಾನೆ ಎಂಬುದನ್ನು ನಾನು ತಿಳಿದಿರಲಿಲ್ಲ. ಅರಮನೆಯಲ್ಲಿ ಅನೇಕಮಂದಿ ದಾದಿಯರಿದ್ದಾರೆ. ನೀನು ಅವರಲ್ಲಿ ಅತ್ಯಂತ ಸೌಂದರ್ಯವುಳ್ಳವಳಾಗಿ ಅತಿವಿನಯದಿಂದ ಗಾಳಿಗೆ ಬಗ್ಗುವ ತಾವರೆಯಂತೆ ಏನೂ ಅರಿಯದಂತೆ ಇದ್ದೀಯೆ. ನಿನ್ನ ಎದೆಕಟ್ಟೂ ಭುಜಗಳೂ ಪೊರವಾರಗಳೂ ತೊಡೆಗಳೂ ಕಣಕಾಲುಗಳೂ ನುಣುಪಾಗಿ ಅತಿಮನೋಹರವಾಗಿವೆ. ನೀನು ಬಿಳಿಯಪಟ್ಟೆ ಸೀರೆಯನ್ನುಟ್ಟು ನನ್ನ ಮುಂದುಗಡೆಯಲ್ಲಿ ನಡೆಯುವಾಗ ರಾಜಹಂಸದಂತೆ ಅತಿಮನೋಹರೆಯಾಗಿ ಕಾಣಿಸುವೆ. ನಿನಗೆ ಶಂಬರಾಸುರನಿಗಿಂತಲೂ ಇಮ್ಮಡಿಯಾದ ಮಾಯಾಚಾತುರ್ಯವುಂಟು. ತೇರಿನ ಮೂಕಿಯಂತೆ ವಿಸ್ತಾರವಾಗಿರುವ ಈ ನಿನ್ನ ಗೂನಿನಲ್ಲಿ ಎಲ್ಲ ಮಾಯೆಗಳೂ ಕ್ಷತ್ರವಿದ್ಯೆಗಳೂ ಅಡಗಿವೆ. ಅನೇಕ ಕುಶಲಬುದ್ಧಿಗಳು ನಿನ್ನಲ್ಲುಂಟು. ನನ್ನ ಮಗನಾದ ಭರತನಿಗೆ ಪಟ್ಟಾಭಿಷೇಕವಾಗಿ ರಾಮನು ವನವಾಸಕ್ಕೆ ಹೋದರೆ ನಿನಗೆ ಕಟಕ ಕೇಯೂರ ರತ್ನಾಭರಣ ಪದಕ ಮೊದಲಾದ ಭೂಷಣಗಳನ್ನು ಕೊಡುವೆನು. ನಿನ್ನ ಗೂನಿಗೆ ಅಪರಂಜಿ ಚಿನ್ನದಮುಲಾಮು ಹಚ್ಚಿಸುವೆನು. ಅನೇಕ ಪರಿಮಳದ್ರವ್ಯ ಗಳನ್ನು ಹಚ್ಚಿ ನಿನ್ನ ಹಣೆಗೆ ಕಸ್ತೂರೀತಿಲಕವನ್ನಿಟ್ಟು ಚೀನಾಂಬರಗಳನ್ನು ಕೊಟ್ಟು ಸಮಸ್ತಾ

ಭರಣಗಳಿಂದ ಅಲಂಕರಿಸಿದರೆ ನೀನು ಪೂರ್ಣಚಂದ್ರನನ್ನು ಸೋಲಿಸುವ ಮುಖಮಂಡಲವುಳ್ಳವಳಾಗಿ ಅತಿಮನೋಹರವಾಗಿ ಒಪ್ಪುವೆ. ಆಗ ನಿನಗೆ ಸರ್ವಾಭರಣಭೂಷಿತೆಯರಾದ ಅನೇಕಮಂದಿ ದಾಸಿಯರನ್ನು ಕೊಡುವೆನು. ನಾನು ಹೇಗೆ ಊಳಿಗದವರಿಂದ ಊಳಿಗವನ್ನು ಮಾಡಿಸಿಕೊಳ್ಳುತ್ತೇನೆಯೋ ಹಾಗೆ ನೀನೂ ಅನೇಕಮಂದಿ ಊಳಿಗದವರಿಂದ ಸೇವಾಸತ್ಕಾರಗಳನ್ನು ಮಾಡಿಸಿಕೊಂಡು ಸುಖವಾಗಿರು " ಎಂದು ಹೇಳಿದಳು.

ಆಗ ಹೋಮದ ವೇದಿಕೆಯ ಮೇಲೆ ಅಗ್ನಿಜ್ವಾಲೆಯಹಾಗೆ ಮಂಚದಮೇಲೆ ಮಲಗಿದ್ದ ಕೈಕೇಯಿದೇವಿಯನ್ನು ನೋಡಿ ಮಂಥರೆಯು " ಕೈಕೇಯಿದೇವಿ, ನೀರು ಹೋದಮೇಲೆ ಕಟ್ಟೆಯನ್ನು ಕಟ್ಟುವುದು ವ್ಯರ್ಥ. ಅದರಂತೆ ಶ್ರೀರಾಮನಿಗೆ ಪಟ್ಟಾಭಿಷೇಕವಾದಮೇಲೆ ನೀನು ಎಷ್ಟು ಪ್ರಯಾಸಪಟ್ಟರೂ ಭರತನಿಗೆ ಪಟ್ಟವಾಗಲಾರದು. ಆದ್ದರಿಂದ ನೀನು ಕೂಡಲೆ ನಿನಗೆ ಶ್ರೆಯಸ್ಸಾಗುವಹಾಗೆ ಯತ್ನಮಾಡು " ಎಂದು ಬೋಧಿಸಿದಳು.

ರಾಜಮಂದಿರಗಳಲ್ಲಿ ಅರಸರು ಕೋಪಿಸಿಕೊಂಡ ಸಮಯದಲ್ಲಿ ರಹಸ್ಯವಾಗಿರುವುದಕ್ಕೆ ಒಂದು ಮನೆಯಿರುತ್ತದೆ. ಆ ಮನೆಯು ಕ್ರೋಧಾಗಾರವೆನಿಸಿಕೊಳ್ಳುವುದು. ಕೈಕೇಯಿದೇವಿಯು ಸೌಭಾಗ್ಯ ಮದದಿಂದ ಕೊಬ್ಬಿ, ಮುಂದೆ ಬರುವುದನ್ನರಿಯದೆ ಕೋಪಾತಿಶಯದಿಂದ ಮಂಥರೆಯ ಸಂಗಡ ಕ್ರೋಧಾಗಾರವನ್ನು ಪ್ರವೇಶಿಸಿದಳು. ಮತ್ತು ಅನರ್ಘ್ಯಗಳಾದ ಮುತ್ತಿನ ಸರಗಳನ್ನೂ ರತ್ನಾಭರಣಗಳನ್ನೂ ಕಳಚಿ ಹಾಕಿ ಭೂಶಯನವನ್ನು ಮಾಡಿಕೊಂಡು ಮಂಥರೆಯನ್ನು ಕುರಿತು " ಮಂಥರೆ, ಇಲ್ಲಿ ನಾನು ಸತ್ತ ಸುದ್ದಿಯನ್ನು ನೀನು ರಾಜನಿಗೆ ತಿಳಿಸಬೇಕಾಗುತ್ತದೆ. ಇಲ್ಲವೆ ರಾಮನು ಕಾಡಿಗೆ ಹೋಗಿ ಭರತನು ರಾಜ್ಯವನ್ನು ಪಡೆಯುತ್ತಾನೆ. ಈ ಎರಡು ಕಾರ್ಯಗಳು ಹೊರತಾಗಿ ರತ್ನಾಭರಣಗಳೂ ಪದ್ಮರಾಗ ಮೌಕ್ತಿಕಗಳೂ ಅನ್ನಾದಿಭೋಜ್ಯವಸ್ತುಗಳೂ ನನಗೆ ಬೇಕಾಗಿಲ್ಲ. ದಶರಥರಾಯನು ಶ್ರೀರಾಮನನ್ನು ವನವಾಸಕ್ಕೆ ಕಳುಹಿಸದೆ ಪಟ್ಟಾಭಿಷೇಕವನ್ನು ಮಾಡಿದ ಪಕ್ಷದಲ್ಲಿ ನಾನು ಶರೀರತ್ಯಾಗವನ್ನು ಮಾಡಿಕೊಳ್ಳುವೆನು " ಎಂದು ನುಡಿದಳು.

ಮಂಥರೆಯು ಕೈಕೇಯಿದೇವಿಯನ್ನು ಕುರಿತು "ಕೈಕೇಯಿದೇವಿ, ಶ್ರೀರಾಮನನ್ನು ವನವಾಸಕ್ಕೆ ಕಳುಹಿಸದೆ ಪಟ್ಟಣದಲ್ಲಿ ನಿಲ್ಲಿಸಿದರೆ ನಿನ್ನ ಮಗನಾದ ಭರತನು ಅನೇಕ ದುಃಖಗಳನ್ನು ಅನುಭವಿಸುವನು. ಆದಕಾರಣ ಶ್ರೀರಾಮನಿಗೆ ವನವಾಸವಾಗುವ ಹಾಗೂ ಭರತನಿಗೆ ಪಟ್ಟಾಭಿಷೇಕವಾಗುವ ಹಾಗೂ ಮಾಡುವುದು ಆವಶ್ಯಕ " ಎಂದಳು.

ಮಂಥರೆಯ ವಾಕ್ಯಗಳೆಂಬ ಅಂಬುಗಳಿಂದ ಎದೆಯಲ್ಲಿ ಗಾಯವಡೆದು ಪರವಶಳಾದ ಕೈಕೇಯಿದೇವಿಯು ಆಶ್ಚರ್ಯಪಟ್ಟು ಅತಿಕೋಪಯುಕ್ತೆಯಾಗಿ ಅವಳನ್ನು ನೋಡಿ " ಎಲೇ ಮಂಥರೆ, ರಾಮನು ವನವಾಸಕ್ಕೆ ಹೋಗದೆಯೂ ಭರತನು ಪಟ್ಟಾಭಿಷಿಕ್ತನಾಗದೆಯೂ ಇದ್ದರೆ ನಾನು ಶರೀರವನ್ನು ಬಿಡುವೆನು. ಅದುವರೆಗೂ ನಾನು ಗಂಧಾನುಲೇಪನ ಪರಿಮಳಪುಷ್ಪ ಭೋಜನ ತಾಂಬೂಲಾದಿಗಳನ್ನು ಬಯಸೆನು " ಎಂದು ನುಡಿದಳು. ಮತ್ತು ತಾನು ಧರಿಸಿದ್ದ ಮುತ್ತಿನಸರ ಮೊದಲಾದ ರತ್ನಾಭರಣಗಳನ್ನು ಕಳಚಿಹಾಕಿ ಸ್ವರ್ಗಲೋಕದಿಂದ ಭೂಲೋಕದಲ್ಲಿ ಬಿದ್ದ ಕಿನ್ನರಸ್ತ್ರೀಯ ಹಾಗೆ ನೆಲದ ಮೇಲೆ ಮಲಗಿಕೊಂಡಳು. ಉತ್ತಮವಾದ ಆಭರಣಗಳನ್ನು ಕಿತ್ತೆಸೆದು ಕುಪಿತಳಾಗಿದ್ದ ಆ ರಾಣಿಯು, ನಕ್ಷತ್ರಗಳಿಲ್ಲದೆ ಕತ್ತಲು ಮುಚ್ಚಿಕೊಂಡ ಆಕಾಶದಂತೆ ಕಾಣಿಸುತ್ತಿದ್ದಳು.



## ೧೦ ನೆಯ ಅಧ್ಯಾಯ

## ದಶರಥನು ಕೈಕೇಯಿದೇವಿಯನ್ನು ಸಂತವಿಟ್ಟಿದ್ದು

ಈ ಪ್ರಕಾರದಲ್ಲಿ ಕೈಕೇಯಿದೇವಿಯು ಮಂಥರೆಯ ದುರ್ಬೋಧನೆಗಳನ್ನು ಕೇಳಿ ಬಾಣದಿಂದ ಗಾಯಪಟ್ಟುಬಿದ್ದ ಕಿನ್ನರಸ್ತ್ರೀಯ ಹಾಗೆ ನೆಲದ ಮೇಲೆ ಮಲಗಿಕೊಂಡಳು. ಮಂಥರೆಯು ಹೇಳಿದ ಆಲೋಚನೆಯು ಹಿತವಾದದ್ದೆಂತಲೂ ಶ್ರೇಯಸ್ಕರವಾದದ್ದೆಂತಲೂ ನಿಶ್ಚಯಿಸಿಕೊಂಡು ಅತ್ಯಂತ ಕೋಪಾತಿಶಯದಿಂದ ಹುಬ್ಬು ಗಂಟಿಕ್ಕಿಕೊಂಡಳು. ಆ ದೇವಿಯು ಕಳಚಿಹಾಕಿದ ಮುತ್ತಿನ ಆಭರಣಗಳಿಂದ ಆ ಭೂಮಿಯು ನಕ್ಷತ್ರಗಳಿಂದ ಒಪ್ಪುವ ಆಕಾಶದ ಹಾಗೆ ಕಂಗೊಳಿಸಿತು.

ಇತ್ತ ದಶರಥರಾಯನು ಆಸ್ಥಾನಮಂಟಪಕ್ಕೆ ಬಂದು ಪ್ರಧಾನ ಪರಿಜನ ಪುರಜನಗಳನ್ನು ಕರೆಯಿಸಿ ಮಾರನೆಯ ದಿವಸ ಶ್ರೀರಾಮನಿಗೆ ಪಟ್ಟಾಭಿಷೇಕೋತ್ಸವವೆಂದು ಸಾರಿಸ ಹೇಳಿದನು. ಅನಂತರ ಆ ಶುಭವಾರ್ತೆಯನ್ನು ತನ್ನ ಪ್ರೀತಿಗೆ ಪಾತ್ರಳಾದ ಕೈಕೇಯಿದೇವಿಗೆ ತಿಳುಹಿಸಬೇಕೆಂದು ಆ ಧೇವಿಯ ಅರಮನೆಗೆ ಬಂದನು. ಆ ಅರಮನೆಯು ಬಿಳಿಮುಗಿಲಿನಿಂದ ಕೂಡಿದ ಆಗಸದಂತೆಯೂ ರಾಹುವಿನಿಂದ ಕೂಡಿದ ಚಂದ್ರನ ಹಾಗೆಯೂ ಇದ್ದಿತು. ಎಲ್ಲಿ ನೋಡಿದರೂ ವಿನೋದಾರ್ಥವಾದ ನವಿಲುಗಳ ಕೇಕಾರವಗಳಿಂದಲೂ ಹಂಸಪಕ್ಷಿಗಳ ಧ್ವನಿಗಳಿಂದಲೂ ಲತಾಮಂಟಪಗಳಿಂದಲೂ ಸಂಪಿಗೆ ಅಶೋಕ ಮರಗಳಿಂದಲೂ ನಿರ್ಮಲವಾದ ಬೆಳ್ಳಿಯ ಜಗುಲಿಗಳಿಂದಲೂ ಸುವರ್ಣಮಯ ವಾದ ಮಂಟಪಗಳಿಂದಲೂ ಋತುನಿಯಮವಿಲ್ಲದೆ ಸದಾ ಪಲ್ಲವಿಸಿ ಪುಷ್ಪಿಸಿ ಫಲಿಸುವ ವೃಕ್ಷಗಳಿಂದಲೂ ಸ್ವಾದೂದಕವುಳ್ಳ ರತ್ನಸೋಪಾನಗಳುಳ್ಳ ವಾಪೀಕೂಪತಟಾಕಗಳಿಂದಲೂ ನಾನಾ ಪ್ರಕಾರವಾದ ಭಕ್ಷ್ಯಭೋಜ್ಯಗಳೂ ಷಡ್ರಸಾನ್ನರಾಶಿಗಳೂ ಉಳ್ಳ ಪಾಕಶಾಲೆಗಳಿಂದಲೂ ದಿವ್ಯಾಭರಣಗಳುಳ್ಳ ಬೊಕ್ಕಸದ ಮನೆಗಳಿಂದಲೂ ಅತಿಮನೋಹರವಾಗಿ ದೇವೇಂದ್ರನ ಅರಮನೆಯಂತೆ ಅದು ಒಪ್ಪುತ್ತಿತ್ತು. ಸಮಸ್ತ ಸಂಪತ್ತುಳ್ಳ ಆ ಅರಮನೆಯನ್ನು ಪ್ರವೇಶಿಸಿ ಶಯ್ಯಾಗೃಹದಲ್ಲಿದ್ದ ಮಂಚದ ಮೇಲೆ ತನ್ನ ಪಟ್ಟದ ರಾಣಿಯಾದ ಕೈಕೇಯಿದೇವಿಯನ್ನು ಕಾಣದೆ ಕಾಮಮೋಹಿತನಾಗಿ ಮನಸ್ಸಿನಲ್ಲಿ ವ್ಯಥೆಪಟ್ಟನು. ಮೊದಲು ಯಾವಾಗಲೂ ಆತನು ಹೋದಾಗ ಕೈಕೇಯಿ ಇಲ್ಲದೆ ಆ ಶಯ್ಯಾಗೃಹವು ಶೂನ್ಯವಾಗಿರಲಿಲ್ಲ. ಆ ದೇವಿಯು ಒಂದುಸಾರಿಯಾದರೂ ಆ ಗೃಹವನ್ನು ಬಿಟ್ಟುಹೋದವಳಲ್ಲ. ಆದಕಾರಣ ದಶರಥರಾಯನು ಅವಳ ವೃತ್ತಾಂತವನ್ನರಿಯದೆ ಬಾಗಿಲನ್ನು ಕಾದುಕೊಂಡಿದ್ದ ದಾದಿಯರನ್ನು ಕೇಳಿದನು. ಆ ದಾದಿಯರು ಭಯದಿಂದ ಕಂಗೆಟ್ಟು ಕೈಮುಗಿದುಕೊಂಡು "ಮಹಾರಾಜ, ಕೈಕೇಯಿದೇವಿಯು ಏನು ಕಾರಣದಿಂದಲೋ ಅತ್ಯಂತ ಕೋಪಯುಕ್ತೆಯಾಗಿ ಕೋಪಗೃಹಕ್ಕೆ ಹೋಗಿದ್ದಾಳೆ" ಎಂದು ಹೇಳಿದರು.

ಆ ಮಾತನ್ನು ಕೇಳಿ ದಶರಥರಾಯನು ಮನಸ್ಸಿನಲ್ಲಿ ಅತ್ಯಂತ ವ್ಯಥೆಯಿಂದ ಕಂಗೆಟ್ಟು ಶೀಘ್ರವಾಗಿ ಹೋಗಿ ಅಲ್ಲಿ ಸಮಸ್ತಾಭರಣಗಳನ್ನೂ ಕಳಚಿ ಭೂಮಿಯ ಮೇಲೆ ಹಾಕಿ ಮಲಿನವಾದ ವಸ್ತ್ರವನ್ನುಟ್ಟುಕೊಂಡು ನೆಲದ ಮೇಲೆ ಮಲಗಿ ಅಮಾಂಗಲ್ಯಸ್ವರೂಪಳಾಗಿದ್ದ, ತನ್ನ ಪ್ರಾಣಕ್ಕಿಂತಲೂ ಅಧಿಕಳಾದ ಕೈಕೇಯಿದೇವಿಯನ್ನು ಕಂಡನು. ಕತ್ತರಿಸಿ ಬಿದ್ದ ಲತೆಯೋಪಾದಿ ಯಲ್ಲಿಯೂ ಶಾಪವನ್ನು ಹೊಂದಿ ಸ್ವರ್ಗಲೋಕದಿಂದ ಬಿದ್ದ ಅಪ್ಸರಃಸ್ತ್ರೀಯ ಹಾಗೂ ಸಾಕ್ಷಾತ್ಪರಮಪುರುಷನಿಂದ ತೊಲಗಿಸಲ್ಪಟ್ಟ ಆದಿಮಾಯೆಯ ಹಾಗೂ ಬಲೆಗೆ ಸಿಕ್ಕಿದ ಎರಳೆಯ

ಹಾಗೂ ವನದಲ್ಲಿ ಬೇಟೆಗಾರರ ಬಲೆಯಲ್ಲಿ ಸಿಕ್ಕಿದ ಹೆಣ್ಣಾನೆಯು ಹಾಗೂ ಇದ್ದ ಕೈಕೇಯಿಯಾ ದೇವಿಯನ್ನು ದಶರಥರಾಯನು, ಹೆಣ್ಣಾನೆಯನ್ನು ಗಂಡಾನೆಯು ತನ್ನ ಸೊಂಡಿಲಿನಿಂದ ಸ್ಪರ್ಶಿಸುವ ಹಾಗೆ ಕೈಗಳಿಂದೆತ್ತಿದನು. ಮತ್ತು ಆಕೆಯನ್ನು ನೋಡಿ "ಹೇ ಕಮಲದಳಾಕ್ಷಿ, ನೀನು ಯಾವ ಕಾರಣವಾಗಿ ಕೋಪಿಸಿಕೊಂಡಿದ್ದೀಯೆ ? ನಿನ್ನನ್ನು ಯಾರು ನಿಷ್ಠುರವಾಗಿ ನುಡಿದರು ? ಯಾವುದ ರಿಂದ ನಿನಗೆ ಅವಮಾನವಾಯಿತು ? ನಾನು ಜೀವಿತನಾಗಿರಲು ನೀನು ಯಾವಕಾರಣ ನೆಲದ ಮೇಲೆ ಮಲಗಿದ್ದೀಯೆ ? ನೀನು ಹೀಗೆ ಗ್ರಹಸೋಕಿದಹಾಗಿದ್ದರೆ ನನ್ನ ಮನಸ್ಸಿಗೆ ಬಹು ವ್ಯಥೆಯಾಗುತ್ತದೆ. ನಿನ್ನ ಮನಸ್ಸಿನಲ್ಲಿ ಏನಾದರೂ ಶಂಕೆಯುಂಟಾದಪಕ್ಷದಲ್ಲಿ ಹೇಳು. ನಾನು ವೈದ್ಯಶಾಸ್ತ್ರದಲ್ಲಿ ಸಮರ್ಥ ರಾಗಿ ಚಿಕಿತ್ಸೆಯಲ್ಲಿ ಕುಶಲರಾದ ವೈದ್ಯರನ್ನು ಅನೇಕ ಧನಕನಕ ವಸ್ತುವಾಹನಗಳನ್ನು ಕೊಟ್ಟು ಸತ್ಕರಿಸಿ ಕೊಂಡಿದ್ದೇನೆ. ಅವರು ಶರೀರದಲ್ಲಿರುವ ಉಪದ್ರವಗಳನ್ನು ಪರಿಹರಿಸಬಲ್ಲರು. ಅದಲ್ಲದ ಪಕ್ಷದಲ್ಲಿ ನಿನ್ನ ಮನಸ್ಸಿನಲ್ಲಿರುವ ವ್ಯಥೆಯೇನು ? ಯಾರು ನಿನಗೆ ಅರಿಷ್ಟವನ್ನು ಮಾಡಿದರು ? ನಿನ್ನ ನಿಮಿತ್ತ ವಾಗಿ ಯಾರಿಗೆ ಯಾವ ಪ್ರಯೋಜನವನ್ನು ಮಾಡಬೇಕು ? ಯಾರಿಗೆ ನೀನು ಪ್ರಿಯವನ್ನು ಮಾಡಬೇಕು ? ನೀನು ವೃಥಾ ರೋದನವನ್ನು ಮಾಡುತ್ತ ನಿಷ್ಕಾರಣವಾಗಿ ವಸ್ತ್ರಭೂಷಣ ತಾಂಬೂಲ ಭೋಜನಗಳನ್ನು ಬಿಟ್ಟು ಶರೀರಶೋಷಣೆಯನ್ನು ಮಾಡಿಕೊಂಡಿದ್ದೀಯೆ. ನಿನ್ನ ನಿಮಿತ್ತವಾಗಿ ಕೊಲೆಗೆ ಯೋಗ್ಯನಲ್ಲದವನನ್ನಾದರೂ ಕೊಲ್ಲುವೆನು. ಕೊಲೆಗೆ ಯೋಗ್ಯನಾಗಿರುವ ವನನ್ನು ನೀನು ಬಿಡಹೇಳಿದರೂ ಬಿಡುವೆನು. ದರಿದ್ರನಾದರೂ ನಿನಗೆ ಇಷ್ಟನಾದರೆ ಐಶ್ವರ್ಯ ವಂತನನ್ನಾಗಿ ಮಾಡುವೆನು. ದ್ರವ್ಯಸಂಪನ್ನನಾದರೂ ನಿನ್ನ ಮನಸ್ಸಿಗೆ ಸರಿಬರದವನಾದರೆ ದರಿದ್ರ ನನ್ನಾಗಿ ಮಾಡುತ್ತೇನೆ. ನಾವೆಲ್ಲರೂ ನಿನ್ನ ವಶವರ್ತಿಗಳಾಗಿ ನೀನು ಹೇಳಿದ ಕಾರ್ಯವನ್ನು ಮಾಡುವೆವು. ನಾನು ನಿನ್ನ ಮನಸ್ಸಿನ ಇಷ್ಟಾರ್ಥವೊಂದನ್ನೂ ಕೆಡಿಸುವವನಲ್ಲ. ನಿನ್ನ ನಿಮಿತ್ತವಾಗಿ ನನ್ನ ಶರೀರವನ್ನಾದರೂ ಕೊಡುವೆನು. ನೀನು ಸಂಶಯಪಡಬೇಡ. ನನ್ನ ಸಾಮರ್ಥ್ಯವನ್ನು ನೀನು ಬಲ್ಲೆ. ನನ್ನ ಸಾಕ್ಷಿಯಾಗಿ ನಿನ್ನ ಇಷ್ಟಾರ್ಥವನ್ನು ಸಲ್ಲಿಸುವೆನು. ಈ ಜ್ಯೋತಿಶ್ಚಕ್ರವು ಎದುವರೆಗೂ ಸಂಚರಿಸುವುದೋ ಅದುವರೆಗಿರುವ ಭೂಮಂಡಲವೆಲ್ಲವೂ ನನ್ನದಲ್ಲದೆ ಮತ್ತೊಬ್ಬರದಲ್ಲ. ಸಿಂಧು ಸೌವೀರದೇಶಗಳೂ ಸೌರಾಷ್ಟ್ರದಕ್ಷಿಣಾಪಥಗಳೂ ವಂಗ ಮಗಧ ಮ್ಲೇಚ್ಛ ದೇಶಗಳೂ ಕಾಶಿ ಕೋಸಲ ದೇಶಗಳೂ ಆ ದೇಶಗಳಲ್ಲಿರುವ ಸಮಸ್ತ ವಸ್ತುಗಳೂ ನನ್ನವಾದ್ದರಿಂದ ನಿನಗೆ ಬೇಕಾದ ವಸ್ತುಗಳನ್ನು ತೆಗೆದುಕೊ ವೃಥಾ ಶೋಕಪಡಬೇಡ. ಎದ್ದು ಕುಳಿತುಕೊ. ಯಾರಿಂದ ನಿನಗೆ ಭಯವು ಹುಟ್ಟಿತು ? ಹೇಳು. ಆ ಭಯವನ್ನು ಸೂರ್ಯನು ಇಬ್ಬನಿಯನ್ನು ತೊಲಗಿಸುವಂತೆ ತೊಲಗಿಸುತ್ತೇನೆ" ಎಂದು ನುಡಿದನು.



## ೧೧ನೆಯ ಅಧ್ಯಾಯ

## ಕೈಕೇಯಿಯಾದೇವಿಯು ಕೇಳಿಕೊಂಡ ಎರಡು ವರಗಳು

ಆಮೇಲೆ ಕೈಕೇಯಿಯಾದೇವಿಯು ತನ್ನ ಪ್ರಾಣಕಾಂತನಾದ ದಶರಥರಾಯನು ತನಗೆ ಹೇಳಿದ ಸಮಾಧಾನದ ಮಾತುಗಳಿಂದ ಕಾಮಾತುರನಾಗಿರುವುದನ್ನು ತಿಳಿದು ಆ ರಾಯನನ್ನು ಕುರಿತು "ಮಹಾರಾಜ, ನೀನು ಪ್ರತಿಜ್ಞೆಯನ್ನು ಮಾಡಿದರೆ ನನ್ನ ಅಭಿಪ್ರಾಯವನ್ನು ಹೇಳುತ್ತೇನೆ" ಎಂದಳು.

ದಶರಥರಾಯನು ಕೈಕೇಯಿದೇವಿಯ ಮುಂಗುರುಳುಗಳನ್ನು ತಿದ್ದಿ ಮುಗುಳುನಗೆಯೊಡನೆ "ಕೈಕೇಯಿ, ನನಗೆ ಪುರುಷೋತ್ತಮನಾದ ಶ್ರೀರಾಮನು ನನ್ನ ಪ್ರಾಣದಂತೆ ಪ್ರಿಯನಾಗಿದ್ದಾನೆ. ಆತನಿಗಿಂತಲೂ ನನಗೆ ಹೆಗ್ಗಳನಾದ ಪ್ರಿಯನಿಲ್ಲ. ಆ ಶ್ರೀರಾಮನ ಸಾಕ್ಷಿಯಾಗಿ ನಿನ್ನ ಮನಸ್ಸಿನಲ್ಲಿರುವ ಕಾರ್ಯವನ್ನು ಸಾಧಿಸಿಕೊಡುವೆನು. ಮನಸ್ಸಿನಲ್ಲಿ ಸಂಶಯವಿಲ್ಲದೆ ಹೇಳು. ಯಾರನ್ನು ಕಾಣದೆ ಒಂದು ಕ್ಷಣಮಾತ್ರವಾದರೂ ಜೀವಿಸಿಕೊಂಡಿರಲಾರೆನೋ ಅಂಥ ಶ್ರೀರಾಮನ ಸಾಕ್ಷಿಯಾಗಿ ನಿನ್ನ ಕಾರ್ಯವನ್ನು ಮಾಡುತ್ತೇನೆ. ನೀನು ಸಂಶಯಪಡಬೇಡ. ಧರ್ಮದ ಸಾಕ್ಷಿಯಾಗಿ ನಿನ್ನ ಮನಸ್ಸಿನ ಇಷ್ಟಾರ್ಥವನ್ನು ಸಲ್ಲಿಸಿಕೊಡುವೆನು" ಎಂದು ಸಂತಪಿಟ್ಟು ನುಡಿದನು.

ಕೈಕೇಯಿದೇವಿಯು ಆತನನ್ನು ಕುರಿತು ಹೀಗೆಂದಳು : "ಮಹಾರಾಜ, ನೀನು ಅನೇಕ ಆಣೆಗಳನ್ನಿಟ್ಟು ಪ್ರತಿಜ್ಞೆಯನ್ನು ಮಾಡುತ್ತಿದ್ದೀಯೆ. ಇದಕ್ಕೆ ಯಜ್ಞೇಶ್ವರನೇ ಮೊದಲಾದ ಮೂವತ್ತು ಮೂರುಕೋಟಿ ದೇವತೆಗಳೂ ಸಾಕ್ಷಿಗಳಾಗಿರಲಿ! ಚಂದ್ರಾದಿತ್ಯರು ಆಕಾಶ ಬುಧ ಅಂಗಾರಕ ಬೃಹಸ್ಪತಿಗಳು ಮೊದಲಾದ ನವಗ್ರಹಗಳೂ ಹಗಲಿರುಳು ಎಂಬ ಕಾಲಗಳೂ ಮೂಡಣ ದಿಕ್ಕು ಮೊದಲಾದ ದಶದಿಕ್ಕುಗಳೂ ಸಮಸ್ತ ಜಗತ್ತೂ ಗಂಧರ್ವ ಯಕ್ಷ ರಾಕ್ಷಸ ನಿಶಾಚರ ಗ್ರಹ ದೇವತೆಗಳೂ ಮತ್ತು ಭೂತಗಳೂ ಸಾಕ್ಷಿಯಾಗಿರಲಿ! ನೀನು ಸತ್ಯಸಂಧ, ಮಹಾಕೀರ್ತಿವಂತ, ಮಹಾಧರ್ಮಜ್ಞ. ಆದ್ದರಿಂದ ನೀನು ಕೊಟ್ಟ ಭಾಷೆಗೆ ಸಮಸ್ತ ದೇವತೆಗಳೂ ಸಾಕ್ಷಿಯಾಗಿರಲಿ! ಮಹಾರಾಜ, ಪೂರ್ವದಲ್ಲಿ ದೇವಾಸುರರ ಯುದ್ಧದಲ್ಲಿ ನೀನು ದೇವತೆಗಳಿಗೆ ಸಹಾಯಕನಾಗಿ ಹೋದಾಗ ಶತ್ರುಗಳು ನಿನ್ನಮೇಲೆ ಕವಿದು ಕಣೆಗಳನ್ನೆಸೆದು ಮೂರ್ಛೆಗೊಳಿಸಿದಾಗ ನಾನು ಅತಿವೇಗದಿಂದ ಬಂದು ನಿನ್ನನ್ನು ಸ್ಥಳಾಂತರಕ್ಕೆ ಕರೆದುಕೊಂಡು ಹೋಗಿ ಅತಿ ಸಾವಧಾನದಿಂದ ರಕ್ಷಿಸಿದೆನು. ಆ ಸಮಯದಲ್ಲಿ ನೀನು ನನಗೆ ಎರಡು ವರಗಳನ್ನು ಕೊಡುವುದಾಗಿ ಹೇಳಿದೆ. ಆ ವೃತ್ತಾಂತವನ್ನು ನೀನೇ ನೆನೆದುಕೊ. ಆಗ ನಾನು ಆ ಎರಡು ವರಗಳೂ ನಿನ್ನಲ್ಲಿಯೇ ಇರಲೆಂದು ಹೇಳಿದೆನು. ನೀನು ಸತ್ಯಸಂಧನಾಗಿ ಧರ್ಮರಹಸ್ಯವನ್ನು ಬಲ್ಲವನಾದ್ದರಿಂದ ಆ ಎರಡು ವರಗಳನ್ನೂ ನಿಕ್ಷೇಪವೆಂದು ನಿನ್ನಲ್ಲಿ ಇರಿಸಿದ್ದೆನು. ಆ ವರಗಳನ್ನು ಈಗ ನನಗೆ ಕೊಡು. ಕೊಡದೆ ಉಪೇಕ್ಷೆ ಮಾಡಿದರೆ ನಾನು ಈ ಕ್ಷಣದಲ್ಲೇ ಪ್ರಾಣಗಳನ್ನು ಬಿಡುವೆನು" ಎಂದು ನುಡಿದಳು.

ದಶರಥರಾಯನು ವಿಚಾರವಿಲ್ಲದೆ, ಮೃಗಗಳು ಘಂಟಾನಾದಕ್ಕೆ ಸೊಕ್ಕಿ ಬಲೆಗೆ ಸಿಕ್ಕುವಂತೆ ಕೈಕೇಯಿದೇವಿಯ ಮಾತಿಗೊಳಗಾದನು. ಆ ದೇವಿಯು ಆತನನ್ನು ಕುರಿತು ಹೀಗೆಂದಳು: "ಮಹಾರಾಜ, ನೀನು ಕೊಟ್ಟ ಎರಡು ವರಗಳನ್ನು ಈಗ ಕೇಳುತ್ತೇನೆ. ನೀನು ಸಾವಧಾನವಾಗಿ ನನ್ನ ಮಾತನ್ನು ಕೇಳು. ಈಗ ಶ್ರೀರಾಮನಿಗೆ ಪಟ್ಟಾಭಿಷೇಕವಾಗಬೇಕೆಂದು ಸಮಸ್ತ ವಸ್ತುಗಳನ್ನು ತರಿಸಿದ್ದೀಯೆ. ಆ ಸಮಸ್ತ ವಸ್ತುಗಳಿಂದ ನನ್ನ ಕುಮಾರನಾದ ಭರತನಿಗೆ ಪಟ್ಟಾಭಿಷೇಕವನ್ನು ಮಾಡುವುದು ಒಂದು ವರ. ಶ್ರೀರಾಮನಿಗೆ ನಾರುಬಟ್ಟೆಯನ್ನುಡಿಸಿ ಅವನು ಜಡೆಗಳನ್ನು ಧರಿಸಿ ಹದಿನಾಲ್ಕು ಸಂವತ್ಸರಗಳು ವಾನಪ್ರಸ್ಥಾಶ್ರಮಿಯ ಹಾಗೆ ತಪಸ್ವಿಯಾಗಿರುವಂತೆ ವನವಾಸಕ್ಕೆ ಕಳುಹಿಸುವುದು ಎರಡನೆಯ ವರ. ಶ್ರೀರಾಮನು ಸಮಸ್ತ ಮಾಂಗಲ್ಯೋತ್ಸವಗಳನ್ನೂ ಬಿಟ್ಟು ಕಾಲ್ನಡೆಯಲ್ಲಿ ವನವಾಸಕ್ಕೆ ಹೋಗುವುದನ್ನು ಕಣ್ಣುಗಳು ದಣಿಯುವ ಹಾಗೆ ನೋಡಬೇಕೆಂಬುದು ನನ್ನ ಅಭಿಲಾಷೆಯು! ನೀನು ಸತ್ಯಸಂಧನಾದವನು. ನಿನ್ನ ಕುಲಶೀಲಾದಿಗಳನ್ನು ಆಲೋಚಿಸಿಕೊಂಡು ನಿನ್ನ ವಂಶಕ್ಕೆ ಅಪಕೀರ್ತಿಯೂ ಅನೃತದೋಷವೂ ಬರದಂತೆ, ಪರಲೋಕದಲ್ಲಿರುವ ಸತ್ಯವಂತರಾದ ತಪಸ್ವಿಗಳು ನಿನ್ನನ್ನು ಸತ್ಯಸಂಧನೆಂದು ಕೊಂಡಾಡುವಂತೆ ನಡೆಯಿಸು" ಎಂದು ಕೈಕೇಯಿಯು ನುಡಿದಳು.

---

೧೨ನೆಯ ಅಧ್ಯಾಯ

## ದಶರಥ ಕೈಕೇಯಿದೇವಿಯರ ಸಂವಾದ

ಆಮೇಲೆ ದಶರಥರಾಯನು ಕೈಕೇಯಿದೇವಿಯ ಕರ್ಣಕಠೋರವಾದ ವಾಕ್ಯವನ್ನು ಕೇಳಿ ಮೂರ್ಛೆಹೋದನು. ಕ್ಷಣಮಾತ್ರದಲ್ಲಿ ಎಚ್ಚತ್ತು ಅಪರಿಮಿತವಾದ ಚಿಂತೆಯಿಂದ ತನಗೆ ಕೇಳಿಸಿದ ಮಾತುಗಳನ್ನು ಕೈಕೇಯಿದೇವಿಯೇ ಆಡಿದಳೊ—ಅಲ್ಲ ಸ್ವಪ್ನವೊ—ಮನಸ್ಸಿನ ಭ್ರಮೆಯೊ—ಮರವೆಯ ನಿದ್ರೆಯೊ—ಅಲ್ಲದಿದ್ದರೆ ಚಿತ್ತವಿಕಾರವೊ ಎಂದೆಣಿಸತೊಡಗಿದನು. ಬಾಣದ ಅಲಗಿನಿಂದ ಗಾಯಪಟ್ಟು ವೇದನೆಪಡುವ ಗಂಡು ಹುಲ್ಲೆಯಂತೆ ಕಂಗೆಟ್ಟು ನೆಲದಮೇಲೆ ಕುಳಿತು ನಿಟ್ಟುಸಿರುಬಿಡುತ್ತ ಆ ದಶರಥನು ಮಂತ್ರೌಷಧಿಗಳಿಂದ ತಡೆಯಲ್ಪಟ್ಟ ಮಹಾವಿಷವುಳ್ಳ ಸರ್ಪದಂತೆ ತನ್ನೊಳಗೆ ತಾನೇ ತತ್ತರಿಸಿಹೋದನು. ಅಂಥ ದುರ್ವಾಕ್ಯವನ್ನು ಕೇಳಿದ ತನ್ನ ಜನ್ಮವನ್ನು ಸುಡಬೇಕೆಂದು ಶೋಕಾತಿಶಯದಿಂದ ಮತ್ತೆ ಮೂರ್ಛೆಹೋದನು. ಸ್ವಲ್ಪಹೊತ್ತಿಗೆ ಎಚ್ಚತ್ತು ಅತ್ಯಂತ ಕೋಪದಿಂದ ಕೈಕೇಯಿದೇವಿಯನ್ನು ಸುಡುವಂತೆ ದೃಷ್ಟಿಸಿ ನೋಡುತ್ತ ಹೇಳತೊಡಗಿದನು. "ಎಲೇ ಕುಲಗೆಡಿಕಿ, ದುಷ್ಟಚಾರಿತ್ರೆ, ಪಾಪಿಷ್ಠೆ, ಇದೇನು ಕೃತ್ಯವನ್ನು ನೆನೆದೆ ? ನಾನು ನಿನಗೆ ಏನು ಅಪರಾಧವನ್ನು ಮಾಡಿದೆನು ? ಶ್ರೀರಾಮನು ನಿನಗೆ ಏನು ಅಕೃತ್ಯವನ್ನು ಮಾಡಿದನು ? ಆತನು ನಿನಗೆ ತಾಯಿಯ ಹಾಗೆ ಸೇವಾಸತ್ಕಾರಗಳನ್ನು ಮಾಡಿಕೊಂಡಿದ್ದಾನೆ. ಅಂಥವನಿಗೆ ನೀನು ಯಾವ ಕಾರಣ ದ್ರೋಹವನ್ನೆಣಿಸುತ್ತಿದ್ದೀಯೆ ? ನಾನು ನನ್ನ ಕೇಡಿಗಾಗಿ ನಿನ್ನನ್ನು ವಿವಾಹವಾದೆನು. ನಿನ್ನ ಪರಿಗ್ರಹವು ಅತ್ಯಂತ ತೀಕ್ಷ್ಣವಾದ ವಿಷಜ್ವಾಲೆಯುಳ್ಳ ಸರ್ಪವನ್ನು ಮನೆಹೊಗಿಸಿಕೊಂಡ ಹಾಗಾಯಿತು. ಲೋಕದಲ್ಲಿ ಸಮಸ್ತರೂ ಶ್ರೀರಾಮನ ಗುಣಾತಿಶಯಗಳನ್ನು ಕೊಂಡಾಡುತ್ತಾರೆ. ಅಂತಹ ಗುಣಾಢ್ಯನಲ್ಲಿ ನೀನು ಯಾವ ಕಾರಣ ದ್ರೋಹವನ್ನು ನೆನೆಯುತ್ತಿದ್ದೀಯೆ ? ನಾನು ನನ್ನ ಪ್ರಿಯಪುತ್ರನನ್ನು ಬಿಡಲಾರೆನು. ಕೌಸಲ್ಯೆಯನ್ನಾದರೂ ಸುಮಿತ್ರೆಯನ್ನಾದರೂ ಸಮಸ್ತ ಐಶ್ವರ್ಯಗಳನ್ನಾದರೂ, ಕಡೆಗೆ ನನ್ನ ಜೀವವನ್ನಾದರೂ ಬಿಡುವೆನಲ್ಲದೆ ಪಿತೃಭಕ್ತನಾದ ಶ್ರೀರಾಮನನ್ನು ಬಿಡಲಾರೆನು ! ನನಗೆ ಜ್ಯೇಷ್ಠಪುತ್ರನಾದ ಶ್ರೀರಾಮನನ್ನು ಕಂಡರೆ ಅತ್ಯಂತ ಪ್ರೀತಿ. ಆತನನ್ನು ಕ್ಷಣಮಾತ್ರವಾದರೂ ಕಾಣದಿದ್ದರೆ ಮೂರ್ಛೆಹೋಗುವೆನು. ಈ ಲೋಕವು ಸೂರ್ಯನಿಲ್ಲದೆ ಇರಬಹುದು. ಸಸ್ಯಾದಿಗಳು ನೀರಿಲ್ಲದೆ ಜೀವಿಸಬಹುದು. ಆದರೆ ಶ್ರೀರಾಮನಿಲ್ಲದೆ ನನ್ನ ಶರೀರದಲ್ಲಿ ಜೀವವು ನಿಲ್ಲಲಾರದು. ಇನ್ನು ಬಹುಮಾತುಗಳಿಂದ ಪ್ರಯೋಜನವೇನು ? ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿ ಭರತನಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂಬ ನಿನ್ನ ಮನಸ್ಸಿನ ಸಂಕಲ್ಪವನ್ನು ಸಾಕುಮಾಡು. ಎಲೈ ಪಾಪಸ್ವರೂಪಳೆ, ಕೈಕೇಯಿ, ನಿನ್ನ ಪಾದಗಳಿಗೆ ದಂಡಪ್ರಣಾಮವನ್ನಾದರೂ ಮಾಡುತ್ತೇನೆ. ಈ ದುಷ್ಟಬುದ್ಧಿಯನ್ನು ಬಿಡು. ನೀನು ನನ್ನ ಮನಸ್ಸಿನಲ್ಲಿ ಭರತನ ಮೇಲೆ ಪ್ರೀತಿಯುಂಟೋ ಇಲ್ಲವೋ ಎಂದು ಪರೀಕ್ಷಿಸಿ ನೋಡಬೇಕೆಂದು ಇಂಥ ಮಾತನ್ನು ನುಡಿದೆಯಾ ! ಮೊದಲು ನನ್ನೊಡನೆ ಇಷ್ಟಾಲಾಪಗಳನ್ನು ಮಾಡುವಾಗ ಶ್ರೀರಾಮನು ಮಹಾಧರ್ಮಿಷ್ಠನೆಂದೂ ನಿನಗೆ ಜ್ಯೇಷ್ಠಪುತ್ರನೆಂದೂ ನುಡಿದೆ. ಅಂಥ ನೀನು ಈಗ ಶ್ರೀರಾಮನಿಗೆ ಅಹಿತವನ್ನು ಚಿಂತಿಸುತ್ತಿದ್ದೀಯೆ. ಆದಕಾರಣ ನೀನು ನನ್ನ ವಂಚನೆಗಾಗಿ ಕಪಟದಿಂದ ಶ್ರೀರಾಮನು ಮಹಾ ಸದ್ಗುಣಶಾಲಿ ಎಂದು ಕೊಂಡಾಡಿದೆ. ನಿನ್ನ ಮನಸ್ಸಿನಲ್ಲಿ ಕಪಟವಿಲ್ಲದೆ ಆತನ ಗುಣಕಥನ

ಗಳನ್ನು ಕೊಂಡಾಡಿದ್ದ ಪಕ್ಷದಲ್ಲಿ ಆತನ ಪಟ್ಟಾಭಿಷೇಕವಾರ್ತೆಯನ್ನು ಕೇಳಿ ಕೋಪಾತಿಶಯದಿಂದ ಮುನಿಸಿಕೊಂಡು ನನ್ನನ್ನು ಹೀಗೆ ದುಃಖಪಡಿಸುತ್ತಿದ್ದೆಯಾ ? ನೀನೇನಾದರೂ ಇತರರ ಮಾತನ್ನು ಕೇಳಿಕೊಂಡು ಶೂನ್ಯವಾದ ದೆವ್ವ ಹೊಕ್ಕಿರುವ ಈ ಕ್ರೋಧಾಗಾರವನ್ನು ಹೊಕ್ಕಿರುವೆಯಾ ? ಇಂಥ ಕೃತ್ಯವನ್ನು ನೀನು ಯೋಚಿಸಿದಾಗಲೇ ಇಕ್ಷ್ವಾಕುವಂಶಕ್ಕೆ ಮಹತ್ತಾದ ಅನರ್ಥವುಂಟಾಯಿತು. ನೀನು ಸಕಲ ನೀತಿಶಾಸ್ತ್ರಗಳನ್ನೂ ಬಲ್ಲವಳು. ಈಗ ಬುದ್ಧಿವಿಕಾರದಿಂದ ದುರ್ನೀತಿಯನ್ನು ಕೈಗೊಂಡೆ. ನೀನು ಇದಕ್ಕೆ ಹಿಂದೆ ನನಗೆ ಒಂದು ಅಕೃತ್ಯವನ್ನಾದರೂ ನಿಷ್ಠುರವಚನವನ್ನಾದರೂ ನುಡಿದವಳಲ್ಲ. ಆದಕಾರಣ ನಿನಗೆ ಈ ವಿಪರೀತಬುದ್ಧಿ ಹುಟ್ಟಿದ್ದು ಕಪಟವಾಗಿ ತೋರುತ್ತದೆ. ರಾಮನು ಭರತನಿಗೆ ಸಮನೆಂದು ನನಗೆ ನೀನು ಆಗಾಗ ಹೇಳಲಿಲ್ಲವೆ ? ಅಂಥ ಧರ್ಮಾತ್ಮನಾಗಿ ಕೀರ್ತಿವಂತನಾದ ಶ್ರೀರಾಮನಿಗೆ ಹದಿನಾಲ್ಕು ವರುಷಗಳು ವನವಾಸವಾಗಬೇಕೆಂಬುದು ನಿನ್ನ ಮನಸ್ಸಿಗೆ ಹೇಗೆ ಸಮ್ಮತವಾಯಿತು ? ಶ್ರೀರಾಮನು ಪುಷ್ಪದ ಹಾಗೆ ಸುಕುಮಾರಾಂಗನು. ಅಂಥವನಿಗೆ ಭಯಂಕರವಾದ ಅರಣ್ಯದಲ್ಲಿ ಹದಿನಾಲ್ಕು ವರುಷಗಳು ವನವಾಸವಾಗಬೇಕೆಂದು ಹೇಗೆ ಬಯಸುತ್ತೀಯೆ ? ಅದೂ ಅಲ್ಲದೆ ಆತನು ನಿನ್ನ ಸೇವೆಯನ್ನು ಅತ್ಯಂತ ವಿಶ್ವಾಸಪೂರ್ವಕವಾಗಿ ಮಾಡುವಂಥವನು. ಭರತನಿಗಿಂತಲೂ ಅಧಿಕವಾಗಿ ಸೇವಾಸತ್ಕಾರಗಳನ್ನು ಮಾಡುವಂಥವನು. ಹೆತ್ತ ತಾಯಿಯ ಹಾಗೆ ನಿನ್ನನ್ನು ಅತ್ಯಂತ ಭಕ್ತಿಯಿಂದ ಕಾಣುತ್ತ ನಿನ್ನ ಸೇವೆಯನ್ನು ಮಾಡುವವನು. ಈ ವಿಷಯದಲ್ಲಿ ಆತನಿಗಿಂತಲೂ ಅಧಿಕರಾದವರೊಬ್ಬರೂ ಇಲ್ಲ! ಬಹುಮಂದಿ ಸ್ತ್ರೀಯರ ಗೋಷ್ಠಿಯಲ್ಲಾಗಲಿ ಆಶ್ರಿತರಲ್ಲಾಗಲಿ ಆತನಲ್ಲಿ ದುರ್ಗುಣವನ್ನೂ ಅಪವಾದವನ್ನೂ ನುಡಿಯುವವರಿಲ್ಲ. ಆತನು ಅಂತರಂಗ ಶುದ್ಧಿಯಿಂದ ಪ್ರಾಣಿಗಳನ್ನು ಸಂತವಿಟ್ಟುಕೊಂಡು ತನ್ನ ರಾಜ್ಯದಲ್ಲಿರುವ ಸಮಸ್ತ ಪ್ರಜೆಗಳನ್ನೂ ವಿನಯಾದಿಗುಣಗಳಿಂದ ವಶವರ್ತಿಗಳನ್ನಾಗಿ ಮಾಡಿಕೊಂಡಿದ್ದಾನೆ. ಶ್ರೀರಾಮನು ತನ್ನ ಸತ್ತ್ವದಿಂದಲೇ ಸಮಸ್ತ ಲೋಕಗಳನ್ನೂ ಜಯಿಸುವಂಥವನು. ಅನೇಕ ಬಗೆಯ ದಾನಗಳಿಂದ ಬಡವರನ್ನು ರಕ್ಷಿಸುತ್ತಾನೆ. ಸೇವೆಯಿಂದ ಗುರುಗಳನ್ನು ವಶವರ್ತಿಗಳನ್ನಾಗಿ ಮಾಡಿಕೊಂಡಿದ್ದಾನೆ. ಧನುರ್ವಿದ್ಯಾ ಸಾಮರ್ಥ್ಯದಿಂದ ಯುದ್ಧರಂಗದಲ್ಲಿ ಸಮಸ್ತ ಶತ್ರುಗಳನ್ನೂ ಜಯಿಸುವಂಥವನು. ಆತನಲ್ಲಿ ಸಮಸ್ತ ಸತ್ಪುರುಷರ ಗುಣಗಳಿಗಿಂತಲೂ ಉತ್ತಮವಾದ ಗುಣಗಳು ಇರುವುವು. ಆಡಿದ ಮಾತಿಗೆ ತಪ್ಪಬಾರದೆಂಬ ಸತ್ಯ, ಸತ್ಪಾತ್ರವನ್ನರಿತು ಕೊಡುವ ದಾನ, ತಪಸ್ಸು, ತ್ಯಾಗಗುಣ, ಸಮಸ್ತ ಪ್ರಾಣಿಗಳಲ್ಲಿಯೂ ವಿಶ್ವಾಸ, ಮಿತ್ರತ್ವ, ಇಂದ್ರಿಯನಿಗ್ರಹ, ಋಜುಮಾರ್ಗ, ವಿದ್ಯಾಭ್ಯಾಸ, ಗುರುಸೇವೆ ಮೊದಲಾದ ಉತ್ತಮಗುಣಗಳು ಆತನಲ್ಲಿ ಸ್ವಾಭಾವಿಕವಾಗಿರುವುವು ! ಕೈಕೇಯಿ, ಹೀಗೇ ಋಜುಮಾರ್ಗಸಂಪನ್ನನಾಗಿ ಸಾಕ್ಷಾತ್ಪರಮಪುರುಷನಿಗೆ ಸಮಾನನಾಗಿ ವಸಿಷ್ಠಾದಿಮಹಾಮುನಿಗಳಿಗೆ ಸಮಾನವಾದ ತೇಜಸ್ಸುಳ್ಳಂಥ ಶ್ರೀರಾಮನಲ್ಲಿ ಹೇಗೆ ದ್ರೋಹವನ್ನೆಣಿಸುತ್ತೀಯೆ ? ಲೋಕದಲ್ಲಿ ಸಮಸ್ತ ಪ್ರಾಣಿಗಳಿಗೂ ಪ್ರಿಯವಚನಗಳನ್ನು ನುಡಿಯುವ ಅತ್ಯಂತ ಪ್ರಿಯಪುತ್ರನಾದ ಶ್ರೀರಾಮನಿಗೆ, ನಿನಗೋಸ್ಕರ ಹೇಗೆ ನಿಷ್ಠುರವಾಗಿ ನುಡಿಯಲಿ ? ತ್ಯಾಗಗುಣ, ಕ್ಷಮೆ, ಸತ್ಯ, ಧರ್ಮ, ಮಾಡಿದ ಉಪಕಾರಗಳನ್ನು ಮರೆಯದಂಥ ಕೃತಜ್ಞತೆ, ಪ್ರಾಣಿಹಿಂಸೆ ಮಾಡದಿರುವಂಥ ಭೂತದಯೆ—ಇವೇ ಮೊದಲಾದ ಸುಗುಣಗಳುಳ್ಳ ರಘುನಾಥನನ್ನು ವನಕ್ಕೆ ಕಳುಹಿಸಿದೆನಾದರೆ ನನಗೆ ಗತಿಯೇನು ! ನಾನು ವೃದ್ಧನು. ನನಗೆ ಆಯುಸ್ಸು ಮುಗಿಯುತ್ತ ಬಂದಿದೆ. ಶೋಚನೀಯನಾಗಿ ಮತ್ತೆ ಮತ್ತೆ ಹಂಬಲಿಸುವ ನನ್ನಲ್ಲಿ ಕರುಣಿಸು. ಈ ವೈರಬುದ್ಧಿಯನ್ನು ಬಿಡು. ನಿನಗೆ ಸಮುದ್ರಪರ್ಯಂತವಾದ ಈ ಭೂಮಿಯಲ್ಲಿರುವ ಸಮಸ್ತ ವಸ್ತುಗಳನ್ನೂ ತರಿಸಿಕೊಡುತ್ತೇನೆ. ಈ ಕೇಡುಬುದ್ಧಿಯನ್ನು ಬಿಡು. ನಿನಗೆ ಕೈಮುಗಿಯುತ್ತೇನೆ. ನಿನ್ನ ಪಾದಗಳಿಗೆ ನಮಸ್ಕಾರವನ್ನು ಮಾಡುತ್ತೇನೆ. ಶ್ರೀರಾಮನಲ್ಲಿ

ಕೃಪೆಮಾಡು. ಅಧಿಕವಾದ ದುಃಖಾತಿಶಯದಿಂದ ಹಂಬಲಿಸುತ್ತ ಚೈತನ್ಯಗೆಟ್ಟು ಬಳಲಿ ಬೀಳುತ್ತ ಶೋಕಸಮುದ್ರದಲ್ಲಿ ಮುಳುಗಿರುವ ನನ್ನನ್ನು ಉದ್ಧರಿಸಿ ಕಡೆಹಾಯಿಸು " ಎಂದು ದಶರಥನು ಗೋಳಾಡಿದನು.

ಆಗ ಕೈಕೇಯೀದೇವಿಯು ಅತಿರೌದ್ರವಾಗಿ ಕರ್ಣಕಠೋರವಾದ ವಾಕ್ಯಗಳಿಂದ ಹೇಗೆಂದಳು : "ಮಹಾರಾಜ, ನನ್ನ ಇಷ್ಟಾರ್ಥವನ್ನು ಸಲ್ಲಿಸಿಕೊಡುವುದಾಗಿ ಪ್ರತಿಜ್ಞೆಯನ್ನು ಮಾಡಿ ಈಗ ಪಶ್ಚಾತ್ತಾಪಪಡುವ ನೀನು ಲೋಕದಲ್ಲಿ ಹೇಗೆ ತಾನೆ ಧಾರ್ಮಿಕನೆನ್ನಿಸಿಕೊಳ್ಳುತ್ತೀಯೆ ? ಇನ್ನು ಮುಂದೆ ದಶರಥರಾಯನು ಮಹಾಸತ್ಯಸಂಧನೆಂದೂ ಸಮಸ್ತ ರಹಸ್ಯಗಳನ್ನು ಬಲ್ಲವನೆಂದೂ ಕೊಂಡಾಡಿದವರೊಡನೆ ಏನೆಂದು ನುಡಿಯುವೆ ? ನಿನ್ನ ಮಿತ್ರರೊಡನೆ ಇಷ್ಟಕಥಾಲಾಪದಲ್ಲಿ 'ನಾನು ಕೈಕೇಯಿಯಿಂದ ಜೀವಿಸಿಕೊಂಡಿದ್ದೇನೆ. ಆಕೆಯು ಪೂರ್ವದಲ್ಲಿ ನನಗೆ ಒಂದು ಆಪತ್ತು ಬಂದಾಗ ನನ್ನನ್ನು ರಕ್ಷಿಸಿದಳು. ಆ ದೇವಿಯು ನನ್ನ ಪ್ರಾಣಗಳಿಗಿಂತಲೂ ಅಧಿಕಳು' ಎಂದು ನುಡಿಯುತ್ತಿದ್ದ ನೀನು ಮುಂದೆ 'ಕೈಕೇಯಿಯು ದುಷ್ಟೆ' ಎಂದರೆ, ಕೇಳಿದವರು ನಿನ್ನ ಮಾತನ್ನು ಹೇಗೆ ಪ್ರಮಾಣಿಸುವರು ? ಈಗ ನನಗೆ ಬೇಕಾದ ವರಗಳನ್ನು ಕೊಡುವುದಾಗಿ ಹೇಳಿ ಹೀಗೆ ತಪ್ಪು ಮಾತುಗಳನ್ನಾಡಿದರೆ ನೀನು ನಿನ್ನ ವಂಶದ ಸಮಸ್ತ ರಾಯರಿಗೂ ಅಪಕೀರ್ತಿಯನ್ನು ತರದೆ ಇರುವುದಿಲ್ಲ. ಪುರಾಣಗಳಲ್ಲಿ ಶ್ಯೇನಕಪೋತಾಖ್ಯಾನವೆಂಬ ಇತಿಹಾಸ ಒಂದುಂಟು : ಗಿಡಗ ಪಾರಿವಾಳಪಕ್ಷಿಗಳಿಗೆ ಯುದ್ಧವಾಗಿ ಗಿಡಗನು ಪಾರಿವಾಳಪಕ್ಷಿಯನ್ನು ಕೊಂದು ತಿನ್ನಬೇಕೆಂದು ಅಟ್ಟಿಬರಲು ಆ ಪಾರಿವಾಳಪಕ್ಷಿಯು ಬೇಟೆಗಾಗಿ ಹೋಗಿದ್ದ ಶಿಬಿಚಕ್ರವರ್ತಿಯ ಮರೆಹೊಕ್ಕಿತು. ಶಿಬಿಚಕ್ರವರ್ತಿಯು ಆ ಗಿಡಗನಿಗೆ ತನ್ನ ಶರೀರದ ಮಾಂಸವನ್ನು ಕತ್ತರಿಸಿಕೊಟ್ಟು ಮರೆಹೊಕ್ಕ ಪಾರಿವಾಳಪಕ್ಷಿಯನ್ನು ರಕ್ಷಿಸಿದನು. ಅಲರ್ಕನೆಂಬ ಧರ್ಮಿಷ್ಠನು ರಾಜದಂಡದಿಂದ ಒಬ್ಬ ಬ್ರಾಹ್ಮಣನ ನಯನೋತ್ಪಾಟನವನ್ನು ಮಾಡಿ ಆ ಅಪರಾಧಕ್ಕೋಸ್ಕರ ತನ್ನ ಕಣ್ಣನ್ನು ಕೊಟ್ಟು ಆ ಬ್ರಾಹ್ಮಣನನ್ನು ರಕ್ಷಿಸಿದನೆಂಬ 'ಕಥಾವೃತ್ತಾಂತವನ್ನು ಕೇಳಿಲ್ಲವೆ ? ಸಮುದ್ರವು ತನ್ನ ದಡವನ್ನು ಅತಿಕ್ರಮಿಸದಿರುವುದನ್ನು ಬಲ್ಲೆಯೋ ? ಈ ಧರ್ಮರಹಸ್ಯಗಳನ್ನು ವಿಚಾರಿಸಿ ನಿನ್ನ ವಂಶದ ರಾಯರ ಹಾಗೆ ನಡೆ ! ಎಲೈ ಅಜ್ಞಾನಿಯಾದ ದಶರಥರಾಯನೆ, ನೀನು ಸತ್ಯವನ್ನೂ ಧರ್ಮವನ್ನೂ ಬಿಟ್ಟು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಿ ನನ್ನನ್ನು ಉಪೇಕ್ಷೆಮಾಡಿ ನಿನ್ನ ಪ್ರಿಯಳಾದ ಕೌಸಲ್ಯೆಯೊಡನೆ ಸುಖವಾಗಿರಬೇಕೆಂಬ ಯತ್ನವನ್ನು ಮಾಡುತ್ತಿದ್ದೀಯೆ. ಸತ್ಯವಾದರೂ ಆಗಲಿ, ಅಸತ್ಯವಾದರೂ ಆಗಲಿ. ನೀನು ನನ್ನ ಸಂಗಡ ಆಡಿದ ಮಾತನ್ನು ತಪ್ಪಿ ರಾಮನಿಗೆ ಪಟ್ಟಾಭಿಷೇಕವನ್ನು ಮಾಡಿದರೆ ನಿನ್ನ ಮುಂದೆಯೇ ವಿಷಪಾನವನ್ನು ಮಾಡಿ ಶರೀರವನ್ನು ಬಿಡುತ್ತೇನೆ. ನೀನು ರಾಮನಿಗೆ ಪಟ್ಟಾಭಿಷೇಕವನ್ನು ಮಾಡಿದರೆ ಆತನ ತಾಯಿಯಾದ ಕೌಸಲ್ಯಾದೇವಿಯು ಏಕಾಧಿಪತ್ಯವನ್ನು ಪಡೆದು ಸಮಸ್ತ ಜನರಿಂದಲೂ ಕೈಮುಗಿಸಿಕೊಳ್ಳುವಳು. ಅದನ್ನು ಕಂಡ ನನಗೆ ಮರಣವೇ ಪ್ರಾಪ್ತಿಯಲ್ಲದೆ ಮತ್ತೇನಿಲ್ಲ ! ಈ ವಿಷಯದಲ್ಲಿ ನನ್ನ ಕುಮಾರನಾದ ಭರತನ ಆಣೆ, ನಿನ್ನ ಮತ್ತು ನನ್ನ ಆಣೆ. ನನಗೆ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸುವುದಕ್ಕಿಂತ ಬೇರೆ ಯಾವುದರಿಂದಲೂ ತೃಪ್ತಿಯಿಲ್ಲ " ಎಂದು ನುಡಿದಳು.

ಆ ಮಾತನ್ನು ಕೇಳಿ ದಶರಥರಾಯನು ದುಃಖಪಡುತ್ತ ಕೈಕೇಯಿಯು ಶ್ರೀರಾಮನಿಗೆ ವನವಾಸವೂ ಭರತನಿಗೆ ಪಟ್ಟಾಭಿಷೇಕವೂ ಆಗಬೇಕೆಂಬ ಎರಡು ವರಗಳನ್ನು ಬೇಡಿಕೊಳ್ಳುವಳೆಂದು ಮನಸ್ಸಿನಲ್ಲಿ ಚಿಂತಿಸಿ ಕಂಗೆಟ್ಟನು. ನಿಷ್ಠುರವಾಕ್ಯವನ್ನು ನುಡಿದಂಥ ತನ್ನ ಪತ್ನಿಯನ್ನು ಕೋಪದಿಂದ ಕ್ಷಣಮಾತ್ರ ಕ್ರೂರದೃಷ್ಟಿಯಿಂದ ನೋಡಿ ನಿಟ್ಟುಸಿರುಬಿಡಲಾರಂಭಿಸಿದನು. ಕೈಕೇಯೀದೇವಿಯು

ಅಂಥ ಪಾಪಬುದ್ಧಿಯನ್ನು ಮಾಡಬಹುದೆ ಎಂದು ತಲೆಯೆತ್ತಿ ಮೂಗಿನಮೇಲೆ ಬೆರಳಿಟ್ಟನು. ಸಿಡಿಲಿನಂತೆ ಹೃದಯಚ್ಛೇದಕವಾದ ಆ ಮಾತನ್ನು ನೆನೆದು ತಾನು ಮಾಡಿದ ಶಪಥವನ್ನು ಚಿಂತಿಸಿ ಒಂದು ಮುಹೂರ್ತದವರೆಗೆ ಧ್ಯಾನಮಾಡಿ ಛೇದಿಸಲ್ಪಟ್ಟ ಮರದೋಪಾದಿಯಲ್ಲಿ ನೆಲದಮೇಲೆ ಬಿದ್ದನು. ಆಮೇಲೆ ಬುದ್ಧಿಗೆಟ್ಟ ಉನ್ಮತ್ತನಂತೆಯೂ ಸನ್ನಿವಾತವ್ಯಾಧಿತನಂತೆಯೂ ವಿಷದ ಹಲ್ಲನ್ನು ಕೀಳಿಸಿಕೊಂಡ ಸರ್ಪದಂತೆಯೂ ದೈನ್ಯೋಕ್ತಿಯಿಂದ ಕೈಕೇಯಿಯನ್ನು ಕುರಿತು ಮಾತನಾಡಿದನು : “ ಎಲೇ ಕೈಕೇಯಿ, ಅನರ್ಥಕವಾದ ಈ ಕಾರ್ಯವನ್ನು ನಿನಗೆ ಹೇಳಿದವರಾರು ?. ಭೂತಹಿಡಿದವಳಂತೆ ಲಜ್ಜೆಯಿಲ್ಲದೆ ನುಡಿಯುತ್ತಿದ್ದೀಯೆ. ಬಾಲ್ಯದಿಂದಲೂ ನಿನ್ನಲ್ಲಿ ಇಂಥ ದುರಾಚಾರವನ್ನು ನಾನು ಕಂಡಿರಲಿಲ್ಲ. ಈಗ ಪ್ರೌಢೆಯಾದಮೇಲೆ ಬುದ್ಧಿಭ್ರಂಶವಾಯಿತೆಂದೆಣಿಸುತ್ತೇನೆ. ಶ್ರೀರಾಮನಿಂದ ನಿನಗೆ ಏನು ಭಯವು ಸಂಭವಿಸಿತು ? ಭರತನಿಗೆ ಪಟ್ಟಾಭಿಷೇಕವಾಗಿ ಶ್ರೀರಾಮನು ವನವಾಸಕ್ಕೆ ಹೋಗಬೇಕೆಂಬ ಈ ದುರ್ಬುದ್ಧಿಯನ್ನು ಬಿಡು ! ಎಲೈ ಪಾತಕಿ—ಕ್ಷುದ್ರ ಬುದ್ಧಿಯುಳ್ಳವಳೆ, ನಿನ್ನ ಪತಿಯಾದ ನನಗೂ ಸಮಸ್ತಲೋಕಗಳಿಗೂ ಭರತನಿಗೂ ಹಿತವನ್ನು ಬಯಸುವ ಪಕ್ಷದಲ್ಲಿ ಈ ದುರ್ಬುದ್ಧಿಯನ್ನು ಬಿಡು. ನನ್ನನ್ನು ದುಃಖಕ್ಕೊಳಪಡಿಸಿ ಶ್ರೀರಾಮನನ್ನೂ ದುಃಖಪಡಿಸಿ ದೇಶತ್ಯಾಗವನ್ನು ಮಾಡಿಸುವುದಕ್ಕೆ ನಮ್ಮಿಬ್ಬರಲ್ಲಿ ಏನು ದ್ರೋಹವನ್ನು ಕಂಡೆ ? ನಿನ್ನ ಮಗನಾದ ಭರತನಿಗೆ ಪಟ್ಟಾಭಿಷೇಕವನ್ನು ಮಾಡುವ ಪಕ್ಷದಲ್ಲಿ ಶ್ರೀರಾಮನನ್ನು ಬಿಟ್ಟು ಆತನು ರಾಜ್ಯಭಾರವನ್ನು ವಹಿಸಿಕೊಳ್ಳಲಾರನು. ಶ್ರೀರಾಮನು ಧರ್ಮಮಾರ್ಗಪ್ರವರ್ತಕನು ; ಲೋಕೋತ್ತರವಾದ ಸದ್ಗುಣಗಳುಳ್ಳವನು. ಅಂಥವನನ್ನು ವನವಾಸಕ್ಕೆ ಕಳುಹಿಸಹೇಳಿದರೆ ಕೇಳುವವರು ಹೇಗೆ ಸಹಿಸುವರು ? ಈ ಮಾತನ್ನು ಕೇಳಿ ರಾಮನ ಸುಂದರವಾದ ಮುಖವು ರಾಹುತುಡುಕಿದ ಚಂದ್ರಮಂಡಲದಂತೆ ಕಾಂತಿಗುಂದಿದರೆ ಆ ಮುಖವನ್ನು ಹೇಗೆ ನೋಡಲಿ? ಅದಲ್ಲದೆ ಮಹಾತ್ಮರಾದ ವಸಿಷ್ಠಾದಿಗಳೊಡನೆಯೂ ಪ್ರಧಾನಿಗಳೊಡನೆಯೂ ಮಂತ್ರಾಲೋಚನೆಯನ್ನು ಮಾಡಿ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ನಿಶ್ಚಯಿಸಿ ಆ ಯತ್ನವು ವೈರಿಗಳಿಂದ ಮುರಿಯಲ್ಪಟ್ಟ ಸೇನೆಯ ಹಾಗೆ ಕೆಟ್ಟರೆ ಹೇಗೆ ಸಹಿಸಲಿ ? ಪಟ್ಟಾಭಿಷೇಕಾರ್ಥವಾಗಿ ನಾನಾದಿಕ್ಕುಗಳಿಂದ ಬಂದಿರುವ ಅರಸರು ನನ್ನನ್ನು ಏನನ್ನುವರು ? ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಲು ಯತ್ನಮಾಡಿ ನಿಲ್ಲಿಸಿದರೆ, ಬಹುಗುಣವೃದ್ಧರಾದ ಅರಸರು ಶ್ರೀರಾಮನಲ್ಲಿ ಅವಗುಣವಿರುವುದಾಗಿಯೂ ಅದರಿಂದ ಆತನಿಗೆ ಪಟ್ಟಾಭಿಷೇಕವನ್ನು ನಿಲ್ಲಿಸಿ ಭರತನಿಗೆ ರಾಜ್ಯಾಧಿಪತ್ಯವನ್ನು ಮಾಡಿದಹಾಗೆಯೂ ತಿಳಿದುಕೊಳ್ಳುತ್ತಾರೆ. ಅವರು ಈ ವಿಷಯವನ್ನು ಕೇಳಿದರೆ ಅವರಿಗೆ ನಾನು ಏನು ಉತ್ತರವನ್ನು ಕೊಡಲಿ ? ನಿನ್ನ ಬಾಧೆಯನ್ನು ಸಹಿಸಲಾರದೆ ಆತನನ್ನು ವನವಾಸಕ್ಕೆ ಕಳುಹಿಸಿದೆನೆಂದರೆ ಇದು ಸತ್ಯವಾದರೂ ಅಸತ್ಯವೆಂದೇ ಅವರು ತಿಳಿಯುತ್ತಾರೆ. ಆತನು ವನವಾಸಕ್ಕೆ ಹೋದರೆ ಕೌಸಲ್ಯೆಯು ಏನೆಂದು ನುಡಿಯುವಳು ! ಕೌಸಲ್ಯಾದೇವಿಗೆ ದ್ರೋಹವನ್ನೆಸಗುವಂಥ ನಿನ್ನನ್ನು ಏನುಮಾಡಬೇಕು ! ಆ ದೇವಿಗೆ ನಾನು ಏನು ಪ್ರತ್ಯುತ್ತರವನ್ನು ಕೊಡಲಿ ? ಕೌಸಲ್ಯಾದೇವಿಯು ನನಗೆ ಸಾಧಾರಣ ಪ್ರಾಣಕಾಂತೆ ಮಾತ್ರವಲ್ಲದೆ ಕಾಲೋಚಿತವಾದ ಸತ್ಕಾರಗಳನ್ನು ಮಾಡತಕ್ಕವಳು. ಸೇವೆಮಾಡುವಲ್ಲಿ ದಾಸಿಯಂತೆಯೂ ಇಷ್ಟಾಲಾಪಗಳಲ್ಲಿ ಸಖಿಯಂತೆಯೂ ಹಿತವನ್ನು ಬಯಸುವಲ್ಲಿ ಒಡಹುಟ್ಟಿದವಳಂತೆಯೂ ಶರೀರಪೋಷಣೆ ಮಾಡುವಲ್ಲಿ ತಾಯಿಯಂತೆಯೂ ಇರುವವಳು. ಯಾವಾಗಲೂ ಪ್ರಿಯೋಕ್ತಿಗಳನ್ನೇ ನುಡಿಯುವವಳು. ನನಗೆ ಬಹುಪ್ರಿಯಳು. ಶ್ರೀರಾಮನಲ್ಲಿಯೂ ಬಹು ಪ್ರೀತಿಯುಳ್ಳವಳು. ಅಂಥವಳನ್ನು ನಾನು ನಿನಗೆ ಅಂಜಿಕೊಂಡು ಸತ್ಕರಿಸಲಿಲ್ಲ. ನಾನು ಜನ್ಮಾಂತರದಲ್ಲಿ ಮಾಡಿದ ಕರ್ಮವಿಶೇಷದಿಂದ ನಿನ್ನಂಥ ಸ್ತ್ರೀಯನ್ನು ಪಡೆದು ಅಪಥ್ಯಾಹಾರವನ್ನು ಹಿತವೆಂದು

ತೆಗೆದುಕೊಂಡ ವ್ಯಾಧಿಗ್ರಸ್ತನಂತೆ ಆದೆನು. ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಬೇಕೆಂಬ ದುರ್ವಾರ್ತೆಯನ್ನು ಕೇಳಿದರೆ ಸುಮಿತ್ರೆಯು ನನ್ನಲ್ಲಿ ಹೇಗೆ ವಿಶ್ವಾಸವಿಡುವಳು ? ಅತ್ಯಂತ ಸಾತ್ತ್ವಿಕಗುಣಸಂಪನ್ನೆಯಾದ ಸೀತಾದೇವಿಯು ತನ್ನ ಪತಿಯ ವನವಾಸವಾರ್ತೆಯನ್ನು ಕೇಳಿದಾಗಲೇ ತನ್ನ ಪ್ರಾಣಗಳನ್ನು ಬಿಡುವಳು. ಶ್ರೀರಾಮನು ವನವಾಸಕ್ಕೆ ತೆರಳಿದನಾದರೆ ಆ ದೇವಿಯು ಕಿನ್ನರನಿಂದ ಅಗಲಿದ ಕಿನ್ನರಿಯ ಹಾಗೆ ದುಃಖಪಡುವಳು. ವನವಾಸಕ್ಕೆ ತೆರಳುವ ತನ್ನ ಪತಿಯನ್ನು ಕಂಡು ದುಃಖಿಸುವ ಸೀತಾದೇವಿಯನ್ನು ನೋಡಿ ನಾನು ಜೀವವನ್ನು ಧರಿಸಲಾರೆನು. ನೀನು ವಿಧವೆಯಾಗಿ ಮಗನನ್ನು ಕೂಡಿಕೊಂಡು ರಾಜ್ಯವನ್ನಾಳಬೇಕಾಗುತ್ತದೆ. ಶ್ರೀರಾಮನು ವನವಾಸಕ್ಕೆ ತೆರಳಿದರೆ ನಾನು ಎಂದಿಗೂ ಜೀವಿಸಲಾರೆನು. ನಿನ್ನನ್ನು ದುಷ್ಟಸ್ತ್ರೀಯೆಂದರಿಯದೆ ಇಲ್ಲಿಯವರೆಗೆ ಅಂತರಂಗಶುದ್ಧಳಾದವಳೆಂದು ತಿಳಿದುಕೊಂಡಿದ್ದೆನು. ವಿಷದೊಡನೆ ಕೂಡಿದ ಸುಧೆಯನ್ನು ಸೇವಿಸಿದವನಂತೆ ನಿನ್ನ ದುಷ್ಟಸ್ವಭಾವವನ್ನು ಅರಿಯದೆಹೋದೆನು. ನೀನು ಮೃದುನುಡಿಗಳಿಂದ ನನ್ನನ್ನು ಇದುವರೆಗೆ ವಶವರ್ತಿಯಾಗಿ ಮಾಡಿಕೊಂಡು, ಬೇಟೆಗಾರನು ಮನೋಹರವಾದ ನಾದದಿಂದ ಮೃಗಗಳನ್ನು ವಶಮಾಡಿಕೊಂಡು ಕೊಲ್ಲುವಂತೆ, ಕಪಟಸ್ನೇಹದಿಂದ ನನ್ನನ್ನು ಮೋಸಗೊಳಿಸಿದೆ. ನಾನು ನಿನ್ನ ಮಾತನ್ನು ಕೇಳಿ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದರೆ ಮಹಾತ್ಮರಾದ ಪುಣ್ಯಪುರುಷರು ಹೆಂಗಸಿನ ಮಾತನ್ನು ಕೇಳಿ ಅನೇಕ ಗುಣಸಂಪನ್ನನಾಗಿ ಜ್ಯೇಷ್ಠಪುತ್ರನಾದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದನೆಂದು ಸುರಾಪಾನವನ್ನು ಮಾಡಿದ ಬ್ರಾಹ್ಮಣನನ್ನು ನಿಂದಿಸುವಂತೆ ದಾರಿಗಳಲ್ಲಿ ನನ್ನನ್ನು ನಿಂದಿಸುವರು. ಕೇರಿಕೇರಿಯಲ್ಲಿಯೂ ನನ್ನ ನಿಂದೆಯನ್ನು ಕೇಳುವಂಥ ದುಃಖವು ಏಕೆ ಬರಬೇಕು ! ಇದು ನಾನು ಪೂರ್ವಜನ್ಮದಲ್ಲಿ ಮಾಡಿದ ದುಷ್ಕರ್ಮಫಲವಲ್ಲದೆ ಮತ್ತೊಂದಲ್ಲ. ನಾನು ಇಷ್ಟರವರೆಗೆ ನಿನ್ನನ್ನು ನನ್ನ ಪ್ರಾಣಗಳಿಗೆ ಸಮನಾದ ಸ್ತ್ರೀಯೆಂದು ಪರಿಪಾಲಿಸಿಕೊಂಡಿದ್ದು ಅಜ್ಞಾನದಿಂದ ಬಲೆಗೆ ಸಿಕ್ಕಿದ ಮೃಗದಂತೆ ಕೆಟ್ಟೆನು. ಇಷ್ಟು ದಿವಸಗಳು ನನ್ನ ಸಂಗಡ ಕ್ರೀಡಿಸಿಕೊಂಡಿದ್ದ ನಿನ್ನನ್ನು ಮೃತ್ಯುಸ್ವರೂಪಳೆಂದು ತಿಳಿಯದೆ ಬಾಲಕನು ಏಕಾಂತದಲ್ಲಿ ಕೃಷ್ಣಸರ್ಪವನ್ನು ಕೈಯಿಂದ ತುಡುಕಿ ಕಚ್ಚಿಸಿಕೊಂಡಂತೆ ಆದೆನು. ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದೆನಾದರೆ ಪುತ್ರವಿಯೋಗದ ದುಃಖದಿಂದ ನಾನು ಜೀವಿಸಲಾರೆನು. ಆಮೇಲೆ ಸಮಸ್ತ ಜನರೂ 'ದಶರಥರಾಯನು ತನ್ನ ಸ್ತ್ರೀನಿಮಿತ್ತವಾಗಿ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದನು. ಸಂತಾನಾರ್ಥವಾಗಿ ಯಾಗಮಾಡಿ ಪಡೆದ ಮಗನು ಅಂತ್ಯಕಾಲದಲ್ಲಿ ಸಮೀಪದಲ್ಲಿಲ್ಲದಹಾಗಾಯಿತು. ಸ್ತ್ರೀನಿಮಿತ್ತವಾಗಿ ಜ್ಯೇಷ್ಠಪುತ್ರನನ್ನು ವನಕ್ಕೆ ಕಳುಹಿಸಬಹುದೆ ? ದಶರಥರಾಯನು ಮಹಾಕಾಮುಕನೂ ಅಜ್ಞಾನಿಯೂ ಆದವನು' ಎಂದು ನುಡಿಯುವರು " ಎಂದು ಗೋಳಾಡಿದನು.

ದಶರಥನು ಮತ್ತೆ ಹೀಗೆಂದನು : "ನಾನು ಸಂತಾನಾರ್ಥವಾಗಿ ಅನೇಕ ಕೃಚ್ಛ್ರಚಾಂದ್ರಾಯಣಾದಿ ವ್ರತೋಪವಾಸನಿಯಮಗಳಿಂದ ಶರೀರವನ್ನು ಕ್ಲೇಶಪಡಿಸಿದೆನು. ಆ ದುಃಖವು ಮರಳಿ ಪ್ರಾಪ್ತವಾಯಿತು. ನಾನು ಪರಿಶುದ್ಧಾಂತಃಕರಣವುಳ್ಳ ಶ್ರೀರಾಮನನ್ನು ವನವಾಸಕ್ಕೆ ತೆರಳಹೇಳಿದರೆ ಆತನು ಮಹಾಪ್ರಸಾದವೆಂದು ಅಂಗೀಕರಿಸುವನಲ್ಲದೆ ತಿರಸ್ಕರಿಸನು. ಆತನು ವನವಾಸಕ್ಕೆ ಹೋದರೆ ಪುತ್ರವಿಯೋಗದಿಂದ ಶರೀರವಿಡಿದಿರಲು ಸಾಮರ್ಥ್ಯವಿಲ್ಲದ ನನ್ನನ್ನು ಮೃತ್ಯುವು ಯಮಲೋಕವನ್ನೈದಿಸುವುದು. ಪುರುಷೋತ್ತಮನಾದ ಶ್ರೀರಾಮನು ವನವನ್ನೈದಿ ನಾನು ಸ್ವರ್ಗಸ್ಥನಾದರೆ ನನ್ನ ಸಮಸ್ತ ಸುಹೃಜ್ಜನರು ಹೇಗೆ ಇರುವರು ! ಕೌಸಲ್ಯಾದೇವಿಯು ನನ್ನನ್ನೂ ಶ್ರೀರಾಮನನ್ನೂ ಬಿಟ್ಟು ಹೇಗೆ ಜೀವದಿಂದಿರುವಳು ! ಸುಮಿತ್ರಾದೇವಿಯು ನನ್ನನ್ನೂ ರಾಮಲಕ್ಷ್ಮಣರನ್ನೂ ಅಗಲಿದರೆ ಶರೀರತ್ಯಾಗವನ್ನು ಮಾಡಿಕೊಳ್ಳುವಳು. ಈ ರೀತಿಯಲ್ಲಿ ನನ್ನನ್ನೂ ಕೌಸಲ್ಯಾದೇವಿ

ಸುಮಿತ್ರಾದೇವಿಯರನ್ನೂ ಭರತನು ಹೊರತಾದ ಮೂವರು ಮಕ್ಕಳನ್ನೂ ನರಕಕ್ಕೆ ಗುರಿಮಾಡಿ ನೀನು ಸುಖದಲ್ಲಿರು ! ಇಕ್ಷ್ವಾಕುವಂಶವನ್ನು ನೀನೇ ಪರಿಪಾಲಿಸು ! ಶ್ರೀರಾಮನ ವನವಾಸವು ಭರತನಿಗೆ ಸಮ್ಮತವಾದಪಕ್ಷದಲ್ಲಿ ಮುಂದೆ ಸ್ವರ್ಗಸ್ಥನಾದ ನನಗೆ ಭರತನು ಉತ್ತರಕ್ರಿಯೆಗಳನ್ನು ಮಾಡಕೂಡದು ! ಎಲೈ ದುಷ್ಟೆ. ಕೈಕೇಯಿ, ಶ್ರೀರಾಮನು ವನವನ್ನೈದಿ ನಾನು ಸ್ವರ್ಗಸ್ಥನಾದಮೇಲೆ ನೀನು ವಿಧವೆಯಾಗಿ ನಿನ್ನ ಮಗನನ್ನು ಕೂಡಿಕೊಂಡು ರಾಜ್ಯವನ್ನು ಪರಿಪಾಲಿಸಿಕೊಂಡು ಸುಖವಾಗಿರು ! ಲೋಕದಲ್ಲಿ ನಿನಗೆ ಅಪಕೀರ್ತಿ ತಿರಸ್ಕಾರಗಳುಂಟಾಗುವುವು. ನಿನ್ನಿಂದ ನನಗೆ ಸಮಸ್ತ ದೊರೆಗಳಲ್ಲಿ ಅಪಮಾನವಾಗುವುದು ! ರಥ ಗಜ ತುರಗಾವಳಿಗಳಿಂದ ಸಂಚರಿಸುವಂಥ ಶ್ರೀರಾಮನು ಅರಣ್ಯದಲ್ಲಿ ಕಾಲುನಡೆಯಿಂದ ಸಂಚರಿಸುವುದು ಹೇಗೆ ? ಆತನ ಭೋಜನಸಮಯದಲ್ಲಿ ಸರ್ವಾಭರಣಭೂಷಿತರಾಗಿ ಬಾಣಸಿಗರು ನಾನು ಮೊದಲು ನಾನು ಮೊದಲು ಎಂದು ಭೋಜನಕ್ಕೆ ಸನ್ನಾಹವನ್ನುಮಾಡುವರು. ಅಂಥವನು ವನಕ್ಕೆ ಹೋಗಿ ಒಗರು ಕಹಿ ಖಾರವಾಗಿರುವ ಶಾಕಗಳನ್ನು ಹೇಗೆ ಭಕ್ಷಣಮಾಡುವನು ? ಅತ್ಯುತ್ತಮವಾದ ವಸ್ತ್ರಗಳನ್ನು ಧರಿಸುವ ಅವನು ನಾರುಡಿಗೆ ಕಷಾಯವಸ್ತ್ರಗಳನ್ನು ಹೇಗೆ ಧರಿಸುವನು ? ಹಾಸುಮಂಚದಲ್ಲಿ ಸುಪ್ಪತ್ತಿಗೆಯಲ್ಲಿ ಶಯನಮಾಡುವ ಅವನು ಹೇಗೆ ಭೂಶಯನವನ್ನು ಮಾಡುವನು ? ಅಕಟಕಟಾ ! ಮನಸ್ಸಿನಲ್ಲಾದರೂ ನೆನೆಯಲಾಗದ ಈ ಘೋರವಾದ ದುಃಖವು ಪ್ರಾಪ್ತವಾಯಿತು ! ಶ್ರೀರಾಮನಿಗೆ ವನವಾಸವನ್ನೂ ಭರತನಿಗೆ ಪಟ್ಟಾಭಿಷೇಕವನ್ನೂ ಬಯಸುವ ನಿನ್ನನ್ನು ಏಕೆ ನಿಂದಿಸಬೇಕು ! ಲೋಕದಲ್ಲಿ ಸ್ತ್ರೀಯರು ತಮ್ಮ ಹಿತಾರ್ಥವಾಗಿಯೇ ಪರರಿಗೆ ಹಿತವನ್ನು ಬಯಸುವರಲ್ಲದೆ ಪರರ ಹಿತಾರ್ಥವಾಗಿ ಬಯಸುವುದಿಲ್ಲ ! ನಿನ್ನ ಕಾರ್ಯಾರ್ಥವಾಗಿ ನಮಗೆ ಉಪದ್ರವವನ್ನೆಣಿಸಿದ ಪಾಪಸ್ವರೂಪಳಾದ ಕೈಕೇಯಿ, ಕೇಳು : ನೀನು ನನಗೆ ದುಃಖವನ್ನುಂಟುಮಾಡುವುದಕ್ಕೋಸ್ಕರ ಇಂಥ ದುರ್ಬುದ್ಧಿಯನ್ನಿರಿಸಿದೆ. ನಿನಗೆ ನಾನು ಮಾಡಿದ ಅಪರಾಧವೇನು ? ಶ್ರೀರಾಮನಾದರೂ ನಿನಗಪರಾಧವನ್ನು ಮಾಡಿದನೇ ? ನಮ್ಮಿಬ್ಬರಿಗೂ ಯಾವಕಾರಣ ಬಾಧೆಯನ್ನುಂಟುಮಾಡುತ್ತೀಯೆ ? ಈಗ ನಾನು ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದರೆ, ಪಟ್ಟಾಭಿಷೇಕನಿಮಿತ್ತವಾಗಿ ಮಂಗಲಸ್ನಾನವನ್ನು ಮಾಡಿ ಸರ್ವಾಭರಣಭೂಷಿತನಾಗಿ ಆನೆಯಮೇಲೆ ಮೆರವಣಿಗೆ ಬರುತ್ತಿದ್ದ ಶ್ರೀರಾಮನಿಗೆ ಕಾಲುನಡೆಯಿಂದ ವನಕ್ಕೆ ಹೋಗುವ ಅವಸ್ಥೆಯು ಬಂದಿತಲ್ಲ ಎಂದು ಸಕಲರೂ ವ್ಯಥೆಪಡುವರು. ಸೂರ್ಯನ ಪ್ರಭೆಯಿಲ್ಲದಿದ್ದರೂ ಮನುಷ್ಯರ ವ್ಯಾಪಾರಗಳು ನಡೆಯುವುವು. ದೇವೇಂದ್ರನು ಮಳೆಯನ್ನು ಕರೆಯದಿದ್ದರೂ ಭೋಜನಾದಿ ವ್ಯಾಪಾರಗಳು ನಡೆಯುವುವು. ಶ್ರೀರಾಮನಿಲ್ಲದಿದ್ದರೆ ನಾನು ಒಂದು ಕ್ಷಣವಾದರೂ ಜೀವಿಸಿರಲಾರೆನು. ಸರ್ಪವನ್ನು ಹಿತವಾದದ್ದೆಂದು ನಂಬಿ ರಕ್ಷಿಸಿದಹಾಗೆ ನಾನು ನಿನ್ನನ್ನು ಹಿತಳಾದ ಸ್ತ್ರೀಯೆಂದು ನಂಬಿ ಅಜ್ಞಾನದಿಂದ ಪಾಲಿಸಿಕೊಂಡಿದ್ದೆನು ! ಎಲೈ ಕೈಕೇಯಿ, ನನ್ನನ್ನೂ ರಾಮಲಕ್ಷ್ಮಣರನ್ನೂ ಬಿಟ್ಟು ನೀನು ನಿನ್ನ ಮಗನಾದ ಭರತನನ್ನೂ ಸಮಸ್ತ ಬಂಧುಗಳನ್ನೂ ಮಿತ್ರರನ್ನೂ ಕೂಡಿಕೊಂಡು ಸಕಲ ರಾಜ್ಯವನ್ನೂ ಪರಿಪಾಲಿಸಿಕೊಂಡಿರು. ನೀನು, ಮಹಾದುಷ್ಟಳು. ನನಗೆ ಕರ್ಣಕಠೋರವಾದ ನುಡಿಗಳಿಂದ ದುಃಖವನ್ನುಂಟುಮಾಡುತ್ತಿದ್ದೀಯೆ. ನಿನ್ನ ದಂತಗಳು ಉದುರುವಪರ್ಯಂತ ನಿಷ್ಠುರವನ್ನು ನುಡಿದರೂ ಶ್ರೀರಾಮನು ಅಪ್ರಿಯವೆಂದೆಣಿಸಿ ನಿನಗೆ ನಿಷ್ಠುರವಾಕ್ಯದಿಂದ ಪ್ರತ್ಯುತ್ತರವನ್ನು ಕೊಡನು. ಅಂಥವನಲ್ಲಿ ಅವಗುಣಗಳನ್ನು ಕಲ್ಪಿಸುವ ರೀತಿಯಲ್ಲಿ ನುಡಿಯುತ್ತಿದ್ದೀಯೆ. ಆತನಲ್ಲಿ ದೋಷವಿಲ್ಲದಿದ್ದರೂ ವನವಾಸಕ್ಕೆ ಕಳುಹಿಸಬೇಕೆಂದು ನೀನು ಮನಸ್ಸಿನಲ್ಲಿ ನಿಶ್ಚಯಮಾಡಿದೆಯಾದರೆ ನೀನು ಭೂಮಿಯಮೇಲೆ ಹೊರಳಿ ಕಂಗೆಟ್ಟರೂ ಉರಿದೆದ್ದುಬಿದ್ದರೂ ಕಡೆಗೆ ಶರೀರವನ್ನು ತುಂಡಾಗಿ ಕತ್ತರಿಸಿಕೊಂಡರೂ ನಿನ್ನ ದುರಾಲೋಚನೆಗೆ ಒಳಪಟ್ಟು

ಶ್ರೀರಾಮನನ್ನು ನಾನು ವನವಾಸಕ್ಕೆ ಕಳುಹಿಸುವುದಿಲ್ಲ. ನೀನು ಅಲಗಿಗೆ ಸಮಾನಳಾಗಿ ಹೃದಯವನ್ನು ಸೀಳುವ ಮಾತುಗಳನ್ನು ನುಡಿದು ನನಗೆ ಅತಿದುಃಖವನ್ನುಂಟುಮಾಡುತ್ತಿದ್ದೀಯೆ. ನೀನು ಜೀವದಿಂದಿರುವುದೇ ನನ್ನ ಮನಸ್ಸಿಗೆ ಸಮ್ಮತವಿಲ್ಲ. ನನ್ನ ವಂಶೋದ್ಧಾರಕನಾದ ಶ್ರೀರಾಮನಿಲ್ಲದೆ ನನಗೆ ಜೀವನವೆತ್ತಣದು ! ಇಹ ಪರಲೋಕಗಳಲ್ಲಿ ಸುಖವೆತ್ತಣದು ! ನಿನ್ನ ಪಾದಗಳಿಗೆ ನಮಸ್ಕಾರ ವನ್ನಾದರೂ ಮಾಡುತ್ತೇನೆ. ನೀನು ನನಗೆ ಪ್ರಸನ್ನಳಾಗು. ಈ ದುರ್ಬುದ್ಧಿಯನ್ನು ಬಿಡು " ಎಂದು ಅನಾಥನಂತೆ ಗೋಳಾಡುತ್ತಾ ಕೈಕೇಯಿಯು ಪಕ್ಕಕ್ಕೆ ನೀಡಿದ್ದ ಕಾಲುಗಳೆರಡಕ್ಕೂ ಅಡ್ಡಬೀಳಲು ಯತ್ನಿಸಿ ವ್ಯಾಧಿಗ್ರಸ್ತನಂತೆ ಅವುಗಳನ್ನು ಮುಟ್ಟುವ ಮೊದಲೇ ನೆಲಕ್ಕುರುಳಿದನು.



೧೩ ನೆಯ ಅಧ್ಯಾಯ

## ದಶರಥರಾಯನ ಪ್ರಲಾಪ

ಹೀಗೆ ನಮಸ್ಕಾರ ಮಾಡಬಾರದಿದ್ದರೂ ಪತ್ನಿಗೆ ನಮಸ್ಕಾರವನ್ನು ಮಾಡುತ್ತಾ ನೆಲದಮೇಲೆ ಹೊರಳುವುದು ಉಚಿತವಲ್ಲದಿದ್ದರೂ ನೆಲದಮೇಲೆ ಹೊರಳಾಡುತ್ತಾ ಇದ್ದ ದಶರಥರಾಯನು ಸ್ವರ್ಗದಿಂದ ಪುಣ್ಯಕ್ಷಯವಾದಮೇಲೆ ಭೂಲೋಕಕ್ಕೆ ಬಿದ್ದ ಯಯಾತಿಮಹಾರಾಯನಂತೆ ಕಾಣುತ್ತಿದ್ದನು. ಕೈಕೇಯೀದೇವಿಯು ತನ್ನ ಹಿತವನ್ನು ಆಲೋಚಿಸದೆ ಸ್ವಲ್ಪವೂ ಭಯವಿಲ್ಲದೆ ದಶರಥರಾಯನಿಗೆ ಭಯವನ್ನುಂಟುಮಾಡುತ್ತ " ಮಹಾರಾಜ, ನೀನು ಸತ್ಯವಾದಿಯೆಂದೂ ದೃಢ ವ್ರತನೆಂದೂ ಜಂಭದಮಾತನ್ನು ಹೇಳಿಕೊಳ್ಳುತ್ತೀಯೆ. ಮೊದಲು ನಾನು ಕೇಳಿದ ವರಗಳನ್ನು ಕೊಡುವುದಾಗಿ ಹೇಳಿ ಈಗ ಇಲ್ಲವೆಂದು ನುಡಿಯುತ್ತಿರುವುದೇಕೆ ? " ಎಂದು ಕೇಳಿದಳು.

ದಶರಥರಾಯನು ಅತ್ಯಂತ ಕೋಪಯುಕ್ತನಾಗಿ ಕಂಗೆಟ್ಟು ನುಡಿದನು : " ಎಲೇ ಕೈಕೇಯಿ, ಪುರುಷೋತ್ತಮನಾದ ಶ್ರೀರಾಮನು ವನಕ್ಕೆ ಹೋಗಿ ನಾನು ಮೃತನಾದಮೇಲೆ ನಿನ್ನ ಮನಸ್ಸಿನ ಇಷ್ಟಾರ್ಥವು ಲಭಿಸಿತೆಂದು ಸುಖವಾಗಿರು. ಈಗ ನಾನು ಸ್ವರ್ಗಸ್ಥನಾದರೆ ಆ ದೇವತೆಗಳು ನನ್ನನ್ನು ಶ್ರೀರಾಮನ ಕುಶಲವನ್ನು ಕೇಳಿದರೆ ಅವರಿಗೆ ಏನು ಪ್ರತ್ಯುತ್ತರವನ್ನು ಕೊಡಲಿ ! ನಿನ್ನ ಮೇಲಣ ಪ್ರೀತಿಯಿಂದ ಆತನನ್ನು ವನವಾಸಕ್ಕೆ ಕಳುಹಿಸಿದೆನೆಂದು ಸತ್ಯವಚನವನ್ನು ನುಡಿದರೆ ಆ ಸತ್ಯವಚನವೇ ಅಸತ್ಯವಾಗುವುದು. ಶ್ರೀರಾಮನಿಗೆ ಪಟ್ಟಾಭಿಷೇಕವೆಂದು ಯತ್ನಮಾಡಿ ಆಮೇಲೆ ವನವಾಸಕ್ಕೆ ಕಳುಹಿಸಿದರೆ ಅನೃತವನ್ನು ನುಡಿಯುವವರೆಲ್ಲರಿಗೂ ಪ್ರಧಾನನಾಗುವೆನಲ್ಲದೆ ಸತ್ಯವಾದಿಯಾಗ ಲಾರೆನು. ಪೂರ್ವದಲ್ಲಿ ಅನೇಕ ತಪಸ್ಸುಗಳಿಂದ ಶರೀರವನ್ನು ಒಣಗಿಸಿ ಅತಿಪ್ರಯತ್ನದಿಂದ ಶ್ರೀರಾಮನನ್ನು ಪುತ್ರನಾಗಿ ಪಡೆದೆನು. ಅಂಥವನನ್ನು ಹೇಗೆ ಬಿಡಲಿ ! ಲೋಕದಲ್ಲಿ ಅಧಮನಾದ ಮಗನಿಗೆ ಪಟ್ಟಾಭಿಷೇಕ ಮಾಡದೆ ಬಿಡುವುದುಂಟು. ಶ್ರೀರಾಮನ ಗುಣಗಳನ್ನು ವಿಚಾರಿಸಿದರೆ ಆತನು ಅತಿಪರಾಕ್ರಮಿಯು. ನಾನಾ ವಿದ್ಯೆಗಳಲ್ಲಿ ಕುಶಲನು. ಸೌಜನ್ಯಗುಣಸಂಪನ್ನನು. ತಾವರೆ ಹೂವಿನ ಎಸಳನ್ನು ಹೋಲುವ ಕಣ್ಣುಗಳುಳ್ಳವನು. ಅಂಥವನನ್ನು ಹೇಗೆ ದೇಶದಿಂದ ಹೊರಕ್ಕೆ ಕಳುಹಿಸಲಿ ? ಸಕಲ ಜನರಿಗೂ ಮನೋಹರನೂ ಮಹಾಬಲಪರಾಕ್ರಮಿಯೂ ಅಜಾನುಬಾಹುವೂ ಆದ ಶ್ರೀರಾಮನನ್ನು ಹೇಗೆ ದಂಡಕಾರಣ್ಯಕ್ಕೆ ಕಳುಹಿಸಲಿ ! ಒಂದು ದಿನವಾದರೂ ಮಾರ್ಗಸಂಚಾರ ಹಸಿವು ತೃಷೆಗಳಿಂದ ದುಃಖವನ್ನರಿಯದಿದ್ದವನನ್ನು ವನಕ್ಕೆ ಕಳುಹಿಸಿ ಆ ದುಃಖವನ್ನು ಹೇಗೆ

ನೋಡಲಿ ! ದುಃಖಸ್ವರೂಪವನ್ನರಿಯದ ನನ್ನ ಮಗನಿಗೆ ಬುದ್ಧಿಪೂರ್ವಕವಾಗಿ ದುಃಖವುಂಟುಮಾಡದೆ ನಾನು ಶರೀರವನ್ನು ಬಿಟ್ಟರೆ ನನಗೆ ಸುಖವಾದೀತು. ಪಾಪಕರ್ಮವನ್ನೆಸಗುವ ದುಷ್ಟಳೆ, ಕೈಕೇಯಿ, ಸತ್ಯಪರಾಕ್ರಮಿಯಾದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಬೇಕೆಂಬ ನಿಷ್ಠುರವಾಕ್ಯಗಳಿಂದ ನನ್ನನ್ನು ನೋಯಿಸುತ್ತಿರುವೆ. ನಿನ್ನ ಮಾತನ್ನು ಕೇಳಿ ಆತನನ್ನು ವನವಾಸಕ್ಕೆ ಕಳುಹಿಸಿದರೆ ಅಪರಿಮಿತವಾದ ಅಪಕೀರ್ತಿಯೂ ತಿರಸ್ಕಾರವೂ ಬರುವುವು " ಎಂದು ದಶರಥನು ನುಡಿದನು.

ಹೀಗೆ ದಶರಥರಾಯನು ಕೈಕೇಯಿದೇವಿಯೊಡನೆ ಹಂಬಲಿಸುತ್ತಿರುವ ಸಮಯದಲ್ಲಿ ಸೂರ್ಯನು ಅಸ್ತನಾದನು. ಆಗ ಸಮಸ್ತ ಜನರ ಚಿತ್ತಕ್ಕೂ ಸಂತೋಷವನ್ನುಂಟುಮಾಡುವ ಚಂದ್ರಮಂಡಲದಿಂದ ಅಲಂಕರಿಸಲ್ಪಟ್ಟ ರಾತ್ರಿಕಾಲವು ಬರಲು ಅವನಿಗೆ ಅದರಿಂದ ಹರ್ಷವುಂಟಾಗ ಲಿಲ್ಲ. ವೃದ್ಧನಾದ ದಶರಥರಾಯನು ಆಕಾಶದಲ್ಲಿ ದೃಷ್ಟಿಯನ್ನಿಟ್ಟು ಹಂಬಲಿಸುತ್ತ ಆ ರಾತ್ರಿ ಯನ್ನು ಕುರಿತು " ಎಲೈ ರಾತ್ರಿಯೆ, ನಾನು ನಿನಗೆ ಕೈಮುಗಿಯುತ್ತೇನೆ ; ನೀನು ಶೀಘ್ರದಲ್ಲಿ ಸಮಾಪ್ತಿ ಯಾಗಬೇಡ ; ಅಲ್ಲದಿದ್ದರೆ ಬೇಗನೆ ಹೊರಟುಹೋಗು, ಬೆಳಗಾಗಲಿ. ಪಾಪಿಷ್ಠೆಯೂ ದಯಾ ಶೂನ್ಯಳೂ ಆದ ಕೈಕೇಯಿಯನ್ನು ನೋಡಿದರೆ ದುಃಖವು ಹೆಚ್ಚುತ್ತದೆ " ಎಂದು ಪ್ರಾರ್ಥನೆಯನ್ನು ಮಾಡಿದನು. ಆಮೇಲೆ ಕೈಮುಗಿದುಕೊಂಡು ಕೈಕೇಯಿಯನ್ನು ಕುರಿತು " ಕೈಕೇಯಿ, ದೀನನೂ ಸಾಧುವೂ ವೃದ್ಧನೂ ಆಗಿ ನಿನ್ನ ಸಮೀಪಕ್ಕೆ ಬಂದ ನನ್ನಲ್ಲಿ ಕೃಪೆಮಾಡು. ನಾನು ನಿನ್ನ ಸಂಗಡ ವಿನೋದಾರ್ಥವಾಗಿ ಬಿರುನುಡಿಗಳನ್ನು ನುಡಿದೆನಲ್ಲದೆ ಬೇರೇನೂ ಇಲ್ಲ. ಸುಂದರಿ, ಬಾಲಿಕೆ, ನನ್ನಲ್ಲಿ ದಯೆಮಾಡಿ ಪ್ರಸನ್ನೆಯಾಗು. ನನ್ನ ಜ್ಯೇಷ್ಠಪುತ್ರನಾದ ಶ್ರೀರಾಮನು ನೀನು ಕೊಟ್ಟ ರಾಜ್ಯವನ್ನು ಪರಿಪಾಲಿಸಲಿ ! ನನಗೂ ಸಮಸ್ತ ಲೋಕಕ್ಕೂ ವಸಿಷ್ಠಾದಿಗುರುಗಳಿಗೂ ನಿನ್ನ ಕುಮಾರನಾದ ಭರತನಿಗೂ ಉಳಿದವರಿಗೂ ಸಂತೋಷವಾಗುವ ಹಾಗೆ ಶ್ರೀರಾಮನ ಪಟ್ಟಾಭಿಷೇಕಕ್ಕೆ ಒಪ್ಪಿಗೆಯನ್ನು ಕೊಡು " ಎಂದು ನುಡಿದನು.

ಹೀಗೆ ದೈನ್ಯವಚನಗಳಿಂದ ಸಂತಪಿಟ್ಟು ಕಣ್ಣೀರು ಸುರಿಸುತ್ತಾ ಕೆಂಪಾದ ಕಣ್ಣುಗಳುಳ್ಳ ದಶರಥರಾಯನ ಮಾತನ್ನು ಕೇಳಿ ದುಷ್ಟಸ್ವಭಾವದವಳೂ ಅತ್ಯಂತ ನಿಷ್ಠುರೆಯೂ ಆದ ಕೈಕೇಯಿ ದೇವಿಯು ಆ ರಾಯನ ಮಾತನ್ನು ಉದಾಸೀನಮಾಡುತ್ತ ಸುಮ್ಮನೆ ಇದ್ದಳು. ಆಮೇಲೆ ದಶರಥರಾಯನು ತನ್ನ ಪ್ರಿಯಪುತ್ರನಾದ ಶ್ರೀರಾಮನಿಗೆ ವನವಾಸವು ಬಂದಿತೆಂಬ ದುಃಖಾತಿಶಯ ದಿಂದ ಪರವಶನಾಗಿ ಕಂಗೆಟ್ಟು ಚೈತನ್ಯಗುಂದಿ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು. ಕ್ಷಣಮಾತ್ರದಲ್ಲಿ ಎಚ್ಚತ್ತು ಅತ್ಯಂತ ಭಯಂಕರವಾಗಿ ನಿಟ್ಟುಸಿರುಬಿಡುತ್ತ ಆ ರಾತ್ರಿಯನ್ನು ಅತ್ಯಂತ ಪ್ರಯಾಸದಿಂದ ಕಳೆದನು.



## ೧೪ ನೆಯ ಅಧ್ಯಾಯ

## ಶ್ರೀರಾಮನ ಪಟ್ಟಾಭಿಷೇಕಕ್ಕೆ ಪುರೋಹಿತರ ಸಿದ್ಧತೆ

ಆಮೇಲೆ ಕೈಕೇಯಿದೇವಿಯು ದಶರಥರಾಯನನ್ನು ನೋಡಿ ಹೀಗೆಂದಳು : " ಮಹಾರಾಜ, ಮೊದಲು ನಾನು ಬೇಡಿದ ವಸ್ತುವನ್ನು ಕೊಡುವುದಾಗಿ ಪ್ರತಿಜ್ಞೆಯನ್ನು ಮಾಡಿ ಈಗ ಆ ಪ್ರತಿಜ್ಞೆ ಯನ್ನು ತಪ್ಪಿ ಅಜ್ಞಾನದಿಂದ ಭೂಮಿಯ ಮೇಲೆ ಬಿದ್ದು ಹೊರಳುತ್ತಿದ್ದೀಯೆ. ಇದು ನಿನಗೆ

ಉಚಿತವಲ್ಲ. ನೀನು ನಿನ್ನ ಧರ್ಮವನ್ನು ತಪ್ಪಬೇಡ. ಲೋಕದಲ್ಲಿ ಧರ್ಮರಹಸ್ಯವನ್ನು ಬಲ್ಲ ಪುಣ್ಯಾತ್ಮರು ಸತ್ಯವೇ ಧರ್ಮವೆಂದು ಹೇಳುವರು. ನಾನು ಸತ್ಯವನ್ನೇ ಆಶ್ರಯಿಸಿ ನಿನ್ನಲ್ಲಿ ಧರ್ಮವನ್ನು ಯಾಚಿಸಿದ್ದೇನೆ. ಸಮಸ್ತ ನದಿಗಳಿಗೂ ಪತಿಯಾದ ಸಮುದ್ರರಾಜನು ಸತ್ಯಸಂಧನಾಗಿ ತನ್ನ ಮರ್ಯಾದೆಯನ್ನು ಅಲ್ಪವಾದರೂ ಮೀರನು. ಅಭಿಮಾನಿಗಳಾದವರು ತಮಗೆ ಆಪತ್ಕಾಲ ಬಂದರೂ ತಮ್ಮ ಮರ್ಯಾದೆಯನ್ನು ಮೀರರು. ಧರ್ಮವು ಸತ್ಯವನ್ನೇ ಆಶ್ರಯಿಸಿಕೊಂಡಿರುತ್ತದೆ. ಸಮಸ್ತವೇದಗಳೂ ಪುರಾಣಗಳೂ ಸತ್ಯವನ್ನೇ ಪ್ರತಿಪಾದಿಸುತ್ತವೆ. ನೀನು ಧರ್ಮದಲ್ಲಿ ವಿಶ್ವಾಸಿಯಾದರೆ ಸತ್ಯವನ್ನು ಪರಿಪಾಲಿಸು. ನೀನು ನನಗೆ ಕೊಟ್ಟ ವರಗಳು ಫಲಿಸಲಿ. ನಿನ್ನ ಮನಸ್ಸು ಧರ್ಮದಲ್ಲಿಯೇ ಪ್ರವರ್ತಿಸುವುದಲ್ಲದೆ ಮತ್ತೊಂದರಲ್ಲಲ್ಲ. ನೀನು ಸತ್ಯವನ್ನು ಪರಿಪಾಲಿಸಬೇಕಾದ ಪಕ್ಷದಲ್ಲಿ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿ ಭರತನಿಗೆ ಪಟ್ಟವನ್ನು ಕಟ್ಟು. ನಾನು ಈ ಎರಡು ವರಗಳನ್ನು ಬೇಡಿಕೊಳ್ಳುವವಳಲ್ಲದೆ ಮತ್ತೊಂದನ್ನು ಬೇಡುವವಳಲ್ಲ. ಈ ವರಗಳನ್ನು ನಡೆಸದ ಪಕ್ಷದಲ್ಲಿ ನಾನು ನನ್ನ ಜೀವವನ್ನು ಬಿಡುವೆನು" ಎಂದು ನುಡಿದಳು.

ಪೂರ್ವದಲ್ಲಿ ದೇವೇಂದ್ರನ ಮಾಯಾಪಾಶವನ್ನು ಪರಿಹರಿಸಿಕೊಳ್ಳಲಾರದೆ ಬಲಿಚಕ್ರವರ್ತಿಯು ತನ್ನ ಭೂಮಿಯೆಲ್ಲವನ್ನೂ ವಾಮನಾವತಾರನಾದ ನಾರಾಯಣನಿಗೆ ಒಪ್ಪಿಸಿದಂತೆ, ದಶರಥರಾಯನು ಕೈಕೇಯಿದೇವಿಯ ನಿಷ್ಠುರೋಕ್ತಿಗಳೆಂಬ ಕಂಠಪಾಶವನ್ನು ಪರಿಹರಿಸಿಕೊಳ್ಳುವುದಕ್ಕೆ ಸಮರ್ಥನಾಗದೆ ಭ್ರಾಂತಿಯಿಂದ ಮುಖಕಾಂತಿಗುಂದಿ ಗಾಲಿ ನೊಗಗಳ ಮಧ್ಯಪ್ರದೇಶದಲ್ಲಿ ಸಿಕ್ಕಿದ ಎತ್ತಿನಂತೆ ಅತ್ಯಂತ ದುಃಖಪಡುತ್ತಿದ್ದನು. ಆ ಬಳಿಕ ಧೈರ್ಯವನ್ನು ತಂದುಕೊಂಡು ಕೈಕೇಯಿದೇವಿಯನ್ನು ಕುರಿತು ಹೀಗೆಂದನು : "ಕೈಕೇಯಿ, ಪಾಪಸ್ವರೂಪಳಾದ ನಿನ್ನನ್ನು ಅಗ್ನಿಸಾಕ್ಷಿಕವಾಗಿ ಕೈಹಿಡಿದೆನು. ನೀನು ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನವನ್ನು ಮಾಡಿದ ಪಕ್ಷದಲ್ಲಿ ನಿನ್ನನ್ನೂ ನಿನ್ನ ಮಗನಾದ ಭರತನನ್ನೂ ಪರಿತ್ಯಾಗ ಮಾಡುವೆನು. ಈಗ ರಾತ್ರಿಯು ಕಳೆದು ಪ್ರಾತಃಕಾಲವಾಗುತ್ತಿದೆ. ನನ್ನ ಗುರುವಾದ ವಸಿಷ್ಠ ಮುನೀಶ್ವರನು ಶ್ರೀರಾಮನ ಪಟ್ಟಾಭಿಷೇಕಕ್ಕಾಗಿ ತ್ವರೆಮಾಡುವನು. ಈ ಪಟ್ಟಾಭಿಷೇಕಾರ್ಥವಾಗಿ ಸಂಪಾದಿಸಿದ ವಸ್ತುಗಳಿಂದ ಶ್ರೀರಾಮನಿಗೆ ಪಟ್ಟಾಭಿಷೇಕವಾಗಲಿ! ನನ್ನ ಶರೀರಾಂತ್ಯದಲ್ಲಿ ನನಗೆ ಶ್ರೀರಾಮನೇ ಉತ್ತರಕ್ರಿಯೆಗಳನ್ನು ಮಾಡಲಿ! ನಿನ್ನ ಮಗನಾದ ಭರತನು ನನಗೆ ಅಂತ್ಯಕ್ರಿಯೆಗಳನ್ನು ಮಾಡಕೂಡದು! ಎಲೇ ದುಷ್ಟೆ, ಶ್ರೀರಾಮನ ಪಟ್ಟಾಭಿಷೇಕವನ್ನು ನಿಲ್ಲಿಸಿದರೆ ಆತನು ಆ ವೃತ್ತಾಂತವನ್ನು ಕೇಳಿ ಹರ್ಷಗುಂದಿ ತಲೆಬಾಗಿ ದೈನ್ಯದಿಂದ ಕೂಡಿದ ಮುಖವುಳ್ಳವನಾಗಿರುವುದನ್ನು ನೋಡಲಾರೆನು! ನಕ್ಷತ್ರಸಮೂಹವನ್ನೂ ಚಂದ್ರಮಂಡಲವನ್ನೂ ಕೂಡಿ ಒಪ್ಪುತ್ತಿದ್ದ ರಾತ್ರಿಯು ಕಳೆದು ಪ್ರಾತಃಕಾಲವಾಯಿತು" ಎಂದು ನುಡಿದನು. ಹಾಗೆ ಹೇಳುತ್ತಿರುವಾಗಲೇ ಕೈಕೇಯಿದೇವಿಯು "ಮಹಾರಾಜ, ನೀನು ನುಡಿದ ವಾಕ್ಯವು ಶರೀರದಲ್ಲಿ ಹುಟ್ಟಿದ ವ್ಯಾಧಿಯಂತೆ ನನ್ನ ಮನಸ್ಸಿಗೆ ವ್ಯಥೆಯನ್ನುಂಟುಮಾಡುತ್ತದೆ. ನೀನು ಶ್ರೀರಾಮನ ಪಟ್ಟಾಭಿಷೇಕವನ್ನು ನಿಲ್ಲಿಸಿ ಆತನನ್ನು ವನವಾಸಕ್ಕೆ ಕಳುಹಿಸಿ ಭರತನಿಗೆ ಪಟ್ಟವನ್ನು ಕಟ್ಟಿ ನನಗೆ ಪರರಿಂದ ಭಯವಿಲ್ಲದಂತೆ ಮಾಡಿದರೆ ಕೃತಾರ್ಥನಾಗುತ್ತೀಯೆ" ಎಂದು ನುಡಿದಳು.

ದಶರಥರಾಯನು ತೀಕ್ಷ್ಣವಾದ ಚುಬುಕಿನ ಪೆಟ್ಟಿನಿಂದ ಉತ್ತಮಾಶ್ವವು ಕೆರಳಿ ಏಳುವಂತೆ ಬೆಚ್ಚಿಬಿದ್ದು ಕೈಕೇಯಿದೇವಿಯನ್ನು ಕುರಿತು "ನಾನು ಧರ್ಮದ ಕಟ್ಟಿಗೆ ಸಿಕ್ಕಿದ್ದೇನೆ. ಧಾರ್ಮಿಕನಾದ ನನ್ನ ಜ್ಯೇಷ್ಠಪುತ್ರ ಶ್ರೀರಾಮನನ್ನು ನೋಡಬಯಸುತ್ತೇನೆ" ಎಂದು ನುಡಿದನು.

ಆ ಸಮಯದಲ್ಲಿ ರಾತ್ರಿಯು ಕಳೆದು ಸೂರ್ಯೋದಯವಾಗುತ್ತಿರಲು ವಸಿಷ್ಠಮುನೀಶ್ವರನು ಶುಭಮುಹೂರ್ತದಲ್ಲಿ ಪಟ್ಟಾಭಿಷೇಕವನ್ನು ಮಾಡಬೇಕೆಂದು ತನ್ನ ಶಿಷ್ಯರೊಡನೆ ಪಟ್ಟಾಭಿಷೇಕಕ್ಕೆ

ಯೋಗ್ಯವಾದ ವಸ್ತುಗಳನ್ನು ತರಿಸಿಕೊಂಡು ಸರ್ವಾಲಂಕಾರಗಳಿಂದ ಮೆರೆಯುತ್ತಿದ್ದ ಅಯೋಧ್ಯಾ ಪಟ್ಟಣವನ್ನು ಪ್ರವೇಶಿಸಿದನು. ಆ ಪಟ್ಟಣವು ಎಲ್ಲಿನೋಡಿದರೂ ಸಂಮಾರ್ಜನೆ ರಂಗವಲ್ಲಿ ಮೇಲ್ಕಟ್ಟು ತೋರಣ ಕಲಶ ಕನ್ನಡಿ ಪತಾಕೆ ಮುತ್ತಿನಸರ ಝಲ್ಲರಿ ಪುಷ್ಪಸರ ಸಾಂಬ್ರಾಣಿ ಧೂಪ ಚಂದನ ಕರ್ಪೂರಾಗರುಮಿಶ್ರಿತವಾದ ಗಂಧೋದಕಗಳಿಂದಲೂ ಮುತ್ತು ಮಾಣಿಕ್ಯ ವೈಡೂರ್ಯ ಪುಷ್ಯರಾಗ ಮರಕತ ವಜ್ರ ಇಂದ್ರನೀಲ ಪ್ರವಾಳ ಗೋಮೇಧಿಕಗಳೆಂಬ ನವರತ್ನರಾಶಿಗಳುಳ್ಳ ಅಂಗಡಿಗಳಿಂದಲೂ ಪುರಜನಗಳಿಂದಲೂ ಚೌಬೀದಿಗಳಲ್ಲಿ ಅತ್ಯಂತ ಸ್ವಾದುವಾದ ಅರವಟ್ಟಿಗೆಗಳಿಂದಲೂ ನಾನಾ ಆಭರಣಭೂಷಿತರಾದ ಜನರಿಂದಲೂ ಮನೋಹರವಾಗಿತ್ತು. ವಸಿಷ್ಠನು ಆ ಪಟ್ಟಣವನ್ನೂ ಅದರ ಸೌಭಾಗ್ಯವನ್ನೂ ನೋಡುತ್ತ ದಶರಥರಾಯನ ಅರಮನೆಯ ಬಾಗಿಲಿಗೆ ಬಂದು ಪ್ರಧಾನಿಯಾದ ಸುಮಂತ್ರನನ್ನು ಕಂಡು ಹೀಗೆ ನುಡಿದನು : "ಸುಮಂತ್ರ, ನಾನು ಬಂದ ವಿಷಯವನ್ನು ಅಂತಃಪುರದಲ್ಲಿರುವ ದಶರಥರಾಯನಿಗೆ ತಿಳಿಸು. ಶ್ರೀರಾಮನ ಪಟ್ಟಾಭಿಷೇಕಾರ್ಥವಾಗಿ ಸುವರ್ಣಕಲಶಗಳಲ್ಲಿ ಗಂಗಾ ಮೊದಲಾದ ಪುಣ್ಯನದಿಗಳ ತೀರ್ಥಗಳು, ನಾಲ್ಕು ಸಮುದ್ರಗಳ ತೀರ್ಥಗಳು, ಅತ್ತಿಯಮರದಿಂದ ಮಾಡಿದ ಹಸೆಯಮಣೆ, ನವಧಾನ್ಯಗಳು, ನವರತ್ನಗಳು, ತುಪ್ಪ, ಜೇನುತುಪ್ಪ, ಹಾಲು, ಮೊಸರು ಮೊದಲಾದವು, ಕೋಮಲವಾದ ದರ್ಭೆಗಳು, ಮಾಂಗಲ್ಯಾರ್ಥವಾದ ಅರಳುಗಳಿಂದ ಸೇಸೆಯಿಡುವದಕ್ಕೆ ಎಂಟುಮಂದಿ ಹೆಣ್ಣುಮಕ್ಕಳು, ಮದ್ದಾನೆ, ನಾಲ್ಕು ಉತ್ತಮಾಶ್ವಗಳಿಂದ ಯುಕ್ತವಾದ ರಥ, ಲಕ್ಷಣವುಳ್ಳ ಅಶ್ವ, ಛತ್ರ, ಬಿಳಿಯ ಚಾಮರ, ಸುವರ್ಣಮಯವಾದ ಗಿಂಡಿ, ಚಿನ್ನದ ಸರಪಣಿಗಳಿಂದ ಕಟ್ಟಲ್ಪಟ್ಟ ಉತ್ತಮವಾದ ಬಿಳಿಯ ಎತ್ತು, ನಾಲ್ಕು ಕೋರೆದಾಡೆಗಳುಳ್ಳ ಸಿಂಹ, ರತ್ನಖಚಿತವಾದ ಸಿಂಹಾಸನ, ವ್ಯಾಘ್ರಚರ್ಮ, ಹೋಮಯೋಗ್ಯವಾದ ಸಮಿತ್ತುಗಳು, ಗೋವುಗಳು, ಹಂಸ ಗಿಣಿ ಕೋಗಿಲೆ ನವಿಲು ಪಾರಾವತ ಗರುಡ ಮೊದಲಾದ ಪುಣ್ಯಪಕ್ಷಿಗಳು, ಇನ್ನೂ ಬೇಕಾದ ಇತರ ಸಮಸ್ತ ಸಾಮಗ್ರಿಗಳೂ ಸಿದ್ಧವಾಗಿವೆ. ಸರ್ವಾಭರಣಭೂಷಿತರಾದ ವೇಶ್ಯಾಸ್ತ್ರೀಯರೂ ವೇದಸೂಕ್ತಗಳನ್ನು ಬಲ್ಲ ಬ್ರಾಹ್ಮಣರೂ ದೊರೆಗಳೂ ಕೂಡಿದ್ದಾರೆ. ಶುಭಲಗ್ನದಲ್ಲಿ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಬೇಕು. ಈ ವೃತ್ತಾಂತವನ್ನು ನೀನು ದಶರಥರಾಯನಿಗೆ ತಿಳಿಸು."

ಮಹಾತ್ಮನಾದ ಸುಮಂತ್ರನು ಅರಮನೆಯ ಒಳಗೆ ಹೋಗುತ್ತಿರಲು ದ್ವಾರಪಾಲಕರು ತಡೆಯಲಿಲ್ಲ. ಏಕೆಂದರೆ, ಸುಮಂತ್ರನು ಅನೇಕ ವರುಷಗಳಿಂದ ಪ್ರಧಾನಿಯಾಗಿದ್ದು ವೃದ್ಧನಾದವನು ; ದಶರಥರಾಯನಿಗೆ ಅತ್ಯಂತ ಆಪ್ತನು. ಆತನು ಮುಹೂರ್ತವು ತಪ್ಪುವುದೆಂಬ ಭಯದಿಂದ ಶೀಘ್ರವಾಗಿ ಅಂತಃಪುರಕ್ಕೆ ಹೋದನು. ದಶರಥರಾಯನು ಕೈಕೇಯೀದೇವಿಯ ದೆಸೆಯಿಂದ ದೈನ್ಯಾವಸ್ಥೆಯಲ್ಲಿದ್ದುದು ಸುಮಂತ್ರನಿಗೆ ತಿಳಿಯಲಿಲ್ಲ. ಆತನು ಎಂದಿನಂತೆ ಕೈಮುಗಿದುಕೊಂಡು "ದಶರಥಮಹಾರಾಜ, ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸಿದಾಗ ಸಮುದ್ರವು ಜನರಿಗೆ ಹರ್ಷವನ್ನುಂಟುಮಾಡುವಂತೆ ನಮಗೆ ನೀನು ಹರ್ಷವನ್ನುಂಟುಮಾಡು. ಪೂರ್ವದಲ್ಲಿ ಸಾರಥಿಯಾದ ಮಾತಲಿಯು ಕಾಲೋಚಿತವಾಗಿ ಹಿತವನ್ನು ತಿಳಿಸಲು ಆತನ ಮಾತನ್ನು ಕೇಳಿ ದೇವೇಂದ್ರನು ಸಮಸ್ತದಾನವರನ್ನೂ ಜಯಿಸಿದಂತೆ ನೀನು ನನ್ನ ಬಿನ್ನಹವನ್ನು ಕೇಳಿ ಶ್ರೀರಾಮನ ಪಟ್ಟಾಭಿಷೇಕವನ್ನು ತಾಮಸವಿಲ್ಲದೆ ಮಾಡು. ಶಿಕ್ಷಾ ಕಲ್ಪ ವ್ಯಾಕರಣ ನಿರುಕ್ತ ಜ್ಯೋತಿಷ ಛಂದಸ್ಸುಗಳೆಂಬ ಷಡಂಗಸಹಿತವಾದ ವೇದಗಳು ಪರಮಪುರುಷನಾದ ಬ್ರಹ್ಮದೇವನನ್ನು ಎಚ್ಚರಗೊಳಿಸುವಂತೆ ನಿನ್ನನ್ನು ನಾನು ಎಚ್ಚರಗೊಳಿಸುತ್ತಿದ್ದೇನೆ. ಚಂದ್ರಸೂರ್ಯರು ಸಮುದ್ರಕಾನನಸಹಿತವಾದ ಸಮಸ್ತ ಭೂಮಂಡಲವನ್ನೂ ಬೆಳಗಿಸುವಂತೆ ನಾನು ನಿನಗೆ ಶ್ರೇಯಸ್ಸನ್ನು ಬಯಸುತ್ತೇನೆ. ಎಲೈ

ದಶರಥರಾಯನೆ, ಎದ್ದು ಮಂಗಳಸ್ನಾನವನ್ನು ಮಾಡಿ ಕಾಲೋಚಿತವಾದ ಭೂಷಣಗಳಿಂದ ಅಲಂಕರಿಸಿಕೊಂಡು ಮಹಾಮೇರುವಿನಮೇಲೆ ಬೆಳಗುವ ಸೂರ್ಯನಂತೆ ಸಿಂಹಾಸನಾರೂಢನಾಗಿ ಪಟ್ಟಾಭಿಷೇಕಕ್ಕೆ ಸನ್ನಾಹವನ್ನು ಮಾಡು. ನಿನಗೆ ಹರಿಹರಬ್ರಹ್ಮಾದಿಗಳೂ ಇಂದ್ರಾದಿ ದೇವತೆಗಳೂ ಸಹಾಯಕರಾಗಿ ಜಯವನ್ನುಂಟುಮಾಡಲಿ. ವಸಿಷ್ಠಮುನೀಶ್ವರನು ಪ್ರಾತಃಕಾಲದಲ್ಲೆದ್ದು ನಿತ್ಯಕರ್ಮಾನುಷ್ಠಾನಗಳನ್ನು ತೀರಿಸಿಕೊಂಡು ವೇದವೇತ್ತೃಗಳಾದ ಬ್ರಾಹ್ಮಣರನ್ನು ಕೂಡಿಕೊಂಡು ಪಟ್ಟಾಭಿಷೇಕಕ್ಕೆ ಯೋಗ್ಯವಾದ ವಸ್ತುಗಳನ್ನೂ ಮಂಗಳವಸ್ತುಗಳನ್ನೂ ತರಿಸಿಕೊಂಡು ಅರಮನೆಯ ಬಾಗಿಲಲ್ಲಿ ಬಂದಿದ್ದಾನೆ. ನೀನು ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಿಸು. ರಾಜನಿಲ್ಲದಿದ್ದರೆ ರಾಜ್ಯಕ್ಕೆ ಹಾನಿಬರುವುದು. ಗೋಪಾಲಕರಿಲ್ಲದ ಹಸುಗಳಂತೆಯೂ ಸೇನಾಪತಿಯಿಲ್ಲದ ಸೇನೆಯಂತೆಯೂ ಚಂದ್ರನಿಲ್ಲದ ರಾತ್ರಿಯಂತೆಯೂ ವೃಷಭವಿಲ್ಲದ ಗೋಸಮೂಹದಂತೆಯೂ ಅರಸಿಲ್ಲದ ರಾಜ್ಯವು ಕೆಡುವುದೆಂಬ ನೀತಿಯುಂಟು " ಎಂದು ವಿನಯಪೂರ್ವಕವಾಗಿ ನುಡಿದನು.

ಆ ಮಾತನ್ನು ಕೇಳಿ ದಶರಥರಾಯನು ಅತ್ಯಂತ ಶೋಕದಿಂದ ಚೈತನ್ಯಗುಂದಿ ಸುಮಂತ್ರನನ್ನು ನೋಡಿ ದೈನ್ಯಸ್ವರದಿಂದ ಮಾತನಾಡುತ್ತಿರಲು, ಸುಮಂತ್ರನು ಆತನ ಹೀನಸ್ವರವನ್ನೂ ದೈನ್ಯವನ್ನೂ ಬಳಲುಗಣ್ಣುಗಳನ್ನೂ ನೋಡಿ ಮನಸ್ಸಿನಲ್ಲಿ ಭಯಪಟ್ಟು ಕೈಮುಗಿದುಕೊಂಡು ನಿಂತಿದ್ದನು. ಆಗ ಕೈಕೇಯಿಯಾದೇವಿಯು ಆತನನ್ನು ಕುರಿತು " ಎಲೈ ಸುಮಂತ್ರನೆ, ಈ ರಾಯನು ರಾಮನ ಪಟ್ಟಾಭಿಷೇಕವಾರ್ತೆಯನ್ನು ರಾತ್ರಿಯೆಲ್ಲಾ ಹೇಳುತ್ತ, ನಿದ್ದೆಗೆಟ್ಟು ಕಣ್ಣುಕೆಂಪಾಗಿ ಮಾತನಾಡಲಾರದೆ ಮೆಲ್ಲಗೆ ಮಾತನಾಡುತ್ತಿದ್ದಾನೆ. ನೀನು ಸಂದೇಹಪಡದೆ ಶೀಘ್ರವಾಗಿ ಹೋಗಿ ಶ್ರೀರಾಮನನ್ನು ಕರೆದುಕೊಂಡು ಬಾ " ಎಂದು ಹೇಳಿದಳು.

ಅದನ್ನು ಕೇಳಿ ಸುಮಂತ್ರನು ಮನಸ್ಸಿನಲ್ಲಿ ಸಂತೋಷಪಡುತ್ತ ಅಲ್ಲಿಂದ ಶ್ರೀರಾಮನ ಅರಮನೆಗೆ ಹೊರಟು ಶ್ರೀರಾಮನ ಪಟ್ಟಾಭಿಷೇಕೋತ್ಸವವನ್ನು ನೋಡಬೇಕೆಂದು ರಾಜದ್ವಾರದಲ್ಲಿ ನೆರೆದಿದ್ದ ಬ್ರಾಹ್ಮಣರನ್ನೂ ಪುರಜನ ಪರಿಜನರನ್ನೂ ಅವಲೋಕಿಸಿದನು.



### ೧೫ ನೆಯ ಅಧ್ಯಾಯ

## ದಶರಥನು ಶ್ರೀರಾಮನನ್ನು ಬರಮಾಡಿಕೊಳ್ಳುವುದು

ಆ ರಾಜದ್ವಾರದಲ್ಲಿ ವೇದಪಾರಂಗತರಾದ ಬ್ರಾಹ್ಮಣರೂ ರಾಜಪುರೋಹಿತರೂ ನೆರೆದಿದ್ದರು. ಅಮಾತ್ಯರೂ ಸೇನಾಪತಿಗಳೂ ಪಟ್ಟಾಭಿಷೇಕವನ್ನು ನೋಡಲು ಉತ್ಸಾಹದಿಂದ ಬಂದಿದ್ದರು. ಸೂರ್ಯೋದಯವಾಗಿ ಕರ್ಕಾಟಕಲಗ್ನ ಪುಷ್ಯನಕ್ಷತ್ರದಲ್ಲಿ—ಶ್ರೀರಾಮನ ಜನನಲಗ್ನದಲ್ಲಿ—ಆತನ ಪಟ್ಟಾಭಿಷೇಕಕ್ಕೋಸ್ಕರ ದ್ವಿಜಶ್ರೇಷ್ಠರು ಸಕಲಸಿದ್ಧತೆಗಳನ್ನೂ ಮಾಡಿದ್ದರು. ಸುವರ್ಣಮಯವಾದ ಉದಕಪೂರ್ಣಕಲಶಗಳು ಸ್ಥಾಪಿಸಲ್ಪಟ್ಟಿದ್ದವು. ಸಿಂಹಾಸನವು ಅಲಂಕೃತವಾಗಿತ್ತು. ವ್ಯಾಘ್ರ ಚರ್ಮದಿಂದ ರಥವನ್ನು ಆಚ್ಛಾದಿಸಿದ್ದರು. ಗಂಗಾಯಮುನೆಗಳ ಸಂಗಮಸ್ಥಳದಿಂದ ಪುಣ್ಯೋದಕವು ತರಲ್ಪಟ್ಟಿತ್ತು. ಅಲ್ಲದೆ ಇತರ ನಾನಾ ಪುಣ್ಯನದಿಗಳಿಂದಲೂ, ಸರೋವರಗಳಿಂದಲೂ ಸಮುದ್ರಗಳಿಂದಲೂ ಜಲವನ್ನು ತರಲಾಗಿತ್ತು. ಚಿನ್ನ ಮತ್ತು ಬೆಳ್ಳಿಯ ಕಲಶಗಳಲ್ಲಿ ಅರಳನ್ನು ತುಂಬಿ ತಳಿರುಗಳಿಂದ ಮುಚ್ಚಿದ್ದರು. ಕೆಲವು ಕುಂಭಗಳಲ್ಲಿ ಪುಣ್ಯೋದಕವನ್ನು ತುಂಬಿ, ಕಮಲ ಮತ್ತು

ನೈದಿಲೆಯ ಹೂಗಳನ್ನು ಇಟ್ಟಿದ್ದರು. ಹಾಲು, ಮೊಸರು, ತುಪ್ಪ, ಜೇನುತುಪ್ಪ, ಅರಳು, ದರ್ಭೆ ಮತ್ತು ಪುಷ್ಪಗಳು ಸಿದ್ಧವಾಗಿದ್ದವು. ಸದಾಚಾರದಲ್ಲಿ ನಡೆಯುವ ವೇಶ್ಯೆಯರು ಸರ್ವಾಭರಣಭೂಷಿತ ರಾಗಿ ಬಂದಿದ್ದರು. ಶ್ರೀರಾಮನಿಗೋಸ್ಕರ ಚಿನ್ನದ ಹಿಡಿಕೆಯುಳ್ಳ ರತ್ನಖಚಿತವಾದ ಶ್ವೇತಚಾಮರವು ತರಲ್ಪಟ್ಟಿತ್ತು. ಚಂದ್ರಮಂಡಲದಂತೆ ಶುಭ್ರವಾದ ಶ್ವೇತಚ್ಛತ್ರವು ಸಿದ್ಧವಾಗಿತ್ತು. ಬಿಳಿಯ ವೃಷಭವೂ ಬಿಳಿಯ ಕುದುರೆಯೂ ಬಂದು ನಿಂತಿದ್ದವು. ಮಂಗಳಾರ್ಥವಾಗಿ ಎಂಟುಮಂದಿ ಕನ್ನಿಕೆಯರು ಆಭರಣಭೂಷಿತೆಯರಾಗಿ ಬಂದಿದ್ದರು. ಸಕಲವಿಧ ವಾದ್ಯಗಳು ನೆರೆದಿದ್ದವು. ಸ್ತೋತ್ರಪಾಠಕರು ರಾಜಾಜ್ಞೆಯಂತೆ ಬಂದು ಸೇರಿದ್ದರು.

ಅವರೆಲ್ಲರೂ ಅಲ್ಲಿ ನೆರೆದಿದ್ದ ಸಾಮಂತರಾಜರೊಡನೆ ಹೀಗೆ ಹೇಳುತ್ತಿದ್ದರು : " ಮಹಾ ರಾಜನು ಕಾಣಿಸುವುದಿಲ್ಲವಲ್ಲ ? ಮುಂದಿನ ವಿಷಯವನ್ನು ನಮಗೆ ತಿಳಿಸುವವರು ಯಾರು ? ಸೂರ್ಯನು ಆಗಲೇ ಉದಿಸಿಬಿಟ್ಟಿದ್ದಾನೆ. ಶ್ರೀರಾಮನಿಗೆ ಯುವರಾಜಪಟ್ಟಾಭಿಷೇಕವಾಗಬೇಕಾಗಿದೆ ".

ಆ ಮಾತನ್ನು ಕೇಳಿ ಸುಮಂತ್ರನು ನೆರೆದಿದ್ದ ಮಹಾಜನರನ್ನು ಅಭಿವಂದಿಸಿ ಹೀಗೆಂದನು : " ನೀವು ಮಹಾರಾಜನಿಗೂ ಶ್ರೀರಾಮನಿಗೂ ಪೂಜ್ಯರು. ನೀವು ಬಂದ ವೃತ್ತಾಂತವನ್ನು ದಶರಥ ರಾಯನಿಗೆ ಅರಿಕೆಮಾಡುತ್ತೇನೆ " ಎಂದು ಹೇಳಿ ಶೀಘ್ರದಲ್ಲಿ ಅಂತಃಪುರಕ್ಕೆ ಹೋದನು. ಅಲ್ಲಿ ದಶರಥನನ್ನು ಸ್ತೋತ್ರಮಾಡುತ್ತ " ಎಲೈ ದಶರಥರಾಯನೆ, ನಿನಗೆ ಹರಿಹರಬ್ರಹ್ಮಾದಿಗಳೂ ಇಂದ್ರಾದಿದೇವತೆಗಳೂ ಅನೇಕ ಶ್ರೇಯಸ್ಸನ್ನುಂಟುಮಾಡಲಿ. ಬೆಳಗಾಯ್ತು ; ಏಳು. ವಸಿಷ್ಠನೇ ಮೊದಲಾದ ವೇದಪಾರಂಗತರಾದ ಬ್ರಾಹ್ಮಣರು ಶ್ರೀರಾಮನ ಪಟ್ಟಾಭಿಷೇಕಮುಹೂರ್ತವು ಸಮೀಪವಾಯಿತೆಂದು ನಿನ್ನ ದರ್ಶನಕ್ಕಾಗಿ ಬಂದಿದ್ದಾರೆ " ಎಂದು ಬಿನ್ನವಿಸಿದನು.

ಆಗ ದಶರಥರಾಯನು " ಎಲೈ ಸುಮಂತ್ರನೆ, ಮೊದಲೇ ಶ್ರೀರಾಮನನ್ನು ಇಲ್ಲಿಗೆ ಕರೆತರಹೇಳಿದೆನು. ಏಕೆ ನನ್ನ ಆಜ್ಞೆಯನ್ನು ಮೀರಿದೆ ? ನಾನು ಮಲಗಿ ನಿದ್ದೆ ಮಾಡುತ್ತಿಲ್ಲ. ಶ್ರೀರಾಮನನ್ನು ಇಲ್ಲಿಗೆ ಕರೆದುಕೊಂಡು ಬಾ " ಎಂದು ಆಜ್ಞಾಪಿಸಿದನು.

ಸುಮಂತ್ರನು ತನ್ನ ಒಡೆಯನಾದ ದಶರಥರಾಯನ ಮಾತನ್ನು ಶಿರಸಾವಹಿಸಿ ಆ ರಾಯನ ವಾಕ್ಯವು ಶ್ರೀರಾಮನಿಗೆ ಹಿತವೆಂದೆಣಿಸಿ ಸಂತೋಷಯುಕ್ತನಾಗಿ ಅಲ್ಲಿಂದ ಹೊರಟು ಅನೇಕ ಧ್ವಜಪತಾಕೆಗಳಿಂದ ಅಲಂಕರಿಸಲ್ಪಟ್ಟಿದ್ದ ರಾಜಮಾರ್ಗವನ್ನು ಪ್ರವೇಶಿಸಿದನು. ಮಾರ್ಗದಲ್ಲಿ ಶ್ರೀರಾಮನ ಪಟ್ಟಾಭಿಷೇಕಪ್ರಸಂಗಗಳನ್ನು ಕೇಳುತ್ತ ಶ್ರೀರಾಮನ ಅರಮನೆಗೆ ಹೋದನು. ಆ ಭವನವು ಕೈಲಾಸಪರ್ವತದಂತೆಯೂ ದೇವೇಂದ್ರನ ಅರಮನೆಯಂತೆಯೂ ವಿಕಸಿತವಾದ ತಾವರೆಹೂವುಗಳಿಂದ ಮನೋಹರವಾಗಿತ್ತು. ಅದು ಪಟ್ಟಸಾಲೆಗಳಿಂದಲೂ ಸುವರ್ಣಮಯವಾದ ಪ್ರತಿಮೆಗಳಿಂದಲೂ ಮನೋಹರವಾಗಿ, ರತ್ನಮಯವಾದ ತೋರಣಗಳಿಂದ ದೇದೀಪ್ಯಮಾನವಾಗಿ, ಶರತ್ಕಾಲದ ಮೇಘದ ಮರ್ಯಾದೆಯಲ್ಲಿ ಅತಿಶುಭ್ರವಾಗಿ, ಮಹಾಮೇರುಪರ್ವತದಂತೆ ಅತ್ಯಂತ ಪ್ರಕಾಶಯುಕ್ತವಾಗಿ ಶೋಭಿಸುತ್ತಿತ್ತು. ಮತ್ತು ಶ್ರೀಗಂಧ ಮೊದಲಾದ ಸುಗಂಧದ್ರವ್ಯಗಳ ಧೂಮದಿಂದ ಪರಿಮಳಯುಕ್ತವಾಗಿ ಮನೋಹರವಾದ ನವಿಲು ಹಂಸ ಗಿಳಿ ಕೋಗಿಲೆ ಮೊದಲಾದ ಪಕ್ಷಿಗಳ ಧ್ವನಿಯುಳ್ಳದ್ದಾಗಿ, ಕಂಭಗಳ ಉಪರಿಭಾಗಗಳಲ್ಲಿ ಸಾಲುಸಾಲಾಗಿ ಬರೆಯಲ್ಪಟ್ಟ ಚಿತ್ರಗಳಿಂದ ಮನೋಹರವಾಗಿ, ಚಂದ್ರಮಂಡಲದ ಹಾಗೆ ತನ್ನ ಕಾಂತಿಯಿಂದ ಸಮಸ್ತ ಜನರ ಕಣ್ಣುಗಳಿಗೂ ಮನೋಹರವಾಗಿದ್ದಿತು. ಅಲ್ಲದೆ ಆ ಭವನವು ಕುಬೇರನ ಅರಮನೆಗೆ ಸಮಾನವಾಗಿ ನಾನಾ ದಿಕ್ಕುಗಳಿಂದ ಪಟ್ಟಾಭಿಷೇಕೋತ್ಸವನಿಮಿತ್ತವಾಗಿ ತಮ್ಮ ದೇಶಗಳಲ್ಲಿದ್ದ ಅಪೂರ್ವವಾದ

ವಸ್ತುಗಳನ್ನು ಕಾಣಿಕೆಯಾಗಿ ತಂದು ಕೈಮುಗಿದುಕೊಂಡು ನಿಂತಿದ್ದ ನಾನಾ ದೇಶದ ರಾಯರಿಂದ ಇಟ್ಟಣಿಸಿದ್ದಿತು. ಸುಮಂತ್ರನು ರಥಾರೂಢನಾಗಿ ಪುರಜನರಿಗೆ ಹರ್ಷವನ್ನುಂಟುಮಾಡುತ್ತ ಅತ್ಯಂತ ಸಂತುಷ್ಟನಾಗಿ ಶ್ರೀರಾಮನ ಅರಮನೆಯನ್ನು ಪ್ರವೇಶಿಸಿದನು. ಬಾಗಿಲಲ್ಲಿ ಇಟ್ಟಣಿಸಿದ್ದ ರಾಜಸಮೂಹಗಳ ಕುಶಲಗಳನ್ನು ಕೇಳಿ ಮುತ್ತಿನ ಝುಲ್ಲಿಪಟ್ಟೆಗಳಿಂದ ಅಲಂಕರಿಸಲ್ಪಟ್ಟ ನಡುವೆ ಇದ್ದ ಬಾಗಿಲುಗಳನ್ನು ಕಳೆದು ಅಲ್ಲಲ್ಲಿ ಶ್ರೀರಾಮನ ಪಟ್ಟಾಭಿಷೇಕನಿಮಿತ್ತವಾದ ಮಂಗಳವಾರ್ತೆಗಳನ್ನು ಕೇಳುತ್ತಾ ಹೋದನು. ಅತ್ಯಂತ ಐಶ್ವರ್ಯದಿಂದ ಪರಿಪೂರ್ಣವಾಗಿ ಚಲನವಿಲ್ಲದಿದ್ದ ಮೇಘದ ಹಾಗೆ ಮನೋಹರವಾದ ಉಪ್ಪರಿಗೆಗಳುಳ್ಳ ಆ ಅರಮನೆಯ ಅಂತಃಪುರವನ್ನು ಯಾವ ತಡೆಯೂ ಇಲ್ಲದೆ ಸುಮಂತ್ರನು ಉತ್ಸಾಹದಿಂದ ಪ್ರವೇಶಿಸಿದನು.



## ೧೬ ನೆಯ ಅಧ್ಯಾಯ

## ದಶರಥರಾಜನ ಬಳಿಗೆ ಶ್ರೀರಾಮನ ಆಗಮನ

ಈ ಪ್ರಕಾರದಲ್ಲಿ ದಶರಥರಾಜನ ಪ್ರಧಾನನಾಗಿ ಇಕ್ಷ್ವಾಕುವಂಶದ ರಾಯರ ಪೂರ್ವ ವೃತ್ತಾಂತವನ್ನು ಬಲ್ಲ ಸುಮಂತ್ರನು ಸಮಸ್ತ ಪುರಜನಗಳಿಂದ ಇಟ್ಟಣಿಸಿದ್ದ ಶ್ರೀರಾಮನ ಅರಮನೆಯ ಹೊರಬಾಗಿಲನ್ನು ದಾಟಿ, ಬಿಲ್ಲಂಬುಗಳನ್ನು ಧರಿಸಿಕೊಂಡು ಆಭರಣಗಳಿಂದಲಂಕೃತರಾದ ಅರಮನೆಯ ಬಾಗಿಲು ಕಾಯುವವರಿಂದಲೂ ಕೈಗಳಲ್ಲಿ ಬೆತ್ತಗಳನ್ನು ಹಿಡಿದುಕೊಂಡು ಕೆಂಪಾದ ವಸ್ತ್ರಗಳನ್ನು ಧರಿಸಿಕೊಂಡಿದ್ದ ವೃದ್ಧರಾದ ದ್ವಾರಪಾಲಕರಿಂದಲೂ ಕಾಯಲ್ಪಡುತ್ತಿದ್ದ ಅಂತಃಪುರದ ಬಾಗಿಲ ಬಳಿಗೆ ಹೋದನು. ಆ ದ್ವಾರಪಾಲಕರು ಕೈಮುಗಿದುಕೊಂಡು ಇದಿರುಗೊಂಡು ಬರಲು ಸುಮಂತ್ರನು ಅವರ ಸತ್ಕಾರವನ್ನಂಗೀಕರಿಸಿ ವಿನಯಗುಣಸಂಪತ್ತಿಯಿಂದ ಅವರನ್ನು ಕುರಿತು "ಎಲೈ ದ್ವಾರಪಾಲಕರೆ, ನೀವು ಶೀಘ್ರದಲ್ಲಿ ಅಂತಃಪುರಕ್ಕೆ ಹೋಗಿ ಶ್ರೀರಾಮನನ್ನು ಕಂಡು 'ಸುಮಂತ್ರನು ಬಂದಿದ್ದಾನೆ' ಎಂದು ಬಿನ್ನವಿಸಿರಿ" ಎಂದು ನುಡಿದನು.

ಆ ಸೇವಕರು ಮಹಾಪ್ರಸಾದವೆಂದು ಶೀಘ್ರವಾಗಿ ಅಂತಃಪುರಕ್ಕೆ ಹೋಗಿ ಸೀತಾ ಸಮೇತನಾಗಿದ್ದ ಶ್ರೀರಾಮನಿಗೆ ಈ ವಿಷಯವನ್ನು ಬಿನ್ನವಿಸಿದರು. ಶ್ರೀರಾಮನು ತನ್ನ ತಂದೆಯ ಪ್ರಧಾನನಾದ ಸುಮಂತ್ರನನ್ನು ಕರೆಕಳುಹಿದನು. ಸುಮಂತ್ರನು ಸಾಕ್ಷಾತ್ಕುಬೇರನಂತೆ ಸರ್ವಾಲಂಕಾರ ಭೂಷಿತನೂ ಕುಂಕುಮಚಂದನ ಗಂಧಾನುಲೇಪವುಳ್ಳವನೂ ವಾಮಭಾಗದಲ್ಲಿ ಬೀಸಣಿಗೆಯನ್ನು ಬೀಸುತ್ತಿದ್ದ ಸೀತಾದೇವಿಯಿಂದ ಚಿತ್ರಾನಕ್ಷತ್ರದೊಡನೆ ಕೂಡಿದ ಚಂದ್ರನಂತೆ ಅತಿಮನೋಹರನಾಗಿ ಒಪ್ಪುವವನೂ ಆಗಿ ಪ್ರಾತಃಕಾಲದಲ್ಲಿ ಉದಯವಾಗುವ ಸೂರ್ಯನಂತೆ ಕಾಂತಿಯಿಂದ ಬೆಳಗುತ್ತಿದ್ದ ಶ್ರೀರಾಮನನ್ನು ಕಂಡನು. ಅನಂತರ ಅತ್ಯಂತ ವಿನಯದಿಂದ ಕೈಮುಗಿದುಕೊಂಡು ಶ್ರೀರಾಮನನ್ನು ಕುರಿತು "ಶ್ರೀರಾಮ, ನಿನ್ನ ತಾಯಿಯಾದ ಕೌಸಲ್ಯಾದೇವಿಯು ಭಾಗ್ಯವತಿಯಾಗಿ ಅನೇಕ ಪುಣ್ಯಾತಿಶಯವುಳ್ಳವಳು. ಈಗ ನಿನ್ನ ತಂದೆಯಾದ ದಶರಥರಾಜನು ಕೈಕೇಯಿಯಾದೇವಿಯೊಡನೆ ಕುಳಿತಿದ್ದಾನೆ. ನಿನ್ನನ್ನು ನೋಡಬೇಕೆಂಬ ಲವಲವಿಕೆಯಿಂದ ಕರೆತರಹೇಳಿ ನನ್ನನ್ನು ಕಳುಹಿಸಿದನು. ಆದಕಾರಣ ನಾನು ನಿನ್ನ ಸಮೀಪಕ್ಕೆ ಬಂದೆನು" ಎಂದು ಬಿನ್ನವಿಸಿದನು.

ಶ್ರೀರಾಮನು ಸುಮಂತ್ರನಿಗೆ ಸತ್ಕಾರಗಳನ್ನು ಮಾಡಿ ಸೀತಾದೇವಿಯನ್ನು ಕುರಿತು "ಸೀತೆ, ನನ್ನ ತಂದೆಯಾದ ದಶರಥರಾಜನೂ ತಾಯಿಯಾದ ಕೈಕೇಯಿಯಾದೇವಿಯು ನನ್ನ ಅಂತರಂಗವನ್ನು

ಬಲ್ಲವರು : ಅವರಿಬ್ಬರೂ ಮಂತ್ರಾಲೋಚನೆಯನ್ನು ಮಾಡಿ ನನಗೆ ಪಟ್ಟಾಭಿಷೇಕವನ್ನು ಮಾಡ ಬೇಕೆಂದು ನಿಶ್ಚಯಿಸಿರಬೇಕು. ಕೈಕೇಯಿದೇವಿಯು ಯಾವಾಗಲೂ ನನಗೆ ಹಿತವಾದ ಕಾರ್ಯವನ್ನೇ ಚಿಂತಿಸುವಳು. ನನ್ನ ತಂದೆಯು ನನ್ನ ಭಾಗ್ಯದಿಂದ ಆ ದೇವಿಯ ಅರಮನೆಗೆ ಹೋಗಿ ಸತ್ಕಥಾ ವಿನೋದಗಳಿಂದ ಸಂತುಷ್ಟಚಿತ್ತನಾಗಿ ನನಗೆ ಹಿತವನ್ನು ಬಯಸುವ ಸುಮಂತ್ರನನ್ನು ಕಳುಹಿಸಿದ್ದಾನೆ. ಈತನು ದಶರಥರಾಜನ ಮನಸ್ಸನ್ನು ಬಲ್ಲವನು. ಅವಶ್ಯವಾಗಿ ಈ ದಿವಸ ನನ್ನ ತಂದೆಯು ನನಗೆ ಪಟ್ಟಾಭಿಷೇಕವನ್ನು ಮಾಡುವನು. ನಾನು ಶೀಘ್ರದಲ್ಲಿ ಮಹಾರಾಜನನ್ನು ಕಂಡು ಬರುತ್ತೇನೆ. ನೀನು ನಿನ್ನ ಸಖಿಯರೊಡನೆ ಇರು " ಎಂದು ಸಂತವಿಟ್ಟು ದಶರಥರಾಜನ ಬಳಿಗೆ ತೆರಳಿದನು.

ಸೀತಾದೇವಿಯು ರಾಮನಿಗೆ ಮಂಗಳವನ್ನು ಬಯಸುತ್ತ ಆತನ ಹಿಂದೆ ಹೊರಬಾಗಿಲವರೆಗೆ ಬಂದು ಆತನನ್ನು ನೋಡಿ "ಪ್ರಾಣಕಾಂತ, ನಿನ್ನ ಪಟ್ಟಾಭಿಷೇಕವು ಸ್ವಾಮಿಯ ಕೃಪೆಯಿಂದ ನೆರವೇರಲಿ. ಪೂರ್ವದಲ್ಲಿ ಬ್ರಹ್ಮದೇವನು ದೇವೇಂದ್ರನಿಂದ ರಾಜಸೂಯಯಾಗವನ್ನು ಮಾಡಿಸಿದಂತೆ ದಶರಥರಾಜನು ನಿನ್ನಿಂದ ರಾಜಸೂಯಯಾಗವನ್ನು ಮಾಡಿಸುವಂತಾಗಲಿ. ನಾನು ಅದನ್ನು ನೋಡಿ ಸಂತೋಷಪಡುವೆನು. ನೀನು ರಾಜಸೂಯ ಯಾಗದೀಕ್ಷೆಯನ್ನು ಕೈಗೊಂಡು ಕೃಷ್ಣಾಜಿನವನ್ನು ಧರಿಸಿಕೊಂಡು ಎರಳೆಯ ಕೊಂಬನ್ನು ಕೈಯಲ್ಲಿಟ್ಟುಕೊಂಡು ಶುಚಿಯಾಗಿ ಸದಾಚಾರಸಂಪನ್ನನಾಗಿರು ವುದನ್ನು ನೋಡಿ ನಾನು ನಿನ್ನ ಸೇವೆಯನ್ನು ಮಾಡುವಂತಾಗಲಿ. ನಿನ್ನ ಸಮಸ್ತವಾದ ರಾಜ್ಯದಲ್ಲಿ ಮೂಡಣ ದಿಕ್ಕನ್ನು ದೇವೇಂದ್ರನು ಪರಿಪಾಲಿಸಲಿ. ತೆಂಕಣ ದಿಕ್ಕನ್ನು ಯಮನು ಪರಿಪಾಲಿಸಲಿ. ಪಡುವಣ ದಿಕ್ಕನ್ನು ವರುಣನು ಪರಿಪಾಲಿಸಲಿ. ಬಡಗಣ ದಿಕ್ಕನ್ನು ಕುಬೇರನು ಪರಿಪಾಲಿಸಲಿ" ಎಂದು ಪ್ರಿಯವಚನಗಳನ್ನು ನುಡಿದಳು.

ಶ್ರೀರಾಮನು ಸೀತಾದೇವಿಯನ್ನು ಅಂತಃಪುರದಲ್ಲಿರುವಂತೆ ಸೂಚಿಸಿ ಮಾಂಗಲ್ಯವಾಗಿ ಪಟ್ಟಾಭಿಷೇಕಕಾಲೋಚಿತವಾದ ಸಮಸ್ತ ಆಭರಣಗಳಿಂದ ಅಲಂಕೃತನಾಗಿ ಸುಮಂತ್ರನೊಡನೆ ಮಹಾಮೇರುಪರ್ವತದ ಗುಹೆಯಿಂದ ಸಿಂಹರಾಜನು ಹೊರಡುವಂತೆ ತನ್ನ ಅರಮನೆಯಿಂದ ಹೊರಟನು. ನಡುವಣ ಬಾಗಿಲಲ್ಲಿ ಬಿಲ್ಲುಬಾಣಗಳನ್ನು ಹಿಡಿದು ಕೈಮುಗಿದುಕೊಂಡು ಮಿತ್ರರೊಡನೆ ನಿಂತಿದ್ದ ಲಕ್ಷ್ಮಣನನ್ನೂ ತನ್ನ ಪಟ್ಟಾಭಿಷೇಕಕ್ಕೆ ಅನುಕೂಲರಾಗಿದ್ದ ಜನರನ್ನೂ ನೋಡಿ ಅವರಿಗೆ ಅನೇಕ ಸತ್ಕಾರಗಳನ್ನು ಮಾಡಿದನು. ಆಮೇಲೆ ಸಾಕ್ಷಾತ್ ಯಜ್ಞಪುರುಷನು ಬೆಳಗುವ ಹಾಗೆ ಕಾಂತಿಯಿಂದ ದೇದೀಪ್ಯಮಾನವಾದ, ವ್ಯಾಘ್ರಚರ್ಮದಿಂದ ಅಲಂಕರಿಸಲ್ಪಟ್ಟ ಹೇಮಪೀಠವುಳ್ಳ ಗುಡುಗಿ ನಂತೆ ಗಂಭೀರಧ್ವನಿಯುಳ್ಳ, ಪ್ರೇಕ್ಷಕರನ್ನು ಆಕರ್ಷಿಸುವ ಕುದುರೆಗಳಿಂದ ಯುಕ್ತವಾಗಿದ್ದ ರಥವನ್ನೇರಿ ದನು. ಶ್ರೀರಾಮನು ಇಂದ್ರನು ಆಕಾಶಮಾರ್ಗದಲ್ಲಿ ರಥವೇರಿ ಬರುವಂತೆಯೂ ಚಂದ್ರನು ಮೇಘ ಗಳಿಂದ ಹೊರಟು ಬೆಳಗಿ ಬರುವಂತೆಯೂ ತನ್ನ ಕಾಂತಿಯಿಂದ ರಾಜಬೀದಿಯನ್ನು ಬೆಳಗಿಸುತ್ತಾ ಕೈಕೇಯಿದೇವಿಯ ಅರಮನೆಗೆ ಬರುತ್ತಿದ್ದನು! ಆತನ ಹಿಂದುಗಡೆಯಲ್ಲಿ ಲಕ್ಷ್ಮಣನು ರಥವನ್ನೇರಿ ಬಿಲ್ಲುಬಾಣಗಳನ್ನು ಕೈಯಲ್ಲಿ ಹಿಡಿದು ಛತ್ರಚಾಮರಾದಿಸೇವೆಯನ್ನು ಮಾಡುತ್ತ ತೆರಳಿದನು. ಆಗ ರಥಗಳ ಚೀತ್ಕಾರಗಳಿಂದಲೂ ಆನೆಗಳ ಬೃಂಹಣಧ್ವನಿಗಳಿಂದಲೂ ಕುದುರೆಗಳ ಹೇಷಿತಧ್ವನಿಗಳಿಂದಲೂ ಕಾಲಾಳುಗಳ ಕೋಲಾಹಲಧ್ವನಿಗಳಿಂದಲೂ ಪಂಚಮಹಾವಾದ್ಯಧ್ವನಿಗಳಿಂದಲೂ ದಶದಿಕ್ಕುಗಳೂ ಮೊಳಗುತ್ತಿದ್ದವು. ಅಲ್ಲಲ್ಲಿ ಉಪ್ಪರಿಗೆಗಳಲ್ಲಿಯೂ ಗವಾಕ್ಷಗಳಲ್ಲಿಯೂ ಸರ್ವಾಭರಣಭೂಷಿತೆಯರಾದ ಸ್ತ್ರೀಯರೂ ನೋಡುತ್ತಿರಲು ಶ್ರೀರಾಮನು ಮಂಗಳಪಾಠಕರ ಜಯಜಯಧ್ವನಿಗಳನ್ನೂ ಮಂಗಳ ಸೂಕ್ತಗಳನ್ನು ಪಠಿಸುವ ಬ್ರಾಹ್ಮಣರ ವೇದಘೋಷಗಳನ್ನೂ ಗಾಯಕರ ಮಂಗಳಗಾನಗಳನ್ನೂ ಕೇಳುತ್ತ ಹರ್ಷಯುಕ್ತನಾಗಿ ಅಲ್ಲಲ್ಲಿ ಸ್ತ್ರೀಯರು ಮಂಗಳಕರಗಳಾದ ಅರಳುಗಳಿಂದಲೂ ಪರಿಮಳ

ಪುಷ್ಪಗಳಿಂದಲೂ ಹರಸಿ ಸೇಸೆಯನ್ನಿಕ್ಕಲು ರಾಜಬೀದಿಯಲ್ಲಿ ಮೆರವಣಿಗೆಯಿಂದ ತೆರಳಿದನು. ಅಲ್ಲಿದ್ದ ಜನಗಳು ಕೈಮುಗಿದುಕೊಂಡು "ಜಯ! ಜಯ ಜಯ ರಾಮ! ಜಗನ್ನಾಥ! ಜಯ ಮಂಗಳಾವಾಸ! ಜಯಜಯ ಸರ್ವಮನೋಹರ್ಷ! ಜಯ ಮಂಗಳದಾಯಕ! ಜಯ ಸತ್ಪುರುಷ! ಲೋಕೈಕರಕ್ಷಕ! ಜಯಜಯ ರಕ್ಷಿಸು! ಅತ್ಯಂತ ಭಾಗ್ಯವತಿಯಾದ ನಿನ್ನ ತಾಯಿ ಕೌಸಲ್ಯಾದೇವಿಯು ಪಟ್ಟಾಭಿಷೇಕಾರ್ಥವಾಗಿ ಸರ್ವಾಭರಣಭೂಷಿತನಾಗಿ ಸಮಸ್ತ ಜನರಿಗೂ ಸಂತೋಷವುಂಟುಮಾಡುತ್ತ ಮೆರವಣಿಗೆಯಲ್ಲಿ ಬರುವ ನಿನ್ನನ್ನು ತನ್ನ ಮನಸ್ಸೂ ಕಣ್ಣುಗಳೂ ದಣಿಯುವಂತೆ ನೋಡಲಿ! ನಿನ್ನನ್ನು ಕೈಹಿಡಿದ ಸೀತಾದೇವಿಯು ಜನ್ಮಾಂತರದಲ್ಲಿ ಮಹತ್ತಾದ ತಪಸ್ಸನ್ನು ಮಾಡಿರಬೇಕು. ಅಲ್ಲದಿದ್ದರೆ ನಿನ್ನಂಥವನು ಪತಿಯಾಗಲಾರನು. ರೋಹಿಣೀದೇವಿಯು ಚಂದ್ರನನ್ನು ಕೈಹಿಡಿದಂತೆ ಸೀತಾದೇವಿಯು ನಿನ್ನನ್ನು ಕೈಹಿಡಿದಳು!" ಎಂದು ನುಡಿಯುತ್ತಿದ್ದರು. ಆಗ ತನ್ನ ವಿನಯಾದಿ ಗುಣಸಂಪತ್ತಿಯನ್ನೂ ಸಚ್ಚರಿತ್ರಗಳನ್ನೂ ವರ್ಣಿಸುವ ಮಾತುಗಳನ್ನು ಕೇಳುತ್ತ ಹರ್ಷದಿಂದ ಶ್ರೀರಾಮನು ರಥಾರೂಢನಾಗಿ ಬರುತ್ತಿದ್ದನು. ಮತ್ತು ಆ ಜನಗಳು ಒಬ್ಬರಿಗೊಬ್ಬರು ಈತನು ಪಟ್ಟಾಭಿಷಿಕ್ತನಾಗಿ ಸಮಸ್ತ ಭೂಮಂಡಲವನ್ನೂ ಪರಿಪಾಲಿಸಿದರೆ ನಮಗೆಲ್ಲರಿಗೂ ರಕ್ಷಕನಾಗುವನು. ಈತನು ಭೂಮಂಡಲಕ್ಕೆ ಒಡೆಯನಾದಪಕ್ಷದಲ್ಲಿ ಸಮಸ್ತ ಪ್ರಾಣಿಗಳಿಗೂ ದೊಡ್ಡ ಲಾಭವಾಗುವುದು. ಈತನು ರಾಜ್ಯವನ್ನಾಳಿದರೆ ಒಬ್ಬ ಪ್ರಾಣಿಗಾದರೂ ದುಃಖವಿರುವುದಿಲ್ಲ. ಒಬ್ಬರಿಂದೊಬ್ಬರಿಗೆ ಬಾಧೆಯಿರುವುದಿಲ್ಲ ಎಂದು ಮಾತನಾಡಿಕೊಳ್ಳುತ್ತಿದರು. ಶ್ರೀರಾಮನು ಅದನ್ನು ಕೇಳುತ್ತ ಚತುರಂಗಬಲಸಮೇತನಾಗಿ ಮನೋಹರವಾದ ರಾಜಬೀದಿಯನ್ನು ನೋಡುತ್ತ ತೆರಳಿದನು.



೧೭ ನೆಯ ಅಧ್ಯಾಯ

## ಶ್ರೀರಾಮನು ಮೆರವಣಿಗೆಯಲ್ಲಿ ದಶರಥರಾಜನ ಅರಮನೆಗೆ ಹೋದದ್ದು

ಈ ಪ್ರಕಾರದಲ್ಲಿ ಶ್ರೀರಾಮನು ಸುಲಕ್ಷಣಯುಕ್ತವಾದ ರಥವನ್ನೇರಿ ಬಿಳುಪಾದ ಮೋಡಗಳಂತೆ ಒಪ್ಪುವ ಭವನಗಳಿಂದ ಶೋಭಿಸುವ ಅಯೋಧ್ಯಾಪಟ್ಟಣದ ರಾಜಮಾರ್ಗವನ್ನೈದಿ ಅಲ್ಲಲ್ಲಿ ಮಂಗಳಾರ್ಥವಾಗಿ ಸ್ತ್ರೀಯರಿಂದ ಚಲ್ಲಲ್ಪಟ್ಟ ಮೊಸರು ಅಕ್ಷತೆ ಅರಳು ಪುಷ್ಪಾದಿಗಳಿಂದ ಅತ್ಯಂತ ಶೋಭಾಯಮಾನಗಳಾದ ರಾಜಬೀದಿಗಳನ್ನು ನೋಡುತ್ತ ಹೋದನು. ಅಲ್ಲಲ್ಲಿ ವೇದಸಂಪನ್ನರಾದ ಬ್ರಾಹ್ಮಣರು ಆಪ್ತಜನರು ಮೊದಲಾದವರು "ಶ್ರೀರಾಮ, ನಿನ್ನ ಪಿತಾಮಹ ಪ್ರಪಿತಾಮಹಾದಿಗಳಿಂದ ಪರಿಪಾಲಿಸಲ್ಪಟ್ಟ ಚತುಸ್ಸಮುದ್ರಪರ್ಯಂತವಾದ ಭೂಮಂಡಲವನ್ನು ಪರಿಪಾಲಿಸು! ಪೂರ್ವದ ರಾಜರು ಯಾವಪ್ರಕಾರದಲ್ಲಿ ನಮ್ಮನ್ನು ರಕ್ಷಿಸಿದರೋ ಆ ರೀತಿಯಲ್ಲಿ ನಮ್ಮನ್ನು ರಕ್ಷಿಸಿಕೊಂಡು ಸುಖದಲ್ಲಿರು. ನೀನು ಪಟ್ಟಾಭಿಷೇಕೋತ್ಸವಕ್ಕೆ ಮೆರವಣಿಗೆಯಲ್ಲಿ ಬರುವ ಉತ್ಸವವನ್ನು ಕಂಡು ನಾವು ಕೃತಾರ್ಥರು. ನಾವು ಜನ್ಮಾಂತರದಲ್ಲಿ ಅನೇಕ ಪುಣ್ಯವನ್ನು ಮಾಡಿದಂಥವರು! ನಿನ್ನ ಪಟ್ಟಾಭಿಷೇಕೋತ್ಸವವನ್ನು ನೋಡುವುದರಿಂದ ಅಧಿಕವಾದ ಶ್ರೇಯಸ್ಸುಂಟಾಗುವುದು. ನೀನು ಸುಖವಾಗಿ ಪಟ್ಟಾಭಿಷಿಕ್ತನಾಗಿ ಸಮಸ್ತ ರಾಜರಿಗೂ ಪೂಜ್ಯನಾಗಿ ದಿನದಿನಕ್ಕೆ ಅಭಿವೃದ್ಧಿಯನ್ನು ಪಡೆದು ರಾಜ್ಯವನ್ನು ಪರಿಪಾಲಿಸು!" ಎಂದು ಆಶೀರ್ವಾದಗಳನ್ನು ಮಾಡುತ್ತಿದ್ದರು. ಅಲ್ಲಿದ್ದ ಒಬ್ಬನಿಗೂ ತನ್ನ ಮನಸ್ಸನ್ನಾಗಲಿ ಕಣ್ಣುಗಳನ್ನಾಗಲಿ ಆ ಪುರುಷೋತ್ತಮನಿಂದ ಹಿಂದೆಗೆದುಕೊಳ್ಳಲು ಸಾಧ್ಯ

ವಾಗಲಿಲ್ಲ. ರಾಮನು ಮುಂದೆ ಸಾಗಿದರೂ ಪ್ರಜೆಗಳ ಕಣ್ಣುಗಳು ಅತ್ತಕಡೆಯೇ ಇದ್ದವು. ಯಾರು ರಾಮನನ್ನು ನೋಡಲಿಲ್ಲವೊ ಯಾರನ್ನು ರಾಮನು ನೋಡಲಿಲ್ಲವೊ ಅವರು ಅಧಮರೆಂದು ಆ ಪ್ರಜೆಗಳು ತಿಳಿದುಕೊಂಡಿದ್ದರು. ಏಕೆಂದರೆ, ಆ ಧರ್ಮಾತ್ಮನು ಸರ್ವಜಾತಿಯವರಲ್ಲಿಯೂ ದಯೆಯನ್ನಿಟ್ಟಿದ್ದನು. ಆದ್ದರಿಂದ ಅವರೆಲ್ಲರೂ ಶ್ರೀರಾಮನಲ್ಲಿ ನಿಷ್ಠಾವಂತರಾಗಿದ್ದರು. ಶ್ರೀರಾಮನು ಪ್ರಜೆಗಳ ಮಾತನ್ನು ಆಲಿಸುತ್ತ ಪ್ರಯಾಣಮಾಡಿ ಮೇಘಮಂಡಲದೋಪಾದಿಯಲ್ಲಿಯೂ ಕೈಲಾಸ ಪರ್ವತದ ಕೋಡುಗಲ್ಲುಗಳೋಪಾದಿಯಲ್ಲಿಯೂ ಗಗನಮಂಡಲವನ್ನು ತುಡುಕುತ್ತಲಿರುವ ಬಿಳುಪಾದ ಉಪ್ಪರಿಗೆಗಳಿಂದಲೂ ಅನೇಕ ರತ್ನಖಚಿತವಾದ ಗವಾಕ್ಷಗಳಿಂದಲೂ ಅಲಂಕರಿಸಲ್ಪಟ್ಟ ಮೇಲುಮಾಳಿಗೆಗಳಿಂದಲೂ ಭೂಲೋಕಕ್ಕೆ ಬಂದ ದೇವೇಂದ್ರನ ಅರಮನೆಯೋ ಎಂಬಂತೆ ಮನೋಹರವಾದ ದಶರಥರಾಜನ ಅರಮನೆಯನ್ನು ಕಂಡನು. ಕೂಡಲೆ ರಥದಿಂದಿಳಿದು ಕುದುರೆಯನ್ನೇರಿ ಶಸ್ತ್ರಾಸ್ತ್ರಪ್ರವೀಣರಾದ ರಾಜಭಟರಿಂದ ಪರಿಪಾಲಿಸಲ್ಪಟ್ಟ ಮೂರು ಪಡಸಾಲೆಗಳನ್ನು ದಾಟಿ ಕುದುರೆಯಿಂದಿಳಿದು ಕಾಲುನಡೆಯಿಂದ ಮತ್ತೆರಡು ಪಡಸಾಲೆಗಳನ್ನು ದಾಟಿದನು. ಅಲ್ಲಿ ತನ್ನ ಸಂಗಡ ಬಂದ ಸಮಸ್ತಜನರನ್ನೂ ನಿಲ್ಲಿಸಿ ಅಂತಃಪುರವನ್ನೈದಿ ತನ್ನ ತಂದೆಯಾದ ದಶರಥರಾಜನನ್ನು ಕಂಡನು. ಅರಮನೆಯ ಹೊರಗಡೆಯಿದ್ದ ಜನರು ಸಮುದ್ರವು ಚಂದ್ರೋದಯಕ್ಕೆ ಕಾಯುವಂತೆ ಶ್ರೀರಾಮನು ಯಾವಾಗ ಅಂತಃಪುರದಿಂದ ಹೊರಟು ಬರುವನೆಂದು ಆತನ ಬರವಿಗಾಗಿ ಕಾಯುತ್ತಿದ್ದರು.



೧೮ ನೆ ಯ ಅ ಧ್ಯಾ ಯ

## ಕೈಕೇಯೀದೇವಿಯು ಶ್ರೀರಾಮನನ್ನು ವನವಾಸಕ್ಕೆ ಹೋಗಬೇಕೆಂದದ್ದು

ಆಮೇಲೆ ಶ್ರೀರಾಮನು ಶುಭವಾದ ಪೀಠದಲ್ಲಿ ಕುಳಿತು ಕದಪಿನಲ್ಲಿ ಕೈಯಿಟ್ಟುಕೊಂಡು ಮುಖ ಕಾಂತಿಗುಂದಿದ್ದ ತನ್ನ ತಂದೆಯಾದ ದಶರಥರಾಯನನ್ನೂ ತನ್ನ ಬಲತಾಯಿಯಾದ ಕೈಕೇಯೀದೇವಿಯನ್ನೂ ಕಂಡನು. ಅನಂತರ ಸದ್ವಿನಯ ಭಯಭಕ್ತಿಗಳಿಂದ ಆ ರಾಯನ ಚರಣಾರವಿಂದಗಳಿಗೆ ಸಾಷ್ಟಾಂಗನಮಸ್ಕಾರಗಳನ್ನು ಮಾಡಿ ಕೈಕೇಯೀದೇವಿಗೂ ಸಾಷ್ಟಾಂಗಪ್ರಣಾಮವನ್ನು ಮಾಡಿ ಕೈಮುಗಿದು ನಿಂತನು. ಆತನನ್ನು ಕಂಡು ದಶರಥರಾಯನು ಕಣ್ಣೀರು ತುಂಬಿ "ರಾಮ" ಎಂಬ ನಾಮಮಾತ್ರವನ್ನೇ ನುಡಿದು ದುಃಖಾತಿಶಯದಿಂದ ಮುಖವೆತ್ತಿ ನೋಡುವುದಕ್ಕೂ ಚೈತನ್ಯವಿಲ್ಲದೆ ಕಾಂತಿಗುಂದಿದನು. ಆಗ ಶ್ರೀರಾಮನು ಮಲಗಿದ್ದ ಸರ್ಪವನ್ನು ಮೆಟ್ಟಿದಂತೆ ಭಯಪಟ್ಟನು. ದಶರಥನು ದುಃಖಾತಿಶಯದಿಂದಲೂ ಕೋಪೋದ್ರೇಕದಿಂದಲೂ ನಿಟ್ಟುಸಿರುಬಿಡುತ್ತ ಅತಿಕ್ಷೋಭವುಂಟಾದ ಸಮುದ್ರರಾಜನ ಹಾಗೆ ಕಳವಳಗೊಂಡು ರಾಹುಗ್ರಸ್ತನಾದ ಚಂದ್ರನಂತೆಯೂ ಹುಸಿಯಾಡಿದ ಋಷಿಯಂತೆಯೂ ಅತ್ಯಂತ ಚಿಂತಾಕ್ರಾಂತನಾಗಿದ್ದನು. ಅದನ್ನು ಕಂಡು ಪಿತೃಭಕ್ತನಾದ ಶ್ರೀರಾಮನು ಪರ್ವಕಾಲದ ಸಮುದ್ರದಂತೆ ಅಶಾಂತನಾಗಿ "ಇದೇನು ಆಶ್ಚರ್ಯ! ನನ್ನ ತಂದೆಯು ನನ್ನೊಡನೆ ಸಂಭಾಷಣೆ ಮಾಡದೆ ಇದ್ದಾನೆ! ನನ್ನನ್ನು ಕಂಡರೆ ಹುಣ್ಣಿಮೆಯ ಚಂದ್ರನನ್ನು ಕಂಡ ಸಮುದ್ರದ ಹಾಗೆ ಸಂತೋಷದಿಂದ ಹಿಗ್ಗಿ ನಲಿದು ಮುದ್ದಾಡಿ ಪ್ರಸನ್ನನಾಗಿ ಮಾತನಾಡಿಸುತ್ತಿದ್ದನು. ಅಂಥ ರಾಯನು ಈಗ ನನ್ನನ್ನು ಕಂಡು ಕಣ್ಣೀರು ತುಂಬಿ ನನ್ನನ್ನು ನೋಡದೆಯೂ ಸಂಭಾಷಣೆ

ಮಾಡದೆಯೂ ಇದ್ದಾನೆ ! ಇದೇನು ಕಾರಣವೊ ತಿಳಿಯಲಿಲ್ಲ " ಎಂದು ಯೋಚಿಸಿ ಕಂಗೆಟ್ಟು ಮುಖ ಕಾಂತಿಗುಂದಿದನು. ಆಮೇಲೆ ಅತಿಭಯದಿಂದ ಕೈಕೇಯಿದೇವಿಯನ್ನು ನೋಡಿ ಕೈಮುಗಿದು ಆಕೆಯನ್ನು ಕುರಿತು " ಅಮ್ಮ, ಮಹಾರಾಜನಿಗೆ ಶರೀರದಲ್ಲಿ ಏನಾದರೂ ತೊಂದರೆಯಾಗಿದೆಯೆ ? ನಾನೇನಾದರೂ ಅಪರಾಧವನ್ನು ಮಾಡಿದೆನೆ ? ಯಾವ ಕಾರಣ ನನ್ನಮೇಲೆ ಕೋಪಿಸಿಕೊಂಡು ಮಾತನಾಡದಿದ್ದಾನೆಯೋ ತಿಳಿಯಲಿಲ್ಲ. ನೀನು ಸಮಾಧಾನವನ್ನು ಹೇಳಿ ಆತನ ಕೋಪವನ್ನು ಶಾಂತಮಾಡು. ನನ್ನಲ್ಲಿ ಯಾವಾಗಲೂ ಬಹಳ ಪ್ರೀತಿಯುಳ್ಳ ಮಹಾರಾಜನು ನನ್ನೊಡನೆ ಮುಖ ಗೊಟ್ಟು ಮಾತನಾಡದಿದ್ದಾನೆ. ಈತನಿಗೆ ಏನಾದರೂ ಮನೋವ್ಯಥೆಯುಂಟಾಗಿದೆಯೆ ? ಅಥವಾ ದೈಹಿಕವಾದ ಆಲಸ್ಯವಾಗಿದೆಯೆ ? ಒಡಹುಟ್ಟಿದವರಾದ ಭರತಶತ್ರುಘ್ನಾದಿಗಳಿಗೆ ಅನಾರೋಗ್ಯ ವೆಂದೂ ಕೇಳಲಿಲ್ಲ. ನಾನು ಅತ್ಯಂತ ಭಯಭಕ್ತಿಗಳಿಂದ ನನ್ನ ತಂದೆಯ ಸೇವೆಯನ್ನು ಮಾಡುತ್ತಿರುವೆನು. ಈತನು ನನ್ನಲ್ಲಿ ಅತ್ಯಂತ ವಾತ್ಸಲ್ಯದಿಂದಿರುವನು. ಇಂಥ ಮಹಾರಾಜನು ಈಗ ಕೋಪಿಸಿಕೊಂಡು ಮುಖದಿರುಗಿ ನೋಡದೆ ಇರುವಪಕ್ಷದಲ್ಲಿ ನಾನು ಜೀವಿಸಿರಲಾರೆನು. ಕಾರಣವಿಲ್ಲದೆ ಕೋಪವು ಹುಟ್ಟಲಾರದು. ನೀನೇನಾದರೂ ಕೋಪಿಸಿಕೊಂಡು ನಿಷ್ಠುರವಾಗಿ ನುಡಿದೆಯಾ ? ಈ ವಿಷಯ ವನ್ನು ನನಗೆ ತಿಳಿಯಹೇಳಬೇಕು " ಎಂದು ಕೇಳಿದನು.

ಆ ಮಾತನ್ನು ಕೇಳಿ ಕೈಕೇಯಿಯು ಲಜ್ಜೆಯನ್ನು ಬಿಟ್ಟು ಅಹಿತವಾದ ಮಾತುಗಳಿಂದ ಶ್ರೀರಾಮನನ್ನು ಕುರಿತು ಹೀಗೆಂದಳು : " ರಾಮ, ನಿನ್ನ ತಂದೆಯಾದ ದಶರಥರಾಯನಿಗೆ ಯಾವ ಕೋಪವೂ ಇಲ್ಲ. ಶರೀರದಲ್ಲಿ ಆಲಸ್ಯವೂ ಇಲ್ಲ ! ಆದರೆ ಮನಸ್ಸಿನಲ್ಲಿ ಒಂದು ಕಾರ್ಯವನ್ನು ಯೋಚಿಸಿ ನಿನ್ನ ಸಂಗಡ ಹೇಳುವುದಕ್ಕೆ ಅಂಜಿಕೊಂಡಿದ್ದಾನೆ. ಆ ಕಾರ್ಯವು ನಿನಗೆ ವ್ಯಥೆಯನ್ನುಂಟು ಮಾಡುವಂಥದು. ಆದ್ದರಿಂದ ಈತನಿಗೆ ಮಾತು ಹೊರಡಲಿಲ್ಲ. ಆ ಕಾರ್ಯವನ್ನು ನಾನು ಬಲ್ಲೆನು. ಪೂರ್ವದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ಯುದ್ಧವಾದಾಗ ಈ ರಾಯನು ದೇವತೆಗಳ ಸಹಾಯಕ್ಕೆ ಹೋಗಿ ಪರಬಲದಿಂದ ಘಾಯಪಟ್ಟು ಮುರಿದು ಮೂರ್ಛೆಯನ್ನೈದಿದನು. ಆ ಸಮಯದಲ್ಲಿ ನಾನು ಈತನನ್ನು ಸ್ಥಳಾಂತರವನ್ನೈದಿಸಿ ರಕ್ಷಿಸಿದೆನು. ಆಗ ನನಗೆ ಎರಡು ವರಗಳನ್ನು ಕೊಟ್ಟನು. ಈಗ ನೀರು ಹೋದಮೇಲೆ ಕಟ್ಟೆಯನ್ನು ಕಟ್ಟುವಂತೆ ಕೊಟ್ಟ ವರಗಳಿಗೆ ಪ್ರತೀಕಾರವನ್ನು ಚಿಂತಿಸು ತ್ತಿದ್ದಾನೆ. ಲೋಕದಲ್ಲಿ ಸತ್ಯಸಂಧರಾದವರು ಆಡಿದ ಮಾತಿಗೆ ತಪ್ಪರು. ಅಂಥ ಸತ್ಯವನ್ನು ತಪ್ಪಬಾರದೆಂದು ಕಾರ್ಯಾಂತರವನ್ನು ಆಲೋಚಿಸುತ್ತಿದ್ದಾನೆ. ನೀನು ಹಿತವಾದರೂ ಅಹಿತವಾದರೂ ಮನಸ್ಸಿನಲ್ಲಿ ವ್ಯಥೆಪಡುವುದಿಲ್ಲವೆಂದು ನುಡಿದರೆ ಆ ಕಾರ್ಯವನ್ನು ಹೇಳುತ್ತೇನೆ. ದಶರಥರಾಯನು ನಿನ್ನ ಮನಸ್ಸಿಗೆ ಕೋಪವುಂಟಾಗುವುದೆಂದು ಹೇಳಲಂಜಿಕೊಂಡಿದ್ದಾನೆ " ಎಂದು ನುಡಿದಳು.

ಆ ಮಾತನ್ನು ಕೇಳಿ ಶ್ರೀರಾಮನು ತನ್ನ ತಂದೆಯಾದ ದಶರಥರಾಯನ ಸಂಮುಖದಲ್ಲಿ ಕೈಕೇಯಿದೇವಿಯನ್ನು ಕುರಿತು ಹೀಗೆ ನುಡಿದನು : " ಅಮ್ಮ, ನೀನೂ ನನ್ನನ್ನು ತಂದೆಯ ಮಾತಿಗೆ ಪ್ರತಿವಚನವನ್ನು ನುಡಿಯುವವನೆಂದು ಹೇಳಬಹುದೆ ! ಹಾಗಾದರೆ ನನ್ನ ಜನ್ಮಕ್ಕೆ ಧಿಕ್ಕಾರ. ಇದು ನಿನಗೆ ಉಚಿತವಲ್ಲ. ಈತನು ಉರಿಯುವ ಕಿಚ್ಚಿನಲ್ಲಿ ಬೀಳಹೇಳಿದರೂ ನಾನು ಬೀಳುವೆನು. ವಿಷಭಕ್ಷಣವನ್ನು ಮಾಡಹೇಳಿದರೂ ಮಾಡುವೆನು. ಸಮುದ್ರದಲ್ಲಿ ಬೀಳಹೇಳಿದರೂ ಬೀಳುವೆನು. ನಾನು ತಂದೆಯ ಮಾತನ್ನು ಮೀರುವವನಲ್ಲ. ನಿನಗೆ ಸಂಕೋಚವು ಬೇಡ. ಮಹಾರಾಜನ ಮನಸ್ಸಿನಲ್ಲಿರುವ ಕಾರ್ಯವನ್ನು ಹೇಳು. ನಾನು ಆಡಿದ ಮಾತನ್ನು ತಪ್ಪುವವನಲ್ಲವೆಂಬುದನ್ನು ನೀನು ಬಲ್ಲೆ " ಎಂದು ವಿನಯದಿಂದ ನುಡಿದನು.

ಕೈಕೇಯಿದೇವಿಯು ಅತ್ಯಂತ ಭಯಂಕರವಾಗಿ ಕರ್ಣಕಠೋರವಾಗಿ ಆತನನ್ನು ಕುರಿತು "ಹಾಗಾದರೆ ಕೇಳು; ಶ್ರೀರಾಮ, ಮಹಾರಾಜನು ಮೆಚ್ಚಿ ನನಗೆ ಕೊಟ್ಟ ಎರಡು ವರಗಳಲ್ಲಿ ಈಗ ಭರತನಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದೂ ನೀನು ಜಡೆಗಳನ್ನು ಧರಿಸಿ ನಾರುಡಿಗೆಯನ್ನುಟ್ಟು ಕೊಂಡು ಹದಿನಾಲ್ಕು ವರುಷಗಳು ವನವಾಸಕ್ಕೆ ಹೋಗುವ ಹಾಗೆ ಮಾಡಬೇಕೆಂದೂ ಬೇಡಿಕೊಂಡೆನು. ನೀನು ನಿನ್ನ ತಂದೆಯ ಪ್ರತಿಜ್ಞೆಯನ್ನು ಸಲ್ಲಿಸಲೆಣಿಸುವ ಪಕ್ಷದಲ್ಲಿ ಸತ್ಯಸಂಧನಾದ ನಿನ್ನ ತಂದೆಯ ಮಾತು ಸತ್ಯವಾಗುವ ಹಾಗೆ ಹದಿನಾಲ್ಕು ವರುಷಗಳು ವನವಾಸಕ್ಕೆ ತೆರಳು. ದಶರಥರಾಯನು ನಿನಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕಾಗಿ ಸಂಪಾದಿಸಿದ ವಸ್ತುಗಳಿಂದ ಭರತನಿಗೆ ಪಟ್ಟಾಭಿಷೇಕವನ್ನು ಮಾಡಲಿ. ಭರತನು ನಾನಾ ಪ್ರಕಾರವಾದ ಅಶ್ವ ರಥ ಗಜ ರತ್ನ ಮೊದಲಾದ ವಸ್ತುಗಳಿಂದ ಪರಿವೃತವಾದ ಈ ದೇಶವನ್ನು ಪರಿಪಾಲಿಸಿ ಕೊಂಡು ಸುಖದಿಂದಿರಲಿ. ನಿನ್ನ ತಂದೆಯು ಈ ವಿಷಯವನ್ನು ನಿನಗೆ ಹೇಳುವುದಕ್ಕೆ ಸಂಕೋಚಪಡುತ್ತ ಮುಖವೆತ್ತಿ ನೋಡಿ ನಿನ್ನೊಡನೆ ಮಾತನಾಡದೆ ಇದ್ದಾನೆ. ಇದೇ ಆತನ ಮನಸ್ಸಿನಲ್ಲಿರುವ ಕಾರ್ಯಸ್ಥಿತಿ. ನೀನು ಸತ್ಯಸಂಧನಾದ ಕಾರಣ ದಶರಥರಾಯನ ಪ್ರತಿಜ್ಞೆಯನ್ನು ಪರಿಪಾಲಿಸು" ಎಂದು ನುಡಿದಳು. ಇದನ್ನು ಕೇಳಿ ರಾಮನಿಗೆ ಶೋಕವಾಗಲಿ ಸಂಕಟವಾಗಲಿ ಆಗಲಿಲ್ಲ. ರಾಜನು ಮಾತ್ರ ಪುತ್ರವ್ಯಸನದಿಂದ ಕಾಯ್ದು ಹೋದನು.



## ೧೯ ನೆ ಯ ಅ ಧ್ಯಾ ಯ

## ಶ್ರೀ ರಾ ಮ ನು ವ ನ ವಾ ಸ ಕ್ಕೆ ಒ ಪ್ಪಿ ದು ದು

ಆಮೇಲೆ ಸತ್ಯಸಂಧನಾದ ಶ್ರೀರಾಮನು ಕರ್ಣಕಠೋರವಾಗಿ ಮರಣೋಪಮವಾದ ಕೈಕೇಯಿದೇವಿಯ ಮಾತನ್ನು ಕೇಳಿ ಮನಸ್ಸಿನಲ್ಲಿ ವ್ಯಥೆಪಡದೆ ಹೀಗೆಂದನು; "ತಾಯಿ, ನನ್ನ ತಂದೆಯಾದ ದಶರಥರಾಯನು ಆಡಿದ ಮಾತು ಅಸತ್ಯವಾಗಬಾರದು. ಈತನು ನನ್ನೊಡನೆ ಏಕೆ ಈ ಕಾರ್ಯವನ್ನು ಹೇಳಲಿಲ್ಲ? ನೀನು ಕೋಪಮಾಡಬೇಡ. ನಿನ್ನ ಕಣ್ಣುಮುಂದೆಯೇ ನಾನು ಜಟಾಧಾರಿಯಾಗಿ ನಾರುಡಿಗೆಯನ್ನುಟ್ಟು ದಶರಥರಾಯನ ಆಜ್ಞೆಯಿಂದ ವನವನ್ನೈದುವೆನು. ಆ ರಾಯನು ಒಂದು ಕಾರ್ಯವನ್ನು ಆಜ್ಞಾಪಿಸಿದ ಪಕ್ಷದಲ್ಲಿ ಅದನ್ನು ನಾನು ಮಾಡದಿರುವವನಲ್ಲ. ಆತನ ಮನಸ್ಸಿನಲ್ಲಿರುವ ವ್ಯಥೆಯು ನನ್ನನ್ನು ದಹಿಸುತ್ತಿದೆ. ಆ ರಾಯನು ಏನು ಹೇಳಿದರೂ ನಾನು ಪರಿಪಾಲಿಸುವೆನಲ್ಲದೆ ಪ್ರತ್ಯುತ್ತರವನ್ನು ಕೊಡುವವನಲ್ಲ. ಆತನು ಭರತನಿಗೆ ಪಟ್ಟಾಭಿಷೇಕ ವನ್ನು ಮಾಡಲಿ. ನಾನು ಆತನು ಸೀತೆಯನ್ನು ಬಿಡಹೇಳಿದರೂ ಸಮಸ್ತ ಧನಧಾನ್ಯಗಳನ್ನು ಬಿಡಹೇಳಿದರೂ ಬಿಡುವೆನಲ್ಲದೆ ಎದುರಾಡುವುದಿಲ್ಲ. ದಶರಥರಾಯನು ಭರತನಿಗೆ ಪಟ್ಟಾಭಿಷೇಕವನ್ನು ಮಾಡಿ ಸಮಸ್ತ ರಾಜ್ಯಭಾರವನ್ನೂ ಆತನ ವಶಪಡಿಸಲಿ. ಮಹಾರಾಜನು ಅಧೋಮುಖನಾಗಿ ಕಣ್ಣೀರು ತುಂಬಿಕೊಂಡು ನನ್ನನ್ನು ಮುಖವೆತ್ತಿ ನೋಡದಿದ್ದಾನೆ; ನೀನು ನನ್ನನ್ನು ನೋಡಿ ನನ್ನ ಸಂಗಡ ಸಂಭಾಷಣೆಮಾಡುವಂತೆ ಸಮಾಧಾನ ಹೇಳು; ಈ ಕ್ಷಣದಲ್ಲಿ ಭರತನನ್ನು ಆತನ ಮಾವನ ಮನೆಯಿಂದ ಕರೆತರಲು ಅಶ್ವಾರೋಹಿಗಳಾದ ದೂತರನ್ನು ಕಳುಹಿಸಿ. ನಾನು ಮನಸ್ಸಿನಲ್ಲಿ ಸಂಕೋಚವಿಲ್ಲದೆ ವನಕ್ಕೆ ಹೋಗಿ ಹದಿನಾಲ್ಕು ವರುಷಗಳವರೆಗೆ ಕಾಲವನ್ನು ಕಳೆಯುವೆನು. ನಾನು ದಶರಥರಾಯನ ಆಜ್ಞೆಯನ್ನು ಮೀರುವವನಲ್ಲ" ಎಂದು ನುಡಿದನು.

ಕೈಕೇಯಿಾದೇವಿಯು ಅತ್ಯಂತ ಸಂತೋಷಪಟ್ಟು "ಶ್ರೀರಾಮ, ಬಹಳ ಒಳ್ಳೆಯದಾಯಿತು. ನೀನು ಸತ್ಯವಂತನು. ಈಗಲೇ ಭರತನನ್ನು ಸೋದರಮಾವನ ಮನೆಯಿಂದ ಕರೆಕಳುಹಿಸುತ್ತೇನೆ. ನೀನು ವನಕ್ಕೆ ಶೀಘ್ರದಲ್ಲಿ ತೆರಳು. ತಾಮಸ ಮಾಡಬೇಡ. ದಶರಥರಾಯನು ಮೊದಲು ನಿನಗೆ ಪಟ್ಟಾಭಿಷೇಕವನ್ನು ಮಾಡುವುದಾಗಿ ಸಮಸ್ತ ವಸ್ತುಗಳನ್ನು ತರಿಸಿ ಈಗ ವನವಾಸಕ್ಕೆ ಕಳುಹಿಸ ಬೇಕಾದ್ದರಿಂದ ನಿನ್ನ ಸಂಗಡ ಮಾತನಾಡಲಂಜಿಕೊಂಡಿದ್ದಾನೆ. ನೀನು ಪಟ್ಟಣದಿಂದ ಹೊರಟು ವನಕ್ಕೆ ಹೋಗುವವರೆಗೆ ಈತನ ಮನೋವ್ಯಥೆಯು ತೀರದು. ಅದುವರೆಗೂ ಸ್ನಾನ ಭೋಜನ ಭೋಗ್ಯವಸ್ತುಗಳನ್ನು ಕೈಗೊಳ್ಳನು ; ಆತನು ಅತ್ಯಂತ ಶೋಕದಿಂದ ನಿಟ್ಟುಸಿರುಬಿಡುತ್ತಿದ್ದಾನೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ದಶರಥನು ಸುವರ್ಣಮಯವಾದ ಮಂಚದ ಮೇಲೆ ಮೂರ್ಛಿತನಾಗಿ ಬಿದ್ದನು. ಆಗ ಶ್ರೀರಾಮನು ದಶರಥರಾಯನನ್ನು ಕೈಹಿಡಿದೆಬ್ಬಿಸಿದನು. ದುಷ್ಟೆಯಾದ ಕೈಕೇಯಿಾದೇವಿಯ ಕರ್ಣಕಠೋರವಾದ ಮಾತನ್ನು ಕೇಳಿ ಕೋಲುಪೆಟ್ಟುತಾಕಿದ ಉತ್ತಮಾಶ್ವದಂತೆ ತ್ವರಿತವಾಗಿ ವನವನ್ನೈದುವುದಕ್ಕೆ ಶ್ರೀರಾಮನು ನಿಶ್ಚಯಿಸಿ ಮನಸ್ಸಿನಲ್ಲಿ ಕಿಂಚಿನ್ಮಾತ್ರವಾದರೂ ವ್ಯಥೆಯಿಲ್ಲದೆ ಕೈಕೇಯಿಾದೇವಿಯನ್ನು ಕುರಿತು ಹೇಳಿದನು : "ಎಲೌ ತಾಯೆ, ನಾನು ಅರ್ಥವನ್ನು ಬಯಸುವವನಲ್ಲ ; ಆದ್ದರಿಂದ ರಾಜ್ಯಾಧಿಪತ್ಯವನ್ನು ಬಯಸೆನು. ಧರ್ಮದಲ್ಲಿಯೇ ತತ್ಪರನಾದ ನನ್ನನ್ನು ಋಷಿಗೆ ಸಮಾನನೆಂದು ತಿಳಿ. ಇದಲ್ಲದೆ ನಿನಗೆ ಪ್ರಿಯವಾದರೆ ನನ್ನ ಪ್ರಾಣಗಳನ್ನು ಬಿಟ್ಟಾದರೂ ಆ ಕಾರ್ಯವನ್ನು ಸಾಧ್ಯಮಾಡುತ್ತೇನೆ. ಲೋಕದಲ್ಲಿ ತಾಯಿತಂದೆಗಳ ಮಾತನ್ನು ಪಾಲಿಸುವುದಕ್ಕಿಂತಲೂ ಅಧಿಕವಾದ ಪುಣ್ಯವಿಲ್ಲ. ಎಲೌ ತಾಯೆ, ನನ್ನ ಗುಣಗಳನ್ನು ನೀನು ಬಲ್ಲೆ ; ದಶರಥರಾಯನ ಅಪ್ಪಣೆಯಿಲ್ಲದೆ ನನ್ನನ್ನು ನೀನು ವನವಾಸಕ್ಕೆ ಕಳುಹಿಸಿದರೂ ಹದಿನಾಲ್ಕು ವರುಷ ಗಳು ವನವಾಸಕ್ಕೆ ಹೊರಡುತ್ತೇನೆ. ನನ್ನ ತಂದೆಗೆ ಕೋಪವು ಬಂದ ಕಾರಣವನ್ನು ತಿಳುಹಿಸಿದರೆ ನಾನು ಆತನಿಗೆ ಸಮಾಧಾನವನ್ನು ಹೇಳಿ ಆತನ ಅನುಮತಿಯನ್ನು ಪಡೆದು ಈ ಕ್ಷಣದಲ್ಲಿಯೇ ದಂಡಕಾರಣ್ಯಕ್ಕೆ ಹೋಗುತ್ತೇನೆ ; ಭರತನು ರಾಜ್ಯವನ್ನಾಳುತ್ತಾ ತಂದೆಯ ಸೇವೆಯನ್ನು ಮಾಡಿ ಕೊಂಡು ಸುಖವಾಗಿರಲಿ !" ಎಂದು ರಾಮನು ಹೇಳಿದನು.

ಆ ಮಾತನ್ನು ಕೇಳಿ ದಶರಥರಾಯನು ಶೋಕಯುಕ್ತನಾಗಿ ಕಣ್ಣೀರು ಹರಿಸುತ್ತಾ ಗಟ್ಟಿಯಾಗಿ ರೋದನವನ್ನು ಮಾಡುತ್ತಿದ್ದನು. ಶ್ರೀರಾಮನು ಆತನ ಪಾದಗಳಿಗೂ ಕೈಕೇಯಿಾದೇವಿಯ ಪಾದಗಳಿಗೂ ಸಾಷ್ಟಾಂಗವೆರಗಿ, ದಶರಥರಾಯನು ಮಿತಿಮೀರಿದ ಶೋಕದಿಂದ ಎಚ್ಚರದಪ್ಪಿರುತ್ತಾ ನೆಂದು ತಿಳಿದನು. ಆಮೇಲೆ ಅಂತಃಪುರದಿಂದ ಹೊರಟು ಶೀಘ್ರವಾಗಿ ಎರಡು ಮೂರು ಬಾಗಿಲು ಗಳನ್ನು ದಾಟಿ ಹೊರಬಾಗಿಲ ಚಾವಡಿಯಲ್ಲಿದ್ದ ತನ್ನ ಮಿತ್ರರನ್ನು ಕಂಡು ನಡೆದ ವೃತ್ತಾಂತವನ್ನು ನುಡಿದನು. ಅದನ್ನು ಕೇಳಿ ಲಕ್ಷ್ಮಣನು ಅತ್ಯಂತ ಕುಪಿತನಾಗಿ ಕಣ್ಣುಗಳಲ್ಲಿ ನೀರು ತುಂಬಿಕೊಂಡು ಶ್ರೀರಾಮನ ಹಿಂದೆ ನಡೆದನು ! ಶ್ರೀರಾಮನು ತನ್ನ ಪಟ್ಟಾಭಿಷೇಕಾರ್ಥವಾಗಿ ತಂದ ವಸ್ತುಗಳಿಗೆ ಪ್ರದಕ್ಷಿಣೆಮಾಡಿ ತಿರುಗಿನೋಡದೆ ಉದಾಸೀನಬುದ್ಧಿಯುಳ್ಳವನಾಗಿ ಮುಂದೆ ಹೋದನು. ಆ ಸಮಯದಲ್ಲಿ ಆತನಿಗೆ ಪಟ್ಟಾಭಿಷೇಕಮಾಡುವ ಪ್ರಯತ್ನವು ನಿಲ್ಲಿಸಲ್ಪಟ್ಟಿತೆಂಬ ವಾರ್ತೆಯು ಜನಜನಿತವಾಗಿ ಹಬ್ಬಿತು ! ಆಗ ಆತನ ಮುಖಕಾಂತಿಯು ಹೆಚ್ಚಿತಲ್ಲದೆ ಕಡಮೆಯಾಗಲಿಲ್ಲ. ಸಮಸ್ತ ಲೋಕಗಳಿಗೂ ಮನೋಹರನಾದ ಶ್ರೀರಾಮನ ತನುಕಾಂತಿಯು ಶುಕ್ಲಪಕ್ಷದ ಚಂದ್ರನಂತೆ ಅತ್ಯಂತ ಸುಂದರವಾಗಿಯೇ ಕಾಣುತ್ತಿತ್ತು ! ಶ್ರೀರಾಮನಿಗೆ ರಾಜ್ಯಭಾರವು ತಪ್ಪಿದರೂ ಮನಸ್ಸಿನಲ್ಲಿ ವಿಕಾರವು ಹುಟ್ಟಲಿಲ್ಲ. ತನ್ನ ರಾಜಚಿಹ್ನಗಳಾದ ಶ್ವೇತಚ್ಛತ್ರ ಚಾಮರ ರಥ ವಾಹನಾದಿಗಳನ್ನೂ

ಊಳಿಗದವರು ಮೊದಲಾದವರನ್ನೂ ತೊರೆದು ಮನಸ್ಸಿನಲ್ಲಿ ಸಂತೋಷವನ್ನು ತಾಳಿ ತನ್ನ ತಾಯಿಯಾದ ಕೌಸಲ್ಯಾದೇವಿಗೆ ಕರ್ಣಕಠೋರವಾದ ಆ ವೃತ್ತಾಂತವನ್ನು ಹೇಳುವುದಕ್ಕಾಗಿ ಆಕೆಯ ಸಮೀಪಕ್ಕೆ ಹೋದನು.

ಆ ಸಮಯದಲ್ಲಿ ಅಯೋಧ್ಯಾಪಟ್ಟಣದಲ್ಲಿದ್ದ ಸಮಸ್ತ ಜನರೂ ಶ್ರೀರಾಮನ ಮುಖಕಾಂತಿಯನ್ನು ಕಂಡು "ಆಹಾ! ಶ್ರೀರಾಮನು ಎಂಥ ಧೀರಪುರುಷನು! ಪಟ್ಟಾಭಿಷೇಕೋತ್ಸವವು ನಿಂತು ದಂಡಕಾರಣ್ಯವಾಸ ಪ್ರಾಪ್ತವಾದರೂ ದುಃಖಪಡದಿದ್ದಾನೆ; ಇಂಥ ಧೀರಪುರುಷನು ಮತ್ತೊಬ್ಬನುಂಟೆ!" ಎಂದು ಕೊಂಡಾಡುತ್ತಿದ್ದರು.

ಆಗ ಶರತ್ಕಾಲದ ಹುಣ್ಣಿಮೆಯ ಚಂದ್ರನಂತೆ ಶ್ರೀರಾಮನ ಮುಖವು ಕಾಂತಿಗುಂದದಿತ್ತು. ಆತನು ಮಧುರೋಕ್ತಿಗಳಿಂದ ಸಮಸ್ತ ಜನರನ್ನೂ ಸಂತೋಷಪಡಿಸುತ್ತ ತಾಯಿಯಾದ ಕೌಸಲ್ಯಾದೇವಿಯ ಸಮೀಪವನ್ನೈದಿದನು. ಆತನಿಗೆ ವಿನಯಾದಿ ಸದ್ಗುಣಗಳಲ್ಲಿ ಸಮಾನನಾದ ಲಕ್ಷ್ಮಣನೂ ದುಃಖಾಕ್ರಾಂತನಾಗಿ ಆತನ ಸಂಗಡ ಕೌಸಲ್ಯಾದೇವಿಯ ಸಮೀಪಕ್ಕೆ ಹೋದನು. ಶ್ರೀರಾಮನು ತನಗೆ ಬಂದ ವಿಪತ್ತನ್ನು ತಿಳಿದವನಾದರೂ ಮನಸ್ಸಿನಲ್ಲಿ ಸಂತೋಷವನ್ನೇ ತಳೆದಿದ್ದನು: ತನ್ನ ಮಿತ್ರರಿಗೆ ಮನೋವ್ಯಥೆಯಾಗುವುದೆಂಬ ಶಂಕೆಯಿಂದ ಮನೋವಿಕಾರವನ್ನು ತಂದುಕೊಳ್ಳಲಿಲ್ಲ.



## ೨೦ ನೆಯ ಅಧ್ಯಾಯ

## ಶ್ರೀರಾಮನ ವನವಾಸಕ್ಕಾಗಿ ಕೌಸಲ್ಯಾದೇವಿಯ ಪ್ರಲಾಪ

ಈ ಪ್ರಕಾರವಾಗಿ ಶ್ರೀರಾಮನು ದಶರಥರಾಯನಿಗೆ ಕೈಮುಗಿದು ಅರಮನೆಯಿಂದ ಹೊರಡುವ ಸಮಯದಲ್ಲಿ ಅರಮನೆಯೊಳಗೆ ಮಹಾಶೋಕಪೂರ್ಣವಾದ ಕೋಲಾಹಲಧ್ವನಿಯುಂಟಾಯಿತು. ಆ ಅಂತಃಪುರದ ಸ್ತ್ರೀಯರು ಪರಸ್ಪರವಾಗಿ "ಅಕಟಕಟಾ! ಶ್ರೀರಾಮನು ಸಮಸ್ತ ಪ್ರಾಣಿಗಳಿಗೂ ಇಹದಲ್ಲಿ ಸುಖವನ್ನೂ ಪರದಲ್ಲಿ ಮೋಕ್ಷವನ್ನೂ ತೋರಿಸುವವನು; ಎಲ್ಲರಿಗಿಂತಲೂ ಯೋಗ್ಯನು. ಅಂಥವನನ್ನು ದಶರಥರಾಯನು ಸಮಸ್ತಲೋಕಗಳನ್ನೂ ರಕ್ಷಿಸಲು ಆಜ್ಞಾಪಿಸದೆಹೋದನು! ಶ್ರೀರಾಮನು ತನ್ನ ತಾಯಿಯಾದ ಕೌಸಲ್ಯಾದೇವಿಯಲ್ಲಿ ಎಷ್ಟು ವಿಶ್ವಾಸವಿಟ್ಟಿರುವನೋ ಅಷ್ಟೇ ವಿಶ್ವಾಸವನ್ನು ನಮ್ಮಲ್ಲಿಯೂ ಇಟ್ಟುಕೊಂಡಿದ್ದಾನೆ, ನಮ್ಮಲ್ಲೊಬ್ಬರನ್ನಾದರೂ ವ್ಯತ್ಯಾಸವಾಗಿ ಕಾಣುವವನಲ್ಲ; ಯಾರನ್ನೂ ನಿಷ್ಠುರವಾಗಿ ನುಡಿದು ಅವರಮೇಲೆ ಕೋಪಿಸುವವನಲ್ಲ. ಒಂದು ಸಾರಿಯಾದರೂ ಪರರ ಮನಸ್ಸಿಗೆ ನೋವಾಗುವ ವಾಕ್ಯಗಳನ್ನು ನುಡಿದವನಲ್ಲ. ಯಾರಾದರೂ ಕೋಪಿಸಿಕೊಂಡರೆ ಅವರನ್ನು ಸಮಾಧಾನಗೊಳಿಸಿ ಹಿತೋಪದೇಶವನ್ನು ಮಾಡುತ್ತಾನೆ. ಸಮಸ್ತ ಜನರಿಗೂ ಪ್ರಾಣಸ್ವರೂಪನಾಗಿ ಸಮಸ್ತರಿಗೂ ರಕ್ಷಕನಾದ ಶ್ರೀರಾಮನು ರಾಜ್ಯವನ್ನು ಪರಿಪಾಲಿಸದೆ ವನಕ್ಕೆ ಹೋಗುತ್ತಾನಲ್ಲ!" ಎಂದು ಕರುವನ್ನು ಕಾಣದ ಹಸುವಿನಂತೆ ಹಂಬಲಿಸುತ್ತ ರೋದನವನ್ನು ಮಾಡುತ್ತಿದ್ದರು. ದಶರಥರಾಯನು ಆ ಧ್ವನಿಯನ್ನು ಕೇಳಿ ಶೋಕದಿಂದ ಕಂಗೆಟ್ಟು ತಾನು ಕುಳಿತಿದ್ದ ಮಣಿಮಂಚದ ಮೇಲೆ ಒರಗಿ ಲಜ್ಜಿತನಾಗಿದ್ದನು.

ಇತ್ತ ಶ್ರೀರಾಮನು ವನವಾಸಕ್ಕೆ ಹೋಗಬೇಕೆಂದು ನಿಶ್ಚಯಿಸಿಕೊಂಡು ತನ್ನ ತಮ್ಮನಾದ ಲಕ್ಷ್ಮಣನೊಡನೆ ಕೌಸಲ್ಯಾದೇವಿಯ ಮನೆಗೆ ಬಿಜಯಂಗೈದು ಆ ಅರಮನೆಯ ಹೊರಬಾಗಿಲ

ಹಜಾರದಲ್ಲಿದ್ದ ಕುಲವೃದ್ಧರಾದ ಪ್ರಧಾನಿಗಳನ್ನು ಕಂಡನು. ಅವರು ತಮ್ಮ ಸುವರ್ಣ ಪೀಠಗಳಿಂದೆದ್ದು ವಂದನೆಗಳನ್ನು ಮಾಡಿ ಜಯ ಜಯ ಎಂದು ಕೊಂಡಾಡುತ್ತಿರಲು ಮೊದಲಂತರದ ಬಾಗಿಲನ್ನು ದಾಟಿ ಎರಡನೆಯ ಬಾಗಿಲಿಗೆ ಹೋದನು. ಅಲ್ಲಿದ್ದ ಶ್ರೀರಾಮನು ವೇದಾಧ್ಯಯನ ಸಂಪನ್ನರೂ ವೃದ್ಧರೂ ತನಗೆ ಆಪ್ತರೂ ಆದ ಬ್ರಾಹ್ಮಣರನ್ನು ಕಂಡು ಅವರಿಗೆ ಅಭಿವಂದಿಸಿ ಅವರ ಆಶೀರ್ವಾದಗಳನ್ನುಪಡೆದನು. ಅನಂತರ ಮೂರನೆಯ ಅಂತರದ ಬಾಗಿಲಲ್ಲಿ ವೃದ್ಧೆಯರಾಗಿ ಬಾಗಿಲನ್ನು ಕಾದುಕೊಂಡಿದ್ದ ಸ್ತ್ರೀಯರನ್ನು ಕಂಡು ಸನ್ಮಾನಿಸಿ ತನ್ನ ತಾಯಿಯಾದ ಕೌಸಲ್ಯಾದೇವಿಯ ಸಮೀಪಕ್ಕೆ ಹೋದನು. ಆಗ ಆ ದೇವಿಯು ಹಿಂದಣ ನಿಯಮಗಳಿಂದ ಪ್ರಾತಃಕಾಲದಲ್ಲಿ ಮಂಗಳ ಸ್ನಾನವನ್ನು ಮಾಡಿ ಬಿಳಿಯ ಪಟ್ಟೆಸೀರೆಯನ್ನುಟ್ಟು ತನ್ನ ಕುಮಾರನಿಗೆ ಶ್ರೇಯಸ್ಸಾಗಬೇಕೆಂದು ದೇವಪೂಜೆಯನ್ನು ಮಾಡಿ ವ್ರತಸ್ಥೆಯಾಗಿ ಋತ್ವಿಕ್ಕುಗಳಾದ ಬ್ರಾಹ್ಮಣರಿಂದ ಹೋಮವನ್ನು ಮಾಡಿಸುತ್ತ ತನ್ನ ಮಗನ ಬರವನ್ನು ನಿರೀಕ್ಷಿಸುತ್ತಿದ್ದಳು. ಶ್ರೀರಾಮನು ಮಂಗಳಕರವಾದ ಆ ಅಂತಃಪುರವನ್ನು ಪ್ರವೇಶಿಸಿ ಆ ದೇವಿಯು ಹೋಮಾರ್ಥವಾಗಿರಿಸಿಕೊಂಡಿದ್ದ ಸಮಿತ್ತು ತುಪ್ಪ ಮೊಸರು ಮೋದಕ ಹವಿಸ್ಸು ಲಾಜ ಅಕ್ಷತೆ ಪುಷ್ಪಮಾಲಿಕೆ ಪೂರ್ಣಕುಂಭಗಳು ಮೊದಲಾದ ಹೋಮದ್ರವ್ಯಗಳನ್ನು ನೋಡಿದನು; ಬ್ರಾಹ್ಮಣರ ಕೈಯಲ್ಲಿ ಹೋಮವನ್ನು ಮಾಡಿಸುತ್ತ ವ್ರತನಿಯಮದಿಂದ ಕೃಶಾಂಗಿಯಾಗಿದ್ದ ತಾಯಿಯನ್ನು ಕಂಡನು. ಆ ದೇವಿಯು ತನ್ನನ್ನು ಕಂಡು ಹೋಮಶಾಲೆಯಿಂದ ಹೊರಟುಬರಲು ರಾಮನು ಅತ್ಯಂತ ಭಯಭಕ್ತಿಯಿಂದ ಆಕೆಗೆ ಸಾಷ್ಟಾಂಗ ದಂಡಪ್ರಣಾಮವನ್ನು ಮಾಡಿದನು. ಕೌಸಲ್ಯಾದೇವಿಯು ತನ್ನ ಮಗನನ್ನು ತಬ್ಬಿಕೊಂಡು ಶಿರಸ್ಸನ್ನಾಘ್ರಾಣಿಸಿ ಪುತ್ರವಾತ್ಸಲ್ಯದಿಂದ ಆತನನ್ನು ನೋಡಿ "ಶ್ರೀರಾಮ, ನಿನಗೆ ನಿನ್ನ ಪೂರ್ವದ ಅರಸರ ಮಹಿಮೆಯುಂಟಾಗಲಿ. ನೀನು ಸತ್ಯಸಂಧನಾಗು. ಧರ್ಮಾತ್ಮನಾದ ದಶರಥರಾಯನನ್ನು ನೋಡು; ನಿನಗೆ ಪಟ್ಟಾಭಿಷೇಕವನ್ನು ಮಾಡುವನು! ಈ ರತ್ನಪೀಠದ ಮೇಲೆ ಕುಳಿತುಕೊಂಡು ಭೋಜನವನ್ನು ಮಾಡು!" ಎಂದು ನುಡಿದಳು.

ಆ ಮಾತನ್ನು ಕೇಳಿ ಶ್ರೀರಾಮನು ಲಜ್ಜೆಯಿಂದ ತಲೆಬಗ್ಗಿಸಿಕೊಂಡು ತನ್ನ ತಾಯಿಯನ್ನು ಗುರುಭಾವದಿಂದೆಣಿಸುತ್ತ ಕೈಮುಗಿದು "ಅಮ್ಮ, ನೀನು ಇನ್ನೂ ಕೇಳಲಿಲ್ಲವೆ? ಮಹತ್ತಾದ ಆಪತ್ತು ಪ್ರಾಪ್ತವಾಯಿತು. ಮಹಾರಾಜನು ನನ್ನನ್ನು ದಂಡಕಾರಣ್ಯಕ್ಕೆ ಹೋಗಿ ಅಲ್ಲಿ ಹದಿನಾಲ್ಕು ವರುಷಗಳು ಕಂದ ಮೂಲ ಫಲಾದಿಗಳನ್ನು ಆಹಾರಮಾಡಿಕೊಂಡು ನಾರುಬಟ್ಟೆಯನ್ನುಟ್ಟು ಜಡೆಗಳನ್ನು ಧರಿಸಿಕೊಂಡು ಮುನಿವೃತ್ತಿಯಿಂದ ತಪಸ್ವಿಯಾಗಿರಬೇಕೆಂದು ಆಜ್ಞಾಪಿಸಿದ್ದಾನೆ. ನಾನು ಹಾಗೆಯೇ ವನಕ್ಕೆ ಹೋಗಿ ನಿರ್ಜನಪ್ರದೇಶದಲ್ಲಿ ಹದಿನಾಲ್ಕು ವರುಷಗಳು ವಾಸ ಮಾಡುವೆನು. ಮಹಾರಾಜನು ಭರತನಿಗೆ ಪಟ್ಟಾಭಿಷೇಕವನ್ನು ಮಾಡಿ ಸಮಸ್ತವಾದ ರಾಜ್ಯ ಭಾರವನ್ನೂ ಆತನ ವಶಮಾಡಿ ಸುಖದಿಂದಿರಲಿ" ಎಂದು ನುಡಿದನು.

ಆ ಮಾತನ್ನು ಕೇಳಿ ಕೌಸಲ್ಯಾದೇವಿಯು ಕಾದ ಅಲಗು ಎದೆಯಲ್ಲಿ ಹೂಡಿದಂತೆಯೂ ಕೊಡಲಿಯಿಂದ ತರಿದು ಬಿದ್ದ ಮರದಂತೆಯೂ ದೇವಲೋಕದಿಂದ ಭೂಮಿಯಲ್ಲಿ ಬಿದ್ದ ದೇವಸ್ತ್ರೀಯಂತೆಯೂ ಮೂರ್ಛಿತೆಯಾಗಿ ಬಿದ್ದಳು. ಶ್ರೀರಾಮನು ಅದನ್ನು ಕಂಡು ಬಿರುಗಾಳಿಯ ವೇಗದಿಂದ ಮುರಿದುಬಿದ್ದ ಬಾಳೆಯ ಮರದ ಹಾಗಿದ್ದ ಕೌಸಲ್ಯಾದೇವಿಯನ್ನು ಕೈಹಿಡಿದೆತ್ತಿ ಆಕೆಯು ಭೂಮಿಯಮೇಲೆ ಹೊರಳಿದ್ದರಿಂದ ಸರ್ವಾಂಗಗಳಲ್ಲಿದ್ದ ಧೂಳನ್ನು ತನ್ನ ಕೈಯಿಂದ ಒರಸಿ ಎಚ್ಚರ ಗೊಳಿಸಿ ಸಂತವಿಟ್ಟನು. ಕೌಸಲ್ಯಾದೇವಿಯು ಲಕ್ಷ್ಮಣನು ಕೇಳುವಂತೆ ಆ ಪುರುಷೋತ್ತಮನನ್ನು ಕುರಿತು "ಶ್ರೀರಾಮ, ಇಂಥ ದುಃಖವನ್ನುಂಟುಮಾಡಲು ನೀನು ನನ್ನ ಉದರದಲ್ಲಿ ಜನಿಸದೆ ನಾನು

ಬಂಜೆಯಾಗಿದ್ದಿದ್ದರೆ ದುಃಖಿಬರುತ್ತಿರಲಿಲ್ಲ. ಆಗ ನಾನು ಬಂಜೆಯಾಗಿದ್ದೇನೆ ಎಂಬ ದುಃಖವಲ್ಲದೆ ಮತ್ತೊಂದಿರುತ್ತಿರಲಿಲ್ಲ. ಇದುವರೆಗೆ ನನ್ನ ಪತಿಯಾದ ದಶರಥರಾಯನಿಂದ ಒಂದು ಸುಖವನ್ನಾದರೂ ಕಂಡವಳಲ್ಲ. ನೀನು ಜನಿಸಿದಮೇಲೆ ನೀನು ಪ್ರಬುದ್ಧನಾದರೆ ಸಂತೋಷದಿಂದ ಜೀವಿಸಿಕೊಂಡಿರುವೆನೆಂದಿದ್ದೆನು. ಇನ್ನು ನಾನು ನನ್ನ ಸವತಿಯರ ಕರ್ಣಕಠೋರವಾದ ಮಾತುಗಳನ್ನು ಹೇಗೆ ಕೇಳಲಿ ? ಮನೋವ್ಯಥೆಯಿಂದ ಶರೀರ ಕೃಶವಾಗಿ ಹೇಗೆ ಇದ್ದೇನು ? ಲೋಕದಲ್ಲಿ ಸ್ತ್ರೀಯರಿಗೆ ಸವತಿಯ ಏಳಿಗೆಯನ್ನು ಕಾಣುವುದಕ್ಕಿಂತಲೂ ಅಧಿಕವಾದ ದುಃಖವಿಲ್ಲ. ನೀನು ಸಮೀಪದಲ್ಲಿದ್ದೂ ದಶರಥರಾಯನು ನನಗೆ ಅಗೌರವ ತೋರುತ್ತಿದ್ದನು. ಇನ್ನು ನೀನು ವನಕ್ಕೆ ಹೋದಮೇಲೆ ಹೇಳುವುದೇನು ! ಕಡೆಗೆ ನನಗೆ ಮರಣವೇ ಪ್ರಾಪ್ತಿಯಲ್ಲದೆ ಮತ್ತೊಂದು ಗತಿಯಿಲ್ಲ. ಕೈಕೇಯಿದೇವಿಯು ನನ್ನನ್ನು ನಿಗ್ರಹಿಸಿ ರಾಜನ ಮನಸ್ಸಿಗೆ ಚಾಡಿಗಳಿಂದ ಕೋಪವನ್ನು ಹುಟ್ಟಿಸಿ ನನ್ನನ್ನು ಹೊರಡಿಸುವಳಲ್ಲದೆ ಸುಮ್ಮನಿರಳು. ನಿನ್ನ ದಾಕ್ಷಿಣ್ಯದಿಂದ ನನಗೆ ಸೇವಾಸತ್ಕಾರಗಳನ್ನು ಮಾಡಿಕೊಂಡು ನನ್ನ ಮಾತಿಗೊಳಗಾಗಿರುವಂಥವರೂ ನೀನು ವನವಾಸಕ್ಕೆ ಹೋದಮೇಲೆ ನನ್ನೊಡನೆ ಮುಖಕೊಟ್ಟು ಮಾತನಾಡರು. ಸ್ವಭಾವದಿಂದ ಕೌಟಿಲ್ಯಗುಣವುಳ್ಳ ಕೈಕೇಯಿದೇವಿಯ ಹುಬ್ಬು ಗಂಟಿನ ಮುಖವನ್ನು ಹೇಗೆ ನೋಡಲಿ ? ನಿನಗೆ ಉಪನಯನವಾಗಿ ಹದಿನೇಳು ವರುಷಗಳು ಕಳೆದವು. ಇನ್ನು ನೀನು ಪ್ರಬುದ್ಧನಾಗಿ ಪಟ್ಟಾಭಿಷಿಕ್ತನಾಗಿ ಸ್ವತಂತ್ರಬುದ್ಧಿಯಿಂದ ನಡೆದರೆ ನಿನ್ನಿಂದ ಸಮಸ್ತ ದುಃಖಗಳನ್ನೂ ಕಳೆದುಕೊಳ್ಳುವೆನೆಂದು ಬಯಸಿದ್ದ ನಾನು ಎಂದೆಂದಿಗೂ ಅಪರಿಮಿತವಾದ ದುಃಖ ಕ್ಕೊಳಗಾದೆನು. ನಾನು ಸವತಿಯ ನಿಷ್ಠುರವಚನಗಳಿಂದಲೇ ಕೃಶಾಂಗಿಯಾಗಿದ್ದೇನೆ. ಇನ್ನು ಚಂದ್ರಮಂಡಲದಂತೆ ಅತಿಸುಂದರವಾದ ನಿನ್ನ ಮುಖವನ್ನು ಕಾಣದೆ ಅತ್ಯಂತ ಕೃಪಣರಾದ ಸವತಿಯರು ಕೊಡುವ ಪೀಡೆಗೆ ಒಳಗಾಗಿ ದೈನ್ಯದಿಂದ ಹೇಗೆ ಜೀವಿಸುವೆನು ? ಮೊದಲು ಸಂತಾನ ವಾಗಬೇಕೆಂಬ ಬುದ್ಧಿಯಿಂದ ವ್ರತನಿಯಮ ಉಪವಾಸ ಮೊದಲಾದ ಉಗ್ರತಪಸ್ಸುಗಳಿಂದ ಶರೀರ ದಂಡನೆಯನ್ನು ಮಾಡಿದೆನು ; ನೀನು ಜನಿಸಿದ ಬಳಿಕ ನನಗೆ ಯಾವ ವಿಘ್ನವು ಬರುವುದೋ ಎಂದು ಅನೇಕ ವ್ರತಗಳನ್ನು ಮಾಡಿಕೊಂಡು ಅತಿಪ್ರಯಾಸದಿಂದ ನಿನ್ನನ್ನು ರಕ್ಷಣೆಮಾಡಿದೆನು ! ಅಕಟಕಟಾ ! ಇಂಥ ಮಾತನ್ನು ಕೇಳಿ ನನ್ನ ಕಲ್ಲೆದೆಯು ಒಡೆಯದೆಯೂ ಸೀಳದೆಯೂ ಇದೆ ! ವರ್ಷಾಕಾಲದಲ್ಲಿ ಮಹಾನದಿಯ ಪ್ರವಾಹದಿಂದ ಬೀಳುವ ತಡಿಯಂತೆ ನನ್ನ ಎದೆಯು ಒಡೆದು ಬೀಳಬಾರದೆ ! ಯಮಲೋಕದಲ್ಲಿ ನಾನಿರುವುದಕ್ಕೆ ಸ್ಥಳವಿಲ್ಲವೊ ! ನನಗೆ ಮರಣವು ಏಕೆ ಬರಲಿಲ್ಲ ! ಅಕಟಕಟಾ ! ನನ್ನ ಎದೆಯು ಒಡೆಯದೆ ಸೀಳದ ಇರುವುದರಿಂದ ಕಬ್ಬಿಣದ ಎದೆಯಲ್ಲದೆ ಮನುಷ್ಯರ ಎದೆಯಲ್ಲ ! ಇಂಥ ದುಃಖದಲ್ಲಿಯೂ ನನಗೆ ಮರಣವು ಬರಲಿಲ್ಲ. ಈ ದುಃಖವು ನನಗೆ ನಿಷ್ಕಾರಣವಾಗಿ ಬಂದದ್ದಲ್ಲ. ನಾನು ಮಾಡಿದ ವ್ರತೋಪವಾಸ ನಿಯಮಾದಿಗಳು ಇಂಥ ವಿಪರೀತಫಲವನ್ನು ಕೊಟ್ಟವು. ಕಲ್ಲುಭೂಮಿಯಲ್ಲಿ ಬಿತ್ತಿದ ಬೀಜದಂತೆ ಅವೆಲ್ಲವೂ ವ್ಯರ್ಥವಾದವು. ನೀನು ವನವಾಸಕ್ಕೆ ತೆರಳಿದರೆ ನಾನು ಈಗಲೇ ಸ್ವೇಚ್ಛಾಮರಣದಿಂದ ಯಮಲೋಕವನ್ನೈದುವೆನು. ಕರುವನ್ನು ಕಾಣದ ಹಸುವಿನಂತೆ ಚಂದ್ರಮಂಡಲದೋಪಾದಿಯಲ್ಲಿರುವ ನಿನ್ನ ಮುಖವನ್ನು ಕಾಣದಿದ್ದರೆ ನನ್ನ ಬಾಳು ವ್ಯರ್ಥ. ನೀನು ವನವಾಸಕ್ಕೆ ತೆರಳಿದೆಯಾದರೆ ಕರುವಿನ ಹಿಂದೆ ಅರಸಿಕೊಂಡು ಹಸುವು ವನಕ್ಕೆ ಹೋಗುವಂತೆ ನಾನು ನಿನ್ನ ಬೆನ್ನುಹಿಡಿದು ಬರುವೆನು " ಎಂದು ಅತ್ಯಂತ ದುಃಖದಿಂದ ಹಂಬಲಿಸಿದಳು.



೨೦ ನೆಯ ಅಧ್ಯಾಯ

## ಶ್ರೀರಾಮನು ಕೌಸಲ್ಯಾದೇವಿಗೂ ಲಕ್ಷ್ಮಣನಿಗೂ ಸಮಾಧಾನ ಹೇಳುವುದು

ಹೀಗೆ ಕೌಸಲ್ಯಾದೇವಿಯು ಶ್ರೀರಾಮನ ವನವಾಸವಾರ್ತೆಯನ್ನು ಕೇಳಿ ದುಃಖದಿಂದ ಹಂಬಲಿಸುತ್ತಿದ್ದದ್ದನ್ನು ಕಂಡು ಲಕ್ಷ್ಮಣನು ತತ್ಕಾಲೋಚಿತವಾಗಿ ಆ ದೇವಿಯನ್ನು ಕುರಿತು ಹೀಗೆಂದನು : " ಅಮ್ಮಾ, ಶ್ರೀರಾಮನು ರಾಜ್ಯಾಧಿಪತ್ಯವನ್ನು ಬಿಟ್ಟು ವನವಾಸಕ್ಕೆ ಹೋಗುವುದನ್ನು ನಾನು ತಾಳಲಾರೆನು. ನಮ್ಮ ತಂದೆಯಾದ ದಶರಥರಾಯನು ಕೈಕೇಯಿದೇವಿಗೆ ಮರುಳಾಗಿ ವಿಪರೀತವಾದಬುದ್ಧಿಯುಳ್ಳವನಾದನು. ವೃದ್ಧನಾಗಿ ಮನ್ಮಥನ ಬಾಣಕ್ಕೊಳಗಾಗಿ ವಿಷಯಾವಿಷಯಗಳನ್ನು ತಿಳಿಯದವನಾದಬಳಿಕ ಏನುಮಾಡುವುದು ? ಆತನು ಶ್ರೀರಾಮನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ವನವಾಸಕ್ಕೆ ಕಳುಹಿಸುವುದಕ್ಕೆ ಯಾವ ದೋಷಾಪವಾದಗಳನ್ನೂ ಕಾಣೆನು. ನಿರಪರಾಧಿಯಾದವನನ್ನು ವನಕ್ಕೆ ಹೋಗಹೇಳಿದ್ದರಿಂದ ದಶರಥರಾಯನು ದ್ರೋಹಿಯಾದನು. ಲಜ್ಜೆಯನ್ನು ತೊರೆದು ಕಾಮಬಾಣಕ್ಕೆ ಗುರಿಯಾಗಿ ಸ್ತ್ರೀಚಿತ್ತಕ್ಕೊಳಗಾಗಿ ಧರ್ಮಹೀನನಾದ ಈ ವೃದ್ಧ ದಶರಥರಾಯನನ್ನು ದಂಡಿಸಿದರೂ ತಪ್ಪಿಲ್ಲ. ಶ್ರೀರಾಮನು ಮಹಾಧರ್ಮಿಷ್ಠನು. ಆತನನ್ನು ಲೋಕದಲ್ಲಿ ಹಿಂದುಗಡೆಯಾದರೂ ನಿಂದಿಸುವವರಿಲ್ಲ. ತನಗೆ ದ್ರೋಹವನ್ನು ಮಾಡಿದ ತಂದೆಯಲ್ಲಿ ದೋಷಾರೋಪಣವನ್ನು ಮಾಡುವವನಲ್ಲ. ಲೋಕದಲ್ಲಿ ಸಾಕ್ಷಾತ್ ದೇವತಾಸ್ವರೂಪನೂ ಶಾಂತಗುಣಸಂಪನ್ನನೂ ಋಜುಮಾರ್ಗವುಳ್ಳವನೂ ಶತ್ರುಗಳಲ್ಲಿಯೂ ಕೃಪೆಯುಳ್ಳವನೂ ಆದವನು ಶ್ರೀರಾಮನನ್ನು ಬಿಟ್ಟರೆ ಮತ್ತೊಬ್ಬನಿಲ್ಲ. ವೃದ್ಧನಾಗಿಯೂ ಬಾಲ್ಯಭಾವವನ್ನನುಸರಿಸಿ ನುಡಿಯುವ ಇಂಥ ಕರ್ಣಕಠೋರವಾದ ಮಾತನ್ನು ರಾಜನೀತಿಯನ್ನು ಬಲ್ಲವರು ಯಾರು ಸಹಿಸುವರು ? ದಶರಥರಾಯನು ಈ ದುರ್ಬುದ್ಧಿಯನ್ನು ಕಳೆದುಕೊಂಡು ಧರ್ಮರಹಸ್ಯವನ್ನು ಸ್ಮರಿಸುವವರೆಗೆ ಶ್ರೀರಾಮನು ನನ್ನ ಸಂಗಡ ರಾಜ್ಯಭಾರವನ್ನು ವಹಿಸಲಿ ! ನಾನು ಬಿಲ್ಲನ್ನು ಹಿಡಿದು ಆತನ ಸಮೀಪದಲ್ಲಿ ಸಹಾಯವಾಗಿದ್ದರೆ ನಮಗೆ ಎದುರಾಗಿ ಯಾರೂ ನಿಲ್ಲರು. ಆತನು ಪರಬಲ ಮರ್ದನನು. ದಕ್ಷಿಣದಿಕ್ಪಾಲಕನಿಗೆ ಸಮನಾದವನು ! ಅಯೋಧ್ಯಾಪಟ್ಟಣದವರು ಭರತನಿಗೆ ಸಹಾಯಕರಾಗಿಯೂ ನಮಗೆ ಪ್ರತಿಪಕ್ಷದವರಾಗಿಯೂ ಇದ್ದರೆ ಈ ಪಟ್ಟಣವೆಲ್ಲವನ್ನೂ ನಿರ್ಮನುಷ್ಯವಾಗುವಹಾಗೆ ನನ್ನ ಕೂರಂಬುಗಳಿಂದ ಎಲ್ಲರನ್ನೂ ಸಂಹರಿಸುತ್ತೇನೆ. ದೇಶಾಂತರಗಳಲ್ಲಿಯಾದರೂ ಭರತನ ಪಕ್ಷವನ್ನು ವಹಿಸಿ ಈತನಿಗೆ ಅಹಿತವನ್ನು ಚಿಂತಿಸುವವರಿದ್ದರೆ ಅವರೆಲ್ಲರನ್ನೂ ಕ್ಷಣಮಾತ್ರದಲ್ಲಿ ಸಂಹರಿಸುತ್ತೇನೆ. ಈತನ ಕ್ಷಮೆಯು ನನ್ನ ಕೋಪೋದ್ರೇಕವನ್ನು ತಡೆಯುವುದಲ್ಲದೆ ಮತ್ತೊಂದಲ್ಲ. ಸಮಸ್ತ ರಾಜ್ಯಾಧಿಪತ್ಯವೂ ಈತನ ಕೈವಶವಾಗಿದೆ, ಕೈಕೇಯಿದೇವಿಯಿಂದ ದಶರಥರಾಯನು ಮರುಳಾಗಿ ನಮ್ಮೊಡನೆ ವೈರವನ್ನು ಮಾಡಿಕೊಂಡು ಭರತನಿಗೆ ರಾಜ್ಯಾಧಿಪತ್ಯವನ್ನು ಕೊಡುವುದಕ್ಕೆ ಸಮರ್ಥನೆ ? ನಾನು ಅಣ್ಣನಾದ ಶ್ರೀರಾಮನಲ್ಲಿ ಅಂತಃಕರಣಶುದ್ಧವಾಗಿ ಅನುಕೂಲನಾಗಿದ್ದೇನೆ. ಈ ವಿಷಯದಲ್ಲಿ ನನ್ನ ಸತ್ಯವೂ ನನ್ನ ಧನುಸ್ಸೂ ನಾನು ಮಾಡಿದ ದಾನಧರ್ಮಗಳೂ ಶ್ರೀರಾಮನೂ ಸಾಕ್ಷಿ. ಶ್ರೀರಾಮನು ಅರಣ್ಯಕ್ಕೆ ಹೋದರೂ ಅಗ್ನಿಪ್ರವೇಶಮಾಡಿದರೂ ಆತನಿಗೆ ಮೊದಲೇ ನಾನು ಪ್ರವೇಶಿಸುವೆನು ! ಅಮ್ಮಾ, ಪ್ರಕಾಶಮಾನನಾದ ಸೂರ್ಯನು ಕತ್ತಲೆಯನ್ನು ಹೋಗಲಾಡಿಸುವಹಾಗೆ ನನ್ನ ಪರಾಕ್ರಮದಿಂದ

ನಿನ್ನ ದುಃಖವನ್ನು ಹೋಗಲಾಡಿಸುತ್ತೇನೆ. ನನ್ನ ಪರಾಕ್ರಮವನ್ನು ನೀನು ನೋಡು ; ಶ್ರೀರಾಮನೂ ನೋಡಲಿ. ವೃದ್ಧನಾದರೂ ಮಕ್ಕಳಂತೆ ಅಸ್ಥಿರಚಿತ್ತನಾಗಿ ಕೈಕೇಯಿದೇವಿಯ ವಾರ್ತೆಗೆ ಮರುಳಾದ ದಶರಥರಾಯನನ್ನು ಈಗಲೇ ಕೊಲ್ಲುತ್ತೇನೆ ! " ಎಂದು ನುಡಿದನು.

ಲಕ್ಷ್ಮಣನ ಮಾತನ್ನು ಕೇಳಿ ಕೌಸಲ್ಯಾದೇವಿಯು ಶೋಕಾಗ್ನಿಯಿಂದ ಪರಿತಪಿಸಿ ಅಳುತ್ತ ಶ್ರೀರಾಮನನ್ನು ಕುರಿತು " ಶ್ರೀರಾಮ, ನಿನ್ನ ಒಡಹುಟ್ಟಿದವನಾದ ಲಕ್ಷ್ಮಣನು ಆಡಿದ ಮಾತನ್ನು ಕೇಳಿದೆಯಾ ? ಇನ್ನು ನಿನ್ನ ಮನಸ್ಸಿಗೆ ಬಂದಂತೆ ಮಾಡು. ನನ್ನ ಸವತಿಯಾದ ಕೈಕೇಯಿದೇವಿಯ ಮಾತನ್ನು ಕೇಳಿ ಭ್ರಮೆಗೊಂಡು ನನ್ನನ್ನು ಶೋಕಾಗ್ನಿಜ್ವಾಲೆಗೆ ಗುರಿಮಾಡಿ ವನಕ್ಕೆ ಹೋಗಬೇಡ. ಧರ್ಮರಹಸ್ಯವನ್ನು ಬಲ್ಲ ಧರ್ಮಿಷ್ಠನಾದ ಪಕ್ಷದಲ್ಲಿ ಧರ್ಮವೇ ಶರಣೆಂದು ನನ್ನ ಸಮೀಪದಲ್ಲಿದ್ದು ಕೊಂಡು ನನ್ನ ಸೇವಾಸತ್ಕಾರಗಳನ್ನು ಮಾಡು. ಪೂರ್ವದಲ್ಲಿ ಕಶ್ಯಪನು ತನ್ನ ಮನೆಯಲ್ಲಿ ನಿಯಮಸ್ಥ ನಾಗಿ ತನ್ನ ತಾಯಿಯ ಸೇವೆಯನ್ನು ಮಾಡಿಕೊಂಡಿದ್ದು ಮಾತೃಸೇವೆಯ ಬಲದಿಂದ ಸ್ವರ್ಗವನ್ನೈದಿ ದನು. ನಿನಗೆ ದಶರಥರಾಯನು ಹೇಗೆ ಪೂಜ್ಯನೋ ಹಾಗೆ ನಾನೂ ಪೂಜ್ಯಳು. ನಿನ್ನನ್ನು ವನಕ್ಕೆ ಕಳುಹಿಸುವುದಕ್ಕೆ ನಾನು ಒಪ್ಪುವುದಿಲ್ಲ. ನಿನ್ನ ವಿಯೋಗವಾದಮೇಲೆ ನನಗೆ ಈ ಗೃಹದಿಂದಲೂ ನನ್ನ ಜೀವದಿಂದಲೂ ಪ್ರಯೋಜನವಿಲ್ಲ. ನಾನು ನಿನ್ನೊಡನೆ ವನಕ್ಕೆ ಬಂದು ತೃಣಾಹಾರವನ್ನಾದರೂ ಮಾಡಿಕೊಂಡಿರುತ್ತೇನೆ. ದುಃಖಾಕ್ರಾಂತೆಯಾದ ನನ್ನನ್ನು ಬಿಟ್ಟು ನೀನು ವನಕ್ಕೆ ಹೋದರೆ ನಾನು ಪ್ರಾಯೋಪವೇಶವನ್ನು ಮಾಡಿ ಜೀವವನ್ನು ತೊರೆಯುವೆನು. ಆದಕಾರಣ ನನ್ನನ್ನೂ ಕರೆದುಕೊಂಡು ವನವನ್ನೈದು ; ರಾಮ, ನೀನು ನನ್ನನ್ನು ಬಿಟ್ಟು ವನಕ್ಕೆ ಹೋಗಿ ನನ್ನನ್ನು ದುಃಖಪಡಿಸಿದೆಯಾದರೆ ನರಕವನ್ನೈದುವೆ. ನೀನು ಎಷ್ಟು ಸತ್ಯಸಂಧನಾದರೂ ತಾಯಿಯನ್ನು ನೋಯಿಸಿದರೆ ಪಾಪವು ಬರುವುದು. ಸಮುದ್ರರಾಜನು ಮಹಾಗಂಭೀರಪುರುಷನಾದರೂ ತನ್ನ ತೀರದಲ್ಲಿ ಕುಳಿತಿದ್ದ ಪಿಪ್ಪಲಾದನೆಂಬ ಮುನೀಶ್ವರನನ್ನು ಮುಳುಗಿಸಿ ಬ್ರಹ್ಮಹತ್ಯಾದೋಷವನ್ನೈದಿದನು. ಆದ್ದರಿಂದ ನೀನು ವನಕ್ಕೆ ಹೋಗಿ ನನ್ನನ್ನು ನೋಯಿಸಬೇಡ " ಎಂದು ಹಂಬಲಿಸಿದಳು.

ಶ್ರೀರಾಮನು ಕೌಸಲ್ಯಾದೇವಿಯನ್ನು ಕುರಿತು " ಅಮ್ಮ, ನಾನು ನನ್ನ ತಂದೆಯಾದ ದಶರಥರಾಯನ ಆಜ್ಞೆಯನ್ನು ಮೀರುವುದಕ್ಕೆ ಸಮರ್ಥನಲ್ಲ. ನಿನ್ನನ್ನು ಬೇಡಿಕೊಳ್ಳುತ್ತೇನೆ. ನನ್ನನ್ನು ವನವಾಸಕ್ಕೆ ಕಳುಹಿಸು. ಪೂರ್ವದಲ್ಲಿ ವ್ರತಾಚರಣೆಯನ್ನು ಮಾಡಿಕೊಂಡು ತಪಸ್ವಿಯಾಗಿದ್ದ ಕಂಡು ಎಂಬ ಋಷಿಯು ತನ್ನ ತಂದೆಯ ಮಾತನ್ನು ಮೀರದೆ ಗೋವಧೆಯನ್ನು ಮಾಡಿ ಲೋಕದಲ್ಲಿ ಕೀರ್ತಿಯನ್ನು ಪಡೆದನು. ನಮ್ಮ ವಂಶದಲ್ಲಿ ಸಗರಚಕ್ರವರ್ತಿಯ ಮಕ್ಕಳು ಆತನ ಮಾತನ್ನು ಮೀರದೆ ಸಮಸ್ತ ಭೂಮಂಡಲವನ್ನೂ ಅಗೆದು ಅನೇಕ ಪ್ರಾಣಿಗಳನ್ನು ಕೊಂದು ಕೀರ್ತಿಯನ್ನು ಪಡೆದರು. ಪರಶುರಾಮನು ತನ್ನ ತಂದೆಯಾದ ಜಮದಗ್ನಿಮುನೀಶ್ವರನ ಮಾತನ್ನು ಮೀರದೆ ತನ್ನ ತಾಯಿಯಾದ ರೇಣುಕಾದೇವಿಯ ಶಿರಶ್ಛೇದನವನ್ನು ಮಾಡಿದನು ! ಇನ್ನೂ ಅನೇಕರು ತಂದೆಯ ಮಾತನ್ನು ಮೀರದೆ ಕೀರ್ತಿಯನ್ನು ಪಡೆದರು. ಆದ್ದರಿಂದ ನಾನು ನನ್ನ ತಂದೆಯ ಮಾತನ್ನು ವ್ಯರ್ಥವನ್ನಾಗಿ ಮಾಡಲಾರೆನು. ನಾನೊಬ್ಬನೇ ತಂದೆಯ ಮಾತನ್ನು ಪರಿಪಾಲಿಸುವವನಲ್ಲ. ಅನೇಕರು ತಂದೆಯ ಮಾತನ್ನು ಪರಿಪಾಲಿಸುವರು. ನಾನೊಬ್ಬನೇ ತಂದೆಯ ಮಾತನ್ನು ಮೀರಬಾರದೆಂದು ನಿನಗೆ ಪ್ರತಿಕೂಲವಾಗಿ ನುಡಿಯುವುದಿಲ್ಲ. ಇದು ಪೂರ್ವದ ಪುಣ್ಯಾತ್ಮರು ನಡೆದ ಮಾರ್ಗವಲ್ಲದೆ ನಾನು ಹೊಸದಾಗಿ ಕೈಹಿಡಿದದ್ದಲ್ಲ. ಲೋಕದಲ್ಲಿ ತಂದೆಯ ಪ್ರತಿಜ್ಞೆ ಯನ್ನು ಪರಿಪಾಲಿಸಿ ಅದರಿಂದ ಅಪಚಾರಬಂದು ಕೆಟ್ಟವರಿಲ್ಲ " ಎಂದು ಸಮಾಧಾನವನ್ನು ಹೇಳಿದನು. ಅನಂತರ ತಮ್ಮನಾದ ಲಕ್ಷ್ಮಣನನ್ನು ಕುರಿತು ಹೀಗೆಂದನು : " ಲಕ್ಷ್ಮಣ, ನೀನು

ನುಡಿಯಲ್ಲಿ ಜಾಣ್ಮೆಯುಳ್ಳವನು. ಸಮಸ್ತ ಬಿಲ್ಲುಗಾರರಿಗೂ ಶ್ರೇಷ್ಠನು. ನಿನ್ನ ಸಾಮರ್ಥ್ಯವನ್ನೂ, ಸಾಹಸವನ್ನೂ, ಪರಾಕ್ರಮವನ್ನೂ, ತೇಜಸ್ಸನ್ನೂ, ಸತ್ತ್ವವನ್ನೂ, ನಾನು ಬಲ್ಲೆನು. ನನ್ನ ತಾಯಿಯ ದುಃಖವು ನಿನ್ನ ದುಃಖವಲ್ಲದೆ ಮತ್ತೊಂದಲ್ಲ. ಸತ್ಯವೇ ಧರ್ಮಸಾಧನ. ಧರ್ಮದಲ್ಲಿಯೇ ಸಮಸ್ತ ಪುರುಷಾರ್ಥಗಳೂ ಅಡಕವಾಗಿರುವುವು. ಧರ್ಮವನ್ನೇ ಸ್ಥಾಪಿಸಬೇಕು. ಲೋಕದಲ್ಲಿ ತಂದೆಯ ಮಾತನ್ನು ಅತಿಕ್ರಮಿಸದಿರುವುದೇ ಧರ್ಮ. ತಂದೆತಾಯಿಗಳ ಮಾತನ್ನೂ ಗುರುಹಿರಿಯರ ಮಾತನ್ನೂ ಬ್ರಾಹ್ಮಣರ ಮಾತನ್ನೂ ವ್ಯರ್ಥಮಾಡಬಾರದು. ಆದ್ದರಿಂದ ನಾನು ತಂದೆಯ ಮಾತನ್ನು ಅತಿಕ್ರಮಿಸುವುದಕ್ಕೆ ಸಮರ್ಥನಲ್ಲ. ದಶರಥರಾಯನು ತಾನೇ ಸಾಕ್ಷಾತ್ತಾಗಿ ನನಗೆ ಆಜ್ಞಾಪಿಸಲಿಲ್ಲವಾದರೂ ಕೈಕೇಯೀದೇವಿಯು ಆತನ ಅಪ್ಪಣೆಯಿಂದಲೇ ಹೇಳಿದಳು. ಆದ್ದರಿಂದ ನೀನು ಕ್ಷತ್ರಿಯಧರ್ಮವನ್ನು ಆಶ್ರಯಿಸಬೇಡ. ಧರ್ಮಮಾರ್ಗವನ್ನೇ ಆಶ್ರಯಿಸು. ಕ್ರೂರವಾದ ಕ್ಷತ್ರಿಯಧರ್ಮವನ್ನು ಬಿಡು" ಎಂದು ತಮ್ಮನೆಂಬ ವಾತ್ಸಲ್ಯದಿಂದ ನುಡಿದನು. ಆಮೇಲೆ ಕೌಸಲ್ಯಾದೇವಿಗೆ ನಮಸ್ಕಾರವನ್ನು ಮಾಡಿ ಆಕೆಯನ್ನು ಕುರಿತು "ಅಮ್ಮಾ, ನಾನು ವನಕ್ಕೆ ಹೋಗಿ ಬರುತ್ತೇನೆ. ನೀನು ನನಗೆ ಆಶೀರ್ವಾದವನ್ನು ಮಾಡಿ ಅಪ್ಪಣೆಕೊಡು. ನಾನು ಮಹಾರಾಜನ ಅಪ್ಪಣೆಯಿಂದ ವನದಲ್ಲಿ ಹದಿನಾಲ್ಕು ವರುಷಗಳನ್ನು ಕಳೆದು ಆಮೇಲೆ ಅಯೋಧ್ಯಾ ಪಟ್ಟಣಕ್ಕೆ ಬರುವೆನು. ಪೂರ್ವದಲ್ಲಿ ಯಯಾತಿಯೆಂಬ ರಾಜರ್ಷಿಯು ಸ್ವರ್ಗಲೋಕದಿಂದ ಭ್ರಷ್ಟನಾಗಿ ಭೂಲೋಕಕ್ಕೆ ಬಂದು ಪುನಃ ಸ್ವರ್ಗಕ್ಕೆ ಹೋದಂತೆ ನಾನು ಶೀಘ್ರವಾಗಿ ತಿರುಗಿ ಬಂದು ನಿನ್ನ ಶೋಕವನ್ನು ಪರಿಹರಿಸುವೆನು. ಅಂತರಂಗದಲ್ಲಿ ನೋಯಬೇಡ. ನೀನೂ ನಾನೂ ಸೀತೆಯೂ ಸುಮಿತ್ರಾದೇವಿಯೂ ಲಕ್ಷ್ಮಣನೂ ಮತ್ತು ಇಲ್ಲಿ ಇರುವವರೂ ದಶರಥರಾಯನ ಆಜ್ಞೆಗೊಳಗಾಗಿರಬೇಕು. ಇದೇ ಧರ್ಮವಲ್ಲದೆ ಬೇರೆಯಲ್ಲ. ಅಮ್ಮಾ, ನೀನು ಪಟ್ಟಾಭಿಷೇಕಾರ್ಥವಾಗಿ ತಂದ ಮಂಗಳದ್ರವ್ಯಗಳನ್ನು ತೆಗೆದಿಡು. ಮನಸ್ಸಿನಲ್ಲಿರುವ ದುಃಖವನ್ನು ಬಿಡು. ನನಗೆ ವನವಾಸವು ಧರ್ಮವೆಂದು ತಿಳಿದು ಅನುಮತಿಯನ್ನು ಕೊಡು" ಎಂದು ಹೇಳಿದನು.

ಆ ಮಾತನ್ನು ಕೇಳಿ ಕೌಸಲ್ಯಾದೇವಿಯು ತನ್ನ ಮಗನ ಧರ್ಮಬುದ್ಧಿಯನ್ನೂ ಧೈರ್ಯವನ್ನೂ ಕಂಡು ಅತ್ಯಾಶ್ಚರ್ಯಪಟ್ಟು, ಆತನನ್ನು ಕುರಿತು "ಶ್ರೀರಾಮ, ನಿನ್ನ ತಂದೆಯಾದ ದಶರಥರಾಯನು ನಿನಗೆ ಗುರುವಾದ ಕಾರಣ ಆತನ ಮಾತನ್ನು ಹೇಗೆ ಮೀರಬಾರದೋ ಹಾಗೆ ನಾನು ತಾಯಿಯಾದ ಕಾರಣ ನನ್ನ ಮಾತನ್ನೂ ಅತಿಕ್ರಮಿಸಬಾರದು. ನಿನ್ನನ್ನು ವನವಾಸಕ್ಕೆ ಕಳುಹಿಸುವುದಕ್ಕೆ ನಾನು ಒಪ್ಪುವುದಿಲ್ಲ. ನೀನು ನನ್ನನ್ನು ಬಿಟ್ಟು ಹೋಗಕೂಡದು. ನೀನು ವನವಾಸಕ್ಕೆ ತೆರಳಿದೆಯಾದರೆ ನೀನಿಲ್ಲದ ಈ ಮನೆಯಿಂದ ಪ್ರಯೋಜನವೇನು ? ಐಶ್ವರ್ಯದಿಂದ ಪ್ರಯೋಜನವೇನು ? ಅಮೃತಪಾನದಿಂದಲಾದರೂ ಆಗತಕ್ಕದ್ದೇನು ? " ಎಂದು ನುಡಿದು ದೈನ್ಯಸ್ವರದಿಂದ ಹಂಬಲಿಸತೊಡಗಿದಳು.

ಆ ಸಮಯದಲ್ಲಿ ಕೋಪಾಗ್ನಿಯಿಂದ ಜ್ವಲಿಸುತ್ತಿದ್ದ ಲಕ್ಷ್ಮಣನನ್ನು ಕಂಡು ಧರ್ಮರಹಸ್ಯವನ್ನು ಬಲ್ಲ ಶ್ರೀರಾಮನು ಕಾಲೋಚಿತವಾಗಿ ಆತನನ್ನು ಕುರಿತು ಹೀಗೆಂದನು: "ಎಲೈ ಲಕ್ಷ್ಮಣ, ನಿನ್ನ ಭಕ್ತಿಯನ್ನೂ ಪರಾಕ್ರಮವನ್ನೂ ನಾನು ಬಲ್ಲೆನು. ನೀನು ನನ್ನ ಅಂತರಂಗವನ್ನರಿಯದೆ ತಾಯಿಯಾದ ಕೌಸಲ್ಯಾದೇವಿಯ ಮಾತನ್ನು ಅನುಸರಿಸಿ ನನಗೆ ಮಹತ್ತಾದ ದುಃಖವನ್ನುಂಟು ಮಾಡುತ್ತಿದ್ದೀಯೆ. ಲೋಕದಲ್ಲಿ ಧರ್ಮವು ಫಲಿಸಿದರೆ ಅರ್ಥ ಕಾಮಗಳೂ ಫಲಿಸುವುವು. ಈ ವಿಚಾರದಲ್ಲಿ ಸಂಶಯವಿಲ್ಲ. ತನ್ನ ಮನಸ್ಸಿಗೆ ಅನುಕೂಲಳೂ ಪತಿವ್ರತೆಯೂ ರೂಪವತಿಯೂ ಸತ್ಕುಲಪ್ರಸೂತೆಯೂ ಆದ ಹೆಂಡತಿಯುಳ್ಳ ಗೃಹಸ್ಥನಿಗೆ, ಅವಳಿಂದ ಸಮಸ್ತ ಧರ್ಮಾರ್ಥ

ಕಾಮಮೋಕ್ಷಗಳೂ ಫಲಿಸುವುವು. ಬಲ್ಲವರು ಧರ್ಮವನ್ನೇ ಪ್ರತಿಪಾದಿಸುವರು. ಗುರು, ಅರಸ, ವೃದ್ಧನಾದ ತಂದೆ—ಇವರು ಕೋಪದಿಂದಲಾಗಲಿ ಸಂತೋಷದಿಂದಲಾಗಲಿ ಸ್ವೇಚ್ಛೆಯಿಂದಲಾಗಲಿ ಹೇಗೆ ಆಜ್ಞಾಪಿಸಿದರೂ ಧರ್ಮಾತ್ಮನಾದವನು ಧರ್ಮವನ್ನಾಶ್ರಯಿಸಿ ಆ ಕಾರ್ಯವನ್ನು ಮಾಡಬೇಕಲ್ಲದೆ ಉಪೇಕ್ಷೆಮಾಡಬಾರದು. ಆದ್ದರಿಂದ ನಮ್ಮ ತಂದೆಯಾದ ದಶರಥರಾಯನು ಆಜ್ಞಾಪಿಸಿದ ಕಾರ್ಯವನ್ನು ನಾನು ಮೀರುವುದಕ್ಕೆ ಸಮರ್ಥನಲ್ಲ. ಆತನು ಹೇಳಿದ ಸಮಸ್ತ ಕಾರ್ಯಗಳನ್ನೂ ಯಥಾವತ್ತಾಗಿ ಮಾಡಬೇಕು. ಆತನು ನನಗೂ ನಿನಗೂ ಕೌಸಲ್ಯಾದೇವಿಗೂ ಆಜ್ಞೆಮಾಡುವುದಕ್ಕೆ ಸಮರ್ಥನು. ನಾವೆಲ್ಲರೂ ಆತನು ಹೇಳಿದಂತೆ ಕೇಳಬೇಕು. ನಮಗೆ ಆತನೇ ಧರ್ಮಪ್ರವರ್ತಕನು ; ಆತನೇ ಗತಿ. ಅಂಥ ರಾಜನು ಧರ್ಮಮಾರ್ಗಪ್ರವರ್ತಕನಾಗಿ ಜೀವಂತನಾಗಿರುವಾಗ ಕೌಸಲ್ಯಾದೇವಿಯು ನನ್ನ ಜೊತೆಗೆ ಅನಾಥೆಯಾದ ವಿಧವೆಯಂತೆ ಅರಣ್ಯಕ್ಕೆ ಬರಬಹುದೆ ? ಅಮ್ಮ, ನೀನು ನನ್ನನ್ನು ವನವಾಸಕ್ಕೆ ಆಶೀರ್ವಾದ ಮಾಡಿ ಕಳುಹಿಸು. ನಾನು ವನಕ್ಕೆ ಹೋಗಿ ಹದಿನಾಲ್ಕು ವರುಷಗಳಿರಬೇಕೆಂಬ ಮಿತಿಯು ತೀರಿದ ಕೂಡಲೆ ಹಿಂದಕ್ಕೆ ಬರುವೆನು. ಪೂರ್ವದಲ್ಲಿ ಯಯಾತಿರಾಯನು ಸ್ವರ್ಗಲೋಕದಿಂದ ಭೂಮಿಗೆ ಬಂದು ತನ್ನ ಸತ್ತ್ವದಿಂದ ತಿರುಗಿ ಸ್ವರ್ಗಕ್ಕೆ ಹೋಗಲಿಲ್ಲವೆ ? " ಎಂದು ನುಡಿದನು. ಬಳಿಕ ಅವಶ್ಯವಾಗಿ ದಂಡಕಾರಣ್ಯಕ್ಕೆ ಹೋಗಬೇಕೆಂದು ತನ್ನ ತಮ್ಮನಾದ ಲಕ್ಷ್ಮಣನಿಗೆ ತನ್ನ ಅಭಿಪ್ರಾಯವನ್ನು ತಿಳಿಸಿ ಕೌಸಲ್ಯಾದೇವಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಬಯಸಿದನು.



## ೨೩ ನೆಯ ಅಧ್ಯಾಯ

## ಶ್ರೀರಾಮನು ಲಕ್ಷ್ಮಣನಿಗೆ ಹೇಳಿದ ಸಮಾಧಾನ

ಆಮೇಲೆ ಅತ್ಯಂತ ಕೋಪಯುಕ್ತನಾಗಿ ಮಹಾಶೇಷನಂತೆ ನಿಟ್ಟುಸಿರು ಬಿಡುತ್ತ ಕಣ್ಣುಗಳನ್ನು ಅರಳಿಸುತ್ತ ವ್ಯಥೆಪಡುತ್ತಿದ್ದ ತನ್ನ ಪ್ರಿಯಸಹೋದರನಾದ ಲಕ್ಷ್ಮಣನನ್ನು ಕಂಡು ಶ್ರೀರಾಮನು ತನ್ನ ಧೈರ್ಯದಿಂದ ಆತನಿಗೂ ಧೈರ್ಯವನ್ನುಂಟುಮಾಡುತ್ತ ಹೀಗೆ ನುಡಿದನು : " ಲಕ್ಷಣ, ಕೋಪವನ್ನು ಸಾಕುಮಾಡು. ಧೈರ್ಯವನ್ನಾಶ್ರಯಿಸು. ಪಟ್ಟಾಭಿಷೇಕಕ್ಕೆ ಯತ್ನಮಾಡಿ ನಿಲ್ಲಿಸಿದರೆಂಬ ಅವಮಾನವನ್ನು ಮನಸ್ಸಿನಲ್ಲೆಣಿಸಬೇಡ. ನನ್ನ ಪಟ್ಟಾಭಿಷೇಕ ನಿಮಿತ್ತವಾಗಿ ಕೂಡಿಸಿರುವ ಸಮಸ್ತ ವಸ್ತುಗಳಿಂದ ಭರತನಿಗೆ ಪಟ್ಟಾಭಿಷೇಕವಾದೀತೋ ಆಗದೋ ಎಂದು ಸಂಶಯಪಡುವ ಕೈಕೇಯಿದೇವಿಯ ಸಂದೇಹವನ್ನು ಹೋಗಲಾಡಿಸು. ಆ ದೇವಿಗೆ ಸಂದೇಹದಿಂದ ಉಂಟಾಗುವ ದುಃಖವನ್ನು ನಾನು ನೋಡಲಾರೆನು ! ಲಕ್ಷ್ಮಣ, ನನಗೆ ಪಟ್ಟವಾದರೂ ಸರಿ, ಆಗದಿದ್ದರೂ ಸರಿ ಎಂದು ಉಪೇಕ್ಷೆಯನ್ನು ಮಾಡಿಕೊಂಡಿದ್ದೇನೆ. ಲೋಕದಲ್ಲಿ ತಂದೆತಾಯಿಗಳಿಗೆ ವಿರೋಧ ಮಾಡುವುದನ್ನು ಕಂಡದ್ದೂ ಕೇಳಿದ್ದೂ ಇಲ್ಲ. ಅಂಥ ಕೃತ್ಯವು ಮನಸ್ಸಿನಲ್ಲಾದರೂ ಸ್ಮರಿಸಲು ಯೋಗ್ಯವಲ್ಲ. ತಾನು ಕೈಕೇಯಿದೇವಿಗೆ ಕೊಟ್ಟ ವರಗಳನ್ನು ಈಗ ಕೊಡದಿದ್ದರೆ ಆ ಅಸತ್ಯದಿಂದ ಪರಲೋಕಹಾನಿಯುಂಟಾಗುವುದೆಂದು ಭಯಪಡುತ್ತಿರುವ ದಶರಥಮಹಾರಾಜನು ನಿರ್ಭಯನಾಗಿರಲಿ ! ನನ್ನ ಪಟ್ಟಾಭಿಷೇಕವನ್ನು ನಿಲ್ಲಿಸದಿದ್ದ ಪಕ್ಷದಲ್ಲಿ ಸತ್ಯಪ್ರತಿಜ್ಞೆಯು ಕೆಟ್ಟು ತಂದೆಗೆ ಮನಸ್ತಾಪವುಂಟಾದರೆ ಅದರಿಂದ ನಮ್ಮ ಮನಸ್ಸಿಗೂ ದುಃಖವಾಗುವುದು. ಆದಕಾರಣ

ಎಲೈ ಲಕ್ಷ್ಮಣ, ನಾನು ಪಟ್ಟಾಭಿಷೇಕಕಾರ್ಯವನ್ನು ನಿಲ್ಲಿಸಿ ವನವನ್ನೈದುವೆನು. ನನ್ನ ವನಗಮನದಿಂದ ಕೈಕೇಯಿದೇವಿಯು ಕೃತಾರ್ಥೆಯಾಗಿ ತನ್ನ ಮಗನಾದ ಭರತನಿಗೆ ಪಟ್ಟಾಭಿಷೇಕವನ್ನು ಮಾಡಲಿ. ನಾನು ನಾರುಬಟ್ಟೆಗಳನ್ನುಟ್ಟು ಜಡೆಗಳನ್ನು ಧರಿಸಿಕೊಂಡು ವನಕ್ಕೆ ಹೋದರೆ, ಅದರಿಂದ ನನ್ನ ಮನಸ್ಸಿಗೆ ದುಃಖವುಂಟಾಗಲಾರದು; ಕೈಕೇಯಿದೇವಿಗೆ ಅತ್ಯಂತ ಸಂತೋಷವಾಗುವುದು. ಆ ದೇವಿಗೆ ನನ್ನನ್ನು ವನಕ್ಕೆ ಕಳುಹಿಸಬೇಕೆಂಬ ಬುದ್ಧಿಯೇ ಸ್ಥಿರವಾಗಿದೆ. ಆದ್ದರಿಂದ ನಾನು ಶೀಘ್ರವಾಗಿ ವನವಾಸಕ್ಕೆ ಹೋಗದೆ ಆ ದೇವಿಯ ಮನಸ್ಸಿಗೆ ದುಃಖವನ್ನುಂಟು ಮಾಡುವದು ಉಚಿತವಲ್ಲ. ಲಕ್ಷ್ಮಣ, ನನಗೆ ವನವಾಸವನ್ನು ದೈವವೇ ನಿಯಮಿಸಿದೆ. ಅಲ್ಲದಿದ್ದರೆ ನನ್ನ ಅಧೀನವಾದ ರಾಜ್ಯವು ಭರತನಿಗೆ ಬರಬೇಕೆಂದೂ ನನ್ನ ಮನಸ್ಸಿಗೆ ದುಃಖವನ್ನುಂಟು ಮಾಡಬೇಕೆಂದೂ ಕೈಕೇಯಿದೇವಿಗೆ ಬುದ್ಧಿಯುಂಟಾಗುತ್ತಿರಲಿಲ್ಲ. ಎಲೈ ಲಕ್ಷ್ಮಣ, ನನ್ನ ತಾಯಂದಿರಲ್ಲಿ ನನಗೆ ತಾರತಮ್ಯವಿಲ್ಲ. ಮೂವರನ್ನೂ ಸಮಾನವಾಗಿ ಎಣಿಸುವುದನ್ನು ನೀನು ತಿಳಿದಿದ್ದೀಯೆ. ಕೈಕೇಯಿದೇವಿಯು ತನ್ನ ಮಗನಾದ ಭರತನಲ್ಲಿಯೂ ನಮ್ಮಲ್ಲಿಯೂ ತಾರತಮ್ಯವನ್ನೆಣಿಸಿದ್ದನ್ನು ಯಾವಾಗಲಾದರೂ ಕಂಡದ್ದಿಲ್ಲ. ಆದರೆ ಈಗ ನನ್ನ ಪಟ್ಟಾಭಿಷೇಕವನ್ನು ನಿಲ್ಲಿಸಿ ನನ್ನನ್ನು ದಂಡಕಾರಣ್ಯಕ್ಕೆ ಕಳುಹಿಸಬೇಕೆಂದು ನುಡಿಯುವುದು ಆಕೆಗೆ ಸಹಜವಾದ ಗುಣವಲ್ಲ. ದೈವಗತಿಯಿಂದ ಹೀಗಾಯಿತು. ಅಲ್ಲದಿದ್ದರೆ ಸ್ವಭಾವದಿಂದ ಸದ್ಗುಣಸಂಪನ್ನೆಯಾದ ಆ ದೇವಿಯೂ ಅಜ್ಞಾನಿಯಾದ ಸ್ತ್ರೀಯಹಾಗೆ ತನ್ನ ಪತಿಯಾದ ಮಹಾರಾಜನ ಸಂಮುಖದಲ್ಲಿ ನನ್ನ ಸಂಗಡ ಇಂಥ ಕರ್ಣಕಠೋರವಾದ ವಾಕ್ಯವನ್ನು ನುಡಿಯುತ್ತಿರಲಿಲ್ಲ. ಸಮಸ್ತ ಪ್ರಾಣಿಗಳಿಗೂ ವಿಪತ್ತುಗಳು ದೈವಗತಿಯಿಂದಲೇ ಬರುವುವು. ಹಾಗಲ್ಲದಿದ್ದರೆ ಕೈಕೇಯಿದೇವಿಗೆ ನನ್ನಲ್ಲಿ ವಿಪರೀತಬುದ್ಧಿ ಹುಟ್ಟುತ್ತಿದ್ದಿತೆ ? ಲಕ್ಷ್ಮಣ, ನನಗೆ ಪಟ್ಟಾಭಿಷೇಕವಾಗುವುದೆಂದು ಉತ್ಸಾಹದಿಂದಿದ್ದೆನು. ಅದು ನಿಂತದ್ದು ನನ್ನ ಜನ್ಮಾಂತರಕರ್ಮಗತಿಯಿಂದಲ್ಲದೆ ಬೇರೆಯಲ್ಲ. ಪ್ರಾಣಿಗಳಿಗೆ ಸುಖದುಃಖಗಳು ಪ್ರೀತಿಭಯಗಳು ಲಾಭಾಲಾಭಗಳು ಎಂಬ ದ್ವಂದ್ವದುಃಖಗಳು ದೈವಗತಿಯಿಂದಲೇ ಬರುವುವಲ್ಲದೆ ತಮ್ಮ ಬುದ್ಧಿಚಾತುರ್ಯಗಳಿಂದ ಬರುವವಲ್ಲ. ಅನೇಕ ಉಗ್ರತಪಸ್ಸುಗಳನ್ನು ಮಾಡುವಂಥ ಋಷಿಗಳಿಗೂ ವ್ರತನಿಯಮಗಳು ತಮ್ಮ ಕಾಮಕ್ರೋಧಾದಿಗಳಿಂದ ನಷ್ಟವಾಗಿ ದುಃಖವುಂಟಾಗುವುದು. ಮನಸ್ಸಿನಲ್ಲಿ ಬಯಸದಿರುವ ಕಾರ್ಯಗಳು ದೈವಗತಿಯಿಂದ ಕೈಗೂಡುತ್ತವೆ. ಬಯಸುವ ಕಾರ್ಯಗಳು ಮಧ್ಯದಲ್ಲಿ ವಿಘ್ನ ಬಂದು ಕೆಡುತ್ತವೆ ! ಲಕ್ಷ್ಮಣ, ನನ್ನ ಪಟ್ಟಾಭಿಷೇಕವು ನಿಂತದ್ದು ದೈವಗತಿಯಿಂದಲ್ಲದೆ ಮತ್ತೊಂದಲ್ಲವೆಂಬ ನಿಶ್ಚಯ ನನ್ನದು ; ಆದಕಾರಣ ನಾನು ದುಃಖಿಸುವುದಿಲ್ಲ. ನೀನು ನನಗಾಗಿ ನಿನ್ನ ಮನಸ್ಸಿನಲ್ಲಿರುವ ಕೋಪವನ್ನು ಬಿಡು. ಅಭಿಷೇಕಾರ್ಥವಾಗಿ ಸುವರ್ಣ ಕಲಶಗಳಲ್ಲಿ ತರಿಸಿರುವ ಗಂಗಾದಿ ಸಕಲ ತೀರ್ಥಗಳಿಂದ ನನಗೆ ತಪೋರಾಜ್ಯಾಭಿಷೇಕವಾದರೂ ಆಗಲಿ. ಆದರೆ ನನಗೆ ಈ ರಾಜ್ಯದ್ರವ್ಯಗಳಿಂದೇನಾಗಬೇಕು ? ಈಗ ತಂದಿರುವ ತೀರ್ಥಗಳು ನನಗೆ ವನವಾಸವೆಂಬ ವ್ರತವನ್ನುಂಟುಮಾಡಲಿ ! ಲಕ್ಷ್ಮಣ, ನನ್ನ ಪಟ್ಟಾಭಿಷೇಕಕ್ಕೆ ವಿಘ್ನವಾಗಿ ರಾಜ್ಯಾಧಿಪತ್ಯವಿಲ್ಲದೆ ಹೋಯಿತೆಂದು ನೀನು ದುಃಖಪಡಬೇಡ. ರಾಜ್ಯಾಧಿಪತ್ಯಕ್ಕಿಂತಲೂ ವನವಾಸವೇ ಪರಲೋಕ ಸಾಧನವಾದದ್ದು ! ಎಲೈ ಲಕ್ಷ್ಮಣ, ನನ್ನ ಪಟ್ಟಾಭಿಷೇಕವು ನಿಂತದ್ದಕ್ಕಾಗಿ ನನ್ನ ಕಿರಿಯ ತಾಯಿಯಾದ ಕೈಕೇಯಿದೇವಿಯ ವಿಷಯದಲ್ಲಿ ಅನ್ಯಥಾ ಭಾವಿಸಬಾರದು. ಲೋಕದಲ್ಲಿ ಪ್ರಾಣಿಗಳಿಗೆ ವಿಪತ್ತು ಬರುವುದು ದೈವಗತಿಯಿಂದಲ್ಲದೆ ಮತ್ತೊಂದರಿಂದಲ್ಲ. ಮನುಷ್ಯರು ನೆನೆದ ಕಾರ್ಯವು ಆಗದ ಹಾಗೂ ನೆನೆಯದ ಕಾರ್ಯವು ಆಗುವಹಾಗೂ ಮಾಡುವಂಥ ದೈವಗತಿಯ ಸಾಮರ್ಥ್ಯವನ್ನು ನೀನು ಬಲ್ಲೆ" ಎಂದು ಸಂತವಿಟ್ಟನು.

---

# ಶ್ರೀರಾಮನ ವನವಾಸಕ್ಕಾಗಿ ಲಕ್ಷ್ಮಣನ ಕೋಪ

ಆಮೇಲೆ ಲಕ್ಷ್ಮಣನು ಶ್ರೀರಾಮನ ಧೈರ್ಯವನ್ನು ಕಂಡು ಸಂತೋಷ, ಆತನ ಪಟ್ಟಾಭಿಷೇಕಕ್ಕೆ ವಿಘ್ನವಾಯಿತೆಂಬ ದುಃಖ—ಇವೆರಡರ ನಡುವೆ ಸಿಕ್ಕಿಕೊಂಡನು. ಅವನು ಹುಬ್ಬುಗಂಟಿಕ್ಕಿಕೊಂಡು ಹುತ್ತದ ಬಿಲದಲ್ಲಿ ಕೋಪದಿಂದ ಮೊರೆಯುವ ಸರ್ಪದಂತೆ ನಿಟ್ಟುಸಿರು ಬಿಡುತ್ತಿದ್ದನು. ಅತಿಯಾಗಿ ಕೋಪಿಸಿರುವ ಸಿಂಹರಾಜನ ಮುಖದಂತೆ ಒಪ್ಪುತ್ತಿದ್ದ ಮುಖವುಳ್ಳ ಲಕ್ಷ್ಮಣನು ದುಃಖಾತಿಶಯದಿಂದ, ತನ್ನ ಶಿರಸ್ಸನ್ನು ಅಡ್ಡಲಾಗಿ ಹೆಗಲಿನ ಮೇಲಿರಿಸಿಕೊಂಡು ಮದ್ದಾನೆಯು ಸೊಂಡಿಲತುದಿಯನ್ನು ತೂಗುವಂತೆ ತನ್ನ ಬಲಗೈಯನ್ನು ತೂಗುತ್ತ ತನ್ನ ಬಲಭಾಗದಲ್ಲಿದ್ದ ಶ್ರೀರಾಮನನ್ನು ಕಡೆಗಣ್ಣಿನಿಂದ ನೋಡುತ್ತ ಆತನನ್ನು ಕುರಿತು ಹೀಗೆಂದನು: " ಶ್ರೀರಾಮ, ಲೋಕದಲ್ಲಿ ಮನುಷ್ಯರಿಗೆ ಇಷ್ಟವಾದ ವಸ್ತುಗಳನ್ನು ಕಂಡರೆ ಸಂತೋಷವಾಗುವುದು. ಪಟ್ಟಾಭಿಷೇಕಕ್ಕೆ ವಿಘ್ನವಾದದ್ದರಿಂದ ಮುಖಕಾಂತಿಗುಂದಿತೆಂದು ಜನರು ನುಡಿಯುವರು. ದಶರಥರಾಯನ ಮಾತನ್ನು ಮೀರಿದರೆ ಧರ್ಮಕ್ಕೆ ವಿಘ್ನಬಂದೀತೆಂಬ ಶಂಕೆಯಿಂದ ನೀನು ಸಂಭ್ರಮವನ್ನು ತೋರಿಸಿಕೊಂಡಿದ್ದೀಯಲ್ಲದೆ ಮತ್ತೊಂದಲ್ಲ. ಧೈರ್ಯಗುಣಸಂಪತ್ತುಳ್ಳ, ಕ್ಷತ್ರಿಯೋತ್ತಮನಾಗಿ ವಿವೇಕನಿಧಿಯಾದ ನಿನ್ನಂಥವನು ಇಂಥ ಹೇಡಿಮಾತುಗಳನ್ನು ನುಡಿಯಬಹುದೆ ? ನಿನ್ನ ಪುರುಷಸಾಮರ್ಥ್ಯವಿದ್ದಂತೆ ಮಾಡದೆ ಕಾರ್ಯಸಂಘಟನೆಯಲ್ಲಿ ಅಸಮರ್ಥವಾದ ದೈವಾಧೀನತೆಯನ್ನು ಏಕೆ ನುಡಿಯುತ್ತಿದ್ದೀಯೆ ? ದಶರಥರಾಯನ ಮಾತನ್ನು ಮೀರಿದರೆ ಪಾಪವು ಬರುವುದೆಂದು ಹೇಳುತ್ತೀಯೆ. ಪಾಪಿಷ್ಠನಾದ ಆ ರಾಜನೂ ಕೈಕೇಯಿದೇವಿಯೂ ನಿನ್ನನ್ನು ವನವಾಸಕ್ಕೆ ಕಳುಹಿಸಬೇಕೆಂದೂ ಭರತನಿಗೆ ಪಟ್ಟವನ್ನು ಕಟ್ಟಬೇಕೆಂದೂ ಆಲೋಚನೆ ಮಾಡಿದ್ದರಿಂದ ಅವರಲ್ಲಿ ಪಾಪವಿಲ್ಲದೆಹೋಗುವುದೆ ! ಲೋಕದಲ್ಲಿ ಧರ್ಮಕೃತ್ಯವೆಂಬ ನೆವದಿಂದ ಅಧರ್ಮವನ್ನೇ ಮಾಡುತ್ತಿರುವವರು ಅನೇಕಮಂದಿಯುಂಟು. ಅವರನ್ನು ನೀನು ಅರಿತವನಲ್ಲವೆ ? ದಶರಥರಾಯನೂ ಕೈಕೇಯಿದೇವಿಯೂ ಭರತನಿಗೆ ಪಟ್ಟವನ್ನು ಕಟ್ಟಿ ನಿನ್ನನ್ನು ವನವಾಸಕ್ಕೆ ಕಳುಹಿಸಬೇಕೆಂಬ ಉದ್ದೇಶವನ್ನು ಮನಸ್ಸಿನಲ್ಲಿರಿಸಿಕೊಂಡಿದ್ದರು. ಮೊದಲೇ ಆ ಕಾರ್ಯವನ್ನು ಮಾಡಿದರೆ ಲೋಕದಲ್ಲಿರುವ ಜನರು ಗುಣವಂತನಾಗಿ ಜ್ಯೇಷ್ಠಪುತ್ರನಾದ ನಿನ್ನನ್ನು ಬಿಟ್ಟು ಕಿರಿಯವನಾದ ಭರತನಿಗೆ ಪಟ್ಟವನ್ನು ಕಟ್ಟುವುದು ದಶರಥರಾಯನಿಗೆ ಉಚಿತವಲ್ಲವೆಂದು ನಿಂದಿಸುವರೆಂಬ ಭಯವು ಅವರಿಗೆ ಹುಟ್ಟಿತು. ನಿನಗೆ ಪಟ್ಟವನ್ನು ಕಟ್ಟುವುದಾಗಿ ಯತ್ನಮಾಡಿ ಪಟ್ಟಾಭಿಷೇಕ ಮುಹೂರ್ತಸಮಯದಲ್ಲಿ ದಶರಥರಾಯನು ಪೂರ್ವದಲ್ಲಿ ಕೈಕೇಯಿದೇವಿಗೆ ಎರಡು ವರಗಳನ್ನು ಕೊಟ್ಟಿದ್ದನೆಂದು ಪಟ್ಟಾಭಿಷೇಕಸಮಯದಲ್ಲಿ ಆ ದೇವಿಯು ಒಂದು ವರದಿಂದ ನಿನಗೆ ವನವಾಸವನ್ನೂ ಮತ್ತೊಂದು ವರದಿಂದ ಭರತನಿಗೆ ಪಟ್ಟಾಭಿಷೇಕವನ್ನೂ ಬೇಡಿಕೊಂಡಳೆಂದೂ ಪ್ರಸಂಗವನ್ನು ಹುಟ್ಟಿಸಬೇಕೆಂದು ಸಂಕೇತ ಮಾಡಿಕೊಂಡಿದ್ದಾರೆ. ಆದ್ದರಿಂದ ನಿನ್ನ ಪಟ್ಟಾಭಿಷೇಕವನ್ನು ನಿಲ್ಲಿಸಿದರು. ದಶರಥರಾಯನು ಪೂರ್ವದಲ್ಲಿ ವರಗಳನ್ನು ಕೊಟ್ಟಿದ್ದ ಪಕ್ಷದಲ್ಲಿ ನಿನಗೆ ಪಟ್ಟಾಭಿಷೇಕವನ್ನು ಮಾಡುವುದಾಗಿ ಹೇಳುವನೆ ? ಹಾಗೆ ಹೇಳಿದ ಬಳಿಕ ನಿನಗೆ ವನವಾಸ, ಭರತನಿಗೆ ಪಟ್ಟಾಭಿಷೇಕ—ಎಂಬವರಗಳನ್ನು ಕೊಡುವುದು ಉಚಿತವೆ ? ನಿನ್ನ ಹೊರತಾಗಿ

ಮತ್ತೊಬ್ಬನಿಗೆ ಪಟ್ಟಾಭಿಷೇಕವನ್ನು ಮಾಡುವುದು ಲೋಕವಿರುದ್ಧವಾದ ಕೃತ್ಯ! ಆದಕಾರಣ, ಶ್ರೀರಾಮ, ಈ ಲೋಕನಿಂದಿತವಾದ ಕೃತ್ಯವನ್ನು ನಾನು ಸಹಿಸುವವನಲ್ಲ. ನಿನ್ನ ಕಾರ್ಯಕ್ಕೆ ವಿಘ್ನಬಂದರೂ ವಿಘ್ನವನ್ನು ಮಾಡಿದ ದಶರಥರಾಯನ ಮಾತನ್ನು ಮೀರಬಾರದೆಂಬ ಬುದ್ಧಿಯು ನಿನಗೆ ಹೇಗೆ ಬಂದಿತೋ ನಾನರಿಯೆನು. ಇದು ನನಗೆ ಸಂಮತವಲ್ಲ. ದಶರಥರಾಯನ ಮಾತನ್ನು ಮೀರಬಾರದೆಂಬುದು ನಿನಗೆ ಉಚಿತವಲ್ಲ, ನೀನು ಕಾರ್ಯಸಾಧನೆಯಲ್ಲಿ ಸಮರ್ಥನಾಗಿದ್ದರೂ. ಸ್ತ್ರೀವಶನಾಗಿ ಪಾಪಿಯಾದ ದಶರಥರಾಯನ ಲೋಕವಿರುದ್ಧವಾದ ಮಾತನ್ನು ಪರಿಪಾಲಿಸಬೇಕೆಂದಿದ್ದೀಯೆ. ಈಗ ನೀನು ಹೇಡಿತನದಿಂದ ಅಂಗೀಕರಿಸಿದರೂ ಈ ಕಾರ್ಯವು ನನಗೆ ಸಂಮತವಲ್ಲ. ಈ ಕೃತ್ಯವು ಧರ್ಮವಾದರೂ ರಾಜನೀತಿಗೆ ವಿರುದ್ಧವಾದ್ದರಿಂದ ನನ್ನ ಮನಸ್ಸಿಗೆ ದುಃಖವನ್ನುಂಟುಮಾಡುತ್ತದೆ. ಶತ್ರುವಾಗಿ ಅತಿಕಾಮುಕನಾಗಿರುವ ತಂದೆಯ ಮಾತನ್ನು ಮೀರಬಾರದೆಂದು ಹೇಗೆ ನುಡಿಯುತ್ತೀಯೆ? ಈ ಕಾರ್ಯವನ್ನು ನಮ್ಮ ತಾಯಿತಂದೆಗಳು ಮಾಡಲಿಲ್ಲವೆಂದೂ ದೈವಗತಿಯಿಂದ ಬಂದುದೆಂದೂ ನೀನು ಹೇಳುತ್ತೀಯೆ. ನಾನು ದೈವಗತಿಯನ್ನು ಉಪೇಕ್ಷೆ ಮಾಡುವನಲ್ಲದೆ ಅದರ ಪ್ರಕಾರ ನಡೆಯುವವನಲ್ಲ. ಪರಾಕ್ರಮಿಗಳಾದ ಮಹಾತ್ಮರು ತಮ್ಮ ಪುರುಷಸಾಮರ್ಥ್ಯದಿಂದ ದೈವಗತಿಯನ್ನು ಲೆಕ್ಕಿಸದೆ ತಮ್ಮ ಕಾರ್ಯಕ್ಕೆ ಹಾನಿಯಾದರೂ ವ್ಯಥೆಪಡರು. ನನ್ನ ಪುರುಷಸಾಮರ್ಥ್ಯವನ್ನೂ ದೈವಸಾಮರ್ಥ್ಯವನ್ನೂ ಲೋಕದಲ್ಲಿರುವ ಜನರು ನೋಡಿದರೆ ದೈವಗತಿ ಮನುಷ್ಯಯತ್ನ ಇವುಗಳಿಗಿರುವ ವ್ಯತ್ಯಾಸಗಳು ಪ್ರಕಟವಾಗುವುವು. ಅವರು ಮನುಷ್ಯಸಾಮರ್ಥ್ಯದಿಂದ ದೈವಗತಿಯು ಅಳಿಸಿಹೋಗುವುದೆಂಬುದನ್ನು ಕಣ್ಣಾರೆ ನೋಡಲಿ. ನಿನ್ನ ಪಟ್ಟಾಭಿಷೇಕವು ದೈವಗತಿಯಿಂದ ವಿಘ್ನವಾಯಿತೆಂಬ ಪಕ್ಷದಲ್ಲಿ, ಮಹಾಬಲವುಳ್ಳ ಮದ್ದಾನೆಯು ಅಂಕುಶವನ್ನು ಕೊಡಹಿಕೊಂಡು ಪೆಟ್ಟನ್ನು ಲೆಕ್ಕಿಸದೆ ಮನಸ್ಸು ಬಂದಂತೆ ಸಂಚರಿಸುವ ಹಾಗೆ ನಾನು ನನ್ನ ಸಾಮರ್ಥ್ಯದಿಂದ ಅಡ್ಡಬರುವ ದೈವವನ್ನಾದರೂ ನಿಲ್ಲಿಸುತ್ತೇನೆ. ಇಂದ್ರಾದಿ ಲೋಕಪಾಲಕರಾದರೂ ಮೂರುಲೋಕದವರಾದರೂ ನಿನ್ನ ಪಟ್ಟಾಭಿಷೇಕವನ್ನು ನಿಲ್ಲಿಸಲಾರರು. ನಮ್ಮ ತಂದೆಯಾದ ದಶರಥರಾಯನು ನಿನ್ನನ್ನು ವನವಾಸಕ್ಕೆ ಕಳುಹಿಸಿ ಭರತನಿಗೆ ಪಟ್ಟಾಭಿಷೇಕವನ್ನು ಮಾಡುವುದಕ್ಕೆ ಸಮರ್ಥನಾಗಲಾರನೆಂದು ಹೇಳುವುದೇನು! ಹದಿನಾಲ್ಕು ವರುಷಗಳವರೆಗೆ ನಿನ್ನನ್ನು ವನವಾಸಕ್ಕೆ ಕಳುಹಿಸಬೇಕೆಂದು ಹೇಳುವವರಿಗೇ ಹದಿನಾಲ್ಕು ವರುಷಗಳವರೆಗೆ ವನವಾಸವಾಗುವಂತೆ ಮಾಡುವೆನು. ದಶರಥರಾಯನು ಭರತನಿಗೆ ಪಟ್ಟಾಭಿಷೇಕವನ್ನು ಮಾಡುವುದಾಗಿ ಹೇಳುವ ಮಾತನ್ನೇ ನಿಲ್ಲಿಸುವೆನು. ನನ್ನ ಪೌರುಷವು ಉಗ್ರವಾದದ್ದು. ದೈವಗತಿಯನ್ನು ಬಿಟ್ಟು ಅಂಥ ಉಗ್ರಗತಿಯಿಂದ ಅನೇಕ ಸಾವಿರ ವರುಷಗಳವರೆಗೆ ರಾಜ್ಯಪರಿಪಾಲನಮಾಡಿ ಕಡೆಯಲ್ಲಿ ವಾನಪ್ರಸ್ಥಾಶ್ರಮಕ್ಕೆ ತೆರಳು. ಆಮೇಲೆ ನಿನ್ನ ಮಕ್ಕಳೇ ರಾಜ್ಯಪರಿಪಾಲನವನ್ನು ಮಾಡಬೇಕಲ್ಲದೆ ಮತ್ತೊಬ್ಬರಿಗೆ ಸಲ್ಲದು. ನಮ್ಮ ವಂಶದ ರಾಜರ್ಷಿಗಳೆಲ್ಲರೂ ಮಕ್ಕಳು ಪ್ರಬುದ್ಧರಾದಮೇಲೆ ರಾಜ್ಯಭಾರವನ್ನು ಅವರ ವಶಮಾಡಿ ವನಕ್ಕೆ ಹೋಗಿ ವಾನಪ್ರಸ್ಥಾಶ್ರಮವನ್ನು ಕೈಗೊಂಡರೆಂಬುದು ನಮ್ಮ ಕುಲದ ಬಿರುದು. ಅಂಥ ರಾಜ್ಯಾಭಿಷೇಕಕ್ಕೆ ಯೋಗ್ಯನಾದ ನೀನು ಮನಸ್ಸಿನಲ್ಲಿ ರಾಜ್ಯಭಾರವನ್ನು ವಹಿಸಬಾರದೆಂದೆಣಿಸಿದರೆ ನಿನ್ನ ರಾಜ್ಯವನ್ನು ನಿನ್ನ ಅಪ್ಪಣೆಯಿಂದ ನಾನು ಪರಿಪಾಲಿಸಿಕೊಂಡು ನಿನಗೆರಡೆಣಿಸದೆ ಸಮುದ್ರವು ದಡವನ್ನು ಮೀರದಂತಿರುವೆನು. ನೀನು ನಿನ್ನ ಮನಸ್ಸಿನಲ್ಲಿ ಸಂಶಯವನ್ನು ಬಿಟ್ಟು ಗಂಗಾದಿನದಿಗಳಿಂದ ನಿನ್ನ ಪಟ್ಟಾಭಿಷೇಕಾರ್ಥವಾಗಿ ಸುವರ್ಣಕಲಶಗಳಲ್ಲಿ ತರಲ್ಪಟ್ಟ ಮಂಗಲ ತೀರ್ಥಗಳಿಂದ ಪಟ್ಟಾಭಿಷೇಕವನ್ನು ಮಾಡಿಸಿಕೊ. ನಿನ್ನ ಅಪ್ಪಣೆಯಿಂದ ನಾನೊಬ್ಬನೇ ಸಮಸ್ತ ಶತ್ರುಗಳನ್ನೂ ಜಯಿಸುವೆನು. ನಯವಾಗಿ ಉರುಟಾಗಿ ಉದ್ದವಾದ ನನ್ನ ಈ ತೋಳುಗಳು

ಭೂಷಣಾರ್ಥವಾಗಿರುವವಲ್ಲ. ನಾನು ಶೃಂಗಾರಾರ್ಥವಾಗಿ ಬಿಲ್ಲು ಬಾಣಗಳನ್ನು ಧರಿಸಿ ಕೊಂಡಿರುವವನಲ್ಲ. ಎರಡು ಭುಜಗಳು, ಬಿಲ್ಲು ಬಾಣಗಳು—ಈ ನಾಲ್ಕರಿಂದ ಕೂಡಿ ಶತ್ರುಸಂಹಾರಕ್ಕೆ ಸನ್ನದ್ಧನಾಗಿದ್ದೇನೆ. ಲೋಕದಲ್ಲಿ ನನಗೆ ಶತ್ರುವೇ ಇಲ್ಲ. ಮಿಂಚಿನಂತೆ ಹೊಳೆಯುತ್ತಿರುವ ನನ್ನ ಖಡ್ಗಧಾರೆಯಿಂದ ರಣದಲ್ಲಿ ದೇವೇಂದ್ರನನ್ನಾದರೂ ಸಂಹರಿಸುವೆನು. ಯಾರನ್ನೂ ಲೆಕ್ಕಿಸುವವನಲ್ಲ, ನನ್ನ ಭುಜಬಲದಿಂದಲೂ ಹೊಳೆಯುವ ಖಡ್ಗಗಳಿಂದಲೂ ಕತ್ತರಿಸಲ್ಪಡುವ ಆನೆ ಕುದುರೆ ಕಾಲಾಳುಗಳ ಶಿರಸ್ಸುಗಳಿಂದ ಭೂಮಿಯೆಲ್ಲವನ್ನೂ ತುಂಬುವೆನು. ಯುದ್ಧದಲ್ಲಿ ನನ್ನ ಹೊಯ್ಲುಗಳಿಂದ ಕತ್ತರಿಸಲ್ಪಟ್ಟ ಆನೆಗಳು ಪರ್ವತಗಳಂತೆಯೂ ಮಿಂಚಿನೊಡಗೂಡಿದ ಮೋಡಗಳಂತೆಯೂ ಭೂಮಿಯಲ್ಲಿ ಬೀಳುವುವು. ನಾನು ಬೆರಳುಚೀಲವನ್ನು ಧರಿಸಿ ಹೊಡೆದೆನಾದರೆ ಮನುಷ್ಯರಲ್ಲಿ ನನ್ನ ಮುಂದೆ ನಿಲ್ಲುವವರಾರು ? ನನ್ನ ಯುದ್ಧಚಾತುರ್ಯವನ್ನು ನೀನು ನೋಡಬೇಕು. ಅನೇಕ ಶರಗಳಿಂದ ಒಬ್ಬನನ್ನು ಹೊಡೆಯಬೇಕಾದರೂ ಒಂದು ಶರದಿಂದ ಅನೇಕ ಮಂದಿಯನ್ನು ಹೊಡೆಯಬೇಕಾದರೂ ಶಕ್ತನು. ನಾನು ಬಿಲ್ಲಿನಲ್ಲಿ ಅಂಬನ್ನು ಹೂಡಿ ಮರ್ಮಸ್ಥಾನಗಳಿಗೆ ಗುರಿಯಿಟ್ಟು ಹೊಡೆದರೆ ಆ ಕ್ಷಣದಲ್ಲೇ ಅನೇಕ ಗಜತುರಗಗಳು ಸತ್ತುಬೀಳುವುವು. ದಶರಥ ರಾಯನಿಗೆ ಆಧಿಪತ್ಯವಿಲ್ಲದಂತೆಯೂ ನಿನಗೆ ಅಧಿಪತ್ಯವಾಗುವಂತೆಯೂ ಮಾಡಿದೆನಾದರೆ ನನ್ನ ಬಿಲ್ಲು ಬಾಣಗಳ ಸಾಮರ್ಥ್ಯವು ಪ್ರಕಟವಾಗುವುದು ! ಶ್ರೀರಾಮ, ನಿನಗೆ ಪಟ್ಟಾಭಿಷೇಕವಾಗುವಂತೆ ಈ ಕಾರ್ಯವನ್ನು ಈಡೇರಿಸಿ ನನ್ನ ಭುಜಗಳಿಗೆ ಶ್ರೀಗಂಧವನ್ನು ಅನುಲೇಪನ ಮಾಡುವೆನು. ನಾನು ಬಾಹುಪುರಿಯನ್ನು ತೊಟ್ಟದ್ದು. ದಾನಾರ್ಥವಾಗಿ ಅನೇಕ ದ್ರವ್ಯವನ್ನು ಕೊಟ್ಟದ್ದು, ಸ್ನೇಹಿತರನ್ನು ಪರಿಪಾಲಿಸಿದ್ದು ಮೊದಲಾದವು ಸಾರ್ಥಕವಾಗುವುವು. ನಿನ್ನ ಪಟ್ಟಾಭಿಷೇಕಕ್ಕೆ ವಿಘ್ನಮಾಡುವವರ ಸ್ನೇಹಿತರನ್ನೂ ಸಂಹರಿಸುತ್ತೇನೆ. ಅವರ ಕೀರ್ತಿಯನ್ನು ಅಪಹರಿಸುತ್ತೇನೆ. ನನ್ನ ಪುರುಷ ಸಾಮರ್ಥ್ಯದಿಂದ ನಿನಗೆ ಹೇಗೆ ರಾಜ್ಯಾಧಿಪತ್ಯವಾಗುವುದೋ ಹಾಗೆ ಯತ್ನಮಾಡುತ್ತೇನೆ. ನೀನು ನನಗೆ ಅಪ್ಪಣೆಯನ್ನು ಕೊಡು. ನಾನು ನಿನಗೆ ಕಿಂಕರನು " ಎಂದು ಅತ್ಯಂತ ವಿನಯೋಕ್ತಿಗಳಿಂದ ನುಡಿದನು.

ಆ ಮಾತನ್ನು ಕೇಳಿ ರಘುಕುಲತಿಲಕನಾದ ಶ್ರೀರಾಮನು ಲಕ್ಷ್ಮಣನನ್ನು ಮೈದಡವಿ ಸಂತವಿಟ್ಟನು. ಮತ್ತು ಲಕ್ಷ್ಮಣನನ್ನು ಕುರಿತು " ಲಕ್ಷ್ಮಣ, ನಾನು ತಂದೆಯ ಆಜ್ಞೆಯನ್ನು ಮೀರತಕ್ಕವನಲ್ಲ. ನಾನು ಸನ್ಮಾರ್ಗದಲ್ಲಿಯೇ ನಡೆಯತಕ್ಕವನು ಎಂದು ತಿಳಿದುಕೊ " ಎಂಬುದಾಗಿ ಹೇಳಿದನು.



## ೨೪ ನೆಯ ಅಧ್ಯಾಯ

## ಕೌಸಲ್ಯಾದೇವಿಯು ಶ್ರೀರಾಮನ ವನವಾಸಕ್ಕೆ ಒಪ್ಪಿದ್ದು

ಈ ಪ್ರಕಾರ ಸರ್ವಪ್ರಯತ್ನದಿಂದಲೂ ಶ್ರೀರಾಮನು ತನ್ನ ತಂದೆಯ ಆಜ್ಞೆಯನ್ನು ಪರಿಪಾಲಿಸಲು ನಿಶ್ಚಯಬುದ್ಧಿಯುಳ್ಳವನಾಗಿರುವುದನ್ನು ತಿಳಿದು ಕೌಸಲ್ಯಾದೇವಿಯು ದುಃಖದಿಂದ ಕಣ್ಣೀರನ್ನು ಸುರಿಸುತ್ತ ನುಡಿದಳು : " ಶ್ರೀರಾಮನು ಒಂದುಬಾರಿಯಾದರೂ ದುಃಖವನ್ನು

ಕಂಡವನಲ್ಲ. ಸಮಸ್ತ ಪ್ರಾಣಿಗಳ ಸಂಗಡವೂ ಪ್ರಿಯವಚನಗಳನ್ನೇ ನುಡಿಯುವವನು. ನನ್ನ ಉದರದಲ್ಲಿ ದಶರಥರಾಯನಿಂದ ಅವತರಿಸಿದಂಥ ಶ್ರೀರಾಮನು ವನಪ್ರದೇಶದಲ್ಲಿ ನೆಲದಮೇಲೆ ಉದುರಿದ ಕಾಳುಗಳನ್ನು ತಿಂದುಕೊಂಡು ಉಂಛವೃತ್ತಿಯಿಂದ ಹದಿನಾಲ್ಕು ವರುಷಗಳನ್ನು ಹೇಗೆ ಕಳೆಯುವನು? ಯಾವನ ಊಳಿಗದ ಜನರು ಮೃಷ್ಟಾನ್ನವನ್ನು ಭುಜಿಸುತ್ತಿದ್ದಾರೆಯೋ ಅಂಥ ಶ್ರೀರಾಮನು ಗೆಡ್ಡೆಗೆಣಸು ಫಲಪರ್ಣಗಳಿಂದ ಹೇಗೆ ದಿನಗಳನ್ನು ಕಳೆಯುವನು? ದಶರಥರಾಯನು ತನಗೆ ಪ್ರಿಯನಾದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸುತ್ತಾನೆಂಬ ವೃತ್ತಾಂತವನ್ನು ಯಾರು ತಾನೆ ಕೇಳಿ ನಂಬುವರು? ಕೇಳಿದವರು ಯಾರು ಭಯಪಡದಿರುವರು? ಶ್ರೀರಾಮ, ನೀನು ಸಮಸ್ತ ಲೋಕಗಳಿಗೂ ಮನೋಹರನು. ಇಂಥ ನೀನು ಕಾಡಿಗೆ ಹೋಗುವುದನ್ನು ನೋಡಿದರೆ ದೈವವೇ ಬಲಶಾಲಿ, ಅದೇ ಎಲ್ಲವನ್ನೂ ನಡೆಸುವುದು ಎಂದು ತಿಳಿಯದಿರದು. ನಿನ್ನ ವಿಯೋಗ ದಿಂದುಂಟಾಗುವ ಶೋಕವೆಂಬ ಅಗ್ನಿಯು ಬೇಸಿಗೆಯಲ್ಲಿ ಒಣಗಿದ ಗಿಡಗಳನ್ನು ದಹಿಸುವಂತೆ ನನ್ನನ್ನು ದಹಿಸುವುದು. ಆದಕಾರಣ ಶ್ರೀರಾಮ, ನೀನು ಯಾವದಿಕ್ಕಿಗೆ ಹೋದರೂ ಕರುವನ್ನರಸಿಕೊಂಡು ಹೋಗುವ ಹಸುವಿನಂತೆ ನಿನ್ನ ಹಿಂದೆ ಬರುವೆನು!" ಎಂದು ನುಡಿದಳು.

ಪುರುಷೋತ್ತಮನಾದ ಶ್ರೀರಾಮನು ಅತ್ಯಂತದುಃಖಪಡುತ್ತಿದ್ದ ಕೌಸಲ್ಯಾದೇವಿಯನ್ನು ನೋಡಿ "ಅಮ್ಮ, ಕೈಕೇಯಿದೇವಿಯ ಮಾತಿನಿಂದ ಮರುಳಾದ ದಶರಥರಾಯನು, ನಾನು ವನಕ್ಕೆ ಹೋದಮೇಲೆ ನೀನೂ ಆತನನ್ನು ಬಿಟ್ಟು ನನ್ನ ಸಂಗಡ ಬಂದರೆ ಬದುಕಲಾರನು. ಅದಲ್ಲದೆ ಸ್ತ್ರೀಯರು ತಮ್ಮ ಪತಿಯನ್ನು ಪರಿತ್ಯಜಿಸಿ ಬಂದರೆ ಮಹತ್ತಾದ ಪಾಪವೂ ನಿಂದೆಯೂ ಬರುವುವು. ಆದ್ದರಿಂದ ನೀನು ನಿನ್ನ ಪತಿಯಾದ ದಶರಥರಾಯನನ್ನು ಬಿಟ್ಟು ನನ್ನೊಡನೆ ಬರುವುದನ್ನು ನೆನೆಯಬೇಡ. ಎಷ್ಟರವರೆಗೆ ಜಗತ್ಪತಿಯೂ ರಘುವಂಶೋದ್ಧಾರಕನೂ ಆದ ನನ್ನ ತಂದೆ ದಶರಥರಾಯನು ಜೀವದಿಂದಿರುವನೋ ಅಷ್ಟರವರೆಗೆ ನೀನು ನಿನ್ನ ಪತಿಯ ಸೇವಾಸತ್ಕಾರಗಳನ್ನು ಮಾಡಿಕೊಂಡಿರುವುದೇ ಶಾಶ್ವತವಾದ ಧರ್ಮ" ಎಂದು ಹೇಳಿದನು.

ಆ ಮಾತನ್ನು ಕೇಳಿ ಶುಭಲಕ್ಷಣಸಂಪನ್ನೆಯಾದ ಕೌಸಲ್ಯಾದೇವಿಯು ಹಾಗೆಯೇ ಆಗಲೆಂದು ಶ್ರೀರಾಮನ ಮಾತನ್ನಂಗೀಕರಿಸಿ ಶ್ರೀರಾಮನು ಲೋಕೋತ್ತಮವಾದ ಸದ್ಗುಣವುಳ್ಳವನೆಂದು ಮನಸ್ಸಿನಲ್ಲಿ ಸಂತೋಷಪಡುತ್ತಿದ್ದಳು. ಆಗ ಸಮಸ್ತ ಧರ್ಮರಹಸ್ಯಗಳನ್ನೂ ಬಲ್ಲ ಶ್ರೀರಾಮನು ಮರಳಿ ಆ ದೇವಿಯನ್ನು ಕುರಿತು "ಅಮ್ಮ, ನಾನೂ ನೀನೂ ದಶರಥರಾಯನು ಆಜ್ಞಾಪಿಸಿದಂತೆ ನಡೆಯಬೇಕು. ಆತನು ನಿನಗೆ ಪತಿ, ನನಗೆ ತಂದೆ, ಮತ್ತು ಸಮಸ್ತ ಪ್ರಾಣಿಗಳಿಗೂ ಒಡೆಯನಾದ ಅರಸನು. ಆದ್ದರಿಂದ ಆತನ ಮಾತನ್ನು ಮೀರುವುದು ನಮಗೆ ಉಚಿತವಲ್ಲ. ನಾನು ವನವನ್ನೈದಿ ಹದಿನಾಲ್ಕು ವರುಷಗಳೆಂಬ ಮಿತಿಯು ತುಂಬಿದಕೂಡಲೇ ಬರುವೆನು" ಎಂದು ನುಡಿದನು.

ಪುತ್ರವತ್ಸಲೆಯಾದ ಕೌಸಲ್ಯಾದೇವಿಯು ದುಃಖದಿಂದ ಆತನನ್ನು ಕುರಿತು "ಶ್ರೀರಾಮ, ಸವತಿಯರ ಮಧ್ಯದಲ್ಲಿ ನಾನಿರಲಾರೆನು. ಆದ್ದರಿಂದ ನನ್ನನ್ನು ವನಕ್ಕೆ ಕರೆದುಕೊಂಡುಹೋಗು" ಎಂದು ಅಳುತ್ತ ಹೇಳಿದಳು. ಶ್ರೀರಾಮನು ತಾನೂ ಅಳುತ್ತಾ ಆಕೆಯನ್ನು ಕುರಿತು ಹೀಗೆಂದನು: "ಅಮ್ಮ, ದಶರಥರಾಯನು ನಿನಗೂ ನನಗೂ ರಕ್ಷಕನು. ಎಲ್ಲರಿಗೂ ಆಜ್ಞೆಯನ್ನು ಮಾಡುವುದಕ್ಕೆ ಸಮರ್ಥನು. ಆದ್ದರಿಂದ ಆತನ ಆಜ್ಞೆಯನ್ನು ನಾವು ಮೀರುವುದಕ್ಕೆ ಸಮರ್ಥರಲ್ಲ. ಆ ರಾಯನು ಧರ್ಮಾತ್ಮನು, ಸಕಲ ಪ್ರಾಣಿಗಳಲ್ಲಿಯೂ ವಿನಯದಿಂದ ಪ್ರಿಯೋಕ್ತಿಗಳನ್ನು ನುಡಿಯುವವನು,

ನಿನ್ನಲ್ಲಿ ಅತ್ಯಂತ ಪ್ರೀತಿಯುಳ್ಳವನು ನಾನು ವನವನ್ನೈದಿದರೆ ಪುತ್ರಶೋಕದಿಂದ ಕಿಂಚಿನ್ಮಾತ್ರವಾದರೂ ಬಳಲದಿರುವಹಾಗೆ ಆತನ ಸೇವೆಯನ್ನು ಮಾಡಿಕೊಂಡಿರುವುದೇ ನಿನಗೆ ಪತಿವ್ರತಾ ಧರ್ಮ ಮಹಾರಾಜನಿಗೆ ಪುತ್ರವಿಯೋಗದಿಂದ ವ್ಯಥೆಯಾದ ಪಕ್ಷದಲ್ಲಿ ಸಮಸ್ತ ರಾಜ್ಯಕ್ಕೂ ಬಾಧೆಯಾಗುವುದು ಆದ್ದರಿಂದ ನೀನು ಸಾವಧಾನವಾಗಿ ವೃದ್ಧನಾದ ರಾಜನ ಸೇವೆಯನ್ನು ಮಾಡಿಕೊಂಡಿರು. ಪತಿವ್ರತೆಯಾದ ಸ್ತ್ರೀಯು ವ್ರತೋಪವಾಸ ನಿಯಮಾದಿಗಳಿಂದ ಇದ್ದರೂ ಪತಿಸೇವೆಯನ್ನು ಮಾಡಲೇಬೇಕು. ಅಲ್ಲದಿದ್ದರೆ ನರಕವನ್ನೈದುವಳು. ಸ್ತ್ರೀಯಾದವಳು ಪತಿಸೇವೆಯಿಂದಲೇ ಸದ್ಗತಿಯನ್ನು ಪಡೆಯುವಳಲ್ಲದೆ ಮತ್ತೊಂದರಿಂದಲ್ಲ. ದೇವತಾರ್ಚನೆ ದೇವತಾ ನಮಸ್ಕಾರಗಳನ್ನು ಮಾಡದಿದ್ದರೂ ತನ್ನ ಪತಿಗೆ ಎಡರಿಲ್ಲದೆ ಸೇವೆಯನ್ನು ಮಾಡಬೇಕು. ಇದೇ ಲೌಕಿಕಾಚಾರ; ಶ್ರುತಿಸ್ಮೃತಿಗಳಲ್ಲಿ ನಿರ್ಣಯಿಸಿದ ಧರ್ಮ. ನನಗಾಗಿ ಅಗ್ನಿಕಾರ್ಯಗಳನ್ನು ಮಾಡುವಾಗ ಪುಷ್ಪಾದಿಗಳಿಂದ ದೇವತೆಗಳನ್ನೂ ಸುವ್ರತರಾದ ಬ್ರಾಹ್ಮಣರನ್ನೂ ಪೂಜಿಸು. ನೀನು ನಿಯಮಸ್ಥೆಯಾಗಿ ಆಹಾರನಿಯಮಗಳನ್ನು ಮಾಡಿಕೊಂಡು ನಿನ್ನ ಪತಿಯ ಸೇವೆಯಲ್ಲಿ ತತ್ಪರಳಾಗಿ ನನ್ನ ಬರವನ್ನು ನೋಡಿಕೊಂಡಿರು. ನಾನು ನಿನ್ನ ಆಶೀರ್ವಾದದಿಂದ ತಿರುಗಿಬಂದಾಗ ಧರ್ಮಾತ್ಮರಲ್ಲಿ ಶ್ರೇಷ್ಠನಾದ ರಾಜನು ಜೀವಿಸಿದ್ದರೆ ಅಪರಿಮಿತವಾದ ಇಹಲೋಕ ಪರಲೋಕ ಸುಖಗಳನ್ನು ಪಡೆಯುವೆ" ಎಂದು ನುಡಿದನು.

ಕೌಸಲ್ಯಾದೇವಿಯು ಶೋಕದಿಂದ ಕಣ್ಣೀರು ತುಂಬಿಕೊಂಡು ಹೀಗೆಂದಳು: "ಶ್ರೀರಾಮ, ನೀನು ವನವಾಸಕ್ಕೆ ತೆರಳಬೇಕೆಂದು ನಿಶ್ಚಯಿಸಿರುವುದನ್ನು ನಾನು ನಿಲ್ಲಿಸುವುದಕ್ಕೆ ಸಮರ್ಥಳಲ್ಲ. ನಮ್ಮ ಸಂಭಾಷಣೆಗಳಿಂದ ಕಾಲವಿಳಂಬವಾಗುತ್ತದೆ. ನೀನು ಏಕಾಗ್ರಚಿತ್ತನಾಗಿ ಸಾವಧಾನದಿಂದ ವನಕ್ಕೆ ತೆರಳು. ನಿನಗೆ ಅನೇಕ ಶ್ರೇಯಸ್ಸಾಗಲಿ! ನೀನು ವನಕ್ಕೆ ಹೋಗಿ ಹದಿನಾಲ್ಕು ವರುಷಗಳೆಂಬ ಮಿತಿಯನ್ನು ತೀರಿಸಿ ನಿನ್ನ ತಂದೆಯಾದ ದಶರಥರಾಯನ ಪ್ರತಿಜ್ಞೆಯನ್ನು ಪರಿಪಾಲಿಸಿ ಪಿತೃ ಋಣವನ್ನು ಕಳೆದುಕೊಂಡು ವ್ರತಸಮಾಪ್ತಿಯನ್ನು ಮಾಡಿ ಸುಖದಿಂದ ಅಯೋಧ್ಯಾಪಟ್ಟಣಕ್ಕೆ ತಿರುಗಿ ಬಂದರೆ ನಾನು ನನ್ನ ಮನಸ್ಸಿನ ಬಳಲಿಕೆಯನ್ನು ಬಿಟ್ಟು ಅನೇಕ ಸುಖವನ್ನು ಪಡೆಯುವೆನು. ರಾಮ, ನಾನು ಎಷ್ಟುಬಗೆಯಲ್ಲಿ ನಿಲ್ಲಹೇಳಿದರೂ ನನ್ನ ಮಾತನ್ನತಿಕ್ರಮಿಸುವಹಾಗೆ ದೈವಗತಿಯು ನಿನ್ನನ್ನು ಪ್ರೇರಿಸುತ್ತಿದೆ. ಲೋಕದಲ್ಲಿ ದೈವಗತಿಯನ್ನು ಮೀರುವವರಿಲ್ಲ! ಆದ್ದರಿಂದ ಶ್ರೀರಾಮ, ನೀನು ವನಕ್ಕೆ ಹೋಗಿ ತಿರುಗಿಬಂದು ನನಗೆ ಸಂತೋಷವನ್ನುಂಟುಮಾಡು. ಈಗ ನಿನ್ನ ವಿಯೋಗವಾಗುವುದೆಂಬ ದುಃಖದಿಂದ ಅಧಿಕವಾಗಿ ನೊಂದುಕೊಳ್ಳುತ್ತಿರುವ ನನ್ನನ್ನು ಮನೋಹರವಾದ ಸಮಾಧಾನವಾದ ವಾಕ್ಯಗಳಿಂದ ಸಂತವಿಟ್ಟು ಸಂತೋಷಪಡಿಸು. ನೀನು ವನಕ್ಕೆ ಹೋಗಿ ನಾರುಡುಗೆಯನ್ನುಟ್ಟು ಜಡೆಗಳನ್ನು ಧರಿಸಿಕೊಂಡು ವ್ರತಸಮಾಪ್ತಿಯನ್ನು ಮಾಡಿ ಪುನಃ ಯಾವಾಗ ಬರುವೆಯೋ ಎಂದು ಹಾತೊರೆಯುತ್ತಿರುತ್ತೇನೆ" ಎಂದು ನುಡಿದಳು. ಅನಂತರ ವನವಾಸವನ್ನು ನಿಶ್ಚಯಿಸಿಕೊಂಡು ಪ್ರಯಾಣವಾಗಿ ಹೊರಟಂಥ ಸರ್ವಲಕ್ಷಣಸಂಪನ್ನನಾದ ಶ್ರೀರಾಮನಿಗೆ ಅನೇಕ ಆಶೀರ್ವಾದಗಳನ್ನು ಮಾಡಿ ಮಂಗಳವನ್ನು ಕೋರುತ್ತಿದ್ದಳು.



# ೨೫ನೆಯ ಅಧ್ಯಾಯ

## ಕೌಸಲ್ಯಾದೇವಿಯು ಶ್ರೀರಾಮನಿಗೆ ಮಾಡಿದ ಆಶೀರ್ವಾದ

ಅನಂತರ ಕೌಸಲ್ಯಾದೇವಿಯು ತನ್ನ ದುಃಖವನ್ನು ತಡೆದುಕೊಂಡು ಕೈಯಲ್ಲಿ ಉದಕವನ್ನು ತೆಗೆದು ಕಣ್ಣಿಗೆ ತೊಡೆದುಕೊಂಡಳು. ಆಮೇಲೆ ತನ್ನ ಮಗನಾದ ಶ್ರೀರಾಮನಿಗೆ ಮಂಗಳಾರ್ಥವಾಗಿ ಆಶೀರ್ವಾದವನ್ನು ಮಾಡುತ್ತ ಆತನನ್ನು ಕುರಿತು ಹೀಗೆ ಆಶೀರ್ವಾದಮಾಡಿದಳು: " ಶ್ರೀರಾಮ, ನೀನು ದಶರಥರಾಯನ ಆಜ್ಞೆಯನ್ನು ಮೀರುವುದಿಲ್ಲ. ಶೀಘ್ರವಾಗಿ ತಿರುಗಿ ಬಾ. ಸನ್ಮಾರ್ಗದಲ್ಲಿ ನಡೆಯುತ್ತಿರು. ಎಲೈ ಧರ್ಮಜ್ಞನೆ, ನೀನು ಧೈರ್ಯದಿಂದಲೂ ನಿಯಮದಿಂದಲೂ ಧರ್ಮಕ್ಕೆ ವಿಘ್ನಬಾರದಂತೆ ನಡೆದುಕೊಂಡರೆ ಆ ಧರ್ಮವೇ ನಿನ್ನನ್ನು ರಕ್ಷಿಸುವುದು. ಯಾವ ದೇವಾಲಯಗಳಲ್ಲಿರುವ ದೇವತೆಗಳಿಗೆ ನೀನು ನಮಸ್ಕಾರವನ್ನು ಮಾಡುತ್ತಿದ್ದೆಯೋ ಆ ದೇವತೆಗಳೂ ಸಮಸ್ತ ಋಷಿಗಳೂ ನಿನ್ನನ್ನು ರಕ್ಷಿಸಲಿ! ಪೂರ್ವದಲ್ಲಿ ನಿನಗೆ ವಿಶ್ವಾಮಿತ್ರನು ಕೊಟ್ಟ ಮಂತ್ರಾಸ್ತ್ರಗಳು ಸದ್ಗುಣಸಂಪನ್ನನಾದ ನಿನ್ನನ್ನು ರಕ್ಷಿಸಲಿ ! ಆಜಾನುಬಾಹುಗಳುಳ್ಳ ಶ್ರೀರಾಮ. ನೀನು ಮಾಡಿದ ಪಿತೃಸೇವೆ ಮಾತೃಸೇವೆಗಳಿಂದಲೂ ನಿನ್ನ ಸತ್ಯದಿಂದಲೂ ರಕ್ಷಿಸಲ್ಪಟ್ಟವನಾಗಿ ಚಿರಂಜೀವಿಯಾಗಿ ಬದುಕು! ಯಾಗಾದಿ ಸತ್ಕರ್ಮಗಳಿಗೆ ಯೋಗ್ಯವಾದ ಪಲಾಶ ಸಮಿತ್ತುಗಳು ದರ್ಭೆಗಳು ಯಜ್ಞಾಂಗದ ವೇದಿಗಳು ಆಯತನಂಗಳು ಸ್ಥಂಡಿಲಗಳು ನಾನಾಪ್ರಕಾರವಾದ ವೃಕ್ಷಗಳು ಪರ್ವತಗಳು ಪುಣ್ಯನದಿಗಳು ಪವಿತ್ರವಾದ ಸರೋವರಗಳು ಗರುಡಾದಿ ಪುಣ್ಯಪಕ್ಷಿಗಳು ಮಹಾಶೇಷಾದಿ ಪುಣ್ಯಸರ್ಪಗಳು ಸಿಂಹಾದಿ ಮೃಗಗಳು ಮೊದಲಾದವೂ ನಿನ್ನನ್ನು ರಕ್ಷಿಸಲಿ ! ಮತ್ತು ಸಾಧ್ಯರೆಂಬ ದೇವತೆಗಳು ವಿಶ್ವೇದೇವತೆಗಳು ಮರುತ್ತುಗಳು ಸಪ್ತಋಷಿಗಳು ಧಾತೃಗಳು ವಿಧಾತೃಗಳು ಪೂಷಾದೇವತೆ ಭಗದೇವತೆಗಳು ಆರ್ಯಮದೇವತೆಗಳು ಲೋಕಪಾಲಕರು ಸಂವತ್ಸರ ಋತು ಮಾಸ ಪಕ್ಷ ತಿಥಿ ನಕ್ಷತ್ರ ಯೋಗ ಕರಣ ದಿನ ಮುಹೂರ್ತಗಳು ಮೊದಲಾದವು ನಿನ್ನನ್ನು ರಕ್ಷಿಸಲಿ ! ಸ್ಮೃತಿ ಧೃತಿ ಧರ್ಮ ಷಣ್ಮುಖ ಸೋಮ ಬೃಹಸ್ಪತಿ ಸಪ್ತರ್ಷಿಗಳು ನಾರದ ಮೊದಲಾದವರೆಲ್ಲರೂ ಯಾವಾಗಲೂ ನಿನ್ನನ್ನು ರಕ್ಷಿಸಲಿ ! ಸಿದ್ಧರೂ ದಿಕ್ಕುಗಳೂ ದ್ವಾದಶಾದಿತ್ಯರೂ ನಿತ್ಯವೂ ನಿನ್ನನ್ನು ರಕ್ಷಿಸಲಿ! ಸಮುದ್ರ ಅಂತರಿಕ್ಷ ಭೂಮಿ ಜಲ ತೇಜೋಽನಿಲಗಳೂ ಹಗಲಿರುಳುಗಳೂ ಪ್ರಾತಃಸಂಧ್ಯಾ ಸಾಯಂಸಂಧ್ಯಾಕಾಲಗಳೂ ವನವಾಸದಲ್ಲಿರುವ ನಿನ್ನನ್ನು ರಕ್ಷಿಸಲಿ ! ಕಲಾ ಕಾಷ್ಠಾದಿಗಳು ನಿನ್ನನ್ನು ರಕ್ಷಿಸಲಿ ! ವನದಲ್ಲಿ ಇರುವ ನಿನಗೆ ಪಿಶಾಚಗಳಿಂದಲೂ ಮಹಾಭಯಂಕರರಾಗಿ ಕ್ರೂರಕರ್ಮಿಗಳೂ ಮಾಂಸಭಕ್ಷಕರೂ ಆದ ರಾಕ್ಷಸರಿಂದಲೂ ಭಯವಿಲ್ಲದಿರಲಿ ! ಹುಲಿ ಕರಡಿ ಕಾಡುಹಂದಿ ಕಾಡೆಮ್ಮೆ ಕೋಣಗಳಿಂದ ನಿನಗೆ ಉಪದ್ರವವಾಗದಿರಲಿ ! ಮನುಷ್ಯರನ್ನು ಕೊಲ್ಲುವ ದುಷ್ಟಮೃಗಗಳಿಂದ ನಿನಗೆ ಬಾಧೆಯಿಲ್ಲದಿರಲಿ ! ಮಹಾಪರಾಕ್ರಮವುಳ್ಳ ಸಮಸ್ತ ಮಂತ್ರಾಸ್ತ್ರಗಳೂ ನಿನಗೆ ಸಿದ್ಧಿಸಲಿ ! ಅಂತರಿಕ್ಷಮಾರ್ಗದಲ್ಲಿ ಚರಿಸುವ ಪ್ರಾಣಿಗಳಿಂದಲೂ ಸಮಸ್ತ ದೇವತೆಗಳಿಂದಲೂ ಭೂಮಿಯಲ್ಲಿ ಚರಿಸುವ ಪ್ರಾಣಿಗಳಿಂದಲೂ ಶತ್ರುಗಳಿಂದಲೂ ನಿನಗೆ ಭಯವಾಗದಿರಲಿ ! ಶುಕ್ರ ಸೋಮ ರುದ್ರ ಕುಬೇರ ಯಮ ಮೊದಲಾದವರು ನಿನ್ನನ್ನು ರಕ್ಷಿಸಲಿ ! ಅಗ್ನಿ ವಾಯು ಮಂತ್ರಾದಿ ದೇವತೆಗಳೂ ನಿನ್ನನ್ನು ಸ್ನಾನಕಾಲದಲ್ಲಿ ರಕ್ಷಿಸಲಿ ! ಸಮಸ್ತ ಸೃಷ್ಟಿಗಳಿಗೂ ಕರ್ತನಾದ ಬ್ರಹ್ಮದೇವನೂ ಮರೀಚಿ ಕಶ್ಯಪರು ಮೊದಲಾದ ಋಷಿಗಳೂ ದಂಡಕಾರಣ್ಯವಾಸಿಯಾದ ನಿನ್ನನ್ನು ರಕ್ಷಿಸಲಿ ! " ಹೀಗೆ ಆಶೀರ್ವಾದವನ್ನು ಮಾಡಿದಮೇಲೆ ಆತನ ಪ್ರಯಾಣಕ್ಕೆ ಉಚಿತವಾದ

ಮಂಗಳಹೋಮವನ್ನು ಬ್ರಾಹ್ಮಣರಿಂದ ಮಾಡಿಸಿ ದೇವಪೂಜಾರ್ಥವಾಗಿ ಪೂಜಾದ್ರವ್ಯಗಳನ್ನು ಸಂಪಾದಿಸಿ, ಗಂಧಾಕ್ಷತೆ ಧೂಪ ದೀಪ ಪುಷ್ಪಾದಿಗಳಿಂದಲೂ ಸ್ತೋತ್ರಪಾಠಗಳಿಂದಲೂ ಇಷ್ಟದೇವತಾ ಪ್ರಾರ್ಥನೆಯನ್ನು ಮಾಡಿ, ಉತ್ತಮವಾದ ಪುಷ್ಪ ತುಷ್ಪ ಹೋಮಯೋಗ್ಯವಾದ ಸಮಿತ್ತುಗಳು ಬಿಳಿಯ ಸಾಸುವ ಮೊದಲಾದವುಗಳಿಂದ ಶಾಂತಿ ಹೋಮಗಳನ್ನು ಮಾಡಿಸಿ. ಜೇನುತುಪ್ಪ ಮೊಸರು ದರ್ಭೆ ತುಪ್ಪಗಳಿಂದ ಆ ದೇವತೆಗಳಿಗೆ ವಿಧ್ಯುಕ್ತವಾಗಿ ಬಲಿ ಹಾಕಿಸಿ, ವೇದವೇದಾಂಗ ಪಾರಂಗತರಾದ ಬ್ರಾಹ್ಮಣರಿಂದ ಶಾಂತಿಸೂಕ್ತಗಳನ್ನು ಹೇಳಿಸಿ, ಪ್ರಯಾಣಕಾಲೋಚಿತವಾದ ಪುಣ್ಯಾಹವಾಚನವನ್ನು ಮಾಡಿಸಿ, ಹೋಮವನ್ನು ಮಾಡಿದ ಆಚಾರ್ಯರಿಗೆ ಬೇಕಾದ ವಸ್ತುಗಳನ್ನು ದಕ್ಷಿಣೆಯಾಗಿ ಕೊಟ್ಟಳು. ಅನಂತರ ಶ್ರೀರಾಮನನ್ನು ಕುರಿತು “ ಶ್ರೀರಾಮ, ಪೂರ್ವದಲ್ಲಿ ಸಮಸ್ತ ದೇವತೆಗಳಿಗೂ ಒಡೆಯನಾದ ದೇವೇಂದ್ರನು ವೃತ್ರಾಸುರನನ್ನು ಕೊಲ್ಲುವುದಕ್ಕೆ ಹೊರಟಾಗ ಬೃಹಸ್ಪತಿ ಮೊದಲಾದ ದೇವತೆಗಳು ಆತನಿಗೆ ಜಯವಾಗಬೇಕೆಂದು ಯಾವ ಮಂಗಳವನ್ನು ಮಾಡಿಸಿದರೋ ಆ ಮಂಗಳವು ನಿನಗಾಗಲಿ ! ಅಮೃತಮಥನವನ್ನು ಮಾಡುವ ಸಮಯದಲ್ಲಿ ದೇವಾಸುರರು ಯಾವ ಮಂಗಳವನ್ನು ಮಾಡಿದರೋ—ದೇವೇಂದ್ರನು ದೈತ್ಯರನ್ನು ಜಯಿಸಬೇಕೆಂದು ವಜ್ರಾಯುಧವನ್ನು ತೆಗೆದುಕೊಂಡು ಹೊರಡುವಾಗ ದೇವಮಾತೆಯಾದ ಅದಿತಿಯು ಯಾವ ಮಂಗಳ ವನ್ನು ಮಾಡಿದಳೋ ಅಂಥ ಮಂಗಳವು ನಿನಗಾಗಲಿ ! ತ್ರಿವಿಕ್ರಮಾವತಾರದಲ್ಲಿ ಬಲಿಚಕ್ರವರ್ತಿಯನ್ನು ಜಯಿಸಬೇಕೆಂದು ಪರಮಪುರುಷನಿಗೆ ಯಾವ ಮಂಗಳವನ್ನು ಮಾಡಿದರೋ ಅಂಥ ಮಂಗಳವು ನಿನಗಾಗಲಿ ! ಇನ್ನು ಯಾವಯಾವ ದೇವತೆಗಳು ಯಾವಯಾವ ಸಮಯದಲ್ಲಿ ಯಾವಯಾವ ಮಂಗಳಕೃತ್ಯಗಳನ್ನು ಮಾಡಿದರೋ ಅಂಥ ಮಂಗಳಗಳು ನಿನಗೆ ಜಯವನ್ನು ಕೊಡಲಿ ! ” ಎಂದು ನುಡಿದು ಸೇಸೆಯನ್ನಿಕ್ಕಿ ಶಿರಸ್ಸಿನಲ್ಲಿ ಗಂಧ ಪುಷ್ಪ ಬಿಳಿಯ ಸಾಸುವೆ ಮೊದಲಾದ ವಸ್ತುಗಳಿಂದ ರಕ್ಷೆಯನ್ನು ಕಟ್ಟಿ ಮಂಗಳಸೂಕ್ತಗಳನ್ನು ಹೇಳಿಸಿ ಮನಸ್ಸಿನಲ್ಲಿ ದುಃಖವಿದ್ದರೂ ಬಹಿರಂಗದಲ್ಲಿ ವನವಾಸಯಾತ್ರಾರ್ಥವಾದ ಸಜ್ಜನ್ನು ಮಾಡಿ ಶಿರಸ್ಸನ್ನು ಆಘ್ರಾಣಿಸಿದಳು. ಆತನನ್ನು ಕುರಿತು “ ಮಗನೆ, ಸುಖದಿಂದ ವನವನ್ನೈದು : ನೀನು ಭಯರಹಿತನಾಗಿ ಸುಖವಾಗಿ ವನವಾಸವನ್ನು ಕಳೆದು ನಿನ್ನ ಪತ್ನಿಯಾದ ಸೀತಾದೇವಿಯ ಸಹಿತವಾಗಿ ಅಯೋಧ್ಯಾಪಟ್ಟಣಕ್ಕೆ ಹಿಂದಿರುಗು. ಆಗ ಸಮಸ್ತ ದುಃಖವನ್ನೂ ಕಳೆದುಕೊಂಡು ಉದಯಾದ್ರಿಯಲ್ಲಿ ಉದಯವಾಗುವ ಚಂದ್ರಮಂಡಲದಂತೆ ಸಿಂಹಾಸನದ ಮೇಲೆ ಕುಳಿತಿರುವ ನಿನ್ನನ್ನು ನೋಡುವೆನು ” ಎಂದು ಪ್ರದಕ್ಷಿಣವನ್ನು ಮಾಡಿ ಆಲಿಂಗಿಸಿ ಕಣ್ಣೀರು ಸುರಿಸುತ್ತಾ ಶ್ರೀರಾಮನನ್ನು ಬೀಳ್ಕೊಟ್ಟಳು.

ಶ್ರೀರಾಮನು ಆ ದೇವಿಗೆ ಪುನಃಪುನಃ ನಮಸ್ಕಾರಗಳನ್ನು ಮಾಡಿ ಮುಖದಲ್ಲಿ ಹೆಚ್ಚಿದ ತೇಜಸ್ಸುಳ್ಳವನಾಗಿ ತನ್ನ ಕಾಂತಿಯಿಂದ ಸಮಸ್ತ ದಿಕ್ಕುಗಳನ್ನೂ ಬೆಳಗಿಸುತ್ತ ಸೀತಾದೇವಿಯ ಅರಮನೆಗೆ ತೆರಳಿದನು.



## ೨೬ ನೆ ಯ ಅ ಧ್ಯಾ ಯ

## ಶ್ರೀ ರಾ ಮ ನು ವ ನ ಕ್ಕೆ ಹೋ ಗು ವು ದಾ ಗಿ ಸೀ ತಾ ದೇ ವಿ ಗೆ ಹೇ ಳಿ ದ್ದು

ಈ ಪ್ರಕಾರದಲ್ಲಿ ಶ್ರೀರಾಮನು ಕೌಸಲ್ಯಾದೇವಿಗೆ ನಮಸ್ಕಾರಗಳನ್ನು ಮಾಡಿ ಆ ದೇವಿಯ ಆಶೀರ್ವಾದಗಳನ್ನು ಕೈಗೊಂಡು ಧರ್ಮಮಾರ್ಗಪ್ರವರ್ತಕನಾಗಿ ವನವಾಸಕ್ಕೆ ಸಿದ್ಧನಾದನು.

ಅನಂತರ ಸಮಸ್ತ ಜನರಿಂದಲೂ ಇಟ್ಟಣಿಸಿದ್ದ ರಾಜಮಾರ್ಗವನ್ನು ತನ್ನ ಕಾಂತಿಯಿಂದ ಬೆಳಗಿಸುತ್ತ ಸದ್ಗುಣಗಳಿಂದ ಸಮಸ್ತ ಜನರ ಮನಸ್ಸುಗಳೂ ಕರಗುವಂತೆ ಮಾಡುತ್ತ ತನ್ನ ಅರಮನೆಗೆ ಹೋದನು. ಅಲ್ಲಿ ಪಟ್ಟಾಭಿಷೇಕೋತ್ಸವನಿಮಿತ್ತವಾಗಿ ದೇವತಾರಾಧನೆಯನ್ನು ಮಾಡುತ್ತ ಪಟ್ಟಾಭಿಷೇಕಕ್ಕೆ ವಿಘ್ನವಾದ ವೃತ್ತಾಂತವನ್ನರಿಯದೆ ಉತ್ಸಾಹದಿಂದ ಅನೇಕಾಲಂಕಾರಯುಕ್ತಳಾಗಿದ್ದ ಸೀತಾದೇವಿಯ ಅಂತಃಪುರಕ್ಕೆ ಹೋದನು. ಆಗ ಶ್ರೀರಾಮನನ್ನು ಕಂಡು ರಾಜನೀತಿಯನ್ನು ಬಲ್ಲ ಸೀತಾದೇವಿಯು ಎದುರ್ಗೊಂಡು ಬಂದಳು. ಶ್ರೀರಾಮನು ಆ ದೇವಿಯ ಸಮೀಪಕ್ಕೆ ಹೋಗಿ ಲಜ್ಜೆಯಿಂದ ತಲೆಬಗ್ಗಿಸಿಕೊಂಡನು. ಆಗ ಸೀತಾದೇವಿಯು ಮನೋವ್ಯಥೆಯಿಂದ ಚಿಂತಾಕ್ರಾಂತನಾಗಿ ನಡೆದ ವೃತ್ತಾಂತವನ್ನು ಹೇಳುವುದಕ್ಕೆ ಸಂಕೋಚಪಡುತ್ತ ಮುಖಕಾಂತಿಗುಂದಿ ಮೌನದಲ್ಲಿದ್ದ ಆತನ ಮುಖಭಾವವನ್ನು ಕಂಡು ನಡುಗಿಹೋದಳು. ಅವಳು " ಪ್ರಾಣವಲ್ಲಭ, ಯಾವ ಕಾರಣದಿಂದ ಚಿಂತಾಕ್ರಾಂತನಾಗಿದ್ದೀಯೆ ? ಈ ದಿವಸ ಗುರುಪುಷ್ಯಯೋಗದಲ್ಲಿ ನಿನಗೆ ಪಟ್ಟಾಭಿಷೇಕವೆಂದು ಬ್ರಾಹ್ಮಣರು ನಿಶ್ಚಯಿಸಿದ್ದಾರೆ. ನೀನು ಏಕೆ ಹರ್ಷಪಡದೆ ಇದ್ದೀಯೆ ? ನೂರು ಸಲಾಕಿಗಳಿಂದ ನಿರ್ಮಿತವಾದ ಚಿನ್ನದ ಕಾವುಳ್ಳ ಶ್ವೇತಚ್ಛತ್ರದ ನೆಳಲಲ್ಲಿ ಬರುವಂಥ ನಿನ್ನ ಮುಖವು ಈಗ ಏಕೆ ಸತ್ತಿಗೆಯಿಲ್ಲದೆ ಕಾಂತಿಗುಂದಿದೆ ? ಚಂದ್ರನಂತೆಯೂ ಹಂಸಪಕ್ಷಿಯಂತೆಯೂ ಅತ್ಯಂತ ಬಿಳುಪಾದ ಚಾಮರಗಳಿಂದ ಎರಡು ಪಾರ್ಶ್ವಗಳಲ್ಲಿಯೂ ಬೀಸಲ್ಪಡುವಂಥ ನಿನ್ನ ಮುಖಕಮಲವು ಈಗ ಏಕೆ ಚಾಮರಗಳಿಲ್ಲದೆ ಬಾಡಿದೆ ? ನಿನ್ನ ಮುಂದುಗಡೆಯಲ್ಲಿ ಅನೇಕ ನುಡಿಜಾಣ್ಮೆಯುಳ್ಳ ಮಂಗಳಪಾಠಕರು ಸ್ತೋತ್ರಪಾಠಗಳನ್ನು ಹೇಳಿಕೊಂಡು ಬರುತ್ತಿಲ್ಲವೇಕೆ? ವೇದಪಾಠಕರಾದ ಬ್ರಾಹ್ಮಣೋತ್ತಮರು ಮೊಸರು ಜೇನುತುಪ್ಪ ಮಂತ್ರಾಕ್ಷತೆ ಧೂಪಗಳನ್ನು ವೇದೋಕ್ತಮಂತ್ರಗಳಿಂದ ನಿನ್ನ ಶಿರಸ್ಸಿನಲ್ಲಿ ಸೇಸೆಯನ್ನಿಕ್ಕಿ ಏಕೆ ಹರಸುತ್ತಿಲ್ಲ ? ನೀನು ಅರಮನೆಯಿಂದ ಹೊರಟೆಯಾದರೆ ಅನೇಕ ಪ್ರಧಾನಿಗಳೂ ಪರಿಜನ ಪುರಜನರೂ ನಿನ್ನ ಹಿಂದೆ ನಡೆಯುತ್ತಿದ್ದರಲ್ಲ—ಈಗ ಯಾವ ಕಾರಣದಿಂದ ಅವರು ಯಾರೂ ಬರಲಿಲ್ಲ ? ರತ್ನಖಚಿತವಾದ ಭೂಷಣಗಳಿಂದ ಅಲಂಕರಿಸಲ್ಪಟ್ಟ ವಾಯುವೇಗವುಳ್ಳ ನಾಲ್ಕು ಕುದುರೆಗಳನ್ನು ಕಟ್ಟಿರುವ ರಥವು ನಿನ್ನ ಮುಂದುಗಡೆಯಲ್ಲಿ ಏಕೆ ಬರಲಿಲ್ಲ ? ಸುವರ್ಣಮಯವಾದ ಘಂಟೆಗಳು ಗಂಧಾನುಲೇಪ ಮೊದಲಾದ ಅಲಂಕಾರವುಳ್ಳದ್ದಾಗಿ ಕಾಲಮೇಘಕ್ಕೆ ಸರಿಯಾದ ಪಟ್ಟದಾನೆಯು ಯಾವ ಕಾರಣದಿಂದ ನಿನ್ನ ಸಂಗಡ ಬರಲಿಲ್ಲ ? ಸುವರ್ಣಮಯವಾದ ಭದ್ರಾಸನವು ಎಲ್ಲಿ ? ನಿನ್ನ ಪಟ್ಟಾಭಿಷೇಕವು ಸಮೀಪಿಸಿದ ಸಮಯದಲ್ಲಿ ನಿನ್ನ ಮುಖಾರವಿಂದವು ಏಕೆ ಹರ್ಷಗುಂದಿದೆ ? " ಎಂದು ಹಂಬಲಿಸುತ್ತ ಕೇಳಿದಳು.

ಶ್ರೀರಾಮನು ಆ ದೇವಿಯನ್ನು ಕುರಿತು " ಸೀತೆ, ಲೋಕಪ್ರಸಿದ್ಧವಾದ ಇಕ್ಷ್ವಾಕುವಂಶದಲ್ಲಿ ಹುಟ್ಟಿದ ದಶರಥರಾಯನು ನನ್ನನ್ನು ವನವಾಸಕ್ಕೆ ಕಳುಹಿಸಿದನು. ದಶರಥರಾಯನು ಪೂರ್ವದಲ್ಲಿ ದೇವಾಸುರಯುದ್ಧದಲ್ಲಿ ದೇವತೆಗಳಿಗೆ ಸಹಾಯವಾಗಿ ಹೋಗಿ ಗಾಯವಡೆದು ಮೂರ್ಛಿತನಾಗಿದ್ದ ಸಮಯದಲ್ಲಿ ಕೈಕೇಯಿದೇವಿಯು ಆತನನ್ನು ರಕ್ಷಿಸಿದಳಂತೆ. ಆಗ ದಶರಥರಾಯನು ಆ ದೇವಿಗೆ ಎರಡು ವರಗಳನ್ನು ಕೊಟ್ಟನಂತೆ. ಈಗ ಕೈಕೇಯಿದೇವಿಯು ಒಂದು ವರದಿಂದ ನಾನು ಹದಿನಾಲ್ಕು ವರುಷಗಳು ವನವಾಸಕ್ಕೆ ತೆರಳುವಂತೆಯೂ, ಮತ್ತೊಂದು ವರದಿಂದ ಭರತನಿಗೆ ಪಟ್ಟಾಭಿಷೇಕ ವಾಗುವಂತೆಯೂ ಬೇಡಿಕೊಳ್ಳಲು ದಶರಥರಾಯನು ಕೊಟ್ಟ ಮಾತಿಗೆ ತಪ್ಪಿದರೆ ತನ್ನ ಸತ್ಯಕ್ಕೆ ಹಾನಿಬರುವುದೆಂಬ ಭಯದಿಂದ ಆ ದೇವಿಯ ಮಾತನ್ನಂಗೀಕರಿಸಿದನು. ಭರತನಿಗೆ ಪಟ್ಟಾಭಿಷೇಕ ಮಾಡುವುದಕ್ಕಾಗಿ ನನ್ನನ್ನು ವನಕ್ಕೆ ಕಳುಹಿಸಿದನು. ಇದೇ ನಡೆದ ವೃತ್ತಾಂತ. ನಾನು ವನವನ್ನೈದುತ್ತೇನೆ. ನೀನು ಬುದ್ಧಿವಂತೆಯಾಗಿ ಸಾವಧಾನದಲ್ಲಿ ಕಾಲಗತಿಯನ್ನರಿತು ಭರತನ

ಸಮೀಪದಲ್ಲಿ ನನ್ನ ಸದ್ಗುಣಗಳನ್ನು ಹೇಳದೆ ಇರು. ಐಶ್ವರ್ಯಮದದಿಂದ ಮೋಹಿತರಾದವರು ಪರರ ಸ್ತೋತ್ರವನ್ನು ಕೇಳಿದರೆ ಅಸಹನೆಯನ್ನು ತೋರಿಸುತ್ತಾರೆ. ಆದಕಾರಣ ಭರತನ ಸಂಮುಖದಲ್ಲಿ ನನ್ನ ಗುಣಗಳನ್ನು ನುಡಿಯಬೇಡ. ನೀನು ಆತನಿಂದ ವಿಶೇಷವಸ್ತುಗಳನ್ನು ತೆಗೆದು ಕೊಳ್ಳದೆ ಆತನು ಹೇಳಿದಂತೆ ಇರು. ದಶರಥರಾಯನು ಭರತನಿಗೆ ಸಮಸ್ತ ರಾಜ್ಯಾಧಿಪತ್ಯವನ್ನೂ ಕೊಟ್ಟಿದ್ದಾನೆ. ಆದಕಾರಣ ನೀನು ಆತನಿಗೆ ವಿಧೇಯಳಾಗಿರು. ದಶರಥರಾಯನಿಗೂ ಸೇವಾ ಸತ್ಕಾರಗಳನ್ನು ಮಾಡಿಕೊಂಡಿರು. ನಾನು ಆತನ ಆಜ್ಞೆಯನ್ನು ಪರಿಪಾಲಿಸುವುದಕ್ಕಾಗಿ ಈಗಲೇ ವನಕ್ಕೆ ಹೋಗುತ್ತೇನೆ. ನೀನು ಬುದ್ಧಿವಂತೆಯಾಗಿ ಸುಖದಲ್ಲಿರು. ನಾನು ವನಕ್ಕೆ ಹೋದಮೇಲೆ ವ್ರತೋಪವಾಸನಿಯಮಾದಿಗಳನ್ನು ಮಾಡಿಕೊಂಡು ಪ್ರಾತಃಕಾಲದಲ್ಲೆದ್ದು ವಿಧ್ಯುಕ್ತಪ್ರಕಾರದಲ್ಲಿ ದೇವತಾರ್ಚನೆಯನ್ನೂ ಪ್ರತಿದಿನದಲ್ಲಿಯೂ ದಶರಥರಾಯನಿಗೆ ವಂದನೆಯನ್ನೂ ಮಾಡಿ ಪುತ್ರಶೋಕ ದಿಂದ ಕೃಶೆಯಾಗಿ ವೃದ್ಧೆಯಾದ ಕೌಸಲ್ಯಾದೇವಿಯ ಸೇವೆಯನ್ನು ಮಾಡಿಕೊಂಡಿರು. ಧರ್ಮವೇ ಜಯವೆಂದು ಆಲೋಚಿಸಿ ನನ್ನ ಬಲತಾಯಿಯಾದ ಕೈಕೇಯಿದೇವಿಗೂ ಸುಮಿತ್ರಾದೇವಿಗೂ ಅಂತರಂಗಪೂರ್ವಕವಾಗಿ ವಿನಯದಿಂದ ಸೇವೆಯನ್ನು ಮಾಡು. ನನಗೆ ತಾಯಿಗಳೆಲ್ಲರೂ ಸಮವಾದವರು. ಭರತ ಶತ್ರುಘ್ನರು ನನ್ನ ಪ್ರಾಣಕ್ಕೆ ಸರಿಯಾದವರು. ಅವರನ್ನು ನಿನ್ನ ಒಡಹುಟ್ಟಿದವರನ್ನೂ ಮಕ್ಕಳನ್ನೂ ಕಾಣುವ ಮರ್ಯಾದೆಯಲ್ಲಿ ಕಾಣು. ಒಂದುಸಾರಿಯಾದರೂ ಭರತನಿಗೆ ವಿರೋಧವಾದ ಕಾರ್ಯವನ್ನು ಮಾಡಬೇಡ. ಆತನು ರಾಜ್ಯಕ್ಕೆ ಒಡೆಯನು; ವಂಶಪ್ರವರ್ತಕನು. ಲೋಕದಲ್ಲಿ ಅರಸರ ಸೇವೆಯನ್ನು ಭಕ್ತಿಯಿಂದ ಮಾಡಿದರೆ ಅವರು ಪ್ರಸನ್ನರಾಗಿ ಬೇಡಿದ ವಸ್ತುಗಳನ್ನು ಕೊಡುವರು. ಅಲ್ಲದಿದ್ದರೆ ಕೋಪಿಸುವರು. ಅರಸರು ತಮಗೆ ಅಹಿತವನ್ನು ಮಾಡುವ ಮಕ್ಕಳನ್ನಾದರೂ ಬಿಟ್ಟುಬಿಡುವರು. ಆದಕಾರಣ ನೀನು ಎಲ್ಲರಿಗೂ ವಿಧೇಯಳಾಗಿ ದಶರಥರಾಯನ ಸೇವೆಯನ್ನು ಮಾಡುತ್ತಾ ಭರತನಿಗೆ ಹಿತವಾದ ಕೃತ್ಯವನ್ನೇ ಮಾಡಿಕೊಂಡು ಇಲ್ಲಿಯೇ ವಾಸವಾಗಿರು "ಎಂದು ಹೇಳಿದನು.



೨೭ ನೆ ಯ ಅ ಧ್ಯಾ ಯ

## ಸೀತಾದೇವಿಯು ಶ್ರೀರಾಮನೊಡನೆ ತಾನೂ ವನಕ್ಕೆ ಬರುವುದಾಗಿ ಹೇಳಿದ್ದು

ಹೀಗೆ ಶ್ರೀರಾಮನು ನುಡಿದದ್ದನ್ನು ಕೇಳಿ ಸೀತಾದೇವಿಯು ಸ್ನೇಹಾತಿಶಯದಿಂದಲೂ ಮಹಾ ಕೋಪದಿಂದಲೂ ಕೂಡಿದವಳಾಗಿ ಆತನನ್ನು ನೋಡಿ ಹೇಳತೊಡಗಿದಳು: "ಶ್ರೀರಾಮ, ನನ್ನನ್ನು ಅರಮನೆಯಲ್ಲಿ ಸುಖದಲ್ಲಿರಹೇಳಿ ನೀನು ವನಕ್ಕೆ ಹೋಗುವುದು ಲೋಕದಲ್ಲಿ ನಗೆಗೆ ಕಾರಣ ವಾಗುವುದು. ಇಂಥ ಮಾತನ್ನಾಡುವುದು ನಿನಗೆ ಉಚಿತವೆ? ಇಲ್ಲ, ಹಾಸ್ಯಮಾಡುತ್ತೀಯೊ? ಸ್ವಾಮಿಯೆ, ತಂದೆ ತಾಯಿ ಭ್ರಾತೃ ಮೊದಲಾದವರು ತಮ್ಮತಮ್ಮ ಭಾಗ್ಯಗಳನ್ನು ಅನುಭವಿಸುವರು. ಸ್ತ್ರೀಯು ತನ್ನ ಪತಿಯ ಭಾಗ್ಯವನ್ನನುಭವಿಸುವಳು. ಆದ್ದರಿಂದ ನೀನು ನನ್ನನ್ನು ಮನೆಯಲ್ಲಿರ ಹೇಳಿದ್ದು ವನದಲ್ಲಿರಹೇಳಿದಂತಾಯಿತು! ನೀನಿಲ್ಲದೆ ನಾನು ಮನೆಯಲ್ಲಿದ್ದರೆ ಮನೆಯು ನನಗೆ ಅರಣ್ಯವಾಗುವುದು. ಲೋಕದಲ್ಲಿ ಸ್ತ್ರೀಯರಿಗೆ ತಮ್ಮ ಪತಿಗಳೇ ಗತಿಯಲ್ಲದೆ ತಾಯಿತಂದೆ ಒಡಹುಟ್ಟಿದವರು ಸಖೀಜನರು ಮೊದಲಾದವರೊಬ್ಬರೂ ಕಾರ್ಯಕ್ಕೆ ಬಾರರು. ಶ್ರೀರಾಮ, ನೀನು ಅತಿಭಯಂಕರವಾದ ವನಕ್ಕೆ ತೆರಳುವೆಯಾದರೆ ನಾನು ನಿನಗಿಂತ ಮೊದಲೇ ನಡೆಯುವೆನು.

ನೀನು ಈರ್ಷ್ಯಾಕೋಪಗಳನ್ನು ತೊರೆದು ನನ್ನಲ್ಲಿ ವಿಶ್ವಾಸವಿಟ್ಟು ನನ್ನನ್ನು ಕರೆದುಕೊಂಡು ತೆರಳು. ಲೋಕದಲ್ಲಿ ಪುರುಷರು ಸ್ತ್ರೀಯರನ್ನು ಬಿಟ್ಟು ಹೋಗಬಾರದು. ಸ್ತ್ರೀಯನ್ನು ದೋಷ ದ್ರೋಹಗಳನ್ನು ಕಂಡಲ್ಲದೆ ಪರಿತ್ಯಾಗಮಾಡಬಾರದು. ನಾನು ನಿನಗೆ ಯಾವ ದ್ರೋಹವನ್ನೂ ಚಿಂತಿಸಿದವಳಲ್ಲ. ಆದಕಾರಣ ನನ್ನನ್ನು ಕರೆದುಕೊಂಡು ವನವನ್ನೈದು. ಪತಿವ್ರತಾಸ್ತ್ರೀಯಾದವಳು ಉಪ್ಪರಿಗೆಗಳಲ್ಲಿದ್ದು ಸುಖವನ್ನು ಪಡೆದವಳಾದರೂ ಪತಿಯನ್ನು ಪಾದಚ್ಛಾಯೆಯ ಹಾಗೆ ಅನುಸರಿಸಿ ಕೊಂಡಿರುವಳು. ಈ ರೀತಿಯಲ್ಲಿ ನಮ್ಮ ತಾಯಿತಂದೆಗಳು ನನಗೆ ಬುದ್ಧಿಕಲಿಸಿದರು. ಆದ್ದರಿಂದ ನನ್ನನ್ನು ಇಲ್ಲಿರಹೇಳುವುದು ಉಚಿತವಲ್ಲ. ನಾನು ನಿರ್ಜನಪ್ರದೇಶವಾಗಿ ಸಂಚರಿಸಲು ಅಶಕ್ಯವಾದ ವನಕ್ಕೆ ಬರುತ್ತೇನೆ. ನಾನಾ ಪಕ್ಷಿ ಮೃಗ ಹುಲಿ ಕರಡಿ ತೋಳಗಳಿಂದಿಟ್ಟಣಿಸಿರುವ ವನವನ್ನು ಸೇರಿ ನಿನ್ನ ಸಹವಾಸದಲ್ಲಿ ತಾಯಿಯ ಮನೆಯಲ್ಲಿರುವಂತೆ ಇರುವೆನು. ನನ್ನ ಪತಿವ್ರತಾಭಾವವನ್ನೇ ಚಿಂತಿಸುತ್ತ ಉಳಿದ ದುಃಖಗಳನ್ನು ಲೆಕ್ಕಿಸದಿರುವೆನು. ಕಾಡಾನೆಗಳ ಮದಗಂಧದಿಂದ ಪರಿಮಳ ಯುಕ್ತವಾದ ವನದಲ್ಲಿ ನಿನ್ನ ಸೇವೆಯನ್ನು ಮಾಡಿಕೊಂಡು ವ್ರತಸ್ಥೆಯಾಗಿರುವೆನು. ನೀನು ವನದಲ್ಲಿ ನನ್ನನ್ನು ರಕ್ಷಿಸುವುದಕ್ಕೆ ಸಮರ್ಥನು. ನಾನು ಅಜ್ಞಾನದಿಂದ ಆತ್ಮಸುಖವನ್ನು ಮಾತ್ರವೇ ಬಯಸುವವಳಲ್ಲ. ಆದ್ದರಿಂದ ಈಗ ನಿನ್ನ ಸಂಗಡ ಬರುತ್ತೇನೆ. ಈ ವಿಷಯದಲ್ಲಿ ಸಂಶಯವಿಲ್ಲ. ನೀನು ವನಕ್ಕೆ ಹೋದಮೇಲೆ ನಾನು ಒಂಟಿಯಾಗಿರುವುದಕ್ಕೆ ಸಮರ್ಥಳಲ್ಲ. ನಿನ್ನ ಸಂಗಡ ಕಂದ ಮೂಲ ಫಲಾಹಾರಗಳನ್ನು ಮಾಡಿಕೊಂಡಿರುವೆನಲ್ಲದೆ ನಿನಗೆ ಪ್ರಯಾಸವನ್ನುಂಟುಮಾಡೆನು. ನಾನು ಪುಣ್ಯತೀರ್ಥಗಳನ್ನೂ ಪುಣ್ಯಪರ್ವತಗಳನ್ನೂ ಪುಣ್ಯನದಿಗಳನ್ನೂ ನೋಡಲಿಚ್ಛಿಸುತ್ತಿದ್ದೆನು. ಪರಾಕ್ರಮಿಯಾದ ನೀನು ನನಗೆ ರಕ್ಷಕನಾದ ಬಳಿಕ ನನಗೆಲ್ಲಿಯೂ ಭಯವಿಲ್ಲ. ಹಂಸ ಕೊಳರ್ವಕ್ಕಿ ಚಕ್ರವಾಕ ನೀರ್ಕೋಳಿ ಮೊದಲಾದ ಜಂತುಗಳಿಂದಿಟ್ಟಣಿಸಿ ವಿಕಸಿತವಾದ ತಾವರೆಯ ಹೂವುಗಳುಳ್ಳ ಕೊಳಗಳನ್ನು ನೋಡಲಿಚ್ಛಿಸುತ್ತಿದ್ದೇನೆ. ಪ್ರತಿದಿನದಲ್ಲಿಯೂ ಅಂಥ ಕೊಳಗಳಲ್ಲಿ ಸ್ನಾನಮಾಡಿ ದೇವತಾರ್ಚನೆಯನ್ನು ಮಾಡಿ ಸುಖದಿಂದ ನಿನ್ನ ಜೊತೆಯಲ್ಲಿಯೇ ಇರಬೇಕೆಂದು ಇಚ್ಛೆಯುಂಟಾಗಿದೆ. ಈ ಪ್ರಕಾರವಾಗಿ ಸಾವಿರ ವರುಷಗಳಾದರೂ ನಿನ್ನ ಸಂಗಡ ಇರುವೆನಲ್ಲದೆ ನಿನ್ನನ್ನು ಬಿಟ್ಟು ಸ್ವರ್ಗಭೋಗವನ್ನಾದರೂ ಅನುಭವಿಸಿಕೊಂಡಿರಲಾರೆನು. ನಿನ್ನೊಡನೆ ಅತ್ಯಂತ ಭೀಕರವಾದ ಅರಣ್ಯದಲ್ಲಿರುವೆನಲ್ಲದೆ ನಿನ್ನನ್ನು ಬಿಟ್ಟಿರಲಾರೆನು! ಶ್ರೀರಾಮ, ನೀನು ಬಿಟ್ಟುಹೋದರೆ ನನಗೆ ದೇಹತ್ಯಾಗವೇ ನಿಶ್ಚಿತ. ಆದ್ದರಿಂದ ನನ್ನ ಮಾತನ್ನು ಅಂಗೀಕರಿಸು " ಎಂದು ನುಡಿದಳು.



೨೮ ನೆಯ ಅಧ್ಯಾಯ

## ಶ್ರೀರಾಮನು ಸೀತಾದೇವಿಗೆ ವನದ ಕಷ್ಟಗಳನ್ನು ಹೇಳಿದ್ದು

ಆ ಬಳಿಕ ಧರ್ಮರಹಸ್ಯವನ್ನು ಬಲ್ಲ ಶ್ರೀರಾಮನು ಸೀತಾದೇವಿಯು ವನದಲ್ಲಿ ಸಂಚರಿಸುವುದು ಬಹು ದುರ್ಘಟವೆಂದು ವಿಚಾರಿಸಿ ಆ ದೇವಿಯನ್ನು ತನ್ನೊಡನೆ ಕರೆದುಕೊಂಡುಹೋಗುವುದಕ್ಕೆ ಮನಸ್ಸಿಲ್ಲದೆ ಆಕೆಯ ಕಣ್ಣೀರನ್ನು ತೊಡೆದು ಸಂತವಿಟ್ಟನು. ಆಮೇಲೆ ಆಕೆಯನ್ನು ಕುರಿತು " ಜಾನಕಿ, ನೀನು ಪ್ರಸಿದ್ಧವಾದ ವಂಶದಲ್ಲಿ ಜನಿಸಿದವಳು. ಸಮಸ್ತ ಧರ್ಮರಹಸ್ಯಗಳನ್ನೂ ಕ್ಷತ್ರಿಯ ಧರ್ಮವನ್ನೂ ಬಲ್ಲವಳು. ಆದಕಾರಣ ನೀನು ವನಕ್ಕೆ ಬರಬೇಕೆಂಬ ಬುದ್ಧಿಯನ್ನು ಬಿಟ್ಟು ಇಲ್ಲಿಯೇ

ಸಮಸ್ತ ಧರ್ಮಗಳನ್ನೂ ಆಚರಿಸಿಕೊಂಡು ನಾನು ಹೇಳಿದ ಹಾಗೆ ಸುಖದಿಂದಿರು. ವನದಲ್ಲಿ ಬಹು ಉಪದ್ರವಗಳುಂಟಾಗುವುವು. ನಾನು ನಿನಗೆ ಹಿತವಾಗಿ ಹೇಳುತ್ತೇನೆಯೇ ಹೊರತು ಬೇರೇನೂ ಇಲ್ಲ. ಅಲ್ಲಿ ಪರ್ವತಗಳು ಮೊದಲಾದವು ಬಹಳವಾಗಿರುವುವು. ಮಹಾಭಯಂಕರವಾಗಿ ಗರ್ಜಿಸುವ ಸಿಂಹಗಳ ಕೋಲಾಹಲಧ್ವನಿಗಳು ಕೇಳಲ್ಪಡುವುವು. ನಿರ್ಜನಪ್ರದೇಶಗಳಲ್ಲಿ ಸೊಕ್ಕಿದ ಮೃಗಗಳು ಮನುಷ್ಯರನ್ನು ಕಂಡರೆ ಎದುರಾಗಿ ಅಟ್ಟಿಸಿಕೊಂಡುಬರುವುವು. ಮೊಸಳೆ ನೀರಾನೆ ಮೊದಲಾದ ಜಲಚರಪ್ರಾಣಿಗಳಿಂದ ಪರಿಪೂರ್ಣವಾಗಿ ಬಹಳವಾದ ಕೆಸರುಳ್ಳ ಅನೇಕ ನದಿಗಳುಂಟು. ಎಲ್ಲಿ ನೋಡಿದರೂ ಸೊಕ್ಕಿದ ಆನೆಯಹಿಂಡುಗಳು ಸಂಚರಿಸುತ್ತಿರುವುವು. ಮಾರ್ಗದಲ್ಲಿ ಮುಳ್ಳುಗಳು ಬಹಳವಾಗಿರುವುವು. ಅಲ್ಲಲ್ಲಿ ಕಾಡುಕೋಳಿಗಳ ಭಯಂಕರವಾದ ಧ್ವನಿಗಳು ಕೇಳಿಸುವುವು. ಕೆಲವು ಸ್ಥಳಗಳಲ್ಲಿ ಉದಕವಿಲ್ಲದೆ ಸಂಚರಿಸುವುದಕ್ಕೆ ದುರ್ಘಟವಾಗಿರುವುದು. ಸಾಯಂಕಾಲದಲ್ಲಿ ಎಲ್ಲಿ ನಿಂತರೂ ಅಲ್ಲಿರುವ ವೃಕ್ಷಗಳ ಸೊಪ್ಪುಗಳನ್ನು ಮುರಿದು ಹಾಸಿಗೆಯಾಗಿ ಮಾಡಿಕೊಂಡು ರಾತ್ರಿಯನ್ನು ಕಳೆಯಬೇಕು. ವೃಕ್ಷಗಳಿಂದ ಉದುರಿದ ಫಲಗಳನ್ನು ಆಹಾರವಾಗಿ ಮಾಡಿಕೊಂಡು ಹಗಲಿರುಳೂ ಸಂತೋಷವಾಗಿರಬೇಕು. ಒಂದೊಂದು ಸ್ಥಳದಲ್ಲಿ ಪರ್ಣಫಲಾದಿಗಳು ದೊರಕದಿದ್ದರೆ ಉಪವಾಸವನ್ನು ಮಾಡಬೇಕು. ವನದಲ್ಲಿ ವ್ರತನಿಮಿತ್ತವಾಗಿ ಜಡೆಗಳನ್ನು ಧರಿಸಿ ನಾರುಬಟ್ಟೆಗಳನ್ನುಟ್ಟುಕೊಂಡಿರಬೇಕು. ಪ್ರತಿದಿನವೂ ನಾರುಬಟ್ಟೆಯನ್ನು ಉಟ್ಟುಕೊಂಡು ಕಂದ ಮೂಲ ಫಲಾಹಾರಗಳಿಂದ ದೇವತಾರ್ಚನೆ ಪಿತೃಸಂತರ್ಪಣೆಗಳನ್ನು ಮಾಡಿ ಬಂದ ಅತಿಥಿಗಳಿಗೆ ಸತ್ಕಾರಗಳನ್ನು ಮಾಡಬೇಕು. ಪ್ರಾತಃಕಾಲ ಮಧ್ಯಾಹ್ನಕಾಲ ಸಂಧ್ಯಾಕಾಲವೆಂಬ ಮೂರು ಕಾಲಗಳಲ್ಲಿಯೂ ಸ್ನಾನವನ್ನು ಮಾಡಿ ಅತ್ಯಂತ ನಿಯಮದಿಂದಿರಬೇಕು. ಋಷಿಗಳ ಹಾಗೆ ತಾವರೆಯ ಹೂಗಳನ್ನು ತಂದು ದೇವರ ಪೂಜೆಯನ್ನು ಮಾಡಬೇಕು. ಯಾವಯಾವ ದಿನದಲ್ಲಿ ಎಷ್ಟೆಷ್ಟು ಆಹಾರವು ದೊರೆಯುವುದೋ ಅಷ್ಟುಮಾತ್ರದಿಂದಲೇ ಸಂತೋಷಪಡಬೇಕು. ಒಂದೊಂದು ಸ್ಥಳದಲ್ಲಿ ಅತಿಭಯಂಕರವಾದ ಬಿರುಗಾಳಿಯು ಬೀಸುವುದು. ಅರಣ್ಯವು ನಾನಾ ಪ್ರಕಾರವಾದ ಸರ್ಪಗಳಿಂದ ಭಯಂಕರವಾಗಿರುವುದು. ನದಿಗಳಲ್ಲಿ ಹಾವುಗಳು ತುಂಬಿರುವುವು. ಚಿಕ್ಕ ನದಿಗಳು ದಾರಿಯನ್ನಡ್ಡಗಟ್ಟಿಕೊಂಡಿರುವುವು. ಗೂಬೆ ರಣಹದ್ದು ಮೊದಲಾದ ಭಯಂಕರವಾದ ಪಕ್ಷಿಗಳು ಧ್ವನಿಗೈಯುತ್ತಲಿರುವುವು. ಎಲ್ಲಿ ನೋಡಿದರೂ ಕ್ಷುದ್ರಜಂತುಗಳಾದ ಚೇಳು ಕಾಡುನೊಣ ಸೊಳ್ಳೆಗಳು ಬಾಧಿಸುವುವು. ಮುಳ್ಳುಮರಗಳು ದರ್ಭೆಗಳು ಮೊದಲಾದ ಹೊದರುಗಳೂ ಆಕಾಶವನ್ನು ತುಡುಕುತ್ತಲಿರುವ ಮರಗಳೂ ಅತಿಭಯಂಕರವಾಗಿರುವುವು. ವನವಾಸವನ್ನು ಮಾಡುವವರು ಬಹಳವಾಗಿ ಕಾಯಕ್ಲೇಶಗಳನ್ನು ಅನುಭವಿಸಬೇಕು. ಕ್ರೋಧಲೋಭಗಳಿಲ್ಲದೆ ತಪಸ್ಸನ್ನೇ ಮಾಡಬೇಕು. ಪಾಪಕ್ಕೆ ಅಂಜಬೇಕು. ಸುಖದುಃಖ ಶೀತೋಷ್ಣ ಮಾನಾವಮಾನವೆಂಬ ದ್ವಂದ್ವದುಃಖಗಳಿಗೆ ಅಂಜಬಾರದು. ಈ ರೀತಿಯಲ್ಲಿ ವನವಾಸವನ್ನು ಮಾಡುವವರಿಗೆ ಬಹುದುಃಖಗಳುಂಟು. ಆದ್ದರಿಂದ ನೀನು ಬರುವುದು ಯೋಗ್ಯವಲ್ಲ. ಹೀಗೆ ವನದಲ್ಲಿ ಸಂಚರಿಸುವುದು ಬಹುದುಃಖಕರವೆಂದು ಆಲೋಚಿಸಿ ನಿನ್ನನ್ನು ಕರೆದುಕೊಂಡುಹೋಗುವುದಕ್ಕೆ ನನಗೆ ಬುದ್ಧಿ ಹುಟ್ಟಲಿಲ್ಲ ಎಂದು ಹೇಳಿದನು.



## ೨೯ ನೆಯ ಅಧ್ಯಾಯ

## ಸೀತಾದೇವಿಯು ತಾನು ವನಕ್ಕೆ ಬರಲು ಕಾರಣಗಳನ್ನು ಹೇಳಿದ್ದು

ಅನಂತರ ಸೀತಾದೇವಿಯು ಶ್ರೀರಾಮನನ್ನು ಕುರಿತು ಹೇಳತೊಡಗಿದಳು : " ಎಲೈ ಸ್ವಾಮಿಯೆ, ವನದಲ್ಲಿ ದುಃಖದೋಷಗಳುಂಟೆಂದೂ ಬಹು ಭಯವುಂಟೆಂದೂ ಹೇಳುತ್ತೀಯೆ. ಆ ದೋಷಗಳೆಲ್ಲವೂ ನಿನ್ನ ಜೊತೆಯಲ್ಲಿ ಬರುವ ನನಗೆ ನಿನ್ನ ಸಹವಾಸಾತಿಶಯದಿಂದ ಸುಖಸಾಧನಗಳಾಗುವುವು. ಸಿಂಹ ಕಾಡಾನೆ ವ್ಯಾಘ್ರ ಶರಭ ಚಮರೀಮೃಗ ಮೊದಲಾದ ಭಯಂಕರವಾದ ಮೃಗಗಳು ಮನುಷ್ಯರ ಸ್ವರೂಪವನ್ನು ಕಾಣದವಾದ್ದರಿಂದ ನಿನ್ನನ್ನು ಕಂಡು ಭೀತಿಪಟ್ಟು ಓಡಿಹೋಗುವುವಲ್ಲದೆ ಎದುರಾಗಿ ಬರಲಾರವು. ನಿನ್ನ ತಂದೆಯು ನಿನಗೆ ಗುರುವಾದಕಾರಣ ಆತನ ಆಜ್ಞೆಯನ್ನು ಮೀರಬಾರದೆಂದು ಹೇಗೆ ವನಕ್ಕೆ ತೆರಳುತ್ತಿದ್ದೀಯೋ, ಆ ರೀತಿಯಲ್ಲಿ ನಾನು ನಿನ್ನ ಶರೀರದೊಳಗೆ ಅಂತರ್ಭೂತಳಾದ್ದರಿಂದ ನನಗೂ ದಶರಥರಾಯನ ವಾಕ್ಯವನ್ನು ಮೀರಬಾರದೆಂಬ ಶಾಸ್ತ್ರವು ಅನ್ವಯಿಸುತ್ತದೆ. ಆದಕಾರಣ ನಾನು ನಿನ್ನಸಂಗಡ ವನಕ್ಕೆ ಬರುವುದು ನಿಶ್ಚಯ. ಅಲ್ಲದಿದ್ದರೆ ನಿನ್ನ ಅಗಲಿಕೆಯಿಂದ ನಾನು ಶರೀರವನ್ನು ಬಿಡುವೆನು. ನನಗೆ ವನದಲ್ಲಿ ಕಷ್ಟವೆಂದು ತಿಳಿಯಬೇಡ. ನಾನು ನಿನ್ನಸಮೀಪದಲ್ಲಿದ್ದರೆ ಸಮಸ್ತ ದೇವತೆಗಳಿಗೂ ಒಡೆಯನಾದ ದೇವೇಂದ್ರನಾದರೂ ತನ್ನ ಸಾಮರ್ಥ್ಯದಿಂದ ನನ್ನನ್ನು ಕಣ್ಣೆತ್ತಿನೋಡಲಾರನು. ಲೋಕದಲ್ಲಿ ಪತಿಹೀನೆಯಾದ ಉತ್ತಮಸ್ತ್ರೀಯು ಜೀವಿಸಳು. ಇನ್ನು ನಿನ್ನ ಚಿತ್ತಕ್ಕೆ ಸರಿಬಂದಹಾಗೆ ಮಾಡು! ಇದಲ್ಲದೆ ಮತ್ತೊಂದು ರಹಸ್ಯವಾದ ವೃತ್ತಾಂತವುಂಟು. ನಾನು ನನ್ನ ತಂದೆಯ ಮನೆಯಲ್ಲಿರುವಾಗ ಸಾಮುದ್ರಿಕಲಕ್ಷಣವನ್ನು ಬಲ್ಲ ಬ್ರಾಹ್ಮಣರು ನನ್ನ ಕೈಯನ್ನು ನೋಡಿ ವನವಾಸಮಾಡುವ ಫಲವಿದೆಯೆಂದು ಹೇಳಿದರು. ಅದನ್ನು ನಾನು ನೆನೆದುಕೊಂಡು ವನವಾಸವನ್ನು ಮಾಡಬೇಕೆಂದು ಉತ್ಸಾಹದಿಂದ ಇದ್ದೇನೆ. ಯಾರನ್ನೂ ದೈವಕಲ್ಪನೆಯು ಬಿಟ್ಟಿದ್ದಲ್ಲ. ಆದ್ದರಿಂದ ನಾನು ನಿನ್ನೊಡನೆ ವನಕ್ಕೆ ಬರುತ್ತೇನೆ. ನನಗೆ ಅಪ್ಪಣೆಯನ್ನು ಕೊಡು. ಪೂರ್ವದಲ್ಲಿ ಸಾಮುದ್ರಿಕ ಲಕ್ಷಣಗಳನ್ನು ಬಲ್ಲ ಬ್ರಾಹ್ಮಣರು ಹೇಳಿದ ವನವಾಸಸಮಯವು ಬಂದಿತು. ಅವರ ಮಾತು ಸತ್ಯವಾಗಲಿ! ನೀನು ಹೇಳಿದ ದುಃಖವು ಪೌರುಷಪರಾಕ್ರಮಗಳಿಲ್ಲದವರಿಗೆ ಆಗುವುದಲ್ಲದೆ ನಿನ್ನಂಥ ಮಹಾಮಹಿಮನಿಗೆ ಉಂಟಾಗಲಾರದು. ವಿವಾಹವಾದ ಬಳಿಕ ನನ್ನ ತಾಯಿ ನನ್ನನ್ನು ಕುರಿತು 'ಮಗಳೇ, ಇಕ್ಷ್ವಾಕುವಂಶದ ರಾಜರು ವಯಸ್ಸು ಕಳೆದಮೇಲೆ ವಾನಪ್ರಸ್ಥಾಶ್ರಮಕ್ಕೆ ಹೋಗುವರು. ನಿನ್ನ ಪತಿಯಾದ ಶ್ರೀರಾಮನು ಇಕ್ಷ್ವಾಕುವಂಶದಲ್ಲಿ ಜನಿಸಿದವನಾದ್ದರಿಂದ ಆತನೂ ವನಕ್ಕೆ ಹೋಗುವನು. ನಿನ್ನನ್ನು ಬಿಟ್ಟು ಹೋಗದಹಾಗೆ ನಂಬಿಕೆಯನ್ನು ತೆಗೆದುಕೋ' ಎಂದು ಹೇಳಿದಳು. ನಾನು ನನ್ನ ತಾಯಿಯ ಸಮ್ಮುಖದಲ್ಲಿಯೇ ನಿನ್ನನ್ನು ಬಹಳವಾಗಿ ಬೇಡಿಕೊಂಡದ್ದಕ್ಕೆ ನೀನು ಹಾಗೆಯೇ ಆಗಲೆಂದು ನನಗೆ ನಂಬಿಕೆಯನ್ನು ಕೊಟ್ಟೆ. ಆ ಸಮಯವು ನನಗೆ ಈಗಲೇ ಪ್ರಾಪ್ತವಾಯಿತು. ಆದಕಾರಣ ನನ್ನನ್ನು ಕರೆದುಕೊಂಡು ವನವನ್ನೈದು. ನನಗೆ ವನವಾಸದಲ್ಲಿ ಬಹಳ ಇಚ್ಛೆಯಿದೆ. ಅಲ್ಲಿ ನಿನ್ನ ಊಳಿಗದವಳಾಗಿರುವೆನು. ನನಗೆ ನೀನೇ ಗುರು. ನೀನೇ ರಕ್ಷಕ. ನೀನೇ ಇಷ್ಟ ದೈವ. ಇದಕ್ಕೆ ಸಂಶಯವಿಲ್ಲ. ಮಂಗಳಸ್ವರೂಪನಾದ ಪ್ರಾಣಕಾಂತನೆ, ನಾನು ಈ ಶರೀರವನ್ನು ಬಿಟ್ಟು ಇನ್ನೊಂದು ದೇಹವನ್ನು ತಾಳಿದರೂ ನಿನ್ನನ್ನೇ ಭಜಿಸುವೆನು. ಲೋಕದಲ್ಲಿ ವೇದಾರ್ಥ ರಹಸ್ಯವನ್ನು ಬಲ್ಲ ಬ್ರಾಹ್ಮಣೋತ್ತಮರು, ಲೋಕದಲ್ಲಿ ತಾಯಿತಂದೆಗಳು ತಮ್ಮ ಕನ್ಯಕೆಯನ್ನು

ಮಹಾತ್ಮನಾದ ಪುರುಷನಿಗೆ ತಮ್ಮ ಜಾತಿಧರ್ಮದಿಂದ ಧಾರಾಪೂರ್ವಕವಾಗಿ ಕೊಟ್ಟರೆ ಆ ಸ್ತ್ರೀಯು ಜನ್ಮಾಂತರದಲ್ಲಿಯೂ ಆತನಿಗೆ ಪತ್ನಿಯಾಗುವಳೆಂದು ಶ್ರುತ್ಯರ್ಥಾನುಸಾರವಾಗಿ ನುಡಿಯುವರು. ಆದಕಾರಣ, ಶ್ರೀರಾಮ, ಸದಾಚಾರವುಳ್ಳವಳಾಗಿ ಪತಿವ್ರತೆಯಾಗಿ ನಿನ್ನ ಪತ್ನಿಯಾದ ನನ್ನನ್ನು ಯಾವಕಾರಣ ವನಕ್ಕೆ ಕರೆದುಕೊಂಡುಹೋಗುವುದಿಲ್ಲವೆಂದು ನುಡಿಯುತ್ತೀಯೆ ? ಅದನ್ನು ಬಿಟ್ಟು ನಿನ್ನಲ್ಲಿ ಭಕ್ತಿಯುಳ್ಳವಳೂ ಅನಾಥೆಯೂ ಪತಿವ್ರತೆಯೂ ನಿನ್ನ ಸುಖದುಃಖಗಳಿಗೆ ಒಳಗಾದವಳೂ ಆದ ನನ್ನನ್ನು ನಿನ್ನ ಸಂಗಡ ಕರೆದುಕೊಂಡುಹೋಗಿ ಅಲ್ಲಿ ಉಂಟಾಗುವ ಸುಖದುಃಖಗಳನ್ನು ನನ್ನ ಜೊತೆಯಲ್ಲಿಯೇ ಅನುಭವಿಸು. ನನ್ನನ್ನು ಕರೆದುಕೊಂಡುಹೋಗದಿದ್ದರೆ ನಾನು ವಿಷಪಾನದಿಂದಲಾದರೂ ಅಗ್ನಿಪ್ರವೇಶದಿಂದಲಾದರೂ ಪ್ರಾಣವನ್ನು ತೊರೆಯುವೆನು " ಎಂದು ಹೇಳಿದಳು.

ಶ್ರೀರಾಮನು ಆ ಮಾತನ್ನು ಕೇಳಿಯೂ ವನಕ್ಕೆ ಕರೆದುಕೊಂಡುಹೋಗುವುದಕ್ಕೆ ಒಡಂಬಡದಿರಲು ಸೀತಾದೇವಿಯು ಅತ್ಯಂತ ದುಃಖಾಕ್ರಾಂತೆಯಾಗಿ ತನ್ನ ಶೋಕಾಗ್ನಿಯಿಂದ ಅತ್ಯಂತ ಉಷ್ಣವಾಗಿ ಸುರಿಯುತ್ತಿದ್ದ ಕಣ್ಣೀರಿನಿಂದ ಭೂಮಿಯನ್ನು ನೆನೆಸುತ್ತ ಕೋಪಗೊಂಡಿದ್ದಳು.



## ೩೦ನೆಯ ಅಧ್ಯಾಯ

## ಸೀತಾದೇವಿಯನ್ನು ಕರೆದುಕೊಂಡುಹೋಗುವುದಕ್ಕೆ ಶ್ರೀರಾಮನ ಸಂಮತಿ

ಆ ಬಳಿಕ ಶ್ರೀರಾಮನು ಸಂತವಿಡಲು ಸೀತಾದೇವಿಯು ತನ್ನ ಪತಿಯಾದ ರಘುನಾಥನನ್ನು ಸ್ನೇಹಾತಿಶಯದಿಂದಲೂ ಬಹುಮಾನದಿಂದಲೂ ಕೈಹಿಡಿದು ನಿಲ್ಲಿಸಿ ಆತನನ್ನು ಕುರಿತು ಹೇಳತೊಡಗಿದಳು : " ಶ್ರೀರಾಮ, ಮಿಥಿಲಾಪಟ್ಟಣದಲ್ಲಿ ಸಕಲತತ್ತ್ವವನ್ನೂ ಬಲ್ಲ ನನ್ನ ತಂದೆಯಾದ ಜನಕರಾಯನು ಅಯೋನಿಜೆಯಾದ ನನ್ನನ್ನು ಮಗಳಾಗಿ ಪಡೆದು ನನ್ನ ಸೌಂದರ್ಯಲಕ್ಷಣಗಳನ್ನು ನೋಡಿ ಪುರುಷೋತ್ತಮನಾದ ನಾರಾಯಣನೇ ತನಗೆ ಅಳಿಯನಾಗುವನೆಂದು ತಿಳಿದು ನನ್ನನ್ನು ನಿನಗೆ ಕೊಟ್ಟು ವಿವಾಹ ಮಾಡಿದನು. ಸೂರ್ಯನಂತೆ ತಪಿಸುತ್ತ ತೇಜೋಮಯನಾದ ನಿನ್ನಲ್ಲಿ ಪೌರುಷವಿಲ್ಲವೆಂದು ಅಜ್ಞಾನದಿಂದ ನುಡಿದರೆ ಅದು ಅನೃತವಲ್ಲದೆ ಸತ್ಯವಲ್ಲ. ನೀನು ಯಾವಕಾರಣ ಸಂಶಯಪಡುತ್ತೀಯೆ ? ನಿನಗೆ ಯಾರಿಂದ ಭಯವುಂಟಾಗಿದೆ ? ಮತ್ತೊಂದು ಗತಿಯಿಲ್ಲದ ನನ್ನನ್ನು ಏಕೆ ಬಿಟ್ಟುಹೋಗುವುದಾಗಿ ಹೇಳುತ್ತೀಯೆ ? ಪೂರ್ವದಲ್ಲಿ ದ್ಯುಮತ್ಸೇನನೆಂಬ ರಾಜನ ಮಗಳೂ ಪತಿವ್ರತೆಯೂ ಆದ ಸಾವಿತ್ರಿ ಎಂಬವಳು ತನ್ನ ಪತಿಯಾದ ಸತ್ಯವಂತನ ಹಿಂದೆಯೇ ವನಕ್ಕೆ ಹೋಗಿ ಅತ್ಯಂತ ಕೀರ್ತಿಯನ್ನು ಪಡೆದಳು. ಹಾಗೆ ನಾನು ವನಕ್ಕೆ ಬಂದು ನಿನ್ನ ಸೇವಾಸತ್ಕಾರಗಳನ್ನು ಮಾಡಿ ಕೀರ್ತಿಯನ್ನು ಪಡೆಯುವಂತೆ ಮಾಡು. ನಾನು ನಿನ್ನನ್ನು ಹೊರತಾಗಿ ಮತ್ತೊಬ್ಬ ಪುರುಷನನ್ನು ಮನಸ್ಸಿನಿಂದಲೂ ಸ್ಮರಿಸಿದವಳಲ್ಲ. ಕುಲಗೇಡಿಯಾದ ಸ್ತ್ರೀಯಂತೆ ಇರತಕ್ಕವಳಲ್ಲ. ಶ್ರೀರಾಮ, ಬಹುಕಾಲದಿಂದ ನಿನ್ನನ್ನೇ ನಂಬಿಕೊಂಡಿರುವ ಪತ್ನಿಯಾದ ನನ್ನನ್ನು ನರ್ತಕನಂತೆ ಬೇರೆಯವರಿಗೆ ಕೊಟ್ಟುಹೋಗಲು ಬಯಸುತ್ತೀಯಾ ? ನನ್ನನ್ನು ವನಕ್ಕೆ ಕರೆದುಕೊಂಡು ಹೋಗು. ನಿನ್ನ ಸಂಗಡ ಅರಣ್ಯವಾಸವನ್ನು ಮಾಡಿದರೂ ತಪಸ್ಸನ್ನು ಮಾಡಿದರೂ ನನಗೆ ಬಳಲಿಕೆ ತೋರದು. ನಾನು ನಿನ್ನ ಜೊತೆಯಲ್ಲಿ ಬಂದು ಎಲೆ ಮರಳುಗಳ ಮೇಲೆ ಮಲಗಿದರೂ ರಾಜಹಂಸ

ಪಕ್ಷಿಯ ತುಬುಟಗಳ ಹಾಸಿಗೆಯ ಮೇಲೆ ಮಲಗಿದಹಾಗೆ ಶರೀರಕ್ಕೆ ಅತ್ಯಂತ ಸುಖವಾಗಿರುವುದು. ಮತ್ತು ಭಯಂಕರವಾದ ಸುಳಿಗಾಳಿಗಳಿಂದೇಳುವ ಕೆಂಧೂಳಿಯು ನನ್ನ ಮೈಯ ಮೇಲೆ ಮುಸುಕಿದರೂ ನಿನ್ನ ಸಹವಾಸದಿಂದ ಗಂಧಾನುಲೇಪನದಂತೆ ತೋರುವುದು. ನಿನ್ನ ಸಂಗಡ ಗರಿಕೆಯ ಮೇಲೆ ಮಲಗಿದರೂ ಶ್ರೇಷ್ಠವಾದ ರತ್ನಕಂಬಳಿಯ ಮೇಲೆ ಶಯನಮಾಡುವಂತೆ ಸುಖವಾಗಿಯೇ ಇರುವುದು. ಕಂದ ಮೂಲ ಫಲ ತರಗೆಲೆಗಳನ್ನು ನಿನ್ನ ಕೈಯಿಂದ ತೆಗೆದುಕೊಂಡರೆ ಅವು ಅಮೃತಕ್ಕೆ ಸಮಾನವಾಗಿರುವುವು. ನಾನು ನಿನ್ನ ಸಮೀಪದಲ್ಲಿದ್ದರೆ ತಾಯಿತಂದೆ ಮನೆ ಮೊದಲಾದವನ್ನು ನೆನೆಯುವವಳಲ್ಲ. ಯಾವಯಾವ ಋತುವಿನಲ್ಲಿ ಯಾವಯಾವ ಪರ್ಣಫಲವುಂಟಾಗುವುವೋ ಅವನ್ನೇ ಆಹಾರಮಾಡಿಕೊಂಡು ಮನಸ್ಸಿಗೆ ವ್ಯಥೆಯಿಲ್ಲದಿರುವೆನು. ಅದನ್ನು ನೀನೇ ನೋಡುವೆ, ಯಾವ ವಿಷಯದಲ್ಲಿಯೂ ನಾನು ನಿನಗೆ ವ್ಯಥೆಯುಂಟುಮಾಡುವವಳಲ್ಲ. ನಾನು ನಿನ್ನ ಜೊತೆಯಲ್ಲಿ ಇದ್ದುಕೊಂಡು ಅನೇಕ ದುಃಖಗಳನ್ನು ಅನುಭವಿಸಿದರೂ ಅದು ಸ್ವರ್ಗಸುಖಸಮಾನವಾಗಿರುವುದು. ನೀನಿಲ್ಲದ ಸ್ವರ್ಗಸುಖವಾದರೂ ನರಕಾನುಭವವಾಗಿರುವುದು. ಇದನ್ನು ನಿನ್ನ ಅಂತಃಕರಣದಲ್ಲಿ ನಿಶ್ಚಯಿಸಿ ನನ್ನನ್ನೂ ವನಕ್ಕೆ ಕರೆದುಕೊಂಡುಹೋಗು. ನನ್ನನ್ನು ಉಪೇಕ್ಷೆಮಾಡಿ ಹೋದೆಯಾದರೆ ಆ ಕ್ಷಣದಲ್ಲೇ ವಿಷಪಾನವನ್ನು ಮಾಡುವೆನಲ್ಲದೆ ಈ ಶತ್ರುಗಳಿಗೆ ಅಧೀನಳಾಗಿ ಇರಲಾರೆನು. ಪ್ರಾಣಕಾಂತ, ನೀನು ನನ್ನನ್ನು ಬಿಟ್ಟು ವನಕ್ಕೆ ಹೋದರೆ ಆ ಕ್ಷಣದಲ್ಲಿಯೇ ನನಗೆ ಮರಣವು ಬರುವುದು. ನಿನ್ನ ಅಗಲಿಕೆಯಿಂದುಂಟಾಗುವ ದುಃಖವನ್ನು ಒಂದು ಕ್ಷಣವಾದರೂ ಸಹಿಸಲಾರೆನು. ಇನ್ನು ಹದಿನಾಲ್ಕು ವರುಷಗಳ ಪರ್ಯಂತ ಬದುಕಿರುವೆನೆಂಬುದೇನು ! " ಎಂದು ನುಡಿದಳು.

ಈ ರೀತಿಯಲ್ಲಿ ಸೀತಾದೇವಿಯು ಶೋಕಾಗ್ನಿಯಿಂದ ಪರಿತಪಿಸುತ್ತ ಬಹಳ ಹಂಬಲಿಸುತ್ತ ಶ್ರೀರಾಮನ ವಾಕ್ಯಗಳಿಂದ, ಗಾಯವಡೆದ ಹೆಣ್ಣಾನೆಯಂತೆ ರೋದನವನ್ನು ಮಾಡುತ್ತ, ಆತನನ್ನಪ್ಪಿಕೊಂಡು ಅಗ್ನಿಯನ್ನು ಮಥಿಸುವ ಅರಣಿಯು ಕಿಡಿಗಳನ್ನುಗುಳುವಂತೆ ಕಣ್ಣೀರನ್ನು ಸುರಿಸುತ್ತಿದ್ದಳು. ಆ ಕಣ್ಣೀರು ಶೋಕಾಗ್ನಿಯಿಂದ ಉಷ್ಣವಾಗಿ ಕಮಲಗಳಿಂದ ಉದಕಬಿಂದುಗಳು ಬೀಳುವಂತೆ ಬೀಳುತ್ತಿದ್ದುವು. ಆ ದೇವಿಯ ಪೂರ್ಣಚಂದ್ರನಂತಿದ್ದ ಮುಖವು ಕೊಳದಿಂದ ಹೊರಗೆ ತೆಗೆಯಲ್ಪಟ್ಟ ಕಮಲದಂತೆ ಕಂದಿಹೋಗಿದ್ದಿತು. ಅದನ್ನು ಕಂಡು ಶ್ರೀರಾಮನು ಮನಕರಗಿ ಆಕೆಯನ್ನು ಅಪ್ಪಿಕೊಂಡು ಸಂತವಿಡುತ್ತ ಆ ದೇವಿಯನ್ನು ಕುರಿತು " ಸೀತೆ, ನೀನು ದುಃಖಿಸುವಾಗ ನನ್ನ ಮನಸ್ಸು ಸ್ವರ್ಗಸುಖವನ್ನಾದರೂ ಬಯಸುವುದಿಲ್ಲ. ಸಮಸ್ತ ದಿಕ್ಕುಗಳಲ್ಲಿಯೂ ಬ್ರಹ್ಮದೇವನಿಗೆ ಹೇಗೆ ಭಯವಿಲ್ಲವೋ ಹಾಗೆ ನನಗೂ ಭಯವಿಲ್ಲ. ಎಲೈ ಶೋಭನಾಂಗಿ, ನಾನು ನಿನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿಯದೆ ವನವಾಸವು ದುಃಖವೆಂದು ಹೇಳಿದೆನು. ಘೋರಾರಣ್ಯದಲ್ಲಾದರೂ ನಿನ್ನನ್ನು ರಕ್ಷಿಸುವುದಕ್ಕೆ ನಾನು ಸಮರ್ಥನು. ನನ್ನ ಸಂಗಡ ವನಕ್ಕೆ ಬರುವುದಾಗಿ ದೃಢವಾಗಿ ಹೇಳಿದಮೇಲೆ, ಲೋಕದಲ್ಲಿ ಕೀರ್ತಿಕಾಮನಾದವನು ತನ್ನ ಕೀರ್ತಿಯನ್ನು ಬಿಡದಂತೆ, ನಾನು ನಿನ್ನನ್ನು ಬಿಟ್ಟೆರೆನು. ಜಾನಕಿ, ನೀನು ಪೂರ್ವದವರು ನಡೆದ ಧರ್ಮಮಾರ್ಗವನ್ನು ಕೈಗೊಂಡೆ. ಛಾಯಾದೇವಿಯು ಸೂರ್ಯನನ್ನು ಹಿಂಬಾಲಿಸಿ ಹೋಗುವಂತೆ, ತಂದೆಯ ಮಾತನ್ನು ಮೀರದೆ ವನಕ್ಕೆ ಹೋಗುವ ನನ್ನ ಹಿಂದೆ ಬಾ. ನನ್ನ ತಂದೆಯಾದ ದಶರಥರಾಯನ ಆಜ್ಞೆಯನ್ನು ಮೀರಿ ಜೀವಿಸಲಾರೆನು. ತನ್ನ ಮುಂದೆ ಇರುವ ತಾಯಿ ತಂದೆ ಗುರುಗಳೆಂಬ ಮೂವರನ್ನು ಅತಿಕ್ರಮಿಸುವವನು ದೃಷ್ಟಿಗೋಚರವಾಗದಿರುವ ದೇವತೆಗಳ ಆರಾಧನೆಯನ್ನು ಹೇಗೆ ಮಾಡುವನು ? ಲೋಕದಲ್ಲಿ ತಾಯಿ ತಂದೆ ಗುರುಗಳಿಗೆ ಸಮಾನವಾದ ದೈವವಿಲ್ಲವಾದಕಾರಣ, ಸೀತೆ, ನನ್ನ ತಂದೆತಾಯಿಗಳ ಆಜ್ಞೆಯನ್ನು ಪರಿಪಾಲಿಸುತ್ತಿದ್ದೇನೆ. ಬ್ರಾಹ್ಮಣಸತ್ಕಾರವೂ ಅನೇಕ

ದಕ್ಷಿಣಾಯುಕ್ತವಾದ ದಾನವೂ ತಾಯಿತಂದೆಗಳ ಸೇವೆಗೆ ಸರಿಬರವು. ಸ್ವರ್ಗ, ಧನಧಾನ್ಯಗಳು, ಸಮಸ್ತ ವಿದ್ಯೆಗಳು, ಪುತ್ರಸಂತಾನ ಇವೆಲ್ಲವೂ ಗುರುಸೇವೆಯನ್ನು ಮಾಡುವ ಧರ್ಮದಿಂದ ದೊರೆಯುವುವೂ ತಾಯಿತಂದೆಗಳ ಸೇವೆಯಲ್ಲಿ ತತ್ಪರರಾದ ಪುಣ್ಯಾತ್ಮರು ಸದ್ಗತಿಯನ್ನು ಸುಲಭದಲ್ಲಿ ಪಡೆಯುವರು, ಧರ್ಮಮಾರ್ಗಪ್ರವರ್ತಕನಾಗಿ ನನ್ನ ತಂದೆಯಾದ ದಶರಥರಾಯನು ಹೇಗೆ ನಿರೂಪಿಸಿದನೋ ಹಾಗೆ ನಾನು ನಡೆಯುತ್ತಿದ್ದೇನೆ. ಇದೇ ನನಗೆ ಶಾಶ್ವತವಾದ ಧರ್ಮ. ಈಗ ನಿನ್ನನ್ನು ದಂಡಕಾರಣ್ಯಕ್ಕೆ ಕರೆದುಕೊಂಡುಹೋಗಲು ಮನಸ್ಸಿನಲ್ಲಿ ನಿಶ್ಚಯಿಸಿದೆನು. ನೀನು ನಿನ್ನ ಕೋಪವನ್ನು ಬಿಟ್ಟು ವನವಾಸಕ್ಕೆ ಸಿದ್ಧಳಾಗಿ ನನ್ನ ಜೊತೆಗೆ ಪ್ರಯಾಣ ಮಾಡು. ನೀನು ಉತ್ತಮವಾದ ಕುಲದಲ್ಲಿ ಜನಿಸಿದವಳು. ಸತ್ಕುಲಪ್ರಸೂತನಾದ ನನ್ನನ್ನು ಕೈಹಿಡಿದೆ. ವನವಾಸಕ್ಕೆ ತೆರಳುವ ಯತ್ನವನ್ನು ಮಾಡು. ನೀನಿಲ್ಲದೆ ನಾನು ಸ್ವರ್ಗಸುಖವನ್ನೂ ಒಲ್ಲೆನು. ನಿನ್ನಲ್ಲಿರುವ ರತ್ನಗಳನ್ನು ದಾನಮಾಡಿ, ಭೋಜನಾರ್ಥವಾಗಿ ಬಂದವರಿಗೆ ಅನ್ನವನ್ನಿಕ್ಕಿ, ಮನೋಹರಗಳಾದ ಭೂಷಣಗಳನ್ನೂ ವಸ್ತ್ರಗಳನ್ನೂ ಕೇಳಿದವರಿಗೆ ಕೊಡು. ವಿನೋದಾರ್ಥವಾದ ರನ್ನಗನ್ನಡಿ ನಿಲುಗೊಂಬೆ ಮೊದಲಾದ ವಸ್ತುಗಳನ್ನು ನಿನ್ನನ್ನು ಆಶ್ರಯಿಸಿದ ಸೇವಕರಿಗೆ ಕೊಡು" ಎಂದು ನಿರೂಪಿಸಿದನು.



## ೩೧ ನೆ ಯ ಅ ಧ್ಯಾ ಯ

## ಲ ಕ್ಷ್ಮ ಣ ನು ವ ನ ವಾ ಸ ಕ್ಕೆ ಬ ರು ವು ದ ನ್ನು ಶ್ರೀ ರಾ ಮ ನು ಒ ಪ್ಪಿ ದ್ದು

ಅನಂತರ ಶ್ರೀರಾಮನ ಆಜ್ಞಾನುಸಾರವಾಗಿ ಸೀತಾದೇವಿಯು ತನ್ನಲ್ಲಿದ್ದ ಎಲ್ಲ ಭೂಷಣಾದಿಗಳನ್ನೂ ಬ್ರಾಹ್ಮಣರಿಗೆ ದಾನಮಾಡಿದಳು. ಅದನ್ನು ಕಂಡು ಲಕ್ಷ್ಮಣನು ಮನಸ್ಸಿನಲ್ಲಿ ದುಃಖಪಟ್ಟು ಶೀಘ್ರವಾಗಿ ಶ್ರೀರಾಮನ ಸಮೀಪಕ್ಕೆ ಹೋಗಿ ಕಣ್ಣೀರು ಸುರಿಸುತ್ತ ಆತನ ಪಾದಗಳಿಗೆ ಅಭಿವಂದಿಸಿ ಹೀಗೆಂದನು : "ಶ್ರೀರಾಮ, ನೀವು ದಂಪತಿಗಳಿಬ್ಬರೂ ಅನೇಕ ದುಷ್ಟಮೃಗಗಳಿಂದಿಟ್ಟಣಿಸಿರುವ ವನವನ್ನೈದಬೇಕೆಂದು ನಿಶ್ಚಯಿಸಿರುವುದರಿಂದ ನಾನೂ ಬಿಲ್ಲಂಬುಗಳನ್ನು ಧರಿಸಿಕೊಂಡು ನಿಮ್ಮ ಮುಂದುಗಡೆಯಲ್ಲಿ ಬರುತ್ತೇನೆ. ಅನೇಕ ದುಷ್ಟಮೃಗಪಕ್ಷಿಗಳಿಂದಿಟ್ಟಣಿಸಿರುವ ವನದಲ್ಲಿ ನಿಮ್ಮ ಮುಂದುಗಡೆಯಲ್ಲಿ ನಾನಿರಬೇಕು. ಆದ್ದರಿಂದ ನನ್ನನ್ನೂ ಕರೆದುಕೊಂಡುಹೋಗು. ನನಗೆ ರಾಜ್ಯಾಧಿಪತ್ಯದಲ್ಲಿ ಇಚ್ಛೆಯಿಲ್ಲ. ನೀನಿಲ್ಲದ ರಾಜ್ಯಾಧಿಪತ್ಯದಲ್ಲಿ ನನಗೆ ಆಶೆಯಿಲ್ಲ. ನೀನಿಲ್ಲದೆ ದೇವಲೋಕಾಧಿಪತ್ಯವನ್ನಾದರೂ ಸಮಸ್ತೈಶ್ವರ್ಯವನ್ನಾದರೂ ಬಯಸೆನು" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ವನವಾಸಕ್ಕೆ ಬರಬಾರದೆಂದು ಬಹುಪ್ರಕಾರದಲ್ಲಿ ಸಮಾಧಾನವನ್ನು ಹೇಳಿದರೂ ಲಕ್ಷ್ಮಣನು ಕೇಳಲಿಲ್ಲ. ಅವನು "ಅಣ್ಣ, ಈ ಹಿಂದೆ ಸಿದ್ಧಾಶ್ರಮಕ್ಕೆ ನೀನು ಹೊರಟಾಗ ನಾನು ವನಕ್ಕೆ ಬರುವುದಾಗಿ ಬಿನ್ನವಿಸಲು ಅದನ್ನಂಗೀಕರಿಸಿ ನನ್ನನ್ನು ನಿನ್ನ ಸಂಗಡ ಕರೆದುಕೊಂಡುಹೋದೆ. ಈಗ ಯಾವಕಾರಣ ನನ್ನನ್ನು ಬರಬಾರದೆಂದು ತಡೆಯುತ್ತೀಯೆ-?" ಎಂದು ನುಡಿದನು.

ಶ್ರೀರಾಮನು ಆತನನ್ನು ಕುರಿತು "ಲಕ್ಷ್ಮಣ, ನಾನು ವನಕ್ಕೆ ತೆರಳಿದರೆ ನೀನು ಬಿಲ್ಲಂಬುಗಳನ್ನು ಧರಿಸಿಕೊಂಡು ನನ್ನ ಮುಂದುಗಡೆಯಲ್ಲಿ ನಡೆಯುವೆ ಎಂಬುದರಲ್ಲಿ ಸಂಶಯವಿಲ್ಲ. ನೀನು ಮಹಾ ಪರಾಕ್ರಮಿಯು ; ನನ್ನ ಒಡಹುಟ್ಟಿದವನು ; ನನ್ನ ಪ್ರಾಣಕ್ಕೆ ಸಮಾನನು. ಆದರೆ ನಾನು ವನಕ್ಕೆ

ಹೋಗಿ ನೀನೂ ಇಲ್ಲಿಲ್ಲದಿದ್ದರೆ ಕೌಸಲ್ಯಾದೇವಿಯನ್ನೂ ಸುಮಿತ್ರಾದೇವಿಯನ್ನೂ ರಕ್ಷಿಸುವವರಾರು ? ಭರತನು ರಾಜ್ಯಾಧಿಪತ್ಯವನ್ನು ಮಾಡಿಕೊಂಡು ತನ್ನ ತಾಯಿಯಾದ ಕೈಕೇಯಿದೇವಿಯ ವಶನಾಗಿ ಆ ದೇವಿಯು ಹೇಳುವಹಾಗೆ ಕೇಳಿಕೊಂಡು ಮತ್ತೊಬ್ಬರನ್ನು ವಿಚಾರಿಸದೆ ಇರಬಹುದು. ಆದಕಾರಣ ನೀನು ಮಹಾರಾಜನ ಅಪ್ಪಣೆಯಿಂದಾದರೂ ಕೌಸಲ್ಯಾದೇವಿಯನ್ನೂ ಸುಮಿತ್ರಾದೇವಿಯನ್ನೂ ರಕ್ಷಿಸಿಕೊಂಡಿರು. ನನ್ನ ಮಾತನ್ನು ಕೇಳು. ನೀನು ನನಗೆ ಪ್ರಿಯನಾದವನು. ಮಗನಿಗೆ ತಾಯಿ ತಂದೆಗಳ ಸೇವೆಯನ್ನು ಮಾಡುವುದೇ ಧರ್ಮ. ಆದಕಾರಣ ನೀನು ನನ್ನ ಮಾತಿನಂತೆ ತಾಯಿತಂದೆಗಳ ಸೇವೆಯನ್ನು ಮಾಡಿಕೊಂಡು ಸುಖವಾಗಿರು. ನಾವಿಬ್ಬರೂ ಹೋದರೆ ಕೌಸಲ್ಯಾದೇವಿಗೂ ಸುಮಿತ್ರಾದೇವಿಗೂ ಸುಖವಿಲ್ಲ " ಎಂದು ನುಡಿದನು.

ಲಕ್ಷ್ಮಣನು ಅತಿವಿನಯಗೂಡಿದ ಮೃದುವಚನಗಳಿಂದ ಅಣ್ಣನನ್ನು ಕುರಿತು ಹೀಗೆಂದನು : "ಅಣ್ಣ, ನಿನ್ನ ಪ್ರಭಾವದಿಂದ ಭರತನೇ ಕೌಸಲ್ಯಾದೇವಿಯನ್ನೂ ಸುಮಿತ್ರಾದೇವಿಯನ್ನೂ ರಕ್ಷಿಸುವನು. ಈ ವಿಷಯದಲ್ಲಿ ಸಂಶಯವಿಲ್ಲ. ಭರತನು ರಕ್ಷಿಸದ ಪಕ್ಷದಲ್ಲಿ ಕೌಸಲ್ಯಾದೇವಿಯು ನಮ್ಮಂಥ ಸಾವಿರ ಮಂದಿಯನ್ನು ರಕ್ಷಿಸಬಲ್ಲಳು. ಆ ದೇವಿಗೆ ಉಂಬಳಿಯಾಗಿ ಸಾವಿರ ಗ್ರಾಮಗಳು ಕೊಡಲ್ಪಟ್ಟಿವೆ. ಅವುಗಳಿಂದ ಕೌಸಲ್ಯಾದೇವಿಯು ತನ್ನನ್ನು ರಕ್ಷಿಸಿಕೊಂಡು ನಮ್ಮಂಥವರನೇಕಮಂದಿಯನ್ನೂ ರಕ್ಷಿಸುವಳು. ನೀನು ನನ್ನನ್ನು ಸೇವಕನನ್ನಾಗಿ ಭಾವಿಸು. ನಾನು ನಿನ್ನ ಸೇವೆಯನ್ನು ಮಾಡಿ ಕೃತಾರ್ಥನಾಗುವೆನು. ಬಿಲ್ಲುಬಾಣಗಳನ್ನು ಧರಿಸಿಕೊಂಡು ವನದಲ್ಲಿ ಗೆಡ್ಡೆ ಗೆಣಸುಗಳನ್ನು ತರುವುದಕ್ಕೆ ಹಾರೆ ಮಕ್ಕರಿಗಳನ್ನು ತೆಗೆದುಕೊಂಡು ನಿಮ್ಮ ಮುಂದೆ ನಡೆಯುವೆನು. ವನದಲ್ಲಿ ದೇವಪೂಜೆ ಅಗ್ನಿಹೋತ್ರಗಳಿಗೂ ಬರುವ ಅತಿಥಿಗಳ ಸತ್ಕಾರಕ್ಕೂ ಯೋಗ್ಯವಾಗಿ ವನದಲ್ಲಿರುವ ಕಂದ ಮೂಲ ಫಲಗಳನ್ನು ತರುವೆನು. ನೀನು ಪರ್ವತದ ತಪ್ಪಲುಗಳಲ್ಲಿಯೂ ಪುಣ್ಯವೃಕ್ಷಗಳ ನೆಳಲುಗಳಲ್ಲಿಯೂ ಸೀತಾದೇವಿಯೊಡನೆ ವಿಹರಿಸುತ್ತಿರಬಹುದು. ನಾನು ಜಾಗ್ರತ್ಸ್ವಪ್ನಾವಸ್ಥೆಗಳಲ್ಲಿಯೂ ಎಡೆಬಿಡದೆ ನಿನ್ನ ಸೇವೆಯನ್ನು ಮಾಡುವೆನು " ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಸುಪ್ರೀತನಾಗಿ " ಲಕ್ಷ್ಮಣ, ನೀನು ನಿನಗೆ ಇಷ್ಟರಾದ ಜನರಿಗೆ ಹೇಳಿ ಅವರಿಂದ ಬೀಳ್ಕೊಂಡು ಬಾ. ಜನಕಚಕ್ರೇಶ್ವರನ ಯಾಗಕಾಲದಲ್ಲಿ ವರುಣನು ಕೊಟ್ಟಂಥ ದಿವ್ಯವಾದ ಬಿಲ್ಲನ್ನೂ ಅಕ್ಷಯವಾದ ಬತ್ತಳಿಕೆಯನ್ನೂ ಸೂರ್ಯಮಂಡಲದಂತೆ ಬೆಳಗುವ ಎರಡು ಖಡ್ಗಗಳನ್ನೂ ನಮ್ಮ ಗುರುವಾದ ವಸಿಷ್ಠಮುನೀಶ್ವರನ ವಶದಲ್ಲಿಟ್ಟಿದ್ದೇನೆ. ನೀನು ಆತನ ಸಮೀಪಕ್ಕೆ ಹೋಗಿ ಆ ಬಿಲ್ಲು ಬತ್ತಳಿಕೆಗಳನ್ನೂ ಖಡ್ಗಗಳನ್ನೂ ತೆಗೆದುಕೊಂಡು ನಿನ್ನ ಸ್ನೇಹಿತರಿಗೂ ನಿನ್ನನ್ನು ಅನುಸರಿಸಿದವರಿಗೂ ಹೇಳಿ ಶೀಘ್ರದಲ್ಲಿ ಬಾ " ಎಂದು ಹೇಳಿದನು.

ಲಕ್ಷ್ಮಣನು ಮಹಾಪ್ರಸಾದವೆಂದು ಇಕ್ಷ್ವಾಕುವಂಶಕ್ಕೆ ಗುರುವಾದ ವಸಿಷ್ಠಮುನೀಶ್ವರನ ಸಮೀಪಕ್ಕೆ ಹೋಗಿ ಅಭಿವಂದಿಸಿ ಆತನ ಕೈಯಿಂದ ಬಿಲ್ಲು ಬತ್ತಳಿಕೆ ಖಡ್ಗಗಳನ್ನು ತೆಗೆದುಕೊಂಡು ಬಂದು ಶ್ರೀರಾಮನಿಗೆ ತೋರಿಸಿದನು. ಶ್ರೀರಾಮನು ಹರ್ಷದಿಂದ " ಲಕ್ಷ್ಮಣ, ನೀನು ಶೀಘ್ರದಲ್ಲಿ ಬಂದದ್ದು ಬಹಳ ಒಳ್ಳೆಯದಾಯಿತು. ನಾನು ನನ್ನಲ್ಲಿರುವ ವಸ್ತುಗಳನ್ನು ಬ್ರಾಹ್ಮಣರಿಗೆ ದಾನಮಾಡುವೆನು. ನಿನ್ನಲ್ಲಿರುವ ಸುವರ್ಣ ರತ್ನ ಮೊದಲಾದ ವಸ್ತುಗಳನ್ನು ಯೋಗ್ಯರಾದವರಿಗೆ ದಾನಮಾಡು. ನಿನ್ನನ್ನು ಆಶ್ರಯಿಸಿದ್ದವರಿಗೂ ಊಳಿಗದವರಿಗೂ ಬೇಕಾದ ವಸ್ತುಗಳನ್ನು ಕೊಡು. ವಸಿಷ್ಠಮುನೀಶ್ವರನ ಮಗನಾದ ಸುಯಜ್ಞಮುನಿಯನ್ನೂ ಆ ಮುನೀಶ್ವರನ ಶಿಷ್ಯರನ್ನೂ ಕರೆಸು. ನಾನು ಅವರಿಗೆ ಬೇಕಾದ ವಸ್ತುಗಳನ್ನು ದಾನಮಾಡುವೆನು " ಎಂದು ನಿರೂಪಿಸಿದನು.

---

## ೩೨ ನೆಯ ಅಧ್ಯಾಯ

## ಸೀತಾರಾಮಲಕ್ಷ್ಮಣರು ದಾನಮಾಡಿದ್ದು

ಆಮೇಲೆ ಲಕ್ಷ್ಮಣನು ಶ್ರೀರಾಮನ ಹಿತೋಪದೇಶವನ್ನು ಕೇಳಿ ಸುಯಜ್ಞಮುನೀಶ್ವರನ ಮನೆಗೆ ಹೋಗಿ ಅಗ್ನಿಹೋತ್ರದ ಮನೆಯಲ್ಲಿದ್ದ ಆತನಿಗೆ ನಮಸ್ಕರಿಸಿ "ಸುಯಜ್ಞಮುನಿಗಳೆ, ನೀವು ಶ್ರೀರಾಮನ ಮನೆಗೆ ಬಂದು ಆತನ ದುಷ್ಕರಕರ್ಮವನ್ನು ನೋಡಿರಿ" ಎಂದು ಹೇಳಿದನು.

ಸುಯಜ್ಞಮುನೀಶ್ವರನು ಸಂಧ್ಯಾವಂದನ ಜಪಹೋಮಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಲಕ್ಷ್ಮಣನ ಸಂಗಡ ಅನೇಕ ಸಂಪತ್ತುಗಳಿಂದ ರಮ್ಯವಾದ ಶ್ರೀರಾಮನ ಅರಮನೆಯನ್ನು ಪ್ರವೇಶಿಸಿದನು. ಶ್ರೀರಾಮನು ಸೀತಾದೇವಿಯೊಡನೆ ಎದುರ್ಗೊಂಡು ಯಜ್ಞಪುರುಷನಿಗೆ ನಮಸ್ಕಾರವನ್ನು ಮಾಡುವಂತೆ ತಪೋಜ್ವಾಲೆಯಿಂದ ಬೆಳಗುತ್ತಿದ್ದ ಆ ಮುನೀಶ್ವರನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ತನ್ನಲ್ಲಿದ್ದಂಥ ಸುವರ್ಣಮಯವಾದ ರತ್ನಖಚಿತವಾದ ಕುಂಡಲಗಳನ್ನೂ ಬಾಹುಪುರಿ ರತ್ನದ ಗೊಲುಸುಳ್ಳ ಉಡುದಾರ ಮೊದಲಾದ ಸಮಸ್ತ ಭೂಷಣಗಳನ್ನೂ ಕೊಟ್ಟನು ಮತ್ತು ಸೀತಾದೇವಿಯಿಂದ ಪ್ರೇರಿತನಾಗಿ "ಸುಯಜ್ಞಮುನೀಶ್ವರ, ನಿಮ್ಮ ಪತ್ನಿಗೆ ಸೀತಾದೇವಿಯು ತನ್ನ ಆಭರಣಗಳನ್ನು ಕೊಡಲೆಣಿಸಿದ್ದಾಳೆ. ಸೀತೆಯು ಕೊಡುವ ಆಭರಣಗಳನ್ನು ತೆಗೆದುಕೊಂಡು ಹೋಗಿ ನಿಮ್ಮ ಪತ್ನಿಗೆ ಕೊಡಿರಿ" ಎಂದನು.

ಆಗ ಸೀತಾದೇವಿಯು ಚಿನ್ನದ ಕಿರುಗೆಜ್ಜೆಗಳುಳ್ಳ ಚಿನ್ನದ ಕಾಂಚೀದಾಮ ವಿಚಿತ್ರಗಳಾದ ರತ್ನದ ಕಡಗಗಳು ಹರಳೋಲೆಗಳು ಕಂಠಮಾಲೆ ಮೂಗುತಿ ಮೊದಲಾದ ಭೂಷಣಗಳನೂ ರತ್ನಖಚಿತವಾದ ಹಾಸುಮಂಚವನ್ನೂ ಹಂಸಪಕ್ಷಿಗಳ ತುಬುಟಗಳಿಂದ ಮಾಡಲ್ಪಟ್ಟ ಸುಪ್ಪತ್ತಿಗೆಗಳನ್ನೂ ಆತನ ಪತ್ನಿಗೆ ಕೊಡಹೇಳಿ ಸುಯಜ್ಞಮುನೀಶ್ವರನಿಗೆ ಕೊಟ್ಟಳು. ಶ್ರೀರಾಮನು ಆ ಮುನೀಶ್ವರನನ್ನು ಕುರಿತು "ಸುಯಜ್ಞಮುನೀಶ್ವರರೆ, ನನ್ನ ಸೋದರಮಾವನು ಶತ್ರುಂಜಯವೆಂಬ ಹೆಸರುಳ್ಳ ಉತ್ತಮವಾದ ಮದ್ದಾನೆಯನ್ನು ನನಗೆ ಕೊಟ್ಟನು. ಆ ಆನೆಯನ್ನೂ ಒಂದು ಸಾವಿರ ಸುವರ್ಣನಾಣ್ಯಗಳನ್ನೂ ನಾನು ನಿಮಗೆ ಕೊಡುತ್ತೇನೆ; ತೆಗೆದುಕೊಳ್ಳಿ" ಎಂದನು. ಸುಯಜ್ಞಮುನೀಶ್ವರನು ರಾಮ ಲಕ್ಷ್ಮಣ ಸೀತಾದೇವಿಯರು ಕೊಟ್ಟ ವಸ್ತುಗಳನ್ನು ತೆಗೆದುಕೊಂಡು ಅವರಿಗೆ ಅನೇಕ ಆಶೀರ್ವಾದಗಳನ್ನು ಮಾಡಿದನು.

ಆಮೇಲೆ ಸಮಸ್ತ ಪ್ರಾಣಿಗಳೊಡನೆಯೂ ಪ್ರಿಯೋಕ್ತಿಗಳನ್ನೇ ನುಡಿಯುತ್ತಿದ್ದ ಶ್ರೀರಾಮನು ಲಕ್ಷ್ಮಣನನ್ನು ನೋಡಿ ಹೀಗೆಂದನು: "ಲಕ್ಷ್ಮಣ, ಬ್ರಾಹ್ಮಣೋತ್ತಮರಾದ ಅಗಸ್ತ್ಯನನ್ನೂ ಕೌಶಿಕಮುನಿಯನ್ನೂ ಕರೆಕಳುಹಿಸಿ ಅವರಿಗೆ ಅನೇಕಸಹಸ್ರ ಹಸುಗಳನ್ನು ಕೊಟ್ಟು ಸತ್ಕರಿಸು. ಮೇಘಗಳು ಮಳೆಗರೆದು ಪೈರುಗಳನ್ನು ಸಂತೋಷಪಡಿಸುವಂತೆ ಅವರನ್ನು ಸಂತೋಷಪಡಿಸು. ಕೌಸಲ್ಯಾದೇವಿಯ ಸಮೀಪದಲ್ಲಿ ಋಗ್ವಿಧಾನೋಕ್ತವಾದ ಮಾಂಗಲ್ಯಸೂಕ್ತಗಳಿಂದ ಆಶೀರ್ವಾದಗಳನ್ನು ಮಾಡಿ ಸಂತೋಷಪಡಿಸುವಂಥ ಅಗಸ್ತ್ಯನನ್ನು ಅನೇಕ ರತ್ನಾಭರಣ ಪಟ್ಟೆಯ ಹಚ್ಚಡ ಧನ ಧಾನ್ಯಾದಿಗಳಿಂದ ಸಂತೋಷವಾಗುವ ರೀತಿಯಲ್ಲಿ ಸತ್ಕಾರವನ್ನು ಮಾಡು. ಚಿತ್ರರಥನೆಂಬ ಸೂತನು ಬಹುಕಾಲದಿಂದ ನಿನ್ನನ್ನು ಆಶ್ರಯಿಸಿಕೊಂಡಿದ್ದನು. ಆತನನ್ನು ಅನೇಕ ರತ್ನಾಭರಣಗಳಿಂದ ಸತ್ಕರಿಸು. ವೇದಪಾರಾಯಣಶೀಲರಾಗಿ ವ್ರತನಿಯಮಸ್ಥರಾದ ಬ್ರಾಹ್ಮಣರಿಗೆ ಸಾವಿರ ಸಾವಿರ

ಹಸುಗಳನ್ನು ಕೊಡು. ನಮ್ಮ ತಾಯಿಯಾದ ಕೌಸಲ್ಯಾದೇವಿಯನ್ನು ಆಶ್ರಯಿಸಿಕೊಂಡಿರುವ ಬ್ರಹ್ಮ ಚಾರಿಗಳಿಗೆ ಒಬ್ಬೊಬ್ಬರಿಗೆ ಸಾವಿರ ಸಾವಿರ ವರಹಗಳನ್ನು ಲೆಕ್ಕಮಾಡಿ ಆ ದೇವಿಗೆ ಸಂತೋಷವಾಗು ವಂತೆ ಕೊಡು!" ಎಂದು ಬ್ರಹ್ಮದೇವನು ದೇವೇಂದ್ರನಿಗೆ ಆಜ್ಞಾಪಿಸುವಂತೆ ಲಕ್ಷ್ಮಣನಿಗೆ ಅಪ್ಪಣೆಯನ್ನು ಕೊಟ್ಟನು.

ಲಕ್ಷ್ಮಣನು ಆತನ ಆಜ್ಞೆಯನ್ನು ಶಿರಸಾವಹಿಸಿ ಬ್ರಾಹ್ಮಣೋತ್ತಮರಿಗೆ ಅನೇಕ ದ್ರವ್ಯ ವಸ್ತು ವಾಹನಗಳನ್ನು ಕೊಟ್ಟನು. ತಾವು ವನವನ್ನೈದುವುದನ್ನು ಕಂಡು ದುಃಖಾತಿಶಯದಿಂದ ಕಣ್ಣೀರನ್ನು ಬಿಡುತ್ತಿದ್ದ ಊಳಿಗದವರಿಗೆ ಅನೇಕ ದ್ರವ್ಯಗಳನ್ನು ಕೊಟ್ಟನು. ತಮ್ಮ ಅರಮನೆಗಳು ಶೂನ್ಯವಾಗ ದಂತೆ ಆಪ್ತಜನರಿಗೆ ಅನೇಕ ದ್ರವ್ಯ ವಸ್ತು ವಾಹನಗಳನ್ನು ಕೊಟ್ಟು ಅರಮನೆಗಳನ್ನು ಕಾದುಕೊಂಡಿರು ವಂತೆ ಕಟ್ಟುಮಾಡಿದನು. ಮನೋವ್ಯಥೆಯಿಂದಿದ್ದ ಪುರಜನರನ್ನು ಸಂತವಿಟ್ಟನು. ಬೊಕ್ಕಸದವರನ್ನು ಕರೆದು ಅವರಲ್ಲಿದ್ದ ದ್ರವ್ಯವೆಲ್ಲವನ್ನೂ ತರಿಸಿ ಪರ್ವತಾಕಾರವಾಗಿದ್ದ ಆ ದ್ರವ್ಯರಾಶಿಯನ್ನು ನೋಡಿ ಸಂತೋಷಪಟ್ಟು ಬ್ರಾಹ್ಮಣರಿಗೆ ಕೊಡುತ್ತಿದ್ದನು.

ಆ ಸಮಯದಲ್ಲಿ ಗಾರ್ಗ್ಯನ ಮಗನಾದ ತ್ರಿಜಟನೆಂಬವನು ಗುದ್ದಲಿ ನೇಗಿಲುಗಳನ್ನು ಸಂಪಾದಿಸಿಕೊಂಡು ಕಾಡುಮೇಡುಗಳನ್ನು ಸುತ್ತುತ್ತ ತನ್ನ ಸಂಸಾರಸ್ಥಿತಿಯನ್ನು ನಡೆಯಿಸುತ್ತಿದ್ದನು. ಅವನು ವೃದ್ಧನಾಗಿದ್ದನು. ಆತನ ಪತ್ನಿಯು ತನ್ನ ಎಳೆಯ ಮಕ್ಕಳನ್ನೂ ವೃದ್ಧನಾದ ತನ್ನ ಪತಿಯ ಕಾರ್ಪಣ್ಯವನ್ನೂ ನೋಡಲಾರದೆ ಶ್ರೀರಾಮನು ಬಹಳವಾಗಿ ದ್ರವ್ಯದಾನ ಮಾಡುತ್ತಲಿರುವುದನ್ನು ಕೇಳಿ ಅತಿದಾರಿದ್ರ್ಯದಿಂದ ನೊಂದವಳಾಗಿ ಆ ಬ್ರಾಹ್ಮಣನನ್ನು ಕುರಿತು "ಸ್ವಾಮಿ, ಈ ಗುದ್ದಲಿ ನೇಗಿಲುಗಳನ್ನು ಸಾಕುಮಾಡಿ ಧರ್ಮಿಷ್ಠನಾದ ಶ್ರೀರಾಮನನ್ನು ಕಂಡೆಯಾದರೆ ನಮ್ಮ ಇಷ್ಟಾರ್ಥವು ಕೈಗೂಡುವುದು" ಎಂದು ಹೇಳಿದಳು.

ಆಕೆಯ ಮಾತನ್ನು ಕೇಳಿ ತ್ರಿಜಟನೆಂಬ ಆ ಬ್ರಾಹ್ಮಣನು ಹರಕುಹೊದಕೆಯನ್ನು ಹೊದ್ದುಕೊಂಡು ತನ್ನ ಪತ್ನಿಯನ್ನೂ ಮಕ್ಕಳನ್ನೂ ಕರೆದುಕೊಂಡು ಶ್ರೀರಾಮನ ಅರಮನೆಯ ಒಳಗೆ ಹೋದನು. ಬೃಹಸ್ಪತಿ ಶುಕ್ರಾಚಾರ್ಯರಿಗೆ ಸಮಾನವಾದ ತೇಜಸ್ಸುಳ್ಳವನಾದ್ದರಿಂದ ತ್ರಿಜಟ ಮುನೀಶ್ವರನನ್ನು ನಾಲ್ಕು ಐದು ಅಂತರದ ಬಾಗಿಲುಗಳಲ್ಲಿಯೂ ದ್ವಾರಪಾಲಕರು ತಡೆಯಲಿಲ್ಲ. ಆತನು ಶೀಘ್ರದಲ್ಲಿ ಅಂತಃಪುರದಲ್ಲಿದ್ದ ಶ್ರೀರಾಮನನ್ನು ಕಂಡು ಆತನನ್ನು ಕುರಿತು "ಶ್ರೀರಾಮ, ನಾನು ಮಹಾದರಿದ್ರನಾದವನು. ವನದಲ್ಲಿ ಅಯಾಚಿತವ್ರತವನ್ನು ಮಾಡಿಕೊಂಡಿದ್ದೆನು. ಈಗ ವೃದ್ಧನಾದೆನು. ಆದ್ದರಿಂದ ದೇಹಶ್ರಮವನ್ನು ಪಡಲಾರೆನು. ನನ್ನ ಅವಸ್ಥೆಯನ್ನು ನೋಡು" ಎಂದು ಬಿನ್ನಹಮಾಡಿದನು.

ಶ್ರೀರಾಮನು ಆತನ ಕಾರ್ಪಣ್ಯಾವಸ್ಥೆಯನ್ನು ಕಂಡು ವಿನೋದಾರ್ಥವಾಗಿ "ಎಲೈ ಬ್ರಾಹ್ಮಣನೆ, ನಿನ್ನ ಕೈಯಲ್ಲಿರುವ ಕೋಲನ್ನು ಬಲವಾಗಿ ಎಸೆದರೆ ಅದು ಎಷ್ಟುದೂರ ಹೋಗುವುದೋ ಅದುವರೆಗೆ ಇರುವ ಹಸುಗಳೆಲ್ಲವನ್ನೂ ನಿನಗೆ ಕೊಡುತ್ತೇನೆ" ಎಂದು ನುಡಿದನು.

ಆ ಬ್ರಾಹ್ಮಣನು ತಾನು ಹೊದ್ದಿದ್ದ ಹೊದಿಕೆಯನ್ನು ಶೀಘ್ರದಲ್ಲಿ ನಡುವಿಗೆ ಸುತ್ತಿಕೊಂಡು ಅತಿಹರ್ಷದಿಂದ ತನ್ನ ಶಕ್ತಿಮೀರಿ ಕೈಯಲ್ಲಿದ್ದ ಕೋಲನ್ನು ಬೀಸಿದನು. ಆ ಕೋಲು ಸರಯೂ ನದಿಯನ್ನು ದಾಟಿ ಅನೇಕ ಗೋವುಗಳ ಹಿಂಡಿನ ಗೂಳಿಗಳ ಸಮೀಪದಲ್ಲಿ ಬಿತ್ತು. ಆಗ ಕೋಲು ಹೋಯಿತಲ್ಲ ಎಂದು ವ್ಯಥೆಪಡುತಿದ್ದ ಆ ಬ್ರಾಹ್ಮಣನನ್ನು ಕಂಡು ಶ್ರೀರಾಮನು ಕೋಲನ್ನು ಸರಯೂನದಿಯ ಆಚೆಯಕಡೆಯಿಂದ ತರಿಸಿಕೊಟ್ಟು ಆತನನ್ನು ಕುರಿತು "ಎಲೈ ತ್ರಿಜಟಮುನೀಶ್ವರನೆ,

ನಾನು ವಿನೋದಾರ್ಥವಾಗಿ ನಿನ್ನ ಕೋಲನ್ನು ಹಾಕಿಸಿದೆನು. ನೀನು ಕೋಪವನ್ನು ಮಾಡಬೇಡ" ಎಂದು ಸಂತವಿಟ್ಟು ಅನೇಕ ಹಸುಗಳನ್ನು ಆತನ ಆಶ್ರಮಕ್ಕೆ ಹೊಡೆದು ಕಳುಹಿಸಿದನು. ಅನಂತರ "ಎಲೈ ತ್ರಿಜಟಮುನೀಶ್ವರನೆ, ನಿನಗೆ ಇನ್ನೇನಾಗಬೇಕು ? ಎಷ್ಟು ಧನವನ್ನು ಕೇಳಿದರೂ ಕೊಡುತ್ತೇನೆ. ಈ ವಿಷಯದಲ್ಲಿ ನನ್ನ ಸತ್ಯವೇ ಸಾಕ್ಷಿ. ನಿನಗೆ ಸಂಕೋಚವು ಬೇಡ. ನಿನಗೆ ಬೇಕಾದಷ್ಟು ದ್ರವ್ಯವನ್ನು ಕೇಳು. ನಾನು ಸಂಪಾದಿಸಿದ ದ್ರವ್ಯವನ್ನು ನಿನಗೆ ಕೊಟ್ಟೆನಾದರೆ ಕೃತಾರ್ಥನಾಗುವೆನು" ಎಂದು ನುಡಿದನು.

ತ್ರಿಜಟಮುನೀಶ್ವರನು ತನಗೆ ಬೇಕಾದಷ್ಟು ದ್ರವ್ಯವನ್ನೂ ಹಸುಗಳನ್ನೂ ತೆಗೆದುಕೊಂಡು ಮಹಾತ್ಮನಾದ ಶ್ರೀರಾಮನಿಗೆ ಅನೇಕ ಆಶೀರ್ವಾದಗಳನ್ನು ಮಾಡಿದನು. ಹೀಗೆ ಶ್ರೀರಾಮನು ತಾನು ಧರ್ಮಮಾರ್ಗದಿಂದ ಸಂಪಾದಿಸಿದ ದ್ರವ್ಯವನ್ನು ಅನೇಕ ಬ್ರಾಹ್ಮಣರಿಗೂ ಮಿತ್ರಜನಗಳಿಗೂ ಕೊಟ್ಟನು. ಆಗ ಆತನ ಊಳಿಗದವರೊಳಗಾಗಲಿ ಆಶ್ರಯಿಸಿದ್ದವರಲ್ಲಾಗಲಿ ಒಬ್ಬರಾದರೂ ದರಿದ್ರರಾಗಿ ಉಳಿಯಲಿಲ್ಲ. ಅವರೆಲ್ಲರೂ ಸಂಭ್ರಮದಿಂದಲೂ ಸನ್ಮಾನಗಳಿಂದಲೂ ನಿತ್ಯಾನಂದಭರಿತರಾದರು.



## ೩೩ ನೆಯ ಅಧ್ಯಾಯ

## ಶ್ರೀರಾಮನು ದಶರಥನನ್ನು ವನವಾಸಕ್ಕೆ ಅಪ್ಪಣೆಕೇಳಿದ್ದು

ಈ ರೀತಿಯಲ್ಲಿ ರಾಮ ಲಕ್ಷ್ಮಣ ಸೀತಾದೇವಿಯರು ತಮ್ಮಲ್ಲಿದ್ದ ವಸ್ತುಗಳನ್ನು ದಾನ ಮಾಡಿದರು. ಅನಂತರ ರಾಮಲಕ್ಷ್ಮಣರು ದಿವ್ಯವಾದ ಖಡ್ಗಗಳನ್ನು ಧರಿಸಿ ಸೀತೆಯೊಡನೆ ಹೊರಟು ದಶರಥರಾಜನನ್ನು ಕಾಣಲು ಬೀದಿಯಲ್ಲಿ ಬರುತ್ತಿದ್ದರು. ಅವರು ರಾಜಬೀದಿಯಲ್ಲಿ ಬರುತ್ತಿರಲು ಆ ಬೀದಿಯು ನೋಟಕ ಜನರಿಂದ ಎಡೆಬಿಡದೆ ಇಟ್ಟಣಿಸಿತ್ತು. ಪುರಜನಗಳು ಮೇಲುಮುಚ್ಚುಗಳನ್ನು ಹತ್ತಿಕೊಂಡು ಅವರನ್ನು ನೋಡುತ್ತಿದ್ದರು. ಸಮಸ್ತ ಜನಗಳೂ ರಾಜಚಿಹ್ನಗಳಾದ ಬಿಳಿಯ ಕೊಡೆಗಳು ಮೊದಲಾದವಿಲ್ಲದೆ ಕಾಲುನಡೆಯಿಂದ ಬರುತ್ತಿದ್ದ ಶ್ರೀರಾಮನನ್ನು ಕಂಡು ಅತ್ಯಂತ ದುಃಖಾತಿಶಯದಿಂದ ಒಬ್ಬರಿಗೊಬ್ಬರು ಹೀಗೆ ಮಾತನಾಡತೊಡಗಿದರು; "ಅಕಟಕಟಾ! ಶ್ರೀರಾಮನು ಹೊರಟರೆ ಆತನ ಹಿಂದೆ ಚತುರಂಗಬಲಗಳು ಬರುತ್ತಿದ್ದುವು. ಈಗ ಆ ರಾಜಚಿಹ್ನಗಳಾದ ಛತ್ರಚಾಮರ ಮೊದಲಾದವು ಯಾವುದೂ ಇಲ್ಲದೆ ಸೀತಾಸಮೇತನಾಗಿ ನಡೆದುಹೋಗುತ್ತಾನೆ. ಆತನ ಹಿಂದೆ ಲಕ್ಷ್ಮಣನೂ ಹೋಗುತ್ತಾನೆ. ಅಯ್ಯೋ! ಶ್ರೀರಾಮನು ಸಮಸ್ತೈಶ್ವರ್ಯಸಂಪನ್ನನಾಗಿ ತನ್ನ ಭಕ್ತರಿಗೆ ಬೇಕಾದ ಇಷ್ಟಾರ್ಥವನ್ನು ಕೊಡುವಂಥವನು. ಧರ್ಮವನ್ನು ಪರಿಪಾಲಿಸುವವನು. ಹುಸಿಮಾತನ್ನು ಒಂದು ಸಾರಿಯಾದರೂ ನುಡಿದವನಲ್ಲ. ಮೊದಲು ಅಂತರಿಕ್ಷಮಾರ್ಗದಲ್ಲಿದ್ದವರಿಗೂ ಸೀತಾದೇವಿಯನ್ನು ಕಾಣಲು ಶಕ್ಯವಾಗಿರಲಿಲ್ಲ. ಈಗ ಹತ್ತರೊಳಗೆ ಹನ್ನೊಂದಾಗಿ ಹೋಗುತ್ತಿದ್ದಾಳೆ. ಆ ದೇವಿಯನ್ನು ಎಲ್ಲರೂ ನೋಡುವಂತಾಯಿತು! ಕಸ್ತೂರಿ ಕುಂಕುಮ ಶ್ರೀಗಂಧ ಮೊದಲಾದ ಅನುಲೇಪನಗಳಿಂದ ಅಲಂಕರಿಸಲ್ಪಟ್ಟಿದ್ದ ಸೀತಾದೇವಿಯು ಮಳೆ ಬಿಸಿಲು ಶೈತ್ಯಗಳ ಬಾಧೆಗೊಳಗಾದರು. ದಶರಥರಾಯನು ಈ ದೇವಿಯ ಅವಸ್ಥೆಯನ್ನು ಕಂಡರೆ ಶ್ರೀರಾಮನನ್ನು ವನಕ್ಕೆ ಕಳುಹಿಸನು. ಲೋಕದಲ್ಲಿ ತಂದೆಯಾದವನು ಮಗನು ದುರ್ಗುಣವುಳ್ಳವನಾದರೂ ಅವನನ್ನು ಮನೆಯಿಂದ ಹೊರಡಿಸುವುದಿಲ್ಲ. ಹಾಗಿರುವಲ್ಲಿ ಉತ್ತಮನಾಗಿ ಸದ್ಗುಣಸಂಪನ್ನನಾದ ಮಗನನ್ನು ಹೊರಡಿಸುವನೆ! ಶ್ರೀರಾಮನು ತನ್ನ ಸದ್ವರ್ತನದಿಂದ ಸಮಸ್ತ ಲೋಕದವರನ್ನೂ ತನ್ನ ವಶವರ್ತಿ

ಗಳನ್ನಾಗಿ ಮಾಡಿಕೊಂಡಿದ್ದನು. ನಿಂದೆ ಕ್ರೋಧ ದುರ್ವರ್ತನ ದ್ರೋಹಗಳನ್ನು ಮನಸ್ಸಿನಲ್ಲಿ ನೆನೆಯದೆ ಧರ್ಮಗುಣವುಳ್ಳವನಾಗಿ ಪರರ ಅವಗುಣಗಳನ್ನು ಕಂಡು ತಾಳಿಕೊಂಡಿರುವ ಶಮಗುಣ ವುಳ್ಳವನಾಗಿ ವಿದ್ಯಾಪ್ರವೀಣನಾದ ಪುರುಷೋತ್ತಮನನ್ನು ದಶರಥರಾಯನು ವನವಾಸಕ್ಕೆ ಕಳುಹಿಸಲಾರನು. ಸಮಸ್ತ ಪ್ರಾಣಿಗಳಿಗೂ ರಕ್ಷಕನಾದ ಶ್ರೀರಾಮನಿಗೆ ಮನೋವ್ಯಥೆಯಾದ ಪಕ್ಷದಲ್ಲಿ ಸಮಸ್ತ ಪ್ರಾಣಿಗಳಿಗೂ ವ್ಯಥೆಯಾಗುವುದು. ಜಲಚರಪ್ರಾಣಿಗಳು ಬೇಸಿಗೆಯಕಾಲದಲ್ಲಿ ಉದಕಕ್ಷಯವಾದರೆ ತಾವೂ ಕ್ಷಯವಾಗುವಂತೆ ಶ್ರೀರಾಮನಿಗೆ ಮನೋವ್ಯಥೆಯಾದರೆ ಸಕಲ ಪ್ರಾಣಿ ಗಳಿಗೂ ಮನೋವ್ಯಥೆಯಾಗುವುದು. ಫಲಪುಷ್ಪಗಳಿಂದ ಮನೋಹರವಾದ ವೃಕ್ಷವನ್ನು ಬೇರುಸಹಿತ ಕಿತ್ತುಹಾಕಿದರೆ ಆ ಮರದ ಫಲಪುಷ್ಪಗಳೆಲ್ಲವೂ ಕಂದುವಂತೆ ಈತನಿಗೆ ವ್ಯಥೆಯುಂಟಾದರೆ ಸಮಸ್ತ ಪ್ರಾಣಿಗಳೂ ವ್ಯಥೆಪಡುವುವು. ಈತನು ಧರ್ಮವೆಂಬ ವೃಕ್ಷಕ್ಕೆ ಬೇರಾಗಿರುವನು. ಉಳಿದ ಪ್ರಾಣಿಗಳು ಆ ಧರ್ಮವೃಕ್ಷದಲ್ಲಿ ಫಲಪುಷ್ಪಗಳಾಗಿರುವರು. ಈತನ ಸಂಗಡ ಲಕ್ಷ್ಮಣನು ಹೋಗುವಂತೆ ನಾವೂ ನಮ್ಮ ಬಂಧುಗಳನ್ನು ಕೂಡಿಕೊಂಡು ಈತನ ಹಿಂದೆ ಹೋಗೋಣ! ನಾವೂ ನಮ್ಮ ಕ್ಷೇತ್ರ ಮನೆ ಉದ್ಯಾನವನಗಳನ್ನು ಬಿಟ್ಟು ಆತನ ಸುಖದುಃಖಗಳೇ ನಮ್ಮ ಸುಖದುಃಖಗಳೆಂದು ತಿಳಿದು ಆತನು ಹೋಗುವ ದಾರಿಗೊಂಡು ಹೋಗೋಣ! ಧನಧಾನ್ಯಾದಿಗಳು ಮೊದಲಾದ ವಸ್ತುಶೂನ್ಯವಾಗಿ, ಅಲಂಕಾರರಹಿತವಾಗಿ, ಸಮಸ್ತ ಜನರಿಂದಲೂ ಬಿಡಲ್ಪಟ್ಟದ್ದಾಗಿ, ಎಲ್ಲಿ ನೋಡಿದರೂ ಹೆಗ್ಗಣದ ಬಿಲಗಳಿಂದ ಭಯಂಕರವಾಗಿ, ಕೆಂಧೂಳಿಗಳು ಕೌಚಿಕೊಂಡು ಶಯನ ಸಮ್ಮಾರ್ಜನೆಗಳಿಲ್ಲದೆ ಜಪಾಸನ ವೈಶ್ವದೇವ ಬಲಿಹರಣಗಳಿಲ್ಲದೆ ಶೂನ್ಯವಾಗಿ, ಆಪತ್ಕಾಲದಲ್ಲಿ ನಷ್ಟವಾದ ಹಾಳುಮನೆಯ ಹಾಗೆ ಇರುವಂಥ ಈ ನಗರಭವನಗಳಲ್ಲಿ ಕೈಕೇಯಿದೇವಿಯು ಹೊರಳಾಡಿಕೊಂಡಿರಲಿ! ನಾವು ಹೋಗುವ ವನವು ಅಯೋಧ್ಯಾಪಟ್ಟಣದಂತೆ ಮಹಾಪಟ್ಟಣವಾಗಲಿ! ನಾವು ಬಿಟ್ಟುಹೋಗುವ ಅಯೋಧ್ಯಾಪಟ್ಟಣವು ಅರಣ್ಯವಾಗಲಿ! ನಾವು ಹೋಗುವ ಅರಣ್ಯದಲ್ಲಿರುವ ಕ್ರೂರವಾದ ಮೃಗಗಳು ಗುಹೆಗಳನ್ನು ಬಿಟ್ಟು ಹೋಗಲಿ! ಅರಣ್ಯ ಪರ್ವತ ಗುಹೆಗಳಲ್ಲಿರುವ ಮೃಗಪಕ್ಷಿಗಳು ನಮ್ಮನ್ನು ಕಂಡು ಭೀತಿಯಿಂದ ಪಲಾಯನವಾಗಿ ಹೋಗಲಿ! ಅನೇಕ ಸಿಂಹ ಶಾರ್ದೂಲ ಮೊದಲಾದ ಕ್ರೂರಮೃಗಗಳು ವನವನ್ನು ಬಿಟ್ಟು ಹೋಗಲಿ! ಈ ಪಟ್ಟಣವು ಹುಲ್ಲುಹುಟ್ಟಿ ಮೃಗಗಳಿಂದಿಟ್ಟಣಿಸಲ್ಪಟ್ಟು ಅರಣ್ಯವಾಗಲಿ! ಆಗ ಇಲ್ಲಿ ಕೈಕೇಯಿದೇವಿಯು ತನ್ನ ಮಗನನ್ನೂ ಬಂಧುಗಳನ್ನೂ ಕೂಡಿಕೊಂಡು ಸುಖವಾಗಿರಲಿ! ನಾವೆಲ್ಲರೂ ಶ್ರೀರಾಮನ ಜೊತೆಯಲ್ಲಿ ಸುಖವಾಗಿರೋಣ!" ಎಂದು ನುಡಿಯುತ್ತಿದ್ದರು.

ಆ ಮಾತುಗಳನ್ನು ಕೇಳಿ ಮನಸ್ಸಿಗೆ ವ್ಯಥೆಯನ್ನುಂಟುಮಾಡಿಕೊಳ್ಳದೆ ಪರಾಕ್ರಮಶಾಲಿಯಾದ ಶ್ರೀರಾಮನು ಕೈಲಾಸಪರ್ವತದ ಕೋಡುಗಲ್ಲಿಗೆ ಸಮಾನವಾದ ಉಪ್ಪರಿಗೆಗಳುಳ್ಳ ನೀತಿಗುಣ ಸಂಪನ್ನರಾದ ದ್ವಾರಪಾಲಕರಿಂದಿಟ್ಟಣಿಸಿದ್ದ ದಶರಥರಾಯನ ಅರಮನೆಯನ್ನು ಪ್ರವೇಶಿಸಿದನು. ಅಲ್ಲಿ ಚಿಂತಾಕ್ರಾಂತನಾಗಿದ್ದ ಸುಮಂತ್ರನನ್ನು ಕಂಡು ಆತನನ್ನು ಕುರಿತು "ಸುಮಂತ್ರ, ನೀನು ಅಂತಃಪುರಕ್ಕೆ ಹೋಗಿ ನಮ್ಮ ತಂದೆಯಾದ ದಶರಥರಾಯನಿಗೆ ನಾನು ವನವಾಸಕ್ಕೆ ಹೊರಟಿದ್ದೇನೆ, ಆತನಿಂದ ಬೀಳ್ಕೊಂಡು ಹೋಗಬೇಕೆಂದು ಬಾಗಿಲಲ್ಲಿದ್ದೇನೆ ಎಂದು ತಿಳುಹಿಸು" ಎಂದು ಹೇಳಿದನು.

### ೩೪ನೆಯ ಅಧ್ಯಾಯ

## ದಶರಥರಾಯನ ದುಃಖ

ಈ ರೀತಿಯಲ್ಲಿ ಕಮಲದಳಾಯತಾಕ್ಷನೂ ಶ್ಯಾಮಲವರ್ಣನೂ ಅತ್ಯಂತಸುಂದರನೂ ಆದ ಶ್ರೀರಾಮನು ತಾನು ಬಂದ ವೃತ್ತಾಂತವನ್ನು ದಶರಥರಾಯನಿಗೆ ತಿಳಿಸಬೇಕೆಂದು ಹೇಳಲು ಸುಮಂತ್ರನು ಚಿಂತಾಕ್ರಾಂತನಾಗಿ ದಶರಥರಾಯನ ಸಮೀಪಕ್ಕೆ ಹೋದನು. ಅಲ್ಲಿ ದುಃಖಾತಿಶಯದಿಂದ ನಿಟ್ಟುಸಿರು ಬಿಡುತ್ತ ರಾಹುತುಡುಕಿದ ಸೂರ್ಯನಂತೆಯೂ ಬೂದಿಮುಚ್ಚಿದ ಕೆಂಡದಂತೆಯೂ ನೀರಿಲ್ಲದ ಕೆರೆಯಂತೆಯೂ ಭಯಂಕರವಾಗಿದ್ದ ದಶರಥರಾಯನನ್ನು ಕಂಡು ಕೈಮುಗಿದುಕೊಂಡು "ಜೀಯಾ! ಮಹಾರಾಜಾಧಿರಾಜ!" ಎಂದು ವಿನಯೋಕ್ತಿಗಳಿಂದ ಸಂತವಿಟ್ಟನು. ಆ ಸುಮಂತ್ರನು ಅತ್ಯಂತಭಯದಿಂದ "ಎಲೈ ದಶರಥರಾಯನೆ, ಪುರುಷೋತ್ತಮನಾದ ಶ್ರೀರಾಮನು ನಿನ್ನ ಆಜ್ಞೆಯಿಂದ ವನವಾಸವನ್ನು ನಿಶ್ಚಯಿಸಿಕೊಂಡು ತನ್ನ ವಶದಲ್ಲಿದ್ದ ದ್ರವ್ಯವೆಲ್ಲವನ್ನೂ ಬ್ರಾಹ್ಮಣರಿಗೂ ತನ್ನನ್ನು ಆಶ್ರಯಿಸಿದ್ದವರಿಗೂ ಅನಾಥರಿಗೂ ಕೊಟ್ಟು ನಿನ್ನ ಅಪ್ಪಣೆಯನ್ನು ಪಡೆದು ಹೋಗಬೇಕೆಂದು ಹೊರಬಾಗಿಲಲ್ಲಿ ಬಂದಿದ್ದಾನೆ. ಅನೇಕ ಕಿರಣಗಳಿಂದ ಕೂಡಿದ ಸೂರ್ಯನಂತೆ ಸಮಸ್ತ ಗುಣಯುಕ್ತನಾದ ಶ್ರೀರಾಮನು ನಿನ್ನ ದರ್ಶನಪಡೆದು ಹೋಗಬೇಕೆಂದು ಬಂದಿದ್ದಾನೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ಆಕಾಶದಂತೆ ನಿಷ್ಕಳಂಕನಾದ ದಶರಥರಾಯನು ಸುಮಂತ್ರನನ್ನು ಕುರಿತು "ಎಲೈ ಸುಮಂತ್ರ, ನನ್ನ ಅಂತಃಪುರದಲ್ಲಿರುವ ಸ್ತ್ರೀಯರನ್ನೂ ಅವರ ಕೆಳದಿಯರನ್ನೂ ಕರೆದುಕೊಂಡು ಬಾ. ಆ ಸ್ತ್ರೀಯರೆಲ್ಲರ ಜೊತೆಯಲ್ಲಿ ಶ್ರೀರಾಮನನ್ನು ಒಳಗೆ ಕರೆಯಿಸಿಕೊಂಡು ನೋಡುತ್ತೇನೆ" ಎಂದು ನುಡಿದನು.

ಸುಮಂತ್ರನು ಶೀಘ್ರದಲ್ಲಿ ಅಂತಃಪುರಕ್ಕೆ ಬಂದು ಅಲ್ಲಿದ್ದ ಸ್ತ್ರೀಯರನ್ನು ಕುರಿತು "ದಶರಥರಾಯನು ನಿಮ್ಮನ್ನು ಶೀಘ್ರದಲ್ಲಿ ಕರೆತರಹೇಳಲು ನಾನು ನಿಮ್ಮ ಸಮೀಪಕ್ಕೆ ಬಂದೆನು. ನೀವೆಲ್ಲರೂ ಬನ್ನಿರಿ" ಎಂದು ಹೇಳಿದನು. ಆ ಮಾತನ್ನು ಕೇಳಿ ಅಂತಃಪುರದಲ್ಲಿದ್ದ ಸ್ತ್ರೀಯರು ಸುಮಂತ್ರನೊಡನೆ ದಶರಥರಾಯನ ಸಮೀಪಕ್ಕೆ ಬಂದರು. ಆಗ ಮುನ್ನೂರೈವತ್ತು ಮಂದಿ ಸ್ತ್ರೀಯರು ಕೌಸಲ್ಯಾದೇವಿಯ ಸುತ್ತಲೂ ಬರುತ್ತಿದ್ದರು. ದಶರಥರಾಯನು ತನ್ನ ಅಂತಃಪುರದ ಸ್ತ್ರೀಯರೆಲ್ಲರೂ ಬಂದಮೇಲೆ ಶ್ರೀರಾಮನನ್ನು ಕರೆದುಕೊಂಡುಬರಹೇಳಿ ಸುಮಂತ್ರನನ್ನು ಕಳುಹಿಸಿದನು. ಆತನು ಶೀಘ್ರವಾಗಿ ಅರಮನೆಯ ಹೊರಬಾಗಿಲಿಗೆ ಬಂದು ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನನ್ನು ಕರೆದುಕೊಂಡು ದಶರಥರಾಯನ ಸಮೀಪಕ್ಕೆ ಬಂದನು. ದೂರದಲ್ಲಿಯೇ ಕೈಮುಗಿದುಕೊಂಡು ಬರುತ್ತಿದ್ದ ಶ್ರೀರಾಮನನ್ನು ಕಂಡು ದಶರಥರಾಯನು ಪುತ್ರ ವಾತ್ಸಲ್ಯದಿಂದೆದ್ದು ಬರುತ್ತ ದುಃಖಾತಿಶಯದಿಂದ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು. ಶ್ರೀರಾಮನು ಲಕ್ಷ್ಮಣನೊಡನೆ ಕೂಡಿ ಆತನನ್ನು ಕೈಗಳಿಂದೆತ್ತಿ ಮಂಚದ ಮೇಲೆ ಮಲಗಿಸಿದನು. ಸ್ವಲ್ಪಹೊತ್ತಿನಲ್ಲಿ ದಶರಥನು ಚೇತರಿಸಿಕೊಂಡು ಎಚ್ಚತ್ತು ಶೋಕವೆಂಬ ಸಮುದ್ರದಲ್ಲಿ ಮುಳುಗಿ ಹೋದನು. ಶ್ರೀರಾಮನು ಕೈಮುಗಿದುಕೊಂಡು ಆತನನ್ನು ಕುರಿತು "ಮಹಾರಾಜ, ನೀನು ಸಮಸ್ತ ಲೋಕಗಳಿಗೂ ನಮಗೂ ಒಡೆಯನು. ನಿನ್ನನ್ನು ಬೇಡಿಕೊಂಡು ನಿನ್ನ ಅಪ್ಪಣೆಯಿಂದ ದಂಡ

ಕಾರಣ್ಯಕ್ಕೆ ಪ್ರಯಾಣವಾಗಿ ಬಂದ ನನ್ನನ್ನು ಕೃಪಾದೃಷ್ಟಿಯಿಂದ ನೋಡು. ನನ್ನ ಸಂಗಡ ಲಕ್ಷ್ಮಣನೂ ಸೀತಾದೇವಿಯೂ ಬರುವುದಾಗಿ ಹೇಳುತ್ತಾರೆ. ನಾನು ಬರಕೂಡದೆಂದು ಬಹಳವಾಗಿ ಒಡಂಬಡಿಸಿದರೂ ಕೇಳದೆ ನನ್ನೊಡನೆ ಪ್ರಯಾಣವಾಗಿ ಹೊರಟಿದ್ದಾರೆ. ನಿನ್ನ ಚಿತ್ತಕ್ಕೆ ಸರಿಬಂದರೆ ಸೀತಾದೇವಿ ಲಕ್ಷ್ಮಣರನ್ನು ನನ್ನ ಜೊತೆಯಲ್ಲಿ ಕಳುಹಿಸು. ನೀನು ಮನಸ್ಸಿನಲ್ಲಿ ಚಿಂತೆಯನ್ನು ಬಿಡು. ಬ್ರಹ್ಮದೇವನು ತನ್ನ ಮಕ್ಕಳಿಗೆ ಆಜ್ಞಾಪಿಸುವಂತೆ ನೀನು ನಿಮ್ಮನ್ನು ವನವಾಸಕ್ಕೆ ಏಕಾಗ್ರಚಿತ್ತದಿಂದ ಕಳುಹಿಸು " ಎಂದನು.

ದಶರಥರಾಯನು ಶ್ರೀರಾಮನನ್ನು ಕುರಿತು " ಶ್ರೀರಾಮ, ಕೈಕೇಯಿಗೆ ವರವನ್ನು ಕೊಟ್ಟು ಆಕೆಯ ಮಾತುಗಳಿಗೆ ಒಳಪಟ್ಟೆನು. ನೀನು ನನ್ನನ್ನು ಸೆರೆಯಲ್ಲಿಟ್ಟು ರಾಜ್ಯವನ್ನು ವಹಿಸಿಕೊಂಡು ಅಯೋಧ್ಯಾಪಟ್ಟಣದಲ್ಲಿ ಸುಖವಾಗಿರು " ಎಂದು ನುಡಿದನು.

ಸಮಸ್ತ ಧರ್ಮರಹಸ್ಯವನ್ನೂ ಬಲ್ಲ ಶ್ರೀರಾಮನು ಕೈಮುಗಿದುಕೊಂಡು ಆ ರಾಜನನ್ನು ಕುರಿತು " ಮಹಾರಾಜ, ನೀನು ಇನ್ನು ಸಾವಿರವರುಷಗಳವರೆಗೆ ಭೂಮಿಗೆ ಒಡೆಯನಾಗಿರಬೇಕು. ನಾನು ವನವಾಸವನ್ನು ಹದಿನಾಲ್ಕುವರುಷಗಳವರೆಗೆ ಮಾಡುತ್ತೇನೆ. ನಿನ್ನ ಪ್ರತಿಜ್ಞಾಭಂಗವನ್ನು ಮಾಡಲಾರೆನು " ಎಂದು ಹೇಳಿ ನಮಸ್ಕರಿಸಿದನು.

ಆ ರಾಜನು ತನ್ನ ಸತ್ಯವನ್ನು ತಪ್ಪಬಾರದೆಂಬ ಬುದ್ಧಿಯಿಂದ ಕೈಕೇಯಿದೇವಿಯ ಮಾತನ್ನು ಮೀರದೆ ಅಳುತ್ತಾ ಪ್ರಿಯಪುತ್ರನಾದ ಶ್ರೀರಾಮನನ್ನು ಕುರಿತು ಹೀಗೆ ಹೇಳಿದನು : " ಶ್ರೀರಾಮ, ನೀನು ವನಕ್ಕೆ ತೆರಳು. ನಿನಗೆ ಬಹು ಶ್ರೇಯಸ್ಸಾಗುವುದು ! ನಿನ್ನ ಮನೋರಥವು ಅಭಿವೃದ್ಧಿಯಾಗಲಿ ! ನೀನು ಮಾರ್ಗದಲ್ಲಿ ಭಯವಿಲ್ಲದೆ ನಿರ್ವಿಘ್ನವಾಗಿ ವ್ರತಸಮಾಪ್ತಿಮಾಡಿ ತಿರುಗಿ ಬರುವೆ. ನೀನು ಧರ್ಮಮಾರ್ಗಪ್ರವರ್ತಕನಾದ್ದರಿಂದ ನಿನ್ನ ನಿಶ್ಚಯವನ್ನು ಯಾರೂ ತಡೆಯಲಾರರು. ಹಾಗಾದರೂ ಇಂದು ಒಂದು ದಿವಸ ಇಲ್ಲಿದ್ದು ನಾಳೆ ಪ್ರಾತಃಕಾಲ ಹೊರಡು. ಇಂದು ಒಂದು ದಿವಸವಾದರೂ ನಿನ್ನ ಮುಖವನ್ನು ನೋಡಿಕೊಂಡಿರುತ್ತೇನೆ. ನೀನು ಈ ರಾತ್ರಿ ಇಲ್ಲಿದ್ದು ನನ್ನನ್ನೂ ನಿನ್ನ ತಾಯಿಯನ್ನೂ ನೋಡಿಕೊಂಡು ನಿನಗೆ ಬೇಕಾದ ಭೋಜ್ಯವಸ್ತುಗಳನ್ನು ಅನುಭವಿಸು ! ಶ್ರೀರಾಮ, ಸರ್ವಥಾ ನೀನು ನನಗೆ ಪ್ರಿಯವನ್ನು ಮಾಡಬೇಕೆಂಬ ಬುದ್ಧಿಯಿಂದ ಅಸಾಧ್ಯವಾದ ವನವಾಸಕ್ಕೆ ಯತ್ನವನ್ನು ಮಾಡುತ್ತಿದ್ದೀಯೆ. ನನ್ನ ಸತ್ಯದ ಸಾಕ್ಷಿಯಾಗಿ ನೀನು ವನಕ್ಕೆ ಹೋಗುವುದು ನನ್ನ ಮನಸ್ಸಿಗೆ ಒಪ್ಪುವುದಿಲ್ಲ. ಬೂದಿಮುಚ್ಚಿದ ಕೆಂಡಕ್ಕೆ ಸಮಾನವಾದ ಕಪಟ ಸ್ನೇಹವುಳ್ಳ ಕೈಕೇಯಿಯ ಮಾತಿಗೆ ಮೋಸಹೋದೆನು. ಆದ್ದರಿಂದ ನಿನಗೆ ಪಟ್ಟಾಭಿಷೇಕವನ್ನು ಮಾಡಲು ಯತ್ನಮಾಡಿ ಆ ಯತ್ನವನ್ನು ನಿಲ್ಲಿಸಿ ನಿನ್ನನ್ನು ವನವಾಸಕ್ಕೆ ಕಳುಹಿಸಿದ ಅಕೃತ್ಯವನ್ನು ಸಹಿಸು. ದುಷ್ಟೆಯಾದ ಕೈಕೇಯಿಯ ಮಾತಿಗೆ ಮರುಳಾದ ನನ್ನನ್ನು ಜ್ಯೇಷ್ಠಪುತ್ರನಾದ ನೀನು ಋಣಮುಕ್ತನನ್ನಾಗಿ ಮಾಡಲು ಇಚ್ಛಿಸಿದ್ದೀಯೆ " ಎಂದು ನುಡಿದನು.

ಶ್ರೀರಾಮನು ಲಕ್ಷ್ಮಣಸಮೇತನಾಗಿ ಹೀಗೆಂದನು : " ಮಹಾರಾಜ, ಈ ರಾತ್ರಿ ಇಲ್ಲಿದ್ದು ಬೇಕಾದ ವಸ್ತುಗಳನ್ನು ಅನುಭವಿಸುವುದಕ್ಕಿಂತಲೂ ಈಗಲೇ ತೆರಳಿದೆನಾದರೆ ಸಮಸ್ತ ಭೋಗಗಳನ್ನೂ ಅನುಭವಿಸಿದವನಾಗುವೆನು. ನಿಖಿಲ ಧನಧಾನ್ಯಗಳಿಂದ ಪರಿಪೂರ್ಣವಾದ ಭೂಮಂಡಲವನ್ನು ಭರತನಿಗೆ ಕೊಡು. ನನಗೆ ನಿನ್ನ ಮಾತನ್ನು ಮೀರದೆ ಇರುವುದೇ ಪರಮಸುಖ. ನನಗೆ ರಾಜ್ಯಾಧಿಪತ್ಯದಲ್ಲಿ ಆಶೆಯಿಲ್ಲ. ನಿನ್ನ ಆಜ್ಞೆಯನ್ನು ಪರಿಪಾಲಿಸುವುದೇ ನನ್ನ ಮನೋರಥ. ನೀನು ದುಃಖವನ್ನು ಬಿಡು. ಕಣ್ಣೀರನ್ನು ಸುರಿಸಬೇಡ. ಲೋಕದಲ್ಲಿ ಸಮುದ್ರವು ಮೇರೆ

ತಪ್ಪುವುದೆ! ನಾನು ರಾಜ್ಯವನ್ನು ಬಯಸುವವನಲ್ಲ. ಹಾಗೆಯೇ ಸೀತಾದೇವಿಯೂ ಸುಖವನ್ನು ಬಯಸುವವಳಲ್ಲ. ನಾನು ನಿನ್ನ ಮಾತಿಗೆ ವಿಘ್ನವು ಬರದೆ ನಿನ್ನ ಸತ್ಯವು ಸ್ಥಿರವಾಗಿರಬೇಕೆಂದು ಬಯಸುತ್ತೇನೆ. ಸ್ವರ್ಗಸುಖವನ್ನಾದರೂ ಕಡೆಗೆ ಜೀವವನ್ನಾದರೂ ಬಯಸುವವನಲ್ಲ. ಇದಕ್ಕೆ ನನ್ನ ಸತ್ಯವು ಸಾಕ್ಷಿ! ನೀನೇ ಸಾಕ್ಷಿ! ಇನ್ನು ಒಂದು ಕ್ಷಣಮಾತ್ರವಾದರೂ ಇಲ್ಲಿರಲಾರೆನು. ನನಗೆ ಕಿಂಚಿನ್ಮಾತ್ರವಾದರೂ ದುಃಖವಿಲ್ಲ. ಕೈಕೇಯೀದೇವಿಯು ನನ್ನನ್ನು ವನವಾಸಕ್ಕೆ ಹೋಗ ಹೇಳಿದಾಗಲೇ ನಾನು ಅಂಗೀಕರಿಸಿದೆನು. ಈ ರಾಜ್ಯದಲ್ಲಿ ನನಗೆ ಇಚ್ಛೆಯಿಲ್ಲದ್ದರಿಂದ ವನದಲ್ಲಿ ಸುಖವಾಗಿರುತ್ತೇನೆ. ನನಗೆ ತಂದೆಯೇ ದೇವತಾಸ್ವರೂಪನು. ಆದ್ದರಿಂದ ನಿನ್ನ ಮಾತನ್ನು ದೇವತಾವಾಕ್ಯವೆಂದು ನಂಬಿ ಹದಿನಾಲ್ಕುವರುಷಗಳವರೆಗೆ ವನದಲ್ಲಿದ್ದು ತಿರುಗಿ ಬರುವೆನು. ಆಗ ನೀನು ನನ್ನನ್ನು ಕಂಡು ಸಂತೋಷಪಡುವೆ. ಈ ದುಃಖವನ್ನು ಬಿಡು. ನೀನು ದುಃಖಾಕ್ರಾಂತನಾಗಿದ್ದರೆ ಸಕಲ ಜನರೂ ದುಃಖಪಡುವರು. ನಾನು ನಿನ್ನ ಅಪ್ಪಣೆಯಿಂದ ವನಕ್ಕೆ ಹೋಗುತ್ತೇನೆ. ಈ ಸಮುದ್ರಪರ್ಯಂತವಾದ ಭೂಮಿಯನ್ನು ಭರತನು ಪರಿಪಾಲಿಸಲಿ. ನಿನ್ನ ಪ್ರತಿಜ್ಞೆಯನ್ನು ಪರಿಪಾಲಿಸುವಂಥ ಸುಖವು ನನಗೆ ರಾಜ್ಯಾಧಿಪತ್ಯದ ಸುಖಕ್ಕಿಂತಲೂ ಅಧಿಕವಾದದ್ದು. ಆದ ಕಾರಣ ನನ್ನನ್ನು ಕುರಿತು ದುಃಖವು ಬೇಡ. ನಾನು ವನಕ್ಕೆ ಹೋಗಿ ಕಂದ ಮೂಲ ಫಲಾಹಾರ ಗಳನ್ನು ಮಾಡಿಕೊಂಡು ಅಲ್ಲಿರುವ ಪುಣ್ಯನದಿಗಳನ್ನೂ ಪುಣ್ಯಪರ್ವತಗಳನ್ನೂ ಪುಣ್ಯತೀರ್ಥಗಳನ್ನೂ ಪವಿತ್ರವಾದ ವೃಕ್ಷಗಳನ್ನೂ ಕಂಡು ಸುಖವಾಗಿರುತ್ತೇನೆ!" ಎಂದು ನುಡಿದನು.

ಆ ಮಾತನ್ನು ಕೇಳಿ ದಶರಥರಾಯನು ಶ್ರೀರಾಮನನ್ನು ತಬ್ಬಿಕೊಂಡು ಮುಖಕಾಂತಿಗುಂದಿ ಮೂರ್ಛಿತನಾಗಿ ಬಿದ್ದುಬಿಟ್ಟನು. ಅದನ್ನು ಕಂಡು ಕೈಕೇಯೀದೇವಿಯ ಹೊರತು ಮಿಕ್ಕ ರಾಜಸ್ತ್ರೀಯರೆಲ್ಲರೂ ರೋದನವನ್ನು ಮಾಡುತ್ತಿದ್ದರು. ಆ ಅವಸ್ಥೆಯನ್ನು ಕಂಡು ಸುಮಂತ್ರನು ಮೂರ್ಛಿತನಾಗಿ ಬಿದ್ದನು. ಆ ಸಮಯದಲ್ಲಿ ಆ ಅರಮನೆಯಲ್ಲಿ ಹಾಹಾಕಾರವು ಹುಟ್ಟಿ ಕೋಲಾಹಲಧ್ವನಿಯುಂಟಾಯಿತು.



## ೩೫ ನೆಯ ಅಧ್ಯಾಯ

## ಸುಮಂತ್ರನು ಕೈಕೇಯೀದೇವಿಗೆ ಹೇಳಿದ ನೀತಿ

ಆಮೇಲೆ ಸುಮಂತ್ರನು ಪ್ರಜ್ಞೆಹೊಂದಿ ದಶರಥರಾಯನ ದುಃಖವನ್ನು ಕಂಡು ಅತ್ಯಂತ ದುಃಖಿತನಾದನು. ಆವನು ನಿಟ್ಟುಸಿರುಬಿಡುತ್ತ ಕೋಪಾತಿಶಯದಿಂದ ಅಂಗೈಯಲ್ಲಿ ಅಂಗೈಯನ್ನೊತ್ತುತ್ತ ಹಲ್ಲನ್ನು ಕಡಿಯುತ್ತ ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ನಿಷ್ಠುರವಾದ ಮಾತುಗಳೆಂಬ ಕೂರಲಗಿನಿಂದ ಕೈಕೇಯೀದೇವಿಯ ಮನಸ್ಸನ್ನು ಕತ್ತರಿಸುವ ಹಾಗೆ ಮಾತನಾಡಿದನು: "ಎಲೈ ಕೈಕೇಯೀದೇವಿ, ನಿನ್ನ ಪತಿಯಾದ ದಶರಥರಾಯನನ್ನು ತಿರಸ್ಕರಿಸಿ ಸಮಸ್ತ ಜಗತ್ತುಗಳಿಗೂ ಒಡೆಯನಾಗಿ ಮಹಾತ್ಮನಾದ ಆತನ ಮಾತನ್ನು ಕೇಳದಿದ್ದೀಯೆ. ನೀನು ಯಾವ ಕೃತ್ಯವನ್ನಾದರೂ ಪಾಪಭಯವಿಲ್ಲದೆ ಮಾಡುವಂಥವಳು. ಪತಿಯಾದ ದಶರಥರಾಯನನ್ನು ಕೆಡಿಸಿದವಳು. ಕಡೆಗೆ ಇಕ್ಷ್ವಾಕುವಂಶವನ್ನೇ ಕೆಡಿಸಿದವಳೆಂದು ತಿಳಿಯಬೇಕು. ದಶರಥರಾಯನು ದೇವೇಂದ್ರನಂತೆ ಯಾರಿಗೂ ಜಯಿಸುವುದಕ್ಕೆ ಅಸಾಧ್ಯನಾದವನು, ಪರ್ವತದ ಹಾಗೆ ಸ್ಥಾನದಿಂದ ಕದಲಿಸುವುದಕ್ಕೆ ಶಕ್ಯನಲ್ಲ ಸಮುದ್ರದಂತೆ ಕಲಕಲು

ಅಸಾಧ್ಯನಾದವನು. ಅಂಥ ದಶರಥರಾಯನನ್ನು ನಿಷ್ಠುರವಚನಗಳಿಂದ ದುಃಖಪಡಿಸುತ್ತಿದ್ದೀಯೆ. ಬೇಡಿದ ಭಾಗ್ಯವನ್ನು ಕೊಡುವಂಥ ಪತಿಯನ್ನು ತಿರಸ್ಕರಿಸಬೇಡ. ಲೋಕದಲ್ಲಿ ಸ್ತ್ರೀಯರಿಗೆ ಮಕ್ಕಳಿಗಿಂತಲೂ ಪತಿಯೇ ಶ್ರೇಷ್ಠನಾದವನು. ಆದ್ದರಿಂದ ಸ್ತ್ರೀಯರು ಪತಿಯ ಇಚ್ಛೆಗೆ ತಕ್ಕಹಾಗೆ ನಡೆಯಬೇಕಲ್ಲದೆ ಆತನ ಮಾತನ್ನು ಮೀರಬಾರದು. ಇಕ್ಷ್ವಾಕುವಂಶದ ರಾಜರಲ್ಲಿ ತಂದೆಯು ವೃದ್ಧನಾದಮೇಲೆ ಯೌವನಸ್ಥನಾದ ಮಗನಿಗೆ ಪಟ್ಟವನ್ನು ಕಟ್ಟಿ ತಾನು ವನಾಂತರವನ್ನೈದುವುದೇ ಮರ್ಯಾದೆಯು. ನಿನ್ನ ಅಜ್ಞಾನದಿಂದ ದಶರಥರಾಯನಲ್ಲಿ ಆ ಮರ್ಯಾದೆಯನ್ನು ಕೆಡಿಸಿದೆ. ನಿನ್ನ ಮಗನಾದ ಭರತನೊಬ್ಬನೇ ಬಾಳಲಿ ! ನಾವು ಶ್ರೀರಾಮನು ಹೋದ ದಾರಿಗೊಂಡು ಹೋಗುತ್ತೇವೆ. ನೀನು ಲೋಕದಲ್ಲಿ ಯಾರೂ ಮಾಡದ ದುಷ್ಕರ್ಮವನ್ನು ಮಾಡುತ್ತಿದ್ದೀಯೆ. ಇಂಥ ರಾಜ್ಯವು ಬ್ರಾಹ್ಮಣರಿರುವುದಕ್ಕೆ ಯೋಗ್ಯವಲ್ಲ. ಧರ್ಮಾತ್ಮನಾದ ಶ್ರೀರಾಮನಿಗೆ ಆದ ರಾಜ್ಯಾಧಿಪತ್ಯವನ್ನು ಕ್ಷಣಮಾತ್ರದಲ್ಲಿ ನಿನ್ನ ಮಗನಾದ ಭರತನಿಗೆ ಕೊಟ್ಟೆ. ಭರತನಿಗೆ ಪಟ್ಟಾಭಿಷೇಕವಾಗಿ ಶ್ರೀರಾಮನು ವನವಾಸಕ್ಕೆ ಹೋದರೆ ಮಹಾತ್ಮರಾದ ಬ್ರಾಹ್ಮಣರೂ ಋಷಿಗಳೂ ನಿನ್ನನ್ನು ಬಹಳವಾಗಿ ನಿಂದಿಸುವರು. ಲೋಕದಲ್ಲಿ ಮಾವಿನಮರವನ್ನು ಛೇದಿಸಿ ಬೇವಿನ ಸೊಸಿಯನ್ನಿಟ್ಟು ಹಾಲನ್ನೆರೆದು ಸಾಕಿದರೆ ಆ ಬೇವಿನಮರವು ಮಧುರವಾದ ಫಲವನ್ನು ಕೊಡಲಾರದು. ಅದಲ್ಲದೆ ನಿನ್ನ ತಾಯಿಯ ಹುಟ್ಟುಗುಣವನ್ನು ನಾನು ಬಲ್ಲೆನು. ನಿನ್ನಲ್ಲಿ ತಾಯಿಯ ಗುಣವಲ್ಲದೆ ಮತ್ತೊಂದು ಗುಣವಿಲ್ಲ. ಲೋಕದಲ್ಲಿ ಬೇವಿನಮರದಿಂದ ಜೇನುತುಪ್ಪ ಸುರಿಯುವುದುಂಟೆ ? ನಿನಗೆ ನಿನ್ನ ತಾಯಿಯ ಗುಣವೇ ಸಂಭವಿಸಿತಲ್ಲದೆ ಮತ್ತೊಂದಲ್ಲ. ನಿನ್ನ ತಾಯಿಯ ಕೆಡುಕುಬುದ್ಧಿಯನ್ನು ನಾನು ಪೂರ್ವದಲ್ಲಿ ಕೇಳಿದ್ದೇನೆ. ನಿನ್ನ ತಂದೆಯಾದ ಕೇಕಯರಾಯನು ತಪಸ್ಸನ್ನು ಮಾಡುತ್ತಿರಲು ವರದನೆಂಬ ಒಬ್ಬ ಮುನೀಶ್ವರನು ಪ್ರಸನ್ನನಾಗಿ ಆತನನ್ನು ಏನಾಗಬೇಕೆಂದು ಕೇಳಿದನು. ನಿನ್ನ ತಂದೆಯು ತನಗೆ ಮೃಗಪಕ್ಷಿ ಮೊದಲಾದ ಸಮಸ್ತ ಪ್ರಾಣಿಗಳ ಭಾಷೆಗಳೂ ತಿಳಿಯುವಂತೆ ವರವನ್ನು ಕೊಡಬೇಕೆಂದು ಕೇಳಿದನು. ವರದಮುನೀಶ್ವರನು ಆ ವರವನ್ನು ಕೊಟ್ಟು ಮೃಗಪಕ್ಷಿಗಳ ಭಾಷೆಗಳನ್ನು ನಿನ್ನ ತಂದೆ ಒಬ್ಬನೇ ತಿಳಿದುಕೊಳ್ಳಬೇಕಲ್ಲದೆ ಮತ್ತೊಬ್ಬರಿಗೆ ಹೇಳಿದರೆ ಆ ಕ್ಷಣದಲ್ಲೇ ಮರಣವಾಗುವುದೆಂದು ಹೇಳಿದನು. ಅದರಿಂದ ನಿನ್ನ ತಂದೆ ಯಾದ ಕೇಕಯರಾಯನು ಪಶುಪಕ್ಷಿಮೃಗಗಳ ಭಾಷೆಗಳನ್ನು ತಿಳಿದಿದ್ದನು. ಒಂದಾನೊಂದು ದಿವಸ ನಿನ್ನ ತಾಯಿ ಸಮೀಪದಲ್ಲಿದ್ದಾಗ ಒಂದು ಪಿಪೀಲಿಕಾಪಂಕ್ತಿ ಧ್ವನಿಗೈಯುತ್ತಿತ್ತು. ನಿನ್ನ ತಂದೆಯು ಆ ಧ್ವನಿಯನ್ನು ಕೇಳಿ ಆ ಭಾಷೆಯನ್ನು ಬಲ್ಲ ಕಾರಣದಿಂದ ನಕ್ಕನು. ಅದನ್ನು ನೋಡಿ ನಿನ್ನ ತಾಯಿ ತನ್ನನ್ನು ಪರಿಹಾಸಮಾಡಿದನೆಂದು ಕೋಪಿಸಿಕೊಂಡು ಆತನನ್ನು ಕುರಿತು 'ನೀನು ನನ್ನನ್ನು ಪರಿಹಾಸ ಮಾಡಿದ ಕಾರಣವೇನು ? ಅದನ್ನು ನನಗೆ ತಿಳಿಯಹೇಳು' ಎಂದು ಕೇಳಿದಳು. ಕೇಕಯರಾಯನು ಆಕೆಯನ್ನು ಕುರಿತು 'ಪ್ರಿಯೆ, ನಾನು ನಿನ್ನನ್ನು ಪರಿಹಾಸಮಾಡಲಿಲ್ಲ. ಮತ್ತೊಂದು ಕಾರಣದಿಂದ ನಕ್ಕೆನು. ಆ ಕಾರಣವನ್ನು ನಿನ್ನ ಸಂಗಡ ಹೇಳಿದರೆ ಈ ಕ್ಷಣದಲ್ಲಿಯೇ ನನಗೆ ಮರಣವಾಗುವುದು. ಇದರಲ್ಲಿ ಸಂಶಯವಿಲ್ಲ' ಎಂದು ಹೇಳಿದನು. ನಿನ್ನ ತಾಯಿ ಆತನನ್ನು ಕುರಿತು 'ನೀನು ಬದುಕಿದರೂ ಸರಿ, ಬದುಕದಿದ್ದರೂ ಸರಿ. ನನಗೆ ಹೇಳಲೇಬೇಕು' ಎಂದು ಒತ್ತಾಯಪಡಿಸಿದಳು.

ಕೇಕಯರಾಯನು ಭೀತಿಯಿಂದ ತನಗೆ ವರವನ್ನು ಕೊಟ್ಟ ವರದಮುನೀಶ್ವರನಿಗೆ ಆ ವೃತ್ತಾಂತವನ್ನು ಹೇಳಿ ಏನು ಮಾಡಬೇಕೆಂದು ಕೇಳಲು ಆತನು 'ಎಲೈ ಅರಸನೆ, ನಿನ್ನ ಸ್ತ್ರೀಯು ಹೇಗಾದರೂ ನಾಶವಾಗಿಹೋಗಲಿ. ತಿಳಿದ ಭಾಷೆಯನ್ನು ಹೇಳಿ ವೃಥಾ ಶರೀರ ತ್ಯಾಗವನ್ನು ಮಾಡಬೇಡ. ಇದೇ ನಿನಗೆ ಹಿತೋಪದೇಶ' ಎಂದು ಹೇಳಿದನು. ನಿನ್ನ ತಂದೆಯು

ಮಹಾಪ್ರಸಾದವೆಂದು ಸಂತೋಷಪಟ್ಟು ನಿನ್ನ ತಾಯಿಯನ್ನು ಪರಿತ್ಯಾಗಮಾಡಿ ಅನೇಕಕಾಲ ಸುಖದಿಂದ ರಾಜ್ಯವನ್ನಾಳಿಕೊಂಡಿದ್ದಾನೆ ! ನಿನ್ನ ತಾಯಿಯಹಾಗೆ ನೀನು ಮಾಡಬಾರದ ಕೃತ್ಯವನ್ನು ಬೇಕಾಗಿ ಮಾಡಬೇಡ. ನಿನ್ನ ಪತಿಯಾದ ದಶರಥರಾಯನ ಮಾತನ್ನು ಕೇಳು. ಎಲೈ ಕೈಕೇಯಿದೇವಿಯೆ, ನೀನು ಜನ್ಮಾಂತರದಲ್ಲಿ ಮಾಡಿದ ಪಾಪಬುದ್ಧಿಯಿಂದ ಈ ಪ್ರಕಾರದಲ್ಲಿ ದುರ್ಬುದ್ಧಿಯನ್ನು ಕೈಗೊಂಡು ದಶರಥರಾಯನಿಗೂ ಲೋಕದಲ್ಲಿ ಅಪಕೀರ್ತಿಯನ್ನು ತರುತ್ತಿದ್ದೀಯೆ. ಈ ರಾಜನು ನಿನಗೆ ಕೊಟ್ಟ ವರಗಳು ತಪ್ಪದಹಾಗೆ ಮತ್ತೊಂದು ಪ್ರಕಾರದಲ್ಲಿ ನಿನಗೆ ಸಂತೋಷವನ್ನು ಮಾಡುವನು. ಪುಂಡರೀಕಾಕ್ಷನೂ ಮಹಾಧರ್ಮಿಷ್ಠನೂ ಜ್ಯೇಷ್ಠ ಪುತ್ರನೂ ಕ್ಷತ್ರಿಯಧರ್ಮವನ್ನು ಪರಿಪಾಲಿಸುವಂಥವನೂ ಆದ ಶ್ರೀರಾಮನಿಗೆ ದಶರಥರಾಯನು ಪಟ್ಟಾಭಿಷೇಕವನ್ನು ಮಾಡಲಿ. ಹಾಗಲ್ಲದೆ ಆತನು ವನಕ್ಕೆ ತೆರಳಿದರೆ ಲೋಕದಲ್ಲಿ ನಿನಗೆ ಎಂದೆಂದಿಗೂ ಸ್ಥಿರವಾದ ಅಪಕೀರ್ತಿಯು ಬರುವುದು. ನೀನು ಅಂಥ ಅಪಕೀರ್ತಿಗೊಳಗಾಗಬೇಡ. ಶ್ರೀರಾಮನು ರಾಜ್ಯಾಧಿಪತ್ಯವನ್ನು ಮಾಡಲಿ ! ಆತನ ಹೊರತು ಮತ್ತೊಬ್ಬನು ರಾಜ್ಯಪರಿಪಾಲನಕ್ಕೆ ಸಮರ್ಥನಲ್ಲ. ಆತನು ರಾಜ್ಯಭಾರವನ್ನು ವಹಿಸಿದಮೇಲೆ ದಶರಥರಾಯನು ವನವಾಸಕ್ಕೆ ಹೋಗುವನು. ಇಕ್ಷ್ವಾಕುವಂಶದ ರಾಜರು ತಮ್ಮ ಮಕ್ಕಳು ಪ್ರಬುದ್ಧರಾದರೆ ಅವರಿಗೆ ಪಟ್ಟವನ್ನು ಕಟ್ಟಿ ತಾವು ವಾನಪ್ರಸ್ಥಾಶ್ರಮಕ್ಕೆ ಹೋಗುವರೆಂಬ ವಂಶಮರ್ಯಾದೆಯು ತಪ್ಪಲಾರದು ” ಎಂದು ನುಡಿದನು.

ಹೀಗೆ ಮನ್ನಣೆಯ ಮಾತುಗಳಿಂದಲೂ ಅನೇಕ ನಿಷ್ಠುರವಚನಗಳಿಂದಲೂ ನಯಭಯಗಳಿಂದಲೂ ಬೋಧಿಸಿದ ಸುಮಂತ್ರನ ಮಾತನ್ನು ಕೇಳಿ ಕೈಕೇಯಿದೇವಿಯು ಸ್ವಲ್ಪವಾದರೂ ಮನಗರಗದೆಯೂ ಮುಖಕಾಂತಿಗುಂದದೆಯೂ ಶ್ರೀರಾಮನಿಗೆ ವನವಾಸವೂ ತನ್ನ ಮಗನಿಗೆ ಪಟ್ಟಾಭಿಷೇಕವೂ ಆಗಬೇಕೆಂದೇ ನಿಶ್ಚಯಿಸಿ ಆತನಿಗೆ ಪ್ರತ್ಯುತ್ತರವನ್ನು ಕೊಡದೆ ಸುಮ್ಮನಿದ್ದಳು.

---

## ೩೬ ನೆಯ ಅಧ್ಯಾಯ

## ಸಿದ್ಧಾರ್ಥನು ಕೈಕೇಯಿದೇವಿಗೆ ಹೇಳಿದ ನೀತಿ

ಆಮೇಲೆ ದಶರಥರಾಯನು ತನ್ನ ಮನಸ್ಸಿನಲ್ಲಿದ್ದ ದುಃಖವನ್ನು ಸಹಿಸಿಕೊಂಡು ಕೈಕೇಯಿದೇವಿಗೆ ಕೊಟ್ಟ ಮಾತಿಗೆ ತಪ್ಪಬಾರದೆಂದು ಸುಮಂತ್ರನನ್ನು ಕುರಿತು ಹೇಳಿದನು : “ ಎಲೈ ಸುಮಂತ್ರ, ಶ್ರೀರಾಮನು ವನಕ್ಕೆ ತೆರಳುತ್ತಿದ್ದಾನೆ. ಆತನ ಜೊತೆಯಲ್ಲಿ ರಥ ಗಜ ತುರಗ ಪದಾತಿಗಳೆಂಬ ಚತುರಂಗಬಲವನ್ನು ಕಳುಹಿಸು. ಶ್ರೀರಾಮನ ಊಳಿಗದವರು, ಆಶ್ರಿತಜನರು, ಆತನಲ್ಲಿ ಭಕ್ತಿಯುಳ್ಳ ಜನರು ಮೊದಲಾದವರಿಗೆ ಬೇಕಾದ ವಸ್ತುಗಳನ್ನು ಕೊಟ್ಟು ಅವರನ್ನು ಆತನ ಹಿಂದೆ ಕಳುಹಿಸು. ಪುರಜನಗಳು ತಮ್ಮ ರಥಗಳನ್ನು ಸಜ್ಜುಮಾಡಿಕೊಂಡು ಆತನ ಹಿಂದೆ ಹೋಗಲಿ. ಅರಣ್ಯದಲ್ಲಿ ಸಂಚರಿಸುವ ಬೇಟೆಗಾರರಾದ ಕಿರಾತರನ್ನು ವನದಲ್ಲಿ ಮಾರ್ಗಗಳನ್ನು ತೋರಿಸುವುದಕ್ಕೆ ಆತನ ಹಿಂದೆ ಕಳುಹಿಸು. ನನ್ನ ಅರಮನೆಯಲ್ಲಿರುವ ಉತ್ತಮವಾದ ಆಯುಧಗಳನ್ನು ಶ್ರೀರಾಮನ ವಶಕ್ಕೆ ತರಿಸಿಕೊಡು. ಆತನು ವನದಲ್ಲಿರುವ ದುಷ್ಟಮೃಗಗಳನ್ನೂ ಕಾಡಾನೆಗಳನ್ನೂ ನಿವಾರಿಸಿಕೊಂಡು ವನದಲ್ಲಿರುವ ಹಣ್ಣುಹಂಪಲು ಜೇನುತುಪ್ಪ ಮೊದಲಾದ ಭೋಜ್ಯವಸ್ತುಗಳನ್ನು ಆಹಾರ ಮಾಡಿಕೊಂಡು ಪುಣ್ಯನದಿಗಳನ್ನು ನೋಡಿಕೊಂಡು ಸುಖವಾಗಿರಲಿ. ಭಂಡಾರಗಳಲ್ಲಿರುವ ನಮ್ಮ

ಅರಮನೆಯ ಧಾನ್ಯಗಳನ್ನು ಕಳುಹಿಸು. ಶ್ರೀರಾಮನು ವನದಲ್ಲಿ ಪ್ರಯಾಣಮಾಡುವಾಗ ದೇವತಾರ್ಚನೆ ಅತಿಥಿಸತ್ಕಾರ ಯಾಗಾದಿಗಳನ್ನು ಮಾಡಿಕೊಂಡು ಯಥೇಷ್ಟವಾದ ದಕ್ಷಿಣೆಗಳನ್ನು ಕೊಟ್ಟು ಋಷಿಗಳೊಡನೆ ಸುಖವಾಗಿರುವಹಾಗೆಯೂ ಅಯೋಧ್ಯಾಪಟ್ಟಣವನ್ನು ನೆನೆಯದ ಹಾಗೆಯೂ ಬೇಕಾದ ವಸ್ತುಗಳನ್ನು ಕಳುಹಿಸು. ಭರತನು ಅಯೋಧ್ಯಾಪಟ್ಟಣವನ್ನು ಪರಿಪಾಲಿಸಲಿ. ಶ್ರೀರಾಮನು ಯಾವ ವಸ್ತುವಿನ ಕೊರತೆಯೂ ಇಲ್ಲದಂತೆ ವನವಾಸವನ್ನು ಹದಿನಾಲ್ಕುವರುಷಗಳು ನೆರವೇರಿಸಲಿ!" ಎಂದು ಹೇಳಿದನು.

ಆ ಮಾತನ್ನು ಕೇಳಿ ಕೈಕೇಯಿದೇವಿಯು ಮನಸ್ಸಿನಲ್ಲಿ ಅತ್ಯಂತ ಭಯಪಟ್ಟು ಮುಖಕಾಂತಿ ಗುಂದಿ ಸ್ವರತಗ್ಗಿ ಅತಿಕೋಪದಿಂದ ದಶರಥರಾಯನನ್ನು ಕುರಿತು "ಎಲೈ ರಾಜನೆ, ಅಮೃತರಸವಿಲ್ಲದ ಶೂನ್ಯಭಾಂಡದಂತೆ ಸಮಸ್ತಜನರಹಿತವಾದ ಈ ಅಯೋಧ್ಯಾಪಟ್ಟಣವನ್ನು ಭರತನು ಆಳಿ ಪ್ರಯೋಜನವೇನು!" ಎಂದು ಲಜ್ಜೆಯನ್ನು ತೊರೆದು ಕರ್ಣಕಠೋರವಾದ ಅನೇಕ ಮಾತುಗಳನ್ನು ನುಡಿದಳು.

ದಶರಥರಾಯನು "ದುಷ್ಟೆ, ನನಗೆ ಅತ್ಯಂತ ದುಃಖಭಾರವನ್ನು ಹೊರಿಸಿ ಶ್ರೀರಾಮನಿಗೆ ಪಟ್ಟಾಭಿಷೇಕಮಾಡುವ ಕಾರ್ಯವನ್ನು ನಿಲ್ಲಿಸಿದೆಯಲ್ಲ!" ಎಂದು ಅತ್ಯಂತ ಕೋಪದಿಂದ ನುಡಿದನು.

ಆಗ ಕೈಕೇಯಿದೇವಿಯು ಎರಡರಷ್ಟು ಕೋಪಯುಕ್ತಳಾಗಿ "ಮಹಾರಾಜ, ಇದೇನು ವ್ಯತ್ಯಾಸವಾಗಿ ನುಡಿಯುತ್ತಿರುವೆ? ನಿನ್ನ ವಂಶದಲ್ಲಿ ಸಗರಚಕ್ರವರ್ತಿಯು ತನ್ನ ಜ್ಯೇಷ್ಠಪುತ್ರನಾದ ಅಸಮಂಜನನ್ನು ತೊರೆದು ಕಿರಿಯ ಕುಮಾರನಿಗೆ ಪಟ್ಟವನ್ನು ಕಟ್ಟಲಿಲ್ಲವೆ? ಈ ಪದ್ಧತಿ ನಿನ್ನಲ್ಲಿಯೇ ಉಂಟಾಯಿತೆ?" ಎಂದಳು.

ಆ ಬಳಿಕ ದಶರಥರಾಯನು ಅತಿಕೋಪದಿಂದ "ನಿನಗೆ ಧಿಕ್ಕಾರ" ಎಂದು ನುಡಿದು ಸುಮ್ಮನಾದನು. ಅಲ್ಲಿದ್ದ ಪರಿಜನರೆಲ್ಲರೂ ಲಜ್ಜೆಪಡುತ್ತಿದ್ದರು. ಆ ಸಮಯದಲ್ಲಿ ದಶರಥರಾಯನ ವಂಶಪರಂಪರೆಯಿಂದ ಬಂದ ಸಿದ್ಧಾರ್ಥನೆಂಬ ಪ್ರಧಾನಿಯು ಕೈಕೇಯಿದೇವಿಯನ್ನು ಕುರಿತು "ಎಲೈ ದೇವಿಯೆ, ನೀನು ಸಗರಚಕ್ರವರ್ತಿಯ ದೃಷ್ಟಾಂತವನ್ನು ಹೇಳಿ ಶ್ರೀರಾಮನನ್ನು ವನಕ್ಕೆ ಕಳುಹಿಸಬಹುದೆಂದು ಹೇಳುತ್ತೀಯಲ್ಲ! ಸಗರಚಕ್ರವರ್ತಿಯ ಜ್ಯೇಷ್ಠಪುತ್ರನಾದ ಅಸಮಂಜನಂತೆ ರಾಮನು ದುರುಳನಲ್ಲ. ಅಸಮಂಜನು ಆಡುವ ಮಕ್ಕಳನ್ನು ಹಿಡಿತಂದು ಸರಯೂನದೀತೀರದಲ್ಲಿ ಕಾಲುಗಳನ್ನು ಹಿಡಿದು ತಿರುಗಿಸಿ ನದಿಯಲ್ಲಿ ಹಾಕಿ ನಗುತ್ತಿದ್ದನು. ಅಂಥ ದುರುಳತನವನ್ನು ಕಂಡು ಪಟ್ಟಣದಲ್ಲಿದ್ದ ಸಮಸ್ತ ಪ್ರಜೆಗಳೂ ಸಗರಚಕ್ರವರ್ತಿಗೆ ಮೊರೆಯಿಟ್ಟು 'ನಿನಗೆ ಪ್ರಜೆಗಳುಬೇಕೋ ಅಥವಾ ಆ ದುಷ್ಟಮಗನಿರಬೇಕೊ?' ಎಂದು ಕೇಳಿದರು. ಆಗ ಆತನು ತನ್ನ ಮಗನಾದ ಅಸಮಂಜನಿಂದ ಬಂದ ಉಪದ್ರವವೇನೆಂದು ಕೇಳಿದನು. ಅವರು 'ಅಸಮಂಜನು ನಮ್ಮ ಮಕ್ಕಳ ಕಾಲುಗಳನ್ನು ಹಿಡಿದು ತಿರುಗಿಸಿ ಕಂಗೆಡಿಸಿ ಸರಯೂನದಿಯಲ್ಲಿ ಹಾಕಿ ಅವರು ಮುಳುಗಿಹೋದರೆ ದಡಿಯಲ್ಲಿ ನಿಂತುಕೊಂಡು ನಗುತ್ತಾನೆ. ಈ ರೀತಿಯಲ್ಲಿ ಅನೇಕ ಶಿಶುಗಳನ್ನು ಸರಯೂನದಿಯಲ್ಲಿ ಹಾಕಿ ಕೊಂದನು. ನಾವು ಹೇಗೆ ಈ ದುಃಖವನ್ನು ಸಹಿಸುವುದು?' ಎಂದು ನುಡಿದರು.

ಆ ಪ್ರಜೆಗಳ ಮಾತನ್ನು ಕೇಳಿ ಸಗರಚಕ್ರವರ್ತಿಯು ಅತ್ಯಂತ ಕೋಪಯುಕ್ತನಾಗಿ ಮೂಗಿನಲ್ಲಿ ಬೆರಳಿಟ್ಟುಕೊಂಡು ತಲೆದೂಗಿ ತನ್ನ ಪ್ರಧಾನಿಯನ್ನು ಕರೆದು ಅಸಮಂಜನನ್ನು ಆತನ ಸ್ತ್ರೀಸಮೇತ ವಾಗಿ ರಥವನ್ನೇರಿಸಿ ವನದಲ್ಲಿರುವಂತೆ ಕಳುಹಿಸಿಬಿಡಬೇಕೆಂದು ಆಜ್ಞಾಪಿಸಿದನು. ಧಾರ್ಮಿಕನಾದ ಸಗರಚಕ್ರವರ್ತಿಯು ಪುತ್ರರಕ್ಷಣೆಗಿಂತಲೂ ಪ್ರಜಾರಕ್ಷಣವು ವಿಶೇಷವೆಂದು ಧರ್ಮರಹಸ್ಯವನ್ನು

ಬಲ್ಲವನಾದಕಾರಣ ತನ್ನ ಮಗನನ್ನು ವನಕ್ಕೆ ಕಳುಹಿಸಿದನು. ನಗರಚಕ್ರವರ್ತಿಯ ಜ್ಯೇಷ್ಠಕುಮಾರ ನೋಪಾದಿಯಲ್ಲಿ ಶ್ರೀರಾಮನು ಯಾವ ಪಾಪಕೃತ್ಯವನ್ನು ಮಾಡಿದವನೆಂದು ನೀನು ಹೊರಡಿಸುತ್ತಿದ್ದೀಯೆ ? ಆತನಲ್ಲಿ ಯಾವ ಅವಗುಣಗಳನ್ನು ಕಂಡೆ ? ಚಂದ್ರನಲ್ಲಾದರೂ ಕಳಂಕ ಉಂಟು. ರಾಮನಲ್ಲಿ ಯಾವ ಅವಗುಣವನ್ನೂ ಕಾಣೆವು! ಶ್ರೀರಾಮನಲ್ಲಿ ನೀನೇನಾದರೂ ದೋಷವನ್ನು ಕಂಡಿದ್ದರೆ ಹೇಳು. ಲೋಕದಲ್ಲಿ ಸನ್ಮಾರ್ಗದಲ್ಲಿರುವ ಅಪರಾಧವಿಲ್ಲದವರನ್ನು ಹೊರಡಿಸುವವರು ನರಕವನ್ನೈದುವರು. ಧರ್ಮಕ್ಕೆ ವಿರುದ್ಧವಾದ ಕೃತ್ಯವನ್ನು ಮಾಡಿದರೆ ದೇವೇಂದ್ರನಿಗಾದರೂ ಐಶ್ವರ್ಯವು ಕುಂದುವುದು ! ಅದು ಹಾಗಿರಲಿ. ಶ್ರೀರಾಮನನ್ನು ದೇಶಭ್ರಷ್ಟನನ್ನಾಗಿ ಮಾಡಿ ಹೊರಡಿಸಿದೆಯಾದರೆ ಲೋಕದಲ್ಲಿ ನಿನಗೆ ಮಹಾ ಅಪಕೀರ್ತಿಯು ಸಂಭವಿಸುವುದು" ಎಂದು ದಶರಥರಾಯನ ಸಂಮುಖದಲ್ಲಿ ಹೇಳಿದನು.

ಆ ಮಾತನ್ನು ಕೇಳಿ ದಶರಥರಾಯನು ಅತ್ಯಂತ ದುಃಖಾಕ್ರಾಂತನಾಗಿ ಸ್ವರಗುಂದಿ ಕೈಕೇಯಿಾ ದೇವಿಯನ್ನು ಕುರಿತು "ಎಲೈ ಕೆಟ್ಟನಡತೆಯುವಳೆ, ನೀನು ನಿನ್ನ ಮತ್ತು ನನ್ನ ಹಿತವನ್ನು ಅರಿಯೆ. ಶ್ರೀರಾಮನು ನಿನಗೆ ಹಿತವನ್ನು ಮಾಡಬೇಕೆಂದು ದಿಕ್ಕಿಲ್ಲದವನಂತೆ ವನಕ್ಕೆ ಹೋಗುತ್ತಾನೆ. ಹೀಗಿದ್ದರೂ ಆತನಲ್ಲಿ ಕುಟಿಲಬುದ್ಧಿಯನ್ನು ನೆನೆಯುತ್ತಿದ್ದೀಯೆ. ಶ್ರೀರಾಮನು ವನಕ್ಕೆ ತೆರಳಿದ ಮೇಲೆ ನನಗೆ ಇಲ್ಲೇನಿದೆ ? ನಾನು ರಾಜ್ಯವನ್ನೂ ಸಕಲಸುಖಗಳನ್ನೂ ಬಿಟ್ಟು ಆತನ ಸಂಗಡ ವನವನ್ನೈದುವೆನು. ನೀನು ನಿನ್ನ ಮಗನಾದ ಭರತನೊಡನೆ ರಾಜ್ಯಸುಖವನ್ನು ಅನುಭವಿಸಿ ಕೊಂಡಿರು" ಎಂದು ನುಡಿದನು.



### ೩೭ ನೆಯ ಅಧ್ಯಾಯ

## ವಸಿಷ್ಠನು ಸೀತಾದೇವಿಗೆ ವಸ್ತ್ರಾಭರಣಗಳನ್ನು ಕೊಡಿಸಿದ್ದು

ಆ ಬಳಿಕ ಸಮಸ್ತ ನೀತಿಶಾಸ್ತ್ರಗಳನ್ನೂ ಬಲ್ಲ ಶ್ರೀರಾಮನು ದಶರಥರಾಯನನ್ನು ಕುರಿತು "ಮಹಾರಾಜ, ಸಮಸ್ತ ವಿಷಯಭೋಗಗಳನ್ನೂ ಬಿಟ್ಟು ವನದಲ್ಲಿ ಕಂದಮೂಲಫಲಾಹಾರಗಳನ್ನು ಮಾಡಿಕೊಂಡಿರುವವರಿಗೆ ಚತುರಂಗಬಲವು ಏಕೆ ? ಧನಧಾನ್ಯಾದಿವಸ್ತುಗಳೇಕೆ ? ಆನೆಯನ್ನೇ ಕೊಟ್ಟವರಿಗೆ ಆನೆಯ ಸರಪಳಿಯಲ್ಲಿ ಸ್ನೇಹವೇಕೆ ? ರಾಜ್ಯವನ್ನೇ ಬಿಟ್ಟುಹೋಗುವ ನನಗೆ ಸೇನೆ ಮೊದಲಾದ ಸಾಮಗ್ರಿಗಳಿಂದೇನು ಪ್ರಯೋಜನ ? ನಾನು ಸಮಸ್ತ ವೃತ್ತಾಂತವನ್ನೂ ಬಲ್ಲವನಲ್ಲದೆ ಮೂಢನಲ್ಲ. ಆದ್ದರಿಂದ ನಾರುಬಟ್ಟೆಗಳನ್ನು ಧರಿಸಿಕೊಂಡು ವನದಲ್ಲಿ ಹದಿನಾಲ್ಕುವರುಷಗಳಿರುವ ನನಗೆ ಗೆಡ್ಡೆ ಗೆಣಸುಗಳನ್ನು ತರುವುದಕ್ಕೆ ಸಾಧನಗಳಾದ ಹಾರೆಮಕ್ಕರಿಗಳನ್ನು ತರಿಸಿಕೊಡು" ಎಂದು ಹೇಳಿದನು.

ಆ ಮಾತನ್ನು ಕೇಳಿ ಕೈಕೇಯಿಾದೇವಿಯು ಶೀಘ್ರದಲ್ಲಿ ನಾರುಬಟ್ಟೆಗಳನ್ನು ತರಿಸಿ ಅವುಗಳನ್ನು ಧರಿಸಿಕೊಳ್ಳೆಂದು ಶ್ರೀರಾಮನನ್ನು ಕುರಿತು ದಶರಥನ ಸಂಮುಖದಲ್ಲಿಯೇ ಲಜ್ಜೆಯಿಲ್ಲದೆಯೂ ಶಂಕಾತಂಕವಿಲ್ಲದೆಯೂ ನುಡಿದಳು. ಶ್ರೀರಾಮನು ಮಹಾಪ್ರಸಾದವೆಂದು ಆ ನಾರುಬಟ್ಟೆಗಳನ್ನು ಕೈಗೊಂಡು ತಾನು ಉಟ್ಟುಹೊದ್ದಿದ್ದ ದುಕೂಲವಸ್ತ್ರಗಳನ್ನು ದಶರಥರಾಯನ ಸಮೀಪದಲ್ಲಿ ತೆಗೆದಿರಿಸಿ ಆ ನಾರುಬಟ್ಟೆಗಳನ್ನು ಧರಿಸಿದನು. ಆಮೇಲೆ ಲಕ್ಷ್ಮಣನೂ ತನ್ನ ದುಕೂಲವಸ್ತ್ರಗಳನ್ನು ತೆಗೆದಿರಿಸಿ

ನಾರುಬಟ್ಟೆಗಳನ್ನುಟ್ಟು ಹೊದ್ದುಕೊಂಡನು. ಆಮೇಲೆ ಕೈಕೇಯಿದೇವಿಯು ಸೀತಾದೇವಿಗೆ ನಾರುಸೀರೆಗಳನ್ನು ಕೊಡಲು ಆ ದೇವಿಯು ಅವನ್ನು ತೆಗೆದುಕೊಂಡು ಹುಲ್ಲೆಯಮರಿಯು ಬಲೆಯನ್ನು ಕಂಡು ಬೆದರುವಂತೆ ಕಂಗೆಟ್ಟು ಕಂಗಳಲ್ಲಿ ನೀರನ್ನು ತುಂಬಿಕೊಂಡು ತನ್ನ ಪತಿಯಾದ ಶ್ರೀರಾಮನನ್ನು ಕುರಿತು ವನದಲ್ಲಿರುವ ಮುನಿಗಳು ಇಂಥ ಬಟ್ಟೆಗಳನ್ನು ಹೇಗೆ ಉಡುವರೆಂದು ಕೇಳಿದಳು. ಒಂದು ನಾರುಸೀರೆಯನ್ನು ತನ್ನ ಕೊರಳಿಗೆ ಸುತ್ತಿಕೊಂಡು ಮತ್ತೊಂದನ್ನು ಕೈಯಲ್ಲಿ ಹಿಡಿದುಕೊಂಡು ಲಜ್ಜಿತೆಯಾಗಿ ಮುಖಕಾಂತಿಗುಂದಿದ್ದಳು. ಶ್ರೀರಾಮನು ಶೀಘ್ರದಲ್ಲಿ ಸೀತಾದೇವಿಯ ಸಮೀಪಕ್ಕೆ ಬಂದು ಆ ದೇವಿಯು ಉಟ್ಟಿದ್ದ ಬಿಳಿಯಸೀರೆಯಮೇಲೆ ಆ ನಾರುಸೀರೆಯನ್ನು ತಾನೇ ಸುತ್ತಿದನು. ಅದನ್ನು ಕಂಡು ದಶರಥರಾಯನ ಅಂತಃಪುರದ ಸ್ತ್ರೀಯರೆಲ್ಲರೂ ಕಣ್ಣೀರಿಡುತ್ತಾ ಆತನನ್ನು ಕುರಿತು "ಶ್ರೀರಾಮ, ದಶರಥರಾಯನ ಆಜ್ಞೆಯಿಂದ ವನಕ್ಕೆ ಹೋಗುವ ನೀನು ಸೀತಾದೇವಿಗೆ ನಾರುಸೀರೆಯನ್ನುಡಿಸಿ ವನಕ್ಕೆ ಏಕೆ ಪ್ರಯಾಣಮಾಡಿಸುತ್ತೀಯೆ ? ಈ ದೇವಿಯು ಅಂತರಂಗದಲ್ಲಿ ನಿನ್ನನ್ನು ಧ್ಯಾನಮಾಡಿಕೊಂಡು ಇಲ್ಲಿಯೇ ಇರಲಿ. ನೀನು ಲಕ್ಷ್ಮಣನನ್ನು ಕರೆದುಕೊಂಡು ವನಕ್ಕೆ ಹೋಗು. ಸೀತಾದೇವಿಯು ವನದಲ್ಲಿ ತಪಸ್ವಿಗಳಹಾಗಿರುವುದು ಉಚಿತವಲ್ಲ. ಎಲೈ ಸ್ವಾಮಿ, ನಿನ್ನನ್ನು ನಾವು ಬೇಡಿಕೊಳ್ಳುತ್ತೇವೆ. ಸೀತಾದೇವಿಯು ಇಲ್ಲಿಯೇ ಇರಲಿ. ನೀನು ಧರ್ಮವೇ ಶರಣೆಂದು ನಡೆಯುವವನಾದ್ದರಿಂದ ನಿನ್ನನ್ನು ತಡೆಯಲು ನಾವು ಶಕ್ತರಲ್ಲ" ಎಂದು ನುಡಿದರು.

ಆ ಸಮಯದಲ್ಲಿ ತನ್ನ ಶೀಲಾದಿಸದ್ಗುಣಗಳಿಗೆ ಸಮನಾದ ಸೀತಾದೇವಿಗೆ ಶ್ರೀರಾಮನು ನಾರುಸೀರೆಗಳನ್ನುಡಿಸುವುದನ್ನು ಕಂಡು ಆತನ ಗುರುವಾದ ವಸಿಷ್ಠಮುನೀಶ್ವರನು ಆ ದೇವಿಗೆ ನಾರುಸೀರೆಗಳನ್ನುಡಿಸುವುದನ್ನು ನಿಲ್ಲಿಸಿ ಕೈಕೇಯಿದೇವಿಯನ್ನು ಕುರಿತು ಹೀಗೆ ನುಡಿದನು : "ಎಲೈ ದುಷ್ಟೆ ! ಅಜ್ಞಾನಿ ! ಕುಲಗೆಡಕಿ ! ದಶರಥರಾಯನನ್ನು ವಂಚಿಸಿ ಸಮಸ್ತಕಾರ್ಯಗಳನ್ನೂ ಕೆಡಿಸಿದ ನಿನ್ನ ದುಷ್ಟಕೃತ್ಯಗಳಿಗೆ ಮಿತಿಯೇ ಇಲ್ಲ. ಸೀತಾದೇವಿಗೆ ನಾರುಸೀರೆಯನ್ನು ಕೊಟ್ಟೆ. ಈ ದೇವಿಯು ಏಕೆ ವನಕ್ಕೆ ಹೋಗಬೇಕು ? ಈಕೆಯು ಇಲ್ಲಿಯೇ ಇದ್ದುಕೊಂಡು ಶ್ರೀರಾಮನಿಗೆ ದಶರಥರಾಯನು ಕೊಟ್ಟ ರಾಜ್ಯವನ್ನು ಪರಿಪಾಲಿಸಲಿ ! ಲೋಕದಲ್ಲಿ ಸ್ತ್ರೀಯರು ಗೃಹಸ್ಥರಿಗೆ ಅರ್ಧಶರೀರವಾದ್ದರಿಂದ ಸೀತಾದೇವಿಯು ತಾನೇ ಶ್ರೀರಾಮನೆಂದು ಭಾವಿಸಿಕೊಂಡು ರಾಜ್ಯಪರಿಪಾಲನವನ್ನು ಮಾಡಲಿ ! ಹಾಗಲ್ಲದೆ ಸೀತಾದೇವಿಯೂ ವನಕ್ಕೆ ಹೋದಳಾದರೆ ನಾವೆಲ್ಲರೂ ರಾಜ್ಯವನ್ನು ಬಿಟ್ಟು ಶ್ರೀರಾಮನ ಸಂಗಡ ವನಕ್ಕೆ ಹೋಗುತ್ತೇವೆ. ಅಷ್ಟುಮಾತ್ರವೇ ಅಲ್ಲ ; ಸಮಸ್ತ ಪುರಜನರೂ ತಮ್ಮ ತಮ್ಮ ಬಂಧುಬಳಗವೆಲ್ಲವನ್ನೂ ಕೂಡಿಕೊಂಡು ವನಕ್ಕೆ ಹೋಗುವರು. ಭರತಶತ್ರುಘ್ನರಿಬ್ಬರೂ ನಾರುಬಟ್ಟೆಗಳನ್ನುಟ್ಟುಕೊಂಡು ಅಣ್ಣನಾದ ಶ್ರೀರಾಮನ ಸೇವೆಯನ್ನೇ ಮಾಡಿಕೊಂಡಿರುವರು. ಆಮೇಲೆ ಸರ್ವಜನಶೂನ್ಯವಾದ ಅಯೋಧ್ಯಾಪಟ್ಟಣವು ಗಿಡಬೆಳೆದು ಅರಣ್ಯವಾಗುವುದು. ಆಗ ನೀನೊಬ್ಬಳೇ ನಿನ್ನ ಮನಸ್ಸುಬಂದಂತೆ ಇರು. ಶ್ರೀರಾಮನು ಇಲ್ಲದ ರಾಜ್ಯವು ನಿಲ್ಲಲಾರದು. ಈತನು ಅರಣ್ಯದಲ್ಲಿದ್ದರೂ ಅದೇ ಪಟ್ಟಣವಾಗುವುದು ! ಭರತನು ದಶರಥರಾಯನಿಂದ ಜನಿಸಿದ್ದರೆ ತನ್ನ ತಂದೆಯಾದ ದಶರಥರಾಯನು ಮನಃಪೂರ್ವಕವಾಗಿ ಕೊಡದಿದ್ದ ರಾಜ್ಯವನ್ನು ಎಂದಿಗೂ ಅಂಗೀಕರಿಸನು. ನೀನು ಭೂಮಿಯಿಂದ ಆಕಾಶಕ್ಕೆ ನೆಗೆದುಬಿದ್ದರೂ ಇಕ್ಷ್ವಾಕುವಂಶದ ಚರಿತ್ರವನ್ನು ಬಲ್ಲವನಾದ ಭರತನು ದಶರಥರಾಯನ ಆಜ್ಞೆಯನ್ನು ಮೀರಲಾರನು. ಪುತ್ರನಲ್ಲಿ ಅತ್ಯಂತ ಸ್ನೇಹವುಳ್ಳವಳಾಗಿದ್ದರೂ ನೀನು ಭರತನಿಗೆ ಕೇಡನ್ನೇ ಚಿಂತಿಸುತ್ತಿದ್ದೀಯೆ. ಲೋಕದಲ್ಲಿ ಶ್ರೀರಾಮನನ್ನು ಅನುಸರಿಸದಿರುವ ರಾಜ್ಯವೇ ಇಲ್ಲ. ಕೈಕೇಯಿದೇವಿ, ಈಗ ಶ್ರೀರಾಮನು ವನಕ್ಕೆ

ತೆರಳಿದನಾದರೆ ಪಶು ಪಕ್ಷಿ ಮೊದಲಾದ ಪ್ರಾಣಿಗಳೆಲ್ಲವೂ ಆತನ ಹಿಂದೆ ಹೋಗಿಬಿಡುವುವು. ನೀನು ನಿನ್ನ ಸೊಸೆಯಾದ ಸೀತಾದೇವಿಗೆ ಅಲಂಕಾರವನ್ನು ಮಾಡು. ಈ ನಾರುಸೀರೆಗಳನ್ನು ತೆಗೆಸಿಹಾಕು. ಸೀತಾದೇವಿಗೆ ನಾರುಸೀರೆಗಳು ಉಚಿತವಲ್ಲ. ನೀನು ದಶರಥರಾಯನ ಕೈಯಲ್ಲಿ ವರವನ್ನು ಬೇಡಿಕೊಂಡಾಗ ಶ್ರೀರಾಮನೊಬ್ಬನಿಗೆ ವನವಾಸವಾಗಬೇಕೆಂದು ಬೇಡಿಕೊಂಡೆಯಲ್ಲದೆ ಸೀತಾದೇವಿಗೂ ನಾರುಸೀರೆಯ ಉಡಿಗೆ ವನವಾಸಗಳಾಗಬೇಕೆಂದು ಬೇಡಿಕೊಳ್ಳಲಿಲ್ಲ. ಸೀತಾದೇವಿಯು ನಾರುಸೀರೆಯನ್ನುಟ್ಟು ಜಡೆಯನ್ನು ಧರಿಸಿ ವನಕ್ಕೆ ಹೋಗಲೆಂದು ಯಾರು ವರವನ್ನು ಕೊಟ್ಟರು ? ” ಎಂದು ನುಡಿದನು.

ಪತಿವ್ರತಾಶಿರೋಮಣಿಯಾದ ಸೀತಾದೇವಿಯು ತನ್ನ ಪತಿಯಾದ ಶ್ರೀರಾಮನಹಾಗೆಯೇ ತಾನೂ ಇರಬೇಕೆಂದೂ ಆತನು ಮುನಿವೇಷವನ್ನು ಕೈಗೊಂಡಮೇಲೆ ತಾನು ಸರ್ವಾಭರಣಭೂಷಿತೆಯಾಗಿರಬಾರದೆಂದೂ ದುಕೂಲವಸ್ತ್ರಾಭರಣಗಳಲ್ಲಿ ಮನಸ್ಸಿಡದಿದ್ದಳು.



## ೩೯ನೆಯ ಅಧ್ಯಾಯ

## ಶ್ರೀರಾಮನು ದಶರಥನಿಗೆ ಹೇಳಿದ ಸಮಾಧಾನ

ಆಮೇಲೆ ಸೀತಾದೇವಿಯನ್ನು ಕಂಡ ಸಮಸ್ತ ಜನರೂ ದಶರಥರಾಯನ ಜನ್ಮವನ್ನು ಸುಡಬೇಕೆಂದು ಅತ್ಯಂತ ದುಃಖಾತಿಶಯದಿಂದ ರೋದನವನ್ನು ಮಾಡುತ್ತಿದ್ದರು. ಆ ಕೋಲಾಹಲ ಧ್ವನಿಯನ್ನು ಕೇಳಿ ದಶರಥರಾಯನು ಮನಗರಗಿ “ ಅಕಟಕಟಾ ! ನನ್ನ ಜೀವನದಿಂದ ಪ್ರಯೋಜನವೇನು ? ನನಗೆ ಅಪಕೀರ್ತಿಯೂ ಅಧರ್ಮವೂ ಸಂಭವಿಸಿತಲ್ಲ ! ” ಎಂದು ನಿಟ್ಟುಸಿರುಬಿಡುತ್ತ ತನ್ನ ಸ್ತ್ರೀಯಾದ ಕೈಕೇಯಿದೇವಿಯನ್ನು ನೋಡಿ “ ಕೈಕೇಯಿ, ಕೋಮಲಾಂಗಿಯಾದ ಸೀತಾದೇವಿಯು ನಾರುಸೀರೆಯನ್ನುಡುವುದು ಯೋಗ್ಯವಲ್ಲ. ನಮ್ಮ ಗುರುವಾದ ವಸಿಷ್ಠಮುನೀಶ್ವರನು ಈ ದೇವಿಯು ವನವಾಸಕ್ಕೆ ಯೋಗ್ಯಳಲ್ಲವೆಂದು ನುಡಿದ ಮಾತೇ ಸತ್ಯ. ರಾಜಕುಮಾರಿಯಾದ ಸೀತಾದೇವಿಯು ಸಭಾಮಧ್ಯದಲ್ಲಿ ಬಡಹೆಂಗಸಿನಹಾಗೆ ನಾರುಸೀರೆಯನ್ನುಡುವುದಕ್ಕೆ ಯಾರಿಗೆ ದ್ರೋಹವನ್ನು ಮಾಡಿದಳು ? ನಾನು ನಿನಗೆ ಶ್ರೀರಾಮನೊಬ್ಬನು ನಾರುಬಟ್ಟೆಯನ್ನುಟ್ಟು ವನಕ್ಕೆ ಹೋಗಲೆಂದು ಮಾತುಕೊಟ್ಟೆನಲ್ಲದೆ ಸೀತಾದೇವಿಯು ನಾರುಸೀರೆಯನ್ನುಟ್ಟು ವನಕ್ಕೆ ಹೋಗಬೇಕೆಂದು ಮಾತು ಕೊಡಲಿಲ್ಲ. ಈ ದೇವಿಯು ತನ್ನ ಮನಸ್ಸುಬಂದಂತೆ ಸರ್ವಾಭರಣಭೂಷಿತೆಯಾಗಿ ವನಕ್ಕೆ ಹೋಗಲಿ ! ಬದುಕಲಾರದ ನಾನು ನಿನಗೆ ಕೊಡಬಾರದ ವರವನ್ನು ಕೊಟ್ಟೆನು. ನಿನ್ನ ಅಜ್ಞಾನದಿಂದ ನೀನು ಶ್ರೀರಾಮನಿಗೆ ವನವಾಸವಾಗಬೇಕೆಂದು ಬೇಡಿಕೊಂಡೆ. ನಾನೂ ನಿನ್ನ ಮಾತಿಗೆ ಮರುಳಾಗಿ ಆತನನ್ನು ವನಕ್ಕೆ ಕಳುಹಿಸಲು ಒಪ್ಪಿದೆ. ಶ್ರೀರಾಮನು ನಿನಗೆ ಮಾಡಿದ ಅಪರಾಧವು ಏನಾದರೂ ಉಂಟೆ ? ಸೀತಾದೇವಿಯು ನಿನಗೆ ದ್ರೋಹವನ್ನು ಮಾಡಿದ್ದು ಉಂಟೆ ? ಸುಕುಮಾರಿಯಾಗಿ ಕಮಲದಳವನ್ನು ಹೋಲುವ ಕಣ್ಣುಗಳುಳ್ಳ ಪತಿವ್ರತೆಯಾದ ಈ ದೇವಿಯು ಮಾಡಿದ ಅಪರಾಧವೇನು ? ಶ್ರೀರಾಮನೊಬ್ಬನು ತೆರಳುವುದೇ ಸಾಕು. ನೀನು ಶ್ರೀರಾಮನ ವನವಾಸದಿಂದಲೇ ಸಂತೋಷಪಡು. ಸೀತಾದೇವಿಗೆ ನಾರುಸೀರೆಯನ್ನು ಅಳವಡಿಸಬೇಡ ” ಎಂದು ನುಡಿದು ಅಪರಿಮಿತವಾದ ಶೋಕಸಾಗರದಲ್ಲಿ ಮುಳುಗಿ ಮುಂದುಗಾಣದೆ ಮೂರ್ಛೆಬಿದ್ದನು.

ಶ್ರೀರಾಮನು ಆತನನ್ನು ಕೈಹಿಡಿದೆತ್ತಿ "ತಂದೆಯೆ, ನೀನು ಧರ್ಮರಹಸ್ಯವನ್ನು ಬಲ್ಲವನು; ಆದ್ದರಿಂದ ಮಹಾಪತಿವ್ರತೆಯೂ ವೃದ್ಧೆಯೂ ಸದಾಚಾರಸಂಪನ್ನೆಯೂ ಒಂದುಸಾರಿಯಾದರೂ ಪುತ್ರವಿಯೋಗವನ್ನು ಕಾಣದವಳೂ ನಿನ್ನ ಶರಣುಹೊಕ್ಕವಳೂ ಆದ ನನ್ನ ತಾಯಿ ಕೌಸಲ್ಯಾದೇವಿಯನ್ನು ಸಂತವಿಟ್ಟು ರಕ್ಷಿಸು. ಯಾವಾಗಲೂ ನಿನ್ನನ್ನೇ ಧ್ಯಾನಿಸುವ ಕೌಸಲ್ಯಾದೇವಿಯು ನಾನು ವನಕ್ಕೆ ಹೋದಮೇಲೆ ನನ್ನ ಅಗಲಿಕೆಯಿಂದುಂಟಾಗುವ ದುಃಖದಿಂದ ಶರೀರವನ್ನು ತೊರೆಯದಂತೆ ಮನ್ನಿಸಿ ರಕ್ಷಿಸು" ಎಂದು ಪ್ರಾರ್ಥಿಸಿದನು.



೩೯ ನೆಯ ಅಧ್ಯಾಯ

## ಕೌಸಲ್ಯಾದೇವಿಯು ಸೀತಾದೇವಿಗೆ ಬುದ್ಧಿ ಹೇಳಿದ್ದು

ಆಮೇಲೆ ದಶರಥರಾಯನು ಮುನಿವೇಷವನ್ನು ಧರಿಸಿದ ಶ್ರೀರಾಮನನ್ನು ಕಂಡು ದುಃಖಾತಿಶಯದಿಂದ ಚೈತನ್ಯಗುಂದಿ ಆತನನ್ನು ತಲೆಯೆತ್ತಿ ನೋಡುವುದಕ್ಕೂ ಆತನೊಡನೆ ಮಾತನಾಡುವುದಕ್ಕೂ ಸಮರ್ಥನಾಗಲಿಲ್ಲ. ಅವನು "ರಾಮ ರಾಮ!" ಎಂದು ಹಂಬಲಿಸುತ್ತ ತನ್ನ ಮನಸ್ಸಿನಲ್ಲಿ "ಅಕಟಕಟಾ! ನಾನು ಜನ್ಮಾಂತರದಲ್ಲಿ ಬಹುಮಂದಿ ತಂದೆಮಕ್ಕಳನ್ನು ಅಗಲಿಸಿದೆನು. ಅನೇಕ ಪ್ರಾಣಿಹಿಂಸೆಯನ್ನು ಮಾಡಿದೆನು. ಕೈಕೇಯಿಯಿಂದ ದುಃಖಪಡುವ ನನಗೆ ಮೃತ್ಯುವಾದರೂ ಬರಬೇಡವೆ! ಯಜ್ಞಪುರುಷನಹಾಗೆ ತನ್ನ ತನುಕಾಂತಿಯಿಂದ ನಾನಾದಿಕ್ಕುಗಳನ್ನು ಬೆಳಗಿಸುವವನಾದರೂ ದುಕೂಲವಸ್ತ್ರಗಳನ್ನು ಬಿಟ್ಟು ನಾರುಡಿಗೆಯನ್ನುಟ್ಟು ನನ್ನ ಮುಂದುಗಡೆಯಲ್ಲಿ ನಿಂತಿರುವ ಶ್ರೀರಾಮನನ್ನು ನೋಡುವ ದುಃಖವು ನನಗೆ ಸಂಭವಿಸಿತು. ಕೈಕೇಯಿದೇವಿಯು ತನ್ನ ಸ್ವಾರ್ಥಕ್ಕಾಗಿ ಈತನನ್ನು ವನಕ್ಕೆ ಕಳುಹಬೇಕೆಂದು ಯತ್ನಮಾಡಿದ್ದರಿಂದ ಸಮಸ್ತ ಪ್ರಾಣಿಗಳ ಮನಸ್ಸಿಗೂ ಬಹುದುಃಖವಾಯಿತು!" ಎಂದು ಚಿಂತಿಸುತ್ತ ಕಣ್ಣೀರು ತುಂಬಿಕೊಂಡು "ರಾಮ— ರಾಮ" ಎಂದು ಒಂದು ಸಾರಿ ನುಡಿದು ಮತ್ತೇನನ್ನೂ ನುಡಿಯುವುದಕ್ಕೆ ಚೈತನ್ಯವಿಲ್ಲದೆ ಮೂರ್ಛಾಕ್ರಾಂತನಾದನು. ಅನಂತರ ಎಚ್ಚತ್ತು ಕಣ್ಣೀರು ಸುರಿಸುತ್ತ ತನ್ನ ಪ್ರಧಾನಿಯಾದ ಸುಮಂತ್ರನನ್ನು ಕುರಿತು "ಸುಮಂತ್ರ, ಉತ್ತಮಾಶ್ವಗಳಿಂದ ಸಜ್ಜುಮಾಡಿದ ರಥವನ್ನು ತೆಗೆದುಕೊಂಡುಬಂದು ಶ್ರೀರಾಮನನ್ನು ನಮ್ಮ ದೇಶಗಳನ್ನು ದಾಟಿಸಿ ಕಳುಹಿಸಿ ಬಾ. ಲೋಕದಲ್ಲಿ ತಂದೆತಾಯಿಗಳ ಮಾತನ್ನು ಮೀರಬಾರದೆಂದು ನಿಖಿಲ ಐಶ್ವರ್ಯವನ್ನೂ ಬಿಟ್ಟವರುಂಟೆ? ಆದ್ದರಿಂದ ಈತನು ಸದ್ಗುಣಶೀಲರಾದವರೆಲ್ಲರಲ್ಲಿಯೂ ಉತ್ತಮನು" ಎಂದು ನುಡಿದನು.

ಆ ಮಾತನ್ನು ಕೇಳಿ ಸುಮಂತ್ರನು ಶೀಘ್ರದಲ್ಲಿ ಉತ್ತಮಾಶ್ವಗಳಿಂದಲೂ ಚಿನ್ನದ ಮೇಲುಕಟ್ಟುಗಳಿಂದಲೂ ಅನೇಕ ಧ್ವಜಪತಾಕೆಗಳಿಂದಲೂ ಚಿನ್ನದ ಘಂಟೆಗಳಿಂದಲೂ ಅಲಂಕರಿಸಲ್ಪಟ್ಟ ರಥವನ್ನು ತಂದು ದಶರಥರಾಯನಿಗೆ ಕೈಮುಗಿದುಕೊಂಡು ಬಿನ್ನವಿಸಿದನು. ಆತನು ಸುಮಂತ್ರನನ್ನು ನೋಡಿ "ಎಲೈ ಪ್ರಧಾನನೇ, ನೀನು ಅಂತಃಕರಣಶುದ್ಧಿಯುಳ್ಳವನು; ದೇಶಕಾಲವರ್ತಮಾನಗಳನ್ನು ಬಲ್ಲವನು. ಆದರಿಂದ ಸೀತಾದೇವಿಗೆ ಹದಿನಾಲ್ಕುವರುಷಗಳವರೆಗೆ ಉಟ್ಟು ತೊಟ್ಟುಕೊಳ್ಳುವುದಕ್ಕಾಗಿ ಅನೇಕ ವಸ್ತ್ರಾಭರಣಗಳನ್ನು ತಂದುಕೊಡು" ಎಂದು ಅಜ್ಞಾಪಿಸಿದನು.

ಸುಮಂತ್ರನು ಶೀಘ್ರದಲ್ಲಿ ಬೊಕ್ಕಸದ ಮನೆಗೆ ಹೋಗಿ ಉತ್ತಮವಾದ ವಸ್ತ್ರಾಭರಣಗಳನ್ನು ತಂದು ಸೀತಾದೇವಿಗೆ ಸಮರ್ಪಿಸಲು ಆ ದೇವಿಯು ವಸ್ತ್ರಾಭರಣಗಳಿಂದ ತನ್ನ ಶೋಭನವಾದ ಸರ್ವಾಂಗವನ್ನು ಅಲಂಕರಿಸಿಕೊಂಡು ತನ್ನ ಭೂಷಣ ಕಾಂತಿಗಳಿಂದ ಉದಯಿಸಿ ಬರುತ್ತಿದ್ದ ಸೂರ್ಯನ ಕಾಂತಿಯು ಆಕಾಶವನ್ನು ಬೆಳಗಿಸುವಂತೆ ಆ ಅರಮನೆಯನ್ನು ಬೆಳಗಿಸುತ್ತಿದ್ದಳು ! ಆ ಸಮಯದಲ್ಲಿ ಕೌಸಲ್ಯಾದೇವಿಯು ಸೀತಾದೇವಿಯನ್ನು ಅಪ್ಪಿಕೊಂಡು ಶಿರಸ್ಸನ್ನು ಆಘ್ರಾಣಿಸಿ ಆ ದೇವಿಯನ್ನು ಕುರಿತು ಹೀಗೆ ನುಡಿದಳು: " ಸೀತಾದೇವಿ, ಲೋಕದಲ್ಲಿ ಪುರುಷರು ದುಷ್ಟಸ್ತ್ರೀಯನ್ನಾದರೂ ಸಂತವಿಡುವರು. ಅಂಥ ಪುರುಷರಿಗೆ ಒಂದು ಆಪತ್ತು ಬಂದಲ್ಲಿ ಸ್ತ್ರೀಯರು ಅವರಿಂದ ಮೊದಲು ಅನೇಕ ಸತ್ಕಾರಗಳನ್ನು ಪಡೆದವರಾದರೂ ಅವರನ್ನು ಲೆಕ್ಕಿಸರು. ಪುರುಷರಿಂದ ಅನೇಕ ಸನ್ಮಾನ ಸುಖಗಳನ್ನು ಪಡೆದವರಾದರೂ ಅಲ್ಪವಾದ ನೋವುಬಂದರೆ ಪುರುಷರನ್ನೇ ದೂಷಿಸುವರು. ಯಾವಾಗಲೂ ಅಸತ್ಯವನ್ನೇ ನುಡಿಯುವರು ; ತಮ್ಮ ಅಂತರಂಗವನ್ನು ತೋರಿಸರು. ಯುವತಿಯರು ಪಾಪಬುದ್ಧಿಯನ್ನೆಣಿಸಿ ಕ್ಷಣಮಾತ್ರದಲ್ಲಿ ವಿರಕ್ತೆಯರಾಗಿ ತೋರುವರು. ಸ್ತ್ರೀಯರು ತಮ್ಮ ಕುಲಶೀಲಗಳು, ವಿದ್ಯಾಪ್ರೌಢಿಮೆ, ತಮಗೆ ಕೊಟ್ಟ ವಸ್ತುಗಳು ಮೊದಲಾದವುಗಳನ್ನೂ ಗಣನೆ ಮಾಡರು. ಲೋಕದಲ್ಲಿ ಸ್ತ್ರೀಯರ ಮನಸ್ಸನ್ನು ಕಾಣುವುದಕ್ಕೆ ಆಗುವುದಿಲ್ಲ. ಅವರ ಅಂತಃಕರಣವು ಸ್ಥಿರವಲ್ಲ. ಇದು ಸ್ತ್ರೀಯರ ಸ್ವಭಾವ. ಪತಿವ್ರತಾಸ್ತ್ರೀಯರಿಗೆ ಸದ್ವರ್ತನ ಶಾಂತಗುಣ ಮಾನ ಮೊದಲಾದ ಸದ್ಗುಣಗಳಿರಬೇಕು. ಪತಿವ್ರತಾಸ್ತ್ರೀಯರಿಗೆ ತಮ್ಮ ಪುರುಷನೊಬ್ಬನೇ ಪರಮಾತ್ಮ ಸ್ವರೂಪನು. ನನ್ನ ಮಗನಾದ ಶ್ರೀರಾಮನೂ ನೀನೂ ವನವನ್ನೈದಿದಾಗ ಆತನನ್ನು ಅಗೌರವಿಸ ಬೇಡ. ಪತಿವ್ರತಾಸ್ತ್ರೀಯರಿಗೆ ತಮ್ಮ ಪುರುಷನು ಧನಿಕನಾದರೂ ದರಿದ್ರನಾದರೂ ದೇವತಾ ಸ್ವರೂಪನು " ಎಂದು ಬುದ್ಧಿಹೇಳಿದಳು.

ಧರ್ಮಾರ್ಥಸಾಧನವಾದ ಆ ಮಾತನ್ನು ಕೇಳಿ ಸೀತಾದೇವಿಯು ತನ್ನ ಅತ್ತೆಯಾದ ಕೌಸಲ್ಯಾದೇವಿಯ ಸಮೀಪದಲ್ಲಿ ಕೈಮುಗಿದುಕೊಂಡು ಆ ದೇವಿಯನ್ನು ಕುರಿತು ಹೀಗೆ ನುಡಿದಳು : " ದೇವಿ, ನೀನು ಆಜ್ಞಾಪಿಸಿದಹಾಗೆಯೇ ನಡೆಯುತ್ತೇನೆ. ಲೋಕದಲ್ಲಿ ಪತಿವ್ರತೆಯಾದವಳು ತನ್ನ ಪತಿ ಹೇಳಿದಂತೆ ಕೇಳಿಕೊಂಡಿರಬೇಕೆಂಬ ವೃತ್ತಾಂತವನ್ನು ಕೇಳಿದ್ದೇನೆ. ನಾನು ಯಾವಾಗಲಾದರೂ ದುರ್ಜನರಾದ ಸ್ತ್ರೀಯರೊಡನೆ ಕೂಡಿದ್ದವಳಲ್ಲ. ಚಂದ್ರನ ಕಾಂತಿ ಚಂದ್ರನನ್ನು ಬಿಡದಂತೆ ನಾನು ಧರ್ಮಮಾರ್ಗವನ್ನು ಬಿಡುವವಳಲ್ಲ. ನೂರುಮಂದಿ ಮಕ್ಕಳ ತಾಯಿಯಾದರೂ, ತಂತಿಯಿಲ್ಲದ ವೀಣೆಯು ಧ್ವನಿಗೈಯದಂತೆ, ಗಾಲಿಯಿಲ್ಲದ ರಥವು ನಡೆಯದಂತೆ ಪತಿಯಿಲ್ಲದ ಸ್ತ್ರೀಯು ಯಾವ ಸುಖವನ್ನೂ ಪಡೆಯಲಾರಳು. ಲೋಕದಲ್ಲಿ ಸ್ತ್ರೀಯರಿಗೆ ತಂದೆಯು ಮಿತವಾಗಿ ಕೊಡುವನು. ತಾಯಿ ಮಿತವಾಗಿ ಕೊಡುವಳು. ಮಗನು ಕಟ್ಟಳೆ ಮಾಡಿದಷ್ಟನ್ನೇ ಕೊಡುವನು. ಆದರೆ ಪತಿಯು ಮಿತಿಯಿಲ್ಲದೆ ಕೊಡುವನು. ಆದಕಾರಣ ಸ್ತ್ರೀಯಾದವಳು ಅಪರಿಮಿತವಾದ ವಸ್ತುಗಳನ್ನು ಕೊಡುವ ಪತಿಯನ್ನು ಪೂಜೆಮಾಡಬೇಕು ಎಂಬ ಪತಿವ್ರತಾಧರ್ಮವನ್ನು ಕೇಳಿದ್ದೇನೆ. ಲೋಕದಲ್ಲಿ ಸ್ತ್ರೀಯರಿಗೆ ಪತಿಯೇ ದೇವತಾಸ್ವರೂಪನು. ಈ ಅರ್ಥವನ್ನು ಬಲ್ಲ ನಾನು ನನ್ನ ಇಷ್ಟದೇವತಾ ಸ್ವರೂಪನಾದ ಪತಿಯನ್ನು ಏಕೆ ಅವಮನ್ನಣೆ ಮಾಡುವೆನು ! " ಎಂದು ನುಡಿದಳು.

ಆ ಮಾತನ್ನು ಕೇಳಿ ಕೌಸಲ್ಯಾದೇವಿಯು ಮನಸ್ಸಿನಲ್ಲಿ ಹರ್ಷಪಟ್ಟಳು. ಅವಳು ಶುದ್ಧಾಂತಃ ಕರಣವುಳ್ಳ ಸೀತಾದೇವಿಯೂ ಶ್ರೀರಾಮನೂ ವನಕ್ಕೆ ತೆರಳುವುದನ್ನು ನೋಡಿ ಬಹುದುಃಖದಿಂದಲೂ ಸೀತಾದೇವಿಯ ಧರ್ಮವಚನದಿಂದ ಉಂಟಾದ ಸಂತೋಷದಿಂದಲೂ ಕಣ್ಣೀರು ಹರಿಯಿಸುತ್ತಿರುವ

ಸಮಯದಲ್ಲಿ ಶ್ರೀರಾಮನು ಕೌಸಲ್ಯಾದೇವಿಯ ಸಮೀಪಕ್ಕೆ ಬಂದು ಕೈಮುಗಿದುಕೊಂಡು "ಅಮ್ಮ, ನೀನು ದುಃಖಾಕ್ರಾಂತೆಯಾಗಿದ್ದರೂ ನನ್ನ ತಂದೆಯಾದ ದಶರಥರಾಯನನ್ನು ಸತ್ಕರಿಸು. ನೀನು ಮಲಗಿದ್ದ ಹಾಗೆಯೇ ಸ್ವಪ್ನವನ್ನು ಕಂಡಂತೆ ಹದಿನಾಲ್ಕುವರುಷಗಳು ಕಳೆದು ಹೋಗುವುವು ಮತ್ತು ಸೀತಾಲಕ್ಷ್ಮಣಸಮೇತನಾಗಿ ತಿರುಗಿ ಬರುವ ನನ್ನನ್ನು ಶೀಘ್ರದಲ್ಲಿಯೇ ಕಾಣುವೆ" ಎಂದು ಹೇಳಿದನು. ಆಮೇಲೆ ದಶರಥರಾಯನ ಹೆಂಡತಿಯರೂ ತನಗೆ ತಾಯಂದಿರೂ ಆದ ನಾನೂರ ಐವತ್ತು ಮಂದಿಗೂ ನಮಸ್ಕಾರವನ್ನು ಮಾಡಿ "ತಾಯಿಗಳಿರಾ, ನಾನು ಅಜ್ಞಾನದಿಂದ ನಿಮಗೆ ಏನಾದರೂ ಅಪರಾಧವನ್ನು ಮಾಡಿದ್ದರೆ ಕ್ಷಮಿಸಬೇಕು. ನನಗೆ ಆಶೀರ್ವಾದಗಳನ್ನು ಮಾಡಿ ಕಳುಹಿಸಿ" ಎಂದು ನುಡಿದನು.

ಆ ಮಾತನ್ನು ಕೇಳಿ ದಶರಥರಾಯನ ಸಕಲ ಅಂತಃಪುರಸ್ತ್ರೀಯರೂ ಶೋಕಸಂತಾಪದಿಂದ ಚೈತನ್ಯಗುಂದಿದವರಾಗಿ "ಶ್ರೀರಾಮ, ನೀನು ವನದಲ್ಲಿ ಸುಖವಾಗಿ ಹದಿನಾಲ್ಕುವರುಷಗಳನ್ನು ಕಳೆದು ಅಯೋಧ್ಯಾಪಟ್ಟಣಕ್ಕೆ ತಿರುಗಿ ಬಂದು ರಾಜ್ಯಪರಿಪಾಲನವನ್ನು ಮಾಡು!" ಎಂದು ನುಡಿದರು.

ಆ ಸಮಯದಲ್ಲಿ ಮೊದಲು ಪಟಹ ನಿಸ್ಸಾಳ ಭೇರಿ ಮುರಜ ಮೊದಲಾದ ವಾದ್ಯಧ್ವನಿಗಳಿಂದ ಘೋರಿಡುತ್ತಿದ್ದ ದಶರಥರಾಯನ ಅರಮನೆಯು, ಶ್ರೀರಾಮನು ವನಕ್ಕೆ ಹೋಗುವನೆಂಬ ದುಃಖಾತಿಶಯದಿಂದ ಗೋಳಿಡುತ್ತಿದ್ದ ಜನರ ರೋದನಧ್ವನಿಯಿಂದ ತುಂಬಿಹೋಯಿತು.



## ೪೦ ನೆಯ ಅಧ್ಯಾಯ

## ಶ್ರೀರಾಮನು ವನಕ್ಕೆ ಹೊರಟಿದ್ದು

ಆಮೇಲೆ ರಾಮಲಕ್ಷ್ಮಣರು ಸೀತಾದೇವಿಯೊಡನೆ ಕೈಮುಗಿದುಕೊಂಡು ದಶರಥರಾಯನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಬೀಳ್ಕೊಂಡು ಸುಮಿತ್ರಾದೇವಿಗೆ ನಮಸ್ಕಾರವನ್ನು ಮಾಡಿದರು. ಆ ದೇವಿಯು ಕಣ್ಣೀರು ತುಂಬಿಕೊಂಡು ತನ್ನ ಮಗನಾದ ಲಕ್ಷ್ಮಣನ ಶಿರಸ್ಸನ್ನು ಆಘ್ರಾಣಿಸಿ "ಮಗನೆ, ಬ್ರಹ್ಮದೇವನು ನಿನ್ನನ್ನು ನಿನ್ನ ಅಣ್ಣನೊಡನೆ ವನವಾಸವನ್ನು ಮಾಡುವುದಕ್ಕಾಗಿಯೇ ಸೃಷ್ಟಿಸಿದನು, ಆದಕಾರಣ ನೀನು ವನಕ್ಕೆ ಹೋಗು. ಶ್ರೀರಾಮನಿಗೆ ದ್ರೋಹವನ್ನು ಮಾಡಬೇಡ. ದುಃಖಪಟ್ಟವನಾದರೂ ದರಿದ್ರನಾದರೂ ಐಶ್ವರ್ಯವಂತನಾದರೂ ಆತನೇ ನಿನಗೆ ಗತಿ. ಲೋಕದಲ್ಲಿ ಹಿರಿಯಣ್ಣನ ಮಾತನ್ನು ಮೀರದಿರುವುದೇ ಸತ್ಪುರುಷರ ಮಾರ್ಗ. ದಾನ ಯಜ್ಞ ಸಮರಗಳಲ್ಲಿ ಹಿಮ್ಮೆಟ್ಟದೆ ಶತ್ರುಸಂಹಾರವನ್ನು ಮಾಡುವುದು ನಿಮ್ಮ ಕುಲಧರ್ಮ. ನೀನು ಯಾವಾಗಲೂ ಶ್ರೀರಾಮನ ಸೇವೆಯನ್ನೇ ಮಾಡಿಕೊಂಡಿರು. ಆತನ ಸಂಗಡ ವನಕ್ಕೆ ಹೋಗು. ಎಲೈ ಮಗನೆ, ಶ್ರೀರಾಮನನ್ನು ದಶರಥರಾಯನೆಂದೇ ತಿಳಿ. ಸೀತಾದೇವಿಯನ್ನು ನಾನೆಂದು ತಿಳಿ. ಅರಣ್ಯವನ್ನು ಅಯೋಧ್ಯಾಪಟ್ಟಣವೆಂದು ತಿಳಿ. ಸುಖವಾಗಿ ಹೋಗಿ ಬಾ" ಎಂದು ಹೇಳಿದಳು.

ಅನಂತರ ಪ್ರಧಾನಿಯಾದ ಸುಮಂತ್ರನು ಶ್ರೀರಾಮನ ಸಮೀಪಕ್ಕೆ ಬಂದು ಕೈಮುಗಿದುಕೊಂಡು ದೇವೇಂದ್ರನ ಸಾರಥಿಯಾದ ಮಾತಲಿಯು ದೇವೇಂದ್ರನಿಗೆ ಬಿನ್ನಹಮಾಡುವಂತೆ ಅತ್ಯಂತ ವಿನಯದಿಂದ "ಎಲೈ ಕೀರ್ತಿವಂತನಾದ ರಾಜಪುತ್ರ, ಶ್ರೀರಾಮ, ರಥಾರೂಢನಾಗು. ಶೀಘ್ರದಲ್ಲಿ




ಅರಮನೆಯಿಂದ ಅರಣ್ಯಕ್ಕೆ

ನಿನ್ನನ್ನು ವನಕ್ಕೆ ಕರೆದುಕೊಂಡುಹೋಗಿ ನೀನು ಯಾವ ಸ್ಥಳದಲ್ಲಿ ಇರಬಯಸುತ್ತೀಯೋ ಆ ಸ್ಥಳದಲ್ಲಿ ಬಿಡುತ್ತೇನೆ. ನಿನ್ನ ತಾಯಿಯಾದ ಕೈಕೇಯಿದೇವಿಯು ಹದಿನಾಲ್ಕುವರುಷಗಳು ವನವಾಸವನ್ನು ಮಾಡಹೇಳಿ ನಿಯಮಿಸಿದ ಪ್ರಕಾರದಲ್ಲಿ ವನವಾಸವನ್ನು ಪ್ರಾರಂಭಿಸು" ಎಂದು ಬಿನ್ನವಿಸಿದನು. ಸೀತಾದೇವಿಯು ಹದಿನಾಲ್ಕುವರುಷಗಳವರೆಗೆ ಉಡಲು ತೊಡಲು ಸಾಕಾಗುವಷ್ಟು ವಸ್ತ್ರಾಭರಣಗಳನ್ನು ತೆಗೆದುಕೊಂಡು ರಥಾರೋಹಣವನ್ನು ಮಾಡಿದಳು. ಪ್ರಧಾನಿಯೂ ಸಾರಥಿಯೂ ಆದ ಸುಮಂತ್ರನು ಶ್ರೀರಾಮಲಕ್ಷ್ಮಣರಿಗೆ ಅನೇಕ ಅಭೇದ್ಯವಾದ ಉಕ್ಕಿನ ಕವಚಗಳನ್ನೂ ದಿವ್ಯವಾದ ಆಯುಧಗಳನ್ನೂ ಹರಿಗೆಗಳನ್ನೂ ಕೊಟ್ಟನು. ಆಮೇಲೆ ಸುವರ್ಣಮಯವಾದ ಅನೇಕ ಕಿರುಗೆಜ್ಜೆಗಳಿಂದಲೂ ರತ್ನಗಳಿಂದಲೂ ಅಲಂಕರಿಸಲ್ಪಟ್ಟು ಯಜ್ಞಪುರುಷನಹಾಗೆ ದೇದೀಪ್ಯಮಾನವಾದ ದಶರಥರಾಯನ ರಥದಲ್ಲಿ ರಾಮಲಕ್ಷ್ಮಣರೂ ಸೀತಾದೇವಿಯೂ ಆರೋಹಣಮಾಡಿದ್ದನ್ನು ಕಂಡು ಸುಮಂತ್ರನು ಆ ರಥಕ್ಕೆ ಕಟ್ಟಿದ್ದ ವಾಯುವೇಗವುಳ್ಳ ಕುದುರೆಗಳನ್ನು ಚುರುಕುಗೊಳಿಸಿ ವೇಗದಿಂದ ರಥವನ್ನು ನಡೆಯಿಸಿದನು. ಶ್ರೀರಾಮನು ಅಯೋಧ್ಯಾಪಟ್ಟಣವನ್ನು ಬಿಟ್ಟು ವನಕ್ಕೆ ತೆರಳುವ ಸಮಯದಲ್ಲಿ ಆ ಪಟ್ಟಣದಲ್ಲಿದ್ದ ಪುರಜನರೆಲ್ಲರೂ ಆತನ ವಿಯೋಗದುಃಖವನ್ನು ತಾಳಲಾರದೆ ಅಲ್ಲಲ್ಲಿ ಮೂರ್ಛೆಹೋಗುತ್ತಿದ್ದರು. ಮುಂದುಗೆಟ್ಟ ಜನಸಮೂಹದ ರೋದನದಿಂದಲೂ ಮದದಿಂದ ಸೊಕ್ಕಿ ಕೋಪಕೆರಳಿದ ಗಜಗಳ ಘೀಂಕಾರಗಳಿಂದಲೂ ಕುದುರೆಗಳ ಹೇಷಿತಧ್ವನಿಗಳಿಂದಲೂ ಮಹಾ ಘೋರವಾದ ಧ್ವನಿಯುಂಟಾಯಿತು! ಆ ಧ್ವನಿಯಿಂದ ಆ ಪಟ್ಟಣದಲ್ಲಿದ್ದ ಬಾಲಕರಿಗೂ ವೃದ್ಧರಿಗೂ ಮಹಾಬಾಧೆಯುಂಟಾಯಿತು. ಈ ಪ್ರಕಾರದಲ್ಲಿ ಶ್ರೀರಾಮನು ರಥಾರೂಢನಾಗಿ ಹೋಗುತ್ತಿರಲು ಅಯೋಧ್ಯಾಪಟ್ಟಣದಲ್ಲಿದ್ದ ಜನರು ಆತನನ್ನೇ ನೋಡುತ್ತ ಪಾರ್ಶ್ವಗಳಲ್ಲಿಯೂ ಹಿಂದುಗಡೆಯಲ್ಲಿಯೂ ಕಣ್ಣೀರನ್ನು ಸುರಿಸುತ್ತ ಬಿಸಿಲಿನಿಂದ ಕಂಗೆಟ್ಟ ಜನರು ಉದಕವಿದ್ದೆಡೆಗೆ ಹೋಗುವಂತೆ ರಥದ ಹಿಂದೆ ಓಡುತ್ತ ಹೀಗೆಂದರು: "ಸುಮಂತ್ರ, ರಥವನ್ನು ಮೆಲ್ಲಗೆ ನಡೆಯಿಸು. ಶ್ರೀರಾಮನ ಮುಖವನ್ನು ನೋಡುವೆವು. ಇನ್ನು ನಮಗೆ ಈತನ ದರ್ಶನವು ಘಟಿಸಲಾರದು. ಅಕಟಕಟಾ! ಈತನ ತಾಯಿಯಾದ ಕೌಸಲ್ಯಾದೇವಿಯ ಎದೆಯು ಉಕ್ಕಿನ ಎದೆಯಾಗಿರಬೇಕು. ಸಾಕ್ಷಾತ್ ದೇವತಾಸ್ವರೂಪನಾದ ಶ್ರೀರಾಮನು ವನಕ್ಕೆ ತೆರಳುತ್ತಿದ್ದರೂ ಆ ದೇವಿಯ ಎದೆಯು ಒಡೆಯದೆ ಇದೆ. ಸೀತಾದೇವಿಯು ತನ್ನ ಪತಿಯಾದ ಶ್ರೀರಾಮನ ನೆಳಲಂತೆ ಆತನ ಸಂಗಡ ತೆರಳುವುದರಿಂದ ಕೃತಾರ್ಥಳಾದಳು. ಸೂರ್ಯನ ಪ್ರಭೆಯು ಮಹಾಮೇರುಪರ್ವತವನ್ನು ಬಿಟ್ಟು ತೊಲಗದಂತೆ ಈ ದೇವಿಯು ಧರ್ಮಮಾರ್ಗವನ್ನು ಬಿಡುವವಳಲ್ಲ! ಲಕ್ಷ್ಮಣ, ಸಾಕ್ಷಾತ್ ದೇವತಾಸ್ವರೂಪನಾಗಿ ಸಮಸ್ತ ಜನರಲ್ಲಿಯೂ ವಿನಯದಿಂದ ಪ್ರಿಯೋಕ್ತಿಗಳನ್ನೇ ನುಡಿಯುವಂಥ ನಿನ್ನ ಅಣ್ಣನಾದ ಶ್ರೀರಾಮನನ್ನು ಅನವರತ ಸೇವೆಯನ್ನು ಮಾಡುವುದರಿಂದ ನೀನು ಕೃತಾರ್ಥನಾಗುವೆ. ಆತನ ಸೇವೆಯನ್ನು ಮಾಡುವುದೇ ನಿನಗೆ ಸರ್ವಕಾರ್ಯಸಿದ್ಧಿಯನ್ನೂ ಮಹತ್ತಾದ ಶ್ರೇಯಸ್ಸನ್ನೂ ಉಂಟುಮಾಡುವುದು. ಆತನನ್ನು ಬಿಡದೆ ಹಿಂದೆ ನಡೆಯುವುದೇ ನಿನಗೆ ಸ್ವರ್ಗಸಾಧನ!" ಎಂದು ನುಡಿಯುತ್ತ ಶ್ರೀರಾಮನ ಹಿಂದೆ ಹೋಗುತ್ತ ಆತನ ವಿಯೋಗದಿಂದುಂಟಾದ ದುಃಖಾತಿಶಯದಿಂದ ಪ್ರವಾಹವಾಗಿ ಸುರಿಯುತ್ತಿದ್ದ ಕಣ್ಣೀರನ್ನು ನಿಲ್ಲಿಸುವುದಕ್ಕೆ ಸಮರ್ಥರಲ್ಲದಿದ್ದರು.

ಆಮೇಲೆ ದಶರಥರಾಯನು ಅತ್ಯಂತ ದೀನಚಿತ್ತನಾಗಿ ಶ್ರೀರಾಮನನ್ನು ನೋಡಬೇಕೆಂದು ತನ್ನ ಸ್ತ್ರೀಯರನ್ನು ಕೂಡಿಕೊಂಡು ಅರಮನೆಯಿಂದ ಹೊರಕ್ಕೆ ಬಂದನು. ಅರಣ್ಯದಲ್ಲಿ ಗಂಡಾನೆಯು ಬಲೆಯಲ್ಲಿ ಸಿಕ್ಕಲು ಹೆಣ್ಣಾನೆಗಳು ದೈನ್ಯಸ್ವರದಿಂದ ಗೋಳಿಡುವಂತೆ ಅವನ ಮುಂದುಗಡೆಯಲ್ಲಿ ಬರುತ್ತಿದ್ದ ಸ್ತ್ರೀಯರು ಗೋಳಾಡುತ್ತಿದ್ದರು. ಶ್ರೀರಾಮನು ಸಾರಥಿಯಾದ ಸುಮಂತ್ರನಿಗೆ

ರಥವನ್ನು ಬೇಗ ನಡೆಯಿಸಬೇಕೆಂದು ನುಡಿದನು. ಅದನ್ನು ಕೇಳಿ ಆತನ ಹಿಂದೆ ಹೋಗುತಿದ್ದ ಜನಗಳು ರಥವನ್ನು ನಿಲ್ಲಿಸಬೇಕೆಂದು ನುಡಿದರು ! ಆ ಸಾರಥಿಯು ಇತ್ತಂಡದವರ ಮಾತನ್ನೂ ಮೀರಲಾರದೆ ಮಧ್ಯಸ್ಥನಾಗಿ ರಥವನ್ನು ನಡೆಯಿಸಿದನು. ಆಗ ಎರಡುಪಾರ್ಶ್ವಗಳಲ್ಲಿಯೂ ಹಿಂದುಗಡೆಯಲ್ಲಿಯೂ ಬರುತ್ತಿದ್ದ ಜನರ ಕಂಬನಿಯ ಧಾರೆಗಳಿಂದ ಮಾರ್ಗದಲ್ಲಿದ್ದ ಧೂಳು ಅಡಗಿತು. ಆ ಪುರಜನರ ಕಂಬನಿಯ ಧಾರೆಗಳಿಂದ ರಸ್ತೆಗಳೆಲ್ಲ ಕೆಸರಾಯಿತು. ಸಮಸ್ತ ಜನರ ಹಾಹಾಕಾರದಿಂದ ಅಯೋಧ್ಯಾಪಟ್ಟಣವು ಕಂಗೆಡುತ್ತಿತ್ತು. ಕೊಳದಲ್ಲಿ ಮೀನುಗಳ ಹೊಯ್ಲುಗಳಿಂದ ಚಲಿಸುವ ತಾವರೆಗಳು ನೀರನ್ನು ಬಿಡುವಂತೆ ಶ್ರೀರಾಮನ ಹಿಂದೆ ಓಡಿಬರುವ ಪ್ರಯಾಸದಿಂದ ಸ್ತ್ರೀಯರ ಕಣ್ಣುಗಳಿಂದ ನೀರು ಸುರಿಯುತ್ತಿತ್ತು. ಈ ರೀತಿಯಲ್ಲಿ ಕಂಗೆಟ್ಟ ಜನರುಳ್ಳ ಅಯೋಧ್ಯಾಪಟ್ಟಣವನ್ನು ಕಂಡು ದಶರಥರಾಯನು ಹಮ್ಮೈಸಿ ಬುಡ ಕತ್ತರಿಸಲ್ಪಟ್ಟ ಮರವು ಬೀಳುವಂತೆ ದುಃಖಿತನಾಗಿ ಮೂರ್ಛೆಬಿದ್ದನು. ಶ್ರೀರಾಮನ ಹಿಂದುಗಡೆಯಲ್ಲಿ ಬರುತ್ತಿದ್ದ ಜನರು ಕೋಲಾಹಲಧ್ವನಿಯನ್ನು ಮಾಡುತ್ತಾ ದುಃಖಾತಿಶಯದಿಂದ ಕಂಗೆಟ್ಟ ದಶರಥರಾಯನನ್ನು ಕಂಡು " ರಾಮ ರಾಮ " ಎಂದು ಶೋಕಿಸಿದರು. ಶ್ರೀರಾಮನು, ಪುತ್ರವಿಯೋಗದಿಂದ ಕಂಗೆಟ್ಟು ಮುಂದುಗಾಣದೆ ರೋದನ ಮಾಡಿಕೊಂಡು ಬರುತ್ತಿದ್ದ ತಾಯಿತಂದೆಗಳನ್ನು ಹಿಂದೆ ತಿರುಗಿನೋಡಿ ಬಲೆಯಲ್ಲಿ ಸಿಕ್ಕಿದ ಹುಲ್ಲೆಯ ಮರಿಯು ತನ್ನ ತಾಯಿಯನ್ನು ಕಂಡು ದುಃಖಿಸುವಂತೆ ಧರ್ಮವೆಂಬ ಬಲೆಗೆ ಸಿಕ್ಕಿದವನಾದ್ದರಿಂದ ಮುಂದುಗಾಣದೆ ದುಃಖಿಸುತ್ತಾ ತಾಯಿತಂದೆಗಳ ಶೋಕವನ್ನು ನೋಡಲಾರದೆ ತನ್ನ ಸಾರಥಿಯಾದ ಸುಮಂತ್ರನನ್ನು ಶೀಘ್ರವಾಗಿ ರಥವನ್ನು ನಡೆಯಿಸುವಂತೆ ಆಜ್ಞೆಮಾಡಿದನು. ಅಂಕುಶದ ಪೆಟ್ಟಿನಿಂದ ಕುಂಭಸ್ಥಳದಲ್ಲಿ ನೋವು ಪಡೆದ ಆನೆಯಂತೆ ಅವರ ದುಃಖವನ್ನು ನೋಡಿ ತಡೆಯಲಾರದೆ ತೆರಳುತ್ತಿದ್ದನು. ಕರುವನ್ನು ಮನೆಯಲ್ಲಿ ಕಟ್ಟಿ ಹಸುವನ್ನು ವನಕ್ಕೆ ಹೊಡೆದರೆ ಆ ಹಸುವು ಕರುವನ್ನು ನೆನೆಸಿಕೊಂಡು ಮನೆಗೆ ಓಡಿಬರುವಂತೆ ಕೌಸಲ್ಯಾದೇವಿಯು " ಹಾ ರಾಮ ! ಹಾ ಲಕ್ಷ್ಮಣ ! ಹಾ ಸೀತಾದೇವಿ ! " ಎಂದು ಹಂಬಲಿಸುತ್ತ ಕಣ್ಣೀರುಬಿಡುತ್ತ ಅವರ ಬೆನ್ನುಹಿಡಿದು ಅತಿಪ್ರಯಾಸ ದಿಂದ ಓಡಿ ಓಡಿ ಬರುತ್ತಿದ್ದಳು. ಶ್ರೀರಾಮನು ಅದನ್ನು ಕಂಡೂ ದಶರಥರಾಯನು ಸುಮಂತ್ರನನ್ನು ಕರೆದು ರಥವನ್ನು ನಿಲ್ಲಿಸಬೇಕೆಂದು ಕೂಗುವುದನ್ನು ಕೇಳಿಯೂ ಶೀಘ್ರವಾಗಿ ರಥವನ್ನು ನಡೆಯಿಸಲು ಆಜ್ಞಾಪಿಸಿದನು. ಸುಮಂತ್ರನು ಈ ರೀತಿಯಲ್ಲಿ ದಶರಥ ಶ್ರೀರಾಮರುಗಳ ಮಾತುಗಳಲ್ಲಿ ಯಾರ ಮಾತನ್ನು ಅಂಗೀಕರಿಸುವುದೆಂದು ವ್ಯಾಕುಲಚಿತ್ತನಾಗಿ ಚಕ್ರಗಳ ಮಧ್ಯದಲ್ಲಿ ಸಿಕ್ಕಿದಂತೆ ಚಿಂತಾಕ್ರಾಂತ ನಾದನು. ಶ್ರೀರಾಮನು ಆತನನ್ನು ಕುರಿತು " ಸುಮಂತ್ರ, ದಶರಥರಾಯನು ಹಿಂದೆ ಬರುವ ವೃತ್ತಾಂತವನ್ನು ತಿಳಿಯದವನ ರೀತಿಯಲ್ಲಿ ರಥವನ್ನು ನಡೆಯಿಸು " ಎಂದು ನುಡಿದನು. ಸುಮಂತ್ರನು ರಥವನ್ನು ಅತಿಶೀಘ್ರವಾಗಿ ನಡೆಯಿಸಿದನು. ಹಿಂದೆ ಬರುತ್ತಿದ್ದ ಪ್ರಜೆಗಳು ರಾಮನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಹಿಂದಿರುಗಿದರು. ಆದರೆ ಅವರ ಮನಸ್ಸು ಹಿಂದಿರುಗಲಿಲ್ಲ. ಆ ಸಮಯದಲ್ಲಿ ದಶರಥರಾಯನ ಪ್ರಧಾನಿಗಳು ಆತನನ್ನು ಕುರಿತು " ಮಹಾರಾಜ, ಒಂದು ಕಾರ್ಯಕ್ಕಾಗಿ ಹೋಗಿ ಶೀಘ್ರದಲ್ಲಿ ತಿರುಗಿ ಬರುವವರನ್ನು ಬಹುದೂರದವರೆಗೆ ಹೋಗಿ ಕಳುಹಿಸಬಾರದು " ಎಂದು ಹೇಳಿದರು. ಆ ಮಾತನ್ನು ಕೇಳಿ ದಶರಥರಾಯನ ಶರೀರವೆಲ್ಲವೂ ಬೆವರಿಟ್ಟು ಕಾಂತಿಗುಂದಿತು. ಶ್ರೀರಾಮನು ವನಕ್ಕೆ ಪರದೇಸಿಯಹಾಗೆ ಹೋದನೆಂದು ವ್ಯಥೆಪಡುತ್ತ ತನ್ನ ಸ್ತ್ರೀಯರೊಡನೆ ಶ್ರೀರಾಮನನ್ನು ತಿರುಗಿ ತಿರುಗಿ ನೋಡುತ್ತ ಅರಮನೆಗೆ ಹೋದನು.



## ೪೧ ನೆಯ ಅಧ್ಯಾಯ

## ಅಯೋಧ್ಯಾಪಟ್ಟಣದಲ್ಲಿ ಅಪಶಕುನಗಳುಂಟಾದದ್ದು

ಪುರುಷೋತ್ತಮನಾದ ಶ್ರೀರಾಮನು ಕೈಮುಗಿದುಕೊಂಡು ವನಕ್ಕೆ ತೆರಳಿದಮೇಲೆ ಅಂತಃಪುರದಲ್ಲಿದ್ದ ಸ್ತ್ರೀಯರು ಒಬ್ಬರಿಗೊಬ್ಬರು "ಅಕಟಕಟಾ ! ತಪಸ್ವಿವೇಷವನ್ನು ಧರಿಸಿಕೊಂಡು ವನಕ್ಕೆ ತೆರಳುವ ಶ್ರೀರಾಮನಿಗೆ ಗತಿಯಾವುದು ! ಆತನಿಗೆ ರಕ್ಷಕರಾರು ! ಆತನು ಎಲ್ಲಿಗೆ ಹೋಗುವನು ! ಆತನು ತನ್ನನ್ನು ಬೈದರೂ ಒಬ್ಬರಮೇಲೆ ಕೋಪಿಸುವವನಲ್ಲ. ಒಬ್ಬರಿಗೆ ಕೋಪಹುಟ್ಟುವ ವಚನಗಳನ್ನು ನುಡಿಯುವವನಲ್ಲ. ಯಾರಾದರೂ ಅಜ್ಞಾನದಿಂದ ಕೋಪಿಸಿಕೊಂಡಿದ್ದರೆ ಅವರ ಸುಖದುಃಖಗಳನ್ನು ತನ್ನದಾಗಿ ಭಾವಿಸಿ ಕೋಪಶಾಂತಿಯನ್ನು ಮಾಡುವನು. ಆ ಮಹಾತ್ಮನು ಕೌಸಲ್ಯಾದೇವಿಯಲ್ಲಿ ಹೇಗೆ ವಿಶ್ವಾಸಭಕ್ತಿಗಳಿಂದ ನಡೆಯುವನೋ ಹಾಗೆಯೇ ನಮ್ಮಲ್ಲಿಯೂ ವಿಶ್ವಾಸಭಕ್ತಿಗಳಿಂದ ನಡೆಯುವನು. ಕೈಕೇಯಿದೇವಿಯ ಮಾತಿಗೆ ಮರುಳಾದ ದಶರಥರಾಯನು ಅಂಥವನನ್ನು ವನಕ್ಕೆ ಕಳುಹಿಸಿದನು. ಶ್ರೀರಾಮನು ಸಮಸ್ತ ಲೋಕಗಳಿಗೂ ಸಮಸ್ತ ಜನರಿಗೂ ರಕ್ಷಕನು. ಅಯ್ಯೋ ! ದಶರಥರಾಯನು ಸತ್ಯಸಂಧನೂ ಸಮಸ್ತ ಪ್ರಾಣಿಗಳಿಗೂ ಲೋಕಕ್ಕೂ ಪ್ರಿಯವನ್ನೇ ಮಾಡುವವನೂ ಅತ್ಯಂತ ಕೀರ್ತಿವಂತನೂ ಆದ ಶ್ರೀರಾಮನನ್ನು ವನಕ್ಕೆ ಕಳುಹಿಸಿ ಪುತ್ರವಿಯೋಗದುಃಖದಿಂದ ಚೈತನ್ಯಗುಂದಿದನು" ಎಂದು ನುಡಿಯುತ್ತ ಕರುವನ್ನು ಕಾಣದ ಹಸುವಿನಂತೆ ಗೋಳಾಡುತ್ತಾ ಅಳುತ್ತಿದ್ದರು.

ಆ ಸ್ತ್ರೀಯರ ರೋದನಧ್ವನಿಯನ್ನು ಕೇಳಿ ದಶರಥರಾಯನು ಅತ್ಯಂತ ದುಃಖಿತನಾದನು. ಗೃಹಸ್ಥರು ಅಡಿಗೆಯನ್ನೂ ಮಾಡಲಿಲ್ಲ. ಸೂರ್ಯನೂ ಅಸ್ತಂಗತನಾದನು. ಅಯೋಧ್ಯಾ ಪಟ್ಟಣದಲ್ಲಿ ಅನೇಕ ಅದ್ಭುತಗಳಾದವು ! ಆನೆಗಳು ಕವಳಗಳನ್ನು ಬಿಟ್ಟವು. ಹಸುಗಳು ಕರುಗಳಿಗೆ ಹಾಲು ಕುಡಿಯಿಸಲಿಲ್ಲ. ಅಂತರಿಕ್ಷಮಾರ್ಗದಲ್ಲಿ ತ್ರಿಶಂಕು ಎಂಬ ನಕ್ಷತ್ರವೂ ಮಂಗಳನೂ ಬುಧನೂ ಬೃಹಸ್ಪತಿಯೂ ಚಂದ್ರನಿರುವ ರಾಶಿಗೆ ಬರುತ್ತಿದ್ದುವು. ಸಮಸ್ತ ನಕ್ಷತ್ರಗಳೂ ಆದಿತ್ಯಾದಿ ಗ್ರಹಗಳೂ ಕಾಂತಿಗುಂದಿದುವು. ವಿಶಾಖಾನಕ್ಷತ್ರಗಳು ಧೂಮಸಹಿತವಾಗಿ ಭಯಂಕರವಾಗಿ ತೋರುತ್ತಿದ್ದುವು. ಪ್ರಳಯಕಾಲದ ಚಂಡವಾಯುವಿನ ವೇಗದಿಂದ ಸಮುದ್ರವು ಅಲ್ಲೋಲ ಕಲ್ಲೋಲವಾಗುವಂತೆ ಅಯೋಧ್ಯಾಪಟ್ಟಣವು ತಲ್ಲಣಿಸಿತು. ಸಮಸ್ತ ದಿಕ್ಕುಗಳೂ ಅಂಧಕಾರಾಕ್ರಾಂತವಾದವು. ಇದ್ದಕ್ಕಿದ್ದ ಹಾಗೆ ಅಯೋಧ್ಯಾಪಟ್ಟಣದಲ್ಲಿದ್ದ ಜನರು ದೈನ್ಯಭಾವವನ್ನೈದಿದರು. ಆಹಾರ ಕ್ರೀಡೆಗಳಲ್ಲಿ ಒಬ್ಬರೂ ಮನಸ್ಸಿಡಲಿಲ್ಲ. ಸಮಸ್ತ ಜನರೂ ಶೋಕಾಗ್ನಿಯಿಂದ ಪರಿತಪಿಸಿ ಮರುಳಾಗಿದ್ದರು. ಅಯೋಧ್ಯಾಪಟ್ಟಣದ ಸಮಸ್ತ ಜನರೂ ಶ್ರೀರಾಮನನ್ನು ನೆನೆದು ಕಣ್ಣೀರನ್ನು ಬಿಡುತ್ತ ವ್ಯಾಕುಲಚಿತ್ತರಾಗಿದ್ದರು. ಒಬ್ಬರಾದರೂ ಸಂತೋಷಚಿತ್ತರಾಗಿರಲಿಲ್ಲ. ತಂಗಾಳಿಯು ಬೀಸಲಿಲ್ಲ. ಚಂದ್ರನೂ ತಂಪಾಗಿ ತೋರಲಿಲ್ಲ. ಜಗತ್ತೆಲ್ಲವೂ ವ್ಯಾಕುಲವಾಗಿಯೇ ಇತ್ತು. ಸ್ತ್ರೀಯರು ಪುರುಷರನ್ನು ಬಯಸಲಿಲ್ಲ. ಪುರುಷರು ಸ್ತ್ರೀಯರನ್ನು ಬಯಸಲಿಲ್ಲ. ಅಣ್ಣತಮ್ಮಂದಿರು ಒಬ್ಬರೊಡನೊಬ್ಬರೂ ಮಾತನಾಡಲಿಲ್ಲ. ಸಮಸ್ತ ಜಗತ್ತೂ ಶ್ರೀರಾಮನನ್ನೇ ಬಯಸುತ್ತಿತ್ತು. ಆದರೊಳಗೂ ಶ್ರೀರಾಮನ ಸ್ನೇಹಿತರು ಶೋಕಭಾರಾಕ್ರಾಂತರಾಗಿ ಮರುಳಾಗಿದ್ದರು. ಈ ರೀತಿಯಲ್ಲಿ

ಆ ಪಟ್ಟಣವು ದೇವೇಂದ್ರನಿಲ್ಲದ ಅಮರಾವತೀ ಪಟ್ಟಣದಂತೆ ಭಯಂಕರವಾಗಿ ಸಮಸ್ತ ಪರ್ವತ ವೃಕ್ಷಗಳ ಸಹಿತವಾಗಿ ಗೋಳಿಡುತ್ತಿತ್ತು!



೪೨ ನೆಯ ಅಧ್ಯಾಯ

## ದಶರಥರಾಯನ ಪ್ರಲಾಪ

ಆಮೇಲೆ ದಶರಥರಾಯನು ವನವಾಸಕ್ಕೆ ತೆರಳುತ್ತಿದ್ದ ಶ್ರೀರಾಮನನ್ನು ಕಾಣುವವರೆಗೂ ದೃಷ್ಟಿಯನ್ನು ತಿರುಗಿಸದೆ ನೋಡುತ್ತಿದ್ದನು. ಕೊನೆಗೆ ಅತ್ಯಂತ ಧರ್ಮಿಷ್ಠನಾದ ಆ ಕುಮಾರನ ರಥವು ನಡೆಯುತ್ತಿದ್ದ ಭೂಮಿಯಿಂದೆದ್ದ ಕೆಂಧೂಳಿಯು ಕಾಣಿಸದೆಹೋದಮೇಲೆ ದೃಷ್ಟಿಯನ್ನು ತಿರುಗಿಸಿ ದುಃಖಾತಿಶಯದಿಂದ ಮೂರ್ಛಿತನಾಗಿ ಬಿದ್ದನು. ಆಗ ಕೌಸಲ್ಯಾದೇವಿಯು ಬಲದ ಭಾಗಕ್ಕೆ ಬಂದು ಆತನನ್ನು ಹಿಡಿದುಕೊಳ್ಳಲು ಕೈಕೇಯಿದೇವಿಯು ವಾಮಭಾಗಕ್ಕೆ ಬಂದು ಹಿಡಿದಳು. ದಶರಥರಾಯನು ಮೂರ್ಛೆಯನ್ನು ತಿಳಿದು ವ್ಯಥೆಪಡುತ್ತ ಕೈಕೇಯಿದೇವಿಯನ್ನು ನೋಡಿ "ನೀನು ನನ್ನ ಶರೀರವನ್ನು ಮುಟ್ಟಬೇಡ. ನೀನು ಅತ್ಯಂತ ದುಷ್ಟಚರಿತ್ರಳು. ನಾನು ಇದು ಮೊದಲಾಗಿ ನಿನ್ನ ಮುಖವನ್ನು ನೋಡೆನು. ಇದು ಮೊದಲುಗೊಂಡು ನೀನು ನನ್ನ ಹೆಂಡತಿಯಲ್ಲ. ನಿನಗನುಕೂಲವಾದ ವರೊಡನೆಯೂ ನಾನು ಮಾತನಾಡುವುದಿಲ್ಲ. ನೀನು ನಿನ್ನ ಕಾರ್ಯನಿಮಿತ್ತವಾಗಿ ಧರ್ಮವನ್ನು ಬಿಟ್ಟೆ. ಆದ್ದರಿಂದ ನಿನ್ನನ್ನು ನಾನು ಬಿಟ್ಟೆನು. ನಿನ್ನ ಕೈ ಹಿಡಿದು ಅಗ್ನಿಪ್ರದಕ್ಷಿಣವನ್ನು ಮಾಡಿದ್ದೇ ನನಗೆ ಇಹಲೋಕ ಪರಲೋಕಗಳಲ್ಲಿಯೂ ಅಪಕೀರ್ತಿಗೆ ಸಾಧನವಾಯಿತು! ನಿನ್ನ ಮಗನಾದ ಭರತನು ರಾಜ್ಯಾಧಿಪತ್ಯವನ್ನು ಮಾಡಿಕೊಂಡು ಪ್ರಸಿದ್ಧನಾದರೂ ನನಗೆ ಉತ್ತರಕರ್ಮಗಳಲ್ಲಿ ತಿಲೋದಕಗಳನ್ನು ಕೊಟ್ಟನಾದರೆ ಅದು ನನಗೆ ಸೇರಕೂಡದು" ಎಂದು ನುಡಿದು ಧೂಳಿನಲ್ಲಿ ಹೊರಳುತ್ತಿದ್ದನು.

ಕೌಸಲ್ಯಾದೇವಿಯು ಆತನನ್ನು ಹಿಡಿದೆತ್ತಿ ದುಃಖಾಕ್ರಾಂತೆಯಾಗಿ ತನ್ನ ಮನೆಗೆ ಕರೆದುಕೊಂಡು ಬರುತ್ತಿದ್ದಳು. ಆ ರಾಜನು ತಪೋವೇಷವನ್ನು ತಾಳಿದ ತನ್ನ ಮಗನನ್ನು ನೆನೆಯುತ್ತ ಬ್ರಹ್ಮಹತ್ಯೆಯನ್ನು ಮಾಡಿದವನ ರೀತಿಯಲ್ಲಿಯೂ ಕೈಯಲ್ಲಿ ಕೆಂಡವನ್ನು ಮುಟ್ಟಿದವನ ರೀತಿಯಲ್ಲಿಯೂ ಕೈಗಳನ್ನು ಚಾಚಿ ಹಂಬಲಿಸುತ್ತ ಶ್ರೀರಾಮನ ರಥವು ನಡೆದ ದಾರಿಯನ್ನು ತಿರುಗಿ ತಿರುಗಿ ನೋಡುತ್ತ ರಾಹುತುಡುಕಿದ ಚಂದ್ರನಂತೆ ಕಾಂತಿಗುಂದಿದನು. ತನ್ನ ಪ್ರಿಯಪುತ್ರನನ್ನು ನೆನೆಯುತ್ತ ಆತನು ಪಟ್ಟಣವನ್ನು ದಾಟಿ ಹೋದನೆಂಬ ವೃತ್ತಾಂತವನ್ನು ಕೇಳಿ "ಅಯ್ಯೋ! ಶ್ರೀರಾಮನ ಮುಂದೆ ಹೋದ ಕುದುರೆಗಳ ಹೆಜ್ಜೆಗಳು ಕಾಣಿಸುತ್ತಿವೆ. ಆದರೆ ಆತನನ್ನು ಕಾಣೆನೇ! ಕುಂಕುಮ ಗಂಧವನ್ನು ಲೇಪನಮಾಡಿಕೊಂಡು ಸುಪ್ಪತ್ತಿಗೆಗಳಲ್ಲಿ ಕುಳಿತು ಮನೋಹರವಾದ ಸೌಂದರ್ಯವುಳ್ಳ ಕೋಮಲಾಂಗಿಯರು ಬೀಸಣಿಗೆ ಬೀಸಲು ತಂಗಾಳಿಯಲ್ಲಿ ಸುಖವಾಗಿದ್ದ ಶ್ರೀರಾಮನು ಈಗ ಮರದಡಿಯನ್ನು ಸೇರಿ ಕಲ್ಲನ್ನೋ ಮರದ ಕೊರಡನ್ನೋ ತಲೆದಿಂಬುಮಾಡಿಕೊಂಡು ಭೂಮಿಯಮೇಲೆ ಮಲಗಬೇಕಾಗಿದೆ! ಪ್ರಾತಃಕಾಲದಲ್ಲಿ ಏಳುವಾಗ ಮೈಕೈಯೆಲ್ಲವೂ ಧೂಳು ಮುಸುಕಿರಲು ನಿಟ್ಟುಸಿರುಬಿಡುತ್ತ ಏಳಬೇಕಾಗಿದೆ. ಕಿರುಹಳ್ಳದಲ್ಲಿ ಬಿದ್ದು ಮೈಯನ್ನು ಕೆಸರುಮಾಡಿಕೊಂಡು ಏಳುವ ಮದ್ದಾನೆಯನ್ನು ನೋಡುವಂತೆ

ಆಜಾನುಬಾಹುವಾದ ಶ್ರೀರಾಮನನ್ನು ಅರಣ್ಯವಾಸಿಗಳಾದ ಪುರುಷರು ನೋಡುವರು! ಅನೇಕ ಸುಖವನ್ನನುಭವಿಸಿದ ಸೀತಾದೇವಿಯು ಕಲ್ಲುಮುಳ್ಳುಗಳುಳ್ಳ ಮಾರ್ಗಗಳಲ್ಲಿ ಹೇಗೆ ಸಂಚರಿಸುವಳು! ಒಂದು ದಿನದಲ್ಲಾದರೂ ವನವನ್ನು ಕಾಣದಿದ್ದ ಆ ದೇವಿಯು ಭಯಂಕರವಾದ ತೋಳಗಳ ಧ್ವನಿಯನ್ನು ಕೇಳಿ ಭಯಪಡುವಳು! ಅಂಥ ಸುಕುಮಾರಿಯನ್ನು ನೀನು ವನಕ್ಕೆ ಕಳುಹಿಸಿದೆ! ಎಲೇ ಕೈಕೇಯಿ, ನೀನು ವಿಧವೆಯಾಗಿ ರಾಜ್ಯವನ್ನಾಳು. ನಾನು ಪುರುಷೋತ್ತಮನಾದ ಶ್ರೀರಾಮನಿಲ್ಲದೆ ಜೀವಿಸಲಾರೆನು" ಎಂದು ಹಂಬಲಿಸುತ್ತ ಪರಿಜನರಿಂದ ಸುತ್ತಲ್ಪಟ್ಟವನಾಗಿ ಪಟ್ಟಣವನ್ನು ಪ್ರವೇಶಿಸಿದನು. ಅಲ್ಲಿ ಚೌಬೀದಿಗಳಲ್ಲಿ ಜನಸಂಚಾರವಿಲ್ಲದ್ದನ್ನೂ ಅಂಗಡಿಕೇರಿಗಳಲ್ಲಿ ಬೇಹಾರಿಗಳ ಪಸರಗಳಿಲ್ಲದ್ದನ್ನೂ ದುಃಖಾತಿಶಯದಿಂದ ಕಾಂತಿಗುಂದಿ ಬಲಶಗ್ಗಿದ ಜನರು ಅಲ್ಲಲ್ಲಿ ರೋದನಮಾಡುತ್ತಿದ್ದುದನ್ನೂ ನೋಡುತ್ತ ಸೂರ್ಯನು ಮೇಘಮಂಡಲಮಧ್ಯವನ್ನು ಪ್ರವೇಶಿಸುವಂತೆ ಶೋಕಾಂಧಕಾರ ಮುಸುಕಿದ ತನ್ನ ಅರಮನೆಯನ್ನು ಪ್ರವೇಶಿಸಿದನು. ಅಲ್ಲಿ ರಾಮ ಲಕ್ಷ್ಮಣ ಸೀತಾದೇವಿಯರಿಲ್ಲದೆ ವಿಷದ ಕಡಲಂತಿದ್ದ ಆ ಅರಮನೆಯನ್ನು ನೋಡಿ ಬಿಕ್ಕಿಬಿಕ್ಕಿ ಅಳುತ್ತ ದೈನ್ಯಭಾವದಿಂದ ಸ್ವರಗುಂದಿ ಮೆಲ್ಲನೆ ತನ್ನ ಪರಿಜನರನ್ನು ಕುರಿತು "ಎಲೈ ಪರಿಜನರುಗಳಿರಾ, ನನ್ನನ್ನು ಶೀಘ್ರವಾಗಿ ಕೌಸಲ್ಯಾದೇವಿಯ ಅರಮನೆಗೆ ಕರೆದುಕೊಂಡುಹೋಗಿರಿ; ನನಗೆ ಮತ್ತೊಂದು ಸ್ಥಳದಲ್ಲಿ ಮನಸ್ಸಿಲ್ಲ" ಎಂದು ನುಡಿದನು.

ಆ ಬಳಿಕ ಪರಿಜನರು ಕೌಸಲ್ಯಾದೇವಿಯ ಅರಮನೆಗೆ ಕರೆದುಕೊಂಡುಹೋಗಲು ದಶರಥರಾಯನು ಆ ದೇವಿಯ ಶಯ್ಯಾಗೃಹಕ್ಕೆ ಹೋಗಿ ಮಂಚದ ಮೇಲೆ ಮಲಗಿ ಚಿಂತಾಕ್ರಾಂತನಾದನು. ಚಂದ್ರನಿಲ್ಲದ ಆಕಾಶದಂತೆ ರಾಮ ಲಕ್ಷ್ಮಣ ಸೀತಾದೇವಿಯರಿಲ್ಲದೆ ಭಯಂಕರವಾದ ಆ ಅರಮನೆಯನ್ನು ಕಂಡು ದುಃಖಾತಿಶಯದಿಂದ ತೋಳುಗಳನ್ನು ಮೇಲಕ್ಕೆ ನೆಗಹಿಕೊಂಡು ಗೋಳಿಟ್ಟು ರೋದನವನ್ನು ಮಾಡುತ್ತ "ಹಾ ರಾಘವ! ಹಾ ರಾಮ! ಹಾ ಪ್ರಿಯಪುತ್ರನೇ! ಹಾ ಸತ್ಯಸಂಧನೇ! ನನ್ನನ್ನು ಬಿಟ್ಟು ಹೋದೆಯಾ! ಲೋಕದಲ್ಲಿರುವ ಜನರು ವನವಾಸವನ್ನು ಮಾಡಿ ತಿರುಗಿ ಬರುವ ನಿನ್ನನ್ನು ಕಂಡು ಕೃತಾರ್ಥರಾಗಿ ಸುಖವಾಗಿರುವರು" ಎಂದು ಹಂಬಲಿಸುತ್ತಲಿದ್ದನು. ಅರ್ಧರಾತ್ರಿಯು ಅವನ ಮೃತ್ಯುಕಾಲದಂತೆ ಅತ್ಯಂತ ಪ್ರಯಾಸದಿಂದ ಕಳೆಯಿತು. ದಶರಥನು ಕೌಸಲ್ಯಾದೇವಿಯನ್ನು ಕುರಿತು "ಕೌಸಲ್ಯೆ, ನನಗೆ ಕಣ್ಣು ಕಾಣಿಸುವುದಿಲ್ಲ. ನೀನು ಎಲ್ಲಿದ್ದೀಯೋ ಕಾಣೆನು. ನನ್ನ ದೃಷ್ಟಿಯು ಶ್ರೀರಾಮನ ಸಂಗಡ ಹೋದದ್ದು ತಿರುಗಿ ಬರಲಾರದು. ನನ್ನನ್ನು ಕೈಯಿಂದ ಹಿಡಿದುಕೊ" ಎಂದು ನುಡಿದನು.

ಆ ದೇವಿಯು ಆತನನ್ನು ಹಿಡಿದುಕೊಂಡು ತನ್ನ ಸಮೀಪದಲ್ಲಿ ಕುಳ್ಳಿರಿಸಿ ನಿಟ್ಟುಸಿರು ಬಿಡುತ್ತ ಹಂಬಲಿಸುತ್ತಿದ್ದಳು.



## ೪೩ ನೆಯ ಅಧ್ಯಾಯ

## ಕೌಸಲ್ಯಾದೇವಿಯು ದಶರಥರಾಯನೊಡನೆ ಪ್ರಲಾಪಿಸಿದ್ದು

ಆಮೇಲೆ ಕೌಸಲ್ಯಾದೇವಿಯು ಶೋಕಾತಿಶಯದಿಂದ ಕಂಗೆಟ್ಟು ಮಂಚದ ಮೇಲೆ ಕುಳಿತಿದ್ದ ದಶರಥರಾಯನನ್ನು ನೋಡಿ "ಮಹಾರಾಜ, ಪುರುಷೋತ್ತಮನಾದ ಶ್ರೀರಾಮನಲ್ಲಿ ಕೈಕೇಯಿ

ದೇವಿಯು ವಿಷವನ್ನು ಬಿಟ್ಟು ಪೊರೆಗಳೆದ ಸರ್ಪಿಣಿಯಂತಾಗಿದ್ದಾಳೆ. ಅವಳು ಮುಂದೆಯೂ ನನ್ನನ್ನು ಬೆದರಿಸುವಳು. ಶ್ರೀರಾಮನನ್ನು ವನಕ್ಕೆ ಕಳುಹಿಸದೆ ಭರತನಿಗೆ ಪಟ್ಟವನ್ನು ಕಟ್ಟಿ ಆಕೆಯು ಸುಖವಾಗಿದ್ದ ಪಕ್ಷದಲ್ಲಿ ಅಯೋಧ್ಯಾಪಟ್ಟಣದಲ್ಲಿ ಭಿಕ್ಷಾಹಾರವನ್ನಾದರೂ ಮಾಡಿಕೊಂಡು ನನ್ನ ಮಗನು ಮನೆಯಲ್ಲಿ ಸುಖವಾಗಿರುತ್ತಿದ್ದನು. ಆತನು ಕೈಕೇಯಿದೇವಿಗೆ ಭೃತ್ಯನಂತೆ ಸೇವೆಯನ್ನು ಮಾಡಿಕೊಂಡಿದ್ದೂ ಅಸೂಯೆಯಿಂದ ಆತನನ್ನು ವನಕ್ಕೆ ಕಳುಹಿಸಬೇಕೆಂದು ನಿನ್ನಲ್ಲಿ ವರವನ್ನು ಬೇಡಿಕೊಂಡಳು. ಆತನನ್ನು ತನ್ನ ಮನಸ್ಸಿಗೆ ಬಂದಹಾಗೆ ಸ್ಥಾನಭ್ರಷ್ಟನನ್ನಾಗಿ ಮಾಡಿ ಆಹಿತಾಗ್ನಿಗಳು ಪರ್ವಕಾಲದಲ್ಲಿ ದೇವತೆಗಳಿಗೆ ಕೊಡುವ ಹವಿರ್ಭಾಗವು ರಾಕ್ಷಸರಿಗೆ ದಕ್ಕಿದಂತಾಯಿತು. ಮದ್ದಾನೆಯಂತೆ ಗಂಭೀರವಾದ ನಡೆಯುಳ್ಳವನೂ ಬಿಲ್ಲುಗಾರನೂ ಮಹಾಭುಜಬಲಪರಾಕ್ರಮಿಯೂ ಆದ ಶ್ರೀರಾಮನು ಸೀತಾಲಕ್ಷ್ಮಣರೊಡನೆ ವನವನ್ನೈದಿದನು. ಒಂದು ದಿನವೂ ವನವಾಸದುಃಖ ವನ್ನರಿಯದ ಅವರು ಕೈಕೇಯಿದೇವಿಯ ಮಾತನ್ನು ಮೀರದಿದ್ದ ನಿನ್ನಿಂದ ವನವಾಸಕ್ಕೆ ಹೋದರು. ಆ ವನದಲ್ಲಿ ಯಾವ ಅವಸ್ಥೆಯುಂಟಾಗುವುದೋ ತಿಳಿಯದು ! ರಾಮ ಲಕ್ಷ್ಮಣ ಸೀತಾದೇವಿಯರು ಬಾಲ್ಯಾವಸ್ಥೆಯುಳ್ಳವರು. ಉತ್ತಮವಾದ ರತ್ನಾಭರಣಗಳನ್ನು ಧರಿಸಿಕೊಂಡು ಸುಖವಾಗಿರುವ ಕಾಲದಲ್ಲಿ ವನಕ್ಕೆ ಹೋಗಿ ಕಂದಮೂಲಫಲಾಹಾರಗಳನ್ನು ಮಾಡಿಕೊಂಡು ದೈನ್ಯವೃತ್ತಿಯಿಂದ ಹೇಗೆ ಇರುವರು ! ಸೀತಾಲಕ್ಷ್ಮಣಸಮೇತನಾಗಿ ವನದಿಂದ ತಿರುಗಿ ಬರುವ ಶ್ರೀರಾಮನನ್ನು ಯಾವಾಗ ಕಾಣುವೆನು ! ನನ್ನ ಶೋಕವನ್ನು ಪರಿಹರಿಸುವ ಮಂಗಲಮಯವಾದ ಆ ಕಾಲವು ಈಗಲೇ ಬಂದೀತೆ ! ಅವರು ಯಾವಾಗ ಅಯೋಧ್ಯಾನಗರಕ್ಕೆ ಹಿಂದಿರುಗಿ ಬಂದಾರು ! ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನನ್ನು ಕಂಡು ಯಾವಾಗ ಅಯೋಧ್ಯಾಪಟ್ಟಣವು ಹುಣ್ಣಿಮೆಯ ಚಂದ್ರನನ್ನು ಕಂಡ ಸಮುದ್ರವಂತೆ ಸಂತೋಷದಿಂದ ಉಕ್ಕಿ ಸೊಕ್ಕುವುದು ! ಮಹಾಬಲಪರಾಕ್ರಮಿ ಯಾದ ಶ್ರೀರಾಮನು ಕೊಬ್ಬಿದ ವೃಷಭರಾಜನು ಹಸುವನ್ನು ಮುಂದಿಟ್ಟುಕೊಂಡು ಗಂಭೀರವಾಗಿ ಬರುವಂತೆ ರಥದಲ್ಲಿ ಸೀತಾದೇವಿಯನ್ನು ಮುಂದಿಟ್ಟುಕೊಂಡು ಅಯೋಧ್ಯಾಪಟ್ಟಣವನ್ನು ಯಾವಾಗ ಪ್ರವೇಶಿಸುವನೊ ! ಶಾಸ್ತ್ರಾಭ್ಯಾಸದಿಂದ ಪ್ರಸಿದ್ಧರಾದ ಬ್ರಾಹ್ಮಣರಿಂದ ಕೊಂಡಾಡಲ್ಪಟ್ಟ ಶ್ರೀರಾಮ ಲಕ್ಷ್ಮಣ ಸೀತಾದೇವಿಯರು ಪುರಜನಸಮೂಹದಿಂದ ಚೌಬೀದಿಯಲ್ಲಿ ಅರಳು ಪರಿಮಳ ಪುಷ್ಪಗಳಿಂದ ಸೇಸೆಯಿಕ್ಕಲ್ಪಟ್ಟವರಾಗಿ ರಾಜಮಾರ್ಗದಲ್ಲಿ ಯಾವಾಗ ಬರುವರೋ ! ಕೋಡುಗಲ್ಲುಗಳಂತಿರುವ ತಮ್ಮ ಆಯುಧಗಳನ್ನು ಮೇಲಕ್ಕೆತ್ತಿಕೊಂಡು ಶೋಭನವಾದ ಮಕರಕುಂಡಲಗಳನ್ನು ಧರಿಸಿಕೊಂಡು ಅಯೋಧ್ಯಾಪಟ್ಟಣದ ಚೌಬೀದಿಯಲ್ಲಿ ಅವರು ಬರುವುದನ್ನು ಯಾವಾಗ ಕಂಡೇನು ! ಅಂತರಿಕ್ಷ ಮಾರ್ಗದಲ್ಲಿ ದೇವಕನ್ಯಾಸಮೂಹವೂ ಅಯೋಧ್ಯಾಪಟ್ಟಣದಲ್ಲಿ ಬ್ರಾಹ್ಮಣಕನ್ಯಾಸಮೂಹಗಳೂ ಕೈಯಲ್ಲಿ ಆರತಿ ಫಲಾದಿಗಳನ್ನು ತೆಗೆದುಕೊಂಡು ಸೀತಾರಾಮಲಕ್ಷ್ಮಣರನ್ನು ಪ್ರದಕ್ಷಿಣ ಮಾಡುವುದನ್ನು ನಾನು ಯಾವಾಗ ಕಂಡೇನು ! ವಯೋರೂಪಗಳಿಂದ ದೇವೇಂದ್ರನಿಗೆ ಸಮಾನನಾಗಿ ಧರ್ಮಜ್ಞನಾದ ಶ್ರೀರಾಮನು ವರುಷದ ಬಾಲಕನಂತೆ ಸಂತೋಷಪಡುತ್ತ ಯಾವಾಗ ನನಗೆ ದೃಷ್ಟಿಗೋಚರನಾದಾನು ! ಅಯೋಧ್ಯಾಪಟ್ಟಣಕ್ಕೆ ಪರಾಕ್ರಮಿಯಾದ ರಾಜನಿದ್ದಾನೆಂದು ಶಂಕಾತಂಕಗಳಿಲ್ಲದೆ ಸ್ತ್ರೀಯರು ತಮ್ಮ ಮಕ್ಕಳನ್ನು ರಕ್ಷಿಸಿಕೊಂಡು ಯಾವಾಗ ಸುಖದಲ್ಲಿದ್ದಾರು ! ಸಿಂಹದಿಂದ ಬೆದರಿಸಲ್ಪಟ್ಟು ಕರುವನ್ನು ಬಿಟ್ಟುಹೋದ ಹಸುವಿನಂತೆ ಕೈಕೇಯಿದೇವಿಯ ಬಲಾತ್ಕಾರದಿಂದ ಕಂಗೆಡುತ್ತಿರುವ ನಾನು ತಿರುಗಿ ಯಾವಾಗ ಶ್ರೀರಾಮನನ್ನು ಕಂಡೇನು ! ಅಗಣಿತವಾದ ಸದ್ಗುಣಗಳುಳ್ಳವನಾಗಿ ಸರ್ವಶಾಸ್ತ್ರಪಾರಂಗತನಾದ ಮಗನನ್ನು ಕಾಣದೆ ಒಬ್ಬ ಮಗನುಳ್ಳ ನಾನು ಜೀವಿಸಲಾರೆನು ! ಮಹಾಬಲಪರಾಕ್ರಮಿಯಾದ ಆತನನ್ನು ಕಾಣದೆ

ಜೀವಿಸಿಕೊಂಡಿರಬಹುದೆಂಬ ಧೈರ್ಯವು ನನಗಿಲ್ಲ. ಬೇಸಿಗೆಯಲ್ಲಿ ಪ್ರಚಂಡನಾದ ಸೂರ್ಯನು ತನ್ನ ಕಿರಣಗಳಿಂದ ಭೂಮಿಯನ್ನು ಒಣಗಿಸುವಂತೆ ಮಗನ ಅಗಲಿಕೆಯಿಂದುಂಟಾದ ಶೋಕಾಗ್ನಿಯು ನನ್ನನ್ನು ದಹಿಸುತ್ತಿದೆ!" ಎಂದು ತನ್ನ ಮನೋವ್ಯಥೆಯನ್ನು ಹೇಳುತ್ತಿದ್ದಳು.



## ೪೪ ನೆ ಯ ಅ ಧ್ಯಾ ಯ

## ಸು ಮಿ ತ್ರಾ ದೇ ವಿ ಯು ಕೌ ಸ ಲ್ಯಾ ದೇ ವಿ ಗೆ ಧೈ ರ್ಯ ಹೇ ಳಿ ದ್ದು

ಈ ಪ್ರಕಾರವಾಗಿ ಹಂಬಲಿಸುತ್ತಿದ್ದ ಕೌಸಲ್ಯಾದೇವಿಯನ್ನು ಕಂಡು ಸಚ್ಚರಿತ್ರಳಾದ ಸುಮಿತ್ರಾದೇವಿಯು ಹೀಗೆ ನುಡಿದಳು: "ಅಕ್ಕ, ಸದ್ಗುಣಗಳಿಂದ ಪರಿಪೂರ್ಣನಾಗಿ ಪುರುಷೋತ್ತಮನಾದ ನಿನ್ನ ಮಗನಿಗೆ ಭಯವೇನು? ನೀನು ಹಂಬಲಿಸಿ ರೋದನವನ್ನು ಮಾಡುವುದರಿಂದ ಪ್ರಯೋಜನವೇನು? ಶ್ರೀರಾಮನು ಬಲಪರಾಕ್ರಮವುಳ್ಳವನು. ತನ್ನ ತಂದೆಯಾದ ದಶರಥರಾಯನ ಮಾತು ತಪ್ಪಬಾರದೆಂದು ಆತನ ಸತ್ಯಪ್ರತಿಜ್ಞೆಯನ್ನು ಪರಿಪಾಲಿಸುತ್ತ ರಾಜ್ಯಾಧಿಪತ್ಯವನ್ನು ಬಿಟ್ಟು ಜ್ಞಾನಿಗಳು ನಡೆಯುವ ಸನ್ಮಾರ್ಗದಲ್ಲಿ ನಡೆದುಕೊಂಡು ಇಹಲೋಕ ಪರಲೋಕಗಳಲ್ಲಿಯೂ ಧರ್ಮಾಭಿವೃದ್ಧಿಯೂ ಶ್ರೇಯಸ್ಸೂ ಆಗಬೇಕೆಂದು ಧರ್ಮಮಾರ್ಗ ಪ್ರವರ್ತಕನಾಗಿ ಧರ್ಮಮಾರ್ಗವನ್ನು ಕೈಗೊಂಡನು. ಸಮಸ್ತ ಪ್ರಾಣಿಗಳಲ್ಲಿಯೂ ದಯಾಶೀಲನಾದ ಲಕ್ಷ್ಮಣನು ಆತನಿಗೆ ಸಹಾಯವಾಗಿ ಹೋಗಿರುವುದರಿಂದ ಶ್ರೀರಾಮನಿಗೆ ವನವಾಸದಲ್ಲಿ ಲಾಭವುಂಟಾಗುವುದೆಂದು ತಿಳಿ. ಸೀತಾದೇವಿಯೂ ಆತನ ಹಿಂದೆ ಹೋಗಿದ್ದಾಳೆ. ಆತನು ಲೋಕದಲ್ಲಿ ತನ್ನ ಕೀರ್ತಿಯೆಂಬ ಟೆಕ್ಕೆಯವನ್ನು ಮೇಲಕ್ಕೆ ನೆಗಹಿ ಮೆರವಣಿಗೆ ಮಾಡುವನು. ಶಾಂತಗುಣವೂ ಸತ್ಯವ್ರತ ಪೌರುಷವೂ ಉಳ್ಳ ನಿನ್ನ ಮಗನಿಗೆ ಲೋಕದಲ್ಲಿ ಅಸಾಧ್ಯವಾದ ವಸ್ತು ಯಾವುದು? ಶ್ರೀರಾಮನ ಶುಚಿತ್ವವನ್ನೂ ಮಹತ್ತ್ವವನ್ನೂ ಕಂಡು ಸೂರ್ಯನು ಆತನ ಶರೀರದ ಮೇಲೆ ಉಷ್ಣವಾದ ಕಿರಣಗಳನ್ನು ಬಿಡಲಾರನು. ವನಗಳು ಸರ್ವ ಋತುಗಳಲ್ಲಿ ಆಗುವಂಥ ಫಲಾದಿಗಳಿಂದ ಎಲ್ಲಕಾಲದಲ್ಲಿಯೂ ಸೇವೆಯನ್ನು ಮಾಡುವುವು. ವಾಯುದೇವನು ಶೈತ್ಯ ಸೌರಭ್ಯ ಮಾಂದ್ಯ ಎಂಬ ಗುಣತ್ರಯದಿಂದ ಯುಕ್ತನಾಗಿ ಶರೀರಕ್ಕೆ ಸುಖವಾಗುವಂತೆ ತಂಪಾಗಿ ಮೃದುಗತಿಯಿಂದ ಪರಿಮಳಯುಕ್ತನಾಗಿ ಸೇವೆಯನ್ನು ಮಾಡುವನು! ರಾತ್ರಿಯಲ್ಲಿ ಶಯನ ಮಾಡುವಾಗ ಆತನನ್ನು ತಂದೆಯು ಸ್ನೇಹಾತಿಶಯದಿಂದ ಮಗನನ್ನು ತೋಳುಗಳಿಂದ ತಕ್ಕೈಸುವಂತೆ, ಚಂದ್ರನು ತನ್ನ ಕಿರಣಗಳಿಂದ ಸಂತೈಸುವನು.

"ಶ್ರೀರಾಮನು ಮಹಾಭುಜಬಲಪರಾಕ್ರಮಗಳುಳ್ಳವನು. ಪುರುಷೋತ್ತಮನು. ಅಸಹಾಯ ಶೂರನು. ಅರಣ್ಯದಲ್ಲಿದ್ದರೂ ಮನೆಯಲ್ಲಿರುವಂತೆ ಸುಖವಾಗಿರುವನು. ಆತನು ಶರಸಂಧಾನ ಮಾಡಿದಮಾತ್ರದಲ್ಲೇ ಸಮಸ್ತ ಶತ್ರುಗಳೂ ಲಯವಾಗುವರು. ಲೋಕದಲ್ಲಿ ಆತನಿಗೆ ಅಂಜದವರಾರು! ಶೀಘ್ರದಲ್ಲಿ ವನವಾಸವನ್ನು ಪೂರ್ತಿಮಾಡಿ ತಿರುಗಿ ಬಂದು ರಾಜ್ಯವನ್ನು ಪರಿಪಾಲನಮಾಡುವನು. ಆತನು ಸೂರ್ಯನಿಗೆ ಪ್ರತಿಸೂರ್ಯನಾಗಬಲ್ಲನು! ಆತನು ಅಗ್ನಿಗೆ ಪ್ರತ್ಯಗ್ನಿ. ಪ್ರಭುವಿಗೆ ಪ್ರಭು. ಐಶ್ವರ್ಯಕ್ಕೆ ಐಶ್ವರ್ಯವು. ಕೀರ್ತಿಗೆ ಕೀರ್ತಿ. ಕ್ಷಮೆಗೆ ಕ್ಷಮೆ. ದೇವತೆಗಳಿಗೆ ದೇವತೆ. ಮನುಷ್ಯರಲ್ಲಿ ಶ್ರೇಷ್ಠ. ಆತನಲ್ಲಿಲ್ಲದ ಸದ್ಗುಣವೇ ಇಲ್ಲ

ಆತನು ವನದಿಂದ ತಿರುಗಿ ಬಂದು ಭೂದೇವಿಯೊಡನೆಯೂ ಮಹಾಲಕ್ಷ್ಮಿಯೊಡನೆಯೂ ಸೀತಾದೇವಿಯೊಡನೆಯೂ ಕೂಡಿ ಪಟ್ಟಾಭಿಷೇಕೋತ್ಸವವನ್ನು ಅನುಭವಿಸುವನು. ಅಯೋಧ್ಯಾ ಪಟ್ಟಣದ ಜನಸಮೂಹವು ಪಟ್ಟಣದಿಂದ ವನವಾಸಕ್ಕೆ ಹೊರಟ ಶ್ರೀರಾಮನನ್ನು ಕಂಡು ಶೋಕಾತಿಶಯದಿಂದ ಕಣ್ಣೀರನ್ನು ಬಿಡುತ್ತಿರಲು ನಾರುಬಟ್ಟೆಯನ್ನುಟ್ಟು ಮುನಿವೇಷವನ್ನು ಧರಿಸಿ ವನಕ್ಕೆ ಹೋದ ಆತನ ಹಿಂದೆ ಸೀತಾದೇವಿಯು ಹೋದಂತೆ ರಾಜ್ಯಲಕ್ಷ್ಮಿಯೂ ಆತನೊಡನೆ ಹೋದಳು! ಬಿಲ್ಲುಬಾಣ ಖಡ್ಗಗಳನ್ನು ಧರಿಸಿಕೊಂಡು ಲಕ್ಷ್ಮಣನು ಅಗ್ನಿಸ್ವರೂಪನಾಗಿ ಆತನ ಮುಂದೆ ನಡೆಯುತ್ತಿರುವಾಗ ಅವರಿಗೆ ಯಾರು ಲೋಕದಲ್ಲಿ ಎದುರಾಗುವರು? ಶ್ರೀರಾಮನು ವನದಿಂದ ಸುಖವಾಗಿ ತಿರುಗಿ ಬರುವನು. ನೀನು ದುಃಖವನ್ನು ಬಿಡು. ನನ್ನ ಮಾತನ್ನು ಸತ್ಯವೆಂದೆಣಿಸು. ಆತನು ಚಂದ್ರೋದಯವಾದಂತೆ ವನದಿಂದ ತಿರುಗಿ ಬಂದು ನಿನ್ನ ಪಾದಗಳಿಗೆ ನಮಸ್ಕಾರವನ್ನು ಮಾಡುವುದನ್ನು ನೀನು ನೋಡಿ ಸಂತೋಷಪಟ್ಟು ಆತನಿಗೆ ಪಟ್ಟಾಭಿಷೇಕ ಮಾಡುವುದನ್ನೂ ಕಾಣುವೆ. ಆತನ ಬಳಿಗೆ ದುಃಖಾದಿ ಅಮಾಂಗಲ್ಯಗಳು ಸುಳಿಯಲಾರವು. ಸೀತಾಲಕ್ಷ್ಮಣಸಮೇತನಾಗಿ ಬರುವ ಶ್ರೀರಾಮನನ್ನು ಕಂಡು ಅಯೋಧ್ಯಾಪಟ್ಟಣದಲ್ಲಿರುವ ಸಮಸ್ತ ಜನರೂ ಸಂತೋಷಪಡುವರು! ಕೌಸಲ್ಯಾದೇವಿ, ಯಾವಕಾರಣ ವ್ಯಥೆಪಡುತ್ತೀಯೆ? ಲೋಕದಲ್ಲಿ ನಿನ್ನ ಮಗನಂಥ ಸನ್ಮಾರ್ಗಪ್ರವರ್ತಕರೊಬ್ಬರೂ ಇಲ್ಲ. ಅಂಥ ಸತ್ಪುರುಷನನ್ನು ಪಡೆದ ನೀನು ಏಕೆ ದುಃಖಪಡುತ್ತಿದ್ದೀಯೆ? ಈ ದುಃಖವನ್ನು ಬಿಡು. ಆತನು ವನದಿಂದ ಬಂದು ಅಯೋಧ್ಯಾ ಪಟ್ಟಣವನ್ನು ಪ್ರವೇಶಿಸಿ ಕೋಮಲವಾದ ತನ್ನ ಹಸ್ತದಿಂದ ನಿನ್ನ ಪಾದಸೇವೆಯನ್ನು ಮಾಡುವನು. ವನದಿಂದ ಬಂದ ನಿನ್ನ ಪ್ರಿಯಪುತ್ರನನ್ನು ನೋಡಿ ವರ್ಷಾಕಾಲದ ಮೇಘವನ್ನು ಕಂಡ ಹೆಣ್ಣುನವಿಲಂತೆ ಆನಂದಾಶ್ರುಗಳನ್ನು ಬಿಡುವೆ!" ಎಂದು ಚಾತುರ್ಯದಿಂದಲೂ ನುಡಿಜಾಣ್ಮೆ ಯಿಂದಲೂ ಸಂತವಿಡಲು ಕೌಸಲ್ಯಾದೇವಿಯು ತನ್ನ ಮನಸ್ಸಿನಲ್ಲಿದ್ದ ಶೋಕವನ್ನು ಬಿಟ್ಟು ನಿರ್ಮಲಚಿತ್ತೆಯಾದಳು.



೪೫ ನೆಯ ಅಧ್ಯಾಯ

## ಶ್ರೀರಾಮನು ತಮಸಾನದೀತೀರವನ್ನು ಸೇರಿದ್ದು

ಆ ಬಳಿಕ ಸತ್ಯದಲ್ಲಿಯೂ ಪರಾಕ್ರಮದಲ್ಲಿಯೂ ಅತ್ಯಂತ ದೃಢಚಿತ್ತನಾದ ಶ್ರೀರಾಮನಿಗೆ ಅನುಕೂಲರಾದ ಪುರಜನಗಳು ತಾವೂ ಆತನೊಡನೆ ವನವಾಸಮಾಡಬೇಕೆಂದು ಆತನ ಸ್ನೇಹಿತರು ಎಷ್ಟು ತಡೆದರೂ ಅಯೋಧ್ಯಾಪಟ್ಟಣಕ್ಕೆ ತಿರುಗದೆ ಆತನ ಹಿಂದೆ ತೆರಳುತ್ತಿದ್ದರು. ಅತ್ಯಂತ ಕೀರ್ತಿವಂತನಾಗಿ ಸದ್ಗುಣವಂತನಾದ ಶ್ರೀರಾಮನು ಅಯೋಧ್ಯಾಪಟ್ಟಣದಲ್ಲಿದ್ದ ಸಮಸ್ತ ಪ್ರಜೆಗಳಿಗೂ ಪೂರ್ಣಚಂದ್ರನಂತೆ ಮನಸ್ಸಿಗೆ ಹರ್ಷವನ್ನುಂಟುಮಾಡುತ್ತಿದ್ದನು. ತನ್ನ ಪ್ರಜೆಗಳಿಂದ ವನವಾಸಕ್ಕೆ ಹೋಗಬಾರದೆಂದು ತಡೆಯಲ್ಪಟ್ಟವನಾದರೂ ತನ್ನ ತಂದೆಯಾದ ದಶರಥರಾಯನ ಸತ್ಯಪ್ರತಿಜ್ಞೆಯನ್ನು ಪರಿಪಾಲಿಸಬೇಕೆಂದು ವನಕ್ಕೆ ತೆರಳಿದನು. ತನ್ನ ಬೆನ್ನುಹಿಡಿದು ಬರುತ್ತಿದ್ದ ಪ್ರಜೆಗಳನ್ನು ತಂದೆಯು ಮಕ್ಕಳನ್ನು ಕಾಣುವಂತೆ ಕೃಪಾದೃಷ್ಟಿಯಿಂದ ನೋಡುತ್ತ ಅವರನ್ನು ಕುರಿತು ಹೀಗೆಂದನು: "ಎಲೈ ಪ್ರಜೆಗಳಿರಾ, ನೀವು ನನ್ನಲ್ಲಿ ಎಷ್ಟು ಪ್ರೀತಿಯುಳ್ಳವರಾಗಿದ್ದೀರೋ ಭರತನಲ್ಲಿಯೂ ಅಷ್ಟು ಪ್ರೀತಿಯುಳ್ಳವರಾಗಿರಿ. ಕೈಕೇಯಿದೇವಿಯ ಕುಮಾರನಾದ ಭರತನು

ಸದ್ಗುಣಸಂಪನ್ನನು. ನಿಮಗೆ ಯಾರಿಗೆ ಯಾವ ಪ್ರಿಯಕಾರ್ಯವಾಗಬೇಕೋ ಆ ಕಾರ್ಯಗಳನ್ನು ಮಾಡುವವನು. ಆತನು ಬಾಲಕನಾದರೂ ಬುದ್ಧಿವಂತನು. ಜ್ಞಾನದಲ್ಲಿಯೂ ದೊಡ್ಡವನು. ಮೃದುವಾದ ನುಡಿಯುಳ್ಳವನು. ಮಹಾಬಲವಂತನು. ಪರಾಕ್ರಮಿಯಾದವನು. ಆತನು ಯುವರಾಜಪಟ್ಟವನ್ನು ಕಟ್ಟಿಕೊಂಡು ನಿಮಗೆ ಸರಿಯಾಗಿ ನಡೆದು ನಿಮಗೆ ಒಡೆಯನಾಗುವನು. ನಾನು ವನಕ್ಕೆ ಹೋಗುವುದರಿಂದ ನೀವು ನಮ್ಮೆಲ್ಲರಿಗೂ ಒಡೆಯನಾದ ದಶರಥರಾಯನು ನಿರೂಪಿಸಿದಂತಿರಬೇಕು. ನೀವು ನನಗೆ ಪ್ರಿಯವನ್ನು ಮಾಡಬೇಕಾದರೆ ಆ ರಾಜನ ಸೇವೆಯನ್ನು ಮಾಡಿಕೊಂಡಿರಿ " ಎಂದು ನುಡಿದನು.

ಈ ಪ್ರಕಾರದಲ್ಲಿ ಧರ್ಮವಚನಗಳನ್ನು ನುಡಿಯುತ್ತ ಧರ್ಮಮಾರ್ಗಪ್ರವರ್ತಕನಾದ ಶ್ರೀರಾಮನು ಸಮಸ್ತ ಪ್ರಜೆಗಳೂ ತನ್ನಲ್ಲಿ ಪ್ರೀತಿಯುಳ್ಳವರಾಗಿ ತನ್ನನ್ನು ಬಯಸುತ್ತ ಕಣ್ಣೀರು ತುಂಬಿ ನಿಟ್ಟುಸಿರುಬಿಡುತ್ತಿರುವುದನ್ನು ನೋಡಿ ಅವರನ್ನು ಸಂತವಿಡುತ್ತಿದ್ದನು. ಅವರಲ್ಲಿ ಜ್ಞಾನವೃದ್ಧರೂ ತಪೋವೃದ್ಧರೂ ಗುಣವೃದ್ಧರೂ ಆದ ಬ್ರಾಹ್ಮಣರು ದೂರದಿಂದ ಆತನನ್ನು ಕಂಡು ಶಿರಃಕಂಪನಮಾಡುತ್ತ " ಎಲೈ ವಾಯುವೇಗ ಮನೋವೇಗವುಳ್ಳ ಕುದುರೆಗಳಿರಾ, ನೀವು ಹಿಂದಿರುಗಿರಿ. ಮುಂದಕ್ಕೆ ಹೋಗಬೇಡಿರಿ. ನೀವು ಕಿವಿಯುಳ್ಳ ಪ್ರಾಣಿಗಳಲ್ಲಿ ವೆಗ್ಗಳವಾದ ಕಿವಿಗಳುಳ್ಳ ಪ್ರಾಣಿಗಳಾದ್ದರಿಂದ ನಮ್ಮ ಮಾತನ್ನು ಕೇಳಿ. ನಿಮ್ಮ ಒಡೆಯನಲ್ಲಿ ಹಿತವುಳ್ಳವರಾಗಿ ಹಿಂದಿರುಗಿರಿ. ದೃಢವ್ರತನಾಗಿ ಶುದ್ಧಾತ್ಮನಾದ ಶ್ರೀರಾಮನು ನಿಮಗೆ ಒಡೆಯನು. ಈತನನ್ನು ನೀವು ವನಕ್ಕೆ ಬಿಜಯಂಗೈಯಿಸಿಕೊಂಡು ಹೋಗಬೇಡಿ. ಧರ್ಮಸತ್ಯಾಚಾರಗಳಿಂದ ಶುದ್ಧಾತ್ಮನಾದ ಶ್ರೀರಾಮನು ವನವನ್ನೈದದೆ ಇಲ್ಲಿಯೇ ಇರಲಿ " ಎಂದು ಹಂಬಲಿಸುತ್ತಿದ್ದರು.

ಶ್ರೀರಾಮನು ಅದನ್ನು ಕಂಡು ರಥದಿಂದಿಳಿದು ಸೀತಾಲಕ್ಷ್ಮಣಸಮೇತನಾಗಿ ಮೆಲ್ಲಗೆ ಹೆಜ್ಜೆಯನ್ನಿಡುತ್ತ, ವನಾಭಿಮುಖವಾಗಿ ಕಾಲುನಡೆಯಲ್ಲಿ ನಡೆದು ಬರುತ್ತಿದ್ದ ವೃದ್ಧರಾದ ಬ್ರಾಹ್ಮಣರನ್ನು ನೋಡುತ್ತ, ರಥವನ್ನು ಮುಂದೆ ನಡೆಸಿಕೊಂಡು ಕಾಲುನಡೆಯಿಂದ ಹೋಗುತ್ತಿದ್ದನು. ಆ ಬ್ರಾಹ್ಮಣರು ಕಂಗೆಟ್ಟು ಆತನನ್ನು ಕುರಿತು ಹೇಳಿದರು : " ಶ್ರೀರಾಮ, ನಾವೆಲ್ಲರೂ ಬ್ರಾಹ್ಮಣರನ್ನು ಪರಿಪಾಲಿಸುವ ನಿನ್ನ ಹಿಂದೆ ಬರುತ್ತಿದ್ದೇವೆ. ಅಗ್ನಿಹೋತ್ರಗಳಾದವರು ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿಗಳೆಂಬ ತ್ರೇತಾಗ್ನಿಗಳನ್ನೂ ಪಾತ್ರೆಗಳಲ್ಲಿಟ್ಟುಕೊಂಡು ಕಾವಡಿಗಳಲ್ಲಿ ಕಟ್ಟಿ ಹೊತ್ತುಕೊಂಡು ಬರುತ್ತಿದ್ದಾರೆ. ನಾವೆಲ್ಲರೂ ವಾಜಪೇಯ ಯಾಗಗಳನ್ನು ಮಾಡಿ ಸತ್ತಿಗೆಗಳನ್ನು ಹಿಡಿದುಕೊಂಡು ಬರುತ್ತೇವೆ. ನಮ್ಮ ಸತ್ತಿಗೆಗಳನ್ನು ನೋಡು. ನಿನ್ನ ಹಿಂದೆ ತೆಗೆದುಕೊಂಡುಬರುವ ಸತ್ತಿಗೆಗಳು ಶರತ್ಕಾಲದಲ್ಲಿ ಮಾನಸಸರೋವರಕ್ಕೆ ನಡೆಯುವ ರಾಜಹಂಸ ಪಕ್ಷಿಗಳ ಹಾಗೆ ಒಪ್ಪುತ್ತಿವೆ. ಬಿಸಿಲಿನಲ್ಲಿ ನಡೆಯುವ ನಿನಗೆ ಈ ಸತ್ತಿಗೆಗಳು ನೆರಳನ್ನುಂಟು ಮಾಡುವುವು. ಇಷ್ಟು ದಿನ ನಿನ್ನ ಧರ್ಮದಿಂದ ಅಗ್ನಿಹೋತ್ರಗಳನ್ನೂ ವೇದಾರ್ಥವಿಚಾರಗಳನ್ನೂ ಮಾಡಿಕೊಂಡಿದ್ದ ನಮ್ಮ ಮನಸ್ಸು ನೀನು ವನಕ್ಕೆ ತೆರಳುವುದರಿಂದ ನಿನ್ನ ಸಂಗಡ ಬರಬೇಕೆಂದು ಇಚ್ಛಿಸುತ್ತದೆ. ನಮಗೆ ಪ್ರಧಾನವಾದ ವೇದಗಳು ನಮ್ಮ ಹೃದಯದಲ್ಲಿಯೇ ನಿಂತುಬಿಟ್ಟಿವೆ. ನೀನು ವನಕ್ಕೆ ತೆರಳಿದ ದುಃಖಾತಿಶಯದಿಂದ ನಾವು ಅವುಗಳನ್ನು ಪಠಿಸಲಾರೆವು. ನಮ್ಮ ಸ್ತ್ರೀಯರು ಮನೆಗಳಲ್ಲಿ ನಿನ್ನ ವನವಾಸಪ್ರಯಾಣವನ್ನು ತಿಳಿಯದೆ ಇದ್ದಾರೆ. ನೀನು ಧರ್ಮವನ್ನು ಉಪೇಕ್ಷೆಮಾಡಿದರೆ ಮುಂದೆ ಧರ್ಮವನ್ನು ನಿಲ್ಲಿಸುವವರಾರು ? ಹಂಸಪಕ್ಷಿಗಳ ಹಾಗೆಯೂ ಮುತ್ತಿನ ಚಿಪ್ಪಿನ ಹಾಗೆಯೂ ಬಿಳುಪಾದ ತಲೆಗೂದಲುಗಳುಳ್ಳ ನಾವು ನಿನ್ನನ್ನು ಬೇಡಿಕೊಳ್ಳುತ್ತೇವೆ. ನೀನು

ಸಿಲ್ಲು. ಅತ್ಯಂತ ಉನ್ನತವಾಗಿ ವಾಯುವೇಗ ಮನೋವೇಗವುಳ್ಳ ಕೊಬ್ಬಿದ ಕುದುರೆಗಳಿಂದ ಶೀಘ್ರ ಗತಿಯುಳ್ಳ ರಥವನ್ನೇರಿಕೊಂಡು ಹೋದರೆ ನಾವು ನಿನ್ನ ಬೆನ್ನುಹಿಡಿದು ಬರಲಾರೆವು. ನೀನು ವನಕ್ಕೆ ಹೋಗುವುದನ್ನು ಕಂಡು ವೃಕ್ಷಗಳು ಚಲಿಸುವ ತಳಿರುಗಳೆಂಬ ಕೈಗಳನ್ನು ಬೀಸುತ್ತ ತಮ್ಮಲ್ಲಿರುವ ಪಕ್ಷಿಗಳ ಧ್ವನಿಗಳಿಂದ 'ನಿಲ್ಲುನಿಲ್ಲು! ಸ್ವಾಮಿ, ಲೋಕರಕ್ಷಕ!' ಎಂದು ಕರೆಯುತ್ತಿರುವಂತೆ ಕಾಣುತ್ತಿವೆ. ಪಕ್ಷಿಗಳೆಲ್ಲವೂ ಸರ್ವಭೂತದಯಾಪರನಾದ ನೀನು ವನವನ್ನೈದುವುದನ್ನು ಕಂಡು ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಗೆ ಹಾರುತ್ತ ಸಂಚಾರವನ್ನೂ ಆಹಾರಗಳನ್ನೂ ಬಿಟ್ಟಿವೆ!" ಎಂದು ನುಡಿದರು.

ಈ ರೀತಿಯಲ್ಲಿ ಹಂಬಲಿಸುತ್ತ ಹಿಂದೋಡಿಬರುತ್ತಿದ್ದ ಬ್ರಾಹ್ಮಣರನ್ನು ತಿರುಗಿ ಕಳುಹಿಸಬೇಕೆಂದು ದಾರಿಯನ್ನಡ್ಡಗಟ್ಟಿತೋ ಎಂಬಂತೆ ತಮಸಾನದಿಯು ಸಮೀಪವಾಯಿತು! ಆಗ ಸಾರಥಿಯಾದ ಸುಮಂತ್ರನು ರಥಕ್ಕೆ ಕಟ್ಟಿದ ಕುದುರೆಗಳನ್ನು ಬಿಚ್ಚಿ ಅವುಗಳ ಮೈಯನ್ನುಜ್ಜಿ ನೀರು ಕುಡಿಯಿಸಿ ಮಾರ್ಗದ ಬಳಲಿಕೆಯನ್ನು ಪರಿಹರಿಸಿದನು. ತಮಸಾನದಿಯ ತೀರದಲ್ಲಿ ರಥವು ನಿಂತಿತು.



೪೬ ನೆಯ ಅಧ್ಯಾಯ

## ಶ್ರೀರಾಮನು ತನ್ನ ಹಿಂದೆ ಬಂದ ಪ್ರಜೆಗಳನ್ನು ಬಿಟ್ಟು ವನಕ್ಕೆ ಹೋದದ್ದು

ಆಮೇಲೆ ಶ್ರೀರಾಮನು ಮನೋಹರವಾದ ತಮಸಾನದೀತೀರವನ್ನೈದಿ ತನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನು ನೋಡಿ ಲಕ್ಷ್ಮಣನನ್ನು ಕುರಿತು ಹೀಗೆ ನುಡಿದನು: "ಲಕ್ಷ್ಮಣ, ಈಗ ಸಾಯಂಕಾಲವಾಯಿತು. ವನವಾಸದಲ್ಲಿ ಸಂತೋಷವಾಗುವಂತೆ ಯತ್ನವನ್ನು ಮಾಡು. ನಿರ್ಜನಪ್ರದೇಶವಾದ ಅರಣ್ಯವನ್ನು ನೋಡು. ಅಲ್ಲಲ್ಲಿ ಮೃಗಪಕ್ಷಿಗಳು ತಮ್ಮ ಸ್ಥಾನಗಳನ್ನು ಸೇರುವುದನ್ನು ನೋಡು. ಪಕ್ಷಿಗಳ ಧ್ವನಿಗಳಿಂದ ಈ ವನವು ರೋದನಮಾಡುತ್ತಿದೆಯೋ ಎಂಬಂತೆ ಭಯಂಕರವಾಗಿದೆ. ನಮ್ಮ ತಂದೆಯಾದ ದಶರಥರಾಯನ ರಾಜಧಾನಿಯಾದ ಅಯೋಧ್ಯಾ ಪಟ್ಟಣದಲ್ಲಿರುವ ಸ್ತ್ರೀಯರೂ ವೃದ್ಧರೂ ಗೋಳಿಡುತ್ತಿರುವರು. ಈ ಅರ್ಥದಲ್ಲಿ ಸಂಶಯವಿಲ್ಲ. ದಶರಥರಾಯನೂ ಭರತಶತ್ರುಘ್ನರೂ ನಮ್ಮನ್ನು ನೆನೆದು ಹಂಬಲಿಸುತ್ತಿರುವರು. ನಾವು ನಮ್ಮ ತಂದೆಯಾದ ದಶರಥರಾಯನನ್ನೂ ಕೌಸಲ್ಯಾದೇವಿಯನ್ನೂ ನೆನೆದು ಹಂಬಲಿಸುತ್ತಿದ್ದೇವೆ. ಭರತಶತ್ರುಘ್ನರಿಬ್ಬರೂ ನಮ್ಮಲ್ಲಿ ಪ್ರೀತಿಯುಳ್ಳವರಾಗಿ ಬಹಳ ದುಃಖಪಡುತ್ತಿರುವರು. ಧರ್ಮಾತ್ಮನಾದ ಭರತನು ದಶರಥರಾಯನನ್ನೂ ಕೌಸಲ್ಯಾದೇವಿಯನ್ನೂ ಮೃದುನುಡಿಗಳಿಂದ ಸಂತವಿಡುವನು. ಭರತನ ಸತ್ಯಸಂಧತ್ವವನ್ನು ಬಲ್ಲ ನಾವು ನಮ್ಮ ತಾಯಿತಂದೆಗಳಿಗಾಗಿ ಚಿಂತಿಸುವುದೇಕೆ? ಲಕ್ಷ್ಮಣ, ನೀನು ನನ್ನ ಸಂಗಡ ಬಂದು ಕರ್ತವ್ಯವನ್ನು ಮಾಡಿದೆ. ಈ ಸೀತಾದೇವಿಯ ರಕ್ಷಣಾರ್ಥವಾಗಿ ಒಂದು ಉಪಾಯವನ್ನು ಮಾಡಬೇಕು. ಈಗ ಉದಕಾಹಾರವನ್ನು ಮಾಡಿ ಈ ರಾತ್ರಿಯನ್ನು ಕಳೆಯೋಣ. ಉದಕಾಹಾರವನ್ನೇ ಮಾಡಬೇಕೆಂದು ನನ್ನ ಬುದ್ಧಿಗೆ ತೋರುತ್ತದೆ" ಎಂದು ನುಡಿದು ಸಾರಥಿಯಾದ ಸುಮಂತ್ರನನ್ನು ಕುರಿತು "ಸುಮಂತ್ರ, ನೀನು ಸಾವಧಾನದಿಂದ ಕುದುರೆಗಳನ್ನು ರಕ್ಷಿಸು" ಎಂದು ಹೇಳಿದನು.

ಸುಮಂತ್ರನು ಸೂರ್ಯಾಸ್ತಮಯವಾಗುತ್ತಿರಲು ಆ ಕುದುರೆಗಳನ್ನು ಒಂದು ಕಡೆ ಕಟ್ಟಿ ಬೇಕಾದಷ್ಟು ಹುಲ್ಲುಹಾಕಿದನು. ಅನಂತರ ಸಂಧ್ಯಾವಂದನವನ್ನು ಮಾಡಿ ಲಕ್ಷ್ಮಣನ ಜೊತೆಯಲ್ಲಿ ರಾಮನಿಗೆ ತಳಿರುಹಾಸಿಗೆಯನ್ನು ನಿರ್ಮಿಸಿದನು. ಶ್ರೀರಾಮನು ಸೀತಾಸಮೇತನಾಗಿ ಆ ತಳಿರ ಹಾಸಿಗೆಯಲ್ಲಿ ಪವಡಿಸಿ ನಿದ್ರೆಗೈದನು. ಅದನ್ನು ಕಂಡು ಲಕ್ಷ್ಮಣನು ವನದಲ್ಲಿ ಮಲಗಿದ್ದವರನ್ನು ಸಾವಧಾನದಿಂದ ಕಾದಿರಬೇಕೆಂಬ ಬುದ್ಧಿಯಿಂದ ನಿದ್ರೆಯನ್ನು ತೊರೆದು ಸುಮಂತ್ರನ ಸಂಗಡ ಶ್ರೀರಾಮನ ಗುಣಗಳನ್ನು ಹೇಳುತ್ತ ಎಚ್ಚರವಾಗಿಯೇ ರಾತ್ರಿಯನ್ನು ಕಳೆದನು.

ಶ್ರೀರಾಮನು ಅರ್ಧರಾತ್ರಿಯಲ್ಲೆದ್ದು ತಮ್ಮ ಜೊತೆಯಲ್ಲಿ ಬಂದ ಪ್ರಜೆಗಳೆಲ್ಲರೂ ನಿದ್ರೆಮಾಡುತ್ತಿರುವುದನ್ನು ನೋಡಿ ತನ್ನ ಒಡಹುಟ್ಟಿದ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ಈ ಪ್ರಜೆಗಳು ತಮ್ಮ ಮನೆಗಳನ್ನು ಬಿಟ್ಟು ನಮ್ಮಮೇಲಣ ಪ್ರೀತಿಯಿಂದ ಮರಗಳ ಅಡಿಯಲ್ಲಿ ತಮ್ಮ ಮನೆಗಳಲ್ಲಿ ಸುಖನಿದ್ರೆಗೈಯುವಂತೆ ನಿದ್ರೆಮಾಡುತ್ತಿದ್ದಾರೆ, ನೋಡು. ಇವರು ಹೇಗಾದರೂ ನಮ್ಮನ್ನು ಪಟ್ಟಣಕ್ಕೆ ತಿರುಗಿಸಬೇಕೆಂದು ನಿಶ್ಚಯಮಾಡಿಕೊಂಡಿದ್ದಾರೆ. ಕಡೆಗೆ ಪ್ರಾಣಗಳನ್ನಾದರೂ ಬಿಡುವರಲ್ಲದೆ ನಮ್ಮನ್ನು ಬಿಟ್ಟು ಹೋಗಲಾರರು. ಇದು ನಿಶ್ಚಯ. ಆದ್ದರಿಂದ ನಾವು ಈ ಪ್ರಜೆಗಳು ಏಳುವುದಕ್ಕೆ ಮೊದಲೇ ಸದ್ದುಮಾಡದೆ ರಥವನ್ನೇರಿಕೊಂಡು ಹೋಗೋಣ. ನಮಗೆ ಮಾರ್ಗದಲ್ಲಿ ಯಾವ ಭಯವೂ ಇಲ್ಲ. ಈ ಪ್ರಜೆಗಳೊಳಗೆ ನಮ್ಮಲ್ಲಿ ಅತಿವಿಶ್ವಾಸವುಳ್ಳವರು ಮರದಡಿಯನ್ನಾಶ್ರಯಿಸಿಕೊಂಡು ನಿದ್ರೆಯಿಲ್ಲದಿರುವರು. ಲೋಕದಲ್ಲಿ ರಾಜಕುಮಾರರಾದವರು ತಮ್ಮಿಂದ ದುಃಖಹೊಂದಿದ ಪ್ರಜೆಗಳನ್ನು ಸಂತವಿಟ್ಟು ಅವರ ದುಃಖವನ್ನು ಪರಿಹರಿಸಬೇಕು. ನಮ್ಮ ದುಃಖವನ್ನೇ ಅವರಿಗೆ ಕೊಡಬಾರದು" ಎಂದು ನುಡಿದನು.

ಲಕ್ಷ್ಮಣನು ಸಾಕ್ಷಾತ್ ಧರ್ಮಸ್ವರೂಪನಾದ ಶ್ರೀರಾಮನನ್ನು ಕುರಿತು "ಎಲೈ ಸ್ವಾಮಿ, ಈ ಯೋಚನೆಯು ನನಗೂ ಸಂಮತ. ಶೀಘ್ರದಲ್ಲಿ ರಥವನ್ನೇರಿಕೊಂಡು ಹೋಗೋಣ" ಎಂದು ನುಡಿಯಲು ಶ್ರೀರಾಮನು ಸುಮಂತ್ರನನ್ನು ಕರೆದು ಶೀಘ್ರದಲ್ಲಿ ರಥವನ್ನು ವನಕ್ಕೆ ನಡೆಯಿಸಬೇಕೆಂದು ಕಟ್ಟುಮಾಡಿದನು. ಆತನು ಉತ್ತಮವಾದ ಜಾತ್ಯಶ್ವಗಳಿಂದ ರಥವನ್ನು ಪೋಳೈಸಿ ಕೈಮುಗಿದುಕೊಂಡು ರಥವು ಸಜ್ಜಾಗಿದೆಯೆಂದು ಹೇಳಿದನು. ಶ್ರೀರಾಮನು ಲಕ್ಷ್ಮಣನನ್ನೂ ಸೀತಾದೇವಿಯನ್ನೂ ಕೂಡಿಕೊಂಡು ರಥಾರೂಢನಾಗಿ ತಮಸಾನದಿಯನ್ನು ದಾಟಿ ಕಲ್ಲುಮುಳ್ಳುಗಳಿಲ್ಲದೆ ಭಯರಹಿತವೂ ಮನೋಹರವೂ ಆದ ಒಂದು ಮಾರ್ಗವನ್ನು ಕಂಡು ಪ್ರಜೆಗಳಿಗೆ ತಾವು ಹೋದ ದಾರಿಯು ತಿಳಿಯದೆ ದಿಗ್ಭ್ರಮೆಯಾಗುವಂತೆ ಮೂಡಣದಿಕ್ಕಿನ ದಾರಿಯನ್ನು ಬಿಟ್ಟು ಬಡಗಣದಿಕ್ಕಿನಲ್ಲಿ ರಥವನ್ನು ನಡೆಯಿಸಿ ಕೆಲವುದೂರ ಹೋಗಿ ತಿರುಗಿಯೂ ಮೊದಲ ದಾರಿಗೆ ತಂದು ವನಕ್ಕೆ ಬಿಜಯಂಗೈದನು. ಆ ಸಮಯದಲ್ಲಿ ಅವರ ಪ್ರಯಾಣಕ್ಕೆ ಮಂಗಳಕರವಾದ ಶಕುನಗಳಾದವು.



## ೪೭ ನೆಯ ಅಧ್ಯಾಯ

## ಪ್ರಜೆಗಳು ಅಯೋಧ್ಯೆಗೆ ಹಿಂದಿರುಗಿದುದು

ಆಮೇಲೆ ತಮಸಾನದೀತೀರದಲ್ಲಿ ಮಲಗಿದ್ದ ಪ್ರಜೆಗಳು ಪ್ರಾತಃಕಾಲದಲ್ಲೆದ್ದು ಶ್ರೀರಾಮನನ್ನು ಕಾಣದೆ ದುಃಖಾತಿಶಯದಿಂದ ಹಂಬಲಿಸುತ್ತ ಸ್ವಲ್ಪಹೊತ್ತಿನಮೇಲೆ ಎಚ್ಚತ್ತು ಕಣ್ಣೀರುಬಿಡುತ್ತ

ಅಲ್ಲಲ್ಲಿ ಹುಡುಕಿ ಕಾಣದೆ ಮುಖಕಾಂತಿಗುಂದಿ ತಮ್ಮೊಳಗೆ ತಾವು ಹಂಬಲಿಸತೊಡಗಿದರು. "ಅಕಟಕಟಾ! ನಮ್ಮ ನಿದ್ರೆಯನ್ನು ಸುಡಬೇಡವೆ! ನಿದ್ರೆಯಿಂದಲ್ಲವೇ ಶ್ರೀರಾಮನನ್ನಗಲಿದೆವು. ಮಹಾತ್ಮನಾಗಿ ಭುಜಬಲಪರಾಕ್ರಮಿಯಾದ ಆತನನ್ನು ಇನ್ನೆಂದಿಗೆ ಕಂಡೇವು! ಮಕ್ಕಳನ್ನು ಕಾಣುವ ರೀತಿಯಲ್ಲಿ ಯಾವಾಗಲೂ ಪ್ರೀತಿಯಿಂದ ರಕ್ಷಿಸುತ್ತಿದ್ದ ಶ್ರೀರಾಮನು ನಮ್ಮನ್ನು ಬಿಟ್ಟು ವನಕ್ಕೆ ಹೋದನು. ಇಷ್ಟರಮೇಲೆ ನಾವು ಇಲ್ಲಿಯೇ ಶರೀರಗಳನ್ನು ಬಿಡುವುದೇ ಲೇಸು. ಇಲ್ಲದಿದ್ದರೆ ಹಿಮವತ್ಪರ್ವತಕ್ಕೆ ಹೋಗಿ ಹಿಮದಿಂದಲಾದರೂ ಶರೀರಗಳನ್ನು ಬಿಡೋಣ! ಶ್ರೀರಾಮನಿಲ್ಲದ ನಮ್ಮ ಜೀವನವು ವ್ಯರ್ಥ. ಈ ತಮಸಾನದೀತೀರದಲ್ಲಿ ಬೇಕಾದಷ್ಟು ಒಣಗಿದ ಮರದ ಕೊಂಬೆಗಳಿವೆ. ಅವನ್ನು ತಂದು ಚಿತೆಯನ್ನೊಡ್ಡಿ ಅಗ್ನಿಪ್ರವೇಶವನ್ನಾದರೂ ಮಾಡೋಣ. ನಾವು ಇನ್ನು ಅಯೋಧ್ಯಾಪಟ್ಟಣಕ್ಕೆ ಹೋದರೆ ಅಲ್ಲಿರುವವರು ಶ್ರೀರಾಮನನ್ನು ಕರೆತಂದಿರಾ ಎಂದು ಕೇಳಿದರೆ ಅವರಿಗೆ ನಾವು ಏನು ಉತ್ತರವನ್ನು ಕೊಡುವುದು? ಆತನಿಲ್ಲದೆ ನಾವು ಪಟ್ಟಣಕ್ಕೆ ಹೋದರೆ ಎಲ್ಲರೂ ಬಹಳವಾಗಿ ಗೋಳಿಡುವರು. ನಾವು ಆತನ ಜೊತೆಯಲ್ಲಿ ಪಟ್ಟಣದಿಂದ ಹೊರಟುಬಂದವರಾದ್ದರಿಂದ ಪಟ್ಟಣಕ್ಕೆ ಹಿಂದಿರುಗಿ ಶೂನ್ಯವಾದ ಪಟ್ಟಣವನ್ನು ಹೇಗೆ ನೋಡುವುದು!" ಎಂದು ತಮ್ಮ ಭುಜಗಳನ್ನು ಮೇಲಕ್ಕೆ ನೆಗಹಿಕೊಂಡು ಅತ್ಯಂತ ದುಃಖಾಕ್ರಾಂತ ರಾಗಿ ಕರುವನ್ನು ಕಾಣದ ಹಸುವಿನಂತೆ ಹಂಬಲಿಸುತ್ತ ಶ್ರೀರಾಮನ ರಥವು ಹೋದ ಧಾರಿ ಹಿಡಿದು ಸ್ವಲ್ಪದೂರ ಹೋದರು. ಮುಂದೆ ಆ ರಥವು ಹೋದ ದಾರಿಯನ್ನು ಕಾಣದೆ "ರಥವು ಎಲ್ಲಿ ಹೋಯಿತು? ನಾವು ಇನ್ನೆಲ್ಲಿಗೆ ಹೋಗೋಣ? ನಮಗೆ ದೈವಗತಿ ಹೀಗಿತ್ತು! ಶ್ರೀರಾಮನನ್ನು ಕಾಣುವುದಕ್ಕೆ ಪುಣ್ಯವಿಲ್ಲದೆಹೋಯಿತು!" ಎಂದು ತಾವು ಹೋದ ದಾರಿಗೊಂಡೇ ತಿರುಗಿ ಬಂದರು. ಅವರು ಆತನ ವಿಯೋಗದಿಂದ ವ್ಯಥೆಪಡುತ್ತ ಗರುಡನು ಬಲಾತ್ಕರಿಸಿ ಸರ್ಪಗಳನ್ನೆಲ್ಲ ಸೆಳೆದುಹಾಕಿದ ನದಿಯಂತೆಯೂ ಚಂದ್ರನಿಲ್ಲದ ಆಕಾಶದಂತೆಯೂ ಉದಕವಿಲ್ಲದ ಸಮುದ್ರದಂತೆಯೂ ಕಾಣುತ್ತಿದ್ದ ಅಯೋಧ್ಯಾಪಟ್ಟಣವನ್ನು ಕಂಡು ಕಂಗೆಟ್ಟು ಧನಧಾನ್ಯಗಳಿಂದ ಪರಿಪೂರ್ಣವಾಗಿದ್ದ ತಮ್ಮ ಮನೆಗಳನ್ನು ಅಧಿಕವಾದ ದುಃಖದಿಂದ ಪ್ರವೇಶಿಸಿದರು. ಅಲ್ಲಿ ತಮ್ಮ ಸ್ತ್ರೀಯರು ಮಕ್ಕಳು ಬಂಧುಗಳಲ್ಲಿ ಇಚ್ಛೆಯಿಲ್ಲದೆ ಇದ್ದರು.



೪೮ನೆಯ ಅಧ್ಯಾಯ

## ಅಯೋಧ್ಯಾಪಟ್ಟಣದ ಸ್ತ್ರೀಯರ ಪ್ರಲಾಪ

ಈ ಪ್ರಕಾರ ಪುರಜನರು ಶ್ರೀರಾಮನ ಅಗಲಿಕೆಯಿಂದುಂಟಾದ ದುಃಖಾತಿಶಯದಿಂದ ನೊಂದು ಮುಖಕಾಂತಿಗುಂದಿ ಆತನನ್ನು ಹುಡುಕಿ ಕಾಣದೆ ತಿರುಗಿ ಬಂದು ತಮ್ಮ ಮನೆಗಳಲ್ಲಿ ತಮ್ಮ ಸ್ತ್ರೀಪುತ್ರ ಸಮೇತರಾಗಿ ದುಃಖದಿಂದ ಕಣ್ಣೀರುಬಿಡುತ್ತ ಇದ್ದರು. ಅಂಗಡಿಯವರು ಚಿತ್ತಸ್ವಾಸ್ಥ್ಯವಿಲ್ಲದೆ ಅಂಗಡಿಗಳನ್ನಿಡದಿದ್ದರು. ಗೃಹಸ್ಥರು ಅಡಿಗೆಮಾಡಲಿಲ್ಲ. ವಿಪುಲವಾದ ಧನ[illegible]ವಾದರೂ ಜನರು ಸಂತೋಷಿಸಲಿಲ್ಲ. ಮೊಟ್ಟಮೊದಲು ಗಂಡುಮಗುವನ್ನು ಹಡೆದ ತಾಯಿಯ[illegible] ಅದರಿಂದ ಆನಂದಿಸಲಿಲ್ಲ. ಅಯೋಧ್ಯಾಪಟ್ಟಣದಲ್ಲಿದ್ದ ಸ್ತ್ರೀಯರು ರೋದನಮಾಡುತ್ತ ತಮ್ಮ ಪತಿಗಳು ಮನೆಗಳಿಗೆ ಬಂದರೆ ಅಂಕುಶಗಳಿಂದ ಆನೆಯನ್ನು ಚುಚ್ಚುವಂತೆ ಅವರನ್ನು ನಿಷ್ಠುರೋಕ್ತಿಗಳಿಂದ

ಮಾತನಾಡಿಸಿದರು. "ಶ್ರೀರಾಮನಿಲ್ಲದಾಗ ನಮಗೆ ಈ ಮನೆಯಿಂದಲೂ ಮನೆಯಲ್ಲಿರುವ ವಸ್ತುಗಳಿಂದಲೂ ಪುತ್ರಧನಾದಿಗಳಿಂದಲೂ ಏನು ಪ್ರಯೋಜನ? ಲೋಕದಲ್ಲಿ ಲಕ್ಷ್ಮಣನೊಬ್ಬನೇ ಸತ್ಪುರುಷನು, ಕೃತಾರ್ಥನು, ಸೀತಾದೇವಿಯೊಬ್ಬಳೇ ಪತಿವ್ರತೆ, ಕೃತಾರ್ಥೆ, ಪುಣ್ಯೋದಯವುಳ್ಳವಳು; ವನದಲ್ಲಿಯೂ ತನ್ನ ಪತಿಯ ಸೇವೆ ಸತ್ಕಾರಗಳನ್ನೇ ಮಾಡಿಕೊಂಡಿರುವಳು. ಶ್ರೀರಾಮನಿಂದ ವನದಲ್ಲಿರುವ ನದಿಗಳೂ ಕೊಳಗಳೂ ಪುಣ್ಯತೀರ್ಥಗಳಾಗುವುವು. ವನಗಳೂ ಮನೋಹರವಾದ ತಪ್ಪಲುಗಳುಳ್ಳ ಪರ್ವತಗಳೂ ಆತನ ಪಾದಸಂಚಾರದಿಂದ ಪವಿತ್ರವಾಗುವುದಕ್ಕೆ ಜನ್ಮಾಂತರದಲ್ಲಿ ಯಾವ ಪುಣ್ಯವನ್ನು ಮಾಡಿದ್ದವೊ! ಶ್ರೀರಾಮನು ವನದಲ್ಲಿ ಸಂಚರಿಸುತ್ತ ಒಂದು ಪರ್ವತಕ್ಕೆ ಹೋದರೆ ಅದು ತನ್ನ ಇಷ್ಟದೇವತೆಯನ್ನು ಕಂಡಂತೆ ಎದುರುಗೊಂಡು ಅಭಿವಂದಿಸಿ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡುವುದು. ನಾನಾಪ್ರಕಾರವಾದ ಹೂದೋಟಗಳೂ ತಮ್ಮ ಪುಷ್ಪಫಲಗಳಿಂದ ಆತನಿಗೆ ಸತ್ಕಾರಗಳನ್ನು ಮಾಡುವುವು. ಅರಣ್ಯದಲ್ಲಿ ಮದದಿಂದ ಸೊಕ್ಕಿ ಝೇಂಕರಿಸುತ್ತಿರುವ ತುಂಬಿಹಿಂಡುಗಳಿಂದ ಒಪ್ಪುತ್ತಿರುವ ಮದ್ದಾನೆಗಳೂ ಆತನನ್ನು ಕಂಡು ಸತ್ಕಾರಗಳನ್ನು ಮಾಡುವುವು! ಪರ್ವತಗಳು ಶ್ರೀರಾಮನ ಶರೀರತಾಪಕ್ಕೆ ಶಾಂತಿಯಾಗುವಂತೆ ಆನಂದಾತಿಶಯದಿಂದ ನಿರ್ಝರೋದಕಗಳನ್ನು ಕೊಡುವುವು! ಮಹಾಭುಜಬಲಪರಾಕ್ರಮವುಳ್ಳ ಅತ್ಯಂತ ಶೂರನಾದ ಶ್ರೀರಾಮನು ಯಾವ ಸ್ಥಳದಲ್ಲಿರುವನೋ ಅಲ್ಲಿ ಭಯವೇ ಇಲ್ಲ. ಅಂಥವನ ಸಂಗಡ ನಾವು ಹೋಗೋಣ! ಆ ಮಹಾತ್ಮನ ಪಾದಗಳ ನೆಳಲೇ ನಮಗೆ ಗತಿಯೂ ಪರಮಸುಖವೂ ಅಲ್ಲದೆ ಈ ಮನೆಗಳಿಂದ ನಮಗೇನು ಪ್ರಯೋಜನ! ನಮಗೆಲ್ಲರಿಗೂ ಆತನೇ ಒಡೆಯ. ಆತನೇ ಗತಿ. ಆತನೇ ರಕ್ಷಕ. ಆದ್ದರಿಂದ ನಾವು ಆತನ ಸಮೀಪಕ್ಕೆ ಹೋಗೋಣ! ನಾವು ಸೀತಾದೇವಿಯ ಸೇವೆಯನ್ನು ಮಾಡಿಕೊಂಡಿರುತ್ತೇವೆ. ನೀವು ಶ್ರೀರಾಮನ ಸೇವೆಯನ್ನು ಮಾಡಿಕೊಂಡಿರಿ! ನಮ್ಮನ್ನು ಸೀತಾದೇವಿಯು ರಕ್ಷಿಸಿಕೊಳ್ಳುವಳು. ನಿಮ್ಮನ್ನು ಶ್ರೀರಾಮನು ರಕ್ಷಿಸುವನು! ನಮಗೆ ಮನಸ್ಸಿಗೆ ಹಿತವಾಗಿರುವುದರಿಂದ ವನವಾಸವೆಂಬ ದುಃಖವಿಲ್ಲ. ಕೈಕೇಯಿದೇವಿಯು ರಾಜ್ಯಾಧಿಪತ್ಯವನ್ನು ಮಾಡಿಕೊಂಡು ವಿವೇಕವಿಲ್ಲದೆ ಮನುಷ್ಯನ ತಾರತಮ್ಯವನ್ನು ನೋಡದಿದ್ದರೆ ನಾವು ಒಡೆಯರಿಲ್ಲದವರ ಹಾಗೆ ಇರಬೇಕಾದೀತು. ಕೈಕೇಯಿದೇವಿಯು ತಾನು ಐಶ್ವರ್ಯವನ್ನು ಪಡೆಯಲು ಜ್ಯೇಷ್ಠಪುತ್ರನಾದ ಶ್ರೀರಾಮನನ್ನು ಬಿಟ್ಟಬಳಿಕ ಆ ಕುಲಗೆಡುಕಿಯನ್ನು ಯಾರು ಸೇರಿ ಸುಖಿಸಿಯಾರು! ನಮಗೆ ಈ ಮನೆಯಿಂದಲೂ ಮಕ್ಕಳಿಂದಲೂ ಜೀವನದಿಂದಲೂ ಏನು ಪ್ರಯೋಜನ! ಕೈಕೇಯಿದೇವಿಯ ರಾಜ್ಯದಲ್ಲಿ ನಾವು ನಡೆಯುವ ಹೆಣದಂತಿರಲಾರೆವು. ಈ ವಿಷಯದಲ್ಲಿ ನಮ್ಮ ಮಕ್ಕಳೇ ಸಾಕ್ಷಿ! ಮನಸ್ಸಿನಲ್ಲಿ ಸ್ವಲ್ಪವಾದರೂ ದಯೆಯಿಲ್ಲದೆ ದಶರಥಮಹಾರಾಯನ ಜ್ಯೇಷ್ಠಪುತ್ರನಾದ ಶ್ರೀರಾಮನನ್ನು ರಾಜ್ಯಭ್ರಷ್ಟನಾಗಿ ಮಾಡಿ ಹೊರಡಿಸಿದ ಕೈಕೇಯಿದೇವಿಯ ಅಧೀನದಲ್ಲಿ ನಾವು ಹೇಗೆ ಬದುಕುವೆವು? ಈಕೆಯು ಮಾಡಿದ ಕೃತ್ಯದಿಂದ ಈ ರಾಜ್ಯವು ಅನಾಯಕವಾಗಿ ನಾಶವನ್ನೈದುವುದು. ಶ್ರೀರಾಮನು ವನವಾಸವನ್ನೈದಿದಮೇಲೆ ದಶರಥರಾಯನು ಜೀವಿಸಲಾರನು. ದಶರಥನು ಸತ್ತರೆ ಆಮೇಲೆ ಉಳಿಯುವುದು ಗೋಳಾಟವೊಂದೇ. ಆದ್ದರಿಂದ ನಾವೆಲ್ಲರೂ ವಿಷಪಾನವನ್ನು ಮಾಡಿಯಾದರೂ ಜೀವವನ್ನು ತೊರೆಯೋಣ. ಅಥವಾ ಶ್ರೀರಾಮನ ಹಿಂದೆ ಹೋಗೋಣ. ಅದೂ ಆಗದಿದ್ದರೆ ಎಲ್ಲಾದರೂ ಕಾಣದೆ ಇದ್ದ ರಾಜ್ಯಕ್ಕೆ ಹೋಗಿ ಅಜ್ಞಾತವಾಸವನ್ನು ಮಾಡಿಕೊಂಡಿರೋಣ. ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ವನಕ್ಕೆ ಹೋದಮೇಲೆ ತೋಳಗಳ ಮಧ್ಯದಲ್ಲಿರುವ ಕುರಿಗಳಂತೆ ನಾವು ಭರತನ ಸಮೀಪದಲ್ಲಿ ಹೇಗೆ ಇರುವುದು? ಪೂರ್ಣಚಂದ್ರನಂತೆ ಮುಖವುಳ್ಳವನೂ

ಶ್ಯಾಮಲವರ್ಣನೂ ಮೊಳಕಾಲುಪರ್ಯಂತ ಉದ್ದವಾದ ತೋಳುಗಳುಳ್ಳವನೂ ತಾವರೆ ಎಸಳುಗಳ ಹಾಗೆ ಕಣ್ಣುಗಳುಳ್ಳವನೂ ಎಲ್ಲರಲ್ಲಿಯೂ ವಿನಯದಿಂದ ಮೃದುನುಡಿಗಳನ್ನು ನುಡಿಯುವವನೂ ಸತ್ಯವಾದಿಯೂ ಮಹಾಬಲವುಳ್ಳವನೂ ಸೌಮ್ಯಸ್ವರೂಪನೂ ಚಂದ್ರನಹಾಗೆ ಸಮಸ್ತ ಪ್ರಾಣಿಗಳಿಗೂ ಸಂತೋಷವುಂಟುಮಾಡುವವನೂ ಪುರುಷೋತ್ತಮನೂ ಮದ್ದಾನೆಯಂತೆ ಸತ್ತ್ವವುಳ್ಳವನೂ ಆದ ಶ್ರೀರಾಮನು ವನದಲ್ಲಿ ಸಂಚರಿಸುತ್ತ ಸಮಸ್ತ ಕಾನನಗಳನ್ನೂ ತನ್ನ ಕಾಂತಿಯಿಂದ ಪ್ರಕಾಶ ಗೊಳಿಸುತ್ತಿರುವನು" ಎಂದು ನಾನಾಪ್ರಕಾರವಾಗಿ ಮೃತ್ಯುದೇವತೆಯು ಸನ್ನಿಹಿತವಾದಾಗ ಭಯಪಡುವಂತೆ ಅಂಜುತ್ತ ಹಂಬಲಿಸುತ್ತಿದ್ದರು.

ಆ ಸಮಯದಲ್ಲಿ ಸೂರ್ಯನು ಅಸ್ತಾಚಲವನ್ನೈದಲು ರಾತ್ರಿಯಾಯಿತು. ಆಗ ದೀಕ್ಷಿತರ ಮನೆಗಳಲ್ಲಿ ಅಗ್ನಿಗಳು ಶಾಂತವಾಗಿ ಅಧ್ಯಯನಪಾಠಗಳು ನಡೆಯಲಿಲ್ಲ. ಸ್ತ್ರೀಯರು ಶ್ರೀರಾಮನ ವನವಾಸದಿಂದ ತಮ್ಮ ತಾಯಿತಂದೆ ತಮ್ಮಂದಿರು ಮಕ್ಕಳು ಹೋದಂತೆ ಹಂಬಲಿಸಿ ಚೈತನ್ಯಗುಂದಿ ರೋದನಮಾಡುತ್ತಿದ್ದರು.. ಅವರಿಗೆ ಶ್ರೀರಾಮನ ವಿಯೋಗವು ತಮ್ಮ ಪುತ್ರವಿಯೋಗಕ್ಕಿಂತಲೂ ಅಧಿಕವಾಗಿತ್ತು. ಶ್ರೀರಾಮನು ಇದ್ದಾಗ ಎಲ್ಲಿನೋಡಿದರೂ ಗೀತ ವಾದ್ಯ ನೃತ್ಯಗಳಿಂದ ಅತ್ಯಂತ ಉತ್ಸವದಲ್ಲಿದ್ದ ಅಯೋಧ್ಯಾಪಟ್ಟಣವು ಆತನು ವನವನ್ನೈದಲು ಪ್ರಳಯಕಾಲದ ಚಂಡ ವಾಯುವಿನಿಂದ ಅಲ್ಲಕಲ್ಲೋಲವಾಗಿ ಘುಳುಘುಳು ಶಬ್ದಗಳಿಂದ ಬೊಬ್ಬಿಡುವ ಸಮುದ್ರದಂತೆ ಕಾಣಿಸುತ್ತಿದ್ದಿತು.



## ೪೯ ನೆಯ ಅಧ್ಯಾಯ

## ಶ್ರೀರಾಮನು ಕೋಸಲದೇಶವನ್ನು ದಾಟಿಹೋದದ್ದು

ಅತ್ತ ಶ್ರೀರಾಮನು ಆ ಅರ್ಧರಾತ್ರಿಯಲ್ಲಿ ರಥಾರೂಢನಾಗಿ ಹೊರಟು ಸೂರ್ಯೋದಯದ ಹೊತ್ತಿಗೆ ಬಹುದೂರ ಹೋಗಿ ಪ್ರಾತಃಕಾಲವಾಗಲು ಸ್ನಾನಸಂಧ್ಯಾವಂದನಾದಿಗಳನ್ನು ಮುಗಿಸಿ ಸಮೀಪದಲ್ಲಿದ್ದ ಗ್ರಾಮಗಳನ್ನೂ ಪುಷ್ಪಿತಗಳಾದ ವನಗಳನ್ನೂ ನೋಡುತ್ತ ಉತ್ತಮಾಶ್ವಗಳಿಂದ ಯುಕ್ತವಾದ ರಥವನ್ನು ಹತ್ತಿಕೊಂಡು ಅಲ್ಲಿಂದ ಮುಂದಕ್ಕೆ ಹೊರಟನು. ಆ ಸಮಯದಲ್ಲಿ ಅಲ್ಲಿ ಕೂಡಿದ್ದ ನೋಟಕರು ಒಬ್ಬರಿಗೊಬ್ಬರು "ಅಕಟಕಟಾ! ದಶರಥರಾಯನನ್ನು ಸುಡಬೇಡವೆ! ಒಬ್ಬ ಸ್ತ್ರೀಯ ಮಾತಿಗೆ ಮರುಳಾಗಿ ಕಾಮಾಂಧಕಾರದಿಂದ ಜ್ಯೇಷ್ಠಪುತ್ರನೂ ಸುಗುಣಾಢ್ಯನೂ ಸುಕುಮಾರದೇಹಿಯೂ ಆದ ಶ್ರೀರಾಮನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ಹೊರಡಿಸಿದನು. ಮಹಾಪಾಪಿಯಾದ ಕೈಕೇಯಿದೇವಿಯು ಕಲ್ಲೆದೆಯುಳ್ಳವಳು. ಕ್ಷುದ್ರಕರ್ಮದಲ್ಲಿ ತೊಡಗಿ ಧರ್ಮಿಷ್ಠನೂ ಜ್ಯೇಷ್ಠಪುತ್ರನೂ ಆದ ಶ್ರೀರಾಮನನ್ನು ವನಕ್ಕೆ ಹೊರಡಿಸಿದಳು. ಜನಕರಾಯನ ಮಗಳಾದ ಸೀತಾದೇವಿಯು ಅನೇಕ ಸುಖವನ್ನನುಭವಿಸಿಕೊಂಡಿದ್ದವಳು. ಆ ದೇವಿಯು ಆಲಸ್ಯವಿಲ್ಲದೆ ಅತಿವಿಶ್ವಾಸದಿಂದ ವನವಾಸವನ್ನು ಮಾಡುವ ಮಹಾಪ್ರಾಜ್ಞನಾದ ತನ್ನ ಪತಿಯ ಹಿಂದೆ ಹೋಗಿ ಅರಣ್ಯದುಃಖವನ್ನು ಹೇಗೆ ಅನುಭವಿಸುವಳು! ಅಯ್ಯೋ! ದಶರಥಮಹಾರಾಯನು ನಿರ್ಮಲಾಂತಃಕರಣನೂ ಪ್ರಜಾಪಾಲಕನೂ ಜ್ಯೇಷ್ಠಪುತ್ರನೂ ಆದ ಶ್ರೀರಾಮನನ್ನು ಸ್ವಲ್ಪವಾದರೂ ದಯೆಯಿಲ್ಲದೆ ವನಕ್ಕೆ ಹೊರಡಿಸಿದನಲ್ಲ!" ಎಂದು ನುಡಿಯುತ್ತಿದ್ದರು. ಆ ಬಳಿಕ ಶ್ರೀರಾಮನು ಕೋಸಲದೇಶವನ್ನು ದಾಟಿ ವೇದಶ್ರುತಿಯೆಂಬ ಪುಣ್ಯೋದಕಪ್ರವಾಹವುಳ್ಳ ನದಿಯನ್ನು ದಾಟಿ

ಅಗಸ್ತ್ಯಮುನೀಶ್ವರನಿದ್ದ ದಿಕ್ಕಿಗೆ ಹೋಗಿ ಅಲ್ಲಿಂದ ಮುಂದೆ ಸಮಸ್ತಪ್ರಾಣಿಗಳ ಬಳಲಿಕೆಯನ್ನು ಪರಿಹರಿಸುವ ಗೋಮತೀನದಿಯನ್ನು ದಾಟಿ ಅನಂತರ ಸ್ಯಂದಿಕಾನದಿಯನ್ನು ದಾಟಿದನು. ಮುಂದೆ ಹೋಗಿ ಸೀತಾದೇವಿಯ ಸಂಗಡ ಇಷ್ಟಾಲಾಪಗಳನ್ನು ಮಾಡುತ್ತ ಪೂರ್ವದಲ್ಲಿ ವೈವಸ್ವತಮನುವು ಇಕ್ಷ್ವಾಕುಮಹಾರಾಯನಿಗೆ ಕೊಟ್ಟ ದೇಶವೆಂದು ಆ ದೇಶವನ್ನು ತೋರಿಸಿದನು. ಸಾರಥಿಯಾದ ಸುಮಂತ್ರನನ್ನು ಕುರಿತು ಮದದಿಂದ ಸೊಕ್ಕಿದ ಹಂಸಪಕ್ಷಿಯ ಸ್ವರದಂತೆ ಮನೋಹರವೂ ಗಂಭೀರವೂ ಆದ ಧ್ವನಿಯಿಂದ ತಾನು ವನವಾಸವನ್ನು ಮುಗಿಸಿ ಅಯೋಧ್ಯಾಪಟ್ಟಣಕ್ಕೆ ತಿರುಗಿ ಬಂದು ತಾಯಿತಂದೆ ಒಡಹುಟ್ಟಿದವರನ್ನು ಕಂಡು ಸರಯೂನದಿಯತೀರದಲ್ಲಿ ವಾಸಮಾಡಿಕೊಂಡು ಅಯೋಧ್ಯಾಪಟ್ಟಣಾಧಿವಾಸಿಗಳಿಗೆ ಧೈರ್ಯವು ಹುಟ್ಟುವಂತೆ ಬೇಟೆಯಾಡಿ ದುಷ್ಟಮೃಗಗಳನ್ನು ಸಂಹರಿಸಿ ಸಮಸ್ತ ಋಷಿಗಳಿಗೂ ಸಂತೋಷವಾಗುವಂತೆ ಸಂಚಾರ ಮಾಡಬೇಕೆಂಬ ಅಭಿಲಾಷೆಯಿದೆ ಯೆಂದು ನುಡಿಯುತ್ತ ಹೋಗುತ್ತಿದ್ದನು.



## ೫೦ ನೆಯ ಅಧ್ಯಾಯ

## ಗುಹನು ಶ್ರೀರಾಮನ ಬಳಿಗೆ ಬಂದದ್ದು

ಆಮೇಲೆ ಶ್ರೀರಾಮನು ವಿಶಾಲವಾದ ಕೋಸಲದೇಶವನ್ನು ಕಳೆದು ಅಯೋಧ್ಯಾಪಟ್ಟಣಕ್ಕೆ ಅಭಿಮುಖನಾಗಿ ಕೈಮುಗಿದುಕೊಂಡು “ ಲೋಕೋತ್ತರವಾದ ಅಯೋಧ್ಯಾಪಟ್ಟಣವೆ ! ಇಕ್ಷ್ವಾಕು ರಾಯರಿಂದ ಪರಿಪಾಲಿಸಲ್ಪಟ್ಟ ನಿನಗೆ ಕೈಮುಗಿದು ಬೀಳ್ಕೊಳ್ಳುತ್ತೇನೆ. ನಿನ್ನಲ್ಲಿರುವ ದೇವತೆಗಳು ನಿನ್ನನ್ನು ರಕ್ಷಿಸಿಕೊಂಡಿರುವರು. ನಾನು ಹದಿನಾಲ್ಕು ವರುಷಗಳ ವನವಾಸವನ್ನು ತೀರಿಸಿ ದಶರಥ ರಾಯನ ಆಜ್ಞೆಯನ್ನು ಪರಿಪಾಲಿಸಿ ವನದಿಂದ ತಿರುಗಿ ಬಂದು ನಿನ್ನನ್ನೂ ನನ್ನ ತಾಯಿತಂದೆಗಳನ್ನೂ ನೋಡುವೆನು ” ಎಂದು ಹೇಳುತ್ತಾ ನಮಸ್ಕಾರವನ್ನು ಮಾಡಿದನು. ಆಮೇಲೆ ತನ್ನನ್ನು ನೋಡ ಬೇಕೆಂದು ಬಂದ ಕೋಸಲದೇಶದ ಜನರು ಕಣ್ಣೀರುಬಿಡುತ್ತ ಕೈಯೆತ್ತಿಕೊಂಡು ಮೊರೆಯಿಡು ವುದನ್ನು ನೋಡಿ ತನ್ನ ಭುಜಗಳನ್ನು ಮೇಲಕ್ಕೆತ್ತಿಕೊಂಡು ಅವರನ್ನು ಕುರಿತು “ ಎಲೈ ಪ್ರಜೆಗಳಿರಾ, ನೀವು ನನ್ನಲ್ಲಿ ಕೃಪಾದೃಷ್ಟಿಯನ್ನಿರಿಸಿ ಅನುಗ್ರಹ ಮಾಡಿದಿರಿ. ಇನ್ನೂ ದುಃಖಿಸುತ್ತಿರು ವುದು ಯೋಗ್ಯವಲ್ಲ. ನೀವು ನಿಮ್ಮ ಕಾರ್ಯಕ್ಕೆ ಹೋಗಿರಿ ” ಎಂದು ನುಡಿದನು.

ಆ ಮಾತನ್ನು ಕೇಳಿ ಆ ಜನಗಳು ಮಹಾತ್ಮನಾದ ಶ್ರೀರಾಮನಿಗೆ ಅಭಿವಂದಿಸಿ ಅಲ್ಲಲ್ಲಿ ಒಟ್ಟು ಗೂಡಿಕೊಂಡು ಗೋಳಿಡುತ್ತಿರಲು, ಆತನು ಸಾಯಂಕಾಲದಲ್ಲಿ ಸೂರ್ಯನು ಮರೆಯಾಗುವಂತೆ ಆ ಜನರ ದೃಷ್ಟಿಗೆ ಕಾಣದ ಹಾಗೆ ಮುಂದಕ್ಕೆ ಹೋದನು. ಅಲ್ಲಿ ಪವಿತ್ರವಾದ ಗಂಗಾನದಿಯನ್ನು ಕಂಡನು. ಅದು ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಹರಿಯುವ ದಿವ್ಯಸ್ವರೂಪವಾದ ಮಂಗಳತೀರ್ಥವುಳ್ಳದ್ದು. ಪುಣ್ಯಾತ್ಮರಾದ ಋಷಿಸಮೂಹಗಳಿಂದಲೂ ಗೃಹಸ್ಥಾಶ್ರಮಿಗಳಾಗಿ ಅನೇಕ ಯಾಗ ಸತ್ಕರ್ಮಗಳನ್ನು ಮಾಡಿಕೊಂಡಿದ್ದ ಪುಣ್ಯಾತ್ಮರಾದ ದೀಕ್ಷಿತ ರಿಂದಲೂ ಅನೇಕ ಸತ್ಕರ್ಮಾನುಷ್ಠಾನ ಭಿಕ್ಷಾಚರಣೆ ವೇದಾಧ್ಯಯನಗಳನ್ನು ಮಾಡಿಕೊಂಡಿದ್ದ ಬ್ರಹ್ಮಚಾರಿಗಳಿಂದಲೂ ತಮ್ಮ ಪತ್ನಿಯರೊಡನೆ ಅಗ್ನಿಹೋತ್ರಗಳನ್ನು ಮಾಡಿಕೊಂಡು ಪರ್ಣಶಾಲೆ ಗಳಲ್ಲಿದ್ದ ವಾನಪ್ರಸ್ಥಾಶ್ರಮಿಗಳಿಂದಲೂ ಅತಿವಿರಕ್ತರೂ ಬ್ರಹ್ಮಜ್ಞಾನತತ್ಪರರೂ ವೇದಾಂತೈಕ

ನಿಷ್ಠರೂ ಆಗಿ ದಂಡಕಮಂಡಲುಗಳನ್ನು ಧರಿಸಿಕೊಂಡಿದ್ದ ಸಂನ್ಯಾಸಿಗಳಿಂದಲೂ ಆ ನದಿಯ ತೀರವು ವ್ಯಾಪ್ತವಾಗಿತ್ತು. ಆ ನದಿಯು ಮನೋಹರವಾದ ಮಡುಗಳುಳ್ಳದ್ದಾಗಿ, ದೇವ ದಾನವ ಗಂಧರ್ವ ಯಕ್ಷ ಕಿನ್ನರ ಕಿಂಪುರುಷರಿಂದ ಸೇವಿಸಲ್ಪಟ್ಟದ್ದಾಗಿ, ಎಲ್ಲಿ ನೋಡಿದರೂ ಜಲಕ್ರೀಡೆಯನ್ನು ಆಡುತ್ತಿದ್ದ ದೇವಸ್ತ್ರೀಯರಿಂದ ಮನೋಹರವಾಗಿತ್ತು. ಆ ನದಿಯು ದೇವತಾಯೋಗ್ಯವಾದ ಕಮಲಗಳಿಂದ ಅತಿರಮ್ಯವಾಗಿದ್ದಿತು. ತೆರೆಗಳ ಅನ್ಯೋನ್ಯವಾದ ಹೊಯ್ಲುಗಳಿಂದ ಕೋಲಾಹಲವುಳ್ಳದ್ದಾಗಿ, ನೊರೆಗಳಿಂದ ಮುಗುಳುನಗೆಯುಳ್ಳದ್ದಾಗಿ, ಒಂದು ಕಡೆ ಜಡೆಯಾಕಾರವಾದ ಪ್ರವಾಹವುಳ್ಳದ್ದಾಗಿ, ಮತ್ತೊಂದು ದಿಕ್ಕಿನಲ್ಲಿ ಸುಳಿಗಳಿಂದ ಕೂಡಿದ್ದಾಗಿ, ಒಂದು ದಿಕ್ಕಿನಲ್ಲಿ ಉದಕವು ಚಲಿಸದೆ ಗಂಭೀರವಾಗಿ, ಮತ್ತೊಂದು ದಿಕ್ಕಿನಲ್ಲಿ ಅತಿವೇಗವುಳ್ಳ ಪ್ರವಾಹವುಳ್ಳದ್ದಾಗಿ, ಒಂದು ದಿಕ್ಕಿನಲ್ಲಿ ಘುಮ ಘುಮ ಎಂಬ ಗಂಭೀರಧ್ವನಿಯುಳ್ಳದ್ದಾಗಿ, ಮತ್ತೊಂದು ದಿಕ್ಕಿನಲ್ಲಿ ಭಯಂಕರವಾಗಿ ಭೋರಿಡುವ ಧ್ವನಿಯುಳ್ಳದ್ದಾಗಿದ್ದಿತು. ಒಂದು ಕಡೆ ದೇವತಾಯೋಗ್ಯವಾದ ಚೆಂಗಣೆಗಲ ಪುಷ್ಪವುಳ್ಳದ್ದಾಗಿ, ಮತ್ತೊಂದು ಕಡೆಯಲ್ಲಿ ಗಾತ್ರವಾದ ಮಳಲೊಟ್ಟುಗಳುಳ್ಳದ್ದಾಗಿ, ಒಂದು ಕಡೆಯಲ್ಲಿ ಹಂಸ ಸಾರಸ ಚಕ್ರವಾಕ ಮೊದಲಾದ ಮದದಿಂದ ಸೊಕ್ಕಿದ ಪಕ್ಷಿಗಳ ಧ್ವನಿಗಳಿಂದ ಮನೋಹರವಾಗಿ, ಮತ್ತೊಂದು ದಿಕ್ಕಿನಲ್ಲಿ ತೀರಗಳಲ್ಲಿ ಸಾಲಾಗಿ ಪುಷ್ಪಿತವಾದ ಮರಗಳಿಂದ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟಿರುವ ಹಾಗೆ ತೋರುತ್ತಲಿತ್ತು. ಇನ್ನೊಂದು ಕಡೆ ಕಮಲಗಳಿಂದ ಮನೋಹರವಾಗಿ, ಮತ್ತೊಂದು ದಿಕ್ಕಿನಲ್ಲಿ ಹೂವುಗಳ ಪರಾಗಗಳಿಂದ ಲೇಪಿಸಲ್ಪಟ್ಟ ಶರೀರವುಳ್ಳದ್ದೋ ಎಂಬ ಹಾಗೆ ಒಪ್ಪುತ್ತಲಿತ್ತು. ಸಮಸ್ತ ಪ್ರಾಣಿಗಳ ಪಾಪಸಮೂಹವನ್ನು ಪರಿಹರಿಸುವಂಥಾದ್ದಾಗಿ ಸ್ಫಟಿಕಮಣಿಯಂತೆ ನಿರ್ಮಲವಾದ ಉದಕವುಳ್ಳದ್ದಾಗಿ, ದಿಗ್ಗಜಗಳಂತಿದ್ದ ಕಾಡಾನೆಗಳಿಂದ ಮನೋಹರವಾಗಿದ್ದಿತು. ಸ್ನಾನಾರ್ಥವಾಗಿ ಬಂದ ದೇವಸಮೂಹಗಳಿಂದಲೂ ದೇವದುಂದುಭಿಗಳ ಧ್ವನಿಗಳಿಂದಲೂ ಮನೋಹರವಾಗಿ, ಎಲ್ಲಿ ನೋಡಿದರೂ ಪುಷ್ಪಭರಿತಗಳಾದ ವೃಕ್ಷಗಳೆಂಬ ಭೂಷಣಗಳಿಂದ ಅಲಂಕರಿಸಲ್ಪಟ್ಟ ಸ್ತ್ರೀಯೋ ಎಂಬ ಹಾಗಿದ್ದ ತಳಿರು ಲತಾಮಂಟಪಗಳಿಂದ ಮನೋಹರವಾಗಿದ್ದಿತು. ಶಿಂಶುಮಾರ ನೀರಾನೆ ಜಲಸರ್ಪಗಳಿಂದ ಇಟ್ಟಣಿಸಿದ್ದಿತು. ಸಗರನ ಮಕ್ಕಳ ಮೋಕ್ಷಾರ್ಥವಾಗಿ ಭಗೀರಥನ ತಪಸ್ಸಾಮರ್ಥ್ಯದಿಂದ ಸ್ವರ್ಗದಿಂದಿಳಿದು ಪರಮೇಶ್ವರನ ಜಟಾಮುಕುಟದಲ್ಲೆರಗಿ ಸಮಸ್ತ ಪ್ರಾಣಿಗಳ ಪಾಪಗಳನ್ನೂ ನಾಶಮಾಡುವಂಥಾದ್ದಾಗಿ, ಸಾಕ್ಷಾತ್ ಪರಮಪುರುಷನಾದ ನಾರಾಯಣನ ಪಾದದಿಂದುದ್ಭವಿಸಿದಂಥ ಸಮುದ್ರರಾಜಪತ್ನಿಯಾದ ಗಂಗಾನದಿಯನ್ನು ಶ್ರೀರಾಮನು ದರ್ಶನಮಾಡಿದನು. ಅನಂತರ ಸಾರಥಿಯಾದ ಸುಮಂತ್ರನನ್ನು ನೋಡಿ "ಸುಮಂತ್ರ, ನಾವು ಈಹೊತ್ತು ಈ ಗಂಗಾತೀರದಲ್ಲಿ ಇರೋಣ. ಇಲ್ಲಿ ಕೋರಕಿತವೂ ಪುಷ್ಪಿತವೂ ಫಲವತ್ತೂ ಆದ ಇಂಗಳವೃಕ್ಷವಿದೆ. ಈ ಮರದಡಿಯಲ್ಲಿದ್ದು ಗಂಗಾಸೇವೆಯನ್ನು ಮಾಡೋಣ. ಈ ಗಂಗೆಯನ್ನು ಪಶುಪಕ್ಷಿಗಳು ಕೂಡ ಸೇವಿಸಿ ಮುಕ್ತಿಮಾರ್ಗವನ್ನು ಸೇರುವುವು" ಎಂದು ನುಡಿದನು.

ಸುಮಂತ್ರನು ಮಹಾಪ್ರಸಾದವೆಂದು ಆ ಇಂಗಳದ ವೃಕ್ಷದ ಸಮೀಪಕ್ಕೆ ರಥವನ್ನು ನಡೆಸಲು ಶ್ರೀರಾಮನು ಸೀತಾಲಕ್ಷ್ಮಣರೊಡನೆ ರಥದಿಂದಿಳಿದು ಆ ವೃಕ್ಷದಡಿಯಲ್ಲಿದ್ದನು. ಆಗ ಸುಮಂತ್ರನು ರಥದ ಕುದುರೆಗಳನ್ನು ಬಿಚ್ಚಿ ಮೈಯನ್ನುಜ್ಜಿ ನೀರನ್ನು ಕುಡಿಸಿದನು. ಅನಂತರ ಶ್ರೀರಾಮನ ಸಮೀಪಕ್ಕೆ ಬಂದು ಕೈಮುಗಿದುಕೊಂಡು ನಿಂತನು.

ಆ ಸಮಯದಲ್ಲಿ ಶ್ರೀರಾಮನಿಗೆ ಪ್ರಾಣಸಖನೂ ಆ ದೇಶದ ಅಧಿಪತಿಯೂ ಸಮಸ್ತ ಕಿರಾತರಿಗೆ ಒಡೆಯನೂ ಆದ ಗುಹನು ತನ್ನ ದೇಶಕ್ಕೆ ಶ್ರೀರಾಮನು ಬಿಜಯಂಗೈದನೆಂಬ ವಾರ್ತೆಯನ್ನು ಕೇಳಿ ತನ್ನ ಪ್ರಧಾನಿಗಳನ್ನೂ ಜ್ಞಾತಿಗಳನ್ನೂ ಕೂಡಿಕೊಂಡು ಆತನನ್ನು ನೋಡಬೇಕೆಂದು ಬಂದನು.

ಶ್ರೀರಾಮನು ಆತನನ್ನು ದೂರದಲ್ಲಿಯೇ ಕಂಡು ಸೀತಾಲಕ್ಷ್ಮಣಸಮೇತನಾಗಿ ಎದುರುಗೊಂಡು ಹೋದನು. ಗುಹನು ಅತ್ಯಂತ ಪ್ರೀತಿಯಿಂದ ಶ್ರೀರಾಮನನ್ನು ತಬ್ಬಿಕೊಂಡು ಆತನನ್ನು ಕುರಿತು "ಶ್ರೀರಾಮ, ಅಯೋಧ್ಯಾಪಟ್ಟಣದ ಹಾಗೆಯೇ ಈ ದೇಶವೂ ನಿನ್ನದು. ನಾನು ಮಾಡುವ ಸೇವೆಯನ್ನು ಸ್ವೀಕರಿಸು. ನಿಮ್ಮಂಥ ಅತಿಥಿಗಳು ಯಾರಿಗೂ ದೊರಕಲಾರರು" ಎಂದು ನುಡಿದನು ಮತ್ತು ಗಂಗಾಜಲದಿಂದ ಶ್ರೀರಾಮಲಕ್ಷ್ಮಣಸೀತಾದೇವಿಯರಿಗೆ ಪ್ರತ್ಯೇಕವಾಗಿ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನೂ ಮಾಡಿ "ಶ್ರೀರಾಮ, ಈ ರಾಜ್ಯವು ನಿನ್ನದು. ನಾನು ನಿನ್ನ ಸೇವಕನು. ನೀನು ನನಗೆ ಒಡೆಯನು. ಈ ರಾಜ್ಯವನ್ನು ನೀನೇ ಪರಿಪಾಲಿಸು. ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯಗಳೆಂಬ ನಾಲ್ಕುವಿಧಗಳಾದ ಆಹಾರವನ್ನು ಕೈಗೊಳ್ಳು. ಉತ್ತಮವಾದ ಸುಪ್ಪತ್ತಿಗೆಯಲ್ಲಿ ಪವಡಿಸು. ಕುದುರೆಗಳಿಗೆ ಆಹಾರವನ್ನು ಕೊಡಿಸುತ್ತೇನೆ" ಎಂದು ನುಡಿದನು.

ಶ್ರೀರಾಮನು "ಎಲೈ ಗುಹನೆ, ನೀನು ಕಾಲುನಡೆಯಿಂದ ಬಂದು ನನ್ನನ್ನು ಕಾಣಿಸಿಕೊಂಡದ್ದರಿಂದಲೂ ಅತ್ಯಂತ ಸ್ನೇಹದಿಂದ ಸಂಭಾಷಣೆಮಾಡಿದ್ದರಿಂದಲೂ ನಾವು ಸಂತುಷ್ಟರಾದೆವು. ಇಷ್ಟರಿಂದಲೇ ನೀನು ನಮಗೆ ಅನೇಕ ಸತ್ಕಾರಗಳನ್ನು ಮಾಡಿದಂತಾಯಿತು. ಮಕ್ಕಳು ಮೊಮ್ಮಕ್ಕಳು ಬಂಧುಜನಸಹಿತನಾಗಿ ಸುಖದಲ್ಲಿರುವ ನಿನ್ನನ್ನು ದೈವಾನುಕೂಲದಿಂದ ಕಂಡೆವು. ನಿನ್ನ ರಾಜ್ಯದಲ್ಲಿ ಎಲ್ಲರೂ ಸುಖವಾಗಿದ್ದಾರೆಯೆ ? ನೀನು ಸಂತೋಷವಾಗಿರುವೆಯಾ ? ನೀನು ಪ್ರೀತಿಯಿಂದ ಸಮಸ್ತ ಸಾಮಗ್ರಿಗಳನ್ನೂ ತರಿಸಿದ್ದನ್ನು ನಾನು ಬಲ್ಲೆ. ನಾನು ವನಕ್ಕೆ ಬರುವಾಗ ನಾರುಬಟ್ಟೆಗಳನ್ನುಟ್ಟು ಜಡೆಗಳನ್ನು ಧರಿಸಿಕೊಂಡು ಕಂದ ಮೂಲ ಫಲಾಹಾರಗಳಿಂದ ಹದಿನಾಲ್ಕು ವರುಷಗಳು ನಿಯಮದಿಂದಿರುವುದಾಗಿ ಪ್ರತಿಜ್ಞೆ ಮಾಡಿದ್ದರಿಂದ ಯಾವ ವಸ್ತುವನ್ನೂ ಪರಿಗ್ರಹಿಸುವುದಿಲ್ಲ. ನಾನು ವಾನಪ್ರಸ್ಥಾಶ್ರಮಿಯಾದ ತಪಸ್ವಿಯೆಂದು ತಿಳಿ. ಕುದುರೆಗಳಿಗೆ ಆಹಾರವನ್ನು ಕೊಡಿಸು" ಎಂದು ನುಡಿದನು. ಆಮೇಲೆ ಶ್ರೀರಾಮನು ನಾರುಬಟ್ಟೆಗಳನ್ನುಟ್ಟು ಸಾಯಂಸಂಧ್ಯಾವಂದನೆಯನ್ನು ತೀರಿಸಿ ಲಕ್ಷ್ಮಣನಿಂದ ಉದಕವನ್ನು ತರಿಸಿ ಪಾನಮಾಡಿ ಭೂಮಿಯಮೇಲೆ ಶಯನ ಮಾಡಿದನು. ಲಕ್ಷ್ಮಣನು ಆತನಿಗೆ ಪಾದಸೇವೆಯನ್ನು ಮಾಡಿ ತಾನೂ ಮರದಡಿಯನ್ನು ಸೇರಿ ಗುಹಸುಮಂತ್ರರೊಡನೆ ಸಂಭಾಷಣೆಮಾಡುತ್ತ ಬಿಲ್ಲುಬಾಣಗಳನ್ನು ಧರಿಸಿಕೊಂಡು ನಿದ್ರೆಯಿಲ್ಲದೆ ಎಚ್ಚರಿಕೆಯಿಂದ ರಕ್ಷಿಸಿಕೊಂಡಿರಲು ಆ ರಾತ್ರಿಯು ಕಳೆಯಿತು.



## ೫೧ ನೆಯ ಅಧ್ಯಾಯ

## ಗುಹನೊಡನೆ ಲಕ್ಷ್ಮಣನ ಸಂಭಾಷಣೆ

ಈ ಪ್ರಕಾರದಲ್ಲಿ ಅಂತಃಕರಣಪೂರ್ವಕವಾಗಿ ತನ್ನ ಅಣ್ಣನಾದ ಶ್ರೀರಾಮನನ್ನು ರಕ್ಷಿಸಿಕೊಂಡು ನಿದ್ರೆಯಿಲ್ಲದಿದ್ದ ಲಕ್ಷ್ಮಣನನ್ನು ಕಂಡು ಗುಹನು ಹೀಗೆಂದನು: "ಲಕ್ಷ್ಮಣ, ನಿನಗೋಸ್ಕರ ಸುಪ್ಪತ್ತಿಗೆಯನ್ನು ತರಿಸಿದ್ದೇನೆ. ನೀನು ಅದನ್ನಂಗೀಕರಿಸಿ ಅದರ ಮೇಲೆ ಸುಖವಾಗಿ ನಿದ್ರೆಮಾಡು. ನೀನು ಒಂದು ದಿನವಾದರೂ ದುಃಖವನ್ನು ಕಂಡವನಲ್ಲ. ಆದ್ದರಿಂದ ಸುಖವಾಗಿ ನಿದ್ರೆಮಾಡು. ನಾನು ಶ್ರೀರಾಮನನ್ನು ಕಾದುಕೊಂಡು ಎಚ್ಚರಿಕೆಯಿಂದ ಈ ರಾತ್ರಿಯನ್ನು ಕಳೆಯುತ್ತೇನೆ. ನನಗೆ ಆತನಿಗಿಂತಲೂ ಅಧಿಕರಾದ ಪ್ರಿಯಸಖರಿಲ್ಲ. ಇದಕ್ಕೆ ನನ್ನ ಸತ್ಯವೇ ಸಾಕ್ಷಿ. ಈತನ ಕೃಪೆಯಿಂದ

ನನಗೆ ಅಧಿಕವಾದ ಕೀರ್ತಿಯೂ ಧರ್ಮಸಂಗ್ರಹವೂ ಅನೇಕ ದ್ರವ್ಯಗಳೂ ಇಷ್ಟಾರ್ಥಗಳೂ ಉಂಟಾಗುವುವು. ಆದ್ದರಿಂದ ಸೀತಾಸಮೇತನಾಗಿ ನಿದ್ರೆಮಾಡುತ್ತಿರುವ ನನ್ನ ಪ್ರಿಯಸಖನಾದ ಶ್ರೀರಾಮನನ್ನು ನನ್ನ ಜ್ಞಾತಿಗಳೊಡನೆ ಬಿಲ್ಲುಬಾಣಗಳನ್ನು ಧರಿಸಿ ಕಾದುಕೊಂಡಿರುತ್ತೇನೆ. ಈ ವನದಲ್ಲಿ ನಾನು ಅರಿಯದ ವೃತ್ತಾಂತವು ಯಾವುದೂ ಇಲ್ಲ. ಚತುರಂಗಬಲಕ್ಕೆ ಶ್ರೀರಾಮನನ್ನು ಕಾದುಕೊಂಡಿರುವಂತೆ ' ಕಟ್ಟುಮಾಡುತ್ತೇನೆ. ನೀನು ಸುಖವಾಗಿ ಶಯನಮಾಡು" ಎಂದು ಹೇಳಿದನು.

ಲಕ್ಷ್ಮಣನು "ಎಲೈ ಗುಹನೆ, ನಾವೆಲ್ಲರೂ ನಿನ್ನ ರಕ್ಷಣೆಯಲ್ಲಿರುತ್ತೇವೆ. ಆದರೂ ನನಗೆ ನಿದ್ರೆ ಬರುವುದು ಸಾಧ್ಯವೆ? ನಾವು ಭಯಪಡುವವರಲ್ಲ. ನಾವು ಧರ್ಮವೇ ಶರಣೆಂದಿರುವವರು. ಜಗದೀಶ್ವರನಾದ ಶ್ರೀರಾಮನು ಸೀತಾಸಮೇತನಾಗಿ ನೆಲದಲ್ಲಿ ಮಲಗಿರುವಾಗ ಬದುಕುವುದರಿಂದಾಗಲಿ ಸುಖಗಳಿಂದಾಗಲಿ ಏನು ಪ್ರಯೋಜನ? ರಣರಂಗದಲ್ಲಿ ದೇವಾಸುರರಿಗೂ ಗೆಲ್ಲಲು ಅಸಾಧ್ಯನಾದ ಶ್ರೀರಾಮನು ಸೀತಾಸಮೇತನಾಗಿ ಹುಲ್ಲುಹಾಸಿಗೆಯಮೇಲೆ ಮಲಗಿದ್ದಾನೆ. ಈತನನ್ನು ದಶರಥನು ತಪಸ್ಸಿನಿಂದಲೂ ನಾನಾಪ್ರಕಾರವಾದ ವ್ರತಗಳಿಂದಲೂ ಪಡೆದನು. ಆ ರಾಜನಿಗೆ ಈತನು ಇಷ್ಟನಾದ ಪುತ್ರನಾಗಿ ಆತನಿಗೆ ಸಮಾನವಾದ ಲಕ್ಷಣವುಳ್ಳವನು. ಶ್ರೀರಾಮನು ವನಕ್ಕೆ ಹೋದಮೇಲೆ ಆತನ ಅಗಲಿಕೆಯಿಂದ ದಶರಥರಾಯನು ಜೀವಿಸಲಾರನು. ಆಮೇಲೆ ಈ ಭೂಮಿಯು ವಿಧವೆಯಾಗುವುದು. ಅರಮನೆಯಲ್ಲಿ ಹೆಂಗಸರೆಲ್ಲ ಗೋಳಾಡಿ ಗೋಳಾಡಿ ಬಸವಳಿದು ಶಾಂತರಾಗಿರಬಹುದು. ದಶರಥರಾಜನೂ ಕೌಸಲ್ಯಾದೇವಿಯೂ ಈ ರಾತ್ರಿ ಬದುಕಿದ್ದಾರೋ ಇಲ್ಲವೋ ತಿಳಿಯದು. ನನ್ನ ತಾಯಿಯಾದ ಸುಮಿತ್ರಾದೇವಿಯು ಶತ್ರುಘ್ನನನ್ನು ನೋಡುತ್ತ ಜೀವಿಸಬಹುದು. ಕೌಸಲ್ಯಾದೇವಿಯು ಅತಿಪರಾಕ್ರಮಿಯಾದ ಶ್ರೀರಾಮನ ಅಗಲಿಕೆಯಿಂದುಂಟಾದ ದುಃಖದಿಂದ ಜೀವಿಸಲಾರಳು. ಈತನಲ್ಲಿ ಅತ್ಯಂತ ವಿಶ್ವಾಸವುಳ್ಳ ಜನಸಮೂಹದಿಂದ ಇಟ್ಟಣಿಸಿ ಅನೇಕ ಪ್ರಾಣಿಗಳಿಗೆ ಆನಂದಕರವಾಗಿದ್ದ ಅಯೋಧ್ಯಾಪಟ್ಟಣವು ಈತನ ಅಗಲಿಕೆಯಿಂದ ನಾಶವಾಗುವುದು. ಸರ್ವಜನಪ್ರಿಯನೂ ಜ್ಯೇಷ್ಠಪುತ್ರನೂ ಆದ ಶ್ರೀರಾಮನನ್ನು ಕಾಣದಿರುವ ಮಹಾತ್ಮನಾದ ದಶರಥರಾಯನ ಶರೀರದಲ್ಲಿ ಪ್ರಾಣಗಳು ಹೇಗಿದ್ದಾವು? ದಶರಥರಾಯನು ಲೋಕಾಂತರವನ್ನೈದಿದರೆ ಕೌಸಲ್ಯಾದೇವಿಯು ಬದುಕಲಾರಳು. ಆಮೇಲೆ ನನ್ನ ತಾಯಿಯಾದ ಸುಮಿತ್ರಾದೇವಿಯೂ ಲೋಕಾಂತರವನ್ನೈದುವಳು. ದಶರಥಮಹಾರಾಜನು ತನ್ನ ಮನೋರಥವೆಲ್ಲವೂ ಅತಿಕ್ರಾಂತವಾಗಿ ಶ್ರೀರಾಮನಿಗೆ ಪಟ್ಟವನ್ನು ಕಟ್ಟಿ ತಾನು ನೋಡುವುದಕ್ಕಿಲ್ಲದ ದುಃಖಾತಿಶಯದಿಂದ ಲೋಕಾಂತರವನ್ನೈದಿದನಾದರೆ ಕೃತಾರ್ಥರು ಅವನಿಗೆ ಅಗ್ನಿಸಂಸ್ಕಾರವನ್ನು ಮಾಡುವರು. ನನ್ನ ತಂದೆಯ ರಾಜಧಾನಿಯಲ್ಲಿ ಸಮಸ್ತ ಜನರೂ ಸುಕೃತಿಗಳಾಗಿ ಸುಖವಾಗಿ ಸಂಚರಿಸುವರು. ದಶರಥನು ಬದುಕುವನೆ! ವನವಾಸವನ್ನು ಮುಗಿಸಿಕೊಂಡು ಹಿಂದಿರುಗಿ ಮತ್ತೆ ಅವನನ್ನು ನಾವು ನೋಡುವೆವೊ! ಸತ್ಯಪ್ರತಿಜ್ಞನಾದ ರಾಮನೊಡನೆ ಕುಶಲಿಗಳಾದ ನಾವು ಮತ್ತೆ ಅಯೋಧ್ಯೆಯನ್ನು ಪ್ರವೇಶಿಸುವೆವೊ!" ಎಂದು ಹೇಳಿದನು.

ಈ ಪ್ರಕಾರದಲ್ಲಿ ಲಕ್ಷ್ಮಣನು ಹೇಳುತ್ತಿರಲು ಗುಹನು ಕಣ್ಣೀರುತುಂಬಿಕೊಂಡು ಅರಣ್ಯದಲ್ಲಿ ಜ್ವರದಿಂದ ಧಾತುಗೆಟ್ಟ ಆನೆಯಹಾಗೆ ವ್ಯಥೆಪಡುತ್ತಲಿದ್ದನು. ಹೀಗೆ ಆ ರಾತ್ರಿಯು ಕಳೆಯಿತು.



೫೨ ನೆಯ ಅಧ್ಯಾಯ

## ಶ್ರೀರಾಮನು ಗುಹಸುಮಂತ್ರರನ್ನು ಕಳುಹಿಸಿ ಗಂಗಾನದಿಯನ್ನು ದಾಟಿದ್ದು

ಆಮೇಲೆ ಪ್ರಾತಃಕಾಲವಾಗಲು ಮಹಾಕೀರ್ತಿವಂತನಾದ ಶ್ರೀರಾಮನು ಎದ್ದು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ರಾತ್ರಿಯು ಕಳೆದು ಪ್ರಾತಃಕಾಲವಾಯಿತು. ಅತಿ ಮನೋಹರವಾಗಿ ಕೋಗಿಲೆಗಳು ಸ್ವರಗೈಯುತ್ತಿವೆ. ನವಿಲುಗಳ ಕೇಕಾಧ್ವನಿಯು ಕೇಳಿಸುತ್ತಿದೆ. ನಾವು ಅತ್ಯಂತ ವೇಗವಾಗಿ ಹರಿಯುತ್ತಿರುವ ಸಮುದ್ರಗಾಮಿಯಾದ ಗಂಗೆಯನ್ನು ಈಗಲೇ ದಾಟಬೇಕು" ಎಂದು ನುಡಿದನು. ಲಕ್ಷ್ಮಣನು ಗುಹನನ್ನೂ ಸುಮಂತ್ರನನ್ನೂ ಕರೆದುಕೊಂಡು ಅಣ್ಣನ ಮುಂದೆ ಬಂದು ನಿಂತನು. ಗುಹನು ರಾಮನ ಮಾತನ್ನು ಕೇಳಿ ತನ್ನ ಮಂತ್ರಿಗಳನ್ನು ಕರೆದು ಒಳ್ಳೆಯ ಹಲಗೆಗಳಿಂದ ಕೂಡಿದ ದೃಢವಾದ ದೋಣಿಯನ್ನು ತರಿಸಲು ಅಪ್ಪಣೆಮಾಡಿದನು. ಆ ಪ್ರಧಾನಿಗಳು ಮನೋಹರವಾದ ದೋಣಿಯನ್ನು ತರಿಸಲು ಗುಹನು ಕೈಮುಗಿದುಕೊಂಡು "ಶ್ರೀರಾಮ, ದೋಣಿಯನ್ನು ತರಿಸಿದ್ದೇನೆ. ಇನ್ನು ನಾನು ಮಾಡಬೇಕಾದ ಸೇವೆಯು ಯಾವುದು ? ನೀನು ಸೀತಾಲಕ್ಷ್ಮಣಸಮೇತನಾಗಿ ಇದನ್ನು ಹತ್ತಬಹುದು" ಎಂದು ಹೇಳಿದನು.

ಶ್ರೀರಾಮನು "ಎಲೈ ಗುಹನೆ, ನಿನ್ನಿಂದ ನಾವು ಸಮಸ್ತ ಸತ್ಕಾರಗಳನ್ನೂ ಪಡೆದೆವು. ನಮ್ಮನ್ನು ದೋಣಿಯನ್ನೇರಿಸು" ಎಂದು ಬಿಲ್ಲು ಬಾಣ ಖಡ್ಗಗಳನ್ನು ತೆಗೆದುಕೊಂಡು ಸೀತಾಲಕ್ಷ್ಮಣರೊಡನೆ ಗಂಗಾತೀರಕ್ಕೆ ಬಂದನು.

ಆಗ ಸಾರಥಿಯಾದ ಸುಮಂತ್ರನು ಕೈಮುಗಿದುಕೊಂಡು "ಶ್ರೀರಾಮ, ಇನ್ನು ನಾನು ಮಾಡುವ ಸೇವೆಯೇನು ?" ಎಂದು ಕೇಳಿದನು. ಶ್ರೀರಾಮನು ಸುಮಂತ್ರನನ್ನು ಮೈದಡವಿ ಸುಮಂತ್ರ, ನೀನು ಶೀಘ್ರದಲ್ಲಿ ರಥವನ್ನು ಮೇಳೈಸಿಕೊಂಡು ಅಯೋಧ್ಯಾಪಟ್ಟಣಕ್ಕೆ ತಿರುಗಿ ಹೋಗಿ ದಶರಥರಾಯನ ಸೇವೆಯನ್ನು ಮಾಡಿಕೊಂಡು ಸಾವಧಾನದಲ್ಲಿರು" ಎಂದು ನಿರೂಪಿಸಿದನು.

ಹೀಗೆ ಶ್ರೀರಾಮನು ಕಳುಹಿಸಿಕೊಡಲು ಸುಮಂತ್ರನು ಆತನನ್ನು ಬಿಟ್ಟುಹೋಗುವುದಕ್ಕೆ ಮನಸ್ಸಿಲ್ಲದೆ ವ್ಯಥೆಪಡುತ್ತ ಹೀಗೆಂದನು: "ಶ್ರೀರಾಮ, ಸೀತಾಲಕ್ಷ್ಮಣಸಮೇತನಾದ ನಿನಗೆ ವನವಾಸಪ್ರಾಪ್ತಿಯಾದದ್ದು ದೈವಾಧೀನವಲ್ಲದೆ ಮತ್ತೊಂದಲ್ಲ. ದೈವವನ್ನು ಮೀರಿದವರಿಲ್ಲ. ಅತ್ಯಂತ ಸಾವಧಾನದಲ್ಲಿ ತಾಯಿತಂದೆಗಳ ಸೇವೆಯನ್ನು ಮಾಡಿಕೊಂಡು ಸತ್ಯಸಂಧನಾಗಿದ್ದ ನಿನಗೆ ಇಂಥ ದುಃಖವು ಬಂದಮೇಲೆ ಬಹ್ಮಚರ್ಯಾಶ್ರಮದಲ್ಲಿ ಅತ್ಯಂತ ನಿಯಮದಲ್ಲಿರುವವರಿಗೂ ಋಜುಮಾರ್ಗದಲ್ಲಿರುವವರಿಗೂ ಫಲಪ್ರಾಪ್ತಿ ಇಲ್ಲವೆಂದು ತಿಳಿಯಬೇಕಾಗುತ್ತದೆ. ವನದಲ್ಲಿ ಸೀತಾಲಕ್ಷ್ಮಣಸಮೇತನಾಗಿ ಆಹಾರನಿಯಮವನ್ನು ಮಾಡಿಕೊಂಡಿರುವ ನಿನಗೆ ಸದ್ಗತಿಯುಂಟು. ಆದರೆ ನಿನ್ನಿಂದ ವಂಚಿತರಾಗಿ ನಾವು ಕೆಟ್ಟೆವು. ಪಾಪಿಷ್ಠೆಯಾದ ಕೈಕೇಯಿದೇವಿಯ ವಶರಾಗಿ ದುಃಖಕ್ಕೆ ಒಳಗಾಗುವೆವು!" ಎಂದು ನುಡಿದನು. ದೂರದಲ್ಲಿ ನಿಂತಿದ್ದ ಶ್ರೀರಾಮನನ್ನು ಕಂಡು ಬಹಳವಾಗಿ ರೋದನಮಾಡಿ ಕಣ್ಣೀರು ಸುರಿಸಿದನು.

ಶ್ರೀರಾಮನು ಆತನನ್ನು ನೋಡಿ ಅತ್ಯಂತ ಮಧುರೋಕ್ತಿಯಿಂದ "ಸುಮಂತ್ರ, ಇಕ್ಷ್ವಾಕುವಂಶದ ರಾಯರಿಗೆ ನಿನಗೆ ಸಮಾನನಾದ ಮತ್ತೊಬ್ಬ ಮಿತ್ರನಿಲ್ಲ. ನೀನು ಅಯೋಧ್ಯಾ

ಪಟ್ಟಣಕ್ಕೆ ಹೋಗಿ ದಶರಥರಾಯನನ್ನು ಕಂಡು ಆತನು ನನ್ನನ್ನು ನೆನೆದು ದುಃಖಿಸದಿರುವ ರೀತಿಯಲ್ಲಿ ಸಮಾಧಾನಪಡಿಸು. ನನ್ನ ತಂದೆಯು ವೃದ್ಧನು. ಇಷ್ಟರಮೇಲೆ ದುಃಖಕ್ಕೆ ಒಳಪಟ್ಟನಾದರೆ ಜೀವಿಸಲಾರನು. ಆದಕಾರಣ ನಿನಗೆ ಹೀಗೆ ಹೇಳುತ್ತಿದ್ದೇನೆ. ಮಹಾತ್ಮನಾದ ದಶರಥರಾಯನು ಯಾವ ಕಾರ್ಯವನ್ನು ಹೇಳಿದರೂ ಆ ಕಾರ್ಯವನ್ನು ಶೀಘ್ರದಲ್ಲಿ ಮಾಡು. ದಶರಥರಾಯನು ಮನೋವ್ಯಥೆ ಪಡದಹಾಗೂ ದುಃಖಾತಿಶಯದಿಂದ ಕಂಗೆಡದಹಾಗೂ ಯತ್ನಮಾಡು. ದುಃಖವನ್ನು ಕಾಣದ ವೃದ್ಧನಾದ ದಶರಥರಾಯನಿಗೆ ನಿತ್ಯದಲ್ಲಿಯೂ ಅಭಿವಂದಿಸಿ ಆತನಿಗೆ ಪ್ರಿಯವಾದ ಕೃತ್ಯವನ್ನೇ ಮಾಡು. ದಶರಥರಾಯನಿಗೆ ನಾನೂ ಸೀತಾಲಕ್ಷ್ಮಣರೂ ಅಯೋಧ್ಯಾ ಪಟ್ಟಣದಿಂದ ಹೊರಡಿಸಿದ ದುಃಖವಿಲ್ಲದೆ ವನದಲ್ಲಿ ಸುಖದಲ್ಲಿದ್ದೇವೆ ಎಂದೂ ಹದಿನಾಲ್ಕು ವರುಷಗಳು ತುಂಬಿದಮೇಲೆ ಬರುವೆವು ಎಂದೂ ಆತನು ನನ್ನನ್ನೂ ಸೀತಾಲಕ್ಷ್ಮಣರನೂ ಶೀಘ್ರದಲ್ಲಿಯೇ ಕಾಣುವನೆಂದೂ ಹೇಳು. ಕೌಸಲ್ಯಾದೇವಿಗೂ ಹಾಗೆಯೇ ಹೇಳಿ ದುಃಖಶಮನವನ್ನು ಮಾಡಿ ಸಮಾಧಾನಪಡಿಸು. ಉಳಿದ ನಮ್ಮ ತಾಯಿಯರಿಗೂ ಕೈಕೇಯಿಯಾದೇವಿಗೂ ನಾವು ಕುಶಲರಾಗಿದ್ದೇವೆ ಎಂದೂ ನಾನೂ ಲಕ್ಷ್ಮಣ ಸೀತಾದೇವಿಯರೂ ಪ್ರತ್ಯೇಕಪ್ರತ್ಯೇಕವಾಗಿ ನಮಸ್ಕರಿಸಿದೆವೆಂದೂ ಹೇಳು. ದಶರಥರಾಯನಿಗೆ ಭರತನನ್ನು ಕರೆಕಳುಹಿಸಿ ಪಟ್ಟಾಭಿಷೇಕವನ್ನು ಮಾಡಬೇಕು ಎಂದು ಹೇಳು. ನೀನು ಭರತನನ್ನು ಕರೆತಂದು ಪಟ್ಟಾಭಿಷೇಕವನ್ನು ಮಾಡಿ ಭರತನಿಗೆ ನನ್ನನ್ನು ಕುರಿತು ದುಃಖಮಾಡಬಾರದೆಂದೂ ದಶರಥರಾಯನು ಹೇಳುವ ಹಾಗೆ ನಡೆದುಕೊಂಡು ತಾಯಿತಂದೆಗಳೆಲ್ಲರಲ್ಲಿಯೂ ಸಮಬುದ್ಧಿಯುಳ್ಳವನಾಗಿರಬೇಕೆಂದೂ ಹೇಳು. ಭರತನು ಕೈಕೇಯಿಯಾದೇವಿಯಲ್ಲಿಯೂ ಸುಮಿತ್ರಾದೇವಿಯಲ್ಲಿಯೂ ಕೌಸಲ್ಯಾದೇವಿಯಲ್ಲಿಯೂ ಸಮನಾಗಿ ನಡೆದನಾದರೆ ಇಹಲೋಕದಲ್ಲಿ ಸುಖವೂ ಪರಲೋಕದಲ್ಲಿ ಸದ್ಗತಿಯೂ ಉಂಟಾಗುವುದು" ಎಂದು ಹೇಳಿದನು.

ಸುಮಂತ್ರನು ಅತ್ಯಂತ ದುಃಖಿತನಾಗಿ ಸ್ನೇಹದಿಂದ ಆತನನ್ನು ಕುರಿತು ಹೀಗೆಂದನು : "ಶ್ರೀರಾಮ, ನಿನ್ನಲ್ಲಿ ಸ್ನೇಹದಿಂದ ಹೇಳುತ್ತೇನಲ್ಲದೆ ಉಪಚಾರಕ್ಕಾಗಿ ಹೇಳುತ್ತಿಲ್ಲ. ನಿನ್ನಲ್ಲಿ ಭಕ್ತಿಯುಳ್ಳವನೆಂದು ತಿಳಿದು ನನ್ನ ಮಾತನ್ನು ಲಾಲಿಸಿ ಕೇಳು. ನಿನ್ನನ್ನು ಬಿಟ್ಟು ಅಯೋಧ್ಯಾ ಪಟ್ಟಣವನ್ನು ನಾನು ಹೇಗೆ ಪ್ರವೇಶಿಸಲಿ ? ನಿನ್ನ ಅಗಲಿಕೆಯಿಂದ ಆ ಪಟ್ಟಣವು ಪುತ್ರಶೋಕದಿಂದ ಕಂಗೆಟ್ಟಂತಿರುವುದು. ನಾನು ಬರಿಯ ರಥವನ್ನು ನಡೆಯಿಸಿಕೊಂಡು ಅಯೋಧ್ಯಾಪಟ್ಟಣಕ್ಕೆ ಹೋದರೆ ಸಮಸ್ತ ಜನರೂ ನಿನ್ನನ್ನು ಕರೆದುಕೊಂಡೇ ಬಂದೆನೆಂದು ಹರ್ಷವನ್ನು ಪಡೆಯುವರು. ಆಮೇಲೆ ನಾನೊಬ್ಬನೇ ರಥದಿಂದಿಳಿದು ಕಾಣಿಸಿಕೊಂಡರೆ ನನ್ನನ್ನು ಕಂಡು ಆ ಪಟ್ಟಣವೆಲ್ಲವೂ ಕಂಗೆಡುವುದು. ಸೂತನೊಬ್ಬನೇ ಕುಳಿತುಕೊಂಡು ಬರುವ ರಥವನ್ನು ಕಂಡರೆ ಒಡೆಯನಿಲ್ಲದ ಸೇನೆಯನ್ನು ಕಂಡ ಹಾಗೂ ಸಮರದಲ್ಲಿ ಅರಸನು ಮೃತನಾಗಲು ಆತನ ರಥವನ್ನು ಹತ್ತಿಕೊಂಡು ಸಾರಥಿಯೂ ಉಳಿದ ಬಲವೂ ತಿರುಗಿ ಬಂದ ಹಾಗೂ ತಿಳಿಯುವರು. ನೀನು ದೂರದಲ್ಲಿದ್ದರೂ ಮನಸ್ಸಿನಲ್ಲಿ ನಿನ್ನನ್ನೇ ಧ್ಯಾನಮಾಡಿಕೊಂಡು ಅಯೋಧ್ಯಾಪಟ್ಟಣದ ಸಮಸ್ತ ಪ್ರಾಣಿಗಳೂ ಆಹಾರವನ್ನು ಬಿಟ್ಟಿರುವರು. ನಿನ್ನ ಅಗಲಿಕೆಯಿಂದುಂಟಾದ ದುಃಖದಿಂದ ಎಲ್ಲರೂ ಕಂಗೆಟ್ಟು ಅಲ್ಲಲ್ಲಿ ಒಟ್ಟುಗೂಡಿಕೊಂಡು ರೋದನ ಮಾಡುವರು. ಅದನ್ನು ನೀನು ಕಂಡೇ ಇದ್ದೀಯೆ. ನೀನು ಹೊರಟು ಬಂದ ಬಳಿಕ ಅಳುವ ಧ್ವನಿಯು ಸ್ವಲ್ಪ ನಿಂತಿರುವುದು. ನಾನು ತಿರುಗಿ ಹೋದರೆ ರಥದಲ್ಲಿ ಒಬ್ಬನೇ ಇರುವುದನ್ನು ನೋಡಿ ಒಂದಕ್ಕೆ ಹತ್ತು ಮಡಿಯಾಗಿ ಗೋಳಿಡುವರು. ನಾನು ಆ ಪಟ್ಟಣಕ್ಕೆ ಹೋಗಿ ಅವರಿಗೆ ಏನೆಂದು ಹೇಳಲಿ ? ಕೌಸಲ್ಯಾದೇವಿಯು ನಿನ್ನ ವೃತ್ತಾಂತವನ್ನು

ಕೇಳಿದರೆ ಆ ದೇವಿಗೆ ಏನೆಂದು ಹೇಳಲಿ! ನಿನ್ನನ್ನು ನಿನ್ನ ಸೋದರಮಾವನ ಬಳಿಗೆ ಕಳುಹಿಸಿ ಬಂದೆನೆಂದು ಹುಸಿಯನ್ನು ನುಡಿಯಲೆ? ಅಲ್ಲವೇ ವನಕ್ಕೆ ಕಳುಹಿಸಿ ಬಂದೆನೆಂದು ನುಡಿದು ಆ ದೇವಿಗೆ ವ್ಯಥೆಯನ್ನುಂಟುಮಾಡಲೆ? ನಿನ್ನಂಥ ಮಿತ್ರನನ್ನು ಅಗಲಿ ಹೋಗುವ ನನ್ನನ್ನು ರಥದಮೇಲೆ ಕುಳ್ಳಿರಿಸಿಕೊಂಡು ಕುದುರೆಗಳು ತಾನೇ ನಡೆದಾವೆ! ಆದಕಾರಣ, ಶ್ರೀರಾಮ, ನಿನ್ನನ್ನು ಬಿಟ್ಟು ಅಯೋಧ್ಯಾಪಟ್ಟಣಕ್ಕೆ ಹೋಗಲಾರೆನು. ನಾನೂ ನಿನ್ನೊಡನೆ ವನವಾಸಮಾಡುವ ಹಾಗೆ ಅಪ್ಪಣೆಯನ್ನು ಕೊಡು. ಅಪ್ಪಣೆ ಕೊಡದಿದ್ದರೆ ನಾನು ಈ ರಥಸಹಿತವಾಗಿ ಅಗ್ನಿಪ್ರವೇಶ ಮಾಡುವೆನು. ನನ್ನ ವನವಾಸಕ್ಕೆ ವಿಘ್ನಮಾಡುವವರೊಡನೆ ರಥಾರೂಢನಾಗಿ ಯುದ್ಧವನ್ನು ಮಾಡುವೆನು. ನಾನು ನಿನ್ನ ನಿಮಿತ್ತವಾಗಿ ರಥದ ಮೇಲೆ ಬಂದೆನು. ಈಗಲೂ ನಿನ್ನ ನಿಮಿತ್ತವಾಗಿ ವನವಾಸಮಾಡುವೆನು. ನನಗೆ ವನವಾಸಮಾಡುವುದಕ್ಕೆ ಅಪ್ಪಣೆ ಕೊಡು. ನಿನ್ನ ಮೇಲಿನ ಸ್ನೇಹದಿಂದ ನಿನ್ನ ಸಹವಾಸವನ್ನು ಬಯಸುತ್ತಿದ್ದೇನೆ. ಈ ರಥಕ್ಕೆ ಕಟ್ಟಿರುವ ಕುದುರೆಗಳು ನಿನ್ನ ಸೇವೆಯನ್ನು ಮಾಡಿಕೊಂಡಿದ್ದು ಉತ್ತಮವಾದ ಸದ್ಗತಿಯನ್ನು ಪಡೆಯಲಿ! ನಾನು ನಿನ್ನ ಆಜ್ಞೆಯನ್ನು ಶಿರಸಾ ವಹಿಸಿಕೊಂಡು ನಿನ್ನ ಸೇವೆಯನ್ನು ಮಾಡಿಕೊಂಡು ಸುಖದಿಂದ ಇರುತ್ತೇನೆ. ದೇವಲೋಕವನ್ನಾದರೂ ಬಿಡುವೆನಲ್ಲದೆ ನೀನಿಲ್ಲದ ಆಯೋಧ್ಯಾಪಟ್ಟಣಕ್ಕೆ ಹೋಗಲಾರೆನು. ಲೋಕದಲ್ಲಿ ಪಾಪವನ್ನು ಮಾಡಿದವರಿಗೆ ಸ್ವರ್ಗಲೋಕದಲ್ಲಿರುವುದಕ್ಕೆ ಹೇಗೆ ಅಧಿಕಾರವಿಲ್ಲವೋ ಆ ರೀತಿಯಲ್ಲಿ ನನಗೆ ನೀನಿಲ್ಲದ ಅಯೋಧ್ಯಾಪಟ್ಟಣದಲ್ಲಿರುವುದಕ್ಕೆ ಅಧಿಕಾರವಿಲ್ಲ. ನಿನ್ನ ಕೂಡ ವನವಾಸಮಾಡಿಕೊಂಡಿದ್ದರೆ ಹದಿನಾಲ್ಕು ವರುಷಗಳು ಒಂದು ನಿಮಿಷದಂತೆ ಕಳೆದುಹೋಗುವುವು. ಅಲ್ಲದಿದ್ದರೆ ಹದಿನಾಲ್ಕು ವರುಷಗಳೂ ಒಂದಕ್ಕೆ ನೂರು ಮಡಿಯಾಗಿ ಕಳೆಯುವುವು. ಭೃತ್ಯದಲ್ಲಿ ಪ್ರೀತಿಯುಳ್ಳ ನೀನು ನಿನ್ನ ಭಕ್ತನಾಗಿ ಭೃತ್ಯನಾಗಿರುವ ನನ್ನನ್ನು ಬಿಟ್ಟು ಹೋಗುವುದು ಉಚಿತವಲ್ಲ" ಎಂದು ಅತ್ಯಂತ ದೈನ್ಯೋಕ್ತಿಯಿಂದ ನುಡಿದನು.

ಭಕ್ತವತ್ಸಲನಾದ ಶ್ರೀರಾಮನು "ಸುಮಂತ್ರ, ನೀನು ಸ್ವಾಮಿಭಕ್ತನು. ನಿನ್ನ ಮಹಿಮೆಯನ್ನು ಬಲ್ಲೆನು. ನಿನ್ನನ್ನು ಒಂದು ಕಾರ್ಯಕ್ಕಾಗಿ ಅಯೋಧ್ಯಾಪಟ್ಟಣಕ್ಕೆ ಕಳುಹಿಸುತ್ತೇನೆ. ನೀನು ನನ್ನನ್ನು ಬಿಟ್ಟು ಅಯೋಧ್ಯಾಪಟ್ಟಣಕ್ಕೆ ಹೋದರೆ ನಿನ್ನನ್ನು ಕಂಡು ನಮ್ಮ ಕಿರಿಯತಾಯಿ ಕೈಕೇಯೀದೇವಿಯು ನಾನು ನಿಜವಾಗಿ ವನಕ್ಕೆ ಹೋದೆನೆಂದು ನಿಶ್ಚಯಿಸಿ ಮನಸ್ಸಿನಲ್ಲಿ ಸಂತೋಷಪಡುವಳು. ಅಲ್ಲದಿದ್ದರೆ ಧರ್ಮಿಷ್ಠನಾದ ದಶರಥರಾಯನು ಸತ್ಯವಾದಿಯಲ್ಲವೆಂದು ಸಂಶಯಪಡುವಳು. ಇದೇ ನನಗೆ ನೀನು ಮಾಡುವ ಪ್ರಧಾನಕಾರ್ಯ. ಭರತನಿಗೆ ಪಟ್ಟಾಭಿಷೇಕವಾದರೆ ಕೈಕೇಯೀದೇವಿಯು ಆ ರಾಜ್ಯಾಧಿಪತ್ಯವು ತನಗಾದಂತೆ ಸಂತೋಷಪಡುವಳು. ಆದ್ದರಿಂದ ನೀನು ನನಗೂ ದಶರಥರಾಯನಿಗೂ ಪ್ರೀತಿಯನ್ನುಂಟುಮಾಡುವುದಕ್ಕಾಗಿ ಅಯೋಧ್ಯಾಪಟ್ಟಣಕ್ಕೆ ಹೋಗು. ನಾನು ಹೇಳಿದ ಮಾತುಗಳನ್ನು ಹಾಗೆಹಾಗೆಯೇ ಹೇಳು" ಎಂದು ಅನೇಕ ಮಧುರವಚನಗಳಿಂದ ಸಂತವಿಟ್ಟನು. ಅನಂತರ ಗುಹನನ್ನು ಕುರಿತು ಅಭಿಪ್ರಾಯಗರ್ಭಿತವಾದ ಮಾತುಗಳಿಂದ "ಎಲೈ ಗುಹನೆ, ಇನ್ನುಮೇಲೆ ನಾವು ಇಲ್ಲಿರಬಾರದು. ನಮಗೆ ಬಹುಜನರೊಡನೆ ವನವಾಸವು ಯೋಗ್ಯವಲ್ಲ. ನಮಗೆ ಋಷ್ಯಾಶ್ರಮವೇ ವಿಧಿ. ನಮ್ಮ ತಂದೆಯಾದ ದಶರಥರಾಯನು ಆಜ್ಞಾಪಿಸಿದ ರೀತಿಯಲ್ಲಿ ಜಡೆಗಳನ್ನು ನಿರ್ಮಿಸಿ ಸೀತಾಲಕ್ಷ್ಮಣಸಹಿತನಾಗಿ ವನಾಂತರಕ್ಕೆ ಹೋಗುತ್ತೇನೆ. ನೀನು ಆಲದ ಹಾಲನ್ನು ತರಿಸಿಕೊಡು" ಎಂದು ನುಡಿದನು.

ಗುಹನು ಶೀಘ್ರದಲ್ಲಿ ಆಲದ ಹಾಲನ್ನು ತರಿಸಿಕೊಡಲು ಲಕ್ಷ್ಮಣನು ತನಗೂ ಶ್ರೀರಾಮನಿಗೂ ಜಡೆಗಳನ್ನು ನಿರ್ಮಿಸಿದನು. ಆಗ ರಾಮಲಕ್ಷ್ಮಣರಿಬ್ಬರೂ ಜಟಾಧಾರಿಗಳಾಗಿ ಋಷಿಗಳಿಗೆ

ಸಮಾನರಾಗಿ ಒಪ್ಪುತ್ತಿದ್ದರು. ಹೀಗೆ ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಋಷಿಮಾರ್ಗವನ್ನು ಕೈಗೊಂಡನು. ಆಮೇಲೆ ತನ್ನ ಪ್ರಿಯಸಖನಾದ ಗುಹನಿಗೆ ಎಚ್ಚರಿಕೆಯಿಂದ ರಾಜ್ಯಪರಿಪಾಲನವನ್ನು ಮಾಡಿಕೊಂಡಿರಹೇಳಿ ನಾವೆಯನ್ನು ನೋಡಿ ಗಂಗೆಯನ್ನು ದಾಟಲಿಚ್ಛೆಯುಳ್ಳವನಾದನು. ಮೊದಲು ಲಕ್ಷ್ಮಣನು ನಾವೆಯಮೇಲೆ ಸೀತಾದೇವಿಯನ್ನು ಮೆಲ್ಲಗೆ ಹತ್ತಿಸಿ ತಾನೂ ಹತ್ತಿದನು. ಅನಂತರ ರಾಮನು ನಾವೆಯನ್ನೇರಿ ತನ್ನ ಇಷ್ಟದೇವತಾಕವಾದ ಮಂತ್ರವನ್ನು ಜಪಿಸಿ ಧ್ಯಾನವನ್ನು ಮಾಡಿಕೊಂಡು ಸೀತಾಲಕ್ಷ್ಮಣಸಮೇತನಾಗಿ ನಾವೆಯಮೇಲೆ ಹೋಗುತ್ತಿದ್ದನು. ಆಗ ಸುಮಂತ್ರನು ರಾಮಲಕ್ಷ್ಮಣಸೀತಾದೇವಿಯರಿಗೆ ನಮಸ್ಕಾರವನ್ನು ಮಾಡಿ ಹಿಂದಿರುಗಲು ನಿಶ್ಚಯಿಸಿದನು. ಗುಹನೂ ಶ್ರೀರಾಮನಿಗೆ ನಮಸ್ಕಾರವನ್ನು ಮಾಡಿ ತನ್ನ ಬಲಸಮೇತನಾಗಿ ತನ್ನ ಪಟ್ಟಣಕ್ಕೆ ತೆರಳಿದನು. ಆಮೇಲೆ ಶ್ರೀರಾಮನು ನಾವೆಯನ್ನು ನಡೆಯಿಸುವ ಅಂಬಿಗನನ್ನು ಶೀಘ್ರದಲ್ಲಿ ನಡೆಯಿಸಹೇಳಲು ಆತನು ಹುಟ್ಟುಗಳಿಂದ ನಾವೆಯನ್ನು ಅತಿವೇಗದಿಂದ ನಡೆಯಿಸುತ್ತಿದ್ದನು. ಆ ಸಮಯದಲ್ಲಿ ಸೀತಾದೇವಿಯು ಗಂಗಾಮಧ್ಯದಲ್ಲಿ ಕೈಮುಗಿದುಕೊಂಡು ಗಂಗಾದೇವಿಯನ್ನು ಕುರಿತು "ಎಲೌ ಗಂಗಾದೇವಿಯೆ, ಮಹಾತ್ಮನಾದ ದಶರಥರಾಯನ ಕುಮಾರನಾದ ಶ್ರೀರಾಮನು ತನ್ನ ತಂದೆಯ ವಾಕ್ಯವನ್ನು ಪರಿಪಾಲಿಸಬೇಕೆಂದು ಈ ವನಕ್ಕೆ ಬಂದನು. ಈ ವನದಲ್ಲಿ ಹದಿನಾಲ್ಕು ವರುಷಗಳು ಸಂಚರಿಸಿಕೊಂಡಿರಬೇಕು. ಈ ಸ್ವಾಮಿಯನ್ನು ನೀನು ರಕ್ಷಿಸು. ಹದಿನಾಲ್ಕು ವರುಷಗಳೆಂಬ ಮಿತಿ ತೀರಿದಮೇಲೆ ದಶರಥರಾಯನ ಕುಮಾರನು ಲಕ್ಷ್ಮಣಸಮೇತನಾಗಿ ತಿರುಗಿ ಬರುವನು. ಆತನ ಕೂಡ ನಾನೂ ಕ್ಷೇಮದಿಂದ ತಿರುಗಿ ಬಂದರೆ ಸಮಸ್ತ ಇಷ್ಟಾರ್ಥವನ್ನೂ ಕೊಡುವ ನಿನ್ನ ದರ್ಶನವನ್ನು ಪುನಃ ಮಾಡುವೆನು. ನೀನು ಪ್ರಸನ್ನಳಾದರೆ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದಕ್ಕೆ ಸಮರ್ಥಳು. ನೀನು ಸಮುದ್ರರಾಜನ ಪಟ್ಟದ ರಾಣಿ. ಗಂಗಾದೇವಿ, ನಿನಗೆ ನಮಸ್ಕಾರಮಾಡಿ ಬೇಡಿಕೊಳ್ಳುತ್ತೇನೆ. ದಶರಥರಾಯನ ಕುಮಾರನಾಗಿ ಪುರುಷೋತ್ತಮನಾದ ಶ್ರೀರಾಮನು ಕ್ಷೇಮದಿಂದ ತಿರುಗಿ ಬಂದರೆ ನಿನ್ನ ಪ್ರೀತ್ಯರ್ಥವಾಗಿ ಸಾವಿರ ಗೋದಾನಗಳನ್ನು ಬ್ರಾಹ್ಮಣರಿಗೆ ಕೊಡುವೆನು. ಅನೇಕ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುವೆನು. ಮತ್ತು ನಿನಗೆ ಸಂತೋಷವಾಗುವ ಮರ್ಯಾದೆಯಲ್ಲಿ ಸಾವಿರ ಸುರಾಘಟಗಳನ್ನೂ ಅನೇಕ ಮಾಂಸೋಪಹಾರಗಳನ್ನೂ ಬಲಿಯಾಗಿ ಕೊಡುವೆನು. ನಿನ್ನ ತೀರದಲ್ಲಿರುವ ದೇವತೆಗಳಿಗೆ ಅಭಿಷೇಕ ನೈವೇದ್ಯಗಳನ್ನು ಮಾಡಿಸುವೆನು. ನೀನು ಪ್ರಸನ್ನಳಾಗಿ ದಶರಥರಾಯನ ಕುಮಾರನನ್ನು ಸುಖದಿಂದ ತಿರುಗಿ ಬರುವಂತೆ ಕೃಪೆಮಾಡು!" ಎಂದು ಪ್ರಾರ್ಥಿಸಿದಳು.

ಆ ಬಳಿಕ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಗಂಗಾತೀರವನ್ನೈದಿ ನಾವೆಯನ್ನು ಕಳುಹಿಸಿ ಲಕ್ಷ್ಮಣನ ಮುಖವನ್ನು ನೋಡಿ "ಎಲೈ ಲಕ್ಷ್ಮಣ, ಈ ನಿರ್ಜನಪ್ರದೇಶದಲ್ಲಿ ಅವಶ್ಯವಾಗಿ ಸೀತಾದೇವಿಯನ್ನು ನಾವು ರಕ್ಷಿಸಬೇಕು. ನೀನು ಮುಂದೆ ನಡೆ. ನಿನ್ನ ಹಿಂದೆ ಸೀತೆಯು ನಡೆಯಲಿ. ಆಕೆಯ ಹಿಂದುಗಡೆಯಲ್ಲಿ ನಿಮ್ಮಿಬ್ಬರನ್ನೂ ರಕ್ಷಿಸಿಕೊಂಡು ನಾನು ಬರುತ್ತೇನೆ. ಹೀಗೆ ನಾವಿಬ್ಬರೂ ಅನ್ಯೋನ್ಯವಾಗಿ ಸೀತಾದೇವಿಯನ್ನು ರಕ್ಷಿಸಿಕೊಂಡು ಹೋಗೋಣ. ಸೀತಾದೇವಿಯು ವನವಾಸ ದುಃಖಗಳನ್ನು ಇನ್ನು ಕಾಣುವಳು. ಈ ಪ್ರದೇಶವು ಜನರಹಿತವಾದದ್ದು. ಇಲ್ಲಿ ಗದ್ದೆ ತೋಟ ತೋಪುಗಳೇನೂ ಇಲ್ಲ. ಎಲ್ಲಿನೋಡಿದರೂ ಹಳ್ಳತಿಟ್ಟುಗಳಾಗಿ ಸಂಚರಿಸುವುದಕ್ಕೆ ಕಷ್ಟವಾಗಿದೆ. ಆದ್ದರಿಂದ ಸಾವಧಾನವಾಗಿ ಮುಂದೆ ನಡೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಬಿಲ್ಲುಬಾಣಗಳನ್ನು ತೆಗೆದುಕೊಂಡು ಮುಂದೆ ನಡೆದನು. ಆತನ ಹಿಂದೆ ಸೀತಾದೇವಿಯು ನಡೆದಳು. ಶ್ರೀರಾಮನು ಅವರಿಬ್ಬರ ಹಿಂದೆ ಗಂಗಾತೀರದಲ್ಲಿ

ನಾನು ಪ್ರಬುದ್ಧನಾಗಿ ತಾಯಿಯನ್ನು ರಕ್ಷಿಸಲೆಳಸಿದಾಗ ಫಲಕೊಡುವ ಸಮಯದಲ್ಲಿ ದೇವಿಗೆ ನನ್ನ ವಿಯೋಗವುಂಟಾಯಿತು. ನನ್ನ ಹಾಗೆ ತಾಯಿಗೆ ದುಃಖವನ್ನುಂಟುಮಾಡುವ ಮಕ್ಕಳನ್ನು ಹೆತ್ತ ಸ್ತ್ರೀಯರೇ ಇಲ್ಲ. ನಮ್ಮ ಮನೆಯಲ್ಲಿದ್ದ ಹೆಣ್ಣುಗಿಣಿಯೂ ಗಂಡುಗಿಣಿಯೊಡನೆ 'ಬೆಕ್ಕು ಬಂದಿತು. ಶತ್ರುವಾದ ಆ ಬೆಕ್ಕಿನ ಕಾಲನ್ನು ಕಚ್ಚು' ಎಂದು ಮುದ್ದುನುಡಿಯನ್ನು ನುಡಿಯುತ್ತ ನಮ್ಮ ತಾಯಿಯಾದ ಕೌಸಲ್ಯಾದೇವಿಗೆ ನನಗಿಂತ ಹೆಚ್ಚು ಸಂತೋಷವುಂಟು ಮಾಡುತ್ತಿತ್ತು. ನಾನು ಆ ಹೆಣ್ಣುಗಿಣಿಗಿಂತಲೂ ಕಡೆಯಾದೆನು. ನನ್ನಿಂದ ದುಃಖಿಸಿ ಹಂಬಲಿಸುತ್ತಿರುವ ಅಲ್ಪಭಾಗ್ಯಳಾದ ಕೌಸಲ್ಯಾದೇವಿಗೆ ಸ್ವಲ್ಪಮಾತ್ರವಾದರೂ ಸುಖವನ್ನುಂಟು ಮಾಡದಿರುವ ನನ್ನಿಂದ ಪ್ರಯೋಜನವೇನು? ನನ್ನ ತಾಯಿಯಾದ ಕೌಸಲ್ಯಾದೇವಿಯು ಪುಣ್ಯವಿಲ್ಲದವಳು. ದುಃಖವೆಂಬ ಸಮುದ್ರದಲ್ಲಿ ಮುಳುಗಿ ನನ್ನನ್ನು ನೆನೆಯುತ್ತ ಹಂಬಲಿಸು ತ್ತಿರುವಳು. ನಾನು ಕೋಪಿಸಿ ಬಾಣವನ್ನು ತೊಟ್ಟೆನಾದರೆ ಅಯೋಧ್ಯಾಪಟ್ಟಣವನ್ನು ಗೆದ್ದು ಭೂಮಂಡಲವೆಲ್ಲವನ್ನೂ ಆಳಬಲ್ಲೆನು. ಈ ವಿಷಯದಲ್ಲಿ ಸಂಶಯವಿಲ್ಲ. ಆದರೂ ಈ ಪ್ರಕಾರವಾಗಿ ಪರಾಕ್ರಮವನ್ನು ತೋರಿಸಿದರೆ ತಂದೆಯ ಮಾತನ್ನು ಮೀರಿದ ಅಪಕೀರ್ತಿಯು ಸಂಭವಿಸಿ ಮುಂದೆ ಪರಗತಿಗೆ ಹಾನಿಯಾಗುವುದು. ಈ ಕಾರಣದಿಂದ ನಾನು ಪಟ್ಟಾಭಿಷೇಕವನ್ನು ಬಿಟ್ಟು ಬಂದೆನಲ್ಲದೆ ನನ್ನ ಕೈಯಲ್ಲಾಗದೆ ಬಂದವನಲ್ಲ" ಎಂದು ನುಡಿದು ಬಹಳವಾಗಿ ಹಂಬಲಿಸಿ ಕಣ್ಣೀರು ತುಂಬಿ ಜ್ವಾಲೆಯಿಲ್ಲದಿರುವ ಅಗ್ನಿಯಂತೆಯೂ ತೆರೆಗಳ ಹೊಯ್ಲುಗಳಿಲ್ಲದ ಸಮುದ್ರದಂತೆಯೂ ಸುಮ್ಮನಾದನು.

ಲಕ್ಷ್ಮಣನು ಆತನನ್ನು ಸಂತವಿಟ್ಟು "ಅಣ್ಣ, ನೀನು ಅಯೋಧ್ಯಾಪಟ್ಟಣವನ್ನು ಬಿಟ್ಟು ಬಂದ ಮೇಲೆ ಆ ಪಟ್ಟಣವು ಚಂದ್ರನಿಲ್ಲದ ರಾತ್ರಿಯಂತೆ ಭಯಂಕರವಾಗಿರುವುದು. ನೀನು ಈ ರೀತಿಯಲ್ಲಿ ಹಂಬಲಿಸುವುದು ಉಚಿತವಲ್ಲ. ನೀನು ದುಃಖಿಸಿ ನನ್ನನ್ನೂ ಸೀತಾದೇವಿಯನ್ನೂ ಕಂಗೆಡಿಸಬೇಡ. ನಾನೂ ಸೀತಾದೇವಿಯೂ ನೀರಿನಿಂದ ಹೊರಗೆ ತೆಗೆಯಲ್ಪಟ್ಟ ಮತ್ಸ್ಯಗಳಂತೆ ನಿನ್ನನ್ನು ಬಿಟ್ಟು ಒಂದು ಕ್ಷಣಮಾತ್ರವಾದರೂ ಜೀವಿಸಲಾರೆವು. ನಾನು ನಮ್ಮ ತಂದೆಯಾದ ದಶರಥರಾಯನನ್ನಾದರೂ ನನ್ನ ತಾಯಿಯಾದ ಸುಮಿತ್ರಾದೇವಿಯನ್ನಾದರೂ ಕಡೆಗೆ ಇಂದ್ರಪದವಿಯನ್ನಾದರೂ ನೀನಿಲ್ಲದೆ ಬಯಸುವವನಲ್ಲ" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಅತ್ಯಂತ ಸಂತೋಷಪಟ್ಟು ಮನಸ್ಸಿನಲ್ಲಿದ್ದ ದುಃಖವನ್ನು ತ್ಯಜಿಸಿ ನಿರ್ಜನವಾದ ಆ ಅರಣ್ಯದ ಒಂದು ಆಲದಮರದಡಿಯಲ್ಲಿ ತಳಿರಹಾಸಿಗೆಯಮೇಲೆ ಭಯವಿಲ್ಲದೆ ಪರ್ವತದ ತಪ್ಪಲುಗಳಲ್ಲಿರುವ ಸಿಂಹರಾಜನಂತೆ ಸುಖವಾಗಿ ನಿದ್ರಿಸುತ್ತ ಆ ರಾತ್ರಿಯನ್ನು ಕಳೆದನು.

## ೫೪ ನೆಯ ಅಧ್ಯಾಯ

## ಭರದ್ವಾಜಮುನಿಯ ಸಂದರ್ಶನ

ಈ ರೀತಿಯಲ್ಲಿ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಆ ಮರದ ಕೆಳಗೆ ಆ ರಾತ್ರಿಯನ್ನು ಕಳೆದು ಪ್ರಾತಃಕಾಲದಲ್ಲೆದ್ದು ನಿತ್ಯಕರ್ಮಾನುಷ್ಠಾನಗಳನ್ನು ತೀರಿಸಿಕೊಂಡು ಅಪೂರ್ವವಾಗಿಯೂ ಮನೋಹರವಾಗಿಯೂ ಮೊದಲು ನೋಡದೆಯೂ ಇದ್ದ ಅನೇಕ ದೇಶಗಳನ್ನು ನೋಡಿ ಅತ್ಯಂತ

ಹೋಗುತ್ತಿರಲು ಸುಮಂತ್ರನು ತನ್ನ ದೃಷ್ಟಿಗೋಚರವಾಗುವಪರ್ಯಂತ ದೃಷ್ಟಿಸಿ ನೋಡಿ, ಅವರು ಕಣ್ಣುಮರೆಯಾಗಲು ಅತ್ಯಂತ ವ್ಯಥೆಯಿಂದ ಕಣ್ಣೀರುಬಿಟ್ಟು ಹಂಬಲಿಸುತ್ತಿದ್ದನು. ತಪಸ್ವಿಯಾದ ಶ್ರೀರಾಮನು ಗಂಗಾತೀರವನ್ನು ದಾಟಿ ಮುಂದೆ ಅನೇಕ ಸಂಪತ್ತುಗಳಿಂದ ಕೂಡಿದ ವತ್ಸದೇಶವನ್ನೈದಿದನು. ಅವರೆಲ್ಲರೂ ಮುಂದೆ ಪ್ರಯಾಣಮಾಡಿದ ಮೇಲೆ ರಾಮಲಕ್ಷ್ಮಣರು ಅರಣ್ಯದಲ್ಲಿ ಸಂಚರಿಸುತ್ತಿದ್ದ ಕಾಡಹಂದಿಗಳು ಹುಲ್ಲೆ ಕೃಷ್ಣಸಾರಗಳೆಂಬ ಮೃಗಗಳನ್ನು ಕೊಂದು ಅವುಗಳ ಮಾಂಸಗಳನ್ನು ತೆಗೆದುಕೊಂಡು ಸಾಯಂಕಾಲಸಮಯದಲ್ಲಿ ಒಂದು ಮರದಡಿಯನ್ನು ಸೇರಿದರು.



## ೫೩ ನೆಯ ಅಧ್ಯಾಯ

## ಶ್ರೀ ರಾ ಮ ನ ವ ನ ವಾ ಸ ಪ್ರಾ ರಂ ಭ

ಆಮೇಲೆ ಶ್ರೀರಾಮನು ಸಾಯಂಕಾಲ ಸಂಧ್ಯಾವಂದನೆಯನ್ನು ಮಾಡಿ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ನಾವು ಈವರೆಗೆ ರಾಜ್ಯದೊಳಗಣ ಕಾನನದಲ್ಲಿ ರಾತ್ರಿಗಳನ್ನು ಕಳೆದೆವು. ಇನ್ನು ಈ ರಾತ್ರಿ ಮೊದಲುಗೊಂಡು ಮಹಾರಣ್ಯದಲ್ಲಿ ರಾತ್ರಿಗಳನ್ನು ಕಳೆಯಬೇಕು. ಸುಮಂತ್ರನೂ ಇಲ್ಲ. ನಾವಿಬ್ಬರೂ ಇಂದುಮೊದಲಾಗಿ ರಾತ್ರಿಯಲ್ಲಿ ಎಚ್ಚರಿಕೆಯಿಂದ ಸೀತಾದೇವಿಯನ್ನು ರಕ್ಷಿಸಬೇಕು. ತಳಿರ ಹಾಸಿಗೆಯನ್ನು ಮಾಡಿಕೊಂಡು ಈ ರಾತ್ರಿಯನ್ನು ಕಳೆಯಬೇಕು" ಎಂದು ನುಡಿದನು,

ಆ ಬಳಿಕ ಅತಿಮೃದುವಾದ ಹಂಸತೂಲಿಕಾತಲ್ಪದಲ್ಲಿ ಮಲಗುತ್ತಿದ್ದ ಶ್ರೀರಾಮನು ನೆಲದ ಮೇಲೆ ಕುಳಿತುಕೊಂಡು ಲಕ್ಷ್ಮಣನೊಡನೆ ಮಾತನಾಡುತ್ತ ಹೀಗೆಂದನು: "ಲಕ್ಷ್ಮಣ, ಈ ರಾತ್ರಿಯಲ್ಲಿ ದಶರಥರಾಯನು ಅತ್ಯಂತ ದುಃಖಾಕ್ರಾಂತನಾಗಿ ಮಲಗಿರುವನು. ಕೈಕೇಯೀದೇವಿಯು ತನ್ನ ಮನಸ್ಸಿನ ಇಷ್ಟವು ಸಂದಿತೆಂದು ಹರ್ಷಪಡುತ್ತ ತನ್ನ ಮಗನಾದ ಭರತನಿಗೆ ರಾಜ್ಯಾಧಿಪತ್ಯವಾಯಿತೆಂಬ ಸಂತೋಷದಿಂದಿರುವಳು. ಅನಾಥನಾಗಿ ವೃದ್ಧನಾದ ದಶರಥಮಹಾರಾಯನು ಆ ದೇವಿಯ ಮಾತಿಗೆ ಮರುಳಾಗಿ ನಮ್ಮ ಅಗಲಿಕೆಯಿಂದುಂಟಾದ ದುಃಖದಿಂದ ಹಂಬಲಿಸಿ ಚಿತ್ತಭ್ರಮೆಯಿಂದ ಏನುತಾನೆ ಮಾಡಿಯಾನು? ಲೋಕದಲ್ಲಿ ಧರ್ಮಾರ್ಥಗಳಿಗಿಂತಲೂ ಕಾಮವು ಬಲವಾದದ್ದೆಂದು ತೋರುತ್ತದೆ. ಅಜ್ಞಾನಿಗಳಾದವರೂ ಸ್ತ್ರೀಯರ ಮಾತಿಗೆ ಮರುಳಾಗಿ ಅನುಕೂಲರಾದ ಮಕ್ಕಳನ್ನು ಬಿಡರು. ದಶರಥರಾಯನು ಅಜ್ಞಾನಿಗಳೆಲ್ಲರಿಗೂ ಮೊದಲಿನವನಾದನು. ಕೈಕೇಯೀದೇವಿಯು ದಶರಥರಾಯನ ನಾಶ, ನನಗೆ ವನವಾಸ, ಭರತನಿಗೆ ರಾಜ್ಯಾಧಿಪತ್ಯ ಎಂಬ ಈ ಮೂರು ಕಾರ್ಯಕ್ಕೋಸ್ಕರವೇ ಹುಟ್ಟಿದಳು. ಇಷ್ಟುಮಾತ್ರವೇ ಅಲ್ಲ. ರಾಜ್ಯಾಧಿಪತ್ಯದಿಂದ ಕೌಸಲ್ಯಾದೇವಿಯನ್ನೂ ಸುಮಿತ್ರಾದೇವಿಯನ್ನೂ ನಮ್ಮ ಮೇಲಣ ಮತ್ಸರದಿಂದ ಬಾಧಿಸುವಳು. ಸುಮಿತ್ರಾದೇವಿಯು ನನ್ನ ನಿಮಿತ್ತವಾಗಿ ಕೈಕೇಯೀದೇವಿಯ ಪೀಡೆಗೆ ಏಕೆ ಒಳಗಾಗಬೇಕು? ನೀನು ಇಲ್ಲಿಂದ ತಿರುಗಿ ಅಯೋಧ್ಯಾಪಟ್ಟಣಕ್ಕೆ ಹೋಗು. ಇಲ್ಲದಿದ್ದರೆ ಸುಮಿತ್ರಾದೇವಿ ಕೌಸಲ್ಯಾದೇವಿಯರಿಬ್ಬರೂ ಅನಾಥೆಯರಾಗುವರು. ನಾನು ಸೀತಾಸಮೇತನಾಗಿ ದಂಡಕಾರಣ್ಯಕ್ಕೆ ಹೋಗುತ್ತೇನೆ. ಕೈಕೇಯೀದೇವಿಯು ನಮ್ಮಮೇಲಣ ದ್ವೇಷದಿಂದ ಸುಮಿತ್ರಾದೇವಿ ಕೌಸಲ್ಯಾದೇವಿಯರಿಗೆ ಕೇಡುಕನ್ನೆಣಿಸುವಳು. ನನ್ನ ತಾಯಿಯು ಹಿಂದಿನ ಜನ್ಮದಲ್ಲಿ ಯಾವಳೋ ತಾಯಿಯನ್ನು ಮಕ್ಕಳಿಂದ ಅಗಲಿಸಿರಬೇಕು. ನನ್ನನ್ನು ಕೌಸಲ್ಯಾದೇವಿಯು ಬಹುಕಾಲ ರಕ್ಷಿಸಿ ನಾನು ಪ್ರಬುದ್ಧನಾದರೆ ತಾನು ಸುಖದಲ್ಲಿರಬಹುದೆಂದು ಮನಸ್ಸಿನಲ್ಲಿ ಯೋಚಿಸಿಕೊಂಡಿದ್ದಳು.

ಸಂತೋಷಪಡುತ್ತ ಗಂಗಾಯಮುನಾಸಂಗಮದ ಸಮೀಪಕ್ಕೆ ಹೋದನು. ಅಲ್ಲಿ ಲಕ್ಷ್ಮಣನನ್ನು ನೋಡಿ "ಲಕ್ಷ್ಮಣ, ಪ್ರಯಾಗದ ಸುತ್ತಲೂ ಯಜ್ಞಪುರುಷನ ಧ್ವಜವಾದ ಹೋಮಧೂಮವು ದೊಡ್ಡದಾಗಿ ಏಳುತ್ತಿದೆ, ನೋಡು. ಇದೇ ಭರದ್ವಾಜಮುನೀಶ್ವರನ ಆಶ್ರಮವಾಗಿರಬೇಕು. ಇದು ಗಂಗಾಯಮುನಾಸಂಗಮಸ್ಥಳ. ಇಲ್ಲಿ ಆ ನದಿಗಳ ತೆರೆಗಳ ಹೊಯ್ಲುಗಳ ಧ್ವನಿಯು ಕೇಳಿಸುತ್ತಿದೆ. ಈ ವನದಲ್ಲಿ ಸಂಚರಿಸಿಕೊಂಡಿರುವ ಮನುಷ್ಯರು ಮರಗಳನ್ನು ಕಡಿದು ಬಯಲುಮಾಡಿಕೊಂಡಿದ್ದಾರೆ. ಆ ಬಯಲ ಮಧ್ಯದಲ್ಲಿ ಭರದ್ವಾಜಮುನೀಶ್ವರನ ಆಶ್ರಮದಲ್ಲಿರುವ ನಾನಾಪ್ರಕಾರವಾದ ವೃಕ್ಷಗಳು ಕಾಣಿಸುತ್ತಿವೆ" ಎಂದು ನುಡಿದನು.

ಆ ಬಳಿಕ ಸೂರ್ಯನು ಅಸ್ತಂಗತನಾಗಲು ಶ್ರೀರಾಮನು ಗಂಗಾಯಮುನಾಸಂಗಮದಲ್ಲಿದ್ದ ಭರದ್ವಾಜಾಶ್ರಮವನ್ನು ಪ್ರವೇಶಿಸಿದನು. ಸ್ವಲ್ಪದೂರ ನಡೆದು ಭರದ್ವಾಜಮುನೀಶ್ವರನ ದರ್ಶನವನ್ನು ಮಾಡಿದನು; ಸೀತಾಲಕ್ಷ್ಮಣಸಮೇತನಾಗಿ ಆ ಮುನೀಶ್ವರನಿಗೆ ಅಭಿವಂದಿಸಿ ಆತನನ್ನು ಕುರಿತು "ಮುನೀಶ್ವರರೆ, ನಾನು ದಶರಥರಾಯನ ಕುಮಾರನಾದ ರಾಮ. ಈತನು ನನ್ನ ತಮ್ಮನಾದ ಲಕ್ಷ್ಮಣ, ಈಕೆಯು ಜನಕರಾಯನ ಮಗಳಾದ ನನ್ನ ಪತ್ನಿ ಸೀತಾದೇವಿ. ಇವರು ದಶರಥರಾಯನ ಅಪ್ಪಣೆಯಿಂದ ಕಾಡಿಗೆ ಬಂದ ನನ್ನ ಮೇಲಣ ವಿಶ್ವಾಸದಿಂದ ನನ್ನ ಸಂಗಡ ಬಂದರು. ನಾನು ದಶರಥರಾಯನ ಆಜ್ಞೆಯಿಂದ ಸೀತಾಲಕ್ಷ್ಮಣರ ಸಮೇತನಾಗಿ ವನಕ್ಕೆ ಬಂದು ಕಂದ ಮೂಲ ಫಲಾಹಾರಗಳನ್ನು ಮಾಡಿಕೊಂಡು ಸಂಚರಿಸುತ್ತಿದ್ದೇನೆ" ಎಂದು ನುಡಿದನು.

ಭರದ್ವಾಜಮುನಿಯು ಶ್ರೀರಾಮನಿಗೆ ನಾನಾವಿಧವಾದ ಕಂದ ಮೂಲ ಫಲಗಳನ್ನು ತಂದು ಕೊಟ್ಟು ಆತನು ವಾಸಮಾಡಿಕೊಂಡಿರುವುದಕ್ಕೆ ಒಂದು ಪರ್ಣಶಾಲೆಯನ್ನು ತೋರಿಸಿ ಸತ್ಕಾರಗಳನ್ನು ಮಾಡಿದನು. ಅದರಿಂದ ಸಂತುಷ್ಟಚಿತ್ತನಾಗಿ ಕುಳಿತಿದ್ದ ಶ್ರೀರಾಮನನ್ನು ಕುರಿತು "ಎಲೈ ಶ್ರೀರಾಮನೆ, ನೀನು ಅಪೂರ್ವವಾಗಿ ಈ ಸ್ಥಳಕ್ಕೆ ಬಂದೆ. ದಶರಥರಾಯನು ನಿನ್ನನ್ನು ನಿಷ್ಕಾರಣವಾಗಿ ವನಕ್ಕೆ ಕಳುಹಿಸಿದ ವೃತ್ತಾಂತವನ್ನು ಕೇಳಿದೆನು. ಈ ಗಂಗಾಯಮುನಾಸಂಗಮದಲ್ಲಿ ನನ ಆಶ್ರಮವು ಮನೋಹರವಾಗಿ ಏಕಾಂತಸ್ಥಳವಾಗಿದೆ. ಇಲ್ಲಿ ನೀನು ಸುಖವಾಗಿರು" ಎಂದು ನುಡಿದನು.

ಶ್ರೀರಾಮನು ಆತನನ್ನು ಕುರಿತು "ಸಮಸ್ತ ಪ್ರಾಣಿಗಳ ಉತ್ಪತ್ತಿ ಲಯಗಳನ್ನೂ ಭೂತಭವಿಷ್ಯದ್ವರ್ತಮಾನಗಳನ್ನೂ ಸಮಸ್ತ ತತ್ತ್ವಾರ್ಥಗಳನ್ನೂ ಬಲ್ಲ ಭರದ್ವಾಜಮುನೀಶ್ವರರೆ, ನಿಮ್ಮ ಸಮೀಪದಲ್ಲಿರುವ ಆಶ್ರಮದ ಸುತ್ತಲೂ ಅನೇಕ ಗ್ರಾಮಗಳಿವೆ. ನಾನು ಇಲ್ಲಿದ್ದರೆ ನಾನು ಸೀತಾಲಕ್ಷ್ಮಣಸಮೇತನಾಗಿ ಬಂದ ವೃತ್ತಾಂತವನ್ನುಕೇಳಿ ನಮ್ಮನ್ನು ನೋಡುವುದಕ್ಕಾಗಿ ಅನೇಕ ಜನರು ಬಂದು ಸಂಮರ್ದವನ್ನು ಮಾಡುವರು. ಆದ್ದರಿಂದ ನನಗೆ ಇಲ್ಲಿರುವುದಕ್ಕೆ ಮನಸ್ಸಿಲ್ಲ. ನಾನು ಸೀತಾಲಕ್ಷ್ಮಣಸಮೇತನಾಗಿರುವುದಕ್ಕೆ ಏಕಾಂತಸ್ಥಳವಾದ ಆಶ್ರಮವನ್ನು ತೋರಿಸಬೇಕು" ಎಂದು ಹೇಳಿದನು.

ಭರದ್ವಾಜಮುನೀಶ್ವರನು "ಶ್ರೀರಾಮ, ಇಲ್ಲಿಗೆ ಎರಡುಗಾವುದ ದೂರದಲ್ಲಿ ಗಂಧಮಾದನ ಪರ್ವತಕ್ಕೆ ಸಮಾನವಾದ ಚಿತ್ರಕೂಟವೆಂಬ ಗಿರಿಯಿದೆ. ಆ ಪರ್ವತವು ಪವಿತ್ರವಾದದ್ದು. ಅಲ್ಲಿ ಅನೇಕ ಋಷಿಗಳಿದ್ದಾರೆ. ಆ ಪರ್ವತದಲ್ಲಿರುವ ಪವಿತ್ರವಾದ ಶಿಖರಗಳನ್ನು ದರ್ಶನಮಾಡಿದ ಪುಣ್ಯಾತ್ಮರಿಗೆ ಯಾವಾಗಲೂ ಪಾಪಬುದ್ಧಿ ಹುಟ್ಟದು. ಚಿತ್ರಕೂಟಪರ್ವತದಲ್ಲಿ ಬಹುಮಂದಿ ಋಷಿಗಳು ತಪಸ್ಸುಮಾಡಿ ಪುಣ್ಯಲೋಕವನ್ನೈದಿದರು. ಅದು ಏಕಾಂತಸ್ಥಳ. ಅಲ್ಲಾದರೂ

ವಾಸಮಾಡು. ಅಲ್ಲದಿದ್ದರೆ ಈ ಗಂಗಾಯಮುನಾಸಂಗಮದಲ್ಲಿ ನನ್ನ ಜೊತೆಯಲ್ಲಾದರೂ ವಾಸಮಾಡಿಕೊಂಡಿರು" ಎಂದು ಅನೇಕ ಪ್ರಿಯೋಕ್ತಿಗಳನ್ನು ನುಡಿದು ಸೀತಾಲಕ್ಷ್ಮಣರನ್ನೂ ಬಹುಪ್ರಕಾರವಾಗಿ ಸತ್ಕರಿಸಿದನು.

ಆತನ ಸತ್ಕಾರದಿಂದ ಸಂತುಷ್ಟನಾಗಿ ಶ್ರೀರಾಮನು ಅತ್ಯಂತ ಪ್ರಸನ್ನಚಿತ್ತನಾಗಿದ್ದು ಸಾಯಂಕಾಲವಾಗಲು ಆ ಆಶ್ರಮದಲ್ಲಿ ರಾತ್ರಿಯನ್ನು ಕಳೆದು ಮಾರನೆಯದಿನ ಪ್ರಾತಃಕಾಲ ತಪೋಜ್ವಾಲೆಯಿಂದ ಬೆಳಗುತ್ತಿದ್ದ ಭರದ್ವಾಜಮುನೀಶ್ವರನ ಸಮೀಪಕ್ಕೆ ಹೋಗಿ ಕೈಮುಗಿದುಕೊಂಡು "ಮುನೀಶ್ವರರೆ, ನಿಮ್ಮ ಆಶ್ರಮದಲ್ಲಿ ಒಂದು ರಾತ್ರಿಯನ್ನು ಸುಖವಾಗಿ ಕಳೆದೆವು. ಇನ್ನು ಇಲ್ಲಿಂದ ಮುಂದಕ್ಕೆ ಹೊರಡುತ್ತೇವೆ" ಎಂದು ನುಡಿದನು.

ಭರದ್ವಾಜನು ಅನೇಕ ಕಂದ ಮೂಲ ಫಲಾಹಾರಗಳನ್ನು ತರಿಸಿ ಶ್ರೀರಾಮನಿಗೆ ಸಮರ್ಪಿಸಿ ಆತನನ್ನು ಕುರಿತು "ಶ್ರೀರಾಮ, ಚಿತ್ರಕೂಟಪರ್ವತವು ನಾನಾವಿಧವಾದ ಮೃಗಪಕ್ಷಿಗಳಿಂದಲೂ, ನವಿಲುಗಳ ಧ್ವನಿಯಿಂದಲೂ, ಪವಿತ್ರವಾದ ಪುಣ್ಯನದಿಗಳಿಂದಲೂ ಸ್ವಾದೂದಕವಿರುವ ಕೊಳಗಳಿಂದಲೂ ಬಹಳ ಮನೋಹರವಾಗಿದೆ. ಅಲ್ಲಿ ಆಶ್ರಮವನ್ನು ರಚಿಸಿಕೊಂಡು ಸುಖವಾಗಿ ವಾಸಮಾಡು" ಎಂದು ನುಡಿದನು.



## ೫೫ ನೆಯ ಅಧ್ಯಾಯ

## ಚಿತ್ರಕೂಟಕ್ಕೆ ಶ್ರೀರಾಮನ ಪ್ರಯಾಣ

ಆ ಬಳಿಕ ಶ್ರೀರಾಮನು ಭರದ್ವಾಜಮುನಿಗೆ ವಂದನೆಯನ್ನು ಮಾಡಿ ಆತನಿಂದ ಬೀಳ್ಕೊಂಡು ಚಿತ್ರಕೂಟಪರ್ವತಕ್ಕೆ ಹೊರಟನು. ಆಗ ಆ ಮುನೀಶ್ವರನು ರಾಮಲಕ್ಷ್ಮಣಸೀತಾದೇವಿಯರಿಗೆ ಅನೇಕ ಆಶೀರ್ವಾದಗಳನ್ನು ಮಾಡಿ ತಂದೆಯು ಮಕ್ಕಳನ್ನು ಬಳಿಗಳುಹಿಸುವಂತೆ ಅವರನ್ನು ಹಿಂಬಾಲಿಸಿ ಹೋಗುತ್ತ ಶ್ರೀರಾಮನನ್ನು ಕುರಿತು ಹೀಗೆಂದನು : "ಶ್ರೀರಾಮ, ಗಂಗಾಯಮುನಾ ಸಂಗಮದಿಂದ ಹೊರಟು ಕಾಳಿಂದೀನದಿಯ ತೀರದಲ್ಲಿ ಪಡುವಣದಿಕ್ಕಿಗೆ ನಡೆದು ಆ ನದಿಯನ್ನು ತೆಪ್ಪದಿಂದ ದಾಟಬೇಕು. ಅದರ ತೆಂಕಣತೀರದಲ್ಲಿ ಒಂದು ಆಲದ ಮರವಿದೆ. ಅದು ಪಚ್ಚೆವರ್ಣವುಳ್ಳ ಎಲೆಗಳಿಂದ ಕೂಡಿ ಬೆಳೆದು ಅನೇಕ ಸಿದ್ಧರಿಂದ ಸೇವಿಸಲ್ಪಟ್ಟದ್ದಾಗಿ ಶ್ಯಾಮಲವರ್ಣವಾಗಿರುವುದು. ಆ ವೃಕ್ಷದ ಸಮೀಪದಲ್ಲಿ ಹೋಗಿ ಸೀತಾದೇವಿಯು ಅದಕ್ಕೆ ನಮಸ್ಕಾರಪೂರ್ವಕವಾಗಿ ಪ್ರಾರ್ಥನೆ ಮಾಡಲಿ. ಮುಂದೆ ಕಪ್ಪಾದ ವನವಿರುವುದು. ಆ ವನದಲ್ಲಿ ಮುತ್ತುಗದ ಮರಗಳೂ ಯಲವದ ಮರಗಳೂ ಬಹಳವಾಗಿರುವುವು. ಯಮುನಾತೀರವು ತನ್ನಲ್ಲಿ ಹುಟ್ಟಿದ ಬಿದಿರುಗಳಿಂದ ಮನೋಹರವಾಗಿರುವುದು. ಇದೇ ನಿಮಗೆ ದಾರಿ. ನಾನು ಈ ಮಾರ್ಗದಲ್ಲಿ ಅನೇಕಸಾರಿ ಸಂಚರಿಸಿದ್ದೇನೆ. ಈ ದಾರಿಯು ಕಲ್ಲುಮುಳ್ಳುಗಳಿಲ್ಲದೆ, ಕಾಡುಗಿಚ್ಚಿನ ಬಾಧೆಯಿಲ್ಲದೆ ಮನೋಹರ ವಾಗಿರುವುದು" ಎಂದು ಹೇಳಿ ಮಾರ್ಗವನ್ನು ತೋರಿಸಿ ತನ್ನ ಆಶ್ರಮಕ್ಕೆ ತಿರುಗಿದನು.

ಆಮೇಲೆ ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ನಾವು ಮಹಾಪುಣ್ಯವನ್ನು ಮಾಡಿದವರು. ಮಹಾತ್ಮನಾದ ಭರದ್ವಾಜಮುನೀಶ್ವರನು ನಮ್ಮನ್ನು ಅನುಗ್ರಹಿಸಿ ಮಾರ್ಗವನ್ನು ತೋರಿಸಿದನು" ಎಂದು ನುಡಿದು ಸೀತಾದೇವಿಯನ್ನು ಮುಂದಿಟ್ಟುಕೊಂಡು ಕಾಳಿಂದೀತೀರಕ್ಕೆ

ಬಂದನು. ಆಮೇಲೆ ಲಕ್ಷ್ಮಣನು ಅತಿಶೀಘ್ರಪ್ರವಾಹವುಳ್ಳ ಕಾಳಿಂದೀನದಿಯನ್ನು ಕಂಡು ಅದನ್ನು ದಾಟುವುದಕ್ಕಾಗಿ ಅನೇಕ ಒಣಗಿದ ಮರಗಳನ್ನೂ ಒಣಗಿದ ಬಿದಿರುಗಳನ್ನೂ ತಂದು ಆ ನದೀತೀರದಲ್ಲಿ ಹುಟ್ಟಿದ ಲಾವಂಚದ ಹುಲ್ಲಿನಿಂದ ತೆಪ್ಪವನ್ನು ಕಟ್ಟಿ ಬೆತ್ತದ ಕಟ್ಟಿಗೆಯಿಂದಲೂ ಮರದ ಕೊಂಬೆಗಳಿಂದಲೂ ಪೀಠವನ್ನು ನಿರ್ಮಿಸಿ ಸೀತಾದೇವಿಯು ಆ ತೆಪ್ಪದಮೇಲೆ ಕುಳಿತುಕೊಳ್ಳುವುದಕ್ಕೆ ಅನುಕೂಲಮಾಡಿದನು. ಶ್ರೀರಾಮನು ಸಾಕ್ಷಾತ್ ಮಹಾಲಕ್ಷ್ಮಿಯಂತಿದ್ದ ಸೀತಾದೇವಿಯನ್ನು ಅದರಮೇಲೆ ಕುಳ್ಳಿರಿಸಿ ಆಕೆಯ ಸಮೀಪದಲ್ಲಿ ವಸ್ತ್ರಾಭರಣಭೂಷಣಾದಿಗಳನ್ನಿರಿಸಿದನು. ಮರದ ಕೊರಡುಗಳನ್ನು ಕಡಿದು ಅವುಗಳಿಂದ ರಾಮನೂ ಲಕ್ಷ್ಮಣನೂ ತೆಪ್ಪವನ್ನು ನಡೆಸಿಕೊಂಡು ಅತ್ಯಂತ ಸಾವಧಾನದಿಂದ ಕಾಳಿಂದೀನದಿಯನ್ನು ದಾಟುತ್ತಿದ್ದರು. ಆ ನದಿಯ ಮಧ್ಯಪ್ರದೇಶಕ್ಕೆ ಬಂದಾಗ ಸೀತಾದೇವಿಯು ಕಾಳಿಂದಿಯನ್ನು ಕುರಿತು ಕೈಮುಗಿದುಕೊಂಡು "ಹೇ ದೇವಿ, ಮಂಗಳಕರಳಾದ ನಿನ್ನನ್ನು ದಾಟಿಹೋಗುತ್ತಿದ್ದೇವೆ. ದಶರಥರಾಯನ ಕುಮಾರನಾದ ನನ್ನ ಪತಿಯು ವನವಾಸವನ್ನು ಮುಗಿಸಿ ಅಯೋಧ್ಯಾಪಟ್ಟಣಕ್ಕೆ ಸುಖವಾಗಿ ಬಂದರೆ ನಿನಗೆ ಸಂತೋಷವಾಗುವಂತೆ ಸಾವಿರ ಗೋವುಗಳಿಂದಲೂ, ನೂರು ಸುರಾಘಟಗಳಿಂದಲೂ ಪೂಜಿಸುವೆನು" ಎಂದು ಬಹಳವಾಗಿ ಪ್ರಾರ್ಥನೆಮಾಡಿದಳು. ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಕಾಳಿಂದೀನದಿಯನ್ನು ದಾಟಿ ಆ ನದಿಯ ತೆಂಕಣತೀರಕ್ಕೆ ಬಂದು ಹಸುರಾದ ಎಲೆಗಳಿಂದ ಮನೋಹರವಾದ ಆಲದ ಮರದಡಿಗೆ ಬರಲು ಸೀತಾದೇವಿಯು ಭರದ್ವಾಜಮುನೀಶ್ವರನ ಉಪದೇಶವನ್ನು ನೆನೆದು ಆ ಆಲದ ಮರಕ್ಕೆ ಅಭಿವಂದಿಸಿ "ಎಲೈ ಮಹಾವೃಕ್ಷವೆ, ನನ್ನ ಪತಿಯಾದ ಶ್ರೀರಾಮನು ವನದಿಂದ ತಿರುಗಿ ಬಂದು ಕೌಸಲ್ಯಾದೇವಿಯನ್ನೂ ಸುಮಿತ್ರಾದೇವಿಯನ್ನೂ ಮತ್ತೆ ಕಾಣುವಂತಾದರೆ ನಿನಗೆ ಅನೇಕ ಪೂಜೆಯನ್ನು ಮಾಡಿಸುವೆನು" ಎಂದು ಕೈಮುಗಿದುಕೊಂಡು ಪ್ರಾರ್ಥನೆ ಮಾಡಿದಳು.

ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ನೀನು ಸೀತೆಯ ಮುಂದೆ ನಡೆ; ನಾನು ಹಿಂದೆ ಬರುತ್ತೇನೆ. ಮಾರ್ಗದಲ್ಲಿ ದೃಷ್ಟಿಗೋಚರವಾದ ಫಲಪುಷ್ಪಗಳನ್ನು ಕಂಡು ಸೀತಾದೇವಿಯು ಬಯಸಿದರೆ ಆ ಫಲಪುಷ್ಪಗಳನ್ನು ಕೊಯಿದುಕೊಡು" ಎಂದು ನುಡಿದು ಸೀತಾದೇವಿಯನ್ನು ಮಧ್ಯದಲ್ಲಿ ನಡೆಯಿಸಿಕೊಂಡು ಹೋಗುತ್ತಿದ್ದನು. ಆ ಸಮಯದಲ್ಲಿ ರಾಮಲಕ್ಷ್ಮಣರಿಬ್ಬರ ಮಧ್ಯದಲ್ಲಿ ನಡೆದುಹೋಗುತ್ತಿದ್ದ ಸೀತಾದೇವಿಯು ಎರಡು ಗಂಡಾನೆಗಳ ನಡುವೆ ಸಂಚರಿಸುವ ಹೆಣ್ಣಾನೆಯ ರೀತಿಯಲ್ಲಿ ಒಪ್ಪುತ್ತಿದ್ದಳು. ಆ ದೇವಿಯು ಮಾರ್ಗದ ಎಡ ಬಲಗಳಲ್ಲಿ ಪುಷ್ಪಿತಗಳಾದ ಮರಗಳನ್ನೂ ಲತೆಗಳನ್ನೂ ಕಿರುಗಿಡಗಳನ್ನೂ ನೋಡಿ ಯಾವಾಗಲೂ ನೋಡದಿದ್ದ ಪುಷ್ಪಗಳನ್ನು ಲಕ್ಷ್ಮಣನಿಂದ ತರಿಸಿಕೊಂಡು ಅತ್ಯಂತ ಮನೋಹರವಾದ ಮಳಲೊಟ್ಟುಗಳಿಂದಲೂ ಹಂಸಸಾರಸ ಪಕ್ಷಿಗಳ ಧ್ವನಿಗಳಿಂದಲೂ ರಮಣೀಯವಾದ ಕಾಳಿಂದೀತೀರವನ್ನು ನೋಡುತ್ತ ಬರುತ್ತಿದ್ದಳು. ರಾಮಲಕ್ಷ್ಮಣರು ಮುಂದೆ ಒಂದು ಹರದಾರಿ ನಡೆದು ಭಕ್ಷಣಕ್ಕೆ ಯೋಗ್ಯವಾಗಿ ಪವಿತ್ರವಾದ ಮೃಗಗಳನ್ನು ಕೊಂದು ಮನೋಹರವಾದ ಯಮುನಾತೀರದಲ್ಲಿ ಸಂತೋಷದಿಂದ ಆ ರಾತ್ರಿಯನ್ನು ಕಳೆದರು



## ೫೬ ನೆಯ ಅಧ್ಯಾಯ

## ಚಿತ್ರಕೂಟದಲ್ಲಿ ಶ್ರೀರಾಮನ ನಿವಾಸ

ಮಾರನೆಯದಿವಸ ಪ್ರಾತಃಕಾಲದಲ್ಲಿ ಶ್ರೀರಾಮನು ಪಕ್ಷಿಗಳ ಧ್ವನಿಗಳನ್ನು ಕೇಳಿ ಲಕ್ಷ್ಮಣನನ್ನು ಎಬ್ಬಿಸಿ ಈಗ ಪ್ರಯಾಣವಾಗಿ ಹೋಗುವ ಸಮಯವೆಂದು ನುಡಿದನು. ಅನಂತರ ಆ ನದಿಯಲ್ಲಿ ಸ್ನಾನಮಾಡಿ ದಾರಿಯ ಬಳಲಿಕೆಯನ್ನೆಣಿಸದೆ ಭರದ್ವಾಜಮುನೀಶ್ವರನು ಹೇಳಿದ ಚಿತ್ರಕೂಟಪರ್ವತದ ಮಾರ್ಗವನ್ನು ಹಿಡಿದು ಸೀತಾಲಕ್ಷ್ಮಣಸಮೇತನಾಗಿ ಹೊರಟು ದಾರಿಯಲ್ಲಿ ಕಮಲಾಕ್ಷಿಯಾದ ಸೀತಾದೇವಿಯನ್ನು ಕುರಿತು ನುಡಿದನು: " ವೈದೇಹಿ, ವಸಂತಕಾಲದಲ್ಲಿ ಪುಷ್ಪಿತವಾದ ಮುಳ್ಳುಮುತ್ತುಗದ ಮರಗಳ ಸಮೂಹವು ಪ್ರಜ್ವಲಿಸುವ ಅಗ್ನಿಯಂತೆ ಮನೋಹರವಾಗಿರುವುದನ್ನು ನೋಡು. ಫಲಗಳಿಂದ ಪರಿಪೂರ್ಣವಾದ ಗೇರುಮರಗಳೂ ಬೆಲ್ಲವತ್ತದ ಮರಗಳೂ ಎಷ್ಟುನೋಡಿದರೂ ಮನದಣಿಯದಂತಿವೆ. ಪ್ರತಿಯೊಂದು ಮರದ ಒಂದೊಂದು ಕೊಂಬೆಯಲ್ಲಿಯೂ ದೊಡ್ಡ ಕೊಳಗಗಳ ಹಾಗೆ ಜೇನುಹುಳುಗಳು ಗೂಡುಗಳನ್ನು ಕಟ್ಟಿವೆ. ಕೋಗಿಲೆಗಳು ಸ್ವರಗೈಯುತ್ತಿರಲು ನವಿಲುಗಳು ನರ್ತನಮಾಡುತ್ತಿವೆ. ಮನೋಹರವಾದ ಈ ವನಮಧ್ಯದಲ್ಲಿ ಹೂವು ಕಾಯಿಗಳಿಂದಿಟ್ಟಣಿಸಿದ ಮನೋಹರವಾದ ವೃಕ್ಷಗಳಿವೆ. ಎಲ್ಲಿನೋಡಿದರೂ ನಾನಾವಿಧವಾದ ಪಕ್ಷಿಗಳು ಸ್ವರಗೈಯುತ್ತಿವೆ. ಮದಿಸಿದ ಕಾಡಾನೆಗಳು ಸಂಚರಿಸುತ್ತಿವೆ. ಇಗೋ, ಚಿತ್ರಕೂಟಪರ್ವತದ ಶಿಖರಗಳು ಆಕಾಶವನ್ನು ತುಡುಕುತ್ತಿವೆ. ಈ ಪರ್ವತದಲ್ಲಿ ಸಮಕಟ್ಟಾದ ಸ್ಥಳದಲ್ಲಿ ಸುಖವಾಗಿರೋಣ." ಹೀಗೆ ಹೇಳಿ ಅನಂತರ ಮನೋಹರವಾದ ಚಿತ್ರಕೂಟಪರ್ವತವನ್ನೈದಿ ಎಲ್ಲಿನೋಡಿದರೂ ಗೆಡ್ಡೆಗೆಣಸು ಹಣ್ಣು ಹಂಪಲುಗಳು ಪರಿಪೂರ್ಣವಾಗಿರುವುದನ್ನು ಕಂಡು " ಎಲೈ ಲಕ್ಷ್ಮಣ, ಈ ಪರ್ವತವು ರಮಣೀಯವಾಗಿದೆ. ಎಲ್ಲಿನೋಡಿದರೂ ಕಂದ ಮೂಲ ಫಲಾದಿಗಳಿಂದ ಮನೋಹರವಾಗಿದೆ. ಇದು ನಮ್ಮ ಜೀವನಕ್ಕೆ ಅನುಕೂಲವಾಗಿದೆ. ಈ ಪರ್ವತದಲ್ಲಿ ಅನೇಕ ಮಹಾತ್ಮರಾದ ಋಷಿಗಳು ವಾಸಮಾಡಿಕೊಂಡಿದ್ದಾರೆ. ಇದೇ ನಮಗೆ ವಾಸಕ್ಕೆ ಯೋಗ್ಯವಾದ ಸ್ಥಳ " ಎಂದು ಶ್ರೀರಾಮನು ನುಡಿದನು.

ಆ ಮಾತನ್ನು ಲಕ್ಷ್ಮಣನೂ ಸೀತಾದೇವಿಯೂ ಮಹಾಪ್ರಸಾದವೆಂದು ಅಂಗೀಕರಿಸಿದರು. ಶ್ರೀರಾಮನು ಹರ್ಷದಿಂದ ಅವರನ್ನು ಕೂಡಿಕೊಂಡು ವಾಲ್ಮೀಕಿಮುನೀಶ್ವರನ ಆಶ್ರಮಕ್ಕೆ ಹೋಗಿ ಆ ಮುನೀಶ್ವರನನ್ನು ನೋಡಿ ವಂದನೆಮಾಡಿದನು. ಸಮಸ್ತ ಧರ್ಮರಹಸ್ಯಗಳನ್ನೂ ಬಲ್ಲ ವಾಲ್ಮೀಕಿಮುನಿಯು ಸೀತಾಲಕ್ಷ್ಮಣಸಮೇತನಾದ ಶ್ರೀರಾಮನಿಗೆ ಸಂತೋಷದಿಂದ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಕುಶಲಪ್ರಶ್ನೆಯನ್ನು ಕೇಳಿ ಮನಸ್ಸಿನಲ್ಲಿ ಹರ್ಷಪಡುತ್ತಿದ್ದನು. ಆಮೇಲೆ ಶ್ರೀರಾಮನು ಲಕ್ಷ್ಮಣನನ್ನು ಕುರಿತು " ಎಲೈ ಲಕ್ಷ್ಮಣ, ನೀನು ವಾಲ್ಮೀಕಿಮುನೀಶ್ವರನ ಅಪ್ಪಣೆತೆಗೆದುಕೊಂಡು ಒಂದು ಪರ್ಣಶಾಲೆಯನ್ನು ನಿರ್ಮಿಸು " ಎಂದು ಹೇಳಿದನು.

ಲಕ್ಷ್ಮಣನು ಆ ಮುನೀಶ್ವರನ ಅಪ್ಪಣೆಯನ್ನು ಪಡೆದು ಗಟ್ಟಿಯಾಗಿಯೂ ನೇರವಾಗಿಯೂ ಮನೋಹರವಾಗಿಯೂ ಇರುವ ಮರಗಳನ್ನು ಕಡಿದು ತಂದು ಒಂದು ಪರ್ಣಶಾಲೆಯನ್ನು ನಿರ್ಮಿಸಿದನು. ಶ್ರೀರಾಮನು ಅದನ್ನು ನೋಡಿ ಸಂತೋಷಪಟ್ಟು ದೇವತೆಗಳಿಗೆ ಬಲಿಯನ್ನು ಕೊಡುವುದಕ್ಕೆ ಎರಳೆಯ ಮಾಂಸವನ್ನು ತರಹೇಳಲು ಲಕ್ಷ್ಮಣನು ಶೀಘ್ರದಲ್ಲಿ ಒಂದು ಎರಳೆಯನ್ನು

ಕೊಂದು ತಂದನು. ಅದನ್ನು ಜ್ವಲಿಸುತ್ತಿದ್ದ ಅಗ್ನಿಯಲ್ಲಿ ಪಚನಮಾಡಿ "ಶ್ರೀರಾಮ, ಮೃಗವು ಪಕ್ವವಾಯಿತು. ನೀನು ದೇವತಾರ್ಚನೆಯನ್ನು ಮಾಡು" ಎಂದು ಹೇಳಿದನು.

ಶ್ರೀರಾಮನು ಶೀಘ್ರದಲ್ಲಿ ಸ್ನಾನಮಾಡಿ ನಿಯಮಸ್ಥನಾಗಿ ತನ್ನ ಇಷ್ಟದೇವತಾಪ್ರಾರ್ಥನೆಯನ್ನು ಮಾಡಿ ದೇವಪೂಜೆಯ ಸ್ಥಳಕ್ಕೆ ಹೋಗಿ ದೇವತಾರ್ಚನೆಯನ್ನು ಮಾಡಿ ವಿಷ್ಣುಬಲಿ ರುದ್ರಬಲಿ ಮೊದಲಾದ ಬಲಿಪ್ರದಾನಗಳಿಂದ ವೈಶ್ವದೇವವನ್ನು ಮಾಡಿ ದೇವತೆಗಳಿಗೆ ಬಲಿಯನ್ನು ಕೊಟ್ಟನು. ಆಮೇಲೆ ಜಪಗಳನ್ನು ಮಾಡಿ ವೇದೋಕ್ತಗಳಾದ ಮಂತ್ರಗಳಿಂದ ದೇವತಾಸಂತರ್ಪಣೆಮಾಡಿ ಸೀತಾಲಕ್ಷ್ಮಣಸಮೇತನಾಗಿ ಪರ್ಣಶಾಲೆಯನ್ನು ಪ್ರವೇಶಿಸಿದನು. ನಾನಾವಿಧವಾದ ಪಕ್ಷಿಗಳ ಸ್ವರಗಳಿಂದಲೂ ಮನೋಹರವಾದ ಹೂದೋಟಗಳಿಂದಲೂ ವೃಕ್ಷಗಳಿಂದಲೂ ಇಟ್ಟಣಿಸಿದ ಚಿತ್ರಕೂಟಪರ್ವತದ ವನದಲ್ಲಿ ಹರಿಯುತ್ತಿದ್ದ ಮಾಲ್ಯವತಿ ಎಂಬ ನದೀತೀರದಲ್ಲಿ ಅಯೋಧ್ಯಾಪಟ್ಟಣವನ್ನು ಬಿಟ್ಟು ಬಂದ ದುಃಖವನ್ನು ಮರೆತು ಶ್ರೀರಾಮನು ಸೀತಾಲಕ್ಷ್ಮಣರೊಡನೆ ಅತ್ಯಂತ ಸಂತುಷ್ಟಚಿತ್ತನಾಗಿ ವಾಸಮಾಡಿದನು.



### ೫೭ನೆಯ ಅಧ್ಯಾಯ

## ಸುಮಂತ್ರನು ಶ್ರೀರಾಮನನ್ನು ವನಕ್ಕೆ ಕಳುಹಿಸಿಬಂದದ್ದನ್ನು ಕೇಳಿ ದಶರಥನು ಮೂರ್ಛೆಯಾದದ್ದು

ಶ್ರೀರಾಮನು ಗಂಗೆಯನ್ನು ದಾಟಿ ದಕ್ಷಿಣತೀರಕ್ಕೆ ಹೋದಮೇಲೆ, ಅವನು ಗಂಗಾಯಮುನಾಸಂಗಮದಲ್ಲಿದ್ದ ಭರದ್ವಾಜಮುನೀಶ್ವರನ ದರ್ಶನಮಾಡಿ ಚಿತ್ರಕೂಟಕ್ಕೆ ಹೋದನೆಂಬ ವೃತ್ತಾಂತವನ್ನು ಆ ದಿಕ್ಕಿನಿಂದ ಬಂದವರ ಮೂಲಕ ಗುಹನು ತಿಳಿದು ಅದನ್ನು ಸುಮಂತ್ರನಿಗೆ ಹೇಳಿ ತನ್ನ ಮನೆಗೆ ಹೋದನು. ಸುಮಂತ್ರನು ಗುಹನಿಂದ ಬೀಳ್ಕೊಂಡು ರಥವನ್ನು ಹತ್ತಿ ಅತ್ಯಂತ ದುಗುಡದಿಂದ ಮಧ್ಯಮಾರ್ಗದಲ್ಲಿದ್ದ ನದಿಗಳನ್ನೂ ದೇಶಗಳನ್ನೂ ದಾಟಿ ಅಯೋಧ್ಯೆಗೆ ಬಂದನು. ಜನಗಳ ಸದ್ದಿಲ್ಲದ ಅಯೋಧ್ಯಾಪಟ್ಟಣವು ಶ್ರೀರಾಮನ ಅಗಲಿಕೆಯಿಂದುಂಟಾದ ಶೋಕಾಗ್ನಿಯಿಂದ ದಗ್ಧವಾಗಿ ಲಯವಾಯಿತೋ ಎಂದು ಚಿಂತಿಸುತ್ತ ಸುಮಂತ್ರನು ಪಟ್ಟಣವನ್ನು ಪ್ರವೇಶಿಸಿದನು. ಆತನು ಬಂದ ವೃತ್ತಾಂತವನ್ನು ಕೇಳಿ ಆ ಪಟ್ಟಣದಲ್ಲಿದ್ದ ಜನರು ಅಲ್ಲಲ್ಲಿ ಗುಂಪುಗೂಡಿ ಸುಮಂತ್ರನ ಸಮೀಪಕ್ಕೆ ಬಂದು ಶ್ರೀರಾಮನೆಲ್ಲೆಂದು ಕೇಳುತ್ತಿದ್ದರು. ಸುಮಂತ್ರನು ಶ್ರೀರಾಮನನ್ನು ಗಂಗಾತೀರದಲ್ಲಿ ಬಿಟ್ಟು ತಾನು ತಿರುಗಿ ಬಂದ ವೃತ್ತಾಂತವನ್ನು ನುಡಿಯಲು ಆ ಪುರಜನರು ಹಾಹಾಕಾರವನ್ನು ಮಾಡುತ್ತ ಕಣ್ಣೀರನ್ನು ಸುರಿಸಿದರು. ಅವರು ರೋದನ ಮಾಡುತ್ತ ಅಲ್ಲಲ್ಲಿ ಒಟ್ಟುಗೂಡಿಕೊಂಡು "ಅಕಟಕಟಾ! ನಾವು ಕೆಟ್ಟೆವಲ್ಲ! ಶ್ರೀರಾಮನನ್ನು ವಿವಾಹ ಯಜ್ಞಾದಿ ಉತ್ಸವಗಳಲ್ಲಿಯಾದರೂ ಕಾಣುವುದಕ್ಕಿಲ್ಲವಾಯಿತಲ್ಲ! ಆತನು ಯಾವಾಗಲೂ ಸಮಸ್ತ ಪ್ರಜೆಗಳ ಯೋಗಕ್ಷೇಮಗಳನ್ನು ವಿಚಾರಿಸಿ ಅವರಿಗೆ ಸಮಯದಲ್ಲಿ ಬೇಕಾದ ವಸ್ತುಗಳನ್ನು ತರಿಸಿಕೊಟ್ಟು, ಹೆತ್ತತಂದೆಯ ಹಾಗೆ ಈ ಪಟ್ಟಣವನ್ನು ಪರಿಪಾಲಿಸುತ್ತಿದ್ದನು" ಎಂದು ಅಂಗಡಿ ಬೀದಿಗಳಲ್ಲಿಯೂ ಉಪ್ಪರಿಗೆ ಮೇಲುಮಚ್ಚುಗಳಲ್ಲಿಯೂ ನುಡಿಯುತ್ತಿದ್ದರು. ಅಲ್ಲಲ್ಲಿ ಉಪ್ಪರಿಗೆಗಳಲ್ಲಿದ್ದ ಸ್ತ್ರೀಯರು ಆ ವೃತ್ತಾಂತವನ್ನು ಕೇಳಿ "ಅಯ್ಯೋ! ಸುಮಂತ್ರನೂ ಶ್ರೀರಾಮನೂ ಕೂಡಿ

ಹೋದರು. ಈಗ ಸುಮಂತ್ರನು ಒಬ್ಬನೇ ಬಂದನು. ಈತನು ಪುತ್ರಶೋಕದಿಂದ ಹಂಬಲಿಸುತ್ತಿರುವ ಕೌಸಲ್ಯಾದೇವಿಗೆ ಏನೆಂದು ಹೇಳುವನು ? ಆ ದೇವಿಯು ಶ್ರೀರಾಮನನ್ನು ಬಿಟ್ಟು ಬಂದನೆಂಬ ವೃತ್ತಾಂತವನ್ನು ಕೇಳಿ ಹೇಗೆ ಜೀವಿಸುವಳು ?" ಎಂದು ಹಂಬಲಿಸುತ್ತ ಇದ್ದರು.

ಸುಮಂತ್ರನು ಅವರ ಮಾತುಗಳನ್ನು ಕೇಳುತ್ತ ಶೋಕಾಗ್ನಿಯಲ್ಲಿ ಮುಳುಗಿದವನಾಗಿ ಎಂಟನೆಯ ಅಂತರದ ಬಾಗಿಲಲ್ಲಿ ದಶರಥರಾಯನಿರುವ ಮನೆಗೆ ಹೋಗಿ ಆ ರಾಯನನ್ನು ಕಂಡು ವಂದಿಸಿ ಶ್ರೀರಾಮನ ವೃತ್ತಾಂತವನ್ನು ಹೇಳಿದನು. ದಶರಥನು ಆ ಮಾತನ್ನು ಕೇಳಿ ಮೂರ್ಛಾಕ್ರಾಂತನಾಗಿ ಭೂಮಿಯಮೇಲೆ ಬಿದ್ದನು. ಆಗ ಕೌಸಲ್ಯಾದೇವಿಯೂ ಸುಮಿತ್ರಾದೇವಿಯೂ ಶೀಘ್ರದಲ್ಲಿ ಬಂದು ದಶರಥರಾಯನನ್ನೆಬ್ಬಿಸಿದರು. ಕೌಸಲ್ಯೆಯು "ಮಹಾರಾಜ, ಶ್ರೀರಾಮನನ್ನು ವನದಲ್ಲಿ ಬಿಟ್ಟುಬಂದ ಸುಮಂತ್ರನಿಂದ ಆತನ ವೃತ್ತಾಂತವನ್ನು ಕೇಳದೆ ಏಕೆ ಸುಮ್ಮನಿದ್ದೀಯೆ ? ನೀನು ದುರ್ನೀತಿಯಿಂದ ಆತನನ್ನು ಹೊರಡಿಸಿ ಈಗ ನಾಚಿಕೆಪಡುತ್ತಿದ್ದೀಯೆ. ರೋದನಮಾಡುವುದನ್ನು ಬಿಡು. ಇಲ್ಲಿ ಕೈಕೇಯಿದೇವಿಯಿಲ್ಲ. ಭಯವನ್ನು ಬಿಟ್ಟು ಶ್ರೀರಾಮನ ವನವಾಸವೃತ್ತಾಂತವನ್ನು ಕೇಳು" ಎಂದು ನುಡಿದಳು. ಆಗ ಕೌಸಲ್ಯಾದೇವಿಯೂ ಶೋಕಾತಿಶಯದಿಂದ ಮೂರ್ಛಿತಳಾಗಿ ಭೂಮಿಯಮೇಲೆ ಬಿದ್ದಳು. ಈ ರೀತಿಯಲ್ಲಿದ್ದ ದಂಪತಿಗಳನ್ನು ಕಂಡು ಅಂತಃಪುರದ ಸ್ತ್ರೀಯರೆಲ್ಲರೂ ಹಾಹಾಕಾರವನ್ನು ಮಾಡಿ ಬೊಬ್ಬಿಟ್ಟು ಗೋಳಿಡುತ್ತ ರೋದನವನ್ನು ಮಾಡಲು ಆ ಪಟ್ಟಣವೆಲ್ಲವೂ ಆ ಕೋಲಾಹಲಧ್ವನಿಯಿಂದ ಭಯಂಕರವಾಗಿ ತೋರಿತು.

---

### ೫೮ನೆಯ ಅಧ್ಯಾಯ

## ಸುಮಂತ್ರನು ದಶರಥನಿಗೆ ಶ್ರೀರಾಮಾದಿಗಳು ನುಡಿದದ್ದನ್ನು ಹೇಳಿದ್ದು

ಆ ಬಳಿಕ ದಶರಥನು ಎಚ್ಚರವಾಗಿ ಸುಮಂತ್ರನನ್ನು ಕುರಿತು ಶ್ರೀರಾಮನ ವೃತ್ತಾಂತವನ್ನು ಕೇಳಿದನು. ಆಗ ಸುಮಂತ್ರನು ಕೈಮುಗಿದುಕೊಂಡು ಹೊಸದಾಗಿ ಹಿಡಿದು ತಂದ ಆನೆಯಂತೆ ಮುಂದುಗಾಣದೆ ಹಂಬಲಿಸುತ್ತಿದ್ದ ದಶರಥರಾಯನಿಗೆ ಶ್ರೀರಾಮನನ್ನು ಗಂಗಾತೀರದಲ್ಲಿ ಬಿಟ್ಟುಬಂದ ವೃತ್ತಾಂತವನ್ನು ಹೇಳಿದನು. ದಶರಥರಾಯನು ಅದನ್ನು ಕೇಳಿ ಅತ್ಯಂತ ದುಃಖಾಕ್ರಾಂತನಾಗಿ ಸುಮಂತ್ರನನ್ನು ಕುರಿತು ಹೇಳಿದನು : "ಎಲೈ ಸುಮಂತ್ರನೆ, ಶ್ರೀರಾಮನು ಎಲ್ಲಿದ್ದಾನೆ ? ಯಾವ ಮರದಡಿಯನ್ನು ಸೇರಿದ್ದಾನೆ ? ಯಾವಾಗಲೂ ಸುಖವನ್ನು ಅನುಭವಿಸಿಕೊಂಡಿದ್ದ ಶ್ರೀರಾಮನು ದುಃಖದಿಂದ ಕೃಶನಾದನೆ ? ಶ್ರೇಷ್ಠವಾದ ಸುಪ್ಪತ್ತಿಗೆಯಮೇಲೆ ಮಲಗುತ್ತಿದ್ದ ಆ ರಾಜಕುಮಾರನು ನೆಲದಮೇಲೆ ಹೇಗೆ ಮಲಗುತ್ತಾನೆ ? ರಥ ಗಜ ತುರಗ ಕಾಲಾಳುಗಳೆಂಬ ಚತುರಂಗಬಲವು ಎರಡು ಕಡೆಯಲ್ಲಿಯೂ ಇಟ್ಟಣಿಸಿ ನಡೆಯಲು ಹೊರಗೆ ಹೊರಡುತ್ತಿದ್ದ ಶ್ರೀರಾಮನು ನಿರ್ಜನವಾದ ವನದಲ್ಲಿ ಏಕಾಂಗಿಯಾಗಿ ಹೇಗಿದ್ದಾನೆ ? ಅನೇಕ ದುಷ್ಟಮೃಗಗಳೂ ಹೆಬ್ಬಾವೂ ಕೃಷ್ಣಸರ್ಪಗಳೂ ಸಂಚರಿಸುವ ವನದಲ್ಲಿ ಸೀತಾಲಕ್ಷ್ಮಣಸಮೇತನಾಗಿ ಹೇಗಿದ್ದಾನೆ ? ಸುಕುಮಾರಾಂಗಿಯಾದ ಸೀತಾದೇವಿಯೂ ರಾಜಕುಮಾರರಾದ ರಾಮಲಕ್ಷ್ಮಣರೂ ಕಾಲುನಡೆಯಿಂದ ಹೇಗೆ ಸಂಚರಿಸುತ್ತಾರೆ ? ಎಲೈ ಸುಮಂತ್ರನೆ, ಮಂದರಪರ್ವತದಲ್ಲಿ ಸಂಚರಿಸುವ ಅಶ್ವಿನೀದೇವತೆಗಳಂತೆ ವನದಲ್ಲಿ ಸಂಚರಿಸುವ ರಾಮಲಕ್ಷ್ಮಣರನ್ನು ಕಂಡು ನೀನು ಕೃತಾರ್ಥನಾದೆ. ವನವನ್ನೈದಿದ ಶ್ರೀರಾಮನು ಏನೆಂದು

ಹೇಳಿದನು ? ಸೀತಾದೇವಿ ಏನೆಂದಳು ? ಅವರು ವಾಸಮಾಡುವುದು ಊಟಮಾಡುವುದು ನಿದ್ರೆಮಾಡುವುದು ಮೊದಲಾದ ವೃತ್ತಾಂತಗಳನ್ನು ಹೇಳು. ಅವನ್ನು ಕೇಳಿಯಾದರೂ ಯಯಾತಿ ರಾಯನು ಸತ್ಪುರುಷರ ವೃತ್ತಾಂತವನ್ನು ಕೇಳಿ ಆನಂದದಿಂದ ಜೀವಿಸಿಕೊಂಡಿದ್ದಂತೆ ನಾನೂ ಜೀವಿಸಿಕೊಂಡಿರುತ್ತೇನೆ" ಎಂದು ಹೇಳಿದನು.

ಆಮೇಲೆ ಸುಮಂತ್ರನು ದಶರಥನನ್ನು ಕುರಿತು ಹೀಗೆಂದನು : "ಮಹಾರಾಜ, ಶ್ರೀರಾಮನು ನನ್ನ ಸಂಗಡ ಹೀಗೆ ಹೇಳಿದನು : 'ದಶರಥಮಹಾರಾಜನಿಗೆ ಧರ್ಮವನ್ನು ಪರಿಪಾಲಿಸಿಕೊಂಡಿರ ಹೇಳು. ನಾನು ಆತನಿಗೆ ಸಾಷ್ಟಾಂಗ ದಂಡಪ್ರಣಾಮವನ್ನು ಮಾಡಿದೆನೆಂದು ಹೇಳು. ಅಂತಃಪುರ ದಲ್ಲಿರುವವರೆಲ್ಲರಿಗೂ ಪ್ರತ್ಯೇಕವಾಗಿ ನಾನು ನಮಸ್ಕಾರಮಾಡಿದೆನೆಂದು ಹೇಳು. ನನ್ನ ತಾಯಿಯಾದ ಕೌಸಲ್ಯಾದೇವಿಗೆ ನಮಸ್ಕಾರಮಾಡಿದೆನೆಂದು ಹೇಳಿ ಆ ದೇವಿಯು ಧರ್ಮವನ್ನೇ ಪರಿಪಾಲಿಸಿಕೊಂಡು ಎರಡುಹೊತ್ತೂ ಮಹಾರಾಜನ ಅಗ್ನಿಹೋತ್ರಕ್ಕೆ ಸಹಾಯಮಾಡಿಕೊಂಡಿರಬೇಕೆಂದೂ ಸವತಿಯರಲ್ಲಿ ಮಾತ್ಸರ್ಯವಿಲ್ಲದಿರಬೇಕೆಂದೂ ಪೂಜ್ಯರಾದವರನ್ನು ಸನ್ಮಾನದಿಂದ ಕಾಣಬೇಕೆಂದೂ ಕೈಕೇಯೀ ದೇವಿಯಲ್ಲಿ ವಿನಯದಿಂದ ಇರಬೇಕೆಂದೂ ರಾಜ್ಯಾಧಿಪತ್ಯವನ್ನು ಮಾಡುವವನೇ ದೊಡ್ಡವನಾದ್ದ ರಿಂದ ಭರತನನ್ನು ಕಂಡರೆ ವಿನಯದಿಂದಿರಬೇಕೆಂದೂ ಆತನ ಮುಂದೆ ನನ್ನ ಗುಣಕಥನಗಳನ್ನು ಉತ್ಕೃಷ್ಟವಾಗಿ ಹೇಳಬಾರದೆಂದೂ ಹೇಳು. ಭರತನನ್ನು ಕುರಿತು ತನ್ನ ತಾಯಿಗಳೆಲ್ಲರನ್ನೂ ಸಮಾನವಾಗಿ ಕಾಣಬೇಕೆಂದೂ ಯುವರಾಜಪಟ್ಟವನ್ನು ಕಟ್ಟಿಕೊಂಡು ದಶರಥರಾಯನೇ ಅರಸನೆಂದು ರಾಜ್ಯವನ್ನು ಪರಿಪಾಲಿಸಬೇಕೆಂದೂ ದಶರಥರಾಯನು ವೃದ್ಧನೂ ಮನೋವ್ಯಥೆ ಯುಳ್ಳವನೂ ಆದ್ದರಿಂದ ಆತನನ್ನು ನೋಯಿಸಬಾರದೆಂದೂ ಹೇಳು. ಪುತ್ರಶೋಕದಿಂದ ಕಂಗೆಟ್ಟ ನನ್ನ ತಾಯಿಯಾದ ಕೌಸಲ್ಯಾದೇವಿಯನ್ನು ತನ್ನ ತಾಯಿಯಂತೆ ರಕ್ಷಣೆಮಾಡಬೇಕೆಂದೂ ಹೇಳು' ಎಂದು ಎಲ್ಲರಿಗೂ ಹೇಳಿಕಳುಹಿಸಿ ಕಣ್ಣೀರು ಸುರಿಸಿದನು.

ಆಮೇಲೆ ಲಕ್ಷ್ಮಣನು ನನ್ನನ್ನು ಕುರಿತು 'ದಶರಥರಾಯನು ಯಾವ ಅಪರಾಧವನ್ನು ಕಂಡು ಶ್ರೀರಾಮನನ್ನು ಹೊರಡಿಸಿದನು ? ಕೈಕೇಯೀದೇವಿಯ ಮಾತುಗಳನ್ನು ಕೇಳಿ ಅಕಾರ್ಯವನ್ನು ಮಾಡಿ ನಮ್ಮನ್ನು ಹೊರಡಿಸಿದ್ದಾನೆ. ಕೈಕೇಯೀದೇವಿಗೆ ವರವನ್ನು ಕೊಟ್ಟು ತಪ್ಪಬಾರದೆಂದು ಶ್ರೀರಾಮನನ್ನು ಹೊರಡಿಸಿದನಾದರೂ ಸರ್ವಥಾ ಅಕೃತ್ಯವನ್ನೇ ಮಾಡಿದನು. ಆದರೂ ಈ ಕೃತ್ಯವು ಈಶ್ವರಾಧೀನದಿಂದ ಬಂದಿತಲ್ಲದೆ ಮತ್ತೊಂದಲ್ಲ. ದಶರಥರಾಯನು ಅಲ್ಪಬುದ್ಧಿಯಿಂದ ಲೋಕವಿರುದ್ಧವಾದ ಕಾರ್ಯದಲ್ಲಿ ಪ್ರವರ್ತಿಸಿದನು. ಶ್ರೀರಾಮನ ವನವಾಸವು ಮಹಾರಾಜನಿಗೆ ಶೋಕವನ್ನು ಹುಟ್ಟಿಸುವುದು. ನಾನು ಆತನನ್ನು ತಂದೆಯೆಂದು ಭಾವಿಸುವುದಿಲ್ಲ. ನನಗೆ ಒಡಹುಟ್ಟಿದವನೂ ರಕ್ಷಕನೂ ಬಂಧುವೂ ತಂದೆಯೂ ಆದವನು ಶ್ರೀರಾಮನಲ್ಲದೆ ಮತ್ತೊಬ್ಬನಿಲ್ಲ. ಸಮಸ್ತ ಪ್ರಾಣಿಗಳಿಗೂ ಹಿತವನ್ನೂ ಹರ್ಷವನ್ನೂ ಉಂಟುಮಾಡುತ್ತ ಧರ್ಮಿಷ್ಠನಾದ ಈ ಸ್ವಾಮಿಯನ್ನು ಹೊರಡಿಸಿ ಲೋಕವಿರುದ್ಧವಾದ ಕರ್ಮವನ್ನು ಮಾಡಿ ದಶರಥರಾಯನು ಹೇಗೆ ಪ್ರಭುತ್ವವನ್ನು ಮಾಡುವನು ?' ಎಂದು ಹೇಳಿದನು.

ಸೀತಾದೇವಿಯು ಒಂದುದಿನವಾದರೂ ದುಃಖವನ್ನು ಕಾಣದವಳಾದ್ದರಿಂದ ವನದಲ್ಲಿ ಸಂಚರಿಸುವ ದುಃಖದಿಂದ ಗ್ರಹವು ಹಿಡಿದವರಂತೆ ಕಣ್ಣೀರುಬಿಡುತ್ತ ಮುಖಕಾಂತಿಗುಂದಿ ಶ್ರೀರಾಮನನ್ನು ನೋಡುತ್ತಲಿದ್ದಳು. ಆತನ ಅನುಮತಿಯನ್ನು ಪಡೆದು ಬರುತ್ತಿದ್ದ ನನ್ನನ್ನು ನೋಡುತ್ತ ಸೀತಾದೇವಿಯು ಸುಮ್ಮನೆ ನಿಂತಿದ್ದಳು. ಆ ಬಳಿಕ ಶ್ರೀರಾಮನು ಸೀತಾಲಕ್ಷ್ಮಣ

ಸಮೇತನಾಗಿ ಕಣ್ಣೀರುಬಿಡುತ್ತ ಮುಂದೆ ಪ್ರಯಾಣಮಾಡುವ ಮಾರ್ಗವನ್ನು ವಿಚಾರಿಸುತ್ತಿದ್ದನು ” ಎಂದು ಸುಮಂತ್ರನು ಹೇಳಿದನು.



## ೫೯ ನೆಯ ಅಧ್ಯಾಯ

## ದಶರಥರಾಯನ ಪ್ರಲಾಪ

ಆಗ ದಶರಥನು “ ಸುಮಂತ್ರ, ಆಮೇಲೆ ಏನಾಯಿತೆಂಬುದನ್ನು ಹೇಳು ” ಎಂದು ಕೇಳಿದನು. ಅದನ್ನು ಕೇಳಿ ಸುಮಂತ್ರನು ಹೀಗೆ ನುಡಿದನು : “ ನಾನು ಶ್ರೀರಾಮನನ್ನು ಕಳುಹಿಸಿ ಪಟ್ಟಣಕ್ಕೆ ಬರಬೇಕೆಂದು ರಥವನ್ನು ಮೇಳೈಸಿ ಅಶ್ವಗಳನ್ನು ತಿರುಗಿಸಿದೆನು. ಆ ಅಶ್ವಗಳು ಶ್ರೀರಾಮನು ವನಕ್ಕೆ ಹೋದನೆಂಬ ದುಃಖಾತಿಶಯದಿಂದ ಹಂಬಲಿಸುತ್ತಿದ್ದವೋ ಎಂಬಂತೆ ಅತ್ಯಂತ ಉಷ್ಣವಾದ ಕಣ್ಣೀರನ್ನು ಬಿಡುತ್ತ ಹೆಜ್ಜೆಯನ್ನಿಡಲಿಲ್ಲ. ನಾನು ರಾಮಲಕ್ಷ್ಮಣರಿಗೆ ನಮಸ್ಕಾರವನ್ನು ಮಾಡಿ ದುಃಖಾತಿಶಯದಿಂದ ಗುಹನ ಜೊತೆಯಲ್ಲಿ ಕೆಲವು ದಿವಸಗಳಿದ್ದು ಶ್ರೀರಾಮನು ನನ್ನನ್ನು ಕೂಗಿ ಕರೆಯುವನೆಂಬ ಆಸೆಯಿಂದ ಆತನು ಹೋದ ದಾರಿಯನ್ನೇ ನೋಡುತ್ತಿದ್ದು ಆಮೇಲೆ ರಥವನ್ನೇರಿಕೊಂಡು ತಿರುಗಿ ಬಂದೆನು. ರಾಜ್ಯದಲ್ಲಿ ಎಲ್ಲಿನೋಡಿದರೂ ಆತನು ವನಕ್ಕೆ ಹೋದನೆಂಬ ದುಃಖಾತಿಶಯದಿಂದ ಜನರು ರೋದನವನ್ನು ಮಾಡುತ್ತಿದ್ದಾರೆ. ವೃಕ್ಷಗಳೂ ತಳಿರು ಮೊಗ್ಗು ಫಲಸಹಿತವಾಗಿ ಕಂದಿವೆ. ನದಿಗಳೂ ಕೊಳಗಳೂ ದುಃಖಭಾರದಿಂದ ಬಿಸಿಯಾಗಿವೆ. ವನದಲ್ಲಿರುವ ಸಮಸ್ತ ಪ್ರಾಣಿಗಳೂ ಹೊರಗೆ ಚಲಿಸುತ್ತಿಲ್ಲ. ನೀರಿನಲ್ಲಿರುವ ಪುಷ್ಪಜಾತಿಗಳು ಎಂದಿನಹಾಗೆ ಪರಿಮಳಿಸುವುದಿಲ್ಲ. ಉದ್ಯಾನವನಗಳು ಪಕ್ಷಿಗಳೆಲ್ಲವೂ ಹೊರಟುಹೋಗಲು ಸದ್ದಿಲ್ಲದೆ ಶೂನ್ಯವಾಗಿವೆ. ಪಟ್ಟಣದ ಸಮೀಪದಲ್ಲಿರುವ ವನಗಳು ಶೂನ್ಯವಾಗಿವೆ. ನಾನು ಶ್ರೀರಾಮನನ್ನು ಬಿಟ್ಟು ಬರುವಾಗ ನನ್ನನ್ನು ಕಂಡ ಪ್ರಜೆಗಳು ನಿಟ್ಟುಸಿರುಬಿಡುತ್ತ ನನ್ನನ್ನು ಮಾತನಾಡಿಸಲಿಲ್ಲ. ರಾಜಬೀದಿಗಳಲ್ಲಿದ್ದ ಜನರು ಶ್ರೀರಾಮನಿಲ್ಲದ ರಥವನ್ನು ಕಂಡು ಕಣ್ಣೀರು ಸುರಿಸುತ್ತಲಿದ್ದರು. ಅಲ್ಲಲ್ಲಿ ಉಪ್ಪರಿಗೆ ಮೇಲುಮಚ್ಚುಗಳಲ್ಲಿದ್ದ ಸ್ತ್ರೀಯರು ರಥವನ್ನು ನೋಡಿ ಮೊರೆಯಿಡುತ್ತ ಒಬ್ಬರ ಮುಖವನ್ನೊಬ್ಬರು ನೋಡುತ್ತ ರೋದನವನ್ನು ಮಾಡುತ್ತಿದ್ದರು. ಮಿತ್ರರಾದವರು ಶತ್ರುಗಳಾದವರು ಉದಾಸೀನಪುರುಷರು ಯಾರು ಯಾರೆಂದು ಗೊತ್ತಾಗುವಂತಿಲ್ಲ. ಎಲ್ಲರೂ ಒಂದೇ ಪ್ರಕಾರದಲ್ಲಿ ದುಃಖಪಡುತ್ತಿದ್ದಾರೆ. ಸಂತೋಷವಿಲ್ಲದೆ ಮುಖಕಾಂತಿಗುಂದಿ ಹೀನಸ್ವರವುಳ್ಳವರಾಗಿ ನಿಟ್ಟುಸಿರುಬಿಡುತ್ತಿರುವ ಜನಗಳುಳ್ಳ ಅಯೋಧ್ಯಾಪಟ್ಟಣವು ಪುತ್ರಶೋಕದಿಂದ ಹಂಬಲಿಸುತ್ತಿರುವ ಕೌಸಲ್ಯಾದೇವಿಯಂತೆ ಗೋಳಿಡುತ್ತಿದೆ ” ಎಂದು ಹೇಳಿದನು.

ಆ ಮಾತನ್ನು ಕೇಳಿ ದಶರಥರಾಯನು ಅತ್ಯಂತ ದುಃಖದಿಂದ ಸುಮಂತ್ರನನ್ನು ಕುರಿತು ಹೀಗೆಂದನು : “ ಸುಮಂತ್ರ, ಅತ್ಯಂತ ಪಾಪಿಷ್ಠೆಯಾದ ಕೈಕೇಯಿಯಿಂದ ಮರುಳಾದ ನಾನು ಮಂತ್ರಾಲೋಚನೆಯಲ್ಲಿ ಕುಶಲರೂ ವೃದ್ಧರೂ ಆದ ಮಂತ್ರಿಗಳೊಡನೆ ಆಲೋಚನೆಯನ್ನು ಮಾಡಿ ಈ ಕಾರ್ಯವನ್ನು ನಿಶ್ಚಯಿಸಲಿಲ್ಲ. ಆಪ್ತರಾದ ಸ್ನೇಹಿತರೊಡನೆಯೂ ಶಾಸ್ತ್ರಜ್ಞರಾದ ಬ್ರಾಹ್ಮಣರೊಡನೆಯೂ ಮಂತ್ರಾಲೋಚನೆ ಮಾಡಿ ಕಾರ್ಯವನ್ನು ನಿಶ್ಚಯಿಸದೆ ಅಜ್ಞಾನದಿಂದ ಸಾಹಸವನ್ನು ಮಾಡಿದೆನು. ನನಗೆ ಬರಬೇಕಾಗಿದ್ದ ದುಃಖವು ಬಿಟ್ಟುಹೋಗುವುದೆ ! ನನ್ನ ಕುಲಕ್ಷಯವಾಗುವ ಸಮಯವು ದೈವಾಧೀನದಿಂದ ಪ್ರಾಪ್ತವಾಯಿತು. ಸುಮಂತ್ರ, ನಾನು ಜನ್ಮಾಂತರದಲ್ಲಿ ಅಲ್ಪ

ಮಾತ್ರವಾದರೂ ಪುಣ್ಯವನ್ನು ಮಾಡಿದ್ದೆನಾದರೆ ಪ್ರಾಣಸಹಿತನಾಗಿ ಶ್ರೀರಾಮನನ್ನು ಕಾಣುವೆನು. ನನ್ನನ್ನು ಆತನಿರುವ ಎಡೆಗೆ ಕರೆದುಕೊಂಡುಹೋಗು. ಅಲ್ಲದಿದ್ದರೆ ಆತನನ್ನು ಪುನಃ ಕರೆದುಕೊಂಡು ಬಾ. ಆತನಿಲ್ಲದೆ ನಾನು ಕ್ಷಣಮಾತ್ರವಾದರೂ ಜೀವಿಸಲಾರೆನು. ನೀನು ಆಲಸ್ಯಮಾಡಿದರೆ ಆತನು ಬಹುದೂರ ಹೊರಟುಹೋಗುವನು. ನನ್ನನ್ನು ರಥವನ್ನು ಹತ್ತಿಸಿಕೊಂಡು ಶ್ರೀರಾಮನಿರುವ ಬಳಿಗೆ ಕರೆದುಕೊಂಡುಹೋಗಿ ಸೀತಾಲಕ್ಷ್ಮಣಸಮೇತನಾದ ನನ್ನ ಮಗನನ್ನು ತೋರಿಸಿದೆಯಾದರೆ ನಾನು ಜೀವಿಸುವೆನು. ಪುಂಡರೀಕಾಕ್ಷನಾಗಿಯೂ ಆಜಾನುಬಾಹುವಾಗಿಯೂ ರತ್ನ ಕುಂಡಲಗಳನ್ನು ಧರಿಸಿಕೊಂಡಿರುವವನಾಗಿಯೂ ಇರುವ ಶ್ರೀರಾಮನನ್ನು ಕಾಣದಿದ್ದರೆ ಯಮನ ಸಮೀಪವನ್ನೈದುವೆನು. ಆತನನ್ನು ಕಾಣದಿರುವ ಅವಸ್ಥೆಯನ್ನು ಪಡೆದ ನನಗೆ ಇದಕ್ಕಿಂತಲೂ ವೆಗ್ಗಳವಾದ ದುಃಖವಿಲ್ಲ." ಹೀಗೆ ನುಡಿದು, "ಹಾ ರಾಮ! ಹಾ ಸೀತೆ! ಹಾ ಲಕ್ಷ್ಮಣ! ನಿಮ್ಮ ಅಗಲಿಕೆಯಿಂದುಂಟಾದ ದುಃಖದಿಂದ ಪ್ರಾಣಗಳನ್ನು ಬಿಡುವ ನನ್ನನ್ನು ಅನಾಥನಂತೆ ಏಕೆ ಬಿಟ್ಟಿರಿ!" ಎಂದು ಹಂಬಲಿಸಿ ದುಃಖವೆಂಬ ಸಾಗರದಲ್ಲಿ ಮುಳುಗಿಹೋದನು. ಆಮೇಲೆ ಕೌಸಲ್ಯಾದೇವಿಯನ್ನು ನೋಡಿ "ಕೌಸಲ್ಯೆ, ನಾನು ಈ ಶೋಕವೆಂಬ ಸಮುದ್ರದಲ್ಲಿ ಮುಳುಗಿಹೋದೆ. ಇದರಲ್ಲಿ ಕೈಕೇಯಿಯೇ ಬಡಬಾಗ್ನಿ; ಕುಬ್ಜೆಯೇ ಮೊಸಳೆ. ಈ ಶೋಕಸಮುದ್ರದಲ್ಲಿ ಮುಳುಗಿದ ನಾನು ಶ್ರೀರಾಮಲಕ್ಷ್ಮಣರನ್ನು ಕಾಣದಿದ್ದರೆ ಬಹಳ ಕೆಡುಕು ಸಂಭವಿಸುತ್ತದೆ. ಸಂಶಯವಿಲ್ಲ" ಎಂದು ಹಂಬಲಿಸುತ್ತ ಮೂರ್ಛಿತನಾಗಿ ಹಾಸಿಗೆಯಲ್ಲಿ ಬಿದ್ದನು.

ದಶರಥರಾಯನು ಈ ಪ್ರಕಾರದಲ್ಲಿ ಅತ್ಯಂತ ದೈನ್ಯದಿಂದ ಹಂಬಲಿಸುತ್ತಿದ್ದುದರಿಂದಲೂ ಶ್ರೀರಾಮನ ಅಗಲಿಕೆಯಿಂದಲೂ ಕೌಸಲ್ಯಾದೇವಿಯು ಇಮ್ಮಡಿಯಾದ ದುಃಖವುಳ್ಳವಳಾಗಿ ಅತ್ಯಂತ ಭಯವನ್ನೈದಿದಳು.



## ೬೦ ನೆಯ ಅಧ್ಯಾಯ

## ಸುಮಂತ್ರನು ಕೌಸಲ್ಯಾದೇವಿಗೆ ಹೇಳಿದ ಸಮಾಧಾನ

ಆಮೇಲೆ ಕೌಸಲ್ಯಾದೇವಿಯು ಸೆರೆಯಲ್ಲಿ ಸಿಕ್ಕಿದ ಸರ್ಪದಂತೆ ಮುಂದುಗಾಣದೆ ಕಂಗೆಡುತ್ತ ಸುಮಂತ್ರನನ್ನು ನೋಡಿ "ಸುಮಂತ್ರ, ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಯಾವ ಸ್ಥಳದಲ್ಲಿದ್ದಾನೆಯೋ ಅಲ್ಲಿಗೆ ನನ್ನನ್ನು ಕರೆದುಕೊಂಡುಹೋಗು. ನಾನು ಆತನನ್ನು ಕಾಣದೆ ಜೀವಿಸಲಾರೆನು. ದಂಡಕಾರಣ್ಯದಲ್ಲಿ ಸೀತಾಲಕ್ಷ್ಮಣಸಮೇತನಾಗಿರುವ ಶ್ರೀರಾಮನ ಸಮೀಪಕ್ಕೆ ಹೋಗದಿದ್ದೆನಾದರೆ ಯಮನ ಮಂದಿರವನ್ನೈದುವೆನು" ಎಂದು ನುಡಿದಳು.

ಸುಮಂತ್ರನು ಸಂತವಿಡುತ್ತ ಆ ದೇವಿಯನ್ನು ಕುರಿತು ಈ ಪ್ರಕಾರ ನುಡಿದನು: "ಕೌಸಲ್ಯಾದೇವಿ, ದುಃಖದಿಂದುಂಟಾದ ಅಜ್ಞಾನದ ಭ್ರಮೆಯನ್ನು ಬಿಡು. ಶ್ರೀರಾಮನು ಮನಸ್ಸಿನಲ್ಲಿ ವ್ಯಥೆಯಿಲ್ಲದೆ ವನವಾಸಮಾಡಿಕೊಂಡು ಸುಖದಿಂದಿದ್ದಾನೆ. ಧರ್ಮರಹಸ್ಯವನ್ನು ಬಲ್ಲ ಲಕ್ಷ್ಮಣನು ಆತನ ಪಾದಸೇವೆಯನ್ನು ಮಾಡುತ್ತಿದ್ದಾನೆ. ಸೀತಾದೇವಿಯು ನಿರ್ಜನವಾದ ವನದಲ್ಲಿ ಶ್ರೀರಾಮನ ಸಮೀಪದಲ್ಲಿ ತನ್ನ ಅರಮನೆಯಲ್ಲಿರುವಂತೆ ಸುಖವಾಗಿದ್ದಾಳೆ. ಆ ದೇವಿಯಲ್ಲಿ ಸ್ವಲ್ಪವಾದರೂ ದುಃಖವನ್ನು ಕಾಣಲಿಲ್ಲ. ವನದಲ್ಲಿ ಸಂಚರಿಸುವ ಅಭ್ಯಾಸವುಳ್ಳವಳ ರೀತಿಯಲ್ಲಿದ್ದಾಳೆ. ಆ ದೇವಿಯ ಮನಸ್ಸು ಶ್ರೀರಾಮನಲ್ಲಿಯೇ ಐಕ್ಯವಾಗಿದೆ. ಆಕೆಯ ಜೀವವು

ಶ್ರೀರಾಮನಲ್ಲಿಯೇ ಅಡಕವಾಗಿದೆ. ಆ ದೇವಿಗೆ ಆತನಿಲ್ಲದ ಅಯೋಧ್ಯಾಪಟ್ಟಣವು ಅರಣ್ಯದಂತೆ ತೋರುವುದು. ಆಕೆಯು ದಾರಿಯಲ್ಲಿ ಸಂಚರಿಸುವಾಗ ಮಾರ್ಗದಲ್ಲಿರುವ ಪಟ್ಟಣಗಳು ಗ್ರಾಮಗಳು ವನಗಳು ನದಿಗಳು ಸರೋವರಗಳು ವೃಕ್ಷಗಳು ಮೊದಲಾದವುಗಳ ಹೆಸರುಗಳನ್ನು ಶ್ರೀರಾಮನನ್ನಾದರೂ ಲಕ್ಷ್ಮಣನನ್ನಾದರೂ ಕೇಳಿ ತಿಳಿಯುತ್ತ ಅಯೋಧ್ಯಾಪಟ್ಟಣಕ್ಕೆ ಕೂಗಳತೆ ಯಲ್ಲಿರುವ ಉದ್ಯಾನವನದಲ್ಲಿರುವಂತೆ ಇದ್ದಾಳಲ್ಲದೆ ಮನಸ್ಸಿನಲ್ಲಿ ವಿಷಾದಿಸುತ್ತಿಲ್ಲ. ಕೈಕೇಯಿಾ ದೇವಿಯ ಪ್ರಸಂಗವನ್ನು ಒಂದುಸಾರಿಯಾದರೂ ನುಡಿಯುವುದಿಲ್ಲ. ಆ ಪ್ರಸಂಗ ಬಂದರೂ ಅದನ್ನು ಮನಸ್ಸಿಗೆ ತೆಗೆದುಕೊಳ್ಳದೆ ಸಂತೋಷವುಳ್ಳವಳಾಗಿಯೇ ಇದ್ದಾಳೆ. ಮಾರ್ಗದಲ್ಲಿ ಸುಳಿಗಾಳಿ ಬೀಸಿದರೂ ಅತ್ಯಂತ ಬಿಸಿಲುಕಾದರೂ ಚಂದ್ರನ ಹಾಗೆ ಕಾಂತಿಯುಳ್ಳ ಸೀತಾದೇವಿಯು ಮುಖವು ಸ್ವಲ್ಪವಾದರೂ ಕಾಂತಿಗುಂದುವುದಿಲ್ಲ. ಕಮಲದಂತೆಯೂ ಪೂರ್ಣಚಂದ್ರನಂತೆಯೂ ಇರುವ ಆ ದೇವಿಯ ಮುಖದಲ್ಲಿ ಸ್ವಲ್ಪವಾದರೂ ಕಳಂಕವನ್ನು ಕಾಣುವಂತಿಲ್ಲ. ಕಮಲದ ಮೊಗ್ಗುಗಳಂತಿರುವ ಆ ದೇವಿಯ ಪಾದಗಳು ಅರಗಿನ ರಸದಿಂದ ಕೂಡಿರದಿದ್ದರೂ ಅರಗಿನಿಂದ ಅಲಂಕರಿಸಲ್ಪಟ್ಟ ಹಾಗೆಯೇ ನಡೆಯುವಾಗ ಮನೋಹರವಾಗಿವೆ. ಸಂಚರಿಸುವಾಗ ಭೂಷಣಗಳನ್ನು ತೊಟ್ಟಿದ್ದರೆ ಗಮನಕ್ಕೆ ಪ್ರತಿಬಂಧಕವೆಂಬ ಬುದ್ಧಿಯಿಂದ ಸಮಸ್ತ ಭೂಷಣಗಳನ್ನು ಬಿಚ್ಚಿದ್ದರೂ ಭೂಷಣಗಳನ್ನು ತೊಟ್ಟಂತೆ ಒಪ್ಪುತ್ತಿದ್ದಾಳೆ. ಮಾರ್ಗದಲ್ಲಿ ಆನೆ ಸಿಂಹ ವ್ಯಾಘ್ರಗಳನ್ನು ಕಂಡರೂ ಶ್ರೀರಾಮನ ತೋಳನ್ನು ಹಿಡಿದುಕೊಂಡು ಹೆದರದೆ ಇದ್ದಾಳೆ. ಅಂಥ ಸೀತಾಲಕ್ಷ್ಮಣಸಮೇತನಾದ ಶ್ರೀರಾಮನನ್ನು ಕುರಿತು ದುಃಖಪಡಬಾರದು. ಹೇಗಿದ್ದಾನೋ ಎಂದು ವ್ಯಥೆಯು ಸಲ್ಲದು. ಆತನು ತನ್ನ ತಂದೆಯಾದ ದಶರಥರಾಯನ ಮಾತನ್ನು ಮೀರದೆ ವನದಲ್ಲಿ ಕಂದ ಮೂಲ ಫಲಾಹಾರಗಳನ್ನು ಮಾಡಿಕೊಂಡು ಹದಿನಾಲ್ಕು ವರುಷ ಪರ್ಯಂತ ಸೀತಾಲಕ್ಷ್ಮಣಸಮೇತನಾಗಿ ಸುಖವಾಗಿರುತ್ತಾನೆ" ಎಂದು ಹೇಳಿದನು.

ಈ ಪ್ರಕಾರವಾಗಿ ನುಡಿದ ಸುಮಂತ್ರನ ಮಾತನ್ನು ಕೇಳಿದರೂ ಕೌಸಲ್ಯಾದೇವಿಯು ಪುತ್ರಸ್ನೇಹದಿಂದ ಅತ್ಯಂತ ದುಃಖಿತೆಯಾಗಿ "ಹಾ ರಾಮಾ ! ಹಾ ರಾಘವಾ ! ಹಾ ಸೀತೇ ! ಹಾ ಲಕ್ಷ್ಮಣಾ !" ಎಂದು ಹಂಬಲಿಸುತ್ತಿದ್ದಳು.

---

## ೬೧ ನೆಯ ಅಧ್ಯಾಯ

## ದಶರಥ ಕೌಸಲ್ಯಾದೇವಿಯರ ಸಂವಾದ

ಆಮೇಲೆ ಕೌಸಲ್ಯಾದೇವಿಯು ತನ್ನ ಪತಿಯಾದ ದಶರಥರಾಯನನ್ನು ನೋಡಿ ಈ ಪ್ರಕಾರ ಗೋಳಾಡಿದಳು : "ಮಹಾರಾಜ, ಮೂರುಲೋಕಗಳಲ್ಲಿಯೂ ಕೀರ್ತಿವಂತರಾದ ಅರಸುಗಳೆಲ್ಲರಿಗೂ ನೀನು ಪ್ರಧಾನನಾದ ಕೀರ್ತಿವಂತನು. ಶ್ರೀರಾಮನು ಸಮಸ್ತರೊಡನೆಯೂ ಪ್ರಿಯೋಕ್ತಿಗಳನ್ನೇ ನುಡಿಯುವವನು. ಸಮಸ್ತ ಪ್ರಾಣಿಗಳಲ್ಲಿಯೂ ದಯೆಯುಳ್ಳವನು. ಲಕ್ಷ್ಮಣನು ಅತಿ ಪರಾಕ್ರಮಿ. ಅಂಥ ರಾಮಲಕ್ಷ್ಮಣರು ಸೀತಾದೇವಿಯೊಡನೆ ವನದಲ್ಲಿ ಹೇಗೆ ತಾನೆ ದುಃಖ ವನ್ನನುಭವಿಸುವರು ? ಸುಕುಮಾರಾಂಗಿಯಾಗಿ ಯೌವನಸ್ಥೆಯಾದ ಸೀತಾದೇವಿಯು ಇಲ್ಲಿ ಸುಖವನ್ನು ಅನುಭವಿಸಿಕೊಂಡಿದ್ದಳು. ಈಗ ವನದಲ್ಲಿ ಅತಿಶೀತ ಅತ್ಯುಷ್ಣಗಳನ್ನು ಹೇಗೆ ತಾನೆ ಸಹಿಸಿಯಾಳು ? ಮನೆಯಲ್ಲಿ ಅನೇಕ ಷಡ್ರಸೋಪೇತವಾದ ಆಹಾರವನ್ನು ತೆಗೆದುಕೊಂಡು

ಸುಖವಾಗಿದ್ದ ಆ ದೇವಿಯು ವನದಲ್ಲಿ ಕಂದ ಮೂಲ ಫಲಾಹಾರಗಳನ್ನು ಮಾಡಿಕೊಂಡು ಹೇಗಿರುವಳು ? ಗೀತಾ ವೀಣಾ ಮೃದಂಗ ಮೊದಲಾದವುಗಳ ಮಂಗಳಸ್ವರಗಳನ್ನು ಕೇಳಿಕೊಂಡಿದ್ದ ಸೀತಾದೇವಿಯು ವನವಾಸದಲ್ಲಿ ಭಯಂಕರವಾದ ತೋಳ ವ್ಯಾಘ್ರ ಸಿಂಹ ಮೊದಲಾದ ದುಷ್ಟಮೃಗಗಳ ಕಠೋರವಾದ ಧ್ವನಿಗಳನ್ನು ಹೇಗೆ ಕೇಳುವಳು ? ಲಕ್ಷ್ಮಣಸಮೇತನಾದ ಶ್ರೀರಾಮನು ನಿಡಿದಾದ ಭುಜಗಳನ್ನು ತಲೆದಿಂಬು ಮಾಡಿಕೊಂಡು ಎಲ್ಲಿ ಹೇಗೆ ಶಯನಮಾಡುವನು ? ಪದ್ಮದಂತೆ ಸುಂದರವಾದ ರಘುನಾಥನ ಮುಖವನ್ನು ಯಾವಾಗ ಕಾಣುವೆನು ? ಅಕಟಕಟಾ ! ನನ್ನ ಎದೆಯು ವಜ್ರಶಿಲೆಗೆ ಸಮಾನವಾದದ್ದು. ಅಲ್ಲದಿದ್ದರೆ ಶ್ರೀರಾಮನು ಹೋದ ತತ್ಕ್ಷಣದಲ್ಲಿಯೇ ಅನೇಕ ತುಂಡುಗಳಾಗಿ ಒಡೆದುಹೋಗುತ್ತಿತ್ತು. ಮಹಾರಾಜ, ನನ್ನ ಮಕ್ಕಳನ್ನೂ ಸೊಸೆಯನ್ನೂ ಹೊರಡಿಸಿದೆ. ನಿನ್ನಿಂದ ಹೊರಡಿಸಲ್ಪಟ್ಟ ಅವರು ದೈನ್ಯದಿಂದ ವನದಲ್ಲಿ ಸಂಚರಿಸುತ್ತಿದ್ದಾರೆ. ನನ್ನ ಭಾಗ್ಯದಿಂದ ಶ್ರೀರಾಮನು ಹದಿನಾಲ್ಕು ವರುಷಗಳನ್ನು ತೀರಿಸಿ ಹದಿನೈದನೆಯ ವರುಷದಲ್ಲಿ ತಿರುಗಿಬಂದರೂ ಭರತನು ಅನುಭವಿಸಿದ ರಾಜ್ಯ ಕೋಶಗಳನ್ನು ಎಂದಿಗೂ ಬಯಸನು. ಶ್ರಾದ್ಧದಲ್ಲಿ ತಮ್ಮ ಬಂಧುಗಳಾದ ಬ್ರಾಹ್ಮಣರಿಗೆ ಮೊದಲು ಬಡಿಸಿ ಆಮೇಲೆ ಶಿಷ್ಟರನ್ನು ಭೋಜನಕ್ಕೆ ಬರಹೇಳಿದರೆ, ದೇವತೆಗಳು ಶ್ರಾದ್ಧದಲ್ಲಿಯ ಅನ್ನವನ್ನು ಮುಟ್ಟದಂತೆ, ಆ ಶಿಷ್ಟರಾದ ಬ್ರಾಹ್ಮಣರು ಆ ಅನ್ನವನ್ನು ಮುಟ್ಟರು. ತಮ್ಮನು ಆಳಿದ ರಾಜ್ಯವನ್ನು ಅಣ್ಣನು ಬಯಸುವುದು ಹೀನಕಾರ್ಯ. ಲೋಕದಲ್ಲಿ ಸಿಂಹರಾಜನು ಇತರ ಮೃಗಗಳ ಆಹಾರವನ್ನು ಬಯಸುವುದುಂಟೆ ? ಆದ್ದರಿಂದ ಪುರುಷೋತ್ತಮನಾದ ಶ್ರೀರಾಮನು ತಮ್ಮನು ಅನುಭವಿಸಿದ ರಾಜ್ಯವನ್ನು ಅಂಗೀಕರಿಸಲಾರನು. ಒಂದು ಯಜ್ಞದಲ್ಲಿ ಹೋಮಾರ್ಥವಾಗಿ ಸಂಪಾದಿಸಲ್ಪಟ್ಟ ಹವಿಸ್ಸು ದರ್ಭೆ ಪುರೋಡಾಶ ಆಜ್ಯ ಯೂಪಸ್ತಂಭಗಳು ಮತ್ತೊಂದು ಯಾಗಕ್ಕೆ ಸಲ್ಲವು. ಕನಿಷ್ಠನಾದ ಭರತನು ಅನುಭವಿಸಿದ ರಾಜ್ಯ ಕೋಶಗಳು ಶ್ರೀರಾಮನಿಗೆ ಅನುಭವಯೋಗ್ಯವಲ್ಲ. ತನ್ನ ಬಾಲವನ್ನು ಹಿಡಿದೆಳೆದರೆ ವ್ಯಾಘ್ರವು ಯಾವ ರೀತಿಯಲ್ಲಿ ಸಹಿಸಲಾರದೋ ಆ ರೀತಿಯಲ್ಲಿ ವನಕ್ಕೆ ಕಳುಹಿಸಿದ ಅವಮಾನವನ್ನು ರಘುನಾಥನು ಸಹಿಸಲಾರನು. ಸಕಲ ಲೋಕದವರೂ ಕೂಡಿಯಾದರೂ ಯುದ್ಧದಲ್ಲಿ ಶ್ರೀರಾಮನಿಗೆ ಭಯವನ್ನುಂಟುಮಾಡಲಾರರು. ಧರ್ಮಮಾರ್ಗವನ್ನು ಕೈಗೊಂಡು ಲೋಕಧರ್ಮ ರಹಸ್ಯವನ್ನು ಬಲ್ಲ ಶ್ರೀರಾಮನು ಧರ್ಮಮಾರ್ಗದಲ್ಲಿಯೇ ನಡೆಯಬಲ್ಲನು. ಆತನು ಮಹಾ ಬಲವಂತನಾದವನು. ಚಿನ್ನದ ಮುಲಾಮುಮಾಡಿದ ಅಂಬುಗಳನ್ನು ತೊಟ್ಟು ಪ್ರಳಯಕಾಲಾಗ್ನಿಯಂತೆ ಸಮಸ್ತ ಲೋಕಗಳನ್ನೂ ದಹಿಸಬಲ್ಲನು. ವೃಷಭದ ಹಾಗೆ ಲೋಹಿತವರ್ಣದ ಕಣ್ಣುಗಳುಳ್ಳವನಾಗಿ ಸಿಂಹದಂತೆ ಬಲವುಳ್ಳ ಶ್ರೀರಾಮನು ಕೋಪಿಸಿಕೊಂಡರೆ ಒಬ್ಬರೂ ಎದುರಾಗಿ ನಿಲ್ಲಲಾರರು. 'ದೊಡ್ಡಮೀನು ತನ್ನ ಮರಿಯಾದ ಚಿಕ್ಕಮೀನನ್ನು ನುಂಗುವಂತೆ ದಶರಥರಾಯನು ತನ್ನ ಮಗನಾದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿ ತಾನೇ ಕೆಟ್ಟನು' ಎಂಬ ಅಪಕೀರ್ತಿಯು ನಿನಗೆ ಬಂದಿತು. ಧರ್ಮಿಷ್ಠನಾದ ನೀನು ಶ್ರೀರಾಮನನ್ನು ವನಕ್ಕೆ ಕಳುಹಿಸಿದೆ. ಸಮಸ್ತರಿಗೂ ನೀನೇ ಗತಿ. ಪತ್ನಿಗೆ ಗಂಡನೇ ಮೊದಲನೆಯ ಗತಿ. ಪುತ್ರನು ಎರಡನೆಯ ಗತಿ. ಹೆಂಡತಿ ಮಗನು ಇಲ್ಲದಪಕ್ಷದಲ್ಲಿ ಜ್ಞಾತಿಗಳೇ ರಕ್ಷಕರಲ್ಲದೆ ಬೇರೆ ಉಪಾಯವಿಲ್ಲ. ನೀನು ಕೈಕೇಯಿ ದೇವಿಯ ವಶವರ್ತಿಯಾದಮೇಲೆ ನನ್ನ ಭಾಗಕ್ಕೆ ನೀನಿಲ್ಲ. ಆದರೂ ನಾನು ನಿನ್ನನ್ನು ಬಿಟ್ಟು ವನಕ್ಕೆ ಹೋಗಬಾರದು. ನಿನ್ನಿಂದ ಕೆಟ್ಟವಳು ನಾನೊಬ್ಬಳೇ ಅಲ್ಲ, ನಿನ್ನಿಂದ ನೀನೂ ಸಮಸ್ತ ರಾಜ್ಯವೂ ಸಮಸ್ತ ಮಂತ್ರಿಗಳೂ ಎಲ್ಲರೂ ಕೆಟ್ಟರು. ನಾನೂ ಕೆಟ್ಟೆನು. ನನ್ನ ಮಕ್ಕಳೂ ಕೆಟ್ಟರು. ಕೈಕೇಯಿದೇವಿಯೊಬ್ಬಳು ಸಂತುಷ್ಟಚಿತ್ತೆಯಾಗಿ ಬದುಕಲಿ ! " ಎಂದು ನುಡಿದಳು.

## ೭೨ನೆಯ ಅಧ್ಯಾಯ

## ಕೌಸಲ್ಯಾದೇವಿಯು ದಶರಥರಾಯನನ್ನು ಸಂತವಿಟ್ಟದ್ದು

ಈ ಪ್ರಕಾರವಾಗಿ ಪುತ್ರಶೋಕದಿಂದ ಕುಪಿತೆಯಾದ ಕೌಸಲ್ಯಾದೇವಿಯು ನುಡಿಯಲು ದಶರಥರಾಯನು ದುಃಖಾತಿಶಯದಿಂದ ಮೂರ್ಛಿತನಾಗಿ ಬಹಳಹೊತ್ತಿನಮೇಲೆ ಮೂರ್ಛೆ ತಿಳಿದೆದ್ದು ನಿಟ್ಟುಸಿರುಬಿಡುತ್ತ ಸಂಕಟಪಡುತ್ತಿದ್ದನು. ಪೂರ್ವದಲ್ಲಿ ತಾನು ಬೇಟೆಗೆ ಹೋದಾಗ ಶಬ್ದವೇಧಿ ಎಂಬ ಬಾಣದಿಂದ ಒಬ್ಬ ಮುನಿಪುತ್ರನನ್ನು ಕೊಂದು ಆ ಮುನಿಗೆ ದುಃಖವುಂಟು ಮಾಡಿದ್ದು ದಶರಥನ ಸ್ಮರಣೆಗೆ ಬಂದಿತು. ಆತನು ದುಃಖದಿಂದ ಕೌಸಲ್ಯಾದೇವಿಯನ್ನು ಕುರಿತು "ಕೌಸಲ್ಯೆ, ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ. ನೀನು ದಯೆಯುಳ್ಳವಳು. ಯಾವಾಗಲೂ ಪರರಿಗೆ ಹಿತವನ್ನು ಚಿಂತಿಸುವವಳು. ಒಂದುಸಾರಿಯಾದರೂ ಅನೃತವನ್ನು ನುಡಿದವಳಲ್ಲ. ಲೋಕದಲ್ಲಿ ಧರ್ಮವನ್ನು ಕೈಗೊಂಡು ನಡೆಯುವ ಪತಿವ್ರತಾಸ್ತ್ರೀಯರಿಗೆ ಪತಿಯು ಗುಣವಂತನಾಗಲಿ ಗುಣಹೀನನಾಗಲಿ ಪ್ರತ್ಯಕ್ಷ ದೇವತಾಸ್ವರೂಪನು. ನೀನು ಯಾವಾಗಲೂ ಧರ್ಮಬುದ್ಧಿಯುಳ್ಳವಳು. ನೀನು ಪುತ್ರಶೋಕದಿಂದ ಮನಸ್ಸು ನೊಂದವಳಾದರೂ ನನ್ನನ್ನು ನಿಷ್ಠುರವಚನಗಳಿಂದ ನೋಯಿಸಬೇಡ ಎಂದು ಅತ್ಯಂತ ದೈನ್ಯದಿಂದ ನುಡಿದನು.

ಆ ಮಾತನ್ನು ಕೇಳಿ ಕೌಸಲ್ಯಾದೇವಿಯು ಮಳೆಹುಯ್ಯುವ ಸಮಯದಲ್ಲಿ ಮೋಲುಮಚ್ಚಿನ ಜಲಧಾರೆಗಳು ನೀರು ಸುರಿಯುವಂತೆ ಗಳಗಳನೆ ಕಣ್ಣುಗಳಿಂದ ಜಲಬಿಂದುಗಳನ್ನು ಸುರಿಸಿದಳು. ತನ್ನ ತಲೆಯಮೇಲೆ ಕೈಜೋಡಿಸಿಕೊಂಡು ಸಂಭ್ರಮದಿಂದ ಬಿಕ್ಕುತ್ತ "ಮಹಾರಾಜ, ನಿನಗೆ ಸಾಷ್ಟಾಂಗವೆರಗಿ ಬೇಡಿಕೊಳ್ಳುತ್ತೇನೆ. ನೀನು ಇಂಥ ಮಾತನ್ನಾಡಬಹುದೆ ! ಲೋಕದಲ್ಲಿ ಪುರುಷರು ಸ್ತ್ರೀಯರಿಗೆ ಇಷ್ಟು ದೈನ್ಯವನ್ನು ತೋರಿಸುವುದನ್ನು ಎಲ್ಲಿಯೂ ಕಾಣೆನು. ಈ ರೀತಿಯಲ್ಲಿ ಪತಿಯಿಂದ ಕೈಮುಗಿಸಿಕೊಳ್ಳುವ ಸ್ತ್ರೀಯು ಇಹಲೋಕದಲ್ಲಿ ಅಪಕೀರ್ತಿಯನ್ನು ಪಡೆದು ಪರಲೋಕದಲ್ಲಿ ನರಕವನ್ನೈದುವಳು. ಪುತ್ರಶೋಕದಿಂದ ಅಜ್ಞಾನಿಯಾಗಿ ನಾನೇನು ನುಡಿದೆನೋ ಅದನ್ನು ನೀನು ಕ್ಷಮಿಸು. ಲೋಕದಲ್ಲಿ ಶೋಕವು ಧೈರ್ಯವನ್ನು ಕೆಡಿಸುವುದು. ಶೋಕವೇ ಶಾಸ್ತ್ರಜ್ಞಾನವನ್ನು ಕೆಡಿಸುವುದು. ಶೋಕವೇ ಧರ್ಮವನ್ನೂ ಕೆಡಿಸುವುದು. ಆದ್ದರಿಂದ ಶೋಕಕ್ಕೆ ಸಮಾನವಾದ ಶತ್ರುವಿಲ್ಲ. ಆಯುಧದ ಪೆಟ್ಟನ್ನಾದರೂ ಸಹಿಸಬಹುದು. ಶೋಕವು ಅಲ್ಪವಾದುದಾದರೂ ಸಹಿಸಲು ಶಕ್ಯವಲ್ಲ. ಶ್ರೀರಾಮನು ಕಾಡಿಗೆ ಹೋಗಿ ಇಂದಿಗೆ ಐದು ದಿವಸಗಳಾದವು. ಈ ಐದು ದಿವಸಗಳು ಶೋಕಾಗ್ನಿಯಿಂದ ಚಿಂತಿಸುವ ನನಗೆ ಐದು ವರುಷಗಳಾಗಿ ತೋರಿದುವು. ಶೋಕಾಗ್ನಿಯು ಅಂತರಂಗದಲ್ಲಿ ನದಿಗಳ ಪ್ರವಾಹದಿಂದ ಸಮುದ್ರವು ಹೆಚ್ಚುವಂತೆ ಹೆಚ್ಚುತ್ತಿದೆ" ಎಂದು ಹಂಬಲಿಸುತ್ತಿದ್ದಳು. ಅಷ್ಟರಲ್ಲಿ ಸೂರ್ಯನು ಮುಳುಗಿದನು. ರಾತ್ರಿಯಾಯಿತು. ದಶರಥನು ದುಃಖಿಸುತ್ತಲೇ ನಿದ್ರಾಧೀನನಾದನು.



## ೬೩ ನೆಯ ಅಧ್ಯಾಯ

## ದಶರಥನು ಮುನಿಕುಮಾರನನ್ನು ಕೊಂದ ವೃತ್ತಾಂತ

ಆಮೇಲೆ ದಶರಥರಾಯನು ಎಚ್ಚೆತ್ತನು. ಅವನ ಮನಸ್ಸಿನಲ್ಲಿ ರಾಮಲಕ್ಷ್ಮಣರ ವನವಾಸದಿಂದ ರಾಹುತುಡುಕಿದ ಸೂರ್ಯನಿಗೆ ಬರುವಂತೆ ಮಹತ್ತಾದ ವ್ಯಥೆಯು ಪ್ರಾಪ್ತವಾಯಿತು. ಅವನು ಕೌಸಲ್ಯಾದೇವಿಯನ್ನು ಕುರಿತು "ಶೋಭನಾಂಗಿ ಕೌಸಲ್ಯೆ, ಲೋಕದಲ್ಲಿ ಪುಣ್ಯಕರ್ಮ ಪಾಪ ಕರ್ಮಗಳಿಗೆ ತಕ್ಕ ಫಲವನ್ನು ಅನುಭವಿಸಬೇಕು. ಒಂದು ಕರ್ಮದಲ್ಲಿ ತೊಡಗುವಾಗ ಆ ಕರ್ಮದ ಫಲವನ್ನು ವಿಚಾರಿಸಿ ಮಾಡಬೇಕು. ವಿಚಾರಿಸದೆ ಕರ್ಮವನ್ನು ಮಾಡುವವನು ಬಾಲಕನೆನಿಸಿ ಕೊಳ್ಳುವನು. ಮುತ್ತುಗದ ಪುಷ್ಪದ ಸೌಂದರ್ಯವನ್ನು ನೋಡಿ ಅದರ ಫಲವು ಮಧುರವಾಗಿ ಇರುವುದೆಂದು ಭಾವಿಸುವ ಅಜ್ಞಾನಿಯು ಮಾವಿನ ಮರವನ್ನು ಕಿತ್ತುಹಾಕಿ ಮುತ್ತುಗವನ್ನು ನೆಟ್ಟು ಸಾಕಿದರೆ ಫಲಕಾಲದಲ್ಲಿ ಆ ಮರದ ಫಲವು ಅಪ್ರಯೋಜಕವೆಂದು ತಿಳಿದು ದುಃಖಿಸುವನು. ಹಾಗೆ ನಾನು ಶ್ರೀರಾಮನನ್ನು ಹೊರಡಿಸಿ ಈಗ ದುಃಖಪಡುತ್ತಿದ್ದೇನೆ. ಕೌಸಲ್ಯಾದೇವಿ, ಹಿಂದೆ ನಾನು ತರುಣನಾಗಿದ್ದಾಗ ಬಿಲ್ಲುಗಾರರಲ್ಲಿ ಮಹಾಪ್ರಸಿದ್ಧನೆಂಬ ಕೀರ್ತಿಯನ್ನು ಪಡೆಯಬೇಕೆಂದು ಶಬ್ದವೇಧಿಯೆಂಬ ಬಾಣಸಾಧನೆಯನ್ನು ಮಾಡಿದೆನು. ಬಾಲಕನಾದವನು ಅಜ್ಞಾನದಿಂದ ವಿಷವನ್ನು ತೆಗೆದು ತನಗೆ ತಾನೇ ಆಪತ್ತು ತಂದುಕೊಳ್ಳುವಂತೆ ನಾನು ಈ ಶಬ್ದವೇಧಿಯನ್ನು ಅಭ್ಯಾಸಮಾಡಿ ಮೃತ್ಯುವನ್ನು ತಂದುಕೊಂಡೆನು! ದೇವಿ, ಆಗ ನಾನು ನಿನ್ನನ್ನು ಮದುವೆಯಾಗಿರಲಿಲ್ಲ. ನಾನು ಯುವರಾಜನಾಗಿದ್ದೆ. ಒಂದು ಸಲ ಮಳೆಗಾಲ ಬಂದಿತು. ಆ ವರ್ಷಾಕಾಲದಲ್ಲಿ ಸೂರ್ಯನು ತನ್ನ ಕಿರಣಗಳಿಂದ ಭೂಮಿಯ ಸಾರವನ್ನು ತೆಗೆದುಕೊಂಡು ಅದರಿಂದ ಮಳೆಗರೆಯುತ್ತ ತೆಂಕಣ ದಿಕ್ಕನ್ನೈದಿದನು. ಉಷ್ಣವು ತಗ್ಗಿತು. ಮೇಘಗಳು ಆಕಾಶದಲ್ಲಿ ಮುಚ್ಚಿಕೊಂಡಿದ್ದುವು. ಅಂಥ ವರ್ಷಾಕಾಲದಲ್ಲಿ ನಾನು ರಥವನ್ನೇರಿ ಬಿಲ್ಲುಬಾಣಗಳನ್ನು ಧರಿಸಿಕೊಂಡು ಬೇಟೆಗೆ ಹೋಗಿ ಬರಬೇಕೆಂದು ಮನಸ್ಸಿನಲ್ಲಿ ಆಲೋಚನೆಮಾಡಿ ಸರಯೂನದೀತೀರದಲ್ಲಿ ಹೋಗುತ್ತಿದ್ದೆನು. ಆ ನದೀತೀರದಲ್ಲಿದ್ದ ಹಳ್ಳದೊಳಗೆ ಅಡಗಿದ್ದ ವ್ಯಾಘ್ರ ಗಜ ಮೊದಲಾದ ಮೃಗಗಳನ್ನು ಕೊಲ್ಲಬೇಕೆಂದಿದ್ದೆನು. ಆ ಸಮಯದಲ್ಲಿ ಒಬ್ಬ ಮುನಿಕುಮಾರನು ಅಲ್ಲಿ ಆಶ್ರಮವನ್ನು ಮಾಡಿಕೊಂಡು ಅಂಧರಾದ ತಾಯಿತಂದೆಗಳನ್ನು ರಕ್ಷಿಸಿಕೊಂಡಿದ್ದನು. ಆತನು ತನ್ನ ತಾಯಿತಂದೆಗಳಿಗೆ ಕುಡಿಯಲು ನೀರು ತೆಗೆದುಕೊಂಡು ಹೋಗಬೇಕೆಂದು ಕಮಂಡಲುವಿನಲ್ಲಿ ನೀರನ್ನು ತುಂಬುತ್ತಿದ್ದನು. ಆಗ ಉಂಟಾದ ಗುಳುಗುಳುಶಬ್ದವನ್ನು ಕೇಳಿ, ಆ ಸ್ಥಳವು ದೃಷ್ಟಿಗೋಚರವಿಲ್ಲದಿರಲು, ಅದು ಆನೆಯ ಬೃಂಹಿತಧ್ವನಿಯೆಂದೆಣಿಸಿ ವಿಷವನ್ನುಗುಳುವ ಸರ್ಪದಂತೆ ಅತಿಭಯಂಕರವಾದ ಶಬ್ದವೇಧಿಯನ್ನು ತೆಗೆದು ಆ ಶಬ್ದಹುಟ್ಟಿದ ಸ್ಥಳಕ್ಕೆ ಸಂಧಾನಮಾಡಿ ಬಿಟ್ಟೆನು. ಅದು ಅಲ್ಲಿ ನೀರುತುಂಬುತ್ತಿದ್ದ ಮುನಿಕುಮಾರನನ್ನು ತಾಕಿತು. ಆತನು ಆ ಬಾಣದಿಂದ ಮರ್ಮಸ್ಥಾನದಲ್ಲಿ ಗಾಯಪಡೆದು 'ಹಾ ಹಾ!' ಎಂದು ಕೂಗುತ್ತ ಒರಲಿದನು. 'ಅಕಟಕಟಾ! ಬೆಳಗಿನ ಜಾವದಲ್ಲಿ ನೀರು ತೆಗೆದುಕೊಂಡು ಹೋಗಬೇಕೆಂದು ನದೀತೀರಕ್ಕೆ ಬಂದ ತಪಸ್ವಿಯಾದ ನನಗೆ ಈ ಬಾಣವು ಯಾವಕಾರಣ ತಾಕಿತು? ನಾನು ಸರ್ವಸಂಗಪರಿತ್ಯಾಗಮಾಡಿ ವನದಲ್ಲಿ ಕಂದ ಮೂಲ ಫಲಾಹಾರಗಳನ್ನು ಮಾಡಿಕೊಂಡಿರುವವನು. ಯಾವ ಅಪರಾಧವನ್ನು ಮಾಡಿದ್ದಕ್ಕೆ ನನ್ನ ಮೇಲೆ ಯಾವಾತನು ಈ ಬಾಣವನ್ನು

ಪ್ರಯೋಗಮಾಡಿದನು ? ವನದಲ್ಲಿ ನಾರುಬಟ್ಟೆಗಳನ್ನುಟ್ಟು ಜಡೆಗಳನ್ನು ಧರಿಸಿ ಈ ವೃತ್ತಿಯಲ್ಲಿರುವ ನನಗೆ ಈ ಶಸ್ತ್ರವಧೆಯು ಹೇಗೆ ಬಂದಿತು ? ಈತನಿಗೆ ನಾನು ಯಾವ ಅಪರಾಧವನ್ನು ಮಾಡಿದೆನು ? ನನ್ನ ಕೊಲೆಯಿಂದ ಈತನಿಗೆ ಯಾವ ಕಾರ್ಯವಾದೀತು ? ಈತನು ವ್ಯರ್ಥವಾಗಿ ನನ್ನನ್ನು ಕೊಂದನು ! ಈತನನ್ನು ಗುರುತಲ್ಪಗಮನಮಾಡಿದವನನ್ನು ನಿಂದಿಸುವಂತೆ ನಿಂದಿಸುವರು. ನನ್ನ ಪ್ರಾಣವು ಹೋಗುವುದಕ್ಕಾಗಿ ನಾನು ದುಃಖಪಡುವುದಿಲ್ಲ. ಈತನಿಗೆ ಅಪಕೀರ್ತಿಬಂತಲ್ಲ ಎಂದು ಕಂಗೆಡು ತ್ತಿದ್ದೇನೆ ; ನನ್ನ ತಾಯಿತಂದೆಗಳಿಗೆ ಗತಿ ಯಾರೆಂದು ಚಿಂತಿಸುತ್ತಿದ್ದೇನೆ. ಅಂಧರಾಗಿ ವೃದ್ಧರಾದ ತಂದೆತಾಯಿಗಳನ್ನು ಬಹುಕಾಲ ರಕ್ಷಣೆಮಾಡಿದೆನು. ಇನ್ನು ನಾನು ಲೋಕಾಂತರವನ್ನೈದಿದರೆ ಇವರಿಗೆ ರಕ್ಷಕರಾರು ? ಈ ಬಾಣದಿಂದ ನಾನೊಬ್ಬನೇ ಹತನಾಗುವುದಿಲ್ಲ. ನಾನೂ ನನ್ನ ತಾಯಿ ತಂದೆಗಳೂ ಈ ಪಾಪಾತ್ಮನಿಂದ ಹತರಾದೆವು ' ಎಂದು ನುಡಿದನು.

ಆ ದೈನ್ಯವಾಕ್ಯಗಳನ್ನು ಕೇಳಿ ಧರ್ಮರಹಸ್ಯಗಳನ್ನು ಬಲ್ಲ ನನ್ನ ಕೈಗಳಿಂದ ಬಿಲ್ಲುಬಾಣಗಳು ಜರಿದು ಬಿದ್ದವು. ನಾನು ದುಃಖಾತಿಶಯದಿಂದ ಕಂಗೆಟ್ಟು ಹರ್ಷಗುಂದಿ ಅಲ್ಲಿಗೆ ಹೋಗಿ ಗಾಯಗೊಂಡು ಕಂಗೆಡುತ್ತಿದ್ದ ಆ ಮುನಿಕುಮಾರನನ್ನು ಕಂಡೆನು. ಆತನು ಜಡೆಗಳನ್ನು ಕೆದರಿ ಕೊಂಡು ಕೈಯಲ್ಲಿ ಉದಕವು ತುಂಬಿದ ಕಮಂಡಲುವನ್ನು ಹಿಡಿದುಕೊಂಡು ರಕ್ತ ಧೂಳುಗಳಿಂದ ಮೈಕೈಯೆಲ್ಲವೂ ಮುಚ್ಚಿರಲು ನೆಟ್ಟಿದ್ದ ಅಂಬಿನಿಂದ ದುಃಖಪಡುತ್ತ ಭಯದಿಂದ ಕಂಗೆಟ್ಟ ನನ್ನನ್ನು ನೋಡಿದನು. ತನ್ನ ತಪ್ರೋಜ್ವಾಲೆಯಿಂದ ಸುಟ್ಟುಬಿಡುವಂತೆ ನೋಡಿ ಕರ್ಣಕಠೋರವಾದ ಮಾತುಗಳಿಂದ ಹೀಗೆಂದನು : ' ಎಲೈ ಅರಸೆ, ವನದಲ್ಲಿರುವ ನಾನು ನಿನಗೆ ಯಾವ ಅಪರಾಧವನ್ನು ಮಾಡಿದೆನು ? ನನ್ನ ತಾಯಿತಂದೆಗಳಿಗಾಗಿ ಉದಕವನ್ನು ತೆಗೆದುಕೊಂಡು ಹೋಗಬೇಕೆಂದು ಬಂದೆನು. ನನ್ನನ್ನು ಒಂದು ಬಾಣದಿಂದ ಮರ್ಮಸ್ಥಾನದಲ್ಲಿ ಹೊಡೆದು ಕೆಡಹಿದೆ. ಈ ಬಾಣದಿಂದ ನಾನೊಬ್ಬನೇ ಹತನಾಗುವುದಿಲ್ಲ. ನನ್ನ ತಂದೆತಾಯಿಗಳೂ ಹತರಾಗುವರು. ವೃದ್ಧರಾಗಿ ಅಂಧ ರಾಗಿರುವ ನನ್ನ ತಂದೆತಾಯಿಗಳು ಕಂಗೆಟ್ಟು ತೃಷೆಯಿಂದ ನೀರು ತರಬೇಕೆಂದು ನನ್ನನ್ನು ಕಳುಹಿಸಿ ನನ್ನನ್ನು ಎದುರುನೋಡುತ್ತಿರುವರು. ನನಗೆ ಇಂಥ ಅವಸ್ಥೆಯು ಬಂದಿತು. ಅಕಟಕಟಾ ! ಲೋಕದಲ್ಲಿ ತಪಸ್ಸಿನಿಂದಲೂ ಫಲವಿಲ್ಲ. ಶಾಸ್ತ್ರಾಭ್ಯಾಸದಿಂದಲೂ ಫಲವಿಲ್ಲ. ನನ್ನ ತಂದೆಯು ಗಾಯಪಟ್ಟು ಬಿದ್ದ ನನ್ನ ವೃತ್ತಾಂತವನ್ನು ತಿಳಿದರೂ ಅಂಧನಾದ್ದರಿಂದ ಏಳಲಾರನು. ಕತ್ತರಿಸಿ ಬೀಳುವ ಮರವನ್ನು ದೂರದಲ್ಲಿರುವ ಮತ್ತೊಂದು ಮರವು ತಡೆಯಲಾರದಂತೆ ಗಾಯಪಟ್ಟುಬಿದ್ದ ನಾನು ನನ್ನ ತಂದೆಯ ಸಮೀಪಕ್ಕೆ ಹೋಗಲಾರೆನು. ಅಂಧನಾಗಿ ಅಶಕ್ತನಾದ ನನ್ನ ತಂದೆಯು ಇಲ್ಲಿಗೆ ಬರಲಾರನು. ಆದ್ದರಿಂದ ನೀನು ನನ್ನ ತಂದೆಯ ಸಮೀಪಕ್ಕೆ ಹೋಗಿ ಈ ವರ್ತಮಾನವನ್ನು ಹೇಳು. ಇಲ್ಲದಿದ್ದರೆ ಆ ಮುನೀಶ್ವರನು ಕಾಡುಗಿಚ್ಚು ಉರಿಯುವಂತೆ ಕೋಪಾಗ್ನಿಯಿಂದ ನಿನ್ನನ್ನು ದಹಿಸಿಬಿಟ್ಟಾನು. ಈ ದಾರಿಯಲ್ಲೇ ಹೋದರೆ ನನ್ನ ತಂದೆಯ ಆಶ್ರಮವು ಸಮೀಪದಲ್ಲಿದೆ. ಆತನನ್ನು ಒಳ್ಳೆಯ ಮಾತುಗಳಿಂದ ಸಂತವಿಟ್ಟರೆ ನಿನ್ನನ್ನು ಕೋಪದಿಂದ ಶಪಿಸನು. ನನ್ನ ಮರ್ಮಸ್ಥಾನದಲ್ಲಿ ನೆಟ್ಟಿರುವ ಅಂಬನ್ನು ಕೀಳು. ಆ ಬಾಣವು ನದೀಪ್ರವಾಹವು ತೀರವನ್ನು ಕೊರೆಯುವಂತೆ ನನ್ನ ಶರೀರವನ್ನು ನೋಯಿಸುತ್ತ ಪ್ರಾಣಗಳನ್ನು ಹೋಗಲೀಸದೆ ತಡೆದುಕೊಂಡಿದೆ. ನನ್ನ ಶರೀರದಲ್ಲಿ ನೆಟ್ಟಿರುವ ಅಂಬನ್ನು ತೆಗೆ ' ಎಂದು ನುಡಿದನು.

" ಕೌಸಲ್ಯಾದೇವಿ, ನಾನು ಆ ಮುನಿಕುಮಾರನ ಶರೀರದಿಂದ ಅಂಬನ್ನು ತೆಗೆದರೆ ಆ ಕ್ಷಣದಲ್ಲೇ ಆತನು ಪ್ರಾಣಗಳನ್ನು ಬಿಡುವನೆಂದು ಆ ಅಂಬನ್ನು ತೆಗೆಯದೆ ಚಿಂತಾಕ್ರಾಂತನಾಗಿ ಶೋಕದಿಂದಿದ್ದೆನು. ಆತನು ವ್ಯಥೆಯನ್ನು ಧೈರ್ಯದಿಂದ ತಾಳಿಕೊಂಡು ಸ್ಥಿರಚಿತ್ತನಾಗಿ ಪ್ರಯಾಸದಿಂದ ಮೆಲ್ಲಗೆ ನನ್ನನ್ನು

ಕುರಿತು "ರಾಜ, ನಿನ್ನ ಮನಸ್ಸಿನಲ್ಲಿ ಬ್ರಹ್ಮಹತ್ಯಾಪಾಪವು ಬರುವುದೆಂದು ಚಿಂತೆಯನ್ನು ಬಿಟ್ಟು ಸ್ಥಿರಚಿತ್ತನಾಗು. ನಾನು ಬ್ರಾಹ್ಮಣಜನ್ಮದಲ್ಲಿ ಬಂದವನಲ್ಲ. ಶೂದ್ರಸ್ತ್ರೀಯಲ್ಲಿ ವೈಶ್ಯನಿಂದ ಜನಿಸಿದೆನು. ಆದ್ದರಿಂದ ಬ್ರಹ್ಮಹತ್ಯಾಪಾಪವು ಸಂಭವಿಸುವುದಿಲ್ಲ. ನಿನ್ನ ಮನಸ್ಸಿಗೆ ವ್ಯಥೆ ಬೇಡ' ಎಂದು ನುಡಿದು ಧಾತುಗುಂದಿ ಕೈಕಾಲುಗಳನ್ನು ಕದಲಿಸದೆ ಹೊರಳುತ್ತ ನಡುಗುತ್ತಿದ್ದನು. ನಾನು ಆತನ ಶರೀರದಿಂದ ಅಂಬನ್ನು ತೆಗೆಯಲು ಆ ಮುನಿಕುಮಾರನು ನನ್ನನ್ನು ದೃಷ್ಟಿಸಿ ನೋಡಿ ತನ್ನ ಪ್ರಾಣಗಳನ್ನು ಬಿಟ್ಟನು. ಹೀಗೆ ಗಾಯಕ್ಕೀಡಾಗಿ ಸರಯೂನದೀತೀರದಲ್ಲಿ ಬಿದ್ದಿದ್ದ ಆ ಮುನಿಕುಮಾರನನ್ನು ಕಂಡು ನಾನು ಕಂಗೆಟ್ಟೆನು."



## ೬೪ ನೆಯ ಅಧ್ಯಾಯ

## ದಶರಥನಿಗೆ ಶಾಪಬಂದ ವೃತ್ತಾಂತ

"ಕೌಸಲ್ಯೆ, ನಾನು ಅಜ್ಞಾನದಿಂದ ಮಹತ್ತಾದ ಪಾಪವನ್ನು ಮಾಡಿ ಆ ಪಾಪವು ಹೇಗೆ ಹೋಗುವುದೆಂದು ಚಿಂತಿಸಿದೆನು. ಆ ಋಷಿಪುತ್ರನು ಸರಯೂನದಿಯ ದಡದಲ್ಲಿ ಬಿಟ್ಟ ನೀರು ತುಂಬಿದ್ದ ಕೊಡವನ್ನು ತೆಗೆದುಕೊಂಡು ಆ ಮುನಿಕುಮಾರನು ಹೇಳಿದ ಮಾರ್ಗದಿಂದ ಆತನ ಆಶ್ರಮಕ್ಕೆ ಹೋದೆನು. ಆ ಆಶ್ರಮದಲ್ಲಿ ವೃದ್ಧರಾಗಿ ಅಂಧರಾಗಿ ಯಾರೂ ದಿಕ್ಕಿಲ್ಲದೆ ದುರ್ಬಲರಾದ ಆ ಮುನಿಯನ್ನೂ ಮುನಿಪತ್ನಿಯನ್ನೂ ಕಂಡೆನು. ಅವರು ಗರಿಗಳಿಲ್ಲದ ಪಕ್ಷಿಗಳಂತೆ ತಮ್ಮ ಕುಮಾರನು ಉದಕವನ್ನು ತರುವನೆಂಬ ಆಶೆಯಿಂದ ಕುಳಿತುಕೊಂಡು ಇಷ್ಟಾಲಾಪಗಳನ್ನು ಹೇಳಿಕೊಳ್ಳುತ್ತ ಅನಾಥರಾಗಿದ್ದರು. ನಾನು ಅಂಥ ಅನಾಥರ ಮಗನನ್ನು ಕೊಂದ ಮನೋವ್ಯಥೆಯಿಂದ ಭಯಪಟ್ಟು ಆ ಆಶ್ರಮದ ಬಳಿಗೆ ಹೋಗಲು ಆ ಸದ್ದನ್ನು ಕೇಳಿ ಆ ದಂಪತಿಗಳು ತಮ್ಮ ಮಗನು ಬಂದನೆಂದೆಣಿಸಿದರು. 'ಎಲೈ ಮಗನೆ, ಇಷ್ಟುಹೊತ್ತು ಏಕೆ ತಡಮಾಡಿದೆ? ಉದಕವನ್ನು ಬೇಗ ತೆಗೆದುಕೊಂಡು ಬಾ. ನೀನು ನಮಗೆ ಶೀಘ್ರದಲ್ಲಿ ಉದಕವನ್ನು ತಂದುಕೊಡದೆ ನದೀತೀರದಲ್ಲಿ ಆಡುತ್ತಿದ್ದೆ. ನೀನು ಯಾವಾಗ ಉದಕವನ್ನು ತಂದುಕೊಡುವೆಯೋ ಎಂದು ತೃಷೆಯಿಂದ ಕಂಗೆಟ್ಟಿದ್ದೇವೆ. ಶೀಘ್ರದಲ್ಲಿ ಉದಕವನ್ನು ಕೊಡು. ಏಕೆ ಪ್ರತ್ಯುತ್ತರವನ್ನು ನುಡಿಯದಿದ್ದೀಯೆ ? ನಾವು ನಿನ್ನನ್ನು ನಿಷ್ಠುರವಾಗಿ ನುಡಿದೆವೆ ? ನುಡಿದರೂ ಸಹಿಸಿಕೊ. ನೀನೇ ನಮಗೆ ಗತಿ. ನೀನೇ ನಮ್ಮ ಕಣ್ಣು. ನಮ್ಮ ಪ್ರಾಣಗಳು ನಿನ್ನ ಅಧೀನ!' ಎಂದು ನುಡಿದರು.

"ಆ ಮಾತನ್ನು ಕೇಳಿ ನಾನು ಅತ್ಯಂತ ಶೋಕಯುಕ್ತನಾಗಿ ಭಯಪಟ್ಟೆನು. ಆದರೂ ಧೈರ್ಯಮಾಡಿಕೊಂಡು ಆ ಮುನಿಯನ್ನು ಕುರಿತು ಹೀಗೆ ಹೇಳಿದೆನು : 'ಮುನಿಗಳೆ, ನಾನು ನಿಮ್ಮ ಮಗನಲ್ಲ. ನಾನು ದಶರಥರಾಯನು. ಬೇಟೆಯಾಡುತ್ತಾ ಸರಯೂನದಿಯ ತೀರಕ್ಕೆ ಬಂದು ಅಲ್ಲಿ ಆನೆ ಮೊದಲಾದ ಕಾಡುಮೃಗಗಳನ್ನು ಕೊಲ್ಲಬೇಕೆಂದಿದ್ದೆನು. ನಿಮ್ಮ ಕುಮಾರನು ನದೀತೀರಕ್ಕೆ ಬಂದು ಕೊಡದಲ್ಲಿ ನೀರುತುಂಬುತ್ತಿರಲು ಗುಳುಗುಳು ಎಂಬ ಶಬ್ದವು ಹುಟ್ಟಿತು. ನಾನು ದೂರದಲ್ಲಿದ್ದುದರಿಂದ ಕಾಡಾನೆಯು ನೀರು ಕುಡಿಯುವುದಕ್ಕೆ ಬಂದು ಬೃಂಹಣಧ್ವನಿಯನ್ನು ಮಾಡುತ್ತಿದೆಯೆಂದು ಶಬ್ದವೇಧಿಯೆಂಬ ಅಂಬನ್ನು ತೊಟ್ಟು ಎಸೆದೆನು. ಆ ಅಂಬು ನಿಮ್ಮ ಮಗನನ್ನು ತಾಕಿತು. ನಿಮ್ಮ ಮಗನು ಮರ್ಮಸ್ಥಾನದಲ್ಲಿ ತಾಕಿದ ಆ ಬಾಣದಿಂದ ಗಾಯಗೊಂಡು ಹಾ ಹಾ

ಎಂದು ಬೊಬ್ಬಿಡುತ್ತ ಬಿದ್ದನು. ಆಮೇಲೆ ನಾನು ಆನೆಯ ಸದ್ದನ್ನು ಕೇಳಿ ಬಾಣಪ್ರಯೋಗ ಮಾಡಲು ಮನುಷ್ಯರ ಸದ್ದಾಗುತ್ತಿದೆ ಎಂದು ಮನಸ್ಸಿನಲ್ಲಿ ಚಿಂತಿಸಿ ಅಲ್ಲಿಗೆ ಓಡುತ್ತ ಬಂದೆನು. ಅಲ್ಲಿ ನಿಮ್ಮ ಮಗನು ಎದೆಯಲ್ಲಿ ಅಂಬು ಹೂಡಿ ಭೂಮಿಯಲ್ಲಿ ಬಿದ್ದಿರುವುದನ್ನು ಕಂಡು ವ್ಯಥೆಪಟ್ಟೆನು. ಆತನು ತನ್ನ ಎದೆಯಲ್ಲಿ ನೆಟ್ಟ ಅಂಬನ್ನು ತೆಗೆಯಬೇಕೆಂತಲೂ ಸಮೀಪದಲ್ಲಿರುವ ತನ್ನ ತಾಯಿತಂದೆಗಳಿಗೆ ಆ ವರ್ತಮಾನವನ್ನು ಹೇಳಬೇಕೆಂದೂ ಹೇಳಲು ಆತನ ಎದೆಯಲ್ಲಿ ಹೂಡಿದ್ದ ಬಾಣವನ್ನು ತೆಗೆದೆನು. ಆ ಕ್ಷಣದಲ್ಲಿಯೇ ಆತನು ಶರೀರವನ್ನು ಬಿಟ್ಟನು. ಆತನು ನನ್ನ ಅಜ್ಞಾನದಿಂದ ಹತನಾದನು. ಆದಕಾರಣ ನಾನು ಕಂಗೆಟ್ಟು ಹಂಬಲಿಸುತ್ತ ನಿಮ್ಮ ಸಮೀಪಕ್ಕೆ ಬಂದೆನು. ಮುಂದೆ ನನಗೇನು ಅಪ್ಪಣೆ? ನೀವು ಅನುಗ್ರಹಿಸಿ ಆಜ್ಞಾಪಿಸಬೇಕು' ಎಂದು ಕೇಳಿದೆನು.

ಕರ್ಣಕಠೋರವಾದ ಆ ಮಾತನ್ನು ಕೇಳಿ ಆ ಮುನೀಶ್ವರನು ತನ್ನ ಮನಸ್ಸಿನ ವ್ಯಥೆಯನ್ನು ತಾಳಲಾರದೆ ರೋದನವನ್ನು ಮಾಡುತ್ತ ನನ್ನನ್ನು ಕುರಿತು 'ಎಲೈ ಅರಸೆ, ನೀನು ನನಗೆ ಅಶುಭ ವಾರ್ತೆಯನ್ನು ಹೇಳಿದೆ. ಈ ನಿನ್ನ ದುಷ್ಕರ್ಮವನ್ನು ನೀನು ಬಂದು ಹೇಳದಿದ್ದರೆ ನಿನ್ನ ಶಿರಸ್ಸು ಸಹಸ್ರಭಾಗವಾಗುತ್ತಿತ್ತು. ಜ್ಞಾನಪೂರ್ವಕವಾಗಿ ಇಂಥ ದ್ರೋಹವನ್ನು ಮಾಡಿದ್ದಾದರೆ ನಿನ್ನ ಶಿರಸ್ಸು ಏಳು ಭಾಗವಾಗಿಹೋಗುವುದು. 'ಕ್ಷತ್ರಿಯನು ವಾನಪ್ರಸ್ಥಾಶ್ರಮದಲ್ಲಿರುವವನನ್ನು ಜ್ಞಾನಪೂರ್ವಕವಾಗಿ ಕೊಂದರೆ ಆ ಕೊಲೆಯು ಆತನು ದೇವೇಂದ್ರನಾದರೂ ಸ್ಥಾನಭ್ರಷ್ಟನನ್ನಾಗಿ ಮಾಡುವುದು. ಅಜ್ಞಾನದಿಂದ ಆತನನ್ನು ಕೊಂದದ್ದಾಗಿ ಹೇಳಿದ್ದರಿಂದ ನೀನು ಜೀವಸಹಿತ ವಾಗಿದ್ದೀಯೆ. ಅಲ್ಲದೆ ಜ್ಞಾನಪೂರ್ವಕವಾಗಿ ಕೊಂದು ನೀನೇ ಬಂದು ಹೇಳದಿದ್ದ ಪಕ್ಷದಲ್ಲಿ ನೀನು ಬದುಕುತ್ತಿರಲಿಲ್ಲ. ಇಕ್ಷ್ವಾಕುವಂಶವೇ ಇರುತ್ತಿರಲಿಲ್ಲ. ಇನ್ನು ನೀನು ಬದುಕುವುದೆಲ್ಲಿ! ಹೇಗಾದರೂ ದೈವಾಧೀನದಿಂದ ಇಂಥ ಪ್ರಮಾದವು ಬಂದಿತು. ನಮ್ಮನ್ನು ನಮ್ಮ ಕುಮಾರನಿರುವ ಎಡೆಗೆ ಕರೆದುಕೊಂಡುಹೋಗು. ಪ್ರಾಣಗಳನ್ನು ಬಿಟ್ಟು ಮೈಕೈಯೆಲ್ಲವೂ ರಕ್ತವಾಗಿ ಕೃಷ್ಣಾಜಿನದ ಹೊದಿಕೆಯನ್ನೂ ದಡದಲ್ಲಿ ಚೆಲ್ಲಿ ನೆಲದಮೇಲೆ ಬಿದ್ದಿರುವ ಮಗನನ್ನು ಮೊದಲು ನಾವು ನೋಡ ಬೇಕು' ಎಂದು ನುಡಿದನು.

ನಾನು ಅವರಿಬ್ಬರನ್ನು ಕರೆದುಕೊಂಡುಹೋಗಿ ಅವರ ಮಗನು ಬಿದ್ದಿದ್ದ ಸ್ಥಳದಲ್ಲಿ ಬಿಟ್ಟೆನು. ಅವರು ಕಣ್ಣುಕಾಣದವರಾದ್ದರಿಂದ ಆತನಿರುವ ಸ್ಥಳವನ್ನು ಕೇಳಲು ಅವರ ಕೈಗಳನ್ನು ಹಿಡಿದುಕೊಂಡು ಹೋಗಿ ಆತನ ಶರೀರದ ಮೇಲಿರಿಸಿದೆನು. ಅವರು ಮಗನನ್ನು ತಡವರಿಸಿ ಆತನ ಶರೀರದಮೇಲೆ ಬಿದ್ದು ಗೋಳಿಟ್ಟು ರೋದನವನ್ನು ಮಾಡತೊಡಗಿದರು. ಆ ಮುನಿಯು 'ಮಗನೆ, ನಾವು ನಿನ್ನ ಸಮೀಪಕ್ಕೆ ಬಂದೆವು. ನೀನು ನಮಗೆ ಏಕೆ ನಮಸ್ಕಾರವನ್ನು ಮಾಡುವುದಿಲ್ಲ? ಏತಕ್ಕೆ ಮಾತನಾಡದಿದ್ದೀಯೆ? ಏತಕ್ಕೆ ಭೂಮಿಯಮೇಲೆ ಮಲಗಿದ್ದೀಯೆ? ನಮ್ಮಮೇಲೆ ಕೋಪವೆ? ನನ್ನಮೇಲೆ ದಯೆಯಿಲ್ಲದಿದ್ದರೂ ನಿನ್ನ ತಾಯಿಯನ್ನಾದರೂ ನೋಡಿ ತಕ್ಕೈಸಿಕೊ. ನಿನ್ನ ತಾಯಿಯೊಡನೆ ಮಾತಾಡು. ನೀನು ಬೆಳಗಿನ ಜಾವದಲ್ಲೆದ್ದು ಶಾಸ್ತ್ರಪಾಠ ಸ್ತೋತ್ರಪಾಠ ಗಳನ್ನು ಹೇಳಿಕೊಳ್ಳುತ್ತಿದ್ದೆ. ಅವುಗಳನ್ನು ನಾನು ಇನ್ನೆಲ್ಲಿ ಕೇಳಲಿ? ಸ್ನಾನ ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಗಳನ್ನು ತೀರಿಸಿಕೊಂಡು ದೇವತಾರ್ಚನೆಯನ್ನು ಮಾಡಿ ನಮಗೆ ಉಪಚಾರ ದಿಂದ ಆಹಾರವನ್ನು ತಂದುಕೊಡುತ್ತಿದ್ದೆ. ನಮಗೆ ಇನ್ನಾರು ತಂದುಕೊಡುವರು? ನಾವು ಅನಾಥರು. ಸಂಚಿತವಾದ ವಸ್ತುಗಳು ಮೊದಲೇ ಇಲ್ಲ. ಕುಳಿತಕಡೆಯಿಂದ ಏಳಲಾರೆವು. ಅಂಥ ನಮಗೆ ಅನ್ನವನ್ನು ತಂದು ಯಾರು ಭೋಜನವನ್ನು ಮಾಡಿಸುವರು? ನಾನು ಕಣ್ಣುಕಾಣದೆ

ತಪಸ್ವಿಯಾಗಿರುವ ವೃದ್ಧೆಯಾದ ನಿನ್ನ ತಾಯಿಯನ್ನು ಹೇಗೆ ರಕ್ಷಣೆಮಾಡುವೆನು ? ನಿನ್ನ ತಾಯಿಯೂ ಅತ್ಯಂತ ಪುತ್ರಸ್ನೇಹವುಳ್ಳವಳು, ಬಡವೆಯಾದವಳು ; ಆದ್ದರಿಂದ ನೀನು ಯಮಲೋಕಕ್ಕೆ ಹೋಗಬೇಡ. ಈ ದಿವಸ ಇಲ್ಲಿಯೇ ಇರು ; ನಾಳೆ ನಾವೂ ನಿನ್ನ ಕೂಡ ಬರುತ್ತೇವೆ. ನಾವು ನಿನ್ನನ್ನು ಬಿಟ್ಟು ಜೀವಿಸಲಾರೆವು. ಆದ್ದರಿಂದ ನೀನು ಇಂದು ಇದ್ದರೆ ನಾಳೆ ನಾವು ನಿನ್ನೊಡನೆ ಯಮಪಟ್ಟಣಕ್ಕೆ ಬಂದು ಯಮನನ್ನು ಕುರಿತು—ಧರ್ಮರಾಯ, ನೀನು ಸಮಸ್ತರನ್ನೂ ರಕ್ಷಿಸುವವನು, ಮಹಾ ಧರ್ಮಿಷ್ಠನು. ಆದ್ದರಿಂದ ನಮ್ಮ ಮಗನನ್ನು ಉಳಿಸು. ಈತನು ನಮ್ಮನ್ನು ರಕ್ಷಿಸಿಕೊಂಡಿರುವನು. ಅನಾಥರಾಗಿ ಕಂಗೆಟ್ಟ ನಮಗೆ ತೊಂದರೆ ಕೊಡಬೇಡ. ನಮಗೆ ಅಭಯದಕ್ಷಿಣೆಯನ್ನು ಕೊಟ್ಟು ರಕ್ಷಿಸು—ಎಂದು ಬೇಡಿಕೊಳ್ಳುವೆವು ! ಎಲೈ ಮಗನೆ, ನೀನು ಪುಣ್ಯಾತ್ಮನು. ಜನ್ಮಾಂತರದಲ್ಲಿ ಮಾಡಿದ ಪಾಪದಿಂದ ನಿನಗೆ ಇಂಥ ಅವಸ್ಥೆಯು ಬಂದಿತು. ನೀನು ಶಸ್ತ್ರಹತನಾಗಿ ದುರ್ಮರಣದಿಂದ ಅಧೋಲೋಕಕ್ಕೆ ಹೋಗಬೇಡ. ರಣಾಂಗಣದಲ್ಲಿ ಶತ್ರುಗಳಿಗೆ ಹಿಮ್ಮೆಟ್ಟದೆ ಎದುರಾಗಿ ಹೋರಿ ಶರೀರವನ್ನು ಬಿಡುವ ಪಟುಭಟರೈದುವ ಸ್ವರ್ಗಲೋಕವನ್ನೈದು. ಪೂರ್ವದಲ್ಲಿ ಸಗರಚಕ್ರವರ್ತಿ, ದಿಲೀಪ, ಜನಮೇಜಯರಾಯ, ನಹುಷ, ಧುಂಧುಮಾರ ಮೊದಲಾದ ಪುಣ್ಯಪುರುಷರು ಐದಿದ ಲೋಕವನ್ನೈದು. ಸಾಧುಗಳಾಗಿ ವೇದಾಧ್ಯಯನಸಂಪನ್ನರಾದ ಬ್ರಾಹ್ಮಣರೂ ಭೂಮಿದಾನವನ್ನು ಮಾಡಿದ ಪುಣ್ಯಾತ್ಮರೂ ಗೋಸಹಸ್ರದಾನವನ್ನು ಮಾಡಿದ ಪುಣ್ಯಾತ್ಮರೂ ಏಕಪತ್ನೀವ್ರತವನ್ನು ಮಾಡಿದ ಪುಣ್ಯಾತ್ಮರೂ ಅಂತಃಕರಣದಿಂದ ಗುರುಸೇವೆಯನ್ನು ಮಾಡಿದ ಪುಣ್ಯಾತ್ಮರೂ ಯಾವ ಲೋಕವನ್ನೈದುವರೋ ಆ ಲೋಕವನ್ನೈದು. ನಿನ್ನ ಕುಲದಲ್ಲಿ ಹುಟ್ಟಿದವರೊಬ್ಬರೂ ಅಧೋಗತಿಯನ್ನೈದಲಿಲ್ಲ. ನಿನ್ನನ್ನು ಕೊಂದವನಿಗೆ ಅಂಥ ಗತಿಯು ದೊರಕೀತು' ಎಂದು ಬಹುದೈನ್ಯದಿಂದ ಹಂಬಲಿಸುತ್ತ ತನ್ನ ಸ್ತ್ರೀಯನ್ನು ಕೂಡಿಕೊಂಡು ಉತ್ತರ ಕ್ರಿಯೆಗಳನ್ನು ಮಾಡಲುಜ್ಜುಗಿಸಿದನು.

ಆ ಸಮಯದಲ್ಲಿ ಆ ಮುನಿಕುಮಾರನು ತಾನು ಮಾಡಿದ ಸತ್ಕರ್ಮದಿಂದ ದೇವತ್ವವನ್ನು ಪಡೆದು ದೇವೇಂದ್ರನ ಸಮೀಪಕ್ಕೆ ಹೋಗಿ ಆತನ ಸಹಿತವಾಗಿ ತಿರುಗಿ ಬಂದು ಕಾಣಿಸಿಕೊಂಡು ತಾಯಿತಂದೆಗಳನ್ನು ಮಧುರೋಕ್ತಿಯಿಂದ ಸಂತವಿಸಿ 'ನೀವು ನನ್ನ ಸಮೀಪಕ್ಕೆ ಶೀಘ್ರದಲ್ಲಿ ಬರುತ್ತೀರಿ' ಎಂದು ನುಡಿದು ದಿವ್ಯವಿಮಾನಾರೂಢನಾಗಿ ಸ್ವರ್ಗಲೋಕವನ್ನೈದಿದನು ! ಆಮೇಲೆ ಆತನ ತಂದೆಯಾದ ಮುನೀಶ್ವರನು ತನ್ನ ಪತ್ನೀಸಮೇತನಾಗಿ ಆತನ ಮುಂದೆ ಕೈಮುಗಿದು ನಿಂತಿದ್ದ ನನ್ನನ್ನು ನೋಡಿ ಹೀಗೆ ನುಡಿದನು : 'ರಾಜ, ನೀನು ನಮ್ಮನ್ನೂ ಸಂಹರಿಸು. ನಮಗೆ ಮರಣಭಯವಿಲ್ಲ. ನೀನು ಯಾವ ಬಾಣದಿಂದ ನಮ್ಮ ಮಗನನ್ನು ಕೊಂದೆಯೋ ಆ ಬಾಣದಿಂದಲೇ ನಮ್ಮನ್ನೂ ಕೊಲ್ಲು. ಅತ್ಯಂತ ಶುಚಿಯಾದ ನಮ್ಮ ಮಗನನ್ನು ಅಜ್ಞಾನದಿಂದ ಕೊಂದೆ. ಆದಕಾರಣ ನೀನು ಮಹಾಕ್ರೂರವಾದ ಪುತ್ರಶೋಕದಿಂದಲೇ ಜೀವವನ್ನು ಬಿಡುವೆ. ಕ್ಷತ್ರಿಯನಾದ ನೀನು ಅಜ್ಞಾನದಿಂದ ಮುನಿಪುತ್ರನನ್ನು ಕೊಂದೆ. ಅದು ಅಜ್ಞಾನದಿಂದ ಬಂದಕಾರಣ ನಿನಗೆ ಬ್ರಹ್ಮಹತ್ಯಾಪಾಪವು ಬರದಿರಲಿ. ವಿಶ್ವಾಸಪೂರ್ವಕವಾಗಿ ಬ್ರಾಹ್ಮಣರಿಗೆ ಕೊಡುವ ದಕ್ಷಿಣೆಯು ಫಲಸ್ವರೂಪವಾಗಿ ತಿರುಗಿ ಬರುವಂತೆ ನನ್ನ ಪ್ರಾಣಾಂತಕವಾದ ಘೋರ ಕರ್ಮವನ್ನು ಮಾಡಿದ ನಿನಗೂ ನನಗೆ ಬಂದ ಅವಸ್ಥೆಯು ಬಂದು ಪುತ್ರಶೋಕದಿಂದ ಶರೀರ ತ್ಯಾಗವಾಗುವುದು' ಎಂದು ಶಾಪವನ್ನು ಕೊಟ್ಟನು. ಆತನು ಬಹಳವಾಗಿ ಹಂಬಲಿಸಿ ಕುಮಾರನ ಶರೀರವನ್ನು ಚಿತೆಯಲ್ಲಿರಿಸಿ ಅಗ್ನಿಪ್ರಜ್ವಲನಮಾಡಿ ತಾನು ತನ್ನ ಪತ್ನಿಯನ್ನು ಕೂಡಿ ಆ ಅಗ್ನಿಯಲ್ಲಿ ಪ್ರವೇಶಮಾಡಿ ಶರೀರವನ್ನು ಬಿಟ್ಟು ಸ್ವರ್ಗಲೋಕವನ್ನೈದಿದನು. ಈಗ ಪುತ್ರಶೋಕದಿಂದ ನನಗೆ

ಆ ಪಾಪವು ಘಟಿಸಿತು! ಆದ್ದರಿಂದ ಕೌಸಲ್ಯೆ, ನಾನು ಅಜ್ಞಾನದಿಂದ ಶಬ್ದವೇಧಿಯೆಂಬ ಬಾಣವನ್ನು ಸಂಧಾನಮಾಡಿದ ಕಾರಣ ಬಂದ ಪಾಪವು, ವ್ಯಾಧಿಗ್ರಸ್ತನಾದವನು ಅಪಥ್ಯಮಾಡಿದರೆ ಆ ವ್ಯಾಧಿಯು ರೋಗಿಯನ್ನು ಕೊಲ್ಲುವಂತೆ ನನ್ನನ್ನು ಕೊಲ್ಲುತ್ತಿದೆ. ಆ ಮುನಿಯು ಆಡಿದ ಮಾತು ಸತ್ಯವಾಯಿತು! ಕೌಸಲ್ಯೆ, ನನಗೆ ಕಣ್ಣು ಕಾಣಿಸುತ್ತಿಲ್ಲ. ಪುತ್ರಶೋಕದಿಂದ ಶರೀರವನ್ನು ಬಿಡುವೆನು. ಇನ್ನು ನಿನ್ನನ್ನೂ ಕಾಣುವಂತಿಲ್ಲ. ನೀನು ನನ್ನನ್ನು ಮೈಮುಟ್ಟಿ ನೋಡು. ಸಾಯುವವರಿಗೆ ಕಣ್ಣು ಕಾಣಿಸುವುದಿಲ್ಲ. ಶ್ರೀರಾಮನು ವನದಿಂದ ತಿರುಗಿ ಬಂದು ಯುವರಾಜಪಟ್ಟವನ್ನು ಕಟ್ಟಿಕೊಂಡು ನನ್ನ ಮೈ ಮುಟ್ಟಿದನಾದರೆ ನಾನು ಬದುಕಬಹುದು. ಕೌಸಲ್ಯೆ, ನಾನು ಶ್ರೀರಾಮನಿಗೆ ಅಪಕಾರ ಮಾಡಿದ ಹಾಗೆ ಲೋಕದಲ್ಲಿ ಮತ್ತೊಬ್ಬರು ತಮ್ಮ ಮಕ್ಕಳಿಗೆ ಅಪಕಾರವನ್ನು ಮಾಡಲಿಲ್ಲ. ಆತನು ನನಗೆ ಉಪಚಾರಮಾಡಿದ ಹಾಗೆ ಮತ್ತೊಬ್ಬ ಮಗನು ತಂದೆಗೆ ಉಪಚಾರ ಮಾಡಲಿಲ್ಲ. ಲೋಕದಲ್ಲಿ ದುರ್ಜನನಾದ ಮಗನನ್ನಾದರೂ ಬಿಟ್ಟವರಿಲ್ಲ. ತಂದೆಯು ಹೊರಡಿಸಿದರೆ ದ್ವೇಷವನ್ನು ಮಾಡದೆ ಹೊರಟುಹೋದವನನ್ನಾದರೂ ಕಾಣೆನು. ಇನ್ನು ನನಗೆ ಕಣ್ಣುಕಾಣುವುದಿಲ್ಲ. ಪ್ರಜ್ಞೆತಪ್ಪಿತು. ಯಮದೂತರು ತಮ್ಮ ಸಂಗಡ ಬರಬೇಕೆಂದು ತ್ವರೆಮಾಡುತ್ತಿದ್ದಾರೆ. ನನಗೆ ಇದಕ್ಕಿಂತಲೂ ವೆಗ್ಗಳವಾದ ದುಃಖವಿಲ್ಲ. ಧರ್ಮಜ್ಞನೂ ಸತ್ಯಸಂಧನೂ ಅತಿಪರಾಕ್ರಮಿಯೂ ಆದ ಶ್ರೀರಾಮನನ್ನು ಕಾಣದಿರುವ ನನ್ನನ್ನು ಪುತ್ರಶೋಕವು, ಸೂರ್ಯಕಿರಣಗಳು ಉದಕವನ್ನು ಹೀರಿ ಭಾವಿಯನ್ನು ಒಣಗಿಸುವಂತೆ, ನನ್ನ ಪ್ರಾಣಗಳನ್ನು ಒಣಗಿಸುತ್ತಿದೆ. ಹದಿನಾಲ್ಕು ವರುಷಗಳೆಂಬ ವನವಾಸದ ಮಿತಿಯನ್ನು ತೀರಿಸಿ ಹದಿನೈದನೆಯ ವರುಷದಲ್ಲಿ ತಿರುಗಿ ಬರುವಂಥ,—ತಾವರೆಯ ಎಸಳಿನಂತೆ ಕಣ್ಣುಗಳುಳ್ಳವನಾಗಿ, ಶೋಭನವಾದ ಹುಬ್ಬುಗಳುಳ್ಳವನಾಗಿ, ನಯವಾಗಿರುವ ದಂತಪಂಕ್ತಿಗಳುಳ್ಳವನಾಗಿ, ಸೊಬಗಾದ ನಾಸಿಕವುಳ್ಳವನಾಗಿ, ಮನೋಹರವಾದ ಮಕರ ಕುಂಡಲ ಗಳುಳ್ಳವನಾಗಿ, ಶರತ್ಕಾಲದ ಪೂರ್ಣಚಂದ್ರನಂತೆಯೂ ವಿಕಸಿತವಾದ ಕಮಲದಂತೆಯೂ ಮುಖಪದ್ಮವುಳ್ಳವನಾದ, ನನ್ನ ಒಡೆಯನಾದ ಶ್ರೀರಾಮನನ್ನು ಕಾಣುವವರು ಸಾಕ್ಷಾತ್ ದೇವತಾ ಸ್ವರೂಪರಲ್ಲದೆ ಮನುಷ್ಯರಲ್ಲ! ಅವರೇ ಕೃತಾರ್ಥರು. ವನವಾಸದಿಂದ ತಿರುಗಿ ಒರುವ ಶ್ರೀರಾಮನನ್ನು ಗಗನಮಾರ್ಗದಲ್ಲಿ ಸಂಚರಿಸುವ ಶುಕ್ರನನ್ನು ಕಾಣುವಂತೆ ಯಾರು ಕಾಣುವರೋ ಅವರೇ ಸುಖಿಗಳು! ಕೌಸಲ್ಯಾದೇವಿ, ನಾನು ಇನ್ನು ಶ್ರೀರಾಮನಿಗಾಗಿ ಕಾದಿರುವ ಹಾಗಿಲ್ಲ. ನನಗೆ ಚಿತ್ತವಿಭ್ರಮೆಯಾಗುತ್ತಿದೆ. ಎದೆಯು ಹಾರುತ್ತಿದೆ. ನನಗೆ ಶಬ್ದಸ್ಪರ್ಶಾದಿ ವಿಷಯಗಳು ಅಡಗಿದುವು. ಚಕ್ಷುರಾದಿ ದಶೇಂದ್ರಿಯಗಳು, ದೀಪದ ಎಣ್ಣೆಯು ತೀರಿದಮೇಲೆ ದೀಪಜ್ವಾಲೆ ತಗ್ಗುವಂತೆ, ತಮ್ಮ ತಮ್ಮ ವಿಷಯಗಳನ್ನನುಭವಿಸಲಾರದೆ ತಗ್ಗುತ್ತಿವೆ. ನನ್ನ ಮನೋವ್ಯಥೆಯು ನದೀಪ್ರವಾಹವು ಹೊತ್ತು ಹೊತ್ತಿಗೆ ತಡಿಯನ್ನು ಕೊರೆದು ಕೆಡಹುವಂತೆ ರಕ್ಷಕರಿಲ್ಲದೆ ಚೈತನ್ಯಗುಂದಿದ ನನ್ನನು ಬರಸೆಳೆಯುತ್ತಿದೆ!—ಹಾ ರಾಮಾ! ಭುಜಬಲಪರಾಕ್ರಮವುಳ್ಳವನೆ! ಪುತ್ರಶೋಕವನ್ನು ಶಮನ ಮಾಡಿದವನೆ! ಪಿತೃಭಕ್ತನೆ! ನನ್ನ ಒಡೆಯನಾದ ಶ್ರೀರಾಮನೆ! ಹಾ ಮಗನೆ! ನನ್ನನ್ನು ಬಿಟ್ಟು ವನಕ್ಕೆ ತೆರಳಿದೆಯಾ!—ಕೌಸಲ್ಯಾದೇವಿ, ಹಾ ಸುಮಿತ್ರೆ, ಪಾಪಿಯಾದ ಕೈಕೇಯಿಯು ಕುಲಗೇಡಿ!" ಎಂದು ಹಂಬಲಿಸುತ್ತ ಪ್ರಿಯಪುತ್ರನಾದ ಶ್ರೀರಾಮನ ವಿಯೋಗದಿಂದ ಬಾಧೆಪಟ್ಟು ಮುಂದುಗಾಣದೆ ಹಾಸಿಗೆಯ ಮೇಲೆ ಒರಗಿ ಸೌಮ್ಯಸ್ವರೂಪನಾಗಿ ಪ್ರಾಣವನ್ನು ಪರಿತ್ಯಾಗಮಾಡಿದನು. *

* ಪ್ರಥಮಮುದ್ರಣದಲ್ಲಿ ಈ ಭಾಗವನ್ನು ಮುದ್ರಿಸುವಾಗ ನಮ್ಮ ಮಹಾಸ್ವಾಮಿಗಳಾದ ಮೈಸೂರು ಮಹಾರಾಜ ಶ್ರೀ ಚಾಮರಾಜ ಒಡೆಯರ್ ಬಹದೂರ್, ಜಿ. ಸಿ. ಎಸ್. ಐ. ಅವರು ಕಲ್ಕತ್ತೆಯಲ್ಲಿ (೧೮೯೪ನೆಯ ವರುಷ ಡಿಸೆಂಬರ್ ೨೮ನೆಯ ತಾ|| ಪ್ರಾತಃಕಾಲ ೭ ಘಂಟೆಯಲ್ಲಿ) ಸ್ವರ್ಗಸ್ಥರಾದಂಥ ಅತಿದುಃಖಕರವಾದ ಘಟನೆಯು ಸಂಭವಿಸಿತು.

೭೫ ನೆಯ ಅಧ್ಯಾಯ

## ದಶರಥರಾಯನ ಪತ್ನಿಯರು ದುಃಖಪಟ್ಟಿದ್ದು

ಆಮೇಲೆ ಆ ರಾತ್ರಿಯು ಕಳೆಯಲು ಪ್ರಾತಃಕಾಲದಲ್ಲಿ ಮಂಗಳಪಾಠಕರು ಸ್ತೋತ್ರಪಾಠಕರು ಗಾಯಕರು ಮೊದಲಾದವರು ತಂಡತಂಡವಾಗಿ ತಮ್ಮತಮ್ಮ ಸ್ಥಳಗಳಲ್ಲಿ ನಿಂತು ಸರ್ವಾಭರಣಭೂಷಿತ ರಾಗಿ ದಶರಥರಾಯನನ್ನು ಸ್ತೋತ್ರಮಾಡತೊಡಗಿದರು. ಆ ಧ್ವನಿಯು ಉಪ್ಪರಿಗೆಯ ಅಂತರ ಗಳನ್ನೂ ಪ್ರಾಕಾರಗಳನ್ನೂ ಪ್ರವೇಶಿಸಿ ಪ್ರತಿಶಬ್ದ ಹುಟ್ಟಿ ಒಂದಕ್ಕೆ ಹತ್ತುಮಡಿಯಾಗಿ ಪ್ರತಿಧ್ವನಿ ಸುತ್ತಿತ್ತು. ಆ ಶಬ್ದದಿಂದ ಎಬ್ಬಿಸಲ್ಪಟ್ಟ ಗಿಳಿ ಪಾರಿವಾಳ ನವಿಲು ಕೊಳರ್ವಕ್ಕಿ ಹಂಸ ಕೋಗಿಲೆ ಮೊದಲಾದ ಪಕ್ಷಿಗಳು ಕಿವಿಗಿಂಪಾಗಿ ಸ್ವರಗೈಯುತ್ತಿದ್ದುವು. ವೈಣಿಕರು ವೀಣಾನಾದವನ್ನು ಮಾಡುತ್ತಿದ್ದರು. ಬ್ರಹ್ಮವೇತ್ತೃಗಳಾದ ಬ್ರಾಹ್ಮಣರು ಆಶೀರ್ವಾದಗಳನ್ನು ಮಾಡುತ್ತಿದ್ದರು. ನಾನಾಪ್ರಕಾರವಾದ ಆ ಧ್ವನಿಗಳಿಂದ ದಶರಥರಾಯನ ಅರಮನೆಯು ರಮಣೀಯವಾಗಿತ್ತು. ವೃದ್ಧೆಯರಾದ ಪತಿವ್ರತಾಸ್ತ್ರೀಯರು ಅರಳು ಪುಷ್ಪಮಾಲಿಕೆಗಳನ್ನು ತೆಗೆದುಕೊಂಡು ಅಕ್ಷತೆ ಸುಗಂಧ ದ್ರವ್ಯಗಳಿಂದ ಸೇಸೆಯಿಕ್ಕಬೇಕೆಂದು ಬರುತ್ತಿದ್ದರು. ಕೆಲವರು ದಿವ್ಯಚಂದನಾದಿಗಳನ್ನು ಪವಿತ್ರವಾದ ಸುವರ್ಣಕಲಶಗಳಲ್ಲಿ ತಂದರು. ಹೀಗೆ ಅರಮನೆಯು ಅಲಂಕರಿಸಲ್ಪಟ್ಟು ಸರ್ವಲಕ್ಷಣಯುಕ್ತವಾಗಿ ಲಕ್ಷ್ಮೀನಿವಾಸಕ್ಕೆ ಆಸ್ಪದವಾಗಿತ್ತು. ಸೂರ್ಯೋದಯವಾಗುವವರೆಗೆ ಅತಿಸಂತೋಷದಿಂದಿದ್ದ ಆ ಜನಸಮೂಹಕ್ಕೆ ದಶರಥರಾಯನು ಓಲಗಕ್ಕೆ ಬರದಿರಲು ಮನಸ್ಸಿನಲ್ಲಿ ಶಂಕೆ ಹುಟ್ಟಿತು. ಆಗ ಆತನ ಓಲಗದ ಸ್ತ್ರೀಯರು ಶಯ್ಯಾಗೃಹದ ಬಾಗಿಲಿಗೆ ಹೋಗಿ ಕಾಲೋಚಿತವನ್ನರಿತು ಆತನು ಏಳುವ ಹಾಗೆ ವಿನಯೋಕ್ತಿಗಳಿಂದ ಮೆಲ್ಲಗೆ ಎಬ್ಬಿಸಲು ಯತ್ನಿಸಿದರು. ಆತನು ಏಳದಿರಲು ನಿದ್ರಾಲಕ್ಷಣವನ್ನು ಬಲ್ಲವರು ಮೆಲ್ಲಗೆ ನಾಸಿಕವನ್ನು ಮುಟ್ಟಿನೋಡಿ ಉಸಿರಾಡದಿರಲು ಮನಸ್ಸಿನಲ್ಲಿ ಶಂಕೆಪಟ್ಟು ನದೀಪ್ರವಾಹವೇಗದಿಂದ ಚಲಿಸುವ ತೃಣಗಳಂತೆ ನಡುಗಲಾರಂಭಿಸಿದರು. ಕೌಸಲ್ಯಾ ದೇವಿಯೂ ಸುಮಿತ್ರಾದೇವಿಯೂ ಪುತ್ರಶೋಕದಿಂದ ಅತ್ತು ಅತ್ತು ಸಾಕಾಗಿ ಮಲಗಿ ನಿದ್ರೆ ಮಾಡುತ್ತಿದ್ದರು. ಕೌಸಲ್ಯಾದೇವಿಯ ಮುಖವು ಕಾಂತಿಗುಂದಿತ್ತು. ಸುಮಿತ್ರಾದೇವಿಯ ಮುಖ ಕಾಂತಿ ತಗ್ಗಿತ್ತು. ದಶರಥರಾಯನ ಮುಖವು ವಿವರ್ಣವಾಗಿತ್ತು. ಕೌಸಲ್ಯಾದೇವಿ ಸುಮಿತ್ರಾ ದೇವಿಯರ ಕಣ್ಣುಗಳಲ್ಲಿ ಕಂಬನಿ ಸುರಿಯುತ್ತಿತ್ತು! ಅಂತಃಪುರದ ಸ್ತ್ರೀಯರು ದಶರಥರಾಯನ ಮರಣವನ್ನು ತಿಳಿದು ಗೋಳಾಡತೊಡಗಿದರು. ಕೌಸಲ್ಯಾದೇವಿ ಸುಮಿತ್ರಾದೇವಿಯರು ಆ ಕೋಲಾಹಲಧ್ವನಿಗಳನ್ನು ಕೇಳಿ ನಿದ್ದೆಯಿಂದೆಚ್ಚತ್ತು ಕಣ್ಣುತೆರೆದು ನೋಡಿದರು. ಅದೇನು ಅದ್ಭುತ ವೆಂದು ದಶರಥರಾಯನನ್ನು ಮುಟ್ಟಿನೋಡಿ ಶರೀರತ್ಯಾಗಮಾಡಿದನೆಂದು ನಿಶ್ಚಯಿಸಿ, ಅಕಟಕಟಾ! ಎಂದು ಹಂಬಲಿಸಿ ಭೂಮಿಯಮೇಲೆ ಬಿದ್ದು ಹೊರಳಾಡತೊಡಗಿದರು. ಶರೀರವೆಲ್ಲವೂ ಧೂಳುಮುಸುಕಿ ಅಂತರಿಕ್ಷಮಾರ್ಗದಿಂದ ಬಿದ್ದ ನಕ್ಷತ್ರಗಳಂತೆ ಅವರು ಕಾಂತಿಗುಂದಿದರು. ಅದನ್ನು ಕಂಡು ಕೈಕೇಯಿ ಮೊದಲಾದ ರಾಜಸ್ತ್ರೀಯರೆಲ್ಲರೂ ರೋದನಮಾಡುತ್ತ ಶೋಕಾಗ್ನಿಯಿಂದ ಚೈತನ್ಯಗುಂದಿದರು. ಈ ರೀತಿಯಲ್ಲಿ ರೋದನಮಾಡುತ್ತಿದ್ದ ಸ್ತ್ರೀಯರ ಕೋಲಾಹಲಧ್ವನಿಯಿಂದ ಆ ಅರಮನೆಯಲ್ಲಿ ಪ್ರತಿಧ್ವನಿಯು ಹುಟ್ಟಿ ಎಲ್ಲಿ ನೋಡಿದರೂ ದುಃಖಪಡುವ ಬಂಧುಜನರಿಂದ ಇಟ್ಟಣಿಸಿ ನೋಡುವುದಕ್ಕೆ ಅಶಕ್ಯವಾಗಿತ್ತು. ಅಂತಃಪುರಸ್ತ್ರೀಯರು ಒಬ್ಬರನ್ನೊಬ್ಬರು ತಬ್ಬಿಕೊಂಡು ಅನಾಥರಂತೆ ಉರಸ್ತಾಡನಮಾಡಿಕೊಳ್ಳುತ್ತಾ ಬಹಳವಾಗಿ ರೋದಿಸುತ್ತಿದ್ದರು.

## ೬೬ ನೆಯ ಅಧ್ಯಾಯ

# ದಶರಥರಾಯನ ಶರೀರವನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಇಟ್ಟಿದ್ದು

ಆಮೇಲೆ ಕೌಸಲ್ಯಾದೇವಿಯು ಶಾಂತನಾದ ಯಜ್ಞಪುರುಷನಂತೆಯೂ ಉದಕವಿಲ್ಲದ ಸಮುದ್ರದಂತೆಯೂ ಕಾಂತಿಯಿಲ್ಲದ ಸೂರ್ಯನಂತೆಯೂ ಜೀವರಹಿತನಾದ ದಶರಥರಾಯನನ್ನು ಕಂಡು ಕಣ್ಣೀರುಬಿಡುತ್ತ ನಾನಾಪ್ರಕಾರವಾಗಿ ಹಂಬಲಿಸಲಾರಂಭಿಸಿದಳು. ಅವಳು ದಶರಥನ ಶಿರಸ್ಸನ್ನು ತನ್ನ ತೊಡೆಯಮೇಲಿರಿಸಿಕೊಂಡು ಕೈಕೇಯಿಯಾದೇವಿಯನ್ನು ನೋಡಿ " ಎಲೇ ದುಷ್ಟೆ ಕೈಕೇಯಿ, ನಿನ್ನ ಅಭೀಷ್ಟವು ಸಂದಿತೆ ? ಏಕಾಗ್ರಚಿತ್ತಳಾಗಿ ಶತ್ರುಗಳಿಲ್ಲದ ರಾಜ್ಯವನ್ನು ಅನುಭವಿಸು. ಶ್ರೀರಾಮನೂ ನನ್ನನ್ನು ಬಿಟ್ಟು ಹೋದನು. ನನ್ನ ಪತಿಯಾದ ದಶರಥರಾಯನೂ ಸ್ವರ್ಗವನ್ನೈದಿದನು. ತಪ್ಪಾದ ಮಾರ್ಗದಲ್ಲಿ ನಡೆದು ನಾನು ಜೀವಿಸಲಾರೆನು. ಧರ್ಮಮಾರ್ಗ ವನ್ನು ಬಿಟ್ಟು ನಡೆಯುವ ನೀನೊಬ್ಬಳು ಹೊರತಾಗಿ ಲೋಕದಲ್ಲಿ ಮತ್ತೊಬ್ಬ .ಸ್ತ್ರೀಯು ತನ್ನ ಇಷ್ಟದೇವತಾಸ್ವರೂಪನಾದ ಪತಿಯನ್ನು ಬಿಟ್ಟು ಬದುಕುವಳೆ ? ಲೋಕದಲ್ಲಿ ಲೋಭಿಯಾದವನು ದೋಷವನ್ನರಿಯದೆ ವಿಷಮಿಶ್ರಿತವಾದ ಆಹಾರವನ್ನು ತಿನ್ನುವಂತೆ ನೀನು ಮಂಥರೆಯ ಮಾತನ್ನು ಕೇಳಿ ದಶರಥರಾಯನ ವಂಶಕ್ಕೆ ಕೊಡಲಿಯಾಗಿ ಆ ರಾಯನಿಗೆ ದುರ್ಬೋಧನೆಮಾಡಿ ಶ್ರೀರಾಮನನ್ನು ಸೀತಾಲಕ್ಷ್ಮಣರೊಡನೆ ವನಕ್ಕೆ ಕಳುಹಿಸಿದೆ. ಈ ವೃತ್ತಾಂತವನ್ನು ಜನಕರಾಯನು ಕೇಳಿದರೆ ನನ್ನ ಹಾಗೆಯೇ ವ್ಯಥೆಪಡುವನು. ಆ ರಾಮನು ನನಗೆ ವೈಧವ್ಯಾವಸ್ಥೆಯು ಬಂದಿತೆಂದರಿಯನು. ಕಮಲದಳಾಕ್ಷನಾದ ಶ್ರೀರಾಮನಿಗೆ ತಂದೆಯು ಹೋದನೆಂಬ ವಿಷಯ ತಿಳಿಯದು. ಒಂದು ದಿನವಾದರೂ ದುಃಖವನ್ನು ಕಾಣದಿದ್ದ ಸೀತೆಯೂ ವನದಲ್ಲಿ ದುಃಖವನ್ನನುಭವಿಸುತ್ತಿದ್ದಾಳೆ. ರಾತ್ರಿ ಕಾಲದಲ್ಲಿ ಭಯಂಕರವಾದ ಮೃಗಪಕ್ಷಿಗಳ ಧ್ವನಿಯನ್ನು ಕೇಳಿ ಬೆದರಿ ಕಂಗೆಟ್ಟು ಶ್ರೀರಾಮನ ಸಮೀಪಕ್ಕೆ ಹೋಗಿ ತಬ್ಬಿಕೊಳ್ಳುವಳು. ಜನಕರಾಯನಿಗೆ ಸೀತಾದೇವಿ ಒಬ್ಬಳೇ ಪ್ರೇಮಪುತ್ರಿ ಆದ್ದರಿಂದ ಆತನು ಆ ದೇವಿಯನ್ನು ಕುರಿತು ಕಂಗೆಟ್ಟು ದುಃಖಾತಿಶಯದಿಂದ ಹಂಬಲಿಸಿ ಶರೀರವನ್ನು ಬಿಡುವನು. ನಾನು ದಶರಥರಾಯನ ತೋಳುಗಳನ್ನು ಆಶ್ರಯಿಸಿ ಆತನ ಕೂಡ ಅಗ್ನಿಪ್ರವೇಶವನ್ನು ಮಾಡುವೆನು ! " ಎಂದು ಅತ್ಯಂತವಾಗಿ ಹಂಬಲಿಸುತ್ತಿದ್ದಳು.

ಆ ಸಮಯದಲ್ಲಿ ಕೌಸಲ್ಯಾದೇವಿಯ ಊಳಿಗದ ಸ್ತ್ರೀಯರು ಆ ದೇವಿಯನ್ನು ಕೈಹಿಡಿದೆತ್ತಿ ಆಚೆಗೆ ಕರೆದುಕೊಂಡು ಹೋದರು. ಆಮೇಲೆ ಪ್ರಧಾನಿಗಳು ಮೃತನಾದ ದಶರಥರಾಯನನ್ನು ಎಣ್ಣೆಯ ಕೊಪ್ಪರಿಗೆಯಲ್ಲಿಟ್ಟು ಮುಂದೆ ನಡೆಯಬೇಕಾದ ಕರ್ಮಗಳಿಗೆ ಯೋಚನೆಮಾಡಿ ಆ ರಾಯನ ಮಕ್ಕಳು ಹೊರತು ಮತ್ತಾರೂ ಅಗ್ನಿಸಂಸ್ಕಾರವನ್ನು ಮಾಡಬಾರದೆಂದು ನಿಶ್ಚಯಿಸಿದರು. ಆ ರಾಯನನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿದ್ದನ್ನು ಕಂಡು ಆತನು ಸತ್ತನೆಂದು ನಿಶ್ಚಯಿಸಿ ಅಂತಃಪುರದ ಸ್ತ್ರೀಯರು " ಹಾ ಮಹಾರಾಜ ! ಸತ್ಯಸಂಧನಾಗಿ ಪ್ರಿಯವಾದಿಯಾದ ಶ್ರೀರಾಮನನ್ನು ವನಕ್ಕೆ ಕಳುಹಿಸಿ ಆತನ ಮುಖವನ್ನು ಕಾಣದೆ ನೀನೂ ಲೋಕಾಂತರವನ್ನೈದಿದೆ. ನಮಗೆ ಇನ್ನಾರು ಗತಿ ? ಮಹಾರಾಜ, ನೀನು ಸ್ವರ್ಗಸ್ಥನಾದೆ. ಶ್ರೀರಾಮನು ವನಕ್ಕೆ ಹೋದನು. ವಿಧವೆಯರಾದ ನಾವು ದುಷ್ಟೆಯಾದ ಕೈಕೇಯಿಯಾದೇವಿಯ ವಶದಲ್ಲಿ ಹೇಗಿರುವೆವು ? ನಿನ್ನ ವಂಶಕ್ಕೂ ನಮಗೂ ಕರ್ತನಾದ ಶ್ರೀರಾಮನು ರಾಜ್ಯವನ್ನೂ ಸಮಸ್ತ ಐಶ್ವರ್ಯವನ್ನೂ ಬಿಟ್ಟು ವನಕ್ಕೆ ಹೋದನು.

ನಾವು ನೀನೂ ಇಲ್ಲದೆ ಶ್ರೀರಾಮನೂ ಇಲ್ಲದೆ ದುಃಖವನ್ನು ಪಡೆದು ಕೈಕೇಯಿಯ ನಿಷ್ಠುರವಚನಗಳಿಗೆ ಒಳಗಾಗಿ ಹೇಗೆ ಬದುಕುವೆವು! ಕೈಕೇಯಿದೇವಿಯು ನಿನ್ನನ್ನು ತಿರಸ್ಕರಿಸಿ ಸೀತಾಲಕ್ಷ್ಮಣರ ಸಮೇತನಾದ ಶ್ರೀರಾಮನನ್ನು ಹೊರಡಿಸಿದಳು" ಎಂದು ಹಂಬಲಿಸುತ್ತಿದ್ದರು.

ಆಗ ಅಯೋಧ್ಯಾಪಟ್ಟಣವು ನಕ್ಷತ್ರಗಳಿಲ್ಲದ ಆಕಾಶವುಳ್ಳ ರಾತ್ರಿಯಂತೆಯೂ ಪತಿಯಿಲ್ಲದ ಸ್ತ್ರೀಯಂತೆಯೂ ಕಾಣಿಸುತ್ತಿತ್ತು. ಎಲ್ಲಿ ನೋಡಿದರೂ "ಹಾ ದಶರಥರಾಯ!" ಎಂದು ಹಂಬಲಿಸಿ ರೋದನಮಾಡುತ್ತಿದ್ದ ಸ್ತ್ರೀಯರುಳ್ಳ ಶೂನ್ಯವಾದ ಚೌಬೀದಿಗಳುಳ್ಳ ಆ ಪಟ್ಟಣವು ಭಯಂಕರವಾಗಿತ್ತು. ಆ ಸಮಯದಲ್ಲಿ ಸೂರ್ಯನು ಅಸ್ತಂಗತನಾಗಲು ರಾತ್ರಿಯಾಯಿತು. ದಶರಥರಾಯನ ಆಪ್ತಮಿತ್ರರು ಆತನ ಮಕ್ಕಳು ಹೊರತು ಮತ್ತೊಬ್ಬರು ಆತನಿಗೆ ಅಗ್ನಿಸಂಸ್ಕಾರವನ್ನು ಮಾಡಬಾರದೆಂದು ನಿಶ್ಚಯಿಸಿ ಆ ರಾಯನ ಶರೀರವನ್ನು ತೈಲದ ಕೊಪ್ಪರಿಗೆಯಲ್ಲಿಟ್ಟು ಆ ಕೊಪ್ಪರಿಗೆ ಸಹಿತವಾಗಿ ಮಂಚದ ಮೇಲಿರಿಸಿದರು. ಆ ಸಮಯದಲ್ಲಿ ಸೂರ್ಯಪ್ರಭೆಯಿಲ್ಲದ ಆಕಾಶದಂತೆಯೂ, ನಕ್ಷತ್ರಗಳಿಲ್ಲದ ರಾತ್ರಿಯಂತೆಯೂ ಆ ನಗರವು ಮಂಕಾಗಿ ಪ್ರಕಾಶಿಸಲಿಲ್ಲ. ಎಲ್ಲಿ ನೋಡಿದರೂ ಪುರಜನಗಳು ಕೈಕೇಯಿದೇವಿಯನ್ನು ಬೈದು ಶಪಿಸುತ್ತ ರೋದನಮಾಡುತ್ತಿದ್ದರು. ಆಗ ರಾಜನ ಮರಣದಿಂದ ಜನರೆಲ್ಲರೂ ಶೋಕಪೀಡಿತರಾಗಿ ಅಶಾಂತರಾದರು.



## ೬೭ ನೆಯ ಅಧ್ಯಾಯ

## ದಶರಥನ ಪುರೋಹಿತಪ್ರಧಾನರು ಮಂತ್ರಾಲೋಚನೆಮಾಡಿದ್ದು

ಈ ಪ್ರಕಾರದಲ್ಲಿ ಎಲ್ಲಿ ನೋಡಿದರೂ ರೋದನಮಾಡುತ್ತಿದ್ದ ಜನಸಮೂಹದಿಂದ ಕೂಡಿದ್ದ ಮಾರನೆಯ ರಾತ್ರಿಯು ಕಳೆದು ಸೂರ್ಯೋದಯವಾಯಿತು. ಆಗ ರಾಜಕಾರ್ಯವನ್ನು ನಿರ್ವಹಿಸತಕ್ಕ ಮಾರ್ಕಂಡೇಯ, ಮೌದ್ಗಲ್ಯ, ವಾಮದೇವ, ಕಾಶ್ಯಪ, ಕಾತ್ಯಾಯನ, ಗೌತಮ, ಜಾಬಾಲಿ ಮೊದಲಾದ ಋಷಿಗಳು ವಸಿಷ್ಠಮುನೀಶ್ವರರನ್ನು ಮುಂದಿಟ್ಟುಕೊಂಡು ಅರಮನೆಗೆ ಬಂದು ಪ್ರಧಾನಿಗಳನ್ನು ಕಂಡರು. ಅನಂತರ ಅವರೆಲ್ಲರೂ ವಸಿಷ್ಠರನ್ನು ಕುರಿತು ಹೀಗೆಂದರು: "ವಸಿಷ್ಠರೆ, ಈ ಒಂದು ರಾತ್ರಿ ಅತ್ಯಂತ ದುಃಖಾತಿಶಯದಿಂದ ನೂರು ವರ್ಷಗಳಂತೆ ಕಳೆಯಿತು. ದಶರಥರಾಯನು ಸ್ವರ್ಗಸ್ಥನಾದನು. ಇನ್ನು ಮುಂದೆ ನಡೆಯುವ ಕೃತ್ಯಗಳನ್ನು ನಡೆಯಿಸಬೇಕು. ಶ್ರೀರಾಮಲಕ್ಷ್ಮಣರು ವನವಾಸಕ್ಕೆ ಹೋದರು. ಭರತಶತ್ರುಘ್ನರು ಕೇಕಯದೇಶದಲ್ಲಿ ತಮ್ಮ ಸೋದರಮಾವನ ಮನೆಯಲ್ಲಿದ್ದಾರೆ. ಇಕ್ಷ್ವಾಕುವಂಶದ ಸಂಸ್ಥಾನಕ್ಕೆ ಪಟ್ಟವನ್ನು ಕಟ್ಟಿ ಒಬ್ಬನನ್ನು ನಿಲ್ಲಿಸಬೇಕು. ಇಲ್ಲದ ಪಕ್ಷದಲ್ಲಿ ಒಡೆಯನಿಲ್ಲದೆ ರಾಜ್ಯವು ಕೆಡುವುದು. ಅರಸನಿಲ್ಲದ ರಾಜ್ಯದಲ್ಲಿ ವರುಣನು ಮಳೆಗರೆಯನು. ಮಳೆಯಿಲ್ಲದಿದ್ದರೆ ಕೃಷಿಯಾಗದು. ರಾಜ್ಯದಲ್ಲಿ ಅರಸನಿಲ್ಲದಿದ್ದರೆ ಮಕ್ಕಳು ತಾಯಿತಂದೆಗಳ ಮಾತನ್ನು ಕೇಳರು. ಸ್ತ್ರೀಯರು ಪುರುಷರ ಮಾತನ್ನು ಕೇಳರು. ಅರಸನಿಲ್ಲದ ರಾಜ್ಯದಲ್ಲಿ ಧನವು ನಿಲ್ಲದು. ಸ್ತ್ರೀಯರು ಸದ್ವರ್ತನದಲ್ಲಿ ನಡೆಯರು. ಶ್ರೀರಾಮನು ವನವಾಸಕ್ಕೆ ಹೋಗಿ ದಶರಥರಾಯನೂ ಸ್ವರ್ಗಸ್ಥನಾಗಿ ರಾಜ್ಯಕ್ಕೆ ಒಡೆಯರಿಲ್ಲದಿದ್ದರೆ ದೊಡ್ಡ ಆಪತ್ತು ಬರುವುದು. ಅರಸನಿಲ್ಲದ ರಾಜ್ಯದಲ್ಲಿ ಜನರು ಅನ್ಯೋನ್ಯವಾಗಿರರು. ವನಗಳು ಪುಷ್ಪಿಸವು. ಅರಸನಿಲ್ಲದ ರಾಜ್ಯದಲ್ಲಿ ಬ್ರಾಹ್ಮಣರು ವ್ರತನಿಯಮಗಳಿಂದ ಯಾಗಾದಿ ಸತ್ಕರ್ಮಗಳನ್ನು ಮಾಡರು.

ಅಂಥ ರಾಜ್ಯದಲ್ಲಿ ಯಾಗವನ್ನು ಮಾಡಿಸುವ ಬ್ರಾಹ್ಮಣರು ತಮಗೆ ದಕ್ಷಿಣೆ ಹಸ್ತಗತವಾದಕೂಡಲೆ ಯಜಮಾನನನ್ನು ಉದಾಸೀನಮಾಡಿ ಬಿಟ್ಟುಬಿಡುವರು. ನಟರು ನರ್ತಕರು ಗಾಯಕರು ಮೊದಲಾದ ಜನರು ಸಂತೋಷವನ್ನುಂಟುಮಾಡಲಾರರು. ಪುರಾಣ ಪುಣ್ಯಕಥೆಗಳನ್ನು ಅಭ್ಯಾಸ ಮಾಡಿದವರು ತಮ್ಮ ಚಾತುರ್ಯದಿಂದ ಪರರಿಗೆ ಸಂತೋಷಮಾಡಲಾರರು. ಅರಸನಿಲ್ಲದ ರಾಜ್ಯದಲ್ಲಿ ಹೆಣ್ಣು ಮಕ್ಕಳು ಸರ್ವಾಭರಣಭೂಷಿತರಾಗಿ ವಿನೋದಾರ್ಥವಾಗಿ ಉದ್ಯಾನವನಕ್ಕೆ ಹೋಗಿ ಸಾಯಂಕಾಲ ದಲ್ಲಿ ತಿರುಗಿ ಬರುವಂತಿಲ್ಲ. ಕಾಮುಕರಾದ ಪುರುಷರು ಉತ್ತಮಾಶ್ವಗಳನ್ನೇರಿಕೊಂಡು ತಮ್ಮ ಸ್ತ್ರೀಸಮೇತರಾಗಿ ವನಕ್ಕೆ ಹೋಗುವಂತಿಲ್ಲ. ಕೋಮಟಿಗರೂ ದ್ರವ್ಯಸಂಪನ್ನರಾದವರೂ ವ್ಯಾಪಾರ ವಿಲ್ಲದೆ ತಮ್ಮ ಮನೆಯ ಬಾಗಿಲುಗಳನ್ನು ಮುಚ್ಚಿಕೊಂಡು ಮಲಗುವರು. ಮದ್ದಾನೆಗಳು ಘಂಟೆಯನ್ನು ಕಟ್ಟಿಕೊಂಡು ಚೌಬೀದಿಗಳಲ್ಲಿ ಬರುವಹಾಗಿಲ್ಲ. ಬಿಲ್ಲುಸಾಧನೆಮಾಡುವ ಪಟುಭಟ ರಿರಲಾರರು. ವ್ಯಾಪಾರವನ್ನು ಮಾಡುವ ವೈಶ್ಯರು ದೂರ ಹೋಗಿ ತಮ್ಮ ವ್ಯಾಪಾರವನ್ನು ನಡೆಯಿಸಿ ಸುಖವಾಗಿ ಬರಲಾರರು. ಆತ್ಮಜ್ಞಾನಿಗಳಾಗಿ ವಿರಕ್ತರಾಗಿ ಎಲ್ಲಿ ಸಾಯಂಕಾಲವಾದರೆ ಅಲ್ಲಿ ಮಲಗುವಂಥ ಮುನಿಗಳು ಸಂಚರಿಸುವಹಾಗಿಲ್ಲ. ಇದ್ದ ವಸ್ತುಗಳನ್ನು ರಕ್ಷಿಸಿಕೊಂಡು ಮತ್ತೆ ಬೇಕಾದ ವಸ್ತುಗಳನ್ನು ಸಂಪಾದಿಸುವುದಕ್ಕಿಲ್ಲ. ಸೇನೆಯು ಶತ್ರುಗಳನ್ನು ಕೊಂದು ಜಯಿಸುವಂತಿಲ್ಲ. ಉತ್ತಮಾಶ್ವಗಳನ್ನು ಕಟ್ಟಿಕೊಂಡು ರಥಾರೂಢರಾಗಿ ಸಂಚರಿಸುವಂತಿಲ್ಲ. ಸಂನ್ಯಾಸಾಶ್ರಮದಲ್ಲಿರು ವವರು ವನದಲ್ಲಿ ವಾಸಮಾಡುತ್ತ ಸುಖವಾಗಿರುವಹಾಗಿಲ್ಲ. ಗೃಹಸ್ಥರು ತಮ್ಮ ಕಾರ್ಯಾರ್ಥವಾಗಿ ಗಂಧಪುಷ್ಪಾಕ್ಷತೆ ಮೋದಕಾದಿಗಳಿಂದ ತಮ್ಮ ಇಷ್ಟದೇವತಾರ್ಚನೆಯನ್ನು ನಿಯಮದಿಂದ ಮಾಡುವುದಕ್ಕಾಗುವುದಿಲ್ಲ. ರಾಜಕುಮಾರರು ಶ್ರೀಗಂಧಾನುಲೇಪನ ಮಾಡಿಕೊಂಡು ಶಿಖೆಗಳಲ್ಲಿ ಪುಷ್ಪಗಳನ್ನು ಧರಿಸಿಕೊಂಡು ಪುಷ್ಪಿತಗಳಾದ ಮರಗಳಂತೆ ಒಪ್ಪುವಹಾಗಿಲ್ಲ. ಅರಸನಿಲ್ಲದ ರಾಜ್ಯವು ಉದಕವಿಲ್ಲದ ನದಿಯಂತೆಯೂ ಹುಲ್ಲಿಲ್ಲದ ವನದಂತೆಯೂ ಕಾವಲಿಲ್ಲದ ಗೋಸಮೂಹದಂತೆಯೂ ಕಾಣುತ್ತದೆ. ರಥಕ್ಕೆ ಕುರುಹು ಧ್ವಜಪಟ. ಅಗ್ನಿಗೆ ಕುರುಹು ಧೂಮ. ರಾಜ್ಯಕ್ಕೆ ಕುರುಹು ಅರಸನು. ಅರಸನಿಲ್ಲದ ರಾಜ್ಯದಲ್ಲಿ ದೊಡ್ಡಮತ್ಸ್ಯಗಳು ಚಿಕ್ಕಮತ್ಸ್ಯಗಳನ್ನು ನುಂಗುವಂತೆ ಬಲವಂತ ರಾದವರು ತಮಗಿಂತಲೂ ಬಡವರಾದವರನ್ನು ನುಂಗಿಬಿಡುತ್ತಾರೆ. ತಮ್ಮ ಮೇರೆಮರ್ಯಾದೆ ಗಳನ್ನು ಮೀರಿ ಶಂಕಾತಂಕವಿಲ್ಲದೆ ಮಾಡಬಾರದ ಕೃತ್ಯವನ್ನು ಮಾಡುತ್ತ ಅಯೋಗ್ಯರಾದವರೇ ಪ್ರಭುತ್ವವನ್ನು ಮಾಡಲಾರಂಭಿಸುವರು. ಶರೀರಕ್ಕೆ ದೃಷ್ಟಿಯು ಹೇಗೆ ಪ್ರಧಾನವೋ ಹಾಗೆ ರಾಜ್ಯದ ಸದ್ವರ್ತನೆಗಳಿಗೆ ಅರಸನೇ ಪ್ರಧಾನನು. ಸತ್ಯಸ್ವರೂಪನೂ ಧರ್ಮಸ್ವರೂಪನೂ ಸತ್ಕುಲಾಚಾರ ವನ್ನು ನಡೆಯಿಸುವಂಥವನೂ ಸಮಸ್ತ ಜನರಿಗೂ ಹಿತೋಪದೇಶವನ್ನು ಮಾಡುವವನೂ ಅರಸನು. ರಾಜನು ಲೋಕದಲ್ಲಿ ಇಂದ್ರನು ಕೊಡುವ ಭೋಗವನ್ನು ಕೊಡುವನು. ಯಮನು ಮಾಡುವ ದಂಡವನ್ನು ಮಾಡುವನು. ವರುಣನಂತೆ ತಂಪುಮಾಡುವನು. ಕುಬೇರನಂತೆ ದ್ರವ್ಯವನ್ನು ಕೊಡುವನು. ಆದ್ದರಿಂದ ಅರಸನಿಲ್ಲದಿದ್ದರೆ ಅಂಧಕಾರವಿದ್ದಂತೆ ಲೋಕವೆಲ್ಲವೂ ಮುಂದುಗೆಡುವುದು. ಅರಸನಿದ್ದರೆ, ತಡಿಯು ಸಮುದ್ರವೇಗವನ್ನು ನಿಲ್ಲಿಸುವಂತೆ ಎಲ್ಲರನ್ನೂ ವಶಮಾಡಿಕೊಂಡು ಮೇರೆ ಮರ್ಯಾದೆಯಲ್ಲಿ ನಡೆಯಿಸುವನು. ರಾಜನಿಲ್ಲದ ರಾಜ್ಯವು ಅರಣ್ಯಕ್ಕೆ ಸಮಾನವು. ಆದ್ದರಿಂದ ಇಕ್ಷ್ವಾಕುವಂಶದಲ್ಲಿ ಜನಿಸಿದ ಒಬ್ಬ ಕುಮಾರನಿಗೆ ರಾಜ್ಯಾಧಿಪತ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಬೇಕು" ಎಂದು ಹೇಳಿದರು.

## ೬೮ ನೆಯ ಅಧ್ಯಾಯ

## ಪ್ರಧಾನಿಗಳು ಭರತನನ್ನು ಕರೆಯಲು ದೂತರನ್ನು ಕಳುಹಿಸಿದ್ದು

ಆಮೇಲೆ ವಸಿಷ್ಠಮುನೀಶ್ವರನು ಪ್ರಧಾನರನ್ನು ಕುರಿತು "ಎಲೈ ಸಿದ್ಧಾರ್ಥ, ವಿಜಯ, ಸುಮಂತ್ರ, ಜಯಂತ, ಅಶೋಕ, ನಮ್ಮ ಮಾತನ್ನು ಕೇಳಿರಿ. ನೀವು ನಿಮ್ಮ ದುಃಖವನ್ನು ಬಿಟ್ಟು ಶೀಘ್ರವಾಗಿ ಅರಮನೆಗೆ ಹೋಗಿ ಊಳಿಗದವರನ್ನು ವಾಯುವೇಗವುಳ್ಳ ಕುದುರೆಗಳಮೇಲೆ ಹತ್ತಿಸಿ ತನ್ನ ಸೋದರಮಾವನ ಮನೆಯಲ್ಲಿರುವಂಥ ಭರತನ ಸಮೀಪಕ್ಕೆ ಕಳುಹಿಸಿರಿ. ನಾವೆಲ್ಲರೂ ಕೂಡಿಕೊಂಡು ಆತನ ಆರೋಗ್ಯಸ್ಥಿತಿಯನ್ನು ವಿಚಾರಿಸಿದೆವೆಂದೂ ಆತನು ಶೀಘ್ರವಾಗಿ ಪ್ರಯಾಣವಾಗಿ ಹೊರಡಬೇಕೆಂದೂ ಹೇಳಿ ಶ್ರೀರಾಮನು ವನಕ್ಕೆ ಹೋದುದನ್ನೂ ದಶರಥರಾಯನು ಸ್ವರ್ಗಸ್ಥನಾದ ವೃತ್ತಾಂತವನ್ನೂ ಹೇಳದೆ ಭರತನನ್ನು ಕರೆದುಕೊಂಡು ಬರಹೇಳಿರಿ. ಭರತನಿಗೂ ಆತನ ಸೋದರಮಾವನಿಗೂ ಅನೇಕ ವಸ್ತ್ರಾಭರಣಗಳನ್ನು ಕೊಟ್ಟು ದೂತರನ್ನು ಕಳುಹಿಸಿರಿ" ಎಂದು ಹೇಳಿದನು.

ಆ ಪ್ರಧಾನರು ದೂತರನ್ನು ಕರೆಯಿಸಿ ಅವರಿಗೆ ಹಾಗೆಯೇ ಹೇಳಿ ಕಳುಹಿಸಿದರು. ಆಗ ದೂತರು ತಮ್ಮ ಮನೆಗಳಿಗೆ ಹೋಗಿ ತಮ್ಮ ಕಾರ್ಯಗಳನ್ನು ತೀರಿಸಿಕೊಂಡು ಕುದುರೆಗಳನ್ನು ಹತ್ತಿ ಈಶಾನ್ಯದಿಕ್ಕಿಗೆ ಹೊರಟರು. ಅವರು ಮಾಲಿನಿ ಎಂಬ ನದಿಯನ್ನು ದಾಟಿ ಹಸ್ತಿನಾಪಟ್ಟಣದ ಬಳಿ ಗಂಗೆಯನ್ನು ದಾಟಿ ಅಲ್ಲಿಂದ ಪಡುವಲಾಗಿ ತಿರುಗಿ ಪಾಂಚಾಲದೇಶಕ್ಕೆ ಹೋಗಿ ಕುರುಜಾಂಗಲವನ್ನು ಕಳೆದು ನಿರ್ಮಲೋದಕವುಳ್ಳ ಪವಿತ್ರವಾದ ನದಿಗಳನ್ನು ನೋಡುತ್ತ ಮುಂದೆ ಶರದಂಡನದಿಯ ಸಮೀಪಕ್ಕೆ ಹೋಗಿ ಆ ನದೀತೀರದಲ್ಲಿ ಬೇಡಿದ ವರವನ್ನು ಕೊಡುವ ದೇವತಾಯೋಗ್ಯವಾದ ಒಂದು ವೃಕ್ಷವನ್ನು ಕಂಡರು. ಅದಕ್ಕೆ ನಮಸ್ಕಾರವನ್ನು ಮಾಡಿ ಕುಲಿಂಗಪುರಕ್ಕೆ ಹೋಗಿ ಅಲ್ಲಿಂದ ಅಭಿಕಾಲವೆಂಬ ಗ್ರಾಮವನ್ನು ತಲಪಿ ಇಕ್ಷುಮತಿ ಎಂಬ ನದಿಯನ್ನು ದಾಟಿದರು. ಅಲ್ಲಿ ಬೊಗಸೆಗಳಿಂದ ಉದಕಪಾನಮಾಡುತ್ತಿದ್ದ ಬ್ರಾಹ್ಮಣರನ್ನು ಕಂಡು ಅಭಿವಂದಿಸಿ ಆ ದೂತರು ಬಾಹ್ಲೀಕದೇಶಕ್ಕೆ ಹೋಗಿ ಅಲ್ಲಿ ಸಾಕ್ಷಾತ್ ಪರಮಪುರುಷನಿಗೆ ಆವಾಸಸ್ಥಾನವಾದ ಸುದಾಮವೆಂಬ ಪರ್ವತವನ್ನು ನೋಡಿ ಮುಂದೆ ವಿಶಾಲವಾದ ಶಾಲ್ಮಲೀನದಿಯನ್ನೂ ಪವಿತ್ರವಾದ ಸರೋವರಗಳನ್ನೂ ಕಾಡಾನೆ ಶರಭ ಮೊದಲಾದ ಮೃಗಗಳನ್ನೂ ನೋಡುತ್ತ ಬಹುದೂರ ಹೋಗಿ ಬಳಲಿದ ಕುದುರೆಗಳುಳ್ಳವರಾಗಿ ಅನೇಕ ಗಿರಿಗಳನ್ನೂ ಪಟ್ಟಣಗಳನ್ನೂ ದಾಟಿ ಗಿರಿವ್ರಜವೆಂಬ ಕೇಕಯರಾಯನ ಪಟ್ಟಣವನ್ನು ಪ್ರವೇಶಿಸಿದರು.



## ೬೯ ನೆಯ ಅಧ್ಯಾಯ

## ಭರತನ ದುಃಸ್ವಪ್ನ

ಈ ಪ್ರಕಾರದಲ್ಲಿ ದಶರಥರಾಯನ ಪ್ರಧಾನರು ಕಳುಹಿಸಿದ ದೂತರು ಕೇಕಯನ ಪಟ್ಟಣವನ್ನು ಪ್ರವೇಶಿಸಿದ ರಾತ್ರಿಯಲ್ಲಿ ಭರತನು ದುಃಸ್ವಪ್ನವನ್ನು ಕಂಡು ಬೆದರಿ ಚಿಂತಾಕ್ರಾಂತನಾಗಿದ್ದನು.

ಮೂರನೆಯ ದಿವಸ ಮನೋವ್ಯಥೆಯಿಂದ ಸಭೆಯಲ್ಲಿ ನಡೆಯುತ್ತಿದ್ದ ಮಾತುಕಥೆಗಳನ್ನೂ ನೃತ್ಯವಾದ್ಯ ಗಾನಸರಸಪ್ರಸಂಗಗಳನ್ನೂ ಸಖರ ಹಾಸ್ಯಗೋಷ್ಠಿಗಳನ್ನೂ ಎಂದಿನಂತೆ ಕೇಳದೆ ಸಂತೋಷವಿಲ್ಲದಿರಲು ಅದನ್ನು ಕಂಡು ಆತನ ಮಿತ್ರರು "ಎಲೈ ಪ್ರಿಯಸಖನಾದ ಭರತನೆ, ನಿನ್ನ ಮನಸ್ಸಿನಲ್ಲಿ ಏಕೆ ಚಿಂತೆಯುಂಟಾಗಿದೆ ? ನಿನ್ನ ಮನೋವ್ಯಥೆಯನ್ನು ಹೇಳು" ಎಂದು ಕೇಳಿದರು.

ಭರತನು "ಮಿತ್ರರೆ, ನನ್ನ ಮನಸ್ಸಿಗೆ ವ್ಯಥೆಯು ಬಂದ ನಿಮಿತ್ತವನ್ನು ಕೇಳಿರಿ : ನಾನು ಒಂದು ದುಃಸ್ವಪ್ನವನ್ನು ಕಂಡೆನು : ಆ ಸ್ವಪ್ನದಲ್ಲಿ ನನ್ನ ತಂದೆಯಾದ ದಶರಥರಾಯನು ಕಪ್ಪಾದ ಶರೀರವುಳ್ಳವನಾಗಿ ತಲೆಯನ್ನು ಕೆದರಿಕೊಂಡು ಒಂದು ಪರ್ವತದ ಕೋಡುಗಲ್ಲಿನಿಂದ ಅದರ ಕೆಳಗಿದ್ದ ಗೋಮಯದ ಕೆಸರಿನ ಹಳ್ಳದಲ್ಲಿ ಬಿದ್ದು ತೇಲಾಡುತ್ತ ತೈಲವನ್ನು ಕುಡಿಯುತ್ತ ಅಡಿಗಡಿಗೆ ನಗುತ್ತ ತಲೆಕೆಳಗಾಗಿ ಕೈಮೈಗೆಲ್ಲ ತೈಲವನ್ನು ಹಚ್ಚಿಕೊಂಡು ಎಣ್ಣೆಯಲ್ಲಿ ಮುಳುಗಿರುವಹಾಗೆ ಕಂಡೆನು. ಆಮೇಲೆ ನೀರಿಲ್ಲದೆ ಬತ್ತಿದ ಸಮುದ್ರವನ್ನೂ ಅಂತರಿಕ್ಷಮಾರ್ಗದಿಂದ ಭೂಮಿಯಲ್ಲಿ ಬಿದ್ದ ಚಂದ್ರ ಮಂಡಲವನ್ನೂ ಕಂಡೆನು. ಮಹತ್ತಾದ ಅಂಧಕಾರವು ಭೂಮಂಡಲವನ್ನು ಆವರಿಸಿಕೊಂಡಹಾಗೂ ಕಂಡೆನು. ದಶರಥರಾಯನು ಏರುತ್ತಿದ್ದ ಆನೆಯ ಕೋರೆಹಲ್ಲುಗಳು ತುಂಡುತುಂಡಾಗಿ ಬಿದ್ದದ್ದನ್ನೂ ಉರಿಯುತ್ತಿದ್ದ ಅಗ್ನಿಜ್ವಾಲೆಯನ್ನೂ ಭೂಮಿಯು ಒಡೆದು ವಿಭಾಗವಾದದ್ದನ್ನೂ ನಾನಾಪ್ರಕಾರವಾದ ಒಣಗಿದ ಮರಗಳಿಂದ ಹೊಗೆ ಏಳುತ್ತಿದ್ದ ಪರ್ವತಗಳನ್ನೂ ಒಡೆದುಬಿದ್ದ ಪರ್ವತಗಳನ್ನೂ ಕಂಡೆನು. ಕಬ್ಬಿಣದ ಮಣೆಯಮೇಲೆ ಕುಳಿತುಕೊಂಡು ಕಪ್ಪಿನ ಹೊದಿಕೆಯನ್ನು ಹೊದ್ದುಕೊಂಡಿದ್ದ ದಶರಥ ರಾಯನನ್ನು ಕಂಡು ಕಪ್ಪಾದ ಸ್ತ್ರೀಯರು ಆತನ ಎದುರಾಗಿ ನಗುವುದನ್ನು ಕಂಡೆನು. ಆತನು ಕೆಂಪಾದ ಮಾಲೆಗಳನ್ನು ಧರಿಸಿಕೊಂಡು ಗಾರ್ದಭಗಳಿಂದ ಮೋಳೈಸಿದ ರಥವನ್ನು ಹತ್ತಿಕೊಂಡು ಶೀಘ್ರದಲ್ಲಿ ನಡೆಯಿಸುತ್ತ ದಕ್ಷಿಣಮುಖವಾಗಿ ಹೋಗುತ್ತಿರಲು ಆತನ ಎದುರಾಗಿ ಕೆಂಪಾದ ವಸ್ತ್ರವನ್ನುಟ್ಟುಕೊಂಡು ನಗುತ್ತ ಕೋರೆದಾಡೆಗಳಿಂದ ಭಯಂಕರವಾದ ಮುಖವುಳ್ಳ ಒಬ್ಬ ರಾಕ್ಷಸಿಯು ಸೆರಗುಹಿಡಿದು ಸೆಳೆಯುತ್ತಿದ್ದುದನ್ನು ಕಂಡೆನು. ಈ ಪ್ರಕಾರದಲ್ಲಿ ನಾನು ಸ್ವಪ್ನವನ್ನು ಕಂಡು ರಾತ್ರಿಯನ್ನು ಭಯದಿಂದ ಕಳೆದೆನು. ಈ ಸ್ವಪ್ನವು ದಶರಥರಾಯನಾಗಲಿ ಶ್ರೀರಾಮನಾಗಲಿ ನಾನಾಗಲಿ ಲಕ್ಷ್ಮಣನಾಗಲಿ ಲೋಕಾಂತರವನ್ನೈದುವುದಕ್ಕೆ ಸೂಚಕವಾಗಿದೆ. ಯಾವನು ಗಾರ್ದಭಯುಕ್ತವಾದ ರಥದಲ್ಲಿ ಕುಳಿತು ಹೋಗುವಂತೆ ತೋರುವನೋ ಆತನ ಚಿತೆಯ ಧೂಮವು ಶೀಘ್ರದಲ್ಲಿಯೇ ಕಾಣಿಸುವುದು. ಇಂಥ ದುಃಸ್ವಪ್ನವನ್ನು ಕಂಡಕಾರಣ ಕಂಗೆಟ್ಟು ದೀನನಾಗಿದ್ದೇನೆ. ನನ್ನ ಗಂಟಲು ಒಣಗುತ್ತಿದೆ. ಮನಸ್ಸು ಸ್ವಸ್ಥವಿಲ್ಲ ಭಯಕಾರಣವನ್ನು ಕಾಣದಿದ್ದರೂ ಭಯವುಂಟಾಗಿದೆ. ನನ್ನ ಸ್ವರಗುಂದಿದೆ. ನನ್ನ ತನುಕಾಂತಿಗುಂದಿದೆ. ನನ್ನ ಶರೀರವು ನನಗೆ ಅಸಹ್ಯ ವಾಗಿದೆ. ಇದಕ್ಕೆ ಕಾರಣವನ್ನು ಕಾಣೆನು. ಹಿಂದೆಂದೂ ಕಾಣದೆ ಇದ್ದ, ಯೋಚಿಸಲೂ ಆಗದಂಥ ವಿರೂಪವುಳ್ಳ ದಶರಥರಾಯನನ್ನು ಸ್ವಪ್ನದಲ್ಲಿ ಕಂಡು ನಾನು ವ್ಯಥೆಪಡುತ್ತಿದ್ದೇನೆ. ಯಾವ ವಿನೋದ ಗೋಷ್ಠಿಗಳಿಂದಲೂ ನನ್ನ ಚಿತ್ತವು ನೆಮ್ಮದಿಯನ್ನು ಪಡೆಯಲಾರದು" ಎಂದು ಹೇಳಿದನು.



## ೭೦ ನೆಯ ಅಧ್ಯಾಯ

# ಅಯೋಧ್ಯಾಪಟ್ಟಣಕ್ಕೆ ಭರತನ ಪ್ರಯಾಣ

ಈ ರೀತಿಯಲ್ಲಿ ಭರತನು ತನ್ನ ಪ್ರಿಯಸಖರೊಡನೆ ತಾನು ಕಂಡ ಸ್ವಪ್ನವನ್ನು ಹೇಳುತ್ತಿರುವ ಸಮಯದಲ್ಲಿ ಅಯೋಧ್ಯಾಪಟ್ಟಣದಿಂದ ಬಂದ ಊಳಿಗದವರು ಬೆವರಿದ ಕುದುರೆಗಳುಳ್ಳವರಾಗಿ ಬೆಳಗಿನ ಜಾವದಲ್ಲಿ ಕೇಕಯರಾಯನ ಪಟ್ಟಣದ ಬಾಗಿಲಿಗೆ ಹೋಗಿ ತಾವು ಬಂದ ವೃತ್ತಾಂತವನ್ನು ಆ ರಾಯನಿಗೆ ಹೇಳಿಕಳುಹಿಸಿದರು. ಅನಂತರ ಅರಮನೆಯ ಒಳಗೆ ಹೋಗಿ ಆ ರಾಯನನ್ನೂ ಭರತನನ್ನೂ ಕಂಡರು. ಭರತನು ಅವರು ಬಂದ ಕಾರ್ಯವೇನೆಂದು ಕೇಳಲು ಅವರು ಆತನಿಗೆ ಸಾಷ್ಟಾಂಗವೆರಗಿ "ಎಲೈ ಸ್ವಾಮಿ, ಪುರೋಹಿತನಾದ ವಸಿಷ್ಠಮುನೀಶ್ವರನೂ ಪ್ರಧಾನಿಗಳೂ ನಿಮ್ಮ ಕ್ಷೇಮವನ್ನು ವಿಚಾರಿಸಿ ನಿನ್ನನ್ನು ಶೀಘ್ರದಲ್ಲಿ ಕರೆದುಕೊಂಡು ಬರಹೇಳಿದರು. ಅಲ್ಲಿ ನಿನಗೆ ಅವಶ್ಯವಾದ ಕಾರ್ಯವುಂಟು. ನೀನು ಶೀಘ್ರವಾಗಿ ಹೊರಡು. ನಿನ್ನ ಸೋದರಮಾವನಿಗೆ ಅನೇಕ ಅಪೂರ್ವವಾದ ಆಭರಣಗಳನ್ನೂ ಇಪ್ಪತ್ತುಕೋಟಿ ದ್ರವ್ಯಗಳನ್ನೂ ಕಳುಹಿಸಿದ್ದಾರೆ. ಅವನ್ನು ಆತನಿಗೆ ಕೊಡಿಸು. ನಿನಗೆ ಹತ್ತುಕೋಟಿ ದ್ರವ್ಯವನ್ನು ಕಳುಹಿಸಿದ್ದಾರೆ. ಅದನ್ನು ನೀನು ತೆಗೆದುಕೊಂಡು ನಿನ್ನ ಸ್ನೇಹಿತರಿಂದ ಬೀಳ್ಕೊಂಡು ಹೊರಡು" ಎಂದು ಹೇಳಿದರು.

ಭರತನು ಅವರಿಗೆ ಅನೇಕ ಸತ್ಕಾರಗಳನ್ನು ಮಾಡಿ ಅವರನ್ನು ಕುರಿತು "ಎಲೈ ದೂತರುಗಳಿರಾ, ನಮ್ಮ ತಂದೆಯಾದ ದಶರಥರಾಯನೂ ಶ್ರೀರಾಮನೂ ಲಕ್ಷ್ಮಣನೂ ಸುಖವಾಗಿದ್ದಾರೆಯೆ? ಅತ್ಯಂತ ಧರ್ಮರಹಸ್ಯವನ್ನು ಬಲ್ಲವಳೂ ಕೀರ್ತಿಶಾಲಿಯೂ ಆದ ಕೌಸಲ್ಯಾದೇವಿಯು ಸುಖವಾಗಿದ್ದಾಳೆಯೆ? ಲಕ್ಷ್ಮಣ ಶತ್ರುಘ್ನರ ತಾಯಿಯಾದ ಸುಮಿತ್ರಾದೇವಿಯು ಚೆನ್ನಾಗಿದ್ದಾಳೆಯೆ? ಯಾವಾಗಲೂ ಕೋಪದಿಂದ ಜಗಳವಾಡುತ್ತ ವಿವೇಕವಿಲ್ಲದವಳಾದ ನನ್ನ ತಾಯಿ ಕೈಕೇಯಿದೇವಿಯು ಚೆನ್ನಾಗಿದ್ದಾಳೆಯೆ?" ಎಂದು ಎಲ್ಲರ ಕುಶಲವೃತ್ತಾಂತಗಳನ್ನೂ ಕೇಳಿದನು.

ಆ ದೂತರು ಕೈಮುಗಿದುಕೊಂಡು ವಿನಯದಿಂದ "ಸ್ವಾಮಿ, ಎಲ್ಲರೂ ಕುಶಲರಾಗಿದ್ದಾರೆ. ಲಕ್ಷ್ಮಿಯು ನಿನ್ನನ್ನು ವರಿಸಿದ್ದಾಳೆ" ಎಂದು ಹೇಳಿದರು.

ಭರತನು "ದೂತರೆ, ಒಳ್ಳೆಯದು. ನಾನು ನನ್ನ ಮಾತಾಮಹನನ್ನೂ ಸೋದರಮಾವನನ್ನೂ ಕೇಳಿ ಬರುತ್ತೇನೆ" ಎಂದು ಹೇಳಿ ಕೇಕಯರಾಯನ ಮನೆಗೆ ಹೋಗಿ "ಮಾತಾಮಹ, ನಮ್ಮ ಗುರುವಾದ ವಸಿಷ್ಠಮುನೀಶ್ವರನೂ ಪ್ರಧಾನರೂ ನನ್ನನ್ನು ಬರಹೇಳಿ ದೂತರನ್ನು ಕಳುಹಿಸಿದ್ದಾರೆ. ನಾನು ನಮ್ಮ ಊರಿಗೆ ಹೋಗಿ ಬರುತ್ತೇನೆ" ಎಂದು ಹೇಳಿದನು.

ಆ ರಾಯನು "ಒಳ್ಳೆಯದು. ನೀನು ಸುಖವಾಗಿ ಹೋಗಿ ಬಾ. ನಿನ್ನ ತಾಯಿಯ ಸಂಗಡ ಆಕೆಯ ಕುಶಲವನ್ನು ಕೇಳಿದೆನೆಂದು ಹೇಳು. ನಿನ್ನ ತಂದೆಯಾದ ದಶರಥರಾಯನೊಡನೆ ಯೋಗಕ್ಷೇಮವನ್ನು ವಿಚಾರಿಸಿದೆನೆಂದು ಹೇಳು. ನಿನ್ನ ಅಣ್ಣತಮ್ಮಂದಿರಾದ ರಾಮಲಕ್ಷ್ಮಣರಿಗೆ ಅವರ ಯೋಗಕ್ಷೇಮಗಳನ್ನು ವಿಚಾರಿಸಿದೆನೆಂದು ಹೇಳು" ಎಂದು ಹೇಳಿ ನಾನಾವಿಧವಾದ ರತ್ನಕಂಬಳಿಗಳನ್ನೂ ಭೂಷಣಗಳನ್ನೂ ಸಾವಿರದ ಆರುನೂರು ಉತ್ತಮಾಶ್ವಗಳನ್ನೂ ಅನೇಕ ದ್ರವ್ಯವನ್ನೂ ಕೊಟ್ಟು ಸತ್ಕರಿಸಿ ತನಗೆ ವಿಶ್ವಾಸಿಗಳಾದ ಪ್ರಧಾನರನ್ನು ಕರೆದು ರಥವನ್ನೂ ಅನೇಕ ಬಲಗಳನ್ನೂ ಕೂಡಿಸಿ ಆತನನ್ನು ಅಯೋಧ್ಯಾಪಟ್ಟಣದಲ್ಲಿ ಬಿಟ್ಟು ಬರಹೇಳಿ ಆಜ್ಞಾಪಿಸಿದನು.

ಆಮೇಲೆ ಭರತನು ತನ್ನ ಸೋದರಮಾವನ ಮನೆಗೆ ಹೋಗಿ ಆ ವೃತ್ತಾಂತವನ್ನು ಹೇಳಲು ಯುಧಾಜಿತ್ತೆಂಬ ಆ ರಾಯನು ಉತ್ತಮಕುಲದಲ್ಲಿ ಹುಟ್ಟಿದ ಮದ್ದಾನೆಗಳನ್ನೂ ವೇಗಶಾಲಿಗಳಾದ ಹೇಸರಕತ್ತೆಗಳನ್ನೂ ಅನೇಕ ದ್ರವ್ಯಗಳನ್ನೂ ಮನೆಯಲ್ಲಿ ಸಾಕಿದ ಮಹಾಶರೀರದ ನಾಯಿಗಳನ್ನೂ ಉಚಿತವಾಗಿ ಕೊಟ್ಟುಕಳುಹಿಸಿದನು. ಭರತನು ಅವರು ಕೊಟ್ಟ ವಸ್ತುಗಳನ್ನು ತಾನು ದುಃಸ್ವಪ್ನವನ್ನು ಕಂಡ ಮನೋವ್ಯಥೆಯಿಂದಲೂ ದೂತರು ಕರೆಯಬಂದದ್ದರಿಂದ ಶೀಘ್ರವಾಗಿ ಹೋಗಬೇಕೆಂಬ ಬುದ್ಧಿಯಿಂದಲೂ ಲೆಕ್ಕಿಸಲಿಲ್ಲ. ಅವನು ಅಲ್ಲಿಂದ ಹೊರಟು ಕೇಕಯರಾಜನ ಅಂತಃಪುರಕ್ಕೆ ಹೋಗಿ ಆ ರಾಯನ ಅನುಮತಿಯನ್ನು ಮತ್ತೊಮ್ಮೆ ಪಡೆದು ಶತ್ರುಘ್ನಸಮೇತನಾಗಿ ರಥವನ್ನೇರಿಕೊಂಡು ಕೇಕಯರಾಯನ ಪ್ರಧಾನರೊಡನೆ ಚತುರಂಗಬಲಸಮೇತನಾಗಿ ಸಿದ್ಧಪುರುಷನು ಅಮರಾವತಿಯಿಂದ ಹೊರಡುವಂತೆ ಗಿರಿವ್ರಜದಿಂದ ಅಯೋಧ್ಯಾಪಟ್ಟಣಕ್ಕೆ ತೆರಳಿದನು.



## ೭೧ ನೆಯ ಅಧ್ಯಾಯ

# ಅಯೋಧ್ಯೆಗೆ ಭರತನ ಆಗಮನ

ಅನಂತರ ಭರತನು ರಾಜಗೃಹದಿಂದ ಹೊರಟು ಸುದಾಮ ಮತ್ತು ಹ್ಲಾದಿನಿ ಎಂಬ ನದಿಗಳನ್ನು ದಾಟಿ ಮುಂದೆ ಹೋಗಿ ಶತದ್ರುನದಿಯನ್ನು ದಾಟಿದನು. ಏಲಾಧಾನವೆಂಬ ಗ್ರಾಮದ ಮೂಲಕ ಅಪರಪರ್ಪಟಗಳೆಂಬ ಗ್ರಾಮಸಮುದಾಯವನ್ನು ಕಳೆದು ಶಿಲಾನದಿಯನ್ನು ದಾಟಿ ಆಗ್ನೇಯದಿಕ್ಕಿಗೆ ನಡೆದು ಶಲ್ಯಕರ್ತನವೆಂಬ ಗ್ರಾಮವನ್ನು ದಾಟಿದನು. ಮುಂದೆ ಅನೇಕ ಪರ್ವತ ಗಳನ್ನು ಹಾಯ್ದು ಚೈತ್ರರಥವೆಂಬ ವನಕ್ಕೆ ಬಂದನು. ಅಲ್ಲಿಂದ ಗಂಗಾನದಿಯ ಒಂದು ಶಾಖಾ ನದಿಯೂ ಸರಸ್ವತಿಯೂ ಸೇರುವ ಸಂಗಮಸ್ಥಳವನ್ನು ಹಾಯ್ದು ಮತ್ಸ್ಯದೇಶದ ಮೂಲಕ ಭಾರುಂಡವನಕ್ಕೆ ಬಂದನು. ಅಲ್ಲಿಂದ ಕುಲಿಂಗಾನದಿಯನ್ನು ದಾಟಿ ಯಮುನಾತೀರಕ್ಕೆ ಬಂದು ಸೈನ್ಯಕ್ಕೆ ವಿಶ್ರಮಿಸುವುದಕ್ಕಾಗಿ ಅನುಜ್ಞೆಕೊಟ್ಟನು. ಅಲ್ಲಿ ಕುದುರೆಗಳಿಗೆ ಸ್ನಾನಮಾಡಿಸಿ ನೀರು ಹುಲ್ಲು ಮುಂತಾದವುಗಳನ್ನು ಕೊಡಿಸಿ ಸ್ವಲ್ಪಕಾಲ ವಿಶ್ರಮಿಸಿದನು. ಅನಂತರ ಭರತನು ಒಂದು ಮಹಾರಣ್ಯವನ್ನು ದಾಟಿ ಪ್ರಾಗ್ವಟವೆಂಬ ಪಟ್ಟಣದ ಬಳಿಯಲ್ಲಿ ಗಂಗಾನದಿಯನ್ನು ಉತ್ತರಿಸಿ ಕುಟಿಕೋಷ್ಠಿಕೆಯೆಂಬ ನದಿಯನ್ನು ದಾಟಿದನು. ಅವನು ಸೈನ್ಯಸಮೇತನಾಗಿ ಜಂಬೂಪ್ರಸ್ಥಕ್ಕೆ ಬಂದು ವರೂಥವೆಂಬ ಗ್ರಾಮವನ್ನು ಸಮೀಪಿಸಿದನು. ಅದರ ಬಳಿಯಲ್ಲಿ ಆ ರಾತ್ರಿ ವಿಶ್ರಮಿಸಿ ಮಾರನೆಯ ದಿನ ಉಜ್ಜಿಹಾನವೆಂಬ ನಗರಿಗೆ ಬಂದನು. ಅಲ್ಲಿ ಸೈನ್ಯವನ್ನು ಕುರಿತು "ನೀವು ಹಿಂದಿನಿಂದ ಮೆಲ್ಲಗೆ ಬರಬಹುದು" ಎಂದು ಅನುಮತಿಯನ್ನಿತ್ತು ತಾನು ವೇಗಶಾಲಿಗಳಾದ ಕುದುರೆಗಳನ್ನು ಹೂಡಿದ ರಥವನ್ನು ಏರಿದನು. ಅದರಲ್ಲಿ ಶತ್ರುಘ್ನನೊಡನೆ ಅಯೋಧ್ಯಾಭಿಮುಖವಾಗಿ ಬೇಗಬೇಗನೆ ಪ್ರಯಾಣಮಾಡಿದನು. ಅವನು ಆ ದಿನ ಸರ್ವತೀರ್ಥವೆಂಬ ಗ್ರಾಮದಲ್ಲಿ ರಾತ್ರಿ ವಿಶ್ರಮಿಸಿದನು. ಪ್ರಾತಃಕಾಲ ಅಲ್ಲಿಂದ ಹೊರಟು ಅನೇಕ ನದಿಗಳನ್ನು ದಾಟಿ ಹಸ್ತಿಪೃಷ್ಠಗ್ರಾಮದ ಮೂಲಕ ಕುಟಿಕಾನದಿಯನ್ನು ದಾಟಿದನು. ಆಮೇಲೆ ಕಪೀವತೀನದಿಯನ್ನು ಉತ್ತರಿಸಿ ಸ್ಥಾಣುಮತಿ ಮತ್ತು ಗೋಮತಿ ಎಂಬ ನದಿಗಳನ್ನು ಕಳೆದು ಮುಂದೆ ಬಂದನು. ಅಲ್ಲಿಂದ ಕಳಿಂಗವೆಂಬ ನಗರದ ಬಳಿಯಿರುವ ಸಾಲವನಕ್ಕೆ ಬಂದು ಸ್ವಲ್ಪಕಾಲ ವಿಶ್ರಮಿಸಿದನು. ಅನಂತರ ರಾತ್ರಿಯಲ್ಲಿಯೇ ಒಂದು ಅರಣ್ಯವನ್ನು ದಾಟಿದನು. ರಥದ ಕುದುರೆಗಳು ಅತಿಶಯವಾಗಿ ಬಳಲಿಹೋಗಿದ್ದುವು. ಬೆಳಗಾಗುವ

ಹೊತ್ತಿಗೆ ದೂರದಲ್ಲಿ ಭರತನಿಗೆ ಅಯೋಧ್ಯಾನಗರವು ಕಾಣಿಸಿತು. ಮಾರ್ಗಮಧ್ಯದಲ್ಲಿ ಏಳು ರಾತ್ರಿಗಳು ಕಳೆದಿದ್ದುವು.

ಭರತನು ತನ್ನ ಸಾರಥಿಯನ್ನು ಕುರಿತು ಹೀಗೆಂದನು : "ಎಲೈ ಸಾರಥಿಯೆ, ಅಯೋಧ್ಯಾ ಪಟ್ಟಣವನ್ನು ನೋಡಿದರೆ ಅದು ಹಿಂದೆ ಇದ್ದಹಾಗೆ ಕಾಣಿಸುವುದಿಲ್ಲ. ದೂರದಲ್ಲಿ ಬಿಳುಪಾದ ಭೂಮಿಯು ಕಾಣಿಸುತ್ತಿದೆ. ಈ ಪಟ್ಟಣವು ಯಾವಾಗಲೂ ರಾಜಋುಷಿಗಳಿಂದ ಪರಿಪಾಲಿ ಸಲ್ಪಟ್ಟಂಥದು. ಮೊದಲು ಎಲ್ಲಿ ನೋಡಿದರೂ ಸದ್ಗುಣಸಂಪನ್ನರಾಗಿಯೂ ವೇದವೇದಾಂಗ ಪಾರಂಗತರಾಗಿಯೂ ದೀಕ್ಷಿತರಾಗಿಯೂ ಇದ್ದ ಬ್ರಾಹ್ಮಣರಿಂದ ಪರಿಪೂರ್ಣವಾಗಿತ್ತು. ಎಲ್ಲಿ ನೋಡಿದರೂ ಸ್ತ್ರೀಪುರುಷರ ಇಷ್ಟಾಲಾಪಗಳ ಧ್ವನಿಗಳಿಂದ ಕೋಲಾಹಲವುಳ್ಳದ್ದಾಗಿತ್ತು. ಈಗ ಅಂಥ ಧ್ವನಿಯು ಸ್ವಲ್ಪವಾದರೂ ಕೇಳಿಸುತ್ತಿಲ್ಲ. ಈ ಪಟ್ಟಣದಲ್ಲಿರುವ ಜನರು ತಮ್ಮ ಸ್ತ್ರೀಸಮೇತರಾಗಿ ಉದ್ಯಾನವನಗಳಲ್ಲಿ ವಿನೋದವಾಗಿ ಕ್ರೀಡಿಸಿಕೊಂಡಿದ್ದು ಪ್ರಾತಃಕಾಲದಲ್ಲಿ ಮನೆಗಳಿಗೆ ತಿರುಗುತ್ತಿದ್ದರು. ಈಗ ಅಂಥವಾವುದನ್ನೂ ಕಾಣೆನು. ಜನರು ತಮ್ಮ ಸಮೀಪಕ್ಕೆ ಬರುವುದಿಲ್ಲವೆಂದು ಉದ್ಯಾನವನಗಳು ರೋದನಮಾಡುತ್ತವೋ ಎಂಬ ರೀತಿಯಲ್ಲಿ ತೋರುತ್ತಿವೆ. ಪಟ್ಟಣವು ಅರಣ್ಯವಾದಹಾಗೆ ತೋರುತ್ತದೆ. ಊರ ಮುಂದೆ ಕುದುರೆಗಳನ್ನೇರಿ ಸವಾರಿಮಾಡುವುದಕ್ಕೆ ಬರುವವರೂ ಹೋಗುವವರೂ ಅನೇಕರಿದ್ದರು ಈಗ ಒಬ್ಬರನ್ನೂ ಕಾಣೆನು. ಎಲೈ ಸಾರಥಿಯೆ, ಪಟ್ಟಣದ ಸಮೀಪದಲ್ಲಿರುವ ವೃಕ್ಷಗಳೆಲ್ಲವೂ ತರಗೆಲೆಗಳನ್ನು ಉದುರಿಸುತ್ತ ಅಳುತ್ತಿರುವಂತೆ ಕಾಣುತ್ತಿವೆ. ಎಲ್ಲಿ ನೋಡಿದರೂ ದುರ್ನಿಮಿತ್ತಗಳೂ ಅದ್ಭುತಗಳೂ ಕಾಣುತ್ತಿವೆ. ಆದ್ದರಿಂದ ನನ್ನ ಮನಸ್ಸಿಗೆ ಬಹು ವ್ಯಥೆಯಾಗುತ್ತಿದೆ. ಎಲೈ ಸೂತನೆ, ಪಟ್ಟಣದಲ್ಲಿ ನಮ್ಮವರಿಗೇನಾದರೂ ಉಪದ್ರವವು ಬಂದಿರಬೇಕು. ಆದಕಾರಣ ನನ್ನ ಎದೆಯು ನಡುಗುತ್ತಿದೆ" ಎಂದು ನುಡಿದು, ವ್ಯಾಕುಲಚಿತ್ತನಾಗಿ ಅಯೋಧ್ಯಾಪಟ್ಟಣವನ್ನು ವೈಜಯಂತಿ ಎಂಬ ಬಾಗಿಲಿನಿಂದ ಪ್ರವೇಶಿಸಿದನು. ಆ ಬಾಗಿಲಲ್ಲಿದ್ದ ಗುರಿಕಾರರು ಎದ್ದು ಕೈಮುಗಿದುಕೊಂಡು "ಜಯಜಯ!" ಎಂದು ನುಡಿದರು. ಅದನ್ನು ಕೇಳಿ ಅಧಿಕವಾಗಿ ಹಂಬಲಿಸುತ್ತ ಸಾರಥಿಯನ್ನು ಕುರಿತು "ಎಲೈ ಸಾರಥಿಯೆ, ನಾನು ರಥಾರೂಢನಾಗಿ ಕುದುರೆಗಳನ್ನು ಆಯಾಸಗೊಳಿಸಿ ಅತಿವೇಗದಿಂದ ಬಂದೆನು. ಕಾರಣವಿಲ್ಲದೆ ನನ್ನ ಮನಸ್ಸಿನಲ್ಲಿ ವ್ಯಥೆಹುಟ್ಟಿದೆ. ರಾಜ್ಯಕ್ಕೆ ಕಟ್ಟಾಳಾದ ಅರಸು ಲೋಕಾಂತರವನ್ನೈದಿದರೆ ಆ ರಾಜ್ಯವೂ ಪುರದುರ್ಗಾದಿಗಳೂ ಭಯಂಕರವಾಗಿ ತೋರುವುವೆಂದು ಕೇಳಿದ್ದೇನೆ. ಈ ಪಟ್ಟಣವನ್ನು ನೋಡಿದರೆ ಹಾಗೆ ತೋರುತ್ತಿದೆ. ಈ ಪಟ್ಟಣದಲ್ಲಿ ಮೊದಲು ಎಲ್ಲಿ ನೋಡಿದರೂ ಮನೆಯ ಬಾಗಿಲು ಗಳನ್ನು ಸಾರಿಸಿ ಮನೋಹರವಾಗಿ ಮಾಡಿಕೊಂಡಿದ್ದರು. ಈಗ ಅದೇನೂ ಇಲ್ಲದೆ ಬಾಗಿಲ ಕದಗಳು ಅಮಾಂಗಲ್ಯವಾಗಿ ಎಲ್ಲಿ ನೋಡಿದರೂ ಹೊಗೆಸುತ್ತಿಕೊಂಡಿವೆ. ಗೃಹಸ್ಥರು ಕಾಂತಿಹೀನರಾಗಿ ಅಲಂಕಾರ ರಹಿತರಾಗಿ ಸಂತೋಷವಿಲ್ಲದೆ ಇದ್ದಾರೆ" ಎಂದು ಹೇಳುತ್ತ ಅರಮನೆಗೆ ಹೋದನು. ಅರಮನೆಯ ಮಹಾದ್ವಾರವು ನಿರ್ಜನಪ್ರದೇಶವಾಗಿ ಕೆಂಧೂಳುಮುಸುಕಿದ ಕದಗಳುಳ್ಳದ್ದಾಗಿತ್ತು. ಅದನ್ನು ನೋಡಿ ಮನಸ್ಸಿನಲ್ಲಿ ಅತಿವೆಗ್ಗಳವಾದ ವ್ಯಥೆಯುಂಟಾಗಿ ದುರ್ನಿಮಿತ್ತಗಳನ್ನು ನೆನೆದು ತಲೆಬಗ್ಗಿಸಿಕೊಂಡು ಭರತನು ಒಳಗೆ ಪ್ರವೇಶಿಸಿದನು.



೭೨ ನೆಯ ಅಧ್ಯಾಯ

# ಭರತನಿಗೆ ಕೈಕೇಯಿದೇವಿಯು ದಶರಥನ ಮರಣವನ್ನೂ ಶ್ರೀರಾಮನ ವನವಾಸವೃತ್ತಾಂತವನ್ನೂ ಹೇಳಿದ್ದು

ಈ ಪ್ರಕಾರವಾಗಿ ಭರತನು ತನ್ನ ತಂದೆಯಾದ ದಶರಥರಾಯನ ಅರಮನೆಗೆ ಹೋಗಿ ಅಲ್ಲಿ ಆ ರಾಯನನ್ನು ಕಾಣದೆ ತನ್ನ ತಾಯಿಯಾದ ಕೈಕೇಯಿದೇವಿಯ ಮನೆಗೆ ಹೋದನು. ಆಕೆಯು ಮಣಿಮಂಚದಿಂದಿಳಿದು ಆಲಿಂಗಿಸಿಕೊಳ್ಳಲು ಆಕೆಗೆ ನಮಸ್ಕಾರ ಮಾಡಿದನು. ಆಕೆಯು ಆತನ ಶಿರಸ್ಸನ್ನಾಘ್ರಾಣಿಸಿ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಆತನನ್ನು ಕುರಿತು "ಎಲೈ ಮಗನೆ, ನೀನು ಮಾತಾಮಹನ ಮನೆಯಿಂದ ಹೊರಟು ಎಷ್ಟು ದಿವಸಗಳಾದವು ? ದಾರಿಯಲ್ಲಿ ಶೀಘ್ರವಾಗಿ ಪ್ರಯಾಣಮಾಡಿದ್ದರಿಂದ ಬಳಲಿಕೆ ತೋರಿತೆ ? ನನ್ನ ತಂದೆಯೂ ನಿನ್ನ ಸೋದರಮಾವನೂ ಚೆನ್ನಾಗಿದ್ದಾರೆಯೆ ? ನೀನು ದಾರಿಯಲ್ಲಿ ಸುಖವಾಗಿ ಬಂದೆಯಾ ? " ಎಂದು ಕೇಳಿದಳು.

ಭರತನು ಆಕೆಯನ್ನು ಕುರಿತು "ಅಮ್ಮ, ನಾನು ಸೋದರಮಾವನ ಮನೆಯಿಂದ ಹೊರಟು ಇಂದಿಗೆ ಏಳು ದಿವಸಗಳಾದುವು. ನಿನ್ನ ತಂದೆಯಾದ ಕೇಕಯರಾಯನು ಸುಖವಾಗಿದ್ದಾನೆ. ನನ್ನ ಸೋದರಮಾವನಾದ ಯುಧಾಜಿತ್ತೂ ಸುಖವಾಗಿದ್ದಾನೆ. ಆತನು ನನಗೆ ಅನೇಕ ದ್ರವ್ಯಗಳನ್ನೂ ರತ್ನಭೂಷಣಗಳನ್ನೂ ಕೊಟ್ಟಿದ್ದಾನೆ. ಅದು ಹಿಂದೆ ದಾರಿಯಲ್ಲಿ ಬರುತ್ತಿದೆ. ನಾನು ನಿನ್ನನ್ನು ನೋಡಬೇಕೆಂದು ಬೇಗ ಬಂದೆನು. ಇದೇನು ನೀನು ಮಲಗುವ ರತ್ನಮಂಚವು ಶೂನ್ಯವಾಗಿದೆ ? ಮಹಾರಾಜನು ಏಕೆ ಇಲ್ಲಿಲ್ಲ ? ಯಾವಾಗಲೂ ನಿನ್ನ ಮನೆಯಲ್ಲಿಯೇ ಇರುತ್ತಿದ್ದ ಆ ರಾಯನು ಇಲ್ಲಿರುವನೆಂದು ಬಂದೆನು. ನನ್ನ ತಂದೆಯನ್ನು ಕಂಡು ನಮಸ್ಕಾರವನ್ನು ಮಾಡಬೇಕು. ನನ್ನ ಹಿರಿಯ ತಾಯಿಯಾದ ಕೌಸಲ್ಯಾದೇವಿಯ ಮನೆಯಲ್ಲಿದ್ದಾನೆಯೆ ? ಅಲ್ಲಿಗೆ ಹೋಗಲೆ ? " ಎಂದು ಕೇಳಿದನು.

ಕೈಕೇಯಿದೇವಿಯು ಭರತನಿಗೆ ಪ್ರಿಯವಾರ್ತೆಯೆಂದೆಣಿಸಿ ಮನಸ್ಸಿನಲ್ಲಿ ಸಂತೋಷಪಟ್ಟು ಆ ಘೋರವಾರ್ತೆಯನ್ನು ತಿಳಿಸಿದಳು. "ಭರತ, ನಿನಗೆ ರಾಜ್ಯಭಾರವಾಯಿತು. ಲೋಕದಲ್ಲಿ ಹುಟ್ಟಿದ ಮನುಷ್ಯರು ತಮ್ಮ ತಮ್ಮ ದಿನ ತುಂಬಿದ ಬಳಿಕ ಯಮಲೋಕಕ್ಕೆ ಹೋಗುವರು. ಮಹಾತ್ಮನಾಗಿ ಕೀರ್ತಿವಂತನಾದ ದಶರಥರಾಯನೂ ಆ ಲೋಕಕ್ಕೆ ಹೋದನು" ಎಂದು ಹೇಳಿದಳು.

ಭರತನು ಶೋಕಾತಿಶಯದಿಂದ ಕಂಗೆಟ್ಟು "ಹಾ ! ಕೆಟ್ಟೆನಲ್ಲ !" ಎಂದು ಕೂಗುತ್ತಾ ಮೂರ್ಛಿತನಾಗಿ ಬಿದ್ದನು. ಸ್ವಲ್ಪ ಹೊತ್ತಿಗೆ ಎಚ್ಚೆತ್ತು "ಅಕಟಕಟಾ ! ನನಗೆ ಪಿತೃವಿಯೋಗ ವಾಗಬಹುದೆ !" ಎಂದು ಹಂಬಲಿಸಿ ಮುಂದುಗಾಣದೆ ಚಂದ್ರನಿಲ್ಲದ ಆಕಾಶದಂತೆಯೂ ನೀರುಬತ್ತಿದ ಸಮುದ್ರದಂತೆಯೂ ಅತ್ಯಂತ ಭಯಂಕರವಾಗಿದ್ದ ತನ್ನ ತಂದೆಯ ಶಯ್ಯಾಗೃಹವನ್ನು ನೋಡಿ ಕಂಗೆಟ್ಟು ಹಂಬಲಿಸುತ್ತ ಅಳುತ್ತ ತರಿದುಬಿದ್ದ ಮರದಂತೆ ಭೂಮಿಯಲ್ಲಿ ಮುಖವಡಿಯಾಗಿ ಬಿದ್ದನು.

ಕೈಕೇಯಿದೇವಿಯು ಭರತನನ್ನು ಕೈಹಿಡಿದು "ಮಗನೆ, ಏಳು ಏಳು ; ಮಹಾಕೀರ್ತಿಶಾಲಿ ಗಳಾದ ನಿನ್ನಂತಹ ರಾಜಕುಮಾರರು ಹೀಗೆ ಶೋಕವನ್ನು ಮಾಡುವರೆ ! ನೀನು ರಾಜ್ಯಾಧಿಪತ್ಯವನ್ನೂ ದಾನ ಯಜ್ಞಾದಿ ಸತ್ಕರ್ಮಗಳನ್ನೂ ಶಾಸ್ತ್ರಾಭ್ಯಾಸಗಳನ್ನೂ ಮಾಡಿಕೊಂಡಿರಬೇಕಲ್ಲದೆ ರೋದನ

ಮಾಡಿಕೊಂಡಿರುವುದು ಸರಿಯಲ್ಲ. ನಿನ್ನ ಬುದ್ಧಿಯು ಸೂರ್ಯಪ್ರಭೆಯಂತೆ ಅತಿಪ್ರಕಾಶಮಾನವಾದುದು " ಎಂದು ಸಂತವಿಸಿದಳು.

ಭರತನು ಭೂಮಿಯಮೇಲೆ ಹೊರಳುತ್ತ ರೋದನಮಾಡುತ್ತ ಆ ದೇವಿಯನ್ನು ಕುರಿತು ಹೀಗೆ ಹಲುಬಿದನು : "ಅಮ್ಮ, ನನ್ನನ್ನು ಕರೆಕಳುಹಿಸಿದಾಗ ಮಹಾರಾಜನು ಯಾಗವನ್ನು ಮಾಡುವನು—ಅಲ್ಲದಿದ್ದರೆ ಶ್ರೀರಾಮನಿಗೆ ಪಟ್ಟವನ್ನು ಕಟ್ಟುವನು ಎಂದು ಮನಸ್ಸಿನಲ್ಲಿ ಯೋಚನೆ ಮಾಡಿಕೊಂಡು ಬಂದೆನು. ಇಲ್ಲಿ ಅದಕ್ಕೆ ವಿರುದ್ಧವಾದ ಸ್ಥಿತಿಯನ್ನು ಕಂಡು ನನ್ನ ಮನಸ್ಸು ಒಡೆಯುತ್ತಿದೆ; ನಾನು ತಂದೆಯನ್ನು ಕಾಣದೆ ಹೋದೆನು ! ಅಮ್ಮ, ನಾನು ಬರುವುದರೊಳಗಾಗಿ ಯಾವ ಕಾರಣದಿಂದ ಆತನು ಶರೀರತ್ಯಾಗಮಾಡಿದನು ? ಇಲ್ಲಿದ್ದ ರಾಮಲಕ್ಷ್ಮಣರು ಆ ರಾಯನಿಗೆ ಸಂಸ್ಕಾರವನ್ನು ಮಾಡಿ ಕೃತಾರ್ಥರಾದರು. ಅಕಟಕಟಾ ! ಕೀರ್ತಿವಂತನಾದ ಮಹಾರಾಜನು ನಾನು ಬಂದದ್ದನ್ನರಿಯನು. ಅವನು ಇದ್ದಿದ್ದರೆ ನನ್ನ ಶಿರಸ್ಸನ್ನು ಆಘ್ರಾಣಿಸುತ್ತಿದ್ದನು. ಧರ್ಮಿಷ್ಠನಾದ ಆ ರಾಯನ ಕೋಮಲವಾದ ಹಸ್ತಸ್ಪರ್ಶವು ನನಗಿನ್ನೆತ್ತಣದು ? ನಾನು ಆಡುವುದಕ್ಕೆ ಹೋಗಿ ಬಂದರೆ ತನ್ನ ಕೈಯಿಂದ ನನ್ನ ಮೈಮೇಲಿದ್ದ ಧೂಳುಗಳನ್ನು ತೊಡೆಯುತ್ತಿದ್ದನು ! ಅದು ಹಾಗಿರಲಿ : ನನಗೆ ಒಡಹುಟ್ಟಿದ ಅಣ್ಣನೂ ತಂದೆಯೂ ಇಷ್ಟಬಂಧುವೂ ಧರ್ಮಾತ್ಮನೂ ಆದ ಶ್ರೀರಾಮನ ವೃತ್ತಾಂತವನ್ನು ಹೇಳು. ನಾನು ಆತನಿಗೆ ಭೃತ್ಯನು. ಲೋಕದಲ್ಲಿ ಜ್ಯೇಷ್ಠ ಭ್ರಾತೃವು ತಂದೆಗೆ ಸಮಾನನು. ಶ್ರೀರಾಮನು ಸರ್ವಜ್ಞನು. ಆತನು ಮಹಾಪೂಜ್ಯನು. ಇನ್ನು ನನಗೆ ಆತನೇ ಗತಿ. ಆತನ ಪಾದಗಳಿಗೆ ನಮಸ್ಕಾರವನ್ನು ಮಾಡುವೆನು. ಆತನು ಧರ್ಮರಹಸ್ಯವನ್ನು ಬಲ್ಲ ಮಹಾತ್ಮ. ತಾಯಿ, ದಶರಥರಾಯನು ಮಹಾಸತ್ಯಸಂಧನು. ಆ ರಾಯನು ತನ್ನ ನಿರ್ಯಾಣಕಾಲದಲ್ಲಿ ಏನು ಹೇಳಿದನು ? ಆ ವೃತ್ತಾಂತವನ್ನು ಹೇಳು " ಎಂದು ಕೇಳಿದನು.

ಕೈಕೇಯಿದೇವಿಯು " ಭರತ, ಮಹಾರಾಜನು ತನ್ನ ನಿರ್ಯಾಣಕಾಲದಲ್ಲಿ 'ಹಾ ರಾಮ ! ಹಾ ಲಕ್ಷ್ಮಣ ! ಹಾ ಸೀತಾದೇವಿ ! ' ಎಂದು ಹಂಬಲಿಸುತ್ತ ಪಾಶಗಳಿಂದ ಕಟ್ಟಿ ಸೆಳೆಯಲ್ಪಡುವ ಮದ್ದಾನೆಯಂತೆ ' ಲೋಕದಲ್ಲಿ ಕೃತಾರ್ಥರಾದವರು ವನವಾಸದಿಂದ ತಿರುಗಿ ಬರುವ ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನನ್ನು ಕಾಣುವರು ' ಎಂದು ನುಡಿದು ಶರೀರವನ್ನು ಬಿಟ್ಟನು ! " ಎಂದು ನುಡಿದಳು.

ಶ್ರೀರಾಮನು ವನವಾಸಕ್ಕೆ ಹೋದನೆಂಬ ಎರಡನೆಯ ಅಶುಭವಾರ್ತೆಯನ್ನು ಕೇಳಿ ಭರತನು ಅತ್ಯಂತ ಶೋಕದಿಂದ ಮುಖಕಾಂತಿಗುಂದಿದನು. ಅವನು ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಎಲ್ಲಿದ್ದಾನೆಂದು ಕೇಳಿದನು. ಆಗ ಅವಳು ಭರತನಿಗೆ ಪ್ರಿಯವಾದ ವಿಷಯವೆಂದು ತನ್ನ ಮನಸ್ಸಿನಲ್ಲೆಣಿಸಿ " ಭರತ, ಸೀತಾಲಕ್ಷ್ಮಣಸಮೇತನಾಗಿ ರಾಮನು ನಾರುಬಟ್ಟೆಗಳನ್ನುಟ್ಟು ದಂಡಕಾರಣ್ಯಕ್ಕೆ ಹೋದನು " ಎಂದು ನುಡಿದಳು.

ಭರತನಿಗೆ ತನ್ನ ವಂಶದಲ್ಲಿ ಅವತರಿಸಿದ ಮಹಾತ್ಮನಾದ ಶ್ರೀರಾಮನ ನಡತೆಯಲ್ಲಿ ಏನಾದರೂ ಕಳಂಕ ಬಂದಿತೋ ಎಂಬ ಸಂದೇಹದಿಂದ ಭಯವಾಯಿತು. ಅವನು ಕೈಕೇಯಿದೇವಿಯನ್ನು ಕುರಿತು " ಅಮ್ಮ, ಶ್ರೀರಾಮನು ವನಕ್ಕೆ ಹೋಗುವುದಕ್ಕೆ ಏನು ಅಪರಾಧಮಾಡಿದನು ? ಬ್ರಾಹ್ಮಣರ ದ್ರವ್ಯವನ್ನು ಅಪಹರಿಸಿದನೆ ? ಪರಸ್ತ್ರೀಯರಿಗೆ ಎರಡೆಣಿಸಿದನೆ ? ಭ್ರೂಣಹತ್ಯವನ್ನು ಮಾಡಿದವನ ಹಾಗೆ ನಿಷ್ಕಾರಣವಾಗಿ ದಂಡಕಾರಣ್ಯಕ್ಕೆ ಹೋಗುವುದಕ್ಕೆ ಕಾರಣವೇನು ? " ಎಂದು ಕೇಳಿದನು.

ಕೈಕೇಯಿದೇವಿಯು ತನ್ನ ಸ್ತ್ರೀಸ್ವಭಾವವಾದ ಚಾಂಚಲ್ಯಬುದ್ಧಿಯಿಂದ ತಾನು ಮಾಡಿದ ಕೃತ್ಯವನ್ನು ಯಥಾರ್ಥವಾಗಿಯೇ ಹೇಳತೊಡಗಿದಳು : "ಭರತ, ಶ್ರೀರಾಮನು ಬ್ರಾಹ್ಮಣರ ದ್ರವ್ಯವನ್ನು ಅಪಹರಿಸಲಿಲ್ಲ. ಧನಾಢ್ಯರಾದವರನ್ನು ದರಿದ್ರರನ್ನಾಗಿ ಮಾಡಲಿಲ್ಲ. ಪರಸ್ತ್ರೀಯರನ್ನು ಕಣ್ಣಿಂದಲಾದರೂ ರಾಮನು ದೃಷ್ಟಿಸಿ ನೋಡುವವನಲ್ಲ. ನಾನು ಆತನ ಪಟ್ಟಾಭಿಷೇಕ ವಾರ್ತೆಯನ್ನು ಕೇಳಿದೆನು. ಆಗ ಶ್ರೀರಾಮನ ಪಟ್ಟಾಭಿಷೇಕವನ್ನು ನಿಲ್ಲಿಸಿ ಅವನನ್ನು ವನವಾಸಕ್ಕೆ ಕಳುಹಿಸಿ ನಿನಗೆ ಪಟ್ಟವನ್ನು ಕಟ್ಟಬೇಕೆಂದು ದಶರಥರಾಜನನ್ನು ಬೇಡಿಕೊಂಡೆನು. ಆತನು ಪೂರ್ವದಲ್ಲಿ ದೇವಾಸುರರ ಯುದ್ಧದಲ್ಲಿ ನನಗೆ ವರವನ್ನು ಕೊಟ್ಟ ವೃತ್ತಾಂತವನ್ನು ನೆನೆದು ಶ್ರೀರಾಮನನ್ನು ವನಕ್ಕೆ ಕಳುಹಿಸಿದನು. ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ವನಕ್ಕೆ ಹೋದನು. ಆಮೇಲೆ ದಶರಥರಾಯನು ತನ್ನ ಪ್ರಿಯಪುತ್ರನನ್ನು ಕಾಣದೆ ಪುತ್ರಶೋಕದಿಂದ ಹಂಬಲಿಸಿ ಚೈತನ್ಯ ಗುಂದಿ ಸ್ವರ್ಗಸ್ಥನಾದನು. ಇನ್ನು ನೀನು ರಾಜ್ಯಾಧಿಪತ್ಯವನ್ನು ಮಾಡು. ನಿನ್ನ ನಿಮಿತ್ತವಾಗಿ ನಾನು ಇಂಥ ಕೃತ್ಯವನ್ನು ಮಾಡಿದೆನು. ಎಲೈ ಮಗನೆ, ನೀನು ಶೋಕವನ್ನು ಮಾಡಬೇಡ. ಮನಸ್ಸಿಗೆ ಚಿಂತೆಯುಂಟುಮಾಡಿಕೊಳ್ಳದೆ ಧೈರ್ಯವನ್ನಾಶ್ರಯಿಸು. ಅಯೋಧ್ಯಾಪಟ್ಟಣವು ನಿನ್ನ ಅಧೀನ ವಾಗಿದೆ. ಈ ರಾಜ್ಯದಲ್ಲಿ ಶತ್ರುಗಳ ಭಯವಿಲ್ಲ. ಶೀಘ್ರದಲ್ಲಿ ವಸಿಷ್ಠಮುನಿ ಮೊದಲಾದ ಬ್ರಾಹ್ಮಣೋತ್ತಮರನ್ನು ಕರೆಕಳುಹಿಸಿ ದಶರಥರಾಯನ ಅಂತ್ಯಕರ್ಮವನ್ನು ತೀರಿಸಿ ಪಟ್ಟವನ್ನು ಕಟ್ಟಿಕೊಂಡು ಸುಖದಿಂದ ರಾಜ್ಯವನ್ನು ಪರಿಪಾಲಿಸು" ಎಂದು ಭರತನಿಗೆ ಬುದ್ಧಿಹೇಳಿದಳು.

---

## ೭೩ ನೆಯ ಅಧ್ಯಾಯ

## ಭರತನು ಕೈಕೇಯಿದೇವಿಯ ಮೇಲೆ ಕೋಪಿಸಿದ್ದು

ಭರತನು ಆ ವೃತ್ತಾಂತವನ್ನು ಕೇಳಿ ಅತ್ಯಂತ ದುಃಖಾಕ್ರಾಂತನಾಗಿ ಕೈಕೇಯಿದೇವಿಯನ್ನು ಕುರಿತು ಹೀಗೆಂದನು : "ನನ್ನ ತಂದೆಯಾದ ದಶರಥರಾಯನೂ ಆತನಿಗೆ ಸಮಾನನಾದ ಶ್ರೀರಾಮನೂ ಇಲ್ಲದ ರಾಜ್ಯದಿಂದ ನನಗೇನು ಪ್ರಯೋಜನ ? ಮೊದಲು ದಶರಥರಾಯನು ಸ್ವರ್ಗಸ್ಥನಾದ ವೃತ್ತಾಂತವನ್ನು ಕೇಳಿ ಈಗ ಸೀತಾಲಕ್ಷ್ಮಣಸಮೇತನಾಗಿ ಶ್ರೀರಾಮನು ವನಕ್ಕೆ ಹೋದ ವೃತ್ತಾಂತ ವನ್ನು ಕೇಳಿದೆನು. ಗಾಯದಮೇಲೆ ಗಾಯವಾದಂತೆ ನನಗೆ ಮಹತ್ತಾದ ವ್ಯಥೆಯುಂಟಾಗಿದೆ. ಶ್ರೀರಾಮನನ್ನು ವನಕ್ಕೆ ಕಳುಹಿಸಿ, ಪುತ್ರಶೋಕದಿಂದ ಹಂಬಲಿಸಿ ಶರೀರತ್ಯಾಗವನ್ನು ಮಾಡುವಂತೆ ಮಾಡಿದ ದಶರಥರಾಯನ ವಂಶಕ್ಕೆ ನೀನು ಕಾಳರಾತ್ರಿಯಾದೆ. ನನ್ನ ತಂದೆಯು ಬೂದಿಯಲ್ಲಿ ಮುಚ್ಚಿದ ಕೆಂಡದಂತಿರುವ ನಿನ್ನನ್ನು ಅರಿಯದೆ ಕೈಹಿಡಿದು ನಿನ್ನಿಂದ ಮೃತ್ಯುದೇವತೆಯ ವಶವಾದನು ಎಲೈ ಕುಲಗೆಡುಕಿ, ನೀನು ಅಜ್ಞಾನದಿಂದ ಇಕ್ಷ್ವಾಕುವಂಶಕ್ಕೆ ದೊಡ್ಡ ಅಪಕೀರ್ತಿಯನ್ನು ತಂದೆ. ಗುರುಭಕ್ತಿರಹಸ್ಯವನ್ನು ಬಲ್ಲ ಶ್ರೀರಾಮನು ತನ್ನ ತಾಯಿಯಾದ ಕೌಸಲ್ಯಾದೇವಿಯಲ್ಲಿ ಹೇಗೆ ಭಯಭಕ್ತಿಯಿಂದ ನಡೆಯುತ್ತಿದ್ದನೋ ಹಾಗೆ ನಿನ್ನಲ್ಲಿಯೂ ಅತಿವಿಶ್ವಾಸದಿಂದ ನಡೆಯುತ್ತಿದ್ದನು. ನನಗೆ ಹಿರಿಯ ತಾಯಿಯಾಗಿ ವಿವೇಕಿಯಾದ ಕೌಸಲ್ಯಾದೇವಿಯು ನಿನ್ನನ್ನು ಸಾಕ್ಷಾತ್ ಒಡಹುಟ್ಟಿದ ತಂಗಿಯೋಪಾದಿಯಲ್ಲಿ ಕಾಣುತ್ತಿದ್ದಳು. ಅಂಥ ದೇವಿಯ ಪ್ರಿಯಪುತ್ರನಾದ ಶ್ರೀರಾಮನನ್ನು ನಾರುಬಟ್ಟೆಗಳಿಂದ ಅಲಂಕರಿಸಿ ವನಕ್ಕೆ ಕಳುಹಿಸಿ ಮನಸ್ಸಿನಲ್ಲಿ ಸ್ವಲ್ಪವಾದರೂ ದುಃಖವಿಲ್ಲದೆ

ಹೇಗಿದ್ದೀಯೆ ? ಮಹಾಪರಾಕ್ರಮಿಯೂ ಪುಣ್ಯಾತ್ಮನೂ ಸ್ಥಿರಬುದ್ಧಿಯೂ ಕೀರ್ತಿವಂತನೂ ಆದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಲು ಯಾವ ಕಾರಣವನ್ನು ಕಂಡೆ ? ಆತನಲ್ಲಿ ನಾನು ಅತಿವಿಶ್ವಾಸವುಳ್ಳವನಾಗಿದ್ದೆನು. ನಿನಗೆ ಇದು ತಿಳಿಯದೆಹೋಯಿತು ! ನೀನು ಈ ರಾಜ್ಯಕ್ಕೆ ಮಹತ್ತಾದ ಅನರ್ಥವನ್ನು ತಂದೆ. ನಾನು ಪುರುಷೋತ್ತಮರಾದ ರಾಮಲಕ್ಷ್ಮಣರಿಲ್ಲದೆ ಯಾವ ಸಾಮರ್ಥ್ಯದಿಂದ ರಾಜ್ಯವನ್ನು ರಕ್ಷಿಸುವುದಕ್ಕೆ ಸಮರ್ಥನಾದೇನು ? ಅತ್ಯಂತ ಭಾರವನ್ನು ಹೊರುವ ದೊಡ್ಡ ಎತ್ತನ್ನು ಬಿಟ್ಟು ಕರುವಿನ ಮೇಲೆ ಹೇರನ್ನು ಹಾಕಲು ಯತ್ನಮಾಡುವಂತೆ ಶ್ರೀರಾಮನನ್ನು ಬಿಟ್ಟು ನನಗೆ ರಾಜ್ಯಭಾರವನ್ನು ಕಟ್ಟಿದರೆ ನಾನು ಹೇಗೆ ರಾಜ್ಯಭಾರವನ್ನು ಹೊರಬಲ್ಲೆನು ? ಒಂದು ವೇಳೆ ರಾಜ್ಯಭಾರವನ್ನು ಹೊರಬಲ್ಲವನಾದರೂ ಪುತ್ರ ವಾತ್ಸಲ್ಯದಿಂದ ಹುಟ್ಟಿದ ನಿನ್ನ ಬಯಕೆಯನ್ನು ಸಲ್ಲಿಸುವುದಿಲ್ಲ. ನಾನು ಈ ರಾಜ್ಯಾಧಿಪತ್ಯವನ್ನು ಬಯಸುವವನಲ್ಲ. ಶ್ರೀರಾಮನಿಗೆ ನಿನ್ನಲ್ಲಿ ತಾಯಿಯಲ್ಲಿರುವಂತೆ ಪ್ರೀತಿಗೌರವಗಳುಂಟು. ಇಲ್ಲದಿದ್ದರೆ ಪಾಪಿಯಾದ ನಿನ್ನನ್ನು ನಾನು ತೊರೆದುಬಿಡುತ್ತಿದ್ದೆ. ಅಯ್ಯೋ ! ನೀನು ರಾಜಧರ್ಮವನ್ನು ತಿಳಿದವಳಲ್ಲ. ಪೂರ್ವದ ಅರಸರ ನಡತೆಯನ್ನು ವಿಚಾರಿಸಿದವಳಲ್ಲ. ಲೋಕದಲ್ಲಿ ಯಾರೂ ನಡೆಯದೆ ಇದ್ದ ಮಾರ್ಗದಲ್ಲಿ ಹೋಗಲು ನಿನಗೆ ಬುದ್ಧಿಯು ಎಲ್ಲಿಂದ ಬಂದಿತು ? ಎಲೈ ದುಷ್ಟೆ, ನೀನು ನಮಗೆಲ್ಲರಿಗೂ ಆಗದವಳು. ನಮ್ಮ ವಂಶದಲ್ಲಿ ಅರಸರು ಹಿರಿಯಮಗನಿಗೆ ಪಟ್ಟವನ್ನು ಕಟ್ಟುತ್ತಾರೆ. ಆಗ ಅವನ ತಮ್ಮಂದಿರು ಆತನಿಗೆ ಸೇವೆಯನ್ನು ಮಾಡಿಕೊಂಡಿರುತ್ತಾರೆ. ಎಲೈ ಪಾಪಿ, ಈ ಇಕ್ಷ್ವಾಕು ವಂಶದ ಅರಸರಲ್ಲಿ ಜ್ಯೇಷ್ಠಪುತ್ರನಿಗೆ ಪಟ್ಟಾಭಿಷೇಕವಾಗಬೇಕೆಂಬ ನಿಯಮವುಂಟು. ಅಂಥ ನಿಯಮ ವನ್ನು ನೀನು ಕೆಡಿಸಲು ಯತ್ನಮಾಡಿದ್ದೀಯೆ. ನಮ್ಮ ಪೂರ್ವದ ರಾಜಪುತ್ರರು ತಮ್ಮಲ್ಲಿ ಜ್ಯೇಷ್ಠ ರಾದವರಿಗೆ ಪಟ್ಟವನ್ನು ಕಟ್ಟಿಸಿ ತಾವು ಅವರಿಗೊಳಗಾಗಿ ನಡೆಯುತ್ತಿದ್ದರಲ್ಲದೆ ತಮ್ಮ ಇಚ್ಛೆಬಂದಂತೆ ನಡೆಯುತ್ತಿರಲಿಲ್ಲ. ಇಂಥ ಕೇಡುಬುದ್ಧಿಯು ನಿನಗೆಲ್ಲಿಂದ ಬಂದಿತು ? ನೀನು ನನ್ನ ಪ್ರಾಣಕ್ಕೆ ಹಾನಿ ಯಾಗುವ ಕೃತ್ಯವನ್ನು ಮಾಡಿದೆ. ಆದ್ದರಿಂದ ನಾನು ನಿನ್ನ ಮನಸ್ಸಿನ ಇಷ್ಟಾರ್ಥವನ್ನು ಆಗಗೊಡೆನು. ಈಗ ನಾನು ನಿನ್ನ ಮನಸ್ಸಿಗೆ ವ್ಯಥೆಯಾಗುವಂತೆ ಸರ್ವಜನಪ್ರಿಯನಾದ ಶ್ರೀರಾಮನನ್ನು ಹಿಂದಕ್ಕೆ ಕರೆತರುತ್ತೇನೆ. ಆತನನ್ನು ಕರೆತಂದು ಸಮಸ್ತ ರಾಜ್ಯವನ್ನೂ ಆತನ ವಶಮಾಡಿ ನಾನು ಅಂತರಂಗ ಶುದ್ಧಿಯಿಂದ ಆತನ ಸೇವೆಯನ್ನೇ ಮಾಡಿಕೊಂಡಿರುತ್ತೇನೆ" ಎಂದು ನಿಷ್ಠುರವಚನಗಳಿಂದ ಪರ್ವತದ ಗುಹೆಯಲ್ಲಿರುವ ಸಿಂಹರಾಜನಂತೆ ಕೋಪಾತಿಶಯದಿಂದ ಕೈಕೇಯಿಗೆ ಭಯವು ಹುಟ್ಟುವಂತೆ ಕೂಗಿ ಗರ್ಜಿಸಿದನು.

---

## ೭೪ ನೆಯ ಅಧ್ಯಾಯ

## ಭರತನು ಕೈಕೇಯೀದೇವಿಯನ್ನು ನಿಂದಿಸಿದ್ದು

ಆ ಬಳಿಕ ಭರತನು ಕೈಕೇಯೀದೇವಿಯನ್ನು ನೋಡಿ ಕೋಪಯುಕ್ತನಾಗಿ ಹೀಗೆ ಕೂಗಾಡಿದನು. "ಎಲೇ ಪಾಪಿಷ್ಠೆ, ದುಷ್ಟೆ, ನೀನು ಧರ್ಮವನ್ನು ಬಿಟ್ಟು ಅಧರ್ಮವನ್ನು ಕೈಗೊಂಡೆ. ನಾನು ಶ್ರೀರಾಮನ ಸಂಗಡ ವನಕ್ಕೆ ಹೋಗುತ್ತೇನೆ. ನನ್ನನ್ನು ಕುರಿತು ರೋದನಮಾಡುತ್ತ ನೀನು ಕಾಲ ವನ್ನು ಕಳೆ. ದಶರಥರಾಯನನ್ನು ಪುತ್ರವಿಯೋಗದಿಂದ ಕೊಲ್ಲುವುದಕ್ಕೆ ಆ ರಾಯನು ನಿನಗೆ ಮಾಡಿದ ಅಪರಾಧವೇನು ? ಶ್ರೀರಾಮನನ್ನು ವನಕ್ಕೆ ಹೊರಡಿಸುವುದಕ್ಕೆ ಆತನು ನಿನಗೆ ಮಾಡಿದ

ಉಪದ್ರವವೇನು ? ನೀನು ಇಕ್ಷ್ವಾಕುವಂಶವನ್ನು ಕೆಡಿಸಿದೆ. ಆದ್ದರಿಂದ ನಿನಗೆ ಭ್ರೂಣಹತ್ಯಾಪಾಪವು ಸಂಭವಿಸುವುದು. ಇಂಥ ಪಾಪವನ್ನು ಮಾಡಿದ್ದರಿಂದ ನಿನ್ನ ಪತಿಯಾದ ದಶರಥರಾಯನು ಸೇರಿದ ಪುಣ್ಯಲೋಕವು ನಿನಗೆ ಲಭಿಸದು. ನೀನು ನರಕವನ್ನೈದುವೆ. ಸಮಸ್ತ ಲೋಕಗಳಿಗೂ ಪ್ರಿಯನಾದ ಶ್ರೀರಾಮನನ್ನು ಹೊರಡಿಸಿ ನನಗೆ ಅತ್ಯಂತ ದುಃಖವನ್ನುಂಟುಮಾಡಿದೆ. ನಿನ್ನ ಕೃತ್ಯದಿಂದ ದಶರಥರಾಯನು ಸ್ವರ್ಗಸ್ಥನಾದನು ; ಶ್ರೀರಾಮನು ದಂಡಕಾರಣ್ಯವನ್ನೈದಿದನು. ನಿನ್ನಿಂದ ನನಗೆ ಮಹತ್ತಾದ ಅಪಕೀರ್ತಿಯು ಬಂದಿತು. ಪಾಪಿಷ್ಠಳೆ, ನೀನು ನನಗೆ ಶತ್ರು. ಶ್ರೀರಾಮನ ತಾಯಿಯಾದ ಕೌಸಲ್ಯಾದೇವಿಯೂ ಸುಮಿತ್ರಾದೇವಿಯೂ ಮಿಕ್ಕ ದಶರಥರಾಯನ ಸ್ತ್ರೀಯರೂ ನಿನ್ನಿಂದ ಕೆಟ್ಟರು. ನೀನು ಸತ್ಯಸಂಧನೂ ಅತ್ಯಂತ ಜ್ಞಾನಿಯೂ ಆದ ಅಶ್ವಪತಿಗೆ ಯೋಗ್ಯಳಾದ ಮಗಳಲ್ಲ. ನನ್ನ ತಂದೆಯ ಕುಲವನ್ನು ಕೆಡಿಸಬೇಕೆಂದು ಹುಟ್ಟಿದ ರಾಕ್ಷಸಿ. ಅತ್ಯಂತ ಧರ್ಮಸ್ವರೂಪನೂ ಸತ್ಯಸಂಧನೂ ಅತಿಪರಾಕ್ರಮಿಯೂ ಆದ ಶ್ರೀರಾಮನನ್ನು ವನಕ್ಕೆ ಕಳುಹಿಸಿ ದಶರಥರಾಯನನ್ನು ಕಾಲನ ಮಂದಿರಕ್ಕೆ ಕಳುಹಿಸಿ ನನಗೆ ಪಿತೃವಿಯೋಗವನ್ನೂ ಜ್ಯೇಷ್ಠಭ್ರಾತೃವಿಯೋಗವನ್ನೂ ಉಂಟುಮಾಡುವುದಕ್ಕೆ ನೀನು ಕಾರಣಳಾದೆ. ಧರ್ಮಸ್ವರೂಪಳಾದ ಕೌಸಲ್ಯಾದೇವಿಗೆ ಪುತ್ರವಿಯೋಗವನ್ನು ಮಾಡಿ ಯಾವ ಶ್ರೇಯಸ್ಸನ್ನು ಪಡೆದೆ ? ಎಲೈ ರಾಕ್ಷಸಿ, ಶ್ರೀರಾಮನಿಗೂ ನನಗೂ ಇರುವ ಸ್ನೇಹವನ್ನರಿಯದೆಹೋದೆ. ಕೌಸಲ್ಯಾದೇವಿಯ ಜ್ಯೇಷ್ಠಪುತ್ರನಾದ ಆತನು ನನ್ನ ತಂದೆಗೆ ಸಮಾನನೆಂಬುದನ್ನರಿಯದೆಹೋದೆ. ಶ್ರೀರಾಮನು ಕೌಸಲ್ಯಾದೇವಿಗೆ ಸಾಕ್ಷಾತ್ತಾಗಿ ಶರೀರದಲ್ಲಿ ಹುಟ್ಟಿದ ಪುತ್ರನು. ಅಂಥ ಮಗನ ವಿಯೋಗದಿಂದಾದ ಆ ದೇವಿಯ ದುಃಖವನ್ನು ಇಷ್ಟಷ್ಟೆಂದು ಹೇಳುವುದಕ್ಕೆ ಶಕ್ಯವೆ ? ಒಂದು ಸಲ ಕಾಮಧೇನುವಿನ ವಂಶದಲ್ಲಿ ಹುಟ್ಟಿದ ಎರಡು ಎತ್ತುಗಳು ಮಧ್ಯಾಹ್ನಪರ್ಯಂತ ಉತ್ತು ಬಹಳವಾಗಿ ಬಳಲಿದ್ದರೂ ಕೃಷಿಕನು ಮತ್ತೂ ಉಳಿಸುತ್ತಿರಲು ಅವು ಅಧಿಕವಾಗಿ ಕಂಗೆಟ್ಟವು. ಆ ಎತ್ತುಗಳನ್ನು ಕಂಡು ಕಾಮಧೇನುವು ತನ್ನ ವಂಶದಲ್ಲಿ ಹುಟ್ಟಿದ ಎತ್ತುಗಳಿಗೆ ಅಂಥ ಅವಸ್ಥೆಯು ಬಂದಿತೆಂದು ದುಃಖದಿಂದ ಕಣ್ಣೀರು ಬಿಡುತ್ತಿರಲು ಕೆಳಗಡೆ ಆಕಾಶದಲ್ಲಿ ಸಂಚರಿಸುತ್ತಿದ್ದ ದೇವೇಂದ್ರನ ಶರೀರದ ಮೇಲೆ ಅತ್ಯಂತ ಪರಿಮಳಯುಕ್ತವಾದ ಆ ಕಣ್ಣೀರು ಬಿದ್ದಿತು. ದೇವೇಂದ್ರನು ಆ ಧೇನುವನ್ನು ಕಂಡು ಕೈಮುಗಿದು 'ಎಲೈ ಕಾಮಧೇನುವೆ, ನಾನೇನಾದರೂ ಅಪರಾಧಮಾಡಿದೆನೆ ? ನಿನಗೆ ಈ ದುಃಖವು ಹೇಗೆ ಬಂದಿತು ? ಸಮಸ್ತ ಲೋಕಗಳಿಗೂ ಹಿತವನ್ನು ಬಯಸುವ ನೀನು ರೋದನಮಾಡುವುದಕ್ಕೆ ಕಾರಣವೇನು ? ' ಎಂದು ಕೇಳಿದನು.

ಕಾಮಧೇನುವು ' ದೇವೇಂದ್ರ, ನಿನ್ನಿಂದ ಉಪದ್ರವವುಂಟಾಯಿತೆಂದು ನಾನು ದುಃಖಿಸುತ್ತಿಲ್ಲ. ನನ್ನ ವಂಶದಲ್ಲಿ ಹುಟ್ಟಿದ ಎರಡು ಎತ್ತುಗಳು ಭೂಲೋಕದಲ್ಲಿ ದುರ್ಘಟವಾದ ಸ್ಥಳದಲ್ಲಿ ಸಿಕ್ಕಿ ಸೂರ್ಯನ ಬಿಸಿಲಿನಿಂದ ಕಂಗೆಟ್ಟು ಬಿಡುಗಡೆಯಿಲ್ಲದೆ ಕೃಷಿಕನಿಂದ ದಯೆಯಿಲ್ಲದೆ ಹಿಂಸಿಸಲ್ಪಡುತ್ತಿವೆ. ಆದಕ್ಕಾಗಿ ದುಃಖಪಡುತ್ತಿದ್ದೇನೆ. ಲೋಕದಲ್ಲಿ ಮಕ್ಕಳಿಗೆ ಸಮಾನರಾದವರಿಲ್ಲ. ನನಗೆ ಅನೇಕ ಸಾವಿರ ಮಕ್ಕಳಿದ್ದರೂ ಆ ಎರಡುಮಕ್ಕಳ ಉಪದ್ರವವನ್ನು ನೋಡಿ ರೋದನಮಾಡುತ್ತಿದ್ದೇನೆ ' ಎಂದು ನುಡಿಯಿತು ! ದೇವೇಂದ್ರನು ಆ ಕಾಮಧೇನುವನ್ನು ಸಂತವಿಸಿ ದುಃಖಶಮನಮಾಡಿ ತನ್ನ ಲೋಕಕ್ಕೆ ತೆರಳಿದನು.

ಈ ಪ್ರಕಾರದಲ್ಲಿ ಆ ಕಾಮಧೇನುವು ಅನೇಕ ಸಾವಿರ ಮಕ್ಕಳಿದ್ದರೂ ಎರಡು ಮಕ್ಕಳನ್ನು ಕುರಿತು ಅಧಿಕವಾಗಿ ದುಃಖಪಟ್ಟರೆ, ಒಬ್ಬ ಮಗನುಳ್ಳ ಕೌಸಲ್ಯಾದೇವಿಯು ಆ ಮಗನು ವನಕ್ಕೆ ಹೋದುದಕ್ಕಾಗಿ ಎಷ್ಟು ದುಃಖವುಳ್ಳವಳಾಗಿರಬಹುದು ? ಆ ದೇವಿಗೆ ಅಂಥ ಪುತ್ರವಿಯೋಗ

ದುಃಖವು ನಿನ್ನಿಂದ ಬಂದಿತು. ಆದ್ದರಿಂದ ನೀನು ಈ ಮರ್ತ್ಯಲೋಕದಲ್ಲಿ ಅಧಿಕವಾದ ದುಃಖವನ್ನನುಭವಿಸಿ ಶರೀರಾಂತ್ಯದಲ್ಲಿ ನರಕವನ್ನನುಭವಿಸುತ್ತೀಯೆ. ನಾನು ನನ್ನ ತಂದೆಗೆ ಉತ್ತರಕ್ರಿಯೆಗಳನ್ನು ಮಾಡಿ ಶ್ರೀರಾಮನ ಪಾದಸೇವೆಯನ್ನು ಮಾಡಿಕೊಂಡಿದ್ದರೆ ಲೋಕದಲ್ಲಿ ಕೀರ್ತಿಯನ್ನು ಪಡೆಯುವೆನು. ವನಕ್ಕೆ ಹೋಗುವೆನಲ್ಲದೆ ಆತನ ವಿಯೋಗದಿಂದ ರೋದನಮಾಡುವ ಪ್ರಜೆಗಳ ಮುಂದೆ ರಾಜ್ಯಭಾರವನ್ನು ಹೊತ್ತು ಪಾಪಕ್ಕೊಳಗಾಗೆನು. ಆತನನ್ನು ದೇಶಭ್ರಷ್ಟನನ್ನಾಗಿ ಮಾಡಿ ಹೊರಡಿಸಿದ ಪಾಪವು ನಿನಗೆ ಆಗಲಿ. ನೀನು ಅಗ್ನಿಪ್ರವೇಶವನ್ನಾದರೂ ಮಾಡು. ದಂಡಕಾರಣ್ಯಕ್ಕಾದರೂ ಹೋಗು. ಕಡೆಗೆ ನಿನ್ನ ಕೊರಳಿಗೆ ಹಗ್ಗವನ್ನಾದರೂ ಬಿಗಿದುಕೊಂಡು ಸಾಯಿ. ನಿನಗೆ ಮತ್ತೊಂದು ಗತಿಯಿಲ್ಲ. ವನಕ್ಕೆ ಹೋದ ಶ್ರೀರಾಮನು ತಿರುಗಿ ಬಂದು ರಾಜ್ಯಾಧಿಪತ್ಯವನ್ನು ಮಾಡಿದರೆ ನಾನು ಆತನ ಸೇವೆಯನ್ನು ಮಾಡಿ ಪಾಪವನ್ನು ಕಳೆದುಕೊಂಡು ಕೃತಾರ್ಥನಾಗುವೆನು!" ಎಂದು ಅರಣ್ಯದಲ್ಲಿ ಹೊಸದಾಗಿ ಸಿಕ್ಕಿದ ಆನೆಯಂತೆಯೂ ಮಂತ್ರೌಷಧಗಳಿಂದ ತಡೆಯಲ್ಪಟ್ಟ ಘಟಸರ್ಪದಂತೆಯೂ ನಿಟ್ಟುಸಿರುಬಿಡುತ್ತ ಭೂಮಿಯಲ್ಲಿ ಬಿದ್ದು ಹೊರಳುತ್ತಲಿದ್ದನು. ಅವನು ತೊಟ್ಟ ಆಭರಣಗಳನ್ನು ಸಡಲಿಸಿ ಮಲಿನವಸ್ತ್ರಗಳನ್ನು ಹೊದ್ದುಕೊಂಡು ಕಣ್ಣುಗಳನ್ನು ಕೆಂಪುಮಾಡಿಕೊಂಡು ಉತ್ಸವವು ಮುಗಿದ ಮೇಲೆ ಇಂದ್ರಧ್ವಜವು ಕೆಳಗೆ ಬೀಳುವಂತೆ ಭೂಮಿಯ ಮೇಲೆ ಬಿದ್ದನು.



೭೫ ನೆ ಯ ಅ ಧ್ಯಾ ಯ

## ಭ ರ ತ ನು ಕೌ ಸ ಲ್ಯಾ ದೇ ವಿ ಗೆ ಸ ತ್ಯ ವ ನ್ನು ಹೇ ಳಿ ದ್ದು

ಆಮೇಲೆ ಭರತನು ಸ್ವಲ್ಪಹೊತ್ತಿನಮೇಲೆ ಮೂರ್ಛೆತಿಳಿದೆದ್ದು ಕಣ್ಣೀರು ಸುರಿಸುತ್ತ ತನ್ನ ತಾಯಿಯನ್ನು ನೋಡಿ ಸಮಸ್ತ ಪ್ರಧಾನಿಗಳ ಸಂಮುಖದಲ್ಲಿ ಹೀಗೆ ಹೇಳಲಾರಂಭಿಸಿದನು: "ನಾನು ರಾಜ್ಯವನ್ನು ಬಯಸಿದವನಲ್ಲ. ತಾಯಿಯೊಡನೆ ಆಲೋಚನೆಮಾಡಿದವನಲ್ಲ. ಮಹಾರಾಜನು ಉದ್ದೇಶಿಸಿದ ಅಭಿಷೇಕದ ವಿಷಯವೇ ನನಗೆ ಗೊತ್ತಿರಲಿಲ್ಲ. ನಾನು ದೂರದೇಶದಲ್ಲಿ ಇದ್ದೆ. ಶ್ರೀರಾಮನು ಸೀತಾಲಕ್ಷ್ಮಣರೊಡನೆ ವನಕ್ಕೆ ಹೋದದ್ದು ನನಗೆ ತಿಳಿಯದು" ಎಂದು ಹಲುಬುತ್ತಿದ್ದನು.

ಆ ಧ್ವನಿಯನ್ನು ಕೇಳಿದ ಕೌಸಲ್ಯಾದೇವಿಯು ಭರತನು ಬಂದನೆಂದು ತಿಳಿದು ಸುಮಿತ್ರಾ ದೇವಿಯನ್ನು ಕುರಿತು "ಸುಮಿತ್ರಾದೇವಿ, ಪಾಪಸ್ವರೂಪಳಾದ ಕೈಕೇಯಿದೇವಿಯ ಮಗನು ಬಂದಿದ್ದಾನೆ. ಆತನನ್ನು ಕಂಡು ಬಹಳ ದಿನಗಳಾದವು. ಆತನನ್ನು ನೋಡಿ ಮಾತನಾಡಿ ಬರೋಣ, ಬಾ" ಎಂದು ಹೇಳಿ ಅವಳನ್ನು ಕರೆದುಕೊಂಡು ಮಲಿನವಸ್ತ್ರವನ್ನು ಧರಿಸಿಕೊಂಡು ಭರತನಿದ್ದೆಡೆಗೆ ಹೊರಟಳು. ಅಷ್ಟರಲ್ಲಿ ಭರತನು ಶತ್ರುಘ್ನನನ್ನು ಕೂಡಿಕೊಂಡು ಆ ದೇವಿಯ ಮನೆಗೆ ಹೋಗಿ ರೋದಿಸತೊಡಗಿದನು. ಆ ದೇವಿಯು ಭರತಶತ್ರುಘ್ನರನ್ನು ತಬ್ಬಿಕೊಂಡು ದುಃಖದಿಂದ ಹಂಬಲಿಸಿ ರೋದನಮಾಡುತ್ತ ಭರತನನ್ನು ಕುರಿತು "ಭರತ, ರಾಜ್ಯವನ್ನು ಬಯಸುತ್ತಿದ್ದ ನಿನಗೆ ನಿನ್ನ ತಾಯಿಯಾದ ಕೈಕೇಯಿದೇವಿಯಿಂದ ಉಪದ್ರವವಿಲ್ಲದೆ ರಾಜಪದವಿಯು ಸಂಭವಿಸಿತು. ನನ್ನ ಮಗನಾದ ಶ್ರೀರಾಮನನ್ನು ನಾರುಬಟ್ಟೆಯನ್ನುಡಿಸಿ ವನವಾಸಕ್ಕೆ ಕಳುಹಿಸಲು ಆತನಲ್ಲಿ ಯಾವ

ಅವಗುಣವನ್ನು ಕಂಡಳು ? ಇನ್ನು ನನ್ನನ್ನೂ ಹೊರಡಿಸುವಳು. ಅಲ್ಲದಿದ್ದರೆ ಶ್ರೀರಾಮನು ಎಲ್ಲಿದ್ದಾನೋ ಅಲ್ಲಿಗೆ ಸುಮಿತ್ರಾದೇವಿಯನ್ನು ಕೂಡಿಕೊಂಡು ಅಗ್ನಿಹೋತ್ರಗಳನ್ನು ತೆಗೆದುಕೊಂಡು ನಾನೇ ಹೋಗುತ್ತೇನೆ. ಅಥವಾ ನಿನ್ನ ಮನಸ್ಸು ಬಂದಂತೆ ನೀನೇ ಆತನ ಬಳಿಗೆ ಕರೆದುಕೊಂಡು ಹೋಗು ; ಸಮಸ್ತ ಧನಧಾನ್ಯಗಳಿಂದ ಪರಿಪೂರ್ಣವಾಗಿ ಚತುರಂಗಬಲದಿಂದಿಟ್ಟಣಿಸಿರುವ ಈ ರಾಜ್ಯವು ನಿನಗೆ ಬರುವಂತೆ ನಿನ್ನ ತಾಯಿಯಾದ ಕೈಕೇಯೀದೇವಿಯು ಮಾಡಿದ್ದಾಳೆ" ಎಂದು ನಿಷ್ಠುರವಚನಗಳನ್ನು ನುಡಿದಳು.

ಭರತನು ಆ ಮಾತುಗಳನ್ನು ಕೇಳಿ ವ್ರಣದ ಮೇಲೆ ಕೂರಲಗು ತಗುಲಿದಂತೆ ವ್ಯಥೆಪಟ್ಟನು. ಕೌಸಲ್ಯಾದೇವಿಯ ಪಾದಗಳಿಗೆರಗಿ ದುಃಖಾತಿಶಯದಿಂದ ಚೈತನ್ಯಗುಂದಿ ಮೂರ್ಛಿತನಾದನು. ಸ್ವಲ್ಪಹೊತ್ತಿನಮೇಲೆ ಮೂರ್ಛೆತಿಳಿದೆದ್ದು ಕೈಮುಗಿದುಕೊಂಡು ಅತ್ಯಂತ ದುಃಖಾಕ್ರಾಂತೆಯಾದ ಆ ದೇವಿಯನ್ನು ಕುರಿತು ಹೀಗೆ ನುಡಿದನು : "ಅಮ್ಮ. ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿ ನನಗೆ ಪಟ್ಟಾಭಿಷೇಕಮಾಡಬೇಕೆಂದು ಯತ್ನಮಾಡಿದ ವೃತ್ತಾಂತವನ್ನು ನಾನು ಅರಿಯೆನು. ನನಗೆ ಏಕೆ ನಿಷ್ಠುರೋಕ್ತಿಗಳನ್ನು ನುಡಿಯುತ್ತೀಯೆ ? ಶ್ರೀರಾಮನಲ್ಲಿ ನನಗೆ ಅತ್ಯಂತ ಪ್ರೀತಿಯುಂಟೆಂಬುದನ್ನು ನೀನು ಬಲ್ಲೆ. ಸತ್ಪುರುಷರೊಳಗೆ ಉತ್ತಮನಾಗಿ ಸತ್ಯಸಂಧನಾದ ಆತನನ್ನು ವನವಾಸಕ್ಕೆ ಕಳುಹಿಸುವ ವೃತ್ತಾಂತವನ್ನು ಅರಿತಿದ್ದರ ನನಗೆ ಧರ್ಮಮಾರ್ಗವನ್ನು ಬಿಟ್ಟು ದುರ್ಮಾರ್ಗದಲ್ಲಿ ನಡೆಯುವವನ ಪಾಪವುಂಟಾಗಲಿ—ಅತ್ಯಂತ ಪಾಪವನ್ನು ಮಾಡಿದವರೂ ಸೂರ್ಯನಿಗೆದುರಾಗಿ ಮೂತ್ರ ವಿಸರ್ಜನೆಮಾಡುವವರೂ ಯಾವ ಲೋಕಕ್ಕೆ ಹೋಗುವರೋ, ಆ ಲೋಕವು ನನಗೆ ಲಭಿಸಲಿ—ಭೃತ್ಯನಿಂದ ಮಹತ್ತಾದ ಕಾರ್ಯವನ್ನು ಮಾಡಿಸಿ ಕಾರ್ಯವು ಮುಗಿದಮೇಲೆ ಅವನಿಗೆ ಉಚಿತವಾದ್ದನ್ನು ಕೊಡದೆ ಆ ಕಾರ್ಯವನ್ನು ತುಚ್ಛೀಕರಿಸಿ ನುಡಿಯುವುದರಿಂದಲೂ, ಪ್ರಜೆಗಳನ್ನು ಮಕ್ಕಳ ಹಾಗೆ ಪರಿಪಾಲಿಸುವ ಅರಸನಿಗೆ ದ್ರೋಹವನ್ನು ಮಾಡುವುದರಿಂದಲೂ, ಪ್ರಜೆಗಳ ಹುಟ್ಟುವಳಿಯೊಳಗೆ ಆರರಲ್ಲೊಂದು ಭಾಗವನ್ನು ಶಾಸ್ತ್ರಪ್ರಕಾರದಿಂದ ತೆಗೆದುಕೊಂಡೂ ಆ ಪ್ರಜೆಗಳನ್ನು ಧರ್ಮದಿಂದ ರಕ್ಷಿಸದಿರುವುದರಿಂದಲೂ. ತಪಸ್ವಿಗಳಿಗೂ ಬ್ರಾಹ್ಮಣರಿಗೂ ದಕ್ಷಿಣೆಯನ್ನು ಕೊಡುವುದಾಗಿ ಹೇಳಿ ತಪ್ಪುವುದರಿಂದಲೂ ಉಂಟಾಗುವ ಪಾಪವು ನನಗೆ ಬರಲಿ—ಚತುರಂಗಬಲಸಮೇತನಾಗಿ ಯುದ್ಧ ಮಾಡುವಾಗ ಶತ್ರುವಾದರೂ ಮರೆಹೊಕ್ಕವನನ್ನೂ ನೀರುಹೊಕ್ಕವನನ್ನೂ ಆಯುಧವಿಲ್ಲದವನನ್ನೂ ದಯೆಯಿಲ್ಲದೆ ಸಂಹರಿಸುವುದಕ್ಕೂ, ವಿಶ್ವಾಸದಿಂದ ಸೂಕ್ಷ್ಮವಾದ ಧರ್ಮರಹಸ್ಯವನ್ನು ಉಪದೇಶ ಮಾಡಿಸಿಕೊಂಡು ಆ ಧರ್ಮರಹಸ್ಯವನ್ನು ತುಚ್ಛೀಕರಿಸಿ ನಡೆಯುವುದಕ್ಕೂ ಫಲವಾದ ಲೋಕವು ನನಗೆ ಘಟಿಸಲಿ—ಮನಸ್ಸಿಗೆ ಹರ್ಷವನ್ನುಂಟುಮಾಡುವ ಪತ್ನಿಯನ್ನು ನಿಷ್ಕಾರಣವಾಗಿ ಪರಿತ್ಯಾಗಮಾಡಿ ಸಂತಾನವಿಲ್ಲದಿರುವವರಿಗೆ ಬರುವ ಲೋಕವು ನನಗೆ ಲಭಿಸಲಿ—ಧರ್ಮಸಾಧನವಾದ ಕರ್ಮವನ್ನು ಮಾಡದಿರುವವನೈದುವ ಲೋಕವು ನನಗುಂಟಾಗಲಿ. ಪರಸ್ತ್ರೀಯರನ್ನು ಬಯಸುವುದು, ಗುರುತಲ್ಪ ಗಮನ, ಮಿತ್ರದ್ರೋಹ ಮೊದಲಾದ ಪಾಪದ ಫಲವು ನನಗೆ ಬರಲಿ—ದೇವಸಂತರ್ಪಣೆ ಮಾಡದವರಿಗೂ ತಾಯಿತಂದೆಗಳ ಸೇವೆಮಾಡದವರಿಗೂ ಉಂಟಾಗುವ ಲೋಕವು ನನಗುಂಟಾಗಲಿ. ನಾನು ಶ್ರೀರಾಮನ ವನವಾಸಸಂಗತಿಯನ್ನರಿತಿದ್ದರೆ. ಯಾಚಕರಿಗೆ ಕೊಡುವುದಾಗಿ ಹೇಳಿ ಅವರು ಕಣ್ಣುಬಾಯಿಬಿಟ್ಟು ಕೈಯೆತ್ತಿ ಕೇಳಿದರೆ ಹಾಸ್ಯವನ್ನು ಮಾಡುವವರಿಗೂ, ಡಂಭಾಚಾರಮಾಡಿಕೊಂಡು ಭಂಡರಾಗಿ ಅರಸರಿಗಂಜದೆ ಚಾಡಿಯನ್ನು ಹೇಳುತ್ತ ದುರ್ಮಾರ್ಗದಲ್ಲಿ ನಡೆಯುವವರಿಗೂ ಆಗುವ ಲೋಕವು ನನಗಾಗಲಿ—ಪಾನಯೋಗ್ಯವಾದ ಉದಕವುಳ್ಳ ಕೊಳವನ್ನು ಕೆಡಿಸುವುದರಿಂದಲೂ ಪ್ರಾಣಿ ಗಳಿಗೆ ವಿಷವಿಡುವುದರಿಂದಲೂ ಬರುವ ಪಾಪವು ನನಗೆ ಸಂಭವಿಸಲಿ—ಬ್ರಾಹ್ಮಣರಿಗೆ ಕೊಡುವ

ದಾನಕ್ಕೆ ವಿಘ್ನವನ್ನು ಮಾಡುವವರೂ, ಕರುವಿಗೆ ಬಿಡದೆ ಹಾಲನ್ನು ಕರೆಯುವವರೂ, ತೃಷೆಯಿಂದ ಕಂಗೆಟ್ಟವರಿಗೆ ಉದಕವನ್ನು ಕೊಡದವರೂ ಯಾವ ಲೋಕವನ್ನೈದುವರೋ ಆ ಲೋಕವು ನನಗೆ ಪ್ರಾಪ್ತವಾಗಲಿ. ತಾಯಿ, ಶ್ರೀರಾಮನ ವನವಾಸವೃತ್ತಾಂತವನ್ನು ತಿಳಿದಿದ್ದರೆ ನಾನು ದಶರಥರಾಯನ ಕುಮಾರನಲ್ಲ ! " ಎಂದು ನುಡಿದು ಅತ್ಯಂತ ಪಗ್ಗಳವಾಗಿ ರೋದನಮಾಡತೊಡಗಿದನು.

ಕೌಸಲ್ಯಾದೇವಿಯು "ಭರತ, ಹೀಗೆ ಆಣೆಗಳಿಟ್ಟು ಮಾತನಾಡುವುದರಿಂದ ನನ್ನ ದುಃಖ ಹೆಚ್ಚುತ್ತಿದೆ. ನೀನು ಸ್ವಲ್ಪವಾದರೂ ಧರ್ಮಮಾರ್ಗವನ್ನು ಬಿಟ್ಟವನಲ್ಲ. ಆದ್ದರಿಂದ ಶತ್ರುಘ್ನ ಸಮೇತನಾದ ನೀನು ಅತ್ಯಂತ ಕೀರ್ತಿಯನ್ನು ಪಡದು ಪರಲೋಕದಲ್ಲಿ ಉತ್ತಮಗತಿಯನ್ನು ಪಡೆಯುವೆ" ಎಂದು ಸಂತವಿಟ್ಟು ಶ್ರೀರಾಮನಲ್ಲಿ ಅತ್ಯಂತ ಪ್ರೀತಿಯುಳ್ಳ ಭರತನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅತ್ಯಂತ ದುಃಖಿತೆಯಾಗಿರಲು ಭರತನೂ ದುಃಖಾತಿಶಯದಿಂದ ಮುಂದುಗಾಣದೆ ಕಂಗೆಟ್ಟನು.



೭೬ ನೆಯ ಅಧ್ಯಾಯ

## ಭರತನಿಂದ ದಶರಥನಿಗೆ ಅಗ್ನಿಸಂಸ್ಕಾರ

ಹೀಗೆ ದುಃಖಸಂತಪ್ತನಾಗಿದ್ದ ಭರತನ ಬಳಿಗೆ ವಸಿಷ್ಠಮುನಿಯು ಬಂದು "ಭರತ, ಶೋಕವನ್ನು ಸಾಕುಮಾಡು. ಲೋಕಾಂತರವನ್ನೈದಿದ ದಶರಥನಿಗೆ ಉತ್ತರಕ್ರಿಯೆಯನ್ನು ನಡೆಯಿಸು" ಎಂದು ಹೇಳಿದನು. ಆಗ ಭರತನು ವಸಿಷ್ಠಮುನೀಶ್ವರನ ಮಾತಿನಮೇರೆಗೆ ತೈಲದ ಕೊಪ್ಪರಿಗೆಯಿಂದ ದಶರಥರಾಯನ ಶರೀರವನ್ನು ಎತ್ತಿ ಭೂಮಿಯಮೇಲಿರಿಸಿದನು. ತರುವಾಯ ಮಲಗಿದವನಂತಿದ್ದ ಆ ರಾಯನ ಬಿಳುಪೇರಿದ ಮುಖವನ್ನು ನೋಡುತ್ತ ರತ್ನಖಚಿತವಾದ ಮಂಚದಮೇಲೆ ಅವನನ್ನು ಮಲಗಿಸಿ ಅತ್ಯಂತ ದುಃಖಯುಕ್ತನಾಗಿ "ಮಹಾರಾಜ, ಶ್ರೀರಾಮನನ್ನೂ ಲಕ್ಷ್ಮಣನನ್ನೂ ಹೊರಡಿಸಿ ಇದೇನು ಮಾಡಿದೆ ? ಶ್ರೀರಾಮನೂ ಇಲ್ಲದೆ ನೀನೂ ಇಲ್ಲದೆ ಈ ಪಟ್ಟಣದ ಯೋಗಕ್ಷೇಮಗಳನ್ನು ವಿಚಾರಿಸುವವರಾರು ? ರಾಮಲಕ್ಷ್ಮಣರ ವಿಯೋಗದಿಂದ ವ್ಯಥೆಪಡುವ ನನ್ನನ್ನು ಏಕೆ ಬಿಟ್ಟು ಹೋದೆ ? ನಿನ್ನ ಕಾಲಾನಂತರದಲ್ಲಿ ಶ್ರೀರಾಮನು ರಾಜ್ಯವನ್ನಾಳುವನೆಂದಿದ್ದೆವು. ನೀನು ಹೋಗಿ ಆತನೂ ವನಕ್ಕೆ ಹೋದದ್ದರಿಂದ ಅಯೋಧ್ಯಾ ಪಟ್ಟಣವು ಚಂದ್ರನಿಲ್ಲದ ರಾತ್ರಿಯಂತಿದೆ. ಈ ಭೂಮಿಯು ಒಡೆಯನಿಲ್ಲದೆ ವಿಧವಾಸ್ತ್ರೀಯಂತೆ ಕಾಣುತ್ತದೆ ! " ಎಂದು ಹಂಬಲಿಸಿದನು.

ಆ ಬಳಿಕ ವಸಿಷ್ಠಮುನೀಶ್ವರನು ಸ್ವರ್ಗಸ್ಥನಾದ ದಶರಥರಾಯನಿಗೆ ಮುಂದೆ ಮಾಡಬೇಕಾದ ಪ್ರೇತಕಾರ್ಯಗಳಿಗೆ ಬೇಕಾದ ವಸ್ತುಗಳನ್ನು ತರಿಸಬೇಕೆಂದು ನುಡಿಯಲು ಭರತನು ಪುರೋಹಿತರನ್ನೂ ಆಚಾರ್ಯರನ್ನೂ ಋತ್ವಿಕ್ಕುಗಳನ್ನೂ ಕರೆದು ಅಗ್ನಿಹೋತ್ರದ ಮನೆಯಿಂದ ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿಗಳನ್ನು ವಿಧ್ಯುಕ್ತಪ್ರಕಾರದಲ್ಲಿ ತೆಗೆಯಿಸಿದನು. ಆಮೇಲೆ ದಶರಥರಾಯನ ಶರೀರವನ್ನು ಪಲ್ಲಕ್ಕಿಯಮೇಲಿರಿಸಿ, ಆ ಪಲ್ಲಕ್ಕಿಯ ಮುಂದೆ ಮಾರ್ಗದಲ್ಲಿ ಅನೇಕ ದ್ರವ್ಯಗಳನ್ನೂ ಸುವರ್ಣ ಪುಷ್ಪಗಳನ್ನೂ ಚೆಲ್ಲುತ್ತ ಚಂದನ ಕರ್ಪೂರ ದೇವದಾರು ಧೂಪಗಳನ್ನೂ ಪರಿಮಳವುಳ್ಳ ಕದಂಬ ಧೂಪವನ್ನೂ ಹಾಕುತ್ತ ರುದ್ರಭೂಮಿಗೆ ತೆಗೆಯಿಸಿಕೊಂಡು ಹೋದನು. ವಿಧ್ಯುಕ್ತಪ್ರಕಾರದಲ್ಲಿ

ಹೋಮವನ್ನು ಮಾಡಿ, ದಶರಥರಾಯನ ಶರೀರವನ್ನು ಚಿತೆಯಲ್ಲಿರಿಸಿದನು. ಬ್ರಾಹ್ಮಣರು ಕಾಲೋಚಿತವಾದ ವೇದಸೂಕ್ತಗಳನ್ನು ಜಪಿಸುತ್ತಿರಲು ಆನೆ ಕುದುರೆ ಪಲ್ಲಕ್ಕಿ ಮೊದಲಾದ ವಾಹನ ಗಳಲ್ಲಿ ಅವರವರ ತಾರತಮ್ಯಪ್ರಕಾರ ದಶರಥರಾಯನ ಸ್ತ್ರೀಯರು ಬಂದು ಆ ಚಿತೆಯನ್ನು ಅಪಸವ್ಯವಾಗಿ ಪ್ರದಕ್ಷಿಣೆಮಾಡಿದರು. ಭರತನು ರೋದನಮಾಡುತ್ತ ಅಗ್ನಿಸಂಸ್ಕಾರವನ್ನು ಮಾಡಿ, ಸರಯೂನದಿಯಲ್ಲಿ ಸ್ನಾನಮಾಡಿ, ಪಿತೃಮೇಧ ತರ್ಪಣವನ್ನು ಕೊಟ್ಟು, ಮಂತ್ರಿ ಪುರೋಹಿತರೊಡನೆ ಕೂಡಿ ಪುರವನ್ನು ಪ್ರವೇಶಿಸಿದನು. ಅನಂತರ ಶೋಕಿಸುತ್ತ ದಶಾಹದವರೆಗೆ ಎಲ್ಲ ಕರ್ಮಗಳನ್ನೂ ಮಾಡಿ ಮುಗಿಸಿದನು.

## ೭೭ ನೆಯ ಅಧ್ಯಾಯ

## ಭರತಶತ್ರುಘ್ನರ ವಿಲಾಪ

ಈ ಪ್ರಕಾರದಲ್ಲಿ ದಶರಥರಾಯನು ಸ್ವರ್ಗಸ್ಥನಾದ ಹತ್ತನೆಯ ದಿನದ ಕರ್ಮವು ಕಳೆದಮೇಲೆ, ಭರತನು ಹನ್ನೆರಡನೆಯ ದಿವಸದಲ್ಲಿ ಮಾಡುವ ಕೃತ್ಯಗಳನ್ನು ತೀರಿಸಿ ಬ್ರಾಹ್ಮಣರಿಗೆ ಭೂರಿಭೋಜನ ಗಳನ್ನು ಮಾಡಿಸಿದನು. ಅನೇಕ ದ್ರವ್ಯಗಳನ್ನೂ ಮಂಚ ಮನೆ ಭೃತ್ಯರು ದಾಸಿಯರು ಮೊದಲಾದವು ಗಳನ್ನೂ ಕೊಟ್ಟು ದಶರಥರಾಯನ ಅಪರಕೃತ್ಯವನ್ನು ಮುಗಿಸಿದನು. ಹದಿಮೂರನೆಯ ದಿನದಲ್ಲಿ ಹಂಬಲಿಸಿ ರೋದನಮಾಡುತ್ತ ಆ ರಾಯನ ಶರೀರವನ್ನು ಸಂಸ್ಕಾರಮಾಡಿದ ಸ್ಥಳಕ್ಕೆ ಹೋಗಿ ವಿಲಾಪಿಸತೊಡಗಿದನು: "ಎಲೈ ತಂದೆಯೆ, ಅಣ್ಣನಾದ ಶ್ರೀರಾಮನು ವನಕ್ಕೆ ಹೋಗಿರಲು ಈ ಶೂನ್ಯಸ್ಥಾನದಲ್ಲಿ ನಮ್ಮನ್ನು ಹೇಗೆ ಬಿಟ್ಟು ಹೋದೆ! ಅನಾಥೆಯಾದ ಕೌಸಲ್ಯಾದೇವಿಗೆ ರಕ್ಷಕನಾದ ಶ್ರೀರಾಮನನ್ನು ವನಕ್ಕೆ ಕಳುಹಿಸಿ ಪುತ್ರಶೋಕದಿಂದ ವ್ಯಥೆಪಡುತ್ತಿರುವ ಆ ದೇವಿಯನ್ನು ಬಿಟ್ಟು ಎಲ್ಲಿಗೆ ಹೋದೆ!" ಎಂದು ವಿಲಾಪಿಸುತ್ತ ದಶರಥರಾಯನನ್ನು ಸಂಸ್ಕಾರಮಾಡಿದ ಪ್ರದೇಶದಲ್ಲಿ ಅಸ್ಥಿದಹನದಿಂದ ಕೆಂಪಾದ ಭಸ್ಮವುಳ್ಳ ಭೂಮಿಯನ್ನು ನೋಡುತ್ತಲಿದ್ದನು. ದಶರಥನು ಸ್ವರ್ಗಸ್ಥನಾದ ವೃತ್ತಾಂತವನ್ನು ನೆನೆದು ಹಂಬಲಿಸುತ್ತ ಭರತನು ಚೈತನ್ಯಗುಂದಿ ಮೂರ್ಛಿತನಾಗಿ ನೆಲಕ್ಕೆ ಬಿದ್ದನು. ಅದನ್ನು ಕಂಡು ಸ್ವರ್ಗಲೋಕದಿಂದ ಭೂಮಿಗೆ ಬಿದ್ದ ಯಯಾತಿರಾಯನನ್ನು ಋಷಿಗಳು ಕೈಹಿಡಿದೆತ್ತಿದಂತೆ ಮಂತ್ರಿಗಳು ಭರತನನ್ನು ಕೈಹಿಡಿದೆತ್ತಿದರು. ಆಗ ಶತ್ರುಘ್ನನು ಹಂಬಲಿಸುತ್ತಿದ್ದ ಭರತನನ್ನು ಕಂಡು ತಾನೂ ದಶರಥರಾಯನನ್ನು ನೆನೆದು ಶೋಕಿಸುತ್ತ ಚೈತನ್ಯ ಗುಂದಿ ಹುಚ್ಚನಂತೆ ನೆಲದಮೇಲೆ ಬಿದ್ದು ಹೊರಳುತ್ತಿದ್ದನು.

ಆ ಬಳಿಕ ಭರತನು ಮೂರ್ಛೆತಿಳಿದೆದ್ದು ತಂದೆಯಾದ ದಶರಥರಾಯನನ್ನು ಕುರಿತು ದುಃಖಿಸುತ್ತ "ಮಹಾರಾಜ, ಹಂಬಲಿಸುತ್ತಿರುವ ಶತ್ರುಘ್ನನನ್ನು ಬಿಟ್ಟು ನೀನು ಎಲ್ಲಿ ಹೋದೆ? ಭೋಜನಸಮಯದಲ್ಲಿ ಮಧುರವಾದ ಪಾನದ್ರವ್ಯಗಳನ್ನು ಕೊಟ್ಟು ನಮ್ಮನ್ನು ಬಹಳವಾಗಿ ಸಂತವಿಟ್ಟು ಆದರಿಸುತ್ತಿದ್ದ ನೀನು ಲೋಕಾಂತರಕ್ಕೆ ಹೋಗಿದ್ದರೂ ನಮ್ಮ ಎದೆಗಳು ಒಡೆಯದೆ ಕಲ್ಲಾಗಿ ನಿಂತಿವೆ. ಶ್ರೀರಾಮನು ವನಕ್ಕೆ ಹೋಗಿ ನೀನೂ ಸ್ವರ್ಗಸ್ಥನಾದಮೇಲೆ ನಾನು ಜೀವಿಸ ಲಾರೆನು. ಅಗ್ನಿಪ್ರವೇಶವನ್ನಾದರೂ ಮಾಡುವೆನು. ನಾನು ತಂದೆಯೂ ಇಲ್ಲದ ಅಣ್ಣನೂ ಇಲ್ಲದ ಈ ಅಯೋಧ್ಯಾಪಟ್ಟಣವನ್ನು ಪ್ರವೇಶಿಸಲೊಲ್ಲೆನು. ವನಕ್ಕೆ ಹೋಗುತ್ತೇನೆ" ಎಂದು

ಅಳುತ್ತಿದ್ದನು. ಭರತಶತ್ರುಘ್ನರನ್ನು ಕಂಡ ಪ್ರಧಾನಿಗಳೂ ಸಂಗಡ ಬಂದವರೂ ಗೋಳಿಟ್ಟು ರೋದನ ಮಾಡುತ್ತಿದ್ದರು.

ಈ ರೀತಿಯಲ್ಲಿ ಭರತಶತ್ರುಘ್ನರು ವೃಕ್ಷದಿಂದ ಮುರಿದುಬಿದ್ದ ಕೊಂಬೆಗಳಂತೆ ನೆಲದಮೇಲೆ ಬಿದ್ದು ಹೊರಳುತ್ತಲೂ ಅವರೊಡನೆ ಬಂದ ಪ್ರಧಾನಿಗಳೂ ಬಂಧುಜನಗಳೂ ಗೋಳಿಡುತ್ತಲೂ ಇರುವುದನ್ನು ಕಂಡು ವಸಿಷ್ಠಮುನೀಶ್ವರನು ಭರತಶತ್ರುಘ್ನರನ್ನು ಕೈಹಿಡಿದೆತ್ತಿ ಹೀಗೆ ಸಂತವಿಟ್ಟನು : "ಭರತ, ನಿಮ್ಮ ತಂದೆಯು ಸ್ವರ್ಗಸ್ಥನಾಗಿ ಇಂದಿಗೆ ಹದಿಮೂರು ದಿನಗಳಾದವು. ಈ ಶ್ಮಶಾನದಲ್ಲಿ ನೀವು ಏಕೆ ಹೊರಳುತ್ತಿದ್ದೀರಿ ? ಲೋಕದಲ್ಲಿ ಪ್ರಾಣಿಗಳಿಗೆ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಷಡ್ವರ್ಗಗಳನ್ನು ಪರಿಹರಿಸುವುದಕ್ಕೆ ಶಕ್ಯವಲ್ಲ. ನೀವು ದುಃಖಪಡಬೇಡಿ" ಎಂದು ನುಡಿದನು. ಸಕಲ ತತ್ತ್ವವಿಚಾರವನ್ನೂ ಬಲ್ಲ ಸುಮಂತ್ರನು ಶತ್ರುಘ್ನನನ್ನು ಕೈಹಿಡಿದೆತ್ತಿ ಸಮಸ್ತ ಪ್ರಾಣಿಗಳಿಗೂ ಉತ್ಪತ್ತಿಲಯಗಳುಂಟೆಂದು ತತ್ತ್ವವನ್ನು ಬೋಧಿಸಿದನು. ಆ ಬಳಿಕ ಭರತ ಶತ್ರುಘ್ನರು ವಸಿಷ್ಠ ಸುಮಂತ್ರರ ಉಪದೇಶದಿಂದ ಸ್ವಲ್ಪ ಚಿತ್ತಸ್ವಾಸ್ಥ್ಯವನ್ನು ಪಡೆದರು ಆಮೇಲೆ ಸುಮಂತ್ರನೇ ಮೊದಲಾದ ಪ್ರಧಾನರು ತಮ್ಮ ಕಣ್ಣೀರನ್ನು ಒರೆಸಿಕೊಂಡು ಶೋಕಾತಿಶಯದಿಂದ ಕೆಂಪಾದ ಕಣ್ಣುಗಳುಳ್ಳ ಭರತಶತ್ರುಘ್ನರನ್ನು ಕುರಿತು ಮುಂದಣ ಕಾರ್ಯವನ್ನು ಯೋಚಿಸಬೇಕೆಂದು ಹೇಳಿದರು.



## ೭೮ ನೆ ಯ ಅ ಧ್ಯಾ ಯ

## ಶ ತ್ರು ಘ್ನ ನು ಮಂ ಥ ರೆ ಯ ನ್ನು ದಂ ಡಿ ಸಿ ದ್ದು

ಅನಂತರ ಅವರೆಲ್ಲರೂ ಅರಮನೆಗೆ ಹಿಂತಿರುಗಿದರು. ಆಗ ಕೈಕೇಯೀದೇವಿಯ ಅರಮನೆಯ ಮೂಡಣ ಬಾಗಿಲಲ್ಲಿ ಮಂಥರೆಯು ರಾಜಯೋಗ್ಯವಾದ ದುಕೂಲವನ್ನುಟ್ಟು ಗಂಧವನ್ನು ಲೇಪನಮಾಡಿಕೊಂಡು, ಕಾಂಚೀದಾಮ ಕಾಲಂದಿಗೆ ಹರಳೋಲೆ ಮುತ್ತಿನಸರದ ಪದಕ ಕಂಠಮಾಲೆ ಕಡಗ ತೋಳುಬಳೆ ಮೊದಲಾದ ಸರ್ವಾಭರಣಗಳನ್ನು ತೊಟ್ಟು ಅನೇಕ ಹಗ್ಗಗಳಿಂದ ಕಟ್ಟಲ್ಪಟ್ಟ ಹೆಣ್ಣು ಕೋತಿಯಂತೆ ಒಪ್ಪುತ್ತಿದ್ದಳು. ಆಗ ದ್ವಾರಪಾಲಕರು ಶತ್ರುಘ್ನನ ಸಮೀಪಕ್ಕೆ ಬಂದು "ಶತ್ರುಘ್ನ, ಶ್ರೀರಾಮನನ್ನು ವನವಾಸಕ್ಕೆ ಹೊರಡಿಸಿ ದಶರಥರಾಯನನ್ನು ಲೋಕಾಂತರಕ್ಕೆ ಕಳುಹಿಸಿದವಳು ಇವಳೇ. ಇವಳ ಹೆಸರು ಮಂಥರೆ" ಎಂದು ಸೂಚಿಸಿದರು. ಆಗ ಶತ್ರುಘ್ನನು ಅತ್ಯಂತ ಕೋಪಯುಕ್ತನಾಗಿ ಕೈಕೇಯೀದೇವಿಯ ಅಂತಃಪುರದಲ್ಲಿ ತಿರುಗಾಡುತ್ತಿದ್ದ ದೂತರನ್ನು ಕರೆದು "ಎಲೈ ದೂತರುಗಳಿರಾ, ಈ ಮಂಥರೆಯ ಕೃತ್ಯದಿಂದ ನಮ್ಮ ತಂದೆಯಾದ ದಶರಥ ರಾಯನು ಸ್ವರ್ಗಸ್ಥನಾದನು. ಇವಳು ನಮ್ಮ ನಾಲ್ವರಣ್ಣತಮ್ಮಂದಿರಿಗೂ ಅನೇಕ ರೀತಿಯಲ್ಲಿ ಮನೋವ್ಯಥೆಯನ್ನು ಉಂಟುಮಾಡಿದ್ದಾಳೆ. ಇಷ್ಟುಮಂದಿಗೂ ದುಃಖವನ್ನುಂಟುಮಾಡಿದ ಇವಳು ತನ್ನ ಪಾಪಕರ್ಮದ ಫಲವನ್ನು ಅನುಭವಿಸಬೇಕು" ಎಂದು ಹೇಳಿದನು.

ಶತ್ರುಘ್ನನು ಕೂಡಲೆ ಸಖಿಯರೊಡನಿದ್ದ ಆ ಮಂಥರೆಯನ್ನು ಬಲಾತ್ಕಾರವಾಗಿ ಹಿಡಿದನು. ಆಗ ಮಂಥರೆಯು ಹೋ ಎಂದು ಕಿರಿಚಿದಳು. ಅವಳ ಸಖಿಯರು "ಈ ಶತ್ರುಘ್ನನು ನಮ್ಮನ್ನೆಲ್ಲ ಕೊಂದುಬಿಟ್ಟಾನು. ಧರ್ಮರಹಸ್ಯವನ್ನರಿತ ಕೌಸಲ್ಯೆಯಲ್ಲಿ ಶರಣಾಗೋಣ" ಎಂದು ಕೂಗುತ್ತ ಓಡಿಹೋದರು.

ಶತ್ರುಘ್ನನು ವಿಶೇಷವಾಗಿ ಕೋಪಿಸಿಕೊಂಡು ಕಣ್ಣುಗಳನ್ನು ಕೆಂಪುಮಾಡಿಕೊಂಡು, ಮೊರೆಯಿಡುತ್ತಿದ್ದ ಮಂಥರೆಯನ್ನು ಮುಂದಲೆಹಿಡಿದೆಳೆದು ಭೂಮಿಯಮೇಲೆ ಎಳೆದಾಡಿದನು. ಆಗ ಅವಳು ತೊಟ್ಟಿದ್ದ ರತ್ನಾಭರಣಗಳು ಛಿನ್ನಾಭಿನ್ನವಾಗಿ ಕೈಕೇಯಿದೇವಿಯ ಅರಮನೆಯ ಅಂಗಣದಲ್ಲಿ ಚೆಲ್ಲಲ್ಪಟ್ಟವು. ಮುತ್ತುರತ್ನಗಳು ಹರಡಿದ ಆ ಅಂಗಳವು ನಕ್ಷತ್ರಗಳಿಂದ ಇಟ್ಟಣಿಸಿದ ಶರತ್ಕಾಲದ ಆಕಾಶದಂತೆ ಕಾಣುತ್ತಿತ್ತು. ಆಗ ಭರತನು ಮಂಥರೆಯ ನಿಮಿತ್ತವಾಗಿ ಅತ್ಯಂತ ದೈನ್ಯಪಡುತ್ತಿದ್ದ ಕೈಕೇಯಿದೇವಿಯನ್ನು ಕಂಡು ಶತ್ರುಘ್ನನನ್ನು ಕುರಿತು "ಶತ್ರುಘ್ನ, ಲೋಕದಲ್ಲಿ ಹೆಂಗೊಲೆಯು ನಿಷಿದ್ಧ ; ಇವಳನ್ನು ಕೊಂದು ಮಾಡುವುದೇನು ? ಕ್ಷಮಿಸು. ಪಾಪಸ್ವರೂಪಳಾದ ಕೈಕೇಯಿದೇವಿಯನ್ನು ಕೊಲ್ಲಬೇಕು ; ಹಾಗೆ ಮಾಡಿದರೆ ಧರ್ಮಿಷ್ಠನಾದ ಶ್ರೀರಾಮನು ನಮ್ಮ ಮೇಲೆ ಕೋಪಿಸುವನು. ಇಲ್ಲದಿದ್ದರೆ ಕೈಕೇಯಿಯನ್ನು ನಾನೇ ಕೊಲ್ಲುತ್ತಿದ್ದೆ " ಎಂದು ನುಡಿದನು.

ಆ ಮಾತನ್ನು ಕೇಳಿ ಶತ್ರುಘ್ನನು ಮಂಥರೆಯನ್ನು ಬಿಟ್ಟುಬಿಟ್ಟನು. ಅವಳು ಕೈಕೇಯಿದೇವಿಯ ಕಾಲುಗಳಲ್ಲಿ ಬಿದ್ದು ಗೋಳಾಡಿದಳು. ಈ ರೀತಿ ಶತ್ರುಘ್ನನ ಪೆಟ್ಟಿನಿಂದ ಮೂರ್ಛಿತಳಾಗಿ ಬಿದ್ದು ಬಲೆಗಾರರಿಂದ ಕಟ್ಟುವಟ್ಟು ಹಂಬಲಿಸುವ ಕ್ರೌಂಚಪಕ್ಷಿಯ ಹಾಗಿದ್ದ ಮಂಥರೆಯನ್ನು ಕೈಕೇಯಿದೇವಿಯು ಮೃದುನುಡಿಗಳಿಂದ ಸಂತವಿಟ್ಟಳು.



## ೭೯ ನೆಯ ಅಧ್ಯಾಯ

## ಶ್ರೀರಾಮನನ್ನು ಕರೆತರಲು ಭರತನ ನಿಶ್ಚಯ

ದಶರಥರಾಯನು ಸ್ವರ್ಗಸ್ಥನಾದ ಹದಿನಾಲ್ಕನೆಯ ದಿವಸ ಪ್ರಧಾನಿಗಳೆಲ್ಲರೂ ಕೂಡಿಕೊಂಡು ಭರತನನ್ನು ಕುರಿತು "ರಾಜಕುಮಾರ, ನಮಗೆ ಒಡೆಯನಾದ ದಶರಥರಾಯನು ಲಕ್ಷ್ಮಣಸಮೇತನಾದ ಶ್ರೀರಾಮನನ್ನು ವನಕ್ಕೆ ಹೊರಡಿಸಿ ಸ್ವರ್ಗಸ್ಥನಾದನು. ಇನ್ನು ನಮಗೆಲ್ಲರಿಗೂ ನೀನೇ ಅರಸನಾಗಬೇಕು. ಸಮಸ್ತ ರಾಜ್ಯವೂ ನಿನಗೆ ಅನುಕೂಲವಲ್ಲದೆ ಪ್ರತಿಕೂಲವಲ್ಲ. ಪಟ್ಟಾಭಿಷೇಕಕ್ಕೆ ಸಂಪಾದಿಸಿದ ಸಾಮಗ್ರಿಗಳೆಲ್ಲವೂ ಸಿದ್ಧವಾಗಿವೆ. ನಿನಗೆ ಆಪ್ತರಾದ ಜನಸಮೂಹವು ನಿನಗೆ ರಾಜ್ಯಾಧಿಪತ್ಯವಾಗಬೇಕೆಂದು ಬಯಸುತ್ತಿದೆ. ನೀನು ನಿಮ್ಮ ವಂಶಪರಂಪರೆಯಿಂದ ಬಂದ ರಾಜ್ಯವನ್ನು ಪರಿಪಾಲಿಸು, ಪಟ್ಟಾಭಿಷೇಕವನ್ನು ಮಾಡಿಸಿಕೊಂಡು ನಮ್ಮನ್ನು ಪಾಲಿಸು " ಎಂದು ನುಡಿದರು.

ಭರತನು ಆ ಪ್ರಧಾನರನ್ನು ಕುರಿತು ಹೀಗೆಂದನು : "ಎಲೈ ಪ್ರಧಾನರುಗಳಿರಾ, ನಮ್ಮ ವಂಶದಲ್ಲಿ ಜ್ಯೇಷ್ಠಪುತ್ರನಿಗೆ ರಾಜ್ಯಾಧಿಪತ್ಯವು ಸಲ್ಲುವುದಲ್ಲದೆ ಉಳಿದವರಿಗೆ ಸಲ್ಲದು ; ನೀವು ನನಗೆ ಪಟ್ಟಾಭಿಷೇಕಮಾಡಿಕೊಳ್ಳಬೇಕೆಂದು ಹೇಳುವುದು ಉಚಿತವಲ್ಲ. ನನ್ನ ಜ್ಯೇಷ್ಠಭ್ರಾತೃವಾದ ಶ್ರೀರಾಮನು ರಾಜ್ಯಪರಿಪಾಲನವನ್ನು ಮಾಡಲಿ. ನಾನು ಹದಿನಾಲ್ಕು ವರ್ಷಗಳು ವನವಾಸವನ್ನು ಮಾಡುವೆನು. ನಾನು ಚತುರಂಗಬಲಸಮೇತನಾಗಿ ಪ್ರಯಾಣಮಾಡಿ ಸರ್ವಪ್ರಕಾರದಿಂದಲೂ ಶ್ರೀರಾಮನನ್ನು ಕರೆತರುವೆನು. ಪಟ್ಟಾಭಿಷೇಕಕ್ಕೆ ಸಂಪಾದಿಸಿದ ಈ ವಸ್ತುಗಳನ್ನು ಮುಂದಿಟ್ಟುಕೊಂಡು ಆತನ ಸಮೀಪಕ್ಕೆ ಹೋಗಿ ಅಲ್ಲಿಯೇ ಪಟ್ಟಾಭಿಷೇಕವನ್ನು ಮಾಡಿ, ಯಾಗಮಂಟಪದಿಂದ ಯಜ್ಞಪುರುಷನನ್ನು ಬಿಜಯಂಗೈಯಿಸಿಕೊಂಡುಬರುವಂತೆ ವನದಿಂದ ಶ್ರೀರಾಮನನ್ನು ಕರೆತರುವೆನು. ನನಗೆ ಹೆತ್ತತಾಯಿಯೆಂದು ಹೇಳಿಸಿಕೊಂಡ ಕೈಕೇಯಿದೇವಿಯ ಇಷ್ಟಾರ್ಥವನ್ನು ನಡೆಯಿಸುವುದಿಲ್ಲ. ನಾನು

ವನಕ್ಕೆ ಹೋಗುತ್ತೇನೆ. ಶ್ರೀರಾಮನು ರಾಜ್ಯಪರಿಪಾಲನವನ್ನು ಮಾಡಿಕೊಂಡು ಅಯೋಧ್ಯಾ ಪಟ್ಟಣದಲ್ಲಿರಲಿ. ಆತನಿರುವ ವನಕ್ಕೆ ಹೋಗುವ ಮಾರ್ಗಗಳಲ್ಲಿರುವ ಹಳ್ಳತಿಟ್ಟುಗಳನ್ನು ಸರಿಮಾಡುವಹಾಗೆ ಆಯಾ ದಾರಿಗಳ ಸಮೀಪದಲ್ಲಿರುವ ದುರ್ಗಾಧಿಪತಿಗಳಿಗೆ ಹೇಳಿಕಳುಹಿಸಿ" ಎಂದು ಹೇಳಿದನು.

ಆ ಮಾತನ್ನು ಕೇಳಿ ಸಕಲಜನರೂ ಭರತನನ್ನು ಕುರಿತು "ಭರತ, ನೀನು ನಿನ್ನ ಜ್ಯೇಷ್ಠ ಭ್ರಾತೃವಾದ ಶ್ರೀರಾಮನಿಗೆ ರಾಜ್ಯಾಧಿಪತ್ಯವನ್ನು ಕೊಡಬೇಕೆಂದು ನುಡಿದಾಗಲೆ ಕಮಲಹಸ್ತಳಾದ ರಾಜಲಕ್ಷ್ಮಿಯು ನಿನಗೆ ಪ್ರತ್ಯಕ್ಷವಾದಳು! ಈ ಅರ್ಥದಲ್ಲಿ ಸಂಶಯವಿಲ್ಲ" ಎಂದು ನುಡಿದರು. ಮತ್ತು ಅವನು ಶ್ರೀರಾಮನನ್ನು ವನದಿಂದ ಕರೆತರುವನೆಂದು ಅತ್ಯಂತ ಸಂತೋಷಪಟ್ಟು ಆನಂದಾಶ್ರುಗಳನ್ನು ಸುರಿಸಿದರು. ಆ ಬಳಿಕ ಸಮಸ್ತ ಪ್ರಧಾನರೂ ತಮ್ಮ ಮನಸ್ಸಿನಲ್ಲಿದ್ದ ದುಃಖವನ್ನು ಬಿಟ್ಟು ಸಂತೋಷಯುಕ್ತರಾಗಿ ಅಲ್ಲಲ್ಲಿದ್ದ ದುರ್ಗಾಧಿಪತಿಗಳಿಗೆ ಹೇಳಿಕಳುಹಿಸಿ ಆ ವೃತ್ತಾಂತವನ್ನು ಭರತನಿಗೆ ಹೇಳಿದರು.



## ೮೦ ನೆಯ ಅಧ್ಯಾಯ

## ಅರಣ್ಯಮಾರ್ಗವನ್ನು ಕ್ರಮಪಡಿಸಿದ್ದು

ಆಮೇಲೆ ಮಾರ್ಗದಲ್ಲಿರುವ ಹಳ್ಳತಿಟ್ಟುಗಳನ್ನು ತಿಳಿದು ತಮ್ಮ ವಿನಿಯೋಗಗಳಲ್ಲಿ ಚತುರರಾದ ದುರ್ಗದ ಪಾರುಪತ್ಯಗಾರರೂ ಊಳಿಗದವರೂ ಮರಕಡಿಯುವವರೂ ತಮ್ಮ ಊಳಿಗಕ್ಕೆ ತಕ್ಕಹಾಗೆ ಗುದ್ದಲಿ ಕೊಡಲಿ ಮಚ್ಚುಕತ್ತಿ ಕಡಗತ್ತಿ ಕುಡುಗೋಲು ಮೊದಲಾದ ಆಯುಧಗಳನ್ನು ತೆಗೆದುಕೊಂಡು ಶ್ರೀರಾಮನು ಹೋದ ಮಾರ್ಗದಲ್ಲಿದ್ದ ಕೊರಡು ಕಿರುಗಿಡ ಮೊದಲಾದವನ್ನು ಸವರಿ ಹಳ್ಳತಿಟ್ಟುಗಳನ್ನು ಸಮವಾಗಿ ಮಾಡಿದರು. ಹೆಮ್ಮರದ ಕೊರಡು ಕಿರುಗಿಡ ಬಳ್ಳಿಗಳನ್ನು ತೆಗೆದುಹಾಕಿ ಅಲ್ಲಲ್ಲಿದ್ದ ಗುಂಡುಕಲ್ಲುಗಳನ್ನು ಕೆಳಕ್ಕೆ ಉರುಳಿಸಿ ಅಲ್ಲಲ್ಲಿ ನೆರಳಾಗುವಂತೆ ಚಪ್ಪರಗಳನ್ನು ನಿರ್ಮಿಸಿದರು. ಸಣ್ಣ ದೊಡ್ಡ ಕಲ್ಲುಗಳನ್ನು ಚೂರ್ಣಮಾಡಿ ನೆರಳು ನೀರು ಬಹಳವಾದ ಮಾರ್ಗದಲ್ಲಿ ಕಟ್ಟೆಯನ್ನು ಕಟ್ಟಿಸಿದರು. ನೀರಿಲ್ಲದ ಸ್ಥಳದಲ್ಲಿ ಕೊಳಗಳನ್ನು ಕಟ್ಟಿಸಿ ಅಲ್ಲಲ್ಲಿ ನಾನಾವಿಧವಾದ ಜಗಲಿಗಳನ್ನು ನಿರ್ಮಿಸಿದರು. ಪಯಣವಾಗಿ ನಿಲ್ಲುವ ಸ್ಥಳಗಳಲ್ಲಿ ಬಿಡಾರಗಳನ್ನು ಕಟ್ಟಿಸಿ ಬಿಡಾರದ ಗೋಡೆಗಳಿಗೆ ಹಾಲುಗಾರೆಗಳನ್ನು ಮಾಡಿಸಿದರು. ದಾರಿಯನ್ನು ಸುಲಭವಾಗಿ ಮಾಡಿದರು. ತಳಿರುಗಳಿಂದಲೂ ಪುಷ್ಪಮಾಲಿಕೆಗಳಿಂದಲೂ ತೋರಣಗಳನ್ನು ಕಟ್ಟಿಸಿ ತೋರಣಗಳಲ್ಲಿ ರೇಕುಗಳನ್ನಿಟ್ಟು ಅಲಂಕರಿಸಿದರು. ಹೀಗೆ ಆ ಮಾರ್ಗವು ಎಲ್ಲಿನೋಡಿದರೂ ಪುಷ್ಪಿತವಾದ ವೃಕ್ಷಗಳಿಂದಲೂ ಗಿಣಿ ಕೋಗಿಲೆ ನವಿಲು ಹಂಸ ಮೊದಲಾದ ಪಕ್ಷಿಗಳ ಧ್ವನಿಗಳಿಂದಲೂ ಮನೋಹರವಾಗಿ ಅಮರಾವತಿಯ ರಾಜಬೀದಿಯ ರೀತಿಯಲ್ಲಿ ಒಪ್ಪುತ್ತಿತ್ತು. ಭರತನು ಎಲ್ಲೆಲ್ಲಿರಬೇಕೋ ಅಲ್ಲಲ್ಲಿ ಆ ಅಧಿಕಾರಿಗಳು ಉಪ್ಪರಿಗೆಗಳಿಂದಲೂ ಮೇಲುಕಟ್ಟುಗಳಿಂದಲೂ ಒಪ್ಪುತ್ತಿದ್ದ ಬಿಡಾರಗಳನ್ನು ನಿರ್ಮಿಸಿ ಕೋಟೆಗಳನ್ನೂ ಕೋಟೆಯ ಬಾಗಿಲುಗಳಿಗೆ ಇಂದ್ರನೀಲರತ್ನಗಳಿಂದ ದ್ವಾರಬಂಧಗಳನ್ನೂ ನಿರ್ಮಿಸಿ ಅಲ್ಲಲ್ಲಿ ಪತಾಕೆಗಳನ್ನು ಕಟ್ಟಿಸಿ ಅಲಂಕಾರಗಳನ್ನು ಮಾಡಿಸಿದರು. ಭರತನ ಸೇನೆಯು ಗಂಗಾನದೀತೀರಕ್ಕೆ ಹೋಗಿ ಅದನ್ನು ಸುಲಭವಾಗಿ ದಾಟಿ ಹೋಗುವಹಾಗೆ ಏರ್ಪಾಡನ್ನು ಆ ಅಧಿಕಾರಿಗಳು ಮಾಡಿದರು.



## ೮೧ನೆಯ ಅಧ್ಯಾಯ

## ಭರತನ ಆಸ್ಥಾನಮಂಟಪ

ಆಮೇಲೆ ಪ್ರಾತಃಕಾಲದಲ್ಲಿ ಮಂಗಳಪಾಠಕರು ಅನೇಕ ಮಂಗಳಸೂಕ್ತಗಳಿಂದಲೂ ಸ್ತೋತ್ರಗಳಿಂದಲೂ ಭರತನನ್ನು ಕೊಂಡಾಡುತ್ತಿದ್ದರು. ಚಿನ್ನದ ಕೋಲಿನಿಂದ ಹೊಡೆಯಲ್ಪಟ್ಟು ಭೇರಿಗಳು ಧ್ವನಿಗೈದವು. ಶಂಖಗಳು ಅತ್ಯಂತ ವೆಗ್ಗಳವಾಗಿ ಸ್ವರಗೈಯುತ್ತಿದ್ದವು. ಈ ರೀತಿಯಲ್ಲಿ ಸ್ವರ್ಗಲೋಕಕ್ಕೆ ಕೇಳಿಸುವಹಾಗಿದ್ದ ವಾದ್ಯಧ್ವನಿಯನ್ನು ಕೇಳಿ ಭರತನು ಅತ್ಯಂತ ದುಃಖಾಕ್ರಾಂತನಾಗಿ "ನಾನು ಹೊರಡುವಾಗ ವಾದ್ಯಘೋಷಮಾಡುವುದಕ್ಕೆ ನಾನೇನಾದರೂ ದೊರೆಯೆ! ನನಗೆ ಈ ವಾದ್ಯಘೋಷವು ಏತಕ್ಕೆ!" ಎಂದು ಹೇಳಿ ಅದನ್ನು ನಿಲ್ಲಿಸಿದನು. ಅವನು ಶತ್ರುಘ್ನನನ್ನು ಕುರಿತು "ಶತ್ರುಘ್ನ, ಕೈಕೇಯೀದೇವಿಯು ಮಾಡಿದ ಅಪಕಾರದಿಂದ ದಶರಥರಾಯನು ಧರ್ಮಾತ್ಮನಾದ ಶ್ರೀರಾಮನನ್ನು ವನಕ್ಕೆ ಕಳುಹಿಸಿ ಪುತ್ರಶೋಕದಿಂದ ಶರೀರವನ್ನು ಬಿಟ್ಟು ಸ್ವರ್ಗಸ್ಥನಾದನು. ಆ ಮಹಾರಾಜನ ದುಃಖಗಳೆಲ್ಲವೂ ಈಗ ನನಗೆ ಸಂಭವಿಸಿದವು. ಸಮಸ್ತ ಧನಧಾನ್ಯ ರತ್ನಾಭರಣಗಳಿಂದ ಪರಿಪೂರ್ಣವಾದ ರಾಜ್ಯಲಕ್ಷ್ಮಿಯು ನೀರಿನಲ್ಲಿ ಕರ್ಣಧಾರನಿಲ್ಲದ ಹಡಗಿನಂತೆ ತಿರುಗುತ್ತದೆ" ಎಂದು ಹಂಬಲಿಸಿದನು.

ಅದನ್ನು ಕಂಡು ಸಕಲಸ್ತ್ರೀಯರೂ ಗೋಳಿಟ್ಟು ರೋದನಮಾಡಿದರು. ಆ ಸಮಯದಲ್ಲಿ ಧರ್ಮರಹಸ್ಯವನ್ನು ಬಲ್ಲ ವಸಿಷ್ಠಮುನೀಶ್ವರನು ಆಸ್ಥಾನಮಂಟಪದಲ್ಲಿದ್ದ ರತ್ನಖಚಿತವಾದ ಪೀಠದಲ್ಲಿ ಕುಳಿತು ತನ್ನ ಶಿಷ್ಯರನ್ನೂ ಬ್ರಾಹ್ಮಣರನ್ನೂ ಪರಾಕ್ರಮಿಗಳಾದ ಕ್ಷತ್ರಿಯರನ್ನೂ ಪ್ರಧಾನರನ್ನೂ ಕರೆದು ಮುಂದೆ ಕಾಲೋಚಿತವಾದ ಕಾರ್ಯವನ್ನು ಮಾಡಬೇಕೆಂದು ಹೇಳಿ ಭರತಶತ್ರುಘ್ನರನ್ನು ಆಸ್ಥಾನಕ್ಕೆ ಕರೆತನ್ನಿರೆಂದು ದೂತರಿಗೆ ಆಜ್ಞಾಪಿಸಿದನು. ಆಗ ಆನೆಗಳ ಬೃಂಹಿತಧ್ವನಿಗಳಿಂದಲೂ ಕುದುರೆಗಳ ಹೇಷಿತಧ್ವನಿಗಳಿಂದಲೂ ಕಾಲಾಳುಗಳ ಆರ್ಭಟರವದಿಂದಲೂ ಕೋಲಾಹಲ ಧ್ವನಿಯುಂಟಾಯಿತು. ಭರತನು ವಸಿಷ್ಠಮುನಿಯ ಸೂಚನೆಯಂತೆ ಆಸ್ಥಾನಕ್ಕೆ ಬರಲು ಎಲ್ಲರೂ ಎದ್ದುನಿಂತು ಅವನನ್ನು ಗೌರವಿಸಿದರು. ಹಿಂದೆ ದಶರಥಮಹಾರಾಜನಿಂದ ಶೋಭಿಸುತ್ತಿದ್ದಂತೆ ಆ ಸಭೆಯು ವಿರಾಜಿಸಿತು.



## ೮೨ನೆಯ ಅಧ್ಯಾಯ

## ಣ್ಯಕ್ಕೆ ಭರತನ ಪ್ರಯಾಣ

ಆ ಸಭೆಯಲ್ಲಿ ವಿದ್ವಾಂಸರೂ ಮುಖ್ಯರಾದ ಅಧಿಕಾರಿಗಳೂ ಪ್ರಜೆಗಳೂ ನೆರೆದಿದ್ದರು. ಭರತನಿಂದ ಕೂಡಿದ ಆ ಸಭೆಯು ಪೂರ್ಣಚಂದ್ರನಿಂದ ಕೂಡಿದ ರಾತ್ರಿಯ ನಭೋಮಂಡಲದಂತೆ ಒಪ್ಪುತ್ತಿತ್ತು. ಆಗ ಧರ್ಮರಹಸ್ಯವನ್ನು ಬಲ್ಲ ಪುರೋಹಿತನಾದ ವಸಿಷ್ಠಮುನೀಶ್ವರನು ಪ್ರಧಾನಿಗಳ ಸಂಮುಖದಲ್ಲಿ ಭರತನನ್ನು ಕುರಿತು "ಭರತ, ದಶರಥರಾಯನು ಧರ್ಮಮಾರ್ಗದಲ್ಲಿ ಶ್ರದ್ಧೆಯುಳ್ಳವನಾಗಿ ಸಮಸ್ತ ಪ್ರಜೆಗಳನ್ನೂ ರಕ್ಷಿಸಿಕೊಂಡಿದ್ದು ಧನಧಾನ್ಯಗಳಿಂದ ಪರಿಪೂರ್ಣವಾದ

ನಿಖಿಲ ಭೂಮಂಡಲವನ್ನೂ ನಿನಗೆ ಕೊಟ್ಟು ಸ್ವರ್ಗಸ್ಥನಾದನು. ಶ್ರೀರಾಮನು ಸನ್ಮಾರ್ಗವನ್ನು ಕೈಗೊಂಡು, ಚಂದ್ರನು ತನ್ನ ಬೆಳದಿಂಗಳನ್ನು ಬಿಡದಂತೆ ದಶರಥರಾಯನ ಆಜ್ಞೆಯನ್ನು ಮೀರದೆ ಧೈರ್ಯದಿಂದ ರಾಜ್ಯವನ್ನು ಬಿಟ್ಟು ವನವನ್ನೈದಿದನು. ನಿನ್ನ ಜ್ಯೇಷ್ಠಭ್ರಾತೃವಾದ ಶ್ರೀರಾಮನಿಂದ ಕೊಡಲ್ಪಟ್ಟ ರಾಜ್ಯವನ್ನು ನೀನು ಅನುಭವಿಸು. ಸಮಸ್ತ ಪ್ರಜೆಗಳನ್ನೂ ಪ್ರಧಾನಿಗಳನ್ನೂ ಸನ್ಮಾರ್ಗದಿಂದ ರಕ್ಷಿಸು. ಇನ್ನು ನೀನು ಪಟ್ಟಾಭಿಷೇಕವನ್ನು ಮಾಡಿಕೊ. ಬಡಗಣ ತೆಂಕಣ ಪಡುವಣ ಮೂಡಣ ರಾಜರನ್ನೂ ಅಪರಾಂತ ದೇಶವಾಸಿಗಳಾದ ಯವನರಾಜ್ಯದ ದೊರೆಗಳನ್ನೂ ಕರೆಕಳುಹಿಸು. ಅವರೆಲ್ಲರೂ ನವರತ್ನ ಮೊದಲಾದ ವಸ್ತುಗಳನ್ನು ನಿನಗೆ ಕಾಣಿಕೆಯಾಗಿ ತರಲಿ" ಎಂದು ಹೇಳಿದನು.

ಭರತನು ಅತ್ಯಂತ ದುಃಖಾಕ್ರಾಂತನಾಗಿ ಶ್ರೀರಾಮನನ್ನೇ ಮನಸ್ಸಿನಲ್ಲಿ ಧ್ಯಾನಮಾಡುತ್ತ ಧರ್ಮಮಾರ್ಗವನ್ನೇ ಅವಲಂಬಿಸಿ ಕಣ್ಣೀರುತುಂಬಿ ಸಭಾಮಧ್ಯದಲ್ಲಿದ್ದ ವಸಿಷ್ಠಮುನೀಶ್ವರನನ್ನು ಕುರಿತು ಹೀಗೆಂದನು: "ವಸಿಷ್ಠಮುನಿಗಳೆ, ವ್ರತಸ್ಥನೂ ವಿದ್ಯಾಸಂಪನ್ನನೂ ಜ್ಞಾನಿಯೂ ಧರ್ಮಪ್ರವರ್ತಕನೂ ಪುಣ್ಯಾತ್ಮನೂ ಆದ ಶ್ರೀರಾಮನ ರಾಜ್ಯವನ್ನು ದಶರಥರಾಯನ ಮಗನಾದ ಮತ್ತೊಬ್ಬನು ಅಪಹರಿಸುವನೆ? ಸತ್ಯಸಂಧನಾದ ಆ ಸ್ವಾಮಿಯ ರಾಜ್ಯವನ್ನು ನಾನು ಅಪಹರಿಸಲಾರೆನು. ಈ ಧರ್ಮರಹಸ್ಯವನ್ನು ನೀವು ಬಲ್ಲಿರಿ. ಸತ್ಯಸಂಧನೂ ದಶರಥರಾಯನ ಜ್ಯೇಷ್ಠ ಪುತ್ರನೂ ಧರ್ಮಮಾರ್ಗಪ್ರವರ್ತಕನೂ ದಿಲೀಪ ನಹುಷಾದಿ ರಾಜರಿಗೆ ಸಮಾನನೂ ಪ್ರಿಯಬಂಧುವೂ ಆದ ಶ್ರೀರಾಮನೊಬ್ಬನೇ ದಶರಥರಾಯನ ರೀತಿಯಲ್ಲಿ ರಾಜ್ಯಾಧಿಪತ್ಯಕ್ಕೆ ಯೋಗ್ಯನು. ದುರ್ಜನರ ಮಾರ್ಗದಲ್ಲಿ ನಡೆಯುವವರಿಗೆ ಯೋಗ್ಯವಾದ ಪಾಪವನ್ನು ನಾನು ಮಾಡಿದರೆ ಇಕ್ಷ್ವಾಕುವಂಶದ ರಾಜರ ವಂಶದಲ್ಲಿ ನಾನೇ ಕುಲಗೆಡುಕನಾಗುವೆನು. ನನ್ನ ತಾಯಿಯಾದ ಕೈಕೇಯಿದೇವಿಯು ಮಾಡಿದ ಪಾಪವನ್ನು ನಾನು ಸಹಿಸುವುದಿಲ್ಲ. ನಾನು ವನಕ್ಕೆ ಹೋಗಿ ಶ್ರೀರಾಮನಿಗೆ ಕೈಮುಗಿದು ನಮಸ್ಕರಿಸುವೆನು. ಆತನೇ ಸಾಕ್ಷಾತ್ಪುರುಷೋತ್ತಮನು. ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಿಗೂ ಆತನೇ ಒಡೆಯನು. ಆದ್ದರಿಂದ ಶ್ರೀರಾಮನೇ ಈ ರಾಜ್ಯಕ್ಕೆ ಒಡೆಯನಲ್ಲದೆ ಮತ್ತೊಬ್ಬನಲ್ಲ" ಎಂದು ಸಭಾಮಧ್ಯದಲ್ಲಿ ಧರ್ಮಯುಕ್ತವಾದ ಮಾತನ್ನು ನುಡಿದನು.

ಆ ಮಾತನ್ನು ಕೇಳಿ ಸಕಲರೂ ಅತ್ಯಂತ ಸಂತೋಷದಿಂದ ಶ್ರೀರಾಮನಲ್ಲಿ ಅಂತಃಕರಣವುಳ್ಳವರಾಗಿ ಆನಂದಾಶ್ರುಗಳನ್ನು ಬಿಡುತ್ತಿದ್ದರು. ಭರತನು ಸಭೆಯಲ್ಲಿದ್ದವರನ್ನು ಕುರಿತು ಪುನಃ ಹೇಳಿದನು: "ನಾನು ನಾನಾಯತ್ನಗಳಿಂದಲೂ ಶ್ರೀರಾಮನನ್ನು ವನದಿಂದ ಕರೆತರುವೆನು. ಕರೆತರಲಾರದೆ ಹೋದರೆ ಆತನ ಸಮೀಪದಲ್ಲಿ ಲಕ್ಷ್ಮಣನು ಸೇವೆಯನ್ನು ಮಾಡಿಕೊಂಡಿರುವ ರೀತಿಯಲ್ಲಿ ನಾನೂ ವನದಲ್ಲಿದ್ದುಕೊಂಡು ಆತನ ಸೇವೆಯನ್ನು ಮಾಡಿಕೊಂಡಿರುವೆನು. ವಾಕ್ಚಾತುರ್ಯದಿಂದ ಶ್ರೀರಾಮನನ್ನು ಕರೆತರುವುದಕ್ಕೆ ಸದ್ಗುಣಸಂಪನ್ನರಾದ ಸಾಧುಪುರುಷರನ್ನು ನನ್ನ ಸಂಗಡ ಕಳುಹಿಸಿ. ಆತನಿರುವ ವನಕ್ಕೆ ಹೋಗುವ ಮಾರ್ಗದಲ್ಲಿ ಹಳ್ಳತಿಟ್ಟುಗಳನ್ನು ಸಮಮಾಡಿ ಅಲ್ಲಲ್ಲಿ ನಿಲ್ಲುವ ಸ್ಥಳಗಳಲ್ಲಿ ಬಿಡಾರಗಳನ್ನು ನಿರ್ಮಿಸಲು ಮೊದಲೇ ಜನಗಳನ್ನು ಕಳುಹಿಸಿದ್ದೇನೆ. ಇನ್ನು ನಾನು ಆ ಸ್ವಾಮಿಯ ಸಮೀಪಕ್ಕೆ ಹೋಗುವುದಕ್ಕೆ ಆಲಸ್ಯ ಮಾಡುವುದಿಲ್ಲ" ಎಂದು ನುಡಿದು ಶ್ರೀರಾಮನಲ್ಲಿ ವಿಶ್ವಾಸವುಳ್ಳವನಾದ ಸುಮಂತ್ರನನ್ನು ಕುರಿತು "ಸುಮಂತ್ರ, ನೀನು ಶೀಘ್ರದಲ್ಲಿ ತೆರಳು. ಸಮಸ್ತ ಬಲಗಳನ್ನೂ ಪ್ರಯಾಣಮಾಡಿಸು" ಎಂದು ನುಡಿದನು.

ಆ ಬಳಿಕ ಸುಮಂತ್ರನು ಸಮಸ್ತ ಬಲಗಳಿಗೂ ಪ್ರಯಾಣಕ್ಕೆ ಆಜ್ಞಾಪಿಸಲು ಸೇನಾನಾಯಕರು ತಮ್ಮ ಸೇನೆಗಳನ್ನು ಕೂಡಿಕೊಂಡು ಮುಂದೆ ಹೊರಟರು. ಆ ಸಮಯದಲ್ಲಿ ಭರತನ ಪ್ರಯಾಣವನ್ನು

ಕೇಳಿ ಅಯೋಧ್ಯಾಪಟ್ಟಣದಲ್ಲಿದ್ದ ಸ್ತ್ರೀಯರು ತಮ್ಮ ತಮ್ಮ ಪುರುಷರನ್ನು ಕುರಿತು ತಾವೂ ವನಕ್ಕೆ ಹೋಗಿ ಶ್ರೀರಾಮನನ್ನು ನೋಡಿ ಬರಬೇಕೆಂದು ತ್ವರೆಮಾಡಿದರು. ಆಗ ಅವರು ಸಂತೋಷ ಯುಕ್ತರಾಗಿ ತಮ್ಮ ತಮ್ಮ ರಥಗಳನ್ನೂ ಆನೆಗಳನ್ನೂ ಕುದುರೆಗಳನ್ನೂ ಬಂಡಿಗಳನ್ನೂ ಪಲ್ಲಕ್ಕಿ ಮೊದಲಾದವನ್ನೂ ಸಿದ್ಧಮಾಡಿಕೊಂಡು ಹೊರಟರು. ಭರತನು, ತನ್ನೊಡನೆ ಸನ್ನದ್ಧರಾಗಿ ಹೊರಟ ಪ್ರಜೆಗಳನ್ನು ಕಂಡು ಸಂತೋಷಪಡುತ್ತ ಪ್ರಧಾನನಾದ ಸುಮಂತ್ರನನ್ನು ಕುರಿತು ಶೀಘ್ರವಾಗಿ ಸೇನೆಗಳನ್ನು ಮುಂದೆ ಕಳುಹಿಸಹೇಳಿದನು. ಸುಮಂತ್ರನು ಸೇನಾನಾಯಕರಿಗೆ ಅವರವರ ಬಲ ಸಮೇತರಾಗಿ ಮುಂದೆ ತೆರಳುವ ರೀತಿಯಲ್ಲಿ ಕಟ್ಟುಮಾಡಿ ಪ್ರಯಾಣಮಾಡಿಸಿದನು.



## ೮೩ ನೆಯ ಅಧ್ಯಾಯ

## ಗಂಗಾತೀರಕ್ಕೆ ಭರತನ ಆಗಮನ

ಆಮೇಲೆ ಭರತನು ಪ್ರಾತಃಕಾಲದಲ್ಲೆದ್ದು ಉತ್ತಮವಾದ ರಥವನ್ನೇರಿಕೊಂಡು ತೆರಳಲು ಆತನ ಮುಂದುಗಡೆಯಲ್ಲಿ ಮಂತ್ರಿಗಳೂ ಪುರೋಹಿತರೂ ಉತ್ತಮಾಶ್ವಗಳಿಂದ ಯುಕ್ತವಾದ ರಥಗಳ ನ್ನೇರಿಕೊಂಡು ತೆರಳಿದರು. ಭರತನ ಸಂಗಡ ಒಂಭತ್ತುಸಾವಿರ ಮದ್ದಾನೆಗಳೂ ಅರುವತ್ತುಸಾವಿರ ರಥಗಳೂ ಒಂದುಲಕ್ಷ ಉತ್ತಮಾಶ್ವಗಳೂ ಹೊರಟವು. ಕೌಸಲ್ಯಾದೇವಿ ಸುಮಿತ್ರಾದೇವಿ ಕೈಕೇಯಿ ದೇವಿ ಮೊದಲಾದ ದಶರಥರಾಯನ ಸ್ತ್ರೀಯರು ಶ್ರೀರಾಮನನ್ನು ನೋಡಬೇಕೆಂಬ ಇಚ್ಛೆಯಿಂದ ಪಲ್ಲಕ್ಕಿ ಗಳನ್ನೇರಿಕೊಂಡು ಹೊರಟರು. ಆ ಸಮಯದಲ್ಲಿ ಸ್ತ್ರೀಪುರುಷರೆಲ್ಲರೂ ಶ್ರೀರಾಮನ ಗುಣಗಳನ್ನು ವರ್ಣಿಸುತ್ತ ಅತ್ಯಂತ ಸಂತುಷ್ಟಚಿತ್ತರಾಗಿದ್ದರು. ನೀಲಮೇಘಶ್ಯಾಮನೂ ನಿಡಿದಾದ ತೋಳುಗಳುಳ್ಳ ವನೂ ಸ್ಥಿರವಾದ ಸತ್ತ್ವಗುಣವುಳ್ಳವನೂ ದೃಢವ್ರತನೂ ಆದ ಆ ರಾಮಚಂದ್ರನು. ಸೂರ್ಯನು ಸಮಸ್ತ ಪ್ರಾಣಿಗಳಿಗೂ ಅಂಧಕಾರವನ್ನು ತೊಲಗಿಸುವಂತೆ ದರ್ಶನಮಾತ್ರದಿಂದಲೇ ತಮ್ಮ ಶೋಕ ವನ್ನು ತೊಲಗಿಸುವನೆಂದು ಆತನನ್ನು ಹೊಗಳುತ್ತ ಸ್ನೇಹಾತಿಶಯದಿಂದ ಅನ್ಯೋನ್ಯವಾಗಿ ತಕ್ಕೈಸಿ ಕೊಂಡು ನಡೆಯುತ್ತಿದ್ದರು. ಕುಂಬಾರರು. ಸೂತ್ರಗಾರರು, ಆಯುಧಗಳ ಬೇಹಾರಿಗಳು, ನವಿಲುಗರಿ ಮೊದಲಾದ್ದರಿಂದ ಸತ್ತಿಗೆಗಳನ್ನು ಕಟ್ಟುವವರು, ಸಾಣೆಗಾರರು, ಮಣಿಗಳ ವೆಜ್ಜೆಗಳನ್ನು ತೆಗೆಯುವವರು. ಗಂಧದ ಬತ್ತಿ ಮಾಡುವವರು, ಗಾರೆಯವರು, ಗಂಧದ ಕೊರಡುಗಳನ್ನು ಮಾರುವ ಬೇಹಾರಿಗಳು, ಅಕ್ಕಸಾಲಿಗರು, ರತ್ನಕಂಬಳಿ ಮಾಡುವವರು, ನೀರುಕಾಸಿ ಅಭ್ಯಂಜನಮಾಡಿಸುವವರು, ಒರೆಗಾರರು, ವೈದ್ಯರು, ದೃಷ್ಟಿಧೂಪ ಹಾಕುವವರು. ಸುರೆಯನ್ನು ಮಾರುವವರು, ರಜಕರು, ಚಿಪ್ಪಿಗರು, ಗೊಲ್ಲರಹಳ್ಳಿಗಳ ಮುಖ್ಯಸ್ಥರು, ಊಳಿಗಮಾಡುವವರು, ನಟುವರು ಮೊದಲಾದ ಪ್ರಜೆಗಳೂ ವೇದವೇದಾಂಗಪಾರಂಗತರಾದ ಬ್ರಾಹ್ಮಣರೂ ನಾನಾ ಬಗೆಯ ವಾಹನ ಗಳನ್ನೇರಿ ಭರತನ ಹಿಂದೆ ತೆರಳಿದರು. ಹೀಗೆ ಭರತನು ಶತ್ರುಘ್ನಸಮೇತನಾಗಿ ಕೌಸಲ್ಯಾ ಸುಮಿತ್ರಾ ಕೈಕೇಯಿದೇವಿಯರ ಸಂಗಡ ತನ್ನ ಪ್ರಧಾನರೊಡನೆ ಗಂಗಾತೀರಕ್ಕೆ ಬಂದು ಸೇರಿದನು. ಅಲ್ಲಿ ಶ್ರೀರಾಮನ ಪ್ರಿಯಸಖನಾದ ಗುಹನಿರುವ ಶೃಂಗಿಬೇರಪುರದ ಸಮೀಪದಲ್ಲಿ ಹರಿಯುವ ಮನೋಹರವಾದ ಗಂಗೆಯನ್ನು ನೋಡಿ ಪ್ರಧಾನರನ್ನು ಕುರಿತು "ಎಲೈ ಪ್ರಧಾನರುಗಳಿರಾ, ಇಲ್ಲಿ ಪಾಳಯವಿಳಿಯುವಹಾಗೆ ಕಟ್ಟುಮಾಡಿ. ಎಲ್ಲರೂ ಬಳಲಿದ್ದಾರೆ. ಈ ಗಂಗಾತೀರದಲ್ಲಿದ್ದು ಬಳಲಿಕೆ

ಯನ್ನು ತೀರಿಸಿಕೊಂಡು ಸ್ನಾನ ಜಪ ದೇವತಾರ್ಚನೆಗಳನ್ನು ಮಾಡಿ. ಸ್ವರ್ಗಸ್ಥನಾದ ನನ್ನ ತಂದೆಗೆ ತೀರ್ಥಶ್ರಾದ್ಧಗಳನ್ನು ಮಾಡಬೇಕು" ಎಂದು ನುಡಿದನು.

ವೃದ್ಧರಾದ ಬ್ರಾಹ್ಮಣರೂ ಪುರೋಹಿತರೂ ಪ್ರಧಾನಿಗಳೂ ಬಹಳ ಒಳ್ಳೆಯದಾಯಿತೆಂದು ಅವನ ಮಾತನ್ನು ಅಂಗೀಕರಿಸಿ ಆ ಗಂಗಾತೀರದಲ್ಲಿಳಿದುಕೊಂಡರು. ಶ್ರೀರಾಮನು ಸಂಚರಿಸಿದ ಸ್ಥಳವನ್ನೂ ಪಯಣ ನಿಂತ ಸ್ಥಳವನ್ನೂ ಸುಮಂತ್ರನು ತೋರಿಸಲು. ಭರತನು ಆ ಸ್ವಾಮಿಯನ್ನು ಧ್ಯಾನಮಾಡುತ್ತ ಗಂಗಾತೀರದಲ್ಲಿ ಪಾಳಯಬಿಟ್ಟನು.



## ೮೪ನೇಯ ಅಧ್ಯಾಯ

## ಭರತನು ಗುಹನಿಗೆ ದರ್ಶನಕೊಟ್ಟದ್ದು

ತರುವಾಯ ಗುಹನು ಗಂಗಾತೀರದಲ್ಲಿ ಭರತನು ಪಾಳಯವಿಳಿದದ್ದನ್ನು ಕಂಡು ತನ್ನ ಜ್ಞಾತಿಗಳನ್ನು ನೋಡಿ ಹೀಗೆ ನುಡಿದನು: "ಕೇಳಿರೈ ತಮ್ಮಂದಿರಾ, ಅಪಾರವಾದ ಸಮುದ್ರದ ರೀತಿಯಲ್ಲಿ ಮಹತ್ತಾದ ಸೇನೆಯು ಬಂದಿದೆ. ಅಲ್ಲಿರುವ ಧ್ವಜವು ಕೋವಿದಾರವೃಕ್ಷದ ಚಿಹ್ನೆಯನ್ನು ಪಡೆದಿದೆ. ಆದ್ದರಿಂದ ಭರತನೇ ಬಂದಿರಬೇಕು. ಆತನು ನಮ್ಮೆಲ್ಲರನ್ನೂ ಸೆರೆಹಿಡಿಯುವನೋ ವಧಿಸುವನೋ ತಿಳಿಯದು. ದಶರಥರಾಯನಿಂದ ಹೊರಡಿಸಲ್ಪಟ್ಟ ಶ್ರೀರಾಮನನ್ನು ಹುಡುಕಿಕೊಂಡು ಹೋಗಿ ಅವನನ್ನು ಸಂಹರಿಸಬೇಕೆಂದು ಭರತನ ಅಪೇಕ್ಷೆ ಇರಬಹುದು. ನಿರ್ವಿಘ್ನವಾಗಿ ಐಶ್ವರ್ಯವನ್ನು ಪಡೆಯಬೇಕೆಂದು ಬಂದಿರಬಹುದು. ನಮಗೆ ಶ್ರೀರಾಮನೇ ಗತಿ. ಆತನ ನಿಮಿತ್ತವಾಗಿ ನಾವು ಗಂಗಾತೀರದಲ್ಲಿದ್ದೇವೆ. ನಾವಿನ್ನು ಸುಮ್ಮನಿರಬಾರದು. ಐನೂರು ದೋಣಿಗಳೂ ಅವಕ್ಕೆ ಬೇಕಾದ ಅಂಬಿಗರೂ ಸನ್ನದ್ಧರಾಗಲಿ. ಭರತನು ಶ್ರೀರಾಮನ ವಿಷಯದಲ್ಲಿ ಸಂತುಷ್ಟನಾಗಿ ಒಳ್ಳೆಯ ಬುದ್ಧಿಯನ್ನಿಟ್ಟು ನಮ್ಮನ್ನು ಸಂತವಿಸಿದನಾದರೆ ಆತನೂ ಆತನ ಸೇನೆಯೂ ಸುಖವಾಗಿ ಗಂಗೆಯನ್ನು ದಾಟಿ ಹೋಗಲಿ" ಎಂದು ಹೇಳಿದನು. ಅನಂತರ ಅಪೂರ್ವವಾದ ವಸ್ತುಗಳನ್ನು ಕಾಣಿಕೆಯಾಗಿ ತೆಗೆದುಕೊಂಡು ಮತ್ಸ್ಯಮಾಂಸಗಳನ್ನೂ ಕಂದಮೂಲ ಫಲಗಳನ್ನೂ ತೆಗೆಯಿಸಿಕೊಂಡು ಭರತನಿಗೆ ಎದುರಾಗಿ ಬಂದನು.

ಮಹಾಪ್ರತಾಪಶಾಲಿಯಾದ ಸುಮಂತ್ರನು ಹಾಗೆ ಬರುತ್ತಿದ್ದ ಗುಹನನ್ನು ಕಂಡು ಅತ್ಯಂತ ವಿನಯೋಕ್ತಿಗಳಿಂದ ಭರತನನ್ನು ಕುರಿತು "ರಾಜಪುತ್ರ, ಬೇಡರಿಗೆ ನಾಯಕನಾದ ಗುಹನು ತಮ್ಮ ಜ್ಞಾತಿಗಳನ್ನೂ ಅನೇಕಮಂದಿ ಬೇಡರನ್ನೂ ಕೂಡಿಕೊಂಡು ಬರುತ್ತಿದ್ದಾನೆ. ಈತನು ವಯಸ್ಸಿನಲ್ಲಿ ವೃದ್ಧನು; ನಿಮ್ಮ ಅಣ್ಣನಾದ ಶ್ರೀರಾಮನಿಗೆ ಪ್ರಿಯಸಖನು; ದಂಡಕಾರಣ್ಯದಲ್ಲಿಯೇ ಸುಖವಾಗಿರುವವನು. ನಿನ್ನನ್ನು ನೋಡಬೇಕೆಂದು ಬರುತ್ತಿದ್ದಾನೆ. ರಾಮಲಕ್ಷ್ಮಣರಿರುವ ಸ್ಥಳವನ್ನು ವಿಶೇಷವಾಗಿ ಅವನು ಬಲ್ಲನು" ಎಂದು ಹೇಳಿದನು.

ಆಗ ಗುಹನು ಅಡ್ಡಿಯಿಲ್ಲದೆ ಬಂದು ತನ್ನನ್ನು ಕಂಡುಹೋಗಲೆಂದು ಭರತನು ಹೇಳಲಾಗಿ, ಸುಮಂತ್ರನು ಗುಹನಿಗೆ ಬರುವಂತೆ ಹೇಳಿಕಳುಹಿಸಿದನು. ಆತನು ಅತಿಸಂಭ್ರಮದಿಂದ ಭರತನ ಸಮೀಪಕ್ಕೆ ಬಂದು ಕಾಣಿಸಿಕೊಂಡು "ಭರತ, ಗಂಗಾತೀರದ ಸಮೀಪದಲ್ಲಿ ನಮ್ಮ ಬೇಡರ ರಾಜ್ಯವಿದೆ. ನಾವು ನಿಮ್ಮ ಸಮೀಪದಲ್ಲಿರುವವರು. ನೀನು ನಮ್ಮ ಗ್ರಾಮಕ್ಕೆ ಬಂದು ಈ ರಾತ್ರಿ

ವಾಸಮಾಡು. ನಮ್ಮ ಮನೆಯಲ್ಲಿ ಬೇಟೆಗಾರರು ತಂದ ಸ್ವಾದುವಾದ ಮಾಂಸಗಳೂ ಕಂದಮೂಲ ಫಲಾದಿಗಳೂ ಹೇರಳವಾಗಿವೆ. ನಿನ್ನ ಸೇನೆಯು ಈ ರಾತ್ರಿ ಅಲ್ಲಿಯೇ ಇದ್ದು ಬೇಕಾದ ಆಹಾರಗಳನ್ನು ತೆಗೆದುಕೊಳ್ಳಲಿ. ನೀನು ನಾಳೆ ಪ್ರಾತಃಕಾಲದಲ್ಲಿ ಸೇನೆಯನ್ನು ಕೂಡಿಕೊಂಡು ಹೋಗು" ಎಂದು ನುಡಿದನು.

---

೮೫ನೆಯ ಅಧ್ಯಾಯ

## ಭರತನು ತಾನು ಬಂದ ಕಾರ್ಯವನ್ನು ಗುಹನಿಗೆ ಹೇಳಿದ್ದು

ಹೀಗೆ ನುಡಿದ ಗುಹನನ್ನು ಕುರಿತು ಭರತನು "ಎಲೈ ಗುಹನೆ, ನಾವು ಭರದ್ವಾಜಮುನಿಯ ಆಶ್ರಮಕ್ಕೆ ಹೋಗಬೇಕು. ಈ ದೇಶವು ಅರಣ್ಯಮಯವಾಗಿದೆ. ಈ ಗಂಗೆಯು ದಾಟುವುದಕ್ಕೆ ಬಹು ದುರ್ಘಟವಾಗಿದೆ. ಭರದ್ವಾಜಾಶ್ರಮಕ್ಕೆ ಯಾವ ದಾರಿಯಲ್ಲಿ ಹೋಗಬೇಕು ?" ಎಂದು ಕೇಳಿದನು.

ಗುಹನು "ರಾಜಕುಮಾರ, ಇದಕ್ಕೆ ಯೋಚನೆಯೇನು ? ಅರಣ್ಯದಲ್ಲಿ ಸಂಚರಿಸುವ ಬಿಲ್ಲುಗಾರರಾದ ನನ್ನ ಭೃತ್ಯರು ನಿನ್ನ ಸಂಗಡ ಬರುವರು. ನಾನೂ ನಿನ್ನೊಡನೆ ಬರುತ್ತೇನೆ. ನೀನು ಶ್ರೀರಾಮನಲ್ಲಿ ಕೆಟ್ಟಭಾವನೆಯಿಂದ ಬಂದೆಯೋ ಏನು ? ನೀನು ಬಹಳವಾಗಿ ಸೇನೆಯನ್ನು ಕೂಡಿ ಬಂದಿರುವುದರಿಂದ ನನ್ನ ಮನಸ್ಸಿಗೆ ಸಂಶಯವಾಗಿದೆ" ಎಂದು ನುಡಿದನು.

ನಿರ್ಮಲಾಂತಃಕರಣನಾದ ಭರತನು ಗುಹನನ್ನು ಕುರಿತು ಮೃದುವಚನದಿಂದ "ಎಲೈ ಗುಹನೆ, ನಿನ್ನ ಮನಸ್ಸಿನಲ್ಲಿ ಅಂಥ ಸಂಶಯ ಬೇಡ. ನನಗೆ ಅಣ್ಣನಾದ ಶ್ರೀರಾಮನು ನನ್ನ ತಂದೆಯಾದ ದಶರಥರಾಯನಿಗೆ ಸಮಾನನು. ಆದಕಾರಣ ಆತನನ್ನು ವನದಿಂದ ಕರೆದುಕೊಂಡು ಬರುವುದಕ್ಕೆ ಹೋಗುತ್ತೇನೆ. ನಿನ್ನ ಮನಸ್ಸಿನಲ್ಲಿ ಸಂಶಯ ಬೇಡ. ನಿನ್ನೊಡನೆ ಸತ್ಯವನ್ನೇ ನುಡಿಯುತ್ತಿದ್ದೇನೆ" ಎಂದು ನುಡಿದನು.

ಗುಹನು ಅತ್ಯಂತ ಸಂತೋಷಯುಕ್ತನಾಗಿ ಭರತನನ್ನು ಕುರಿತು "ಭರತ, ನೀನು ಸತ್ಯಸಂಧನು ; ಕೃತಾರ್ಥನು. ಭೂಮಂಡಲದಲ್ಲಿ ನಿನಗೆ ಸಮಾನರಾದವರನ್ನು ಕಾಣೆನು. ದೈವಾನುಕೂಲದಿಂದ ತನಗೆ ತಾನೇ ಬಂದ ರಾಜ್ಯಾಧಿಪತ್ಯವನ್ನು ಬಿಡಲೆಣಿಸಿದ್ದೀಯೆ. ಲೋಕದಲ್ಲಿ ನಿನ್ನ ಕೀರ್ತಿಯು ಎಂದೆಂದಿಗೂ ಸ್ಥಿರವಾಗಿರುವುದು. ವನಕ್ಕೆ ಬಂದ ಶ್ರೀರಾಮನನ್ನು ತಿರುಗಿ ಕರೆದುಕೊಂಡು ಹೋಗುವುದಕ್ಕೆ ನೀನು ಅತಿಪ್ರಯಾಸದಿಂದ ಬಂದೆ" ಎಂದು ಹೇಳಿದನು.

ಅಷ್ಟರಲ್ಲಿ ರಾತ್ರಿಯಾಯಿತು. ಭರತನು ಅಲ್ಲಿಯೇ ಸೇನೆಯನ್ನು ವಿಶ್ರಾಂತಿಗೊಳಿಸಿ ಶತ್ರುಘ್ನನ ಸಮೀಪದಲ್ಲಿ ತಾನು ಮಲಗಿದನು. ಮಹಾತ್ಮನಾದ ಭರತನಿಗೆ ರಾಮವಿಯೋಗವು ಒಳಗೊಳಗೆ ಶೋಕದಿಂದ ಕುದಿಯುವಂತೆ ಮಾಡಿತ್ತು. ಒಣಗಿದ ಮರದೊಳಗೆ ಸೇರಿಕೊಂಡ ಬೆಂಕಿಯಂತೆ ಸುಡುತ್ತಿತ್ತು. ಶೋಕವು ಬೆಟ್ಟದಂತೆ ಅವನಮೇಲೆ ಕುಳಿತಿತ್ತು. ಪುನಃಪುನಃ ನಿಟ್ಟುಸಿರುಬಿಡುತ್ತ ಎಚ್ಚರದಪ್ಪಿದವನಂತಾಗಿದ್ದನು. ಭರತನ ಹೃದಯದಲ್ಲಿ ಶಾಂತಿಯ ಲೇಶವೂ ಇರಲಿಲ್ಲ. ಅದನ್ನು ಕಂಡು ಗುಹನು ಭರತನಿಗೆ ಸಮಾಧಾನವನ್ನು ಹೇಳಿದನು.

## ೮೭ ನೆಯ ಅಧ್ಯಾಯ

# ಗುಹನು ಶ್ರೀರಾಮಲಕ್ಷ್ಮಣರ ವೃತ್ತಾಂತವನ್ನು ಭರತನಿಗೆ ಹೇಳಿದ್ದು

ಆಮೇಲೆ ಅರಣ್ಯವಾಸಿಯಾದ ಗುಹನು ಮಹಾತ್ಮನಾದ ಭರತನನ್ನು ಮೃದುನುಡಿಗಳಿಂದ ಸಂತವಿಡುತ್ತ ಹೀಗೆಂದನು: "ಎಲೈ ಭರತನೆ, ಲಕ್ಷ್ಮಣಸಮೇತನಾದ ಶ್ರೀರಾಮನು ಇಲ್ಲಿಗೆ ಬಂದಿದ್ದಾಗ ಲಕ್ಷ್ಮಣನು ರಾತ್ರಿಯಲ್ಲಿ ಆತನನ್ನು ಕಾದಿರಬೇಕೆಂದು ನಿದ್ರೆಯಿಲ್ಲದೆ ಕುಳಿತುಕೊಂಡಿದ್ದನು. ನಾನು ಆತನನ್ನು ಕುರಿತು 'ಎಲೈ ಲಕ್ಷ್ಮಣ, ನಾನು ನಿನ್ನ ಸಲುವಾಗಿ ಉತ್ತಮವಾದ ಸುಪ್ಪತ್ತಿಗೆಯನ್ನು ತರಿಸಿದ್ದೇನೆ. ಈ ಸುಪ್ಪತ್ತಿಗೆಯಮೇಲೆ ಶಯನಮಾಡು. ಶ್ರೀರಾಮನು ವ್ರತಸ್ಥನು. ಮಿಕ್ಕವರು ನೆಲದಮೇಲೆ ಮಲಗಬಹುದು. ಅತ್ಯಂತ ಸುಖವನ್ನನುಭವಿಸಿಕೊಂಡಿದ್ದ ನೀನು ನೆಲದ ಮೇಲೆ ಮಲಗಬೇಡ. ನಾನು ಎಚ್ಚರಿಕೆಯಿಂದ ಶ್ರೀರಾಮನನ್ನು ಕಾದಿರುತ್ತೇನೆ. ನನಗೆ ಅವನಿಗಿಂತಲೂ ಹೆಚ್ಚಿನ ಪ್ರಿಯಸಖನಿಲ್ಲ. ಆತನಿಗೆ ನಾನೂ ಪ್ರಿಯಸಖನು. ಇದು ಸತ್ಯ. ಶ್ರೀರಾಮನ ಕೃಪೆಯಿಂದಲೇ ನಾನು ಸಮಸ್ತ ಲೋಕಗಳಲ್ಲಿಯೂ ಕೀರ್ತಿಯನ್ನು ಪಡೆದೇನು. ಆತನಿಂದಲೇ ಧರ್ಮಾರ್ಥಕಾಮಗಳನ್ನೂ ಪಡೆಯುವೆನು. ಆದಕಾರಣ ಸೀತಾಸಮೇತನಾಗಿ ಮಲಗಿರುವ ಶ್ರೀರಾಮನನ್ನು ನಾನು ಕಾದಿರುತ್ತೇನೆ. ಅವರು ನಿದ್ರೆ ತಿಳಿದೆದ್ದಮೇಲೆ ನಾನು ನಿದ್ರೆಯನ್ನು ಮಾಡುತ್ತೇನೆ' ಎಂದು ಹೇಳಿದೆನು.

ಲಕ್ಷ್ಮಣನು ನನ್ನನ್ನು ಕುರಿತು ಗುಹ, ಶ್ರೀರಾಮನು ಎಂಥವನೆಂದು ನೀನು ಬಲ್ಲೆಯಾ! ರಣರಂಗದಲ್ಲಿ ದೇವಾಸುರರಲ್ಲಾರೂ ಈತನಿಗೆದುರಾಗಿ ನಿಲ್ಲುವವರಿಲ್ಲ. ಅಂಥ ಸ್ವಾಮಿಯು ಹುಲ್ಲು ಹಾಸಿಗೆಯಮೇಲೆ ಸೀತಾಸಮೇತನಾಗಿ ಮಲಗಿದ್ದಾನೆ, ನೋಡು. ಈತನು ಸಾಧಾರಣನಾದ ಮನುಷ್ಯನಲ್ಲ. ದಶರಥರಾಯನ ತಪಸ್ಸಾಮರ್ಥ್ಯದಿಂದಲೂ ನಾನಾಪ್ರಕಾರವಾದ ವ್ರತೋಪವಾಸ ನಿಯಮಾದಿ ಪ್ರಯಾಸಗಳಿಂದಲೂ ಅವತರಿಸಿದವನು. ಈತನೊಬ್ಬನೇ ದಶರಥಮಹಾರಾಯನಿಗೆ ಸಮಾನವಾದ ಲಕ್ಷಣವುಳ್ಳವನು. ಈತನು ವನಕ್ಕೆ ಹೋದರೆ ದಶರಥರಾಯನು ಬಹುಕಾಲ ಜೀವದಿಂದಿರಲಾರನೆಂದು ಅಂತಃಪುರದ ಸ್ತ್ರೀಯರೆಲ್ಲರೂ ಗೋಳಿಟ್ಟು ಚೈತನ್ಯಗುಂದಿದರು. ಈಗ ಶ್ರೀರಾಮನು ವನಕ್ಕೆ ಬಂದನು. ಈಗ ಈತನ ಅರಮನೆಯು ರೋದನಧ್ವನಿಯಿಂದ ಪರಿಪೂರ್ಣವಾಗಿರುವುದು. ಕೌಸಲ್ಯಾದೇವಿಯೂ ನನ್ನ ತಾಯಿಯಾದ ಸುಮಿತ್ರಾದೇವಿಯೂ ದಶರಥರಾಯನೂ ಈತನ ಅಗಲಿಕೆಯಿಂದುಂಟಾದ ದುಃಖಾತಿಶಯದಿಂದ ಜೀವಿಸಲಾರರು. ದೈವಾಧೀನದಿಂದ ನನ್ನ ತಾಯಿಯಾದ ಸುಮಿತ್ರಾದೇವಿಯು ತನ್ನ ಕಿರಿಯಮಗನಾದ ಶತ್ರುಘ್ನನು ಇರುವನೆಂದು ಧೈರ್ಯದಿಂದ ಜೀವಿಸಿಕೊಂಡಿರಬಹುದು. ಶ್ರೀರಾಮನ ತಾಯಿಯಾದ ಕೌಸಲ್ಯಾದೇವಿಯು ಜೀವಿಸಲಾರಳು. ದಶರಥರಾಯನು ತನ್ನ ಮನೋರಥವನ್ನು ಪಡೆಯದೆ ಹೋದದ್ದರಿಂದಲೂ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡದೆ ವನಕ್ಕೆ ಕಳುಹಿಸಿದ್ದರಿಂದಲೂ ಜೀವಿಸಲಾರನು. ಅಲ್ಲಿರುವ ಮಕ್ಕಳು ಸ್ವರ್ಗಸ್ಥನಾದ ತಂದೆಗೆ ಅಗ್ನಿಸಂಸ್ಕಾರವನ್ನು ಮಾಡಿ ಪಿತೃಕಾರ್ಯವನ್ನು ತೀರಿಸುವರು. ಅವರು ಸಮಸ್ತ ರತ್ನಗಳಿಂದ ಸಂಪೂರ್ಣವಾಗಿ ಸಮಸ್ತ ಕಲ್ಯಾಣಮಹೋತ್ಸವಗಳಿಂದ ಒಪ್ಪುವಂಥ ಅಯೋಧ್ಯಾಪಟ್ಟಣದಲ್ಲಿ ಸುಖಿತರಾಗಿ ಸಂಚರಿಸುವರು. ನಾವು ಸತ್ಯಸಂಧನೂ ಕುಶಲಿಯೂ ಆದ ಶ್ರೀರಾಮನೊಡನೆ ಹದಿನಾಲ್ಕು ವರ್ಷ ವನವಾಸವನ್ನು ಪೂರೈಸಿಕೊಂಡು ಬಂದು ಅಯೋಧ್ಯಾಪಟ್ಟಣವನ್ನು

ಪ್ರವೇಶಿಸುವೆವೆ ? ಎಂದು ಹಂಬಲಿಸುತ್ತ ನುಡಿದನು. ಈ ಪ್ರಕಾರವಾಗಿ ಆ ರಾತ್ರಿಯು ಕಳೆದು ಸೂರ್ಯೋದಯವಾಗಲು ರಾಮಲಕ್ಷ್ಮಣರು ಈ ಭಾಗೀರಥೀತೀರದಲ್ಲಿ ನಾರುಬಟ್ಟೆಯನ್ನುಟ್ಟು ಜಡೆಗಳನ್ನು ಧರಿಸಿಕೊಂಡರು. ಮಹತ್ತಾದ ಅರಣ್ಯದಲ್ಲಿ ಸಂಚರಿಸುವ ಮದ್ದಾನೆಗಳಂತೆ ಬಿಲ್ಲುಬಾಣ ಗಳನ್ನು ಧರಿಸಿಕೊಂಡು ಸೀತಾಸಮೇತರಾಗಿ ಈ ಭಾಗೀರಥಿಯನ್ನು ದಾಟಿ ಮುಂದೆ ತೆರಳಿದರು " ಎಂದು ಗುಹನು ಭರತನಿಗೆ ಹೇಳಿದನು.



೮೭ ನೆಯ ಅಧ್ಯಾಯ

## ಶ್ರೀರಾಮನು ಅರಣ್ಯದಲ್ಲಿ ಮಲಗಿದ್ದ ಸ್ಥಳವನ್ನು ಭರತನು ನೋಡಿದ್ದು

ಗುಹನ ಮಾತನ್ನು ಕೇಳಿ ಶ್ರೀರಾಮನನ್ನು ನೆನೆದು ಭರತನು ಮನೋವ್ಯಥೆಯಿಂದ ಎದೆಯಲ್ಲಿ ಗಾಯಪಟ್ಟ ಮದ್ದಾನೆಯಂತೆ ದುಃಖಿಸುತ್ತ ಮೂರ್ಛಿತನಾದನು. ಅದನ್ನು ನೋಡಿ ಶತ್ರುಘ್ನನು ವ್ಯಥೆಯಿಂದ ಭರತನನ್ನು ತಬ್ಬಿಕೊಂಡು ಗೋಳಿಟ್ಟು ರೋದನಮಾಡುತ್ತ ಶೋಕದಿಂದ ಸತ್ತ್ವಗುಂದಿದನು. ಆಗ ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರ ತಾಯಂದಿರಾದ ಕೌಸಲ್ಯಾದೇವಿಯೂ ಕೈಕೇಯಿದೇವಿಯೂ ಸುಮಿತ್ರಾದೇವಿಯೂ ಮಿಕ್ಕವರೂ ಮೂರ್ಛಾಗತರಾದ ಭರತಶತ್ರುಘ್ನರನ್ನು ಕಂಡು ರೋದನಮಾಡುತ್ತ ಅವರನ್ನು ಸುತ್ತಿಕೊಂಡರು. ಕೌಸಲ್ಯಾದೇವಿಯು ಅತ್ಯಂತ ಮನೋವ್ಯಥೆ ಯುಳ್ಳವಳಾಗಿ ಭರತಶತ್ರುಘ್ನರಿಬ್ಬರನ್ನೂ ತನ್ನ ಕುಮಾರನಾದ ಶ್ರೀರಾಮನನ್ನು ತಬ್ಬಿಕೊಳ್ಳುವಹಾಗೆ ಆಲಿಂಗಿಸಿಕೊಂಡು ಹಿಡಿದೆತ್ತಿ ಭರತನನ್ನು ಕುರಿತು " ಭರತ, ಏಕೆ ಮೂರ್ಛಾಗತನಾಗಿ ಬಿದ್ದೆ ? ನಿನ್ನ ಶರೀರದಲ್ಲಿ ಏನಾದರೂ ವ್ಯಾಧಿ ಸಂಭವಿಸಿರುವುದೆ ? ನೀನೇಕೆ ಸತ್ತ್ವಗುಂದಿದೆ ? ಇಕ್ಷ್ವಾಕುವಂಶದ ಜೀವನೋಪಾಯವೆಲ್ಲವೂ ನಿನ್ನ ಅಧೀನವಾಗಿದೆ. ಶ್ರೀರಾಮನು ವನಕ್ಕೆ ಹೋಗಿ ದಶರಥರಾಯನು ಸ್ವರ್ಗಸ್ಥನಾದಮೇಲೂ ನಿನ್ನನ್ನು ನೋಡಿ ನಾವು ಪ್ರಾಣಗಳನ್ನು ಧರಿಸಿಕೊಂಡಿದ್ದೇವೆ. ನಮ್ಮೆಲ್ಲರಿಗೂ ಮುಂದಿಗೂ ನೀನೇ ರಕ್ಷಕನು. ನೀನು ಇಷ್ಟು ಕಂಗೆಡುವುದಕ್ಕೆ ಕಾರಣವೇನು ? ಲಕ್ಷ್ಮಣನ ವಿಷಯ ದಲ್ಲಾಗಲಿ ಏಕಪುತ್ರಳಾದ ನನ್ನ ಮಗನ ವಿಷಯದಲ್ಲಾಗಲಿ ಏನಾದರೂ ದುರ್ವಾರ್ತೆಯನ್ನು ಕೇಳಿದೆಯಾ ? " ಎಂದು ಆತನ ಕಣ್ಣೀರನ್ನು ತೊಡೆದು ಸಂತವಿಟ್ಟಳು.

ಭರತನು ಕೌಸಲ್ಯಾದೇವಿಯನ್ನು ಸಂತವಿಟ್ಟು ಗುಹನನ್ನು ಕುರಿತು " ಎಲೈ ಗುಹನೆ, ನಮ್ಮ ಅಣ್ಣನಾದ ಶ್ರೀರಾಮನು ಗಂಗಾತೀರದಲ್ಲಿ ಎಲ್ಲಿದ್ದನು ? ಸೀತಾದೇವಿಯೆಲ್ಲಿದ್ದಳು ? ಲಕ್ಷ್ಮಣ ನೆಲ್ಲಿದ್ದನು ? ಶ್ರೀರಾಮನು ಯಾವ ಹಾಸಿಗೆಯಮೇಲೆ ಮಲಗಿದ್ದನು ? " ಎಂದು ಕೇಳಿದನು.

ಗುಹನು " ರಾಜಪುತ್ರ, ನಾನು ಅನೇಕ ಬಗೆಯ ಅನ್ನವನ್ನೂ ಕಜ್ಜಾಯಗಳನ್ನೂ ಫಲಾದಿಗಳನ್ನೂ ತಂದುಕೊಟ್ಟೆನು. ಶ್ರೀರಾಮನು ಅವನ್ನು ಸ್ವೀಕರಿಸದೆ ನನಗೆ ಮರಳಿ ಕೊಟ್ಟನು. ಕ್ಷತ್ರಿಯಧರ್ಮದಲ್ಲಿ ಪರಿಗ್ರಹಿಸುವುದು ಧರ್ಮವಲ್ಲವೆಂದು ಒಂದನ್ನೂ ಅಂಗೀಕರಿಸಲಿಲ್ಲ. ಆತನು ನನ್ನನ್ನು ನೋಡಿ 'ಎಲೈ ಗುಹನೆ, ನಾವು ವ್ರತಸ್ಥರಾದ್ದರಿಂದ ಇಂಥ ವಸ್ತುಗಳನ್ನು ಯಾವಾಗಲೂ ಪರಿಗ್ರಹಿಸಬಾರದು ' ಎಂದು ನುಡಿದು ಲಕ್ಷ್ಮಣನು ತಂದ ಉದಕವನ್ನು ಪಾನಮಾಡಿ ಸೀತಾಸಮೇತನಾಗಿ ಉಪವಾಸ ಮಾಡಿದನು. ಲಕ್ಷ್ಮಣನು ಅವರು ಪಾನಮಾಡಿ ಮಿಕ್ಕ ಉದಕವನ್ನು ಕುಡಿದು ತಾನೂ ಉಪವಾಸ ವಾಗಿದ್ದನು. ಆ ಸಾಯಂಕಾಲದಲ್ಲಿ ಸಂಧ್ಯಾವಂದನೆ ಜಪ ಹೋಮಾದಿ ನಿಯಮಗಳನ್ನು ತೀರಿಸಿ

ಕೊಂಡು ಲಕ್ಷ್ಮಣನು ನಿರ್ಮಿಸಿದ ದರ್ಭೆಯ ಹಾಸಿಗೆಯಮೇಲೆ ಸೀತಾಸಮೇತನಾಗಿ ಶ್ರೀರಾಮನು ಪಾದಪ್ರಕ್ಷಾಳನ ಮಾಡಿಕೊಂಡು ಶಯನಮಾಡಿದನು. ಲಕ್ಷ್ಮಣನು ದೂರಕ್ಕೆ ಸಾರಿದನು. ಸೀತಾ ಲಕ್ಷ್ಮಣಸಮೇತನಾದ ಶ್ರೀರಾಮನು ಈ ವನದಲ್ಲಿರುವ ಇಂಗಳವೃಕ್ಷದಡಿಯಲ್ಲಿ ದರ್ಭೆಯ ಹಾಸಿಗೆಯಮೇಲೆ ಬತ್ತಳಿಕೆಯನ್ನು ಮಗ್ಗುಲಲ್ಲಿಟ್ಟುಕೊಂಡು ಬಿಲ್ಲುನಾರಿಯನ್ನು ಧ್ವನಿಮಾಡುವ ಹೆಬ್ಬೆಟ್ಟಿನ ಉಂಗುರವನ್ನು ಧರಿಸಿಕೊಂಡು ಶಯನಮಾಡಿದನು. ಲಕ್ಷ್ಮಣನು ಬಿಲ್ಲುಹೆದೆಯನ್ನು ಇಳಿಸದೆಯೇ, ದರ್ಭೆಯ ಹಾಸಿಗೆಯಮೇಲೂ ಮಲಗದೆಯೇ ನಿದ್ರೆಯಿಲ್ಲದೆ ಎಚ್ಚರಿಕೆಯಾಗಿ ಅವರಿಗೆ ಕಾವಲಾಗಿದ್ದನು. ನಾನೂ ಬಿಲ್ಲುಬಾಣಗಳನ್ನು ಧರಿಸಿಕೊಂಡು ನಮ್ಮ ಜ್ಞಾತಿಗಳನ್ನು ಕೂಡಿಕೊಂಡು ಲಕ್ಷ್ಮಣನ ಸಮೀಪದಲ್ಲಿ ದೇವೇಂದ್ರನಿಗೆ ಸಮಾನನಾದ ಶ್ರೀರಾಮನನ್ನು ಕಾಯುತ್ತ ಮಲಗಿ ಆ ರಾತ್ರಿಯನ್ನು ಕಳೆದೆನು" ಎಂದು ಹೇಳಿದನು.



## ೮೮ ನೆಯ ಅಧ್ಯಾಯ

## ಭರತನ ವಿಲಾಪ

ಈ ಪ್ರಕಾರ ಭರತನು ಸೀತಾಲಕ್ಷ್ಮಣಸಮೇತನಾದ ಶ್ರೀರಾಮನ ವೃತ್ತಾಂತವನ್ನು ಕೇಳಿ ಆತನು ಮಲಗಿದ್ದ ಇಂಗಳದ ಮರದಡಿಗೆ ಹೋದನು. ದರ್ಭೆಯ ಹಾಸಿಗೆಯನ್ನು ನೋಡಿ ತನ್ನ ತಾಯಂದಿರನ್ನು ಕರೆದು ಹೇಳಿದನು: "ಶ್ರೀರಾಮನು ಗಂಗಾತೀರಕ್ಕೆ ಬಂದು ಇಂಗಳದ ಮರದಡಿಯಲ್ಲಿ ಭೂಮಿಯಮೇಲೆ ದರ್ಭೆಯ ಹಾಸಿಗೆಯನ್ನು ಹಾಸಿಕೊಂಡು ಮಲಗಿದ್ದ ಸ್ಥಳವಿದು. ಇದು ಆ ಹಾಸಿಗೆಯ ಹುಲ್ಲು. ಇದು ಆತನ ಮಗ್ಗುಲಲ್ಲೊತ್ತರಿಸಿದ ದರ್ಭೆಯ ಹುಲ್ಲು! ಇಕ್ಷ್ವಾಕು ವಂಶದಲ್ಲಿ ಮಹಾತ್ಮನೂ ಸತ್ಯಜ್ಞಾನಸಂಪನ್ನನೂ ದಶರಥಮಹಾರಾಜನಿಂದ ಅವತರಿಸಿದವನೂ ಪರಮಪುರುಷನೂ ಆದ ಶ್ರೀರಾಮನು ಇಂಥ ಹಾಸಿಗೆಯಲ್ಲಿ ಭೂಮಿಯಮೇಲೆ ಶಯನ ಮಾಡುವುದಕ್ಕೆ ಯೋಗ್ಯನೆ? ಹಂಸತಲ್ಪದಿಂದ ನಿರ್ಮಿಸಲ್ಪಟ್ಟ ಹಾಸಿಗೆಯಿಂದ ಕೂಡಿದ ನವರತ್ನಖಚಿತವೂ ಸುವರ್ಣಮಯವೂ ಆದ ಮಂಚದಮೇಲೆ ಮಲಗುವಾತನು ಇಂಥ ಶಯನದ ಮೇಲೆ ಹೇಗೆ ಮಲಗಿರಬಹುದು! ಸುವರ್ಣಮಯವಾದ ನೆಲಗಟ್ಟಿರುವ, ಅತಿಕೋಮಲವಾದ ರತ್ನಕಂಬಳಿಗಳುಳ್ಳ, ವಿಚಿತ್ರವಾದ ಪುಷ್ಪಮಂಟಪಗಳಿಂದ ಮೆರೆಯುವ, ಶ್ರೀಗಂಧ ಕುಂಕುಮ ಮೊದಲಾದವುಗಳ ಪರಿಮಳವುಳ್ಳ, ಶರತ್ಕಾಲದ ಮೇಘದಂತೆ ಬಿಳುಪಾದ ಸ್ಫಟಿಕಶಿಲೆಯ ಭಿತ್ತಿಗಳುಳ್ಳ, ಕೋಗಿಲೆ ಗಿಣಿ ಪಾರಾವತ ಹಂಸ ನವಿಲುಗಳ ಮೋಹನಧ್ವನಿಗಳಿಂದ ತುಂಬಿದ ಉಪ್ಪರಿಗೆಯಲ್ಲಿ ಮಲಗಿ ಕಿವಿಗಿಂಪಾದ ಗೀತ ವಾದ್ಯ ಮದ್ದಳೆ ಮೊದಲಾದ ಮಂಗಳರವಗಳಿಂದ ನಿದ್ರೆತಿಳಿದೆದ್ದು ಮಂಗಳಪಾಠಕರ ದಿವ್ಯವಾದ ಸ್ತೋತ್ರಗಳಿಂದ ಸ್ತುತಿಸಲ್ಪಡುತ್ತಿದ್ದ ಶ್ರೀರಾಮನು ಈ ಭೂಮಿಯಲ್ಲಿ ಇಂಥ ಹಾಸಿಗೆಯಲ್ಲಿ ಮಲಗಿದ್ದನೆಂದರೆ ಹೇಗೆ ಸತ್ಯವೆಂದೆಣಿಸುವುದು? ಇದು ಸ್ವಪ್ನವೊ! ಅಲ್ಲದಿದ್ದರೆ ಚಿತ್ತಭ್ರಮೆಯೊ! ಅಕಟಕಟಾ! ಲೋಕದಲ್ಲಿ ದೈವವು ಫಲಕಾಲವು ಬಂದಲ್ಲಿ ಭೋಗ ಫಲವನ್ನು ಕೊಡುವುದಲ್ಲದೆ ಉಳಿದ ಸಮಯದಲ್ಲಿ ಕೊಡಲಾರದು. ದೈವವೇ ಫಲವನ್ನು ಕೊಡುವ ಪಕ್ಷದಲ್ಲಿ ದಶರಥಮಹಾರಾಜನ ಕುಮಾರನಾದ ಶ್ರೀರಾಮನು ಭೂಮಿಯಮೇಲೆ ದರ್ಭೆಯ ಹಾಸಿಗೆ ಯಲ್ಲಿ ಮಲಗಬೇಕಾಗಿದ್ದಿತೆ? ಜನಕಮಹಾರಾಜನ ಕುಮಾರಿಯಾಗಿ ಶ್ರೀರಾಮನ ಪ್ರಾಣಕಾಂತೆ

ಯಾಗಿ ದಶರಥರಾಯನ ಸೊಸೆಯಾದ ಸೀತಾದೇವಿಯು ಈ ಹಾಸಿಗೆಯಲ್ಲಿ ಮಲಗಬೇಕಿತ್ತೆ ? ಶ್ರೀರಾಮನು ಮಲಗಿದ್ದಾಗ ಆತನ ಮಗ್ಗುಲೊತ್ತಿದ ಹುಲ್ಲು ಜೀರ್ಣವಾಗಿದೆ. ಸರ್ವಾಭರಣ ಭೂಷಿತೆಯಾದ ಸೀತಾದೇವಿಯು ಶಯನಮಾಡಿದ ಸ್ಥಳದಲ್ಲಿ ಆ ದೇವಿಯು ಉಟ್ಟಿದ್ದ ಬಿಳಿಯ ಪಟ್ಟೆಯ ನೂಲುಗಳು ದರ್ಭೆಯಲ್ಲಿ ತಗುಲಿಕೊಂಡಿವೆ. ಮಿಥಿಲಾರಾಜನ ಸುಕುಮಾರಿಯಾಗಿ ಸುಕುಮಾರಾಂಗಿಯಾದ ಸೀತಾದೇವಿಯು ಮೊದಲು ಯಾವಾಗಲೂ ದುಃಖವನ್ನು ಕಾಣದಿದ್ದವಳು. ಆಕೆಯು ತನ್ನ ಪ್ರಾಣಕಾಂತನಾದ ಶ್ರೀರಾಮನೊಡನೆ ಇರುವುದೇ ಸುಖವಾಸವೆಂದು ತಿಳಿದು ಆತನ ಹಿಂದೆ ಹೊರಟಳು ! ಅಯ್ಯೋ ನಾನು ಕೆಟ್ಟೆನು ! ಮಹಾದ್ರೋಹವನ್ನು ಮಾಡಿದೆನು. ನನ್ನ ನಿಮಿತ್ತ ವಾಗಿ ಶ್ರೀರಾಮನಿಗೆ ವನವಾಸ ಪ್ರಾಪ್ತವಾಯಿತು. ಉತ್ತಮವಾದ ಕಾಲದಲ್ಲಿ ರಾಜನಾಗಿ ಸುಖಾನುಭವಕ್ಕೆ ಯೋಗ್ಯನಾದ ಶ್ರೀರಾಮನು ಇಂಥ ಹುಲ್ಲುಹಾಸಿಗೆಯಮೇಲೆ ಮಲಗಿದ್ದನಲ್ಲ ! ಕೆಂದಾವರೆಯ ಪುಷ್ಪಗಳನ್ನು ಹೋಲುವ ಕಣ್ಣುಗಳುಳ್ಳ ಕನ್ನೈದಿಲೆಪುಷ್ಪದಂತೆ ಕಪ್ಪಾದ ತನುಕಾಂತಿ ಯುಳ್ಳ ಸಮಸ್ತ ಪ್ರಾಣಿಗಳಿಗೂ ಪ್ರಿಯನಾದ ಶ್ರೀರಾಮನು ಸುಖಾನುಭವಕ್ಕೆ ಯೋಗ್ಯನೇ ಹೊರತು ಇಂಥ ದುಃಖಕ್ಕೆ ಯೋಗ್ಯನಲ್ಲ. ಹಾಗಾದರೂ ಇಂಥ ಕಠಿಣವಾದ ಭೂಮಿಯಲ್ಲಿ ತೃಣಶಯನದಲ್ಲಿ ಮಲಗಿದ್ದನು. ಪರಮಾತ್ಮಸ್ವರೂಪನೂ ಅಣ್ಣನೂ ಆದ ಶ್ರೀರಾಮನ ಆಪತ್ಕಾಲದಲ್ಲಿ ಆತನ ಸೇವೆಯನ್ನು ಮಾಡಿಕೊಂಡಿರುವ ಲಕ್ಷ್ಮಣನೇ ಕೃತಾರ್ಥನು. ಆತನನ್ನು ಹಿಂಬಾಲಿಸಿಕೊಂಡು ವನವಾಸ ಮಾಡುವ ಸೀತಾದೇವಿಯೂ ಕೃತಾರ್ಥಳು. ಆತನನ್ನು ಅಗಲಿರುವ ನಾವು ಅಭಾಗ್ಯರು. ಶ್ರೀರಾಮನು ವನಕ್ಕೆ ಹೋದದ್ದರಿಂದಲೂ ದಶರಥರಾಯನು ಸ್ವರ್ಗಸ್ಥನಾದದ್ದರಿಂದಲೂ ರಾಜ್ಯಕ್ಕೆ ಯೋಗ್ಯನಾದ ಅರಸನಿಲ್ಲ. ಈ ರಾಜ್ಯವನ್ನು ಅಜ್ಞಾನಿಯೂ ಬಯಸನು. ಮಹಾಬಲಪರಾಕ್ರಮಿಯಾದ ಶ್ರೀರಾಮನು ವನವನ್ನೈದಲು ರಕ್ಷಕರಿಲ್ಲದ ಆನೆ ಕುದುರೆ ಎತ್ತುಗಳೂ ವಿಚಾರಶೂನ್ಯರಾಗಿ ದುಃಖಾಕ್ರಾಂತರಾದ ಜನರೂ ಕಾವಲು ಕಟ್ಟಳೆಯಿಲ್ಲದೆ ವಿಷಮವಾಗಿರುವ ಅಯೋಧ್ಯಾಪಟ್ಟಣವನ್ನು ಶತ್ರುಗಳೂ ವಿಷದ ಕಜ್ಜಾಯದಂತೆ ದೃಷ್ಟಿಸಿ ನೋಡರು. ಆದ್ದರಿಂದ ನಾನು ಅಯೋಧ್ಯಾ ಪಟ್ಟಣದಲ್ಲಿದ್ದು ಮಾಡುವುದೇನು ? ಇಂದು ಮೊದಲಾಗಿ ನಾನು ಭೂಮಿಯಮೇಲೆ ಹುಲ್ಲು ಹಾಸಿಗೆಯಲ್ಲಿ ಶಯನಮಾಡುವೆನು. ಶ್ರೀರಾಮನಂತೆ ನಾರುಬಟ್ಟೆಯನ್ನುಟ್ಟು ಜಡೆಗಳನ್ನು ಧರಿಸಿಕೊಂಡು ಕಂದಮೂಲ ಫಲಾಹಾರಗಳನ್ನು ಮಾಡಿಕೊಂಡು ವನದಲ್ಲೇ ಉಳಿದ ದಿನಗಳನ್ನು ಕಳೆಯುವೆನು. ಈ ಮಾತು ಸತ್ಯ ! ಶತ್ರುಘ್ನನು ತನ್ನ ಅಣ್ಣನಾದ ಲಕ್ಷ್ಮಣನ ಸೇವೆಯನ್ನು ಮಾಡಿಕೊಂಡಿರಲಿ. ವಸಿಷ್ಠಮುನಿಯೇ ಮೊದಲಾದ ಬ್ರಾಹ್ಮಣರೂ ಸುಮಂತ್ರನೇ ಮೊದಲಾದ ವೃದ್ಧಾಪ್ತರೂ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಲಿ. ಆತನು ಅಯೋಧ್ಯಾನಗರದಲ್ಲಿ ರಾಜ್ಯಪರಿಪಾಲನವನ್ನು ಮಾಡಿಕೊಂಡಿರಬೇಕೆಂಬ ನನ್ನ ಈ ಮನೋರಥವನ್ನು ಸಮಸ್ತ ದೇವತೆಗಳೂ ಸಲ್ಲಿಸಿಕೊಡಲಿ ! ಎಲೌ ತಾಯಂದಿರಾ, ನಾನು ಶ್ರೀರಾಮನ ಪಾದಗಳಿಗೆರಗಿ ನಾನಾಪ್ರಕಾರದಲ್ಲಿ ಪ್ರಾರ್ಥಿಸುತ್ತೇನೆ. ಆತನು ನನಗೆ ಪ್ರಸನ್ನನಾಗಿ ನನ್ನ ಪ್ರಾರ್ಥನೆಯನ್ನು ಕೇಳದೆ ಹೋದರೆ ನಾನು ಆತನ ಸೇವೆಯನ್ನು ಮಾಡಿಕೊಂಡು ಇಲ್ಲಿಯೇ ಇರುತ್ತೇನೆ. ಆಗ ಆತನು ನನ್ನನ್ನು ಉಪೇಕ್ಷೆಮಾಡದೆ ರಕ್ಷಿಸಿಕೊಂಡಿರುವನು " ಎಂದು ಹಂಬಲಿಸತೊಡಗಿದನು



## ೮೯ ನೆಯ ಅಧ್ಯಾಯ

## ಭರತಾದಿಗಳು ಗಂಗೆಯನ್ನು ದಾಟಿದ್ದು

ಅನಂತರ ರಘುಕುಲೋದ್ಭವನಾದ ಭರತನು ಗಂಗಾತೀರದಲ್ಲಿ ಆ ರಾತ್ರಿಯನ್ನು ಕಳೆದನು. ಪ್ರಾತಃಕಾಲದಲ್ಲೆದ್ದು ಶತ್ರುಘ್ನನನ್ನು ಕುರಿತು ' ಎಲೈ ಶತ್ರುಘ್ನ, ಗುಹನನ್ನು ಶೀಘ್ರವಾಗಿ ಕರೆಯಿಸಿ ಗಂಗಾನದಿಯನ್ನು ದಾಟಲು ಅನುಕೂಲಪಡಿಸು ಎಂದು ಹೇಳು " ಎಂದು ಆಜ್ಞಾಪಿಸಿದನು ಈ ಸಮಯದಲ್ಲಿ ಗುಹನು ಬಂದು ಕಾಣಿಸಿಕೊಂಡು ಕೈಮುಗಿದು " ಭರತ, ಈ ರಾತ್ರಿಯನ್ನು ಗಂಗಾ ತೀರದಲ್ಲಿ ಸುಖವಾಗಿ ಕಳೆದೆಯಲ್ಲವೆ ? ನಿಮ್ಮ ಸೇನೆಯೂ ನೀವೂ ಕ್ಷೇಮವಾಗಿರುವಿರಾ ? " ಎಂದು ಸ್ನೇಹಾತಿಶಯದಿಂದ ಕೇಳಿದನು.

ಭರತನು " ನಿಷಾದರಾಜ, ನೀನು ನನಗೆ ಅತ್ಯಂತ ಸತ್ಕಾರವನ್ನು ಮಾಡಿದೆ. ಆದ್ದರಿಂದಲೇ ಈ ಗಂಗಾತೀರದಲ್ಲಿ ರಾತ್ರಿಯನ್ನು ಸುಖವಾಗಿ ಕಳೆದೆವು. ನೀನು ದೋಣಿಗಳನ್ನು ತರಿಸಿ ನಮ್ಮನ್ನು ಶೀಘ್ರವಾಗಿ ಗಂಗೆಯನ್ನು ದಾಟಿಸು " ಎಂದು ಹೇಳಿದನು.

ಆಗ ಗುಹನು ಪುನಃ ತನ್ನ ಪಟ್ಟಣಕ್ಕೆ ಹೋಗಿ ತನ್ನ ಜ್ಞಾತಿಗಳನ್ನು ಕರೆಯಿಸಿಕೊಂಡು ಭರತಾದಿಗಳನ್ನೂ ಸೇನೆಯನ್ನೂ ದಾಟಿಸಲು ಅವರಿಗೆ ಆಜ್ಞಾಪಿಸಿದನು. ಅವರು ಮಹಾಪ್ರಸಾದ ವೆಂದು ಗುಹನ ಮಾತನ್ನು ಶಿರಸಾವಹಿಸಿ ಸ್ವಸ್ತಿಕಾಕಾರದಲ್ಲಿ ನಿರ್ಮಿಸಲ್ಪಟ್ಟ ಐದುನೂರು ನಾವೆಗಳನ್ನು ತಂದರು. ಅವುಗಳಲ್ಲೊಂದು ಉತ್ತಮವಾದ ನಾವೆಯಲ್ಲಿ ಗುಹನು ಭರತನನ್ನೂ ಶತ್ರುಘ್ನನನ್ನೂ ಸುಮಿತ್ರಾದೇವಿ ಕೌಸಲ್ಯಾದೇವಿ ಮೊದಲಾದ ರಾಜಸ್ತ್ರೀಯರನ್ನೂ ಪುರೋಹಿತರಾದ ವಸಿಷ್ಠ ವಾಮದೇವಾದಿಗಳನ್ನೂ ಏರಿಸಿಕೊಂಡನು. ಮಿಕ್ಕವರು ತಮ್ಮ ತಮ್ಮ ಮನಸ್ಸಿಗೆ ಬಂದ ನಾವೆಗಳಲ್ಲಿ ತಮ್ಮ ತಮ್ಮ ವಸ್ತುಗಳನ್ನು ತೆಗೆದುಕೊಂಡು ಏರುತ್ತಿರಲು ಆ ಜನರ ಸಂಭ್ರಮಧ್ವನಿಯ ಕೋಲಾಹಲವು ಸ್ವರ್ಗಲೋಕವನ್ನು ತುಡುಕುತ್ತಿತ್ತು. ಕೆಲವು ನಾವೆಗಳಲ್ಲಿ ಸ್ತ್ರೀಯರನ್ನೂ ಕೆಲವು ನಾವೆಗಳಲ್ಲಿ ಕುದುರೆಗಳನ್ನೂ ಕೆಲವು ನಾವೆಗಳಲ್ಲಿ ದ್ರವ್ಯದ ಹೇರುಗಳನ್ನೂ ಏರಿಸಿ ಅಂಬಿಗರು ಆ ಸೇನೆಯನ್ನು ದಾಟಿಸಿದರು. ಈ ಪ್ರಕಾರ ಕೆಲವರು ನಾವೆಗಳಿಂದಲೂ ಕೆಲವರು ತೆಪ್ಪಗಳಿಂದಲೂ ಕೆಲವರು ಕುಂಭಗಳಿಂದಲೂ ಕೆಲವರು ಹರವಿಗಳಿಂದಲೂ ಕೆಲವರು ಈಜುವುದರಿಂದಲೂ ಗಂಗಾನದಿ ಯನ್ನು ದಾಟಿ ಮಧ್ಯಾಹ್ನಸಮಯದಲ್ಲಿ ಪ್ರಯಾಗದಲ್ಲಿದ್ದ ಅಕ್ಷಯವಟದ ಸಮೀಪಕ್ಕೆ ಹೋದರು. ಅವರು ತಮ್ಮ ತಮ್ಮ ಮನಸ್ಸಿಗೆ ಬಂದ ಸ್ಥಳಗಳಲ್ಲಿ ಪಾಳೆಯವಿಳಿದು ಕುದುರೆಗಳಿಗೆ ನೀರುಕುಡಿಸಿ ದಾರಿಯ ಬಳಲಿಕೆಯನ್ನು ಪರಿಹರಿಸಿಕೊಳ್ಳತೊಡಗಿದರು.



## ೯೦ ನೆಯ ಅಧ್ಯಾಯ

## ಭರದ್ವಾಜಮುನಿಗಳೊಡನೆ ಭರತನ ಸಂದರ್ಶನ

ಆಮೇಲೆ ಭರತನು ಭರದ್ವಾಜಾಶ್ರಮವನ್ನು ನೋಡಬೇಕೆಂಬ ಬುದ್ಧಿಯಿಂದ ಆ ಆಶ್ರಮದ ಒಂದು ಹರದಾರಿಯಲ್ಲಿ ತನ್ನ ಬಲವನ್ನು ನಿಲಿಸಿ ಆಯುಧಗಳನ್ನು ಬಿಟ್ಟು ಶತ್ರುಘ್ನಸಹಿತನಾಗಿ

ಪುರೋಹಿತನಾದ ವಸಿಷ್ಠಮುನೀಶ್ವರನನ್ನೂ ಗುರುಗಳಾದ ವಾಮದೇವಾದಿಗಳನ್ನೂ ಪ್ರಧಾನರನ್ನೂ ಕರೆದುಕೊಂಡು ಬಿಳಿಯಪಟ್ಟೆಯ ವಸ್ತ್ರವನ್ನು ಹೊದ್ದುಕೊಂಡು ಭರದ್ವಾಜಮುನೀಶ್ವರನ ಸಮೀಪಕ್ಕೆ ಹೋದನು. ಆ ಮುನಿಯು ವಸಿಷ್ಠಮುನೀಶ್ವರನನ್ನು ಕಂಡು ಎದ್ದು ನಿಂತುಕೊಂಡು ತನ್ನ ಶಿಷ್ಯರಿಂದ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿಸಿದನು. ಸಮೀಪಕ್ಕೆ ಬಂದು ಅಭಿವಂದಿಸಿದ ಭರತನನ್ನು ಕಂಡು ಆತನು ದಶರಥರಾಯನ ಮಗನೆಂದು ನಿಶ್ಚಯಿಸಿ ಭರತಶತ್ರುಘ್ನರಿಗೂ ಅರ್ಘ್ಯಪಾದ್ಯಾದಿಸತ್ಕಾರಗಳನ್ನು ಮಾಡಿಸಿ ಕಂದಮೂಲಫಲಾಹಾರಗಳನ್ನು ಯಥಾಕ್ರಮದಿಂದ ಕೊಟ್ಟು ಭರತನನ್ನು ಕುರಿತು "ಎಲೈ ರಾಜಕುಮಾರನೆ, ನಿನ್ನ ಅಯೋಧ್ಯಾಪಟ್ಟಣದಲ್ಲಿ ಭಂಡಾರ ಚತುರಂಗಬಲಗಳೂ ನಿನ್ನ ಮಂತ್ರಿಗಳೂ ಮಿತ್ರರೂ ಸೌಖ್ಯದಿಂದಿರುವರೆ ? " ಎಂದು ಕೇಳಿದನು. ದಶರಥನು ಮೃತನಾದನೆಂಬುದನ್ನರಿತು ಅವನ ವಿಷಯವನ್ನು ಕೇಳಲಿಲ್ಲ.

ಭರತನು ವಸಿಷ್ಠನನ್ನು ಮುಂದಿಟ್ಟುಕೊಂಡು "ಭರದ್ವಾಜಮುನಿಗಳೆ, ನಿಮಗೆ ಕುಶಲವೆ ? ನಿಮಗೆ ನಿರ್ವಿಘ್ನವಾಗಿ ಅಗ್ನಿಹೋತ್ರವು ನಡೆಯುತ್ತಿರುವುದೆ ? ನಿಮ್ಮ ಆಶ್ರಮದಲ್ಲಿರುವ ಮೃಗಪಕ್ಷಿಗಳೂ ಮುನಿಗಳೂ ಸುಖವಾಗಿರುವರೆ ? " ಎಂದು ಕೇಳಿದನು.

ಭರದ್ವಾಜಮುನೀಶ್ವರನು "ಭರತ, ನಾವೆಲ್ಲರೂ ಸುಖವಾಗಿದ್ದೇವೆ. ರಾಜ್ಯಪರಿಪಾಲನದಲ್ಲಿ ಆಸಕ್ತಚಿತ್ತನಾದ ನೀನು ಇಲ್ಲಿಗೆ ಬರಲು ಕಾರಣವೇನು ? ನನ್ನ ಮನಸ್ಸಿಗೆ ಸಂಶಯವುಂಟಾಗಿದೆ. ಕೈಕೇಯಿದೇವಿಯಿಂದ ಬೋಧಿಸಲ್ಪಟ್ಟು ದಶರಥರಾಯನು ತನ್ನ ಜ್ಯೇಷ್ಠಪುತ್ರನಾದ ಶ್ರೀರಾಮನನ್ನು ಸೀತಾದೇವೀಸಮೇತವಾಗಿ ಹದಿನಾಲ್ಕು ವರುಷಗಳು ವನವಾಸ ಮಾಡಬೇಕೆಂದು ಹೊರಡಿಸಿದನಂತೆ. ಯಾವ ದ್ರೋಹವನ್ನೂ ಮಾಡದಿದ್ದ ಶ್ರೀರಾಮನಿಗೂ ಆತನೊಡನೆ ಬಂದಿರುವ ಲಕ್ಷ್ಮಣನಿಗೂ ಏನಾದರು ಕೇಡನ್ನು ಚಿಂತಿಸಿ ಅಕಂಟಕವಾಗಿ ರಾಜ್ಯವನ್ನನುಭವಿಸಬೇಕೆಂದು ಅವರನ್ನು ಹುಡುಕಿಕೊಂಡು ಬಂದೆಯಾ ? " ಎಂದು ಕೇಳಿದನು.

ಭರತನು ಕಣ್ಣೀರುತುಂಬಿ ದುಃಖಾತಿಶಯದಿಂದ ಭರದ್ವಾಜಮುನಿಯನ್ನು ಕುರಿತು "ಮುನಿಗಳೆ, ನನ್ನಲ್ಲಿ ಇಂಥ ಸಂಶಯವನ್ನು ಮಾಡಿದಾಗಲೇ ನಾನು ಕೆಟ್ಟೆನು. ನನ್ನಲ್ಲಿ ದೋಷವನ್ನೆಣಿಸಿ ಹೀಗೆ ನುಡಿಯಬೇಡಿರಿ. ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ರಕ್ಷಿಸಿರಿ. ನನ್ನ ತಾಯಿಯಾದ ಕೈಕೇಯಿದೇವಿಯು ಮಾಡಿದ ಕೃತ್ಯವನ್ನು ನಾನು ಸಹಿಸಲಾರೆನು. ನಾನು ಆಕೆಯು ಮಾಡಿದ ಕೃತ್ಯವನ್ನರಿತವನಲ್ಲ ; ನಾನು ದುಷ್ಟನಲ್ಲ ; ಶ್ರೀರಾಮನನ್ನು ಸಂತಪಿಟ್ಟು ಕರೆದುಕೊಂಡು ಹೋಗಬೇಕೆಂದು ಬಂದೆನು. ಆತನು ಬರದಿದ್ದರೆ ನಾನೂ ವನಕ್ಕೆ ಹೋಗುವೆನೆಂದು ತಿಳಿದು ನನ್ನಲ್ಲಿ ಕೃಪೆಮಾಡಿ ರಕ್ಷಿಸಿರಿ " ಎಂದು ಪ್ರಾರ್ಥನೆ ಮಾಡಿದನು.

ಆಗ ಭರತನ ಮಾತಿಗೆ ಅನುಕೂಲವಾಗಿ ವಸಿಷ್ಠಾದಿಮುನೀಶ್ವರರೂ ಭರದ್ವಾಜಮುನಿಯನ್ನು ಪ್ರಾರ್ಥಿಸಲು ಆತನು ಭರತನನ್ನು ಕುರಿತು "ಭರತ, ರಘುಕುಲೋದ್ಭವನಾದ ನಿನಗೆ ಈ ಸದ್ಗುಣವು ಸಹಜವಾದದ್ದು. ನಿಮ್ಮ ವಂಶದಲ್ಲಿ ಹುಟ್ಟಿದ ರಾಜರಿಗೆ ಗುರುಭಕ್ತಿಯೂ ಸತ್ಪುರುಷರ ಸೇವೆಯೂ ಸ್ವಭಾವಗುಣಗಳು. ನಿನಗೊಂದು ಬುದ್ಧಿಯನ್ನು ಹೇಳುತ್ತೇನೆ ಕೇಳು : ನೀನು ಈ ಲೋಕದಲ್ಲಿ ಕೀರ್ತಿಯನ್ನೇ ಬಯಸು. ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಚಿತ್ರಕೂಟಪರ್ವತದಲ್ಲಿದ್ದಾನೆ. ಆ ವೃತ್ತಾಂತವನ್ನು ನಾನು ಬಲ್ಲೆನು. ನೀನು ಈ ದಿನ ಮಂತ್ರಿಗಳನ್ನು ಕೂಡಿಕೊಂಡು ಈ ಗಂಗಾತೀರದಲ್ಲಿ ವಾಸವಾಗಿರು ; ನಾಳೆ ಮುಂದಕ್ಕೆ ಪ್ರಯಾಣಮಾಡಬಹುದು " ಎಂದು ಹೇಳಿದನು.

ಮಹಾಪ್ರಸಾದವೆಂದು ಭರದ್ವಾಜಮುನಿಯ ಮಾತನ್ನು ಅಂಗೀಕರಿಸಿ ಬುದ್ಧಿವಂತನಾದ ಭರತನು ತನ್ನ ಗುರುವಾದ ವಸಿಷ್ಠಮುನೀಶ್ವರನನ್ನೂ ಮಂತ್ರಿಗಳನ್ನೂ ಕೂಡಿಕೊಂಡು ಆತನ ಆಶ್ರಮದಲ್ಲಿ ಗಂಗಾತೀರದಲ್ಲಿ ಆ ರಾತ್ರಿಯಲ್ಲಿದ್ದನು.



## ೯೧ ನೆಯ ಅಧ್ಯಾಯ

## ಭರದ್ವಾಜಮುನಿಯಿಂದ ಭರತಾದಿಗಳಿಗೆ ಔತಣ

ಈ ಪ್ರಕಾರದಲ್ಲಿ ಭರದ್ವಾಜಮುನೀಶ್ವರನು ಭರತನನ್ನು ತನ್ನ ಆಶ್ರಮದಲ್ಲಿ ನಿಲ್ಲಿಸಿ ಆತನನ್ನು ಔತಣಕ್ಕೆ ಆಹ್ವಾನಿಸಿದನು. ಭರತನು "ಭರದ್ವಾಜಮುನೀಶ್ವರರೆ, ನಮಗೆ ಅರ್ಘ್ಯಪಾದ್ಯಾದಿಗಳನ್ನೂ ಈ ವನದಲ್ಲಿರುವ ಕಂದಮೂಲಫಲಾದಿಗಳನ್ನೂ ಅನುಗ್ರಹಿಸಿದಿರಿ. ಅದು ಔತಣವಲ್ಲವೆ ? ನಿಮ್ಮ ಕೃಪಾಕಟಾಕ್ಷವೇ ಸಾಲದೆ ? ಇನ್ನು ಬೇರೆ ಔತಣವಾಗಬೇಕೆ ? " ಎಂದು ಹೇಳಿದನು.

ಭರದ್ವಾಜಮುನಿಯು ನಗುತ್ತ "ಭರತ, ನೀನು ನನ್ನಲ್ಲಿ ಅತ್ಯಂತ ಪ್ರೇಮವುಳ್ಳವನೆಂದು ಬಲ್ಲೆನು. ಅಲ್ಪವಾದ ಸತ್ಕಾರವನ್ನು ಮಾಡಿದರೂ ಅದರಿಂದಲೇ ನೀನು ಸಂತುಷ್ಟಚಿತ್ತನಾಗುವೆ. ಆದರೆ ನಿನಗೂ ನಿನ್ನ ಸೇನೆಗೂ ಔತಣವನ್ನು ಮಾಡಬೇಕೆಂದು ನನ್ನ ಮನಸ್ಸು ಉತ್ಸುಕವಾಗಿದೆ. ಆದ್ದರಿಂದ ನನ್ನ ಮನಸ್ಸಿಗೆ ಪ್ರೀತಿಯಾಗುವಂತೆ ನಾನು ಮಾಡುವ ಔತಣವನ್ನು ಸ್ವೀಕರಿಸು. ನೀನು ನಿನ್ನ ಸೇನೆಯನ್ನು ಏಕೆ ದೂರದಲ್ಲಿ ಬಿಟ್ಟುಬಂದೆ ? ಸಮಸ್ತ ಸೇನೆಯನ್ನೂ ಕರೆತರಿಸು" ಎಂದು ನುಡಿದನು.

ಭರತನು "ಮಹರ್ಷಿಗಳೆ, ನಾನು ನಿಮಗೆ ಅಂಜಿಕೊಂಡು ಸೇನೆಯನ್ನು ದೂರದಲ್ಲಿ ಬಿಟ್ಟು ಬಂದೆನು. ಅರಸರೂ ರಾಜಪುತ್ರರೂ ಋಷಿಗಳ ಆಶ್ರಮಕ್ಕೆ ಸೇನೆಯನ್ನು ಕರೆದುಕೊಂಡು ಹೋಗಬಾರದು. ಭೂಮಿಯೆಲ್ಲವನ್ನೂ ಆಚ್ಛಾದಿಸಿಕೊಂಡುಬಂದ ಅನೇಕ ಕುದುರೆ ಕಾಲಾಳುಗಳ ಸಮೇತವಾದ ನನ್ನ ಸೇನೆಯು ಈ ಆಶ್ರಮದಲ್ಲಿರುವ ಮರಗಳನ್ನೂ ಉದಕವನ್ನೂ ಪರ್ಣಶಾಲೆಗಳನ್ನೂ ಕೆಡಿಸಿ ಉಪದ್ರವಮಾಡುವುದು. ಆದಕಾರಣ ದೂರದಲ್ಲಿ ಬಿಟ್ಟುಬಂದೆನು" ಎಂದು ನುಡಿದನು.

ಭರದ್ವಾಜಮುನಿಯು "ಭರತ, ನಿನ್ನ ಸೇನೆಯನ್ನು ಕರೆತರಿಸು" ಎಂದು ನುಡಿದು ತನ್ನ ಅಗ್ನಿಶಾಲೆಯನ್ನು ಪ್ರವೇಶಿಸಿ ಆಚಮನ ಮಾಡಿ ವಿಶ್ವಕರ್ಮನನ್ನೂ ಲೋಕಪಾಲಕರನ್ನೂ ಇಂದ್ರಾದಿ ದೇವತೆಗಳನ್ನೂ ಆಹ್ವಾನಿಸಿದನು. ಔತಣಕ್ಕೆ ತಕ್ಕ ಸನ್ನಾಹವನ್ನು ಮಾಡುವಹಾಗೂ ಮೂಡಲಾಗಿಯೂ ಪಡವಲಾಗಿಯೂ ಪ್ರವಹಿಸುವ ನದಿಗಳನ್ನು ತನ್ನ ಆಶ್ರಮದಲ್ಲಿ ಪ್ರವಹಿಸುವಂತೆ ಮಾಡುವಹಾಗೂ ಪುಷ್ಪರಸಗಳಿಂದ ನಿರ್ಮಿಸಲ್ಪಟ್ಟ ಸುರೆಯನ್ನೂ ಗುಡಧಾನ್ಯಾದಿಗಳಿಂದ ನಿರ್ಮಿಸಲ್ಪಟ್ಟ ಸುರೆಯನ್ನೂ ಅಲ್ಲಿ ಪ್ರವಾಹರೂಪವಾಗಿರುವಂತೆ ಮಾಡುವಹಾಗೂ ಕಬ್ಬಿನ ಹಾಲಿಗೆ ಸಮಾನವಾಗಿ ಶೈತ್ಯಪರಿಮಳಯುಕ್ತವಾಗಿ ನಿರ್ಮಲವಾದ ದಿವ್ಯೋದಕಗಳನ್ನು ನಿರ್ಮಿಸುವಹಾಗೂ ದೇವತೆಗಳನ್ನು ಪ್ರಾರ್ಥಿಸಿದನು. ದೇವಗಂಧರ್ವಾದಿಗಳನ್ನೂ ವಿಶ್ವಾವಸು ಮೊದಲಾದವರನ್ನೂ ಅಪ್ಸರಃಸ್ತ್ರೀಯರನ್ನೂ ಗಂಧರ್ವಸ್ತ್ರೀಯರನ್ನೂ ದೇವಲೋಕದಲ್ಲಿರುವ ಘೃತಾಚಿ ವಿಶ್ವಾಚಿ ಅಲಂಬುಸೆ ಹೇಮಾದ್ರಿ ಪುಂಜಿಕಸ್ಥಳೆ ಮೊದಲಾದ ದೇವಸ್ತ್ರೀಯರನ್ನೂ ತುಂಬುರು ಮೊದಲಾದ ಗಾಯಕ

ರನ್ನೂ ಕರೆಕಳುಹಿಸಿ ಅನೇಕ ವಸ್ತ್ರಾಭರಣಗಳನ್ನೂ ಚಿನ್ನದ ಹರಿವಾಣಗಳನ್ನೂ ದೇವತಾಯೋಗ್ಯವಾದ ರಸಾಯನ ಪಾಯಸಾದಿಗಳನ್ನೂ ತರುವಹಾಗೆ ದೇವತೆಗಳಿಗೆ ಹೇಳಿದನು. ಕುರು ಉತ್ತರ ದೇಶಗಳಲ್ಲಿರುವ ಕೌಬೇರವೆಂಬ ದಿವ್ಯವನವನ್ನು ಅಲ್ಲಿ ತಂದಿರಿಸುವಹಾಗೂ ಭಕ್ಷಣಯೋಗ್ಯವಾದ ಕಜ್ಜಾಯಗಳನ್ನೂ ಅನ್ನಾದಿಗಳನ್ನೂ ಪಾನಯೋಗ್ಯವಾದ ಪಾನಕಾದಿಗಳನ್ನೂ ರಸಾಯನ ಪಾಯಸಾದಿಗಳನ್ನೂ ವಿಚಿತ್ರತರಪುಷ್ಪಮಾಲಿಕೆಗಳನ್ನೂ ನಿರ್ಮಿಸುವಂತೆ ಚಂದ್ರನಿಗೆ ಕಟ್ಟುಮಾಡಿದನು. ಊಳಿಗದವರಿಗೆ ಸುರೆ ಮಾಂಸಾದಿಗಳನ್ನು ತರಹೇಳಿ ತಾನು ಮೂಡಣಮುಖವಾಗಿ ಕುಳಿತುಕೊಂಡು ಕೈಮುಗಿದುಕೊಂಡು ಧ್ಯಾನಮಾಡುತ್ತಿದ್ದನು. ಆಗ ಸಮಸ್ತ ದೇವತೆಗಳೂ ಪ್ರಸನ್ನರಾಗಿ ಆ ವಿನಿಯೋಗಗಳಿಗೆ ಬರತೊಡಗಿದರು. ದಿವ್ಯವಾದ ಶ್ರೀಗಂಧವೃಕ್ಷಗಳುಳ್ಳ ಮಲಯ ದುರ್ಧರ ಪರ್ವತಗಳನ್ನು ಸೋಂಕಿ ಶೈತ್ಯಸೌರಭ್ಯ ಮಾಂದ್ಯಯುಕ್ತವಾದ ತಂಗಾಳಿಯು ಶರೀರಕ್ಕೆ ಸುಖವಾಗಿ ಬೀಸತೊಡಗಿತು. ದೇವತೆಗಳು ಪರಿಮಳವುಳ್ಳ ಪುಷ್ಪವೃಷ್ಟಿಯನ್ನು ಕರೆಯತೊಡಗಿದರು. ದೇವದುಂದುಭಿಯು ಧ್ವನಿಗೈಯತೊಡಗಿತು. ಅಪ್ಸರಃಸ್ತ್ರೀಯರು ನೃತ್ಯ ಮಾಡಲಾರಂಭಿಸಿದರು. ದೇವಗಂಧರ್ವರು ವೀಣೆಗಳನ್ನು ಬಾರಿಸುತ್ತ ಗಾನ ಮಾಡಲಾರಂಭಿಸಿದರು. ಆ ವಾದ್ಯಗಾನ ವೀಣಾಧ್ವನಿಯು ಭೂಲೋಕ ಸ್ವರ್ಗಲೋಕಗಳನ್ನು ವ್ಯಾಪಿಸಿ ಸಮಸ್ತ ಪ್ರಾಣಿಗಳ ಕಿವಿಗಳಿಗೂ ಆನಂದವೆರೆಯತೊಡಗಿತು.

ವಿಶ್ವಕರ್ಮನು ಅತ್ಯಂತ ವೈಭವಯುಕ್ತವಾದ ಬಿಡಾರಗಳನ್ನು ನಿರ್ಮಿಸಿ ಸಕಲ ಪರಿಕರಗಳಿಂದಲೂ ಸಜ್ಜುಗೊಳಿಸಿದನು. ಭರತನು ಆ ದಿವ್ಯಭವನಗಳನ್ನು ಕಂಡು ಆಶ್ಚರ್ಯಪಟ್ಟು ಅತಿಹರ್ಷದಿಂದ ಭರದ್ವಾಜಮುನೀಶ್ವರನ ಅಪ್ಪಣೆಯಂತೆ ತನ್ನ ಬಿಡಾರದ ಮನೆಯನ್ನು ಪ್ರವೇಶಿಸಿದನು. ಆಮೇಲೆ ಪುರೋಹಿತರು ಮಂತ್ರಿಗಳು ಮಿತ್ರವರ್ಗಗಳು ಮೊದಲಾದವರು ಭರತನೊಡನೆ ಬಿಡಾರದ ಮನೆಗಳನ್ನು ಪ್ರವೇಶಿಸಿ ಅಲ್ಲಿದ್ದ ಚಿತ್ರಗಳನ್ನು ನೋಡಿ ಅತ್ಯಂತ ಸಂತೋಷಯುಕ್ತರಾದರು. ಭರತನು ತನ್ನ ಬಿಡಾರದ ಮನೆಯಲ್ಲಿ ನಿರ್ಮಿಸಿದ್ದ ರಾಜಯೋಗ್ಯವಾದ ಸಿಂಹಾಸನ ಬೀಸಣಿಗೆ ಸುಪ್ಪತ್ತಿಗೆ ಮೊದಲಾದುವನ್ನು ಕಂಡನು. ಅವನು ಮಂತ್ರಿಗಳನ್ನು ಕೂಡಿಕೊಂಡು ಶ್ರೀರಾಮನ ಧ್ಯಾನಮಾಡುತ್ತ ಆ ಸಿಂಹಾಸನ ಮೊದಲಾದ ರಾಜಚಿಹ್ನೆಗಳಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಅವಕ್ಕೆ ಪೂಜೆಮಾಡಿದನು. ಕೈಯಲ್ಲಿ ಬೀಸಣಿಗೆಯನ್ನು ತೆಗೆದುಕೊಂಡು ಆ ಸಿಂಹಪೀಠದಲ್ಲಿ ಶ್ರೀರಾಮನಿರುವುದಾಗಿ ಭಾವಿಸಿ ಬೀಸಣಿಗೆಯನ್ನು ಬೀಸುತ್ತ ಮಂತ್ರಿಗಳ ಸ್ಥಾನದಲ್ಲಿ ಕುಳಿತುಕೊಂಡನು. ಆಮೇಲೆ ಮಂತ್ರಿಗಳು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡರು. ಸೇನಾಪತಿ ಮೊದಲಾದ ಅಧಿಕಾರಿಗಳು ಅವರವರ ಸ್ಥಳಗಳಲ್ಲಿ ಕುಳಿತರು. ಆಗ ಕ್ಷಣಮಾತ್ರದಲ್ಲಿ ಪಾಯಸದ ನದಿಗಳು ಸಿದ್ಧವಾದವು. ನಾರದ ತುಂಬುರರು ಸೂರ್ಯಪ್ರಭೆಯಂತೆ ತೇಜಸ್ವಿಗಳಾಗಿ ಗಾನಮಾಡುತ್ತಿದ್ದರು. ಅಲಂಬುಸೆ ಮಿಶ್ರಕೇಶಿ ಪುಂಡರೀಕೆ ವಾಮನೆ ಮೊದಲಾದ ದೇವಸ್ತ್ರೀಯರು ಭರತನ ಸಂಮುಖದಲ್ಲಿ ನರ್ತನಮಾಡತೊಡಗಿದರು. ಕುಬೇರನ ಚೈತ್ರರಥವೆಂಬ ಉದ್ಯಾನವನದಲ್ಲಿದ್ದ ಪುಷ್ಪಮಾಲಿಕೆಗಳು ಭರದ್ವಾಜಮುನಿಯ ಪ್ರಭಾವದಿಂದ ಭರತನ ಬಿಡಾರದ ಮನೆಯಲ್ಲಿ ಕಂಗೊಳಿಸಿದವು. ಆಶ್ರಮದಲ್ಲಿದ್ದ ಲತಾವೃಕ್ಷಗಳು ಪರಿಚಾರಕರ ರೂಪವನ್ನು ಧರಿಸಿ ಅವರೆಲ್ಲರ ಸೇವೆಮಾಡಿದವು. ಇದೆಲ್ಲವೂ ಭರದ್ವಾಜಮಹಾಮುನಿಯ ತಪಃಪ್ರಭಾವದಿಂದ ನಡೆಯಿತು.

ಈ ರೀತಿಯಲ್ಲಿ ಭರದ್ವಾಜಮುನಿಯು ಔತಣವನ್ನು ಮಾಡಲು ಭರತನ ಪಾಳೆಯದಲ್ಲಿದ್ದ ಭಟರು ತಮ್ಮ ತಮ್ಮ ಜಾತ್ಯಾಚಾರಕ್ಕೆ ತಕ್ಕಹಾಗೆ ಬಿಡಾರಗಳಲ್ಲಿಳಿದುಕೊಂಡು ಮನಸ್ಸಿಗೆ ಬಂದಂತೆ ಭೋಜನ ಮಾಡಲಾರಂಭಿಸಿದರು. ಕೆಲವರು ಹಸಿವಿನಿಂದ ಬರಿಯ ಕಜ್ಜಾಯಗಳನ್ನು ಭಕ್ಷಣ

ಮಾಡಿದರು. ಕೆಲವರು ಘೃತಮಿಶ್ರವಾದ ಪಾಯಸವನ್ನುಂಡರು. ಕೆಲವರು ಸುರೆಯನ್ನು ಪಾನಮಾಡಿದರು. ಕೆಲವರು ನದಿಗಳಲ್ಲಿ ಸ್ನಾನಮಾಡತೊಡಗಿದರು. ಒಬ್ಬೊಬ್ಬ ಪುರುಷನಿಗೆ ಎಂಟು ಮಂದಿ ಸುಂದರಿಯರಾದ ಸ್ತ್ರೀಯರು ಅಂಗಮರ್ದನ ಮಾಡಿ ಸ್ನಾನಮಾಡಿಸಿ ಶ್ರೀಗಂಧಾನು ಲೇಪನಮಾಡತೊಡಗಿದ್ದರು. ಆನೆಯ ಮಾವುತರೂ ಕುದುರೆಯ ರಾವುತರೂ ತಮ್ಮ ತಮ್ಮ ವಾಹನಗಳಿಗೆ ಬೇಕಾದ ಮೇವುಗಳನ್ನು ಕೊಡುತ್ತಿದ್ದರು. ಕೆಲವರು ಗರುತ್ಮಂತನಂತೆ ತನುಕಾಂತಿ ಯುಳ್ಳ ಒಂಟೆಗಳಿಗೂ ಹೇಸರಕತ್ತೆಗಳಿಗೂ ಕಬ್ಬಿನ ತುಂಡು ಜೇನುತುಪ್ಪಗಳಿಂದ ಕಲಸಿದ ಅರಳುಗಳನ್ನು ಕೊಡುತ್ತಿದ್ದರು. ಈ ಪ್ರಕಾರ ಭರತನ ಭಟರು ತಮ್ಮ ತಮ್ಮ ಮನಸ್ಸಿಗೆ ಬಂದಂತೆ ಯಥೇಷ್ಟಾ ಹಾರಗಳನ್ನು ತೆಗೆದುಕೊಂಡು ಉಬ್ಬಿ ಕೊಬ್ಬಿ ಆನೆ ಕುದುರೆಗಳನ್ನು ಕಟ್ಟದೆ ಮನಸ್ಸು ಬಂದಂತೆ ಗಂಧಗಳನ್ನು ಲೇಪನಮಾಡಿಕೊಂಡು ಪುಷ್ಪಮಾಲಿಕೆಗಳನ್ನು ಧರಿಸಿಕೊಂಡು ಓಲಾಡುತ್ತ ಭರತನೊಡನೆ ಹೀಗೆ ಆನಂದದಲ್ಲಿರುವುದೇ ಸ್ವರ್ಗಭೋಗವೆಂದು ಗಾನಮಾಡುತ್ತ ಕೈ ಚಪ್ಪಾಳೆ ಹಾಕಿಕೊಂಡು ಕುಣಿಯುತ್ತ ಅಮೃತಕ್ಕೆ ಸಮಾನವಾದ ಅನ್ನವನ್ನು ಭುಂಜಿಸಿ ಕಜ್ಜಾಯಗಳನ್ನು ಭಕ್ಷಿಸಿಕೊಂಡು ಒಳ್ಳೆಯ ವಸ್ತ್ರಗಳನ್ನು ಧರಿಸಿಕೊಂಡು ಕ್ರೀಡಿಸುತ್ತಿದ್ದರು. ಆ ಭಟರ ಸ್ತ್ರೀಯರೂ ಊಳಿಗದವರೂ ಭೋಜನಮಾಡಿ ಸುಪ್ರೀತರಾದರು. ಆನೆ ಕುದುರೆ ಒಂಟೆ ಹೇಸರಕತ್ತೆ ಹಸು ಮೊದಲಾದ ಪ್ರಾಣಿಗಳೂ ಪಕ್ಷಿಗಳೂ ಮೇವುತಿಂದು ತಿರುಗಾಡುತ್ತಿದ್ದವು. ಆ ಪಾಳೆಯದೊಳಗಾಗಿ ಒಬ್ಬರಾದರೂ ಪಾನಮಾಡದವರೇ ಇಲ್ಲ. ಎಲ್ಲರೂ ಬಿಳಿಯವಸ್ತ್ರಗಳನ್ನು ಧರಿಸಿಕೊಂಡಿದ್ದರೇ ಹೊರತು ಮಲಿನ ವಸ್ತ್ರಗಳನ್ನು ಧರಿಸಿಕೊಂಡಿದ್ದವರೇ ಇರಲಿಲ್ಲ. ಎಲ್ಲಿ ನೋಡಿದರೂ ಪುಷ್ಪಮಾಲಿಕೆಗಳೂ ಬಿಳಿಯ ಅನ್ನದ ರಾಶಿಗಳೂ ಪರಿಮಳಿಸುತ್ತಿದ್ದವು. ಪಾಳೆಯದ ಸಮೀಪದಲ್ಲಿದ್ದ ವನಗಳಲ್ಲಿ ಪಾಯಸದ ಮಡುಗಳೂ ತುಪ್ಪದ ಭಾವಿಗಳೂ ಇಷ್ಟಾರ್ಥವನ್ನು ಕೊಡುವ ಕಾಮಧೇನುಗಳೂ ಜೇನುತುಪ್ಪವನ್ನು ಸುರಿಯುತ್ತಿದ್ದ ಮರಗಳೂ ಮೆರೆಯುತ್ತಿದ್ದವು. ಭರತನ ಬಿಡಾರದ ಮನೆಯಲ್ಲಿ ಸಾವಿರಾರು ಚಿನ್ನದ ಕೈಬಟ್ಟಲುಗಳೂ ಒಂದು ನ್ಯರ್ಬುದ ಚಿನ್ನದ ಹರಿವಾಣಗಳೂ ಚಿನ್ನದ ಕಳಿಸಿಗೆ ಹರಿವಿ ಬಿಂದಿಗೆಗಳೂ ಹಾಲು ಮೊಸರು ತುಪ್ಪ ತುಂಬಿದ ಚಿನ್ನದ ಗುಡಾಣಗಳೂ ಶ್ರೀಗಂಧದ ಚೆಕ್ಕೆಯ ರಾಶಿಗಳೂ ಬೆಳಗುತ್ತಿದ್ದ ಕನ್ನಡಿಗಳ ರಾಶಿಗಳೂ ದುಕೂಲವಸ್ತ್ರರಾಶಿಗಳೂ ಮರದ ಹಾವಿಗೆ ಎಕ್ಕಡಗಳೂ ರಾಶಿಗಳೂ ಬಿಲ್ಲುಬಾಣಗಳ ರಾಶಿಗಳೂ ತಲೆದಿಂಬು ಮಣಿಚಾಪೆಗಳ ರಾಶಿಗಳೂ ಪ್ರಕಾಶಿಸುತ್ತಿದ್ದವು. ಎಲ್ಲಿ ನೋಡಿದರೂ ಆನೆ ಕುದುರೆ ಒಂಟೆಗಳು ನೀರುಕುಡಿಯುವ ಕಲ್ಲು ದೋಣಿಗಳೂ ಚಂಗಣಿಗಲು ಪುಷ್ಪದ ಮರಗಳೂ ವೈಡೂರ್ಯರತ್ನಗಳಿಂದ ಸೋಪಾನಕಟ್ಟಿದ್ದ ನಿರ್ಮಲೋದಕವುಳ್ಳ ಕೊಳಗಳೂ ಆಡು ಕುರಿ ಮೊದಲಾದ ಪ್ರಾಣಿಗಳು ನೀರುಕುಡಿಯುವ ದೋಣಿ ಗಳೂ ಉಂಟಾಗಿದ್ದವು! ಭರದ್ವಾಜಮುನೀಶ್ವರನು ಭರತನಿಗೆ ಮಾಡಿದ ಔತಣಸನ್ನಾಹದ ಅದ್ಭುತ ವನ್ನು ಕಂಡು ಜನರು ಆಶ್ಚರ್ಯಪಟ್ಟು "ಇದೇನು ಸ್ವಪ್ನವನ್ನು ಕಂಡೆವೊ! ಇಂಥ ಅದ್ಭುತವಾದ ಔತಣ ಉಂಟೆ" ಎಂದು ಒಬ್ಬರಿಗೊಬ್ಬರು ಮಾತಾಡಿಕೊಳ್ಳುತ್ತಿದ್ದರು. ಹೀಗೆ ಪರಿಪೂರ್ಣ ಕಲ್ಪಸ್ಥಾನವಾದ ಆ ಭರದ್ವಾಜಮುನಿಯ ಆಶ್ರಮದಲ್ಲಿ ಭರತನ ಪಾಳೆಯವು ದೇವತೆಗಳಿಂದ ಇಟ್ಟಣಿಸಿದ ನಂದನವನದ ಸಮೀಪದಲ್ಲಿ ನಳಕೂಬರ ಜಯಂತಾದಿಗಳ ಪರಿವಾರದಂತೆ ಒಪ್ಪುತ್ತಿತ್ತು.

ಈ ಪ್ರಕಾರ ಭರತನು ಭರದ್ವಾಜಮುನಿಯ ಆಶ್ರಮದಲ್ಲಿ ಔತಣವನ್ನು ಪಡೆದು ಆ ರಾತ್ರಿ ಅಲ್ಲಿಯೇ ಇದ್ದನು. ಆಮೇಲೆ ಗಂಧರ್ವರು ತಮ್ಮ ಲೋಕಗಳಿಗೆ ಹೋದರು. ದೇವಸ್ತ್ರೀಯರು ಭರದ್ವಾಜಮುನಿಯಿಂದ ಬೀಳ್ಕೊಂಡು ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ಭರತನ ಸೇನೆಯ ಭಟರು ತಮಗೆ ತಕ್ಕ ಯಥೇಷ್ಟವಾದ ಆಹಾರಗಳನ್ನೂ ಉತ್ತಮವಾದ ವಸ್ತ್ರಗಳನ್ನೂ

ದಿವ್ಯಗಂಧಾನುಲೇಪನಗಳನ್ನೂ ಸ್ವೀಕರಿಸಿ ದೇವತಾಯೋಗ್ಯವಾದ ಪುಷ್ಪಮಾಲಿಕೆಗಳನ್ನು ಧರಿಸಿ ಕೊಂಡು ಅತಿಹರ್ಷವುಳ್ಳವರಾದರು.

---

## ೯೨ ನೆಯ ಅಧ್ಯಾಯ

## ಚಿತ್ರಕೂಟಪರ್ವತಕ್ಕೆ ಭರತನ ಪ್ರಯಾಣ

ಆಮೇಲೆ ಭರತನು ಸೇನಾಸಮೇತನಾಗಿ ಆ ರಾತ್ರಿಯನ್ನು ಕಳೆದು ಪ್ರಾತಃಕಾಲದಲ್ಲೆದ್ದು ಸಮಸ್ತ ಮುನಿಗಳ ಸಮೂಹದಲ್ಲಿ ಕುಳಿತಿದ್ದ ಭರದ್ವಾಜಮುನಿಯ ಸಮೀಪಕ್ಕೆ ಹೋಗಿ ನಮಸ್ಕಾರ ವನ್ನು ಮಾಡಿ ಕೈಮುಗಿದುಕೊಂಡು ನಿಂತನು. ಆ ಮುನೀಶ್ವರನು ಆತನನ್ನು ನೋಡಿ "ಭರತ, ನಿನ್ನೆಯ ರಾತ್ರಿಯನ್ನು ನನ್ನ ಆಶ್ರಮದಲ್ಲಿ ಸುಖವಾಗಿ ಕಳೆದೆಯಾ? ನಿನ್ನ ಸೇನೆಗೂ ನಿನಗೂ ಭೋಜನಾದಿಗಳು ತೃಪ್ತಿಕರವಾಗಿದ್ದವೆ?" ಎಂದು ಕೇಳಿದನು.

ಭರತನು "ಭಗವನ್, ಇಲ್ಲಿ ಯಾರು ಯಾರಿಗೆ ಯಾವ ಯಾವ ವಸ್ತುಗಳು ಪ್ರಿಯವಾಗಿದ್ದವೋ ಅವರವರು ಆಯಾ ಭೋಜ್ಯವಸ್ತುಗಳನ್ನು ಭುಂಜಿಸಿ ಸಂತುಷ್ಟಚಿತ್ತರಾದರು. ದಾರಿಯ ಬಳಲಿಕೆಯು ಕಳೆಯಿತು. ನನ್ನ ಭಟರು ಬೇಕಾದ ಭಕ್ಷ್ಯಗಳನ್ನು ಕಟ್ಟಿಕೊಂಡರು. ಸಮಸ್ತ ಜನರೂ ಸುಖವಾಗಿರುವರು. ಭರದ್ವಾಜಮುನೀಶ್ವರರೆ, ನನ್ನ ಒಂದು ಬಿನ್ನಪವನ್ನು ಕೇಳಿರಿ. ನಾನು ನಮ್ಮ ಅಣ್ಣನಾದ ಶ್ರೀರಾಮನ ಬಳಿಗೆ ಹೋಗುವಂತೆ ಕೃಪಾದೃಷ್ಟಿಯಿಂದ ನೋಡಿರಿ. ಮಹಾತ್ಮನೂ ಧರ್ಮಜ್ಞನೂ ಆದ ಶ್ರೀರಾಮನಿರುವ ಆಶ್ರಮಕ್ಕೆ ಮಾರ್ಗವನ್ನು ಹೇಳಿರಿ. ಆ ಆಶ್ರಮವು ಇಲ್ಲಿಗೆ ಎಷ್ಟುದೂರದಲ್ಲಿದೆ?" ಎಂದು ಕೇಳಿದನು.

ಭರದ್ವಾಜಮುನೀಶ್ವರನು "ರಾಜಕುಮಾರ, ಇಲ್ಲಿಂದ ಮೂರುಗಾವುದ ದೂರದಲ್ಲಿ ಮಹತ್ತಾದ ಅರಣ್ಯಮಧ್ಯದಲ್ಲಿ ಚಿತ್ರಕೂಟಪರ್ವತವಿದೆ. ಆ ಪರ್ವತದ ಸಮೀಪದಲ್ಲಿ ದೇವತಾ ಯೋಗ್ಯವಾದ ವನವಿದೆ. ಅದರ ಬಡಗಣ ದಿಕ್ಕಿನಲ್ಲಿ ಮಂದಾಕಿನಿಯೆಂಬ ದಿವ್ಯನದಿ ಇದೆ. ನದಿಯ ತೀರಗಳಲ್ಲಿ ಪುಷ್ಪಫಲಗಳಿಂದ ಮನೋಹರವಾದ ಅನೇಕ ವೃಕ್ಷಗಳಿವೆ. ಆ ವನದಲ್ಲಿ ಒಂದು ಪರ್ಣ ಶಾಲೆ ಇದೆ. ಅಲ್ಲಿ ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಇರುವನು. ಇಲ್ಲಿಂದ ತೆಂಕಣ ಮಾರ್ಗವಾಗಿ ಹೋಗಿ ಮುಂದೆ ಬಲಪಾರ್ಶ್ವವಾಗಿ ತಿರುಗಿ ಹೋದರೆ ಚಿತ್ರಕೂಟಪರ್ವತದಲ್ಲಿ ಶ್ರೀರಾಮನನ್ನು ಕಾಣುವೆ" ಎಂದು ಹೇಳಿದನು.

ಆಗ ದಶರಥರಾಯನ ಸ್ತ್ರೀಯರು ಭರದ್ವಾಜಮುನೀಶ್ವರನ ಸಮೀಪಕ್ಕೆ ಬಂದರು. ಕೌಸಲ್ಯಾ ದೇವಿ ಸುಮಿತ್ರಾದೇವಿಯರು ಆ ಮುನೀಶ್ವರನ ಪಾದಗಳಿಗೆ ನಮಸ್ಕಾರವನ್ನು ಮಾಡಿದರು. ಆಮೇಲೆ ಕೈಕೇಯಿದೇವಿಯು ಮಹಾಲಜ್ಜಿತಳಾಗಿ ನಡುಗುತ್ತ ಭರದ್ವಾಜಮುನಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿದಳು. ವ್ರತಸ್ಥನಾದ ಆ ಮುನಿಯು ಭರತನನ್ನು ಕುರಿತು "ಭರತ, ಇವರು ಮೂವರು ಯಾರು ಯಾರು? ಇವರ ಸ್ವರೂಪವನ್ನು ಹೇಳು" ಎಂದು ಕೇಳಿದನು.

ಭರತನು "ಮಹರ್ಷಿಗಳೆ, ಪುತ್ರಶೋಕದಿಂದ ಆಹಾರ ನಿದ್ರೆಗಳನ್ನು ಬಿಟ್ಟು ಕೃಶಾಂಗಿ ಯಾಗಿರುವ ಈ ದೇವಿಯು ಶ್ರೀರಾಮನ ತಾಯಿಯಾದ ಕೌಸಲ್ಯಾದೇವಿ. ಈಕೆಯ ಎಡ ಭುಜವನ್ನು ಹಿಡಿದುಕೊಂಡು ಖಿನ್ನೆಯಾಗಿ ನಿಂತಿರುವಾಕೆಯು ಲಕ್ಷ್ಮಣ ಶತ್ರುಘ್ನರ ತಾಯಿಯಾದ ಸುಮಿತ್ರಾ

ದೇವಿ. ಇಲ್ಲಿ ನಿಂತಿರುವವಳು ತನ್ನ ಕಾರ್ಯನಿಮಿತ್ತವಾಗಿ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿ ದಶರಥರಾಯನನ್ನು ಕೊಂದು ನಮಗೆಲ್ಲರಿಗೂ ದುಃಖವನ್ನುಂಟುಮಾಡಿದವಳೂ ದುಷ್ಟಸ್ವರೂಪಳೂ ನನ್ನ ತಾಯಿಯೂ ಆದ ಕೈಕೇಯಿ. ಈಕೆಯಿಂದ ನಮಗೆಲ್ಲರಿಗೂ ದುಃಖವು ಸಂಭವಿಸಿತು" ಎಂದು ನುಡಿದು ಕಣ್ಣೀರು ತುಂಬಿಕೊಂಡು ಕೋಪಕೆರಳಿದ ಸರ್ಪದಂತೆ ನಿಟ್ಟುಸಿರುಬಿಡುತ್ತ ಬಿಕ್ಕಿ ಬಿಕ್ಕಿ ರೋದನ ಮಾಡತೊಡಗಿದನು.

ಭರದ್ವಾಜಮುನಿಯು "ಭರತ, ನೀನು ವಿವೇಕಿ: ಮುಂದಣ ಕಾರ್ಯದೃಷ್ಟಿಯನ್ನು ಬಲ್ಲವನು. ಶ್ರೀರಾಮನ ವನವಾಸದಿಂದ ಸಮಸ್ತ ಜಗತ್ತಿಗೂ ಶ್ರೇಯಸ್ಸುಂಟಾಗುವುದು. ನೀನು ಈ ಕೈಕೇಯೀದೇವಿಯನ್ನು ಜರಿದು ನಿಂದಿಸಬೇಡ" ಎಂದು ಹೇಳಿದನು.

ಆ ಮಾತನ್ನು ಕೇಳಿ ಭರತನು ಭರದ್ವಾಜಮುನಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಬೀಳ್ಕೊಂಡು ಸೇನೆಯನ್ನು ಮುಂದಕ್ಕೆ ನಡೆಯಲು ಕಟ್ಟುಮಾಡಿ ತಾನೂ ರಥಾರೂಢನಾಗಿ ಪ್ರಯಾಣ ಮಾಡಿದನು. ಚತುರಂಗಬಲಸಮೇತವಾದ ಆತನ ಸೇನೆಯು ವರ್ಷಾಕಾಲದ ಮೇಘವು ಆಕಾಶವನ್ನು ಮುಚ್ಚಿಕೊಂಡು ಸಂಚರಿಸುವಂತೆ ಭೂಮಂಡಲವನ್ನು ಪಸರಿಸಿಕೊಂಡು ನಡೆಯುತ್ತಿತ್ತು. ಸಮಸ್ತ ಜನರೂ ತಮ್ಮ ತಮ್ಮ ವಾಹನಗಳನ್ನೇರಿ ಹೋಗುತ್ತಿರಲು ದಶರಥರಾಯನ ಸ್ತ್ರೀಯರು ಪಲ್ಲಕ್ಕಿಗಳನ್ನು ಹತ್ತಿಕೊಂಡು ಶ್ರೀರಾಮನನ್ನು ನೋಡಬೇಕೆಂದು ಶೀಘ್ರವಾಗಿ ಹೊರಟರು. ಚತುರಂಗಬಲಗಳೂ ಗಂಗೆಯ ಪಡುವಣ ತೀರದಲ್ಲಿರುವ ಅನೇಕ ವನಗಳನ್ನು ದಾಟಿ ಚಿತ್ರಕೂಟ ಪರ್ವತಕ್ಕಾಗಿ ಹೋಗುತ್ತಿದ್ದವು.

---

## ೯೩ ನೆಯ ಅಧ್ಯಾಯ

## ಭರತನು ಚಿತ್ರಕೂಟಪರ್ವತವನ್ನು ದರ್ಶನಮಾಡಿದ್ದು

ಹೀಗೆ ಮಹತ್ತಾದ ಭರತನ ಸೇನೆಯು ನಡೆಯುತ್ತಿರಲು ಮಾರ್ಗದಲ್ಲಿದ್ದ ಮೃಗಪಕ್ಷಿಗಳು ಚದುರಿ ಓಡುತ್ತಿದ್ದವು. ಆ ಸೇನೆಯು ಸಮುದ್ರದಂತೆ ಮಹತ್ತಾದ ಭೂಮಿಯೆಲ್ಲವನ್ನೂ ಆವರಿಸಿ ಕೊಂಡು ವರ್ಷಾಕಾಲದಲ್ಲಿ ಮೇಘಮಂಡಲವು ಆಕಾಶವನ್ನು ಕೌಚಿಕೊಂಡು ಹೋಗುವಂತೆ ನಡೆಯು ತೊಡಗಿತು. ಆನೆ ಕುದುರೆಗಳು ದಾರಿಯಲ್ಲಿದ್ದ ಮರಗಿಡಗಳನ್ನು ಮುರಿದುಕೊಂಡು ಹೋಗಲು ವನದ ಕೌಚಿನಿಂದ ಯಾವಾಗಲೂ ಕಾಣದಿದ್ದ ಭೂಮಿಯು ಅತ್ಯಂತ ಪ್ರಕಾಶವಾಗಿ ಕಾಣಿಸಲಾರಂಭಿಸಿತು.

ಭರತನು ತನ್ನ ರಥಕ್ಕೆ ಕಟ್ಟಿದ ಕುದುರೆಗಳೂ ಸೇನೆಗಳೂ ಆನೆ ಕುದುರೆಗಳೂ ಬಳಲಿದ್ದನ್ನು ಕಂಡು ವಸಿಷ್ಠಮುನೀಶ್ವರರನ್ನು ಕುರಿತು "ಮುನೀಶ್ವರರೆ, ಭರದ್ವಾಜರು ಹೇಳಿದ ಚಿತ್ರಕೂಟಪರ್ವತವು ಇಲ್ಲಿಯೇ ಇರಬೇಕು. ಅವರು ಹೇಳಿದ ಕುರುಹುಗಳು ಕಾಣುತ್ತಿವೆ. ಚಿತ್ರಕೂಟದ ಸಮೀಪದಲ್ಲಿರುವ ಮಂದಾಕಿನೀನದಿಯು ಕಾಣಿಸುತ್ತಿದೆ. ಚಿತ್ರಕೂಟ ಮಂದಾಕಿನಿಗಳ ಮಧ್ಯಪ್ರದೇಶದಲ್ಲಿ ಕಾರ್ಮುಗಿಲಂತೆ ಕಪ್ಪಾಗಿ ವನವು ಕಾಣಿಸುತ್ತಿದೆ. ಪರ್ವತಾಕಾರವಾದ ನಮ್ಮ ಆನೆಗಳು ಚಿತ್ರಕೂಟಪರ್ವತದ ತಪ್ಪಲನ್ನು ಹಾಯುತ್ತಿವೆ. ಆ ಪರ್ವತದ ತಪ್ಪಲಲ್ಲಿರುವ ವೃಕ್ಷಗಳು ವರ್ಷಾಕಾಲದಲ್ಲಿ ನೀರುಂಡ ಮೇಘಗಳು ಮಳೆಗರೆಯುವಂತೆ ಪುಷ್ಪವೃಷ್ಟಿಗಳನ್ನು ಕರೆಯುತ್ತಿವೆ" ಎಂದು ನುಡಿದನು. ಅನಂತರ ಶತ್ರುಘ್ನನ ಕಡೆಗೆ ತಿರುಗಿ ಹೀಗೆಂದನು: "ಶತ್ರುಘ್ನ, ದೇವಕಿಂಪುರುಷರು ಸಂಚರಿಸುವ ತಪ್ಪಲುಗಳುಳ್ಳ

ಚಿತ್ರಕೂಟಪರ್ವತವನ್ನು ನೋಡು. ಅಂತರಿಕ್ಷಮಾರ್ಗದಲ್ಲಿ ವಾಯುವೇಗದಿಂದ ಹೋಗುತ್ತಿರುವ ಮೇಘಸಮೂಹದಂತೆ ಚಿತ್ರಕೂಟಪರ್ವತದಲ್ಲಿ ಅತಿವೇಗದಿಂದ ಓಡುವ ಮೃಗಸಮೂಹವನ್ನು ನೋಡು. ತೆಂಕಣದಿಕ್ಕಿನ ಸೊಗಸುಗಾರರಾದ ಜನರು ಹೂವಿನ ಸರಗಳನ್ನು ಮುಡಿದುಕೊಂಡಿರುವಂತೆ, ಈ ಪರ್ವತದ ತಪ್ಪಲುಗಳಲ್ಲಿಯ ವೃಕ್ಷಗಳು ಒಪ್ಪುತ್ತಿವೆ. ಪಕ್ಷಿಗಳ ಸದ್ದಿಲ್ಲದೆ ಭಯಂಕರವಾಗಿರುವ ಈ ವನವು ಈಗ ಅಯೋಧ್ಯಾಪಟ್ಟಣದಂತೆ ಒಪ್ಪುತ್ತಿದೆ. ದೇವತೆಗಳಿಂದ ವಿನೋದಕ್ರೀಡಾರ್ಥವಾಗಿ ಮೇಲಕ್ಕೆ ಸೆಳೆಯಲ್ಪಟ್ಟಿತೋ ಎಂಬಂತೆ ಈ ಪರ್ವತವು ಅತ್ಯಂತ ಉನ್ನತವಾಗಿದೆ. ತಂಗಾಳಿಯು ನಮಗೆ ಪ್ರಿಯವನ್ನು ಮಾಡಲಿಚ್ಛೆಯುಳ್ಳದ್ದೋ ಎಂಬಂತೆ ಈ ಪರ್ವತದ ಸಮೀಪದಲ್ಲಿ ಬೀಸುತ್ತಿದೆ! ಶತ್ರುಘ್ನ, ಸಾರಥಿಗಳಿಂದ ಶೀಘ್ರವಾಗಿ ನಡೆಸಲ್ಪಟ್ಟ ರಥಗಳನ್ನೂ ವೇಗದಿಂದ ನಡೆಯುವ ಆನೆ ಕುದುರೆಗಳನ್ನೂ ನೋಡಿ ಬೆದರಿ ಓಡುತ್ತಿರುವ ನವಿಲುಗಳು ಈ ಪರ್ವತದಲ್ಲಿರುವ ತಮ್ಮ ಸ್ಥಾನಗಳಿಗೆ ಹೋಗುತ್ತಿವೆ. ಈ ಸ್ಥಳವು ಸಾಕ್ಷಾತ್ ಸ್ವರ್ಗಲೋಕದಂತೆ ಮನೋಹರವಾಗಿದೆ. ಇದು ತಪಸ್ವಿಗಳಾದ ಪುಣ್ಯಾತ್ಮರಿರುವುದಕ್ಕೆ ತಕ್ಕದ್ದಾಗಿದೆ. ಎಲ್ಲಿ ನೋಡಿದರೂ ಗುಂಪುಕೂಡಿಕೊಂಡು ಮನೋಹರವಾಗಿ ಕಾಣಿಸುತ್ತಿರುವ ಮೃಗಗಳು ನಾನಾ ವರ್ಣದ ಪುಷ್ಪಗಳಿಂದ ಅಲಂಕರಿಸಲ್ಪಟ್ಟಿರುವಂತೆ ಒಪ್ಪುತ್ತಿವೆ. ನಮ್ಮ ಸೇನೆಯು ಇಲ್ಲಿಯೇ ನಿಲ್ಲಲಿ. ಕೆಲವರು ಆಯುಧಗಳನ್ನು ಹಿಡಿದುಕೊಂಡು ಈ ವನದಲ್ಲಿ ಲಕ್ಷ್ಮಣಸಮೇತನಾಗಿ ಶ್ರೀರಾಮನಿರುವ ಸ್ಥಳವನ್ನು ಕಂಡು ಬರಲಿ" ಎಂದು ಆಜ್ಞಾಪಿಸಿದನು.

ಆ ಮಾತನ್ನು ಕೇಳಿ ಶಸ್ತ್ರಪಾಣಿಗಳಾದ ಕೆಲವು ಭಟರು ವನದಲ್ಲಿ ಸಂಚರಿಸಿ ಒಂದು ಸ್ಥಳದಲ್ಲಿ ಹೊಗೆಯನ್ನು ಕಂಡು ಭರತನ ಸಮೀಪಕ್ಕೆ ಬಂದು "ರಾಜಪುತ್ರ, ಒಂದು ಸ್ಥಳದಲ್ಲಿ ಹೊಗೆಯೇಳುತ್ತಿದೆ. ಆ ಹೊಗೆಯು ಮನುಷ್ಯರಿರುವ ಸ್ಥಳದಲ್ಲಿರುವಂಥದಲ್ಲದೆ ಕಾಡುಗಿಚ್ಚಿನಹಾಗೆ ಕಾಣಿಸುವುದಿಲ್ಲ. ರಾಮಲಕ್ಷ್ಮಣರು ಅಲ್ಲಿಯೇ ಇರಬೇಕು. ಅಲ್ಲದ ಪಕ್ಷದಲ್ಲಿ ಅವರಿಗೆ ಸಮಾನರಾದ ಇತರ ತಪಸ್ವಿಗಳಿರಬೇಕು" ಎಂದು ಹೇಳಿದರು.

ಆ ಮಾತನ್ನು ಕೇಳಿ ಭರತನು ಸೇನಾಪತಿಗಳನ್ನು ಕುರಿತು "ಎಲೈ ಸೇನಾಪತಿಗಳಿರಾ, ಈ ಸೇನೆಯನ್ನು ಇಲ್ಲಿಯೇ ನಿಲ್ಲಿಸಿಕೊಂಡಿರಿ. ನಾನೂ ಶತ್ರುಘ್ನನೂ ವಸಿಷ್ಠಮುನೀಶ್ವರರೂ ಸುಮಂತ್ರನೂ ಹೋಗಿ ವಿಚಾರಿಸಿ ಬರುತ್ತೇವೆ" ಎಂದು ನುಡಿದು ಅವರನ್ನು ಕೂಡಿಕೊಂಡು ಹೋಗಿ ಆ ಹೊಗೆಯನ್ನು ದೃಷ್ಟಿಸಿ ನೋಡಲಾರಂಭಿಸಿದನು. ಆ ಸೇನೆಯೂ ಆ ಹೊಗೆಯನ್ನು ಕಂಡು ಸೀತಾಲಕ್ಷ್ಮಣಸಮೇತನಾದ ಶ್ರೀರಾಮನನ್ನು ಶೀಘ್ರದಲ್ಲಿ ಕಾಣಬಹುದೆಂದು ಅತ್ಯಂತ ಸಂತೋಷಪಡಲಾರಂಭಿಸಿತು.



### ೯೪ನೆಯ ಅಧ್ಯಾಯ

## ಚಿತ್ರಕೂಟಪರ್ವತದ ವರ್ಣನೆ

ಇತ್ತ ಭರತನ ಜ್ಯೇಷ್ಠಭ್ರಾತೃವಾದ ಶ್ರೀರಾಮನು ಚಿತ್ರಕೂಟಪರ್ವತದಲ್ಲಿದ್ದುಕೊಂಡು ಒಂದು ಸಮಯದಲ್ಲಿ ಸೀತಾದೇವಿಯ ಮನಸ್ಸಿಗೆ ಸಂತೋಷವುಂಟುಮಾಡಬೇಕೆಂಬ ಬುದ್ಧಿಯಿಂದ ಆ ಪರ್ವತದಲ್ಲಿ ದೃಷ್ಟಿಯನ್ನಿರಿಸಿ ದೇವೇಂದ್ರನು ಶಚೀದೇವಿಯೊಡನೆ ಇಷ್ಟಾಲಾಪಗಳನ್ನು ಮಾಡುವಂತೆ

ತನ್ನ ಪ್ರಾಣಕಾಂತೆಯಾದ ಆ ದೇವಿಯನ್ನು ಕುರಿತು ಹೀಗೆ ನುಡಿದನು: "ಶೋಭನಾಂಗಿ, ಈ ಚಿತ್ರಕೂಟಪರ್ವತವನ್ನು ನೋಡಿ ನನ್ನ ಮನಸ್ಸಿಗೆ ರಾಜ್ಯಪರಿತ್ಯಾಗವನ್ನು ಮಾಡಿದ ದುಃಖವೂ ಅಯೋಧ್ಯಾಪಟ್ಟಣದಲ್ಲಿ ಅನೇಕಮಂದಿ ಸ್ನೇಹಿತರನ್ನು ಬಿಟ್ಟುಬಂದ ದುಃಖವೂ ತೋರದಾಗಿದೆ. ಸೀತೆ, ಈ ಚಿತ್ರಕೂಟಪರ್ವತವು ಸೌಂದರ್ಯದಲ್ಲಿ ಸ್ವರ್ಗಲೋಕವನ್ನು ಮೀರಬೇಕೆಂಬ ಬುದ್ಧಿಯಿಂದಲೋ ಎಂಬಂತೆ ಅತ್ಯಂತ ಉನ್ನತವಾದ ಕೋಡುಗಲ್ಲಿನಿಂದ ಒಪ್ಪುತ್ತಿದೆ. ಈ ಪರ್ವತದ ತಪ್ಪಲುಗಳನ್ನು ನೋಡಿದರೆ ಕೆಲವು ಬೆಳ್ಳಿಯಂತೆ ಕಾಣಿಸುತ್ತಿವೆ. ಕೆಲವು ಅತ್ಯಂತ ಕೆಂಪಾಗಿ ತೋರುತ್ತಿವೆ. ಕೆಲವು ಹೊಂಬಣ್ಣವಾಗಿ ಕಾಣಿಸುತ್ತಿವೆ. ಕೆಲವು ಹಳದಿ ವರ್ಣವಾಗಿಯೂ ಕೆಲವು ಪಚ್ಚೆಯವರ್ಣವಾಗಿಯೂ ಕೆಲವು ಪುಷ್ಯರಾಗ ರತ್ನಕಾಂತಿಯುಳ್ಳವಾಗಿಯೂ ಕೆಲವು ತಾಳೆಯ ಪುಷ್ಪದ ಕಾಂತಿಯುಳ್ಳವಾಗಿಯೂ ಕೆಲವು ನಕ್ಷತ್ರಕಾಂತಿಯುಳ್ಳವಾಗಿಯೂ ಕೆಲವು ಪಾದರಸದ ಕಾಂತಿಯುಳ್ಳವಾಗಿಯೂ ಕೆಲವು ಗೈರಿಕಾದಿ ಧಾತುಮಯವಾಗಿಯೂ ಒಪ್ಪುತ್ತಿವೆ. ಈ ಪರ್ವತವು ಹಿಂದೆಂದಿಗೂ ಕಣ್ಣಿಗೆ ಬೀಳದಿರುವ ನಾನಾಮೃಗಪಕ್ಷಿಗಳಿಂದ ಇಟ್ಟಣಿಸಿದೆ. ಮಾವು ನೇರಿಳೆ ಅಮ್ಮಟೆ ಸಜ್ಜರಸ ಲೋಧ್ರ ಹಲಸು ಬಿಲ್ವ ಅಂಕೋಲೆ ತೆಂಗು ಬೆಲವತ್ತ ಆಲ ಕೆಂಡಸಂಪಿಗೆ ತಿಲ ನೆಲ್ಲಿ ಬಿದರು ಬೆತ್ತ ನಿಂಬೆ ಅತ್ತಿ ಮೊದಲಾದ ಮರಗಳಿಂದಲೂ ಪುಷ್ಪಫಲಗಳಿಂದಲೂ ಇಟ್ಟಣಿಸಿರುವ ವನದಿಂದ ಕೂಡಿ ಈ ಚಿತ್ರಕೂಟಪರ್ವತವು ಮನೋಹರವಾಗಿದೆ. ಈ ಪರ್ವತದ ತಪ್ಪಲುಗಳಲ್ಲಿ ಕಾಮಧೇನುವಿಗೆ ಸಮಾನವಾದ ಗೋಸಮೂಹಗಳು ಅಮೃತಕ್ಕೆ ಸಮಾನವಾದ ಕ್ಷೀರವನ್ನು ಕರೆಯುತ್ತಿವೆ. ಕಿನ್ನರ ಕಿಂಪುರುಷರೆಂಬ ದೇವತಾವಿಶೇಷಗಳ ಸ್ತ್ರೀಪುರುಷರು ಒಟ್ಟಗೂಡಿ ಸಂಚಾರಮಾಡುತ್ತಿರುವರು. ವಿದ್ಯಾಧರಸ್ತ್ರೀಯರು ಕೆಂದಾವರೆಯ ಪುಷ್ಪಗಳುಳ್ಳ ಕೊಳಗಳಲ್ಲಿ ತಾವು ಉಟ್ಟ ವಸ್ತ್ರಗಳನ್ನು ಮರದ ಕೊಂಬೆಗಳಲ್ಲಿರಿಸಿ ಜಲಕ್ರೀಡೆಯನ್ನು ಮಾಡುತ್ತಿರುವರು. ಈ ಪರ್ವತವು ತನ್ನ ತಪ್ಪಲುಗಳಲ್ಲಿ ಬೀಳುವ ನಿರ್ಝರೋದಕದಿಂದ ಮದ ಸುರಿಯುತ್ತಿರುವ ಗಜರಾಜನಂತೆ ಒಪ್ಪುತ್ತಿದೆ. ಗುಹೆಗಳ ಬಾಗಿಲುಗಳಿಂದ ಹೊರಡುವ ತಂಗಾಳಿಯು ಪಲ್ಲವಿತವೂ ಪುಷ್ಪಿತವೂ ಆದ ಮರಗಳ ಕೊಂಬೆಗಳನ್ನು ಕೂಡಿಕೊಂಡು ಪರಿಮಳಯುಕ್ತವಾಗಿ ಬೀಸುತ್ತ ಮನುಷ್ಯರ ಮನಸ್ಸನ್ನು ಅಪಹರಿಸುತ್ತಿದೆ. ಇಂಥ ಮನೋಹರವಾದ ಪರ್ವತದ ವನದಲ್ಲಿ ನಿನ್ನೊಡನೆಯೂ ಲಕ್ಷ್ಮಣನೊಡನೆಯೂ ಎಷ್ಟುವರುಷಗಳಿದ್ದರೂ ನನ್ನನ್ನು ಶೋಕವು ಸೇರಲಾರದು. ಇಲ್ಲಿ ವನವಾಸಮಾಡುತ್ತಿದ್ದೆನಾದರೆ ಎರಡು ಕಾರ್ಯಗಳು ಸಿದ್ಧಿಯಾಗುವುವು. ನಮ್ಮ ತಂದೆಯಾದ ದಶರಥರಾಯನ ಆಜ್ಞೆಯನ್ನು ಮೀರದೆ ಆತನ ಋಣವನ್ನು ತೀರಿಸುವುದೊಂದು ಕಾರ್ಯ; ಭರತನ ಮನಸ್ಸಿಗೆ ಹಿತವನ್ನುಂಟು ಮಾಡುವುದು ಮತ್ತೊಂದು ಕಾರ್ಯ! ವೈದೇಹಿ, ನೀನು ನನ್ನೊಡನೆ ಈ ಪರ್ವತದ ವಿನೋದಗಳನ್ನು ನೋಡುತ್ತ ಇದ್ದರೆ ಇದೇ ಸ್ವರ್ಗಸುಖವೆಂದು ಭಾವಿಸು. ನಮ್ಮ ವಂಶದ ರಾಜರು ತಮ್ಮ ಸ್ತ್ರೀಸಮೇತರಾಗಿ ವನಕ್ಕೆ ಬಂದು ವಾನಪ್ರಸ್ಥಾಶ್ರಮವನ್ನು ಕೈಕೊಂಡು ಪರ್ವತದ ತಪ್ಪಲುಗಳಲ್ಲಿ ವಾಸಮಾಡಿ ಸಾಯಂಕಾಲದಲ್ಲಿ ಅಗ್ನಿಹೋತ್ರಗಳನ್ನು ಮಾಡಿ ರಾತ್ರಿಗಳಲ್ಲಿ ಜ್ಯೋತಿರ್ಲತೆಗಳಿಂದಲೂ ಗೈರಿಕಾದಿ ಧಾತುಗಳಿಂದಲೂ ಪ್ರಕಾಶಮಾನವಾಗಿ ಬೆಳಗುತ್ತಿರುವ ಪರ್ವತಗಳನ್ನು ನೋಡುತ್ತ ಸುಖವಾಗಿರುವರು. ಈ ಚಿತ್ರಕೂಟಪರ್ವತದ ತಪ್ಪಲುಗಳಲ್ಲಿ ನಾನಾವಿಧವಾದ ಫಲಗಳಿವೆ. ವಿಕಸಿತವಾದ ಕಮಲಗಳುಳ್ಳ ಕೊಳಗಳು ಅನೇಕವಾಗಿವೆ. ಆದ್ದರಿಂದ ಈ ಪರ್ವತದ ತಪ್ಪಲಲ್ಲಿ ನಿನ್ನನ್ನು ಕೂಡಿಕೊಂಡು ಲಕ್ಷ್ಮಣಸಮೇತನಾಗಿ ಅನೇಕ ವ್ರತನಿಯಮಗಳಿಂದ ಸನ್ಮಾರ್ಗದಲ್ಲಿ ಸುಖವಾಗಿರುವೆನು" ಎಂದು ಇಷ್ಟಾಲಾಪಗಳನ್ನು ಮಾಡುತ್ತಿದ್ದನು.

---

## ೯೫ ನೆಯ ಅಧ್ಯಾಯ

## ಮಂದಾಕಿನೀನದಿಯ ವರ್ಣನೆ

ಈ ರೀತಿಯಲ್ಲಿ ಶ್ರೀರಾಮನು ಸೀತಾದೇವಿಗೆ ಚಿತ್ರಕೂಟಪರ್ವತವನ್ನು ತೋರಿಸಿ ಅಲ್ಲಿಂದಿಳಿದನು. ಅನಂತರ ಮನೋಹರವಾದ ಮಂದಾಕಿನೀನದಿಗೆ ಹೋಗಿ ಆ ದೇವಿಯನ್ನು ಕುರಿತು ಹೀಗೆಂದನು : " ಸೀತೆ, ಮಂದಾಕಿನೀನದಿಯನ್ನು ನೋಡು. ಇದರ ಇಕ್ಕೆಲದ ತೀರಗಳೂ ಮನೋಹರವಾಗಿ ಪುಷ್ಪಿತವಾದ ವೃಕ್ಷಗಳಿಂದ ಇಟ್ಟಣಿಸಿವೆ. ಹಂಸಸಾರಸಪಕ್ಷಿಗಳಿಂದ ಒಪ್ಪುತ್ತಿರುವ ಈ ನದಿಯು ಕುಬೇರನ ಲೋಕದಲ್ಲಿರುವ ಮಾನಸಸರೋವರದಂತೆ ತೋರುವುದು. ಮೃಗ ಸಮೂಹಗಳು ಉದಕಪಾನ ಮಾಡಿ ನೀರನ್ನು ಕದಡಿದರೂ ಅದು ಮತ್ತೂ ಶುದ್ಧವಾಗಿಯೇ ಕಾಣಿಸುತ್ತಿದೆ. ಪ್ರಾತಃಕಾಲದಲ್ಲಿ ಜಟಾಜಿನಧಾರಿಗಳಾಗಿರುವ ಋಷಿಗಳು ಈ ನದಿಯಲ್ಲಿ ಸ್ನಾನ ಮಾಡಿ ಭುಜಗಳನ್ನು ಮೇಲಕ್ಕೆತ್ತಿಕೊಂಡು ಸೂರ್ಯದೇವತಾಪ್ರತಿಪಾದಕವಾದ ಸೌರಮಂತ್ರಗಳನ್ನು ಜಪಿಸುತ್ತ ಸೂರ್ಯಪ್ರಾರ್ಥನೆಯನ್ನು ಮಾಡುವರು. ಕೆಲವು ಋಷಿಗಳು ಇದರಲ್ಲಿ ತಪಸ್ಸನ್ನು ಮಾಡುತ್ತಿರುವರು. ತನ್ನ ಶಿಖರಗಳಲ್ಲಿರುವ ಪುಷ್ಪಿತವಾದ ವೃಕ್ಷಗಳಿಂದ ಗಾಳಿಯು ಬೀಸುತ್ತಿರಲು ಆ ವೃಕ್ಷಗಳನ್ನೇ ಅಗ್ರಭಾಗವಾಗುಳ್ಳದ್ದಾಗಿ ಚಿತ್ರಕೂಟಪರ್ವತವು ಮಂದಾಕಿನೀತೀರದಲ್ಲಿ ಪುಷ್ಪಾಂಜಲಿ ಯನ್ನು ಎರಚುತ್ತ ನರ್ತನ ಮಾಡುತ್ತಿದೆಯೋ ಎಂಬಂತೆ ಒಪ್ಪುತ್ತಿದೆ, ನೋಡು. ಒಂದು ದಿಕ್ಕಿನಲ್ಲಿ ಇಂದ್ರನೀಲಮಣಿಯಂತೆ ನಿರ್ಮಲೋದಕವುಳ್ಳದ್ದಾಗಿಯೂ ಮತ್ತೊಂದು ದಿಕ್ಕಿನಲ್ಲಿ ಮಳಲೊಟ್ಟು ಗಳಿಂದ ಮನೋಹರವಾಗಿಯೂ ತೋರುತ್ತಿದೆ. ಒಂದು ದಿಕ್ಕಿನಲ್ಲಿ ತಪಸ್ಸುಮಾಡುವ ಸಿದ್ಧರಿಂದ ಇಟ್ಟಣಿಸಿ ಮತ್ತೊಂದು ದಿಕ್ಕಿನಲ್ಲಿ ವಾಯುವಿನಿಂದ ಕೊಡಹಲ್ಪಟ್ಟ ಪುಷ್ಪಗಳಿಂದ ಮನೋಹರ ವಾಗಿದೆ. ಒಂದು ದಿಕ್ಕಿನಲ್ಲಿ ಈ ನದಿಯ ಮಧ್ಯದಲ್ಲಿ ಗಿಳಿಯ ಹಿಂಡುಗಳು ಮನೋಹರವಾಗಿ ಗಾನಮಾಡುತ್ತಿವೆ. ಮತ್ತೊಂದು ದಿಕ್ಕಿನಲ್ಲಿ ಚಕ್ರವಾಕಪಕ್ಷಿಗಳು ರಮಣೀಯವಾಗಿ ಸ್ವರಗೈಯುತ್ತ ತೀರದಲ್ಲಿರುವ ವೃಕ್ಷಗಳನ್ನೇರಿಕೊಂಡು ಕೂಗುತ್ತಿರುವುವು. ಶೋಭನಾಂಗಿ, ಮನೋಹರವಾದ ಚಿತ್ರಕೂಟಗಿರಿಯ ದರ್ಶನದಿಂದಲೂ ಸೊಬಗಾದ ಮಂದಾಕಿನಿಯ ದರ್ಶನದಿಂದಲೂ ಸೊಬಗುಳ್ಳ ನಿನ್ನ ಸಹವಾಸದಿಂದಲೂ ಈ ವನವಾಸವು ಅಯೋಧ್ಯಾಪಟ್ಟಣದಲ್ಲಿದ್ದಂತೆ ಹರ್ಷಜನಕವಾಗಿದೆ. ಆದ್ದರಿಂದ ನೀನು ಪುಣ್ಯಾತ್ಮರಾಗಿಯೂ ಶಮ ದಮ ಗುಣಸಂಪತ್ತಿಯುಳ್ಳವರಾಗಿಯೂ ಇರುವ ತಪೋನಿಷ್ಠರಾದ ಸಿದ್ಧರಿಂದ ಸೇವಿಸಲ್ಪಟ್ಟ ಮಂದಾಕಿನೀನದಿಯಲ್ಲಿ ನಿನ್ನ ಸಖಿಯರೊಡನೆ ಸ್ನಾನ ಮಾಡುವಂತೆ ನನ್ನೊಡನೆ ಸ್ನಾನವನ್ನು ಮಾಡು. ಕೊಳಗಳು ನಿನಗೆ ಕೈಗಾಣಿಕೆಯನ್ನು ಕೊಡುವುವೋ ಎಂಬಂತೆ ಮನೋಹರವಾದ ಕಮಲಗಳಿಂದ ಒಪ್ಪುತ್ತಿವೆ. ಅಂಥ ಕೊಳಗಳುಳ್ಳ ಈ ಪರ್ವತವನ್ನು ನಿನ್ನ ಸೇವಕಜನರಿಂದಿಟ್ಟಣಿಸಿರುವ ಅಯೋಧ್ಯಾಪಟ್ಟಣದಂತೆ ಕಾಣು. ಈ ಮಂದಾಕಿನೀನದಿಯನ್ನು ಪಟ್ಟಣದಲ್ಲಿರುವ ಸರಯೂನದಿಯಂತೆ ಕಾಣು. ಜಾನಕಿ, ನನ್ನ ಆಜ್ಞೆಯನ್ನು ಮೀರದೆ ನನ್ನ ಸೇವೆಯನ್ನು ಮಾಡಿಕೊಂಡಿರುವ ಧರ್ಮಾತ್ಮನಾದ ಲಕ್ಷ್ಮಣನು ನನಗೆ ಅನುಕೂಲ ವಾಗಿ ನಡೆಯುವನು. ನೀವಿಬ್ಬರೂ ನನಗೆ ಈ ವನದಲ್ಲಿ ಮನೋಹರ್ಷವನ್ನು ಮಾಡುತ್ತಿದ್ದರೆ ನಾನು ಕಾಲತ್ರಯಗಳಲ್ಲಿಯೂ ಸ್ನಾನಮಾಡಿ ಜೇನುತುಪ್ಪ ಕಂದಮೂಲಫಲಾದಿಗಳನ್ನು ಆಹಾರ ಮಾಡಿಕೊಂಡು ನಿನ್ನ ಸಹವಾಸದಿಂದ ರಾಜ್ಯಾಧಿಪತ್ಯವನ್ನು ಬಯಸದಿರುವೆನು. ಕಾಡಾನೆ ಸಿಂಹ

ವಾನರಗಳೇ ಮೊದಲಾದ ಕಾಡುಮೃಗ ಸಮೂಹಗಳಿಂದ ಇಟ್ಟೀಸಿ ಪುಷ್ಪಿತವಾದ ಇಕ್ಕೆಲದ ವೃಕ್ಷಗಳಿಂದಲೂ ಸೇವಿಸಲ್ಪಟ್ಟ ಈ ಮಂದಾಕಿನೀನದಿಯ ತೀರದಲ್ಲಿರುವವರು ಸುಖವಾಗಿರುವರಲ್ಲದೆ ಹಸಿವು ತೃಷೆಗಳಿಂದ ಕಂಗೆಡರು.” ಈ ರೀತಿಯಲ್ಲಿ ಮಂದಾಕಿನೀನದಿಯ ಮಹಿಮೆಯನ್ನೂ ಚಿತ್ರಕೂಟಗಿರಿಯ ಮಹಿಮೆಯನ್ನೂ ವರ್ಣಿಸುತ್ತ ಕಥಾಪ್ರಸಂಗಗಳನ್ನು ಹೇಳುತ್ತ ಆ ಗಿರಿಯ ಸಮೀಪದಲ್ಲಿ ಸೀತಾಲಕ್ಷ್ಮಣಸಮೇತನಾಗಿ ಸಂಚರಿಸುತ್ತಿದ್ದನು.



## ೯೬ ನೆಯ ಅಧ್ಯಾಯ

## ಭರತನ ಸೇನೆಯನ್ನು ಕಂಡು ಲಕ್ಷ್ಮಣನ ಕೋಪ

ಆಮೇಲೆ ಶ್ರೀರಾಮನು ಚಿತ್ರಕೂಟಪರ್ವತದ ತಪ್ಪಲಲ್ಲಿ ಕುಳಿತುಕೊಂಡು ಸೀತಾದೇವಿಗೆ ಆಹಾರದ ಕವಳಗಳನ್ನು ತೋರಿಸುತ್ತ “ ಇದು ಪವಿತ್ರವಾದದ್ದು : ಇದು ಮಹಾ ಸ್ವಾದುವುಳ್ಳದ್ದು : ಇದು ಅಗ್ನಿಯಿಂದ ಚೆನ್ನಾಗಿ ಪಾಕವಾದಂಥಾದ್ದು ” ಎಂದು ಬೇರ್ಪಡಿಸಿ ಕೊಡುತ್ತ ಸೀತಾಲಕ್ಷ್ಮಣ ಸಹಿತನಾಗಿ ಕುಳಿತಿದ್ದನು. ಆ ಸಮಯದಲ್ಲಿ ಸಮೀಪಕ್ಕೆ ಬರುತ್ತಿದ್ದ ಭರತನ ಸೇನೆಯಿಂದೆದ್ದ ಕೆಂಧೂಳು ಕಾಣಿಸತೊಡಗಿತು. ಆಮೇಲೆ ಆ ಸೇನೆಯಲ್ಲಿದ್ದ ಜನರ ಕೋಲಾಹಲಧ್ವನಿಯು ಕೇಳಿಸಿತು. ಆ ವನದಲ್ಲಿದ್ದ ಮೃಗಪಕ್ಷಿಗಳು ಆ ಕೋಲಾಹಲಧ್ವನಿಗಳನ್ನು ಕೇಳಿ ಬೆದರಿ ಓಡ ತೊಡಗಿದವು. ಅದನ್ನು ಕಂಡು ಶ್ರೀರಾಮನು ತೇಜಸ್ವಿಯಾದ ಲಕ್ಷ್ಮಣನನ್ನು ನೋಡಿ “ ಎಲೈ ಲಕ್ಷ್ಮಣ, ಭೂಮಿಯು ಗುಡುಗುವಂತೆ ಭಯಂಕರವಾದ ಧ್ವನಿಯು ಕೇಳಿಸುತ್ತಿದೆ. ಅರಣ್ಯದಲ್ಲಿರುವ ಮೃಗಪಕ್ಷಿಗಳು ಸಿಂಹದಿಂದ ಭಯಪಡುವಂತೆ ಓಡುತ್ತಿವೆ. ಇವು ಸಿಂಹಗಳಿಗೆ ಅಂಜಿಕೊಂಡು ಓಡುತ್ತಿರುವುವೋ ಏನೋ ತಿಳಿಯಲಿಲ್ಲ. ಇದೇನೆಂದು ವಿಚಾರಿಸು. ಈ ಚಿತ್ರಕೂಟಗಿರಿಯು ಸಮಸ್ತ ಮೃಗಪಕ್ಷಿಗಳಿಗೂ ಆಧಾರವಾದದ್ದು. ಆದ್ದರಿಂದ ನೀನು ಶೀಘ್ರವಾಗಿ ಈ ವಿಷಯವನ್ನು ತಿಳಿ ” ಎಂದು ಹೇಳಿದನು.

ಲಕ್ಷ್ಮಣನು ಒಂದು ಉನ್ನತವಾದ ಮರವನ್ನೇರಿ ನಾಲ್ಕುದಿಕ್ಕುಗಳಲ್ಲಿಯೂ ನೋಡುತ್ತ ಬಡಗಣ ದಿಕ್ಕಿನಲ್ಲಿ ಚತುರಂಗಬಲಸಮೇತವಾದ ಸೇನೆಯನ್ನು ಕಂಡು ಶ್ರೀರಾಮನನ್ನು ಕರೆದು “ ಶ್ರೀರಾಮ, ಈ ಆಶ್ರಮದಲ್ಲಿರುವ ಅಗ್ನಿಯನ್ನು ಶಮನಮಾಡು. ಸೀತಾದೇವಿಯು ಗುಹೆಯೊಳಗೆ ಹೋಗಲಿ : ನೀನು ಬಿಲ್ಲನ್ನು ಹೆದೆಯೇರಿಸಿ ಯುದ್ಧಸನ್ನದ್ಧನಾಗು ” ಎಂದು ಹೇಳಿದನು.

ಶ್ರೀರಾಮನು ಲಕ್ಷ್ಮಣನನ್ನು ಕುರಿತು ಅಲ್ಲಿ ಕಾಣಿಸುತ್ತಿದ್ದ ಸೇನೆಯು ಯಾರದೆಂದು ಚೆನ್ನಾಗಿ ನೋಡಿ ವಿಚಾರಿಸಬೇಕೆಂದು ಹೇಳಲು, ಲಕ್ಷ್ಮಣನು ಆ ಸೇನೆಯನ್ನು ದೃಷ್ಟಿಸಿ ನೋಡಿ ಹೀಗೆ ಹೇಳಿದನು : “ ಶ್ರೀರಾಮ, ಪ್ರಜ್ವಲಿಸುವ ಅಗ್ನಿಯಂತೆ ಸೇನೆಯು ನಮ್ಮನ್ನು ಸುತ್ತುವರಿದು ಕೊಂಡು ಸಂಹರಿಸಲು ಬರುತ್ತಿದೆ. ನೋಡಿದರೆ ಯಾವುದರಿಂದಲೂ ಉಪದ್ರವವಿಲ್ಲದಿರುವ ರಾಜ್ಯಾಧಿಪತ್ಯವನ್ನು ಬಯಸಿ ಭರತನು ನಮ್ಮನ್ನು ಸಂಹರಿಸುವುದಕ್ಕೆ ಬರುವಹಾಗಿದೆ. ನನಗೆ ಈ ಮರದಮೇಲಿಂದ ಚೆನ್ನಾಗಿ ಕಾಣಿಸುತ್ತಿದೆ. ಭರತನ ಕೋವಿದಾರಧ್ವಜವು ಕಾಣಿಸುತ್ತಿದೆ. ಮುಂದುಗಡೆಯಲ್ಲಿ ರಾವುತರು ಕುದುರೆಗಳನ್ನೇರಿಕೊಂಡು ಬರುತ್ತಿರುವರು. ಮಾವುತರು ಆನೆ ಗಳನ್ನೇರಿಕೊಂಡು ಅತಿವೇಗದಿಂದ ಬರುತ್ತಿರುವರು. ಶ್ರೀರಾಮ, ನಾವು ಚಿತ್ರಕೂಟಪರ್ವತವನ್ನೇರಿ

ನಿಲ್ಲೋಣವೆ ? ಅಲ್ಲದಿದ್ದರೆ ಇಲ್ಲಿಯೇ ಬಿಲ್ಲುಬಾಣಗಳನ್ನು ತೆಗೆದುಕೊಂಡು ಸನ್ನದ್ಧರಾಗೋಣವೆ ? ಹೇಗಾದರೂ ನಮಗೆ ಮನೋವ್ಯಥೆಯನ್ನುಂಟುಮಾಡಿದ ಭರತನು ಸಿಕ್ಕಿದನಾದರೆ, ಕಂಡೇನು ! ಆ ಭರತನಿಂದ ನೀನು ಶಾಶ್ವತವಾದ ರಾಜ್ಯವನ್ನು ಬಿಟ್ಟುಬಂದೆ. ಶತ್ರುವಾದ ಭರತನು ನಮ್ಮನ್ನು ತಾನೇ ಅರಸಿಕೊಂಡು ಇಲ್ಲಿಗೆ ಬಂದಿರುವನು. ಭರತನನ್ನು ಅವಶ್ಯವಾಗಿ ಕೊಲ್ಲಬೇಕು. ಮೊದಲು ನಿಷ್ಕಾರಣವಾಗಿ ದ್ರೋಹಬಗೆದವರನ್ನು ಕೊಂದರೆ ಧರ್ಮಕ್ಕೆ ಹಾನಿಯಿಲ್ಲ. ಭರತನು ಧರ್ಮ ಮಾರ್ಗವನ್ನು ಬಿಟ್ಟು ಅಧರ್ಮವನ್ನು ಕೈಕೊಂಡು ನಮಗೆ ಬಹು ದ್ರೋಹವನ್ನು ಮಾಡಿರುವನು. ಈತನನ್ನು ಕೊಂದಮೇಲೆ ನೀನು ರಾಜ್ಯಪರಿಪಾಲನವನ್ನು ಮಾಡು. ರಾಜ್ಯಾಧಿಪತ್ಯವಾಗಬೇಕೆಂದು ಬಯಸಿದ ಕೈಕೇಯಿಯು ನನ್ನಿಂದ ಹತನಾದ ತನ್ನ ಮಗನನ್ನು, ಆನೆಯಿಂದ ಮುರಿಯಲ್ಪಟ್ಟು ಬೀಳುವ ಮರವನ್ನು ನೋಡುವಂತೆ ನೋಡಲಿ. ಭರತನು ಬಿದ್ದಮೇಲೆ ಕೈಕೇಯಿಯನ್ನೂ ಕೊಲ್ಲುವೆನು. ಈಗ ನನ್ನ ಮನಸ್ಸಿನಲ್ಲಿರುವ ಕೋಪವು ಒಣಗಿದ ಹುಲ್ಲುಗಳಲ್ಲಿ ಅಗ್ನಿಯನ್ನು ಹಾಕಿದಂತೆ ಈ ಸೇನೆಯಲ್ಲಿ ಬಾಣಪ್ರಯೋಗವನ್ನು ಮಾಡಲು ಪ್ರೇರಿಸುತ್ತಿದೆ. ಈಗ ನನ್ನ ಬಾಣ ಗಳಿಂದ ಶತ್ರುಗಳ ಶರೀರಗಳನ್ನು ಉಚ್ಛಳಿಸಿ ತಾಕುವಂತೆ ಹೊಡೆದು ಆ ಶರೀರಗಳಿಂದ ಹೊರಡುವ ರಕ್ತಪ್ರವಾಹದಿಂದ ಚಿತ್ರಕೂಟಪರ್ವತದ ವನಭೂಮಿಯನ್ನು ನೆನೆಯಿಸುತ್ತೇನೆ. ನನ್ನ ಶಸ್ತ್ರಗಳಿಂದ ಗಾಯಪಟ್ಟು ಬೀಳುವ ಕಾಲಾಳುಗಳನ್ನು ಕಾಡುಮೃಗಗಳು ಎಳೆದುಕೊಂಡು ಹೋಗಲಿ. ನಾನು ಹಿಡಿದ ಬಿಲ್ಲುಬಾಣಗಳ ಋಣವನ್ನು ತೀರಿಸಿಕೊಳ್ಳುತ್ತೇನೆ. ಸೇನಾಸಮೇತನಾದ ಭರತನನ್ನು ಕೊಂದು ಅಯೋಧ್ಯಾಪಟ್ಟಣಕ್ಕೆ ಹೋಗೋಣ" ಎಂದು ಅತಿಕೋಪದಿಂದ ನುಡಿಯತೊಡಗಿದನು.

---

೯೭ ನೆಯ ಅಧ್ಯಾಯ

## ಶ್ರೀರಾಮನು ಲಕ್ಷ್ಮಣನಿಗೆ ಹೇಳುವ ಸಮಾಧಾನ

ಆ ಬಳಿಕ ಶ್ರೀರಾಮನು ಲಕ್ಷ್ಮಣನನ್ನು ಸಂತವಿಡುತ್ತ ಈ ಪ್ರಕಾರ ನುಡಿದನು : "ಎಲೈ ಲಕ್ಷ್ಮಣ, ಮಹಾಪ್ರಾಜ್ಞನಾದ ಭರತನು ನಮ್ಮ ಸಮೀಪಕ್ಕೆ ಬಂದರೆ ಆ ಬಿಲ್ಲುಬಾಣಗಳನ್ನೂ ಹರಿಗೆ ಖಡ್ಗಗಳನ್ನು ತೆಗೆದುಕೊಂಡು ಆತನಮೇಲೆ ಮಾಡುವ ಕಾರ್ಯವೇನು ? ನಮ್ಮ ತಂದೆಯಾದ ದಶರಥರಾಯನ ಸತ್ಯಪ್ರತಿಜ್ಞೆಯನ್ನು ಪರಿಪಾಲಿಸಬೇಕೆಂದಿರುವ ನಮಗೆ ಯುದ್ಧವನ್ನು ಮಾಡಿ ಭರತನನ್ನು ಕೊಂದು ಅಪಕೀರ್ತಿಯನ್ನು ಹೊತ್ತು ರಾಜ್ಯಾಧಿಪತ್ಯವನ್ನು ಮಾಡಿದರೆ ಬರುವ ಪ್ರಯೋಜನವೇನು ? ಬಂಧುಗಳಿಗೂ ಮಿತ್ರರಿಗೂ ಕೊಟ್ಟ ದ್ರವ್ಯವನ್ನು ವಿಷದ ಕಜ್ಜಾಯದಂತೆ ನಾನು ಬಯಸುವವನಲ್ಲ. ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳನ್ನೂ ಸಮಸ್ತ ಮಂಡಲಾಧಿ ಪತ್ಯವನ್ನೂ ನಿಮ್ಮ ಸಲುವಾಗಿ ಬಯಸುವೆನೇ ಹೊರತು ಮತ್ತೊಂದಲ್ಲ. ನಿಮಗೆ ಸುಖವಾಗ ಬೇಕೆಂಬ ಬುದ್ಧಿಯಿಂದ ರಾಜ್ಯವನ್ನು ಬಯಸುತ್ತಿರುವೆನೆಂಬ ನನ್ನ ಸತ್ಯವನ್ನು ನೀನು ಬಲ್ಲೆ. ಈ ಸಮುದ್ರಾಂತವಾದ ಭೂಮಿಯು ನನಗೆ ಅಸಾಧ್ಯವಲ್ಲ. ಹಾಗಾದರೂ ಆ ಭೂಮಿಯನ್ನು ನಾನು ಅಧರ್ಮದಿಂದ ಬಯಸುವವನಲ್ಲ. ಕಡೆಗೆ ಇಂದ್ರಾಧಿಪತ್ಯವನ್ನಾದರೂ ಅಕೃತ್ಯದಿಂದ ಪಡೆಯಲು ಬಯಸುವವನಲ್ಲ. ಎಲೈ ಲಕ್ಷ್ಮಣ, ಭರತಶತ್ರುಘ್ನರಿಲ್ಲದ ಸುಖವನ್ನು ಸುಡು. ನನ್ನ ಪ್ರಾಣಗಳಿಗಿಂತಲೂ ಅತಿಪ್ರಿಯನಾದ ಭರತನು ನಮ್ಮ ಇಕ್ಷ್ವಾಕುಕುಲದ ರಾಜರ ಸ್ವಧರ್ಮಗಳನ್ನು ವಿಚಾರಿಸಿ ಜ್ಯೇಷ್ಠ ಭ್ರಾತೃವಾದ ನನ್ನ ಮೇಲಣ ವಿಶ್ವಾಸದಿಂದ ನನ್ನನ್ನು ಅರಸಿಕೊಂಡು ಬಂದಿರಬೇಕು. ನಿನ್ನನ್ನೂ

ಸೀತಾದೇವಿಯನ್ನೂ ಕೂಡಿಕೊಂಡು ನಾರುಬಟ್ಟೆ ಜಡೆಗಳನ್ನು ಧರಿಸಿಕೊಂಡು ನಾನು ವನಕ್ಕೆ ಬಂದ ವೃತ್ತಾಂತವನ್ನು ಕೇಳಿ ಅತ್ಯಂತ ವ್ಯಾಕುಲಚಿತ್ತನಾಗಿ ಪ್ರೇಮದಿಂದ ನಮ್ಮನ್ನು ನೋಡಬೇಕೆಂದು ಬಂದನಲ್ಲದೆ ಮತ್ತೊಂದು ಕಾರ್ಯಕ್ಕಾಗಿ ಬಂದವನಲ್ಲ. ನಮ್ಮ ನಿಮಿತ್ತವಾಗಿ ತನ್ನ ತಾಯಿಯಾದ ಕೈಕೇಯಿದೇವಿಯನ್ನು ನಿಷ್ಠುರವಚನಗಳಿಂದ ನುಡಿದು ನಮ್ಮ ತಂದೆಯಾದ ದಶರಥರಾಯನಿಗೆ ಒಡಂಬಡಿಕೆಯನ್ನು ಹೇಳಿ ನನಗೆ ರಾಜ್ಯಾಧಿಪತ್ಯವನ್ನು ಕೊಡಬೇಕೆಂದು ಬಂದಿರಬೇಕು. ನಮ್ಮನ್ನು ನೋಡಬೇಕೆಂದು ತನ್ನ ಮನಸ್ಸಿನಲ್ಲೆಣಿಸಿರುವ ಪಕ್ಷದಲ್ಲಿ ಭರತನನ್ನು ನೀನು ನಿಷ್ಠುರವಾಗಿ ನುಡಿಯ ಬೇಡ. ಭರತನು ನಿನ್ನನ್ನು ನಿಷ್ಠುರವಾಗಿ ನುಡಿಯುವವನಲ್ಲ. ಭರತನು ನನಗೆ ಅಹಿತವನ್ನೆಣಿಸಿದರೂ ನಾನು ಆತನಿಗೆ ಅಹಿತವನ್ನೆಣಿಸುವವನಲ್ಲ. ಲೋಕದಲ್ಲಿ ಮಗನಾದವನು ತನಗೆ ಎಷ್ಟಾಪತ್ತುಬಂದರೂ ತಂದೆಗೆ ದ್ರೋಹವನ್ನೆಣಿಸುವನೆ ? ಒಡಹುಟ್ಟಿದವನು ತನ್ನ ಪ್ರಾಣಕ್ಕೆ ಸಮಾನನಾದ ತಮ್ಮನನ್ನು ಹೇಗೆ ಕೊಂದಾನು ? ಭರತನು ರಾಜ್ಯಾಧಿಪತ್ಯನಿಮಿತ್ತವಾಗಿ ನಮಗೆ ದ್ರೋಹವನ್ನು ಮಾಡುವನೆಂದು ಯೋಚಿಸಬಾರದು. ಭರತನು ನಮ್ಮ ಸಮೀಪಕ್ಕೆ ಬಂದಾಗ ರಾಜ್ಯವನ್ನು ಬಿಡಬೇಕೆಂದು ಕೇಳಿದರೆ ಮಹಾಪ್ರಸಾದವೆಂದು ತನ್ನ ವಶವಾದ ರಾಜ್ಯವನ್ನು ಬಿಟ್ಟುಕೊಡುವನು. ಸಂಶಯವಿಲ್ಲ" ಎಂದು ಹೇಳಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಲಜ್ಜಿತನಾಗಿ ತಲೆಬಗ್ಗಿಸಿಕೊಂಡು ತನ್ನ ಶರೀರದಲ್ಲಿ ಐಕ್ಯವಾದನೋ ಎಂಬಂತೆ ಶ್ರೀರಾಮನ ಮಾತನ್ನಂಗೀಕರಿಸಿ ಆತನನ್ನು ಕುರಿತು ದಶರಥರಾಯನೇ ತಮ್ಮನ್ನು ನೋಡಬೇಕೆಂದು ಬಂದಿರಬಹುದೆಂದು ನುಡಿದನು. ಶ್ರೀರಾಮನು ಲಕ್ಷ್ಮಣನ ಮುಖವನ್ನು ನೋಡಿ ಲಜ್ಜಿತನಾದನೆಂದು ತಿಳಿದು ಆತನನ್ನು ಕುರಿತು "ಲಕ್ಷ್ಮಣ, ದಶರಥರಾಯನು ನಮ್ಮನ್ನು ನೋಡಿ ಹೋಗಬೇಕೆಂದು ಬಂದನೊ—ಅಲ್ಲದೆ ಅತ್ಯಂತ ಸುಖವನ್ನನುಭವಿಸಿಕೊಂಡಿದ್ದ ನಾವು ವನದಲ್ಲಿ ಹೇಗಿರುವೆವೆಂದು ನಮ್ಮನ್ನು ಕರೆದುಕೊಂಡು ಹೋಗಬೇಕೆಂದು ಬಂದನೊ—ಅಲ್ಲದಿದ್ದರೆ ಅಧಿಕವಾದ ಸುಖದಲ್ಲಿದ್ದ ರಾಜಕುಮಾರಿಯಾದ ಸೀತಾದೇವಿಯು ವನದಲ್ಲಿ ಸಂಚರಿಸಿಕೊಂಡು ಇರುವುದಕ್ಕೆ ಕಾರಣವೇನೆಂದು ಆ ದೇವಿಯನ್ನು ಕರೆದುಕೊಂಡು ಹೋಗುವುದಕ್ಕೆ ಬಂದನೊ !" ಎಂದು ನುಡಿದನು. ಅನಂತರ ಭರತಶತ್ರುಘ್ನರು ಬರುವ ದಾರಿಯನ್ನು ನೋಡುತ್ತ "ಲಕ್ಷ್ಮಣ, ಅವರಿಬ್ಬರಾರು ? ಅತಿಸೌಂದರ್ಯವುಳ್ಳವರಾಗಿ ಕುದುರೆಗಳನ್ನೇರಿಕೊಂಡು ಶೀಘ್ರವಾಗಿ ಬರುತ್ತಿರುವರು. ಮಹಾರಾಜನ ಪಟ್ಟದಾನೆಯಾದ ಶತ್ರುಂಜಯವೆಂಬ ಮದ್ದಾನೆಯು ಸೇನೆಯ ಮುಂದುಗಡೆಯಲ್ಲಿ ಸಂಚರಿಸುತ್ತಿದೆ. ಆತನು ಹಿಡಿಸಿಕೊಂಡು ಬರುವ ದಿವ್ಯವಾದ ಶ್ವೇತಚ್ಛತ್ರವಿಲ್ಲದ್ದ ರಿಂದ ಮಹಾರಾಜನು ಬಂದಿಲ್ಲ. ನನ್ನ ಮನಸ್ಸಿಗೆ ಸಂಶಯವಾಗುತ್ತಿದೆ ! ಲಕ್ಷ್ಮಣ, ನೀನು ಮರದಿಂದಿಳಿದು ಬಾ" ಎಂದು ಹೇಳಿದನು.

ಆ ಬಳಿಕ ಲಕ್ಷ್ಮಣನು ಮರದಿಂದಿಳಿದುಬಂದು ಶ್ರೀರಾಮನ ಸಮೀಪದಲ್ಲಿ ಕೈಮುಗಿದುಕೊಂಡು ನಿಂತನು. ಸೇನೆಯನ್ನು ಕೂಡಿಕೊಂಡು ಹೋದರೆ ಶ್ರೀರಾಮನ ಆಶ್ರಮಕ್ಕೆ ಬಾಧೆಯುಂಟಾಗುವು ದೆಂದು ವಿಚಾರಿಸಿ ಚಿತ್ರಕೂಟಪರ್ವತಕ್ಕೆ ಒಂದೂವರೆ ಯೋಜನದಲ್ಲಿ ಸೇನೆಯು ನಿಲ್ಲಬೇಕೆಂದು ಭರತನು ಆಜ್ಞಾಪಿಸಿದನು. ಆ ಸೇನೆಯು ಶ್ರೀರಾಮನಿಗೆ ಪ್ರಸನ್ನತೆಯಾಗಲೆಂಬ ಉದ್ದೇಶದಿಂದ ದೂರದಲಿಯೇ ಮೇರೆದಪ್ಪದೆ ನಿಂತಿತು.



೯೪ ನೆಯ ಅಧ್ಯಾಯ

## ಭರತನು ಶ್ರೀರಾಮನ ಆಶ್ರಮವನ್ನು ಕಂಡದ್ದು

ಆಮೇಲೆ ಪುರುಷೋತ್ತಮನಾದ ಭರತನು ತನ್ನ ಹಿರಿಯಣ್ಣನಾದ ಶ್ರೀರಾಮನನ್ನು ಕಾಣಬೇಕೆಂಬ ಬುದ್ಧಿಯಿಂದ ಶತ್ರುಘ್ನನನ್ನು ಕುರಿತು ಹೀಗೆಂದನು : "ಶತ್ರುಘ್ನ, ನೀನು ಕಾಲಾಳುಗಳನ್ನು ಕೂಡಿಕೊಂಡು ಶ್ರೀರಾಮನಿರುವ ಸ್ಥಳವನ್ನು ವಿಚಾರಿಸು. ಗುಹನು ತನ್ನ ಜ್ಞಾತಿಗಳನ್ನು ಕೂಡಿಕೊಂಡು ಶ್ರೀರಾಮನಿರುವ ಆಶ್ರಮವನ್ನು ಹುಡುಕಲಿ. ನಾನು ವಸಿಷ್ಠಮುನೀಶ್ವರನನ್ನೂ ಪ್ರಧಾನರನ್ನೂ ಕೂಡಿಕೊಂಡು ಕಾಲುನಡೆಯಿಂದ ಆತನನ್ನು ಹುಡುಕುತ್ತೇನೆ. ಶ್ರೀರಾಮನನ್ನಾದರೂ ಲಕ್ಷ್ಮಣನನ್ನಾದರೂ ಸೀತಾದೇವಿಯನ್ನಾದರೂ ಕಾಣುವಪರ್ಯಂತ ನನಗೆ ಮನಃಶಾಂತಿಯಿಲ್ಲ. ಎದುಪರ್ಯಂತ ಶೋಭನವಾದ ಹುಬ್ಬುಗಳುಳ್ಳದ್ದಾಗಿ ತಾವರೆಹೂವಿನ ಎಸಳಂತೆ ಮನೋಹರವಾದ ಕಣ್ಣುಗಳುಳ್ಳ ಶ್ರೀರಾಮನ ಮುಖವನ್ನು ಕಾಣದೆ ಇರುವೆನೋ ಅದುಪರ್ಯಂತ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಪುಂಡರೀಕಾಕ್ಷನಾದ ಶ್ರೀರಾಮನ ಚಂದ್ರಮಂಡಲದಂತೆ ಪ್ರಕಾಶಮಾನವಾಗಿ ಒಪ್ಪುವ ಮುಖವನ್ನು ನೋಡಿಕೊಂಡಿರುವ ಲಕ್ಷ್ಮಣನೇ ಕೃತಾರ್ಥನು. ಎದುಪರ್ಯಂತ ರಾಜಯೋಗ್ಯವಾದ ಶುಭಲಕ್ಷಣಗಳಿಂದ ಕೂಡಿದ ಶ್ರೀರಾಮನ ಪಾದಗಳನ್ನು ಕಂಡು ನಮಸ್ಕಾರವನ್ನು ಮಾಡದಿರುವೆನೋ ಅದುಪರ್ಯಂತ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಎದುಪರ್ಯಂತ ಪಟ್ಟಾಭಿಷೇಕಯೋಗ್ಯನಾದ ಆ ಸ್ವಾಮಿಯು ತನ್ನ ವಂಶಪರಂಪರೆಯಿಂದ ಬಂದ ರಾಜ್ಯಾಧಿಪತ್ಯದ ಪಟ್ಟಾಭಿಷೇಕವನ್ನು ಕೈಕೊಳ್ಳದಿರುವನೋ ಅದುಪರ್ಯಂತ ನನ್ನ ಮನಸ್ಸಿಗೆ ಸಂತೋಷವಿಲ್ಲ. ಮಹಾಪತಿವ್ರತಾ ಶಿರೋಮಣಿಯಾಗಿ ಕೃತಾರ್ಥೆಯಾಗಿ ಜನಕರಾಯನ ಮಗಳಾದ ಸೀತಾದೇವಿಯು ತನ್ನ ಪತಿಯಾದ ಶ್ರೀರಾಮನೊಡನೆ ಯಾವ ಪರ್ವತದ ಸಮೀಪಪ್ರದೇಶದಲ್ಲಿ ಸಂಚರಿಸುತ್ತಿರುವಳೋ ಅಂಥ ಚಿತ್ರಕೂಟಗಿರಿಯು ಮಹಾಮೇರುವಿಗೆ ಸಮಾನವಾದದ್ದು. ಕುಬೇರನು ನಂದನವನದಲ್ಲಿ ಸಂಚರಿಸುವಂತೆ ಶ್ರೀರಾಮನು ಯಾವ ವನದಲ್ಲಿ ಸಂಚರಿಸುತ್ತಿರುವನೋ ಅಂಥ ಚಿತ್ರಕೂಟದ ವನವೇ ಅತಿಪವಿತ್ರವಾದದ್ದು" ಎಂದು ನುಡಿದನು. ಅನಂತರ ಭರತನು ಬಿಲ್ಲುಬಾಣಗಳನ್ನು ಧರಿಸಿಕೊಂಡು ಪುಷ್ಪಿತವಾದ ವೃಕ್ಷಗಳುಳ್ಳ ಆ ವನಮಧ್ಯದಲ್ಲಿದ್ದ ಒಂದು ಮರದಡಿಯಲ್ಲಿ ನಿಂತುಕೊಂಡು ಶ್ರೀರಾಮನ ಆಶ್ರಮದಿಂದೇಳುತ್ತಿದ್ದ ಹೊಗೆಯನ್ನು ಕಂಡು ಅತಿಹರ್ಷಪಟ್ಟು, ಸಮುದ್ರದ ತಡಿಯನ್ನು ನಾವಿಕನು ಕಂಡಂತೆ ಅದೇ ಶ್ರೀರಾಮನ ಆಶ್ರಮವೆಂದು ನಿಶ್ಚಯಿಸಿದನು.



೯೯ ನೆಯ ಅಧ್ಯಾಯ

## ಭರತನು ಶ್ರೀರಾಮನನ್ನು ಕಂಡದ್ದು

ಆ ಬಳಿಕ ಭರತನು ಶತ್ರುಘ್ನನಿಗೆ ಶ್ರೀರಾಮನ ಆಶ್ರಮವನ್ನು ತೋರಿಸುತ್ತ ತನ್ನ ತಾಯಂದಿರನ್ನು ಕರೆಸುವಂತೆ ವಸಿಷ್ಠಮುನಿಗೆ ತಿಳಿಸಿದನು. ಅವನು ಅಣ್ಣನ ಮೇಲಣ ಪ್ರೀತಿಯಿಂದ ಮುಂದೆ ನಡೆಯುತ್ತ ಅತಿಹರ್ಷದಿಂದ ಶತ್ರುಘ್ನನನ್ನೂ ಪ್ರಧಾನರನ್ನೂ ಕುರಿತು "ಇದು ಶ್ರೀರಾಮನ

ಆಶ್ರಮವಾಗಿರಬೇಕು, ಇಲ್ಲಿ ಭರದ್ವಾಜಮುನಿಯು ಹೇಳಿದ ಕುರುಹುಗಳೆಲ್ಲವೂ ಇವೆ. ಸಮೀಪದಲ್ಲಿ ಮಂದಾಕಿನೀನದಿಯು ಕಾಣಿಸುತ್ತಿದೆ" ಎಂದು ನುಡಿಯುತ್ತ ಆ ತಪೋವನದಲ್ಲಿ ಅಣ್ಣನಾದ ಶ್ರೀರಾಮನ ಪರ್ಣಶಾಲೆಯನ್ನು ಕಂಡನು. ಆ ಪರ್ಣಶಾಲೆಯ ಮುಂದುಗಡೆಯಲ್ಲಿದ್ದ ಪುಷ್ಪದ ಕರಡಿಗೆಯನ್ನೂ ಸಮಿತ್ತುಗಳ ರಾಶಿಯನ್ನೂ ವೃಕ್ಷಗಳ ಕೊಂಬೆಗಳಲ್ಲಿ ಕಟ್ಟಿದ್ದ ನಾರುಬಟ್ಟೆಗಳನ್ನೂ ರಾತ್ರಿಯಲ್ಲಿ ಬೆಂಕಿಯನ್ನು ರಕ್ಷಿಸುವುದಕ್ಕೆ ತಂದ ಬೆರಣಿಗಳನ್ನೂ ನೋಡಿದನು. ಅದರ ಮುಂದುಗಡೆ ಯಲ್ಲಿ ಉನ್ನತವಾದ ಮರದ ಕೊಂಬೆಗಳಲ್ಲಿ ಕಟ್ಟಿದ್ದ ನಾರುಬಟ್ಟೆಗಳು ಲಕ್ಷ್ಮಣನಿಂದ ಕಟ್ಟಲ್ಪಟ್ಟವೆಂದು ಊಹಿಸಿದನು. ಅತಿಹರ್ಷದಿಂದ ಶ್ರೀರಾಮನನ್ನು ಕಂಡದ್ದಾಗಿ ಭಾವಿಸಿ ಕ್ಷಣಮಾತ್ರದಲ್ಲಿ ಚಿತ್ರಕೂಟ ಪರ್ವತದ ಸಮೀಪಕ್ಕೆ ಹೋಗಿ ಆ ಪರ್ವತದ ಸಮೀಪದಲ್ಲಿದ್ದ ಮಂದಾಕಿನೀನದಿಯ ಪಾರ್ಶ್ವವನ್ನು ಸೇರಿದನು. ತನ್ನ ಬಳಿಯಲ್ಲಿದ್ದವರೊಡನೆ "ಆ ರಾಜಕುಮಾರನು ತನ್ನ ತಮ್ಮನನ್ನೂ ತನ್ನ ಪತ್ನಿಯನ್ನೂ ಕರೆದುಕೊಂಡು ಬಂದು ನಾರುಬಟ್ಟೆಗಳನ್ನುಟ್ಟು ಜಡೆಗಳನ್ನು ಧರಿಸಿಕೊಂಡು ತಪಸ್ವಿ ಯಾಗಿ ಬಿಲ್ಲುಬಾಣಗಳನ್ನು ಧರಿಸಿಕೊಂಡು ವೀರಾಸನದಲ್ಲಿ ಕುಳಿತಿರುವನು. ಆತನು ಸಮಸ್ತ ಲೋಕ ಗಳಿಗೂ ಒಡೆಯನು. ಮಹಾತೇಜಸ್ವಿಯಾದವನು. ಅವನು ನನ್ನ ನಿಮಿತ್ತವಾಗಿ ರಾಜ್ಯವನ್ನು ಬಿಟ್ಟು ವನಕ್ಕೆ ಬಂದು ಈ ಪರ್ಣಶಾಲೆಯಲ್ಲಿ ವಾಸವಾಗಿರುವನು. ನನ್ನ ಜನ್ಮವು ವ್ಯರ್ಥ. ಈಗ ಆ ಶ್ರೀರಾಮನನ್ನು ಕಂಡು ಆತನ ಪಾದಗಳಿಗೆ ನಮಸ್ಕಾರವನ್ನು ಮಾಡಿ ಸೀತಾದೇವಿಗೂ ನಮಸ್ಕರಿಸಿ ಅವರನ್ನು ಅಯೋಧ್ಯಾಪಟ್ಟಣಕ್ಕೆ ಬರಹೇಳಿ ಬೇಡುವೆನು" ಎಂದು ಹಂಬಲಿಸುತ್ತ ಮುಂದಕ್ಕೆ ನಡೆದನು. ಮುಂದೆ ಹೋಗಿ ಮನೋಹರವಾದ ಪರ್ಣಶಾಲೆಯನ್ನು ಕಂಡನು. ಆ ಪರ್ಣಶಾಲೆಯು ಸಾಲ ತಾಲ ಮುಂತಾದ ಮರಗಳ ಎಲೆಗಳಿಂದ ಆಚ್ಛಾದಿತವಾಗಿತ್ತು. ಭೀಕರಗಳಾದ ದಿವ್ಯ ಧನುಸ್ಸು ಗಳು ತೂಗುಹಾಕಲ್ಪಟ್ಟಿದ್ದವು. ಸರ್ಪಗಳಂತೆ ಕಂಗೊಳಿಸುವ ಭಯಂಕರಾಸ್ತ್ರಗಳಿಂದ ತುಂಬಿದ ಬತ್ತಳಿಕೆಗಳು ಅಲ್ಲಿ ಶೋಭಿಸುತ್ತಿದ್ದವು. ಉತ್ತಮವಾದ ಎರಡು ಖಡ್ಗಗಳೂ ಢಾಲುಗಳೂ ವಿರಾಜಿಸುತ್ತಿದ್ದವು. ಪೂರ್ವೋತ್ತರವಾಗಿ ವಿರಚಿತವಾದ ಒಂದು ಅಗ್ನಿವೇದಿಯು ಆಶ್ರಮದಲ್ಲಿ ಭರತನಿಗೆ ಗೋಚರಿಸಿತು. ಮರುಕ್ಷಣದಲ್ಲಿ ವೇದಿಕೆಯ ಬಳಿ ವೀರಾಸನದಲ್ಲಿ ಮಂಡಿಸಿ ಅಗ್ನಿಯಂತೆ ಪ್ರಜ್ವಲಿಸುತ್ತಿದ್ದ ಶ್ರೀರಾಮನನ್ನು ಭರತನು ಕಂಡನು. ಕೂಡಲೇ ಭರತನು ಅತ್ಯಂತ ಶೋಕಾವಿಷ್ಟ ನಾಗಿ ರೋದನಮಾಡುತ್ತ ಹಂಬಲಿಸುತ್ತ ಬಿಕ್ಕುತ್ತ ಮಾತಾಡುವುದಕ್ಕೆ ಶಕ್ತಿಯಿಲ್ಲದೆ ಸ್ವರಗುಂದಿ ಮೆಲ್ಲಗೆ "ಅಕಟಕಟಾ! ಅಯೋಧ್ಯಾಪಟ್ಟಣದಲ್ಲಿ ಆಸ್ಥಾನಮಂಟಪದಲ್ಲಿ ಸಿಂಹಾಸನದಲ್ಲಿ ಕುಳಿತುಕೊಂಡು ಸಮಸ್ತ ಪ್ರಧಾನರೊಡನೆ ವಿರಾಜಿಸಬೇಕಾಗಿದ್ದ ಶ್ರೀರಾಮನನ್ನು ಈ ವನದಲ್ಲಿ ಪರ್ಣಶಾಲೆಯಲ್ಲಿ ಮೃಗಪಕ್ಷಿಗಳ ಮಧ್ಯದಲ್ಲಿ ಕಾಣುವಹಾಗಾಯಿತಲ್ಲ! ದಿವ್ಯವಾದ ವಸ್ತ್ರಗಳಿಂದ ಅಲಂಕರಿಸಿಕೊಂಡಿದ್ದ ಈ ಸ್ವಾಮಿಯು ಮೃಗಗಳ ಚರ್ಮವನ್ನು ಧರಿಸಿಕೊಂಡಿರುವುದನ್ನು ಕಂಡೆನಲ್ಲ! ಪರಿಮಳಯುಕ್ತವಾಗಿ ನಾನಾವಿಧವಾದ ಪುಷ್ಪಮಾಲಿಕೆಗಳನ್ನು ಮುಡಿಯಲ್ಲಿ ಧರಿಸುತ್ತಿದ್ದವನು ಜಟಾಭಾರವನ್ನು ಧರಿಸಿ ಕೊಂಡು ಇರಬೇಕಾಯಿತಲ್ಲ! ಅನೇಕ ಯಜ್ಞಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ಬೇಕಾದ ವಸ್ತುಗಳನ್ನು ಕೊಟ್ಟು ಧರ್ಮಸಂಗ್ರಹಮಾಡುತ್ತಿದ್ದ ಈ ಮಹಾತ್ಮನು ವನಮಧ್ಯದಲ್ಲಿ ಕೃಷ್ಣಾಜಿನವನ್ನು ಹೊದ್ದು ಶರೀರದಂಡನೆಯಿಂದ ತಪಸ್ಸುಮಾಡುತ್ತ ಧರ್ಮಸಂಗ್ರಹ ಮಾಡುವಂತಾಯಿತಲ್ಲ! ಈ ದುಃಖಗಳೆಲ್ಲಾ ನನ್ನಿಂದಲೇ ಉಂಟಾದವು. ಲೋಕದಲ್ಲಿ 'ಭರತನು ರಾಜ್ಯಾಧಿಪತ್ಯದ ನಿಮಿತ್ತವಾಗಿ ಅಣ್ಣನನ್ನು ದೇಶತ್ಯಾಗ ಮಾಡಿಸಿ ಹೊರಡಿಸಿದನು' ಎಂಬ ಅಪಕೀರ್ತಿಗೆ ಗುರಿಯಾದ ನನ್ನ ಶರೀರವನ್ನು ಸುಡಬೇಕು" ಎಂದುಕೊಂಡನು. ಭರತನು ಮುಖಬೆವರಿಟ್ಟು ಕಂಗೆಟ್ಟು ಶ್ರೀರಾಮನ ಪಾದಗಳನ್ನು ಮುಟ್ಟಬೇಕೆಂದು ಧಾವಿಸಿದನು. ಭರತನು "ಅಣ್ಣಾ" ಎಂದು ಒಂದುಸಾರಿ ನುಡಿದು ಮತ್ತೇನನ್ನೂ

ನುಡಿಯಲಾರದೆ ಮಧ್ಯದಲ್ಲಿಯೇ ಚೈತನ್ಯಗುಂದಿ ನೆಲಕ್ಕುರುಳಿದನು. ಶತ್ರುಘ್ನನು ರೋದನ ಮಾಡುತ್ತ ಶ್ರೀರಾಮನಿಗೆ ಸಾಷ್ಟಾಂಗವೆರಗಿದನು. ಆಗ ಶ್ರೀರಾಮನು ಅವರಿಬ್ಬರನ್ನೂ ತಬ್ಬಿಕೊಂಡು ತಾನೂ ಕಣ್ಣೀರು ಬಿಡಲಾರಂಭಿಸಿದನು. ಆಮೇಲೆ ಸುಮಂತ್ರನೂ ಗುಹನೂ ಶ್ರೀರಾಮನಿಗೆ ಅಭಿವಂದಿಸಿ ಕಣ್ಣೀರು ಬಿಡತೊಡಗಿದರು. ಇವರನ್ನು ಕಂಡ ತಪಸ್ವಿಗಳೆಲ್ಲರೂ ಕಣ್ಣೀರು ಸುರಿಸಿದರು.



೧೦೦ ನೆಯ ಅಧ್ಯಾಯ

## ಶ್ರೀರಾಮನು ಭರತನಿಗೆ ಹೇಳಿದ ರಾಜನೀತಿ

ಆಮೇಲೆ ಶ್ರೀರಾಮನು ನಾರುಬಟ್ಟೆಯನ್ನುಟ್ಟು ಜಡೆಗಳನ್ನು ಧರಿಸಿಕೊಂಡು ಕೈಮುಗಿದು ಕೊಂಡು ತೇಜಸ್ವಿಯಾದ ಸೂರ್ಯನಂತೆ ಭೂಮಿಯಮೇಲೆ ಬಿದ್ದಿದ್ದ ಭರತನ ವಿವರ್ಣವಾದ ಮುಖವನ್ನೂ ಕೃಶವಾದ ಶರೀರವನ್ನೂ ಕಂಡನು. ಆತನನ್ನು ತನ್ನ ಭುಜಗಳಿಂದ ತಬ್ಬಿ ಹಿಡಿದೆತ್ತಿ ಆತನ ಶಿರಸ್ಸನ್ನು ಆಘ್ರಾಣಿಸಿ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು. ಅವನ ಕುಶಲವನ್ನು ವಿಚಾರಿಸುತ್ತ ಆತನನ್ನು ಕುರಿತು "ಭರತ, ನಮ್ಮ ತಂದೆಯಾದ ದಶರಥರಾಯನು ಹೇಗಿದ್ದಾನೆ ? ನೀನೇನು ಕಾರಣ ಅರಣ್ಯಕ್ಕೆ ಬಂದೆ ? ದಶರಥರಾಯನು ಜೀವಿತನಾಗಿದ್ದರೆ ನೀನು ವನಕ್ಕೆ ಬರಲಾರೆಯಲ್ಲ ! ಭರತ, ನಿನ್ನನ್ನು ಕಂಡು ಬಹಳ ದಿವಸಗಳಾದವು. ನೀನು ಬರುವಾಗ ದಶರಥರಾಯನು ಜೀವಸಹಿತವಾಗಿದ್ದನೊ ? ಆ ರಾಜನು ನನ್ನನ್ನು ಕಾಣದೆ ದೈನ್ಯಪಟ್ಟು ಲೋಕಾಂತರವನ್ನೈದಿದನೊ ? ಅಲ್ಲದಿದ್ದರೆ ಬಾಲಕನಾದ ನೀನು ರಾಜ್ಯಾಧಿಪತ್ಯಮಾಡುವಾಗ ಏನಾದರೂ ಉಪದ್ರವ ಬಂದಿತೊ ? ಭರತ, ಸತ್ಯಸಂಧನಾದ ದಶರಥರಾಯನಿಗೆ ಸೇವೆ ಮಾಡುತ್ತಿದ್ದೆಯೊ ? ಅಸಹಾಯಶೂರನಾದ ಆ ರಾಜನು ಚೆನ್ನಾಗಿದ್ದಾನೆಯೊ ? ಕೌಸಲ್ಯಾದೇವಿ ಕೈಕೇಯಿದೇವಿ ಸುಮಿತ್ರಾದೇವಿ ಮೊದಲಾದವರು ಚೆನ್ನಾಗಿರುವರೆ ? ಅನೇಕ ವಿನಯಗುಣ ಸಂಪತ್ತಿಯುಳ್ಳ ವಸಿಷ್ಠಮುನೀಶ್ವರನು ಚೆನ್ನಾಗಿರುವನೊ ? ನೀನು ನಮ್ಮ ತಂದೆಯ ಮಾತನ್ನು ಕೇಳುತ್ತ ಆತನಿಗೆ ಸಮಾನರಾದ ವೃದ್ಧರನ್ನೂ ಒಡಹುಟ್ಟಿದವರನ್ನೂ ವೇದವಿದ್ಯಾವಿಶಾರದರಾದ ಬ್ರಾಹ್ಮಣರನ್ನೂ ಸನ್ಮಾನದಲ್ಲಿ ನಡೆಸಿಕೊಂಡಿದ್ದೀಯೊ ? ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರಾಗಿ ಅರ್ಥ ಹೇಳುವುದರಲ್ಲಿ ಕುಶಲರಾಗಿ ಧರ್ಮವನ್ನೂ ಧನುರ್ವಿದ್ಯೆಯನ್ನೂ ಉಪದೇಶಮಾಡಿದ ಸುಧನ್ವನೇ ಮೊದಲಾದವರನ್ನು ಸನ್ಮಾನದಲ್ಲಿ ಕಂಡುಕೊಂಡಿದ್ದೀಯೊ ? ಮಹಾಪರಾಕ್ರಮಿಗಳಾಗಿಯೂ ಮಂತ್ರಾಲೋಚನೆಯಲ್ಲಿ ಸಮರ್ಥರಾಗಿಯೂ ಸತ್ಕುಲಪ್ರಸೂತರಾಗಿಯೂ ಜಿತೇಂದ್ರಿಯರಾಗಿಯೂ ಇರುವ ನೀತಿಶಾಸ್ತ್ರಜ್ಞರಾದ ಮಂತ್ರಿಗಳನ್ನು ಚೆನ್ನಾಗಿ ರಕ್ಷಿಸಿಕೊಂಡಿದ್ದೀಯೊ ? ಲೋಕದಲ್ಲಿ ಅರಸರಿಗೆ ಮಂತ್ರಾಲೋಚನೆಯೇ ಶತ್ರುಜಯಕ್ಕೆ ಕಾರಣವಾಗಿರುವುದು. ನೀನು ಯಾವಾಗಲೂ ಸನ್ಮಂತ್ರಿಗಳ ಗೋಷ್ಠಿಯಲ್ಲಿಯೇ ಇದ್ದೀಯೊ ? ರಾತ್ರಿಕಾಲದಲ್ಲಿ ಅತ್ಯಂತ ಮೈಮರೆತು ಮಲಗದಿದ್ದೀಯೊ ? ಪ್ರಾತಃಕಾಲದಲ್ಲೆದ್ದು ನಾರಾಯಣನ ಸ್ಮರಣೆಯನ್ನು ಮಾಡುತ್ತೀಯೊ ? ನೀನು ಮಾಡುವ ಮಂತ್ರಾಲೋಚನೆಯನ್ನು ಕುತರ್ಕಿಗಳಾದವರು ಭೇದತಂತ್ರ ಹುಟ್ಟಿಸಿ ಕೆಡಿಸದಿದ್ದಾರೆಯೊ ? ವಿವೇಕಿಯಾಗಿ ಬುದ್ಧಿವಂತನೂ ಶೂರನೂ ದಕ್ಷನೂ ವಿಚಕ್ಷಣನೂ ಎನಿಸಿದ ಒಬ್ಬ ಪ್ರಧಾನನನ್ನು ರಕ್ಷಣೆಮಾಡಿದ ದೊರೆಗೆ ಕೀರ್ತಿಯುಂಟಾಗುವುದು ! ಎಲೈ ಭರತನೆ, ಮುಖ್ಯರಾದವರನ್ನು ದೊಡ್ಡ

ಕಾರ್ಯಗಳಲ್ಲಿ ನಿಯೋಜಿಸಬೇಕು. ಮಧ್ಯಮರನ್ನು ಮಧ್ಯಮಕಾರ್ಯಗಳಲ್ಲಿ ನಿಯೋಜಿಸಬೇಕು. ಅಧಮರಾದವರನ್ನು ಅಧಮಕಾರ್ಯಕ್ಕೆ ನಿಯೋಜಿಸಬೇಕು. ನೀನು ಈ ಪ್ರಕಾರದಲ್ಲಿ ಅವರವರ ತಾರತಮ್ಯವನ್ನರಿತು ಕುಲಾಗತವಾಗಿ ಬಂದವರೂ ಶುಚಿಗಳೂ ಧೀರರೂ ಉತ್ತಮರೂ ಆದ ಪ್ರಧಾನಿಗಳನ್ನು ಉತ್ತಮಕಾರ್ಯಗಳಲ್ಲಿ ನಿಯೋಜಿಸುತ್ತಿದ್ದೀಯೊ ? ಪ್ರಜೆಗಳನ್ನು ಉಗ್ರವಾದ ದಂಡದಿಂದ ಬಾಧಿಸಿ ಕೆಡಿಸದಿದ್ದೀಯೊ ? ರಾಜ್ಯಾಧಿಪತ್ಯಮಾಡುವುದಕ್ಕೆ ಮಂತ್ರಿಗಳೆಲ್ಲರೂ ಅನುಕೂಲರಾಗಿದ್ದಾರೆಯೊ ? ಅರಸನು ಕೊಟ್ಟ ಐಶ್ವರ್ಯಕ್ಕಿಂತಲೂ ಹೆಚ್ಚಾಗಿ ಐಶ್ವರ್ಯವನ್ನು ಬಯಸುವ ಸಾಮದಾನಾದಿಗಳಲ್ಲಿ ಉಪಾಯಕುಶಲನಾದ ಮಂತ್ರಿಯನ್ನಾದರೂ, ವೈದ್ಯನನ್ನಾದರೂ, ಅಂತರಂಗ ಭೃತ್ಯನನ್ನಾದರೂ, ಮಿಥ್ಯಾದೋಷದಿಂದ ಕೆಡಿಸುವವನನ್ನಾದರೂ, ಹೆಚ್ಚಾಗಿ ಐಶ್ವರ್ಯವನ್ನು ಬಯಸುವ ಶೂರನನ್ನಾದರೂ ದೇಶದಿಂದ ಹೊರಡಿಸದಿರುವ ಅರಸನು ಕೆಡುವನು. ವಂಶಪರಂಪರೆಯಿಂದ ಸಂಮಾನಿಸಲ್ಪಟ್ಟಿರುವ ವೃದ್ಧಬ್ರಾಹ್ಮಣರನ್ನು ಚೆನ್ನಾಗಿ ಕಾಪಾಡಿಕೊಂಡಿದ್ದೀಯೊ ? ಬಲ್ಲವರೆಂದು ಅಹಂಕರಿಸಿಕೊಂಡಿರುವವರು ಧರ್ಮಶಾಸ್ತ್ರವಿಚಾರವು ಬಂದಾಗ ಶಾಸ್ತ್ರಾನುಸಾರವಾಗಿ ನುಡಿಯದಿದ್ದರೆ ಅವರಿಂದ ಪ್ರಯೋಜನವಿಲ್ಲವೆಂದು ಅವರನ್ನು ಉಪೇಕ್ಷೆಮಾಡುತ್ತಿದ್ದೀಯೊ ? ಮಹಾ ಪರಾಕ್ರಮಿಗಳಾದ ನಮ್ಮ ಪೂರ್ವದ ಅರಸರಿಂದ ಪರಿಪಾಲಿಸಲ್ಪಟ್ಟು, ಶತ್ರುಗಳಿಗೆ ಅಭೇದ್ಯವಾದ ಕಾರಣದಿಂದ 'ಅಯೋಧ್ಯೆ' ಎಂಬ ಯಥಾರ್ಥನಾಮವುಳ್ಳ ನಮ್ಮ ರಾಜಧಾನಿಯನ್ನು ಭದ್ರವಾಗಿ ರಕ್ಷಿಸಿಕೊಂಡಿದ್ದೀಯೊ ? ನಿನ್ನ ರಾಜ್ಯದಲ್ಲಿ ಕೃಷಿಮಾಡುವವರು, ಗೊಲ್ಲರು ಮೊದಲಾದ ಸಮಸ್ತರೂ ಲೋಕಾಭಿರಾಮವಾದ ವಾರ್ತೆಗಳನ್ನು ಕೇಳಿಕೊಂಡು ಸುಖವಾಗಿದ್ದಾರೆಯೊ ? ಅವರಿಗೆ ಯಾವ ಉಪದ್ರವವೂ ಬರದಹಾಗೆ ರಕ್ಷಿಸಿಕೊಂಡಿದ್ದೀಯೊ ? ಅರಸನು ತನ್ನ ರಾಜ್ಯದಲ್ಲಿರುವ ಪ್ರಜೆಗಳನ್ನು ತನ್ನ ಮಕ್ಕಳನ್ನು ಕಾಣುವಹಾಗೆ ಕಂಡುಕೊಂಡಿರಬೇಕೆಂಬ ಧರ್ಮಶಾಸ್ತ್ರವನ್ನರಿತು ಆ ಪ್ರಕಾರದಲ್ಲಿ ಪ್ರಜೆಗಳನ್ನು ಚೆನ್ನಾಗಿ ರಕ್ಷಿಸಿಕೊಂಡಿದ್ದೀಯೊ ? ಕೇರಿಯನ್ನು ಗುಡಿಸುವ ಸೇವಕರು ಪ್ರಾತಃಕಾಲದಲ್ಲಿ ತಮ್ಮ ಕೃತ್ಯವನ್ನು ಮಾಡುತ್ತಿದ್ದಾರೆಯೊ ? ಅಪಾತ್ರದಲ್ಲಿ ತ್ಯಾಗವನ್ನು ಮಾಡುವುದಿಲ್ಲವಲ್ಲವೆ ? ನೀನು ಸಂಪಾದಿಸಿದ ಭಂಡಾರವು ದೇವತಾರ್ಥವಾಗಿಯೂ ಬ್ರಾಹ್ಮಣನಿಮಿತ್ತವಾಗಿಯೂ ಅತಿಥಿಗಳ ನಿಮಿತ್ತವಾಗಿಯೂ ಪಟುಭಟರ ನಿಮಿತ್ತವಾಗಿಯೂ ನಿನ್ನ ಮಿತ್ರಜನರ ನಿಮಿತ್ತವಾಗಿಯೂ ವೆಚ್ಚವಾಗುತ್ತಿದೆಯೆ ? " ಎಂದು ಅನೇಕ ರಾಜನೀತಿಗಳನ್ನೂ ಧರ್ಮಬುದ್ಧಿಯನ್ನೂ ಉಪದೇಶ ಮಾಡಿದನು.

---

## ೧೦೧ ನೆಯ ಅಧ್ಯಾಯ

## ಭರತನು ಶ್ರೀರಾಮನನ್ನು ಅಯೋಧ್ಯಾಪಟ್ಟಣಕ್ಕೆ ಕರೆದದ್ದು

ಆಮೇಲೆ ಭರತನು "ಅಣ್ಣ, ಧರ್ಮಮಾರ್ಗವನ್ನು ಬಿಟ್ಟು ನನಗೆ ರಾಜಧರ್ಮದಿಂದ ಕಾರ್ಯವೇನು ? ನಮ್ಮ ವಂಶದಲ್ಲಿ ಯಾವಾಗಲೂ ಧರ್ಮಮಾರ್ಗದ ನಡತೆಯೇ ಸ್ಥಿರವಾಗಿರುವುದು. ಜ್ಯೇಷ್ಠಪುತ್ರನಿದ್ದರೆ ತಮ್ಮನಿಗೆ ರಾಜ್ಯಾಧಿಪತ್ಯವು ಸಲ್ಲದು. ಆದಕಾರಣ ನೀನು ಸಮಸ್ತ ಐಶ್ವರ್ಯವುಳ್ಳ ಅಯೋಧ್ಯಾಪಟ್ಟಣಕ್ಕೆ ಬಂದು ಪಟ್ಟಾಭಿಷೇಕವನ್ನು ಮಾಡಿಕೊಂಡು ನಮ್ಮ ಕುಲಧರ್ಮವನ್ನು ನಡೆಯಿಸು. ಲೋಕದಲ್ಲಿ ಅರಸನನ್ನು ಮನುಷ್ಯನೆಂದು ಹೇಳುತ್ತಾರೆ; ದೇವನೆಂದು ನನ್ನ ಅಭಿಪ್ರಾಯ. ಏಕೆಂದರೆ, ಧರ್ಮ ಅರ್ಥಗಳಿಂದ ಕೂಡಿದ ಅವನ ನಡೆವಳಿಕೆಯನ್ನು ಹಿರಿಯರು

ಅಮಾನುಷವೆಂದೇ ಹೇಳುವರಲ್ಲವೆ ? ನಾನು ಕೇಕಯದೇಶದಲ್ಲಿರಲಾಗಿ ಸೀತಾಲಕ್ಷ್ಮಣಸಮೇತನಾಗಿ ನೀನು ವನಕ್ಕೆ ಬಂದಮೇಲೆ ಪೂಜ್ಯನಾದ ಮಹಾರಾಜನು ನಿನ್ನ ವಿಯೋಗದುಃಖದಿಂದಲೇ ಹಂಬಲಿಸಿ ಸ್ವರ್ಗಸ್ಥನಾದನು. ನೀನು ದಶರಥರಾಯನಿಗೆ ಉತ್ತರಕ್ರಿಯೆಗಳನ್ನು ಮಾಡು. ನಾನೂ ಶತ್ರುಘ್ನನೂ ದಶರಥರಾಯನಿಗೆ ಉತ್ತರಕ್ರಿಯೆಗಳನ್ನು ಮಾಡಿದೆವು. ಹಾಗಾದರೂ ಲೋಕದಲ್ಲಿ ಪ್ರಿಯಪುತ್ರನಾದವನು ತಂದೆಗೆ ಉತ್ತರಕ್ರಿಯೆಗಳನ್ನು ಮಾಡದಿದ್ದರೆ ತೃಪ್ತಿಯಾಗದೆಂದು ಬಲ್ಲವರು ಹೇಳುತ್ತಾರೆ, ದಶರಥರಾಜನಿಗೆ ನೀನೇ ಪ್ರಿಯಪುತ್ರನು. ನೀನು ವನವಾಸಕ್ಕೆ ಬಂದಮೇಲೆ ನೀನು ಬಂದ ಮಾರ್ಗದಲ್ಲಿಯೇ ದೃಷ್ಟಿಯನ್ನಿಟ್ಟು ನಿನ್ನ ಅಗಲಿಕೆಯಿಂದುಂಟಾದ ದುಃಖಾತಿಶಯದಿಂದ ಹಂಬಲಿಸುತ್ತ ನಿನ್ನನ್ನು ಬಿಟ್ಟಿರಲಾರದೆ ನಿನ್ನನ್ನೇ ನೆನೆಯುತ್ತ ಮಹಾರಾಜನು ಶರೀರತ್ಯಾಗವನ್ನು ಮಾಡಿದನು " ಎಂದು ಹೇಳಿದನು.

ಂ೦೩ ನೆಯ ಅಧ್ಯಾಯ

## ಶ್ರೀರಾಮನು ದಶರಥನಿಗೆ ಉತ್ತರಕ್ರಿಯೆಗಳನ್ನು ಮಾಡಿದ್ದು

ಆಮೇಲೆ ಶ್ರೀರಾಮನು ದೇವೇಂದ್ರನ ವಜ್ರಾಯುಧದಿಂದ ಗಾಯವಟ್ಟ ಪರ್ವತದಂತೆ, ದಶರಥರಾಯನು ಸ್ವರ್ಗಸ್ಥನಾದನೆಂಬ ಭರತನ ವಾಕ್ಯದಿಂದ ಅಂತರಂಗದಲ್ಲಿ ಗಾಯಪಟ್ಟವನಾಗಿ ಚೈತನ್ಯಗುಂದಿ ಮೂರ್ಛಾಗತನಾಗಿ ಬಿದ್ದನು. ಆಮೇಲೆ ಮೂರ್ಛೆತಿಳಿದೆದ್ದು ಕಣ್ಣುಗಳಿಂದ ಧಾರಾಪಾತವಾಗಿ ನೀರುಬಿಡುತ್ತ ದೈನ್ಯಸ್ವರದಿಂದ ಭರತನನ್ನು ಕುರಿತು "ಭರತ, ನಮ್ಮ ತಂದೆಯು ಸ್ವರ್ಗಸ್ಥನಾದಮೇಲೆ ನಮ್ಮಿಂದಾಗುವ ಕಾರ್ಯವೇನು ? ಇನ್ನು ಮಹಾತ್ಮನಾದ ದಶರಥರಾಯನಿಂದ ಪರಿಪಾಲಿಸಲ್ಪಟ್ಟ ಅಯೋಧ್ಯಾಪಟ್ಟಣವನ್ನು ರಕ್ಷಿಸುವವರಾರು ? ಆ ಮಹಾರಾಜನ ಉದರದಲ್ಲಿ ನಾನೊಬ್ಬ ಪಾಪಾತ್ಮನು ಜನಿಸಿದೆನು. ನನ್ನ ಅಗಲಿಕೆಯಿಂದುಂಟಾದ ದುಃಖದಿಂದಲೇ ಮಹಾರಾಜನು ಸ್ವರ್ಗಸ್ಥನಾದನು. ನಾನು ನನ್ನ ತಂದೆಗೆ ಸಂಸ್ಕಾರವನ್ನು ಮಾಡುವುದಕ್ಕೂ ಆಗಲಿಲ್ಲ. ಭರತ, ನೀನೂ ಶತ್ರುಘ್ನನೂ ಕೃತಾರ್ಥರಾದಿರಿ. ನೀವು ದಶರಥರಾಜನಿಗೆ ವಿಧ್ಯುಕ್ತವಾಗಿ ಅಗ್ನಿಸಂಸ್ಕಾರವನ್ನು ಮಾಡಿದಿರಿ. ನಾನು ಮುಂದೆ ಹದಿನಾಲ್ಕು ವರುಷಗಳೆಂಬ ಮಿತಿಯು ತೀರಿದಮೇಲೆ ನಮ್ಮ ತಂದೆಯಿಲ್ಲದೆ ಅಯೋಧ್ಯಾನಗರಕ್ಕೆ ಹೋಗಲಾರೆ. ಹಿಂದೆ ನಮ್ಮ ತಂದೆಯು ವಾತ್ಸಲ್ಯದಿಂದ ನನ್ನನ್ನು ಸಂತೈಸುತ್ತಿದ್ದನು. ನಾನು ಅಂಥ ಮೃದುನುಡಿಗಳನ್ನು ಇನ್ನೆಂದಿಗೆ ಕೇಳುವೆನು ? " ಎಂದು ಹಂಬಲಿಸಿ ಸೀತಾದೇವಿಯ ಸಮೀಪಕ್ಕೆ ಹೋಗಿ ಕಣ್ಣೀರುಬಿಡುತ್ತ ದುಃಖಾತಿಶಯದಿಂದ "ಸೀತೆ, ನಿನ್ನ ಮಾವನಾದ ದಶರಥರಾಜನು ಸ್ವರ್ಗಸ್ಥನಾದನು. ಲಕ್ಷ್ಮಣ, ನೀನು ತಂದೆಯಿಲ್ಲದವನಾದೆ. ನಮ್ಮ ತಂದೆಯು ಲೋಕಾಂತರವನ್ನೈದಿದನೆಂಬ ದುಃಖಕರವಾದ ಸಂಗತಿಯನ್ನು ಭರತನು ಹೇಳುತ್ತಿದ್ದಾನೆ " ಎಂದು ಹೇಳಿದನು.

ಅದನ್ನು ಕೇಳಿ ಸೀತಾಲಕ್ಷ್ಮಣರು ಅಧಿಕವಾದ ದುಃಖಸಮುದ್ರದಲ್ಲಿ ಮುಳುಗಿದರು. ತಮ್ಮಂದಿರೆಲ್ಲರೂ ಸೀತಾಸಮೇತನಾದ ಶ್ರೀರಾಮನನ್ನು ಸಂತೈಸುತ್ತಿದ್ದರು. ಸೀತಾದೇವಿಯು ಕಣ್ಣೀರು ತುಂಬಿ ತನ್ನ ಪತಿಯನ್ನು ನೋಡುವುದಕ್ಕೂ ಸಮರ್ಥಳಲ್ಲದೆ ಇದ್ದಳು. ಶ್ರೀರಾಮನು ರೋದನಮಾಡುತ್ತಿದ್ದ ಸೀತಾದೇವಿಯನ್ನು ಸಂತೈಸುತ್ತ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ನಾರುಬಟ್ಟೆಗಳನ್ನೂ ಇಂಗುದೀಪಿಣ್ಯಾಕವನ್ನೂ ತೆಗೆದುಕೊಂಡು ಬಾ. ಮಹಾತ್ಮನಾದ ದಶರಥರಾಯನಿಗೆ

ಉತ್ತರಕ್ರಿಯೆಗಳನ್ನು ಮಾಡೋಣ. ಸೀತಾದೇವಿಯು ಮುಂದೆ ನಡೆಯಲಿ. ಅವಳ ಹಿಂದೆ ನೀನು ಹೋಗು. ನಾನು ಹಿಂದೆ ಬರುತ್ತೇನೆ. ಅಯ್ಯೋ, ನಮಗೆ ಇಂಥ ಅವಸ್ಥೆ ಬಂದಿತಲ್ಲ" ಎಂದು ಹೇಳಿದನು. ಆಮೇಲೆ ಅತ್ಯಂತ ದೃಢಭಕ್ತರಾದ ತಮ್ಮಂದಿರನ್ನು ಕೂಡಿಕೊಂಡು ಅವರನ್ನು ಸಂತವಿಸುತ್ತ ಮಂದಾಕಿನೀನದಿಯ ತೀರಕ್ಕೆ ಹೋಗಿ ಸ್ನಾನವನ್ನು ಮಾಡಿ ಧರ್ಮೋದಕ ತರ್ಪಣಗಳನ್ನು ಕೊಟ್ಟನು. ಅನಂತರ ತೀರಕ್ಕೆ ಬಂದು ಎಲಚಿಹಣ್ಣು ಸಹಿತವಾದ ಇಂಗುದೀಪಿಣ್ಯಾಕದ ಪಿಂಡಗಳನ್ನು ದರ್ಭೆಯ ಮೇಲಿಟ್ಟು "ಮಹಾರಾಜ, ನಾವು ವ್ರತಸ್ಥರಾಗಿ ಹಣ್ಣುಹಂಪಲುಗಳನ್ನು ಆಹಾರಮಾಡಿಕೊಂಡಿದ್ದೇವೆ. ಆದಕಾರಣ ನಾನು ಕೊಡುವ ಎಲಚಿಹಣ್ಣು ಸಮೇತವಾದ ಇಂಗುದೀಪಿಣ್ಯಾಕದ ಪಿಂಡಗಳಿಂದ ತೃಪ್ತನಾಗಿ ಸ್ವರ್ಗಕ್ಕೆ ಹೋಗು. ಲೋಕದಲ್ಲಿ ಯಾವ ವಸ್ತುವನ್ನು ಆಹಾರಮಾಡಿಕೊಂಡಿರುವರೋ ಆ ವಸ್ತುವನ್ನೇ ದೇವತಾರ್ಪಣಮಾಡಿದರೆ ಅದರಿಂದಲೇ ದೇವತೆಗಳಿಗೆ ತೃಪ್ತಿಯಾಗುವುದೆಂಬ ಧರ್ಮಶಾಸ್ತ್ರವುಂಟು" ಎಂದು ನುಡಿದನು. ಅಲ್ಲಿಂದ ತಿರುಗಿ ಚಿತ್ರಕೂಟ ಪರ್ವತದ ತಪ್ಪಲಿನಲ್ಲಿದ್ದ ಪರ್ಣಶಾಲೆಗೆ ಹೋಗಿ ಭರತ ಲಕ್ಷ್ಮಣ ಶತ್ರುಘ್ನರನ್ನು ತಬ್ಬಿಕೊಂಡು ರೋದನಮಾಡುತ್ತಿದ್ದನು. ಅವರನ್ನು ಕಂಡು ಸೀತಾದೇವಿಯೂ ಅಳುತ್ತಿದ್ದಳು.

ಈ ರೀತಿಯ ರೋದನದ ಕೋಲಾಹಲಧ್ವನಿಯನ್ನು ಕೇಳಿ ದೂರದಲ್ಲಿದ್ದ ಭರತನ ಸೇನೆಯು ಭರತನು ಶ್ರೀರಾಮನನ್ನು ಕಂಡನೆಂದು ನಿಶ್ಚಯಿಸಿ ಧ್ವನಿಯು ಹುಟ್ಟಿದ ಸ್ಥಳವನ್ನು ವಿಚಾರಿಸಿ ಕುದುರೆ ಆನೆ ರಥ ಮೊದಲಾದ ವಾಹನಗಳನ್ನೇರಿಕೊಂಡೂ ಕಾಲುನಡೆಯಿಂದಲೂ ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನನ್ನು ನೋಡಬೇಕೆಂದು ಅತಿವೇಗದಿಂದ ಬರುತ್ತಿದ್ದರು. ಆ ರಥಗಳ ಚೀತ್ಕಾರದಿಂದಲೂ ಕುದುರೆಗಳ ಹೇಷಿತಧ್ವನಿಗಳಿಂದಲೂ ಖುರಪುಟದ ತಾಡನಗಳಿಂದಲೂ ಆನೆಗಳ ಬೃಂಹಿತಧ್ವನಿಗಳಿಂದಲೂ ಪಟುಭಟರಾದ ಕಾಲಾಳುಗಳ ಆರ್ಭಟಧ್ವನಿಗಳಿಂದಲೂ ಪರಿಪೂರ್ಣವಾಗಿ ಭೂಮಂಡಲವು, ವರ್ಷಾಕಾಲದಲ್ಲಿ ಮೇಘಗಳಿಂದಲೂ ಗುಡುಗುಗಳ ಗರ್ಜನೆಗಳಿಂದಲೂ ಒಪ್ಪುವ ಆಕಾಶಮಂಡಲದಂತೆ ಒಪ್ಪುತ್ತಿತ್ತು. ಕಾಡಾನೆಗಳು ಆ ಸೇನೆಯಲ್ಲಿದ್ದ ಆನೆಗಳ ಮದಗಂಧವನ್ನು ಸಹಿಸಲಾರದೆ ನಾನಾದಿಕ್ಕುಗಳಿಗೂ ದೆಸೆಗೆಟ್ಟು ಓಡುತ್ತಿದ್ದವು. ಆ ಅರಣ್ಯದಲ್ಲಿದ್ದ ಸಿಂಹ ಹುಲಿ ಮೊದಲಾದ ಮೃಗಗಳು ದೆಸೆಗೆಟ್ಟು ಓಡುತ್ತಿದ್ದವು. ಚಕ್ರವಾಕ ಹಂಸ ಕೊಳರ್ವಕ್ಕಿ ಕೋಗಿಲೆ ಮೊದಲಾದ ಪಕ್ಷಿಗಳು ಹಾರಿ ದಿಕ್ಕುದಿಕ್ಕುಗಳಿಗೂ ಓಡುತ್ತಿರಲು ಆ ಪಕ್ಷಿಗಳಿಂದ ಇಟ್ಟಣಿಸಲ್ಪಟ್ಟ ಆಕಾಶವೂ ಚಿತ್ರಕೂಟಪರ್ವತದ ವನವೂ ಅತಿಮನೋಹರವಾಗಿ ಒಪ್ಪಿದವು.

ಈ ಪ್ರಕಾರದಲ್ಲಿ ಆ ಸೇನೆಯು ಹೋಗಿ ನಿರ್ಮಲಸ್ವರೂಪನೂ ದಯಾಳುವೂ ಪುರುಷೋತ್ತಮನೂ ಆದ ಶ್ರೀರಾಮನು ದರ್ಭಾಸನದ ಮೇಲೆ ಕುಳಿತಿರುವುದನ್ನು ಕಂಡು ಅಭಿವಂದಿಸಿ ಕೈಕೇಯೀದೇವಿಯನ್ನೂ ಮಂಥರೆಯನ್ನೂ ನಿಂದಿಸುತ್ತ ಆತನ ಸಮೀಪಕ್ಕೆ ಹೋಗಿ ಕಣ್ಣೀರು ಬಿಡುತ್ತಿದ್ದರು. ಶ್ರೀರಾಮನು ಆ ಜನಗಳನ್ನು ಕಂಡು ಮರುಗುತ್ತ ಅತ್ಯಂತ ಕೃಪಾದೃಷ್ಟಿಯಿಂದ ತನ್ನ ಮಕ್ಕಳನ್ನು ಕಂಡಂತೆ ಆ ಪ್ರಜೆಗಳಲ್ಲಿ ಕೆಲವರನ್ನು ತಬ್ಬಿಕೊಂಡು ವಯೋವೃದ್ಧರಾಗಿ ಪೂಜ್ಯರಾದ ಬ್ರಾಹ್ಮಣರಿಗೆ ಅಭಿವಂದಿಸಿ ಬಂದಜನರನ್ನು ಸ್ವಾಗತವಚನಗಳಿಂದ ಸಂಮಾನಿಸಿ ಕುಶಲಪ್ರಶ್ನೆಯನ್ನು ಕೇಳಿದನು.



೧೦೩ ನೆ ಯ ಅ ಧ್ಯಾ ಯ

## ಕೌ ಸ ಲ್ಯಾ ದೇ ವಿ ಮೊ ದ ಲಾ ದ ವ ರ ವಿ ಲಾ ಪ

ಆಮೇಲೆ ವಸಿಷ್ಠಮುನೀಶ್ವರನು ಕೌಸಲ್ಯಾದೇವಿ ಮೊದಲಾದ ದಶರಥರಾಯನ ಸ್ತ್ರೀಯರನ್ನು ಮುಂದಿಟ್ಟುಕೊಂಡು ಶ್ರೀರಾಮನನ್ನು ನೋಡಬೇಕೆಂದು ಅತ್ಯಂತಪ್ರೀತಿಯುಳ್ಳವನಾಗಿ ಮೆಲ್ಲಮೆಲ್ಲನೆ ಮಂದಾಕಿನೀತೀರಕ್ಕೆ ಬಂದನು. ಅಲ್ಲಿ ರಾಮಲಕ್ಷ್ಮಣರು ಸ್ನಾನಮಾಡುವ ಘಟ್ಟವನ್ನು ಕಂಡು ಕೌಸಲ್ಯಾದೇವಿಯು ಕಣ್ಣೀರು ತುಂಬಿ ಮುಖಕಾಂತಿಗುಂದಿ ಸುಮಿತ್ರಾದೇವಿಯನ್ನೂ ಮಿಕ್ಕ ರಾಜಸ್ತ್ರೀಯರನ್ನೂ ಕುರಿತು " ಎಲೇ ಸುಮಿತ್ರಾದೇವಿ, ರಾಮಲಕ್ಷ್ಮಣರೂ ಸೀತಾದೇವಿಯೂ ಇಂಥ ಘೋರಾರಣ್ಯದಲ್ಲಿ ಇಂಥ ತೀರ್ಥಸೇವೆಯನ್ನು ಮಾಡಿಕೊಂಡು ಅನಾಥರಾಗಿರುವ ಹಾಗಾಯಿತು ! ನಿನ್ನ ಕುಮಾರನಾದ ಲಕ್ಷ್ಮಣನು ಅಣ್ಣನಾದ ಶ್ರೀರಾಮನಿಗೆ ಇಲ್ಲಿಂದ ತೀರ್ಥವನ್ನು ತೆಗೆದುಕೊಂಡು ಹೋಗುವನು. ಅಕಟಕಟಾ ! ರಾಜಪುತ್ರನಾದ ಲಕ್ಷ್ಮಣನು ಉದಕವನ್ನು ಹೊರುವಂಥ ಹೀನಸ್ಥಿತಿಗೆ ಒಳಗಾದನು ! ಹಾಗಾದರೂ ತನ್ನ ಜ್ಯೇಷ್ಠಭ್ರಾತೃವಿನ ಸೇವೆಯಿಂದ ನೀರುಹೊರುವುದು ಲಕ್ಷ್ಮಣನಿಗೆ ಹೀನಕೃತ್ಯವಾಗದೆ ಪೂಜ್ಯವಾದದ್ದಾಗಿಯೇ ಇರುವುದು ! ನಿನ್ನ ಕುಮಾರನಾದ ಲಕ್ಷ್ಮಣನು ಒಂದು ದಿವಸವಾದರೂ ಇಂಥ ಪ್ರಯಾಸವಾದ ಕೆಲಸವನ್ನು ಮಾಡಿದವನಲ್ಲ. ಇನ್ನು ಇಂಥ ಹೀನಕೃತ್ಯವನ್ನು ಬಿಡಲಿ ! ಸುಮಿತ್ರಾದೇವಿ, ಭರತನು ಬಂದು ರಾಮನನ್ನು ಕಂಡು ದಶರಥರಾಯನ ನಿರ್ಯಾಣವಾರ್ತೆಯನ್ನು ಹೇಳಲು ಶ್ರೀರಾಮನು ಈ ನದೀತೀರಕ್ಕೆ ಬಂದು ಸ್ನಾನವನ್ನು ಮಾಡಿ ತಿಲತರ್ಪಣವನ್ನು ಕೊಟ್ಟು ದರ್ಭೆಯಮೇಲಿಟ್ಟ ಇಂಗುದೀಪಿಣ್ಯಾಕದ ಪಾರ್ವಣಗಳನ್ನು ನೋಡು ! ಈ ಕಾಡಿನಲ್ಲಿರುವ ಮಂದಾಕಿನೀತೀರದಲ್ಲಿ ಶ್ರೀರಾಮನು ತನ್ನ ತಂದೆಯನ್ನು ಕುರಿತು ದರ್ಭೆಯ ಮೇಲಿಟ್ಟ ಪಿಂಡಗಳನ್ನು ಎಲ್ಲರೂ ನೋಡಿ ! ಸಮಸ್ತ ಭೋಗಗಳನ್ನನುಭವಿಸಿದ ದಶರಥರಾಯನಿಗೆ ಈ ಪಿಂಡಗಳು ಭೋಗಯೋಗ್ಯವೆ ? ಸಮುದ್ರಪರ್ಯಂತವಾದ ಭೂಮಿಯನ್ನಾಳಿದ ದಶರಥರಾಯನು ಈ ಇಂಗುದೀಪಿಣ್ಯಾಕದ ಪಿಂಡಗಳನ್ನು ಹೇಗೆ ಭುಂಜಿಸುವನು ! ಅಕಟಕಟಾ ! ನಾವು ಇಂಥ ದುಃಖವನ್ನು ನೋಡುವುದಕ್ಕೆ ಗುರಿಯಾದೆವು. ಶ್ರೀರಾಮನು ದಶರಥರಾಯನನ್ನು ಕುರಿತು ಮಂದಾಕಿನೀತೀರದಲ್ಲಿ ದರ್ಭೆಗಳಮೇಲೆ ಇಟ್ಟಿರುವ ಈ ಇಂಗುದೀಪಿಣ್ಯಾಕದ ಪಿಂಡಗಳನ್ನು ನೋಡಿ ನಮ್ಮ ಎದೆಗಳು ಸಾವಿರ ಹೋಳಾಗಿ ಒಡೆಯಲಿಲ್ಲ ! ಲೌಕಿಕಬುದ್ಧಿಯಿಂದ ನೋಡಿದರೆ ಇದು ತುಚ್ಛವಾಗಿ ಇಂಗುದೀಪಿಣ್ಯಾಕವೆಂದು ಕಾಣಿಸುತ್ತಿದೆ. ಲೋಕದಲ್ಲಿ ಮನುಷ್ಯನು ತಾನು ಯಾವ ವಸ್ತುವನ್ನು ಆಹಾರಮಾಡಿಕೊಂಡಿರುವನೋ ಆ ವಸ್ತುವನ್ನೇ ದೇವತಾರ್ಪಿತ ಮಾಡಿದರೆ ದೇವತೆಗಳಿಗೂ ಆ ವಸ್ತುವೇ ಆಹಾರವಾಗುವುದೆಂಬ ಒಂದು ಸ್ಮೃತಿವಾಕ್ಯವುಂಟು ! " ಎಂದು ಹಂಬಲಿಸುತ್ತಿದ್ದಳು.

ಬಳಿಕ ಆಕೆಯ ಸವತಿಯರಾದ ರಾಜಸ್ತ್ರೀಯರು ಕೌಸಲ್ಯಾದೇವಿಯನ್ನು ಸಂತವಿಸಿ ಶ್ರೀರಾಮನ ಆಶ್ರಮಕ್ಕೆ ಹೋಗಿ ಸ್ವರ್ಗಲೋಕದಿಂದ ಬಂದ ಸಾಕ್ಷಾತ್ ದೇವೇಂದ್ರನೋ ಎಂಬಂತೆ ಒಪ್ಪುತ್ತಾ ಸಮಸ್ತ ಭೋಗಗಳನ್ನೂ ಬಿಟ್ಟು ಋಷಿಧರ್ಮವನ್ನು ಕೈಕೊಂಡು ವಿರಕ್ತನಾಗಿ ದರ್ಭಾಸನದಮೇಲೆ ಕುಳಿತಿದ್ದ ಶ್ರೀರಾಮನನ್ನು ಕಂಡು ಅತ್ಯಂತ ದುಃಖಾಕ್ರಾಂತರಾಗಿ ರೋದನಮಾಡುತ್ತಿದ್ದರು. ಶ್ರೀರಾಮನು ಕೂಡಲೆ ಎದ್ದು ಕೌಸಲ್ಯಾದೇವಿ ಮೊದಲಾದ ತಾಯಂದಿರಿಗೆ ನಮಸ್ಕಾರವನ್ನು ಮಾಡಿ

ಕಣ್ಣೀರು ಬಿಡುತ್ತಿರಲು ಕೌಸಲ್ಯಾದೇವಿ ಮೊದಲಾದವರು ಕೋಮಲವಾದ ಬೆರಳುಗಳುಳ್ಳ ಅತಿ ಮನೋಹರವಾದ ಅಂಗೈಗಳಿಂದ ಆತನ ಕಣ್ಣೀರನ್ನು ಒರೆಸಿ ಆತನ ಶರೀರದ ಮೇಲಿದ್ದ ಕೆಂಧೂಳಿಯನ್ನೂ ತೊಡೆದು ಸಂತವಿಸುತ್ತಿದ್ದರು. ಆಮೇಲೆ ಲಕ್ಷ್ಮಣನು ದುಃಖಾಕ್ರಾಂತನಾಗಿ ಅವರೆಲ್ಲರಿಗೂ ಯಥಾಕ್ರಮವಾಗಿ ನಮಸ್ಕಾರಮಾಡಲು ಅವರು ಶ್ರೀರಾಮನ ಕಣ್ಣೀರನ್ನು ತೊಡೆದು ಹೇಗೆ ಸಂತವಿಸಿದರೋ ಆ ರೀತಿಯಲ್ಲಿ ಲಕ್ಷ್ಮಣನನ್ನೂ ಸಂತವಿಸಿದರು. ಆಮೇಲೆ ಸೀತಾದೇವಿಯು ಅತ್ಯಂತ ದುಃಖಾಕ್ರಾಂತಳಾಗಿ ಕೌಸಲ್ಯಾದೇವಿ ಮೊದಲಾದ ತನ್ನ ಅತ್ತೆಯರಿಗೆ ನಮಸ್ಕಾರಮಾಡಿ ಕಣ್ಣೀರು ಬಿಡುತ್ತ ಕೌಸಲ್ಯಾದೇವಿಯ ಸಮೀಪದಲ್ಲಿ ನಿಂತಳು. ಆ ದೇವಿಯು ತನ್ನ ಮಗಳನ್ನು ತಬ್ಬಿಕೊಂಡಂತೆ ಆ ದೇವಿಯನ್ನು ಹಿಡಿದಪ್ಪಿಕೊಂಡು ಕಣ್ಣೀರು ಬಿಡುತ್ತ “ಅಕಟಕಟಾ! ಸೀತಾದೇವಿಯು ಜನಕಚಕ್ರವರ್ತಿಯ ಮಗಳು. ಇಕ್ಷ್ವಾಕುಮಹಾರಾಜನ ಸೊಸೆ. ಲೋಕನಾಯಕನಾದ ಶ್ರೀರಾಮನ ಪಟ್ಟದ ರಾಣಿ. ಇಂಥವಳು ಈ ವನದಲ್ಲಿ ಈ ರೀತಿ ದುಃಖಕ್ಕೊಳಗಾಗಬಹುದೆ! ಸೀತಾದೇವಿ, ನಿನ್ನ ಮುಖವು ಬಿಸಿಲಿನಲ್ಲಿ ಒಣಗಿದ ತಾವರೆ ಹೂವಿನಂತೆಯೂ ಕಂದಿದ ಕನ್ನೈದಿಲೆ ಪುಷ್ಪದಂತೆಯೂ ಧೂಳುಮುಚ್ಚಿದ ಅಪರಂಜಿಯ ತಗಡಿನಂತೆಯೂ ಮೇಘಸಮೂಹ ಮುಸುಕಿದ ಚಂದ್ರಮಂಡಲದಂತೆಯೂ ಕಾಂತಿಗುಂದಿದೆ. ನಿನ್ನ ಮುಖವು ಮೊದಲೇ ಶೋಕದಿಂದ ಖಿನ್ನವಾದ ನನ್ನ ಮನಸ್ಸನ್ನು ವೆಗ್ಗಳವಾಗಿ ನೋಯಿಸುತ್ತಿದೆ!” ಎಂದು ನುಡಿದಳು.

ಬಳಿಕ ದೇವೇಂದ್ರನು ತನ್ನ ಗುರುವಾದ ಬೃಹಸ್ಪತಿಗೆ ಅಭಿವಂದಿಸುವಂತೆ ಶ್ರೀರಾಮನು ತನ್ನ ಗುರುವಾದ ವಸಿಷ್ಠಮುನೀಶ್ವರನಿಗೆ ಅಭಿವಂದಿಸಿ ಅತಿತೇಜಸ್ವಿಯಾದ ಆ ಮುನಿಯೊಡನೆ ದರ್ಭಾಸನದ ಮೇಲೆ ಕುಳಿತನು. ಅನಂತರ ಮಂತ್ರಿಗಳೂ ನಗರದ ಮುಖಂಡರುಗಳೂ ಸೇನಾಪತಿಗಳೂ ಮತ್ತು ಧರ್ಮವನ್ನರಿತ ಜನರೂ ಸುತ್ತ ನೆರೆದಿರಲು ಧರ್ಮಾತ್ಮನಾದ ಭರತನು ಆತನ ಸಮೀಪದಲ್ಲಿ ಕುಳಿತನು. ಬ್ರಹ್ಮದೇವನ ಸಂಮುಖದಲ್ಲಿ ದೇವೇಂದ್ರನು ಕೈಮುಗಿದುಕೊಂಡಿರುವಂತೆ ಮಹಾತ್ಮನಾದ ಅತಿತೇಜಸ್ವಿಯಾದ ಶ್ರೀರಾಮನ ಸಂಮುಖದಲ್ಲಿ ಕೈಮುಗಿದುಕೊಂಡಿದ್ದ ಭರತನನ್ನು ನೋಡಿ ಸಮಸ್ತ ಜನರೂ ಆತನು ಯಾವ ಕಾರ್ಯವನ್ನು ಬಿನ್ನವಿಸುವನೋ ಎಂದು ನೋಡುತ್ತಿದ್ದರು. ಈ ಕ್ರಮದಲ್ಲಿ ಸಮಸ್ತ ಪ್ರಧಾನರಿಂದಲೂ ಸೇನಾಪತಿಗಳಿಂದಲೂ ಸುತ್ತುವರಿಯಲ್ಪಟ್ಟ ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರು ಯಾಗಮಂಟಪದಲ್ಲಿ ಋತ್ವಿಕ್ಕುಗಳಿಂದ ಸುತ್ತುವರಿಯಲ್ಪಟ್ಟ ಯಜ್ಞೇಶ್ವರನ ಮರ್ಯಾದೆಯಲ್ಲಿ ಒಪ್ಪುತ್ತಿದ್ದರು.



## ೧೦೪ನೆಯ ಅಧ್ಯಾಯ

## ಶ್ರೀರಾಮನು ರಾಜ್ಯಭಾರವನ್ನು ಒಪ್ಪದಿದ್ದುದು

ಶ್ರೀರಾಮನು ಗುರುಭಕ್ತನಾದ ಭರತನನ್ನು ಕುಶಲಪ್ರಶ್ನೆಯನ್ನು ಕೇಳಿದ ಬಳಿಕ ಲಕ್ಷ್ಮಣಸಮೇತನಾಗಿ ಭರತನನ್ನು ಕುರಿತು “ಭರತನೆ, ನೀನು ನಾರುಬಟ್ಟೆಗಳನ್ನುಟ್ಟು ಜಡೆಗಳನ್ನು ಧರಿಸಿ ಋಷಿಗಳಿರುವ ವನಕ್ಕೆ ಏನು ಕಾರಣವಾಗಿ ಬಂದೆ? ನೀನು ಬಂದ ಪ್ರಯೋಜನವನ್ನು ಹೇಳು. ರಾಜ್ಯವನ್ನು ಬಿಟ್ಟು ನೀನಿಲ್ಲಿಗೆ ಬರುವುದಕ್ಕೆ ಕಾರಣವೇನು” ಎಂದು ಪ್ರಶ್ನಿಸಿದನು.

ಭರತನು ಕೈಮುಗಿದುಕೊಂಡು "ಶ್ರೀರಾಮ, ನಮ್ಮ ತಂದೆಯಾದ ದಶರಥರಾಯನು ಕೈಕೇಯೀದೇವಿಯ ಮಾತಿಗೆ ಮರುಳಾಗಿ ಮಾಡಬಾರದ ಕೃತ್ಯವನ್ನು ಮಾಡಿ ನಿನ್ನನ್ನು ವನಕ್ಕೆ ಹೊರಡಿಸಿ ಪುತ್ರಶೋಕದಿಂದ ಶರೀರವನ್ನು ಧರಿಸಲಾರದೆ ನಮ್ಮೆಲ್ಲರನ್ನೂ ಬಿಟ್ಟು ಸ್ವರ್ಗಸ್ಥನಾದನು. ನನ್ನ ತಾಯಿಯಾದ ಕೈಕೇಯೀದೇವಿಯು ನನಗೆ ಅತ್ಯಂತ ಅಪಕೀರ್ತಿಯನ್ನುಂಟುಮಾಡುವ ಪಾಪವನ್ನು ಮಾಡಿ ಆ ಪಾಪಫಲದಿಂದ ರಾಜ್ಯಾಧಿಪತ್ಯವನ್ನು ಪಡೆಯದೆ ವಿಧವೆಯಾಗಿ ಅತ್ಯಂತವಾದ ಶೋಕಕ್ಕೊಳಗಾದಳು. ನೀನು ನಿನ್ನ ಭೃತ್ಯನಾದ ನನ್ನಲ್ಲಿ ಕೃಪೆಮಾಡು. ದೇವೇಂದ್ರನು ಸ್ವರ್ಗಲೋಕದಲ್ಲಿ ಸ್ವರ್ಗಾಧಿಪತ್ಯವನ್ನು ಪಡೆದಂತೆ ನೀನು ಈಗಲೇ ಪಟ್ಟಾಭಿಷೇಕ ಮಾಡಿಕೊ. ಸಮಸ್ತ ಪ್ರಧಾನಿಗಳೂ ಬಂದಿದ್ದಾರೆ. ವಿಧವೆಯರಾದ ನಮ್ಮ ತಾಯಂದಿರೂ ಬಂದಿದ್ದಾರೆ. ನೀನು ಯಾವ ಪ್ರಕಾರದಲ್ಲಾದರೂ ರಾಜ್ಯಭಾರವನ್ನು ವಹಿಸಿ ನಮ್ಮನ್ನು ರಕ್ಷಿಸು. ನಾನು ಇಷ್ಟುಪರ್ಯಂತ ಹೇಳಿದ ಮಾತುಗಳನ್ನು ಮನಸ್ಸಿಗೆ ತಂದುಕೊಂಡು ರಾಜ್ಯಭಾರವನ್ನು ವಹಿಸಿ ನಿನ್ನನ್ನು ಕಾಣದೆ ದುಃಖಾತಿಶಯದಿಂದ ಚೈತನ್ಯಗುಂದಿರುವ ಮಿತ್ರರನ್ನು ಪರಿಪಾಲಿಸು. ಒಡೆಯನಿಲ್ಲದ ರಾಜ್ಯಕ್ಕೆ ಒಡೆಯನಾಗು. ಸಮಸ್ತ ಭೂಮಂಡಲವು ಚಂದ್ರಮಂಡಲದಿಂದೊಪ್ಪುವ ಶರತ್ಕಾಲದ ರಾತ್ರಿಯಂತೆ ನಾಥನುಳ್ಳದ್ದಾಗಿ ಬೆಳಗಲಿ. ಉತ್ತಮವಾದ ರಾಜ್ಯವನ್ನು ನೀನು ವಹಿಸ ಬೇಕೆಂದು ಈ ಪ್ರಧಾನಿಗಳೆಲ್ಲರೂ ನಾನೂ ನಿನ್ನ ಪಾದಗಳಿಗೆ ನಮಸ್ಕಾರವನ್ನು ಮಾಡಿ ಬೇಡಿಕೊಳ್ಳು ತ್ತೇವೆ. ನಿನ್ನ ತಮ್ಮನಾಗಿ ಶಿಷ್ಯನಾಗಿ ಊಳಿಗದವನಾದ ನನ್ನ ಮಾತನ್ನು ಅಂಗೀಕರಿಸಿ ನನ್ನಮೇಲೆ ಕೃಪೆಯನ್ನುಮಾಡು. ನಮ್ಮ ಪಿತಾಮಹರ ಕಾಲದಿಂದ ಬಂದ ಸಮಸ್ತ ಪ್ರಧಾನಿಸಮೂಹಸಹಿತವಾದ ಪೂಜ್ಯವಾದ ಭೂಮಂಡಲವನ್ನು ನೀನು ಉಪೇಕ್ಷೆ ಮಾಡಸಲ್ಲದು" ಎಂದು ಹೇಳಿ ಕಣ್ಣೀರು ತುಂಬಿ ಕೊಂಡು ಆತನ ಪಾದಗಳಿಗೆ ನಮಸ್ಕಾರವನ್ನು ಮಾಡಿ ನಿಟ್ಟುಸಿರುಬಿಡುತ್ತ ದುಃಖಪಡುತ್ತಿದ್ದನು.

ಶ್ರೀರಾಮನು ಆತನನ್ನು ಹಿಡಿದೆತ್ತಿ "ಭರತ, ನೀನು ಸತ್ಕುಲಪ್ರಸೂತನು. ಅತಿತೇಜಸ್ವಿ ಯಾದವನು. ಸತ್ಯಸಂಧನು. ನಿನ್ನಂಥ ಶುದ್ಧಾತ್ಮರು ರಾಜ್ಯಾಧಿಪತ್ಯವನ್ನು ಕುರಿತು ಪಾಪವನ್ನು ಮಾಡುವರೆ! ನಿನ್ನಲ್ಲಿ ಒಂದು ಸಾಸಿವೆಕಾಳಷ್ಟು ಪಾಪವನ್ನಾದರೂ ಕಾಣೆನು. ನೀನು ಅಜ್ಞಾನದಿಂದ ನಿನ್ನ ತಾಯಿಯಾದ ಕೈಕೇಯೀದೇವಿಯನ್ನು ನಿಂದಿಸಬೇಡ. ಲೋಕದಲ್ಲಿ ಹಿರಿಯರಿಗೆ ತಮ್ಮ ಸ್ತ್ರೀಯಲ್ಲಿಯೂ ಪುತ್ರರಲ್ಲಿಯೂ ಶಿಷ್ಯರಲ್ಲಿಯೂ ಸಂಪೂರ್ಣ ಅಧಿಕಾರವುಂಟು. ಅವರು ಇಷ್ಟ ಬಂದಂತೆ ಮಾಡಬಹುದು. ಭರತ, ದಶರಥರಾಯನ ವಿಷಯದಲ್ಲಿ, ಲೋಕದಲ್ಲಿ ಹೆಂಡತಿ ಮಕ್ಕಳು ಹೇಗೆ ಇರಬೇಕೆಂದು ಸಾಧುಗಳು ತಿಳಿಸಿರುವರೋ ಹಾಗೆಯೇ ನಾವು ಇದ್ದೇವೆ, ಆದಕಾರಣ ನೀನು ಯಾರನ್ನೂ ಜರಿಯಸಲ್ಲದು. ನಮ್ಮ ತಂದೆಯಾದ ದಶರಥರಾಯನು ನನ್ನನ್ನು ನಾರುಬಟ್ಟೆ ಕೃಷ್ಣಾಜಿನಗಳನ್ನು ಹೊದ್ದು ಜಡೆಗಳನ್ನು ಧರಿಸಿಕೊಂಡು ವನವಾಸವನ್ನು ಮಾಡಲು ಕಟ್ಟುಮಾಡಿದನು. ತಂದೆಯಂತೆ ತಾಯಿಯೂ ನನಗೆ ಪೂಜ್ಯಳು. ತಾಯಿತಂದೆಗಳು ನನ್ನನ್ನು ವನವಾಸವನ್ನು ಮಾಡಹೇಳಿ ವನಕ್ಕೆ ಕಳುಹಿಸಿದ ಮೇಲೆ ನಾನು ವನವಾಸವನ್ನು ಬಿಟ್ಟು ರಾಜ್ಯಾಧಿ ಪತ್ಯವನ್ನು ಹೇಗೆ ಮಾಡುವೆನು? ನಿನಗೆ ಅಯೋಧ್ಯಾಪಟ್ಟಣದಲ್ಲಿ ರಾಜ್ಯಪರಿಪಾಲನ ಮಾಡಿ ಕೊಂಡಿರುವುದೇ ಧರ್ಮ. ನನಗೆ ದಂಡಕಾರಣ್ಯದಲ್ಲಿ ನಾರುಬಟ್ಟೆಗಳನ್ನುಟ್ಟು ಜಡೆಗಳನ್ನು ಧರಿಸಿ ಕಂದಮೂಲ ಫಲಾಹಾರಗಳನ್ನು ಮಾಡಿಕೊಂಡು ವಾನಪ್ರಸ್ಥಾಶ್ರಮದಲ್ಲಿರುವುದೇ ಧರ್ಮ. ಈ ಕ್ರಮದಲ್ಲಿ ದಶರಥರಾಯನು ನಮ್ಮಿಬ್ಬರಿಗೂ ಕಾರ್ಯವನ್ನು ನಿಗದಿಮಾಡಿ ಸ್ವರ್ಗಸ್ಥನಾದನು. ನಮಗೆ ದೇವೇಂದ್ರನಿಗೆ ಸಮನಾದ ಮಹಾತ್ಮನಾದ ದಶರಥರಾಯನ ಮಾತೇ ಪ್ರಮಾಣವಲ್ಲದೆ ಮತ್ತೊಂದಿಲ್ಲ. ಆ ರಾಜನು ಕೊಟ್ಟ ರಾಜ್ಯವನ್ನು ನೀನು ಅನುಭವಿಸು. ಹದಿನಾಲ್ಕು ವರುಷಗಳ ಪರ್ಯಂತ ದಂಡ

ಕಾರಣ್ಯದಲ್ಲಿ ವನವಾಸವನ್ನು ಮಾಡಬೇಕೆಂದು ಆಜ್ಞಾಪಿಸಿದ ನನ್ನ ಇಷ್ಟದೇವತಾಸ್ವರೂಪನಾದ ದಶರಥಮಹಾರಾಜನು ಹೇಳಿದಂತೆ ನಾನು ಇರುವೆನಲ್ಲದೆ ಸಮಸ್ತ ಲೋಕಾಧಿಪತ್ಯವನ್ನಾದರೂ ಬಯಸುವವನಲ್ಲ" ಎಂದು ನುಡಿದನು.

---

೧೦೫ ನೆಯ ಅಧ್ಯಾಯ

## ಶ್ರೀರಾಮನು ಭರತನಿಗೆ ತತ್ತ್ವವಿಚಾರವನ್ನು ತಿಳಿಸಿದ್ದು

ಆಮೇಲೆ ಸಾಯಂಕಾಲವು ಪ್ರಾಪ್ತವಾಗಲು ಆ ರಾತ್ರಿಯನ್ನು ಅತ್ಯಂತ ಪ್ರಯಾಸದಿಂದ ಕಳೆದು ಮಾರನೆಯ ಪ್ರಾತಃಕಾಲದಲ್ಲೆದ್ದು ರಾಮಲಕ್ಷ್ಮಣ ಭರತಶತ್ರುಘ್ನರು ಮಂದಾಕಿನೀತೀರಕ್ಕೆ ಹೋಗಿ ಸ್ನಾನ ಸಂಧ್ಯಾವಂದನ ಜಪ ಹೋಮ ದೇವತಾರ್ಚನೆ ಮೊದಲಾದ ನಿತ್ಯಕರ್ಮಗಳನ್ನು ತೀರಿಸಿಕೊಂಡು ಆಶ್ರಮಕ್ಕೆ ಬಂದು ಚಿಂತಾಕ್ರಾಂತರಾಗಿ ಕುಳಿತಿದ್ದರು. ಆಗ ಭರತನು ಸಮಸ್ತ ಪ್ರಧಾನಿಗಳೂ ಕೇಳುವಹಾಗೆ ಶ್ರೀರಾಮನನ್ನು ಕುರಿತು "ಎಲೈ ಸ್ವಾಮಿಯೆ, ನನ್ನ ತಾಯಿಯಾದ ಕೈಕೇಯಿದೇವಿಗೆ ಒಡಂಬಡಿಕೆಯನ್ನು ಹೇಳಿ ಸಂತವಿಸಿರುವೆನು. ನೀನು ನನ್ನ ವಶದಲ್ಲಿರುವ ರಾಜ್ಯವನ್ನು ಪರಿಪಾಲಿಸು. ವರ್ಷಾಕಾಲದಲ್ಲಿ ಹಳ್ಳಗಳು ಉಕ್ಕಿತುಂಬುವ ಪ್ರವಾಹದ ವೇಗದಿಂದ ಒಡೆಯುವ ಅಣೆಯನ್ನು ತಡೆಯುವುದಕ್ಕೆ ಹೇಗೆ ಮನುಷ್ಯರು ಸಮರ್ಥರಲ್ಲವೋ, ಹಾಗೆ ದಶರಥರಾಯನು ಸ್ವರ್ಗಸ್ಥನಾದಮೇಲೆ ನೀನು ಹೊರತಾಗಿ ರಾಜ್ಯಭಾರವನ್ನು ಹೊರುವವರಾರು ? ಉತ್ತಮಾಶ್ವದ ನಡಿಗೆಯನ್ನು ಅನುಕರಿಸಲು ಗಾರ್ದಭಕ್ಕೆ ಶಕ್ತಿಯಿಲ್ಲದಂತೆಯೂ ಗರುತ್ಮಂತನ ಗಮನವನ್ನು ಅನುಸರಿಸಲು ಮಿಕ್ಕ ಪಕ್ಷಿಗಳಿಗೆ ಶಕ್ತಿಯಿಲ್ಲದಂತೆಯೂ ನಿನ್ನಿಂದ ವಹಿಸಲು ಯೋಗ್ಯವಾದ ರಾಜ್ಯಭಾರವನ್ನು ವಹಿಸುವುದಕ್ಕೆ ನನಗೆ ಸಾಮರ್ಥ್ಯವಿಲ್ಲ. ಲೋಕದಲ್ಲಿ ಯಾವ ಪುರುಷನಿಂದ ಬಹುಮಂದಿ ಜೀವಿಸಿಕೊಂಡಿರುವರೋ ಆತನ ಬದುಕೇ ಬದುಕು. ಪರಾಧೀನವಾಗಿ ಬದುಕುವವನ ಜೀವನವು ವ್ಯರ್ಥಜೀವನ. ಒಬ್ಬ ಪುರುಷನು ಬೀಜವನ್ನು ಬಿತ್ತಿ ಸಸಿಯಾಗಿ ಮಾಡಿ ನೀರು ಹುಯ್ದು ಸಾಕಿ ಅದು ತಳಿರುಗಳೂ ದೊಡ್ಡ ಕೊಂಬೆಗಳೂ ಉಳ್ಳ ಮರವಾಗಿ ಬೆಳೆದು ಪುಷ್ಪಗಳಿಂದ ತುಂಬಿದರೂ ಮುಂದೆ ಫಲವನ್ನು ಬಿಡದಿದ್ದರೆ ಸಸಿಯನ್ನು ನೆಟ್ಟವನಿಗೆ ಹೇಗೆ ಸಂತೋಷವಿಲ್ಲವೋ ಹಾಗೆ ನೀನು ರಾಜನಾಗದಿದ್ದರೆ ನಮಗೆ ಸಂತೋಷವಿಲ್ಲ. ರಾಜ್ಯಭಾರವನ್ನು ವಹಿಸುವುದಕ್ಕೆ ನನ್ನ ಕೈಯಲ್ಲಾಗದು. ಅದಕ್ಕೆ ಕಾರಣವೇನೆಂದರೆ, ಈಗ ಸಕಲ ಪ್ರಧಾನರು ಸೇನಾನಾಯಕರು ಪುರಜನರು ಪರಿಜನರು ಮೊದಲಾದವರೆಲ್ಲರೂ ನಿನ್ನನ್ನೇ ಬಯಸುತ್ತಲಿದ್ದಾರೆ. ಅಂಧಕಾರದಲ್ಲಿ ಯಾವ ವಸ್ತುವನ್ನೂ ಕಾಣದೆ ವ್ಯಥೆಪಡುತ್ತಿರುವವರು ಸೂರ್ಯೋದಯವನ್ನು ಹೇಗೆ ಬಯಸುವರೋ ಆ ಬಗೆಯಲ್ಲಿ ಎಲ್ಲರೂ ನಿನ್ನ ಬರುವಿಕೆಯನ್ನೇ ಬಯಸುತ್ತಿದ್ದಾರೆ. ಅಂತಃಪುರದ ಸ್ತ್ರೀಯರೆಲ್ಲರೂ ನಿನಗೆ ರಾಜ್ಯಾಧಿಪತ್ಯವಾಗಲಾಗಿ ಸಂತೋಷದಿಂದ ಹಿಗ್ಗಲಿ" ಎಂದು ಪ್ರಾರ್ಥನೆ ಮಾಡಿದನು.

ಬಳಿಕ ಶ್ರೀರಾಮನು ದುಃಖದಿಂದ ವಿಲಾಪಿಸುತ್ತಿರುವ ಕೀರ್ತಿಸಂಪನ್ನನಾದ ಭರತನನ್ನು ಸಂತವಿಸಿ "ಭರತ, ತನ್ನಿಷ್ಟದಂತೆ ಯಾವನೂ ಯಾವುದನ್ನೂ ಮಾಡಲಾರ. ಪುರುಷನು ಅಸ್ವತಂತ್ರ. ಪುರುಷನನ್ನು ವಿಧಿಯು ಇಲ್ಲಿಂದ ಅಲ್ಲಿಗೂ ಅಲ್ಲಿಂದ ಇಲ್ಲಿಗೂ ಎಳೆಯುತ್ತದೆ. ಲೋಕದಲ್ಲಿ

ಕಾಣಿಸಿಕೊಳ್ಳುವ ವಸ್ತುಗಳೆಲ್ಲವೂ ಲಯವಾಗಿಯೇ ಮುಗಿಯುವುವು. ಉನ್ನತಸ್ಥಾನದಲ್ಲಿರುವವರೂ ಸಹ ಜಾರಿ ಕೆಳಗೆ ಬೀಳುವರು. ಕೂಡಿದ ವಸ್ತುಗಳೆಲ್ಲವೂ ಅಗಲಿಹೋಗಿಯೇ ಮುಗಿಯುವುವು ಜೀವಿಗಳೆಲ್ಲರೂ ಮರಣದಿಂದ ಸಮಾಪ್ತಿಯಾಗುವರು. ವೃಕ್ಷಗಳ ಫಲಗಳೆಲ್ಲವೂ ಪಕ್ವವಾಗಿ ಕೊಳೆತು ಬಿದ್ದು ಹೋಗುವ ಹಾಗೆ ಹುಟ್ಟಿದವನು ಮರಣಹೊಂದಲೇಬೇಕು. ಲೋಕದಲ್ಲಿ ಎಷ್ಟು ಗಟ್ಟಿಯಾಗಿ ಕಟ್ಟಿದ ಮನೆಯಾದರೂ ಕಾಲಾಂತರದಲ್ಲಿ ಜೀರ್ಣವಾಗಿ ಕೆಟ್ಟು ಹೋಗುವುದು. ಆ ರೀತಿಯಲ್ಲಿ ಮನುಷ್ಯರು ಕೆಲವು ಕಾಲದಮೇಲೆ ನರೆದೋರಿ ಮೃತ್ಯುವಶರಾಗುವರು. ಒಬ್ಬರಾದರೂ ಶಾಶ್ವತವಾಗಿ ನಿಲ್ಲುವವರಿಲ್ಲ. ಕಳೆದ ರಾತ್ರಿಯು ಬೆಳಗಾದಮೇಲೆ ತಿರುಗಲಾರದು. ಪೂರ್ಣ ಪ್ರವಾಹವುಳ್ಳ ಯಮುನಾನದಿಯು ಸಮುದ್ರಕ್ಕೆ ಹೋದ ಮೇಲೆ ತಿರುಗದು. ಲೋಕದಲ್ಲಿ ಸೂರ್ಯಪ್ರಭೆಯು ಬೇಸಿಗೆಯ ಕಾಲದಲ್ಲಿ ಉದಕವನ್ನು ದಿನದಿನಕ್ಕೆ ತಗ್ಗಿಸುವಂತೆ ಹಗಲಿರುಳೆಂಬ ಕಾಲವು ಮನುಷ್ಯರ ಆಯುಷ್ಯವನ್ನು ತಗ್ಗಿಸುತ್ತಿರುವುದು. ಈ ಕ್ರಮದಲ್ಲಿ ದಿನದಿನಕ್ಕೆ ಕ್ಷಯವಾಗುತ್ತಿರುವ ನಿನ್ನನ್ನು ಕುರಿತು ದುಃಖಪಡು. ಉಳಿದವರನ್ನು ಕುರಿತು ದುಃಖಿಸಲೇನು ಕಾರಣ? ನಿನಗೂ ದಿನದಲ್ಲಿಯೂ ಆಯುಸ್ಸು ಕಳೆಯುತ್ತಿರುವುದು. ಸಂಗಡವೇ ಮೃತ್ಯುವು ಅಟ್ಟಿಬರುತ್ತಿರುವುದು. ಆದ್ದರಿಂದ ನೀನು ನಿನ್ನನ್ನು ಅಟ್ಟಿಬರುವ ಮೃತ್ಯುವನ್ನು ಕುರಿತು ದುಃಖಪಡು. ಈ ಶರೀರವನ್ನು ಬಿಟ್ಟು ಇನ್ನೊಂದು ಶರೀರವನ್ನು ತಾಳಿದರೂ ಮೃತ್ಯುವು ಹಿಂದುಗೊಂಡು ಅಟ್ಟಿಬರುವುದಲ್ಲದೆ ತಿರುಗುವುದಿಲ್ಲ. ಲೋಕದಲ್ಲಿ ಮನುಷ್ಯರು ಮರವೆಯಿಂದ ಕೆಲವು ದಿನಗಳನ್ನು ಕಳೆದು ತಲೆಯಲ್ಲಿ ನರೆಹುಟ್ಟಿ ಕೇಶಾದಿಗಳು ಬಿಳುಪಾಗಿ ಶರೀರ ಶಿಥಿಲವಾದ ಮೇಲೆ ಮಾಡುವುದೇನೆಂದು ಚಿಂತಿಸುವರು. ಸೂರ್ಯೋದಯವಾಯಿತು---ಸೂರ್ಯಾಸ್ತಮಯವಾಯಿತು ಎಂದು ಸಂತೋಷಪಡುತ್ತಿರುವರಲ್ಲದೆ ಸೂರ್ಯನ ಉದಯಾಸ್ತಮಯಗಳಿಂದ ತಮ್ಮ ಆಯುಸ್ಸು ಕ್ಷಯವಾಗುತ್ತಿರುವ ವಿಷಯವನ್ನು ವಿಚಾರಿಸರು. ವಸಂತಋತು ಮೊದಲಾದ ಋತುಗಳನ್ನು ಕಂಡು ಸಂತೋಷಪಡುವರಲ್ಲದೆ ಆ ಋತುಗಳು ಮರಳಿ ಮರಳಿ ಬರುವುದರಿಂದ ತಮ್ಮ ಆಯುಷ್ಯವು ಕ್ಷಯವಾಗುತ್ತಿದೆಯೆ. ವೃತ್ತಾಂತವನ್ನು ತಿಳಿಯರು. ಸಮುದ್ರದಲ್ಲಿ ತೆರೆಗಳ ವೇಗದಿಂದ ಕಾಷ್ಠಗಳು ಕೂಡಿ ಸುಳಿಗಾಳಿ ಬೀಸಿದರೆ ಆ ಕಾಷ್ಠಗಳು ಒಂದಕ್ಕೊಂದು ಹೇಳದೆ ಹೋಗುವಂತೆ ತಮ್ಮ ತಮ್ಮ ಕಾಲಕರ್ಮ ಸಂಯೋಗದಿಂದ ಒಂದು ದಿಕ್ಕಿನಲ್ಲಿ ಕೂಡಿದ ಸ್ತ್ರೀಪುರುಷ ಪುತ್ರಮಿತ್ರಾದಿಗಳು ತಮ್ಮ ತಮ್ಮ ಕಾಲ ಬಂದಲ್ಲಿ ತಮ್ಮ ತಮ್ಮ ದಾರಿಗೊಂಡೇ ಹೋಗುತ್ತಿರುವರು. ಧನಸುಖಾದಿಗಳು ತಾವು ಬರುವ ಕಾಲದಲ್ಲಿ ಬಂದು, ಹೋಗುವ ಕಾಲದಲ್ಲಿ ಹೋಗುತ್ತಿರುವುವು. ಆದ್ದರಿಂದ ವಸ್ತುಲಾಭವಾಯಿತೆಂದು ಸಂತೋಷ ಪಡಸಲ್ಲದು. ವಸ್ತುಕ್ಷಯವಾಯಿತೆಂದು ದುಃಖಪಡಸಲ್ಲದು. ಲೋಕಾಂತರಕ್ಕೆ ಹೋದವರನ್ನು ತಿರುಗಿಸುವುದಕ್ಕೆ ಸಾಮರ್ಥ್ಯವಿಲ್ಲದ್ದರಿಂದ ಅವರನ್ನು ಕುರಿತು ದುಃಖಿಸುವುದಕ್ಕೆ ಕಾರಣವೇನು? ದಾರಿಯಲ್ಲಿ ಪಥಿಕನು ಮುಂದೆ ಹೋಗುವವರನ್ನು ನೋಡಿ ನಾನೂ ಬರುವೆನೆಂದು ಹೇಳಿ ಅವರನ್ನನುಸರಿಸಿ ಹೇಗೆ ಹೋಗುವನೋ ಹಾಗೆ ತಂದೆ ತಾತ ಮುತ್ತಾತರು ಹೋದ ಮರಣ ಮಾರ್ಗವನ್ನು ಅನುಸರಿಸಿ ಹೋದವನನ್ನು ಕುರಿತು ಶೋಕಿಸಬಾರದು. ಆ ಮರಣವನ್ನು ತಪ್ಪಿಸಲು ಸಾಧ್ಯವಿಲ್ಲ. ಹಿಂತಿರುಗದ ನೀರಿನ ಪ್ರವಾಹದಂತೆ ಆಯುಷ್ಯವು ಕಳೆಯುತ್ತಿರಲು ಆತ್ಮವನ್ನು ಸುಖಸ್ಥಾನದಲ್ಲಿಡಬೇಕು. ಸುಖಭಾಗಿಗಳು ಪ್ರಜೆಗಳು. ನಮ್ಮ ತಂದೆಯಾದ ದಶರಥರಾಯನು ರಾಜ್ಯವನ್ನು ಪರಿಪಾಲಿಸುವಾಗ ಅನೇಕ ಯಾಗಗಳನ್ನು ಮಾಡಿ ದಕ್ಷಿಣೆಗಳನ್ನು ಕೊಟ್ಟು ಪ್ರಜೆಗಳನ್ನು ಪರಿಪಾಲಿಸಿ ಅನೇಕ ದಾನಗಳನ್ನು ಮಾಡಿ ಧರ್ಮಮಾರ್ಗಪ್ರವರ್ತಕನಾಗಿ ಜೀರ್ಣವಾದ ಮನುಷ್ಯ ಶರೀರವನ್ನು ಬಿಟ್ಟು ಬ್ರಹ್ಮಲೋಕದಲ್ಲಿ ಅನೇಕ ಸುಖವನ್ನನುಭವಿಸುವ ದಿವ್ಯಶರೀರವನ್ನು ಪಡೆದನು.

ಅಂಥ ಮಹಾರಾಜನನ್ನು ಕುರಿತು ದುಃಖಪಡಸಲ್ಲದು. ಲೋಕದಲ್ಲಿ ಮನುಷ್ಯನಿಗೆ ನಾನಾ ವಿಧವಾದ ದುಃಖಗಳುಂಟು. ಧೈರ್ಯವುಳ್ಳವನಾಗಿ ಬುದ್ಧಿವಂತನಾದ ಪುರುಷನು ಸಮಸ್ತ ದುಃಖಗಳನ್ನೂ ಬಿಡಬೇಕು. ನೀನು ದಶರಥರಾಯನ ಹಾಗೆ ಧೈರ್ಯವಂತನು. ಮಹಾ ಗುಣಸಂಪನ್ನನು. ಆದ್ದರಿಂದ ನೀನು ದುಃಖವನ್ನು ಬಿಟ್ಟು ಸ್ವಸ್ಥಚಿತ್ತನಾಗಿ ಅಯೋಧ್ಯಾಪಟ್ಟಣಕ್ಕೆ ಹೋಗು. ದಶರಥರಾಯನು ಆಜ್ಞಾಪಿಸಿದ ರೀತಿಯಲ್ಲಿ ರಾಜ್ಯಪರಿಪಾಲನವನ್ನು ಮಾಡು. ಮಹಾತ್ಮನಾದ ಆ ರಾಯನು ನಿರೂಪಿಸಿದ ಕ್ರಮದಲ್ಲಿಯೇ ನಾನು ದಂಡಕಾರಣ್ಯದಲ್ಲಿ ವಾಸಮಾಡಿ ಕೊಂಡು ಧರ್ಮಮಾರ್ಗಪ್ರವರ್ತಕನಾಗಿರುತ್ತೇನೆ. ಮನುಷ್ಯಜನ್ಮದಲ್ಲಿ ಜನಿಸಿದವನು ಪರಲೋಕ ಸಾಧನವಾದ ಕೃತ್ಯವನ್ನು ಹಿರಿಯರ ಶಾಸನಪ್ರಕಾರ ಮಾಡಿಕೊಂಡಿರಬೇಕು. ಹಾಗಲ್ಲದೆ ಪರಲೋಕ ಹಾನಿಕರವಾದ ಕೃತ್ಯವನ್ನು ಮಾಡಬಾರದು. ಭರತ, ನೀನು ನಮ್ಮ ತಂದೆ ದಶರಥನ ಒಳ್ಳೆಯ ನಡತೆಯನ್ನು ಆಲೋಚಿಸು. ದಶರಥಮಹಾರಾಜನು ನಡೆದ ಮಾರ್ಗದಲ್ಲಿಯೇ ನಡೆದು ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡು" ಎಂದು ಬುದ್ಧಿ ಹೇಳಿದನು.



## ೧೦೬ ನೆಯ ಅಧ್ಯಾಯ

# ಭರತನು ಶ್ರೀರಾಮನನ್ನು ಪಟ್ಟಾಭಿಷೇಕಮಾಡಿಕೊಳ್ಳಲು ಪ್ರಾರ್ಥಿಸಿದ್ದು

ಈ ಕ್ರಮದಲ್ಲಿ ಶ್ರೀರಾಮನು ಭರತನಿಗೆ ಅನೇಕ ವೈರಾಗ್ಯನೀತಿಗಳನ್ನು ಬೋಧಿಸಿ ಅಯೋಧ್ಯಾ ಪಟ್ಟಣಕ್ಕೆ ಹೋಗಿ ರಾಜ್ಯಪರಿಪಾಲನವನ್ನು ಮಾಡಬೇಕೆಂದು ಹೇಳಲು ಅತ್ಯಂತ ಧರ್ಮಿಷ್ಠನಾದ ಭರತನು ಧರ್ಮಮಾರ್ಗರಹಸ್ಯದ ಮಾತುಗಳಿಂದ ಆತನನ್ನು ಕುರಿತು ಹೀಗೆಂದನು : "ಶ್ರೀರಾಮ, ನೀನು ದುಃಖ ಬಂದಲ್ಲಿ ವ್ಯಥೆಪಡುವುದಿಲ್ಲ. ಸುಖ ಬಂದಲ್ಲಿ ಹರ್ಷಪಡುವುದಿಲ್ಲ. ಇಂಥ ಮನುಷ್ಯರು ಲೋಕದಲ್ಲಿ ಮತ್ಯಾರುಂಟು! ಧರ್ಮಸಂಶಯ ಬಂದಲ್ಲಿ ನೀನು ನಿನಗೆ ಸಂಮತರಾದ ಹಿರಿಯರನ್ನು ಕೇಳುತ್ತಿರುವೆ. ಜ್ಞಾನಿಯಾದ ಪುರುಷನು ಯಾವ ದುಃಖದಿಂದಲೂ ಕಂಗೆಡನು. ತತ್ತ್ವಜ್ಞಾನವಿಚಾರ ವುಳ್ಳ ನಿನ್ನಂತೆ ದುಃಖಗಳು ಬಂದರೂ ಮನಸ್ಸನ್ನು ಚಂಚಲಮಾಡಿಕೊಳ್ಳದಿರುವವರಾರು ? ಶ್ರೀರಾಮ ನೀನು ಮಹಾಸತ್ಯಸಂಧನು. ಸರ್ವಜ್ಞನು. ದೇವೇಂದ್ರನಿಗೆ ಸರಿಯಾದವನು. ನಿನ್ನಂಥ ಕೃತ್ಯಾಕೃತ್ಯವಿಚಾರದಲ್ಲಿ ಸರ್ವಗುಣಸಂಪನ್ನನಾದ ಬುದ್ಧಿವಂತನು ಒಬ್ಬನೂ ಇಲ್ಲ. ಅಂಥ ನೀನು ಸಹಿಸಲು ಶಕ್ಯವಲ್ಲದ ದುಃಖವನ್ನನುಭವಿಸುವುದು ಉಚಿತವಲ್ಲ. ಸ್ವಾಮಿಯೆ, ಕ್ಷುದ್ರಬುದ್ಧಿಯುಳ್ಳ ನನ್ನ ತಾಯಿಯಾದ ಕೈಕೇಯಿದೇವಿಯು ನನ್ನ ನಿಮಿತ್ತವಾಗಿ ಬಹುದ್ರೋಹವನ್ನು ಮಾಡಿ ನಿನ್ನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ಹೊರಡಿಸಿದಳು. ಆ ಪಾಪವು ನನಗೆ ಸಂಭವಿಸಿತು. ನೀನು ನನ್ನ ಮೇಲಣ ಕೃಪೆಯಿಂದ ನನಗೆ ಪ್ರಸನ್ನನಾಗಿ ನನ್ನ ಪಾಪವನ್ನು ಪರಿಹರಿಸು. ನಾನು ಧರ್ಮ ಮಾರ್ಗವನ್ನೇ ಅನುಸರಿಸಿಕೊಂಡಿದ್ದೇನೆ. ನನ್ನ ತಾಯಿಗೆ ಅತ್ಯಂತ ಭಯಂಕರವಾದ ಆಜ್ಞೆಯನ್ನು ಮಾಡಲಣಿಸಿದ್ದೆನು. ಆದರೆ ಲೋಕದಲ್ಲಿ ದಶರಥರಾಯನ ಕುಮಾರನು ಮಾತೃವಧೆಯನ್ನು ಮಾಡಿದನೆಂಬ ಅಪಕೀರ್ತಿಯು ಬರುವುದೆಂದು ಸುಮ್ಮನಿದ್ದೆನು. ಅಪಕೀರ್ತಿಬರುವ ಕ್ಷುದ್ರಕರ್ಮವನ್ನು ನಾನು ಹೇಗೆ ಮಾಡಲಿ? ನಮ್ಮ ತಂದೆಯು ಕೈಕೇಯಿದೇವಿಯ ಮಾತನ್ನು ಕೇಳಿ ಆಕೆಯ

ಮೇಲಣ ವ್ಯಾಮೋಹದಿಂದ ಇಂಥ ಅಕೃತ್ಯವನ್ನು ಮಾಡಿದನೆಂದು ನಿಂದಿಸಬಾರದು. ದಶರಥರಾಯನು ನಮ್ಮ ತಂದೆ: ಅನೇಕ ಯಾಗಗಳನ್ನು ಮಾಡಿದವನು, ವೃದ್ಧನು, ಮಹಾತ್ಮನು. ಇಷ್ಟರಮೇಲೆ ಸ್ವರ್ಗಸ್ಥನಾದವನು. ಅಂಥ ರಾಜನನ್ನು ನಿಂದಿಸಬಾರದು. ಮನುಷ್ಯರಿಗೆ ಅಂತ್ಯಕಾಲಕ್ಕೆ ಮರವೆ ಹುಟ್ಟುವುದೆಂಬುದನ್ನು ದಶರಥರಾಯನಲ್ಲಿ ಪ್ರತ್ಯಕ್ಷವಾಗಿ ಕಂಡೆನು. ಆತನು ಅಜ್ಞಾನದಿಂದ ಸಾಹಸಮಾಡಿ ಕೋಪಾತಿಶಯದಿಂದ ಕೈಕೇಯಿದೇವಿಗೆ ಕೊಟ್ಟ ಮಾತನ್ನು ಮೀರಬಾರದೆಂದೂ ನಿನ್ನನ್ನು ದೇಶತ್ಯಾಗಮಾಡಿ ಹೊರಡಿಸುವುದೇ ಕಾರ್ಯವೆಂದೂ ತಿಳಿದು ಅಪಕೀರ್ತಿಗೊಳಗಾದನು. ಆತನಿಗೆ ಬಂದ ಅಪಕೀರ್ತಿಯನ್ನು ನೀನೇ ಪರಿಹರಿಸಬೇಕು. ತಂದೆಯ ಅಪಕೀರ್ತಿಯನ್ನು ಪರಿಹರಿಸಿ ಕೀರ್ತಿಯನ್ನುಂಟುಮಾಡುವವನೇ ಸತ್ಪುತ್ರನು. ಅಲ್ಲದಿದ್ದರೆ ಸತ್ಪುತ್ರನೆನಿಸಿಕೊಳ್ಳನು. ನೀನು ಸತ್ಪುತ್ರನಾದ ಕಾರಣ ಆತನ ಅಪಕೀರ್ತಿಯನ್ನು ಪರಿಹರಿಸು. ದಶರಥರಾಯನು ಮಾಡಿದ ಕೃತ್ಯವು ನನಗೂ ನನ್ನ ತಾಯಿಯಾದ ಕೈಕೇಯಿದೇವಿಗೂ ಅಪಕೀರ್ತಿಯನ್ನು ತರುತ್ತಿದೆ. ನೀನು ನಮ್ಮಿಬ್ಬರ ಅಪಕೀರ್ತಿಯನ್ನೂ ಪರಿಹರಿಸಿ ನಮ್ಮನ್ನೂ ನಿನ್ನ ಸ್ನೇಹಿತರನ್ನೂ ಬಂಧುಗಳನ್ನೂ ಪುರಜನರನ್ನೂ ಕೃಪೆಯಿಂದ ನೋಡಿ ಪರಿಪಾಲಿಸು. ನೀನು ನಮ್ಮೆಲ್ಲರಿಗೂ ರಕ್ಷಕನು. ಕ್ಷತ್ರಿಯಧರ್ಮವೆತ್ತಣದು ? ಅರಣ್ಯವಾಸವೆತ್ತಣದು ? ರಾಜ್ಯಪರಿಪಾಲನವೆತ್ತಣದು ? ಜಡೆಗಳನ್ನು ಧರಿಸುವುದೆತ್ತಣದು ? ಇಂಥ ವಿಷಮಕಾರ್ಯ ನಿನಗುಚಿತವಲ್ಲ. ಪ್ರಜಾಪರಿಪಾಲನವನ್ನು ಮಾಡುವುದಕ್ಕೆ ಸಮರ್ಥನಾದ ಕ್ಷತ್ರಿಯನಿಗೆ ಪಟ್ಟಾಭಿಷೇಕವಾಗಬೇಕೆಂಬ ಧರ್ಮಶಾಸ್ತ್ರವುಂಟು. ಪ್ರತ್ಯಕ್ಷವಾಗಿ ಪ್ರಜಾಪರಿಪಾಲನಮಾಡುವುದಕ್ಕೆ ಸಮರ್ಥನೂ ಧರ್ಮಪರಿಪಾಲಕನೂ ದಕ್ಷನೂ ಪಟ್ಟಾಭಿಷೇಕಕ್ಕೆ ಯೋಗ್ಯನೂ ಆದ ಪುರುಷನನ್ನು ಬಿಟ್ಟು ಕಾರ್ಯಾಂತರವನ್ನೆಣಿಸಿ ಅಧಮನಿಗೆ ರಾಜ್ಯಾಧಿಪತ್ಯವನ್ನು ಮಾಡಲೆಣಿಸುವ ಅರಸನು ಕ್ಷತ್ರಿಯಾಧಮನೆನಿಸಿಕೊಳ್ಳುವನು. ಶರೀರದಂಡನೆಯಿಂದ ಧರ್ಮವನ್ನು ಸಂಪಾದಿಸಬೇಕೆಂದು ಏಕೆ ಪ್ರಯಾಸಪಡುತ್ತೀಯೆ ? ಪ್ರಯಾಸವಿಲ್ಲದೆ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕುಜಾತಿಯವರು ತಮ್ಮ ತಮ್ಮ ಜಾತಿಧರ್ಮಗಳಲ್ಲಿ ನಡೆಯುವಂತೆಯೂ ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಯತಿಗಳೆಂಬ ನಾಲ್ಕಾಶ್ರಮದವರು ತಮ್ಮ ತಮ್ಮ ಆಶ್ರಮದ ಸತ್ಕರ್ಮಗಳನ್ನು ಮಾಡಿಕೊಂಡಿರುವಂತೆಯೂ ಕಟ್ಟುಮಾಡಿ ರಾಜ್ಯಪರಿಪಾಲನಮಾಡಿಕೊಂಡು ಧರ್ಮಮಾರ್ಗಪ್ರವರ್ತಕನಾಗಿರುವುದನ್ನು ಬಿಟ್ಟು ಕಾಯಕ್ಲೇಶಗಳಿಂದಿರುವುದು ನಿನಗೆ ಧರ್ಮವಲ್ಲ. ಎಲೈ ಸ್ವಾಮಿಯೆ, ಜ್ಯೇಷ್ಠಭ್ರಾತೃವಾಗಿ ಸರ್ವಜ್ಞನಾಗಿ ಪುರುಷೋತ್ತಮನಾಗಿ ನಾನಾಶಾಸ್ತ್ರಪ್ರವೀಣನಾದ ನೀನು ಒಪ್ಪದಿದ್ದರೆ ಅಜ್ಞಾನಿಯಾಗಿ ಅಲ್ಪಶಾಸ್ತ್ರಬುದ್ಧಿಯುಳ್ಳ ನಾನು ರಾಜ್ಯಪರಿಪಾಲನವನ್ನು ಹೇಗೆ ಮಾಡುವೆನು ! ನೀನಿಲ್ಲದ ರಾಜ್ಯದಲ್ಲಿ ಬುದ್ಧಿಹೀನನಾಗಿ ಸದ್ಗುಣಹೀನನಾಗಿ ಬಾಲಕನಾದ ನಾನು ಇರುವುದಕ್ಕೆ ಹೇಗೆ ಸಮರ್ಥನಾದೇನು ! ಶ್ರೀರಾಮ, ವಸಿಷ್ಠಮುನಿಗಳು ಮತ್ತು ಅನೇಕ ಮಂತ್ರಾರ್ಥಕುಶಲರಾದ ಬ್ರಾಹ್ಮಣರು ಪ್ರಧಾನರು ಮೊದಲಾದವರೆಲ್ಲರೂ ಇಲ್ಲಿಗೆ ಬಂದಿದ್ದಾರೆ. ನಿನ್ನ ತಮ್ಮಂದಿರಾದ ನಾವೆಲ್ಲರೂ ಇದ್ದೇವೆ. ನೀನು ಇಲ್ಲಿ ಪಟ್ಟಾಭಿಷೇಕವನ್ನು ಕೈಗೊಂಡು ಅಯೋಧ್ಯಾಪಟ್ಟಣಕ್ಕೆ ಬಂದು ರಾಜ್ಯಪರಿಪಾಲನವನ್ನು ಮಾಡು. ದೇವೇಂದ್ರನು ಸಮಸ್ತ ದೇವತೆಗಳನ್ನೂ ಕೂಡಿಕೊಂಡು ಅಸುರರನ್ನು ಸಂಹರಿಸಿ ಅಮರಾವತೀಪಟ್ಟಣಕ್ಕೆ ಹೋಗಿ ಸುಖವಾಗಿರುವಂತೆ ನೀನು ಸಮಸ್ತ ಪ್ರಧಾನರನ್ನೂ ಕೂಡಿಕೊಂಡು ಋಷಿಗಳ ಋಣ, ದೇವತೆಗಳ ಋಣ, ಪಿತೃಗಳ ಋಣ—ಎಂಬ ಋಣತ್ರಯವನ್ನು ತೀರಿಸಿ ನಿನ್ನ ಮಿತ್ರರನ್ನು ಪರಿಪಾಲಿಸಿಕೊಂಡು ನಿನ್ನ ಸ್ನೇಹಿತರಿಗೆ ಬೇಕಾದ ವಸ್ತುಗಳನ್ನು ಕೊಡುತ್ತ ನಮ್ಮೆಲ್ಲರನ್ನೂ ರಕ್ಷಿಸು. ಈಗ ನೀನು ಪಟ್ಟಾಭಿಷೇಕವನ್ನು ಮಾಡಿಕೊಂಡರೆ

ಸತ್ಪುರುಷರಾದವರಿಗೂ ನಿನ್ನ ಸ್ನೇಹಿತರಿಗೂ ಪುರಜನರು ಮೊದಲಾದವರಿಗೂ ಸಂತೋಷವಾಗುವುದು. ನೀನು ಈಗ ಪಟ್ಟಾಭಿಷಿಕ್ತನಾಗಿ ನನ್ನ ತಾಯಿಯಾದ ಕೈಕೇಯಿದೇವಿಯಲ್ಲಿ ನನಗಿರುವ ಕ್ರೋಧವನ್ನು ಬಿಡಿಸಿ ನಮ್ಮ ತಂದೆಯಾದ ದಶರಥರಾಯನ ಪಾಪವನ್ನು ತೊಲಗಿಸು. ನಿನಗೆ ಸಾಷ್ಟಾಂಗವೆರಗಿ ಬೇಡಿಕೊಳ್ಳುತ್ತೇನೆ. ಸರ್ವಭೂತದಯಾಪರನಾದ ಪರಮೇಶ್ವರನು ಸಕಲ ಪ್ರಾಣಿಗಳಲ್ಲಿಯೂ ದಯೆಮಾಡುವಂತೆ ನೀನು ನನ್ನಲ್ಲಿಯೂ ಸಕಲ ಬಂಧುಗಳಲ್ಲಿಯೂ ಕೃಪೆಮಾಡು. ನನ್ನ ಈ ಬಯಕೆಯನ್ನು ನೀನು ನಿರಾಕರಿಸಿ ವನಕ್ಕೆ ಹೋಗುವ ಪಕ್ಷದಲ್ಲಿ ನಾನೂ ನಿನ್ನ ಹಿಂದೆಯೇ ಬರುತ್ತೇನೆ" ಎಂದು ಅನೇಕ ವಾಕ್ಯಗಳಿಂದ ಸಂತವಿಟ್ಟು ಸಾಷ್ಟಾಂಗವೆರಗಿ ಬೇಡಿಕೊಂಡನು.

ಈ ಪ್ರಕಾರವಾಗಿ ನುಡಿದ ಭರತನ ವಾಕ್ಯವನ್ನು ಕೇಳಿ ಶ್ರೀರಾಮನು ಸತ್ತ್ವಗುಣಸಂಪನ್ನನಾದ ತಂದೆಯ ಆಜ್ಞೆಯನ್ನು ಪರಿಪಾಲಿಸಬೇಕೆಂದು ಧೈರ್ಯಗುಂದದೆ ಅಯೋಧ್ಯಾಪಟ್ಟಣಕ್ಕೆ ಹೋಗುವುದಕ್ಕೆ ಮನಸ್ಸುಮಾಡದಿರಲು, ಅಲ್ಲಿದ್ದ ಜನರಿಗೆ ಆತನ ಧೈರ್ಯಬುದ್ಧಿಯನ್ನು ಕಂಡದ್ದರಿಂದ ಸಂತೋಷವೂ ಅಯೋಧ್ಯೆಗೆ ತಿರುಗಿ ಬರುವುದಕ್ಕೆ ಸಂಮತವಾಗದ್ದನ್ನು ಕಂಡದ್ದರಿಂದ ದುಃಖವೂ ಉಂಟಾದವು. ಹೀಗೆ ಪ್ರಾರ್ಥನೆ ಮಾಡುತ್ತಿದ್ದ ಭರತನನ್ನು ಅಲ್ಲಿದ್ದ ಋತ್ವಿಜರೂ, ಪ್ರಧಾನರೂ ಕಣ್ಣೀರು ಸುರಿಸುತ್ತಿದ್ದ ಅಂತಃಪುರಸ್ತ್ರೀಯರೂ ಕೊಂಡಾಡಿದರು.



## ೧೦೭ ನೆಯ ಅಧ್ಯಾಯ

## ಶ್ರೀರಾಮನು ಭರತನಿಗೆ ಹೇಳಿದ ಪ್ರತಿವಚನ

ಆಮೇಲೆ ಶ್ರೀರಾಮನು ಪೂರ್ವೋಕ್ತಪ್ರಕಾರದಲ್ಲಿ ಪುನಃ ನುಡಿಯುತ್ತಿದ್ದ ಭರತನನ್ನು ಕುರಿತು ಹೀಗೆ ಹೇಳಿದನು: "ನೀನು ಹೇಳಿದ ಮಾತೆಲ್ಲವೂ ನಿಶ್ಚಯವೇ ಸರಿ. ಹಾಗಾದರೂ ಪೂರ್ವದಲ್ಲಿ ನಡೆದ ಕಥಾವೃತ್ತಾಂತವೊಂದುಂಟು. ಅದು ಯಾವುದೆಂದರೆ: ನಿನ್ನ ಮಾತಾಮಹನಾದ ಕೇಕಯರಾಯನು ಕೈಕೇಯಿದೇವಿಯನ್ನು ನಮ್ಮ ತಂದೆಗೆ ಕೊಟ್ಟು ವಿವಾಹಮಾಡುವಾಗ ಆತನನ್ನು ಕುರಿತು 'ದಶರಥರಾಜ, ನೀನು ನನ್ನ ಮಗಳಾದ ಕೈಕೇಯಿದೇವಿಯಲ್ಲಿ ಜನಿಸುವ ಮಗನಿಗೆ ರಾಜ್ಯಾಧಿಪತ್ಯವನ್ನು ಕೊಡು; ಅದೇ ನೀನು ನನಗೆ ಕೊಡುವ ಕನ್ಯಾಶುಲ್ಕ' ಎಂದು ಒಡಂಬಡಿಕೆಯನ್ನು ಹೇಳಿ ತನ್ನ ಮಗಳನ್ನು ಕೊಟ್ಟನು. ಅದಲ್ಲದೆ ಮತ್ತೊಂದು ಕಾರಣವುಂಟು. ದೇವಾಸುರರ ಯುದ್ಧದಲ್ಲಿ ನಮ್ಮ ತಂದೆಯು ಗಾಯಪಟ್ಟು ಬಿದ್ದಿದ್ದಾಗ ನಿನ್ನ ತಾಯಿಯಾದ ಕೈಕೇಯಿದೇವಿಯು ಆತನನ್ನು ರಕ್ಷಿಸಿದಳು. ಆಗ ದಶರಥರಾಯನು ಮೆಚ್ಚಿ ಆಕೆಯು ರಣಾಂಗಣದಲ್ಲಿ ಗಾಯಪಟ್ಟು ಬಿದ್ದ ತನ್ನನ್ನು ಎತ್ತಿಕೊಂಡು ಬಂದುದಕ್ಕೆ ಒಂದು ವರವನ್ನೂ ರಕ್ಷಿಸಿದ್ದಕ್ಕೆ ಒಂದು ವರವನ್ನೂ ಹೀಗೆ ಎರಡು ವರಗಳನ್ನು ಕೊಡುವುದಾಗಿ ಹೇಳಲು ಕೈಕೇಯಿದೇವಿಯು ದಶರಥರಾಯನನ್ನು ನೋಡಿ 'ಈ ಎರಡು ವರಗಳೂ ನಿನ್ನಲ್ಲೇ ಇರಲಿ. ನನಗೆ ಬೇಕಾದಾಗ ಬೇಡಿಕೊಳ್ಳುತ್ತೇನೆ' ಎಂದು ನುಡಿದಳು. ಆಮೇಲೆ ದಶರಥರಾಯನು ನನ್ನ ಪಟ್ಟಾಭಿಷೇಕಕ್ಕೆ ಸಂನಾಹಮಾಡುತ್ತಿದ್ದ ಸಮಯದಲ್ಲಿ ಆ ದೇವಿಯು ಆ ಎರಡು ವರಗಳಲ್ಲಿ ಒಂದರಿಂದ ನನ್ನನ್ನು ವನಕ್ಕೆ ಕಳುಹಿಸುವ ಹಾಗೂ ಮತ್ತೊಂದರಿಂದ ನಿನಗೆ ಪಟ್ಟವನ್ನು ಕಟ್ಟುವ ಹಾಗೂ ಬೇಡಿಕೊಂಡಳು. ದಶರಥರಾಯನು ಕೊಟ್ಟ ಮಾತಿಗೆ ತಪ್ಪಬಾರದೆಂದು ಸತ್ಯಪಾಲನೆಗಾಗಿ ಎರಡು ವರಗಳನ್ನೂ ಕೊಟ್ಟು ನನ್ನನ್ನು ವನಕ್ಕೆ ಕಳುಹಿಸಲು ನಾನು ಸೀತಾಲಕ್ಷ್ಮಣ ಸಮೇತನಾಗಿ ವನಕ್ಕೆ ಬಂದೆನು. ನೀನು ನಮ್ಮ ತಂದೆಯ ಮಾತನ್ನು ಮೀರದೆ ರಾಜ್ಯಪರಿಪಾಲನ

ವನ್ನು ಮಾಡು. ನೀನು ಪಟ್ಟಾಭಿಷೇಕವನ್ನು ಮಾಡಿಕೊಂಡು ದಶರಥರಾಯನು ಕೈಕೇಯಿಾದೇವಿಗೆ ಕೊಟ್ಟ ಮಾತನ್ನು ಸಲ್ಲಿಸಿ ಆತನಿಗೆ ಕೀರ್ತಿಯನ್ನುಂಟುಮಾಡಿ ನಿನ್ನ ತಾಯಿಯಾದ ಕೈಕೇಯಿಾದೇವಿಗೂ ಸಂತೋಷವನ್ನುಂಟುಮಾಡು. ಲೋಕದಲ್ಲಿ ಸತ್ಪುತ್ರನಾದವನು ತಾಯಿತಂದೆಗಳ ಮಾತನ್ನು ಪರಿಪಾಲಿಸಿ ಅವರ ಋಣವನ್ನು ತೀರಿಸಿ ಅವರಿಗೆ ದೋಷವು ಬಾರದಂತೆ ರಕ್ಷಿಸಬೇಕೆಂದು ವೇದವಾಕ್ಯ ವುಂಟು. ಗಯಾಕ್ಷೇತ್ರಕ್ಕೆ ಹೋಗಿ ಪಿತೃಗಳಿಗೆ ಪಿಂಡಪನ್ನಿಕ್ಕಿ ಅವರಿಗೆ ನರಕವಿಲ್ಲದಂತೆ ರಕ್ಷಿಸುವವನೇ ಸತ್ಪುತ್ರನೆಂದು ವೇದಗಳು ಸಾರುತ್ತಿವೆ. ಗುಣವಂತರಾದ ಬಹುಮಂದಿ ಮಕ್ಕಳನ್ನು ಪಡೆದರೆ ಅವರಲ್ಲಿ ಒಬ್ಬನಾದರೂ ಗಯಾಕ್ಷೇತ್ರಕ್ಕೆ ಹೋಗಿ ಪಿತೃಗಳ ಋಣವನ್ನು ತೀರಿಸುವನೆಂದು ರಾಜರ್ಷಿಗಳು ಅನೇಕ ಮಕ್ಕಳನ್ನು ಬಯಸುವರು. ಆದಕಾರಣ, ಭರತ, ನಮ್ಮ ತಂದೆಯಾದ ದಶರಥರಾಯನಿಗೆ ನರಕವು ಪ್ರಾಪ್ತವಾಗದಂತೆ ಯತ್ನಮಾಡು. ಶೀಘ್ರದಲ್ಲಿ ಅಯೋಧ್ಯಾಪಟ್ಟಣಕ್ಕೆ ಹೋಗಿ ಶತ್ರುಘ್ನನನ್ನೂ ಬ್ರಾಹ್ಮಣರನ್ನೂ ಕೂಡಿಕೊಂಡು ನಿಖಿಲ ಪ್ರಜೆಗಳನ್ನೂ ಧರ್ಮದಿಂದ ರಕ್ಷಿಸು. ನಾನು ಸೀತಾಲಕ್ಷ್ಮಣಸಮೇತನಾಗಿ ದಂಡಕಾರಣ್ಯಕ್ಕೆ ಹೋಗಿ ವನ್ಯಪ್ರಾಣಿಗಳಿಗೆ ಅಧಿಪತಿಯಾಗಿರುತ್ತೇನೆ. ಭರತ, ನೀನು ಅಯೋಧ್ಯಾಪಟ್ಟಣಕ್ಕೆ ಹೋಗಿ ಶ್ವೇತಚ್ಛತ್ರದ ನೆಳಲಿನಲ್ಲಿ ರಾಜ್ಯಪರಿಪಾಲನವನ್ನು ಮಾಡು. ನಾನು ವನದಲ್ಲಿ ಬೆಳೆಯುವ ಪುಣ್ಯವೃಕ್ಷಗಳ ನೆಳಲಲ್ಲಿದ್ದುಕೊಂಡು ಋಷಿಗಳ ಆಶ್ರಮ ಗಳನ್ನು ರಕ್ಷಿಸಿಕೊಂಡಿರುತ್ತೇನೆ. ನಿನಗೆ ಶತ್ರುಘ್ನನು ಸಹಾಯವಾಗಿರಲಿ. ನನಗೆ ಲಕ್ಷ್ಮಣನು ಸಹಾಯವಾಗಿರುವನು. ದಶರಥಮಹಾರಾಜನ ಕುಮಾರಕರಾದ ನಾವು ನಾಲ್ವರೂ ಆ ರಾಜನಿಗೆ ಸತ್ಯಸಂಧನೆಂಬ ಸತ್ಕೀರ್ತಿಯನ್ನುಂಟುಮಾಡೋಣ! ಭರತ, ನೀನು ಕರೆದರೂ ನಾನು ಬರದೆ ಹೋದೆನೆಂದು ಮನಸ್ಸಿನಲ್ಲಿ ದುಃಖಪಡಬೇಡ" ಎಂದು ನುಡಿದನು.



೧೧೪ ನೆಯ ಅಧ್ಯಾಯ

## ಶ್ರೀರಾಮನಿಗೆ ಜಾಬಾಲಿಯು ಹೇಳಿದ ಚಾರ್ವಾಕನೀತಿ

ಈ ರೀತಿಯಲ್ಲಿ ಶ್ರೀರಾಮನು ಭರತನಿಗೆ ಸಮಾಧಾನವನ್ನು ಹೇಳುತ್ತಿರುವ ಸಮಯದಲ್ಲಿ ಜಾಬಾಲಿ ಎಂಬ ಮುನಿಶ್ರೇಷ್ಠನು ಸತ್ಯಸಂಧನಾದ ಶ್ರೀರಾಮನನ್ನು ಕುರಿತು ಅಧರ್ಮಪ್ರತಿಪಾದಕ ವಾದ ಮಾತುಗಳಿಂದ ಈ ಪ್ರಕಾರ ನುಡಿದನು: "ಶ್ರೀರಾಮ, ಭರತನು ನಿನ್ನನ್ನು ರಾಜ್ಯಾಧಿಪತ್ಯಕ್ಕೆ ಕರೆದದ್ದು ಲೇಸಾಯಿತು. ನಿನಗೆ ವನವಾಸದಿಂದುಂಟಾಗುವ ಕಾಯಕ್ಲೇಶವು ಬೇಡ. ನೀನು ರಾಜ್ಯಾಧಿಪತ್ಯವನ್ನು ತಿರಸ್ಕರಿಸುವುದು ಉಚಿತವಲ್ಲ. ನೀನು ಅಜ್ಞಾನಿಯ ರೀತಿಯಲ್ಲಿ ರಾಜ್ಯಾಧಿಪತ್ಯವನ್ನು ಬಿಡುವುದು ಸರಿಯಲ್ಲ. 'ಲೋಕದಲ್ಲಿ ನನ್ನ ತಾಯಿ—ನನ್ನ ತಂದೆ' ಎಂದು ವ್ಯಾಮೋಹಪಡುವ ಮನುಷ್ಯನು ಉನ್ಮತ್ತನೆಂದು ತಿಳಿಯಬೇಕು. ಯಾವ ಪುರುಷನು ಯಾರಿಗೆ ಬಂಧು? ಧರ್ಮಾಚರಣೆಯನ್ನು ಮಾಡುವ ಮನುಷ್ಯನು ಐದುವ ಲೋಕವಾವುದು? ಲೋಕದಲ್ಲಿ ಮನುಷ್ಯನು ಒಂದು ದಿಕ್ಕಿನಲ್ಲಿ ಪ್ರಯಾಣವನ್ನು ನಿಲ್ಲಿಸಿ ಮಾರನೆಯ ದಿನ ಸೂರ್ಯೋದಯಕಾಲದಲ್ಲಿ ಆ ಸ್ಥಳವನ್ನು ಬಿಟ್ಟು ತನ್ನ ದಾರಿಗೊಂಡು ಹೋಗುವಂತೆ ತಾಯಿ ತಂದೆ ಹಣಕಾಸೆಂಬವು ಇದ್ದಷ್ಟು ದಿನಗಳಿದ್ದು ಲಯವಾಗಿ ಹೋಗುವುವು! ಅಯೋಧ್ಯಾಪಟ್ಟಣವು ದಶರಥರಾಯನ ಸ್ಥಾನವೆಂಬುದು ಮಾತು ಮಾತ್ರವಲ್ಲದೆ ಈಗ ಆ ರಾಯನು ಆ ಪಟ್ಟಣದಲ್ಲಿದ್ದಾನೆಯೆ? ನೀನು ರಾಜ್ಯಾಧಿಪತ್ಯವನ್ನು

ಬಿಟ್ಟು ವನದಲ್ಲಿ ಕಾಯಕ್ಲೇಶವನ್ನು ಮಾಡಿಕೊಂಡಿರುವುದಕ್ಕೆ ಕಾರಣವೇನು ? ಅತ್ಯಂತ ದುರ್ಘಟವಾದ ಮಾರ್ಗಗಳೂ ಹಳ್ಳತಿಟ್ಟುಗಳೂ ಉಳ್ಳದ್ದಾಗಿ ಎಲ್ಲಿ ನೋಡಿದರೂ ಮುಳ್ಳುಗಳಿಂದ ಪರಿಪೂರ್ಣವಾದ ಈ ವನವಲ್ಲಿ ಸಂಚರಿಸುವುದನ್ನು ಬಿಟ್ಟು ಐಶ್ವರ್ಯಪರಿಪೂರ್ಣವಾದ ಅಯೋಧ್ಯಾ ಪಟ್ಟಣದಲ್ಲಿ ಪಟ್ಟಾಭಿಷೇಕವನ್ನು ಮಾಡಿಕೊಂಡು ರಾಜ್ಯಪರಿಪಾಲನವನ್ನು ಮಾಡು. ದಿಕ್ಕಾರೂ ಇಲ್ಲದಿರುವ ಅಯೋಧ್ಯಾಪಟ್ಟಣವು ನಿನ್ನನ್ನು ಎದುರುನೋಡುತ್ತಿದೆ! ಎಲೈ ಶ್ರೀರಾಮ, ಮಹಾತ್ಮನಾದ ನೀನು ರಾಜ್ಯಭೋಗವನ್ನನುಭವಿಸಿಕೊಂಡು ದೇವೇಂದ್ರನು ಅಮರಾವತೀ ಪಟ್ಟಣದಲ್ಲಿರುವಂತೆ ಅಯೋಧ್ಯಾಪಟ್ಟಣದಲ್ಲಿ ಸುಖವಾಗಿರು. ನಿನಗೆ ದಶರಥರಾಯನೇನಾಗಬೇಕು ? ದಶರಥರಾಯನಿಗೆ ನೀನೇನಾಗಬೇಕು ? ದಶರಥರಾಯನು ಬೇರೊಬ್ಬನಾದನು. ಆದ್ದರಿಂದ ನಾನು ಹೇಳುವ ಮಾತನ್ನು ಕೇಳು. ಲೋಕದಲ್ಲಿ ತಂದೆಯು ನಿಮಿತ್ತಕಾರಣ ಮಾತ್ರನಲ್ಲದೆ ಸಾಕ್ಷಾತ್ಕಾರಣನಲ್ಲ. ಸ್ತ್ರೀಯ ಶೋಣಿತವೂ ಪುರುಷನ ಶುಕ್ಲವೂ ಕೂಡುವುದೇ ಮನುಷ್ಯನಿಗೆ ಸಾಕ್ಷಾತ್ಕಾರಣವು. ದಶರಥರಾಯನು ತಾನು ಹೋಗಬೇಕಾದ ದಾರಿಗೆ ಹೋದನು. ನೀನು ವ್ಯರ್ಥವಾಗಿ ವ್ಯಥೆಪಡುತ್ತಿದ್ದೀಯೆ. ವನದಲ್ಲಿ ಧರ್ಮಾರ್ಥಕಾಮಗಳನ್ನು ಸಂಪಾದಿಸಬೇಕೆಂದು ಬಹುಮಂದಿ ಪ್ರತ್ಯಕ್ಷಸುಖವನ್ನು ತೊರೆದು ಕಾಯಕ್ಲೇಶಗಳನ್ನು ಮಾಡಿಕೊಂಡು ಕಡೆಗೆ ನಾಶವಾಗಿ ಹೋಗುವರು. ಅವರನ್ನು ನೆನೆದು ನನಗೆ ಮನೋವ್ಯಥೆಯಾಗುತ್ತಿದೆ. ಮನುಷ್ಯರು ತಮ್ಮ ಪಿತೃಗಳಿಗೆ ಪೈತೃಕವನ್ನು ಮಾಡಬೇಕೆಂದು ಪ್ರಯಾಸಪಡುತ್ತಿರುವರು. ಅದರಿಂದ ಅನ್ನಕ್ಕೆ ಹಾನಿಯಾಗುವುದಲ್ಲದೆ ಇನ್ನೇನಿದೆ ? ಸತ್ತವನು ಊಟಮಾಡುವನೆ ? ಇಲ್ಲೊಬ್ಬನು ಭೋಜನ ಮಾಡಿದರೆ ಪರಲೋಕದಲ್ಲಿರುವವನಿಗೆ ಸೇರುವುದಾದರೆ, ಪಥಿಕನಿಗೆ ಮನೆಯಲ್ಲಿ ಶ್ರಾದ್ಧಮಾಡಿದರೆ ನಾಕು, ಅವನಿಗೆ ಅದರಿಂದಲೇ ಪರಸ್ಥಳದಲ್ಲಿ ತೃಪ್ತಿಯಾಗಲಿ. ಲೋಕದಲ್ಲಿ ವಿದ್ವಾಂಸರಾದವರು ಯುಕ್ತಿಗಳಿಂದ ಶಾಸ್ತ್ರಗಳನ್ನು ಕಲ್ಪಿಸಿ ದಾನಮಹಿಮೆಯನ್ನು ಬೋಧಿಸಿ ದಾನಮಾಡಬೇಕೆಂದೂ ಯಾಗಮಾಡಬೇಕೆಂದೂ ತಪಸ್ಸುಮಾಡಬೇಕೆಂದೂ ಬೋಧಿಸಿದ್ದಾರೆ. ಆ ದಾನಗಳಿಂದ ಅವರು ಹೇಳುವ ಸ್ವರ್ಗಾದಿಲೋಕಗಳು ಆಗಲಾರವು. ಅಂಥ ಭ್ರಮೆಯನ್ನು ಬಿಡು. ಪ್ರತ್ಯಕ್ಷವಾಗಿ ಕಂಡದ್ದನ್ನೇ ಪ್ರಮಾಣವೆಂದು ತಿಳಿ. ದೃಷ್ಟಿಗೋಚರವಲ್ಲದ ವಸ್ತುಗಳೆಲ್ಲವೂ ಅಸತ್ಯವೆಂದೇ ತಿಳಿ. ಸಮಸ್ತಜನರೂ ಪ್ರತ್ಯಕ್ಷವಾಗಿ ಕಾಣಿಸುವ ಮಾರ್ಗವನ್ನೇ ಅನುಸರಿಸಬೇಕು. ಆದ್ದರಿಂದ ಭರತನು ಹೇಳಿದಂತೆ ರಾಜ್ಯಪರಿಪಾಲನಮಾಡಿಕೊಂಡು ಸುಖವಾಗಿರು" ಎಂದು ಚಾರ್ವಾಕ ಮತವನ್ನು ಬೋಧಿಸಿದನು.



## ೧೦೯ ನೆಯ ಅಧ್ಯಾಯ

## ಜಾಬಾಲಿಯ ಮೇಲೆ ಶ್ರೀರಾಮನ ಕೋಪ

ಹೀಗೆ ನುಡಿದ ಜಾಬಾಲಿಮುನೀಶ್ವರನ ಮಾತನ್ನು ಕೇಳಿ ಶ್ರೀರಾಮನು ಮನಸ್ಸಿನಲ್ಲಿ ಸ್ವಲ್ಪವಾದರೂ ಧೈರ್ಯಗುಂದದೆ ಆತನನ್ನು ಕುರಿತು ಈ ರೀತಿಯಲ್ಲಿ ಉತ್ತರಕೊಟ್ಟನು: "ಎಲೈ ಜಾಬಾಲಿಮುನೀಶ್ವರನೆ, ನೀನು ನನಗೆ ಹಿತವಾಗಿ ಹೇಳಿದೆಯಲ್ಲದೆ ಮತ್ತೊಂದಲ್ಲ. ಹಾಗಾದರೂ ಆ ಕೃತ್ಯವನ್ನು ಉಚಿತವಾದ ಕಾರ್ಯವೆಂದು ಅಹಿತವನ್ನು ಹೇಳಿದೆ. ಲೋಕ

ಮರ್ಯಾದೆಯನ್ನು ಬಿಟ್ಟು ಲೋಕವಿರುದ್ಧಾಚಾರದಲ್ಲಿ ನಡೆಯುವ ಮನುಷ್ಯನು ಲೋಕದಲ್ಲಿ ಗೌರವವನ್ನು ಪಡೆಯಲಾರ. ಲೋಕದಲ್ಲಿ ಮನುಷ್ಯನ ಚಾರಿತ್ರವೇ ಆತನ ಸತ್ಕುಲವನ್ನೂ ಪರಾಕ್ರಮವನ್ನೂ ಹೇಡಿತನವನ್ನೂ ಶುಚಿತ್ವವನ್ನೂ ಅಶುಚಿತ್ವವನ್ನೂ ಹೇಳುವುದು. ದುರ್ಜನನಾಗಿ ಸಜ್ಜನನಂತೆಯೂ ಅಶುಚಿಯಾಗಿ ಶುಚಿಯಾದವನಂತೆಯೂ ಲಕ್ಷಣಹೀನನಾಗಿ ಲಕ್ಷಣವುಳ್ಳವನಂತೆಯೂ ದುರಾಚಾರಿಯಾಗಿ ಸದಾಚಾರಿಯಂತೆಯೂ ಕಾಣಿಸಿಕೊಂಡು, ನಾನು ಸತ್ಕರ್ಮವನ್ನೂ ದುಷ್ಕರ್ಮವನ್ನೂ ಸಂಕರಮಾಡಿ ಅಧರ್ಮವನ್ನು ಧರ್ಮವೆಂದೆಣಿಸಿ ವಿಧ್ಯುಕ್ತವಾದ ಆಚಾರವನ್ನು ಬಿಟ್ಟು ಮನಸ್ಸಿಗೆ ಬಂದಂತೆ ನಡೆಯುತ್ತ ಲೋಕದಲ್ಲಿ ನಿಷಿದ್ಧವಾದ ಆಚಾರವನ್ನು ಕೈಗೊಂಡೆನಾದರೆ, ಯಾವ ವಿಚಾರಶೀಲನು ನನ್ನನ್ನು ಗೌರವಿಸಿಯಾನು ? ನಾನು ನೀನು ಹೇಳಿದ ಮಾರ್ಗದಲ್ಲಿ ನಡೆದೆನಾದರೆ ಲೋಕದ ಜನರು ಮರ್ಯಾದೆ ತಪ್ಪಿ ತಮ್ಮ ತಮ್ಮ ಮನಸ್ಸುಬಂದಂತೆ ನಡೆದು ಅಧರ್ಮದಲ್ಲೇ ಪ್ರವರ್ತಿಸುವರು ಅರಸನು ಯಾವ ಮಾರ್ಗದಲ್ಲಿ ನಡೆಯುವನೋ. ಆ ಮಾರ್ಗದಲ್ಲೇ ಪ್ರಜೆಗಳೂ ನಡೆಯುವರು. ಪರರನ್ನು ದೂಷಣೆ ಮಾಡದೆ ಸತ್ಯದಲ್ಲಿರುವುದೇ ಅನಾದಿಸಿದ್ಧವಾದ ರಾಜಧರ್ಮ. ರಾಜ್ಯವು ಸತ್ಯವನ್ನೇ ಆಶ್ರಯಿಸಿರುವುದು. ಸಮಸ್ತ ಜನರೂ ಸತ್ಯದಿಂದಲೇ ಚರಿಸಿಕೊಂಡಿರುವರು. ಸಕಲ ದೇವತೆಗಳೂ ಸತ್ಯವೇ ಶರಣೆಂದು ಹೇಳುತ್ತಿರುವರು. ಸತ್ಯವಾದಿಯಾದವನೇ ಉತ್ತಮಲೋಕವನ್ನೈದುವನು. ಸರ್ಪವನ್ನು ಕಂಡರೆ ದೂರವಾಗಿ ತೊಲಗುವಂತೆ ಸಮಸ್ತ ಜನರೂ ಅಸತ್ಯವನ್ನು ನುಡಿಯುವವನನ್ನು ಕಂಡರೆ ದೂರವಾಗಿ ಹೋಗುವರು. ಪ್ರಪಂಚದಲ್ಲಿ ಸ್ವರ್ಗಕ್ಕೆ ಸಾಧನ ಸತ್ಯ. ಉತ್ತಮಧರ್ಮವೆನಿಸಿ ಕೊಳ್ಳುವುದೂ ಸತ್ಯವೇ. ಸತ್ಯವೇ ನಾರಾಯಣಸ್ವರೂಪ. ಸತ್ಯವೇ ಮಹಾಲಕ್ಷ್ಮೀಸ್ವರೂಪ. ಸಮಸ್ತ ವಸ್ತುಗಳಿಗೂ ಸತ್ಯವೇ ಮೂಲಾಧಾರ. ಸತ್ಯವನ್ನು ಬಿಟ್ಟರೆ ಪರಲೋಕಸಾಧನವಾದುದು ಇನ್ನೊಂದಿಲ್ಲ. ದಾನವೂ ಹೋಮವೂ ತಪಸ್ಸುಗಳೂ ವೇದಗಳೂ ಸತ್ಯವನ್ನೇ ಆಶ್ರಯಿಸಿ ಕೊಂಡಿರುವುವು. ಆದ್ದರಿಂದ ಮನುಷ್ಯನು ಸತ್ಯವ್ರತನಾಗಿರಬೇಕು. ಲೋಕದಲ್ಲಿ ಒಬ್ಬನು ತನ್ನ ಸತ್ಯದಿಂದಲೇ ಸಮಸ್ತ ಲೋಕಗಳನ್ನು ಪರಿಪಾಲಿಸುವನು. ಒಬ್ಬನು ಸತ್ಯಮಾರ್ಗದಲ್ಲಿ ನಡೆದು ತನ್ನ ವಂಶವನ್ನು ಉದ್ಧಾರಮಾಡುವನು. ಮತ್ತೊಬ್ಬನು ಸತ್ಯದಿಂದ ಸ್ವರ್ಗಲೋಕವನ್ನೈದುವನು. ಅಂಥ ಸತ್ಯಪ್ರತಿಜ್ಞೆಯುಳ್ಳ ನಾನು ಸತ್ಯವನ್ನು ಬಿಟ್ಟು ನನ್ನ ತಂದೆಯಾದ ದಶರಥರಾಯನ ಆಜ್ಞೆಯನ್ನು ಹೇಗೆ ಮೀರಲಿ ? ತಂದೆಯ ಆಜ್ಞೆಯನ್ನು ಪರಿಪಾಲಿಸಬೇಕೆಂದಿರುವ ನಾನು ಮರವೆಯಿಂದಲಾದರೂ ಅಜ್ಞಾನದಿಂದಲಾದರೂ ಭ್ರಾಂತಿಯುಕ್ತನಾಗಿ ರಾಜ್ಯಲೋಭದಿಂದ ಸತ್ಯದ ಮೇರೆಯನ್ನು ಹೇಗೆ ಮೀರಲಿ ? ಚಂಚಲಚಿತ್ತರಾಗಿ ಕರ್ಮದಲ್ಲಿ ಸ್ಥಿರಚಿತ್ತರಲ್ಲದೆ ಸತ್ಯವನ್ನು ಮೀರಿ ನಡೆಯುವವರು ಕೊಡುವ ಹವ್ಯಕವ್ಯಗಳನ್ನು ದೇವತೆಗಳೂ ಪಿತೃಗಳೂ ಅಂಗೀಕರಿಸರೆಂಬ ಧರ್ಮಪ್ರಸಂಗವನ್ನು ಕೇಳಿದ್ದೇನೆ. ಧರ್ಮವೇ ಸತ್ಯ. ಧರ್ಮಾರ್ಥವಾಗಿ ಸತ್ಪುರುಷರಾದ ಋಷಿಗಳಿಂದ ಧರಿಸಲ್ಪಡುವ ನಾರುಬಟ್ಟೆಯನ್ನೂ ದಂಡಕಮಂಡಲುಗಳನ್ನೂ ಜಡೆಗಳನ್ನೂ ಧರಿಸುವುದೇ ಉತ್ತಮವೆಂದೆಣಿಸಿದ್ದೇನೆ. ಕ್ಷುದ್ರಬುದ್ಧಿಯುಳ್ಳವರನ್ನು ಗುರುವಾಗುಳ್ಳ ಪಾಪಿಗಳಿಂದ ಆಚರಿಸಲ್ಪಡುವ ಧರ್ಮಾಧರ್ಮಗಳಿಂದ ಮಿಶ್ರಿತವಾದ ಕ್ಷತ್ರಧರ್ಮವನ್ನು ನಾನು ತ್ಯಜಿಸುವೆನು. ಮನಸ್ಸಿನಲ್ಲಿ ಮಾಡಬಾರದೆಂದು ತೋರುವ ಕೃತ್ಯವನ್ನು ವಾಕ್ಕಿನಿಂದಲಾದರೂ ನುಡಿಯೆನು—ಕೈಯಿಂದಲಾದರೂ ಮಾಡೆನು. ಲಕ್ಷ್ಮಿಯೂ ಭೂಮಿಯೂ ಸತ್ಯಸಂಧನಾದ ಪುರುಷನನ್ನೇ ಬಯಸುವುವು. ಲಕ್ಷ್ಮೀಭೂಮಿ ಕೀರ್ತಿಗಳು ಸತ್ಯಸಂಧ ನಾದ ಪುರುಷನನ್ನು ಸ್ವರ್ಗದಲ್ಲಿರುವಂತೆ ನೋಡುತ್ತಿರುವುವು. ಆದಕಾರಣ ಮನುಷ್ಯನು ಸತ್ಯವನ್ನೇ ಪರಿಪಾಲಿಸಬೇಕು. ಎಲೈ ಜಾಬಾಲಿಮುನೀಶ್ವರನೆ, ನೀನು ಯುಕ್ತಿವಾಕ್ಯಗಳಿಂದ ನೀಚಕೃತ್ಯವನ್ನು

ಉತ್ತಮವೆಂದು ನುಡಿದೆ. ನನ್ನೊಡನೆ ನೀಚಕೃತ್ಯವನ್ನು ಒಳ್ಳೆಯ ಕೃತ್ಯವೆಂದು ನುಡಿದೆಯಾದರೂ ಅದು ತುಚ್ಛಕೃತ್ಯವೇ ಸರಿ. ನಾನು ನನ್ನ ತಂದೆಯಾದ ದಶರಥರಾಯನ ಆಜ್ಞೆಯನ್ನು ಪರಿಪಾಲಿಸಿ ವನವಾಸಮಾಡಲು ನಿಶ್ಚಯಿಸಿರುವುದರಿಂದ ದಶರಥರಾಯನ ಮಾತನ್ನು ಮೀರಿ ಭರತನ ಮಾತನ್ನಂಗೀ ಕರಿಸೆನು. ಮೊದಲು ನನ್ನ ತಂದೆಯ ಸಂಮುಖದಲ್ಲಿ ಆತನ ಆಜ್ಞೆಯನ್ನು ಪರಿಪಾಲಿಸವುದಾಗಿ ದೃಢ ವಾಗಿ ಪ್ರತಿಜ್ಞೆಯನ್ನು ಮಾಡಿದನು. ಆಗ ಕೈಕೇಯಿದೇವಿಯು ಸಂತುಷ್ಟಚಿತ್ತಳಾದಳು. ಇನ್ನು ನಾನು ವನವಾಸವನ್ನು ಮಾಡಿಕೊಂಡು ಶುಚಿಯಾಗಿ ಆಹಾರನಿಯಮವನ್ನೂ ಇಂದ್ರಿಯನಿಗ್ರಹವನ್ನೂ ಮಾಡಿ ಕೊಂಡು ಕಾಲವನ್ನು ಕಳೆಯುವೆನು. ಮನುಷ್ಯನಾಗಿ ಹುಟ್ಟಿದವನು ಈ ಕರ್ಮಭೂಮಿಯಲ್ಲಿ ತನಗೆ ಪರಲೋಕಸಾಧನವಾದ ಕರ್ಮವನ್ನೇ ಮಾಡಿಕೊಂಡು ಕಪಟವಿಲ್ಲದೆ ರಾಜ್ಯಾಧಿಪತ್ಯವನ್ನು ಮಾಡಿ ಕೊಂಡಿರಬೇಕು. ಲೋಕದಲ್ಲಿ ಅಗ್ನಿ ವಾಯು ಚಂದ್ರ ಸೂರ್ಯರು ಕರ್ಮದ ಫಲವನ್ನೇ ಅನುಭವಿಸು ತ್ತಿರುವರು. ದೇವೇಂದ್ರನು ವಿಘ್ನವಿಲ್ಲದೆ ನೂರು ಯಜ್ಞಗಳನ್ನು ಮಾಡಿ ಸ್ವರ್ಗಲೋಕಾಧಿಪತ್ಯವನ್ನು ಪಡೆದನು. ಅನೇಕ ಮಂದಿ ಋಷಿಗಳು ಉಗ್ರವಾದ ತಪಸ್ಸುಗಳನ್ನು ಮಾಡಿ ಸ್ವರ್ಗಲೋಕವನ್ನೈದಿದರು. ಎಲೈ ಜಾಬಾಲಿಯೇ, ಕೇಳು. ಲೋಕದಲ್ಲಿ ಸತ್ಯ, ಪರಾಕ್ರಮ, ವ್ರತ, ಧರ್ಮ, ದಯೆ, ಪ್ರಿಯವಚನ, ದೇವಬ್ರಾಹ್ಮಣಸಂತರ್ಪಣ ಮೊದಲಾದವು ಸ್ವರ್ಗಸಾಧನವೆಂದು ಸತ್ಪುರುಷರಾದ ಪುಣ್ಯಾತ್ಮರು ಹೇಳುವರು. ಆದ್ದರಿಂದ ಬ್ರಾಹ್ಮಣರು ಧರ್ಮವೇ ಸ್ವರ್ಗಸಾಧನವೆಂದೆಣಿಸಿ ಅನೇಕ ಶ್ರೇಯಸ್ಸನ್ನು ಪಡೆದು ಮರವೆಯಿಲ್ಲದೆ ಸಮಸ್ತ ಧರ್ಮಗಳನ್ನೂ ಮಾಡುತ್ತ ಸನ್ಮಾರ್ಗವನ್ನು ಬಯಸುತ್ತಿದ್ದಾರೆ. ಎಲೈ ಜಾಬಾಲಿಮುನೀಶ್ವರನೇ, ಹೀಗಿರುವಲ್ಲಿ ನೀನು ಹೇಗೆ ನಾಸ್ತಿಕಬುದ್ಧಿಯಿಂದ ಧರ್ಮವನ್ನು ತಿರಸ್ಕರಿಸಿ ನನ್ನ ತಂದೆಯನ್ನು ನಿಂದಿಸಿ ನುಡಿಯುತ್ತಿರುವೆ ? ಈ ರೀತಿ ನಾಸ್ತಿಕಬುದ್ಧಿಯನ್ನು ಇತರರಿಗೆ ಉಪದೇಶಿಸುತ್ತ ತಿರುಗುವ, ಧರ್ಮವನ್ನು ಕೈಬಿಟ್ಟಿರುವ, ನಾಸ್ತಿಕನಾಗಿ ವಿಪರೀತ ಬುದ್ಧಿಯುಳ್ಳ ನಿನ್ನನ್ನು ನನ್ನ ತಂದೆಯು ಆಸ್ಥಾನದಲ್ಲಿಟ್ಟುಕೊಂಡಿದ್ದನ್ನೇ ನಿಂದಿಸುತ್ತೇನೆ. ನಿನ್ನ ಮಾತಿಗೆ ಒಳಗಾದರೆ ನನ್ನನ್ನೂ ನಾಸ್ತಿಕನೆಂದು ಹೇಳುವರು. ನಾಸ್ತಿಕನಾದವನನ್ನು ಸಮಸ್ತ ಪ್ರಜೆಗಳೂ ನಿಂದಿಸುವರು. ಸತ್ಪುರುಷರು ಲೋಕದಲ್ಲಿ ಧರ್ಮವೂ ಇಲ್ಲ, ದೈವವೂ ಇಲ್ಲ—ಎಂಬ ನಾಸ್ತಿಕವಾದಕ್ಕೆ ಒಳಗಾಗರು. ಜಾಬಾಲಿ, ನಿನಗಿಂತಲೂ ಪೂರ್ವದಲ್ಲಿದ್ದ ಮಹಾತ್ಮರು ಶುಭಕರ್ಮ ಗಳನ್ನೂ ದಾನಧರ್ಮಗಳನ್ನೂ ಮಾಡಿ ಈ ಲೋಕದಲ್ಲಿ ಕೀರ್ತಿಯನ್ನೂ ಪರಲೋಕದಲ್ಲಿ ಸದ್ಗತಿಯನ್ನೂ ಪಡೆದರು. ಸತ್ಪುರುಷರಾಗಿ ಅತಿತೇಜಸ್ವಿಗಳಾಗಿ ಧರ್ಮಮಾರ್ಗಪ್ರವರ್ತಕರಾಗಿ ಸದ್ಗುಣಶೀಲರಾಗಿ ನಿಷ್ಕಪಟಿಗಳಾಗಿ ಹಿಂಸೆ ಅಸೂಯಾದಿ ದ್ರೋಹಬುದ್ಧಿಯಿಲ್ಲದವರಾಗಿ ಪೂಜ್ಯರಾದ ಋಷಿಗಳು ಸದಾಚಾರದಿಂದಲೇ ಉತ್ತಮವಾದ ಗತಿಯನ್ನು ಪಡೆದರು" ಎಂದು ಅತ್ಯಂತ ಕೋಪ ಯುಕ್ತನಾಗಿ ನುಡಿದನು.

ಜಾಬಾಲಿಮುನೀಶ್ವರನು ಶ್ರೀರಾಮನೇ ಲೋಕದಲ್ಲಿ ಸತ್ಯಸಂಧನೆಂದು ತಿಳಿದು ಆತನನ್ನು ಮೃದುನುಡಿಗಳಿಂದ ಸಂತವಿಸುತ್ತ "ಎಲೈ ಶ್ರೀರಾಮನೆ, ನಾನು ಚಾರ್ವಾಕನಾಗಿ ಲೋಕದಲ್ಲಿ ದೈವವಿಲ್ಲ, ದಾನಧರ್ಮಗಳಿಲ್ಲ ಎಂದು ನಾಸ್ತಿಕವಾದವನ್ನು ನುಡಿದವನಲ್ಲ. ನಾನು ಕಾಲೋಚಿತ ವನ್ನರಿತು ಯಾವ ಕಾಲದಲ್ಲಿ ಸತ್ಯಧರ್ಮಗಳನ್ನು ಪ್ರತಿಪಾದಿಸಬೇಕು, ಯಾವ ಕಾಲದಲ್ಲಿ ಚಾರ್ವಾಕಮತಾನುಸಾರವಾಗಿ ನಾಸ್ತಿಕವಾದವನ್ನು ಪ್ರತಿಪಾದಿಸಬೇಕು ಎಂದು ವಿಚಾರಿಸಿ ಆಯಾ ಕಾಲದಲ್ಲಿ ಅದನ್ನು ಪ್ರತಿಪಾದಿಸುವೆನು. ಈಗ ನೀನು ರಾಜ್ಯವನ್ನು ಬಿಟ್ಟು ಬಂದು ವನದಲ್ಲಿ ವಿರಕ್ತಮಾರ್ಗವನ್ನಾಶ್ರಯಿಸಿ ಕಾಯಕ್ಲೇಶವನ್ನು ಮಾಡಿಕೊಂಡಿರುವುದನ್ನು ಕಂಡು ಯಾವ ಉಪಾಯ ದಿಂದಾದರೂ ವನವಾಸಪ್ರಯಾಸವನ್ನು ಬಿಡಿಸಿ ಅಯೋಧ್ಯಾಪಟ್ಟಣಕ್ಕೆ ಕರೆದುಕೊಂಡು ಹೋಗಿ

ಸುಖದಲ್ಲಿರಿಸಬೇಕೆಂಬ ಬುದ್ಧಿಯಿಂದ ಚಾರ್ವಾಕಮತವನ್ನಾಶ್ರಯಿಸಿ ನಾಸ್ತಿಕವಾದವನ್ನು ಬೋಧಿಸಿದೆ ನಲ್ಲದೆ ನಾನು ಚಾರ್ವಾಕಪಕ್ಷದವನಲ್ಲ " ಎಂದು ಕೋಪಶಾಂತಿಯನ್ನು ಮಾಡಿ ಸಂತವಿಸಿದನು.



## ೧೧೦ ನೆಯ ಅಧ್ಯಾಯ

## ಇಕ್ಷ್ವಾಕುವಂಶದ ಪರಂಪರೆ

ಆಮೇಲೆ ವಸಿಷ್ಠಮುನೀಶ್ವರನು ಜಾಬಾಲಿಯ ಮಾತನ್ನು ಕೇಳಿ ಕೋಪಯುಕ್ತನಾದ ಶ್ರೀರಾಮನನ್ನು ನೋಡಿ ಈ ರೀತಿ ಹೇಳಿದನು: " ಶ್ರೀರಾಮ, ಕೇಳು : ಈ ಜಾಬಾಲಿಮುನೀಶ್ವರನು ಸಾಮಾನ್ಯನೆಂದು ನಿನ್ನ ಮನಸ್ಸಿನಲ್ಲಿ ತಿಳಿಯಬೇಡ. ಈತನು ಸಮಸ್ತ ಲೋಕಗಳ ಉತ್ಪತ್ತಿ ಲಯಗಳನ್ನೂ ಬಲ್ಲವನು. ಅಂಥ ಜ್ಞಾನಿಯಾದ ಈ ಮುನೀಶ್ವರನು ನಿನ್ನನ್ನು ಅಯೋಧ್ಯಾಪಟ್ಟಣಕ್ಕೆ ತಿರುಗಿಸಬೇಕೆಂಬ ಬುದ್ಧಿಯಿಂದ ಚಾರ್ವಾಕಮತವನ್ನಾಶ್ರಯಿಸಿ ನುಡಿದನಲ್ಲದೆ ಮೋಸಮಾಡ ಬೇಕೆಂದು ನುಡಿಯಲಿಲ್ಲ. ನೀನು ಮಹತ್ತಾದ ಇಕ್ಷ್ವಾಕುವಂಶದಲ್ಲಿ ಜನಿಸಿದವನು. ಈ ಲೋಕಗಳ ಉತ್ಪತ್ತಿಲಯಗಳನ್ನೂ ವಂಶಪರಂಪರೆಯನ್ನೂ ಹೇಳುತ್ತೇನೆ ಕೇಳು :—

ಪೂರ್ವದಲ್ಲಿ ಜಲಪ್ರಳಯವಾಗಿ ಭೂಮಿಯು ಜಲದೊಳಗೆ ಮುಳುಗಿತು. ಆ ಸಮಯದಲ್ಲಿ ಪ್ರಳಯಕಾಲದ ಉದಕದ ಮೇಲೆ ಪರಮಪುರುಷನಾದ ನಾರಾಯಣನು ವಟಪತ್ರಶಯನನಾಗಿದ್ದನು. ಆತನ ನಾಭಿಕಮಲದಲ್ಲಿ ಬ್ರಹ್ಮದೇವನು ಜನಿಸಿದನು. ಆಮೇಲೆ ಸಮಸ್ತದೇವತೆಗಳೂ ಜನಿಸಿದರು. ದೇವತೆಗಳ ಆಹಾರನಿಮಿತ್ತವಾಗಿಯೂ ಯಜ್ಞಾದಿಸತ್ಕರ್ಮಗಳ ನಿಮಿತ್ತವಾಗಿಯೂ ನೀರಿನಲ್ಲಿ ಮುಳುಗಿದ್ದ ಭೂಮಂಡಲವನ್ನು ಪರಮಪುರುಷನಾದ ನಾರಾಯಣನು ವರಾಹಸ್ವರೂಪನಾಗಿ ಮೇಲಕ್ಕೆ ನೆಗಹಿದನು. ಆಮೇಲೆ ಬ್ರಹ್ಮದೇವನು ನಿಖಿಲ ದೇವತೆಗಳನ್ನೂ ಸೃಷ್ಟಿಸಿದನು. ಆತನಿಗೆ ಮರೀಚಿಯು ಜನಿಸಿದನು. ಆತನಿಗೆ ಕಶ್ಯಪಬ್ರಹ್ಮನು ಜನಿಸಿದನು. ಆತನಿಗೆ ವಿವಸ್ವಂತನು ಜನಿಸಿದನು. ಆತನಿಗೆ ವೈವಸ್ವತಮನುವು ಜನಿಸಿದನು. ಆತನಿಗೆ ಇಕ್ಷ್ವಾಕುವು ಜನಿಸಿದನು. ವೈವಸ್ವತಮನುವು ತನ್ನ ಮಗನಾದ ಇಕ್ಷಾಕುವಿಗೆ ಅಯೋಧ್ಯಾಪಟ್ಟಣದಲ್ಲಿ ಶಾಸ್ತ್ರೋಕ್ತಪ್ರಕಾರದಲ್ಲಿ ಪಟ್ಟವನ್ನು ಕಟ್ಟಿದನು. ಇಕ್ಷ್ವಾಕುವಿನ ಮಗನು ಕುಕ್ಷಿ. ಆತನ ಮಗನು ವಿಕುಕ್ಷಿ. ಆತನ ಮಗನು ಬಾಣ. ಆತನ ಮಗನು ಅನರಣ್ಯನು. ಆತನ ಮಗನು ಪೃಥುಚಕ್ರವರ್ತಿ. ಆತನ ಮಗನು ತ್ರಿಶಂಕುಮಹಾರಾಯ. ಆತನು ತಾನು ಮಾಡಿದ ದಾನ ಧರ್ಮ ತಪೋವ್ರತಾದಿಗಳಿಂದ ನಕ್ಷತ್ರ ಲೋಕವನ್ನು ಪಡೆದು ಈಗಲೂ ಕಾಣಿಸುತ್ತಿದ್ದಾನೆ. ತ್ರಿಶಂಕುಮಹಾರಾಯನ ಮಗನು ದುಂಧುಮಾರ. ಆತನ ಮಗನು ಯುವನಾಶ್ವ. ಆತನ ಮಗನು ಮಾಂಧಾತ. ಆತನ ಮಗನು ಸುಸಂಧಿ. ಆತನಿಗೆ ಧ್ರುವಸಂಧಿ ಪ್ರಸೇನಜಿತ್ತು ಎಂಬ ಇಬ್ಬರು ಕುಮಾರರಾದರು. ಧ್ರುವಸಂಧಿಗೆ ಭರತನು ಜನಿಸಿದನು. ಆತನಿಗೆ ಅಸಿತನೆಂಬ ಕುಮಾರನು ಜನಿಸಿದನು. ಅವನು ಹೈಹಯರಾಯ ತಾಲಜಂಘರಾಯ ಶಶಿಬಿಂದು ಮೊದಲಾದ ಬಹುಮಂದಿ ಶತ್ರುಗಳಿಂದ ಯುದ್ಧರಂಗದಲ್ಲಿ ಮುರಿಯಲ್ಪಟ್ಟು, ದೇಶಭ್ರಷ್ಟನಾಗಿ ಗರ್ಭಿಣಿಯರಾದ ತನ್ನ ಈರ್ವರು ಪತ್ನಿಯರನ್ನೂ ಕರೆದುಕೊಂಡು ಹಿಮವತ್ಪರ್ವತಕ್ಕೆ ಹೋದನು. ಆ ಪತ್ನಿಯರಲ್ಲಿ ಒಬ್ಬಳು ಮತ್ಸರದಿಂದ ಕಾಳಿಂದಿಯೆಂಬ ಮತ್ತೊಬ್ಬಳ ಗರ್ಭವನ್ನು ಕರಗಿಸಬೇಕೆಂದು ಆಕೆಗೆ ವಿಷವನ್ನಿಕ್ಕಿದಳು. ಕಾಳಿಂದಿಯು ಆಗ

ಹಿಮವತ್ಪರ್ವತದಲ್ಲಿದ್ದ ಭಾರ್ಗವಚ್ಯವನಮುನೀಶ್ವರನ ಸಮೀಪಕ್ಕೆ ಹೋಗಿ ಅಭಿವಂದಿಸಿ ತನ್ನ ಉದರದಲ್ಲಿ ಸತ್ಪುತ್ರನು ಜನಿಸುವಂತೆ ಕೃಪೆಮಾಡಬೇಕೆಂದು ಪ್ರಾರ್ಥಿಸಿದಳು. ಆ ಮುನೀಶ್ವರನು ಆಕೆಗೆ ಮಹಾತ್ಮನೂ ಲೋಕಪ್ರಸಿದ್ಧನೂ ವಂಶೋದ್ಧಾರಕನೂ ಆದ ಕುಮಾರನು ಉಂಟಾಗುವನೆಂದು ನುಡಿದನು. ಕಾಳಿಂದಿಯು ಹರ್ಷಪಟ್ಟು ಆ ಮುನೀಶ್ವರನಿಗೆ ಪ್ರದಕ್ಷಿಣವನ್ನು ಮಾಡಿ ತನ್ನ ಮನೆಗೆ ಹೋಗಿ ಸುಖದಲ್ಲಿದ್ದು ಶುಭಲಗ್ನದಲ್ಲಿ ಒಬ್ಬ ಕುಮಾರನನ್ನು ಪಡೆದಳು. ಕಾಳಿಂದಿಗೆ ಹಾಕಿದ ವಿಷದೊಡನೆ ಜನಿಸಿದ್ದರಿಂದ ಆ ಕುಮಾರನಿಗೆ ಸಗರನೆಂಬ ಹೆಸರಾಯಿತು. ಸಗರನು ಶತ್ರುಗಳನ್ನು ಜಯಿಸಿ ಚಕ್ರವರ್ತಿಯಾಗಿ ಸಮಸ್ತ ಭೂಮಂಡಲವನ್ನೂ ಆಳುತ್ತ ಒಂದು ಸಮಯದಲ್ಲಿ ಯಾಗದೀಕ್ಷಿತನಾಗಿ ಜನರೆಲ್ಲರೂ ಅಂಜುವ ದೊಡ್ಡ ಸಮುದ್ರವನ್ನೇ ತೋಡಿಸಿದನು. ಸಗರಚಕ್ರವರ್ತಿಗೆ ಅಸಮಂಜನೆಂಬ ಕುಮಾರನಾದನು. ಆತನು ಅತ್ಯಂತ ದುರಾಚಾರಿಯಾಗಿರಲು ಸಗರನು ಆತನನ್ನು ದೇಶತ್ಯಾಗಮಾಡಿಸಿದನು. ಅಸಮಂಜನಿಗೆ ಅಂಶುಮಂತನೆಂಬ ಕುಮಾರನಾದನು. ಆತನ ಮಗನು ದಿಲೀಪ. ಅವನ ಮಗನು ಭಗೀರಥ. ಅವನ ಮಗನು ಕಕುತ್ಸ್ಥ. ಆತನ ಮಗನು ರಘುಚಕ್ರವರ್ತಿ. ಆತನ ಮಗನು ಕಲ್ಮಾಷಪಾದ. ಆತನಿಗೆ ಸೌದಾಸನೆಂಬ ಹೆಸರೂ ಉಂಟು. ಕಲ್ಮಾಷಪಾದನ ಮಗನು ಶಂಖಣ. ಅವನಿಗೆ ಸುದರ್ಶನನು ಜನಿಸಿದನು. ಆತನಿಗೆ ಅಗ್ನಿವರ್ಣನೂ ಅವನಿಗೆ ಶೀಘ್ರಗನೂ ಆತನಿಗೆ ಮರುವೂ ಆತನಿಗೆ ಪ್ರಶುಶ್ರುಕನೂ ಆತನಿಗೆ ಅಂಬರೀಷನೂ ಉದಯಿಸಿದರು. ಅಂಬರೀಷನ ಮಗನು ನಹುಷ. ಅವನಿಗೆ ಅತ್ಯಂತ ಧಾರ್ಮಿಕನಾದ ನಾಭಾಗನು ಜನಿಸಿದನು. ಅವನಿಗೆ ಅಜ ಸುವ್ರತ ಎಂಬ ಕುಮಾರರಿಬ್ಬರು ಜನಿಸಿದರು. ಅಜಚಕ್ರವರ್ತಿಗೆ ದಶರಥಮಹಾರಾಯನು ಜನಿಸಿದನು. ದಶರಥಮಹಾರಾಯನಿಗೆ ನೀನು ಜ್ಯೇಷ್ಠಪುತ್ರನಾಗಿ ಅವತರಿಸಿದೆ. ನಾನು ಹೇಳಿದ ಇಕ್ಷ್ವಾಕುರಾಯನೇ ಮೊದಲಾಗಿ ಇದುವರೆಗೂ ನಿಮ್ಮ ವಂಶದಲ್ಲಿ ಜ್ಯೇಷ್ಠ ಪುತ್ರರೇ ಪಟ್ಟಾಭಿಷಿಕ್ತರಾದರಲ್ಲದೆ ಕನಿಷ್ಠಪುತ್ರರು ರಾಜ್ಯಾಧಿಪತ್ಯವನ್ನು ಮಾಡಲಿಲ್ಲ. ಆದ್ದರಿಂದ ನೀನು ಪಟ್ಟಾಭಿಷೇಕವನ್ನು ಕೈಕೊಂಡು ರಾಜ್ಯವನ್ನು ಪರಿಪಾಲಿಸು! ಶ್ರೀರಾಮ, ಅಂಥ ಇಕ್ಷ್ವಾಕುವಂಶದಲ್ಲಿ ಅವತರಿಸಿದ ನೀನು ನಿನ್ನ ಕುಲಾಚಾರವನ್ನು ವಿಚಾರಿಸಿ ನಿಮ್ಮ ತಂದೆಯಾದ ದಶರಥರಾಯನ ಹಾಗೆ ಕೀರ್ತಿವಂತನಾಗಿ ನವರತ್ನಗಳಿಂದ ತುಂಬಿರುವ ಸಮುದ್ರಪರ್ಯಂತವಾದ ಭೂಮಂಡಲವನ್ನಾಳಿಕೊಂಡು ಸುಖದಲ್ಲಿರು" ಎಂದು ವಸಿಷ್ಠನು ಹೇಳಿದನು.



೧೧೧ ನೆಯ ಅಧ್ಯಾಯ

## ಶ್ರೀರಾಮನು ಅಯೋಧ್ಯೆಗೆ ಬರುವುದಿಲ್ಲವೆಂದು ಹೇಳಿದ್ದು

ಆಮೇಲೆ ವಸಿಷ್ಠಮುನೀಶ್ವರನು ಮತ್ತೆ ಶ್ರೀರಾಮನನ್ನು ಕುರಿತು ಧರ್ಮರಹಸ್ಯವುಳ್ಳ ಮಾತುಗಳಿಂದ ಹೀಗೆ ನುಡಿದನು: "ಶ್ರೀರಾಮ, ಲೋಕದಲ್ಲಿ ಪುರುಷನಿಗೆ ಆಚಾರ್ಯ ತಂದೆ ತಾಯಿ— ಈ ಮೂವರೂ ಗುರುಗಳಾಗಿರುವರು. ಅವರಲ್ಲಿ ತಂದೆಯು ಶರೀರವನ್ನು ಕೊಡುವನು. ಆಚಾರ್ಯನು ಜ್ಞಾನಬೋಧೆಯನ್ನು ಮಾಡುವನು. ತಾಯಿ ರಕ್ಷಿಸುವಳು. ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನುಂಟುಮಾಡುವ ಸುಜ್ಞಾನವನ್ನು ಉಪದೇಶಿಸುವ ಆಚಾರ್ಯನೇ ಸದ್ಗುರುವೆನಿಸಿಕೊಳ್ಳುವನು. ನಾನು ನಿನ್ನ ತಂದೆಯಾದ ದಶರಥರಾಯನಿಗೂ ಆಚಾರ್ಯನಾಗಿದ್ದುದ

ರಿಂದ ನಿನಗೆ ಗುರು. ಹೀಗೆ ಗುರುವಾದ ನನ್ನ ಮಾತನ್ನು ಕೇಳಿ ನಡೆದರೆ ನೀನು ಸನ್ಮಾರ್ಗವನ್ನು ಅತಿಕ್ರಮಿಸಿದವನಾಗುವುದಿಲ್ಲ. ಸಮಸ್ತ ಪೌರರೂ ಬ್ರಾಹ್ಮಣರೂ ಒಟ್ಟಾಗಿ ಹೇಳುವ ಮಾತನ್ನು ಕೇಳಿ ನಡೆದರೆ ಸನ್ಮಾರ್ಗವನ್ನು ಬಿಟ್ಟಹಾಗಲ್ಲ. ವೃದ್ಧೆಯಾಗಿ ಧರ್ಮಶೀಲೆಯಾದ ನಿನ್ನ ತಾಯಿಯ ಮಾತನ್ನು ಅತಿಕ್ರಮಿಸದಿದ್ದರೆ ಸನ್ಮಾರ್ಗವನ್ನತಿಕ್ರಮಿಸದಿರುವೆ. ನಿನ್ನನ್ನು ಅಯೋಧ್ಯಾಪಟ್ಟಣಕ್ಕೆ ಬರಹೇಳಿ ಪ್ರಾರ್ಥನೆ ಮಾಡುವ ಭರತನ ಮಾತನ್ನೂ ನನ್ನ ಮಾತನ್ನೂ ಮೀರಬೇಡ" ಎಂದು ಹೇಳಿದನು.

ಆ ಮಾತನ್ನು ಕೇಳಿ ಶ್ರೀರಾಮನು ವಸಿಷ್ಠಮುನೀಶ್ವರನನ್ನು ಕುರಿತು "ಮಹರ್ಷಿಗಳೆ, ಲೋಕದಲ್ಲಿ ಮಗನಾದವನು ತಾಯಿತಂದೆಗಳು ಹೇಳಿದ ರೀತಿಯಲ್ಲಿರುವುದೇ ಕೃತ್ಯವಲ್ಲದೆ ಮತ್ತೊಂದಲ್ಲ. ಹಾಗಿಲ್ಲದಿದ್ದರೆ ದಶರಥರಾಯನು ನನ್ನ ಶರೀರವನ್ನು ಬಹು ಬಗೆಯಲ್ಲಿ ಪೋಷಣೆ ಮಾಡಿ ರಕ್ಷಿಸಿದ್ದಕ್ಕೆ ನಾನು ಏನು ಮಾಡಿದಂತಾಯಿತು ? ತನ್ನ ಶಕ್ತ್ಯನುಸಾರವಾಗಿ ಕೊಟ್ಟು ಹೊದಿಕೆಗಳಿಂದಲೂ ಹಾಸಿಗೆಗಳಿಂದಲೂ ಪ್ರಿಯವಚನಗಳಿಂದಲೂ ಲಾಲಿಸಿ ರಕ್ಷಿಸಿದ ತಂದೆಯ ಮಾತನ್ನು ಮೀರಬಾರದು. ದಶರಥರಾಯನು ನನಗೆ ತಂದೆಯು—ಅರಸನು. ಆದಕಾರಣ ಆತನ ಸಂಮುಖದಲ್ಲಿ ನಾನು ಮಾಡಿದ ಪ್ರತಿಜ್ಞೆಯು ವ್ಯರ್ಥವಾಗಬಾರದು" ಎಂದು ನುಡಿದನು.

ಅದನ್ನು ಕೇಳಿ ಭರತನು, ಶ್ರೀರಾಮನು ವನವಾಸದ ಮಿತಿಯು ತೀರುವ ಪರ್ಯಂತ ಅಯೋಧ್ಯಾಪಟ್ಟಣಕ್ಕೆ ತಿರುಗಿ ಬರನೆಂದು ತಿಳಿದು ಮನಸ್ಸಿನಲ್ಲಿ ಅತ್ಯಂತ ವ್ಯಥೆಪಟ್ಟು ತನ್ನ ಸಾರಥಿಯಾದ ಸುಮಂತ್ರನನ್ನು ಕುರಿತು "ಎಲೈ ಸುಮಂತ್ರ, ಶ್ರೀರಾಮನ ಸಂಮುಖದಲ್ಲಿ ನೆಲದ ಮೇಲೆ ದರ್ಭೆಯ ಹಾಸಿಗೆಯಲ್ಲಿ ಆತನು ಕೃಪೆಮಾಡುವ ಪರ್ಯಂತ ದರಿದ್ರನಾದ ಬ್ರಾಹ್ಮಣನಂತೆ ಆಹಾರವನ್ನು ಬಿಟ್ಟು ಮಲಗಿರುವೆನು. ದರ್ಭೆಯನ್ನು ನೆಲದ ಮೇಲೆ ಹರಡು" ಎಂದು ನುಡಿದನು. ಸುಮಂತ್ರನು ರಾಮನ ಮುಖವನ್ನು ನೋಡುತ್ತ ಸುಮ್ಮನೆ ನಿಂತನು.

ಆಗ ಭರತನು ಖಿನ್ನನಾಗಿ ತಾನೇ ದರ್ಭೆಗಳನ್ನು ನೆಲದಮೇಲೆ ಹಾಸಿ ಅದರಲ್ಲಿ ಕುಳಿತನು. ಅದನ್ನು ನೋಡಿ ರಾಜರ್ಷಿಯಾದ ಶ್ರೀರಾಮನು ಭರತನನ್ನು ಕುರಿತು "ಭರತ, ನಾನು ತಂದೆಯ ಮಾತನ್ನು ಮೀರದಿದ್ದರೆ ನೀನು ಉಪವಾಸ ಮಾಡಲು ಹಠಮಾಡುವುದು ಸರಿಯಲ್ಲ. ಪಟ್ಟಾಭಿಷೇಕಕ್ಕೆ ಯೋಗ್ಯನಾದ ರಾಜಕುಮಾರನು ಹಠದಿಂದ ಪ್ರಾಯೋಪವೇಶವನ್ನು ಮಾಡಬಾರದು. ರಾಜಕುಮಾರ, ಉಗ್ರವಾದ ವ್ರತವನ್ನು ಬಿಟ್ಟೇಳು. ರಾಜಧಾನಿಯಾದ ಅಯೋಧ್ಯಾಪಟ್ಟಣಕ್ಕೆ ಶೀಘ್ರದಲ್ಲಿ ತೆರಳು" ಎಂದು ನುಡಿದನು.

ಭರತನು ದರ್ಭಾಸನದ ಮೇಲೆ ಕುಳಿತುಕೊಂಡು ಪುರಜನರನ್ನು ಕುರಿತು "ಎಲೈ ಜನಗಳಿರಾ, ನೀವೆಲ್ಲರೂ ಸುಮ್ಮನೆ ಇರಬಹುದೆ! ಶ್ರೀರಾಮನಿಗೆ ಹಿತವಚನವನ್ನು ಹೇಳಿರಿ" ಎಂದನು.

ಆ ಜನರು "ಭರತ, ಶ್ರೀರಾಮನ ಅಭಿಪ್ರಾಯವನ್ನು ತಿಳಿದೆವು. ಈ ಮಹಾತ್ಮನು ಒಳ್ಳೆಯ ಮಾರ್ಗವನ್ನೇ ಅನುಸರಿಸಿದ್ದಾನೆ. ತನ್ನ ತಂದೆಯಾದ ದಶರಥರಾಯನ ಆಜ್ಞೆಯಲ್ಲಿದ್ದಾನೆ. ಆದಕಾರಣ ಈತನನ್ನು ಅಯೋಧ್ಯಾಪಟ್ಟಣಕ್ಕೆ ತಿರುಗಿಸುವುದಕ್ಕೆ ನಾವು ಸಮರ್ಥರಲ್ಲ" ಎಂದು ನುಡಿದರು.

ಶ್ರೀರಾಮನು ಆ ಜನರು ಹೇಳಿದ ಮಾತನ್ನು ಕೇಳಿ ಭರತನನ್ನು ಕುರಿತು "ಭರತ, ಕೇಳಿದೆಯಾ ಈ ಧಾರ್ಮಿಕ ಮಿತ್ರರಾಡುವ ಮಾತನ್ನು ? ಮೇಲೇಳು. ಎದ್ದು ನನ್ನನ್ನೂ ಪವಿತ್ರವಾದ ನೀರನ್ನೂ ಮುಟ್ಟು" ಎಂದನು. ಅನಂತರ ಭರತನು ಎದ್ದು ನೀರನ್ನು ಮುಟ್ಟಿ ಎಲ್ಲರನ್ನೂ ನೋಡಿ

"ಪುರಜನರೇ, ನನ್ನ ತಂದೆಯ ಮಾತನ್ನು ಮೀರದೆ ವನವಾಸ ಮಾಡಲೇಬೇಕಾದಲ್ಲಿ ನನ್ನ ಅಣ್ಣನಿಗೆ ಬದಲಾಗಿ ನಾನು ಹದಿನಾಲ್ಕು ವರುಷಗಳ ಪರ್ಯಂತ ವನವಾಸವನ್ನು ಮಾಡುತ್ತೇನೆ. ಶ್ರೀರಾಮನು ಅಯೋಧ್ಯಾಪಟ್ಟಣಕ್ಕೆ ಹೋಗಿ ಪಟ್ಟವನ್ನು ಕಟ್ಟಿಕೊಂಡು ರಾಜ್ಯಪರಿಪಾಲನವನ್ನು ಮಾಡಿಕೊಂಡಿರಲಿ" ಎಂದು ಹೇಳಿದನು.

ಒಡಹುಟ್ಟಿದವನಾದ ಭರತನ ಮಾತನ್ನು ಕೇಳಿ ಶ್ರೀರಾಮನು ಅತ್ಯಂತಾಶ್ಚರ್ಯಪಟ್ಟು ಆ ಪುರಜನರನ್ನು ಕುರಿತು "ಎಲೈ ಜನರೇ, ಕೇಳಿ. ನನ್ನ ತಂದೆಯಾದ ದಶರಥರಾಯನು ಜೀವಂತನಾಗಿದ್ದಾಗ ಒಬ್ಬರಿಗೆ ಕ್ರಯವಾಗಿ ಕೊಟ್ಟ ವಸ್ತುವನ್ನಾಗಲಿ, ಕೊಂಡ ವಸ್ತುವನ್ನಾಗಲಿ, ಅಡವಮಾನವಿಟ್ಟದ್ದನ್ನಾಗಲಿ ಬದಲಾಯಿಸಲು ನನಗಾಗಲಿ ಭರತನಿಗಾಗಲಿ ಅಧಿಕಾರವಿಲ್ಲ. ದಶರಥರಾಯನ ಪ್ರತಿಜ್ಞೆಯನ್ನು ನಾನು ಮೀರಬಾರದು. ವನವಾಸಕ್ಕೆ ಪ್ರತಿನಿಧಿಯನ್ನು ಏರ್ಪಡಿಸುವುದು ಹೀನಕೃತ್ಯ. ನಾನು ಅಯೋಧ್ಯಾಪಟ್ಟಣಕ್ಕೆ ತಿರುಗಿ ಹೋಗುವವನಲ್ಲ. ಕೈಕೇಯಿದೇವಿಯು ಯುಕ್ತವಾದುದನ್ನೇ ಆಡಿರುವಳು. ತಂದೆಯೂ ನ್ಯಾಯ್ಯವಾದುದನ್ನೇ ಮಾಡಿರುವನು. ಭರತನು ಮಹಾ ಶಾಂತಗುಣವುಳ್ಳವನೂ ಸದ್ಗುಣಸಂಪನ್ನನೂ ಗುರುಭಕ್ತನೂ ಎಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಸತ್ಯಸಂಧನಾಗಿ ಮಹಾತ್ಮನಾದ ಭರತನಲ್ಲಿ ಕಲ್ಯಾಣಗುಣಗಳೇ ಇರುವುವು. ನಾನು ಹದಿನಾಲ್ಕು ವರುಷಗಳ ವನವಾಸ ಎಂಬ ಮಿತಿಯು ತುಂಬಿದ ಮೇಲೆ ಅಯೋಧ್ಯಾಪಟ್ಟಣಕ್ಕೆ ಬಂದು ಧರ್ಮಶೀಲನಾದ ಭರತನನ್ನು ಕೂಡಿಕೊಂಡು ರಾಜ್ಯಾಧಿಪತ್ಯವನ್ನು ಮಾಡುವೆನು. ಕೈಕೇಯಿದೇವಿಗೆ ವರವನ್ನು ಕೊಟ್ಟದ್ದಾಗಿ ಪ್ರತಿಜ್ಞೆಯನ್ನು ಮಾಡಿದ ದಶರಥರಾಯನ ಆಜ್ಞೆಯನ್ನು ಮೀರಲಾರೆನು" ಎಂದು ನುಡಿದನು.



## ೧೧೩ ನೆಯ ಅಧ್ಯಾಯ

## ಶ್ರೀರಾಮನು ಪಾದುಕೆಗಳನ್ನು ಕೊಟ್ಟು ಭರತನನ್ನು ಕಳುಹಿಸಿದ್ದು

ಆಮೇಲೆ ಆ ಆಶ್ರಮಕ್ಕೆ ಬಂದಿದ್ದ ಋಷಿಗಳು ಅಪರಿಮಿತವಾದ ತೇಜಸ್ಸುಳ್ಳ ಮಹಾತ್ಮರಾದ ಶ್ರೀರಾಮನನ್ನೂ ಭರತನನ್ನೂ ಕಂಡು ಅತ್ಯಂತ ಸಂತೋಷಪಟ್ಟು "ಆಹಾ! ಇಂಥ ಸತ್ಪುರುಷರುಂಟೆ! ಲೋಕದಲ್ಲಿ ಇವರೇ ಸತ್ಯಸಂಧರು. ಇವರೇ ಮಹಾ ಧನ್ಯರು. ಅತ್ಯಂತ ಧರ್ಮರಹಸ್ಯವನ್ನು ಬಲ್ಲವರು. ಅತಿಪರಾಕ್ರಮಿಗಳು .ಇಂಥ ಮಕ್ಕಳನ್ನು ಹೆತ್ತ ತಾಯಿತಂದೆಗಳೇ ಕೃತಾರ್ಥರು. ಇವರ ಸಂಭಾಷಣೆಯನ್ನು ಕೇಳುವುದಕ್ಕೆ ಪ್ರೀತಿಯಾಗುತ್ತದೆ!" ಎಂದು ಕೊಂಡಾಡಿದರು. ಅನಂತರ ಭರತನನ್ನು ಕುರಿತು "ಭರತ, ನೀನು ಸತ್ಕುಲಪ್ರಸೂತನು, ಮಹಾಪ್ರಾಜ್ಞನು, ಕೀರ್ತಿವಂತನು. ನಿನ್ನದು ಮಹಾ ಸಚ್ಚರಿತ್ರವು. ನೀನು ಶ್ರೀರಾಮನನ್ನು ತಂದೆಗೆ ಸರಿಯಾಗಿ ಕಾಣುವ ಪಕ್ಷದಲ್ಲಿ ಆತನ ಮಾತನ್ನು ಕೇಳಬೇಕೆಂದು ನಾವೆಲ್ಲರೂ ಬಯಸುತ್ತೇವೆ. ಶ್ರೀರಾಮನು ತಂದೆಯ ಆಜ್ಞೆಯನ್ನು ಮೀರದೆ ಆತನ ಋಣವನ್ನು ತೀರಿಸಬೇಕೆಂದು ಬಯಸುತ್ತಿದ್ದಾನೆ, ದಶರಥರಾಯನು ತನ್ನ ಪತ್ನಿಯಾದ ಕೈಕೇಯಿದೇವಿಗೆ ಕೊಟ್ಟ ಮಾತಿಗೆ ತಪ್ಪದೆ ಆಕೆಯ ಋಣವನ್ನು ತೀರಿಸಿ ಸ್ವರ್ಗಸ್ಥನಾದನಲ್ಲವೆ? ತನ್ನ ಪ್ರತಿಜ್ಞೆಯನ್ನು ಶ್ರೀರಾಮನು ಕೆಡಿಸಬಹುದೆ!" ಎಂದು ನುಡಿದು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಅವರ ಮಾತನ್ನು ಕೇಳಿ ಶ್ರೀರಾಮನು ಹರ್ಷಪಟ್ಟು ಆ ಋಷಿಗಳು ತನಗೆ ಅನುಕೂಲವಾದ ಮಾತನ್ನಾಡಿದುದಕ್ಕಾಗಿ ಅವರನ್ನು ಸ್ತುತಿಸಿದನು. ಭರತನು ಆ ಋಷಿಗಳು ಶ್ರೀರಾಮನಿಗೆ ಅನುಕೂಲ ವಾಗಿ ಮಾತನಾಡಿದ್ದನ್ನು ಕೇಳಿ ಕಂಗೆಟ್ಟು ಸ್ವರಗುಂದಿ ಕೈಮುಗಿದುಕೊಂಡು ಅತ್ಯಂತ ದೈನ್ಯೋಕ್ತಿಯಿಂದ ಶ್ರೀರಾಮನನ್ನು ಕುರಿತು " ಅಣ್ಣ. ನೀನು ರಾಜಧರ್ಮವನ್ನೂ ನಮ್ಮ ಕುಲಧರ್ಮವನ್ನೂ ವಿಚಾರಿಸಿ ನನ್ನ ತಾಯಿಯಾದ ಕೈಕೇಯೀದೇವಿಯ ಪ್ರಾರ್ಥನೆಯನ್ನು ಪರಿಪಾಲಿಸು. ನೀನಿಲ್ಲದೆ ನಾನೊಬ್ಬನೇ ರಾಜ್ಯಾಧಿಪತ್ಯವನ್ನು ವಹಿಸುವುದಕ್ಕೆ ಸಮರ್ಥನಲ್ಲ. ಸಮಸ್ತ ಪುರಜನರೂ ಪರಿಜನರೂ ನಿನ್ನನ್ನೇ ಬಯಸುತ್ತಿದ್ದಾರೆ. ಅದಲ್ಲದೆ ನಮ್ಮ ಜ್ಞಾತಿಗಳು, ಮಿತ್ರರು, ಪಟುಭಟರು ಮೊದಲಾದವರೂ ವರ್ಷಾಕಾಲದಲ್ಲಿ ಚಾತಕಪಕ್ಷಿಗಳು ಮಳೆಗರೆಯುವ ಮೇಘಗಳನ್ನು ಬಯಸುವಂತೆ ನಿನ್ನನ್ನೇ ಬಯಸುತ್ತಿದ್ದಾರೆ. ಆದಕಾರಣ ನೀನು ಎಲ್ಲರಿಗೂ ಸಂತೋಷವಾಗುವ ರಾಜ್ಯಭಾರವನ್ನು ವಹಿಸಿ ಕೊಂಡು ಸಮಸ್ತ ಪ್ರಜೆಗಳನ್ನೂ ಪರಿಪಾಲಿಸು. ಪ್ರಜಾಪಾಲನಕ್ಕೆ ನೀನೇ ಸಮರ್ಥನಲ್ಲದೆ ಮತ್ತೊಬ್ಬರಲ್ಲ " ಎಂದು ಆತನ ಪಾದಗಳಿಗೆ ಸಾಷ್ಟಾಂಗವೆರಗಿ ಅತ್ಯಂತ ಪ್ರಿಯವಚನಗಳಿಂದ ಪ್ರಾರ್ಥನೆಮಾಡಿದನು.

ಶ್ರೀರಾಮನು " ಭರತ, ನಿನಗೆ ಇಂಥ ವಿನಯಬುದ್ಧಿ ಇರುವುದರಿಂದ ನೀನು ಸಮಸ್ತ ಜನಗಳನ್ನೂ ಪರಿಪಾಲಿಸಬಲ್ಲೆ. ನೀನು ಬುದ್ಧಿವಂತರೂ ಮಹಾತ್ಮರೂ ಆದ ಪ್ರಧಾನರೊಡನೆ ಮಂತ್ರಾಲೋಚನೆಯನ್ನು ಮಾಡಿಕೊಂಡು ಅವರ ಸಹಾಯದಿಂದ ರಾಜ್ಯಪಾಲನ ಮಾಡು. ಚಂದ್ರ ಪ್ರಭೆಯು ಚಂದ್ರನನ್ನು ಬಿಟ್ಟು ತೊಲಗಿದರೂ ಹಿಮವತ್ಪರ್ವತವು ಹಿಮವನ್ನು ಬಿಟ್ಟರೂ ಸಮುದ್ರವು ತನ್ನ ಮೇರೆಯನ್ನು ಮೀರಿದರೂ ನಾನು ನಮ್ಮ ತಂದೆಯಾದ ದಶರಥರಾಯನ ಆಜ್ಞೆಯನ್ನು ಮಾತ್ರ ಮೀರಲಾರೆನು. ನಿನ್ನ ತಾಯಿಯಾದ ಕೈಕೇಯೀದೇವಿಯು ನಿನಗೆ ರಾಜ್ಯವಾಗಬೇಕೆಂದು ತನ್ನ ಈ ಕಾರ್ಯವನ್ನು ಮಾಡಿದಳು. ಇದನ್ನು ನಾನು ತಪ್ಪಿಸಲು ಇಚ್ಛಿಸುವವನಲ್ಲ. ನಾನು ಕೈಕೇಯೀ ದೇವಿಯನ್ನು ಕೌಸಲ್ಯಾದೇವಿಯಂತೆಯೇ ಕಾಣತಕ್ಕವನು " ಎಂದು ನುಡಿದನು.

ಈ ಪ್ರಕಾರವಾಗಿ ನುಡಿದ ಸೂರ್ಯಸದೃಶನೂ ಚಂದ್ರನಂತೆ ಕಾಂತಿಯುಕ್ತನೂ ಆದ ಶ್ರೀರಾಮನನ್ನು ಕುರಿತು ಭರತನು " ಅಣ್ಣ, ನಾನು ನಿನ್ನ ಮಾತಿಗೆ ಪ್ರತ್ಯುತ್ತರವನ್ನು ಕೊಡಬಾರದು. ಹಾಗೆಯೇ ಆಗಲಿ; ಮತ್ತೊಂದು ಕಾರ್ಯವನ್ನು ಮಾಡಿಕೊಟ್ಟು ನನಗೆ ಅನುಕೂಲನಾಗು. ನಿನ್ನ ಪಾದಗಳಿಂದ ಮೆಟ್ಟುವ ಪಾದುಕೆಗಳನ್ನು ಕೊಡು. ಅವು ಸಮಸ್ತ ಲೋಕಗಳ ಯೋಗಕ್ಷೇಮಗಳನ್ನೂ ನೋಡಿಕೊಳ್ಳಲು ಸಮರ್ಥವಾಗಿವೆ " ಎಂದು ಪ್ರಾರ್ಥಿಸಿದನು.

ಆ ಮಾತನ್ನಂಗೀಕರಿಸಿ ಪುರುಷೋತ್ತಮನಾದ ಶ್ರೀರಾಮನು ತನ್ನ ಪಾದುಕೆಗಳನ್ನು ಮಹಾತ್ಮ ನಾದ ಭರತನಿಗೆ ಕೃಪೆಯಿಂದ ಕೊಟ್ಟನು.

ಆಮೇಲೆ ಭರತನು ಆ ಪಾದುಕೆಗಳನ್ನು ಮಹಾಪ್ರಸಾದವೆಂದು ಶಿರಸಾವಹಿಸಿ ತೆಗೆದುಕೊಂಡು ಶ್ರೀರಾಮನನ್ನು ನೋಡಿ " ಸ್ವಾಮಿ, ಒಡೆಯನಾದ ನೀನು ಹದಿನಾಲ್ಕು ವರುಷಗಳ ಪರ್ಯಂತ ಜಡೆ ನಾರುಬಟ್ಟೆಗಳನ್ನು ಧರಿಸಿ ವ್ರತನಿಯಮದಿಂದಿರುವುದರಿಂದ ನಾನು ಭೋಗವನ್ನನುಭವಿಸಿ ಕೊಂಡಿರಬಾರದು. ನಾನೂ ಹದಿನಾಲ್ಕು ವರುಷಗಳ ಪರ್ಯಂತ ಜಡೆ ನಾರುಬಟ್ಟೆಗಳನ್ನು ಧರಿಸಿ ಕೊಂಡು ಕಂದಮೂಲ ಫಲಾಹಾರಾದಿಗಳನ್ನು ಮಾಡಿಕೊಂಡು ನೀನು ಬರುವುದನ್ನೇ ನಿರೀಕ್ಷಿಸುತ್ತ ಅಯೋಧ್ಯಾಪಟ್ಟಣದ ಹೊರಗಿರುವೆನು. ಸಮಸ್ತ ರಾಜ್ಯಭಾರವನ್ನೂ ನಿನ್ನ ಪಾದುಕೆಗಳ ವಶಕ್ಕೆ ಒಪ್ಪಿಸಿ ಹದಿನಾಲ್ಕು ವರುಷಗಳ ಪರ್ಯಂತವೂ ವ್ರತಸ್ಥನಾಗಿರುವೆನು. ಹದಿನಾಲ್ಕನೆಯ ವರುಷವು

ತುಂಬಿದ ಮಾರನೆಯ ದಿವಸವೇ ನೀನು ಬರದಿದ್ದರೆ ಅಗ್ನಿಪ್ರವೇಶಮಾಡುವೆನು" ಎಂದು ನುಡಿದನು. ಶ್ರೀರಾಮನು "ತಮ್ಮ, ಭರತ, ಹಾಗೆಯೇ ಮಾಡುವೆನು!" ಎಂದು ತಬ್ಬಿಕೊಂಡು ಮೈಸವರಿ ಆಮೇಲೆ ಶತ್ರುಘ್ನನನ್ನು ಆಲಿಂಗಿಸಿ ಭರತನನ್ನು ಕುರಿತು "ಭರತ, ನಿನ್ನ ತಾಯಿಯಾದ ಕೈಕೇಯೀ ದೇವಿಯನ್ನು ರಕ್ಷಿಸು. ಆಕೆಯಮೇಲೆ ಕೋಪಮಾಡಬೇಡ. ಇದಕ್ಕೆ ನನ್ನ ಮೇಲೆಯೂ ಸೀತಾದೇವಿಯ ಮೇಲೆಯೂ ಆಣೆಯಿಡು" ಎಂದು ಹೇಳಿ ಅವನಿಂದ ಮಾತುತೆಗೆದುಕೊಂಡು ಕಣ್ಣೀರುಬಿಡುತ್ತ ಭರತನನ್ನು ಅಯೋಧ್ಯಾಪಟ್ಟಣಕ್ಕೆ ಕಳುಹಿಸಿದನು.

ಆಮೇಲೆ ಭರತನು ಪ್ರತಾಪಶಾಲಿಯಾದ ಶ್ರೀರಾಮನ ಪಾದುಕೆಗಳನ್ನು ಸ್ವೀಕರಿಸಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಪಟ್ಟದ ಆನೆಯ ಮಸ್ತಕದಮೇಲಿಟ್ಟುಕೊಂಡು ಅಯೋಧ್ಯಾಪಟ್ಟಣಕ್ಕೆ ತೆರಳಿದನು. ಶ್ರೀರಾಮನು ಅಯೋಧ್ಯಾಪಟ್ಟಣದಿಂದ ಬಂದ ಮಂತ್ರಿವರ್ಗಕ್ಕೂ ಗುರುವಾದ ವಸಿಷ್ಠ ಮುನೀಶ್ವರನಿಗೂ ಪರಿಜನ ಪುರಜನರಿಗೂ ಕಾಲೋಚಿತವಾದ ವಿನಯವಚನಗಳಿಂದ ಸತ್ಕಾರವನ್ನು ಮಾಡಿ ಸಮಸ್ತ ಜನಗಳನ್ನೂ ಭರತ ಶತ್ರುಘ್ನರ ಹಿಂದೆ ಕಳುಹಿಸಿ ಹಿಮವತ್ಪರ್ವತದಂತೆ ಚಂಚಲನಾಗ ದಿದ್ದನು. ಆಮೇಲೆ ಕೌಸಲ್ಯಾದೇವಿಯೇ ಮೊದಲಾದ ಶ್ರೀರಾಮನ ತಾಯಂದಿರು ದುಃಖಿತರಾಗಲು ಆತನು ಅವರೆಲ್ಲರನ್ನೂ ಅಭಿವಂದಿಸಿ ಕಳುಹಿಸಿ ತನ್ನ ಪರ್ಣಶಾಲೆಯನ್ನು ಪ್ರವೇಶಿಸಿದನು.



## ೧೧೩ ನೆಯ ಅಧ್ಯಾಯ

## ಭರತನು ಅಯೋಧ್ಯೆಗೆ ತಿರುಗಿಬಂದದ್ದು

ಈ ಪ್ರಕಾರದಲ್ಲಿ ಭರತನು ಶ್ರೀರಾಮನು ಕೊಟ್ಟ ಪಾದುಕೆಗಳನ್ನು ಶಿರಸಾವಹಿಸಿ ಪಟ್ಟದಾನೆಯ ಮೇಲೆ ಬಿಜಯಮಾಡಿಸಿಕೊಂಡು ಹರ್ಷದಿಂದ ಶತ್ರುಘ್ನನನ್ನು ಕೂಡಿಕೊಂಡು ರಥಾರೂಢನಾಗಿ ಅಯೋಧ್ಯಾಪಟ್ಟಣವನ್ನು ಕುರಿತು ಹೊರಟನು. ವಸಿಷ್ಠ ವಾಮದೇವ ಜಾಬಾಲಿ ಋಷಿಗಳೂ ವೇದಶಾಸ್ತ್ರಸಂಪನ್ನರಾದ ಬ್ರಾಹ್ಮಣರೂ ಮಂತ್ರಾಲೋಚನೆಯಲ್ಲಿ ಕುಶಲರಾದ ಮಂತ್ರಿಗಳೂ ಪರಿಜನರೂ ತಮ್ಮ ತಮ್ಮ ವಾಹನಗಳನ್ನೇರಿಕೊಂಡು ಅವನ ಮುಂದುಗಡೆಯಲ್ಲಿ ಪ್ರಯಾಣ ಮಾಡಿದರು. ಮಂದಾಕಿನೀತೀರಕ್ಕೆ ಮೂಡಲಾಗಿರುವ ಚಿತ್ರಕೂಟಪರ್ವತವನ್ನು ಪ್ರದಕ್ಷಿಣಮಾಡಿ ಕೊಂಡು ಚಿತ್ರಕೂಟಪರ್ವತದ ನಾನಾ ವರ್ಣದ ಶಿಖರಗಳನ್ನು ನೋಡುತ್ತ ಭರದ್ವಾಜಾಶ್ರಮಕ್ಕೆ ಹೋಗಿ ಆ ಮುನಿಯನ್ನು ಕಂಡು ಭರತನು ನಮಸ್ಕಾರವನ್ನು ಮಾಡಿದನು. ಭರದ್ವಾಜ ಮುನೀಶ್ವರನು ಆತನನ್ನು ಕುರಿತು "ಎಲೈ ಭರತನೆ, ನೀನು ಹೋದ ಕಾರ್ಯವು ಸಾಧ್ಯವಾಯಿತೆ? ಶ್ರೀರಾಮನು ಬಂದನೆ?" ಎಂದು ಕೇಳಿದನು.

ಭರತನು "ಮಹರ್ಷಿಗಳೆ, ನಮ್ಮ ಗುರುವಾದ ವಸಿಷ್ಠಮುನೀಶ್ವರನೂ ನಾನೂ ಶ್ರೀರಾಮನನ್ನು ಅನೇಕ ವಿಧವಾಗಿ ಅಯೋಧ್ಯಾಪಟ್ಟಣಕ್ಕೆ ಬರಹೇಳಿ ಬೇಡಿಕೊಂಡೆವು. ಆತನು ಅತ್ಯಂತ ದೃಢಚಿತ್ತನಾಗಿ ವಸಿಷ್ಠಮುನೀಶ್ವರನನ್ನು ಕುರಿತು 'ನಾನು ದಶರಥರಾಯನ ಸಂಮುಖದಲ್ಲಿ ಹದಿನಾಲ್ಕು ವರುಷಗಳ ಪರ್ಯಂತ ವನವಾಸ ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿದ್ದರಿಂದ ಆತನ ಪ್ರತಿಜ್ಞೆಯನ್ನು ಪರಿಪಾಲಿಸುವುದು ಮಗನಾದ ನನ್ನ ಕರ್ತವ್ಯ' ಎಂದು ಹೇಳಿದನು. ವಸಿಷ್ಠ ಮುನೀಶ್ವರನು 'ಶ್ರೀರಾಮ, ನೀನು ನಿಮ್ಮ ತಂದೆಯಾದ ದಶರಥರಾಯನ ಆಜ್ಞೆಯನ್ನು

ಮೀರಕೂಡದೆಂದು ಇಚ್ಛೆಹೊಂದಿದ್ದರೆ ಸುವರ್ಣಮಯವಾದ ನಿನ್ನ ಪಾದುಕೆಗಳನ್ನು ಭರತನ ವಶಕ್ಕೆ ಕೊಡು. ಅವು ರಾಜ್ಯಭಾರವನ್ನು ವಹಿಸಿಕೊಂಡು ಸಮಸ್ತ ಪ್ರಜೆಗಳ ಯೋಗಕ್ಷೇಮಗಳನ್ನೂ ವಿಚಾರಿಸುವುವು' ಎಂದು ನನ್ನ ಪ್ರಾರ್ಥನೆಯನ್ನು ಮನ್ನಿಸಿ ನುಡಿದನು. ಶ್ರೀರಾಮನು ಹರ್ಷಪಟ್ಟು ಮೂಡಲು ಮುಖವಾಗಿ ನಿಂತು ಪಾದುಕೆಗಳನ್ನು ರಾಜ್ಯಪರಿಪಾಲನಕ್ಕೋಸ್ಕರ ನನ್ನ ವಶಕ್ಕೆ ಕೊಟ್ಟನು. ನಾನು ಆ ಪಾದುಕೆಗಳನ್ನು ತೆಗೆದುಕೊಂಡು ಆತನಿಂದ ಬೀಳ್ಕೊಂಡು ಅಯೋಧ್ಯಾ ಪಟ್ಟಣಕ್ಕೆ ತಿರುಗಿ ಹೋಗುತ್ತಿರುವೆನು" ಎಂದು ಹೇಳಿದನು.

ಮಹಾತ್ಮನಾದ ಭರದ್ವಾಜಮುನೀಶ್ವರನು "ಭರತ, ನಿಮ್ಮ ವಂಶದಲ್ಲಿ ಧರ್ಮ ನೀತಿ ಗುರುಭಕ್ತಿ ವಿನಯಾದಿ ಗುಣಸಂಪತ್ತಿಯು ನೆಲೆಗೊಂಡಿರುವುದು. ಧರ್ಮವತ್ಸಲನಾದ ನಿನ್ನಂಥ ಪುತ್ರನನ್ನು ಪಡೆದು ದಶರಥಮಹಾರಾಜನು ಋಣಮುಕ್ತನಾದನು" ಎಂದು ನುಡಿದನು.

ಭರತನು ಆ ಮುನಿಗೆ ಪುನಃಪುನಃ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಆತನಿಂದ ಬೀಳ್ಕೊಂಡು ರಥಾರೂಢನಾಗಿ ಮಂತ್ರಿಗಳನ್ನು ಕೂಡಿಕೊಂಡು ಯಮುನಾನದಿಯನ್ನು ದಾಟಿ ಗಂಗಾತೀರಕ್ಕೆ ಬಂದನು. ಆ ನದಿಯನ್ನು ಕಂಡು ಅಭಿವಂದಿಸಿ ಸಮಸ್ತ ಸೇನಾಸಮೇತನಾಗಿ ಗುಹನ ಶೃಂಗಿಬೇರಪುರಕ್ಕೆ ಹೋದನು. ಅಲ್ಲಿಂದ ಅಯೋಧ್ಯಾಪಟ್ಟಣಕ್ಕೆ ಬಂದು ತಮ್ಮ ತಂದೆಯಾದ ದಶರಥರಾಯನಿಂದಲೂ ತಮ್ಮ ಹಿರಿಯ ಅಣ್ಣನಾದ ಶ್ರೀರಾಮನಿಂದಲೂ ಹೊರತಾದ ಆ ಪಟ್ಟಣವನ್ನು ಕಂಡು ದುಃಖಾಕ್ರಾಂತನಾಗಿ ತನ್ನ ಸಾರಥಿಯಾದ ಸುಮಂತ್ರನೊಡನೆ "ಎಲೈ ಸುಮಂತ್ರ, ನರೇಂದ್ರನಿಲ್ಲದ ಈ ನಗರವು ಸಿಂಹವಿಲ್ಲದ ಗುಹೆಯಂತಿಹೆ" ಎಂದು ಹೇಳತೊಡಗಿದನು,



## ೧೧೪ನೆಯ ಅಧ್ಯಾಯ

## ಭರತನ ಅಯೋಧ್ಯಾಪ್ರವೇಶ

ತರುವಾಯ ಅತ್ಯಂತ ಕೀರ್ತಿಸಂಪನ್ನನಾದ ಭರತನು ಗಂಭೀರವೂ ಮನೋಹರವೂ ಆದ ಧ್ವನಿಯುಳ್ಳ ರಥವನ್ನೇರಿಕೊಂಡು ಅಯೋಧ್ಯಾಪಟ್ಟಣವನ್ನು ಪ್ರವೇಶಿಸಿದನು. ಆ ಪಟ್ಟಣವನ್ನು ನೋಡಿ ಸುಮಂತ್ರನನ್ನು ಕುರಿತು ಹೀಗೆ ನುಡಿದನು : "ಎಲೈ ಸುಮಂತ್ರನೆ, ಈ ಪಟ್ಟಣವನ್ನು ನೋಡು, ಭಯಂಕರವಾಗಿದೆ. ಎಡೆಬಿಡದೆ ಸಂಚರಿಸುವ ಆನೆ ಕುದುರೆ ಮನುಷ್ಯರಿಂದಿಟ್ಟಣಿಸಿದ್ದ ಈ ಪಟ್ಟಣವು ಈಗ ಜನಸಂಚಾರವಿಲ್ಲದೆ ಬೆಕ್ಕು ಗೂಬೆ ಹದ್ದು ಮೊದಲಾದ ಅಮಂಗಳಕರವಾದ ಪ್ರಾಣಿಗಳಿಂದ ಪರಿಪೂರ್ಣವಾಗಿ ಅಂಧಕಾರದಿಂದ ಕೌಚಲ್ಪಟ್ಟು ನಕ್ಷತ್ರಪ್ರಕಾಶವಿಲ್ಲದಿರುವ ಕೃಷ್ಣಪಕ್ಷದ ರಾತ್ರಿಯಂತೆ ತೋರುತ್ತಿದೆ. ಈ ಪಟ್ಟಣವು ರಾಹುವಿನಿಂದ ತುಡುಕಲ್ಪಟ್ಟ ಚಂದ್ರನ ಸಮೀಪದಲ್ಲಿ ಕಾಂತಿ ಗುಂದಿರುವ ರೋಹಿಣೀನಕ್ಷತ್ರದಂತೆ ಒಪ್ಪುತ್ತಿದೆ. ಬೇಸಿಗೆಯಲ್ಲಿ ಅತ್ಯಂತ ಬಿಸಿಲಿನಿಂದ ಕಂಗೆಟ್ಟ ಹಂಸಪಕ್ಷಿ ಕೊಳರ್ವಕ್ಕಿ ಮೊದಲಾದ ಪಕ್ಷಿಗಳುಳ್ಳದ್ದಾಗಿ ನೀರು ಕಾದ ಕಾರಣ ತಳಸೇರಿದ ಮೀನು, ಮೊಸಳೆ. ಆನೆ ಮತ್ತು ನೀರಾನೆಗಳುಳ್ಳ, ಗಾಳಿಯಿಂದ ಕ್ಷೋಭೆಗೊಂಡಿರುವ ಕೃಶವಾದ ಗಿರಿನದಿಯಂತಿದೆ. ಹೋಮಕಾಲದಲ್ಲಿ ಹವಿಸ್ಸಿನಿಂದ ಪ್ರಜ್ವಲಿಸುವ ಯಜ್ಞೇಶ್ವರನ ಜ್ವಾಲೆಯು ಥಟ್ಟನೆ ಆರಿಹೋದಂತಿದೆ. ಈ ನಗರವು ರಣರಂಗದಲ್ಲಿ ಗಜಾಶ್ವರಥಗಳನ್ನು ಕಳೆದುಕೊಂಡು ಧ್ವಜಪಟವು ಉರುಳಿ ವೀರರು ನಶಿಸಿಹೋಗಿರುವ ಸೈನ್ಯದಂತೆ ತೇಜೋಹೀನವಾಗಿದೆ. ವೈದಿಕರು ಯಜ್ಞ ಮುಗಿದಮೇಲೆ ತಮ್ಮ

ಉಪಕರಣಗಳೆಲ್ಲನ್ನು ತೆಗೆದುಕೊಂಡು ಹೊರಟುಹೋಗಲು. ಅಗ್ನಿಯಿಲ್ಲದ ಯಜ್ಞವೇದಿಯಂತೆ ಕಾಣುತ್ತದೆ. ಕೊಟ್ಟಿಗೆಯಲ್ಲಿ ವೃಷಭವು ಹೊರಟುಹೋಗಲು ವ್ಯಥೆಪಡುತ್ತ ಹುಲ್ಲನ್ನೂ ತಿನ್ನದೆ ಬೇಸರದಿಂದ ನಿಂತಿರುವ ಹಸುವಿನಂತಿದೆ. ದಿವ್ಯರತ್ನಗಳೆಲ್ಲವೂ ಕಳಚಿಹೋಗಲು ಕಾಂತಿಹೀನವಾಗಿ ಕಾಣುವ ಮುತ್ತಿನ ಸರದಂತಿದೆ. ಪುಣ್ಯಕ್ಷಯದಿಂದ ತಾರೆಯೊಂದು ಗಗನದಿಂದ ನೆಲಕ್ಕೆ ಬಿದ್ದಂತಿದೆ. ವಸಂತಕಾಲವು ಕಳೆದಮೇಲೆ ಹೂವುಗಳಿಲ್ಲದೆ ಭ್ರಮರಗಳು ಚದರಿಹೋಗಲು ಕಾಳ್ಗಿಚ್ಚಿನಿಂದ ಸುಟ್ಟುಹೋದ ವನಲತೆಯಂತಿದೆ. ಈ ನಗರದಲ್ಲಿರುವ ಅಂಗಡಿಬೀದಿಯಲ್ಲಿ ವ್ಯಾಪಾರವಿಲ್ಲದೆ ಜನಸಂಚಾರವಿಲ್ಲದೆ ಹೋಗಿರುವುದರಿಂದ ಇದು, ಮೋಡದಿಂದ ಚಂದ್ರನಕ್ಷತ್ರಗಳು ಮುಚ್ಚಿಹೋಗಿರುವಾಗ ಕಾಣುವ ಆಕಾಶದಂತಿದೆ. ನೀರಿಲ್ಲದೆ ಜಲಚರಪ್ರಾಣಿಗಳಿಲ್ಲದೆ ನೈದಿಲೆಯಿಲ್ಲದೆ ಇರುವ ಕೆರೆಯಂತಿದೆ."

ಭರತನು ಮೇಲ್ಕಂಡಂತೆ ನುಡಿಯುತ್ತ ಸುಮಂತ್ರನನ್ನು ಕುರಿತು ಮತ್ತೆ ಹೀಗೆಂದನು: "ಅಯೋಧ್ಯಾಪಟ್ಟಣದಲ್ಲಿ ತಾಳ ಮದ್ದಳೆ ಗೀತ ಭೇರಿ ಮೊದಲಾದ ಯಾವ ಯಾವ ಗಂಭೀರ ಧ್ವನಿಗಳೂ ಕೇಳಿಸುವುದಿಲ್ಲ. ಊರ ಹೊರಗೆ ಪಸರಿಸಿ ಪರಿಮಳಿಸುವ ಪುಷ್ಪರಸಗಂಧವನ್ನು ಕಾಣೆನು. ಪಟ್ಟಣದೊಳಗೆ ವಿನೋದಾರ್ಥವಾಗಿ ಸಂಚರಿಸುವ ಜನರ ರಥದ ಗಾಲಿಗಳ ಚೀತ್ಕಾರವೂ ಕುದುರೆಗಳ ಹೇಷಿತರವವೂ ಆನೆಗಳ ಬೃಂಹಿತಧ್ವನಿಯೂ ಕೇಳಿಸುವುದಿಲ್ಲ. ಪಟ್ಟಣದೊಳಗೆ ಯೌವನಸ್ಥರಾದ ಸೊಗಸುಗಾರರು ಯಾವಾಗಲೂ ಹೂವು ಮುಡಿದುಕೊಂಡು ಅನರ್ಘ್ಯವಾದ ಕುಂಕುಮ ಕಸ್ತೂರಿ ಪುನುಗು ಜವಾಜಿಗಳಿಂದ ಸರ್ವಾಂಗಲೇಪನವನ್ನು ಮಾಡಿಕೊಂಡು ಸಂಚರಿಸುತ್ತ ವಿನೋದವಾಗಿರುವುದನ್ನು ಕಾಣೆನು. ಶ್ರೀರಾಮನ ಅಗಲಿಕೆಯಿಂದುಂಟಾದ ಮನೋವ್ಯಥೆಯಿಂದ ಅಯೋಧ್ಯಾಪಟ್ಟಣವು ಉತ್ಸಾಹವಿಲ್ಲದೆ ಭಯಂಕರವಾಗಿ ತೋರುತ್ತಿದೆ. ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ತಿರುಗಿ ಬರಲು ಈ ಪಟ್ಟಣವು ವಸಂತೋತ್ಸವಗಳಿಂದಲೂ ಅತ್ಯಂತ ಹರ್ಷಯುಕ್ತರಾದ ನಟ ವಿಟ ಗಾಯಕರಿಂದಲೂ ಇಟ್ಟಣಿಸಿ ನಯನೋತ್ಸವಕರವಾಗಿ ಯಾವಾಗ ತೋರುವುದೊ!" ಎಂದು ಅನೇಕಪ್ರಕಾರದಲ್ಲಿ ಹಂಬಲಿಸುತ್ತ ದಶರಥರಾಯನ ಅರಮನೆಗೆ ಹೋಗಿ ಸಿಂಹಗಳಿಲ್ಲದ ಗುಹೆಯಂತೆಯೂ ಸೂರ್ಯಪ್ರಭೆಯಿಲ್ಲದ ಹಗಲಿನಂತೆಯೂ ಕಂಗೊಳಿಸದಿದ್ದ ಅಂತಃಪುರವನ್ನು ಕಂಡು ದುಃಖಾತಿಶಯದಿಂದ ಮುಖಕಾಂತಿಗುಂದಿ ಕಣ್ಣೀರುತುಂಬಿ ವಿಷಣ್ಣನಾದನು.

೧೧೫ ನೆಯ ಅಧ್ಯಾಯ

## ಭರತನು ಶ್ರೀರಾಮನ ಪಾದುಕೆಗಳಿಗೆ ಪಟ್ಟವನ್ನು ಕಟ್ಟಿದ್ದು

ಆಮೇಲೆ ಭರತನು ಅಯೋಧ್ಯಾಪಟ್ಟಣದಲ್ಲಿ ತಮ್ಮ ತಾಯಂದಿರು ವಾಸವಾಗಿರಬೇಕೆಂದು ಗೊತ್ತುಮಾಡಿದನು. ತಾನು ಅತ್ಯಂತ ದುಃಖಾಕ್ರಾಂತನಾಗಿ ವಸಿಷ್ಠ ವಾಮದೇವಾದಿ ಗುರುಗಳನ್ನು ಕುರಿತು "ಗುರುಗಳಿರಾ, ನಾನು ನಂದಿಗ್ರಾಮಕ್ಕೆ ಹೋಗುತ್ತೇನೆ. ನಾನು ಈ ದುಃಖವನ್ನು ಅಲ್ಲಿಯೇ ಅನುಭವಿಸಿಕೊಂಡಿರುವೆನು. ನಮ್ಮ ತಂದೆಯಾದ ದಶರಥರಾಯನು ಸ್ವರ್ಗಸ್ಥನಾದನು. ನನ್ನ ಜ್ಯೇಷ್ಠಭ್ರಾತೃವಾದ ಶ್ರೀರಾಮನು ವನಕ್ಕೆ ಹೋದನು. ಇನ್ನು ನನಗಿಲ್ಲಿ ಕಾರ್ಯವೇನು? ಶ್ರೀರಾಮನು ಬರುವುದನ್ನು ಕಾಯುತ್ತಿರುವೆನು. ಅವನೇ ಅಯೋಧ್ಯೆಗೆ ರಾಜನು" ಎಂದು ನುಡಿದನು.

ಆ ಮಾತನ್ನು ಕೇಳಿ ಗುರುಗಳು "ಭರತ, ನೀನು ಆಡಿದ ಮಾತು ಲೋಕದಲ್ಲಿ ಪ್ರಶಂಸನೀಯವಾದದ್ದು. ನಿನ್ನ ಜ್ಯೇಷ್ಠಭ್ರಾತೃವಾದ ಶ್ರೀರಾಮನ ಮೇಲಿನ ಭಕ್ತಿಯಿಂದ ಆತನಿಗೆ ಅನುಕೂಲವಾದ ಮಾತನ್ನು ನುಡಿದೆ. ಯಾವಾಗಲೂ ಹಿರಿಯರಲ್ಲಿ ಅತ್ಯಂತ ಭಕ್ತಿಯುಳ್ಳ ನಿನ್ನ ಚಾರಿತ್ರವನ್ನು ಯಾರು ತಾನೆ ಮೆಚ್ಚುವುದಿಲ್ಲ ? ನೀನು ಮಾಡಿದ ಯೋಚನೆಯು ಸರ್ವೋತ್ಕೃಷ್ಟವಾದುದು" ಎಂದು ನುಡಿದರು

ಭರತನು ಅವರೆಲ್ಲರೂ ತನ್ನ ಮನಸ್ಸಿನಲ್ಲಿದ್ದಂತೆ ನುಡಿದದ್ದಕ್ಕೆ ಹರ್ಷಪಟ್ಟು ತನ್ನ ಸಾರಥಿಯಾದ ಸುಮಂತ್ರನನ್ನು ಕರೆದು ಶೀಘ್ರದಲ್ಲಿ ರಥವನ್ನು ಮೋಳೈಸಲು ಕಟ್ಟುಮಾಡಿದನು. ತನ್ನ ತಾಯಂದಿರೆಲ್ಲರಿಗೂ ನಮಸ್ಕರಿಸಿ ಶತ್ರುಘ್ನಸಮೇತನಾಗಿ ರಥವನ್ನೇರಿಕೊಂಡು ನಂದಿಗ್ರಾಮಕ್ಕೆ ತೆರಳಿದನು. ವಸಿಷ್ಠ ವಾಮದೇವಾದಿ ಮುನಿಗಳೂ ಮಂತ್ರಿಗಳೂ ಭರತನ ಹಿಂದೆ ಹೊರಟರು. ಆ ಬಳಿಕ ಚತುರಂಗಬಲಗಳೂ ಪುರಜನರೂ ಹೊರಟರು. ಭರತನು ಶ್ರೀರಾಮನು ಕೊಟ್ಟ ಪಾದುಕೆಗಳನ್ನು ಮುಡಿಯ ಮೇಲೆ ಹೊತ್ತುಕೊಂಡು ಅಣ್ಣನ ಮೇಲೆ ಅತ್ಯಂತ ವಿಶ್ವಾಸವುಳ್ಳವನಾಗಿಯೂ ರಥಾರೂಢನಾಗಿಯೂ ನಂದಿಗ್ರಾಮಕ್ಕೆ ಹೋಗಿ ರಥದಿಂದಿಳಿದನು ತನ್ನ ಗುರುಗಳಾದ ವಸಿಷ್ಠ ವಾಮದೇವಾದಿಗಳನ್ನು ನೋಡಿ "ಗುರುಗಳಿರಾ, ನನ್ನ ಅಣ್ಣನಾದ ಶ್ರೀರಾಮನು ಈ ರಾಜ್ಯವನ್ನು ನನ್ನಲ್ಲಿ ನ್ಯಾಸವಿಟ್ಟಿರುವನು. ಆತನು ಕೊಟ್ಟ ಪಾದುಕೆಗಳು ರಾಜ್ಯದ ಯೋಗಕ್ಷೇಮವನ್ನು ನೋಡಿಕೊಳ್ಳಲು ಸಮರ್ಥವಾಗಿವೆ" ಎಂದು ಹೇಳಿದನು. ಶ್ರೀರಾಮನು ಕೊಟ್ಟ ಚಿನ್ನದ ಹಾವಿಗೆಗಳನ್ನು ಶಿರಸಾವಹಿಸಿಕೊಂಡು ಅತ್ಯಂತ ದುಃಖಿಯುಕ್ತನಾಗಿ ಮಂತ್ರಿಗಳನ್ನೂ ಪ್ರಧಾನಿಗಳನ್ನೂ ಕರೆದು ಭರತನು ಹೇಳಿದನು: "ಎಲೈ ಮಂತ್ರಿಗಳಿರಾ, ಈ ಪಾದುಕೆಗಳ ಮೇಲೆ ಶ್ವೇತಚ್ಛತ್ರವನ್ನು ಹಿಡಿಯಿರಿ. ರಾಜ್ಯಪರಿಪಾಲನ ಮಾಡುವ ಧರ್ಮವು ಇವುಗಳ ಅಧೀನವಾಗಿರಲಿ. ಈ ಪಾದುಕೆಗಳೇ ನನಗೆ ಗುರುವು. ನನ್ನ ಜ್ಯೇಷ್ಠಭ್ರಾತೃವಾದ ಶ್ರೀರಾಮನು ನನ್ನ ಮೇಲಿನ ದಯೆಯಿಂದ ಇವುಗಳನ್ನು ದಯಪಾಲಿಸಿರುವನು. ನಾನು ಆತನು ಬರುವ ಪರ್ಯಂತ ರಾಜ್ಯಭಾರವನ್ನು ಈ ಪಾದುಕೆಗಳಲ್ಲಿರಿಸಿ ಇವುಗಳನ್ನು ಪರಿಪಾಲಿಸಿಕೊಂಡಿದ್ದು ಆತನು ಬಂದಮೇಲೆ ಆತನ ಪಾದಗಳನ್ನು ಕಂಡು ರಾಜ್ಯಭಾರವನ್ನು ಆತನ ವಶಮಾಡಿ ಆತನ ಸೇವೆಯನ್ನು ಮಾಡಿಕೊಂಡಿರುತ್ತೇನೆ. ಶ್ರೀರಾಮನು ಕೊಟ್ಟ ಈ ಪಾದುಕೆಗಳನ್ನು ರಕ್ಷಿಸಿಕೊಂಡಿದ್ದರೆ ಕೃತಾರ್ಥನಾಗಿರುವೆನು ಆತನು ಹದಿನಾಲ್ಕು ವರುಷಗಳ ವನವಾಸವೆಂಬ ಮಿತಿಯು ತುಂಬಿ ವಿವದಿಂದ ಅಯೋಧ್ಯಾಪಟ್ಟಣಕ್ಕೆ ತಿರುಗಿಬಂದು ಪಟ್ಟಾಭಿಷೇಕವನ್ನು ಮಾಡಿಕೊಂಡು ಸಮಸ್ತ ಪ್ರಜೆಗಳಿಗೂ ಸಂತೋಷವನ್ನು ಮಾಡುನನು. ಆಗ ನಾನು ಸ್ವಸ್ಥಚಿತ್ತನಾಗಿ ನನಗೆ ರಾಜ್ಯಾಧಿಪತ್ಯವಾಗುವುದಕ್ಕಿಂತಲೂ ನಾಲ್ಕು ಮಡಿ ಸಂತೋಷವಾಗಿರುವೆನು" ಎಂದು ನುಡಿದು ನಂದಿಗ್ರಾಮದಲ್ಲಿ ಆ ಪಾದುಕೆಗಳಿಗೆ ಪಟ್ಟಾಭಿಷೇಕವನ್ನು ಮಾಡಿದನು. ಅವನು ಸಮಸ್ತ ರಾಜ್ಯಭಾರವನ್ನೂ ಅವುಗಳ ಅಧೀನಮಾಡಿ ತಾನು ಮಾಡಿದ ಪಾರುಪತ್ಯಗಳನ್ನು ಆ ಪಾದುಕೆಗಳಿಗೆ ಬಿನ್ನಹಮಾಡುತ್ತ ತನಗೆ ಬಂದ ಕಾಣಿಕೆಗಳನ್ನು ಅವುಗಳಿಗೆ ಸಮರ್ಪಿಸಿ ನಂದಿಗ್ರಾಮದಲ್ಲಿ ವಾಸವಾಗಿದ್ದು ರಾಜ್ಯವನ್ನು ಪರಿಪಾಲಿಸುತ್ತಿದ್ದನು.



# ೧೧೬ ನೆಯ ಅಧ್ಯಾಯ

## ಚಿತ್ರಕೂಟದಲ್ಲಿದ್ದ ಋಷಿಗಳು ಮತ್ತೊಂದು ವನಕ್ಕೆ ಹೋದದ್ದು

ಅತ್ತ ಚಿತ್ರಕೂಟದಲ್ಲಿದ್ದ ಶ್ರೀರಾಮನು ಭರತನನ್ನು ಅಯೋಧ್ಯಾಪಟ್ಟಣಕ್ಕೆ ಕಳುಹಿಸಿದ ಮೇಲೆ ಆ ವನದಲ್ಲಿದ್ದ ಋಷಿಗಳು ಸ್ವಲ್ಪ ಭಯಪಡುತ್ತಿದ್ದುದನ್ನೂ ಕಣ್ಣುಗಳನ್ನು ತಿರುಗಿಸುತ್ತ ಹುಬ್ಬುಗಳನ್ನು ಹಾರಿಸುತ್ತ ಮನಸ್ಸಿನಲ್ಲಿ ಸಂದೇಹದಿಂದ ಅನ್ಯೋನ್ಯರ ಮುಖಗಳನ್ನು ನೋಡಿಕೊಳ್ಳುತ್ತ ಮೆಲ್ಲಗೆ ಮಾತಾಡುತ್ತಿದ್ದುದನ್ನೂ ಗಮನಿಸಿದನು. ಅದಕ್ಕೆ ಕಾರಣವನ್ನು ತಿಳಿಯದೆ ಸಂದೇಹಪಟ್ಟು ಅವರ ಕುಲಪತಿಯಾದ ಒಬ್ಬ ಋಷಿಯನ್ನು ಕಂಡು ಕೈಮುಗಿದು ಬಿನ್ನವಿಸಿದನು : " ಮುನೀಶ್ವರರೆ, ಏನು ಕಾರಣ ನನ್ನನ್ನು ನೋಡಿ ನಿಮ್ಮೊಳಗೆ ನೀವೇ ಮಾತನಾಡಿಕೊಳ್ಳುತ್ತಿರುವಿರಿ ? ನೋಡಿದರೆ ನಿಮಗೆ ನನ್ನ ಚಾರಿತ್ರವು ಹೊಸಪರಿಯಾಗಿ ತೋರಿದಂತಿದೆ. ಏನು ಕಾರಣ ನೀವು ಮೆಲ್ಲಗೆ ಸಂಭಾಷಣೆಗಳನ್ನು ಮಾಡುತ್ತ ಸಂದೇಹವುಳ್ಳವರಾಗಿರುವಿರಿ ? ನೀವು ಸೀತಾದೇವಿಯಲ್ಲಾದರೂ ಲಕ್ಷ್ಮಣನಲ್ಲಾದರೂ ದೋಷವನ್ನು ಕಂಡಿರಾ ? ನನ್ನ ಸೇವೆಯನ್ನು ಮಾಡಿಕೊಂಡಿರುವ ಇವರಿಂದ ನಿಮಗೇನಾದರೂ ಅಕಾರ್ಯವಾಯಿತೆ ? " ಎಂದು ಕೇಳಿದನು.

ಆ ಮಾತನ್ನು ಕೇಳಿ ಜ್ಞಾನದಿಂದಲೂ ತಪಸ್ಸಾಮರ್ಥ್ಯದಿಂದಲೂ ವಯಸ್ಸಿನಿಂದಲೂ ಅಧಿಕನಾದ ಆ ಮುನೀಶ್ವರನು ಸರ್ವಭೂತದಯಾಪರನಾಗಿ ಕಲ್ಯಾಣಗುಣಸಂಪನ್ನನಾದ ಶ್ರೀರಾಮನನ್ನು ನೋಡಿ ಈ ರೀತಿ ನುಡಿದನು : " ಶ್ರೀರಾಮ, ಅನೇಕ ಕಲ್ಯಾಣಗುಣಸಂಪನ್ನೆಯಾದ ಸೀತಾದೇವಿಗಾದರೂ ಸದ್ಗುಣಸಂಪನ್ನನಾದ ಲಕ್ಷ್ಮಣನಿಗಾದರೂ ಚಿತ್ತಚಾಂಚಲ್ಯವುಂಟೆ ? ಅವರಿಗೆ ಎಲ್ಲ ಮನುಷ್ಯರಲ್ಲಿಯೂ ವಾತ್ಸಲ್ಯವುಂಟು. ಈ ತಪಸ್ವಿಗಳು ಭಯಪಡುತ್ತ ಏನು ಕಾರಣ ತಮ್ಮೊಳಗೆ ತಾವೇ ಮಾತಾಡಿಕೊಳ್ಳುತ್ತಿದ್ದಾರೆಂದರೆ, ಈ ವನದಲ್ಲಿ ರಾಕ್ಷಸರ ಭಯವುಂಟು. ಆದ್ದರಿಂದ ಮೊದಲೇ ರಾಕ್ಷಸರಿಂದ ಈ ಋಷಿಗಳು ಭೀತಿಯುಳ್ಳವರಾಗಿದ್ದರು. ಈಗ ಸೀತಾಲಕ್ಷ್ಮಣಸಮೇತನಾದ ನಿನ್ನನ್ನು ಕಂಡು 'ಈ ರಾಜರ್ಷಿಯಾದ ಶ್ರೀರಾಮನು ಪತ್ನೀಸಮೇತನಾಗಿ ಈ ವನದಲ್ಲಿರುವನು. ಈತನಿಗೆ ಯಾವ ವಿಘ್ನವು ಸಂಭವಿಸುವುದೋ, ಎಂದು ನಿನ್ನನ್ನು ಕುರಿತು ತಮ್ಮೊಳಗೆ ತಾವೇ ಮಾತಾಡಿಕೊಳ್ಳುತ್ತಿರುವರಲ್ಲದೆ ಮತ್ತೇನೂ ಇಲ್ಲ. ಈ ವನದ ಸಮೀಪದಲ್ಲಿರುವ ಜನಸ್ಥಾನದಲ್ಲಿ ರಾವಣನ ತಮ್ಮನಾದ ಖರನೆಂಬ ರಾಕ್ಷಸನಿದ್ದುಕೊಂಡು ತಪಸ್ವಿಗಳನ್ನು ಸ್ಥಾನಭ್ರಷ್ಟರನ್ನಾಗಿ ಮಾಡಿ ಹೊರಡಿಸುತ್ತಿರುವನು. ಆ ರಾಕ್ಷಸನು ನರಮಾಂಸಭಕ್ಷಕನು. ಮಹಾಗರ್ವಿಯು. ಮಹಾಪಾಪಿಯು. ಅಂಥ ಖರನು ನಿನ್ನನ್ನು ಕಂಡರೆ ಸಹಿಸಲಾರನು. ನೀನು ಈ ಆಶ್ರಮಕ್ಕೆ ಬಂದುದೇ ಮೊದಲಾಗಿ ರಾಕ್ಷಸರು ತಪಸ್ವಿಗಳಿಗೆ ಅನೇಕ ಉಪದ್ರವಗಳನ್ನು ಮಾಡುತ್ತಿರುವರು. ಅನೇಕಮಂದಿ ರಾಕ್ಷಸರು ನಾನಾರೂಪಗಳನ್ನು ಧರಿಸಿಕೊಂಡು ವಿಕಾರಸ್ವರೂಪರಾಗಿಯೂ ಅಶುಚಿಗಳಾಗಿಯೂ ಬಂದು ತಪಸ್ವಿಗಳೊಡನೆ ಜಗಳವಾಡುತ್ತ ಕೆಲವರನ್ನು ಕೊಲ್ಲುತ್ತಲಿರುವರು. ಅಲ್ಲಲ್ಲಿರುವ ಆಶ್ರಮಗಳಲ್ಲಿ ಅಡಗಿಕೊಂಡಿದ್ದು ಯಾಗವನ್ನು ಮಾಡುವಾಗ ಯಾಗಮಂಟಪದಲ್ಲಿ ರಕ್ತದ ಹರವಿಗಳನ್ನು ಹಾಕಿ ವಿಘ್ನಮಾಡುತ್ತಿರುವರು. ಹೋಮಾಗ್ನಿಗಳನ್ನು ನೀರು ಹುಯ್ದು ಆರಿಸುತ್ತಿರುವರು. ಹೋಮಯೋಗ್ಯವಾದ ಕಲಶಗಳನ್ನು ಎತ್ತಿಕೊಂಡು ಹೋಗುವರು. ಈ ರೀತಿಯಲ್ಲಿ ರಾಕ್ಷಸರು ಬಾಧಿಸುತ್ತಿರುವುದರಿಂದ ತಪಸ್ವಿಗಳು ಈ ವನವನ್ನು ಬಿಟ್ಟು

ಹೋಗಬೇಕೆಂದು ತಮ್ಮೊಳಗೆ ತಾವೇ ಮಾತಾಡಿಕೊಳ್ಳುತ್ತಿರುವರು. ಇಲ್ಲಿಗೆ ಸಮೀಪದಲ್ಲಿ ಒಂದು ತಪೋವನವಿದೆ. ಅಲ್ಲಿ ಕಂದಮೂಲಫಲಾದಿಗಳೂ ಸ್ವಾದೂದಕಗಳೂ ಪುಷ್ಕಲವಾಗಿವೆ. ಆದಕಾರಣ ನಾವು ಆ ತಪೋವನಕ್ಕೆ ಹೋಗುತ್ತೇವೆ" ಎಂದು ಸಂತವಿಟ್ಟು ಆತನಿಂದ ಕಳುಹಿಸಿಕೊಂಡು ಆ ಋಷಿಗಳೆಲ್ಲರನ್ನೂ ಕರೆದುಕೊಂಡು ಮತ್ತೊಂದು ವನಕ್ಕೆ ತೆರಳಿದನು.

ಶ್ರೀರಾಮನು ಆ ಮುನೀಶ್ವರರನ್ನೂ ಋಷಿಗಳನ್ನೂ ವಂದಿಸಿ ಪವಿತ್ರವಾದ ತನ್ನ ಆಶ್ರಮಕ್ಕೆ ತಿರುಗಿ ಬಂದನು.



## ೧೧೭ ನೆಯ ಅಧ್ಯಾಯ

# ಅತ್ರಿಮುನಿಯ ಆಶ್ರಮಕ್ಕೆ ಶ್ರೀರಾಮನ ಆಗಮನ

ಈ ಪ್ರಕಾರದಲ್ಲಿ ಚಿತ್ರಕೂಟಪರ್ವತದಲ್ಲಿದ್ದ ಋಷಿಗಳು ಮತ್ತೊಂದು ಆಲಯಕ್ಕೆ ಹೋದಮೇಲೆ ಶ್ರೀರಾಮನು ಆ ವನದಲ್ಲಿ ಉಪದ್ರವವುಂಟಾದ್ದರಿಂದ ಅಲ್ಲಿರುವುದು ಯಾವ ರೀತಿಯಿಂದಲೂ ಯೋಗ್ಯವಲ್ಲವೆಂದು ಭಾವಿಸಿದನು. ಮೇಲಾಗಿ ಆ ಪುಣ್ಯಾಶ್ರಮದಲ್ಲಿ ತಮ್ಮ ತಾಯಂದಿರು ಒಡಹುಟ್ಟಿದವರೇ ಮೊದಲಾದ ಅನೇಕ ಬಂಧುಗಳನ್ನು ಕಂಡದ್ದನ್ನು ಸ್ಮರಿಸಿಕೊಂಡನು. ಭರತನ ಸೇನೆಯು ಪಾಳೆಯವಿಳಿಯಲು ಆನೆ ಕುದುರೆಗಳ ಸುಗ್ಗಾಟದಿಂದಲೂ ಅವುಗಳ ಲದ್ದಿಗಳಿಂದಲೂ ಆ ವನವು ಗಾಸಿಯಾಗಿದ್ದುದನ್ನು ನೋಡಿ ಆ ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ಹೋಗಬೇಕೆಂದು ನಿಶ್ಚಯಿಸಿದನು. ಆಮೇಲೆ ಸೀತಾಲಕ್ಷ್ಮಣಸಮೇತನಾಗಿ ಅಲ್ಲಿಂದ ಮುಂದಕ್ಕೆ ತೆರಳಿ ಅತ್ರಿಮುನೀಶ್ವರನ ಆಶ್ರಮಕ್ಕೆ ಹೋಗಿ ಆತನನ್ನು ಕಾಣಿಸಿಕೊಂಡು ಅಭಿವಂದಿಸಿದನು. ಆ ಮುನೀಶ್ವರನು ಮಗನನ್ನು ಕಂಡಂತೆ ಶ್ರೀರಾಮನನ್ನು ಕಂಡು ಹರ್ಷಪಟ್ಟು ಆ ವನದಲ್ಲುಂಟಾದ ಕಂದಮೂಲಫಲಾದಿಗಳಿಂದ ಅತಿಥಿಸತ್ಕಾರಗಳನ್ನು ಮಾಡಿದನು. ಲಕ್ಷ್ಮಣನಿಗೂ ಸೀತಾದೇವಿಗೂ ಫಲಾಹಾರವನ್ನು ಕೊಟ್ಟು ಸಂತವಿಟ್ಟನು. ಅತ್ಯಂತ ತೇಜಸ್ವಿಯೂ ಧರ್ಮಮಾರ್ಗಪ್ರವರ್ತಕನೂ ಮಹಾತ್ಮನೂ ಆದ ಆ ಮುನೀಶ್ವರನು ಪತಿವ್ರತಾಶಿರೋಮಣಿಯಾದ ತನ್ನ ಪತ್ನಿ ಅನಸೂಯಾದೇವಿಯನ್ನು ಕರೆದು "ಅನಸೂಯೆ. ಸೀತಾದೇವಿಯನ್ನು ಒಳಗೆ ಕರೆದುಕೊಂಡು ಹೋಗಿ ಸತ್ಕಾರವನ್ನು ಮಾಡು" ಎಂದು ಹೇಳಿ ಶ್ರೀರಾಮನನ್ನುಕುರಿತು ಹೀಗೆಂದನು : "ಶ್ರೀರಾಮ, ಅನಸೂಯಾದೇವಿಯು ಪೂರ್ವದಲ್ಲಿ ಹತ್ತುವರುಷಗಳ ಪರ್ಯಂತ ಮಳೆಯಿಲ್ಲದೆ ದುರ್ಭಿಕ್ಷವಾಗಲು ತನ್ನ ಪತಿವ್ರತಾಧರ್ಮದಿಂದ ಈ ವನದಲ್ಲಿ ಕಂದಮೂಲಫಲಗಳು ಪರಿಪೂರ್ಣವಾಗಿರುವಂತೆ ಮಾಡಿದಳು. ಜಾಹ್ನವಿಯು ಈ ದೇವಿಯ ಪತಿವ್ರತಾಧರ್ಮದಿಂದ ಪ್ರವಾಹರೂಪವಾಗಿ ಈ ಆಶ್ರಮದಲ್ಲಿ ಹರಿದಳು. ಅನಸೂಯಾದೇವಿಯು ವ್ರತನಿಯಮೋಪವಾಸಗಳಿಂದ ಹತ್ತು ಸಾವಿರ ವರುಷಗಳ ಪರ್ಯಂತ ಉಗ್ರವಾದ ತಪಸ್ಸನ್ನು ಮಾಡಿದಳು ! ಶ್ರೀರಾಮ, ನಿನಗೆ ಎಂಥ ವಿಘ್ನಗಳು ಬಂದರೂ ಈ ದೇವಿಯ ವ್ರತಾಚರಣೆಯಿಂದಲೇ ಪರಿಹಾರವಾಗುವುವು. ಅನಸೂಯಾದೇವಿಯು ಸಮಸ್ತ ಪ್ರಾಣಿಗಳಿಗೂ ನಮಸ್ಕಾರಯೋಗ್ಯಳು. ಪತಿವ್ರತಾಸ್ತ್ರೀಯರಲ್ಲಿ ಕೀರ್ತಿಯನ್ನು ಪಡೆದವಳು. ಬಹು ವೃದ್ಧೆಯಾದವಳು. ಶಾಂತಗುಣಸಂಪತ್ತಿಯುಳ್ಳವಳು. ಸೀತಾದೇವಿಯು ಆ ದೇವಿಯ ಸಮೀಪಕ್ಕೆ ಹೋಗಿ ಅಭಿವಂದಿಸಿ ಆಕೆಯ ಸಮೀಪದಲ್ಲಿರಲಿ" ಎಂದು ಹೇಳಿದನು.

ಶ್ರೀರಾಮನು ಮಹಾಪ್ರಸಾದವೆಂದು ಸೀತಾದೇವಿಯನ್ನು ಕರೆದು "ಸೀತೆ. ಅತ್ರಿಮುನೀಶ್ವರನು ಹೇಳಿದಂತೆ ನೀನು ತಪಸ್ವಿನಿಯಾದ ಅನಸೂಯಾದೇವಿಯ ಸಮೀಪಕ್ಕೆ ಹೋಗು. ನಿನಗೆ ಶ್ರೇಯಸ್ಸುಂಟಾಗುವುದು. ಆ ದೇವಿಯ ಸಮೀಪಕ್ಕೆ ಹೋಗಿ ಅಭಿವಂದಿಸು" ಎಂದು ಹೇಳಿದನು.

ಸೀತಾದೇವಿಯು ಶ್ರೀರಾಮನು ಹೇಳಿದ ಮಾತು ತನಗೆ ಹಿತವೆಂದು ತಿಳಿದು ಅತ್ರಿಮುನೀಶ್ವರನ ಪತ್ನಿಯಾದ ಅನಸೂಯಾದೇವಿಯ ಸಮೀಪಕ್ಕೆ ಹೋದಳು. ಶರೀರವು ಬಗ್ಗಿ ವೃದ್ಧೆಯಾಗಿ ಬಿಳುಪಾದ ಕೂದಲುಳ್ಳ ಬಿರುಗಾಳಿಯಿಂದ ಚಲಿಸುವ ಬಾಳೆಯ ಗಿಡದಂತೆ ನಡುಗುತ್ತಿದ್ದ ಪತಿವ್ರತಾ ಶಿರೋರತ್ನವಾದ ಆ ದೇವಿಗೆ ತನ್ನ ಹೆಸರನ್ನು ಹೇಳಿ ನಮಸ್ಕಾರಮಾಡಿದಳು. ಅನಸೂಯಾದೇವಿಯು ಸೀತಾದೇವಿಯ ಕುಶಲವನ್ನು ಕೇಳಿ ಸಾಕ್ಷಾತ್ ಧರ್ಮಸ್ವರೂಪಳಾದ ಆ ದೇವಿಯನ್ನು ಕುರಿತು "ಸೀತಾದೇವಿ, ಸಮಸ್ತ ಬಂಧುಬಳಗವನ್ನೂ ಐಶ್ವರ್ಯವನ್ನೂ ಬಿಟ್ಟು ಶ್ರೀರಾಮನ ಹಿಂದೆ ನೀನು ಬಂದದ್ದು ಒಳ್ಳೆಯದಾಯಿತು. ಲೋಕದಲ್ಲಿ ಪತಿವ್ರತಾಸ್ತ್ರೀಯಾದವಳು ತನ್ನ ಪುರುಷನು ಮನೆಯಲ್ಲಿದ್ದರೂ ವನದಲ್ಲಿದ್ದರೂ ಪುಣ್ಯಾತ್ಮನಾದರೂ ಪಾಪಾತ್ಮನಾದರೂ ಶುಚಿಯಾದರೂ ಅಶುಚಿಯಾದರೂ ಆತನೇ ತನಗೆ ಪರಲೋಕಸಾಧನವೆಂದು ತಿಳಿಯುವುದೇ ಧರ್ಮ. ಪತಿಯು ಸದಾಚಾರಿಯಾದರೂ ದುರಾಚಾರಿಯಾದರೂ ಧನಿಕನಾದರೂ ದರಿದ್ರನಾದರೂ ಆತನೇ ದೈವ. ಸ್ತ್ರೀಯರಿಗೆ ಪತಿಗಿಂತಲೂ ಅಧಿಕವಾದ ದೈವವಿಲ್ಲ. ಸೀತಾದೇವಿ, ಪತಿಯ ಮಾತನ್ನು ಕೇಳದೆ ಆತನ ಮಾತಿಗೆ ಪ್ರತ್ಯುತ್ತರವನ್ನು ಕೊಡುವ ಸ್ತ್ರೀಯು ಅಪಕೀರ್ತಿಗೊಳಗಾಗಿ ನರಕವನ್ನೈದುವಳು. ನಿನ್ನಂಥ ಕಲ್ಯಾಣಗುಣಸಂಪತ್ತಿಯುಳ್ಳ ಪತಿವ್ರತಾಸ್ತ್ರೀಯು ಪತಿವ್ರತಾಧರ್ಮದಿಂದ ಪತಿಸಹಿತವಾಗಿ ಸ್ವರ್ಗಲೋಕವನ್ನೈದುವಳು. ನೀನು ನಿನ್ನ ಪತಿಯಾದ ಶ್ರೀರಾಮನ ಸಂಗಡ ಸಂಚಾರಮಾಡಿ ಲೋಕದಲ್ಲಿ ಅಧಿಕವಾದ ಕೀರ್ತಿಯನ್ನು ಪಡೆದು ಈ ಲೋಕದಲ್ಲಿ ಸುಖವನ್ನನುಭವಿಸಿ ಪರಲೋಕದಲ್ಲಿ ಉತ್ತಮವಾದ ಸದ್ಗತಿಯನ್ನು ಪಡೆಯುವೆ" ಎಂದಳು.



## ೧೧೮ ನೆಯ ಅಧ್ಯಾಯ

## ಅನಸೂಯಾ ಸೀತಾದೇವಿಯರ ಸಂಭಾಷಣೆ

ಆಮೇಲೆ ಸೀತಾದೇವಿಯು ಅನಸೂಯಾದೇವಿಯನ್ನು ಕುರಿತು ಮೆಲ್ಲಗೆ ಹೀಗೆ ನುಡಿದಳು: "ದೇವಿ, ನೀನು ಹೇಳಿದ ಸದಾಚಾರವು ಪತಿವ್ರತಾಸ್ತ್ರೀಯರಿಗೆ ಸ್ವಧರ್ಮವೇ ಸರಿ. ಸ್ತ್ರೀಯರಿಗೆ ಪತಿಯೇ ಗುರು. ಪತಿಯೇ ದೈವ. ಆದಕಾರಣ ಸ್ತ್ರೀಯರು ಪತಿಯ ಸೇವೆಯನ್ನೇ ಮಾಡಬೇಕು. ಸ್ತ್ರೀಯಾದವಳು ಪುರುಷನ ಅರ್ಧಶರೀರವು. ಆದ್ದರಿಂದ ಪುರುಷನ ಚರಿತ್ರವು ಸ್ತ್ರೀಯರಿಗೂ ಬರುವುದು. ಲೋಕೋತ್ತರನಾಗಿಯೂ ಗುಣೋತ್ತರನಾಗಿಯೂ ಅತ್ಯಂತ ಧರ್ಮಲೋಲುಪ್ತಿಯುಳ್ಳವನಾಗಿಯೂ ಜಿತೇಂದ್ರಿಯನಾಗಿಯೂ ಸ್ಥಿರವಾದ ಪ್ರತಿಜ್ಞೆಯುಳ್ಳವನಾಗಿಯೂ ಧರ್ಮಾತ್ಮನಾಗಿಯೂ ಮಾತಾಪಿತೃಗಳಲ್ಲಿ ಅತ್ಯಂತ ಪ್ರೀತಿಯುಳ್ಳವನಾಗಿಯೂ ಇರುವ ಶ್ರೀರಾಮನು ತನ್ನ ತಾಯಿಯಾದ ಕೌಸಲ್ಯಾದೇವಿಯಲ್ಲಿ ಹೇಗೆ ಮಾತೃಭಕ್ತಿಯಿಂದ ನಡೆದುಕೊಳ್ಳುವನೋ ಆ ರೀತಿಯಲ್ಲಿಯೇ ದಶರಥರಾಯನ ಉಳಿದ ಪತ್ನಿಯರಲ್ಲಿಯೂ ಅತಿವಿಶ್ವಾಸದಿಂದ ನಡೆದುಕೊಳ್ಳುವನು. ಅವರನ್ನು ತನ್ನ ತಾಯಿಯರಂತೆ ಕಾಣುವನು. ಸ್ತ್ರೀಯರಲ್ಲಿ ಯಾವ ಸ್ತ್ರೀಯರನು

ದೃಷ್ಟಿಸಿದರೂ ಆ ಸ್ತ್ರೀಯರನ್ನು ತನ್ನ ತಾಯಿಯಂತೆಯೇ ತಿಳಿದು ಮರ್ಯಾದೆಯಿಂದ ಕಾಣುತ್ತಿರುವನು. ಅನಸೂಯಾದೇವಿ, ನಾನು ಶ್ರೀರಾಮನೊಡನೆ ವನಕ್ಕೆ ಬರುವಾಗ ನನ್ನ ಅತ್ತೆಯಾದ ಕೌಸಲ್ಯಾದೇವಿಗೆ ಅಭಿವಂದಿಸಲು ಆ ದೇವಿಯು ನಿನ್ನಂತೆಯೇ ಬುದ್ಧಿ ಹೇಳಿದಳು. ಅದು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತಿದೆ. ಅದಲ್ಲದೆ ನನ್ನ ತಂದೆಯಾದ ಜನಕಮಹಾರಾಜನು ನನ್ನನ್ನು ಅಗ್ನಿಸಾಕ್ಷಿಕವಾಗಿ ಶ್ರೀರಾಮನಿಗೆ ವಿವಾಹಮಾಡುವಾಗ ನನ್ನ ತಾಯಿಯೂ ನಿನ್ನಂತೆಯೇ ನುಡಿದಳು. ಆ ಮಾತು ನನ್ನ ಅಂತರಂಗದಲ್ಲಿ ನೆಲೆಗೊಂಡಿದೆ. ಲೋಕದಲ್ಲಿ ಸ್ತ್ರೀಯರಿಗೆ ಪತಿಸೇವೆಗಿಂತಲೂ ಅಧಿಕವಾದ ತಪಸ್ಸಿಲ್ಲ. ಸಾವಿತ್ರಿಯೆಂಬ ಪತಿವ್ರತಾಸ್ತ್ರೀಯು ಪತಿಸೇವೆಯಿಂದ ಸ್ವರ್ಗವನ್ನೈದಿದಂತೆ ನೀನು ಪಾತಿವ್ರತ್ಯದ ಮಹಿಮೆಯಿಂದ ಸ್ವರ್ಗವನ್ನು ಪಡೆಯುವೆ. ಈ ಪ್ರಕಾರದಲ್ಲಿ ಪತಿವ್ರತಾಸ್ತ್ರೀಯರು ತಮ್ಮ ಪುರುಷರಲ್ಲಿ ದೃಢಭಕ್ತಿ ಯುಳ್ಳವರಾಗಿ ಆ ಪುಣ್ಯದಿಂದ ಸ್ವರ್ಗಲೋಕವನ್ನೈದಿದವರನೇಕರುಂಟು " ಎಂದು ಹೇಳಿದಳು.

ಅನಸೂಯಾದೇವಿಯು ಆನಂದದಿಂದ ಸೀತಾದೇವಿಯನ್ನು ಆಲಿಂಗಿಸಿ ಆಕೆಯ ಶಿರಸ್ಸನ್ನು ಆಘ್ರಾಣಿಸಿ ಮೈಯನ್ನು ಸವರಿ "ಸೀತೆ, ನಾನು ವ್ರತೋಪವಾಸಗಳಿಂದ ಸಂಪಾದಿಸಿದ ಪುಣ್ಯವು ಬೇಕಾದಷ್ಟಿದೆ. ಅದರ ಬಲದಿಂದ ನಿನಗೆ ಏನು ಬೇಕಾದರೂ ಕೊಡಬಲ್ಲೆನು. ನಿನಗೆ ಏನು ಬೇಕು ? " ಎಂದು ಕೇಳಿದಳು.

ಸೀತಾದೇವಿಯು ಅತಿಹರ್ಷಪಟ್ಟು ತಪೋಬಲಸಾಮರ್ಥ್ಯವುಳ್ಳ ಅನಸೂಯಾದೇವಿಯನ್ನು ಕುರಿತು ಮುಗುಳುನಗೆಯಿಂದ " ತಾಯೆ, ನೀನು ಕೊಡುವುದಾಗಿ ನುಡಿದಾಗಲೇ ಸಮಸ್ತ ಕಾರ್ಯವೂ ಸಫಲವಾಯಿತು " ಎಂದು ನುಡಿದಳು.

ಆ ಮಾತನ್ನು ಕೇಳಿ ಅನುಸೂಯಾದೇವಿಯು ಅತ್ಯಂತ ಸಂತುಷ್ಟಚಿತ್ತಳಾಗಿ " ಸೀತಾದೇವಿ, ಈ ಪುಷ್ಪಮಾಲಿಕೆಯನ್ನೂ ದಿವ್ಯಾಭರಣಗಳನ್ನೂ ದಿವ್ಯಗಂಧಾನುಲೇಪನವನ್ನೂ ತೆಗೆದುಕೊ. ಈ ಗಂಧವನ್ನು ಅನುಲೇಪನ ಮಾಡಿಕೊಂಡರೆ ಅತಿರಮ್ಯವಾಗಿ ನಿತ್ಯವೂ ಹೊಸ ಅನುಲೇಪನ ಮಾಡಿದಂತಿರುವುದು. ನೀನು ಈ ಗಂಧಲೇಪನವನ್ನು ಮಾಡಿಕೊಂಡರೆ ಮಹಾಲಕ್ಷ್ಮಿಯು ಆದಿಪುರುಷನಾದ ನಾರಾಯಣನಿಗೆ ಪ್ರಿಯಳಾಗಿರುವಂತೆ ಶ್ರೀರಾಮನಿಗೆ ಪ್ರಿಯಳಾಗಿರುವೆ " ಎಂದು ನುಡಿದು ದೇವತಾನಿರ್ಮಿತವಾಗಿ ತನ್ನ ವಶದಲ್ಲಿದ್ದ ಅಂಗರಾಗವನ್ನೂ ದಿವ್ಯವಾದ ಪುಷ್ಪ ಮಾಲಿಕೆಯನ್ನೂ ದಿವ್ಯಾಭರಣಗಳನ್ನೂ ಉಡುಗೊರೆಯಾಗಿ ಕೊಟ್ಟಳು.

ಸೀತಾದೇವಿಯು ಅನಸೂಯಾದೇವಿಯು ಉಡುಗೊರೆಯಾಗಿ ಕೊಟ್ಟ ಪುಷ್ಪಮಾಲಿಕೆಯೇ ಮೊದಲಾದ ವಸ್ತುಗಳನ್ನು ತೆಗೆದುಕೊಂಡು ಆ ದೇವಿಯ ಸಮೀಪದಲ್ಲಿ ಕೈಮುಗಿದುಕೊಂಡು ಕುಳಿತಳು. ಆಗ ಪತಿವ್ರತೆಯಾದ ಅನಸೂಯಾದೇವಿಯು ಸೀತಾದೇವಿಯನ್ನು ನೋಡಿ " ಸೀತೆ, ಶ್ರೀರಾಮನು ನಿನ್ನನ್ನು ಸ್ವಯಂವರದಲ್ಲಿ ವಿವಾಹವಾದನೆಂದು ಕೇಳಿದೆನು. ಆ ಕಥಾವೃತ್ತಾಂತವನ್ನು ಕೇಳಬೇಕೆಂಬ ಇಚ್ಛೆಯುಂಟಾಗಿದೆ. ಅದನ್ನು ವಿಸ್ತಾರವಾಗಿ ಹೇಳು " ಎಂದು ಕೇಳಿದಳು.

ಸೀತಾದೇವಿಯು ಆಕೆಯನ್ನು ಕುರಿತು " ದೇವಿ, ನನ್ನ ತಂದೆಯಾದ ಜನಕಮಹಾರಾಯನು ಮಹಾಧರ್ಮಾತ್ಮನು. ಪರಾಕ್ರಮಿಯು. ರಾಜಧರ್ಮದಿಂದ ರಾಜ್ಯವನ್ನಾಳುತ್ತಿರುವವನು. ಆರಾಯನು ಒಂದು ಸಮಯದಲ್ಲಿ ಅಶ್ವಮೇಧಯಾಗವನ್ನು ಮಾಡುವುದಕ್ಕಾಗಿ ಯಾಗಸ್ಥಾನವನ್ನು ಸಮ ಮಾಡು ವುದಕ್ಕೆ ನೇಗಿಲಿನಿಂದ ಉಳುತ್ತಿದ್ದನು. ಆ ಸಮಯದಲ್ಲಿ ಒಂದು ಸ್ವರ್ಣಪೇಟಿಕೆಯು ಹೊರಗೆ ಕಾಣಿಸಲು ಅದನ್ನು ತೆಗೆದು ನೋಡಿದನು. ಆ ಪೆಟ್ಟಿಗೆಯಲ್ಲಿ ನನ್ನನ್ನು ಕಂಡು ತೆಗೆದಪ್ಪಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ನನ್ನ ಮೈಮೇಲಿದ್ದ ಧೂಳನ್ನು ತೊಡೆದು ಸಂತಾನವಿಲ್ಲದಿದ್ದ ತನಗೆ ಒಬ್ಬ

ಕುಮಾರಿಯಾದಳೆಂದು ಅತಿಹರ್ಷದಿಂದಿದ್ದನು. ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ "ಎಲೈ ಜನಕರಾಜನೆ, ಈ ಕುಮಾರಿಯು ನಿನ್ನ ಮಗಳು. ನೀನು ಈ ಮಗುವನ್ನು ಧರ್ಮದಿಂದ ಪರಿಪಾಲಿಸು. ನಿನ್ನ ಮನೆಗೆ ಕರೆದುಕೊಂಡು ಹೋಗು" ಎಂದು ಶಬ್ದವುಂಟಾಯಿತು. ಜನಕರಾಜನು ಅತಿಹರ್ಷಪಟ್ಟು ನನ್ನನ್ನು ಮಗಳಾಗಿ ಪಡೆದು ಅತ್ಯಂತ ಐಶ್ವರ್ಯವನ್ನು ಪಡೆದಂತೆ ತನ್ನ ಪತ್ನಿಯನ್ನು ಕರೆದು ಶಿಶುವಾಗಿದ್ದ ನನ್ನನ್ನು ತನ್ನ ಸಂತಾನದಂತೆ ಧರ್ಮದಿಂದ ಚೆನ್ನಾಗಿ ರಕ್ಷಿಸಬೇಕೆಂದು ಕೊಟ್ಟನು. ಆ ದೇವಿಯು ಹರ್ಷದಿಂದ ನನ್ನನ್ನು ಪರಿಗ್ರಹಿಸಿ ರಕ್ಷಿಸಿದಳು. ಆ ಬಳಿಕ ನನಗೆ ಯೌವನೋದಯ ವಾಗಲು ನನ್ನ ತಂದೆಯು ನನ್ನನ್ನು ಯಾವ ಪುರುಷನಿಗೆ ಕೊಡುವುದೆಂದು ಬಹಳವಾಗಿ ಚಿಂತಿಸ ಲಾರಂಭಿಸಿದನು. ನನ್ನ ತಂದೆಯು ಸಮುದ್ರದೊಳಗೆ ಮುಳುಗಿ ತಡಿಯನ್ನು ಕಾಣದವನಂತೆ ನನ್ನನ್ನು ನೋಡಿ ಚಿಂತೆಪಡುತ್ತ ನನಗೆ ತಕ್ಕ ವಯೋರೂಪಗಳುಳ್ಳ ಪುರುಷನಾರೆಂದು ವಿಚಾರಿಸುತ್ತ ನನಗೆ ಸ್ವಯಂವರವನ್ನು ಮಾಡಬೇಕೆಂದು ನಿಶ್ಚಯಿಸಿದನು. ಪೂರ್ವದಲ್ಲಿ ನಮ್ಮ ತಂದೆಯಾದ ಜನಕರಾಯನು ಯಾಗಮಾಡಿದಾಗ ಹವಿರ್ಭಾಗಗಳಿಂದ ವರುಣನು ಮೆಚ್ಚಿ ಆತನಿಗೆ ಒಂದು ದಿವ್ಯವಾದ ಧನುಸ್ಸನ್ನೂ ಅಕ್ಷಯಬಾಣಗಳುಳ್ಳ ಎರಡು ಬತ್ತಳಿಕೆಗಳನ್ನೂ ಕೊಟ್ಟನು. ಆ ಬಿಲ್ಲು ಮನುಷ್ಯರಿಂದ ಚಲನ ಮಾಡುವುದಕ್ಕೂ ಅಶಕ್ಯವಾದದ್ದು. ಜನಕರಾಯನು ಸ್ವಪ್ನದಲ್ಲಿಯಾದರೂ ಕದಲಿಸುವುದಕ್ಕೆ ಅಸಾಧ್ಯವಾದ ಆ ಬಿಲ್ಲನ್ನು ಸಭೆಗೆ ತರಿಸಿ ಸಮಸ್ತ ಅರಸರನ್ನೂ ಕರೆಯಿಸಿ ಅವರ ಸಂಮುಖದಲ್ಲಿ ಆ ಬಿಲ್ಲನ್ನು ಹೆದೆಯೇರಿಸಿದವನಿಗೆ ನನ್ನನ್ನು ಕೊಡುವುದಾಗಿ ಪ್ರತಿಜ್ಞೆಯನ್ನು ಮಾಡಿದನು. ನನ್ನ ತಂದೆಯ ಆ ಮಾತನ್ನು ಕೇಳಿ ಆ ಅರಸರು ಬಿಲ್ಲನ್ನು ನೋಡಿ ಕದಲಿಸುವುದಕ್ಕೂ ಸಮರ್ಥರಲ್ಲದೆ ದೂರದಿಂದಲೇ ಆ ಬಿಲ್ಲಿಗಭಿವಂದಿಸಿ ತಮ್ಮ ತಮ್ಮ ದೇಶಗಳಿಗೆ ಹಿಂತಿರುಗಿ ಹೋದರು. ಈ ಪ್ರಕಾರ ಕೆಲವು ಕಾಲ ಕಳೆದಮೇಲೆ ವಿಶ್ವಾಮಿತ್ರಮುನೀಶ್ವರನು ಶ್ರೀರಾಮಲಕ್ಷ್ಮಣಸಮೇತನಾಗಿ ನನ್ನ ತಂದೆಯು ಮಾಡುತ್ತಿದ್ದ ಯಜ್ಞವನ್ನು ನೋಡಬೇಕೆಂದು ಬಂದನು. ನನ್ನ ತಂದೆಯು ಆ ಮುನೀಶ್ವರನಿಗೆ ಸತ್ಕಾರವನ್ನು ಮಾಡಿ ಆ ರಾಜಕುಮಾರರು ಯಾರೆಂದು ಕೇಳಿದನು. ಆತನು ಅವರು ದಶರಥಮಹಾರಾಜನ ಕುಮಾರರೆಂದೂ ಮಹಾಪರಾಕ್ರಮಿ ಗಳೆಂದೂ ಅವರ ಹೆಸರು ರಾಮಲಕ್ಷ್ಮಣರೆಂದೂ ಅವರು ಜನಕರಾಜನ ಅರಮನೆಯಲ್ಲಿ ದಿವ್ಯವಾದ ಒಂದು ಬಿಲ್ಲಿದೆಯೆಂದು ಕೇಳಿ ಅದನ್ನು ನೋಡಬೇಕೆಂದು ಬಂದರೆಂದೂ ನುಡಿದನು. ಅದನ್ನು ಕೇಳಿ ಆ ಬಿಲ್ಲನ್ನು ತರಿಸಿ ರಾಮಲಕ್ಷ್ಮಣರ ಮುಂದಿರಿಸಿದನು. ಶ್ರೀರಾಮನು ಆ ಬಿಲ್ಲನ್ನು ನೋಡಿ ಒಂದು ಕ್ಷಣಮಾತ್ರದಲ್ಲಿ ಹೆದೆಯನ್ನೇರಿಸಿ ಕಿವಿಯ ಪರ್ಯಂತ ಬಿಲ್ಲುನಾರಿಯನ್ನು ಸೆಳೆಯಲು ಆ ರಭಸಕ್ಕೆ ಆ ಬಿಲ್ಲು ಚಟಚಟಧ್ವನಿಯಿಂದ ಎರಡು ತುಂಡಾಗಿ ಮುರಿಯಿತು. ಆ ಧ್ವನಿಯು ಒಂದೇಸಾರಿ ಅನೇಕ ಸಿಡಿಲುಗಳೊಡೆದವೋ ಎಂಬಂತೆ ಅತಿಭಯಂಕರವಾಗಿ ಕೇಳಿಸುತ್ತ ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ತುಂಬಿತು! ಆ ಸಮಯದಲ್ಲಿ ನಮ್ಮ ತಂದೆಯಾದ ಜನಕರಾಜನು ಸುವರ್ಣಕಲಶಗಳಲ್ಲಿ ಪುಣ್ಯ ತೀರ್ಥೋದಕವನ್ನು ತಂದು ನನ್ನನ್ನು ಆತನಿಗೆ ಧಾರೆಯೆರೆದುಕೊಡಲು ಯತ್ನಮಾಡಲು ಶ್ರೀರಾಮನು ತನ್ನ ತಂದೆಯಾದ ದಶರಥರಾಯನಿಗೆ ಅರಿಕೆಯಿಲ್ಲದೆ ವಿವಾಹವಾಗ ಬಾರದೆಂದನು. ನನ್ನ ತಂದೆಯು ದಶರಥರಾಯನನ್ನು ತನ್ನ ಮಂತ್ರಿಗಳಿಂದ ಕರೆಯಕಳುಹಿಸಿ ಆ ವೃತ್ತಾಂತವನ್ನು ಅರಿಕೆಮಾಡಿ ಅತ್ಯುತ್ಸವದಿಂದ ನನ್ನನ್ನು ಶ್ರೀರಾಮನಿಗೆ ಧಾರೆಯೆರೆದುಕೊಟ್ಟು ನನ್ನ ತಂಗಿಯಾದ ಊರ್ಮಿಳಾದೇವಿಯನ್ನು ಲಕ್ಷ್ಮಣನಿಗೆ ಕೊಟ್ಟನು. ಈ ಪ್ರಕಾರ ನಾನು ಸ್ವಯಂವರದಲ್ಲಿ ಶ್ರೀರಾಮನನ್ನು ಕೈಹಿಡಿದು ಕೃತಾರ್ಥಳಾಗಿ ಆತನ ಸೇವೆಯನ್ನು ಮಾಡಿಕೊಂಡು ಇದ್ದೇನೆ" ಎಂದು ಹೇಳಿದಳು.

---

೧೧೯ ನೆಯ ಅಧ್ಯಾಯ

# ಶ್ರೀರಾಮನು ಅತ್ರಿಮುನಿಯ ಆಶ್ರಮದಿಂದ ದಂಡಕಾರಣ್ಯಕ್ಕೆ ಹೊರಟಿದ್ದು

ಆಮೇಲೆ ಅನಸೂಯಾದೇವಿಯು ಶ್ರೀರಾಮನ ಸ್ವಯಂವರ ವೃತ್ತಾಂತವನ್ನು ಕೇಳಿ ಹರ್ಷದಿಂದ ಸೀತಾದೇವಿಯನ್ನು ಆಲಿಂಗಿಸಿ ಆ ದೇವಿಯ ಶಿರಸ್ಸನ್ನಾಘ್ರಾಣಿಸಿ ಹೀಗೆಂದಳು : " ಸೀತಾದೇವಿ, ನೀನು ಹೇಳಿದ ಕಥೆಯು ಅತ್ಯಾಶ್ಚರ್ಯಕರವಾಗಿ ಕಿವಿಗಿಂಪಾಗಿದೆ. ನಿನ್ನ ಸ್ವಯಂವರವೃತ್ತಾಂತವನ್ನು ಕೇಳಿ ಮನಸ್ಸಿಗೆ ಹರ್ಷವಾಯಿತು. ನೀನು ಇಲ್ಲಿಗೆ ಬಂದು ಬಹಳ ಹೊತ್ತಾಯಿತು. ಸೂರ್ಯನು ಅಸ್ತಾದ್ರಿಗೆ ಹೋಗುವುದರಲ್ಲಿರುವನು. ಆಹಾರನಿಮಿತ್ತವಾಗಿ ಹೋದ ಪಕ್ಷಿಗಳು ಸಾಯಂಕಾಲವಾಗಲು ತಮ್ಮ ತಮ್ಮ ಗೂಡುಗಳನ್ನು ಸೇರಿ ಮನೋಹರವಾಗಿ ಸ್ವರಗೈಯುತ್ತಿವೆ. ಸಮಸ್ತ ಋಷಿಗಳೂ ಸಾಯಂಕಾಲ ಸ್ನಾನವನ್ನು ಮಾಡಿ ನಾರುಬಟ್ಟೆಗಳನ್ನುಟ್ಟುಕೊಂಡು ಕಲಶಗಳಲ್ಲಿ ತೀರ್ಥಗಳನ್ನು ಹೊತ್ತುಕೊಂಡು ಬರುತ್ತಿರುವರು. ದೀಕ್ಷಿತರು ಆಶ್ರಮಗಳಲ್ಲಿ ಅಗ್ನಿಹೋತ್ರಗಳನ್ನು ಮಾಡಿಕೊಂಡಿರಲು ಹೋಮಧೂಮಗಂಧವು ಪಸರಿಸುತ್ತಿದೆ. ಸಮೀಪದಲ್ಲಿರುವ ವಸ್ತುಗಳೂ ಚೆನ್ನಾಗಿ ಕಾಣುವುದಿಲ್ಲ. ತಪೋವನದಲ್ಲಿರುವ ಮೃಗಗಳು ಆಶ್ರಮಗಳ ಮುಂದಿರುವ ಜಗುಲಿಗಳಲ್ಲಿ ಮಲಗುತ್ತಿವೆ. ನಕ್ಷತ್ರ ಮಂಡಲದಿಂದ ಅಲಂಕರಿಸಲ್ಪಟ್ಟ ರಾತ್ರಿಯು ಸಮೀಪವಾಯಿತು. ಚಂದ್ರನು ತನ್ನ ಕಿರಣಗಳಿಂದ ಮನೋಹರವಾಗಿ ತೋರುತ್ತಿದ್ದಾನೆ. ಇನ್ನು ನೀನು ನಿನ್ನ ಪತಿಯಾದ ಶ್ರೀರಾಮನ ಸಮೀಪಕ್ಕೆ ಹೋಗು. ನಾನು ಕೊಟ್ಟಿರುವ ದಿವ್ಯಗಂಧವನ್ನು ಮೈಗೆ ಅನುಲೇಪನಮಾಡಿಕೊಂಡು ದಿವ್ಯವಾದ ಪುಷ್ಪಗಳನ್ನು ಮುಡಿದುಕೊ. ನಾನು ಕೊಟ್ಟಿರುವ ದಿವ್ಯಾಭರಣಗಳನ್ನು ಧರಿಸಿಕೊ. ನಾನು ನನ್ನ ಕಣ್ಣುಗಳು ದಣಿಯುವ ಹಾಗೆ ನೋಡಿ ಸಂತೋಷಪಡುತ್ತೇನೆ. ದಿವ್ಯಾಭರಣಭೂಷಿತಳಾಗಿ ನೀನು ನಿನ್ನ ಪ್ರಾಣಕಾಂತನ ಸಮೀಪಕ್ಕೆ ಹೋಗು " ಎಂದು ನುಡಿದಳು. ಸೀತಾದೇವಿಯು ಆ ದಿವ್ಯಗಂಧ ಪುಷ್ಪಮಾಲೆ ದಿವ್ಯಾಭರಣಗಳನ್ನು ತೊಟ್ಟುಕೊಳ್ಳಲು ಅನಸೂಯಾದೇವಿಯು ಅತ್ಯಂತ ಪ್ರೀತಿಯಿಂದ ಆಶೀರ್ವಾದವನ್ನು ಮಾಡಿ ಕಳುಹಿಸಿದಳು.

ಸೀತಾದೇವಿಯು ಅನಸೂಯಾದೇವಿಗೆ ನಮಸ್ಕಾರವನ್ನು ಮಾಡಿ ಶ್ರೀರಾಮನ ಬಳಿಗೆ ಹೋಗಲು ಆತನು ಸರ್ವಾಭರಣಭೂಷಿತೆಯಾಗಿ ಪುಷ್ಪಗಳನ್ನು ಮುಡಿದುಕೊಂಡು ಅಂಗರಾಗಾನು ಲೇಪನ ಮಾಡಿಕೊಂಡು ಬಂದ ಆ ದೇವಿಯನ್ನು ಕಂಡು ಆನಂದಿಸಿದನು. ಸೀತಾದೇವಿಯು ತನಗೆ ಅನಸೂಯಾದೇವಿಯು ಉಚಿತವಾಗಿ ಉಡುಗೊರೆಗಳನ್ನು ಕೊಟ್ಟು ಸತ್ಕಾರಮಾಡಿದ ವೃತ್ತಾಂತವನ್ನು ಹೇಳಿದಳು. ಅದನ್ನು ಕೇಳಿ ರಾಮಲಕ್ಷ್ಮಣರು ಹರ್ಷಿತರಾಗಿ ಅಲ್ಲಿದ್ದ ಋಷಿಗಳು ಮಾಡಿದ ಸತ್ಕಾರವನ್ನು ಕೈಕೊಂಡು ಆ ರಾತ್ರಿಯನ್ನು ಕಳೆದು ಮಾರನೆಯ ದಿನ ಪ್ರಾತಃಕಾಲದಲ್ಲೆದ್ದು ಸ್ನಾನಾದಿಗಳನ್ನು ತೀರಿಸಿಕೊಂಡು ಆ ವನದಲ್ಲಿ ಸಂಚರಿಸುತ್ತಿದ್ದ ಧರ್ಮಾತ್ಮರಾದ ತಪಸ್ವಿಗಳನ್ನು ಆ ವನದಲ್ಲಿ ಯಾವ ಮಾರ್ಗದಿಂದ ಸಂಚರಿಸಬೇಕೆಂದೂ ಕಂದಮೂಲಫಲಗಳು ಯಾವ ದಿಕ್ಕಿನಲ್ಲಿರುವು ವೆಂದೂ ಕೇಳಿದರು. ಆ ಋಷಿಗಳು ಶ್ರೀರಾಮನನ್ನು ನೋಡಿ " ಶ್ರೀರಾಮ, ಈ ವನದಲ್ಲಿ ಸಂಚರಿಸುವುದು ಮಹಾ ದುರ್ಘಟವು. ಅದೇನು ಕಾರಣವೆಂದರೆ: ಈ ವನದಲ್ಲಿ ಮನುಷ್ಯರನ್ನು

ಭಕ್ಷಣಮಾಡುವ ರಾಕ್ಷಸರಿರುವರು. ಅವರು ನಾನಾರೂಪಗಳನ್ನು ಧರಿಸಿರುವರು. ಮಾರ್ಗಗಳಲ್ಲಿ ಎಲ್ಲಿ ನೋಡಿದರೂ ಆ ರಾಕ್ಷಸರು ಕೊಂದ ಪ್ರಾಣಿಗಳ ರಕ್ತವು ಚೆಲ್ಲಲ್ಪಟ್ಟಿರುವುದು. ಅದಲ್ಲದೆ ಈ ವನದಲ್ಲಿ ಅನೇಕ ಸರ್ಪಗಳುಂಟು. ಅಶುಚಿಯಾದವರೂ ಕೊಬ್ಬಿದವರೂ ರಾಕ್ಷಸರಿಂದಲೂ ಸರ್ಪಗಳಿಂದಲೂ ಕೊಲ್ಲಲ್ಪಡುವರು. ನೀವು ಅಂಥ ದುಷ್ಟಪ್ರಾಣಿಗಳನ್ನು ವಿಚಾರಿಸಿಕೊಂಡು ಸಂಚಾರಮಾಡಬೇಕು. ನಮ್ಮ ಆಶ್ರಮದಲ್ಲಿರುವ ಋಷಿಗಳು ಕಂದಮೂಲಫಲಗಳನ್ನು ತರುವುದಕ್ಕೆ ಹೋಗುವ ಮಾರ್ಗವಿದು" ಎಂದು ವನದಲ್ಲಿ ಸಂಚಾರಮಾಡುವ ದಾರಿಗಳನ್ನು ತೋರಿಸಿ ಆಶೀರ್ವಾದಗಳನ್ನು ಮಾಡಿದರು.

ಶ್ರೀರಾಮನು ಆ ಋಷಿಗಳಿಗೆ ಕೈಮುಗಿದು ನಮಸ್ಕಾರವನ್ನು ಮಾಡಿ ಸೀತಾಲಕ್ಷ್ಮಣಸಮೇತನಾಗಿ ಸೂರ್ಯನು ಅಂತರಿಕ್ಷಮಾರ್ಗದಲ್ಲಿ ಮೇಘಮಂಡಲವನ್ನು ಪ್ರವೇಶಿಸುವಂತೆ ಅತ್ಯಂತ ಆನಂದದಿಂದ ದಂಡಕಾರಣ್ಯವನ್ನು ಪ್ರವೇಶಿಸಿದನು.

ಇಂತು ಉತ್ತಮ ಕ್ಷತ್ರಿಯ ಕುಲೋದ್ಭವ, ಬಿರುದೆಂತೆಂಬರ ಗಂಡ, ಗಜಬೇಂಟೆಕಾರ, ಸಮಸ್ತಶತ್ರುಸಂಘ
ಜೀಮೂತ ಝಂಝಾಮಾರುತ, ಪ್ರತ್ಯರ್ಥಿ ಪೃಥ್ವೀಪತಿ ವನ ದಾವಾನಲ, ಸಮಸ್ತ ವಿದ್ವಜ್ಜನ ಸಮುದಾಯ
ಕಲ್ಪಭೂಜಾತ, ಆಶ್ರಿತಜನ ಸುರಧೇನು, ಕಾಮಿನೀಜನ ನೂತನ ಪಂಚಬಾಣ, ಚೌಷಷ್ಟಿ
ಕಲಾಪ್ರವೀಣ, ಮಹಿಷಾಪುರವರಾಧೀಶ, ಚಾಮರಾಜವಂಶೋದ್ಧಾರಕ, ತಿಮ್ಮರಾಜ
ತನೂಜ ನರಸರಾಜ ಗರ್ಭದುಗ್ಧ ಸಿಂಧು ಸುಧಾಕರ, ಶ್ರೀಲಕ್ಷ್ಮೀಕಾಂತ ಪಾದಾರ
ವಿಂದ ದ್ವಂದ್ವನಿಷ್ಯಂದಮಾನಂದ ಮಕರಂದ ಬಿಂದುಸಂದೋಹಾಸ್ವಾದನ
ನಿರ್ಮಲೀಕೃತಾಂತಃಕರಣ, ತ್ರಿಣಯನೇಶ್ವರ ಸದ್ಭಕ್ತಿಯುಕ್ತ,
ಮಹಾಬಲಾಚಲಾವಾಸ, ಶ್ರೀಚಾಮುಂಡಿಕಾಂಬಾ ಸದ್ಭಕ್ತಿ
ಮಂಡಿತರಾದ ಶ್ರೀಚಾಮರಾಜ ಒಡೆಯರವರಿಂದ
ಲೋಕೋಪಕಾರಾರ್ಥವಾಗಿ ಬುಧಜನಸಂಮತಿ
ಯಿಂದ ಕರ್ಣಾಟಕಭಾಷಾವಚನ ರಚನೆ
ಯಾದ ಶ್ರೀಚಾಮರಾಜೋಕ್ತಿ
ವಿಲಾಸವೆಂಬ ಕನ್ನಡ
ರಾಮಾಯಣದಲ್ಲಿ

# ಅಯೋಧ್ಯಾಕಾಂಡವು ಸಮಾಪ್ತವಾಯಿತು

ಸೀತಾದೇವೀಯುತಂ ವೀರಂ ಸರ್ವಭೂಷಣಭೂಷಿತಮ್ ।
ಸೀತಾಪತಿಂ ಹರಿಂ ಧ್ಯಾಯೇದಯೋಧ್ಯಾಕಾಂಡ ಉತ್ತಮೇ ॥



ಧ್ಯಾಯೇದಾಜಾನುಬಾಹುಂ ಧೃತಶರಧನುಷಂ ಬದ್ಧಪದ್ಮಾಸನಸ್ಥಂ
ಪೀತಂ ವಾಸೋ ವಸಾನಂ ನವಕಮಲದಲಸ್ಪರ್ಧಿನೇತ್ರಂ ಪ್ರಸನ್ನಮ್ ।
ವಾಮಾಂಕಾರೂಢಸೀತಾಮುಖಕಮಲಮಿಲಲ್ಲೋಚನಂ ನೀರದಾಭಂ
ನಾನಾಲಂಕಾರದೀಪ್ತಂ ದಧತಮುರುಜಟಾಮಂಡಲಂ ರಾಮಚಂದ್ರಮ್ ॥

ರಾಮೋ ರಾಜಮಣಿಃ ಸದಾ ವಿಜಯತೇ ರಾಮಂ ರಮೇಶಂ ಭಜೇ
ರಾಮೇಣಾಭಿಹತಾ ನಿಶಾಚರಚಮೂ ರಾಮಾಯ ತಸ್ಮೈ ನಮಃ ।
ರಾಮಾನ್ನಾಸ್ತಿ ಪರಾಯಣಂ ಪರತರಂ ರಾಮಸ್ಯ ದಾಸೋಽಸ್ಮ್ಯಹಂ
ರಾಮೇ ಚಿತ್ತಲಯಃ ಸದಾ ಭವತು ಮೇ ಭೋ ರಾಮ ಮಾಮುದ್ಧರ ॥

ಭವಭಯಹರಮೇಕಂ ಭಾನುಕೋಟಿಪ್ರಕಾಶಂ
ಕರಧೃತಶರಚಾಪಂ ಕಾಲಮೇಘಾವಭಾಸಮ್ ।
ಕನಕರುಚಿರವಸ್ತ್ರಂ ರತ್ನವತ್ಕುಂಡಲಾಢ್ಯಂ
ಕಮಲವಿಶದನೇತ್ರಂ ಸಾನುಜಂ ರಾಮಮೀಡೇ ॥

ಶ್ರೀ





ಶ್ರೀರಾಮಚಂದ್ರಾಯ ನಮಃ

# ಅ ರ ಣ್ಯ ಕಾ ಂ ಡ



## ೧ ನೆಯ ಅಧ್ಯಾಯ

## ಶ್ರೀ ರಾ ಮ ನು ಅ ರ ಣ್ಯ ದ ಲ್ಲಿ ದ್ದ ಋ ಷಿ ಗ ಳ ನ್ನು ಸಂ ದ ರ್ಶಿ ಸಿ ದ್ದು

ಈ ಪ್ರಕಾರದಲ್ಲಿ ಶ್ರೀರಾಮನು ನಿತ್ಯಾನಂದಸ್ವರೂಪನಾಗಿ ಸೀತಾಲಕ್ಷ್ಮಣರನ್ನು ಕೂಡಿಕೊಂಡು ದಂಡಕಾರಣ್ಯವನ್ನು ಪ್ರವೇಶಿಸಿ ಅಲ್ಲಿ ನಿತ್ಯವಾಸಿಗಳಾಗಿದ್ದ ಮಹಾತ್ಮರಾದ ಋಷಿಗಳ ಆಶ್ರಮವನ್ನು ಕಂಡನು. ಅದು ಅಂತರಿಕ್ಷಮಾರ್ಗದಲ್ಲಿ ಅತ್ಯಂತ ಕಾಂತಿಯುಕ್ತವಾದ ಸೂರ್ಯಮಂಡಲದಂತೆ ಬ್ರಹ್ಮತೇಜಸ್ಸಿನಿಂದ ಪರಿಪೂರ್ಣವಾಗಿ ಸಮಸ್ತ ಪ್ರಾಣಿಗಳಿಗೂ ಆಶ್ರಯವಾದ ಪರ್ಣಶಾಲೆಗಳಿಂದ ಮನೋಹರವಾಗಿತ್ತು. ಮೃಗಪಕ್ಷಿಸಮೂಹಗಳಿಂದ ಇಟ್ಟಣಿಸಿ ಅತ್ಯಂತ ವಿಶಾಲವಾದ ಅಗ್ನಿಹೋತ್ರದ ಮನೆಗಳಿಂದ ತುಂಬಿತ್ತು. ಕೃಷ್ಣಾಜಿನ, ಹೋಮಯೋಗ್ಯವಾದ ಸಮಿತ್ತು, ದರ್ಭೆ, ದೇವಪೂಜಾರ್ಥವಾಗಿ ತಂದ ಪುಷ್ಪದ ಕರಡಿಗೆ, ದೇವತಾರ್ಚನೆಯ ನಿಮಿತ್ತವಾಗಿ ತಂದ ಪವಿತ್ರವಾದ ಪುಣ್ಯ ತೀರ್ಥೋದಕ—ಇವುಗಳಿಂದ ಪರಿಪೂರ್ಣವಾದ ಪೂರ್ಣಕಲಶಗಳು ಕಂದಮೂಲಫಲಗಳು ಇತ್ಯಾದಿಗಳಿಂದ ಮೆರೆಯುತ್ತಿತ್ತು. ಅತ್ಯಂತ ಸ್ವಾದುವಾದ ಫಲಗಳಿಂದಲೂ ಮನೋಹರವಾದ ವೃಕ್ಷಗಳಿಂದಲೂ ಹೋಮಧೂಮಗಳಿಂದಲೂ ವೈಶ್ವದೇವತಾರ್ಥವಾದ ಬಲಿಗಳಿಂದಲೂ ಋಷಿಕುಮಾರರು ಅಭ್ಯಾಸ ಮಾಡುವ ವೇದಘೋಷಗಳಿಂದಲೂ ಪುಷ್ಪಿತವಾದ ತಾವರೆ ಕೊಳಗಳಿಂದಲೂ ಮನೋಹರವಾಗಿತ್ತು. ಕಂದಮೂಲಫಲಾಹಾರಗಳನ್ನು ಮಾಡಿಕೊಂಡು ಜಿತೇಂದ್ರಿಯರಾಗಿ ಕೃಷ್ಣಾಜಿನ ನಾರುಬಟ್ಟೆಗಳನ್ನು ಧರಿಸಿಕೊಂಡು ತಮ್ಮ ತಪಸ್ಸಾಮರ್ಥ್ಯದಿಂದ ಸೂರ್ಯಾಗ್ನಿಗಳ ಕಾಂತಿಗೆ ಸಮಾನವಾದ ತೇಜಸ್ಸುಳ್ಳವರೂ ಆಹಾರನಿಯಮವುಳ್ಳವರೂ ಮಹಾತ್ಮರೂ ವೃದ್ಧರೂ ಆದ ಋಷಿಗಳಿಂದ ಇಟ್ಟಣಿಸಿತ್ತು. ಸಾಕ್ಷಾತ್ ಬ್ರಹ್ಮಲೋಕದಂತೆ ಅತಿಮನೋಹರವಾಗಿ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರಿಂದ ಪರಿಪೂರ್ಣವಾಗಿದ್ದ ಆ ಋಷಿಗಳ ಆಶ್ರಮವನ್ನು ಕಂಡು ಶ್ರೀರಾಮನು ಹರ್ಷದಿಂದ ಬಿಲ್ಲಿನ ಹೆದೆಯನ್ನಿಳಿಸಿಕೊಂಡು ಪ್ರವೇಶಿಸಿದನು. ಆ ತಪೋವನದಲ್ಲಿದ್ದ ಋಷಿಗಳು ಸೀತಾಲಕ್ಷ್ಮಣ

ಸಮೇತನಾದ ಶ್ರೀರಾಮನನ್ನು ಕಂಡು ಶರತ್ಕಾಲದ ಪೂರ್ಣಿಮೆಯಲ್ಲಿ ಉದಯಾಚಲವನ್ನೈದಿದ ಚಂದ್ರನಂತೆ ಅತಿಪ್ರಕಾಶದಿಂದ ಒಪ್ಪುತ್ತಿದ್ದ ಆತನಾರೆಂದು ತಮ್ಮೊಳಗೆ ತಾವೇ ಯೋಚಿಸುತ್ತ ಆತನನ್ನು ಇದಿರ್ಗೊಂಡು ಆಶೀರ್ವದಿಸಿದರು. ಆತನ ಮುಖಕಾಂತಿಯನ್ನೂ ಸೊಬಗನ್ನೂ ಪ್ರಸನ್ನತೆಯನ್ನೂ ಅತ್ಯಂತ ಮನೋಹರವಾದ ಆಕಾರವನ್ನೂ ಕಂಡು ಆಶ್ಚರ್ಯಪಟ್ಟು ಅವನನ್ನು ತಮ್ಮ ಪರ್ಣಶಾಲೆಗೆ ಕರೆದುಕೊಂಡು ಹೋದರು. ಪೀಠವನ್ನು ಕೊಟ್ಟು ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಕಂದಮೂಲಫಲಾಹಾರಗಳನ್ನರ್ಪಿಸಿ ರಾಮನ ವೃತ್ತಾಂತವನ್ನರಿತುಕೊಂಡು ಹೀಗೆಂದರು :. "ಎಲೈ ಶ್ರೀರಾಮನೆ, ಲೋಕದಲ್ಲಿ ಧರ್ಮಪರಿಪಾಲಕನಾದ ಅರಸನೇ ಪೂಜ್ಯನು. ಆತನೇ ಮಾನ್ಯನು. ಸಮಸ್ತ ಪ್ರಾಣಿಗಳಿಗೂ ಮರೆಹೊಗಲು ಯೋಗ್ಯನು. ದುಷ್ಟನಿಗ್ರಹಶಿಷ್ಟಪರಿಪಾಲನಗಳನ್ನು ಮಾಡಿ ಪ್ರಜೆಗಳನ್ನು ರಕ್ಷಿಸುವುದರಿಂದ ಎಲ್ಲರಿಗೂ ತಂದೆಯೆನಿಸಿಕೊಳ್ಳುವನು. ದೇವೇಂದ್ರನು ಪರಿಪಾಲಿಸುವ ಭೂಮಂಡಲದ ಭಾರದಲ್ಲಿ ನಾಲ್ಕರೊಳಗೊಂದಂಶವನ್ನು ಧರ್ಮಿಷ್ಠನಾದ ರಾಜನು ವಹಿಸುವನು. ಆದಕಾರಣ ಧರ್ಮಿಷ್ಠನಾದ ರಾಜನಿಗೆ ನಮಸ್ಕರಿಸಿ ಸತ್ಕಾರವನ್ನು ಮಾಡಬೇಕೆಂಬ ಧರ್ಮಶಾಸ್ತ್ರವುಂಟು. ನೀನು ನಮ್ಮನ್ನು ರಕ್ಷಿಸಬೇಕು. ಎಲೈ ಶ್ರೀರಾಮನೆ, ನೀನು ಪಟ್ಟಣದಲ್ಲಿದ್ದರೂ ವನದಲ್ಲಿದ್ದರೂ ನಮಗೆಲ್ಲರಿಗೂ ರಕ್ಷಕನು. ನಾವು ಸಂಸಾರಭ್ರಾಂತಿಯನ್ನು ಬಿಟ್ಟು ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಅರಿಷಡ್ವರ್ಗವನ್ನು ತೊರೆದು ಜಿತೇಂದ್ರಿಯರಾಗಿ ತಪೋವನದಲ್ಲಿ ತಪಸ್ಸುಮಾಡಿಕೊಂಡು ನಿನ್ನ ಗರ್ಭದಲ್ಲಿರುವ ಮಕ್ಕಳೆಂದು ಭಾವಿಸಿಕೊಂಡಿದ್ದೇವೆ. ನೀನೇ ನಮಗೆ ರಕ್ಷಕನು" ಎಂದು ನುಡಿದು ಸೀತಾಲಕ್ಷ್ಮಣಸಮೇತನಾದ ಶ್ರೀರಾಮನನ್ನು ವನದಲ್ಲಿದ್ದ ಕಂದಮೂಲಫಲಾಹಾರಗಳಿಂದ ಸತ್ಕರಿಸಿದರು.



## ೨ನೆಯ ಅಧ್ಯಾಯ

## ವಿರಾಧನ ಆಕ್ರಮಣ

ಈ ಪ್ರಕಾರದಲ್ಲಿ ಆ ಋಷಿಗಳಿಂದ ಸತ್ಕರಿಸಲ್ಪಟ್ಟ ಶ್ರೀರಾಮನು ಆ ತಪೋವನದಲ್ಲಿ ತಪಸ್ವಿಗಳು ತೋರಿಸಿದ ಪರ್ಣಶಾಲೆಯಲ್ಲಿ ಆ ರಾತ್ರಿಯನ್ನು ಸುಖದಿಂದ ಕಳೆದನು. ಮಾರನೆಯ ದಿನ ಪ್ರಾತಃಕಾಲದಲ್ಲೆದ್ದು ಸ್ನಾನ ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಾನುಷ್ಠಾನಗಳನ್ನು ತೀರಿಸಿಕೊಂಡು ಆ ಋಷಿಗಳಿಂದ ಬೀಳ್ಕೊಂಡನು. ಬಳಿಕ ಸಮಸ್ತ ಮೃಗಸಮೂಹಗಳಿಂದಿಟ್ಟಣಿಸಿ, ಕಿವಿಗಿಂಪಾಗಿ ಸ್ವರಗೈಯುವ ಪಕ್ಷಿಗಳಿಂದ ರಮಣೀಯವಾಗಿ, ಕುಸುಮಿತವಾದ ಅನೇಕ ತಾವರೆಗಳಿಂದ ಮನೋಹರವಾದ ಕೊಳಗಳುಳ್ಳ, ಸಿಂಹಾದಿಗಳಿಂದ ಅತಿಭಯಂಕರವಾದ ಧ್ವನಿಗಳುಳ್ಳ ಆ ವನಮಧ್ಯದಲ್ಲಿ ಸೀತಾಲಕ್ಷ್ಮಣಸಮೇತನಾಗಿ ಸಂಚರಿಸುತ್ತ ಪರ್ವತದ ಶೃಂಗಕ್ಕೆ ಸಮಾನನಾದ ಒಬ್ಬ ರಾಕ್ಷಸನನ್ನು ಕಂಡನು. ಆ ರಾಕ್ಷಸನು ಗುಳಿಬಿದ್ದ ಕಣ್ಣುಗಳುಳ್ಳವನೂ ದೊಡ್ಡ ಮುಖವುಳ್ಳವನೂ ಡೊಂಕಾದ ಶರೀರವುಳ್ಳವನೂ ಏರುತಗ್ಗುಗಳಿರುವ ಹೊಟ್ಟೆಯುಳ್ಳವನೂ ನೋಡುವುದಕ್ಕೆ ಅಸಹ್ಯಕರನೂ ಅತ್ಯಂತ ನಿಡಿದಾದ ಶರೀರವುಳ್ಳವನೂ ಅತಿಘೋರರೂಪನೂ ವಿಕಟಾಂಗನೂ ಆಗಿದ್ದನು. ಅವನು ರಕ್ತದಿಂದ ನೆನೆದ ಶರೀರವುಳ್ಳವನಾಗಿ ವ್ಯಾಘ್ರಚರ್ಮವನ್ನು ಹೊದ್ದುಕೊಂಡು ಸಮಸ್ತ ಪ್ರಾಣಿಗಳಿಗೂ ಭಯವನ್ನು ಹುಟ್ಟಿಸುವವನಾಗಿ, ಮನುಷ್ಯರನ್ನು ಕೋರೆದಾಡೆಗಳಿಂದ ಅಗಿದು

ನುಂಗುವವನಾಗಿದ್ದನು. ಆ ರಾಕ್ಷಸನು ಬೊಬ್ಬಿಡುತ್ತ ಯಮನಂತೆ ಬಾಯಿಬಿಟ್ಟುಕೊಂಡು ಮೂರು ಸಿಂಹಗಳನ್ನೂ ನಾಲ್ಕು ವ್ಯಾಘ್ರಗಳನ್ನೂ ಎರಡು ಗೂಳಿಗಳನ್ನೂ ಹತ್ತು ಸಾರಂಗಗಳನ್ನೂ ಒಂದು ಆನೆಯ ತಲೆಯನ್ನೂ ತನ್ನ ಶೂಲದಿಂದ ಪೋಣಿಸಿಕೊಂಡು ಮೇಲಕ್ಕೆ ನೆಗಹಿಕೊಂಡಿದ್ದನು. ಅವನು ಸೀತಾಲಕ್ಷ್ಮಣಸಮೇತನಾದ ಶ್ರೀರಾಮನನ್ನು ಕಂಡು ಪ್ರಳಯಕಾಲದ ಯಮನು ಪ್ರಜೆಗಳನ್ನು ಅಟ್ಟಿಬರುವಂತೆ ಅಟ್ಟಿಕೊಂಡು ಬಂದು ಸಮಸ್ತ ಭೂಮಂಡಲವೂ ಕಂಪನವಾಗುವ ಹಾಗೆ ಕೂಗುತ್ತ ಅವರನ್ನು ಅಡ್ಡಗಟ್ಟಿ ಬಲಾತ್ಕಾರದಿಂದ ರಾಮಲಕ್ಷ್ಮಣರ ಮಧ್ಯದಲ್ಲಿದ್ದ ಸೀತಾದೇವಿಯನ್ನು ಸೆಳೆದನು. ಅನಂತರ ರಾಮಲಕ್ಷ್ಮಣರನ್ನು ಕುರಿತು "ಎಲೈ ಮನುಷ್ಯರೆ, ನೀವು ಈ ವನಕ್ಕೆ ಬರಬಹುದೆ ? ನೀವು ನಾರುಬಟ್ಟೆಗಳನ್ನೂ ಬಿಲ್ಲು ಬಾಣ ಖಡ್ಗಗಳನ್ನೂ ಧರಿಸಿಕೊಂಡು ಸ್ತ್ರೀಸಮೇತರಾಗಿ ಅಂತ್ಯಕಾಲವು ಸಂಭವಿಸಿದ್ದರಿಂದ ಈ ಅರಣ್ಯಕ್ಕೆ ಬಂದಿರಿ. ತಪಸ್ವಿಗಳಾದ ನಿಮಗೆ ಈ ಸ್ತ್ರೀಸಹವಾಸವೇತಕ್ಕೆ ! ನೀವು ಮಹಾಪಾಪಿಗಳು ; ಅಧರ್ಮಚಾರಿಗಳು. ನಾನು ಈ ವನದುರ್ಗದಲ್ಲಿ ಸಂಚರಿಸುತ್ತಿರುವೆನು. ನನ್ನ ಹೆಸರು ವಿರಾಧ. ನಾನು ನಿತ್ಯವೂ ಋಷಿಗಳ ಮಾಂಸವನ್ನು ಭಕ್ಷಿಸಿಕೊಂಡಿರುವೆನು. ಕೋಮಲಾಂಗಿಯಾದ ಈಕೆಯು ನನಗೆ ಸ್ತ್ರೀಯಾಗುವಳು. ಇನ್ನು ನಿಮ್ಮಿಬ್ಬರ ರಕ್ತಪಾನವನ್ನು ಮಾಡುವೆನು" ಎಂದು ನುಡಿದನು.

ಆ ಮಾತನ್ನು ಕೇಳಿ ಸೀತಾದೇವಿಯು ಬಿರುಗಾಳಿಯಿಂದ ಚಲಿಸುವ ಬಾಳೆಯ ಗಿಡದಂತೆ ನಡುಗುತ್ತಿದ್ದಳು. ಶ್ರೀರಾಮನು ವಿರಾಧನ ಹತ್ತಿರದಲ್ಲಿದ್ದ ಸೀತಾದೇವಿಯನ್ನು ಕಂಡು ಮುಖಕಾಂತಿಗುಂದಿ ಲಕ್ಷ್ಮಣನನ್ನು ನೋಡಿ "ಎಲೈ ಲಕ್ಷ್ಮಣ, ಜನಕಮಹಾರಾಯನ ಕುಮಾರಿಯಾಗಿ ನನ್ನ ಪತ್ನಿಯಾದ ಸೀತಾದೇವಿಗೆ ರಾಕ್ಷಸನ ಸಮೀಪದಲ್ಲಿರುವಂಥ ದುರವಸ್ಥೆಯು ಪ್ರಾಪ್ತವಾಯಿತು. ಅತ್ಯಂತ ಸುಖಶರೀರಿಯಾಗಿ ಕೀರ್ತಿವಂತೆಯಾಗಿ ರಾಜಕುಮಾರಿಯಾದ ಸೀತಾದೇವಿಯನ್ನೂ ನಮ್ಮನ್ನೂ ವನಕ್ಕೆ ಕಳುಹಿಸಿದ ಕೈಕೇಯಿದೇವಿಯ ಮನೋರಥವು ಇಂದು ಸಫಲವಾಯಿತು. ಆ ದೇವಿಗೆ ನಮ್ಮನ್ನು ವನಕ್ಕೆ ಕಳುಹಿಸಿದುದರಿಂದಾದ ಸಂತೋಷಕ್ಕೆ ಸಮಸ್ತ ರಾಜ್ಯಾಧಿಪತ್ಯದಿಂದ ಬಂದ ಸಂತೋಷವೂ ಸಾಟಿಯಾಗಲಾರದು. ಆಕೆಯು ಮನಸ್ಸಿಗೆ ಹರ್ಷವನ್ನುಂಟುಮಾಡಿಕೊಳ್ಳಲಿ. ನನಗೆ ಸೀತಾದೇವಿಗೆ ಪರಪುರುಷನ ಸ್ಪರ್ಶವಾಗುವುದಕ್ಕಿಂತಲೂ ಅಧಿಕವಾದ ದುಃಖವಿಲ್ಲ. ಲಕ್ಷ್ಮಣ, ನನ್ನ ಪಟ್ಟಾಭಿಷೇಕವನ್ನು ನಿಲ್ಲಿಸಿ ನನ್ನನ್ನು ವನಕ್ಕೆ ಕಳುಹಿಸಿದರೂ ಇಂಥ ದುಃಖವುಂಟಾಗಲಿಲ್ಲ" ಎಂದನು.

ಲಕ್ಷ್ಮಣನು ಕೆಣಕಲ್ಪಟ್ಟ ಕೃಷ್ಣಸರ್ಪದಂತೆ ನಿಟ್ಟುಸಿರುಬಿಡುತ್ತ ಶ್ರೀರಾಮನನ್ನು ಕುರಿತು "ಎಲೈ ಸ್ವಾಮಿಯೆ, ನೀನು ಸಮಸ್ತ ಪ್ರಾಣಿಗಳಿಗೂ ಒಡೆಯನಾದ ದೇವೇಂದ್ರನಿಗೆ ಸಮಾನನಾದವನು. ಅಂಥ ನೀನು ಹೀಗೆ ಅನಾಥನಂತೆ ಕಣ್ಣೀರುಬಿಡುವುದು ಉಚಿತವಲ್ಲ. ಶಿಷ್ಯನಾದ ನಾನಿರುವಾಗ ನಿನಗೆ ದುಃಖವೇನು ? ನಾನು ಒಂದೇ ಬಾಣದಿಂದ ಈ ರಾಕ್ಷಸನನ್ನು ಕೊಂದು ಆತನ ರಕ್ತದಿಂದ ಈ ಭೂಮಿಯಲ್ಲಿರುವ ಭೂತಬೇತಾಳಗಳಿಗೆ ತೃಪ್ತಿಮಾಡುತ್ತೇನೆ. ಪೂರ್ವದಲ್ಲಿ ರಾಜ್ಯಾಧಿಪತ್ಯವನ್ನು ಬಯಸಿ ನಮ್ಮನ್ನು ವನಕ್ಕೆ ಕಳುಹಿಸಿದ ಭರತನ ಮೇಲೆ ಹುಟ್ಟಿದಂಥ ಕೋಪವನ್ನು ಈ ವಿರಾಧನ ಮೇಲೆ ತೋರಿಸುತ್ತೇನೆ. ದೇವೇಂದ್ರನು ಕೋಪಿಸಿಕೊಂಡು ವಜ್ರಾಯುಧವನ್ನು ಪರ್ವತದ ಮೇಲೆ ಬಿಟ್ಟಂತೆ ನನ್ನ ಭುಜಬಲಪರಾಕ್ರಮದಿಂದ ಒಂದು ಬಾಣವನ್ನು ಇವನ ವಕ್ಷಃಸ್ಥಳದಲ್ಲಿ ಪ್ರಯೋಗಿಸುತ್ತೇನೆ. ಆದರಿಂದ ಈ ರಾಕ್ಷಸನು ಗಾಯವಡೆದು ಸುರುಳಿಕೊಂಡು ಬೀಳುವನು. ನನ್ನ ಸಾಮರ್ಥ್ಯವನ್ನು ನೋಡು" ಎಂದು ನುಡಿದನು.



೩ನೆಯ ಅಧ್ಯಾಯ

## ವಿರಾಧನು ರಾಮಲಕ್ಷ್ಮಣರನ್ನು ಎತ್ತಿಕೊಂಡು ಹೋದದ್ದು

ಆಮೇಲೆ ವಿರಾಧನು ತನ್ನ ಗಂಭೀರವಾದ ಧ್ವನಿಯು ಸಮಸ್ತ ವನಾಂತರದಲ್ಲಿಯೂ ಪ್ರತಿಧ್ವನಿಮಾಡುವ ಹಾಗೆ ರಾಮಲಕ್ಷ್ಮಣರನ್ನು ಕುರಿತು "ಎಲೇ ಪ್ರಾಣಿಗಳಿರಾ, ನೀವಾರು ? ಎಲ್ಲಿಂದ ಬಂದಿರಿ ? ಯಾವ ದಿಕ್ಕಿಗೆ ಹೋಗಬೇಕು ? ನಿಮ್ಮ ಹೆಸರೇನು ? ನಿಮ್ಮ ಕುಲವಾವುದು ? ನೀವಾರ ಮಕ್ಕಳು ? " ಎಂದು ಕೇಳಿದನು.

ಶ್ರೀರಾಮನು ಕಿಡಿಯುದುರುತ್ತಿದ್ದ ಮುಖವುಳ್ಳ ವಿರಾಧನನ್ನು ಕುರಿತು "ಎಲೇ ರಾಕ್ಷಸ, ನಮ್ಮದು ಇಕ್ಷ್ವಾಕುವಂಶ. ನಮ್ಮ ತಂದೆಯು ದಶರಥಮಹಾರಾಜ. ನಮ್ಮ ಹೆಸರು ರಾಮಲಕ್ಷ್ಮಣರು. ನೀನಾರು ? ನಿನ್ನ ಸ್ವರೂಪವನ್ನು ತಿಳಿಯ ಹೇಳು. ನೀನು ಏನು ಕಾರಣ ಈ ದಂಡಕಾರಣ್ಯದಲ್ಲಿ ಸಂಚರಿಸುತ್ತಿದ್ದೀಯೆ ? " ಎಂದು ಕೇಳಿದನು.

ವಿರಾಧನು "ಎಲೈ ರಾಮನೆ, ನಾನು ಜವನ ಕುಮಾರನು. ನನ್ನ ತಾಯಿಯು ಶತಹ್ರದೆ. ನನ್ನ ಹೆಸರು ವಿರಾಧ. ನಾನು ಪೂರ್ವದಲ್ಲಿ ಬ್ರಹ್ಮದೇವನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿ ಆತನು ಪ್ರಸನ್ನನಾಗಲು ಲೋಕದಲ್ಲಿ ಶಸ್ತ್ರಾಸ್ತ್ರಗಳಿಂದ ಗಾಯವಡೆಯದಂತೆ ವರವನ್ನು ಬೇಡಿಕೊಂಡೆನು. ಆದ್ದರಿಂದ ನಾನು ನಿಮ್ಮ ಶಸ್ತ್ರಾಸ್ತ್ರಗಳಿಗೆ ಸಾಧ್ಯನಾಗುವವನಲ್ಲ. ನೀವು ಈ ಸ್ತ್ರೀಯ ಮೇಲಣ ಅಪೇಕ್ಷೆಯನ್ನು ಬಿಟ್ಟು ನಿಮ್ಮ ದಾರಿಗೊಂಡು ಶೀಘ್ರವಾಗಿ ಓಡಿಹೋಗಿರಿ. ನಾನು ನಿಮ್ಮಮೇಲಣ ದಯೆಯಿಂದ ನಿಮ್ಮನ್ನು ಪ್ರಾಣಸಹಿತವಾಗಿ ಬಿಡುವೆನು " ಎಂದು ನುಡಿದನು.

ಶ್ರೀರಾಮನು ಕೋಪಾಟೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ವಿಕಟಾಂಗನಾದ ವಿರಾಧನನ್ನು ನೋಡಿ "ಎಲೇ ನೀಚರಾಕ್ಷಸ, ನಿನ್ನ ಜನ್ಮವನ್ನು ಸುಡು. ನಿನಗೆ ಅಂತ್ಯಕಾಲವು ಸಂನಿಹಿತವಾಯಿತು. ನೀನು ರಣರಂಗದಲ್ಲಿ ಇದಿರಾದರೆ ಜೀವಸಹಿತವಾಗಿ ತಿರುಗಿ ಹೋಗಲಾರೆ " ಎಂದು ನುಡಿದು ಬಿಲ್ಲಿಗೆ ಹೆದೆಯನ್ನೇರಿಸಿ ಕೂರಂಬುಗಳನ್ನು ಹೂಡಿ ವಿರಾಧನ ಮೇಲೆ ಪ್ರಯೋಗಿಸಿದನು. ಅವು ಆ ರಾಕ್ಷಸನ ಶರೀರವನ್ನು ತಾಕಿ ಉಚ್ಚಳಿಸಿ ರಕ್ತದಿಂದ ನೆನೆದು ಭೂಮಿಯ ಮೇಲೆ ಬಿದ್ದವು. ಆ ರಾಕ್ಷಸನು ಅತ್ಯಂತ ಕೋಪಯುಕ್ತನಾಗಿ ಸೀತಾದೇವಿಯನ್ನು ಕೆಳಗಿಳಿಸಿ ತ್ರಿಶೂಲವನ್ನು ಮೇಲಕ್ಕೆ ನೆಗಹಿಕೊಂಡು ರಾಮಲಕ್ಷ್ಮಣರ ಮೇಲೆ ಬೊಬ್ಬಿಡುತ್ತ ಪ್ರಳಯಕಾಲದ ಯಮನಂತೆ ಅಟ್ಟಿ ಬಂದನು. ರಾಮಲಕ್ಷ್ಮಣರು ಇನ್ನೂ ಶರವರ್ಷಗಳನ್ನು ಕರೆದು ಆ ರಾಕ್ಷಸನ ಶರೀರದಲ್ಲಿ ನೆಡಿಸಿದರು. ವಿರಾಧನು ಮುಗುಳುನಗೆಯಿಂದ ವಿಲಾಸಾರ್ಥವಾಗಿ ಆಕಳಿಸಲು ಆತನ ಶರೀರದಲ್ಲಿ ನೆಟ್ಟಿದ್ದ ಬಾಣಗಳೆಲ್ಲವೂ ತಮಗೆ ತಾವೇ ಬಿದ್ದುಹೋದವು! ಆಮೇಲೆ ವಿರಾಧನು ಬ್ರಹ್ಮದೇವನ ವರಪ್ರದಾನಸಾಮರ್ಥ್ಯದಿಂದ ತನ್ನ ಪ್ರಾಣಗಳನ್ನುಳಿಸಿಕೊಂಡು ತ್ರಿಶೂಲವನ್ನು ಮೇಲಕ್ಕೆತ್ತಿ ರಾಮಲಕ್ಷ್ಮಣರ ಮೇಲೆ ಎಸೆದನು. ಅಂತರಿಕ್ಷಮಾರ್ಗದಲ್ಲಿ ಬರುತ್ತಿದ್ದ ಆ ತ್ರಿಶೂಲವನ್ನು ಕಂಡು ರಾಮಲಕ್ಷ್ಮಣರು ಎರಡು ಬಾಣಗಳಿಂದ ಕತ್ತರಿಸಲು ಆ ತ್ರಿಶೂಲವು ದೇವೇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಮಹಾಮೇರುವಿನ ಶಿಖರದಂತೆ ಎರಡು ತುಂಡುಗಳಾಗಿ ಭೂಮಿಯ ಮೇಲೆ ಬಿತ್ತು. ರಾಮಲಕ್ಷ್ಮಣರು ಕೃಷ್ಣಸರ್ಪದ ರೀತಿಯಲ್ಲಿ ಅತಿಭಯಂಕರವಾದ

ಖಡ್ಗಗಳಿಂದ ವಿರಾಧನನ್ನು ಹೊಯ್ಯಲು ಆತನು ಗಾಯಪಡೆದು ಕೋಪದಿಂದ ರಾಮಲಕ್ಷ್ಮಣರಿಬ್ಬರನ್ನೂ ಎತ್ತಿಕೊಂಡು ಹೋಗಲು ಯತ್ನಮಾಡಿದನು. ಆ ಅಭಿಪ್ರಾಯವನ್ನು ತಿಳಿದು ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ವಿರಾಧನು ನಮ್ಮಿಬ್ಬರನ್ನೂ ಎತ್ತಿಕೊಂಡು ಹೋಗಲಿಚ್ಛಿಸುತ್ತಾನೆ. ಅವನು ತನ್ನ ಮನಸ್ಸು ಬಂದಂತೆ ಹೋಗಲಿ. ನೀನು ಸುಮ್ಮನಿರು. ಈ ರಾಕ್ಷಸನು ಯಾವ ದಾರಿಗೊಂಡು ಹೋಗುವನೋ ನಮಗೂ ಅದೇ ದಾರಿ" ಎಂದು ನುಡಿದನು.

ಆ ಬಳಿಕ ವಿರಾಧನು ತನ್ನ ಭುಜಬಲದಿಂದ ರಾಮಲಕ್ಷ್ಮಣರಿಬ್ಬರನ್ನೂ ಹೆಗಲಮೇಲೆ ಕುಳ್ಳಿರಿಸಿಕೊಂಡು ಬೊಬ್ಬಿಡುತ್ತ ಕಾರ್ಮುಗಿಲಂತೆ ಅತ್ಯಂತ ಕಪ್ಪಾಗಿ ನಾನಾಪ್ರಕಾರವಾದ ಕ್ಷುದ್ರ ಮೃಗಸಮೂಹಗಳಿಂದಿಟ್ಟಣಿಸಿದ ಒಂದು ವನವನ್ನು ಹೊಕ್ಕನು.



## ೪ನೆಯ ಅಧ್ಯಾಯ

## ವಿರಾಧನ ವಧೆ

ಹೀಗೆ ವಿರಾಧನು ರಾಮಲಕ್ಷ್ಮಣರನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಹೋದದ್ದನ್ನು ಕಂಡು ಸೀತಾದೇವಿಯು ಭುಜಗಳನ್ನು ಮೇಲಕ್ಕೆ ನೆಗಹಿಕೊಂಡು "ಅಕಟಕಟಾ! ಸತ್ಯಸಂಧರಾಗಿ ಸದ್ವರ್ತನರಾದ ರಾಮಲಕ್ಷ್ಮಣರನ್ನು ದುರಾತ್ಮನಾದ ವಿರಾಧನು ಎತ್ತಿಕೊಂಡು ಹೋಗುತ್ತಿದ್ದಾನೆ. ಈ ಮಹತ್ತಾದ ಅರಣ್ಯದಲ್ಲಿ ಇನ್ನು ನನಗಾರು ರಕ್ಷಕರು? ಈ ವನದಲ್ಲಿರುವ ತೋಳ ಹುಲಿ ಸಿಂಹ ಮೊದಲಾದ ದುಷ್ಟಪ್ರಾಣಿಗಳು ನನ್ನನ್ನು ಭಕ್ಷಣ ಮಾಡುವುವು. ಎಲೈ ವಿರಾಧನೆ, ನಿನಗೆ ನಮಸ್ಕಾರ! ರಾಮಲಕ್ಷ್ಮಣರನ್ನು ಬಿಡು" ಎಂದು ಕೂಗುತ್ತಿದ್ದಳು.

ಆಗ ಸೀತಾದೇವಿಯ ರೋದನಧ್ವನಿಯನ್ನು ಕೇಳಿ ರಾಮಲಕ್ಷ್ಮಣರು ಶೀಘ್ರದಲ್ಲಿ ಆ ದುರಾತ್ಮನನ್ನು ಕೊಲ್ಲಬೇಕೆಂದು ಕಣ್ಣುಸನ್ನೆಗಳಿಂದ ನಿಶ್ಚಯಿಸಿದರು. ಲಕ್ಷ್ಮಣನು ವಿರಾಧನ ಎಡತೋಳನ್ನೂ ಶ್ರೀರಾಮನು ಆತನ ಬಲತೋಳನ್ನೂ ಖಡ್ಗಗಳಿಂದ ಛೇದಿಸಿದರು. ಆಗ ಭುಜಗಳು ಛೇದಿಸಲ್ಪಟ್ಟ ವಿರಾಧನು ಕಂಗೆಟ್ಟು, ತನುಕಾಂತಿಗುಂದಿ, ಕಾರ್ಮುಗಿಲಂತೆ ಭಯಂಕರವಾದ ಸ್ವರೂಪವುಳ್ಳವನಾಗಿ, ದೇವೇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟು ಬಿದ್ದ ಪರ್ವತದಂತೆ ಭೂಮಿಯ ಮೇಲೆ ಬಿದ್ದನು. ರಾಮಲಕ್ಷ್ಮಣರು ವಿರಾಧನನ್ನು ಕೈಗಳಿಂದ ಗುದ್ದಿ ಮೊಳಕೈ ಮೊಳಕಾಲುಗಳಿಂದ ತಿವಿದು ಮೇಲಕ್ಕೆತ್ತಿ ಭೂಮಿಯಮೇಲೆ ಅಪ್ಪಳಿಸಿ, ಶರೀರವನ್ನು ತುಳಿದು, ಸತ್ತ್ವಗೆಡಿಸಿ ಭೂಮಿಯ ಮೇಲೆ ಹಾಕಿ ಖಡ್ಗಗಳಿಂದ ಹೊಯ್ದರೂ ಪ್ರಾಣಹೋಗದಿರಲು, ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ಈ ರಾಕ್ಷಸನು ಬ್ರಹ್ಮದೇವನ ವರಪ್ರಸಾದದಿಂದ ಆಯುಧಗಳಿಂದ ಕೊಲ್ಲಲು ಸಾಧ್ಯನಲ್ಲ. ದೊಡ್ಡ ಹಳ್ಳವನ್ನು ತೆಗೆದು ಇವನನ್ನು ಹೂಳಿಬಿಡಬೇಕು" ಎಂದು ನುಡಿದನು.

ಆ ಮಾತನ್ನು ಕೇಳಿ ವಿರಾಧನು ಶ್ರೀರಾಮನನ್ನು ಕುರಿತು ಹೀಗೆಂದನು: "ಎಲೈ ಪುರುಷೋತ್ತಮನಾದ ಶ್ರೀರಾಮನೆ, ನಾನು ನಿನ್ನ ಶಸ್ತ್ರಹತಿಗಳಿಂದ ಸತ್ತವನೇ ಸರಿ. ನನ್ನ ಅಜ್ಞಾನದಿಂದ ಮೊದಲು ನಿನ್ನ ಸ್ವರೂಪವನ್ನು ತಿಳಿಯಲಿಲ್ಲ. ನೀನು ಮಹಾ ಪರಾಕ್ರಮಿ; ಶೌರ್ಯದಲ್ಲಿ ದೇವೇಂದ್ರನಿಗೆ ಸಮಾನನು. ನಿನ್ನಂಥ ಪರಾಕ್ರಮಿಗಳಾದ ಮತ್ತಾರನ್ನೂ ಕಾಣೆನು. ನಿನ್ನ ತಾಯಿಯಾದ ಕೌಸಲ್ಯಾದೇವಿಯೇ ಕೃತಾರ್ಥಳು. ನಿನ್ನ ಸ್ವರೂಪವನ್ನು ಈಗ

ಅರಿತೆನು. ಸೀತಾದೇವಿಯು ಪತಿವ್ರತಾಶಿರೋಮಣಿ. ಲಕ್ಷ್ಮಣನು ಮಹಾತ್ಮನು. ನನಗೆ ಈ ಅಜ್ಞಾನವು ಬಂದ ಕಾರಣವನ್ನು ಕೇಳು: ನಾನು ಪೂರ್ವಜನ್ಮದಲ್ಲಿ ತುಂಬುರು ಎಂಬ ಗಂಧರ್ವ. ನನಗೆ ಒಂದು ಕಾರಣದಿಂದ ಕುಬೇರನ ಶಾಪವು ಬಂದಿತು. ನಾನು ರಂಭೆಯಲ್ಲಿ ಆಸಕ್ತನಾಗಿ ಕುಬೇರನ ಸೇವೆಯನ್ನು ಸರಿಯಾಗಿ ಮಾಡಲಿಲ್ಲವಾದ್ದರಿಂದ ಅವನು ನನ್ನನ್ನು ಶಪಿಸಿದನು. ಅವನ ಶಾಪದಿಂದ ನನಗೆ ಈ ಘೋರವಾದ ರಾಕ್ಷಸಶರೀರವು ಬಂದಿತು. ಆ ಸಮಯದಲ್ಲಿ ನಾನು ಕುಬೇರನಿಗೆ ಅಭಿವಂದಿಸಿ 'ನನ್ನಿಂದ ತಪ್ಪಾಯಿತು. ತ್ರಾಹಿ ತ್ರಾಹಿ!' ಎಂದು ಪ್ರಾರ್ಥನೆ ಮಾಡಿದೆನು. ಕುಬೇರನು ನನ್ನನ್ನು ಕುರಿತು 'ಒಂದು ಸಮಯದಲ್ಲಿ ದಶರಥರಾಯನ ಮಗನಾದ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ದಂಡಕಾರಣ್ಯಕ್ಕೆ ಬರುವನು. ಆಗ ಸೀತಾದೇವಿಯ ನಿಮಿತ್ತದಿಂದ ಆತನೊಡನೆ ನಿನಗೆ ಯುದ್ಧವುಂಟಾಗುವುದು. ಆಗ ಆತನ ಶಸ್ತ್ರಹತಿಯಿಂದ ನಿನಗೆ ರಾಕ್ಷಸಜನ್ಮವಿಮೋಚನವಾಗಿ ಗಂಧರ್ವಲೋಕಕ್ಕೆ ಹೋಗುವೆ' ಎಂದು ಹೇಳಿದನು. ಈಗ ಆ ಸಮಯವು ಬಂದಿತು. ಈಗ ನಿನ್ನ ಶಸ್ತ್ರಹತಿಯಿಂದ ನಾನು ರಾಕ್ಷಸಶರೀರವನ್ನು ಬಿಟ್ಟು ಗಂಧರ್ವರೂಪದಿಂದ ನನ್ನ ಲೋಕಕ್ಕೆ ಹೋಗುತ್ತಿದ್ದೇನೆ. ನಿನಗೆ ಅನೇಕ ಶ್ರೇಯಸ್ಸಾಗಲಿ! ಇಲ್ಲಿಂದ ಮುಂದೆ ಅರೆಗಾವುದ ದಾರಿಯಲ್ಲಿ ಶರಭಂಗಮುನೀಶ್ವರನು ನಿನಗೆ ಅನೇಕ ಶ್ರೇಯಸ್ಸನ್ನುಂಟು ಮಾಡುವನು. ಶ್ರೀರಾಮ, ಲೋಕದಲ್ಲಿ ರಾಕ್ಷಸರ ಶರೀರಗಳನ್ನು ಹಳ್ಳದಲ್ಲಿ ಹಾಕಿ ಹೂಳಬೇಕೆಂಬ ವಿಧಿಯುಂಟು. ಆದಕಾರಣ ನೀನು ಈ ಶರೀರವನ್ನು ಹಳ್ಳದಲ್ಲಿ ಹಾಕಿ ಹೂಳಿ ಸುಖವಾಗಿ ಮುಂದಕ್ಕೆ ತೆರಳಿಹೋಗು" ಎಂದು ಹೇಳಿ ತನ್ನ ಶರೀರವನ್ನು ಬಿಟ್ಟು ಸ್ವರ್ಗಲೋಕವನ್ನೈದಿದನು.

ಆಮೇಲೆ ಶ್ರೀರಾಮನು ಕಾಡಾನೆಯಂತೆ ಭಯಂಕರನಾದ ಆ ರಾಕ್ಷಸನ ದೇಹಕ್ಕನುಗುಣವಾದ ಹಳ್ಳವೊಂದನ್ನು ವನಪ್ರದೇಶದಲ್ಲಿ ತೋಡುವಂತೆ ಲಕ್ಷ್ಮಣನಿಗೆ ಆಜ್ಞಾಪಿಸಿ ತಾನು ವಿರಾಧನ ಕೊರಳನ್ನು ಮೆಟ್ಟಿಕೊಂಡು ನಿಂತನು. ಲಕ್ಷ್ಮಣನು ಹಾರೆಯಿಂದ ಮಹತ್ತಾದ ಹಳ್ಳವನ್ನು ತೆಗೆದು ಅತಿಭಯಂಕರವಾಗಿ ಕೂಗುತ್ತಿದ್ದ ಆ ಶರೀರವನ್ನು ಅದರಲ್ಲಿ ಹಾಕಿ ಹೂಳಿದನು. ಈ ರೀತಿಯಲ್ಲಿ ಮಹಾಬಲಪರಾಕ್ರಮಿಗಳಾದ ರಾಮಲಕ್ಷ್ಮಣರು ತಪೋವನದಲ್ಲಿ ಸಮಸ್ತ ಋಷಿಗಳಿಗೂ ವಿಘ್ನಮಾಡುತ್ತಿದ್ದ ವಿರಾಧನನ್ನು ಕೊಂದು ಅವನ ಶರೀರವನ್ನು ಆಳವಾದ ಹಳ್ಳದಲ್ಲಿ ಹೂಳಿ ಅದರ ಮೇಲೆ ದೊಡ್ಡ ಕಲ್ಲರೆಗಳನ್ನು ಅಡಸಿದರು. ಅನಂತರ ಸೀತಾದೇವಿಯ ಭಯವನ್ನು ಪರಿಹರಿಸಿ, ಆ ದೇವಿಯನ್ನು ಸಂತವಿಟ್ಟು, ಅಂತರಿಕ್ಷಮಾರ್ಗದಲ್ಲಿ ಅತ್ಯಂತ ಕಾಂತಿಯುಕ್ತರಾದ ಚಂದ್ರಸೂರ್ಯರಂತೆ ತೇಜೋಬಲಪರಾಕ್ರಮದಿಂದ ಒಪ್ಪುತ್ತ ವನದಲ್ಲಿ ಸಂತೋಷದಿಂದ ಸಂಚರಿಸುತ್ತಿದ್ದರು.

---

## ೫ ನೆಯ ಅಧ್ಯಾಯ

## ಶರಭಂಗಮುನಿಯು ಬ್ರಹ್ಮಲೋಕವನ್ನು ಸೇರಿದ ವೃತ್ತಾಂತ

ಶ್ರೀರಾಮನು ಸೀತಾದೇವಿಯನ್ನು ಆಲಿಂಗಿಸಿಕೊಂಡು ಸಮಾಧಾನಪಡಿಸಿ ಪ್ರಿಯ ಸಹೋದರನಾದ ಲಕ್ಷ್ಮಣನನ್ನು ಕುರಿತು " ಲಕ್ಷ್ಮಣ, ನಾವು ಮೊದಲು ಯಾವಾಗಲೂ ಈ ವನದಲ್ಲಿ ಸಂಚರಿಸಿದವರಲ್ಲ. ನಮಗೆ ಇನ್ನು ಈ ವನದಲ್ಲಿರಸಲ್ಲದು. ನಾವು ಶರಭಂಗಮುನೀಶ್ವರನ ಆಶ್ರಮಕ್ಕೆ ಹೋಗೋಣ " ಎಂದು ನುಡಿದು ಸೀತಾಲಕ್ಷ್ಮಣಸಮೇತನಾಗಿ ಶರಭಂಗಮುನೀಶ್ವರನ ತಪೋವನದ

ಸಮೀಪಕ್ಕೆ ಹೋದನು. ಅಲ್ಲಿ ಅತ್ಯದ್ಭುತವಾಗಿ ಅಂತರಿಕ್ಷಮಾರ್ಗದಲ್ಲಿದ್ದ ಸುವರ್ಣಮಯವಾದ ಒಂದು ರಥವನ್ನು ಕಂಡನು. ಆ ರಥದಲ್ಲಿ ದಿವ್ಯಾಭರಣಭೂಷಿತನಾಗಿಯೂ ದಿವ್ಯಾಲಂಕಾರಯುಕ್ತನಾಗಿಯೂ ಅತಿತೇಜಸ್ವಿಯಾಗಿಯೂ ಮಹಾತ್ಮರಾದ ದೇವತೆಗಳಿಂದ ಸೇವಿಸಲ್ಪಟ್ಟವನಾಗಿಯೂ ಉದಯವಾಗುವ ಬಾಲಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನಾಗಿಯೂ ಶರತ್ಕಾಲದ ಮೇಘದಂತೆ ಬಿಳುಪಾದ ಸತ್ತಿಗೆಯುಳ್ಳವನಾಗಿಯೂ ಪಾರಿಜಾತಾದಿ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟವನಾಗಿಯೂ ಅಂತರಿಕ್ಷದಲ್ಲಿದ್ದುಕೊಂಡು ಶರಭಂಗಮುನೀಶ್ವರನೊಡನೆ ಸಂಭಾಷಣೆ ಮಾಡುತಿದ್ದ ದೇವೇಂದ್ರನನ್ನು ಕಂಡನು. ಶ್ರೀರಾಮನು ಲಕ್ಷ್ಮಣನನ್ನು ನೋಡಿ "ಎಲೈ ಲಕ್ಷ್ಮಣ, ದೇವೇಂದ್ರನ ಕುದುರೆಗಳು ಪಚ್ಚೆಯ ವರ್ಣದವೆಂದು ಕೇಳಿದ್ದೇನೆ. ಈಗ ಅಂತರಿಕ್ಷಮಾರ್ಗದಲ್ಲಿರುವ ಈ ರಥಕ್ಕೆ ಕಟ್ಟಿರುವ ಕುದುರೆಗಳು ಪಚ್ಚೆಯ ವರ್ಣದವಾಗಿವೆ. ಇವು ದೇವೇಂದ್ರನ ಕುದುರೆಗಳಾಗಿರಬೇಕು. ಈ ರಥದ ಸಮೀಪದಲ್ಲಿರುವ ಪುರುಷರೆಲ್ಲರೂ ಮೂವತ್ತು ವರುಷದ ವಯಸ್ಸುಳ್ಳವರಂತೆ ಮೋಹನವಾದ ಯೌವನವುಳ್ಳವರಾಗಿಯೂ ಕುಂಡಲಗಳನ್ನು ಧರಿಸಿಕೊಂಡು ಖಡ್ಗಪಾಣಿಗಳಾಗಿಯೂ ವಿಶಾಲವಾದ ವಕ್ಷಃಸ್ಥಳವುಳ್ಳವರಾಗಿಯೂ ನಿಡಿದಾದ ತೋಳುಗಳುಳ್ಳವರಾಗಿಯೂ ಕೆಂದಾವರೆ ಎಸಳುಗಳಂತೆ ಕಣ್ಣುಗಳುಳ್ಳವರಾಗಿಯೂ ಅತಿಮೋಹನವಾದ ಸೊಬಗುಳ್ಳವರಾಗಿ ಅತ್ಯಂತ ದೇದೀಪ್ಯಮಾನವಾದ ಕಂಠಮಾಲೆಗಳುಳ್ಳವರಾಗಿಯೂ ಇದ್ದಾರೆ. ಆದ್ದರಿಂದ ಇವರು ದೇವೇಂದ್ರನ ಬೆನ್ನುಹಿಡಿದು ಬಂದ ದೇವತೆಗಳಾಗಿರಬೇಕು. ಇದಕ್ಕೆ ಸಂದೇಹವಿಲ್ಲ. ಒಂದು ಕ್ಷಣಮಾತ್ರ ನೀನು ಸೀತಾದೇವಿಯನ್ನು ಕಾದುಕೊಂಡಿರು. ನಾನು ಈ ವಿಷಯವನ್ನು ಚೆನ್ನಾಗಿ ವಿಚಾರಿಸಿಕೊಂಡು ಬರುತ್ತೇನೆ" ಎಂದು ಹೇಳಿ ಸೀತಾದೇವಿಯನ್ನು ಲಕ್ಷ್ಮಣನ ಸಮೀಪದಲ್ಲಿರಿಸಿ ತಾನು ಮುಂದೆ ಶರಭಂಗಮುನೀಶ್ವರನ ಸಮೀಪಕ್ಕೆ ಹೋದನು.

ಆಗ ಅಂತರಿಕ್ಷಮಾರ್ಗದಲ್ಲಿ ರಥಾರೂಢನಾಗಿ ಶರಭಂಗಮುನೀಶ್ವರನೊಡನೆ ಸಂಭಾಷಣೆ ಮಾಡುತ್ತಿದ್ದ ದೇವೇಂದ್ರನು ಶ್ರೀರಾಮನನ್ನು ಕಂಡು ಶರಭಂಗಮುನೀಶ್ವರನನ್ನು ಕುರಿತು "ಎಲೈ ಶರಭಂಗಮುನೀಶ್ವರನೆ, ಶ್ರೀರಾಮನು ನಿನ್ನ ಸಮೀಪಕ್ಕೆ ಬರುತ್ತಿದ್ದಾನೆ. ಆತನು ನನ್ನನ್ನು ಕಂಡು ಸಂಭಾಷಣೆಮಾಡುವುದಕ್ಕೆ ಮೊದಲೇ ನನ್ನನ್ನು ಕಳುಹಿಸಿಕೊಡು. ಶ್ರೀರಾಮನು ಯುದ್ಧರಂಗದಲ್ಲಿ ಅನೇಕ ರಾಕ್ಷಸರನ್ನು ಜಯಿಸಿ ಯಾರಿಗೂ ಅಸಾಧ್ಯವಾದ ಸಾಹಸವನ್ನು ಮಾಡುವನು" ಎಂದು ಹೇಳಿ ಸ್ವರ್ಗಲೋಕಕ್ಕೆ ಹೋದನು.

ಆ ಬಳಿಕ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಶರಭಂಗಮುನೀಶ್ವರನ ತಪೋವನವನ್ನು ಸೇರಿ ಆ ಮುನಿಯನ್ನು ಕಂಡು ವಂದಿಸಿದನು. ಆತನು ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಆಸನವನ್ನು ಕೊಟ್ಟು ಸಮೀಪದಲ್ಲಿ ಕುಳ್ಳಿರಿಸಿಕೊಳ್ಳಲು, ಶ್ರೀರಾಮನು "ಮುನೀಶ್ವರರೆ, ಇಷ್ಟುಹೊತ್ತಿನವರೆಗೆ ಅಂತರಿಕ್ಷಮಾರ್ಗದಲ್ಲಿ ಕಾಣಿಸುತ್ತಿದ್ದ ರಥವು ಯಾರದು ? ಆ ರಥದಲ್ಲಿದ್ದವನಾರು ? ಆತನು ಇಲ್ಲಿಗೆ ಬರಲು ಕಾರಣವೇನು ? " ಎಂದು ಪ್ರಶ್ನೆಮಾಡಿದನು.

ಶರಭಂಗಮುನಿಯು "ಶ್ರೀರಾಮ, ಅಂತರಿಕ್ಷಮಾರ್ಗದಲ್ಲಿ ಕಾಣಿಸಿದ ರಥವು ದೇವೇಂದ್ರನದು. ಅದರಲ್ಲಿದ್ದವನು ದೇವೇಂದ್ರನು. ಆತನು ನನ್ನನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗುವುದಕ್ಕೆ ಇಲ್ಲಿಗೆ ಬಂದನು. ನಾನು ಬಹುಕಾಲ ಉಗ್ರವಾದ ತಪಸ್ಸನ್ನು ಮಾಡಿ ನನ್ನ ತಪಸ್ಸಾಮರ್ಥ್ಯದಿಂದ ಬ್ರಹ್ಮಲೋಕವನ್ನು ಸಾಧ್ಯಮಾಡಿಕೊಂಡೆನು. ದೇವೇಂದ್ರನು ಕರೆದರೂ ನಾನು ಬ್ರಹ್ಮಲೋಕಕ್ಕೆ ಹೋಗಲಿಲ್ಲ. ಏಕೆಂದರೆ, ನಾನು ದೂರದಿಂದಲೇ ನಿನ್ನ ಬರುವಿಕೆಯನ್ನು ಕಂಡೆನು. ಪ್ರೀತಿ

ಯಿಂದ ಅತಿಥಿಯಾದ ನಿನ್ನನ್ನು ಪೂಜಿಸದೆ ಬ್ರಹ್ಮಲೋಕಕ್ಕೆ ಹೋಗಬಾರದೆಂದು ನಿಂತೆನು. ಇನ್ನು ನಿನ್ನೊಡನೆ ಸಂಭಾಷಣೆಮಾಡಿ ಹೋಗುತ್ತೇನೆ. ನನ್ನ ತಪಸ್ಸಾಮರ್ಥ್ಯದಿಂದ ಸಂಪಾದಿಸಿದ ಬ್ರಹ್ಮಲೋಕವನ್ನು ನೀನು ಸ್ವೀಕರಿಸು" ಎಂದು ನುಡಿದನು.

ಸಕಲ ಶಾಸ್ತ್ರಾರ್ಥತತ್ತ್ವವಿಚಾರವನ್ನು ಬಲ್ಲ ಶ್ರೀರಾಮನು ಶರಭಂಗಮುನೀಶ್ವರನನ್ನು ಕುರಿತು "ಮುನೀಶ್ವರರೆ, ನಾನು ಉತ್ತಮವಾದ ಪುಣ್ಯಲೋಕವನ್ನು ಸಂಪಾದಿಸಿಕೊಳ್ಳುತ್ತೇನೆ. ನಮಗೆ ಒಂದು ಆಶ್ರಮವನ್ನು ತೋರಿಸಿದರೆ ಆ ಆಶ್ರಮದಲ್ಲಿ ಸುಖವಾಗಿರುವೆವು" ಎಂದು ನುಡಿದನು.

ಶರಭಂಗಮುನಿಯು "ಶ್ರೀರಾಮ, ಇಲ್ಲಿಂದ ಮುಂದೆ ಸಮೀಪದಲ್ಲಿ ಧರ್ಮಾತ್ಮನಾದ ಸುತೀಕ್ಷ್ಣಮುನೀಶ್ವರನಿದ್ದಾನೆ. ಆತನ ಸಮೀಪಕ್ಕೆ ಹೋದರೆ ಆ ಮುನೀಶ್ವರನು ನಿನಗೆ ಉತ್ತಮವಾದ ಸ್ಥಳವನ್ನು ತೋರಿಸುವನು. ಈ ಮಂದಾಕಿನೀತೀರದಲ್ಲಿಯೇ ಹೋಗಿ ಮುಂದೆ ದೋಣಿಯಿಂದ ಈ ನದಿಯನ್ನು ದಾಟಿ ಆಚೆಯ ತೀರಕ್ಕೆ ಹೋದರೆ ಅಲ್ಲಿ ಸುತೀಕ್ಷ್ಣಮುನಿಯ ಆಶ್ರಮವನ್ನು ಕಾಣುವೆ. ಅಲ್ಲಿಗೆ ಇದೇ ದಾರಿ. ಎಲೈ ಶ್ರೀರಾಮ, ನಾನು ಈ ಶರೀರವನ್ನು ಬಿಟ್ಟು ಸ್ವರ್ಗಲೋಕಕ್ಕೆ ಹೋಗುತ್ತಲಿದ್ದೇನೆ. ಒಂದು ಕ್ಷಣಮಾತ್ರ ನೋಡುತ್ತಿರು" ಎಂದು ಹೇಳಿ ನಿತ್ಯಾಗ್ನಿಹೋತ್ರವನ್ನು ಮಾಡಿ ಆ ಶ್ರೌತಾಗ್ನಿಯನ್ನು ಆಜ್ಯಾಹುತಿಗಳಿಂದ ಪ್ರಜ್ವಲಿಸಿದನು. ಅನಂತರ ಶ್ರೌತಾಗ್ನಿಜ್ವಾಲೆಯನ್ನು ಪ್ರವೇಶಿಸಿ ರಕ್ತ ಮಾಂಸ ಮೇದಸ್ಸು ಮಜ್ಜೆ ಅಸ್ಥಿ ಶುಕ್ಲಗಳೆಂಬ ಸಪ್ತಧಾತುವಿಕಾರವಾದ ಶರೀರವನ್ನು ಬಿಟ್ಟು ದಿವ್ಯವಾಗಿ ಮೂವತ್ತು ವರುಷದ ಮೋಹನವಾದ ಯೌವನಾವಸ್ಥೆಯನ್ನು ಪಡೆದು ಸಾಕ್ಷಾತ್ ಯಜ್ಞಪುರುಷನ ರೀತಿಯಲ್ಲಿ ಅತ್ಯಂತ ಪ್ರಕಾಶಮಾನವಾದ ಶರೀರಕಾಂತಿಯುಳ್ಳವನಾಗಿ ಒಪ್ಪುತ್ತ, ಆಹಿತಾಗ್ನಿಗಳಾಗಿ ಮಹಾತ್ಮರಾದ ಋಷಿಗಳ ಲೋಕಗಳನ್ನೂ ದೇವತೆಗಳ ಲೋಕಗಳನ್ನೂ ದಾಟಿ ಬ್ರಹ್ಮಲೋಕಕ್ಕೆ ಹೋಗಲು ಬ್ರಹ್ಮದೇವನು ಆ ಮುನೀಶ್ವರನನ್ನು ಸ್ವಾಗತವಚನಾದಿಗಳಿಂದ ಸತ್ಕರಿಸಿದನು.



## ೬ನೆಯ ಅಧ್ಯಾಯ

## ಶ್ರೀರಾಮನು ಋಷಿಗಳಿಗೆ ಅಭಯವನ್ನು ಕೊಟ್ಟದ್ದು

ಈ ಪ್ರಕಾರ ಶರಭಂಗಮುನೀಶ್ವರನು ಸ್ವರ್ಗಸ್ಥನಾದಮೇಲೆ ಅಲ್ಲಿದ್ದ ಸಮಸ್ತ ಋಷಿಗಳೂ ತೇಜಸ್ವಿಯಾದ ಶ್ರೀರಾಮನ ಸಮೀಪಕ್ಕೆ ಬಂದರು. ಅವರಲ್ಲಿ ಕೆಲವರು ವೈಖಾನಸರು ; ಕೆಲವರು ವಾಲಖಿಲ್ಯರು. ಕೆಲವರು ನಾಳೆಗೆ ಆಹಾರವೇನೆಂದು ಚಿಂತಿಸದೆ ತಪಸ್ಸು ಮಾಡುತ್ತಿದ್ದವರು. ಕೆಲವರು ಸೂರ್ಯಕಿರಣ ಚಂದ್ರಕಿರಣಗಳನ್ನು ಪಾನಮಾಡಿಕೊಂಡಿದ್ದವರು. ಕೆಲವರು ಭತ್ತಗಳನ್ನು ತಂದು ಕಲ್ಲುಗಳಿಂದ ಕುಟ್ಟಿ ಆ ಅಕ್ಕಿಯಿಂದ ಹವಿಸ್ಸನ್ನು ಮಾಡಿ ಆಹಾರಮಾಡಿಕೊಂಡಿದ್ದವರು. ಕೆಲವರು ಎಲೆಗಳನ್ನು ಆಹಾರಮಾಡಿಕೊಂಡಿದ್ದವರು. ಕೆಲವರು ನೆಲ್ಲನ್ನು ದಂತಗಳಿಂದ ಅಗಿದು ಹೊಟ್ಟನ್ನು ಉಗಿದು ಅಕ್ಕಿಯನ್ನು ಭಕ್ಷಿಸಿಕೊಂಡಿದ್ದವರು. ಕೆಲವರು ಶರೀರವನ್ನು ನೀರಲ್ಲಿ ಮುಳುಗಿಸಿಕೊಂಡು ಶಿರಸ್ಸನ್ನು ಮಾತ್ರ ಮೇಲಿಟ್ಟುಕೊಂಡು ತಪಸ್ಸು ಮಾಡುತ್ತಿದ್ದವರು. ಕೆಲವರು ಹಗಲಿರುಳೂ ಮಲಗದೆ ಕುಳಿತುಕೊಂಡು ತಪಸ್ಸುಮಾಡುತ್ತಿದ್ದವರು. ಕೆಲವರು ಗುಹೆ

ಮರದಡಿ ಮೊದಲಾದವನ್ನು ಸೇರದೆ ಹಗಲಿರುಳೂ ಬಯಲಲ್ಲಿ ತಪಸ್ಸು ಮಾಡುತ್ತಿದ್ದವರು. ಕೆಲವರು ವಾಯ್ವಾಹಾರಮಾತ್ರದಿಂದಲೇ ತಪಸ್ಸು ಮಾಡುತ್ತಿದ್ದವರು. ಕೆಲವರು ಪಂಚಾಗ್ನಿ ಮಧ್ಯದಲ್ಲಿ ತಪಸ್ಸುಮಾಡಿಕೊಂಡಿದ್ದವರು. ಈ ಪ್ರಕಾರದಲ್ಲಿ ಬ್ರಹ್ಮತೇಜಸ್ಸಿನಿಂದ ಪ್ರಕಾಶಮಾನವಾಗಿ ದಿಕ್ಕುಗಳನ್ನು ಬೆಳಗಿಸುತ್ತ ಶರಭಂಗಮುನೀಶ್ವರನ ಆಶ್ರಮದಲ್ಲಿದ್ದ ಋಷಿಗಳು ಶ್ರೀರಾಮನ ಸಮೀಪಕ್ಕೆ ಬಂದು ಆತನನ್ನು ಕುರಿತು ಹೀಗೆಂದರು : “ ಶ್ರೀರಾಮ. ಸ್ವರ್ಗಲೋಕದಲ್ಲಿ ದೇವೇಂದ್ರನು ಸಮಸ್ತ ದೇವತೆಗಳಿಗೂ ಒಡೆಯನಾಗಿರುವ ಹಾಗೆ ನೀನು ಈ ಭೂಲೋಕದಲ್ಲಿ ಸಮಸ್ತ ಪ್ರಜೆಗಳಿಗೂ ಒಡೆಯನು. ನೀನು ತಂದೆಯ ಪ್ರತಿಜ್ಞೆಯನ್ನು ಧರ್ಮದಿಂದ ಪರಿಪಾಲಿಸುವೆ. ನಿನ್ನಲ್ಲಿ ಸಮಸ್ತ ಧರ್ಮಗಳೂ ನೆಲೆಗೊಂಡಿರುವುವು. ಧರ್ಮಜ್ಞನೂ ಸತ್ಯಸಂಧನೂ ಮಹಾತ್ಮನೂ ಆದ ನಿನ್ನನ್ನು ಬೇಡಿಕೊಳ್ಳುತ್ತೇವೆ. ನಮ್ಮ ವಿಜ್ಞಾಪನೆಯನ್ನು ಪರಿಪಾಲಿಸ ಬೇಕು—ಲೋಕದಲ್ಲಿ ಅರಸನು ಧರ್ಮಶಾಸ್ತ್ರವನ್ನನುಸರಿಸಿ ರಾಜ್ಯದಲ್ಲಿ ಹುಟ್ಟಿದ ಹುಟ್ಟುವಳಿಯಲ್ಲಿ ಆರರೊಳಗೊಂದು ಭಾಗವನ್ನು ತೆಗೆದುಕೊಂಡು ಪ್ರಜೆಗಳನ್ನು ರಕ್ಷಿಸಬೇಕು. ಹಾಗೆ ಮಾಡದೆ ಉಪೇಕ್ಷೆಮಾಡುವ ಅರಸನು ಅಪಕೀರ್ತಿಗೊಳಗಾಗಿ ಸರ್ವಪಾಪಗಳಿಗೂ ಗುರಿಯಾಗುವನು. ಅರಸನು ತನ್ನ ಮಕ್ಕಳನ್ನು ಕಾಣುವ ರೀತಿಯಲ್ಲಿ ಸಕಲ ಪ್ರಾಣಿಗಳನ್ನೂ ಸ್ನೇಹಪೂರ್ವಕವಾಗಿ ರಕ್ಷಿಸಬೇಕೆಂಬ ರಾಜನೀತಿಯನ್ನನುಸರಿಸಿದರೆ ಲೋಕದಲ್ಲಿ ಎಂದೆಂದಿಗೂ ಕೇಡಿಲ್ಲದ ಕೀರ್ತಿಯನ್ನು ಪಡೆದು ಬ್ರಹ್ಮಲೋಕವನ್ನೈದುವನು. ಯಾವ ಅರಸನ ರಾಜ್ಯದಲ್ಲಿ ಸನ್ಮಾರ್ಗಿಯಾದ ಋಷೀಶ್ವರನು ಕಂದಮೂಲಫಲಾಹಾರಗಳಿಂದ ಶರೀರವನ್ನು ದಂಡಿಸಿ ಧರ್ಮವನ್ನು ಸಂಪಾದಿಸುವನೋ ಆ ಋಷಿಯ ಧರ್ಮದಲ್ಲಿ ನಾಲ್ಕರಲ್ಲೊಂದು ಪಾಲು ಆ ಧರ್ಮಪರಿಪಾಲಕನಾದ ಅರಸನಿಗೆ ಸೇರುವುದು. ಈ ತಪೋವನದಲ್ಲಿ ವಾನಪ್ರಸ್ಥಾಶ್ರಮಿಗಳಾದ ಬ್ರಾಹ್ಮಣರು ಬಹುಮಂದಿ ಇದ್ದಾರೆ. ಅವರು ದಿಕ್ಕಿಲ್ಲದ ಪ್ರಾಣಿಗಳಂತೆ ರಾಕ್ಷಸರಿಂದ ಭಯಪಡುತ್ತಿದ್ದಾರೆ. ಈ ವನದಲ್ಲಿರುವ ಋಷಿಗಳ ಶರೀರವನ್ನು ನೋಡು. ರಾಕ್ಷಸರು ಬಂದು ಆಯುಧಗಳಿಂದ ಹೊಡೆದು ಗಾಯಮಾಡಿದ್ದಾರೆ. ನಾವು ರಾಕ್ಷಸರ ಉಪದ್ರವವನ್ನು ಸಹಿಸಲಾರೆವು. ಈ ಉಪದ್ರವವು ಇಷ್ಟರಲ್ಲಿಯೇ ನಿಲ್ಲುವುದಿಲ್ಲ. ರಾಕ್ಷಸರು ಇನ್ನು ಮುಂದೆಯೂ ಹೀಗೆ ಉಪದ್ರವವನ್ನು ಮಾಡದೆ ಸುಮ್ಮನಿರರು ; ಆದಕಾರಣ— ಶ್ರೀರಾಮ, ನಾವು ನಿನ್ನ ಮರೆಹೊಕ್ಕೆವು. ರಾಕ್ಷಸರಿಂದ ಬಾಧೆಪಡುವ ನಮ್ಮನ್ನು ರಕ್ಷಿಸು. ನಮಗೆ ನೀನಲ್ಲದೆ ಮತ್ತೊಬ್ಬ ರಕ್ಷಕನಿಲ್ಲ. ನೀನು ಶರಣಾಗತಪರಿಪಾಲಕನಾದ್ದರಿಂದ ನೀನೇ ನಮಗೆ ಗತಿ ” ಎಂದು ಬೇಡಿಕೊಂಡರು

ಶ್ರೀರಾಮನು ಧರ್ಮಯುಕ್ತವಾದ ಮಾತುಗಳಿಂದ ಅವರನ್ನು ಕುರಿತು “ ಋಷಿಗಳಿರಾ, ನಾನು ಈ ವನಕ್ಕೆ ಸ್ವಪ್ರಯೋಜನಕ್ಕಾಗಿ ಬಂದವನಲ್ಲ. ರಾಕ್ಷಸರಿಂದ ಬಾಧೆಪಡುತ್ತಿರುವ ಮಹಾತ್ಮರಾದ ಋಷಿಗಳನ್ನು ರಕ್ಷಿಸಬೇಕೆಂಬ ಬುದ್ಧಿಯಿಂದಲೂ ನನ್ನ ತಂದೆಯಾದ ದಶರಥರಾಜನ ಆಜ್ಞೆಯನ್ನು ಪರಿಪಾಲಿಸಬೇಕೆಂಬ ನಿಶ್ಚಯದಿಂದಲೂ ಬಂದೆನು. ನಾನು ನಿಮ್ಮ ಸಲುವಾಗಿಯೇ ಬಂದೆನಾದ್ದರಿಂದ ನಿಮ್ಮ ಶತ್ರುಗಳಾದ ರಾಕ್ಷಸರನ್ನು ಸಂಹರಿಸುತ್ತೇನೆ. ನಿಮ್ಮ ಉಪದ್ರವವನ್ನು ಪರಿಹರಿಸಿ ಧರ್ಮವನ್ನೂ ಕೀರ್ತಿಯನ್ನೂ ಸುಕೃತವನ್ನೂ ಪಡೆಯುವೆನು. ಲಕ್ಷ್ಮಣಸಮೇತನಾದ ನನ್ನ ಪರಾಕ್ರಮವನ್ನು ನೀವೆಲ್ಲರೂ ನೋಡಿ. ನೀವು ಅಂಜಬೇಡಿ ” ಎಂದು ಅಭಯವನ್ನು ಕೊಟ್ಟು ಆ ಋಷಿಗಳಿಂದ ಸತ್ಕರಿಸಲ್ಪಟ್ಟವನಾಗಿ ಸುತೀಕ್ಷ್ಣಮುನೀಶ್ವರನ ಆಶ್ರಮವನ್ನು ಕುರಿತು ಪ್ರಯಾಣಮಾಡಿದನು.



## ೭ ನೆಯ ಅಧ್ಯಾಯ

## ಸುತೀಕ್ಷ್ಣಮುನಿಯ ಆಶ್ರಮಕ್ಕೆ ಶ್ರೀರಾಮನ ಆಗಮನ

ಆಮೇಲೆ ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಶರಭಂಗಮುನೀಶ್ವರನ ಆಶ್ರಮದಲ್ಲಿದ್ದ ಋಷಿಗಳನ್ನು ಕೂಡಿಕೊಂಡು ಅನೇಕ ನದಿಗಳನ್ನು ದಾಟಿ ಕೆಲವು ದೂರ ನಡೆದು ಅಲ್ಲಿ ಮೇಘಮಂಡಲದಂತೆ ಉನ್ನತವಾದ ಒಂದು ಪರ್ವತವನ್ನು ಕಂಡನು. ಪರ್ವತದ ಸಮೀಪದಲ್ಲಿ ಅನೇಕ ಫಲಪುಷ್ಪಾದಿಗಳಿಂದ ಮನೋಹರವಾದ ಒಂದು ವನವನ್ನು ಪ್ರವೇಶಿಸಿದನು. ಆ ವನಮಧ್ಯದಲ್ಲಿ ನಾರುಬಟ್ಟೆಗಳಿಂದ ಅಲಂಕರಿಸಲ್ಪಟ್ಟಿದ್ದ ಸುತೀಕ್ಷ್ಣ ಮುನೀಶ್ವರನ ಆಶ್ರಮವನ್ನೂ ಆ ಆಶ್ರಮದಲ್ಲಿ ನಿಡಿದಾದ ಜಡೆಗಳನ್ನು ಧರಿಸಿಕೊಂಡಿದ್ದ ಸುತೀಕ್ಷ್ಣ ಮುನೀಶ್ವರನನ್ನೂ ನೋಡಿ ತನ್ನ ಗೋತ್ರನಾಮಗಳನ್ನು ಹೇಳಿ ನಮಸ್ಕಾರಮಾಡಿದನು. ಧರ್ಮಜ್ಞ ನಾದ ಸುತೀಕ್ಷ್ಣಮಹರ್ಷಿಯು, ಅತ್ಯಂತ ಭುಜಬಲಪರಾಕ್ರಮಗಳುಳ್ಳವನಾಗಿ ಸತ್ಯಸಂಧನಾದ ಶ್ರೀರಾಮನನ್ನು ನೋಡಿ ಅಪ್ಪಿಕೊಂಡು "ನಿನಗೆ ಸುಖಾಗಮನವೆ ? ನೀನು ಈ ವನಕ್ಕೆ ಬಂದದ್ದರಿಂದ ಅನಾಥರಾದ ನಾವು ಕೃತಾರ್ಥರಾದೆವು. ಈ ಆಶ್ರಮವೂ ಪವಿತ್ರವಾಯಿತು. ಇದುವರೆಗೂ ನಿನ್ನ ಬರುವಿಕೆಯನ್ನೇ ಎದುರು ನೋಡಿಕೊಂಡಿದ್ದೆನು. ಆದ್ದರಿಂದಲೇ ನಾನು ಈ ಶರೀರವನ್ನು ಬಿಟ್ಟು ಸ್ವರ್ಗಲೋಕವನ್ನೈದಲು ಹಿಂಜರಿದೆನು. ನೀನು ರಾಜ್ಯವನ್ನು ಬಿಟ್ಟು ವನಕ್ಕೆ ತೆರಳಿ ಚಿತ್ರಕೂಟಪರ್ವತಕ್ಕೆ ಬಂದೆ ಎಂಬ ನಿನ್ನ ಕಥಾಪ್ರಸಂಗವನ್ನು ಕೇಳಿದ್ದೇನೆ. ಈ ಆಶ್ರಮಕ್ಕೆ ದೇವೇಂದ್ರನು ಬಂದು ನನ್ನನ್ನು ನೋಡಿ 'ನೀನು ಮಾಡಿದ ತಪಸ್ಸಾಮರ್ಥ್ಯದಿಂದ ಸ್ವರ್ಗಾದಿ ಸಮಸ್ತ ಲೋಕಗಳನ್ನೂ ಗೆದ್ದಿದ್ದೀಯೆ' ಎಂದು ನುಡಿದನು. ಆ ಲೋಕಗಳನ್ನು ನೀನು ಸ್ವೀಕರಿಸು. ಈ ಆಶ್ರಮಕ್ಕೆ ನೀನು ಬಂದದ್ದು ಒಳ್ಳೆಯದಾಯಿತು. ಸೀತಾಲಕ್ಷ್ಮಣಸಮೇತನಾಗಿ ಸಮಸ್ತ ದೇವರ್ಷಿ ಗಳಿಂದ ಸೇವಿಸಲ್ಪಟ್ಟ ಈ ಆಶ್ರಮದಲ್ಲಿ ಸುಖದಿಂದ ಸಂಚರಿಸಿಕೊಂಡಿರು" ಎಂದು ಹೇಳಿದನು.

ಶ್ರೀರಾಮನು ಸುತೀಕ್ಷ್ಣಮುನೀಶ್ವರನನ್ನು ಕುರಿತು "ಮುನಿಗಳೆ, ನನಗೊಂದು ಆಶ್ರಮ ವನ್ನು ತೋರಿಸಿರಿ. ನಾನೇ ಸಮಸ್ತ ಲೋಕಗಳನ್ನೂ ಸಂಪಾದಿಸಿಕೊಳ್ಳಬಲ್ಲೆನು. ನೀವು ಈ ಲೋಕದಲ್ಲಿಯೂ ಸ್ವರ್ಗಲೋಕದಲ್ಲಿಯೂ ಪ್ರಸಿದ್ಧರು. ನಿಮ್ಮ ಮಹಿಮೆಯನ್ನು ಗೌತಮ ಗೋತ್ರೋದ್ಭವರಾದ ಶರಭಂಗಮುನೀಶ್ವರರು ನನಗೆ ಹೇಳಿದರು" ಎಂದು ನುಡಿದನು.

ಸುತೀಕ್ಷ್ಣಮುನಿಯು "ಶ್ರೀರಾಮ, ಈ ಆಶ್ರಮವು ಸರ್ವಸಂಪತ್ತಿಯುಳ್ಳದ್ದು. ಮಹಾತ್ಮ ರಾದ ಅನೇಕ ಋಷಿಗಳಿಂದ ಸೇವಿಸಲ್ಪಟ್ಟು ಸದಾಕಾಲದಲ್ಲಿಯೂ ಕಂದಮೂಲಫಲಗಳಿಂದ ಸಮೃದ್ಧವಾದುದು. ಈ ರೀತಿಯಲ್ಲಿ ಸಕಲ ಸಂಪತ್ತುಳ್ಳದ್ದಾದರೂ ಭಯವೊಂದರಿಂದ ಕೂಡಿದೆ. ಈ ವನದ ಸುತ್ತಲಿರುವ ದುಷ್ಟಮೃಗಗಳು ಶಂಕಾತಂಕವಿಲ್ಲದೆ ನಮ್ಮ ಆಶ್ರಮಗಳಿಗೆ ಬಂದು ತಪಸ್ಸಿಗೆ ಭಂಗವನ್ನುಂಟುಮಾಡುತ್ತವೆ. ಇದೊಂದು ದೋಷವಲ್ಲದೆ ಇಲ್ಲಿ ಮತ್ತೊಂದು ದೋಷವಿಲ್ಲ" ಎಂದು ನುಡಿದನು.

ಆ ಮಾತನ್ನು ಕೇಳಿ ಧೈರ್ಯಗುಣಸಂಪನ್ನನಾದ ಶ್ರೀರಾಮನು "ಮುನೀಶ್ವರರೆ, ಈ ಆಶ್ರಮಕ್ಕೆ ಬರುವ ದುಷ್ಟಪ್ರಾಣಿಗಳೆಲ್ಲವನ್ನೂ ಒಂದೇ ಬಾಣದಿಂದ ಕೊಲ್ಲುತ್ತೇನೆ. ನಿಮಗೆ ಆ ಮೃಗಗಳಿಂದ ಭಯವು ಬೇಡ. ಆದರೆ ಅದರಿಂದ ನಿಮ್ಮ ಮನಸ್ಸಿಗೆ ಖೇದವಾಗುವುದು.

ಆದ್ದರಿಂದ ನಾನು ಇಲ್ಲಿ ವಾಸಮಾಡಲಾರೆ" ಎಂದು ನುಡಿದನು. ಸಾಯಂಕಾಲವಾಗಲು ಸಂಧ್ಯಾವಂದನ ಜಪ ಹೋಮಾದಿಗಳನ್ನು ತೀರಿಸಿಕೊಂಡು ಸೀತಾಲಕ್ಷ್ಮಣಸಮೇತನಾಗಿ ಶ್ರೀರಾಮನು ಸುತೀಕ್ಷ್ಣಮುನೀಶ್ವರನ ಸತ್ಕಾರಗಳನ್ನು ಕೈಗೊಂಡು ಆ ರಾತ್ರಿ ಆ ಮುನೀಶ್ವರನ ಆಶ್ರಮದಲ್ಲಿದ್ದನು.

---

## ೮ನೆಯ ಅಧ್ಯಾಯ

## ಸುತೀಕ್ಷ್ಣಮುನಿಯ ಆಶ್ರಮದಿಂದ ಶ್ರೀರಾಮನ ಪ್ರಯಾಣ

ಈ ಪ್ರಕಾರದಲ್ಲಿ ಶ್ರೀರಾಮನು ಆ ಆಶ್ರಮದಲ್ಲಿ ರಾತ್ರಿಯನ್ನು ಸುಖವಾಗಿ ಕಳೆದು ಮಾರನೆಯ ದಿನ ಪ್ರಾತಃಕಾಲದಲ್ಲೆದ್ದು ಸ್ನಾನಸಂಧ್ಯಾವಂದನಾದಿಗಳನ್ನು ತೀರಿಸಿಕೊಂಡು ಆ ಮುನೀಶ್ವರನ ಸಮೀಪಕ್ಕೆ ಹೋಗಿ ವಂದಿಸಿದನು. ಆಮೇಲೆ ಮುನೀಶ್ವರರೆ, ಲೋಕಪೂಜ್ಯರಾದ ನಿಮ್ಮಿಂದ ಸತ್ಕಾರವನ್ನು ಪಡೆದು ಒಂದು ರಾತ್ರಿಯನ್ನು ಸುಖವಾಗಿ ಕಳೆದೆನು. ನನ್ನ ಸಂಗಡ ಬಂದ ಋಷಿಗಳು ಮುಂದೆ ತೆರಳಬೇಕೆಂದು ನನ್ನನ್ನು ತ್ವರೆಗೊಳಿಸುತ್ತಿದ್ದಾರೆ. ನನಗೂ ದಂಡಕಾರಣ್ಯವನ್ನು ಹೊಕ್ಕು ಅಲ್ಲಿ ವಾಸಮಾಡುತ್ತಿರುವ ಋಷಿಗಳನ್ನು ನೋಡಬೇಕೆಂಬ ಉತ್ಸಾಹ ಬಹಳವಾಗಿದೆ. ಆದ್ದರಿಂದ ಮುಂದೆ ತೆರಳಿಹೋಗುವುದಕ್ಕೆ ನಮಗೆ ಅಪ್ಪಣೆಯನ್ನು ಕೊಡಬೇಕು. ಉರಿಯಿಲ್ಲದ ಯಜ್ಞಪುರುಷನ ರೀತಿಯಲ್ಲಿ ತೇಜಸ್ವಿಗಳಾಗಿ ಸ್ವಧರ್ಮನಿಷ್ಠರಾದ ಈ ಋಷಿಗಳನ್ನು ಕೂಡಿಕೊಂಡು ತೆರಳುತ್ತೇನೆ. ದುರ್ನೀತಿಯಿಂದ ಸಂಪಾದಿಸಿದ ಐಶ್ವರ್ಯವನ್ನು ಹೊಂದಿ ಸತ್ಕುಲಪ್ರಸೂತನಲ್ಲದವನು ದಿನೇ ದಿನೇ ಮದೋನ್ಮತ್ತನಾಗುವಂತೆ, ಸೂರ್ಯನು ತೀಕ್ಷ್ಣವಾದ ಬಿಸಿಲನ್ನು ಹರಡಿ ಸಂತಾಪವನ್ನು ಹೆಚ್ಚುಮಾಡುವುದಕ್ಕಿಂತ ಮೊದಲೇ ನಾವು ಹೊರಡಬೇಕು" ಎಂದು ನುಡಿದು ಸೀತಾಲಕ್ಷ್ಮಣಸಮೇತನಾಗಿ ಆ ಮುನೀಶ್ವರನ ಪಾದಗಳಿಗೆರಗಿದನು.

ಸುತೀಕ್ಷ್ಣಮುನೀಶ್ವರನು ರಾಮಲಕ್ಷ್ಮಣರನ್ನು ಕೈಹಿಡಿದೆಬ್ಬಿಸಿ ಕುಳ್ಳಿರಿಸಿಕೊಂಡು ಹರ್ಷದಿಂದ ಆಲಿಂಗಿಸಿಕೊಂಡು ಹೀಗೆ ನುಡಿದನು: "ಪ್ರಿಯಬಂಧು, ಶ್ರೀರಾಮ, ನಿನ್ನ ಶರೀರದ ನೆಳಲಂತೆ ನಿನಗೆ ಅನುಕೂಲಳಾದ ಸೀತಾದೇವಿಯನ್ನೂ ನಿನ್ನ ಭ್ರಾತೃವಾದ ಲಕ್ಷ್ಮಣನನ್ನೂ ಕೂಡಿಕೊಂಡು ಸುಖವಾಗಿ ಹೋಗಿ ಬಾ. ನೀನು ಹೋಗುವ ಮಾರ್ಗವೆಲ್ಲವೂ ಸುಖಕರವಾಗಲಿ. ದಾರಿಯಲ್ಲಿ ದಂಡಕಾರಣ್ಯವಾಸಿಗಳಾಗಿ ಬ್ರಹ್ಮಜ್ಞಾನಸಂಪನ್ನರಾದ ಋಷಿಗಳ ಆಶ್ರಮಗಳು ಕಾಣಿಸುವುವು. ಆ ಆಶ್ರಮಗಳಲ್ಲಿ ಮನೋಹರವಾದ ಫಲಪುಷ್ಪಾದಿಗಳಿಂದ ನಿಬಿಡವಾದ ವನಗಳಿರುವುವು. ಅನೇಕ ಮೃಗಸಮೂಹಗಳೂ ಪಕ್ಷಿಸಮೂಹಗಳೂ ಮನೋಹರವಾಗಿ ಪುಷ್ಪಿತವಾದ ತಾವರೆಗಳಿಂದ ತುಂಬಿದ ನಿರ್ಮಲೋದಕಗಳುಳ್ಳ ಕೊಳಗಳೂ ಕೊಳರ್ವಕ್ಕಿಗಳಿಂದ ಮನೋಹರವಾದ ಕೆರೆಗಳೂ ಕಂಗೊಳಿಪ ನದಿಗಳೂ ರಮಣೀಯವಾದ ವನಗಳಲ್ಲಿ ಕಿವಿಗಿಂಪಾಗಿ ಸ್ವರಗೈಯುವ ನವಿಲು ಹಂಸ ಪಾರಾವತ ಗಿಣಿ ಕೋಗಿಲೆಗಳೂ ಇರುವುವು. ನೀನು ಸೀತಾಲಕ್ಷ್ಮಣಸಮೇತನಾಗಿ ಹೋಗಿ ಅಲ್ಲಲ್ಲಿರುವ ಋಷಿಗಳನ್ನು ನೋಡಿ ಶೀಘ್ರದಲ್ಲಿ ತಿರುಗಿ ಬಂದು ನಮಗೆ ದರ್ಶನವನ್ನು ಕೊಡು" ಎಂದು ಹೇಳಿದನು.

ಶ್ರೀರಾಮನು ಮಹಾಪ್ರಸಾದವೆಂದು ಸುತೀಕ್ಷ್ಣಮುನಿಯ ವಾಕ್ಯವನ್ನಂಗೀಕರಿಸಿ ಸೀತಾಲಕ್ಷ್ಮಣಸಮೇತನಾಗಿ ಆ ಮುನೀಶ್ವರನಿಗೆ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡಿ ಹೊರಡಲನುವಾದನು.

ಆಗ ಸೀತಾದೇವಿಯು ಬಿಲ್ಲುಬಾಣಖಡ್ಗಗಳನ್ನು ಎತ್ತಿಕೊಡಲು ಅವುಗಳನ್ನು ತೆಗೆದುಕೊಂಡು ಶ್ರೀರಾಮನು ಸುತೀಕ್ಷ್ಣಮುನಿಯ ಆಶ್ರಮದಿಂದ ಮುಂದೆ ತೆರಳಿದನು.



## ೯ ನೆಯ ಅಧ್ಯಾಯ

## ಸೀತಾದೇವಿಯು ಶ್ರೀರಾಮನಿಗೆ ಅಹಿಂಸಾಧರ್ಮವನ್ನು ಹೇಳಿದ್ದು

ಆಮೇಲೆ ಸೀತಾದೇವಿಯು ಸುತೀಕ್ಷ್ಣಮುನಿಯಿಂದ ಬೀಳ್ಕೊಂಡು ಪ್ರಯಾಣ ಹೊರಟ ಶ್ರೀರಾಮನನ್ನು ಕುರಿತು ಅತ್ಯಂತ ಗಂಭೀರವಾದ ವಿನಯೋಕ್ತಿಯಿಂದ ಈ ರೀತಿಯಲ್ಲಿ ನುಡಿದಳು : "ಪ್ರಾಣಕಾಂತ, ಧರ್ಮವು ಕಾಮದಿಂದುಂಟಾಗುವ ಮೂರು ವ್ಯಸನಗಳನ್ನು ಬಿಟ್ಟವರಿಗಲ್ಲದೆ ಉಳಿದವರಿಗೆ ಸಂಭವಿಸದು. ಅನೃತ, ಪರಸ್ತ್ರೀಗಮನ, ಹಿಂಸೆ—ಈ ಮೂರು ಗುಣಗಳೂ ಕಾಮದಿಂದ ಹುಟ್ಟುವ ಮೂರು ವ್ಯಸನಗಳು. ಇವುಗಳಲ್ಲಿ ಅನೃತವೆಂಬ ವ್ಯಸನವು ನಿನ್ನಲ್ಲಿಲ್ಲ ; ಮುಂದೆಯೂ ಹುಟ್ಟದು. ನೀನು ಸ್ವದಾರಸಂತುಷ್ಟನಾದ್ದರಿಂದ ಪರಸ್ತ್ರೀಗಮನವನ್ನು ಮನಸ್ಸಿನಲ್ಲಿಯೂ ನೆನೆಯುವವನಲ್ಲ. ನೀನು ನಿನ್ನ ತಂದೆಯಾದ ದಶರಥರಾಯನ ಪ್ರತಿಜ್ಞೆಯನ್ನು ಪರಿಪಾಲಿಸುವವನು. ಸತ್ಯವೂ ಧರ್ಮವೂ ನಿನ್ನಲ್ಲಿ ನೆಲೆಗೊಂಡಿರುವುವು. ಇವು ಜಿತೇಂದ್ರಿಯರಾದ ಪುರುಷರಲ್ಲಲ್ಲದೆ ಉಳಿದವರಲ್ಲಿರಲಾರವು. ನೀನು ಜಿತೇಂದ್ರಿಯನೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಆದ್ದರಿಂದ ನಿನಗೆ ಕಾಮದಿಂದ ಹುಟ್ಟುವ ಅನೃತವಚನ ಪರದಾರಗಮನಗಳೆಂಬ ಎರಡು ವ್ಯಸನಗಳೂ ಸ್ವಪ್ನದಲ್ಲಿಯೂ ಬರಲಾರವು. ಆದರೆ ಮೂರನೆಯ ವ್ಯಸನವೆನಿಸಿದ ಹಿಂಸಾತ್ಮಕವಾದ ಬುದ್ಧಿಯು ಇರಬಹುದು. ಏತಕ್ಕೆಂದರೆ : ನೀನು ದಂಡಕಾರಣ್ಯಕ್ಕೆ ಬಂದು ಋಷಿಗಳಿಗೆ ಬಾಧೆಯನ್ನು ಮಾಡುವ ರಾಕ್ಷಸರನ್ನು ಯುದ್ಧರಂಗದಲ್ಲಿ ಕೊಂದು ಆ ಋಷಿಗಳಿಗೆ ಬಾಧೆಯಿಲ್ಲದಂತೆ ಮಾಡುವುದಾಗಿ ಪ್ರತಿಜ್ಞೆಮಾಡಿ ಬಿಲ್ಲುಬಾಣಗಳನ್ನು ತೆಗೆದುಕೊಂಡು ಸಂಚರಿಸುತ್ತಿರುವೆ. ಆದ್ದರಿಂದ ವನದಲ್ಲಿ ಸಂಚರಿಸುತ್ತಿರುವ ರಾಕ್ಷಸರಲ್ಲಿ ಒಬ್ಬನಾದರೂ ನಿನ್ನ ಬಾಣಕ್ಕೆ ಗುರಿಯಾಗದಿರನು. ಕ್ಷತ್ರಿಯರ ಸಮೀಪದಲ್ಲಿರುವ ಬಿಲ್ಲು ಶತ್ರುಗಳನ್ನು ಸಂಹರಿಸುವ ಹಾಗೆ ಪುರುಷನಿಗೆ ಪ್ರೋತ್ಸಾಹವನ್ನುಂಟುಮಾಡದೆ ಬಿಡದು. ಯಜ್ಞಪುರುಷನ ಸಮೀಪದಲ್ಲಿರುವ ಕಟ್ಟಿಗೆಗಳು ಯಜ್ಞಪುರುಷನಿಗೆ ಜ್ವಾಲೆಯನ್ನುಂಟುಮಾಡದೆ ಇರವು. ಈ ವಿಷಯದಲ್ಲಿ ಒಂದು ಪೂರ್ವವೃತ್ತಾಂತ ಉಂಟು : ಒಂದು ತಪೋವನದಲ್ಲಿ ಸತ್ಯಸಂಧನಾಗಿ ಜಿತೇಂದ್ರಿಯನಾಗಿ ಶುಚಿಯಾದ ಒಬ್ಬ ಮುನೀಶ್ವರನು ಮಹೋಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ದೇವೇಂದ್ರನು ಆತನ ತಪಸ್ಸಿಗೆ ವಿಘ್ನಮಾಡಬೇಕೆಂದು ಖಡ್ಗಪಾಣಿಯಾಗಿ ಭಟರೂಪದಿಂದ ಆ ಮುನೀಶ್ವರನ ಆಶ್ರಮಕ್ಕೆ ಬಂದನು. ತಪಸ್ಸುಮಾಡುತ್ತಿದ್ದ ಆ ಋಷೀಶ್ವರನಿಗೆ ಸಾಷ್ಟಾಂಗವಾಗಿ ವಂದಿಸಿ 'ಮುನೀಶ್ವರನೆ, ನಾನು ಒಂದು ಕಾರ್ಯವನ್ನು ಕುರಿತು ದೇಶಾಂತರಕ್ಕೆ ಹೋಗುತ್ತಲಿದ್ದೇನೆ. ಇದು ಉತ್ತಮವಾದ ಖಡ್ಗ. ಈ ಖಡ್ಗವನ್ನು ಅತ್ಯಂತ ಜತನವಾಗಿಟ್ಟುಕೊಂಡಿರು' ಎಂದು ಒಂದು ಖಡ್ಗವನ್ನು ಕೊಟ್ಟು ಸ್ವರ್ಗಲೋಕಕ್ಕೆ ಹೋದನು. ಆಮೇಲೆ ಆ ಮುನೀಶ್ವರನು ತನ್ನ ಕುರುಹನ್ನರಿಯದ ಭಟನು ತನ್ನನ್ನು ನಂಬಿ ಆ ಆಯುಧವನ್ನು ಕೊಟ್ಟು ಹೋದದ್ದರಿಂದ ಆ ಆಯುಧವನ್ನು ಅತ್ಯಂತ ಜತನವಾಗಿಟ್ಟುಕೊಂಡಿರಬೇಕೆಂದೆಣಿಸಿ ಯಾವಾಗಲೂ ಅದನ್ನು ತನ್ನ ಸಮೀಪದಲ್ಲಿಯೇ ಇಟ್ಟುಕೊಂಡು ಕಂದಮೂಲಫಲಾದಿಗಳನ್ನು ತರಲು ವನಕ್ಕೆ ಹೋಗುವಾಗಲೂ ಅದನ್ನು ತೆಗೆದುಕೊಂಡು ಹೋಗುತ್ತಿದ್ದನು. ಈ ರೀತಿಯಲ್ಲಿ ನಿತ್ಯವೂ

ಖಡ್ಗಪಾಣಿಯಾಗಿರಲು ಒಂದೊಂದು ಸಮಯದಲ್ಲಿ ಕೋಪಹುಟ್ಟಿ ತಪಸ್ಸನ್ನು ಬಿಟ್ಟು ಕ್ರೂರಬುದ್ಧಿಯಿಂದಿರುತ್ತಿದ್ದನು. ಹಾಗೆ ಶಸ್ತ್ರಪಾಣಿಯಾದ್ದರಿಂದ ಕ್ರೂರಕರ್ಮಗಳನ್ನು ಮಾಡುತ್ತ ದಿನದಿನಕ್ಕೂ ಧರ್ಮವು ಕ್ಷಯವಾಗಿ ಕಡೆಯಲ್ಲಿ ಆತನು ನರಕವನ್ನೈದಿದನು. ಅಗ್ನಿಸಂಯೋಗದಂತೆ ಶಸ್ತ್ರಸಂಯೋಗವು ಕೋಪವನ್ನು ಹುಟ್ಟಿಸದೆ ಸುಮ್ಮನಿರದು. ಈ ವಿಷಯವನ್ನು ನಾನು ನಿನಗೆ ಸ್ನೇಹಾತಿಶಯದಿಂದಲೂ ನಿನ್ನ ಮೇಲಿನ ಸಂಮಾನದಿಂದಲೂ ಅರಿಕೆಮಾಡಿದೆನಲ್ಲದೆ ಬುದ್ಧಿ ಹೇಳುವುದಕ್ಕಲ್ಲ. ಆದ್ದರಿಂದ ರಾಕ್ಷಸರನ್ನು ಕೊಲ್ಲಬೇಕೆಂದೆಣಿಸಬೇಡ. ಅಪರಾಧವಿಲ್ಲದೆ ಒಬ್ಬರನ್ನು ಕೊಲ್ಲುವ ಪ್ರಾಣಿಗಳಿಗೆ ಪುಣ್ಯಲೋಕಗಳಿಲ್ಲವೆಂಬ ಧರ್ಮಶಾಸ್ತ್ರವುಂಟು. ವನವಾಸವೆಂದರೇನು— ಆಯುಧವೆಂದರೇನು! ಪರಾಕ್ರಮವೆಂದರೇನು—ತಪಸ್ಸೆಂದರೇನು! ನಾವು ದೇಶಕಾಲಗಳನ್ನು ವಿಚಾರಿಸಿ ನಡೆಯಬೇಕು. ಲೋಕದಲ್ಲಿ ಆಯುಧಪಾಣಿಯಾದವನಿಗೆ ಕ್ರೂರಬುದ್ಧಿಯು ಹುಟ್ಟುವುದೆಂಬುದು ಸತ್ಯ. ನಾವು ಈ ವನವಾಸಮಿತಿಯನ್ನು ತೀರಿಸಿಕೊಂಡು ತಿರುಗಿ ಅಯೋಧ್ಯಾಪಟ್ಟಣಕ್ಕೆ ಹೋದ ಮೇಲೆ ಮಲಿತ ಶತ್ರುಗಳಮೇಲೆ ಕ್ಷತ್ರಿಯಧರ್ಮವನ್ನು ತೋರಿಸು. ನಾವು ಮುನಿವೇಷದಲ್ಲಿ ವನದಲ್ಲಿರುವಾಗ ಮುನಿಧರ್ಮವನ್ನೇ ಅನುಸರಿಸಿಕೊಂಡಿರಬೇಕು. ಧರ್ಮದಿಂದಲೇ ಅರ್ಥವು ಸಂಭವಿಸುವುದು. ಧರ್ಮದಿಂದಲೇ ಸುಖವುಂಟಾಗುವುದು. ಸಮಸ್ತಪ್ರಯೋಜನಗಳೂ ಧರ್ಮದಿಂದಲೇ ಸಾಧ್ಯವಾಗುವುವು. ಈ ಜಗತ್ತೆಲ್ಲವೂ ಧರ್ಮಾಧಾರವಾಗಿಯೇ ಇರುವುದು. ಮನುಷ್ಯನು ವ್ರತೋಪವಾಸನಿಯಮಗಳಿಂದಲೂ ಮನೋನಿಗ್ರಹದಿಂದಲೂ ಧರ್ಮವನ್ನು ಸಂಪಾದಿಸಿದರೆ ಆ ಧರ್ಮದಿಂದ ಸುಖವುಂಟಾಗುವುದಲ್ಲದೆ ವಿಷಯಭೋಗದಿಂದ ಸುಖವುಂಟಾಗ ಲಾರದು. ಶ್ರೀರಾಮ, ಲೋಕತ್ರಯದಲ್ಲೂ ನೀನರಿಯದ ವೃತ್ತಾಂತವಿಲ್ಲ. ನಾನು ಸ್ತ್ರೀಚಾಪಲ್ಯದಿಂದ ನಿನಗೆ ಬಿನ್ನಹಮಾಡಿದೆನಲ್ಲದೆ ನಿನಗೆ ಧರ್ಮರಹಸ್ಯವನ್ನು ತಿಳುಹಿಸುವುದಕ್ಕೆ ಸಮರ್ಥಳಲ್ಲ! ನಿನ್ನ ತಮ್ಮನಾದ ಲಕ್ಷ್ಮಣನೊಡನೆ ಯೋಚನೆಮಾಡಿ ನಿನ್ನ ಚಿತ್ತಕ್ಕೆ ಸರಿಬಂದಂತೆ ಕಾರ್ಯದಲ್ಲಿ ಪ್ರವರ್ತಿಸು" ಎಂದು ಬಿನ್ನಹಮಾಡಿದಳು.

---

## ೧೦ನೆಯ ಅಧ್ಯಾಯ

## ಶ್ರೀರಾಮನು ಸೀತಾದೇವಿಗೆ ತನ್ನ ಧರ್ಮವನ್ನು ತಿಳಿಸಿದ್ದು

ಆಮೇಲೆ ಸಕಲ ರಹಸ್ಯಗಳನ್ನೂ ಬಲ್ಲವನಾದ ಶ್ರೀರಾಮನು ಧರ್ಮಪ್ರತಿಪಾದಕವಾದ ಸೀತಾದೇವಿಯ ಮಾತನ್ನು ಕೇಳಿ ಆಕೆಯನ್ನು ಕುರಿತು ಹೀಗೆ ಹೇಳಿದನು: "ಜಾನಕಿ, ನೀನು ನನಗೆ ಹಿತವಾಗಿ ಹೇಳಿದೆಯಲ್ಲದೆ ಮತ್ತೊಂದಲ್ಲ. ನೀನು ಉತ್ತಮವಂಶದಲ್ಲಿ ಹುಟ್ಟಿದವಳು. ಹೀಗೆ ನಿನ್ನಂತೆ ಯುಕ್ತವಾದ ಮಾತನ್ನು ಹೇಳುವವರಾರು? ಹಾಗಾದರೂ ನನ್ನ ಮಾತನ್ನು ಕೇಳು: ಲೋಕದಲ್ಲಿ ಕ್ಷತ್ರಿಯರು ತಾವಾಳುವ ರಾಜ್ಯದಲ್ಲಿ 'ಆರ್ತಧ್ವನಿಯು ಕೇಳಿಸಬಾರದೆಂದು ಬಿಲ್ಲುಬಾಣಗಳನ್ನು ಧರಿಸಿರುವರು. ದಂಡಕಾರಣ್ಯದಲ್ಲಿ ವ್ರತಸ್ಥರಾದ ಮುನಿಗಳು ರಾಕ್ಷಸರಿಂದ ಕಂಗೆಟ್ಟು ಮೊರೆಯಿಡುತ್ತ ನನ್ನ ಮರೆಹೊಕ್ಕರು. ಆ ಋಷಿಗಳೆಲ್ಲರೂ ಕಂದಮೂಲಫಲಾಹಾರಗಳನ್ನು ಮಾಡುತ್ತ ವ್ರತನಿಯಮೋಪವಾಸಗಳಿಂದ ಕಾಯಕ್ಲೇಶಪಡುತ್ತ ತಪಸ್ಸುಮಾಡುವಂಥವರು. ಅಂಥವರು ಕ್ರೂರಕರ್ಮಿಗಳಾದ ರಾಕ್ಷಸರಿಂದ ನೊಂದು, ಒಂದು ದಿನವಾದರೂ ಸುಖವನ್ನು ಕಾಣದೆ ನನ್ನ ಸಮೀಪಕ್ಕೆ ಬಂದು ಮೊರೆಯಿಟ್ಟದ್ದರಿಂದ ನಾನು ನನ್ನಿಂದ ಅವರಿಗೆ ಆಗಬೇಕಾದ ಸೇವೆ

ಯಾವುದೆಂದು ಕೇಳಿದೆನು. ಆ ಋಷಿಗಳು ನನ್ನನ್ನು ಕುರಿತು 'ಈ ದಂಡಕಾರಣ್ಯದಲ್ಲಿ ತಪಸ್ಸು ಮಾಡಿಕೊಂಡಿದ್ದೇವೆ. ನಾವು ಅಗ್ನಿಹೋತ್ರಾದಿ ಕ್ರಿಯೆಗಳನ್ನು ಮಾಡುವ ಸಮಯದಲ್ಲಿ ರಾಕ್ಷಸರು ನಮ್ಮನ್ನು ಬೆದರಿಸಿ ನಮ್ಮ ಸತ್ಕರ್ಮಗಳಿಗೆ ವಿಘ್ನಮಾಡುತ್ತಾರೆ. ಇದುವರೆಗ ನಮಗಾರೂ ಗತಿಯೂ ರಕ್ಷಕರೂ ಇಲ್ಲದ ಚಿಂತೆಪಡುತ್ತಿದ್ದೆವು. ನಾವು ಮಾಡಿದ ಪುಣ್ಯಫಲದಿಂದ ಈಗ ನೀನು ಈ ವನಕ್ಕೆ ಬಂದೆ. ತಪಸ್ವಿಗಳಾದ ನಾವು ರಾಕ್ಷಸರಿಗೆ ತಕ್ಕ ಆಜ್ಞೆಯನ್ನು ಮಾಡುವುದಕ್ಕೆ ಸಮರ್ಥರಾದರೂ ನಾವು ಬಹುಕಾಲ ಕಾಯಕ್ಲೇಶದಿಂದ ಉಗ್ರವಾದ ತಪಸ್ಸನ್ನು ಮಾಡಿ ಈಗ ರಾಕ್ಷಸರನ್ನು ಶಪಿಸಿ ಕೊಂದೆವಾದರೆ ನಮ್ಮ ತಪಸ್ಸು ಕ್ಷಯವಾಗಿ ನಮ್ಮ ಪ್ರಯಾಸವು ವ್ಯರ್ಥವಾಗುವುದು. ಆದಕಾರಣ ನಾವು ಆ ರಾಕ್ಷಸರಿಗೆ ಶಾಪವನ್ನು ಕೊಡಲಿಚ್ಛಿಸೆವು. ನಮ್ಮನ್ನು ಬಾಧಿಸುವ ರಾಕ್ಷಸರನ್ನು ಸಂಹರಿಸಿ ನಮ್ಮನ್ನು ರಕ್ಷಿಸುವುದಕ್ಕೆ ನೀನೇ ಸಮರ್ಥನಲ್ಲದೆ ಮತ್ತೊಬ್ಬರಲ್ಲ' ಎಂದು ಮೊರೆಯಿಟ್ಟರು. ನಾನು ಅವರ ಮಾತನ್ನು ಕೇಳಿ ಅವರನ್ನು ಬಾಧಿಸುವ ರಾಕ್ಷಸರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿ ಆ ಋಷಿಗಳಿಗೆ 'ಅಂಜಬೇಡಿ' ಎಂದು ಅಭಯವನ್ನು ಕೊಟ್ಟೆನು. ವೈದೇಹಿ, ನಿನ್ನನ್ನಾದರೂ ಲಕ್ಷ್ಮಣನನ್ನಾದರೂ ನಿಮ್ಮಿಬ್ಬರನ್ನಾದರೂ ಒಂದು ವೇಳೆ ಬಿಟ್ಟೇನು. ಆ ಋಷಿಗಳಿಗೆ ಕೊಟ್ಟ ಪ್ರತಿಜ್ಞೆಯನ್ನು ಮಾತ್ರ ಸಜೀವನಾಗಿದ್ದುಕೊಂಡು ಬಿಡಲಾರೆನು. ಲೋಕದಲ್ಲಿ ಸಾಧಾರಣ ಮನುಷ್ಯರಿಗೆ ಭಾಷೆಯನ್ನು ಕೊಟ್ಟರೂ ತಪ್ಪಬಾರದು. ಹಾಗಿರುವಾಗ ಬ್ರಾಹ್ಮಣರಿಗೂ ಋಷಿಗಳಿಗೂ ಕೊಟ್ಟಮಾತಿಗೆ ತಪ್ಪುವರೆ ? ನಾನು ಅವರ ಬಾಧೆಯನ್ನು ಪರಿಹರಿಸಿ ಅವರನ್ನು ರಕ್ಷಿಸಬೇಕಲ್ಲದೆ ನನ್ನ ಪ್ರತಿಜ್ಞೆಯಲ್ಲಿ ಒಂದು ಅಣುಮಾತ್ರವನ್ನಾದರೂ ಮೀರಬಾರದು. ಸೀತೆ, ನೀನು ನನ್ನ ಮೇಲಿನ ಸ್ನೇಹದಿಂದ ಹಾಗೆ ಹೇಳಿದೆಯಲ್ಲದೆ ನನಗೆ ಅಹಿತವಾಗಿ ಹೇಳಿದವಳಲ್ಲ. ಆದ್ದರಿಂದ ನೀನು ಆಡಿದ ಮಾತು ನನಗೆ ಸಂತೋಷವನ್ನುಂಟುಮಾಡಿತು. ನೀನು ನನ್ನ ಮನಸ್ಸಿಗೆ ಅನುಕೂಲವಾದ ಚಾರಿತ್ರವುಳ್ಳವಳು. ಒಳ್ಳೆಯ ಸತ್ಕುಲಪ್ರಸೂತೆ. ಧರ್ಮರಹಸ್ಯವನ್ನು ಬಲ್ಲವಳು. ನನ್ನ ಪ್ರಾಣಗಳಿಗಿಂತಲೂ ಅಧಿಕವಾದವಳು" ಎಂದು ನುಡಿದು ಸಂತವಿಟ್ಟು ಬಿಲ್ಲುಬಾಣಗಳನ್ನು ಧರಿಸಿಕೊಂಡು ಸೀತಾಲಕ್ಷ್ಮಣಸಮೇತನಾಗಿ ರಮಣೀಯವಾದ ಆ ಅರಣ್ಯದಲ್ಲಿ ಸಂಚರಿಸುತ್ತಿದ್ದನು.



## ೧೧ನೆಯ ಅಧ್ಯಾಯ

## ಶ್ರೀರಾಮನು ಅಗಸ್ತ್ಯಮುನಿಯ ಆಶ್ರಮಕ್ಕೆ ಹೋದದ್ದು

ಈ ರೀತಿಯಲ್ಲಿ ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ಮುಂದುಗಡೆಯಲ್ಲಿ ನಡೆಯುತ್ತ ತನ್ನ ಹಿಂದೆ ಸೀತಾದೇವಿಯೂ ಆಕೆಯ ಹಿಂದುಗಡೆಯಲ್ಲಿ ಲಕ್ಷ್ಮಣನೂ ಬರುತ್ತಿರಲು ಮಾರ್ಗದಲ್ಲಿರುವ ನಾನಾವಿಧವಾದ ಪರ್ವತಗಳನ್ನೂ ನದಿಗಳನ್ನೂ ವನಗಳನ್ನೂ ಕೊಳಗಳನ್ನೂ ರಮ್ಯವಾದ ಮಳಲೊಟ್ಟುಗಳನ್ನೂ ಅಲ್ಲಲ್ಲಿದ್ದ ಸಾರಸ ಜೊನ್ನವಕ್ಕಿ ನವಿಲು ಹಂಸ ಪಾರಾವತ ಅರಗಿಣಿ ಚಕ್ರವಾಕ ಮೊದಲಾದ ಪಕ್ಷಿಗಳನ್ನೂ ಕಾಡುಕೋಣ ಕಾಡುಹಂದಿ ಕಾಡಾನೆ ಮೊದಲಾದ ಮೃಗಜಾತಿಗಳನ್ನೂ ನೋಡುತ್ತ ಬಹುದೂರ ನಡೆದು ಸಾಯಂಕಾಲದ ಹೊತ್ತಿಗೆ ಒಂದು ಗಾವುದ ಉದ್ದವಿರುವ ಮನೋಹರವಾದ ಒಂದು ಕೆರೆಯನ್ನು ಕಂಡನು. ಅನೇಕ ತಾವರೆಗಳಿಂದಲೂ ನೀರಾನೆ ಸಾರಸಪಕ್ಷಿ ಕೊಳರ್ವಕ್ಕಿ ನೀರುಕೋಳಿ ಮೊದಲಾದ ಜಲಚರಪ್ರಾಣಿಗಳಿಂದಲೂ ಮನೋಹರವಾಗಿ ನಿರ್ಮಲವಾದ ಉದಕವುಳ್ಳ ಆ ಕೆರೆಯಲ್ಲಿ ರಮಣೀಯವಾದ ಗೀತಧ್ವನಿಯೂ ತಾಳ ಮದ್ದಳ ವೀಣಾಧ್ವನಿಗಳೂ

ಕೇಳಲ್ಪಡುತ್ತಿದ್ದುವು. ಅದನ್ನು ಕೇಳಿ ರಾಮಲಕ್ಷ್ಮಣರು ಅತ್ಯಂತ ಆಶ್ಚರ್ಯಪಟ್ಟು ಸಮೀಪದ ಆಶ್ರಮದಲ್ಲಿದ್ದ ಧರ್ಮಭೃತನೆಂಬ ಒಬ್ಬ ಮುನಿಯನ್ನು ಕುರಿತು "ಮುನಿಗಳೆ, ಈ ಕೆರೆಯ ಮಧ್ಯದಲ್ಲಿ ತಾಳಾದಿವಾದ್ಯಧ್ವನಿಗಳು ಕೇಳಿಸುತ್ತಿವೆ. ಇದಕ್ಕೆ ಕಾರಣವೇನು ? ನಿರ್ಮಾನುಷವಾದ ಈ ಸ್ಥಳದಲ್ಲಿ ಹುಟ್ಟುವ ಈ ಧ್ವನಿಯನ್ನು ಕೇಳಿ ನಮಗೆ ಮಹತ್ತಾದ ಆಶ್ಚರ್ಯವುಂಟಾಗಿದೆ. ಇದರ ವೃತ್ತಾಂತವನ್ನು ಹೇಳಬೇಕು" ಎಂದು ಕೇಳಿದರು.

ಆ ಮುನೀಶ್ವರನು "ಶ್ರೀರಾಮ, ಈ ತಟಾಕವು ಪಂಚಾಪ್ಸರವೆಂದು ಖ್ಯಾತಿಗೊಂಡಿದೆ. ಇದು ಯಾವಾಗಲೂ ಬತ್ತುವುದಿಲ್ಲ. ಪೂರ್ವದಲ್ಲಿ ಮಾಂಡಕರ್ಣಿ ಎಂಬ ಮುನಿಯು ಇದನ್ನು ನಿರ್ಮಿಸಿದನು. ಆ ಮುನೀಶ್ವರನು ಹತ್ತುಸಾವಿರ ವರುಷ ವಾಯ್ವಾಹಾರ ಮಾಡಿಕೊಂಡು ಈ ತಟಾಕದ ತೀರದಲ್ಲಿ ತಪಸ್ಸುಮಾಡುತ್ತಿದ್ದನು. ಅದನ್ನು ನೋಡಿ ಇಂದ್ರಾದಿ ದೇವತೆಗಳು ಆತನು ದಿಕ್ಪಾಲಕರಲ್ಲಿ ಒಬ್ಬರ ಲೋಕವನ್ನು ಬಯಸಿ ಉಗ್ರತಪಸ್ಸನ್ನು ಮಾಡುತ್ತಾನೆಂದೆಣಿಸಿ ಆತನ ತಪಸ್ಸಿಗೆ ವಿಘ್ನವನ್ನು ಮಾಡಬೇಕೆಂದು ಮಿಂಚಿನ ಹೊಳೆಯಂತೆ ಶರೀರಕಾಂತಿಯುಳ್ಳ ಐದುಮಂದಿ ಮುಖ್ಯರಾದ ಅಪ್ಸರಃಸ್ತ್ರೀಯರನ್ನು ಕಳುಹಿಸಿದರು. ಆ ಸ್ತ್ರೀಯರು ಮಾಂಡಕರ್ಣಿಮುನೀಶ್ವರನ ಸಮೀಪಕ್ಕೆ ಬರಲು, ಆತನು ಅವರ ರೂಪಲಾವಣ್ಯಗಳನ್ನು ಕಂಡು ಮನಸೋತನು. ಈ ತಟಾಕದಲ್ಲಿ ಅವರೈದುಮಂದಿಗೂ ಐದು ಶಯ್ಯಾಗೃಹಗಳನ್ನು ಆ ಮುನಿಯು ರಹಸ್ಯವಾಗಿ ನಿರ್ಮಿಸಿದನು. ಆ ಮನೆಗಳಲ್ಲಿ ಅವರನ್ನು ಗೋಪ್ಯವಾಗಿಟ್ಟು ತನಗೆ ಯೌವನವನ್ನು ತಪಸ್ಸಾಮರ್ಥ್ಯದಿಂದ ಉಂಟುಮಾಡಿಕೊಂಡು ಯಥೇಷ್ಟವಾಗಿ ಕ್ರೀಡಿಸಿಕೊಂಡಿದ್ದಾನೆ. ಆದ್ದರಿಂದ ಇಲ್ಲಿ ಸ್ತ್ರೀಯರ ಗಾನಧ್ವನಿಯೂ ಅದಕ್ಕನುಸಾರವಾದ ತಾಳ ಮರ್ದಳ ಧ್ವನಿಗಳೂ ಕೇಳಿಸುತ್ತಿವೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ಶ್ರೀರಾಮನು ಅತ್ಯಂತ ಆಶ್ಚರ್ಯಪಟ್ಟನು. ಅವನು ಸೀತಾಲಕ್ಷ್ಮಣ ಸಮೇತನಾಗಿ ಆ ಆಶ್ರಮದಲ್ಲಿದ್ದ ಋಷಿಗಳು ಮಾಡಿದ ಸತ್ಕಾರವನ್ನು ಕೈಕೊಂಡು ಒಂದು ಆಶ್ರಮ ದಲ್ಲಿ ಹತ್ತು ತಿಂಗಳೂ ಮತ್ತೊಂದಾಶ್ರಮದಲ್ಲಿ ಒಂದು ವರ್ಷವೂ ಮತ್ತೊಂದಾಶ್ರಮದಲ್ಲಿ ನಾಲ್ಕು ತಿಂಗಳೂ ಒಂದಾಶ್ರಮದಲ್ಲಿ ಆರು ತಿಂಗಳೂ ಮತ್ತೊಂದಾಶ್ರಮದಲ್ಲಿ ಮೂರು ತಿಂಗಳೂ ಈ ರೀತಿ ಯಲ್ಲಿ ಹತ್ತು ವರ್ಷಗಳನ್ನು ಕಳೆದನು. ಆ ಬಳಿಕ ಸುತೀಕ್ಷ್ಣಮುನೀಶ್ವರನ ಆಶ್ರಮಕ್ಕೆ ಬಂದನು. ಅಲ್ಲಿ ಕೆಲವು ಕಾಲವಿದ್ದು ಒಂದು ದಿನ ಆ ಮುನೀಶ್ವರನನ್ನು ಕುರಿತು "ಮುನೀಶ್ವರರೆ, ಈ ದಂಡ ಕಾರಣ್ಯದಲ್ಲಿ ಅಗಸ್ತ್ಯಮುನಿಗಳಿದ್ದಾರೆ ಎಂದು ಕೇಳಿದ್ದೇನೆ. ಈ ಅರಣ್ಯವು ಅತಿವಿಶಾಲವಾಗಿರು ವುದರಿಂದ ಅವರೆಲ್ಲಿದ್ದಾರೋ ತಿಳಿಯದಾಗಿದೆ. ಅಗಸ್ತ್ಯಮುನೀಶ್ವರರ ಕೃಪೆಯನ್ನು ಪಡೆಯು ವುದಕ್ಕೋಸ್ಕರ ಅವರ ಆಶ್ರಮಕ್ಕೆ ಹೋಗಿ ಅವರನ್ನು ವಂದಿಸಿ ಸೇವೆಯನ್ನು ಮಾಡಿಕೊಂಡಿರ ಬೇಕೆಂದು ಅಪೇಕ್ಷಿಸುತ್ತೇನೆ. ಆ ಮಹರ್ಷಿಗಳಿರುವ ಕಡೆಯನ್ನು ಹೇಳಬೇಕು" ಎಂದು ಕೇಳಿದನು.

ಸುತೀಕ್ಷ್ಣಮುನಿಯು ಆತನನ್ನು ಕುರಿತು "ಶ್ರೀರಾಮ, ನಾನು ಈ ಸಂಗತಿಯನ್ನು ತಿಳುಹಿಸಿ ಸೀತಾಲಕ್ಷ್ಮಣಸಮೇತನಾದ ನಿನ್ನನ್ನು ಅಗಸ್ತ್ಯಮುನೀಶ್ವರನ ಆಶ್ರಮಕ್ಕೆ ಕಳುಹಿಸಬೇಕೆಂದಿದ್ದೆನು. ದೈವಾಧೀನದಿಂದ ನಿನಗೂ ಈ ಬುದ್ಧಿಯು ಹುಟ್ಟಿತು. ನಾನು ಅಗಸ್ತ್ಯಮುನೀಶ್ವರನಿರುವ ಸ್ಥಳ ವನ್ನು ಹೇಳುತ್ತೇನೆ ಕೇಳು : ಇಲ್ಲಿಗೆ ತೆಂಕಣದಿಕ್ಕಿನಲ್ಲಿ ನಾಲ್ಕುಗಾವುದ ದಾರಿಯಲ್ಲಿ ಅಗಸ್ತ್ಯಮುನಿಯ ಆಶ್ರಮವಿದೆ. ಆ ಆಶ್ರಮವು ಪರ್ವತಾದಿಗಳೇನೂ ಇಲ್ಲದ ನೆಲಗಾಡಾಗಿರುವುದು ಇಲ್ಲಿಂದ ಮೂರು ಗಾವುದ ದೂರದಲ್ಲಿ, ಅಗಸ್ತ್ಯಭ್ರಾತೃವಿನ ಆಶ್ರಮವಿದೆ. ಪಿಪ್ಪಲೀಮರಗಳು ಹೇರಳವಾಗಿರುವುದೇ

ಅದಕ್ಕೆ ಕುರುಹು. ಆ ಆಶ್ರಮದಲ್ಲಿ ಕುಸುಮಿತವಾದ ಕಮಲಗಳಿಂದಲೂ ಹಂಸ ಮುಂತಾದ ಪಕ್ಷಿಗಳಿಂದಲೂ ಮೆರೆಯುವ ಕೆರೆಗಳಿರುವುವು. ನೀನು ಸೀತಾಲಕ್ಷ್ಮಣಸಮೇತನಾಗಿ ಆ ಆಶ್ರಮದಲ್ಲಿ ಒಂದು ರಾತ್ರಿಯಿದ್ದು ಅಲ್ಲಿಂದ ಮುಂದೆ ತೆಂಕಲಾಗಿ ಹೋದರೆ ಒಂದು ಗಾವುದದಾರಿ ದೂರದಲ್ಲಿ ಅಗಸ್ತ್ಯಮುನೀಶ್ವರನ ಆಶ್ರಮವಿರುವುದು. ಆ ಆಶ್ರಮವು ಅತಿರಮಣೀಯವಾದದ್ದು. ಅಲ್ಲಿಗೆ ಹೋಗಬೇಕಾದ ಪಕ್ಷದಲ್ಲಿ ಇಂದೇ ಪ್ರಯಾಣ ಬೆಳಸು ” ಎಂದು ಹೇಳಿದನು.

ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಸುತೀಕ್ಷ್ಣಮುನೀಶ್ವರನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಹೊರಟು ಮಾರ್ಗದಲ್ಲಿ ಮೇಘಮಂಡಲಕ್ಕೆ ಸಮಾನವಾದ ಪರ್ವತಗಳನ್ನೂ ವಿಚಿತ್ರವಾದ ವನಗಳನ್ನೂ ಕೊಳಗಳನ್ನೂ ನದಿಗಳನ್ನೂ ನೋಡುತ್ತ ಸುತೀಕ್ಷ್ಣನು ಹೇಳಿದ ಮಾರ್ಗಗೊಂಡು ನಡೆದು ಮೂರುಗಾವುದ ಹೋದನು. ಅಲ್ಲಿ ಅಗಸ್ತ್ಯಮುನಿಯ ಭ್ರಾತೃವನ್ನು ಕಂಡು ಲಕ್ಷ್ಮಣನನ್ನು ಕುರಿತು ಹೀಗೆಂದನು: “ಲಕ್ಷ್ಮಣ, ಇದೇ ಮಹಾತ್ಮನಾದ ಅಗಸ್ತ್ಯಭ್ರಾತೃವಿನ ಪುಣ್ಯಾಶ್ರಮವಾಗಿರಬೇಕು. ಈ ಆಶ್ರಮದಲ್ಲಿ ಫಲಪುಷ್ಪಗಳಿಂದ ಜೋತು ಬಿದ್ದಿರುವ ಮನೋಹರವಾದ ವೃಕ್ಷಗಳಿವೆ. ಪರಿಮಳಯುಕ್ತವಾದ ಹೋಮಧೂಮವು ಕಾಣಿಸುತ್ತಿದೆ. ಸಮೀಪದಲ್ಲಿ ಸಂಗ್ರಹಮಾಡಿದ ಸಮಿತ್ತುಗಳ ರಾಶಿಗಳಿವೆ. ಋಷಿಕುಮಾರರು ಕೊಯ್ದುಕೊಂಡುಹೋದ ದರ್ಭೆಯ ಅವಶೇಷಗಳು ಕಾಣಿಸುತ್ತಿವೆ. ಇದೇ ಅಗಸ್ತ್ಯಭ್ರಾತೃವಿನ ಆಶ್ರಮವಾಗಿರಬೇಕು. ತೆಂಕಣ ದಿಗ್ಭಾಗದಲ್ಲಿ ಈ ಆಶ್ರಮವು ಅನೇಕ ಪುಣ್ಯಾತ್ಮರಿಗೆ ಆಶ್ರಯವಾಗಿದೆ. ಈ ಆಶ್ರಮವನ್ನು ಕುರಿತು ಒಂದು ಅದ್ಭುತವಾದ ಕಥಾವೃತ್ತಾಂತವನ್ನು ಕೇಳಿದ್ದೇನೆ. ಅದೇನೆಂದರೆ: ಇಲ್ಲಿ ಅಗಸ್ತ್ಯಮುನೀಶ್ವರನು ಬರುವುದಕ್ಕೆ ಮೊದಲು ವಾತಾಪಿ ಇಲ್ವಲರೆಂಬ ಇಬ್ಬರು ದುರಾತ್ಮರಾದ ರಾಕ್ಷಸರು ಬ್ರಾಹ್ಮಣವೇಷವನ್ನು ಧರಿಸಿಕೊಂಡು ಬ್ರಾಹ್ಮಣರನ್ನೇ ಕೊಂದು ತಿನ್ನುತ್ತಿದ್ದರು. ಇಲ್ವಲನು ತನ್ನ ಮನೆಯಲ್ಲಿ ಶ್ರಾದ್ಧದಿವಸವೆಂದು ಹೇಳಿಕೊಂಡು ಅನೇಕಮಂದಿ ಬ್ರಾಹ್ಮಣರನ್ನು ಭೋಜನಕ್ಕೆ ಕರೆಯುತ್ತಿದ್ದನು. ಮೇಷದ ರೂಪವನ್ನು ತಾಳಿರುವ ತನ್ನ ತಮ್ಮನಾದ ವಾತಾಪಿಯನ್ನು ಸಂಹರಿಸಿ ಪಾಕಮಾಡಿ ಆ ಬ್ರಾಹ್ಮಣರಿಗೆ ಬಡಿಸುತಿದ್ದನು. ಅವರು ಭೋಜನಮಾಡಿದಮೇಲೆ ‘ವಾತಾಪಿ, ಹೊರಟು ಬಾ’ ಎಂದು ಕರೆಯುತ್ತಿದ್ದನು. ಅವನು ಅಷ್ಟುಮಂದಿ ಬ್ರಾಹ್ಮಣರ ಹೊಟ್ಟೆಗಳನ್ನೂ ಭೇದಿಸಿಕೊಂಡು ಮೇಕೆಯಂತೆ ಅರಚುತ್ತ ಹೊರಟುಬರುತ್ತಿದ್ದನು. ಅದರಿಂದ ಬ್ರಾಹ್ಮಣರು ಮೃತರಾಗಿ ಬೀಳುತ್ತಿದ್ದರು. ಈ ರೀತಿಯಲ್ಲಿ ಅನೇಕಮಂದಿ ಬ್ರಾಹ್ಮಣರನ್ನು ನಾಶಮಾಡಲು ಇಂದ್ರಾದಿ ದೇವತೆಗಳು ಅಗಸ್ತ್ಯಮುನೀಶ್ವರನ ಸಮೀಪಕ್ಕೆ ಹೋಗಿ ಇಲ್ವಲ ವಾತಾಪಿಗಳಿಂದ ಆಗುತ್ತಿದ್ದ ಉಪದ್ರವಗಳನ್ನು ನಿವೇದಿಸಿಕೊಂಡರು.

ಅಗಸ್ತ್ಯಮುನೀಶ್ವರನು ಅದನ್ನು ಕೇಳಿ ಆ ರಾಕ್ಷಸರ ಸಮೀಪಕ್ಕೆ ಹೋದನು. ಇಲ್ವಲನು ಎಂದಿನಂತೆ ತನ್ನ ಮನೆಯಲ್ಲಿ ಶ್ರಾದ್ಧವೆಂದು ಅಗಸ್ತ್ಯಮುನಿಗೆ ಬ್ರಾಹ್ಮಣಾರ್ಥಕ್ಕೆ ಹೇಳಿ ಆತನಿಗೆ ಭೋಜನವನ್ನು ಮಾಡಿಸಿ ಎಂದಿನ ರೀತಿಯಲ್ಲಿ ‘ವಾತಾಪಿ, ಹೊರಟು ಬಾ’ ಎಂದು ಕರೆದನು. ಅಗಸ್ತ್ಯಮುನೀಶ್ವರನು ಮುಗುಳುನಗೆಯಿಂದ ‘ಎಲೈ ಇಲ್ವಲನೇ, ಇನ್ನು ವಾತಾಪಿಗೆ ಹೊರಬರುವ ಸಾಮರ್ಥ್ಯವೆಲ್ಲಿಂದ ಬರಬೇಕು ? ವಾತಾಪಿಯು ನನ್ನ ಉದರದಲ್ಲಿಯೇ ಜೀರ್ಣನಾದನು’ ಎಂದು ನುಡಿದನು. ಆ ಮಾತನ್ನು ಕೇಳಿ ಇಲ್ವಲನು ಅಗಸ್ತ್ಯಮುನಿಯನ್ನು ಕೊಲ್ಲಬೇಕೆಂದು ಅಟ್ಟಿಕೊಂಡು ಬಂದನು. ಅಗಸ್ತ್ಯಮುನೀಶ್ವರನು ಕೋಪಾಟೋಪದಿಂದ ಅಗ್ನಿಜ್ವಾಲೆಗೆ ಸಮಾನವಾದ ತನ್ನ ದೃಷ್ಟಿಯಿಂದ ಇಲ್ವಲನನ್ನು ಭಸ್ಮಮಾಡಿದನು. ಅಂಥ ಅಗಸ್ತ್ಯಮುನೀಶ್ವರನ ತಮ್ಮನ ಆಶ್ರಮವಿದು, ಪಿಪ್ಪಲವನಗಳಿಂದಲೂ ಕೆರೆಗಳಿಂದಲೂ ಮನೋಹರವಾದದ್ದು ” ಎಂದು ಹೇಳಿದನು.

ಆ ಸಮಯದಲ್ಲಿ ಸೂರ್ಯನು ಅಸ್ತಾಚಲವನ್ನೈದಲು ಶ್ರೀರಾಮನು ಸೀತಾಲಕ್ಷ್ಮಣ ಸಮೇತನಾಗಿ ಸಾಯಾಹ್ನಿಕವನ್ನು ತೀರಿಸಿಕೊಂಡು ಅಗಸ್ತ್ಯಭ್ರಾತೃವಿನ ಆಶ್ರಮಕ್ಕೆ ಹೋಗಿ ಆತನಿಗೆ ವಂದಿಸಿದನು. ಆ ಮುನೀಶ್ವರನು ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಕಂದಮೂಲ ಫಲಾಹಾರಾದಿಗಳನ್ನು ಕೊಟ್ಟು ಒಂದು ಪರ್ಣಶಾಲೆಯನ್ನು ತೋರಿಸಿದನು. ಶ್ರೀರಾಮನು ಆ ರಾತ್ರಿಯನ್ನು ಅಲ್ಲಿ ಕಳೆದು ಮಾರನೆಯ ದಿನ ಪ್ರಾತಃಕಾಲದಲ್ಲೆದ್ದು ನಿತ್ಯಕರ್ಮಗಳನ್ನು ಮಾಡಿ ಆ ಋಷೀಶ್ವರನಿಗೆ ವಂದಿಸಿ "ಋಷಿಗಳೆ, ಒಂದು ರಾತ್ರಿಯನ್ನು ಇಲ್ಲಿ ಸುಖವಾಗಿ ಕಳೆದೆವು. ಈಗ ನಿಮ್ಮ ಅಣ್ಣನಾದ ಅಗಸ್ತ್ಯಮುನೀಶ್ವರನ ಆಶ್ರಮಕ್ಕೆ ಹೋಗಿ ಆತನ ದರ್ಶನಮಾಡುತ್ತೇವೆ" ಎಂದು ಹೇಳಿ ಸೀತಾಲಕ್ಷ್ಮಣಸಮೇತನಾಗಿ ಸುತೀಕ್ಷ್ಣಮುನಿಯು ಹೇಳಿದ ದಾರಿಗೊಂಡು ಹೊರಟನು. ಮಾರ್ಗದಲ್ಲಿ ಅನೇಕ ಪರ್ಣಫಲಾದಿಗಳಿಂದ ಮನೋಹರವಾದ ಮರಗಳುಳ್ಳ ವನಗಳನ್ನೂ ಫಲಪುಷ್ಪಗಳಿಂದ ಇಟ್ಟಣಿಸಿದ್ದ ವೃಕ್ಷಗಳಲ್ಲಿ ಸಂಚರಿಸುತ್ತಿದ್ದ ಕಪಿಗಳನ್ನೂ ನೋಡುತ್ತ, ಕಿವಿಗಿಂಪಾಗಿ ಸ್ವರಗೈಯುತ್ತಿದ್ದ ಕೋಗಿಲೆಗಳ ಧ್ವನಿಗಳನ್ನು ಕೇಳುತ್ತ ತನ್ನ ಹಿಂದುಗಡೆಯಲ್ಲಿ ಬರುತ್ತಿದ್ದ ಲಕ್ಷ್ಮಣನನ್ನು ಕುರಿತು ಹೀಗೆ ಹೇಳಿದನು: "ಲಕ್ಷ್ಮಣ, ಈ ಆಶ್ರಮದಲ್ಲಿ ಎಲ್ಲಿ ನೋಡಿದರೂ ಕೋಮಲವಾಗಿ ಪರಿಮಳಿಸುವ ತಳಿರುಗಳಿಂದ ಮನೋಹರವಾದ ವೃಕ್ಷಗಳಿವೆ. ಮೃಗಗಳು ಒಂದಕ್ಕೊಂದು ವೈರವನ್ನು ಬಿಟ್ಟು ಒಂದುಗೂಡಿ ಸಂಚರಿಸುತ್ತಿವೆ. ತನ್ನ ಸತ್ಕರ್ಮದಿಂದ ಲೋಕದಲ್ಲಿ ಪ್ರಸಿದ್ಧನಾದ ಅಗಸ್ತ್ಯಮುನೀಶ್ವರನ ಆಶ್ರಮವು ಕಾಣುತ್ತಿರುವುದು. ಈ ಆಶ್ರಮವನ್ನು ನೋಡಿದ ಮಾತ್ರದಿಂದಲೇ ಎಲ್ಲ ಬಳಲಿಕೆಯೂ ಪರಿಹಾರವಾಗುವುದು. ಎಲ್ಲಿ ನೋಡಿದರೂ ಮದದಿಂದ ಸೊಕ್ಕಿದ ಕಾಡಾನೆಗಳು ವಿಲಾಸಾರ್ಥವಾಗಿ ಸಂಚರಿಸುತ್ತಿವೆ. ಎಲ್ಲಿ ನೋಡಿದರೂ ನಾರುಬಟ್ಟೆಗಳಿಂದ ಅಲಂಕರಿಸಲ್ಪಟ್ಟ ವೃಕ್ಷಗಳು ತೋರುತ್ತಿವೆ. ಶಾಂತಗುಣಸಂಪತ್ತಿಯುಳ್ಳ ಮೃಗಸಮೂಹಗಳು ಕಾಣುತ್ತಿವೆ. ನಾನಾವಿಧವಾದ ಪಕ್ಷಿಗಳು ಮನೋಹರವಾಗಿ ಸ್ವರಗೈಯುತ್ತಿವೆ. ಇದು ಪುಣ್ಯಾತ್ಮರಾದ ಮನುಷ್ಯರಿಗೆ ಸೌಖ್ಯಕರವಾದ ಆಶ್ರಮವಾಗಿದೆ. ಈ ಆಶ್ರಮದಲ್ಲಿ ಅಗಸ್ತ್ಯಮುನೀಶ್ವರನು ಜಗದ್ಧಿತಾರ್ಥವಾಗಿ ತಪಸ್ಸುಮಾಡುತ್ತಿರುವುದರಿಂದ ಋಷಿಗಳೆಲ್ಲ ನಿರ್ಭೀತರಾಗಿದ್ದಾರೆ. ಈ ಮುನೀಶ್ವರನ ಆಶ್ರಮವನ್ನು ರಾಕ್ಷಸರು ನೋಡುವರಲ್ಲದೆ ಇಲ್ಲಿರುವ ಪ್ರಾಣಿಗಳಿಗೆ ಬಾಧೆಯನ್ನು ಮಾಡಲಾರರು. ಪುಣ್ಯಾತ್ಮನಾದ ಅಗಸ್ತ್ಯಮುನೀಶ್ವರನು ಯಾವಾಗ ಈ ಆಶ್ರಮಕ್ಕೆ ಬಂದನೋ ಅದುಮೊದಲಾಗಿ ಈ ವನದಲ್ಲಿರುವ ರಾಕ್ಷಸರು ಮನುಷ್ಯರ ಮೇಲಣ ವೈರವನ್ನು ಬಿಟ್ಟು ಶಾಂತಗುಣವುಳ್ಳವರಾಗಿದ್ದಾರೆ. ಈ ಮುನಿಯಿಂದ ತೆಂಕಣದಿಕ್ಕು ಪವಿತ್ರವಾಗಿ ಸಮಸ್ತ ಪ್ರಾಣಿಗಳಿಗೂ ಹರ್ಷದಾಯಕವಾಗಿದೆ. ವಿಂಧ್ಯಪರ್ವತನು ಅಗಸ್ತ್ಯಮುನೀಶ್ವರನ ಆಜ್ಞೆಯನ್ನು ಮೀರಲಂಜಿಕೊಂಡು ಬೆಳೆಯದೆ ಹಾಗೆಯೇ ನಿಂತುಬಿಟ್ಟಿದ್ದಾನೆ. ಅಗಸ್ತ್ಯಮುನೀಶ್ವರನು ಸಮಸ್ತ ಲೋಕಗಳಲ್ಲಿಯೂ ಪೂಜ್ಯನಾದವನು. ತನ್ನ ದರ್ಶನಕ್ಕೆ ಬಂದಿರುವ ನಮಗೆ ಅನೇಕ ಶ್ರೇಯಸ್ಸನ್ನು ಮಾಡುವನು. ನಾವು ಈ ಮುನಿಯ ಸೇವೆಯನ್ನು ಮಾಡಿಕೊಂಡು ಈ ಆಶ್ರಮದಲ್ಲಿಯೇ ಮಿಕ್ಕಿರುವ ಕಾಲವನ್ನು ಕಳೆಯೋಣ. ಈ ಆಶ್ರಮದಲ್ಲಿ ದೇವತೆಗಳು ಗಂಧರ್ವರು ಸಿದ್ಧರು ಮೊದಲಾದವರು ಆಹಾರನಿಯಮವನ್ನು ಮಾಡಿಕೊಂಡು ಅಗಸ್ತ್ಯಮುನೀಶ್ವರನ ಸೇವೆಯನ್ನು ಮಾಡಿಕೊಂಡಿದ್ದಾರೆ. ಈ ಆಶ್ರಮದಲ್ಲಿ ಹುಸಿಗರು ಕ್ರೂರಕರ್ಮಿಗಳು ಅಶುಚಿಯಾದವರು—ಮೊದಲಾದವರು ಜೀವವಿಡಿದಿರಲಾರರು. ಅನೃತವಾದಿ ಕಾಮುಕ ಮೊದಲಾದವರು ಇಲ್ಲಿ ಇರಸಲ್ಲದು. ಈ ಮುನೀಶ್ವರನು ಮಹಾಸತ್ಯಸಂಧನು. ಇಲ್ಲಿರುವವರೆಲ್ಲರೂ ಧರ್ಮಮಾರ್ಗದಲ್ಲಿಯೇ ನಡೆಯುವರು. ಈ ಆಶ್ರಮದಲ್ಲಿ ಮಹಾತ್ಮರಾದ ಋಷಿಗಳು ಮನುಷ್ಯದೇಹವನ್ನು ತೊರೆದು ತಪಸ್ಸಿದ್ಧಿಯಿಂದ

ಸೂರ್ಯಕಾಂತಿಗೆ ಸಮಾನವಾದ ದಿವ್ಯದೇಹವನ್ನು ಹೊಂದಿ ಸ್ವರ್ಗವನ್ನೈದುವರು. ಇಲ್ಲಿ ತಪಸ್ಸುಮಾಡುವ ಪುಣ್ಯಾತ್ಮರಿಗೆ ದೇವತೆಗಳು ಪ್ರಸನ್ನರಾಗಿ ದೇವತ್ವ ಯಕ್ಷರಾಜ್ಯಾಧಿಪತ್ಯ ಬ್ರಹ್ಮಲೋಕ ಮೊದಲಾದ ಇಷ್ಟಾರ್ಥಗಳನ್ನು ಕೊಡುವರು. ಎಲೈ ಲಕ್ಷ್ಮಣ, ನಾವು ಅಗಸ್ತ್ಯ ಮುನೀಶ್ವರನ ಆಶ್ರಮಕ್ಕೆ ಬಂದೆವು. ನಮ್ಮ ಸಂಗಡ ಈ ಋಷಿಗಳೂ ಬಂದಿದ್ದಾರೆ. ನಾವು ಬಂದ ವೃತ್ತಾಂತವನ್ನು ನೀನು ಮುಂದೆ ಹೋಗಿ ಅಗಸ್ತ್ಯಮಹರ್ಷಿಗೆ ಅರಿಕೆಮಾಡು" ಎಂದು ನುಡಿದನು.



## ೧೨ ನೆಯ ಅಧ್ಯಾಯ

## ಅಗಸ್ತ್ಯನು ಶ್ರೀರಾಮನಿಗೆ ಬಿಲ್ಲುಬಾಣಗಳನ್ನು ಕೊಟ್ಟಿದ್ದು

ಆಮೇಲೆ ಲಕ್ಷ್ಮಣನು ಅಗಸ್ತ್ಯಮುನೀಶ್ವರನ ಆಶ್ರಮಕ್ಕೆ ಹೋಗಿ ಆತನ ಶಿಷ್ಯನನ್ನು ಕುರಿತು ಹೀಗೆ ನಿವೇದಿಸಿದನು: "ಪೂಜ್ಯನೆ, ಲೋಕದಲ್ಲಿ ಮಹಾಪ್ರಸಿದ್ಧನಾದ ದಶರಥರಾಯನ ಜ್ಯೇಷ್ಠ ಪುತ್ರನಾದ ಶ್ರೀರಾಮನು ಸೀತಾಸಮೇತನಾಗಿ ಅಗಸ್ತ್ಯಮುನೀಶ್ವರನ ದರ್ಶನಮಾಡಬೇಕೆಂದು ಈ ಆಶ್ರಮಕ್ಕೆ ಬಂದಿದ್ದಾನೆ. ನಾನು ಶ್ರೀರಾಮನ ತಮ್ಮ. ನನ್ನ ಹೆಸರು ಲಕ್ಷ್ಮಣ. ಶ್ರೀರಾಮನು ಅಗಸ್ತ್ಯಮುನಿಯ ಭಕ್ತ. ನಾವು ನಮ್ಮ ತಂದೆಯಾದ ದಶರಥರಾಯನ ಅಪ್ಪಣೆಯಿಂದ ವನವಾಸಕ್ಕೆ ಬಂದು ಮಹಾತ್ಮನಾದ ಅಗಸ್ತ್ಯಮುನಿಯ ದರ್ಶನ ಮಾಡಬೇಕೆಂದು ಇಲ್ಲಿಗೆ ಬಂದೆವು. ಈ ವಿಷಯವನ್ನು ಅಗಸ್ತ್ಯಮುನೀಶ್ವರನ ಸಂಗಡ ಹೇಳಬೇಕು" ಎಂದು ಹೇಳಿದನು.

ಆ ಶಿಷ್ಯನು ಶೀಘ್ರವಾಗಿ ಆಶ್ರಮದೊಳಗೆ ಹೋಗಿ ಅಗ್ನಿಹೋತ್ರದ ಶಾಲೆಯಲ್ಲಿ ತಪೋನಿಷ್ಠೆಯಲ್ಲಿದ್ದ ಮಹಾತ್ಮನಾದ ಅಗಸ್ತ್ಯಮುನೀಶ್ವರನನ್ನು ಕುರಿತು ಕೈಮುಗಿದುಕೊಂಡು "ಗುರುಗಳೆ, ದಶರಥರಾಯನ ಕುಮಾರನಾದ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ನಿಮ್ಮ ದರ್ಶನಮಾಡಬೇಕೆಂದು ನಮ್ಮ ಆಶ್ರಮಕ್ಕೆ ಬಂದಿದ್ದಾನೆ. ಇದನ್ನು ತಮಗೆ ತಿಳುಹಿಸಬೇಕೆಂದು ಶ್ರೀರಾಮನ ತಮ್ಮನಾದ ಲಕ್ಷ್ಮಣನು ಕೇಳಿಕೊಂಡಿದ್ದಾನೆ" ಎಂದು ಹೇಳಿದನು.

ಅಗಸ್ತ್ಯಮುನೀಶ್ವರನು "ಶ್ರೀರಾಮನು ನಾವು ಮಾಡಿದ ಪುಣ್ಯದಿಂದ ನಮ್ಮನ್ನು ನೋಡಬೇಕೆಂಬ ನೆವದಿಂದ ಇಲ್ಲಿಗೆ ಬಂದನು. ನಾನು ಆತನು ಯಾವಾಗ ಬರುವನೋ ಎಂದು ಆತನ ಬರುವಿಕೆಯನ್ನೇ ಎದುರು ನೋಡುತ್ತಿದ್ದೆನು. ಆತನು ಬಂದದ್ದು ಒಳ್ಳೆಯದಾಯಿತು. ಆತನನ್ನು ಕೂಡಲೆ ಕರೆದುಕೊಂಡು ಬರದೆ ಅನುಚಿತವನ್ನು ಮಾಡಿದೆ. ಶೀಘ್ರವಾಗಿ ಹೋಗಿ ಸೀತಾಲಕ್ಷ್ಮಣ ಸಮೇತನಾದ ಶ್ರೀರಾಮನನ್ನು ಕರೆದುಕೊಂಡು ಬಾ" ಎಂದು ಹೇಳಿದನು.

ಆ ಶಿಷ್ಯನು ಮಹಾಪ್ರಸಾದವೆಂದು ಕೈಮುಗಿದು ಶೀಘ್ರದಲ್ಲಿ ಹೊರಗೆ ಬಂದು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ಶ್ರೀರಾಮನು ಎಲ್ಲಿದ್ದಾನೆ? ನೀವು ಅಗಸ್ತ್ಯಮುನೀಶ್ವರನ ಸಮೀಪಕ್ಕೆ ಬನ್ನಿರಿ" ಎಂದನು.

ಲಕ್ಷ್ಮಣನು ಆ ಶಿಷ್ಯನನ್ನು ಆಶ್ರಮದ ಬಾಗಿಲಿಗೆ ಕರೆತಂದು ಶ್ರೀರಾಮ ಸೀತಾದೇವಿಯರನ್ನು ತೋರಿಸಿದನು. ಆತನು ಅತಿವಿನಯದಿಂದ ಅಗಸ್ತ್ಯಮುನೀಶ್ವರನು ಕರೆದುಕೊಂಡು ಬರಹೇಳಿದ ವೃತ್ತಾಂತವನ್ನು ಹೇಳಿ ಸತ್ಕಾರಪೂರ್ವಕವಾಗಿ ಅವರನ್ನು ಕರೆದುಕೊಂಡು ಹೋದನು. ಶ್ರೀರಾಮನು

ಆ ಆಶ್ರಮವನ್ನು ಹೊಕ್ಕು ಅಲ್ಲಲ್ಲಿದ್ದ ದೇವತೆಗಳ ಸ್ಥಾನಗಳನ್ನು ನೋಡಿದನು. ಬ್ರಹ್ಮದೇವ, ಯಜ್ಞಪುರುಷ, ದೇವೇಂದ್ರ, ನಾರಾಯಣ, ಸೂರ್ಯ, ಚಂದ್ರ, ಕುಬೇರ, ಧಾತೃವಿಧಾತೃಗಳೆಂಬ ಅವಾಂತರ ಸೃಷ್ಟಿಕರ್ತೃಗಳು, ವಾಯುದೇವ, ವರುಣ, ಗಾಯತ್ರೀ, ವಸುಗಳು, ಷಣ್ಮುಖ, ಯಮಧರ್ಮ ಮೊದಲಾದ ದೇವತೆಗಳ ಸ್ಥಾನಗಳನ್ನು ನೋಡುತ್ತ ಸೀತಾಲಕ್ಷ್ಮಣ ಸಮೇತನಾಗಿ ಆತನ ಸಮೀಪಕ್ಕೆ ಹೋಗುತ್ತಿರಲು ಅಗಸ್ತ್ಯಮುನೀಶ್ವರನು ತನ್ನ ಶಿಷ್ಯರನ್ನು ಕೂಡಿಕೊಂಡು ಇದಿರಾಗಿ ಬಂದನು. ಅದನ್ನು ಕಂಡು ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ಅಗೋ ಆ ಮುನೀಶ್ವರನು ನಮ್ಮನ್ನು ಇದಿರುಗೊಳ್ಳಲು ಬರುತ್ತಿದ್ದಾನೆ. ಆ ಮುನೀಶ್ವರನು ಸಮಸ್ತ ತಪೋಧನರಿಗೂ ನಿಕ್ಷೇಪಸ್ಥಾನವಾದವನು" ಎಂದು ಸೂರ್ಯಕಾಂತಿಯ ರೀತಿಯಲ್ಲಿ ಕಾಂತಿಯುಳ್ಳ ಅಗಸ್ತ್ಯಮುನೀಶ್ವರನ ಪಾದಗಳಿಗೆ ಅಭಿವಂದಿಸಿ ಸೀತಾಲಕ್ಷ್ಮಣರ ಸಮೇತನಾಗಿ ಕೈಮುಗಿದುಕೊಂಡು ನಿಂತನು.

ಅಗಸ್ತ್ಯಮಹರ್ಷಿಯು ಅವರಿಗೆ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡಿ ಕುಶಲವನ್ನು ಕೇಳಿ ಪೀಠವನ್ನು ಕೊಟ್ಟನು. ಧರ್ಮಮಾರ್ಗಪ್ರವರ್ತಕನಾದ ಶ್ರೀರಾಮನನ್ನು ಕೈಹಿಡಿದು ಕುಳ್ಳಿರಿಸಿ ಆತನನ್ನು ಕುರಿತು "ಶ್ರೀರಾಮ, ಲೋಕದಲ್ಲಿ ತಪಸ್ವಿಗಳಾದವರು ತಮ್ಮ ಧರ್ಮಕ್ಕೆ ತಕ್ಕಂತೆ ನಡೆಯದೆ ಮತ್ತೊಂದು ಆಚಾರವನ್ನು ಕೈಕೊಂಡರೆ ಕೂಟಸಾಕ್ಷಿ ನುಡಿಯುವವರಂತೆ ಶರೀರಾಂತದಲ್ಲಿ ತಮ್ಮ ಮಾಂಸವನ್ನು ತಾವೇ ಭಕ್ಷಿಸುವರು. ಮಹಾರಥಿಕನಾಗಿ ಧರ್ಮಮಾರ್ಗಪ್ರವರ್ತಕನಾದ ಅರಸನು ಮನೆಗೆ ಬಂದರೆ ಮನ್ನಿಸಿ ಸತ್ಕಾರವನ್ನು ಮಾಡಬೇಕು. ಧರ್ಮಿಷ್ಠನಾದ ರಾಜನು ಪ್ರಿಯಾತಿಥಿ ಎನಿಸಿಕೊಳ್ಳುವನು" ಎಂದು ನುಡಿದು ಕಂದಮೂಲ ಫಲಾಹಾರಾದಿಗಳಿಂದ ಶ್ರೀರಾಮನನ್ನು ಸತ್ಕರಿಸಿದನು. ಪುನಃ ಅಗಸ್ತ್ಯಮುನಿಯು "ಶ್ರೀರಾಮ, ನನ್ನ ವಶದಲ್ಲಿರುವ ರತ್ನಖಚಿತವಾದ ಈ ಧನುಸ್ಸು ಪೂರ್ವದಲ್ಲಿ ವಿಶ್ವಕರ್ಮನಿಂದ ಸೃಷ್ಟಿಸಲ್ಪಟ್ಟದ್ದು. ಇದು ವಿಷ್ಣುದೇವತಾಕವಾದದ್ದು. ಈ ಬಿಲ್ಲಿಗೆ ತಕ್ಕ ಈ ಶರಗಳನ್ನು ನನಗೆ ಬ್ರಹ್ಮದೇವನು ಕೊಟ್ಟನು. ಈ ಎರಡು ಬತ್ತಳಿಕೆಗಳು ಯಜ್ಞಪುರುಷನ ರೀತಿಯಲ್ಲಿ ತೀಕ್ಷ್ಣವಾದ ಅಂಬುಗಳಿಂದ ಪರಿಪೂರ್ಣವಾಗಿರುವುವು. ಈ ಬಾಣಗಳು ಅಕ್ಷಯವಾಗಿರುವುವು. ಮಿಂಚಿನಹೊಳೆಯುಳ್ಳ ಈ ಖಡ್ಗವು ಪ್ರಳಯಕಾಲಾಗ್ನಿಗೆ ಸಮಾನವಾದದ್ದು. ವಿಷ್ಣುದೇವತಾಕವಾದ ಈ ಬಿಲ್ಲನ್ನೂ ಅಕ್ಷಯಬಾಣಗಳುಳ್ಳ ಈ ಬತ್ತಳಿಕೆಗಳನ್ನೂ ಈ ಖಡ್ಗವನ್ನೂ ಮಂತ್ರನ್ಯಾಸಪೂರ್ವಕವಾಗಿ ನಿನಗೆ ಕೊಡುವೆನು. ಇವನ್ನು ತೆಗೆದುಕೋ. ಪೂರ್ವದಲ್ಲಿ ನಾರಾಯಣನು ರಾಕ್ಷಸರೊಡನೆ ಯುದ್ಧಮಾಡುವಾಗ ಈ ಬಿಲ್ಲಿನಿಂದಲೇ ಸಮಸ್ತ ರಾಕ್ಷಸರನ್ನೂ ಗೆದ್ದು ಜಯಲಕ್ಷ್ಮಿಯನ್ನು ಪಡೆದನು" ಎಂದು ನುಡಿದು ಆ ಆಯುಧಗಳನ್ನು ಕೊಟ್ಟನು.

---

## ೧೩ ನೆಯ ಅಧ್ಯಾಯ

# ಶ್ರೀರಾಮನು ಪಂಚವಟೀಕ್ಷೇತ್ರಕ್ಕೆ ಹೊರಟಿದ್ದು

ಅಗಸ್ತ್ಯಮುನೀಶ್ವರನು ಪುನಃ ಶ್ರೀರಾಮನನ್ನು ಕುರಿತು "ಶ್ರೀರಾಮ, ನೀನೂ ಲಕ್ಷ್ಮಣನೂ ನನ್ನನ್ನು ನೋಡಬೇಕೆಂದು ನನ್ನ ಸಮೀಪಕ್ಕೆ ಬಂದದ್ದರಿಂದ ನಾನು ಸಂತುಷ್ಟನಾದೆನು. ನಿಮಗೆ ದಾರಿನಡೆದ ಬಳಲಿಕೆಯು ಬಹಳವಾಗಿರುವುದು. ಸೀತಾದೇವಿಯಲ್ಲಿ ಬಳಲಿಕೆಯು ವ್ಯಕ್ತವಾಗಿ ಕಾಣುತ್ತಿದೆ. ಈ ದೇವಿಯು ಅತ್ಯಂತ ಸುಕುಮಾರಾಂಗಿಯಾದವಳು; ಒಂದು ದಿನವಾದರೂ

ದುಃಖವನ್ನನುಭವಿಸಿದವಳಲ್ಲ. ಬಹು ದುರ್ಘಟವಾದ ವನಕ್ಕೆ ನಿನ್ನ ಮೇಲಣ ವಿಶ್ವಾಸದಿಂದ ಬಂದವಳು. ಹೇಗಿದ್ದರೆ ಇವಳಿಗೆ ಸಂತೋಷವಾಗುವುದೋ ಆ ಪ್ರಕಾರದಲ್ಲಿ ನಡೆಯಿರಿ. ಸೀತಾದೇವಿಯು ಈ ವನಕ್ಕೆ ಬಂದದ್ದು ಅತ್ಯಂತ ಸಾಹಸಕೃತ್ಯ. ಲೋಕದಲ್ಲಿ ಸ್ತ್ರೀಯರು ಸ್ವಾಭಾವಿಕವಾಗಿ ಪುರುಷನು ಕ್ಷೇಮದಲ್ಲಿದ್ದರೆ ಆತನೊಡನೆ ವಿನೋದಸಂಲಾಪಗಳನ್ನು ಮಾಡಿಕೊಂಡಿರುವರು, ವಿಷಮಕಾಲ ಬಂದರೆ ಆತನನ್ನು ಬಿಟ್ಟುಬಿಡುವರು. ಮಿಂಚಿನಂತೆ ಚಂಚಲತೆ, ಶಸ್ತ್ರದಂತೆ ಕ್ರೂರಬುದ್ಧಿ, ಗರುಡಮಾರುತರಂತೆ ಶೀಘ್ರತೆ— ಎಂಬ ಮೂರು ಗುಣಗಳು ಸ್ತ್ರೀಯರಿಗೆ ಸಹಜವಾದವು. ಆದರೆ ಸೀತಾದೇವಿಯಲ್ಲಿ ಈ ದೋಷಗಳೊಂದೂ ಇಲ್ಲ. ಈ ದೇವಿಯು ಉತ್ತಮಳು, ಪೂಜ್ಯಳು. ಪತಿವ್ರತೆಯರಲ್ಲಿ ಅರುಂಧತಿಯಂತೆ ಕೊಂಡಾಡಲು ಯೋಗ್ಯಳು. ಶ್ರೀರಾಮ, ನೀನು ಸೀತಾಲಕ್ಷ್ಮಣಸಮೇತನಾಗಿ ಇಲ್ಲಿಗೆ ಬಂದದ್ದರಿಂದ ಈ ಆಶ್ರಮಕ್ಕೆ ಒಂದು ಬಗೆಯ ಸೌಂದರ್ಯ ಬಂದಿತು" ಎಂದು ನುಡಿದನು.

ಶ್ರೀರಾಮನು ಕೈಮುಗಿದುಕೊಂಡು ತಪೋಜ್ವಾಲೆಯಿಂದ ಪ್ರಜ್ವಲಿಸುತ್ತಿದ್ದ ಆ ಮುನೀಶ್ವರ ನನ್ನು ಕುರಿತು "ಮಹರ್ಷಿಗಳೆ, ನೀವು ನಮ್ಮನ್ನು ಕೃಪಾದೃಷ್ಟಿಯಿಂದ ನೋಡಿ ನಮ್ಮ ಕುಶಲವನ್ನು ಕೇಳಿ ಸತ್ಕಾರಮಾಡಿದ್ದರಿಂದ ನಾವು ಕೃತಾರ್ಥರಾದೆವು. ನಾವು ವಾಸವಾಗಿರುವುದಕ್ಕೆ ಕಂದಮೂಲ ಫಲಾದಿಗಳಿಂದ ಯುಕ್ತವಾಗಿ ಸ್ವಾದೂದಕವುಳ್ಳ ಒಂದು ಆಶ್ರಮವನ್ನು ತೋರಿಸಿದರೆ ನಾವು ಆ ಆಶ್ರಮದಲ್ಲಿ ಪರ್ಣಶಾಲೆಯನ್ನು ಮಾಡಿಕೊಂಡು ಸುಖವಾಗಿರುವೆವು" ಎಂದು ಹೇಳಿದನು.

ಅಗಸ್ತ್ಯಮುನೀಶ್ವರನು ಒಂದು ಕ್ಷಣಮಾತ್ರ ಧ್ಯಾನಾಸಕ್ತನಾಗಿದ್ದು ಶ್ರೀರಾಮನನ್ನು ನೋಡಿ "ಶ್ರೀರಾಮ, ಇಲ್ಲಿಗೆ ಎರಡು ಗಾವುದ ದೂರದಲ್ಲಿ ಅನೇಕ ಕಂದಮೂಲಫಲಗಳುಳ್ಳದ್ದಾಗಿ ಸ್ವಾದೂದಕವುಳ್ಳ ಪಂಚವಟಿ ಎಂಬ ಸ್ಥಾನವಿದೆ. ನೀನು ಸೀತಾಲಕ್ಷ್ಮಣಸಮೇತನಾಗಿ ಅಲ್ಲಿಗೆ ಹೋಗು. ನಿಮ್ಮ ತಂದೆಯಾದ ದಶರಥರಾಯನ ಸ್ನೇಹಾತಿಶಯದಿಂದ ನಿನ್ನ ಸಮಸ್ತ ವೃತ್ತಾಂತವನ್ನೂ ನಿನ್ನ ಇಷ್ಟಾರ್ಥವನ್ನೂ ನಾನು ಬಲ್ಲೆನು. ನೀನು ಪಂಚವಟಿಯಲ್ಲಿ ಆಶ್ರಮವನ್ನು ಮಾಡಿಕೊಂಡು ನಿನ್ನ ತಂದೆಗೆ ಮಾಡಿದ ಪ್ರತಿಜ್ಞೆಯನ್ನು ಪರಿಪಾಲಿಸು. ಪಂಚವಟೀಕ್ಷೇತ್ರವು ರಮಣೀಯವಾದದ್ದು. ಅದರ ಸಮೀಪದಲ್ಲಿ ಗೋದಾವರೀನದಿಯಿದೆ. ಅದು ಅನೇಕ ಕಂದಮೂಲ ಫಲಾದಿಗಳಿಂದ ಪರಿಪೂರ್ಣವಾಗಿ ನಾನಾ ಪಕ್ಷಿಸಮೂಹಗಳಿಂದ ಇಟ್ಟಣಿಸಿ ಏಕಾಂತವಾಸಕ್ಕೆ ಯೋಗ್ಯವಾಗಿದೆ. ಆ ಕ್ಷೇತ್ರದಲ್ಲಿ ವಾಸವಾಗಿದ್ದುಕೊಂಡು ನಿಖಿಲ ಋಷಿಗಳನ್ನೂ ಪರಿಪಾಲಿಸು. ಇಲ್ಲಿಗೆ ಉತ್ತರದಲ್ಲಿ ಒಂದು ಹಿಪ್ಪೇಮರಗಳ ವನವು ಕಾಣಿಸುವುದು. ಆ ವನದ ಬಡಗಣ ಭಾಗದಲ್ಲಿಯೇ ಹೋದರೆ ಮುಂದೆ ಒಂದು ಆಲದ ಮರವಿದೆ. ಅಲ್ಲಿಂದ ಮುಂದೆ ಇರುವ ಒಂದು ತಿಟ್ಟನ್ನು ಹತ್ತಿ ನೋಡಿದರೆ ಸಮೀಪದಲ್ಲಿ ಒಂದು ಪರ್ವತವು ಕಾಣಿಸುವುದು. ಆ ಪರ್ವತದ ಸಮೀಪದಲ್ಲಿ ಪಂಚವಟೀಕ್ಷೇತ್ರವಿರುವುದು" ಎಂದು ಹೇಳಿದನು.

ಆ ಮಾತನ್ನು ಕೇಳಿ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಅಗಸ್ತ್ಯಮುನೀಶ್ವರನಿಗೆ ಅತ್ಯಂತ ಭಯಭಕ್ತಿ ವಿನಯಗಳಿಂದ ಅಭಿವಂದಿಸಿದನು: ಆತನು ಕೊಟ್ಟ ಬಿಲ್ಲು ಬಾಣ ಖಡ್ಗಗಳನು ತೆಗೆದುಕೊಂಡು ಹರ್ಷದಿಂದ ಪಂಚವಟೀಕ್ಷೇತ್ರಕ್ಕೆ ತೆರಳಿದನು.



## ೧೪ ನೆಯ ಅಧ್ಯಾಯ

## ಜಟಾಯುವಿನ ವೃತ್ತಾಂತ

ಆಮೇಲೆ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಪಂಚವಟೀಕ್ಷೇತ್ರಕ್ಕೆ ಹೋಗುತ್ತ ಒಂದು ಆಲದ ಮರದ ಮೇಲೆ ದೊಡ್ಡ ದೇಹವನ್ನು ಹೊಂದಿದ ಭೀಮಪರಾಕ್ರಮವುಳ್ಳ ಒಂದು ಹದ್ದನ್ನು ಕಂಡನು. ಅದು ರಾಕ್ಷಸವಾಯಿಯೆಂದೆಣಿಸಿ ಆ ಹದ್ದನ್ನು ' ನೀನು ಯಾರು ? ' ಎಂದು ಕೇಳಿದನು

ಆ ಹದ್ದು ಮಧುರವಾದ ನುಡಿಯಿಂದ ರಾಮಲಕ್ಷ್ಮಣರ ಮನಸ್ಸಿಗೆ ಸಂತೋಷವಾಗುವಹಾಗೆ ಅವರನ್ನು ಕುರಿತು " ಎಲೈ ರಾಜಕುಮಾರರೆ, ನಾನು ನಿಮ್ಮ ತಂದೆಯಾದ ದಶರಥರಾಜನ ಸಖನು " ಎಂದು ನುಡಿಯಿತು

ಆ ಮಾತನ್ನು ಕೇಳಿ ಶ್ರೀರಾಮನು ಆ ಪಕ್ಷಿಯು ತಮ್ಮ ತಂದೆಯ ಪ್ರಿಯಸಖನೆಂದೆಣಿಸಿ ವಂದಿಸಿ "ಎಲೈ ಪಕ್ಷಿರಾಜನೆ, ನಿನ್ನ ಕುಲವಾವುದು ? ನಿನ್ನ ಹೆಸರೇನು ? ' ಎಂದು ಕೇಳಿದನು.

ಆ ಪಕ್ಷಿರಾಜನು ತನ್ನ ಸ್ವರೂಪವನ್ನೂ ವಂಶವನ್ನೂ ಉತ್ಪತ್ತಿಯನ್ನೂ ಕ್ರಮವಾಗಿ ಹೇಳುವುದಕ್ಕೆ ತೊಡಗಿದನು : " ರಾಜಕುಮಾರ, ಪೂರ್ವಕಾಲದಲ್ಲಿ ಕರ್ದಮ, ವಿಕ್ರೀತ, ಶೇಷ, ಸಂಶ್ರಯ, ಬಹುಪುತ್ರ, ಸ್ಥಾಣು, ಮರೀಚಿ, ಅತ್ರಿ, ಕ್ರತು, ಪುಲಸ್ತ್ಯ, ಆಂಗೀರಸ, ಪ್ರಚೇತ, ಪುಲಹ, ದಕ್ಷ, ವಿವಸ್ವಂತ, ಅರಿಷ್ಟನೇಮಿ, ಕಶ್ಯಪ ಎಂಬ ಪ್ರಜಾಪತಿಗಳು ಜನಿಸಿದರು. ಅವರಲ್ಲಿ ದಕ್ಷಬ್ರಹ್ಮನಿಗೆ ಅರುವತ್ತು ಮಂದಿ ಹೆಣ್ಣುಮಕ್ಕಳು ಜನಿಸಿದರು. ಅವರಲ್ಲಿ ಕಶ್ಯಪಬ್ರಹ್ಮನು ಅದಿತಿ, ದಿತಿ, ದನು, ಕಾಳಿಕೆ, ತಾಮ್ರೆ, ಕ್ರೋಧವಶೆ, ಮನು, ಅನಲೆ ಎಂಬ ಎಂಟು ಕನ್ಯಕೆಯರನ್ನು ವಿವಾಹವಾದನು , ಅವರನ್ನು ಕುರಿತು ಮಹಾಪರಾಕ್ರಮಿಗಳಾಗಿ ಮೂರು ಲೋಕಗಳನ್ನೂ ಆಳಬಲ್ಲ ಮಕ್ಕಳನ್ನು ನನ್ನಿಂದ ಪಡೆಯಬಹುದೆಂದು ಹೇಳಿದನು. ಆ ಮಾತನ್ನು ಅದಿತಿ, ದಿತಿ, ಕಾಳಿಕೆ ಎಂಬುವವರು ಮಹಾಪ್ರಸಾದವೆಂದು ಅಂಗೀಕರಿಸಿದರು. ಮಿಕ್ಕವರು ಸುಮ್ಮನಿದ್ದರು. ಅದಿತಿ ಎಂಬುವವಳಿಗೆ ಕಶ್ಯಪಬ್ರಹ್ಮನಿಂದ ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಅಶ್ವಿನೀದೇವತೆಗಳಿಬ್ಬರು—ಹೀಗೆ ಮೂವತ್ತುಮೂರು ಮಂದಿ ಮಕ್ಕಳು ಜನಿಸಿದರು. ದಿತಿಯಲ್ಲಿ ಮಹಾಪರಾಕ್ರಮಿಗಳಾದ ದೈತ್ಯರು ಜನಿಸಿದರು ದನು ಎಂಬುವವಳು ಅಶ್ವಗ್ರೀವನೆಂಬ ಕುಮಾರನನ್ನು ಪಡೆದಳು ಕಾಳಿಕೆಯು ಕಾಳಕ ನರಕರೆಂಬ ಕುಮಾರರನ್ನು ಪಡೆದಳು. ತಾಮ್ರೆ ಎಂಬ ಸ್ತ್ರೀಯಲ್ಲಿ ಕ್ರೌಂಚಿ, ಭಾಸಿ, ಶ್ಯೇನಿ, ಧೃತರಾಷ್ಟ್ರಿ, ಶುಕಿ ಎಂಬ ಐದುಮಂದಿ ಕುಮಾರಿಯರು ಜನಿಸಿದರು. ಅವರಲ್ಲಿ ಹಿರಿಯ ಮಗಳಾದ ಕ್ರೌಂಚಿಯಿಂದ ಗೂಬೆಗಳು ಜನಿಸಿದವು. ಭಾಸಿಯಿಂದ ಭಾಸಗಳೆಂಬ ಪಕ್ಷಿವಿಶೇಷಗಳು ಜನಿಸಿದವು. ಶ್ಯೇನಿ ಎಂಬುವವಳು ಹದ್ದುಗಳನ್ನು ಪಡೆದಳು. ಧೃತರಾಷ್ಟ್ರಿ ಎಂಬುವವಳಲ್ಲಿ ಹಂಸಗಳೂ ಕಲಹಂಸಗಳೂ ಚಕ್ರವಾಕಪಕ್ಷಿಗಳೂ ಜನಿಸಿದವು. ಶುಕಿ ಎಂಬ ಕಡೆಯ ಮಗಳಲ್ಲಿ ನತೆಯೂ ನತೆಗೆ ವಿನತೆಯೂ ಜನಿಸಿದರು. ಕ್ರೋಧವಶೆ ಎಂಬ ಕಶ್ಯಪಪತ್ನಿಯು ಮೃಗಿ, ಮೃಗಮಂದೆ, ಹರಿ, ಭದ್ರಮದೆ, ಮಾತಂಗಿ, ಶಾರ್ದೂಲಿ, ಶ್ವೇತೆ, ಸುರಭಿ, ಸುರಸೆ, ಕದ್ರು ಎಂಬ ಹತ್ತು ಮಂದಿ ಹೆಣ್ಣುಮಕ್ಕಳನ್ನು ಪಡೆದಳು. ಆ ಹತ್ತುಮಂದಿಯಲ್ಲಿ ಮೃಗಿಯೆಂಬುವವಳು ಮೃಗ

ಗಳನ್ನು ಪಡೆದಳು. ಮೃಗಮಂದೆಯಲ್ಲಿ ಕರಡಿಗಳೂ ಚೌರೀಮೃಗಗಳೂ ಜನಿಸಿದವು. ಭದ್ರಮದೆಯಲ್ಲಿ ಇರಾವತಿ ಎಂಬುವವಳು ಜನಿಸಿದಳು. ಇರಾವತಿಯಲ್ಲಿ ಲೋಕಪ್ರಸಿದ್ಧವಾದ ಐರಾವತವು ಜನಿಸಿತು. ಹರಿ ಎಂಬುವವಳಲ್ಲಿ ಕಪಿಗಳು ಜನಿಸಿದುವು. ಮಾತಂಗಿಯಲ್ಲಿ ಆನೆಗಳು ಜನಿಸಿದವು. ಶಾರ್ದೂಲಿಯಲ್ಲಿ ಮುಸುವುಗಳೂ ಹುಲಿಗಳೂ ಜನಿಸಿದವು. ಶ್ವೇತೆಯಲ್ಲಿ ಅಷ್ಟದಿಗ್ಗಜಗಳು ಜನಿಸಿದವು. ಸುರಭಿಯಲ್ಲಿ ರೋಹಿಣಿ ಗಂಧರ್ವಿ ಎಂಬ ಇಬ್ಬರು ಕುಮಾರಿಯರು ಜನಿಸಿದರು. ರೋಹಿಣಿಯಲ್ಲಿ ಗೋವುಗಳು ಜನಿಸಿದವು. ಗಂಧರ್ವಿಯಲ್ಲಿ ಕುದುರೆಗಳು ಜನಿಸಿದವು. ಸುರಸೆಯಲ್ಲಿ ಪಾತಾಳಲೋಕದಲ್ಲಿರುವ ನಾಗಗಳು ಜನಿಸಿದವು. ಕದ್ರುವಿನಲ್ಲಿ ಸರ್ಪಗಳು ಜನಿಸಿದವು. ಮನುವಿನಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಗಳ ಮನುಷ್ಯರು ಜನಿಸಿದರು. ಅನಲೆಯಲ್ಲಿ ಫಲಗಳನ್ನು ಕೊಡುವ ಪುಣ್ಯವೃಕ್ಷಗಳು ಜನಿಸಿದವು. ವಿನತೆಯು ಶುಕಿಯ ಮೊಮ್ಮಗಳು. ಕದ್ರು ಸುರಸೆ ಎಂಬುವವರು ವಿನತೆಯ ಒಡಹುಟ್ಟಿದವರು. ಅವರಲ್ಲಿ ಕದ್ರು ಮಹಾಶೇಷನನ್ನು ಪಡೆದಳು. ವಿನತೆಯು ಅರುಣ ಗರುಡರೆಂಬ ಇಬ್ಬರು ಕುಮಾರರನ್ನು ಪಡೆದಳು. ಅರುಣನಿಂದ ಶ್ಯೇನಿ ಎಂಬ ಸ್ತ್ರೀಯಲ್ಲಿ ನನ್ನ ಅಣ್ಣನಾದ ಸಂಪಾತಿಯೂ ನಾನೂ ಜನಿಸಿದೆವು. ನನ್ನ ಹೆಸರು ಜಟಾಯು. ನಾನು ನಿನಗೆ ಸಹಾಯ ವಾಗಿರುತ್ತೇನೆ. ನೀನು ಸಮೀಪದಲ್ಲಿಯೇ ವಾಸವಾಗಿರು. ನೀನು ಲಕ್ಷ್ಮಣಸಮೇತನಾಗಿ ಕಾರ್ಯಾರ್ಥ ವಾಗಿ ಹೋದರೆ ನಾನು ಸೀತಾದೇವಿಯನ್ನು ರಕ್ಷಿಸಿಕೊಂಡಿರುತ್ತೇನೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ಶ್ರೀರಾಮನು ಜಟಾಯುವನ್ನು ಆಲಿಂಗಿಸಿಕೊಂಡು ನಮಸ್ಕರಿಸಿ ತನ್ನ ತಂದೆಯಾದ ದಶರಥರಾಯನಿಗೂ ಜಟಾಯುವಿಗೂ ಇದ್ದ ಸ್ನೇಹವಿಶೇಷವನ್ನು ಕೇಳುತ್ತ ಸೀತಾಲಕ್ಷ್ಮಣಸಮೇತನಾಗಿ ಅಗ್ನಿಜ್ವಾಲೆಯು ಕಿರುಗಿಡಗಳನ್ನು ಸುಡುವಂತೆ ಸಮಸ್ತ ಶತ್ರುಗಳನ್ನೂ ದಹಿಸಲಿಚ್ಛಿಸಿ ಜಟಾಯುವನ್ನು ಸಹಾಯವಾಗಿ ಕರೆದುಕೊಂಡು ಪಂಚವಟೀಕ್ಷೇತ್ರಕ್ಕೆ ಹೋದನು.



೧೫ ನೆಯ ಅಧ್ಯಾಯ

## ಪಂಚವಟಿಯಲ್ಲಿ ಶ್ರೀರಾಮನ ವಾಸ

ಈ ಪ್ರಕಾರವಾಗಿ ಸೀತಾಲಕ್ಷ್ಮಣಸಮೇತನಾದ ಶ್ರೀರಾಮನು ನಾನಾ ವಿಧವಾದ ಪುಣ್ಯಮೃಗ ಗಳಿಂದ ಸೇವಿಸಲ್ಪಟ್ಟ ಪಂಚವಟೀಕ್ಷೇತ್ರವನ್ನೈದಿ ತೇಜೋಗುಣಸಂಪನ್ನನಾದ ಲಕ್ಷ್ಮಣನನ್ನುಕುರಿತು "ಲಕ್ಷ್ಮಣ, ಅಗಸ್ತ್ಯಮುನೀಶ್ವರನು ನಿರೂಪಿಸಿದ ಕುರುಹುಗಳುಳ್ಳ ಸ್ಥಳಕ್ಕೆ ಬಂದೆವು. ಇದೇ ಪಂಚವಟೀಕ್ಷೇತ್ರ. ಎಲ್ಲಿ ನೋಡಿದರೂ ಪುಷ್ಪಿತವಾದ ವನಗಳಿಂದ ಈ ಕ್ಷೇತ್ರವು ಬಹು ರಮಣೀಯವಾಗಿದೆ. ನಾವು ಇರುವುದಕ್ಕೆ ಅನುಕೂಲವಾದ ಒಂದು ಸ್ಥಳವನ್ನು ನೋಡು" ಎಂದು ನುಡಿದನು. ಒಂದು ರಮಣೀಯವಾದ ಸ್ಥಳವನ್ನು ಕಂಡು ಪುನಃ ಲಕ್ಷ್ಮಣನನ್ನು ಕರೆದು ಹೀಗೆಂದನು: "ಲಕ್ಷ್ಮಣ, ಈ ಸ್ಥಳವು ನಮಗೆ ವಾಸಯೋಗ್ಯವಾದದ್ದು. ಇದರ ಸಮೀಪದಲ್ಲಿ ಉದಯವಾಗಿ ಬರುತ್ತಿರುವ ಸೂರ್ಯನ ಪ್ರಭೆಯಂತೆ ಒಪ್ಪುತ್ತ ಕೆಂದಾವರೆಗಳುಳ್ಳ ರಮಣೀಯವಾದ ಕೊಳವಿದೆ. ಅಗಸ್ತ್ಯಮುನೀಶ್ವರನು ಹೇಳಿದ ಗೋದಾವರೀನದಿಯು ಉಭಯತೀರಗಳಲ್ಲಿಯೂ ಪುಷ್ಪಿತವಾದ ವೃಕ್ಷಗಳಿಂದುದುರುವ ಧೂಳುಗಳಿಂದಲೂ ಪರಿಮಳಯುಕ್ತವಾದ ಉದಕಪ್ರವಾಹದಿಂದಲೂ ಹಂಸ ಮೊದಲಾದ ಜಲಚರಪಕ್ಷಿಗಳಿಂದಲೂ ಅತಿರಮಣೀಯವಾಗಿದೆ. ಈ ಆಶ್ರಮವು ಆ ನದಿಗೆ

ಅತಿ ದೂರವಲ್ಲದೆಯೂ ಅತಿಸಮೀಪವಲ್ಲದೆಯೂ ಇದೆ. ನವಿಲುಗಳ ಕೇಂಕಾರಧ್ವನಿಗಳಿಂದಲೂ ಪುಷ್ಪಫಲಗಳಿಂದ ಮನೋಹರವಾದ ವೃಕ್ಷಗಳಿಂದಲೂ ರಮ್ಯವಾದ ತಪ್ಪಲುಗಳಿಂದಲೂ ಒಪ್ಪುತ್ತಿರುವ ಈ ಪರ್ವತಗಳನ್ನು ನೋಡು. ಈ ಪರ್ವತಗಳ ತಪ್ಪಲುಗಳು ಸುವರ್ಣಮಯ ವಾಗಿಯೂ ರಜತಮಯವಾಗಿಯೂ ತಾಮ್ರಮಯವಾಗಿಯೂ ಕಾಂಸ್ಯಮಯವಾಗಿಯೂ ಇರುವ ಗೈರಿಕಾದಿ ಧಾತುಗಳಿಂದ ಕೂಡಿ ಮೆರೆಯುತ್ತಿವೆ. ಎಲ್ಲಿ ನೋಡಿದರೂ ತಾಳ, ಹರಿತಾಳ, ಖರ್ಜೂರ, ಹಲಸು, ಮಾವು, ಗೊರಟೆ, ಸುರಹೊನ್ನೆ, ಅಂಟೆ, ಅಶೋಕ, ತಿಲಕ, ಕೇತಕಿ, ಸಂಪಿಗೆ, ಚಂದನ, ಕೆಂಪಡಸ. ಹಿಪ್ಪೆ, ಬಕುಳ, ಅಶ್ವಕರ್ಣ, ಬನ್ನಿ, ಮುಳ್ಳು ಮುತ್ತುಗ, ಪಾದರಿ ಮೊದಲಾದ ವೃಕ್ಷಗಳು ಎಲ್ಲಾ ಋತುಗಳಲ್ಲಿಯೂ ಹುಟ್ಟುವ ಪುಷ್ಪಫಲಗಳಿಂದ ರಮ್ಯವಾಗಿವೆ. ಈ ಸ್ಥಳದಲ್ಲಿ ನಾವು ಆಶ್ರಮವನ್ನುಮಾಡಿಕೊಂಡು ಸುಖವಾಗಿರೋಣ. ನಮಗೆ ಜಟಾಯುವೂ ಸಹಾಯವಾಗಿರಲಿ" ಎಂದು ನುಡಿದನು.

ಆ ಮಾತನ್ನು ಕೇಳಿ ಪರಬಲಮರ್ದನಸಮರ್ಥನಾದ ಲಕ್ಷ್ಮಣನು ಗೋದಾವರೀತೀರದಲ್ಲಿ ರಮ್ಯವಾದ ಒಂದು ಆಶ್ರಮವನ್ನು ಕಲ್ಪಿಸಿದನು. ಶ್ರೀರಾಮನಿರುವುದಕ್ಕೆ ವಿಶಾಲವಾದ ಪರ್ಣಶಾಲೆ ಯನ್ನೂ ನಿರ್ಮಿಸಿದನು. ಆಮೇಲೆ ಲಕ್ಷ್ಮಣನು ಗೋದಾವರೀನದಿಯಲ್ಲಿ ಸ್ನಾನವನ್ನು ಮಾಡಿ ಅಲ್ಲಿ ವಿಕಸಿತವಾದ ಪುಷ್ಪಗಳನ್ನು ತಂದು ಆ ಪರ್ಣಶಾಲೆಗೆ ಮಾಡಬೇಕಾದ ಪುಷ್ಪಬಲಿಯೇ ಮುಂತಾದ ಶಾಂತಿಕರ್ಮಗಳನ್ನು ವಿಧ್ಯುಕ್ತವಾಗಿ ನಡೆಸಿ ರಾಮನನ್ನು ಕರೆತಂದು ತೋರಿಸಿದನು. ರಾಮನು ಅದನ್ನು ನೋಡಿ ಅತ್ಯಂತ ಹರ್ಷಪಟ್ಟು ಲಕ್ಷ್ಮಣನನ್ನು ತಬ್ಬಿಕೊಂಡು ಸೀತಾಸಮೇತನಾಗಿ ಒಳಗೆ ಪ್ರವೇಶಿಸಿದನು. ಅಲ್ಲಿ ಲಕ್ಷ್ಮಣನನ್ನು ಕುರಿತು ಗಂಭೀರವಚನಗಳಿಂದ "ಲಕ್ಷ್ಮಣ, ನೀನು ಅತಿಪ್ರಯಾಸದಿಂದ ಈ ಪರ್ಣಶಾಲೆಯನ್ನು ನಿರ್ಮಿಸಿದೆ. ನಾನು ಇದಕ್ಕೆ ಮೆಚ್ಚಿದೆನು. ನಿನಗೆ ಕೊಡುವ ಪಾರಿತೋಷಿಕವಿದೆಂದು ನಿನ್ನನ್ನು ಆಲಿಂಗಿಸಿಕೊಂಡಿದ್ದೇನೆ. ನೀನು ಧರ್ಮಜ್ಞನಾಗಿ ನನ್ನ ಅಂತರಂಗವನ್ನರಿತು ನನ್ನ ಮನಸ್ಸಿಗೆ ಹರ್ಷವಾಗುವಂತೆ ನಡೆಯುವುದರಿಂದ ನನ್ನ ತಂದೆಯು ಸ್ವರ್ಗಸ್ಥನಾಗಲಿಲ್ಲವೆಂದೇ ನನ್ನ ಮನಸ್ಸಿಗೆ ತೋರುತ್ತಿದೆ" ಎಂದು ನುಡಿದು ಸ್ವರ್ಗದಲ್ಲಿ ದೇವೇಂದ್ರ ನಿರುವಂತೆ ಕೆಲವುಕಾಲ ಪಂಚವಟೀಕ್ಷೇತ್ರದಲ್ಲಿದ್ದನು.



## ೧೬ ನೆಯ ಅಧ್ಯಾಯ

## ಹೇಮಂತಋತುವಿನ ವರ್ಣನೆ

ಈ ಪ್ರಕಾರದಲ್ಲಿ ಶ್ರೀರಾಮನು ಪಂಚವಟೀಕ್ಷೇತ್ರದಲ್ಲಿ ಸೀತಾಲಕ್ಷ್ಮಣಸಮೇತನಾಗಿ ಸುಖ ವಾಗಿರುವ ಸಮಯದಲ್ಲಿ ಸಮಸ್ತ ಪ್ರಾಣಿಗಳಿಗೂ ಪ್ರಿಯವೆನಿಸುವ ಹೇಮಂತಋತುವು ಪ್ರಾಪ್ತವಾಯಿತು. ಆ ಸಮಯದಲ್ಲಿ ಒಂದು ದಿವಸ ಶ್ರೀರಾಮನು ಸ್ನಾನಾರ್ಥವಾಗಿ ಗೋದಾವರೀ ನದಿಗೆ ಹೊರಟನು. ಆಗ ದೇವಪೂಜಾರ್ಥವಾಗಿ ಅರ್ಘ್ಯೋದಕವನ್ನು ತರುವುದಕ್ಕಾಗಿ ಕೈಯಲ್ಲಿ ಕಲಶವನ್ನು ತೆಗೆದುಕೊಂಡು ವಿನಯದಿಂದ ಹಿಂದೆ ಹೋಗುತ್ತಿದ್ದ ಲಕ್ಷ್ಮಣನು ಸೀತಾಸಮೇತನಾದ ಶ್ರೀರಾಮನನ್ನು ಕುರಿತು ಈ ಪ್ರಕಾರ ನುಡಿದನು: "ಶ್ರೀರಾಮ, ನಿನಗೆ ಪ್ರಿಯವಾದ ಹೇಮಂತ ಕಾಲವು ಪ್ರಾಪ್ತವಾಯಿತು. ಈ ಕಾಲದಲ್ಲಿ ಮಂಜಿನಿಂದ ಜನಗಳ ದೇಹವು ಬಿರಿದು ಸ್ವಾಭಾವಿಕವಾದ

ಮೃದುತ್ತ್ವವನ್ನು ಕಳೆದುಕೊಂಡಿರುವುದು. ಎಲ್ಲಿ ನೋಡಿದರೂ ಭೂಮಿಯು ಫಲಿತವಾದ ಸಸ್ಯಾದಿಗಳಿಂದ ಒಪ್ಪುತ್ತಿರುವುದು. ಉದಕಪಾನವು ಅಶಕ್ಯವಾಗಿರುವುದು. ಅಗ್ನಿಸೇವೆಯು ಭೋಗಯೋಗ್ಯವಾಗಿರುವುದು. ಈ ಹೇಮಂತಕಾಲದಲ್ಲಿ ದೀಕ್ಷಿತರು ಆಗ್ರಯಣೇಷ್ಟಿಯೆಂಬ ಸತ್ಕರ್ಮದಿಂದ ಪಿತೃಗಳನ್ನೂ ದೇವತೆಗಳನ್ನೂ ಸಂತೋಷಪಡಿಸಿ ತಮ್ಮ ಪಾಪಗಳನ್ನು ಕಳೆದುಕೊಳ್ಳುತ್ತಿರುವರು. ಅರಸರು ಶತ್ರುಗಳಮೇಲೆ ದಂಡೆತ್ತಿ ಹೋಗುವುದಕ್ಕೆ ಇದು ಯೋಗ್ಯವಾದ ಕಾಲವೆಂದು ದಂಡಯಾತ್ರೆಯನ್ನು ಮಾಡುವರು. ಸೂರ್ಯನು ತೆಂಕಣದಿಕ್ಕಿಗೆ ಹೊರಟಿರುವುದರಿಂದ ಬಡಗಣದಿಕ್ಕು ಲಲಾಟದಲ್ಲಿ ತಿಲಕವಿಲ್ಲದ ಸ್ತ್ರೀಯಂತೆ ಕಾಣುತ್ತಿದೆ. ಸ್ವಭಾವದಿಂದ ಮಂಜುಮುಸುಕಿದ ಹಿಮವತ್ಪರ್ವತವು ಸೂರ್ಯನು ದೂರವಾಗಿರುವುದರಿಂದಾಗಿ ಮತ್ತಷ್ಟು ಮಂಜಿನಿಂದ ತುಂಬಿ ಹಿಮಪದ್ಗಿರಿಯೆಂಬ ಹೆಸರಿನಿಂದ ಸಾರ್ಥಕವಾಗಿರುವುದು. ಈ ಕಾಲದಲ್ಲಿ ಮಧ್ಯಾಹ್ನದಲ್ಲಿಯೂ ಶೈತ್ಯವಿರುವುದು. ನೆಳಲೂ ನೀರೂ ಯಾರಿಗೂ ರುಚಿಸವು. ಹಗಲುಹೊತ್ತು ಮಂಜುಮುಸುಕಿದ ಸೂರ್ಯನುಳ್ಳದ್ದಾಗಿ ಇಬ್ಬನಿಯೊಡನೆ ಕೂಡಿಕೊಂಡು ಅತ್ಯಂತ ಶೈತ್ಯವಾದ ಗಾಳಿ ಬೀಸುವುದು. ಪ್ರಾಣಿಸಂಚಾರವಿಲ್ಲದೆ ಅರಣ್ಯಗಳು ಹಿಮದಿಂದ ಮುಚ್ಚಲ್ಪಟ್ಟಿರುವುವು. ಸೂರ್ಯನು ಕಾಂತಿಗುಂದಿರುವನು. ಹೊಗೆಯಿಂದ ಮುಚ್ಚಲ್ಪಟ್ಟ ಕನ್ನಡಿಯಂತೆ ಚಂದ್ರನು ಕಾಂತಿಗುಂದಿರುವನು. ಬೆಳದಿಂಗಳು ಇಬ್ಬನಿಯಿಂದ ಮುಚ್ಚಲ್ಪಟ್ಟು ಹುಣ್ಣಿಮೆಯ ದಿನದಲ್ಲೂ ಪ್ರಕಾಶರಹಿತವಾಗಿರುವುದು. ಬಿಸಿಲು ಹಿಮದಿಂದ ಕಾಣಿಸದೆ ಇರುವುದು. ವನಗಳಲ್ಲಿ ಇಬ್ಬನಿಯು ತೊಟ್ಟುತೊಟ್ಟಾಗಿ ಬೀಳುತ್ತಿರುವುದು. ಯವೆ ಗೋಧಿ ಮೊದಲಾದ ಪೈರುಗಳು ಸ್ವರಗೈಯುವ ಕ್ರೌಂಚಪಕ್ಷಿಗಳಿಂದ ಮನೋಹರವಾಗಿರುವುವು. ಭತ್ತದ ತೆನೆಗಳು ಖರ್ಜೂರ ಪುಷ್ಪಗಳಂತೆ ಸುವರ್ಣಕಾಂತಿಯುಳ್ಳವಾಗಿ ಬಗ್ಗಿರುವುವು. ಇಬ್ಬನಿಕೂಡಿದ ಕಿರಣಗಳಿಂದ ಮಂದಕಾಂತಿಯುಳ್ಳ ಸೂರ್ಯನು ಚಂದ್ರನಂತೆ ಒಪ್ಪುತ್ತಿರುವನು. ಈ ಹೇಮಂತಕಾಲದಲ್ಲಿ ಬಿಸಿಲು ಪ್ರಾತಃಕಾಲದಲ್ಲಿ ಸೇವಿಸಲು ಯೋಗ್ಯವಲ್ಲದೆ ಮಧ್ಯಾಹ್ನಕಾಲದಲ್ಲಿ ಸೇವಿಸುವುದಕ್ಕೆ ಯೋಗ್ಯವಾಗಿರುವುದು. ಈ ಕಾಲದಲ್ಲಿ ಕಾಡಾನೆಗಳು ಅತ್ಯಂತ ಕಂಗೆಟ್ಟು ಉದಕಪಾನ ಮಾಡಬೇಕೆಂದು ನದೀತೀರಕ್ಕೆ ಹೋಗಿ ನೀರಿನಲ್ಲಿ ಸೊಂಡಿಲುಗಳನ್ನೂರಿ ಉದಕಶೈತ್ಯವನ್ನು ಸಹಿಸಲಾರದೆ ಸೊಂಡಿಲುಗಳನ್ನು ಮೇಲಕ್ಕೆ ತೆಗೆದುಕೊಳ್ಳುವುವು. ಹೇಡಿಗಳು ರಣರಂಗವನ್ನು ಪ್ರವೇಶಿಸುವುದಕ್ಕೆ ಭಯಪಡುವಂತೆ ಜಲಚರಪಕ್ಷಿಗಳು ನೀರೊಳಗೆ ಮುಳುಗಲಂಜಿ ತಡಿಗಳಲ್ಲಿ ಎಳೆಯ ಬಿಸಿಲನ್ನು ಕಾಯಿಸುತ್ತಿರುವುವು. ಈ ಹೇಮಂತಕಾಲದಲ್ಲಿ ಭರತನು ನಿನ್ನ ಮೇಲಣ ಭಕ್ತಿಯಿಂದ ಧರ್ಮಯುಕ್ತನಾಗಿ ಅತ್ಯಂತ ದುಃಖದಿಂದ ರಾಜ್ಯವನ್ನು ಬಿಟ್ಟು ಮಾನಾವಮಾನಗಳನ್ನು ತೊರೆದು ಸಮಸ್ತ ಭೋಗಗಳಲ್ಲಿಯೂ ಆಶೆಯಿಲ್ಲದವನಾಗಿ ಆಹಾರ ನಿಯಮವನ್ನು ಮಾಡಿಕೊಂಡು ತಪಸ್ವಿಯಾಗಿ ಭೂಶಯನವನ್ನು ಮಾಡಿಕೊಂಡಿರುವನು. ಆತನು ಈ ಹೇಮಂತಕಾಲದಲ್ಲಿ ಸಮಸ್ತ ಪ್ರಧಾನಿಗಳನ್ನೂ ಕೂಡಿಕೊಂಡು ಸರಯೂನದಿಗೆ ಸ್ನಾನವನ್ನು ಮಾಡುವುದಕ್ಕೆ ಹೋಗುವನು. ಸುಕುಮಾರಾಂಗನಾದ ಭರತನು ಪ್ರಾತಃಕಾಲದಲ್ಲಿ ಸರಯೂನದಿಗೆ ಹೋಗಿ ಹೇಗೆ ತಾನೆ ಸ್ನಾನವನ್ನು ಮಾಡುವನು ? ಪದ್ಮದಳಾಯತಾಕ್ಷನಾಗಿಯೂ ನೀಲಮೇಘ ಶ್ಯಾಮನಾಗಿಯೂ ಸಮಸ್ತ ಪ್ರಾಣಿಗಳಿಗೂ ಪ್ರಿಯೋಕ್ತಿಗಳನ್ನೇ ನುಡಿಯುವವನಾಗಿಯೂ ಋಜುಮಾರ್ಗಿಯಾಗಿ ಶತ್ರುಸಂಹಾರಕನಾಗಿಯೂ ಇರುವ ದೀರ್ಘಾಯುಷ್ಮಂತನಾದ ಭರತನು ಅಂತಃಕರಣಶುದ್ಧಿಯಿಂದ ಧರ್ಮವನ್ನೇ ಕೈಹಿಡಿದು ತಪೋವನದಲ್ಲಿರುವ ನಿನ್ನನ್ನೇ ಧ್ಯಾನಮಾಡುತ್ತ ಸ್ವರ್ಗಾದಿ ಲೋಕಗಳನ್ನೂ ಬಯಸದಿರುವನು. ಲೋಕದಲ್ಲಿ ಮನುಷ್ಯರು ತಾಯಿಯ ಬುದ್ಧಿಯನ್ನು ಪಡೆಯುತ್ತಾರೆ. ತಂದೆಯದನ್ನಲ್ಲ—ಎಂಬ ವಾರ್ತೆಯನ್ನು ತೊಲಗಿಸಿ ವಿರಕ್ತನಾಗಿ ಸಮಸ್ತ

ಭೋಗಗಳನ್ನೂ ತೊರೆದು ಭರತನು ತಪಸ್ವಿಯಾಗಿದ್ದಾನೆ. ದಶರಥಮಹಾರಾಜನು ಪುಣ್ಯಾತ್ಮ. ಅವನಿಗೆ ಪತ್ನಿಯಾಗಿ ಭರತನನ್ನು ಮಗನಾಗಿ ಪಡೆದ ಕೈಕೇಯಿಗೆ ಮಾತ್ರ ಆ ರೀತಿಯ ಕೆಟ್ಟ ಬುದ್ಧಿ ಹೇಗೆ ಬಂದಿರಬಹುದು ! " ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು "ಎಲೈ ಲಕ್ಷ್ಮಣ, ನಮ್ಮ ಮಧ್ಯಮ ಮಾತೆಯಾದ ಕೈಕೇಯಿದೇವಿಯನ್ನು ನಿಂದಿಸುವುದು ಉಚಿತವಲ್ಲ. ಇನ್ನೂ ಭರತನ ಕಥಾಪ್ರಸಂಗವನ್ನೇ ಹೇಳು. ವನವಾಸಮಾಡಬೇಕೆಂದು ನಾನು ದೃಢವಾಗಿ ನಿಶ್ಚಯಿಸಿದ್ದರೂ ಭರತನ ನೆನಪು ಬಂದರೆ ನನ್ನ ನಿಶ್ಚಯವು ಶಿಥಿಲವಾಗುತ್ತದೆ. ಈಗಲೇ ಹೋಗಿ ಅವನನ್ನು ನೋಡಬೇಕೆನ್ನಿಸುತ್ತದೆ. ಅಮೃತಕ್ಕೆ ಸಮಾನವಾದ ಭರತನ ವಿನಯೋಕ್ತಿಗಳನ್ನು ಸ್ಮರಿಸಿಕೊ. ಕೈಕೇಯಿದೇವಿಯನ್ನು ನಿಂದಿಸಬೇಡ. ಸೀತಾಸಮೇತನಾಗಿ ನಿನ್ನನ್ನು ಕೂಡಿಕೊಂಡು ಅಯೋಧ್ಯಾಪಟ್ಟಣಕ್ಕೆ ಹೋಗಿ ಮಹಾತ್ಮನಾದ ಭರತನೊಡನೆ ಮತ್ತು ಪರಾಕ್ರಮಿಯಾದ ಶತ್ರುಘ್ನನೊಡನೆ ಸಂಭಾಷಣೆಮಾಡುವ ಭಾಗ್ಯವು ಇನ್ನಾವಾಗ ಉಂಟಾಗುವುದೊ ! " ಎಂದು ಹಂಬಲಿಸುತ್ತ ಸೀತಾಲಕ್ಷ್ಮಣಸಮೇತನಾಗಿ ಗೋದಾವರೀನದಿಯಲ್ಲಿ ಸ್ನಾನವನ್ನು ಮಾಡಿದನು. ಆಮೇಲೆ ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಗಳನ್ನು ನೆರವೇರಿಸಿದನು. ಹೀಗೆ ಶ್ರೀರಾಮನು ಸ್ನಾನಮಾಡಿ ಸೀತಾಲಕ್ಷ್ಮಣರೊಡಗೂಡಿ ಪಾರ್ವತಿಯೊಡನೆಯೂ ನಂದಿಯೊಡನೆಯೂ ಕೂಡಿರುವ ಶಿವನಂತೆ ಪ್ರಕಾಶಿಸುತ್ತಿದ್ದನು.



## ೧೭ ನೆಯ ಅಧ್ಯಾಯ

## ಶೂರ್ಪಣಖಿಯು ಶ್ರೀರಾಮನನ್ನು ಮೋಹಿಸಿದ್ದು

ಗೋದಾವರೀನದಿಯಲ್ಲಿ ಸ್ನಾನಮಾಡಿ ಶ್ರೀರಾಮ, ಸೀತೆ, ಲಕ್ಷ್ಮಣರು ಪರ್ಣಶಾಲೆಗೆ ಹಿಂದಿರುಗಿದರು. ಅಲ್ಲಿ ಪೂರ್ವಾಹ್ಣದ ಕೃತ್ಯಗಳನ್ನು ನೆರವೇರಿಸಿ ಶ್ರೀರಾಮನು ಲಕ್ಷ್ಮಣನೊಡನೆ ನಾನಾ ಕಥಾಪ್ರಸಂಗಗಳನ್ನು ಮಾಡುತ್ತ ಕುಳಿತನು. ಸೀತೆಯೊಡನೆ ವಿರಾಜಿಸುತ್ತಿದ್ದ ಆ ರಘುನಾಥನು ಚಿತ್ರಾನಕ್ಷತ್ರದೊಂದಿಗೆ ಬೆಳಗುತ್ತಿರುವ ಚಂದ್ರನಂತೆ ಒಪ್ಪುತ್ತಿದ್ದನು. ಆ ಸಮಯದಲ್ಲಿ ಶೂರ್ಪಣಖಿಯೆಂಬ ರಾಕ್ಷಸಿಯೊಬ್ಬಳು ಅಲೆಯುತ್ತ ಅಲ್ಲಿಗೆ ಬಂದಳು. ಅವಳು ರಾವಣನ ತಂಗಿ. ಆ ರಾಕ್ಷಸಿಯು ವಿಶಾಲವಾದ ವಕ್ಷಃಸ್ಥಳವುಳ್ಳವನೂ ನಿಡಿದಾದ ತೋಳುಗಳುಳ್ಳವನೂ ಕಮಲ ದಳಾಯತಾಕ್ಷನೂ ಮಹಾಶೂರನೂ ಕ್ಷತ್ರಿಯಲಕ್ಷಣೋಪೇತನೂ ಮನ್ಮಥನಂತೆ ಮನೋಹರಾ ಕಾರನೂ ಆದ ಶ್ರೀರಾಮನನ್ನು ಕಂಡು ಕಾಮಮೋಹಿತಳಾದಳು. ಶ್ರೀರಾಮನು ಸುಂದರಮುಖನೂ ಕೃಶೋದರನೂ ಆಗಿ ವಿಶಾಲಾಕ್ಷನೂ ಮನೋಜ್ಞವಾದ ಕಪ್ಪುತಲೆಗೂದಲುಳ್ಳವನೂ ಆಗಿದ್ದನು ; ಶೂರ್ಪಣಖಿಯಾದರೋ ದುರ್ಮುಖಿಯೂ ಮಹೋದರಿಯೂ ವಿಕೃತಾಕ್ಷಿಯೂ ಕೆಂಪು ಕೂದಲಿನವಳೂ ಆಗಿದ್ದಳು. ಶ್ರೀರಾಮನು ಮಧುರಸ್ವರವುಳ್ಳವನೂ ತರುಣನೂ ಗುಣಶಾಲಿಯೂ ಸಚ್ಚಾರಿತ್ರನೂ ಆಗಿದ್ದನು ; ಶೂರ್ಪಣಖಿಯಾದರೋ ಕರ್ಕಶಧ್ವನಿಯುಳ್ಳವಳೂ ವೃದ್ಧೆಯೂ ದುಷ್ಟಳೂ ದುರಾಚಾರದವಳೂ ಆಗಿದ್ದಳು. ಮರದಂತೆ ವಿಕಾರವಾದ ಉಗುರುಗಳುಳ್ಳ ಆ ಶೂರ್ಪಣಖಿಯು ಶ್ರೀರಾಮನನ್ನು ಕುರಿತು : "ಎಲೈ ಪುರುಷನೆ, ನೀನು ಜಡೆಗಳನ್ನು ಧರಿಸಿಕೊಂಡು ಈ ಸ್ತ್ರೀಯನ್ನು ಸಮೀಪದಲ್ಲಿರಿಸಿಕೊಂಡಿದ್ದೀಯೇಕೆ ? ತಪಸ್ವಿಯಾಗಿ ಬಿಲ್ಲುಬಾಣ

ಗಳನ್ನು ಧರಿಸಿಕೊಂಡಿದ್ದೀಯೇಕೆ ? ನೀನು ರಾಕ್ಷಸರಿರುವ ಈ ಸ್ಥಳಕ್ಕೆ ಯಾವ ಕಾರಣದಿಂದ ಬಂದೆ ? ನೀನು ಬಂದ ಉದ್ದೇಶವನ್ನು ಯಥಾರ್ಥವಾಗಿ ಹೇಳು " ಎಂದು ಕೇಳಿದಳು.

ಶ್ರೀರಾಮನು ಋಜುಮಾರ್ಗದಿಂದ ಅವಳನ್ನು ಕುರಿತು " ಕೇಳು, ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ದಶರಥನೆಂಬ ಮಹಾರಾಜನಿದ್ದನು. ನಾನು ಆತನ ಜ್ಯೇಷ್ಠಪುತ್ರನು. ನನ್ನ ಹೆಸರು ರಾಮ. ಈತ ನನ್ನ ತಮ್ಮ. ಈತನ ಹೆಸರು ಲಕ್ಷ್ಮಣ. ಈಕೆಯು ವಿದೇಹರಾಜನ ಕುಮಾರಿಯಾದ ಸೀತಾದೇವಿ, ನನ್ನ ಪತ್ನಿ. ನಮ್ಮ ತಂದೆಯಾದ ದಶರಥರಾಜನ ಅಪ್ಪಣೆಯಿಂದಲೂ ಧರ್ಮವನ್ನು ಪರಿಪಾಲಿಸಬೇಕೆಂಬ ಬುದ್ಧಿಯಿಂದಲೂ ಇಲ್ಲಿಗೆ ವನವಾಸಕ್ಕೆ ಬಂದೆನು. ಇದೇ ನನ್ನ ವೃತ್ತಾಂತ. ಇನ್ನು ನಿನ್ನ ವೃತ್ತಾಂತವನ್ನು ಹೇಳು. ನೀನಾರು ? ಯಾರ ಹೆಂಡತಿ ? ನಿನ್ನ ಆಕಾರವನ್ನು ನೋಡಿದರೆ ರಾಕ್ಷಸಸ್ತ್ರೀಯೆಂದು ತಿಳಿದುಬರುತ್ತದೆ. ಇಲ್ಲಿಗೆ ಬಂದ ಕಾರಣವೇನು ? ಯಥಾರ್ಥವಾಗಿ ಹೇಳು " ಎಂದನು.

ಶೂರ್ಪಣಖಿಯು ಆತನನ್ನು ಕುರಿತು " ಎಲೈ ರಾಮ, ನನ್ನ ಹೆಸರು ಶೂರ್ಪಣಖಿ. ನಾನು ರಾಕ್ಷಸಿ. ಮನಸ್ಸಿಗೆ ಬಂದ ರೂಪವನ್ನು ತಾಳುವ ಕಾಮರೂಪಿಣಿ. ನಾನು ಅರಣ್ಯದಲ್ಲಿ ಸಮಸ್ತ ಪ್ರಾಣಿಗಳನ್ನೂ ಬೆದರಿಸುತ್ತ ಭಯವಿಲ್ಲದೆ ಒಬ್ಬಳೇ ಸಂಚರಿಸುತ್ತಿರುವೆನು. ನನ್ನ ಒಡಹುಟ್ಟಿದ ಹಿರಿಯಣ್ಣನು ಸಮಸ್ತ ರಾಕ್ಷಸರಿಗೂ ಒಡೆಯನಾದ ರಾವಣೇಶ್ವರ. ಧರ್ಮಸ್ವರೂಪನಾದ ವಿಭೀಷಣನು ನನ್ನ ಒಡಹುಟ್ಟಿದವನು. ಆತನು ರಾಕ್ಷಸನಂತೆ ಕ್ರೂರನಲ್ಲ. ಮತ್ತೊಬ್ಬ ಒಡಹುಟ್ಟಿದ ಕುಂಭಕರ್ಣನು ಸದಾಕಾಲದಲ್ಲಿಯೂ ನಿದ್ರಾಪರವಶನಾಗಿರುವನು. ಸಮರಾಂಗಣದಲ್ಲಿ ಪಟುಭಟರಾದ ಖರದೂಷಣರೆಂಬ ಮತ್ತಿಬ್ಬರು ಸಹೋದರರು ಈ ವನದ ಸಮೀಪದಲ್ಲಿಯೇ ಇದ್ದಾರೆ. ನಾನು ನಿನ್ನ ಅಪೂರ್ವವಾದ ಸೌಂದರ್ಯವನ್ನು ಕಂಡು ಕಾಮಬಾಣಕ್ಕೆ ವಶಳಾಗಿ ನೀನು ನನಗೆ ಪತಿಯಾಗ ಬೇಕೆಂದು ನಿನ್ನ ಸಮೀಪಕ್ಕೆ ಬಂದೆನು. ನಾನು ಸ್ವತಂತ್ರಳಾದವಳೇ ಹೊರತು ಪರವಶಳಲ್ಲ. ನೀನು ನನ್ನ ಕೈಹಿಡಿದು ನನಗೆ ಪತಿಯಾಗು. ನಿನಗೆ ಸೀತಾದೇವಿಯಿಂದ ಆಗತಕ್ಕುದೇನು ? ಸೀತೆಯು ವಿಕಟಾಂಗಿ ; ವಿಕಾರವಾದ ರೂಪವುಳ್ಳವಳು ; ನಿನಗೆ ಅನುಕೂಲಳಾದ ನನ್ನನ್ನು ನಿನ್ನ ಸ್ತ್ರೀಯಾಗಿ ಅಂಗೀಕರಿಸು. ವಿಕಟಾಂಗಿಯೂ ದುಷ್ಟೆಯೂ ಕರಾಳಿಯೂ ಆದ ಸೀತೆಯನ್ನೂ ಲಕ್ಷ್ಮಣನನ್ನೂ ಭಕ್ಷಣಮಾಡುತ್ತೇನೆ. ಆಮೇಲೆ ಮನೋಹರವಾದ ಪರ್ವತದ ಕೋಡುಗಲ್ಲುಗಳನ್ನು ನೋಡುತ್ತ ನನ್ನೊಡನೆ ರಮಿಸಿಕೊಂಡು ಈ ಅರಣ್ಯದಲ್ಲಿ ಸಂಚರಿಸುತ್ತಿರು " ಎಂದು ನುಡಿದಳು.



## ೧೮ ನೆಯ ಅಧ್ಯಾಯ

## ಲಕ್ಷ್ಮಣನು ಶೂರ್ಪಣಖಿಯ ಕಿವಿಮೂಗುಗಳನ್ನು ಕತ್ತರಿಸಿದ್ದು

ಆಮೇಲೆ ಶ್ರೀರಾಮನು ಮದನಬಾಣಕ್ಕೊಳಗಾದ ಶೂರ್ಪಣಖಿಯನ್ನು ಕುರಿತು ಮುಗುಳು ನಗೆಯಿಂದ " ಎಲೇ ಶೂರ್ಪಣಖಿ, ನನಗೆ ಒಬ್ಬ ಸ್ತ್ರೀ ಇದ್ದಾಳೆ. ನಿನ್ನಂಥ ಸ್ತ್ರೀಯರಿಗೆ ಸವತಿ ಯರಿರುವುದು ಯೋಗ್ಯವಲ್ಲ. ಆದ್ದರಿಂದ ನೀನು ನನ್ನ ತಮ್ಮನಾದ ಲಕ್ಷ್ಮಣನನ್ನು ವರಿಸು. ಆತನು ಒಳ್ಳೆಯವನು ; ಸುಂದರ. ಆತನಿಗೆ ಇಲ್ಲಿ ಸ್ತ್ರೀಯರಿಲ್ಲ, ಆತನು ನಿನ್ನ ಸೌಂದರ್ಯಕ್ಕೆ

ಅನುರೂಪನಾಗಿದ್ದಾನೆ. ಲಕ್ಷ್ಮಣನನ್ನು ವಿವಾಹವಾಗಿ ಸೂರ್ಯಪ್ರಭೆಯು ಮಹಾಮೇರು ಪರ್ವತವನ್ನು ಸುತ್ತುವಂತೆ ಆತನನ್ನು ಕೂಡಿ ಸಂಚರಿಸಿಕೊಂಡಿರು " ಎಂದು ಹೇಳಿದನು.

ಆ ರಾಕ್ಷಸಿಯು ಕಾಮಮೋಹಿತಳಾಗಿ ಶ್ರೀರಾಮನನ್ನು ಬಿಟ್ಟು ಲಕ್ಷ್ಮಣನ ಸಮೀಪಕ್ಕೆ ಹೋಗಿ ಅವನನ್ನು ಕುರಿತು "ಎಲೈ ಲಕ್ಷ್ಮಣ, ನಿನ್ನ ಲಾವಣ್ಯಕ್ಕೆ ಸಮಾನವಾದ ಲಾವಣ್ಯವೂ ಸೊಬಗೂ ಉಳ್ಳ ನಾನು ನಿನ್ನನ್ನು ಪತಿಯಾಗಿ ವರಿಸಬೇಕೆಂದು ಬಂದಿದ್ದೇನೆ. ನನ್ನನ್ನು ವರಿಸಿ ನನ್ನ ಸಂಗಡ ಕ್ರೀಡಿಸಿಕೊಂಡು ದಂಡಕಾರಣ್ಯದಲ್ಲಿ ಸುಖವಾಗಿರು " ಎಂದು ನುಡಿದಳು.

ಲಕ್ಷ್ಮಣನು ಮುಗುಳುನಗೆಯಿಂದ ಅವಳನ್ನು ಕುರಿತು "ಎಲೇ ಶೂರ್ಪಣಖಿ, ಒಬ್ಬರ ಊಳಿಗವನ್ನು ಮಾಡಿಕೊಂಡು ಪರಾಧೀನನಾಗಿರುವ ಸೇವಕನನ್ನು ವಿವಾಹವಾಗಿ ದಾಸಿಯಾಗಿರಲು ಏಕೆ ಯತ್ನಮಾಡುತ್ತೀಯೆ ? ನಾನು ಶ್ರೀರಾಮನ ಅಧೀನ. ಆದ್ದರಿಂದ ನೀನು ಐಶ್ವರ್ಯ ಸಂಪನ್ನನಾದ ಶ್ರೀರಾಮನನ್ನೇ ವಿವಾಹವಾಗಿ ಆತನ ಕಿರಿಯ ಹೆಂಡತಿಯಾಗಿ ಸುಖವಾಗಿರು. ಆತನು ವಿಕಟಾಂಗಿಯಾಗಿ ಕರಾಳಿಯಾಗಿ ಲಂಬೋದರಿಯಾದ ಸೀತಾದೇವಿಯನ್ನು ಬಿಟ್ಟು ಅವಶ್ಯವಾಗಿ ನಿನ್ನನ್ನು ವಿವಾಹವಾಗುವನು ಲೋಕದಲ್ಲಿರುವ ಮನುಷ್ಯರಲ್ಲಿ ವಿಚಕ್ಷಣನಾದವನು ನಿನ್ನ ಸೌಂದರ್ಯವನ್ನು ಕಂಡು ಅಂಗೀಕರಿಸದೆ ಬಿಡುವನೆ ? " ಎಂದು ನುಡಿದನು.

ಆ ರಾಕ್ಷಸಿಯು ಲಕ್ಷ್ಮಣನ ವಾಕ್ಯವನ್ನು ಸತ್ಯವೆಂದೆಣಿಸಿ ಕಾಮಾಂಧಕಾರವು ಕವಿಯಲು ಪರ್ಣಶಾಲೆಯಲ್ಲಿ ಸೀತಾಸಮೇತನಾಗಿ ಕುಳಿತಿದ್ದ ಶ್ರೀರಾಮನ ಬಳಿಗೆ ಹೋಗಿ ಹೀಗೆಂದಳು : "ಶ್ರೀರಾಮ, ವಿಕಟಾಂಗಿಯಾಗಿ ವೃದ್ಧೆಯಾದ ಸೀತಾದೇವಿಯನ್ನು ಮೆಚ್ಚಿ ನನ್ನನ್ನು ಉಪೇಕ್ಷೆ ಮಾಡಬೇಡ. ನನಗೆ ಸವತಿಯಿಲ್ಲದಂತೆ ಸೀತಾದೇವಿಯನ್ನು ಭಕ್ಷಣಮಾಡುತ್ತೇನೆ. ನೀನು ನನ್ನನ್ನು ಕೂಡಿಕೊಂಡು ಸುಖವಾಗಿರು " ಎಂದು ನುಡಿದು ಮಿಂಚಿನ ಹೊಳೆಯಂತೆ ಕಣ್ಣುದೃಷ್ಟಿಯುಳ್ಳವಳಾಗಿ ಕೋಪಾಟೋಪದಿಂದ, ಚಂದ್ರನ ಪತ್ನಿಯಾದ ರೋಹಿಣೀದೇವಿಗೆ ಎದುರಾಗಿ ಬೀಳುತ್ತಿರುವ ಉಲ್ಕಾಪಾತದಂತೆ, ಸೀತೆಯನ್ನು ನೋಡುತ್ತ ಅವಳೆಡೆಗೆ ನುಗ್ಗಿದಳು. ಆಗ ಶ್ರೀರಾಮನು ಅತ್ಯಂತ ಕೋಪಯುಕ್ತನಾಗಿ ಅವಳಿಗೆ ಅಡ್ಡಗಟ್ಟಿ ನಿಂತು ಲಕ್ಷ್ಮಣನನ್ನು ಕುರಿತು " ಲಕ್ಷ್ಮಣ, ಕ್ರೂರಬುದ್ಧಿಯುಳ್ಳ ನೀಚರೊಡನೆ ಪರಿಹಾಸ್ಯ ಮಾಡುವುದು ನೀತಿಯಲ್ಲ. ಈ ರಾಕ್ಷಸಿಯು ಸೀತಾದೇವಿಯನ್ನು ಕ್ರೂರದೃಷ್ಟಿಯಿಂದ ನೋಡುತ್ತಿದ್ದಾಳೆ. ಮದಿಸಿದ ಈ ದುಷ್ಟರಾಕ್ಷಸಿಯನ್ನು ವಿಕಾರಗೊಳಿಸಿ ಹೊರಡಿಸಿ ಬಿಡು " ಎಂದು ಹೇಳಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಶ್ರೀರಾಮನ ಸಂಮುಖದಲ್ಲಿಯೇ ಖಡ್ಗವನ್ನು ತೆಗೆದುಕೊಂಡು ಶೂರ್ಪಣಖಿಯ ಕಿವಿಮೂಗುಗಳನ್ನು ಕತ್ತರಿಸಿದನು. ಅವಳು ಅತ್ಯಂತ ಭಯಂಕರವಾಗಿ ಬೊಬ್ಬಿಟ್ಟು ಬಂದ ಮಾರ್ಗದಿಂದ ತಾನಿದ್ದ ವನಕ್ಕೆ ಹೋಗಿ ಕೈಮೈಯೆಲ್ಲವೂ ರಕ್ತವಾಗಲು ವಿಶೇಷ ಭಯಂಕರವಾಗಿ ವರ್ಷಾಕಾಲದ ಮೇಘದಂತೆ ನಾನಾವಿಧವಾಗಿ ಕೂಗುತ್ತ ಜನಸ್ಥಾನಕ್ಕೆ ಹೋದಳು. ತನ್ನ ಅಣ್ಣನಾದ ಖರನನ್ನು ಕಂಡು ರೋದನಮಾಡುತ್ತ ಗಗನಮಂಡಲದಿಂದ ಸಿಡಿಲು ಬೀಳುವಂತೆ ಅವನ ಮುಂದುಗಡೆಯಲ್ಲಿ ಧುಮುಕಿದಳು. ಅನಂತರ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ಪಂಚವಟೀ ಕ್ಷೇತ್ರಕ್ಕೆ ಬಂದಿರುವ ವೃತ್ತಾಂತವನ್ನೂ ಲಕ್ಷ್ಮಣನು ತನ್ನ ಕಿವಿಮೂಗುಗಳನ್ನು ಕೊಯ್ದ ವೃತ್ತಾಂತವನ್ನೂ ಹೇಳಿಕೊಂಡು ಅತ್ತಳು.

---

೧೯ ನೆಯ ಅಧ್ಯಾಯ

## ಶೂರ್ಪಣಖಿಯು ಖರನಲ್ಲಿ ಮೊರೆಯಿಟ್ಟದ್ದು

ಈರೀತಿಯಲ್ಲಿ ಕಿವಿಮೂಗುಗಳನ್ನು ಕಳೆದುಕೊಂಡು ಮೈಯೆಲ್ಲವೂ ರಕ್ತದಿಂದ ನೆನೆದು ಬಿದ್ದಿದ್ದ ಶೂರ್ಪಣಖಿಯನ್ನು ಕಂಡು ಖರಾಸುರನು ಅವಳನ್ನು ಕುರಿತು "ಎಲೇ ಶೂರ್ಪಣಖಿ, ನಿನ್ನ ವೃತ್ತಾಂತವನ್ನು ಸವಿಶೇಷವಾಗಿ ಹೇಳು. ಕೋಪದಿಂದುಂಟಾದ ಚಿತ್ತಭ್ರಮೆಯನ್ನು ಬಿಡು. ನಿನ್ನನ್ನು ಹೀಗೆ ವಿಕಾರಮಾಡಿದವರಾರು ? ಅಬ್ಬಾ ! ಹಸಿದಿರುವ ಕೃಷ್ಣಸರ್ಪವನ್ನು ಬೆರಳುಗಳಿಂದ ಬೆರಟುವವರುಂಟೆ ? ನಾನು ದೇವತೆಗಳಲ್ಲಿ ಬಲವಂತನಾದ ದೇವೇಂದ್ರನಾಗಿದ್ದರೂ ಹಂಸಪಕ್ಷಿಯು ಕ್ಷೀರೋದಕಗಳನ್ನು ಬೆರಸಿ ಮುಂದಿಟ್ಟರೆ ನೀರನ್ನು ಕಳೆದು ಕ್ಷೀರವನ್ನು ವಿಂಗಡಿಸುವಂತೆ ನಿನ್ನನ್ನು ಕೆಣಕಿದವನ ಶರೀರದಿಂದ ಪ್ರಾಣಗಳನ್ನು ಬೇರ್ಪಡಿಸಿ ತೆಗೆಯುತ್ತೇನೆ. ನಿನ್ನನ್ನು ಕೆಣಕಿದವನು ಯಾರು ? ಹೇಳು. ಅವನನ್ನು ಯುದ್ಧರಂಗದಲ್ಲಿ ಕೊಂದು ಅವನ ರಕ್ತಮಾಂಸಗಳನ್ನು ಭೂತಗಳಿಗೆ ಬಲಿಕೊಡುತ್ತೇನೆ. ಅವನ ಮಾಂಸವನ್ನು ರಣಹದ್ದುಗಳು ಭಕ್ಷಿಸುವಂತೆ ಮಾಡುತ್ತೇನೆ. ಗಂಧರ್ವ ಯಕ್ಷ ರಾಕ್ಷಸ ಪಿಶಾಚರಲ್ಲಿ ಯಾರೂ ನಿನ್ನನ್ನು ಕೆಣಕಿದವನನ್ನು ಉಳಿಸಿಕೊಳ್ಳಲಾರರು. ನೀನು ಚೇತರಿಸಿಕೊಂಡು ಹೀಗೆ ಅವಮಾನಮಾಡಿದವನು ಯಾರೆಂಬುದನ್ನು ತಿಳಿಸು " ಎಂದು ಹೇಳಿದನು.

ಶೂರ್ಪಣಖಿಯು ಕಣ್ಣೀರುಬಿಡುತ್ತ ಆತನನ್ನು ಕುರಿತು "ಎಲೈ ಖರನೆ, ಕೇಳು. ಪಂಚವಟೀ ಕ್ಷೇತ್ರಕ್ಕೆ ಇಬ್ಬರು ರಾಜಕುಮಾರರು ಬಂದಿದ್ದಾರೆ. ಅವರು ರೂಪಸಂಪನ್ನರು, ಯೌವನಸ್ಥರು, ಸುಕುಮಾರಾಂಗವುಳ್ಳವರು, ಮಹಾಬಲವಂತರು, ಕೆಂದಾವರೆಯಂತೆ ವಿಶಾಲವಾದ ಕಣ್ಣುಗಳುಳ್ಳವರು. ನಾರುಬಟ್ಟೆಯನ್ನೂ ಕೃಷ್ಣಾಜಿನಗಳನ್ನೂ ಧರಿಸಿಕೊಂಡಿದ್ದಾರೆ. ಕಂದಮೂಲ ಫಲಾಹಾರಗಳನ್ನು ಮಾಡಿಕೊಂಡು ಜಿತೇಂದ್ರಿಯರಾಗಿ ತಪಸ್ವಿಗಳಾಗಿದ್ದಾರೆ. ಅವರು ದಶರಥರಾಜನ ಕುಮಾರರಂತೆ. ಅವರ ಹೆಸರು ರಾಮಲಕ್ಷ್ಮಣರಂತೆ. ಅವರಿಬ್ಬರೂ ಅಣ್ಣತಮ್ಮಂದಿರು. ರೂಪದಲ್ಲಿ ಗಂಧರ್ವರಿಗೆ ಸಮಾನರು. ಅವರಲ್ಲಿ ಹಿರಿಯವನಿಗೆ ರೂಪ ಲಾವಣ್ಯ ಸೌಂದರ್ಯಸಂಪನ್ನೆಯಾಗಿ ಸರ್ವಾಭರಣಭೂಷಿತೆಯಾಗಿ ಯೌವನವತಿಯಾದ ಸ್ತ್ರೀ ಇದ್ದಾಳೆ. ಆ ಸ್ತ್ರೀನಿಮಿತ್ತವಾಗಿ ಅವರಿಬ್ಬರೂ ಕೂಡಿ ನನಗೆ ಈ ಅವಸ್ಥೆಯನ್ನು ಮಾಡಿದರು. ನಾನು ದಿಕ್ಕಿಲ್ಲದವಳಂತೆ ಅನಾಥೆಯಾಗಿ ಇಂಥ ಅವಸ್ಥೆಯನ್ನು ಪಡೆದೆನು. ಆ ದುಷ್ಟೆಯಾದ ಸ್ತ್ರೀಯ ರಕ್ತವನ್ನು ಅವರಿಬ್ಬರ ರಕ್ತದೊಡನೆ ರಣರಂಗದಲ್ಲಿ ಪಾನಮಾಡಬೇಕೆಂದು ನನ್ನ ಮನಸ್ಸಿನಲ್ಲಿದೆ. ಈ ನನ್ನ ಇಷ್ಟಾರ್ಥವನ್ನು ನೀನೇ ಸಲ್ಲಿಸಿಕೊಡಬೇಕು " ಎಂದು ನುಡಿದಳು.

ಆ ಮಾತನ್ನು ಕೇಳಿ ಖರನು ಅತ್ಯಂತ ಕೋಪಯುಕ್ತನಾಗಿ ಕಾಲಯಮನಂತೆ ಕೋಪಾಟೋಪವುಳ್ಳ ಹದಿನಾಲ್ಕು ಮಂದಿ ಸೇನಾಪತಿಗಳನ್ನು ಕರೆದು "ಎಲೈ ಭಟರುಗಳಿರಾ, ದಂಡಕಾರಣ್ಯಕ್ಕೆ ಇಬ್ಬರು ಮನುಷ್ಯರು ಬಂದಿದ್ದಾರಂತೆ. ಅವರು ನಾರುಬಟ್ಟೆಯನ್ನುಟ್ಟು ಕೃಷ್ಣಾಜಿನಗಳನ್ನು ಹೊದ್ದುಕೊಂಡು ಆಯುಧಪಾಣಿಗಳಾಗಿ ಒಬ್ಬ ಸ್ತ್ರೀಸಮೇತರಾಗಿದ್ದಾರಂತೆ. ಅಲ್ಲಿಗೆ ಹೋಗಿ ಅವರಿಬ್ಬರನ್ನೂ ರಣರಂಗದಲ್ಲಿ ಕೊಂದು ಆ ಸ್ತ್ರೀಯನ್ನು ಹಿಡಿದು ತನ್ನಿ. ಅವರ ರಕ್ತವನ್ನು ಪಾನಮಾಡಬೇಕೆಂದು ನನ್ನ ಒಡಹುಟ್ಟಿದವಳಾದ ಶೂರ್ಪಣಖಿಯು ಬಯಸಿದ್ದಾಳೆ. ನೀವು ಶೀಘ್ರವಾಗಿ ಹೋಗಿ ಬನ್ನಿರಿ " ಎಂದು ಆಜ್ಞಾಪಿಸಿದನು.

ಅದನ್ನು ಕೇಳಿ ಆ ಹದಿನಾಲ್ಕು ಮಂದಿ ಸೇನಾನಾಯಕರು ವಾಯುವಿನಿಂದ ಓಡುವ ಮೇಘಗಳಂತೆ ರಾಮಲಕ್ಷ್ಮಣರ ಬಳಿಗೆ ಧಾವಿಸಿದರು.



೨೦ ನೆಯ ಅಧ್ಯಾಯ

## ಶ್ರೀರಾಮನು ಖರನ ಹದಿನಾಲ್ಕುಮಂದಿ ಸೇನಾಪತಿಗಳನ್ನು ಸಂಹರಿಸಿದ್ದು

ಆಮೇಲೆ ಘೋರಸ್ವರೂಪಿಯಾದ ಶೂರ್ಪಣಖಿಯು ಆ ರಾಕ್ಷಸರನ್ನು ಕರೆದುಕೊಂಡು ಹೋಗಿ ರಾಮನಿದ್ದ ಪರ್ಣಶಾಲೆಯನ್ನು ತೋರಿಸಲು, ಅವರು ಸೀತಾಲಕ್ಷ್ಮಣಸಮೇತನಾಗಿ ಪರ್ಣಶಾಲೆಯಲ್ಲಿ ಕುಳಿತಿದ್ದ ಶ್ರೀರಾಮನನ್ನು ಕಂಡರು. ಶ್ರೀರಾಮನು ಕಿವಿಮೂಗುಗಳನ್ನು ಕೊಯಿಸಿಕೊಂಡು ಹೋದ ಶೂರ್ಪಣಖಿಯನ್ನೂ ಅವಳ ಹಿಂದೆ ಬಂದ ರಾಕ್ಷಸರನ್ನೂ ಕಂಡು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ನೀನು ಸೀತಾದೇವಿಯನ್ನು ರಕ್ಷಿಸಿಕೊಂಡು ಕ್ಷಣಮಾತ್ರವಿರು. ನಾನು ಈ ರಾಕ್ಷಸರನ್ನು ಕೊಂದು ಬರುತ್ತೇನೆ" ಎಂದು ನುಡಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಸೀತಾದೇವಿಯ ಸಮೀಪದಲ್ಲಿ ಅವಳನ್ನು ರಕ್ಷಿಸಿಕೊಂಡಿದ್ದನು. ಶ್ರೀರಾಮನು ಚಿನ್ನದ ಕಟ್ಟುಗಳಿಂದ ಅಲಂಕರಿಸಲ್ಪಟ್ಟ ಬಿಲ್ಲನ್ನು ತೆಗೆದುಕೊಂಡು ಹೆದೆಯನ್ನೇರಿಸಿ ಆ ರಾಕ್ಷಸರನ್ನು ಕುರಿತು "ಎಲೇ ರಾಕ್ಷಸರುಗಳಿರಾ, ನಾವು ದಶರಥರಾಜನ ಪುತ್ರರು. ನಮ್ಮ ಹೆಸರು ರಾಮಲಕ್ಷ್ಮಣರು. ನಾವಿಬ್ಬರೂ ಅಣ್ಣತಮ್ಮಂದಿರು. ನಾವು ಸೀತಾದೇವಿಯ ಸಹಿತವಾಗಿ ದಂಡಕಾರಣ್ಯಕ್ಕೆ ಬಂದೆವು. ಇಲ್ಲಿ ಕಂದಮೂಲಫಲಾಹಾರಗಳನ್ನು ಮಾಡಿಕೊಂಡು ವ್ರತಸ್ಥರಾಗಿದ್ದೇವೆ. ಅರಣ್ಯವಾಸಿಗಳಾದ ನಮ್ಮನ್ನು ನೀವು ಏಕೆ ಹಿಂಸೆಮಾಡಬೇಕೆಂದು ಬಂದಿರಿ? ಇಲ್ಲಿರುವ ಋಷಿಗಳು ನಮ್ಮನ್ನು ಕುರಿತು 'ಈ ಅರಣ್ಯದಲ್ಲಿ ಬ್ರಹ್ಮಘಾತಿಗಳಾದ ರಾಕ್ಷಸರು ಬಹುಮಂದಿ ಇದ್ದಾರೆ. ನಮಗೆ ಆ ರಾಕ್ಷಸರಿಂದ ಭಯವುಂಟಾಗಿದೆ. ಆ ರಾಕ್ಷಸರನ್ನು ಕೊಂದು ನಮ್ಮ ಭಯವನ್ನು ಪರಿಹರಿಸಿ ರಕ್ಷಿಸು' ಎಂದು ಪ್ರಾರ್ಥಿಸಲು ನಾವು ಅವರ ಆಜ್ಞೆಯಿಂದ ಆಯುಧಪಾಣಿಗಳಾಗಿ ಯುದ್ಧಸಂನದ್ಧರಾಗಿದ್ದೇವೆ. ಎಲೇ ರಾಕ್ಷಸರುಗಳಿರಾ, ನೀವು ಪ್ರಾಣಗಳನ್ನು ಉಳಿಸಿಕೊಳ್ಳಬೇಕೆಂಬ ಪಕ್ಷದಲ್ಲಿ ಶೀಘ್ರವಾಗಿ ಓಡಿ" ಎಂದು ನುಡಿದನು.

ಆ ರಾಕ್ಷಸರು ಕೋಪಯುಕ್ತರಾಗಿ ತಮ್ಮ ಕೈಗಳಲ್ಲಿದ್ದ ತ್ರಿಶೂಲಗಳನ್ನು ಮೇಲಕ್ಕೆ ನೆಗಹಿಕೊಂಡು ಕೂಗುತ್ತ "ಎಲೈ ರಾಮ, ನೀನು ನಮ್ಮ ಒಡೆಯನಾದ ಖರನ ತಂಗಿಯಾದ ಶೂರ್ಪಣಖಿಯ ಕಿವಿಮೂಗುಗಳನ್ನು ಕತ್ತರಿಸಿ ಆತನಿಗೆ ಬಹಳ ದ್ರೋಹವನ್ನು ಮಾಡಿದ್ದೀಯೆ. ಆತನು ಅತ್ಯಂತ ಕೋಪಯುಕ್ತನಾಗಿ ನಮ್ಮನ್ನು ಕಳುಹಿಸಿದನು. ನಾವು ನಿಮ್ಮನ್ನು ಬಿಡುವುದಿಲ್ಲ. ನೀನು ರಣರಂಗದಲ್ಲಿ ಯುದ್ಧಕ್ಕೆ ನಿಂತೆಯಾದರೆ ನಿನ್ನ ಪ್ರಾಣಗಳು ನಿಲ್ಲಲಾರವು. ಏಕಾಕಿಯಾದ ನಿನಗೆ ನಮ್ಮಿಷ್ಟುಮಂದಿಯೊಡನೆ ಯುದ್ಧಮಾಡುವುದಕ್ಕೆ ಶಕ್ತಿಯೆತ್ತಣದು? ನೀನು ನಮ್ಮ ಮುಂದೆ ನಿಲ್ಲುವುದಕ್ಕೆ ಸಮರ್ಥನಲ್ಲ. ಯುದ್ಧಮಾಡಿದೆಯಾದರೆ ನಮ್ಮ ಕೈಯಲ್ಲಿರುವ ಶೂಲ ಕರವಾಳ ಭಿಂಡಿವಾಳ ತೋಮರ ಮುದ್ಗರ ಪಟ್ಟಸಗಳಿಂದ ನಿನ್ನ ಕೈಯಲ್ಲಿರುವ ಬಿಲ್ಲು ಬಾಣಗಳೂ ನಿನ್ನ ಪ್ರಾಣಗಳೂ ಹೋಗುವವಲ್ಲದೆ ನಿಲ್ಲಲಾರವು" ಎಂದು ನುಡಿದು ತಮ್ಮ ಆಯುಧಗಳನ್ನು

ಶ್ರೀರಾಮನ ಮೇಲೆ ಪ್ರಯೋಗಿಸಿದರು. ಶ್ರೀರಾಮನು ಆ ರಾಕ್ಷಸರು ಪ್ರಯೋಗಿಸಿದ ಹದಿನಾಲ್ಕು ಶೂಲಗಳನ್ನೂ ಹದಿನಾಲ್ಕು ಬಾಣಗಳಿಂದ ಕತ್ತರಿಸಿ ಮಹಾಬಲಪರಾಕ್ರಮಿಯಾಗಿ ಮೆರೆಯುತ್ತ ಸಾಣೆಯಿಕ್ಕಲ್ಪಟ್ಟ ಸೂರ್ಯನ ಪ್ರಭೆಗೆ ಸಮಾನವಾದ ಕೂರಲಗುಗಳುಳ್ಳ ಹದಿನಾಲ್ಕು ಬಾಣಗಳನ್ನು ಆ ರಾಕ್ಷಸರ ಮೇಲೆ ಪ್ರಯೋಗಿಸಿದನು. ಆ ಅಂಬುಗಳು ಆ ಹದಿನಾಲ್ಕುಮಂದಿ ರಾಕ್ಷಸರ ಶರೀರ ಗಳನ್ನು ಉಚ್ಛಳಿಸಿ ಅವರ ರಕ್ತದಿಂದ ನೆನೆದು, ಹುತ್ತದಿಂದ ಕೋಪಾಟೋಪದಿಂದ ಅಪ್ಪಳಿಸಿ ಭೂಮಿಗೆ ಬೀಳುವ ಸರ್ಪಗಳಂತೆ ಭೂಮಿಯ ಮೇಲೆ ಬಿದ್ದವು. ಗಾಯವಡೆದ ಆ ರಾಕ್ಷಸರು ಕತ್ತರಿಸಲ್ಪಟ್ಟ ಮರಗಳಂತೆ ಭೂಮಿಯ ಮೇಲೆ ಬಿದ್ದರು. ಅದನ್ನು ಕಂಡು ಶೂರ್ಪಣಖಿಯು ಕಂಗೆಟ್ಟು ಬೊಬ್ಬಿಡುತ್ತ ಶರೀರದ ಮೇಲಣ ರಕ್ತವನ್ನು ಒರಸಿಕೊಳ್ಳುತ್ತ ಖರನ ಸಮೀಪಕ್ಕೆ ಹೋಗಿ ಮೊರೆಯಿಡುತ್ತ ಕತ್ತರಿಸಲ್ಪಟ್ಟ ಬಳ್ಳಿಯಂತೆ ದೊಪ್ಪನೆ ಬಿದ್ದಳು.



೨೦ ನೆಯ ಅಧ್ಯಾಯ

## ಶೂರ್ಪಣಖಿಯು ಪುನಃ ಖರನಲ್ಲಿ ಮೊರೆಯಿಟ್ಟದ್ದು

ಆ ಮೇಲೆ ಅಪಜಯವಾರ್ತೆಯನ್ನು ಹೇಳುವುದಕ್ಕೂ ಚೈತನ್ಯವಿಲ್ಲದೆ ಇದ್ದ ಶೂರ್ಪಣಖಿಯನ್ನು ಕಂಡು ಖರನು “ಎಲೇ ಶೂರ್ಪಣಖಿ, ನಿನ್ನ ನಿಮಿತ್ತವಾಗಿ ಅತಿ ಪರಾಕ್ರಮಿಗಳಾದ ರಾಕ್ಷಸರನ್ನು ಕಳಿಸಿದ್ದೇನೆ. ಆ ರಾಕ್ಷಸರು ನನಗೆ ಭಕ್ತರಾದವರು. ನನ್ನ ಕಾರ್ಯಗಳಲ್ಲಿ ಯಾವಾಗಲೂ ವಿಶ್ವಾಸವುಳ್ಳವರು. ಒಬ್ಬರನ್ನು ಕೊಲ್ಲುವರಲ್ಲದೆ ಒಬ್ಬರ ಕೈಯಲ್ಲಿ ಕೊಲ್ಲಿಸಿಕೊಳ್ಳುವವರಲ್ಲ. ನನ್ನ ಮಾತನ್ನು ಮೀರುವವರಲ್ಲ. ಅಂಥ ರಾಕ್ಷಸರನ್ನು ನಿನ್ನ ನಿಮಿತ್ತವಾಗಿ ಕಳುಹಿಸಿದಮೇಲೆ ನೀನು ಪುನಃ ಏಕೆ ರೋದನಮಾಡುತ್ತ ದಿಕ್ಕಿಲ್ಲದ ಸ್ತ್ರೀಯಂತೆ ಭೂಮಿಯಲ್ಲಿ ಹೊರಳಿ ಹಂಬಲಿಸುತ್ತೀಯೆ? ಏಳು ಏಳು, ಅಂಜಬೇಡ” ಎಂದು ಹೇಳಿದನು.

ಆ ಮಾತನ್ನು ಕೇಳಿ ಶೂರ್ಪಣಖಿಯು ತರಹರಿಸಿಕೊಂಡು ಕಣ್ಣೀರನ್ನು ತೊಡೆದುಕೊಂಡು ಖರನನ್ನು ಕುರಿತು ಹೀಗೆಂದಳು: “ಎಲೈ ಖರನೇ, ಕಿವಿಮೂಗುಗಳನ್ನು ಕಳೆದುಕೊಂಡ ನನ್ನನ್ನು ಸಂತವಿಟ್ಟು ನನ್ನೊಡನೆ ಹದಿನಾಲ್ಕುಮಂದಿ ರಾಕ್ಷಸರನ್ನು ನೀನು ಕಳುಹಿಸಿದೆ. ಅವರೆಲ್ಲರೂ ಸಮರದಲ್ಲಿ ರಾಮನ ಮರ್ಮಭೇದಿಗಳಾದ ಶರಗಳಿಂದ ಹತರಾಗಿ ಭೂಮಿಯ ಮೇಲೆ ಬಿದ್ದರು. ಹಾಗೆ ಬಿದ್ದ ಮಹಾಬಲವಂತರಾದ ಆ ರಾಕ್ಷಸರನ್ನೂ ರಾಮನ ಪರಾಕ್ರಮವನ್ನೂ ಕಂಡು ನನ್ನ ಮನಸ್ಸಿಗೆ ಬಹು ಭಯವು ಹುಟ್ಟಿದೆ. ಆದಕಾರಣ ನಾನು ನಿನ್ನ ಮರೆಹೊಕ್ಕೆನು. ಶೋಕವೆಂಬ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ರಕ್ಷಿಸು. ಆತನ ಶರಗಳಿಂದ ನೀನು ಕಳುಹಿಸಿದ ರಾಕ್ಷಸರೆಲ್ಲರೂ ಹತರಾದರು. ನಿನಗೆ ರಾಕ್ಷಸರಲ್ಲಿಯೂ ನನ್ನಲ್ಲಿಯೂ ದಯೆಯೂ ರಾಮನೊಡನೆ ರಣರಂಗದಲ್ಲಿ ಎದುರಾಗಿ ನಿಲ್ಲುವದಕ್ಕೆ ಶಕ್ತಿಯೂ ಇದ್ದ ಪಕ್ಷದಲ್ಲಿ ದಂಡಕಾರಣ್ಯದಲ್ಲಿರುವ ರಾಕ್ಷಸರ ಕಂಟಕನಾದ ರಾಮನನ್ನು ಸಂಹರಿಸು. ಹೇಗಾದರೂ ಶತ್ರುಸಂಹಾರಕನಾದ ರಾಮನನ್ನು ಕೊಲ್ಲದಿದ್ದರೆ ನಾನು ನಿನ್ನ ಕಣ್ಣಮುಂದೆಯೇ ಪ್ರಾಣಗಳನ್ನು ಬಿಡುವೆನು. ರಾಮನು ರಣರಂಗದಲ್ಲಿ ಬಿಲ್ಲುಗೊಂಡು ನಿಂತರೆ ಆತನಿಗೆದುರಾಗಿ ನೀನು ನಿಲ್ಲಲಾರೆಯೆಂದು ನನ್ನ ಬುದ್ಧಿಗೆ ತೋರುತ್ತದೆ. ನಿನ್ನ ಪರಾಕ್ರಮವು ಮಿಥ್ಯಾಕಲ್ಪಿತವಲ್ಲದೆ ಸ್ವಾಭಾವಿಕವಾದದ್ದಲ್ಲ. ರಾಕ್ಷಸನಾಯಕನಾದ ನೀನು ರಣರಂಗದಲ್ಲಿ

ಮನುಷ್ಯರಾದ ರಾಮಲಕ್ಷ್ಮಣರನ್ನು ಕೊಲ್ಲುವುದಕ್ಕೆ ಸಮರ್ಥನಲ್ಲದ ಮೇಲೆ ಹೇಡಿಯಾದ ನಿನಗೆ ಈ ಜನಸ್ಥಾನದಲ್ಲಿ ವಾಸವು ಸಲ್ಲದು. ನೀನು ನಿನ್ನ ಬಂಧುಗಳನ್ನು ಕೂಡಿಕೊಂಡು ಈ ಸ್ಥಾನವನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ಹೋಗು. ಅಲ್ಲದಿದ್ದರೆ ರಾಮನ ಪರಾಕ್ರಮದಿಂದ ಶೀಘ್ರವಾಗಿ ನಾಶವನ್ನೈದುವೆ. ದಶರಥರಾಜನ ಕುಮಾರರಾದ ರಾಮಲಕ್ಷ್ಮಣರು ಅತಿಪರಾಕ್ರಮಿಗಳಲ್ಲದ ಪಕ್ಷದಲ್ಲಿ ನನ್ನನ್ನು ಹೀಗೆ ವಿಕಾರಮಾಡಲಾರರು" ಎಂದು ಹಂಬಲಿಸುತ್ತ ಎದೆಬಡಿದುಕೊಂಡು ದುಃಖಾತಿಶಯದಿಂದ ಗೋಳಾಡತೊಡಗಿದಳು.

---

## ೨೨ ನೆಯ ಅಧ್ಯಾಯ

## ಖರನು ಶ್ರೀರಾಮನಮೇಲೆ ಯುದ್ಧಕ್ಕೆ ಹೊರಟದ್ದು

ಈ ರೀತಿಯಲ್ಲಿ ಶೂರ್ಪಣಖಿಯಿಂದ ನಿರಾಕರಿಸಿ ನುಡಿಯಲ್ಪಟ್ಟ ಖರನು ಸಮಸ್ತ ರಾಕ್ಷಸರ ಮಧ್ಯದಲ್ಲಿ ಶೂರ್ಪಣಖಿಯನ್ನು ಕುರಿತು ಈ ಪ್ರಕಾರ ಹೇಳಿದನು: "ಎಲೇ ಶೂರ್ಪಣಖಿ, ಸಮುದ್ರದಂತೆ ಉಬ್ಬಿದ ನನ್ನ ಪರಾಕ್ರಮವನ್ನು ಸಹಿಸುವುದಕ್ಕೆ ಒಬ್ಬರೂ ಸಮರ್ಥರಲ್ಲ. ಹಾಗಿರುವಲ್ಲಿ ನಾನು ಅಲ್ಪಾಯುಷ್ಯವುಳ್ಳ ಮನುಷ್ಯನಾದ ರಾಮನನ್ನು ಲೆಕ್ಕಿಸುವೆನೆ? ಆತನು ತನ್ನ ದುಶ್ಚರಿತ್ರಗಳಿಂದ ಗರ್ವಿಸಿ ನನಗಿದಿರಾಗಿ ಸಮರಕ್ಕೆ ನಿಂತು ಪ್ರಾಣಗಳನ್ನು ಬಿಡುವನು. ಎಲೇ ಶೂರ್ಪಣಖಿ, ನೀನು ಕಣ್ಣೀರನ್ನು ಸುರಿಸಬೇಡ. ನಿನ್ನ ಮನಸ್ಸಿನ ಭಯವನ್ನೂ ಚಿಂತೆಯನ್ನೂ ಬಿಡು. ನಾನು ಲಕ್ಷ್ಮಣಸಮೇತನಾದ ರಾಮನನ್ನು ಯಮನ ಮಂದಿರಕ್ಕೆ ಕಳುಹಿಸುತ್ತೇನೆ. ನನ್ನ ಕೊಡಲಿಯ ಪೆಟ್ಟಿನಿಂದ ಗಾಯವಡೆದು ಭೂಮಿಯ ಮೇಲೆ ಬೀಳುವ ರಾಮನ ಬಿಸಿರಕ್ತವನ್ನು ನೀನು ಪಾನಮಾಡುವೆ" ಎಂದು ಪರಾಕ್ರಮದ ಮಾತುಗಳನ್ನು ನುಡಿದನು.

ಆ ಮಾತನ್ನು ಕೇಳಿ ಶೂರ್ಪಣಖಿಯು ಮೂರ್ಖತನದಿಂದ ಹಿಗ್ಗಿ ಖರನನ್ನು ಬಹಳವಾಗಿ ಕೊಂಡಾಡಿದಳು. ಆಗ ಉಬ್ಬಿಕೊಬ್ಬಿದ ಖರನು ತನ್ನ ಸೇನಾಪತಿಯಾದ ದೂಷಣನನ್ನು ಕುರಿತು ಹೀಗೆ ಆಜ್ಞಾಪಿಸಿದನು: "ಎಲೈ ದೂಷಣ, ನನ್ನ ಆಜ್ಞೆಯಂತೆ ನಡೆಯುವ ಮಹಾ ಪರಾಕ್ರಮಿಗಳಾದ ಹದಿನಾಲ್ಕುಸಾವಿರಮಂದಿ ರಾಕ್ಷಸರನ್ನು ಸಂನದ್ಧರಾಗಲು ಆಜ್ಞೆಮಾಡಿ ಶೀಘ್ರಗತಿಯುಳ್ಳ ನನ್ನ ರಥವನ್ನು ಮೇಳೈಸು. ಬಿಲ್ಲು ಬಾಣ ಖಡ್ಗ ಶಕ್ತಿ ಮೊದಲಾದ ಆಯುಧಗಳನ್ನು ತರಿಸು. ಪುಲಸ್ತ್ಯ ಬ್ರಹ್ಮನ ವಂಶದಲ್ಲಿ ಹುಟ್ಟಿ ಮಹಾತ್ಮರಾದ ರಾಕ್ಷಸರಿಗೆ ನಾನು ಅಗ್ರೇಸರನಾಗಿ ವಧೆಗೆ ಸಿದ್ಧನಾಗಿದ್ದೇನೆ.* ರಾಮಲಕ್ಷ್ಮಣರನ್ನು ಕೊಲ್ಲುವುದಕ್ಕೆ ನಾವು ಈಗ ಹೋಗೋಣ" ಎಂದು ಹೇಳಿದನು.

ದೂಷಣನು ಮಹಾಪ್ರಸಾದವೆಂದು ಅಂಗೀಕರಿಸಿ ಸುವರ್ಣಮಯವಾದ ಮಹಾ ರಥವನ್ನು ಧೂಮ್ರವರ್ಣವಾದ ಕುದುರೆಗಳಿಂದ ಸಜ್ಜುಮಾಡಿ ತಂದು ಖರನಿಗೆ ತಿಳಿಸಿದನು. ಆತನು ರತ್ನಖಚಿತವಾಗಿಯೂ ಅತ್ಯುನ್ನತವಾದ ಧ್ವಜಸ್ತಂಭವುಳ್ಳದ್ದಾಗಿಯೂ ಚಿನ್ನದ ಕಿರುಘಂಟೆಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ ಉತ್ತಮಾಶ್ವಗಳಿಂದ ಮೇಳೈಸಿಯೂ ಇದ್ದ ಆ ರಥವನ್ನೇರಿಕೊಂಡು ಶ್ರೀರಾಮನೊಡನೆ ಯುದ್ಧಾರ್ಥವಾಗಿ

---

* ರಾಮಲಕ್ಷ್ಮಣರನ್ನು ವಧಿಸುವುದಕ್ಕೆ ಸಿದ್ಧನಾಗಿದ್ದೇನೆಂದು ಖರನ ಅಭಿಪ್ರಾಯ. 'ನನ್ನ ವಧೆಗೆ ನಾನು ಸಿದ್ಧನಾಗಿದ್ದೇನೆ' ಎಂಬ ಅರ್ಥವೂ ಇಲ್ಲಿ ತೋರುತ್ತದೆ. ಇದು ದೈವವಿಲಾಸ.

ಹೊರಟನು. ಸಮಸ್ತ ರಾಕ್ಷಸರೂ ತನ್ನ ರಥದ ಸುತ್ತಲೂ ನಿಂತಿರಲು ಅವರನ್ನು ಯುದ್ಧ ಸನ್ನದ್ಧರಾಗಿ ಹೊರಟುಬರಹೇಳಿ ಮುದ್ಗರ, ಪಟ್ಟಿಸ, ತ್ರಿಶೂಲ, ಪರಶು, ಕೊಡಲಿ, ಖಡ್ಗ, ಚಕ್ರ, ತೋಮರ, ಶಕ್ತಿ, ಪರಿಘ, ಭಿಂದಿವಾಲ, ಬಿಲ್ಲು, ಗದೆ, ವಜ್ರ ಮೊದಲಾದ ಆಯುಧಗಳನ್ನು ತೆಗೆದು ಕೊಂಡು ಹದಿನಾಲ್ಕು ಸಾವಿರ ಮಂದಿ ರಾಕ್ಷಸರು ಹಿಂದೆ ಬರುತ್ತಿರಲು ಜನಸ್ಥಾನದಿಂದ ಶ್ರೀರಾಮನು ಇದ್ದೆಡೆಗೆ ಹೊರಟನು. ಆಗ ಸಾರಥಿಯು ಖರನ ಕೋಪಾಟೋಪವನ್ನೂ ಆತನ ವ್ಯಗ್ರತೆಯನ್ನೂ ತಿಳಿದು ರಥಕ್ಕೆ ಕಟ್ಟಿದ ಕುದುರೆಗಳನ್ನು ಚಬುಕುಮಾಡಲು ಆ ಕುದುರೆಗಳು ಅತಿವೇಗದಿಂದ ಹೊರಟವು.



೨೩ ನೆಯ ಅಧ್ಯಾಯ

## ಖರನು ದುರ್ನಿಮಿತ್ತಗಳನ್ನು ಕಂಡದ್ದು

ಈ ರೀತಿಯಲ್ಲಿ ಖರನು ಸಮಸ್ತ ಬಲಗಳನ್ನೂ ಕೂಡಿಕೊಂಡು ಶ್ರೀರಾಮನಮೇಲೆ ಯುದ್ಧಕ್ಕೆ ಬರುವಾಗ ದುರ್ನಿಮಿತ್ತಸೂಚಕವಾದ ಅನೇಕ ಉತ್ಪಾತಗಳಾದವು. ಮೇಘವು ಹೇಸರಕತ್ತೆಯ ರೋಮಗಳಂತೆ ಧೂಮ್ರವರ್ಣವಾಗಿ ಖರನ ಬಲದಮೇಲೆ ರಕ್ತದ ಮಳೆಯನ್ನು ಕರೆಯಿತು. ಸುಗಂಧೋದಕದಿಂದ ಚಿಮುಕಿಸಲ್ಪಟ್ಟು ಪುಷ್ಪಮಾಲಿಕೆಗಳಿಂದಲೂ ತೋರಣಪತಾಕೆಗಳಿಂದಲೂ ಅಲಂಕರಿಸಲ್ಪಟ್ಟು ಸಮಸ್ಥಳವಾಗಿದ್ದ ರಾಜಬೀದಿಯಲ್ಲಿ ರಥಕ್ಕೆ ಕಟ್ಟಿದ ಕುದುರೆಗಳು ಮುಗ್ಗರಿಸಿ ಬೀಳುತ್ತಿದ್ದವು. ಸೂರ್ಯನು ಧೂಮ್ರವರ್ಣನಾಗಿ ಕಾಣಿಸುತ್ತಿದ್ದನು. ಖರನ ರಥದ ಮೇಲೆ ಒಂದು ಹದ್ದು ಕುಳಿತುಕೊಂಡಿತು. ಜನಸ್ಥಾನದ ಸಮೀಪದಲ್ಲಿ ಅನೇಕ ಮೃಗಪಕ್ಷಿಗಳು ಗಾರ್ದಭ ಗಳಂತೆ ಭಯಂಕರವಾದ ಧ್ವನಿಮಾಡುತ್ತಿದ್ದುವು. ಎಲ್ಲ ದಿಕ್ಕುಗಳಲ್ಲಿಯೂ ನರಿಗಳು ವಿಕಾರವಾಗಿ ಕೂಗುತ್ತಿದ್ದವು. ಅಂತರಿಕ್ಷಮಾರ್ಗದಲ್ಲಿ ದಟ್ಟವಾದ ಅಂಧಕಾರವು ಕವಿಯಿತು. ಘೋರವಾದ ಮೃಗಗಳೂ ಗಾರ್ದಭಗಳೂ ಖರನಿಗೆದುರಾಗಿ ಭಯಂಕರವಾಗಿ ಕೂಗುತ್ತ ಬರುತ್ತಿದ್ದವು. ನರಿಗಳು ಅಡ್ಡಗಟ್ಟುತ್ತ ಬಾಯಿಗಳಿಂದ ಕಿಡಿಗಳನ್ನುಗುಳುತ್ತಿದ್ದವು. ಪರ್ವಕಾಲವಲ್ಲದಿದ್ದರೂ ಸೂರ್ಯ ಗ್ರಹಣವಾಯಿತು. ಹಗಲಿನಲ್ಲಿ ಮಿಂಚುಹುಳಗಳಂತೆ ನಕ್ಷತ್ರಗಳು ಬೀಳುತ್ತಿದ್ದವು. ಗೊರವನ ಹಕ್ಕಿಗಳು ಭಯಂಕರವಾಗಿ ಕೂಗುತ್ತಿದ್ದವು. ಸಿಡಿಲೊಡನೆ ಕೂಡಿದ ಕಿಡಿಗಳುದುರುತ್ತಿದ್ದವು. ಗಿರಿಕಾನನಸಹಿತವಾಗಿ ಭೂಮಿಯು ನಡುಗುತ್ತಿತ್ತು. ರಥಾರೂಢನಾಗಿ ಬೊಬ್ಬಿಡುತ್ತ ನಾನಾ ದಿಕ್ಕುಗಳನ್ನು ನೋಡುತ್ತಿದ್ದ ಖರನ ಕಣ್ಣುಗಳಲ್ಲಿ ನೀರು ಮೊಸಗುತ್ತಿತ್ತು. ಆತನ ಹಣೆಯಲ್ಲಿ ಬೆವರು ಸುರಿದು ಮನಸ್ಸಿನಲ್ಲಿ ಭ್ರಮೆಹುಟ್ಟಿ ಸ್ವರಗುಂದಿತು.

ಈ ರೀತಿಯಲ್ಲಿ ಆದ ಉತ್ಪಾತಗಳನ್ನು ಕಂಡು ಖರನು ತನ್ನ ರಾಕ್ಷಸಭಟರನ್ನು ಕುರಿತು "ಎಲೈ ರಾಕ್ಷಸರುಗಳಿರಾ, ದುರ್ನಿಮಿತ್ತಸೂಚಕವಾದ ಈ ಉತ್ಪಾತಗಳನ್ನು ನಾನು ಲೆಕ್ಕಿಸುವವನಲ್ಲ. ನನ್ನ ಪರಾಕ್ರಮಾತಿಶಯದಿಂದ ಶತ್ರುಗಳು ಎಷ್ಟು ಬಲವಂತರಾದರೂ ಬಲಹೀನರೆಂದೇ ಎಣಿಸುವೆನು. ನನ್ನ ನಿಶಿತಶರಗಳಿಂದ ಆಕಾಶದಲ್ಲಿರುವ ನಕ್ಷತ್ರಗಳನ್ನಾದರೂ ಭೂಮಿಗೆ ಕೆಡಹುವೆನು. ಯುದ್ಧರಂಗದಲ್ಲಿ ಮೃತ್ಯುವನ್ನಾದರೂ ಕೊಲ್ಲುವೆನು. ಬಲಗರ್ವಿತನಾದ ಶ್ರೀರಾಮನನ್ನೂ ಆತನ ತಮ್ಮನಾದ ಲಕ್ಷ್ಮಣನನ್ನೂ ನನ್ನ ಕೂರಂಬುಗಳಿಂದ ಕೊಲ್ಲದೆ ತಿರುಗಿ ಬಾರೆನು. ಶೂರ್ಪಣಖಿಯು

ನಿಮಿತ್ತವಾಗಿ ರಾಮಲಕ್ಷ್ಮಣರು ನಾಶವಾಗುವರು. ಆಕೆಯು ಅವರ ರಕ್ತಪಾನವನ್ನು ಮಾಡಿ ತನ್ನ ಮನಸ್ಸಿನ ಇಷ್ಟವನ್ನು ಸಲ್ಲಿಸಿಕೊಳ್ಳುವಳು. ನಾನು ಯಾವ ಯುದ್ಧರಂಗದಲ್ಲಿಯಾದರೂ ಅಪಜಯವನ್ನು ಪಡೆದವನಲ್ಲ. ಇದನ್ನು ನೀವು ಪ್ರತ್ಯಕ್ಷವಾಗಿ ಕಂಡಿದ್ದೀರಿ. ನಾನು ಹುಸಿಯನ್ನು ನುಡಿಯುವವನಲ್ಲ. ಯುದ್ಧರಂಗದಲ್ಲಿ ಕೋಪಿಸಿದೆನಾದರೆ ವಜ್ರಪಾಣಿಯಾದ ದೇವೇಂದ್ರನನ್ನಾದರೂ ಕೊಲ್ಲುವೆನು. ಈ ಹುಲ್ಲುಮನುಷ್ಯರ ಕೂಟ ಎಷ್ಟರದು ? " ಎಂದು ಬೊಬ್ಬಿಡುತ್ತಿದ್ದನು.

ಆತನ ಗರ್ಜಿತಧ್ವನಿಯನ್ನು ಕೇಳುತ್ತ ಆ ರಾಕ್ಷಸರ ಸೇನೆಯು ಮುಂದೆ ಬರುವ ಮೃತ್ಯುಪಾಶ ಬಂಧನವನ್ನರಿಯದೆ ಸಂತೋಷದಿಂದ ಉಬ್ಬುತ್ತಿದ್ದಿತು. ಶ್ಯೇನಗಾಮಿ, ಪೃಥುಗ್ರೀವ, ಯಜ್ಞಶತ್ರು, ವಿಹಂಗಮ, ದುರ್ಜಯ, ಕರವೀರಾಕ್ಷ, ಪರುಷ, ಕಾಲಕಾರ್ಮುಕ, ಮೇಘಮಾಲಿ, ಮಹಾಮಾಲಿ, ಸರ್ಪಾಸ್ಯ, ರುಧಿರಾಶನ ಎಂಬ ಹನ್ನೆರಡು ಮಂದಿ ಮಹಾರಥಿಕರು ಖರನ ರಥದ ಸುತ್ತಲೂ ನಡೆಯುತ್ತಿದ್ದರು. ಮಹಾಕಪಾಲ, ಸ್ಥೂಲಾಕ್ಷ, ಪ್ರಮಾಥಿ, ತ್ರಿಶಿರ ಎಂಬ ನಾಲ್ಕು ಮಂದಿ ರಥಿಕರು ದೂಷಣನ ಹಿಂದೆ ನಡೆಯುತ್ತಿದ್ದರು. ಈ ರೀತಿಯಲ್ಲಿ ಭಯಂಕರರಾದ ರಾಕ್ಷಸರು, ಅಂಗಾರಕಾದಿ ಗ್ರಹಗಳು ಚಂದ್ರಸೂರ್ಯರ ಬಳಿಗೆ ಬರುವಂತೆ ರಾಮಲಕ್ಷ್ಮಣರ ಬಳಿಗೆ ಬರುತ್ತಿದ್ದರು.



## ೨೪ ನೆಯ ಅಧ್ಯಾಯ

## ರಾಕ್ಷಸಸೇನೆಯು ಶ್ರೀರಾಮನನ್ನು ಸುತ್ತಿಕೊಂಡದ್ದು

ಈ ಪ್ರಕಾರ ಪರಾಕ್ರಮಿಯಾದ ಖರನು ಶ್ರೀರಾಮನ ಆಶ್ರಮಕ್ಕೆ ಬರುತ್ತಿದ್ದಾಗ ಆದ ಉತ್ಪಾತಗಳನ್ನು ನೋಡಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಹೀಗೆಂದನು : " ಲಕ್ಷ್ಮಣ, ಖರನು ನಮ್ಮೊಡನೆ ಯುದ್ಧಕ್ಕೆ ಬರುತ್ತಿದ್ದಾನೆ. ಆತನ ಮಾರ್ಗದಲ್ಲಿ ತೋರುವ ಉತ್ಪಾತಗಳು ಸಮಸ್ತ ಪ್ರಾಣಿಗಳಿಗೂ ಭಯವನ್ನುಂಟುಮಾಡುವಂಥವು. ಈ ದುರ್ನಿಮಿತ್ತಗಳು ನಾವು ರಾಕ್ಷಸರನ್ನು ಸಂಹಾರಮಾಡುವುದಕ್ಕೆ ಸೂಚಕವಾಗಿವೆ. ಅಂತರಿಕ್ಷಮಾರ್ಗದಲ್ಲಿ ಧೂಮ್ರವರ್ಣವಾಗಿ ಭಯಂಕರವಾದ ಮೇಘಗಳು ರಕ್ತಧಾರೆಗಳನ್ನು ಕರೆಯುತ್ತಿವೆ. ನನ್ನ ಶರಗಳು ಕಿಡಿಗಳನ್ನುಗುಳುತ್ತ ತ್ವರೆಮಾಡುತ್ತಿವೆ. ನಮ್ಮ ಮುಂದೆ ಇರುವ ಪಕ್ಷಿಗಳು ಯುದ್ಧಕ್ಕೆ ಬರುವ ಖರನಿಗೆ ನಮ್ಮಿಂದ ಭಯವುಂಟೆಂದು ಸಾರುತ್ತಿವೆಯೋ ಎಂಬಂತೆ ಸ್ವರಗೈಯುತ್ತಿವೆ. ರಾಕ್ಷಸರಿಗೆ ನಮ್ಮಿಂದ ಹಾನಿಯುಂಟಾಗುವುದರಲ್ಲಿ ಸಂದೇಹವಿಲ್ಲ. ಏಕೆಂದರೆ, ನನ್ನ ಬಲತೋಳು ಅಡಿಗಡಿಗೆ ಹಾರುತ್ತಿದೆ. ನಿನ್ನ ಮುಖವು ಕಾಂತಿಯುಕ್ತವಾಗಿ ಪ್ರಸನ್ನವಾಗಿದೆ. ಬೊಬ್ಬಿಡುವ ರಾಕ್ಷಸರ ಧ್ವನಿಯೂ ಭೇರಿತಾಳಾದಿಗಳ ಧ್ವನಿಯೂ ಮಹಾಭಯಂಕರವಾಗಿ ಕೇಳಿಸುತ್ತಿವ. ಲೋಕದಲ್ಲಿ, ಒಬ್ಬನಿಂದ ಉಪದ್ರವವು ಬರುವುದೆಂದು ತಿಳಿದರೆ ಆ ಉಪದ್ರವವು ಪ್ರಾಪ್ತವಾಗುವುದಕ್ಕೆ ಮೊದಲೇ ಪ್ರತೀಕಾರವನ್ನು ಹುಡುಕುವುದು ಬುದ್ಧಿವಂತರ ಕಾರ್ಯ. ಆದ್ದರಿಂದ ನೀನು ಬಿಲ್ಲಂಬುಗಳನ್ನು ತೆಗೆದುಕೊಂಡು ಸೀತಾದೇವಿಯನ್ನು ಕರೆದುಕೊಂಡು ಪರ್ವತದ ಗುಹೆಗೆ ಹೋಗು. ನಾನು ರಾಕ್ಷಸರೊಡನೆ ಯುದ್ಧವನ್ನು ಮಾಡುತ್ತೇನೆ. ನೀನು ಬಲವಂತನು, ಪರಾಕ್ರಮಿ. ಈ ರಾಕ್ಷಸರನ್ನು ಸಂಹಾರಮಾಡಲಾಪುವೆ, ಸಂಶಯವಿಲ್ಲ. ಆದರೆ ನನಗೆ ಈ ರಾಕ್ಷಸಬಲವನ್ನು ಸಂಹರಿಸುವುದಕ್ಕೆ ಇಚ್ಛೆಯುಂಟಾಗಿದೆ. ಆದ್ದರಿಂದ ನೀನು ಸೀತೆಯನ್ನು ಕರೆದುಕೊಂಡು ಹೋಗು, ತಡಮಾಡಬೇಡ " ಎಂದು ಹೇಳಿದನು.

ಲಕ್ಷ್ಮಣನು ಮಹಾಪ್ರಸಾದವೆಂದು ಅಂಗೀಕರಿಸಿ ಬಿಲ್ಲುಬಾಣಗಳನ್ನು ತೆಗೆದುಕೊಂಡು ಸೀತಾದೇವಿಯನ್ನು ಕರೆದುಕೊಂಡು ಅತಿಗಂಭೀರವಾಗಿದ್ದ ಒಂದು ಗುಹೆಯನ್ನು ಸೇರಿದನು. ಆಮೇಲೆ ಶ್ರೀರಾಮನು ಕವಚವನ್ನು ತೊಟ್ಟುಕೊಂಡು ದೇದೀಪ್ಯಮಾನನಾಗಿ ಅಂಧಕಾರದಲ್ಲಿ ಪ್ರಜ್ವಲಿಸುತ್ತಿರುವ ಯಜ್ಞಪುರುಷನಂತೆ ಒಪ್ಪುತ್ತ ಬಿಲ್ಲಿಗೆ ಹೆದೆಯನ್ನೇರಿಸಿ ಝೇಂಕಾರ ಧ್ವನಿಯಿಂದ ನಾನಾದಿಕ್ಕುಗಳನ್ನು ತುಂಬುತ್ತ ದೃಢವಾಗಿ ನಿಂತು ಸಮರಸಂನದ್ಧನಾದನು.

ಆ ಸಮಯದಲ್ಲಿ ಗಂಧರ್ವ ಯಕ್ಷ ಸಿದ್ಧ ವಿದ್ಯಾಧರ ಕಿನ್ನರ ಕಿಂಪುರುಷಾದಿ ದೇವತೆಗಳೂ ಮಹಾತ್ಮರಾದ ಬ್ರಹ್ಮರ್ಷಿಗಳೂ ಶ್ರೀರಾಮನ ಯುದ್ಧಕೌಶಲವನ್ನು ನೋಡಬೇಕೆಂದು ಬಂದು ಅನ್ಯೋನ್ಯಸಂಭಾಷಣೆಯನ್ನು ಮಾಡುತ್ತಲಿದ್ದರು : " ಗೋವುಗಳಿಗೂ ಬ್ರಾಹ್ಮಣರಿಗೂ ಸುಖವಾಗಲಿ. ಸಮಸ್ತ ಜನಗಳಿಗೂ ಭಯವಿಲ್ಲದಂತಾಗಲಿ ! ಯುದ್ಧರಂಗದಲ್ಲಿ ನಾರಾಯಣನು ತನ್ನ ಚಕ್ರದಿಂದ ಸಮಸ್ತ ರಾಕ್ಷಸರನ್ನೂ ಜಯಿಸಿದಂತೆ ಶ್ರೀರಾಮನು ಈ ರಾಕ್ಷಸರನ್ನು ಸಂಹರಿಸಲಿ ! ಮಹಾ ಪರಾಕ್ರಮಿಗಳಾಗಿ ಕ್ರೂರಕರ್ಮಿಗಳಾದ ಈ ರಾಕ್ಷಸರು ಹದಿನಾಲ್ಕು ಸಾವಿರ ಮಂದಿ ಇದ್ದಾರೆ. ಮಹಾತ್ಮನಾದ ಶ್ರೀರಾಮನು ಒಬ್ಬನು ಮಾತ್ರ. ಈ ಇತ್ತಂಡದವರಿಗೆ ಯುದ್ಧವಾಗುವ ಪ್ರಕಾರವು ಹೇಗೆ ? " ಎಂದು ನುಡಿಯುತ್ತಿದ್ದರು. ಹೀಗೆ ರಾಜರ್ಷಿಗಳೂ ಬ್ರಹ್ಮರ್ಷಿಗಳೂ ಸಿದ್ಧರೂ ಸಮಸ್ತ ದೇವತೆಗಳೂ ವಿಮಾನಾರೂಢರಾಗಿ ಅತ್ಯಾಶ್ಚರ್ಯಕರವಾದ ಆಯುಧಪ್ರಸಂಗವನ್ನು ಅಂತರಿಕ್ಷ ಮಾರ್ಗದಲ್ಲಿ ನೋಡುವುದಕ್ಕಾಗಿ ಸೇರಿದರು. ಶ್ರೀರಾಮನು ಸಮರಭೂಮಿಯಲ್ಲಿ ಪ್ರಳಯಕಾಲದ ರುದ್ರನಂತೆ ಒಪ್ಪುತ್ತಿದ್ದನು. ಬಿಲ್ಲುಗಳನ್ನು ತಿರುಗಿಸುತ್ತ ನೆಗೆದಾಡುತ್ತ ಕೂಗುತ್ತ ಭೇರಿಗಳನ್ನು ಮೊಳಗಿಸುತ್ತ ಘೋರವಾದ ಆಯುಧಗಳನ್ನು ಮೇಲಕ್ಕೆ ನೆಗಹಿಕೊಂಡು ಬರುತ್ತಿದ್ದ ರಾಕ್ಷಸರ ಸೇನೆಯ ಕೋಲಾಹಲಧ್ವನಿಯು ಎಲ್ಲ ದಿಕ್ಕುಗಳಲ್ಲೂ ವ್ಯಾಪಿಸುತ್ತಿರಲು ಅಲ್ಲಲ್ಲಿದ್ದ ಮೃಗಪಕ್ಷಿಗಳು ಕಂಗೆಟ್ಟು ಹಿಂದೆ ನೋಡದೆ ಓಡುತ್ತಿದ್ದವು. ಈ ರೀತಿಯಲ್ಲಿ ರಾಕ್ಷಸರ ಸೇನೆಯು ಅತಿಸತ್ತ್ವವುಳ್ಳ ಶ್ರೀರಾಮನನ್ನು ಮುತ್ತಿಕೊಳ್ಳಲು ಯುದ್ಧದಲ್ಲಿ ಪ್ರವೀಣನಾದ ಆ ರಘುನಾಥನು ಯುದ್ಧಸನ್ನಾಹದಿಂದ ಸುತ್ತಿಕೊಂಡಿದ್ದ ರಾಕ್ಷಸರ ಸೇನೆಯನ್ನು ನೋಡಿ ಬತ್ತಳಿಕೆಗಳಿಂದ ಅಂಬುಗಳನ್ನು ತೆಗೆದುಕೊಂಡು ರಾಕ್ಷಸರ ಕೊಲೆಗೋಸ್ಕರ ಸಿದ್ಧನಾದನು. ಅವನು ಪ್ರಳಯಕಾಲಾಗ್ನಿಯಂತೆ ಪ್ರಜ್ವಲಿಸುತ್ತ ರುದ್ರಸ್ವರೂಪನಾದನು. ಆಗ ವನದೇವತೆಗಳು ಶ್ರೀರಾಮನನ್ನು ನೋಡಿ ದಕ್ಷಧ್ವಂಸಿಯಾದ ಪಿನಾಕಿಯೇ ಇವನೆಂದು ಭಾವಿಸಿದರು.



೨೫ ನೆಯ ಅಧ್ಯಾಯ

## ಶ್ರೀರಾಮನಿಂದ ರಾಕ್ಷಸಸೇನೆಯ ಸಂಹಾರ

ಹೀಗೆ ಬಿಲ್ಲುಬಾಣಗಳನ್ನು ತೆಗೆದುಕೊಂಡು ಅತ್ಯಂತ ಕೋಪದಿಂದ ಸಮರಸಂನದ್ಧನಾಗಿ ತನ್ನ ಆಶ್ರಮದಲ್ಲಿ ನಿಂತಿದ್ದ ಶ್ರೀರಾಮನನ್ನು ಕಂಡು, ಖರನು ಶ್ರೀರಾಮನಿಗೆ ಅಭಿಮುಖವಾಗಿ ರಥವನ್ನು ನಡೆಯಿಸಬೇಕೆಂದು ಸಾರಥಿಗೆ ಆಜ್ಞಾಪಿಸಿದನು. ಆತನು ಕುದುರೆಗಳನ್ನು ಚಬುಕುಮಾಡಿ ಅಸಹಾಯಶೂರನಾದ ಶ್ರೀರಾಮನಿಗೆ ಅಭಿಮುಖವಾಗಿ ರಥವನ್ನು ನಡೆಯಿಸಿದನು. ಆಗ ಸಮಸ್ತ ರಾಕ್ಷಸರೂ ಶೂಲ ಮುದ್ಗರ ಖಡ್ಗ ಪಟ್ಟಸ ಈಟಿ ಪರಶು ಕೊಡಲಿ ಮೊದಲಾದ ಆಯುಧಗಳನ್ನು

ತೆಗೆದುಕೊಂಡು ಕಾರ್ಮುಗಿಲಿಗೆ ಸಮಾನವಾದ ಶರೀರಕಾಂತಿಯುಳ್ಳವರಾಗಿಯೂ ಮಹಾಪರಾಕ್ರಮ ಉಳ್ಳವರಾಗಿಯೂ ರಥಗಳಲ್ಲಿದ್ದುಕೊಂಡೂ ಪರ್ವತಾಕಾರಗಳಾದ ಆನೆಗಳ ಮೇಲಿದ್ದುಕೊಂಡೂ ವಾಯುವೇಗಮನೋವೇಗವುಳ್ಳ ಕುದುರೆಗಳ ಮೇಲಿದ್ದುಕೊಂಡೂ ಶ್ರೀರಾಮನನ್ನು ಅಟ್ಟಿಬಂದು ಮೇಘಗಳು ಪರ್ವತದ ಮೇಲೆ ಮಳೆಯನ್ನು ಕರೆಯುವಂತೆ ಅಂಬಿನ ಮಳೆಯನ್ನು ಕರೆದರು. ಶ್ರೀರಾಮನು, ಸಮುದ್ರರಾಜನು ನದೀಪ್ರವಾಹಗಳನ್ನು ತಡೆಗಟ್ಟುವಂತ ಆ ರಾಕ್ಷಸರು ಪ್ರಯೋಗಿಸಿದ ಬಾಣಗಳನ್ನು ತನ್ನ ನಿಶಿತವಾದ ಶರಗಳಿಂದ ತಡೆಗಟ್ಟಿದನು. ಆಗ ಅನೇಕ ಮಂದಿ ರಾಕ್ಷಸರು ಆತನ ಮೇಲೆ ಕವಿದು ನಿಶಿತಬಾಣಗಳಿಂದ ಹೊಯ್ಯಲು, ಶ್ರೀರಾಮನು ಆ ರಾಕ್ಷಸರ ಆಯುಧಗಳಿಂದ ಗಾಯಪಡೆದು ಶರೀರವೆಲ್ಲವೂ ರಕ್ತಮಸಗಿ ಸಂಧ್ಯಾಕಾಲದಲ್ಲಿ ಕೆಮ್ಮುಗಿಲುಗಳಿಂದ ಬಳಸಲ್ಪಟ್ಟ ಸೂರ್ಯನಂತೆ ತೋರುತ್ತಿದ್ದನು. ಹೀಗೆ ಬಹುಮಂದಿ ರಾಕ್ಷಸರು ಏಕಾಕಿಯಾದ ಶ್ರೀರಾಮನನ್ನು ಸುತ್ತಿಕೊಂಡದ್ದನ್ನು ಕಂಡು ಗಂಧರ್ವಾದಿದೇವತೆಗಳು ದುಃಖಪಡುತ್ತಿದ್ದರು. ಆಮೇಲೆ ಶ್ರೀರಾಮನು ಕುಪಿತನಾಗಿ ಬಿಲ್ಲನ್ನು ಚಕ್ರಾಕಾರವಾಗಿ ಬಗ್ಗಿಸಿ ಯಾರಿಗೂ ತಡೆಯುವುದಕ್ಕಾದರೂ ಸಹಿಸುವುದಕ್ಕಾದರೂ ಶಕ್ಯವಲ್ಲದ ಅಪರಿಮಿತವಾದ ಬಾಣಗಳನ್ನು ಆ ರಾಕ್ಷಸರ ಮೇಲೆ ಲೀಲಾಮಾತ್ರದಿಂದ ಪ್ರಯೋಗಿಸಿದನು. ಆ ಬಾಣಗಳು ಯಮಪಾಶದಂತೆ ಆ ರಾಕ್ಷಸರ ಶರೀರಗಳನ್ನು ತಾಕಿ ಉಚ್ಚಳಿಸಿ ಅವರ ಪ್ರಾಣಾಪಹಾರವನ್ನು ಮಾಡಿ ಅವರ ರಕ್ತದಿಂದ ನೆನೆದು ಅಂತರಿಕ್ಷ ಮಾರ್ಗದಲ್ಲಿ ಹೋಗುತ್ತ ಉರಿಯುವ ಬೆಂಕಿಯಂತೆ ಒಪ್ಪುತ್ತಿದ್ದವು. ಶ್ರೀರಾಮನು ಆಕರ್ಣಾಂತವಾಗಿ ಎಳೆದ ಮಂಡಲಾಕಾರವಾದ ಬಿಲ್ಲಿನಿಂದ ಎಸೆದ ಲೆಕ್ಕವಿಲ್ಲದಷ್ಟು ಬಾಣಗಳಿಂದ ಅನೇಕ ಮಂದಿ ರಾಕ್ಷಸರು ನೆಲಕ್ಕೆ ಬೀಳುತ್ತಿದ್ದರು. ಅವರ ಬಿಲ್ಲುಗಳು, ಶಿರಸ್ಸುಗಳು, ಬಾಹುಗಳು, ಹಸ್ತಾಭರಣಸಹಿತವಾದ ಕೈಗಳು, ಆನೆಯ ಸೊಂಡಿಲೋಪಾದಿಯಲ್ಲಿದ್ದ ತೊಡೆಗಳು ಮೊದಲಾದ ಸರ್ವಾಂಗಗಳೂ ಕತ್ತರಿಸಿ ಬೀಳುತ್ತಿದ್ದವು. ಲೆಕ್ಕವಿಲ್ಲದಷ್ಟು ರಥಿಕರೂ ಸಾರಥಿಗಳೂ ಮಾವುತರೂ ರಾವುತರೂ ಕಾಲಾಳುಗಳೂ ಯಮನ ಮಂದಿರಕ್ಕೆ ಹೋದರು. ಈ ರೀತಿಯಲ್ಲಿ ಶ್ರೀರಾಮನು ಪ್ರಯೋಗಿಸಿದ ಕೂರಲಗುಗಳುಳ್ಳ ಕವಣೆಯಂಬುಗಳಿಂದ ಗಾಯವಡೆದ ರಾಕ್ಷಸರು ಭಯದಿಂದ ಗೋಳಿಡುತ್ತಿರಲು ಖರನ ಸೇನೆಯು ಕಂಗೆಟ್ಟು ಕಾಡುಗಿಚ್ಚಿನಿಂದ ಬೆಂದ ವನದಂತೆ ವ್ಯಥೆಪಡುತ್ತಿತ್ತು.

ಆ ಬಳಿಕ ಮತ್ತಗಜಗಳಂತೆ ಮಹಾಬಲವಂತರಾದ ಅನೇಕ ರಾಕ್ಷಸಭಟರು ತ್ರಿಶೂಲ ಪರಶು ಕೊಡಲಿಗಳನ್ನು ಶ್ರೀರಾಮನ ಮೇಲೆ ಪ್ರಯೋಗಿಸಿದರು. ಆತನು ಆ ಆಯುಧಗಳನ್ನು ತನ್ನ ಬಾಣಗಳಿಂದ ಕತ್ತರಿಸಿ ಕೆಡಹಿ ಕೆಲವು ಬಾಣಗಳಿಂದ ಅವರ ಶಿರಸ್ಸುಗಳನ್ನೂ ಶರ ಬಿಲ್ಲು ಬಾಣ ಕವಚಗಳನ್ನೂ ಕತ್ತರಿಸಿದನು. ಪುನಃ ರಾಕ್ಷಸರ ಮೇಲೆ ಬಾಣಗಳನ್ನು ಪ್ರಯೋಗಿಸಲು ಆ ಬಾಣಗಳಿಂದ ಗಾಯವಡೆದು ಅನೇಕರು ಕೊಡಲಿಯ ಪೆಟ್ಟಿನಿಂದ ಮುರಿದುಬಿದ್ದ ವೃಕ್ಷಗಳಂತೆ ಬೀಳುತ್ತಿದ್ದರು. ಕೆಲವು ರಾಕ್ಷಸರು ಹೆದರಿ ಖರನ ಬಳಿಗೆ ಓಡಿ ಹೋದರು.

ಹೀಗೆ ಮುರಿದೋಡುತ್ತಿದ್ದ ರಾಕ್ಷಸರನ್ನು ಕಂಡು ದೂಷಣನು ಸಂತವಿಟ್ಟು ಶ್ರೀರಾಮನನ್ನು ಅಟ್ಟಿಬರಲು ಆ ರಾಕ್ಷಸರು ಚೇತರಿಸಿಕೊಂಡು ದೂಷಣನಿಗೆ ಸಹಾಯವಾಗಿ ಬಂದು ಶ್ರೀರಾಮನನ್ನು ಸುತ್ತಿಕೊಂಡು ಅವನ ಮೇಲೆ ಅಂಬುಗಳನ್ನು ಎಸೆದರು. ಆ ಶರವರ್ಷವನ್ನು ನೋಡಿ ಶ್ರೀರಾಮನು ಗಾಂಧರ್ವಾಸ್ತ್ರವನ್ನು ಆ ರಾಕ್ಷಸರ ಮೇಲೆ ಪ್ರಯೋಗಿಸಿದನು. ಅವನ ಬಿಲ್ಲಿನಿಂದ ಹೊರಬರುತ್ತಿದ್ದ ಬಾಣಗಳು ದಶದಿಕ್ಕುಗಳನ್ನು ವ್ಯಾಪಿಸಿದವು. ರಾಮನು ಬತ್ತಳಿಕೆಗಳಿಂದ ಅಂಬುಗಳನ್ನು ತೆಗೆಯುವುದನ್ನೂ ಬಿಲ್ಲಿನಲ್ಲಿ ಹೂಡಿ ಎಸೆಯುವುದನ್ನೂ ರಾಕ್ಷಸರು ಕಾಣದಾದರು. ರಾಮನ

ಆ ಬಾಣಗಳು ಅಂತರಿಕ್ಷಮಾರ್ಗದಲ್ಲಿ ವ್ಯಾಪಿಸಿ ಸೂರ್ಯಮಂಡಲವನ್ನು ಮುಚ್ಚಿ ಅಂಧಕಾರವನ್ನುಂಟು ಮಾಡಿದವು. ಈ ರೀತಿಯಲ್ಲಿ ಶ್ರೀರಾಮನು ರಾಕ್ಷಸಸೇನೆಯ ಮೇಲೆ ಅಂಬುಗಳನ್ನು ಅಪರಿಮಿತವಾಗಿ ಎಸೆಯುತ್ತಿರಲು ಮುರಿದು ಬಿದ್ದ ರಾಕ್ಷಸರಿಂದಲೂ ಬೀಳುತ್ತಿದ್ದವರಿಂದಲೂ ಗಾಯಪಡೆದವರಿಂದಲೂ ಕತ್ತರಿಸಲ್ಪಟ್ಟ ತ್ರಿಶೂಲಪಟ್ಟಿಸಾದಿಗಳಿಂದಲೂ ಹರಹಲ್ಪಟ್ಟು ವಿಸ್ತೀರ್ಣವಾದ ಆ ಸಮರಭೂಮಿಯು ಅತಿಭಯಂಕರವಾಗಿ ತೋರುತ್ತಿತ್ತು.



೨೬ ನೆಯ ಅಧ್ಯಾಯ

## ದೂಷಣನೇ ಮೊದಲಾದ ಹದಿನಾಲ್ಕು ಸಾವಿರ ರಾಕ್ಷಸರ ವಧೆ

ಆಮೇಲೆ ದೂಷಣನು ಶ್ರೀರಾಮನಿಂದ ಕೊಲ್ಲಲ್ಪಟ್ಟ ತನ್ನ ಸೇನೆಯನ್ನು ಕಂಡು ಮನಸ್ಸಿನಲ್ಲಿ ಅತ್ಯಂತ ಖತಿಗೊಂಡು ಮಹಾಬಲವರಾಕ್ರಮಿಗಳಾಗಿ ಅತ್ಯಂತ ಭಯಂಕರಸ್ವರೂಪರಾದ ರಣರಂಗದಲ್ಲಿ ಹಿಮ್ಮೆಟ್ಟದ ಐದು ಸಾವಿರ ಮಂದಿ ರಾಕ್ಷಸರನ್ನು ಶ್ರೀರಾಮನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಆ ರಾಕ್ಷಸರು ತ್ರಿಶೂಲ ಪಟ್ಟಿಸ ಖಡ್ಗ ಕಲ್ಲರೆ ಮರಗಳು ಮೊದಲಾದವನ್ನು ಶ್ರೀರಾಮನ ಮೇಲೆ ಎಸೆಯುತ್ತ ಯುದ್ಧಕ್ಕೆ ಅಟ್ಟಿಬರುತ್ತಿದ್ದರು. ಶ್ರೀರಾಮನು ಆ ರಾಕ್ಷಸರು ಪ್ರಯೋಗಿಸಿದ ಕಲ್ಲು ಮರ ಮೊದಲಾದವನ್ನು ನಿಶಿತವಾದ ಅಂಬುಗಳಿಂದ ತಡದು ಅವರನ್ನು ಕೊಲ್ಲಬೇಕೆಂದು ಅತ್ಯಂತ ಕೋಪಯುಕ್ತನಾಗಿ ಅಗ್ನಿಯಂತೆ ಪ್ರಜ್ವಲಿಸುತ್ತಿರುವ ಕೆಲವು ಬಾಣಗಳನ್ನು ದೂಷಣನ ಸೇನೆಯ ಮೇಲೆ ಪ್ರಯೋಗಿಸಿ ಮುರಿದೋಡಿಸಿದನು. ಅದನ್ನು ಕಂಡು ದೂಷಣನು ಸಿಡಿಲಿಗೆ ಸಮಾನವಾದ ಬಾಣಗಳನ್ನು ಶ್ರೀರಾಮನ ಮೇಲೆ ಪ್ರಯೋಗಿಸಲು ಶ್ರೀರಾಮನು ಒಂದು ಬಾಣದಿಂದ ದೂಷಣನ ಬಿಲ್ಲನ್ನು ಕತ್ತರಿಸಿ ನಾಲ್ಕು ಬಾಣಗಳಿಂದ ಆತನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನು ಕೆಡಹಿ ಒಂದು ಕವಲಂಬಿನಿಂದ ಸಾರಥಿಯ ಶಿರಸ್ಸನ್ನು ಕತ್ತರಿಸಿ ಮೂರು ಬಾಣಗಳನ್ನು ದೂಷಣನ ಎದೆಗೆ ಹೊಡೆದನು. ದೂಷಣನು ಸಾರಥಿ ಕುದುರೆ ಬಿಲ್ಲು ರಥ ಮೊದಲಾದವೆಲ್ಲವೂ ಲಯವಾಗಲು ಅತ್ಯಂತ ಕೋಪಾಟೋಪದಿಂದ ಅತಿಭಯಂಕರವಾದ ಪರಿಘವೆಂಬ ಆಯುಧವನ್ನು ತೆಗೆದುಕೊಂಡು ಶ್ರೀರಾಮನಿಗೆದುರಾಗಿ ನಡೆದನು. ಶ್ರೀರಾಮನು ಎರಡಂಬುಗಳಿಂದ ಆತನ ಭುಜಗಳನ್ನು ಕತ್ತರಿಸಲು, ದೂಷಣನು ಕೋರೆ ಮುರಿದು ಬಿದ್ದ ಮಹಾಗಜದಂತೆ ಇಕ್ಕೆಲದಲ್ಲಿ ಬಿದ್ದಿದ್ದ ತೋಳುಗಳ ಮಧ್ಯದಲ್ಲಿ. ಸ್ವರ್ಗಲೋಕದಿಂದ ಭೂಮಿಯಲ್ಲಿ ಬೀಳುವ ಇಂದ್ರಧ್ವಜದಂತೆ ರಣಭೂಮಿಯಲ್ಲಿ ತತ್ತರಿಸಿ ಬಿದ್ದನು.

ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ ಆ ಯುದ್ಧವನ್ನು ನೋಡುತ್ತಿದ್ದ ದೇವತೆಗಳು ಶ್ರೀರಾಮನ ಬಾಣಗಳಿಂದ ಗಾಯವಡೆದು ಬಿದ್ದ ದೂಷಣನನ್ನು ಕಂಡು ಶ್ರೀರಾಮನು ಮಹಾ ಶೂರನೆಂದು ಕೊಂಡಾಡುತ್ತಿದ್ದರು. ಆ ಬಳಿಕ ಖರನ ಸೇನಾನಾಯಕರಲ್ಲಿ ಆಯುಸ್ಸಿನ ಮಿತಿ ತುಂಬಿದ ಮಹಾಕಪಾಲನು ತ್ರಿಶೂಲಧಾರಿಯಾಗಿಯೂ ಸ್ಥೂಲಾಕ್ಷನು ಪಟ್ಟಿಸವನ್ನು ಕೈಕೊಂಡೂ ಪ್ರಮಾಥಿಯು ಕೊಡಲಿಯನ್ನು ಕೈಯಲ್ಲಿ ಹಿಡಿದೂ ಶ್ರೀರಾಮನನ್ನು ಎದುರಿಸಿದರು. ಶ್ರೀರಾಮನು ಮೂರಂಬುಗಳನ್ನು ತೊಟ್ಟು ಮಹಾಕಪಾಲನ ಶಿರಸ್ಸನ್ನು ಛೇದಿಸಿ ಕೆಲವು ಶರಗಳಿಂದ ಪ್ರಮಾಥಿಯ ಪ್ರಾಣಾಪಹಾರವನ್ನು ಮಾಡಿ ಸ್ಥೂಲಾಕ್ಷನ ಕಣ್ಣುಗಳಲ್ಲಿ ಅನೇಕ ಬಾಣಗಳನ್ನು ನೆಡಲು ಆ ಮೂವರೂ ಗಾಯವಡೆದು ಭೂಮಿಯಲ್ಲಿ ಬಿದ್ದರು.

ಈ ರೀತಿಯಲ್ಲಿ ಶ್ರೀರಾಮನ ಬಾಣಗಳಿಂದ ದೂಷಣನೂ ಅವನೊಡನೆ ಹೋದ ಐದು ಸಾವಿರ ಪಟುಭಟರೂ ಬಿದ್ದವರನ್ನು ಕಂಡು ಖರನು ಅತ್ಯಂತ ಕೋಪಯುಕ್ತನಾಗಿ ತನ್ನ ಹನ್ನೆರಡು ಮಂದಿ ಸೇನಾನಾಯಕರನ್ನು ಕರೆದು " ಎಲೈ ಸೇನಾಪತಿಗಳಿರಾ. ರಣರಂಗದಲ್ಲಿ ಶ್ರೀರಾಮನ ಬಾಣಗಳಿಂದ ದೂಷಣನು ಹತನಾದನು. ಆತನೊಡನೆ ಹೋದ ಐದು ಸಾವಿರ ಮಂದಿ ಪಟುಭಟರೂ ಲಯವಾದರು. ನೀವು ನಮ್ಮ ಸೇನೆಯನ್ನು ಕೂಡಿಕೊಂಡು ನಾನಾಪ್ರಕಾರವಾದ ಆಯುಧಗಳಿಂದ ಯುದ್ಧವನ್ನು ಮಾಡಿ ಹುಲುಮನುಷ್ಯನಾದ ಶ್ರೀರಾಮನನ್ನು ಕೊಲ್ಲಿರಿ " ಎಂದು ಆಜ್ಞಾಪಿಸಿದನು.

ಆಮೇಲೆ ಖರನಿಂದ ಆಜ್ಞಾಪಿಸಲ್ಪಟ್ಟ ಶ್ಯೇನಗಾಮಿ, ಪೃಥುಗ್ರೀವ, ಯಜ್ಞಶತ್ರು ಮೊದಲಾದ ಹನ್ನೆರಡು ಮಂದಿ ಸೇನಾನಾಯಕರು ತಮ್ಮ ತಮ್ಮ ಸೇನೆಗಳನ್ನು ಕೂಡಿಕೊಂಡು ಶ್ರೀರಾಮನಿಗೆ ಅಭಿಮುಖವಾಗಿ ನಡೆದು ಆತನ ಮೇಲೆ ಅಪರಿಮಿತವಾದ ಬಾಣಗಳನ್ನೆಸೆದರು. ಶ್ರೀರಾಮನು ಚಿನ್ನದ ಹಿಳುಕುಗಳುಳ್ಳ ಬಾಣಗಳನ್ನು ಆ ಸೇನೆಯ ಮೇಲೆ ಪ್ರಯೋಗಿಸಲು ಆ ಬಾಣಗಳು ಹೊಗೆ ಸಹಿತವಾದ ಅಗ್ನಿಯಂತೆ ಭಯಂಕರವಾಗಿ. ವಜ್ರಾಯುಧವು ಪರ್ವತಗಳನ್ನು ಕತ್ತರಿಸಿ ಕೆಡಹುವಂತೆ ಸಮಸ್ತರಾಕ್ಷಸರನ್ನೂ ಸಂಹರಿಸಿದವು. ಈ ರೀತಿಯಲ್ಲಿ ಶ್ರೀರಾಮನು ತನ್ನೊಡನೆ ಯುದ್ಧಕ್ಕೆ ಬಂದ ರಾಕ್ಷಸರನ್ನು ನೂರು ಮಂದಿ ಎದುರಾದರೆ ಒಂದೇ ಸಾರಿ ನೂರು ಬಾಣಗಳನ್ನು ಪ್ರಯೋಗಿಸಿಯೂ ಸಾವಿರ ಮಂದಿ ಎದುರಾದರೆ ಸಾವಿರ ಬಾಣಗಳನ್ನು ಪ್ರಯೋಗಿಸಿಯೂ ಮುರಿದನು. ರಾಕ್ಷಸರ ಬಿಲ್ಲು ಕವಚ ಮೊದಲಾದವೆಲ್ಲವೂ ಕತ್ತರಿಸಲ್ಪಟ್ಟು ಬಿಲ್ಲುಗಳೊಡೆದು ಶರೀರವೆಲ್ಲವೂ ರಕ್ತಮಯವಾಗಿ ಅವರು ಭೂಮಿಯಮೇಲೆ ಬೀಳುತ್ತಿದ್ದರು. ಆ ಸಮಯದಲ್ಲಿ ಮಂಡೆಗಳನ್ನು ಕೆದರಿಕೊಂಡು ರಕ್ತದಿಂದ ನೆನೆದು ಬಿದ್ದ ರಾಕ್ಷಸರಿಂದ ಹರಡಲ್ಪಟ್ಟ ರಣಾಂಗಣವು. ರಾಕ್ಷಸಶರೀರಗಳೆಂಬ ದರ್ಭೆಗಳಿಂದ ಹರಡಲ್ಪಟ್ಟ ಯಾಗಮಂಟಪದಂತೆ ಕಾಣುತ್ತಿತ್ತು. ಎಲ್ಲಿ ನೋಡಿದರೂ ಮಾಂಸಖಂಡಗಳಿಂದ ಪರಿಪೂರ್ಣವಾಗಿ ನರಕಲೋಕದಂತೆ ಭಯಂಕರವಾಗಿ ತೋರುತ್ತಿತ್ತು. ಈ ರೀತಿಯಲ್ಲಿ ಶ್ರೀರಾಮನು ಯುದ್ಧದಲ್ಲಿ ತನ್ನ ಬಾಣಗಳಿಂದ ಖರನ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನೂ ಯಮಲೋಕಕ್ಕೆ ಕಳುಹಿಸಲು ಆ ರಾಕ್ಷಸರಲ್ಲಿ ಖರನೊಬ್ಬನೂ ತ್ರಿಶಿರನೊಬ್ಬನೂ ಉಳಿದರು. ಆಮೇಲೆ ಖರನು ರಥಾರೂಢನಾಗಿ. ವಜ್ರಾಯುಧವನ್ನು ಹಿಡಿದ ದೇವೇಂದ್ರನಂತೆ ಶ್ರೀರಾಮನನ್ನು ಅಟ್ಟಿಸಿ ಕೊಂಡು ಬಂದನು.



## ೨೭ ನೆ ಯ ಅ ಧ್ಯಾ ಯ

## ತ್ರಿ ಶಿ ರ ನ ವ ಧೆ

ಆಮೇಲೆ ಸೇನಾಪತಿಯಾದ ತ್ರಿಶಿರನು ಶ್ರೀರಾಮನ ಮೇಲೆ ಯುದ್ಧಕ್ಕೆ ಹೋಗುತ್ತಿದ್ದ ಖರನನ್ನು ಕುರಿತು " ರಾಮನೊಡನೆ ಯುದ್ಧಕ್ಕೆ ನಾನು ಹೋಗುತ್ತೇನೆ. ನನ್ನನ್ನು ಕಳುಹಿಸಿ ನೀನು ಬಳಲಿಕೆಯನ್ನು ಪರಿಹರಿಸಿಕೊ. ನನ್ನ ಸಾಮರ್ಥ್ಯದಿಂದ ರಣರಂಗದಲ್ಲಿ ಆತನು ಹತನಾಗುವನೆಂದು ತಿಳಿ. ಸಮಸ್ತ ರಾಕ್ಷಸರಿಗೂ ಮೃತ್ಯುವಾದ ರಾಮನನ್ನು ಕೊಂದು ಆತನಲ್ಲಿರುವ ಆಯುಧಗಳನ್ನು ಕಸಿದು ತರುತ್ತೇನೆ " ಎಂದು ಪ್ರತಿಜ್ಞೆಯನ್ನು ಮಾಡಿ ಕುದುರೆಗಳಿಂದ ಮೊಳೈಸಿದ ರಥವನ್ನು ಹತ್ತಿ ತ್ರಿಕೂಟಪರ್ವತದ ಹಾಗೆ ಕಂಗೊಳಿಸಿದನು. ಅವನು ಶ್ರೀರಾಮನ ಮೇಲೆ ಪ್ರಳಯಕಾಲದ

ಮೇಘವು ಮಳೆಗರೆಯುವಂತೆ ಶರವರ್ಷವನ್ನು ಕರೆದು ನೀರಿನಲ್ಲಿ ತೊಯ್ದು ಭೇರಿಯ ಧ್ವನಿಯಂತೆ ಗಂಭೀರಸ್ವರಗುಂದಿ ಬೊಬ್ಬಿಡುತ್ತಿದ್ದನು. ಶ್ರೀರಾಮನು ಬಿಲ್ಲನ್ನು ಸಜ್ಜುಮಾಡಿಕೊಂಡು ತ್ರಿಶಿರನ ಮೇಲೆ ಅನೇಕ ಬಾಣಗಳನ್ನು ಕರೆದನು. ಈ ರೀತಿಯಲ್ಲಿ ಅತ್ಯಂತ ಬಲವಂತನಾದ ಶ್ರೀರಾಮನಿಗೂ ತ್ರಿಶಿರನಿಗೂ ಅರಣ್ಯದಲ್ಲಿ ಆನೆ ಸಿಂಹಗಳಿಗೆ ಯುದ್ಧವಾಗುವಂತೆ ಮಹತ್ತಾದ ಯುದ್ಧವಾಯಿತು. ಆಗ ತ್ರಿಶಿರನು ಮೂರು ಬಾಣಗಳನ್ನು ಶ್ರೀರಾಮನ ಹಣೆಯ ಮೇಲೆ ಪ್ರಯೋಗಿಸಲು ಅತ್ಯಂತ ಕೋಪಯುಕ್ತನಾದ ಶ್ರೀರಾಮನು ತ್ರಿಶಿರನನ್ನು ಕುರಿತು ಹೀಗೆಂದನು: "ಎಲೈ ರಾಕ್ಷಸ, ನೀನು ಮಹಾಪರಾಕ್ರಮಿ. ನಿನಗೆ ಸಮಾನರಾದ ಬಲವಂತರಾರುಂಟು? ನಿನ್ನ ಬಾಣಗಳು ನನ್ನ ಹಣೆಯಲ್ಲಿ ತಾಕಿ ನನ್ನನ್ನು ಗಾಯಪಡಿಸಿದವು. ಇನ್ನು ನೀನು ನನ್ನ ಬಿಲ್ಲಿನಿಂದ ಪ್ರಯೋಗಿಸಲ್ಪಡುವ ಬಾಣಗಳನ್ನು ಎದುರಿಸು" ಎಂದು ನುಡಿದು ಅತ್ಯಂತ ಕೋಪಯುಕ್ತನಾಗಿ ಕೃಷ್ಣಸರ್ಪಗಳಂತೆ ಕ್ರೂರವಾದ ಹದಿನಾಲ್ಕು ಬಾಣಗಳನ್ನು ತ್ರಿಶಿರನ ಎದೆಯಲ್ಲಿ ಹೂಡಿದನು. ಮತ್ತು ಅತ್ಯಂತ ನುಣುವಾದ ನಾಲ್ಕು ಅಂಬುಗಳಿಂದ ಆತನ ರಥಕ್ಕೆ ಕಟ್ಟಿದ್ದ ನಾಲ್ಕು ಕುದುರೆಗಳನ್ನೂ ಕೆಡಹಿ ಎಂಟು ಬಾಣಗಳಿಂದ ರಥದಲ್ಲಿದ್ದ ಸಾರಥಿಯನ್ನು ಕೊಂದು ಒಂದು ಬಾಣದಿಂದ ರಥದಲ್ಲಿದ್ದ ಧ್ವಜಸ್ತಂಭವನ್ನು ಬೀಳಿಸಿದನು. ಆಗ ತತ್ತಳಿಸಿ ಕಂಗೆಟ್ಟು ರಥದಿಂದ ಬೀಳುತ್ತಿದ್ದ ತ್ರಿಶಿರನ ಮೂರು ಶಿರಸ್ಸುಗಳಿಗೂ ಮೂರು ಶರಗಳನ್ನು ಗುರಿಮಾಡಿ ಪ್ರಯೋಗಿಸಿದನು. ಆ ಅಂಬುಗಳಿಂದ ಮೂರು ಶಿರಸ್ಸುಗಳು ಕತ್ತರಿಸಲ್ಪಟ್ಟು ತ್ರಿಶಿರನು ರಕ್ತವನ್ನು ಕಾರಿ ಭೂಮಿಯ ಮೇಲೆ ಬಿದ್ದನು ಈ ರೀತಿಯಲ್ಲಿ ಶ್ರೀರಾಮನ ಮೂರು ಅಂಬುಗಳಿಂದ ಮೂರು ಶಿರಸ್ಸುಗಳೂ ಕತ್ತರಿಸಲ್ಪಟ್ಟು ಬಿದ್ದ ತ್ರಿಶಿರನನ್ನು ಕಂಡು ರಾಕ್ಷಸರು ಕಂಗೆಟ್ಟು ಹುಲಿಗಂಜಿದ ಹುಲ್ಲೆಗಳಂತೆ ಓಡುತ್ತಿರುವುದನ್ನು ಕಂಡು ಖರನು "ನಿಲ್ಲಿ ನಿಲ್ಲಿ - ಓಡಬೇಡಿ" ಎಂದು ನಿಲ್ಲಿಸಿ ಸಂತವಿಟ್ಟು ಚಂದ್ರನನ್ನು ರಾಹುವು ಅಟ್ಟುವಂತೆ ಶ್ರೀರಾಮನ ಕಡೆಗೆ ಧಾವಿಸುತ್ತ ಬಂದನು.



### ೨೮ ನೆಯ ಅಧ್ಯಾಯ

## ಶ್ರೀರಾಮನಿಗೂ ಖರನಿಗೂ ಯುದ್ಧವಾದದ್ದು

ಆಮೇಲೆ ಖರನು ಶ್ರೀರಾಮನ ಬಾಣಗಳಿಂದ ರಣರಂಗದಲ್ಲಿ ಗಾಯಪಡೆದು ಬಿದ್ದ ದೂಷಣ ತ್ರಿಶಿರರನ್ನೂ ಮಹಾಬಲಪರಾಕ್ರಮವುಳ್ಳ ಸೇನೆಯನ್ನೂ ಕಂಡನು. ಮನುಷ್ಯಮಾತ್ರನಾದ ಶ್ರೀರಾಮನೊಬ್ಬನಿಂದ ಸಮಸ್ತ ರಾಕ್ಷಸಬಲವೂ ಹತವಾಯಿತೆಂದು ಮನಸ್ಸಿನಲ್ಲಿ ಕ್ಲೇಶಪಟ್ಟು ಕೊಂಡನು. ಅನಂತರ ಬಾಣಗಳಿಂದ ನಾನಾದಿಕ್ಕುಗಳನ್ನೂ ಅಂತರಿಕ್ಷಮಾರ್ಗವನ್ನೂ ತುಂಬಿದನು. ಶ್ರೀರಾಮನು ತನ್ನ ಮಹತ್ತಾದ ಬಿಲ್ಲಿನಲ್ಲಿ ಕಿಡಿಯನ್ನುಗುಳುತ್ತಿದ್ದ ಅಂಬುಗಳನ್ನು ಹೂಡಿ ವರುಣನು ಮಳೆಧಾರೆಗಳಿಂದ ಭೂಮಿಯನ್ನು ಕೊರೆದು ಹಳ್ಳಮಾಡುವಂತೆ ಖರನ ಶರೀರವನ್ನು ಅಧಿಕವಾಗಿ ಗಾಯಪಡಿಸಿದನು. ಆ ಸಮಯದಲ್ಲಿ ಅವರ ಬಾಣಗಳಿಂದ ಅಂತರಿಕ್ಷಮಾರ್ಗವು ಇಟ್ಟಣಿಸಲ್ಪಟ್ಟು ಎಡೆಬಿಡದೆ ಕತ್ತಲೆಯಾಗಿರಲು ಸೂರ್ಯನು ಕಾಣಿಸದಿದ್ದನು. ಆ ಬಳಿಕ ಶ್ರೀರಾಮನು ಅಂಕುಶದ ಹೊಯ್ಲುಗಳಿಂದ ಮದ್ದಾನೆಯನ್ನು ಕಂಗೆಡಿಸುವಂತೆ ತನ್ನ ಬಾಣಗಳಿಂದ ರಥದಮೇಲಿದ್ದ ಖರನನ್ನು ಕಂಗೆಡಿಸುತ್ತಿದ್ದನು. ಅಂತರಿಕ್ಷಮಾರ್ಗದಲ್ಲಿ ನೋಡುತ್ತಿದ್ದ ದೇವತೆಗಳು ಮಹಾಬಲಪರಾಕ್ರಮಿಯಾದ

ಖರನನ್ನೂ ಆತನ ಸೇನೆಯನ್ನೂ ಘಾಸಿಪಡಿಸಿದ ಶ್ರೀರಾಮನನ್ನು ನೋಡಿ ಸಂತೋಷಪಡುತ್ತಿದ್ದರು. ಖರನು ಸಿಂಹದ ರೀತಿಯಲ್ಲಿ ಪರಾಕ್ರಮವುಳ್ಳವನಾಗಿ ಸಿಂಹಗಮನದಿಂದ ನೆಗೆದು ಶ್ರೀರಾಮನನ್ನು ನೋಡಿ ಆತನು ಸತ್ತ್ವಗುಂದಿದವನೆಂದೆಣಿಸಿದನು. ಆದರೆ ಶ್ರೀರಾಮನು ಹುಲುಮೃಗವನ್ನು ಕಂಡ ಸಿಂಹರಾಜನಂತೆ ಖರನನ್ನು ಗಣನೆಮಾಡದಿದ್ದನು. ಆಮೇಲೆ ಸೂರ್ಯಪ್ರಭೆಯ ರೀತಿಯಲ್ಲಿ ಕಾಂತಿಯುಕ್ತವಾದ ರಥದ ಮೇಲಿದ್ದ ಖರನು, ಅಗ್ನಿಯ ಮೇಲೆ ಪತಂಗದ ಹುಳುಗಳು ಎರಗುವಂತೆ ತನ್ನ ಬಿಲ್ಲಿನಲ್ಲಿ ಅನೇಕ ಬಾಣಗಳನ್ನು ಹೂಡಿ ಶ್ರೀರಾಮನ ಕೈಯಲ್ಲಿದ್ದ ಬಿಲ್ಲುಬಾಣಗಳನ್ನು ಕತ್ತರಿಸಿ ತನ್ನ ಹಸ್ತವೇಗವನ್ನು ತೋರಿಸಿದನು. ಸಿಡಿಲಿಗೆ ಸಮಾನವಾದ ಏಳು ಬಾಣಗಳಿಂದ ಶ್ರೀರಾಮನನ್ನು ಗಾಯಗೊಳಿಸಿ ಒಂದು ಸಾವಿರ ಬಾಣಗಳಿಂದ ಆತನನ್ನು ಕಂಗೆಡಿಸಿ ರಣಭೂಮಿಯಲ್ಲಿ ಬೊಬ್ಬಿಟ್ಟನು. ಕೆಲವು ಬಾಣಗಳಿಂದ ಶ್ರೀರಾಮನ ಕವಚವನ್ನು ಹರಿದು ಕೆಡಹಿದನು. ಸರ್ವಾಂಗಗಳೂ ಖರನ ಬಾಣಗಳಿಂದ ಗಾಯಪಡೆಯಲು ಶ್ರೀರಾಮನು ಹೊಗೆಯಿಲ್ಲದ ಯಜ್ಞಪುರುಷನಂತೆ ಒಪ್ಪುತ್ತ ಸಮಸ್ತ ಶತ್ರುಗಳನ್ನೂ ಸಂಹಾರಮಾಡಿದನು. ಅಗಸ್ತ್ಯಮುನೀಶ್ವರನು ಕೊಟ್ಟ ವಿಷ್ಣುದೇವತಾಕವಾದ ಧನುಸ್ಸನ್ನು ತೆಗೆದುಕೊಂಡು ಗಂಭೀರಧ್ವನಿಯಿಂದ ಆರ್ಭಟಿಸುತ್ತ ಬಿಲ್ಲಿಗೆ ಹೆದೆಯನ್ನೇರಿಸಿ ಬಾಣಗಳಿಂದ ಖರನ ರಥದಲ್ಲಿದ್ದ ಧ್ವಜದಂಡವನ್ನು ಕತ್ತರಿಸಿದನು. ಆ ದಂಡವು ಭೂಲೋಕಕ್ಕೆ ಬಂದ ಸೂರ್ಯಮಂಡಲದಂತೆ ಭೂಮಿಯಲ್ಲಿ ಬಿದ್ದಿತು. ಖರನು ಅತ್ಯಂತ ಕೋಪಯುಕ್ತನಾಗಿ ನಾಲ್ಕು ಬಾಣಗಳಿಂದ ಶ್ರೀರಾಮನನ್ನು ಅಂಕುಶದ ಹೊಯ್ಲಿನಿಂದ ಮದ್ದಾನೆಯನ್ನು ಗಾಯಪಡಿಸುವಂತೆ ಗಾಯಪಡಿಸಿದನು. ಶ್ರೀರಾಮನು ಖರನಿಟ್ಟ ಬಾಣಗಳಿಂದ ಗಾಯಪಡೆದು ಶರೀರವೆಲ್ಲವೂ ರಕ್ತದಿಂದ ನೆನೆಯಲು ಅತ್ಯಂತ ಕೋಪಾಟೋಪದಿಂದ ಖರನ ಮೇಲೆ ಆರು ಬಾಣಗಳನ್ನು ಹೂಡಿ ಒಂದು ಬಾಣಕ್ಕೆ ಆತನ ಶಿರಸ್ಸನ್ನೂ ಎರಡು ಬಾಣಗಳಿಗೆ ಆತನ ಎರಡು ಭುಜಗಳನ್ನೂ ಮೂರು ಕವಲಂಬುಗಳಿಗೆ ಆತನ ವಕ್ಷಃಸ್ಥಳವನ್ನೂ ಗುರಿಮಾಡಿ ಹೊಡೆದನು. ಖರನ ರಥಕ್ಕೆ ಕಟ್ಟಿದ್ದ ಕುದುರೆಗಳ ನೊಗವನ್ನು ಒಂದು ಬಾಣದಿಂದ ಕತ್ತರಿಸಿ ನಾಲ್ಕು ಬಾಣಗಳಿಂದ ಕುದುರೆಗಳನ್ನು ಕೆಡಹಿ ಒಂದು ಬಾಣದಿಂದ ಸಾರಥಿಯ ಶಿರಸ್ಸನ್ನು ಕತ್ತರಿಸಿ ಮೂರು ಬಾಣಗಳಿಂದ ರಥದ ಮೂಕಿಯನ್ನು ಒಡೆದನು. ಎರಡು ಬಾಣಗಳಿಂದ ರಥದ ಅಚ್ಚನ್ನು ಮುರಿದು ಹನ್ನೆರಡು ಬಾಣಗಳಿಂದ ಖರನ ಬಿಲ್ಲುಬಾಣಗಳನ್ನು ಕತ್ತರಿಸಿ ವಜ್ರಾಯುಧಕ್ಕೆ ಸಮಾನವಾದ ಹದಿಮೂರು ಬಾಣಗಳಿಂದ ಖರನನ್ನು ಹೊಡೆದನು. ಖರನು ರಥ ಕುದುರೆ ಸಾರಥಿ ಮೂಕಿ ಅಚ್ಚು ಬಿಲ್ಲು ಬಾಣ ಮೊದಲಾದವೆಲ್ಲವೂ ಹೋಗಲು ರಥದಿಂದ ಕೆಳಕ್ಕೆ ಧುಮುಕಿ ಕೈಯಲ್ಲಿ ಗದೆಯನ್ನು ತೆಗೆದುಕೊಂಡು ಭೂಮಿಯಲ್ಲಿ ಯುದ್ಧಕ್ಕಾಗಿ ನಿಂತನು. ಆ ಸಮಯದಲ್ಲಿ ಶ್ರೀರಾಮನಿಗೂ ಖರನಿಗೂ ಆಗುವ ಯುದ್ಧವನ್ನು ನೋಡಬೇಕೆಂದು ಉತ್ಸಾಹದಿಂದ ಅಂತರಿಕ್ಷಮಾರ್ಗದಲ್ಲಿ ವಿಮಾನಾರೂಢರಾಗಿ ನೋಡುತ್ತಿದ್ದ ದೇವತೆಗಳು ಶ್ರೀರಾಮನ ಪರಾಕ್ರಮವನ್ನು ನೋಡಿ ಅತ್ಯಂತ ಸಂತೋಷಯುಕ್ತರಾದರು.



## ೨೯ ನೆಯ ಅಧ್ಯಾಯ

## ಖರನು ಶ್ರೀರಾಮನನ್ನು ನಿಂದಿಸಿದ್ದು

ಆಮೇಲೆ ಅತ್ಯಂತ ತೇಜಸ್ವಿಯಾದ ಶ್ರೀರಾಮನು ಖರನನ್ನು ಕುರಿತು “ ಎಲೈ ಖರನೇ, ನೀನು ಬಲಿಷ್ಠನಾಗಿ ಚತುರಂಗಬಲಸಮೇತನಾಗಿದ್ದ ಸಮಯದಲ್ಲಿ ಲೋಕವಿರುದ್ಧವಾದ

ಕ್ರೂರಕರ್ಮವನ್ನೇ ಮಾಡುತ್ತಿದ್ದೆ. ಸಮಸ್ತ ಪ್ರಾಣಿಗಳಿಗೂ ಕೋಪವನ್ನು ಹುಟ್ಟಿಸುವ ಪಾಪಕರ್ಮಿಯು ತ್ರಿಲೋಕನಾಯಕನಾದರೂ ಭೂಮಿಯಲ್ಲಿ ಚಿರಂಜೀವಿಯಾಗಿರಲಾರನು. ಲೋಕ ವಿರುದ್ಧವಾದ ಪಾಪಕರ್ಮವನ್ನು ಮಾಡುವ ದುರಾತ್ಮನನ್ನು ಸಮಸ್ತ ಜನರೂ ಸಮೀಪಿಸಿದ ದುಷ್ಟಸರ್ಪವನ್ನು ಕೊಲ್ಲುವಂತೆ ಕೊಲ್ಲುವರು. ಬುದ್ಧಿಪೂರ್ವಕವಾಗಿ ದ್ರವ್ಯಲೋಭದಿಂದಲೂ ಕಾಮಬುದ್ಧಿಯಿಂದಲೂ ಅಕೃತ್ಯವನ್ನು ಮಾಡಿದವನು ಕೆಡದಿರನು. ನೀನು ದಂಡಕಾರಣ್ಯವಾಸಿಗಳಾಗಿ ಮಹಾತ್ಮರಾದ ಋಷಿಗಳನ್ನು ಕೊಂದು ಅದರ ಫಲವನ್ನು ಪಡೆದೆ. ಲೋಕದಲ್ಲಿ ಕ್ರೂರನಾಗಿ ಪಾಪಕರ್ಮಗಳನ್ನು ಮಾಡುವವನು ಜನ್ಮಾಂತರದಲ್ಲಿ ಮಾಡಿದ ಪುಣ್ಯಫಲದಿಂದ ಐಶ್ವರ್ಯವಂತ ನಾಗಿದ್ದರೂ ಬೇರು ಹೋದ ಮರದಂತೆ ಭೂಮಿಯಲ್ಲಿ ಬಹುಕಾಲವಿರಲಾರನು. ಘೋರವಾದ ಪಾಪಕರ್ಮವನ್ನುಮಾಡಿದವನಿಗೆ ಮರಗಳಿಗೆ ಋತುಕಾಲದಲ್ಲಿ ಅವಶ್ಯವಾಗಿ ಪುಷ್ಪೋದಯವಾಗುವಂತೆ ಆ ಪಾಪಕರ್ಮಕ್ಕೆ ತಕ್ಕ ಫಲವು ಅವಶ್ಯವಾಗಿ ಬರುವುದು. ವಿಷದೊಡನೆ ಕೂಡಿದ ಅನ್ನವನ್ನು ಭುಜಿಸಿದವರಿಗೆ ಶೀಘ್ರದಲ್ಲಿಯೇ ದೇಹಪತನವಾಗುವಂತೆ ಪಾಪಕರ್ಮಿಗಳಿಗೆ ಅವರು ಮಾಡಿದ ಪಾಪಕ್ಕೆ ತಕ್ಕ ಫಲವು ಶೀಘ್ರದಲ್ಲಿಯೇ ಆಗುವುದು. ನೀನು ಸಮಸ್ತ ಪ್ರಾಣಿಗಳಿಗೂ ಅಹಿತನಾಗಿ ಘೋರವಾದ ಪಾಪಕರ್ಮವನ್ನು ಮಾಡಿ ನಿನ್ನ ಪ್ರಾಣಗಳನ್ನು ನೀಗಿಕೊಳ್ಳಬೇಕೆಂಬ ಬುದ್ಧಿಯಿಂದ ನನ್ನ ಸಮೀಪಕ್ಕೆ ಬಂದೆ. ಸರ್ಪಗಳು ಹುತ್ತದ ಬಿಲಗಳನ್ನು ಬಗೆದು ಹೊಗುವಂತೆ ನನ್ನಿಂದ ಸಂಧಾನ ಮಾಡಲ್ಪಡುವ ಸುವರ್ಣಮಯವಾದ ಬಾಣಗಳು ನಿನ್ನ ಶರೀರವನ್ನು ಬಗೆದು ಹೊಕ್ಕು ಉಜ್ವಲಿಸುವುವು. ದಂಡಕಾರಣ್ಯವಾಸಿಗಳಾಗಿ ಧರ್ಮಾತ್ಮರಾದ ಋಷಿಗಳನ್ನು ಕೊಂದಂಥ ನೀನು ಈ ಸಮರದಲ್ಲಿ ನನ್ನ ಬಾಣಗಳಿಂದ ಗಾಯಪಡೆದು ಯಮಮಂದಿರವನ್ನು ಸೇರುತ್ತೀಯೆ. ನನ್ನ ಬಾಣಗಳಿಂದ ನಿನ್ನ ಶಿರಚ್ಛೇದವಾಗುವುದನ್ನು ನಿನ್ನಿಂದ ಬಾಧೆಪಟ್ಟಿರುವ ಋಷಿಗಳು ನೋಡುವರು. ಮೊದಲು ನಿನ್ನ ಭುಜಬಲಪರಾಕ್ರಮಗಳಿಂದ ಮುರಿದೋಡಿದ ದೇವತೆಗಳು ವಿಮಾನಾರೂಢರಾಗಿ ಸಮರದಲ್ಲಿ ಬೀಳುವ ನಿನ್ನನ್ನು ನೋಡಿ ಹರ್ಷಪಡುವರು. ಇನ್ನು ನಿನ್ನ ಮನಸ್ಸು ಬಂದಂತೆ ಯುದ್ಧಸನ್ನಾಹಮಾಡಿಕೊಂಡು ನನ್ನೊಡನೆ ಯುದ್ಧವನ್ನು ಮಾಡು. ಇಂದೇ ನನ್ನ ಶರಗಳಿಂದ ತಾಳೆಹಣ್ಣನ್ನು ಕೆಡಹುವಂತೆ ನಿನ್ನ ಶಿರಸ್ಸನ್ನು ಕತ್ತರಿಸಿ ಕೆಡಹುವೆನು " ಎಂದು ನುಡಿದನು.

ಆ ಮಾತನ್ನು ಕೇಳಿ ಖರನು ಕೋಪಯುಕ್ತನಾಗಿ ಕಣ್ಣುಗಳನ್ನು ಕೆಂಪುಮಾಡಿಕೊಂಡು ಶ್ರೀರಾಮನನ್ನು ಕುರಿತು ಈ ರೀತಿಯಲ್ಲಿ ಹೇಳಿದನು : "ಎಲೈ ರಾಮ, ಹೇಡಿಯಾದ ನೀನು ಸಮರದಲ್ಲಿ ಕೆಲವು ಹುಲುರಾಕ್ಷಸರನ್ನು ಕೊಂದ ಗರ್ವದಿಂದ ಬಹು ಪರಾಕ್ರಮಿಯೆಂದು ಹೇಳಿಕೊಳ್ಳುತ್ತ ನಿನ್ನನ್ನು ನೀನೇ ಕೊಂಡಾಡಿಕೊಳ್ಳುತ್ತಿದ್ದೀಯೆ. ಪರಾಕ್ರಮಿಗಳಾದ ಉತ್ತಮ ಪುರುಷರು ಗರ್ವಿಸಿ ತಮ್ಮನ್ನು ತಾವೇ ಹೊಗಳಿಕೊಳ್ಳುವರೆ ? ಹುಲುಮನುಷ್ಯರಾಗಿ ಹೇಡಿಗಳಾದ ಕ್ಷತ್ರಿಯಾಧಮರು ನಿನ್ನಂತೆ ತಮ್ಮ ಪರಾಕ್ರಮವಾರ್ತೆಗಳನ್ನು ನುಡಿದುಕೊಳ್ಳುವರಲ್ಲದೆ ಸತ್ಕುಲ ಪ್ರಸೂತನಾಗಿ ಪರಾಕ್ರಮಿಯಾದವನು ಸಮರದಲ್ಲಿ ಹೆಚ್ಚಾಗಿ ನುಡಿಯನು. ನಿನಗೆ ಮೃತ್ಯುಕಾಲವು ಸಂಭವಿಸಿದ್ದರಿಂದ ನಿನ್ನನ್ನು ನೀನೇ ಸ್ತೋತ್ರಮಾಡಿಕೊಳ್ಳುತ್ತಿದ್ದೀಯೆ. ಇದು ನಿನಗೆ ಸರ್ವಥಾ ಲಘುತ್ವವನ್ನುಂಟುಮಾಡುತ್ತದೆ. ಸಮಸ್ತ ಗೈರಿಕಾದಿಧಾತುಗಳಿಂದ ಪರಿಪೂರ್ಣವಾಗಿ ಚಲನ ವಿಲ್ಲದಿರುವ ಪರ್ವತದಂತೆ ದೃಢವಾಗಿ ಗದಾಪಾಣಿಯಾಗಿ ಮುಂದುಗಡೆಯಲ್ಲಿರುವ ನನ್ನನ್ನು ನೋಡಿದೆಯಾ ? ಇನ್ನು ಗದಾಪಾಣಿಯಾದ ನಾನು ರಣರಂಗದಲ್ಲಿ ನಿನ್ನ ಪ್ರಾಣಾಪಹಾರವನ್ನು ಮಾಡುವುದಕ್ಕೆ ಲೋಕಸಂಹಾರಕನಾದ ಯಮನಂತೆ ನಿಂತಿದ್ದೇನೆ. ನಿನ್ನ ಮನಸ್ಸುಬಂದಂತೆ ನುಡಿದುಕೊ. ನಾನು ನಿನ್ನೊಡನೆ ನುಡಿದಾಡುವವನಲ್ಲ. ಸೂರ್ಯನು ಅಸ್ತಾಚಲವನ್ನೈದಿದರೆ

ಇಂದಿನ ಯುದ್ಧಕ್ಕೆ ವಿಘ್ನವಾಗುವುದು. ನೀನು ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನು ಕೊಂದೆ. ಈಗ ನಾನು ನಿನ್ನನ್ನು ಕೊಂದು ಅವರ ಋಣವನ್ನು ತೀರಿಸುತ್ತೇನೆ" ಎಂದು ನುಡಿದು ಬಲಗೈಯಿಂದ ಸಿಡಿಲಂತೆ ಪ್ರಜ್ವಲಿಸುತ್ತಿದ್ದ ಗದೆಯನ್ನು ತಿರುಗಿಸಿ ಪ್ರಯೋಗಿಸಲು ಆ ಗದೆಯು ಕಿಡಿಗಳನ್ನುಗುಳುತ್ತ ತನ್ನ ಜ್ವಾಲೆಯಿಂದ ಎಲ್ಲವನ್ನೂ ದಹಿಸಿ ಭಸ್ಮಮಾಡುವ ಯಮನ ಕಾಲದಂಡದಂತೆ ಶ್ರೀರಾಮನ ಮೇಲೆ ಎರಗಿತು.

ಶ್ರೀರಾಮನು ತನ್ನ ಬಾಣಗಳಿಂದ ಅದನ್ನು ತುಂಡುತುಂಡು ಮಾಡಲು ಆ ಗದೆಯು ನುಗ್ಗು ನೂರಿಯಾಗಿ ಮಂತ್ರೌಷಧಿಗಳಿಂದ ತಡೆಯಲ್ಪಟ್ಟ ಕೃಷ್ಣಸರ್ಪದಂತೆ ಭೂಮಿಯಲ್ಲಿ ಬಿದ್ದಿತು.



## ೩೦ ನೆಯ ಅಧ್ಯಾಯ

## ಖರಾಸುರನ ವಧೆ

ಬಳಿಕ ಧರ್ಮರಹಸ್ಯವನ್ನು ಬಲ್ಲ ಶ್ರೀರಾಮನು ಕೋಪಯುಕ್ತನಾಗಿ ಖರನನ್ನು ಕುರಿತು ಹೀಗೆಂದನು: "ರಾಕ್ಷಸಾಧಮ, ನಿನ್ನ ಗದೆಯು ಮುರಿದದ್ದರಿಂದ ನಿನ್ನ ಸರ್ವಬಲವೂ ಹೋಯಿತು. ಶಕ್ತಿಹೀನನಾದ ನೀನು ವ್ಯರ್ಥವಾಗಿ ಗರ್ವಪಡುತ್ತಿದ್ದೀಯೆ. ಸಮಸ್ತ ಶತ್ರುಗಳನ್ನೂ ಸಂಹರಿಸುವ ಮಹಿಮೆಯುಳ್ಳದ್ದಾಗಿ ಘೋರವೆಂದು ಪ್ರಸಿದ್ಧವಾದ ನಿನ್ನ ಗದೆಯು ನನ್ನ ಬಾಣದಿಂದ ನುಚ್ಚುನೂರಾಗಿ ಭೂಮಿಯಲ್ಲಿ ಬಿದ್ದಿತು. ನೀನು ಆ ಗದೆಯಿಂದ ನನ್ನನ್ನು ಕೊಂದು ರಾಕ್ಷಸರ ಋಣವನ್ನು ತೀರಿಸುವುದಾಗಿ ಮಾಡಿದ ನಿನ್ನ ಪ್ರತಿಜ್ಞಾವಚನಕ್ಕೆ ಭಂಗವಾಯಿತು. ಇನ್ನು ಕ್ಷುದ್ರಕರ್ಮಿಯೂ ನೀಚನೂ ಆದ ನಿನ್ನ ಶರೀರವನ್ನು ನನ್ನ ಬಾಣಗಳಿಂದ ಕತ್ತರಿಸಿ ನಿನ್ನ ಪ್ರಾಣಗಳನ್ನು ಅಪಹರಿಸುತ್ತೇನೆ. ಇಂದು ನನ್ನ ಬಾಣಗಳಿಂದ ಕತ್ತರಿಸಲ್ಪಟ್ಟ ನಿನ್ನ ಕೊರಳಿನಿಂದ ಹೊರಟು ಬಿಸಿಯಾಗಿ ನೊರೆಗೂಡಿದ ರಕ್ತವನ್ನು ಈ ಭೂಮಿದೇವಿಯು ಪಾನಮಾಡಲಿ. ನೀನು ನನ್ನ ಬಾಣಗಳಿಂದ ಹತನಾಗಿ ದೀರ್ಘನಿದ್ರೆಮಾಡಿದರೆ ದಂಡಕಾರಣ್ಯವಾಸಿಗಳಾದ ಋಷಿಗಳೆಲ್ಲರೂ ಈ ಅರಣ್ಯಕ್ಕೆ ಮೃತ್ಯುವಾದ ರಾಕ್ಷಸಾಧಮನು ಹೋದನೆಂದು ಸುಖವಾಗಿ ವಾಸಮಾಡುವರು. ಎಲೈ ರಾಕ್ಷಸಾಧಮ, ನಿನ್ನಿಂದ ಇಲ್ಲಿರುವ ಮುನಿಗಳು ಆಯಾ ಕಾಲಗಳಲ್ಲಿ ಅಗ್ನಿಹೋತ್ರಗಳನ್ನು ಮಾಡಲಂಜಿಕೊಂಡು ಅಗ್ನಿಯಲ್ಲಿ ಹವಿಸ್ಸನ್ನು ಹೋಮ ಮಾಡದೆ ಇದ್ದಾರೆ" ಎಂದು ಕೋಪಯುಕ್ತನಾಗಿ ನುಡಿದನು.

ಖರನು ಕೋಪದಿಂದ ಶ್ರೀರಾಮನನ್ನು ಧಿಕ್ಕರಿಸಿ ಭಯಂಕರವಾಗಿ ಬೊಬ್ಬಿಟ್ಟು ಆತನನ್ನು ಕುರಿತು "ಎಲೇ ಮನುಷ್ಯ, ನೀನು ಅವಿವೇಕಿ, ಇದಕ್ಕೆ ಸಂದೇಹವಿಲ್ಲ. ನನ್ನ ಸಂಮುಖದಲ್ಲಿ ಭಯವಿಲ್ಲದೆ ನುಡಿಯಬಹುದೆ? ನಿನಗೆ ನನ್ನಿಂದ ಮೃತ್ಯುದೇವತೆಯು ಸನ್ನಿಹಿತವಾಗುವುದು. ಆಯುಸ್ಸು ಪೂರ್ಣವಾದವರು ತಮ್ಮ ದೇಹದ ಹಿತಾಹಿತಗಳನ್ನರಿಯದೆ ಮೈಮರೆತು ಕೃತ್ಯಾಕೃತ್ಯಗಳನ್ನೆಣಿಸದಿರುವುದು ಸ್ವಭಾವ" ಎಂದು ನುಡಿದು ಹುಬ್ಬುಗಳನ್ನು ಗಂಟಿಕ್ಕಿದನು. ಯುದ್ಧಮಾಡುವುದಕ್ಕೆ ಆಯುಧವಿಲ್ಲದೆ ಸಮೀಪದಲ್ಲಿ ಒಂದು ದೊಡ್ಡ ಮರವನ್ನು ನೋಡಿ ಅದನ್ನು ಬೇರುಸಹಿತವಾಗಿ ಕಿತ್ತುಹಾಕಿದರೆ ಶ್ರೀರಾಮನು ಸಮಾಪ್ತಿಯಾಗುವನೆಂದೆಣಿಸಿ ಔಡುಕಚ್ಚಿಕೊಂಡು ತೋಳುಗಳಿಂದ ಆ ಮರವನ್ನು ಬೇರುಸಹಿತವಾಗಿ ಕಿತ್ತು ರಾಮನ ಆಯುಸ್ಸು ತೀರಿತೆಂದು ನುಡಿಯುತ್ತ ಆತನ ಮೇಲೆ ಹಾಕಿದನು. ಮಹಾಪರಾಕ್ರಮಶಾಲಿಯಾದ ಶ್ರೀರಾಮನು ಅತ್ಯಂತ ಕೋಪಯುಕ್ತನಾಗಿ ತನ್ನ ಮೇಲೆ

ಬರುತ್ತಿದ್ದ ಆ ಮರವನ್ನು ತುಂಡುತುಂಡುಗಳಾಗಿ ಕತ್ತರಿಸಿ ಅತ್ಯಂತ ಕೋಪಾಟೋಪದಿಂದ ಶರೀರವೆಲ್ಲವೂ ಬೆವರಿಡಲು ರೋಷದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ಒಂದೇ ಸಾರಿ ಖರನ ಮೇಲೆ ಸಾವಿರ ಬಾಣಗಳನ್ನು ಪ್ರಯೋಗಿಸಿದನು. ಆ ರಾಮಬಾಣಗಳಿಂದ ಗಾಯಪಡೆದ ಖರನ ಶರೀರದಿಂದ, ಪರ್ವತದ ನಿರ್ಝರಗಳಿಂದ ಉದಕಧಾರೆಗಳು ಸುರಿಯುವಂತೆ ನೊರೆಗೂಡಿದ ಬಿಸಿ ರಕ್ತವು ಸುರಿಯುತ್ತಿತ್ತು. ಆಮೇಲೆ ಖರನು ಗಾಯಪಡೆದು ಕಂಗೆಟ್ಟು ರಣರಂಗದಲ್ಲಿ ಉನ್ಮತ್ತನಾಗಿ ರಕ್ತದ ದುರ್ಗಂಧವನ್ನು ಸೂಸುತ್ತ ಶ್ರೀರಾಮನ ಸಮೀಪಕ್ಕೆ ಮುಷ್ಟಿಯುದ್ಧಕ್ಕಾಗಿ ನುಗ್ಗಿಬಂದನು. ಶ್ರೀರಾಮನು ಪಾಪಾತ್ಮನಾಗಿ ಹೇಯಸ್ವರೂಪನಾದ ಆ ರಾಕ್ಷಸನ ಅಂಗಸಂಗವಾಗಬಾರದೆಂದು ಒಂದು ಹೆಜ್ಜೆ ಹಿಮ್ಮೆಟ್ಟಿ ತನ್ನ ಕರಸಂಧಾನ ಚಮತ್ಕಾರದಿಂದ ಬ್ರಹ್ಮಾಸ್ತ್ರಕ್ಕೆ ಸಮಾನವಾದ ಇಂದ್ರನು ಕೊಟ್ಟ ಶರವನ್ನು ಬಿಲ್ಲಿನಲ್ಲಿ ಹೂಡಿ ಎಸೆದನು. ಆ ಬಾಣವು ಸಿಡಿಲಂತೆ ಧ್ವನಿಮಾಡುತ್ತ ಎದೆಯಲ್ಲಿ ತಾಕಲು ಖರನು ಆ ಶರಾಗ್ನಿಯ ಕಿಚ್ಚನ್ನು ತಾಳಲಾರದೆ ಪೂರ್ವದಲ್ಲಿ ಶ್ವೇತಾರಣ್ಯದಲ್ಲಿ ಪರಮೇಶ್ವರನ ಕೋಪಾಗ್ನಿಯಿಂದ ದಹಿಸಲ್ಪಟ್ಟ ಯಮನಂತೆಯೂ ದೇವೇಂದ್ರನ ವಜ್ರಾಯುಧದ ಪೆಟ್ಟಿನಿಂದ ಗಾಯಪಡೆದ ಬಲನಂತೆಯೂ ವಜ್ರಾಯುಧದಿಂದ ಹೊಡೆಯಲ್ಪಟ್ಟ ವೃತ್ರಾಸುರನಂತೆಯೂ ಭೂಮಿಯ ಮೇಲೆ ಬಿದ್ದನು.

ಆಗ ಅವರಿಬ್ಬರ ಅದ್ಭುತವಾದ ಯುದ್ಧವನ್ನು ನೋಡುತ್ತಿದ್ದ ಋಷಿಗಳು ಅತಿಹರ್ಷದಿಂದ ಶ್ರೀರಾಮನನ್ನು ಕುರಿತು “ಶ್ರೀರಾಮ, ಈ ಖರನ ವಧೆಗೋಸ್ಕರ ದೇವೇಂದ್ರನು ದೇವಲೋಕದಿಂದ ಶರಭಂಗಮುನೀಶ್ವರನ ಆಶ್ರಮಕ್ಕೆ ಬಂದು ಆ ಮುನೀಶ್ವರನೊಡನೆ ಮಂತ್ರಾಲೋಚನೆಯನ್ನು ಮಾಡಿದನು. ನಿನ್ನನ್ನು ಋಷಿಗಳು ಈ ಕಾರ್ಯನಿಮಿತ್ತವಾಗಿಯೇ ಉಪಾಯದಿಂದ ಮೆಲ್ಲನೆ ಇಲ್ಲಿಗೆ ಕರೆತಂದರು. ನೀನು ಇಲ್ಲಿಗೆ ಬಂದು ಪಾಪಕರ್ಮಿಗಳಾದ ರಾಕ್ಷಸರನ್ನು ಕೊಂದು ನಮ್ಮ ಕಾರ್ಯವನ್ನು ಆಗುಮಾಡಿಕೊಟ್ಟೆ. ಇನ್ನುಮೇಲೆ ಈ ಅರಣ್ಯದಲ್ಲಿ ಋಷಿಗಳು ಸುಖವಾಗಿರುವರು” ಎಂದು ನುಡಿದರು.

ಆಗ ಅಂತರಿಕ್ಷಮಾರ್ಗದಲ್ಲಿ ರಥಾರೂಢರಾಗಿ ನೋಡುತ್ತಿದ್ದ ದೇವತೆಗಳು ಶ್ರೀರಾಮನ ಯುದ್ಧಕೌಶಲವನ್ನೂ ಶರಸಂಧಾನಚಮತ್ಕಾರವನ್ನೂ ನೋಡಿ ಅತ್ಯಾಶ್ಚರ್ಯಪಟ್ಟು “ಅಬ್ಬಾ! ಶ್ರೀರಾಮನ ಮಹಿಮೆಯನ್ನು ಏನೆಂದು ಹೇಳೋಣ? ರಣರಂಗದಲ್ಲಿ ಖರದೂಷಣರೇ ಮೊದಲಾಗಿ ಕಾಮರೂಪಿಗಳಾದ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನು ತನ್ನ ಬಾಣಗಳಿಂದ ಸಂಹರಿಸಿದನು. ಪರಾಕ್ರಮಿಯಾದ ಈತನ ಶೌರ್ಯವನ್ನೂ ದಿಟ್ಟತನವನ್ನೂ ನೋಡಿದರೆ ಸಾಕ್ಷಾತ್ ಪರಮಪುರುಷನಾದ ನಾರಾಯಣನೆಂದೇ ತೋರುತ್ತದೆ!” ಎಂದು ನುಡಿದು ಅತಿಹರ್ಷದಿಂದ ದೇವದುಂದುಭಿಗಳನ್ನು ಧ್ವನಿಮಾಡಿ ಆತನ ಮೇಲೆ ಪುಷ್ಪವೃಷ್ಟಿಯನ್ನು ಕರೆದು ಕೊಂಡಾಡಿ ತಮ್ಮ ಲೋಕಕ್ಕೆ ಹೋದರು.

ಆ ಬಳಿಕ ಸೀತಾದೇವಿಯನ್ನು ಕರೆದುಕೊಂಡು ಲಕ್ಷ್ಮಣನು ಗುಹೆಯಿಂದ ಹೊರಟು ಶ್ರೀರಾಮನಿದ್ದೆಡೆಗೆ ಬಂದನು. ಆಗ ಶ್ರೀರಾಮನು ಆ ಯುದ್ಧದಲ್ಲಿ ಜಯಲಕ್ಷ್ಮಿಯನ್ನು ಪಡೆದು ಸಮಸ್ತ ಋಷಿಗಳಿಂದಲೂ ಸಂಮಾನಿಸಲ್ಪಟ್ಟವನಾಗಿ ಲಕ್ಷ್ಮಣನಿಂದ ಅಭಿವಂದಿಸಲ್ಪಟ್ಟನು. ಸೀತಾದೇವಿಯು ತನ್ನ ಪತಿಯು ರಣರಂಗದಲ್ಲಿ ಒಬ್ಬನೇ ಬಹುಮಂದಿ ರಾಕ್ಷಸರನ್ನು ಸಂಹರಿಸಿ ಸಮಸ್ತ ಋಷಿಗಳಿಗೂ ಸುಖವನ್ನುಂಟುಮಾಡಿದನೆಂಬ ಹರ್ಷೋದ್ರೇಕದಿಂದ ಶ್ರೀರಾಮನನ್ನು ಆಲಿಂಗಿಸಿಕೊಂಡಳು.

೩೧ನೆಯ ಅಧ್ಯಾಯ

## ಮಾರೀಚನು ಸೀತಾಪಹಾರಾರ್ಥವಾಗಿ ಹೊರಟ ರಾವಣನನ್ನು ತಡೆದದ್ದು

ಅತ್ತ ಜನಸ್ಥಾನದಲ್ಲಿದ್ದ ಅಕಂಪನನೆಂಬ ರಾಕ್ಷಸನು ಅತಿವೇಗದಿಂದ ಲಂಕಾಪಟ್ಟಣಕ್ಕೆ ಹೋಗಿ ರಾವಣನನ್ನು ಕಂಡು "ಜೀಯ, ಜನಸ್ಥಾನದಲ್ಲಿದ್ದ ಖರ ದೂಷಣ ತ್ರಿಶಿರರೇ ಮೊದಲಾದ ಸಮಸ್ತ ರಾಕ್ಷಸರೂ ಹತರಾದರು. ಜನಸ್ಥಾನವೂ ಹಾಳಾಯಿತು. ನಾನೊಬ್ಬನೇ ದೈವಾಧೀನದಿಂದ ತಪ್ಪಿಸಿಕೊಂಡು ಬಂದೆನು" ಎಂದು ಹೇಳಿದನು

ಆ ಮಾತನ್ನು ಕೇಳಿ ರಾವಣನು ಅತ್ಯಂತ ಕೋಪಯುಕ್ತನಾಗಿ ಕಣ್ಣುಗಳನ್ನು ಕೆಂಪುಮಾಡಿ ಕೊಂಡು ಕೋಪಾಗ್ನಿಯಿಂದ ಆತನನ್ನು ದಹಿಸುವಂತೆ ನೋಡುತ್ತ ಅಕಂಪನನನ್ನು ಕುರಿತು "ಎಲೈ ಅಕಂಪನ, ನನಗೆ ಅತ್ಯಂತ ಪ್ರಿಯವಾಗಿ ಮನೋಹರವಾದ ಜನಸ್ಥಾನವನ್ನು ತುಡುಕಿದವನಾರು? ಅವನಿಗೆ ಮೃತ್ಯುವು ಸನ್ನಿಹಿತವಾಯಿತೆಂಬುದು ನಿಶ್ಚಯ. ಇಂಥ ಅಕೃತ್ಯವನ್ನು ಮಾಡಿದವನಾರು? ಅವನಿಗೆ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಇರುವುದಕ್ಕೆ ಅವಕಾಶವಿಲ್ಲ. ಮೂರುಲೋಕಗಳಲ್ಲಿಯೂ ನನಗೆ ವಿರುದ್ಧವನ್ನು ಮಾಡಿ ಸುಖದಲ್ಲಿರುವುದಕ್ಕೆ ದೇವೇಂದ್ರನಿಗಾದರೂ ಸಾಧ್ಯವಿಲ್ಲ. ವಿಷ್ಣುವಾಗಲಿ—ಯಮನಾಗಲಿ—ಕುಬೇರನಾಗಲಿ ನನ್ನೊಡನೆ ವಿರೋಧಮಾಡುವುದಕ್ಕೆ ಸಮರ್ಥರಲ್ಲ. ನಾನು ಯಮನನ್ನೂ ಕೊಲ್ಲಬಲ್ಲೆನು. ವಾಯುವಿನ ಶೀಘ್ರಗಮನವನ್ನು ನಿಲ್ಲಿಸ ಬಲ್ಲೆನು. ಯುದ್ಧರಂಗದಲ್ಲಿ ಸೂರ್ಯಾಗ್ನಿಗಳನ್ನಾದರೂ ದಹಿಸಬಲ್ಲೆನು" ಎಂದು ನುಡಿದನು.

ಅಕಂಪನನು ಕೈಮುಗಿದುಕೊಂಡು ಭಯದಿಂದ "ಜೀಯ, ನನಗೆ ಅಭಯವನ್ನು ಕೊಟ್ಟರೆ ಬಿನ್ನವಿಸುತ್ತೇನೆ" ಎಂದು ನುಡಿಯಲು, ರಾವಣನು "ಅಂಜಬೇಡ, ಹೇಳು" ಎಂದು ಅಭಯವನ್ನು ಕೊಟ್ಟನು. ಅಕಂಪನನು ಅಂಜುತ್ತ ಮೆಲ್ಲಮೆಲ್ಲನೆ "ರಾಕ್ಷಸೇಶ್ವರ, ಅಲ್ಲಿ ನಡೆದ ವೃತ್ತಾಂತವನ್ನು ಯಥಾಕ್ರಮದಿಂದ ಹೇಳುತ್ತೇನೆ, ಕೇಳು. ದಶರಥರಾಜನಿಗೆ ಸಿಂಹದಂತೆ ಸತ್ತ್ವಶಾಲಿಯಾದ ಪುತ್ರನಿದ್ದಾನೆ. ಅವನು ಇನ್ನೂ ಯುವಕ. ಆತನ ಹೆಸರು ಶ್ರೀರಾಮ ನಿಡಿದಾದ ತೋಳುಗಳುಳ್ಳವನು; ಅಪರಿಮಿತವಾದ ಪರಾಕ್ರಮವುಳ್ಳವನು. ಆತನು ಖರ ದೂಷಣ ತ್ರಿಶಿರರು ಮೊದಲಾದ ರಾಕ್ಷಸರನ್ನು ಕೊಂದು ಜನಸ್ಥಾನವನ್ನು ನಾಶಪಡಿಸಿದನು" ಎಂದು ಹೇಳಿದನು.

ಆ ಮಾತನ್ನು ಕೇಳಿ ರಾವಣನು, ಮಲಗಿ ಎದ್ದ ಕೃಷ್ಣಸರ್ಪದಂತೆ ಭೋಂಕರಿಸಿ ಬಿಸುಸುಯ್ದು ಅಕಂಪನನನ್ನು ಕುರಿತು "ರಾಮನು ಜನಸ್ಥಾನಕ್ಕೆ ಯುದ್ಧಕ್ಕೆ ಬಂದಾಗ ದೇವೇಂದ್ರನನ್ನು ಕೂಡಿಕೊಂಡು ಬಂದನೆ?" ಎಂದು ಕೇಳಿದನು.

ಅಕಂಪನನು ಆತನನ್ನು ಕುರಿತು ಹೀಗೆ ನುಡಿದನು : "ಜೀಯ, ಮಹಾತ್ಮನಾದ ಶ್ರೀರಾಮನ ಪರಾಕ್ರಮವನ್ನೂ ಬಲಸಾಹಸಗಳನ್ನೂ ಏನೆಂದು ಹೇಳಲಿ! ಆತನು ಮಹಾತೇಜಸ್ಸುಳ್ಳವನು. ಒಳ್ಳೆಯ ಬಿಲ್ಲುಗಾರ. ಆತನ ವಶದಲ್ಲಿ ಅನೇಕ ದಿವ್ಯಾಸ್ತ್ರಗಳಿವೆ. ಆತನು ರಣರಂಗದಲ್ಲಿ ಧರ್ಮ ಯುದ್ಧವನ್ನಲ್ಲದೆ ಕಪಟಯುದ್ಧವನ್ನು ಮಾಡುವುದಿಲ್ಲ. ಆತನ ಪರಾಕ್ರಮಕ್ಕೆ ಅನುಗುಣವಾದ ಪರಾಕ್ರಮವುಳ್ಳವನೂ ಗಂಭೀರಧ್ವನಿಯುಳ್ಳವನೂ ಆತನ ಒಡಹುಟ್ಟಿದವನೂ ಆದ ಲಕ್ಷ್ಮಣನು

ಪೂರ್ಣಚಂದ್ರನಂತೆ ಮುಖವುಳ್ಳವನು. ಆತನು ಅಗ್ನಿಗೆ ಗಾಳಿಯಂತೆ ರಾಮನಿಗೆ ಅನುಕೂಲನಾಗಿದ್ದಾನೆ. ರಾಮನಿಂದ ಖರನಿದ್ದ ಜನಸ್ಥಾನವು ಕೆಟ್ಟುಹೋಯಿತು. ಆತನಿಗೆ ದೇವತೆಗಳೊಬ್ಬರೂ ಸಹಾಯ ವಾಗಿರಲಿಲ್ಲ. ನಿನ್ನ ಮನಸ್ಸಿನಲ್ಲಿ ಆ ವಿಚಾರವು ಬೇಡ! ಶ್ರೀರಾಮನ ಮತ್ತೊಂದು ಅದ್ಭುತವಾದ ಚರಿತ್ರವನ್ನು ಕೇಳು. ರಣಾಂಗಣದಲ್ಲಿ ಆತನಿಂದ ಪ್ರಯೋಗಿಸಲ್ಪಟ್ಟ ಬಾಣಗಳೆಲ್ಲವೂ ಒಂದೊಂದೂ ಐದು ಮುಖಗಳುಳ್ಳವಾಗಿ ಸಮಸ್ತ ರಾಕ್ಷಸರನ್ನೂ ಸಂಹರಿಸಿದವು! ಮತ್ತೊಂದಾಶ್ಚರ್ಯವನ್ನು ಕೇಳು. ಶ್ರೀರಾಮನೊಬ್ಬನೇ ಆದರೂ ಆತನ ಶರಹತಿಗೆ ಭಯಪಟ್ಟು ತಪ್ಪಿಸಿಕೊಳ್ಳಬೇಕೆಂದು ರಾಕ್ಷಸರು ಯಾವ ಯಾವ ದಿಕ್ಕುಗಳಿಗೆ ಹೋದರೂ ಆಯಾ ದಿಕ್ಕುಗಳಲ್ಲಿ ಅವರಿಗೆ ರಾಮನೇ ಕಾಣುತ್ತಿದ್ದನು. ಜೀಯ, ಈ ರೀತಿಯಲ್ಲಿ ಜನಸ್ಥಾನವು ಆತನಿಂದ ಲಯವಾಯಿತು" ಎಂದು ನುಡಿದನು.

ರಾವಣನು "ಎಲೈ ಅಕಂಪನ, ನಾನು ಜನಸ್ಥಾನಕ್ಕೆ ಹೋಗಿ ಲಕ್ಷ್ಮಣಸಮೇತನಾದ ರಾಮನನ್ನು ಕೊಲ್ಲುತ್ತೇನೆ" ಎಂದು ನುಡಿದನು.

ಅಕಂಪನನು ಆತನನ್ನು ನೋಡಿ "ಜೀಯ. ಶ್ರೀರಾಮನ ಬಲಪೌರುಷ ವೃತ್ತಾಂತವನ್ನು ಕೇಳು. ರಣರಂಗದಲ್ಲಿ ಆತನು ಕೋಪಿಸಿದರೆ ಯಾರಿಗೂ ಸಾಧ್ಯವಾಗುವವನಲ್ಲ. ಆತನು ತನ್ನ ಪರಾಕ್ರಮದಿಂದ ಕೀರ್ತಿಯನ್ನು ಪಡೆದನು. ಅವನು ಅತಿವೇಗದಿಂದ ಪ್ರವಹಿಸುವ ನದಿಯನ್ನಾದರೂ ತನ್ನ ಶರಹತಿಯಿಂದ ತಡೆಯಬಲ್ಲನು. ಕಡೆಗೆ ತನ್ನ ಬಾಣಚಮತ್ಕಾರದಿಂದ ಗ್ರಹನಕ್ಷತ್ರಸಹಿತವಾದ ಗಗನಮಂಡಲ ವನ್ನಾದರೂ ಭೂಮಿಗೆ ಕೆಡಹಬಲ್ಲನು. ಶ್ರೀರಾಮನು ಕೋಪಿಸಿದರೆ ಸಮುದ್ರದ ತಡಿಯನ್ನು ಒಡೆದು ಅದರ ಪ್ರವಾಹದಿಂದ ಲೋಕವೆಲ್ಲಕ್ಕೂ ಪ್ರಳಯವನ್ನುಂಟುಮಾಡುವನು. ಪ್ರಳಯದಲ್ಲಿ ಲಯವಾದ ಪ್ರಜೆಗಳನ್ನು ಪುನಃ ಸೃಷ್ಟಿಸಬಲ್ಲನು! ರಾವಣೇಶ್ವರ, ಪಾಪಿಗಳಿಗೆ ಸ್ವರ್ಗಲೋಕವು ಹೇಗೆ ಅಸಾಧ್ಯವೋ ಹಾಗೆ ಸಮಸ್ತ ರಾಕ್ಷಸರಿಗೂ ಯುದ್ಧರಂಗದಲ್ಲಿ ಶ್ರೀರಾಮನನ್ನು ಜಯಿಸುವುದು ಅಸಾಧ್ಯ. ದೇವಾಸುರರೆಲ್ಲರೂ ಕೂಡಿದರೂ ಆತನನ್ನು ಕೊಲ್ಲುವುದಕ್ಕೆ ಶಕ್ತರಲ್ಲ. ಆದರೂ ಒಂದು ಉಪಾಯವನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳು. ಶ್ರೀರಾಮನ ಸ್ತ್ರೀಯಾದ ಸೀತಾದೇವಿಯು ದಿವ್ಯಸುಂದರಿ. ವಯಸ್ಸಿನಲ್ಲಿ ತರುಣಿ. ಅವಳೊಂದು ಸ್ತ್ರೀರತ್ನವೇ ಸರಿ. ರತ್ನಖಚಿತವಾದ ಸರ್ವಾಭರಣ ಭೂಷಿತೆಯಾದವಳು. ಶ್ರೀರಾಮಲಕ್ಷ್ಮಣರನ್ನು ಮೋಸಗೊಳಿಸಿ ಅವಳನ್ನು ಅಪಹರಿಸಿಕೊಂಡು ಬಂದೆ ಯಾದರೆ ಶ್ರೀರಾಮನು ಸೀತಾದೇವಿಯ ವಿರಹವನ್ನು ಸಹಿಸಲಾರದೆ ಜೀವವನ್ನು ಬಿಡುವನು. ಹಾಗಲ್ಲದೆ ಮತ್ತೊಂದುಪಾಯವಿಲ್ಲ" ಎಂದು ನುಡಿದನು.

ರಾವಣನು ಮನಸ್ಸಿನಲ್ಲಿ ಆಲೋಚನೆ ಮಾಡಿ ಆತನನ್ನು ಕುರಿತು "ಎಲೈ ಅಕಂಪನ, ನೀನು ಹೇಳಿದ ಯುಕ್ತಿಯೇ ಸರಿಯಾದದ್ದು. ನಾಳೆಯ ಪ್ರಾತಃಕಾಲದಲ್ಲಿಯೇ ರಥಾರೂಢನಾಗಿ ಸಾರಥಿಯನ್ನು ಕೂಡಿಕೊಂಡು ನಾನೊಬ್ಬನೇ ಹೋಗಿ ಸೀತಾದೇವಿಯನ್ನು ಅಪಹರಿಸಿಕೊಂಡು ಬರುವೆನು" ಎಂದು ನುಡಿದನು. ಅನಂತರ ಹೇಸರಕತ್ತೆಗಳಿಂದ ಪೋಣಿಸಲ್ಪಟ್ಟು ಸೂರ್ಯಪ್ರಭೆ ಯಂತೆ ಕಾಂತಿಯುಳ್ಳ ರಥವನ್ನೇರಿಕೊಂಡು ರತ್ನಾಭರಣಗಳ ಕಾಂತಿಯಿಂದ ದಿಕ್ಕುಗಳನ್ನು ಬೆಳಗಿಸುತ್ತ ಅಂತರಿಕ್ಷಮಾರ್ಗವಾಗಿ ಹೊರಟು ತಾಟಕಿಯ ಮಗನಾದ ಮಾರೀಚನನ್ನು ಕಾಣಿಸಿಕೊಂಡನು.

ಮಾರೀಚನು ರಾಕ್ಷಸಾಹಾರಕ್ಕೆ ತಕ್ಕ ಭಕ್ಷ್ಯಭೋಜ್ಯಾದಿಗಳಿಂದ ಆತನಿಗೆ ಸತ್ಕಾರಗಳನ್ನು ಮಾಡಿ ಗಂಭೀರಾರ್ಥವುಳ್ಳ ಮಾತುಗಳಿಂದ ಆತನನ್ನು ಕುರಿತು "ರಾವಣ, ನೀನು ಸಕಲಲೋಕನಾಯಕನು. ಸಮಸ್ತ ರಾಕ್ಷಸರಿಗೂ ಒಡೆಯನು. ಅಂಥ ನೀನು ಏಕಾಕಿಯಾಗಿ ಅವಸರದಿಂದ ಇಲ್ಲಿಗೆ ಏಕೆ ಬಂದೆ?" ಎಂದು ಹೇಳಿದನು.

ರಾವಣನು "ಮಾರೀಚ, ಪಾಪಕರ್ಮಿಯಾದ ರಾಮನಿಂದ ನನ್ನ ರಾಕ್ಷಸಕುಲವೆಲ್ಲವೂ ನಷ್ಟವಾಯಿತು. ನನಗೆ ಅತ್ಯಂತಪ್ರಿಯವಾದ ಜನಸ್ಥಾನವು ನಿರ್ಮೂಲವಾಗಿ ಹೋಯಿತು. ನಾನು ಆತನ ಸ್ತ್ರೀಯನ್ನು ಅಪಹರಿಸಿಕೊಂಡು ಹೋಗಬೇಕೆಂದು ಬಂದೆನು. ಆ ಕಾರ್ಯಕ್ಕೆ ನೀನು ಸಹಾಯವಾಗಬೇಕು" ಎಂದು ನುಡಿದನು.

ಮಾರೀಚನು "ಎಲೈ ರಾವಣ, ನಿನಗೆ ಈ ಬುದ್ಧಿಯನ್ನು ಹೇಳಿದವನಾರು? ಸೀತಾದೇವಿಯನ್ನು ಅಪಹರಿಸಿಕೊಂಡು ಬರಹೇಳಿದವನು ನಿನಗೆ ಶತ್ರುವಲ್ಲದೆ ಮಿತ್ರನಲ್ಲ. ಯಾವ ದುರ್ಜನನು ಇಂಥ ಮಾತನ್ನು ಹೇಳಿ ನಿನ್ನಿಂದ ಸತ್ಕಾರವನ್ನು ಪಡೆದನು? ಸೀತಾದೇವಿಯನ್ನು ಅಪಹರಿಸಿಕೊಂಡು ಬರಹೇಳಿದ ರಾಕ್ಷಸಾಧಮನಾರು? ಅವನು ಈ ರಾಕ್ಷಸರ ವಂಶಕ್ಕೆ ಮೃತ್ಯುವನ್ನು ತರುವವನೇ ಸರಿ. ನೀನು ಸೀತಾದೇವಿಯನ್ನು ಅಪಹರಿಸಿಕೊಂಡು ಬರಬೇಕೆಂದೆಣಿಸುವುದು ಸರ್ಪದ ಕೋರೆದಾಡೆಯನ್ನು ಕಿತ್ತು ತರಬೇಕೆಂದು ಯೋಚನೆಮಾಡಿದ ಹಾಗಿದೆ. ಸುಖವಾಗಿ ಅನೇಕ ಭೋಗವನ್ನು ಅನುಭವಿಸಿಕೊಂಡಿರುವ ನಿನ್ನ ತಲೆಯ ಮೇಲೆ ಹೀಗೆ ಕಲ್ಲುಹಾಕಿದವನಾರು? ಶ್ರೀರಾಮನೆಂಬ ಮದ್ದಾನೆಯನ್ನು ಯುದ್ಧರಂಗದಲ್ಲಿ ಎಂದಿಗೂ ನೋಡುವುದಕ್ಕಾದರೂ ಯಾರಿಗೂ ಶಕ್ಯವಲ್ಲ. ಶ್ರೀರಾಮನು ರಾಕ್ಷಸರೆಂಬ ಮೃಗಗಳನ್ನು ಸಂಹರಿಸುವ ನೃಸಿಂಹನು. ಕ್ರೂರವಾದ ಖಡ್ಗವೆಂಬ ಕೋರೆದಾಡಯುಳ್ಳ ಮಲಗಿರುವ ಆ ಸಿಂಹವನ್ನು ಎಬ್ಬಿಸುವುದು ಸರಿಯಲ್ಲ. ರಾಕ್ಷಸೇಶ್ವರ, ಸಮಸ್ತ ರಾಕ್ಷಸರಿಗೂ ಒಡೆಯನಾದ ನೀನು ನನ್ನಲ್ಲಿ ಕೃಪೆಮಾಡಿ ಲಂಕಾಪಟ್ಟಣಕ್ಕೆ ತಿರುಗಿ ಹೋಗಿ ನಿನ್ನ ಸ್ತ್ರೀಯರಲ್ಲಿ ರಮಿಸಿಕೊಂಡು ಸುಖವಾಗಿರು. ವನದಲ್ಲಿ ಸೀತಾಸಮೇತನಾದ ಶ್ರೀರಾಮನು ಸುಖವಾಗಿರಲಿ" ಎಂದು ನುಡಿದನು.

ಆ ಮಾತನ್ನು ಕೇಳಿ ರಾಕ್ಷಸೇಶ್ವರನಾದ ರಾವಣನು ಏನನ್ನೂ ನುಡಿಯದೆ ಮಾರೀಚಾಶ್ರಮದಿಂದ ಲಂಕಾಪಟ್ಟಣಕ್ಕೆ ಹಿಂತಿರುಗಿ ಅರಮನೆಯನ್ನು ಪ್ರವೇಶಿಸಿದನು.



## ೩೨ ನೆಯ ಅಧ್ಯಾಯ

## ಶೂರ್ಪಣಖಿಯು ರಾವಣನ ಬಳಿಗೆ ಹೋದದ್ದು

ಇತ್ತ ಶೂರ್ಪಣಖಿಯು ಪರಾಕ್ರಮಶಾಲಿಗಳಾದ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಖರ ದೂಷಣ ತ್ರಿಶಿರರನ್ನೂ ಶ್ರೀರಾಮನೊಬ್ಬನೇ ವಧಿಸಿದುದನ್ನು ಕಂಡು ಹೆದರಿದಳು. ಕೂಡಲೇ ಮೇಘದಂತೆ ಕೂಗುತ್ತಾ ಲಂಕಾನಗರಕ್ಕೆ ಓಡಿಹೋದಳು. ಅಲ್ಲಿ ಸುವರ್ಣಮಯವಾದ ವೇದಿಕೆಯ ಮೇಲೆ ಸುವರ್ಣಪೀಠದಲ್ಲಿ ಮಂತ್ರಿಗಳಿಂದ ಪರಿವೃತನಾಗಿ ಕುಳಿತಿದ್ದ ರಾವಣನನ್ನು ಕಂಡಳು. ರಾವಣನು ಪ್ರಜ್ವಲಿಸುವ ಅಗ್ನಿಯಂತೆ ಬೆಳಗುತ್ತ ಮಹಾತೇಜಸ್ವಿಯಾಗಿ ಒಪ್ಪುತ್ತಿದ್ದನು. ಯುದ್ಧಭಯಂಕರನಾದ ರಾವಣನು ದೇವಗಂಧರ್ವಾದಿಗಳಿಗೆ ಅಜೇಯನಾಗಿದ್ದನು. ಬಾಯ್ತೆರೆದ ಯಮನಂತೆ ಭಯಂಕರನಾಗಿದ್ದನು. ದೇವಾಸುರಸಂಗ್ರಾಮದಲ್ಲಿ ವಜ್ರಾಯುಧದಿಂದಾದ ಗಾಯವೂ ಐರಾವತದ ಕೋರೆಯಿಂದ ತಿವಿಯಲ್ಪಟ್ಟ ಅವನ ವಕ್ಷಃಸ್ಥಳವೂ ರಾವಣನ ಶೌರ್ಯವನ್ನು ಮೆರೆಯಿಸುತ್ತಿದ್ದವು. ಅವನು ಇಪ್ಪತ್ತು ಭುಜಗಳಿಂದಲೂ ಹತ್ತುಕಂಠಗಳಿಂದಲೂ ಶೋಭಿಸುತ್ತ ಉತ್ತಮವಾದ ವಸ್ತ್ರವನ್ನುಟ್ಟು ರಾಜಲಕ್ಷಣಗಳಿಂದ ರಂಜಿಸುತ್ತಿದ್ದನು. ವಜ್ರವೈಡೂರ್ಯಗಳನ್ನು

ಕೆತ್ತಿದ ಸುವರ್ಣಾಭರಣಗಳನ್ನು ಧರಿಸಿದ್ದನು. ವಿಷ್ಣುವಿನ ಚಕ್ರದ ಹೊಡೆತವನ್ನೂ ನಾನಾಬಗೆಯ ದಿವ್ಯಾಯುಧಗಳ ಪ್ರಹಾರಗಳನ್ನೂ ಸಹಿಸಿಕೊಂಡು ಮೆರೆಯುತ್ತಿದ್ದ ಮಹಾಬಲಶಾಲಿಯು. ಆತನು ಸಮುದ್ರಗಳನ್ನು ಕದಡಬಲ್ಲವನು. ಪರ್ವತಗಳನ್ನು ಕಿತ್ತೆಸೆಯುವ ಸಾಮರ್ಥ್ಯವುಳ್ಳವನು. ಧರ್ಮವನ್ನು ವಿನಾಶಗೊಳಿಸಿ ಪರಸ್ತ್ರೀಯರನ್ನು ಬಲಾತ್ಕರಿಸತಕ್ಕವನು. ದಿವ್ಯಾಸ್ತ್ರಗಳಿಂದ ಯುದ್ಧಮಾಡುತ್ತ ಯಜ್ಞಗಳನ್ನು ಹಾಳುಮಾಡುತ್ತ ಇದ್ದವನು. ಭೋಗವತಿಗೆ ಹೋಗಿ ವಾಸುಕಿಯನ್ನು ಗೆದ್ದು ತಕ್ಷಕನ ಭಾರ್ಯೆಯನ್ನು ಅಪಹರಿಸಿದವನು. ಕುಬೇರನನ್ನು ಪರಾಭವಗೊಳಿಸಿ ಪುಷ್ಪಕವಿಮಾನವನ್ನು ಅಪಹರಿಸಿದವನು. ಚೈತ್ರರಥ ನಂದನ ಮುಂತಾದ ದಿವ್ಯವನಗಳನ್ನು ನಾಶಪಡಿಸತಕ್ಕವನು. ಪರ್ವತಾಕಾರನಾದ ಆ ರಾವಣನು ತನ್ನ ಭುಜಬಲದಿಂದ ಸೂರ್ಯಚಂದ್ರರನ್ನು ಹಿಡಿದು ನಿಲ್ಲಿಸಲು ಸಮರ್ಥನು. ಆತನು ಸಾಮಾನ್ಯನಲ್ಲ. ಅರಣ್ಯದಲ್ಲಿ ಹತ್ತು ಸಾವಿರ ವರ್ಷ ತಪಸ್ಸನ್ನಾಚರಿಸಿ ಬ್ರಹ್ಮನಿಗೆ ತನ್ನ ತಲೆಗಳನ್ನೇ ಕತ್ತರಿಸಿ ಅರ್ಪಿಸಿದ ಧೀರ. ಆತನಿಗೆ ದೇವ ಗಂಧರ್ವ ದಾನವ ಪಿಶಾಚಾದಿ ಗಳಿಂದ ಯುದ್ಧದಲ್ಲಿ ಮರಣವಿಲ್ಲವೆಂದು ಬ್ರಹ್ಮನು ವರವನ್ನು ಕೊಟ್ಟಿದ್ದನು. ಆದರೆ ಮನುಷ್ಯನಿಂದ ಮರಣವಿಲ್ಲವೆಂಬ ವರವನ್ನು ರಾವಣನು ಪಡೆದಿರಲಿಲ್ಲ. ಬ್ರಾಹ್ಮಣರು ಯಾಗಗಳಲ್ಲಿ ದೇವತೋದ್ದೇಶ ದಿಂದ ಹವಿಸ್ಸನ್ನರ್ಪಿಸುತ್ತಿದ್ದರೆ ಅದನ್ನು ಈ ದುಷ್ಟ ರಾವಣನು ತಾನೇ ಅಪಹರಿಸಿಬಿಡುತ್ತಿದ್ದನು. ಅವನು ಯಜ್ಞಕ್ಕೆ ವಿಘ್ನವನ್ನು ಮಾಡುತ್ತ ಬ್ರಾಹ್ಮಣರನ್ನು ಕೊಲ್ಲುತ್ತ ಕ್ರೂರಕರ್ಮಿಯಾಗಿದ್ದನು. ಅವನು ಕಠೋರಸ್ವಭಾವದವನೂ ನಿರ್ದಯನೂ ಪ್ರಜಾಪೀಡಕನೂ ಸರ್ವಲೋಕಭಯಂಕರನೂ ಆಗಿದ್ದನು.

ಹೀಗೆ ದಿವ್ಯವಸ್ತ್ರಾಭರಣಗಳನ್ನೂ ದಿವ್ಯಮಾಲೆಗಳನ್ನೂ ಧರಿಸಿ ಸಿಂಹಾಸನದ ಮೇಲೆ ಮತ್ತೊಬ್ಬ ಯಮನೋ ಎಂಬಂತೆ ಕುಳಿತಿದ್ದ ಆ ರಾಕ್ಷಸೇಂದ್ರನ ಬಳಿಗೆ ಭಯವಿಹ್ವಲಳಾದ ಶೂರ್ಪಣಖಿಯು ಹೋದಳು. ಅವಳು ರಾವಣನಿಗೆ ತನ್ನ ವಿಕಾರವಾದ ರೂಪನ್ನು ತೋರಿಸುತ್ತ ನಿರ್ಭಯದಿಂದ ಅವನನ್ನು ದೂಷಿಸುತ್ತ ಮಾತನಾಡಿದಳು.



## ೩೩ ನೆಯ ಅಧ್ಯಾಯ

## ಶೂರ್ಪಣಖಿಯು ರಾವಣನನ್ನು ನಿಂದಿಸಿದ್ದು

ಆಮೇಲೆ ಶೂರ್ಪಣಖಿಯು ಆಸ್ಥಾನಮಂಟಪದಲ್ಲಿ ಒಡ್ಡೋಲಗದಲ್ಲಿದ್ದ ರಾವಣನನ್ನು ಕುರಿತು ಹೀಗೆ ಹೇಳಿದಳು : "ಎಲೈ ರಾವಣ, ನೀನು ನಿನ್ನ ಮನಸ್ಸು ಬಂದಂತೆ ಕಾಮಭೋಗಗಳಲ್ಲಿ ಲೋಲುಪ್ತಿಯುಳ್ಳವನಾಗಿ ಮೈಮರೆತು ಮುಂದೆ ಬರುವ ಭಯವನ್ನರಿಯದಿದ್ದೀಯೆ. ಲೋಕದಲ್ಲಿ ಸ್ತ್ರೀಲೋಲನೂ ಲೋಭಿಯೂ ಆದ ಅರಸನನ್ನು ಕಂಡರೆ ಶ್ಮಶಾನದಲ್ಲಿರುವ ಬೆಂಕಿಯನ್ನು ಕಂಡಂತೆ ಪ್ರಜೆಗಳು ಹತ್ತಿರಕ್ಕೆ ಬರುವುದಿಲ್ಲ. ಕಾಲೋಚಿತವನ್ನರಿತು ತಕ್ಕ ಕಾರ್ಯಗಳನ್ನು ಮಾಡದೆ ಮೈಮರೆತಿರುವ ಅರಸನು ತನ್ನ ಕಾರ್ಯಗಳನ್ನು ಕೆಡಿಸಿಕೊಂಡು ತಾನು ಕೆಡುವನು. ಅರಸನು ಬುದ್ಧಿಯಿಲ್ಲದೆ ಮಾಡಬಾರದ ಕೃತ್ಯಗಳನ್ನು ಮಾಡುತ್ತ ಪ್ರಜೆಗಳ ಸುಖದುಃಖಗಳನ್ನು ವಿಚಾರಿಸದಿದ್ದರೆ, ಆನೆಗಳು ನದೀತೀರದ ಕೆಸರನ್ನು ಕಂಡು ದೂರದಲ್ಲೇ ತೊಲಗುವಂತೆ ಪ್ರಜೆಗಳು ಆತನ ಸಮೀಪದಲ್ಲಿ ಸೇರರು. ಸ್ವತಂತ್ರಬುದ್ಧಿಯಿಂದ ತನ್ನ ರಾಜ್ಯವನ್ನು ಪರಿಪಾಲಿಸದೆ ತನ್ನ ಹಾನಿವೃದ್ಧಿಗಳನ್ನು ವಿಚಾರಿಸದವನು ಸಮುದ್ರದೊಳಗೆ ಮುಳುಗಿದ ಪರ್ವತದಂತೆ ಪ್ರಕಾಶಿಸುವುದಿಲ್ಲ.

ಪ್ರಯತ್ನಶೀಲರಾದ ದೇವಗಂಧರ್ವರೊಡನೆ ದ್ವೇಷಪಡುವ ಚಪಲಬುದ್ಧಿಯಿಂದ ಅಕೃತ್ಯಗಳನ್ನು ಮಾಡುವ ನಿನಗೆ ರಾಜ್ಯವು ಹೇಗೆ ನಿಂತೀತು ? ಎಲೈ ರಾವಣೇಶ್ವರ ಬಾಲಕನಂತೆ ಬುದ್ಧಿಹೀನನಾಗಿ, ಮಾಡಬೇಕಾದ ಕೃತ್ಯಗಳನ್ನು ಮಾಡದಿರುವ ನಿನಗೆ ರಾಜ್ಯಾಧಿಪತ್ಯವು ಹೇಗೆ ಉಳಿದೀತು ? ಲೋಕದಲ್ಲಿ ಅರಸುಗಳಿಗೆ ಬೇಹುಗಾರರೂ ಭಂಡಾರಗಳೂ ವಶವಾಗಿಲ್ಲದಿದ್ದರೆ ಆ ದೊರೆಗಳು ಪಾಮರಜನರಂತೆ ಲಯವನ್ನೈದುವರು ತನ್ನ ದೃಷ್ಟಿಗೆ ಗೋಚರವಲ್ಲದಿರುವ ವೃತ್ತಾಂತವನ್ನು ಬೇಹುಗಾರರ ಮುಖಾಂತರದಿಂದ ಕೇಳಿ ವಿಚಾರಿಸುವ ಅರಸು ದೀರ್ಘಾಯುಸ್ಸುಳ್ಳವನಾಗಿ ಬದುಕುವನು ನೀನು ಅಜ್ಞಾನಿಗಳಾದ ಪ್ರಧಾನರೊಡನೆ ಕೂಡಿಕೊಂಡು ಲೋಕವೃತ್ತಾಂತವನ್ನು ಬೇಹುಗಾರರ ಮುಖಾಂತರ ವಿಚಾರಿಸದೆಯೂ ನಿನಗೆ ಪ್ರಿಯವಾದ ಜನಸ್ಥಾನವು ನಿರ್ಮೂಲವಾದ ವೃತ್ತಾಂತವನ್ನೂ ಅರಿಯದೆಯೂ ಇದ್ದೀಯೆ. ಜನಸ್ಥಾನದಲ್ಲಿದ್ದ ಖರ ದೂಷಣ ತ್ರಿಶಿರರು ಮೊದಲಾಗಿ ಭೀಮಪರಾಕ್ರಮಿಗಳಾದ ಹದಿನಾಲ್ಕು ಸಾವಿರ ಮಂದಿ ರಾಕ್ಷಸರು ಒಬ್ಬ ರಾಮನಿಂದ ಹತರಾದರು. ಆತನು ರಾಕ್ಷಸರಿಂದ ಭಯವಿಲ್ಲದ ಹಾಗೆ ಅಭಯವನ್ನು ಕೊಡಲು ದಂಡಕಾರಣ್ಯವಾಸಿಗಳಾದ ಋಷಿಗಳು ನಿರ್ಭೀತರಾಗಿ ಸುಖವಾಗಿದ್ದಾರೆ. ಮಹಾಪರಾಕ್ರಮಿಯಾದ ಶ್ರೀರಾಮನು ಜನಸ್ಥಾನದಲ್ಲಿದ್ದವರೆಲ್ಲರನ್ನೂ ಬೆದರಿಸಿ ಓಡಿಸಿದನು. ಎಲೈ ರಾವಣೇಶ್ವರ, ನೀನು ಲೋಭಿಯಾಗಿ ಮೈಮರೆತು ಆತ್ಮಬುದ್ಧಿಯಿಲ್ಲದೆ ಪರರ ಮಾತನ್ನು ಕೇಳಿಕೊಂಡು ನಿನ್ನ ರಾಜ್ಯದಲ್ಲಿರುವ ಉತ್ಪಾತಭಯವನ್ನರಿಯದಿದ್ದೀಯೆ ತನ್ನ ಪ್ರತಾಪ ವನ್ನು ತಾನೇ ಕೊಂಡಾಡಿಕೊಳ್ಳುವ ಅರಸನಿಗೆ ಆಪತ್ಕಾಲವು ಬಂದರೆ ಸಜ್ಜನರೇ ಆತನನ್ನು ಕೆಡಿಸುವರು ಭಯವು ಬಂದಾಗ ಭಯಪಡದೆ ಕಾಲೋಚಿತವಾಗಿ ಕಾರ್ಯವನ್ನು ಮಾಡದ ಅರಸನು ರಾಜ್ಯಭ್ರಷ್ಟನಾಗಿ ಒಂದು ತೃಣಕ್ಕೆ ಸರಿಯಾಗುವನು ಒಣಗಿದ ಕಟ್ಟಿಗೆ ಹೆಂಟೆ ಧೂಳು ಗಳಿಂದ ಆಗುವ ಪ್ರಯೋಜನವೂ ರಾಜ್ಯಭ್ರಷ್ಟನಾದ ಅರಸನಿಂದ ಆಗಲಾರದು ಜೀರ್ಣವಾದ ವಸ್ತ್ರವೂ, ಕಂದಿದ ಪುಷ್ಪಮಾಲಿಕೆಯೂ ಎಷ್ಟು ಪ್ರಯಾಸಪಟ್ಟರೂ ಮೊದಲಂತೆ ಆಗಲಾರವು ಅಂತೆಯೇ ರಾಜ್ಯಭ್ರಷ್ಟನಾದ ದೊರೆಯು ಸಮರ್ಥನಾದರೂ ಮೊದಲಿನಂತೆ ಪೂಜ್ಯನಾಗಲಾರನು. ಧರ್ಮಿಷ್ಠನೂ ಕೃತಜ್ಞನೂ ಜಾಗರೂಕನೂ ಆದ ಅರಸನು ಎಂದಿಗೂ ಕೇಡಿಲ್ಲದೆ ಸುಖವಾಗಿರುವನು ಎಲೈ ರಾವಣ, ನಿನಗೆ ಇಂಥ ಸದ್ಗುಣಗಳು ಒಂದೂ ಇಲ್ಲ ನೀನು ಬುದ್ಧಿಯಿಲ್ಲದವನು. ನೀನು ಆಪ್ತರಾದ ರಾಕ್ಷಸರ ವಧೆಯನ್ನು ಬೇಹುಗಾರರ ಮುಖಾಂತರದಿಂದ ವಿಚಾರಿಸಲಿಲ್ಲ. ನೀನು ವಿಷಯಾಸಕ್ತನಾಗಿ ಸ್ತ್ರೀಲೋಲನಾಗಿರುವುದರಿಂದ ದೇಶಕಾಲಗಳ ವಿಭಾಗಗಳನ್ನರಿತು ಆಯಾ ಕಾಲಗಳಲ್ಲಿ ನಡೆಸಬೇಕಾದ ಕಾರ್ಯಗಳನ್ನು ತಿಳಿಯದಿದ್ದೀಯೆ. ಇದು ದೋಷ, ಇದು ಗುಣ—ಎಂಬ ವಿವೇಕವಿಲ್ಲದೆ ದುಷ್ಕೃತ್ಯಗಳನ್ನು ಮಾಡುತ್ತಿರುವುದರಿಂದ ರಾಜ್ಯಭ್ರಷ್ಟನಾಗಿ ಅನೇಕ ವಿಪತ್ತನ್ನು ಪಡೆಯುವೆ " ಎಂದು ನುಡಿದಳು.

ಆ ವಾಕ್ಯಗಳನ್ನು ಕೇಳಿ ರಾವಣನು ಧನದಿಂದಲೂ ಬಲದಿಂದಲೂ ಗರ್ವಿತನಾಗಿದ್ದರೂ ಶೂರ್ಪಣಖಿಯು ಹೇಳಿದ ದುರ್ಗುಣಗಳು ತನ್ನಲ್ಲಿ ಇದ್ದುದರಿಂದ ಚಿಂತಾಕ್ರಾಂತನಾದನು.



## ೩೪ ನೆಯ ಅಧ್ಯಾಯ

## ಶೂರ್ಪಣಖಿಯು ಶ್ರೀರಾಮನ ವೃತ್ತಾಂತವನ್ನು ರಾವಣನಿಗೆ ಹೇಳಿದ್ದು

ಆಮೇಲೆ ರಾವಣನು ಕೋಪಾಟೋಪದಿಂದ ಶೂರ್ಪಣಖಿಯನ್ನು ಕುರಿತು ' ಎಲೇ ಶೂರ್ಪಣಖಿ, ಶ್ರೀರಾಮನೆಂದರ ಯಾರು ? ಆತನ ಪರಾಕ್ರಮವೇನು ? ಆತನ ಸ್ವರೂಪ ವೆಂಥಾದ್ದು ? ಆತನು ರಾಕ್ಷಸರನ್ನು ಕೊಂದ ಆಯುಧ ಯಾವ ಬಗೆಯದು ? ಖರ ದೂಷಣ ತ್ರಿಶಿರರನ್ನು ಹೇಗೆ ಕೊಂದನು ? ಈ ವೃತ್ತಾಂತಗಳನ್ನು ವಿಸ್ತಾರವಾಗಿ ಹೇಳು " ಎಂದು ಕೇಳಿದನು.

ಶೂರ್ಪಣಖಿಯು " ರಾವಣ, ಶ್ರೀರಾಮನ ರೂಪವನ್ನೂ ಆತನ ಅದ್ಭುತವಾದ ಚಾರಿತ್ರವನ್ನೂ ಕೇಳು . ಆತನು ನಿಡಿದಾದ ತೋಳುಗಳುಳ್ಳವನು ವಿಶಾಲವಾದ ಕಣ್ಣುಗಳುಳ್ಳವನು. ನಾರುಬಟ್ಟೆ ಕೃಷ್ಣಾಜಿನಗಳನ್ನು ಹೊದ್ದುಕೊಂಡು ರೂಪದಲ್ಲಿ ಮನ್ಮಥನಿಗೆ ಸಮಾನನಾಗಿದ್ದಾನೆ. ಆತನು ದಶರಥರಾಜನ ಕುಮಾರ. ಇಂದ್ರಚಾಪದಂತಿರುವ ಬಿಲ್ಲಿಗೆ ಹೆದೆಯನ್ನೇರಿಸಿ ಯಾವಾಗಲೂ ಧರಿಸಿಕೊಂಡಿದ್ದಾನೆ ಕೃಷ್ಣಸರ್ಪಗಳಂತೆ ಅತ್ಯಂತ ವಿಷಜ್ವಾಲೆಯುಳ್ಳ ಸುವರ್ಣಮಯವಾದ ಬಾಣಗಳುಳ್ಳವನಾಗಿದ್ದಾನೆ ಆತನು ರಣರಂಗದಲ್ಲಿ ಬಿಲ್ಲುನಾರಿಯನ್ನು ಸೆಳೆಯುವುದನ್ನೂ ಬತ್ತಳಿಕೆಯಿಂದ ಅಂಬು ತೆಗೆಯುವುದನ್ನೂ ಅವನ್ನು ಬಿಲ್ಲಿನಲ್ಲಿ ಹೂಡಿ ಎಸೆಯುವುದನ್ನೂ ನೋಡಲು ಸಾಧ್ಯವಿಲ್ಲ. ಆತನ ಶರವರ್ಷಗಳಿಂದ ಗಾಯಪಡೆದು ಸತ್ತು ಬೀಳುತ್ತಿದ್ದ ರಾಕ್ಷಸರನ್ನು ಕಂಡೆನಲ್ಲದೆ ಆತನ ಶರಸಂಧಾನಚಮತ್ಕಾರವನ್ನು ನಾನು ಒಂದು ಸಾರಿಯಾದರೂ ಕಾಣಲಿಲ್ಲ. ದೇವೇಂದ್ರನು ಕಲ್ಲುಮಳೆಯನ್ನು ಕರೆಯುವಂತೆ ಶರವರ್ಷವನ್ನು ಕರೆದು ಒಬ್ಬನೇ ಪರಾಕ್ರಮಿಗಳಾದ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನೂ ಖರ ದೂಷಣ ತ್ರಿಶಿರರನ್ನೂ ಮೂರುಗಳಿಗೆಗಳಲ್ಲಿ ಕೊಂದನು. ಆತನು ದಂಡಕಾರಣ್ಯವಾಸಿಗಳಾದ ಋಷಿಗಳಿಗೆ ಅಂಜದಿರುವ ಹಾಗೆ ಅಭಯವನ್ನು ಕೊಟ್ಟಿದ್ದರಿಂದ ಆ ಋಷಿಗಳು ಸುಖವಾಗಿದ್ದಾರೆ ಸ್ತ್ರೀವಧೆಯನ್ನು ಮಾಡಬಾರದೆಂದು ನನ್ನೊಬ್ಬಳನ್ನು ಬಿಟ್ಟು ಉಳಿದವರೆಲ್ಲರನ್ನೂ ಕೊಂದು ಹಾಕಿದನು. ಆತನ ತಮ್ಮನಾದ ಲಕ್ಷ್ಮಣನು ಆತನ ಪರಾಕ್ರಮಾದಿ ಗುಣಗಳಿಗೆ ಸಮಾನನಾದವನು. ಮಹಾಬಲವಂತನು. ರಣರಂಗದಲ್ಲಿ ಕೋಪಿಸಿದರೆ ಒಬ್ಬರಿಗೂ ಗೆಲ್ಲಲು ಸಾಧ್ಯನಲ್ಲ. ಮಹಾಬುದ್ಧಿವಂತನು. ಶ್ರೀರಾಮನ ಬಲಭುಜದಂತಿರುವನು. ರಾಮನ ದೇಹದಿಂದ ಹೊರಗೆ ಸಂಚರಿಸುವ ಪ್ರಾಣದಂತಿರುವನು ಶ್ರೀರಾಮನಿಗೆ ಒಬ್ಬ ಸ್ತ್ರೀ ಇದ್ದಾಳೆ ಅವಳು ಪೂರ್ಣಚಂದ್ರನಿಗೆ ಸಮಾನವಾದ ಮುಖವೂ ತೆರಪಾದ ಕಣ್ಣುಗಳೂ ಉಳ್ಳವಳು. ಯಾವಾಗಲೂ ತನ್ನ ಪತಿಗೆ ಹಿತವಾದ ಕಾರ್ಯವನ್ನೇ ಮಾಡಿಕೊಂಡು ಧರ್ಮಮಾರ್ಗದಲ್ಲಿ ನಡೆಯುವವಳು. ನಿಡಿದಾದ ಕೇಶಗಳಿಂದ ಭೂಷಿತಳಾಗಿದ್ದಾಳೆ. ಮೋಹಕರವಾದ ನಾಸಿಕವುಳ್ಳವಳು. ಬಾಳೆಯಕಂಬದಂತೆ ನುಣುಪಾದ ತೊಡೆಗಳುಳ್ಳವಳು ಮಹಾರೂಪವತಿಯೆಂದು ಪ್ರಸಿದ್ಧಳಾಗಿ ಸಾಕ್ಷಾತ್ ವನಲಕ್ಷ್ಮಿಯಂತೆ ಒಪ್ಪುತ್ತಿದ್ದಾಳೆ. ಅಪರಂಜಿಯಂತೆ ತನುಕಾಂತಿಯುಳ್ಳವಳು ಕೆಂಪಾಗಿ ನಿಡಿದಾದ ಉಗುರುಗಳುಳ್ಳವಳು. ಆಕೆಯ ಹೆಸರು ಸೀತೆ. ಆಕೆಯು ವಿದೇಹರಾಯನ ಮಗಳು ಗಂಭೀರವಾದ ಮಧ್ಯಪ್ರದೇಶವುಳ್ಳವಳು. ಅಷ್ಟು ರೂಪವತಿಯಾದ ಸ್ತ್ರೀಯನ್ನು ಭೂಲೋಕದಲ್ಲಿ ನಾನು ಎಲ್ಲಿಯೂ ಕಾಣಲಿಲ್ಲ. ಆಕೆಯು ಅತಿಹರ್ಷದಿಂದ ಯಾವ ಪುರುಷನನ್ನು ಆಲಿಂಗಿಸಿಕೊಳ್ಳುವಳೋ ಆತನ ಬದುಕೇ ಬದುಕು. ಅವನು ದೇವೇಂದ್ರನಿಗಿಂತಲೂ ಭೋಗಿ. ಈ

ಭೂಲೋಕದಲ್ಲಿ ಅತ್ಯಂತ ಸೊಬಗುಳ್ಳ ಆ ಸ್ತ್ರೀಯು ನಿನ್ನ ಸೌಂದರ್ಯಾದಿ ಗುಣಗಳಿಗೆ ತಕ್ಕವಳು. ನೀನು ಆಕೆಯ ಪತಿಯಾಗುವುದಕ್ಕೆ ಯೋಗ್ಯನು. ನಾನು ಸೀತಾದೇವಿಯ ಸೌಂದರ್ಯವನ್ನು ಕಂಡು ಆಕೆಯನ್ನು ನಿನಗೆ ಹಿಡಿದು ತಂದು ಕೊಡಬೇಕೆಂದು ಯತ್ನಮಾಡಲು ಶ್ರೀರಾಮನ ತಮ್ಮನಾಗಿ ಕ್ರೂರಕರ್ಮಿಯಾದ ಲಕ್ಷ್ಮಣನು ನನ್ನನ್ನು ಹೀಗೆ ವಿಕಾರಮಾಡಿದನು! ಎಲೈ ರಾವಣನೆ, ನೀನು ಚಂದ್ರಮುಖಿಯಾದ ಆ ಸ್ತ್ರೀಯನ್ನು ಕಂಡೆಯಾದರೆ ಆಗಲೇ ಮದನಬಾಣಗಳಿಗೆ ಗುರಿಯಾಗುವೆ. ಆ ಸ್ತ್ರೀಯನ್ನು ಹಿಡಿದು ತಂದು ಹೆಂಡತಿಯನ್ನಾಗಿ ಮಾಡಿಕೊಳ್ಳಬೇಕೆಂಬ ಅಭಿಪ್ರಾಯವಿದ್ದ ಪಕ್ಷದಲ್ಲಿ ಈಗಲೇ ಬಲಗಾಲನ್ನು ಮುಂದಿಟ್ಟು ನಡೆ. ನೃಶಂಸನಾದ ರಾಮನನ್ನು ಕೊಂದು ರಾಕ್ಷಸರಿಗೆ ಸಂತೋಷವನ್ನುಂಟುಮಾಡು. ನನ್ನ ಮಾತನ್ನು ಕೇಳಿ ಬಲಾತ್ಕಾರದಿಂದ ಆ ಸ್ತ್ರೀಯನ್ನು ಹಿಡಿದುಕೊಂಡು ಬಾ. ಇಷ್ಟರಮೇಲೆ ನಿನ್ನೊಳಗೆ ನೀನೇ ವಿಚಾರಿಸಿನೋಡು. ಕಾಲಾಗ್ನಿಯಂತೆ ಭಯಂಕರನಾದ ರಾಮನ ಅಮೋಘವಾದ ಬಾಣಗಳಿಂದ ಜನಸ್ಥಾನದಲ್ಲಿ ಹತರಾದ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನೂ ಖರ ದೂಷಣ ತ್ರಿಶಿರರನ್ನೂ ನೆನೆದು ಕಾಲೋಚಿತವಾದ ಕಾರ್ಯವನ್ನು ನಿಶ್ಚಯಿಸಿಕೊ" ಎಂದು ಹೇಳಿದಳು.



## ೩೫ ನೆಯ ಅಧ್ಯಾಯ

## ಮಾರೀಚನ ಆಶ್ರಮಕ್ಕೆ ರಾವಣನ ಆಗಮನ

ಆಗ ರಾವಣನು ಶೂರ್ಪಣಖಿಯ ಮಾತನ್ನು ಕೇಳಿ ತನ್ನ ಮಂತ್ರಿಗಳಿಗೆ ಅನುಮತಿಯನ್ನು ಕೊಟ್ಟು ಆಸ್ಥಾನದಿಂದ ಕಳಿಸಿ ಮುಂದೆ ಏನುಮಾಡಬೇಕೆಂದು ತನ್ನಲ್ಲಿಯೇ ಆಲೋಚಿಸಿದನು. ಮುಂದಿನ ಕಾರ್ಯದಲ್ಲಿ ಸಾಧಕಬಾಧಕಗಳನ್ನೂ ಬಲಾಬಲಗಳನ್ನೂ ವಿಮರ್ಶೆಮಾಡಿ ಹೀಗೆಯೇ ಅವಶ್ಯವಾಗಿ ಮಾಡಬೇಕೆಂದು ನಿರ್ಣಯಿಸಿ ದೃಢವಾದ ಮನಸ್ಸಿನಿಂದ ವಾಹನಶಾಲೆಗೆ ಹೋದನು. ಅಲ್ಲಿ ಸಾರಥಿಯನ್ನು ಕುರಿತು ರತ್ನಭೂಷಿತವಾದ ಸುವರ್ಣರಥವನ್ನು ಸಜ್ಜುಪಡಿಸಬೇಕೆಂದು ಆಜ್ಞಾಪಿಸಿ ಸಜ್ಜಾದ ರಥದಲ್ಲಿ ಕುಳಿತು ಸಮುದ್ರದ ಕಡೆಗೆ ಪ್ರಯಾಣಮಾಡಿದನು. ಆ ರಾವಣನು ಶ್ವೇತಚಾಮರ ಶ್ವೇತಚ್ಛತ್ರಗಳಿಂದಲೂ ದಶಶಿರಸ್ಸುಗಳಿಂದಲೂ ಶೋಭಿಸುತ್ತಿದ್ದನು. ಕಿವಿಗಳಲ್ಲಿ ಚಿನ್ನದ ಕುಂಡಲಗಳನ್ನು ಧರಿಸಿ ಇಪ್ಪತ್ತು ಭುಜಗಳಿಂದ ವಿರಾಜಿಸುತ್ತ ಸುಂದರವಾದ ವಸ್ತ್ರಗಳನ್ನು ಉಟ್ಟಿದ್ದನು. ದೇವಾರಿಯೂ ಮುನಿಘಾತುಕನೂ ಆದ ಆ ದಶಕಂಠನು ಹತ್ತು ಶಿಖರಗಳುಳ್ಳ ಪರ್ವತದಂತೆ ಒಪ್ಪುತ್ತಿದ್ದನು.

ಅವನು ಪ್ರಯಾಣ ಮಾಡುವಾಗ ಪರ್ವತನಿಬಿಡವಾದ ಸಮುದ್ರತೀರವು ನಾನಾ ಪುಷ್ಪಿತ ವೃಕ್ಷಗಳಿಂದ ಶೋಭಿಸುತ್ತಿರುವುದನ್ನು ನೋಡುತ್ತ ಹೋದನು. ಅಲ್ಲಲ್ಲಿ ಬಾಳೆಯ ಮರಗಳೂ ತೆಂಗಿನ ಮರಗಳೂ ಸಾಲ ತಾಲ ತಮಾಲ ವೃಕ್ಷಗಳೂ ರಂಜಿಸುತ್ತಿದ್ದವು. ಅಲ್ಲಲ್ಲಿ ನಿಯತಾಹಾರದಿಂದ ತಪಸ್ಸುಮಾಡುವ ಋಷಿಗಳೂ ನಾಗ ಗಂಧರ್ವ ಕಿಂನರರೂ ಕ್ರೀಡಿಸುತ್ತಿರುವ ಅಪ್ಸರೆಯರೂ ಗೋಚರಿಸಿದರು. ಹಂಸ ಸಾರಸಾದಿ ಪಕ್ಷಿಗಳು ಸಮುದ್ರತೀರದಲ್ಲಿ ಮನೋಹರವಾಗಿ ಧ್ವನಿಗೈಯುತ್ತಿದ್ದವು. ಶ್ರೀಗಂಧ, ಅಗರು, ತಕ್ಕೋಲ ಮುಂತಾದ ವೃಕ್ಷಗಳು ಸುಗಂಧವನ್ನು ಬೀರುತ್ತಿದ್ದವು.

ಅವುಗಳನ್ನು ನೋಡುತ್ತ ನಾನಾ ನಗರಗಳನ್ನು ದಾಟಿ ರಾವಣನು ಮುಂದೆ ಬರಲು ಅವನಿಗೆ ಒಂದು ನ್ಯಗ್ರೋಧವೃಕ್ಷವು ಗೋಚರಿಸಿತು. ಆ ವೃಕ್ಷದ ಕೊಂಬೆಯಲ್ಲಿ ಹಿಂದೆ ವೈಖಾನಸ ವಾಲಖಿಲ್ಯ ಮೊದಲಾದ ಮಹರ್ಷಿಗಳು ಘೋರವಾದ ತಪಸ್ಸನ್ನಾಚರಿಸುತ್ತಿದ್ದರು. ಒಮ್ಮೆ ಗರುಡನು ಒಂದು ದೊಡ್ಡ ಆನೆಯನ್ನೂ ಮಹತ್ತರವಾದ ಆಮೆಯನ್ನೂ ಉಗುರುಗಳಿಂದ ಹಿಡಿದುಕೊಂಡು ಅವುಗಳನ್ನು ಭಕ್ಷಿಸಬೇಕೆಂದು ಈ ನ್ಯಗ್ರೋಧವೃಕ್ಷದ ಕೊಂಬೆಯ ಮೇಲೆ ಬಂದು ಕುಳಿತನು. ಆ ಭಾರಕ್ಕೆ ಕೊಂಬೆಯು ಮುರಿದು ಹೋಗಲು ಅಲ್ಲಿದ್ದ ಋಷಿಗಳಿಗೆ ತಪೋವಿಘ್ನವಾಗುತ್ತದೆಯೆಂದು ತಿಳಿದು ಮಹಾಬಲಶಾಲಿಯಾದ ಗರುಡನು ಒಂದು ಪಾದದಿಂದ ಆ ಕೊಂಬೆಯನ್ನು ಆಕಾಶದಲ್ಲಿಯೇ ಹಿಡಿದು ನಿಲ್ಲಿಸಿ ತನ್ನ ಆಹಾರವನ್ನು ಭಕ್ಷಿಸಿದನು ; ತಪಸ್ಸಿಗೆ ವಿಘ್ನಮಾಡುತ್ತಿದ್ದ ನಿಷಾದರನ್ನು ಕೊಂದು ವಾಲಖಿಲ್ಯಾದಿ ಮುನಿಗಳಿಗೆ ಹಿತವನ್ನುಂಟುಮಾಡಿ ಅವರ ಕಷ್ಟವನ್ನು ಪರಿಹರಿಸಿದನು. ಅನಂತರ ಆನಂದೋದ್ರೇಕದಿಂದ ಗರುಡನು ದೇವಲೋಕಕ್ಕೆ ಹೋಗಿ ದೇವೇಂದ್ರನ ಅರಮನೆಯಲ್ಲಿ ರಕ್ಷಿಸಲ್ಪಟ್ಟಿದ್ದ ಅಮೃತವನ್ನು ಅಪಹರಿಸಿ ತಂದನು. ಇಂಥ ಪೂರ್ವಕಥೆಯುಳ್ಳ ಸುಭದ್ರವೆಂಬ ಆ ಆಲದ ಮರವನ್ನು ನೋಡುತ್ತ ರಾವಣನು ರಮ್ಯವಾದ ಮಾರೀಚನ ಆಶ್ರಮಕ್ಕೆ ಬಂದನು.

ಆಗ ಮಾರೀಚನು ರಾವಣನಿಗೆ ನಾನಾ ಬಗೆಯ ಸತ್ಕಾರಗಳನ್ನು ಮಾಡಿ ಭೋಜನ ಮಾಡಿಸಿದನು. ಆಮೇಲೆ ರಾವಣನನ್ನು ಕುರಿತು “ರಾಕ್ಷಸೇಶ್ವರ, ಲಂಕೆಯಲ್ಲಿ ನಿಮ್ಮೆಲ್ಲರಿಗೂ ಕುಶಲವೆ ? ಇಷ್ಟು ಬೇಗನೆ ಪುನಃ ನೀನು ಇಲ್ಲಿಗೆ ಬರಲು ಕಾರಣವೇನು ?” ಎಂದು ಪ್ರಶ್ನೆ ಮಾಡಿದನು. ಆಗ ವಾಕ್ಯಕೋವಿದನಾದ ರಾವಣನು ಮಾರೀಚನನ್ನು ಕುರಿತು ಚತುರೋಕ್ತಿಗಳಿಂದ ಮುಂದೆ ಹೇಳುವ ಪ್ರಕಾರದಲ್ಲಿ ನುಡಿದನು.

---

## ೩೬ ನೆಯ ಅಧ್ಯಾಯ

## ರಾವಣನು ಸೀತಾಪಹರಣಕ್ಕಾಗಿ ಮಾರೀಚನನ್ನು ಕರೆದದ್ದು

ರಾವಣನು ಮಾರೀಚನನ್ನು ಕುರಿತು “ಎಲೈ ಮಾರೀಚನೆ, ನನ್ನ ಮಾತನ್ನು ಸಾವಧಾನ ಚಿತ್ತನಾಗಿ ಕೇಳು : ಈಗ ನಾನು ಬಹು ದುಃಖಾಕ್ರಾಂತನಾಗಿ ಬಂದಿದ್ದೇನೆ. ನನಗೆ ನೀನು ಪರಮ ಆಪ್ತನು. ಜನಸ್ಥಾನವು ನನಗೆ ಗಡಿದುರ್ಗವಾಗಿ ಅತಿಪ್ರಿಯವಾದದ್ದೆಂದು ನೀನು ಬಲ್ಲೆ. ಅಲ್ಲಿ ನನ್ನ ಪ್ರಾಣಕ್ಕೆ ಸಮಾನನೂ ನನ್ನ ಒಡಹುಟ್ಟಿದವನೂ ಮಹಾಬಲಿಷ್ಠನೂ ಆದ ಖರನನ್ನೂ ನನ್ನ ತಂಗಿಯಾದ ಶೂರ್ಪಣಖಿಯನ್ನೂ ಇರಿಸಿ ಅವರಿಗೆ ಸಹಾಯವಾಗಿ ಅಸಹಾಯಶೂರರಾದ ತ್ರಿಶಿರ ದೂಷಣರನ್ನೂ ಬಲವಂತರಾದ ಅನೇಕ ರಾಕ್ಷಸರನ್ನೂ ನಿಯಮಿಸಿದ್ದೆನು. ಅವರೆಲ್ಲರೂ ನನ್ನಿಂದ ಅನೇಕ ಲಕ್ಷ ಸಂಖ್ಯಾತವಾದ ದ್ರವ್ಯಗಳಿಂದ ಸನ್ಮಾನಿಸಲ್ಪಟ್ಟವರಾಗಿ ಜನಸ್ಥಾನದಲ್ಲಿ ಸುಖವಾಗಿದ್ದರು. ಹೀಗಿರುವಲ್ಲಿ ದಂಡಕಾರಣ್ಯದಲ್ಲಿದ್ದ ಋಷಿಗಳಿಗೆ ಅಭಯವನ್ನು ಕೊಟ್ಟು ರಾಮ ಎಂಬವನು ಯುದ್ಧವನ್ನು ಮಾಡಿ ರಣಾಂಗಣದಲ್ಲಿ ತನ್ನ ತೀಕ್ಷ್ಣಬಾಣಗಳಿಂದ ಖರದೂಷಣ ತ್ರಿಶಿರರನ್ನೂ ಮಹಾಪರಾಕ್ರಮಿಗಳಾದ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಸಂಹರಿಸಿ

ಋಷಿಗಳನ್ನು ಸಂತೋಷಪಡಿಸಿದನಂತೆ. ರಾಮನ ದುರ್ವರ್ತನವನ್ನು ಕಂಡು ಅವನ ತಂದೆಯಾದ ದಶರಥರಾಯನು ಊರಿನಿಂದ ಹೊರಡಿಸಲು ಮತ್ತೆಲ್ಲಿಯೂ ಬದುಕಲಾರದೆ ತನ್ನ ಸ್ತ್ರೀಯನ್ನು ಕೂಡಿಕೊಂಡು ದಂಡಕಾರಣ್ಯಕ್ಕೆ ಬಂದು ಸಮಸ್ತ ರಾಕ್ಷಸಸೇನೆಯನ್ನು ಕೊಂದುಹಾಕಿದನಂತೆ. ಆ ಕ್ಷತ್ರಿಯಾಧಮನು ದುಶ್ಶೀಲನು. ಕಠಿಣಚಿತ್ತನು ಕ್ರೂರಬುದ್ಧಿಯುಳ್ಳವನು. ಅತಿಮೂರ್ಖನು. ಅತಿಲುಬ್ಧನು. ಅತಿಕಾಮಿಯು. ಧರ್ಮಮಾರ್ಗವನ್ನು ಬಿಟ್ಟವನು. ಸಮಸ್ತ ಪ್ರಾಣಿಗಳಿಗೂ ದ್ರೋಹವನ್ನೆಣಿಸುವವನು. ಆತನು ಪೂರ್ವವೈರವಿಲ್ಲದಿದ್ದೂ ತನ್ನ ಸತ್ತ್ವದಿಂದ ಅತ್ಯಂತ ಸಾಹಸವನ್ನು ಮಾಡಿ ನನ್ನ ಒಡಹುಟ್ಟಿದವಳಾದ ಶೂರ್ಪಣಖಿಯ ಕಿವಿ ಮೂಗುಗಳನ್ನು ಕತ್ತರಿಸಿ ವಿಕಾರಮಾಡಿದನು. ಆದಕಾರಣ ದೇವಸ್ತ್ರೀಗೆ ಸಮಾನಳೂ ರಾಮನ ಸ್ತ್ರೀಯೂ ಆದ ಸೀತಾದೇವಿಯನ್ನು ಅಪಹರಿಸಿಕೊಂಡು ಬರಬೇಕೆಂದು ಬಂದೆನು. ನೀನು ಸಹಾಯವಾಗಿ ನನ್ನೊಡನೆ ಬಂದರೆ ನಿನ್ನ ಬಲದಿಂದ ಆ ತರುಣಿಯನ್ನು ಅಪಹರಿಸಬಹುದು. ಉಳಿದವರನ್ನು ನಾನು ಲೆಕ್ಕಿಸುವುದಿಲ್ಲ. ಆದಕಾರಣ ನೀನು ನನಗೆ ಸಹಾಯವಾಗು. ನೀನು ಮಹಾಬಲಪರಾಕ್ರಮಿಯು ; ಅತ್ಯಂತ ಸತ್ತ್ವವುಳ್ಳವನು. ಯುದ್ಧರಂಗದಲ್ಲಿ ನಿನಗೆ ಎದುರಾಗಿ ನಿಲ್ಲುವವರಿಲ್ಲ. ನೀನು ಕಪಟಯುದ್ಧದಲ್ಲಿ ಅತ್ಯಂತ ಚಾತುರ್ಯವುಳ್ಳವನು ; ಉಪಾಯಜ್ಞನು. ಆದಕಾರಣ ನಿನ್ನ ಸಹಾಯವನ್ನು ಬಯಸಿ ನಿನ್ನ ಸಮೀಪಕ್ಕೆ ಬಂದೆನು. ಈ ನನ್ನ ಕಾರ್ಯವನ್ನು ನೀನೇ ಸಾಧ್ಯಮಾಡಿಕೊಡಬೇಕು. ನೀನು ಸುವರ್ಣಮಯವಾಗಿ ಅಲ್ಲಲ್ಲಿ ಬೆಳ್ಳಿಯ ಬೊಟ್ಟುಗಳುಳ್ಳ ಮೃಗಸ್ವರೂಪವನ್ನು ತಾಳಿ ರಾಮನ ಆಶ್ರಮದ ಮುಂದೆ ಸೀತಾದೇವಿಯ ದೃಷ್ಟಿಗೆ ಗೋಚರನಾದರೆ ಆ ದೇವಿಯು ನಿನ್ನನ್ನು ಕಂಡು ನಿನ್ನನ್ನು ಹಿಡಿದು ತಂದುಕೊಡಬೇಕೆಂದು ತನ್ನ ಪತಿಯಾದ ರಾಮನೊಡನೆ ಹೇಳುವಳು. ಆ ಮಾತನ್ನು ಕೇಳಿ ರಾಮನೂ ಲಕ್ಷ್ಮಣನೂ ನಿನ್ನನ್ನು ಹಿಡಿಯುವುದಕ್ಕಾಗಿ ಹೊರಡುತ್ತಾರೆ. ಅವರು ಪರ್ಣಶಾಲೆಯಿಂದ ದೂರ ಹೋದಮೇಲೆ ಸೀತೆಯು ಒಂಟಿಯಾಗಿ ಉಳಿಯುತ್ತಾಳೆ. ಆ ಸಮಯದಲ್ಲಿ ಒಬ್ಬಳೇ ಆಗಿರುವ ಸೀತಾದೇವಿಯನ್ನು ಚಂದ್ರಕಲೆಯನ್ನು ರಾಹು ತುಡುಕುವಂತೆ ಅಪಹರಿಸಿ ತಂದು ನಾನು ಕೃತಾರ್ಥನಾಗುತ್ತೇನೆ. ಆಮೇಲೆ ರಾಮನು ಸೀತಾದೇವಿಯ ವಿರಹದುಃಖದಿಂದ ಕಂಗೆಟ್ಟು ಶರೀರವು ಕೃಶವಾಗಿ ಯುದ್ಧವನ್ನು ಮಾಡುವುದಕ್ಕೆ ಸಾಮರ್ಥ್ಯವಿಲ್ಲದೆ ಹೋಗುವನು" ಎಂದು ನುಡಿದನು.

ಆ ಮಾತನ್ನು ಕೇಳಿ ಮಾರೀಚನು ಮುಖಕಾಂತಿಗುಂದಿ ಬಾಯೊಣಗಿ ತುದಿನಾಲಿಗೆಯಿಂದ ತುಟಿಯನ್ನು ನೆಕ್ಕುತ್ತ ತೇಲುಗಣ್ಣುಳ್ಳವನಾಗಿ ಮರಣಾವಸ್ಥೆಯನ್ನು ಪಡೆದ ಮನುಷ್ಯನಂತೆ ರಾವಣನ ಮುಖವನ್ನು ನೋಡುತ್ತ ನಿಂತನು. ರಾಮನು ಮಾಡಿದ ರಾಕ್ಷಸವಧೆಯನ್ನೂ ಪರಾಕ್ರಮವನ್ನೂ ಬಲ್ಲವನಾದ್ದರಿಂದ ಪುನಃ ರಾಮನ ವಿರೋಧದಿಂದ ತನಗೆ ಖರದೂಷಣಾದಿಗಳ ಅವಸ್ಥೆಯು ಬರುವುದೆಂದು ಕಂಗೆಟ್ಟನು. ಆ ಮಾರೀಚನು ರಾವಣನಿಗೆ ಅಭಿಮುಖವಾಗಿ ಕೈಮುಗಿದುಕೊಂಡು ಆತನಿಗೂ ತನಗೂ ಹಿತವಾದ ಮಾತುಗಳನ್ನು ಹೇಳತೊಡಗಿದನು.



## ೩೭ ನೆಯ ಅಧ್ಯಾಯ

## ಮಾರೀಚನು ರಾವಣನಿಗೆ ಹೇಳಿದ ಬುದ್ಧಿವಾದ

ಮಾರೀಚನು ರಾವಣನನ್ನು ಕುರಿತು ಈ ಪ್ರಕಾರ ಹೇಳಿದನು: "ರಾವಣೇಶ್ವರ, ಲೋಕದಲ್ಲಿ ಅರಸರಿಗೆ ಹಿತವನ್ನು ಬಯಸದೆ ಕಾಲೋಚಿತವಾಗಿ ಪ್ರಿಯವಾದ ಮಾತುಗಳನ್ನೇ ನುಡಿದುಕೊಂಡು ಮುಂದಣ ಕಾರ್ಯದೃಷ್ಟಿಯುಳ್ಳವರಾದರೂ ತಿಳಿಯದವರಂತಿರುವ ಮನುಷ್ಯರು ಬಹುಮಂದಿ ಯುಂಟು. ಆತನಿಗೆ ಅಪ್ರಿಯವಾದರೂ ಮುಂದೆ ಹಿತವಾದ ಕಾರ್ಯದೃಷ್ಟಿಯನ್ನರಿತು ನುಡಿಯುವಂಥವರು ದುರ್ಲಭರಾಗಿರುವರು. ನಿನಗೆ ಮುಂದೆ ಹಿತವಾಗುವ ಹಾಗೆ ನುಡಿಯುವ ನನ್ನ ಮಾತನ್ನು ಕೇಳು : ಅತ್ಯಂತ ಸದ್ಗುಣಸಂಪತ್ತಿಯಿಂದ ಪ್ರಸಿದ್ಧನಾದ ಶ್ರೀರಾಮನನ್ನು ನೀನು ಅರಿತವನಲ್ಲ. ಆತನು ದೇವೇಂದ್ರನಿಗೂ ವರುಣನಿಗೂ ಸಮಾನನಾದವನು ; ನೀನು ಅತ್ಯಂತ ಚಪಲನೂ ದುರಾಚಾರಿಯೂ ಆಗಿದ್ದೀಯೆ. ವಿಶೇಷವಾಗಿ ಹೇಳಿ ಪ್ರಯೋಜನವೇನು ? ಶ್ರೀರಾಮನು ಕೋಪಯುಕ್ತನಾದರೆ ಲೋಕದಲ್ಲಿ ರಾಕ್ಷಸರೇ ಇಲ್ಲದಂತೆ ಮಾಡುವನು. ನಿನ್ನ ಬಾಂಧವರಾದ ರಾಕ್ಷಸರು ಸುಖವಾಗಿರಬೇಕೆಂಬ ಪಕ್ಷದಲ್ಲಿ ಶ್ರೀರಾಮನನ್ನು ಕೆಣಕಬೇಡ. ಸೀತಾ ದೇವಿಯ ಜನನವು ನಿನ್ನ ವಿನಾಶಕ್ಕೆ ಕಾರಣವಾದೀತು. ನೀನು ಹಾಳಾಗಬಾರದೆಂದೂ ಸೀತಾದೇವಿಯ ನೆವದಿಂದ ಮೃತ್ಯುವನ್ನು ಬಯಸದಂತಿರಬೇಕೆಂದೂ ಅತಿಕಾಮುಕನಾದ ರಾವಣನಿಂದ ಅನೇಕ ಸಂಪತ್ತುಳ್ಳ ಲಂಕಾಪಟ್ಟಣವು ಕೆಟ್ಟಿತು ಎಂಬ ಅಪಕೀರ್ತಿಯು ಬರಬಾರದೆಂದೂ ಎಣಿಸುವ ಪಕ್ಷದಲ್ಲಿ ಶ್ರೀರಾಮನನ್ನು ಕೆಣಕಬೇಡ. ಲೋಕದಲ್ಲಿ ದುರ್ಬುದ್ಧಿಯಾದ ಅರಸನು ತನ್ನ ಮನಸ್ಸು ಬಂದಂತೆ ಸಂಚರಿಸುತ್ತ ಅತಿಕಾಮುಕನಾಗಿ ದುರ್ವರ್ತನದಲ್ಲಿ ನಡೆದರೆ ಬಂಧುಗಳೂ ರಾಜ್ಯವೂ ಕೆಟ್ಟು ತಾನೂ ನಾಶವಾಗಿ ನರಕವನ್ನೈದುವನೆಂದು ಧರ್ಮಶಾಸ್ತ್ರವುಂಟು. ಶ್ರೀರಾಮನು ತನ್ನ ಸ್ತ್ರೀಯಾದ ಸೀತಾದೇವಿ ಯನ್ನು ಬಿಟ್ಟು ಮನಸ್ಸುಬಂದಂತೆ ಸಂಚರಿಸಿಕೊಂಡಿರುವ ದುರಾಚಾರಿಯಲ್ಲ ; ಲುಬ್ಧನಲ್ಲ : ದುಶ್ಶೀಲನಲ್ಲ ; ಕ್ಷತ್ರಿಯಾಧಮನಲ್ಲ ; ಧರ್ಮಗುಣಗಳನ್ನು ಬಿಟ್ಟವನಲ್ಲ ; ಪ್ರಜೆಗಳಲ್ಲಿ ಕ್ರೂರಬುದ್ಧಿ ಯುಳ್ಳವನಲ್ಲ ; ಸಮಸ್ತ ಪ್ರಾಣಿಗಳಿಗೂ ಹಿತವನ್ನು ಮಾಡುವವನು. ಕೈಕೇಯಿದೇವಿಗೆ ಮನಸೋತು ಮಾಡಬಾರದ ಕಾರ್ಯವನ್ನು ಕೈಕೊಂಡ ತನ್ನ ತಂದೆಯಾದ ದಶರಥರಾಯನ ಆಜ್ಞೆಯನ್ನು ಪರಿಪಾಲಿಸ ಬೇಕೆಂದೂ ತನ್ನ ಬಲತಾಯಿಯಾದ ಆ ದೇವಿಗೆ ಸಂತೋಷವನ್ನುಂಟುಮಾಡಬೇಕೆಂದೂ ಸಮಸ್ತ ರಾಜ್ಯ ಭೋಗಗಳನ್ನು ಬಿಟ್ಟು ತನ್ನ ಸ್ತ್ರೀಯಾದ ಸೀತಾದೇವಿಯನ್ನೂ ತಮ್ಮನಾದ ಲಕ್ಷ್ಮಣನನ್ನೂ ಕರೆದು ಕೊಂಡು ದಂಡಕಾರಣ್ಯಕ್ಕೆ ಬಂದನಲ್ಲದೆ ಮಾಡಬಾರದ ಕೃತ್ಯವನ್ನು ಮಾಡಿ ತಂದೆ ತಾಯಿಗಳಿಂದ ಹೊರಡಿಸಲ್ಪಟ್ಟು ಬಂದವನಲ್ಲ. ಅವನು ಅಜ್ಞಾನಿಯಲ್ಲ, ಕಾಮುಕನಲ್ಲ. ಅವನು ಧರ್ಮಸ್ವರೂಪನು. ಮಹಾಸತ್ವಪರಾಕ್ರಮವುಳ್ಳವನು. ಸಮಸ್ತದೇವತೆಗಳಿಗೂ ದೇವೇಂದ್ರನು ಒಡೆಯನಾದಂತೆ ಶ್ರೀರಾಮನು ಸಮಸ್ತ ಲೋಕಗಳಿಗೂ ಒಡೆಯನಾಗಬಲ್ಲವನು. ಅಂಥ ಸತ್ಪುರುಷನ ಮೇಲೆ ಅಪರಾಧ ವನ್ನು ಕಲ್ಪಿಸಿ ಇಲ್ಲದ ಮಾತುಗಳನ್ನು ನುಡಿಯುವುದು ನಿನಗೆ ಯೋಗ್ಯವಲ್ಲ. ಶ್ರೀರಾಮನ ಪರಾಕ್ರಮ ದಿಂದ ರಕ್ಷಿಸಲ್ಪಟ್ಟ ಸಾಕ್ಷಾತ್ ಸೂರ್ಯಪ್ರಭೆಯಂತಿರುವ ಸೀತಾದೇವಿಯನ್ನು ಅಪಹರಿಸಬೇಕೆಂದು ಹೇಗೆ ತಾನೆ ಮನಸ್ಸಿನಲ್ಲೆಣಿಸುತ್ತೀಯೆ ? ಎಲೈ ರಾವಣೇಶ್ವರ, ಶ್ರೀರಾಮನು ಯಜ್ಞಪುರುಷನಿಗೆ ಸಮಾನನು. ಶ್ರೀರಾಮನೆಂಬ ಯಮನನ್ನು ಕೆಣಕುವುದು ನಿನಗುಚಿತವಲ್ಲ. ನಿಷ್ಕಾರಣವಾಗಿ

ರಾಜ್ಯಸುಖವನ್ನು ಬಿಟ್ಟು ನಿನ್ನ ಪ್ರಾಣಗಳಿಗೆ ವಿಘ್ನವನ್ನು ತಂದುಕೊಳ್ಳುವುದು ಯಾವ ಕೆಲಸ ? ಶ್ರೀರಾಮನ ಪರಾಕ್ರಮವು ಅಪರಿಮಿತವಾದದ್ದು. ಆತನು ತನ್ನ ಧನುರ್ಬಾಣಗಳಿಂದ ರಕ್ಷಿಸಿ ಕೊಂಡಿರುವ ಸೀತಾದೇವಿಯನ್ನು ಅಪಹರಿಸಿ ತರಲು ಹೇಗೆ ತಾನೆ ಸಾಧ್ಯ ? ಶ್ರೀರಾಮನೆಂಬ ಸಿಂಹರಾಜನ ತೊಡೆಯಮೇಲೆ ಕುಳಿತುಕೊಂಡು ಆತನ ಪ್ರಾಣಗಳಿಗಿಂತಲೂ ಅತಿಪ್ರಿಯಳಾಗಿ ಆತನ ಚಿತ್ತವೃತ್ತಿಯನ್ನರಿತು ನಡೆಯುವ ಸೀತಾದೇವಿಯನ್ನು ಅಪಹರಿಸಿ ತರುವುದಕ್ಕೆ ನಿನಗೆ ಸಾಮರ್ಥ್ಯ ವೆತ್ತಣದು ? ಸೀತಾದೇವಿಯು ಸಾಕ್ಷಾತ್ ಯಜ್ಞಪುರುಷನ ಜ್ವಾಲೆಗೆ ಸಮಾನಳಾದವಳು. ಆ ದೇವಿಯನ್ನು ಅಪಹರಿಸಿ ತನ್ಮೂಲಕ ರಾಮನನ್ನು ಎದುರಿಸಿ ಯುದ್ಧದಲ್ಲಿ ಆತನ ಶರಹತಿಗಳಿಂದ ನಿನ್ನ ಜೀವವನ್ನು ನೀಗಿಕೊಂಡು ರಾಜ್ಯಭೋಗವನ್ನು ಕೆಡಿಸಿಕೊಳ್ಳುವುದು ನಿನಗೆ ಉಚಿತವಲ್ಲ. ನೀನು ಬುದ್ಧಿವಂತನಾದ ಪಕ್ಷದಲ್ಲಿ ನಿನ್ನ ಒಡಹುಟ್ಟಿದವರಾದ ವಿಭೀಷಣಾದಿಗಳೊಡನೆಯೂ ನಿನ್ನ ಪ್ರಧಾನರೊಡನೆಯೂ ಮಂತ್ರಾಲೋಚನೆಮಾಡಿ ಸೀತಾದೇವಿಯನ್ನಪಹರಿಸಬಹುದೋ ಬಾರದೋ— ಎಂಬ ಗುಣದೋಷಗಳನ್ನೂ ನಿನ್ನ ಬಲವನ್ನೂ ಶ್ರೀರಾಮನ ಬಲವನ್ನೂ ವಿಚಾರಿಸಿಕೊಂಡು ಈ ಎರಡು ಕಾರ್ಯಗಳಲ್ಲಿ ನಿನಗೆ ಹಿತವಾದುದನ್ನು ಮಾತ್ರ ಮಾಡು. ರಣರಂಗದಲ್ಲಿ ನೀನು ಆತನ ಎದುರಾಗಿ ನಿಲ್ಲಲಾರೆಯೆಂದು ನನ್ನ ಮನಸ್ಸಿಗೆ ಕಾಣುತ್ತದೆ. ಆದ್ದರಿಂದ ನನ್ನ ಮಾತನ್ನು ಅಂಗೀಕರಿಸು. ನೀನು ಲಂಕಾಪಟ್ಟಣಕ್ಕೆ ಹೋಗಿ ಸುಖವಾಗಿರುವುದೇ ಶ್ರೇಯಸ್ಕರವಾದ ಕಾರ್ಯ" ಎಂದು ಬುದ್ಧಿಹೇಳಿದನು.



## ೩೮ ನೆಯ ಅಧ್ಯಾಯ

## ಮಾರೀಚನು ತನ್ನ ಅನುಭವವನ್ನು ತಿಳಿಸಿ ಹೇಳಿದ ಬುದ್ಧಿವಾದ

ಮಾರೀಚನು ಮತ್ತೆ ಹೀಗೆಂದನು : " ರಾಕ್ಷಸೇಶ್ವರ, ಶ್ರೀರಾಮನ ಅದ್ಭುತವಾದ ಒಂದು ಕಥೆಯನ್ನು ಕೇಳು : ನಾನು ಒಂದು ಸಮಯದಲ್ಲಿ ವಿನೋದಾರ್ಥವಾಗಿ ಹೊರಟು ಸಾವಿರ ಆನೆಗಳ ಸತ್ತ್ವವನ್ನು ಧರಿಸಿ ಪರ್ವತಾಕಾರವಾಗಿ ನೀರುಂಡ ಮೇಘದಂತೆ ತನುಕಾಂತಿಯುಳ್ಳವನಾಗಿ ದರ್ಶನಮಾತ್ರದಿಂದಲೇ ಸಮಸ್ತ ಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತ ಲಾಳಮುಂಡಿಗೆಯನ್ನು ಆಯುಧವಾಗಿ ಮಾಡಿಕೊಂಡು ನಿತ್ಯದಲ್ಲಿಯೂ ದಂಡಕಾರಣ್ಯದಲ್ಲಿದ್ದ ಋಷಿಗಳ ಮಾಂಸವನ್ನು ಭಕ್ಷಿಸಿಕೊಂಡು ತಿರುಗಾಡುತ್ತಿದ್ದೆನು. ವಿಶ್ವಾಮಿತ್ರನು ನನ್ನ ಬಾಧೆಯನ್ನು ತಾಳಲಾರದೆ ದಶರಥರಾಯನ ಸಮೀಪಕ್ಕೆ ಹೋಗಿ ಆ ರಾಯನನ್ನು ಕುರಿತು ' ಎಲೈ ದಶರಥರಾಯನೆ, ನಾನು ಈಗ ಯಾಗವನ್ನು ಮಾಡಬೇಕೆಂದು ಯತ್ನಮಾಡಿಕೊಂಡಿದ್ದೇನೆ. ದಂಡಕಾರಣ್ಯದಲ್ಲಿ ಮಾರೀಚನೆಂಬ ರಾಕ್ಷಸನು ನನ್ನನ್ನು ಯಜ್ಞಮಾಡಗೊಡದೆ ಬಾಧೆಪಡಿಸುತ್ತಿದ್ದಾನೆ. ಆತನ ಬಾಧೆಯನ್ನು ಪರಿಹರಿಸಿ ನನ್ನ ಯಾಗವನ್ನು ನೆರವೇರಿಸುವಂತೆ ನಿನ್ನ ಮಗನಾದ ಶ್ರೀರಾಮನನ್ನು ನನ್ನ ಯಾಗಕ್ಕೆ ಸಹಾಯವಾಗಿ ಕಳುಹಿಸು ' ಎಂದನು.

ಅದಕ್ಕೆ ದಶರಥರಾಯನು ' ವಿಶ್ವಾಮಿತ್ರಮುನಿಗಳೆ, ನನ್ನ ಕುಮಾರನಾದ ಶ್ರೀರಾಮನು ಇನ್ನೂ ಹನ್ನೆರಡು ವರ್ಷದ ಬಾಲಕ; ಸಾಧನೆಯನ್ನು ಮಾಡಿದವನಲ್ಲ; ಇಂಥವನನ್ನು ರಾಕ್ಷಸರೊಡನೆ ಯುದ್ಧಕ್ಕೆ ಹೇಗೆ ಕಳುಹಿಸಲಿ ? ನಾನೇ ನನ್ನ ಸಮಸ್ತ ಬಲವನ್ನೂ ಕೂಡಿಕೊಂಡು

ನಿಮ್ಮ ಯಾಗರಕ್ಷಣಾರ್ಥವಾಗಿ ಬರುವೆನಲ್ಲದೆ ಶ್ರೀರಾಮನನ್ನು ಕಳುಹಿಸಲಾರೆನು ' ಎಂದು ನುಡಿದನು.

ಆ ಮಾತನ್ನು ಕೇಳಿ ವಿಶ್ವಾಮಿತ್ರನು ' ದಶರಥ, ಲೋಕದಲ್ಲಿ ಶ್ರೀರಾಮನನ್ನುಳಿದು ಮತ್ತಾರೂ ರಾಕ್ಷಸಸಂಹಾರವನ್ನು ಮಾಡುವುದಕ್ಕೆ ಸಮರ್ಥರಲ್ಲ. ನಿನ್ನ ಸೇನೆಯು ನಿನ್ನ ಸಮೀಪದಲ್ಲೇ ಇರಲಿ. ನಾನು ತೇಜಸ್ವಿಯಾಗಿ ಮಹಾಬಲವಂತನಾದ ಶ್ರೀರಾಮನೊಬ್ಬನನ್ನೇ ಕರೆದುಕೊಂಡು ನನ್ನ ತಪೋವನಕ್ಕೆ ಹೋಗುತ್ತೇನೆ. ನಿನಗೆ ಅನೇಕ ಶ್ರೇಯಸ್ಸಾಗಲಿ ' ಎಂದು ಆಶೀರ್ವಾದಮಾಡಿ ಶ್ರೀರಾಮನನ್ನು ಕರೆದುಕೊಂಡು ದಂಡಕಾರಣ್ಯದಲ್ಲಿದ್ದ ತನ್ನ ಆಶ್ರಮಕ್ಕೆ ಹೋದನು. ಅಲ್ಲಿ ಯಾಗದೀಕ್ಷೆಯನ್ನು ಕೈಕೊಂಡು ಶ್ರೀರಾಮನನ್ನು ಯಾಗರಕ್ಷಣಾರ್ಥವಾಗಿ ತನ್ನ ಸಮೀಪದಲ್ಲಿಟ್ಟು ಕೊಂಡು ಯಾಗದಲ್ಲಿ ತೊಡಗಿದನು. ಬಾಲಕನಾದ ಶ್ರೀರಾಮನು ಒಂದು ವಸ್ತ್ರವನ್ನು ಧರಿಸಿಕೊಂಡು ನೀಲಮೇಘದಂತೆ ತನುಕಾಂತಿಯುಳ್ಳವನಾಗಿ ತನ್ನ ತೇಜಸ್ಸಿನಿಂದ ದಂಡಕಾರಣ್ಯವನ್ನು ಬೆಳಗಿಸುತ್ತ ಉದಯಾಚಲವನ್ನೈದಿದ ಚಂದ್ರನಂತೆ ಸೊಬಗುಳ್ಳವನಾಗಿ ರತ್ನಖಚಿತವಾದ ಕುಂಡಲಗಳನ್ನು ಧರಿಸಿಕೊಂಡು ತನ್ನ ಬಿಲ್ಲನ್ನು ವಿಲಾಸಾರ್ಥವಾಗಿ ತಿರುಗಿಸುತ್ತಿದ್ದನು. ಆ ಸಮಯದಲ್ಲಿ ನಾನು ಕಾಲಮೇಘದಂತೆ ತನುಕಾಂತಿಯುಳ್ಳವನಾಗಿ ಕೊಬ್ಬಿದ ಗೂಳಿಯಂತೆ ಪರ್ವತಾಕಾರವಾದ ಶರೀರ ವುಳ್ಳವನಾಗಿ ವಿಶ್ವಾಮಿತ್ರಮುನೀಶ್ವರನ ಆಶ್ರಮಕ್ಕೆ ಹೋಗಲು ಶ್ರೀರಾಮನು ತನ್ನ ಬಿಲ್ಲಿಗೆ ಹೆದೆಯನ್ನೇರಿಸಿ ನನಗೆದುರಾಗಿ ನಿಂತನು. ನಾನು ಆತನನ್ನು ಬಾಲಕನೆಂದು ತಿಳಿದು ಲೆಕ್ಕಿಸದೆ ವಿಶ್ವಾಮಿತ್ರ ಮುನೀಶ್ವರನ ಹೋಮವೇದಿಕೆಯ ಸಮೀಪಕ್ಕೆ ವೇಗದಿಂದ ಹೋಗುತ್ತಿದ್ದೆನು. ಆಗ ಶ್ರೀರಾಮನು ಸಾಣೆ ಹಿಡಿಯಲ್ಪಟ್ಟು ಅತ್ಯಂತ ಕೂರಲಗುಳ್ಳ ಒಂದು ಬಾಣವನ್ನು ನನ್ನ ಮೇಲೆ ಎಸೆಯಲು ಆ ಬಾಣವು ನನ್ನನ್ನು ನೂರುಗಾವುದ ದೂರ ಎತ್ತಿಕೊಂಡು ಹೋಗಿ ಸಮುದ್ರದಲ್ಲಿ ಹಾಕಿತು ! ಈ ಪ್ರಕಾರ ರಾಮನು ನನ್ನನ್ನು ಕೊಲ್ಲದೆ ಬಹುದೂರಕ್ಕೆ ಅಟ್ಟಿದನು ! ಆ ಬಳಿಕ ನಾನು ಅತ್ಯಂತ ಗಂಭೀರವಾದ ಸಮುದ್ರೋದಕದಲ್ಲಿ ಮುಳುಗಿ ಮೂರ್ಛಾಗತನಾಗಿ ಸ್ವಲ್ಪ ಹೊತ್ತಿನಮೇಲೆ ತಿಳಿದೆದ್ದು ಮೆಲ್ಲಗೆ ಲಂಕಾಪಟ್ಟಣಕ್ಕೆ ಬಂದೆನು. ಆತನಿಂದ ನನಗೆ ಅಂಥ ಅವಸ್ಥೆಯು ಬಂದಿತು. ನನಗೆ ಸಹಾಯವಾಗಿ ಬಂದ ರಾಕ್ಷಸರು ಬಾಲಕನಾದ ಶ್ರೀರಾಮನಿಂದ ಯಮಮಂದಿರವನ್ನೈದಿದರು. ಆದಕಾರಣ ನನ್ನ ಮಾತನ್ನು ಕೇಳದೆ ನೀನು ಆತನೊಡನೆ ವಿರೋಧವನ್ನು ತಂದುಕೊಂಡರೆ ಶೀಘ್ರದಲ್ಲಿ ನಿನ್ನ ಪ್ರಾಣಗಳಿಗೆ ನೀನೇ ಸಂಚಕಾರ ತಂದುಕೊಳ್ಳುವೆ. ಮೇಲಾಗಿ ಲಂಕಾಪಟ್ಟಣದಲ್ಲಿ ಅನೇಕ ವಿಲಾಸಯುಕ್ತರಾಗಿ ತಮ್ಮ ಸ್ತ್ರೀಯರೊಡನೆ ವಿಹರಿಸುತ್ತ ಅತ್ಯುತ್ಸವದಿಂದಿರುವ ರಾಕ್ಷಸರಿಗೆ ಮಾರಿಯನ್ನು ತರುವೆ. ಅನೇಕ ಉಪ್ಪರಿಗೆ ರಥ ತೋರಣಗಳಿಂದ ಅಲಂಕಾರಯುಕ್ತವಾದ ಲಂಕಾಪಟ್ಟಣವು ಸೀತಾದೇವಿಯ ನಿಮಿತ್ತ ವಾಗಿ ಹಾಳಾಗುವುದನ್ನು ನಿನ್ನ ಕಣ್ಣಿನಿಂದೆ ನೋಡುವೆ. ನೀರುಹಾವುಗಳುಳ್ಳ ಕೊಳಗಳಲ್ಲಿ ಮತ್ಸ್ಯ ಗಳಿದ್ದರೆ ಗರುಡಪಕ್ಷಿಗಳು ವೈರದಿಂದ ಆ ಹಾವುಗಳನ್ನು ತುಡುಕಿ ಅವುಗಳ ಸಹವಾಸಮಾಡುತ್ತಿರುವ ಮತ್ಸ್ಯಗಳನ್ನೂ ಭಕ್ಷಿಸುವಂತೆ, ಆತನು ಲಂಕಾಪಟ್ಟಣದಲ್ಲಿ ಪಾಪಾತ್ಮನಾದ ನಿನ್ನ ಸಹವಾಸ ಮಾಡುತ್ತಿರುವ ರಾಕ್ಷಸರನ್ನೂ ಕೊಲ್ಲುವನಲ್ಲದೆ ಉಳಿಸನು. ಲಂಕಾಪಟ್ಟಣದಲ್ಲಿ ಉತ್ತಮವಾದ ದಿವ್ಯಭೂಷಣಗಳನ್ನು ತೊಟ್ಟು ದಿವ್ಯವಾದ ಪುಷ್ಪಮಾಲಿಕೆಗಳನ್ನು ಧರಿಸಿ ದಿವ್ಯಗಂಧಾದಿಗಳನ್ನು ಅನುಲೇಪಿಸಿ ದಿವ್ಯಭೋಗಗಳನ್ನು ಅನುಭವಿಸಿಕೊಂಡಿರುವ ರಾಕ್ಷಸರು ಪಾಪಿಯಾದ ನಿನ್ನ ಸಹವಾಸದಿಂದ ಮರಣವನ್ನೈದುವುದನ್ನು ನೀನು ಕಾಣುವೆ. ಕೆಲವು ರಾಕ್ಷಸರು ತಮ್ಮ ಸ್ತ್ರೀಯರನ್ನು ಕೈಹಿಡಿದುಕೊಂಡು ನಾನಾದಿಕ್ಕುಗಳಿಗೆ ಹೋಗುವುದನ್ನೂ ಕೆಲವರು ರಣದಲ್ಲಿ ಮಡಿಯಲು ಅವರ ಸ್ತ್ರೀಯರು ಗೋಳಿಟ್ಟು ರೋದನಮಾಡುವುದನ್ನೂ ನೀನು ನೋಡುವೆ. ಶ್ರೀರಾಮನ ಶರಸಂಧಾನ

ದಿಂದ ಗಾಯಪಡೆದು ಸಕಲ ರಾಕ್ಷಸರೂ ಬೀಳಲು ಶೂನ್ಯವಾಗಿ ಅಗ್ನಿಜ್ವಾಲೆಯಿಂದ ದಗ್ಧವಾದ ಮರದಂತೆ ಕಾಣುವ ಲಂಕಾಪಟ್ಟಣವನ್ನು ನೀನು ನೋಡುವೆ. ಪರಸ್ತ್ರೀಸಂಸರ್ಗಕ್ಕಿಂತಲೂ ಅಧಿಕವಾದ ಪಾಪವಿಲ್ಲ! ರಾವಣ, ನಿನಗೆ ಸಾವಿರ ಮಂದಿ ಸ್ತ್ರೀಯರಿದ್ದಾರೆ. ಆ ಸ್ತ್ರೀಯರೊಡನೆ ರಮಿಸಿಕೊಂಡು ಸ್ವದಾರನಿರತನಾಗಿ ಸುಖವಾಗಿರು. ನಿನ್ನ ಅಭಿಮಾನವನ್ನೂ ಐಶ್ವರ್ಯವನ್ನೂ ರಾಜ್ಯವನ್ನೂ ಪ್ರಾಣವನ್ನೂ ಸ್ತ್ರೀಯರನ್ನೂ ಮಿತ್ರವರ್ಗವನ್ನೂ ಉಳಿಸಿಕೊಂಡು ಸಮಸ್ತ ಭೋಗಗಳನ್ನು ಅನುಭವಿಸು. ಸುಖವಾಗಿರಬೇಕಾದ ಪಕ್ಷದಲ್ಲಿ ಶ್ರೀರಾಮನೊಡನೆ ವಿರೋಧವನ್ನು ಮಾಡಿಕೊಳ್ಳಬೇಡ. ಮಿತ್ರನಾದ ನನ್ನ ಹಿತವಾಕ್ಯವನ್ನು ಮೀರಿ ಸೀತಾದೇವಿಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದೆಯಾದರೆ ನೀನು ನಿನ್ನ ಸಮಸ್ತ ಬಂಧುವರ್ಗ ಮಿತ್ರವರ್ಗ ಸಹಿತನಾಗಿ ಶ್ರೀರಾಮನ ಬಾಣಗಳಿಂದ ಹತನಾಗಿ ಯಮಲೋಕವನ್ನು ಸೇರುವೆ. ಈ ಅರ್ಥದಲ್ಲಿ ಸಂದೇಹವಿಲ್ಲ" ಎಂದು ಹೇಳಿದನು.



## ೩೯ ನೆಯ ಅಧ್ಯಾಯ

## ಮಾರೀಚನ ಹಿತೋಪದೇಶ (ಮುಂದುವರಿದದ್ದು)

ಮಾರೀಚನು ಪುನಃ ಹೇಳಿದನು : "ರಾವಣೇಶ್ವರ, ಆ ಬಳಿಕ ನಡೆದ ವೃತ್ತಾಂತವನ್ನು ಕೇಳು : ಒಂದುಸಲ ನಾನು ಕೆಲವು ರಾಕ್ಷಸರನ್ನು ಕೂಡಿಕೊಂಡು ಮೃಗರೂಪವನ್ನು ತಾಳಿ ದಂಡಕಾರಣ್ಯಕ್ಕೆ ಹೋದೆನು. ಭಯಂಕರವಾದ ಕೋರೆದಾಡೆಗಳುಳ್ಳ ದೀಪ್ತಜಿಹ್ವನೂ ಮಹಾಬಲವಂತನಾದ ತೀಕ್ಷ್ಣದಂಷ್ಟ್ರನೂ ನಾನೂ ಮಾಂಸಭಕ್ಷಣಮಾಡುವ ಮೃಗರೂಪದಿಂದ ದಂಡಕಾರಣ್ಯದಲ್ಲಿಯೂ ಪುಣ್ಯತೀರ್ಥಗಳಲ್ಲಿಯೂ ಗ್ರಾಮಾಂತರಗಳಲ್ಲಿಯೂ ಸಂಚರಿಸಿಕೊಂಡು ವೃಕ್ಷಮೂಲಗಳಲ್ಲಿಯೂ ಅಗ್ನಿಹೋತ್ರಗಳಲ್ಲಿಯೂ ಇದ್ದ ತಪಸ್ವಿಗಳನ್ನು ಬೆದರಿಸುತ್ತ ಧರ್ಮಚಾರಿಗಳಾದ ಆ ತಪಸ್ವಿಗಳ ರಕ್ತಮಾಂಸಗಳನ್ನು ಭಕ್ಷಿಸುತ್ತಿದ್ದೆವು. ದಂಡಕಾರಣ್ಯದಲ್ಲಿದ್ದ ಋಷಿಗಳನ್ನು ಬೆದರಿಸಿ ಓಡಿಸುತ್ತ ಅವರ ರಕ್ತಮಾಂಸಾಹಾರಗಳಿಂದ ಸೊಕ್ಕಿ ಅವರು ಮಾಡುತ್ತಿದ್ದ ಸಮಸ್ತ ಕರ್ಮಗಳನ್ನೂ ಕೆಡಿಸುತ್ತಿದ್ದೆವು. ಆ ಸಮಯದಲ್ಲಿ ದಂಡಕಾರಣ್ಯದಲ್ಲಿ ತಪಸ್ವಿಯಾಗಿದ್ದ ಶ್ರೀರಾಮನನ್ನೂ ಆತನ ಪತ್ನಿಯಾದ ಸೀತಾದೇವಿಯನ್ನೂ ಆತನ ತಮ್ಮನೂ ಮಹಾರಥಿಕನೂ ಆದ ಲಕ್ಷ್ಮಣನನ್ನೂ ಕಂಡು ಮೂವರೂ ಅಟ್ಟಿಕೊಂಡು ಹೋದೆವು. ಶ್ರೀರಾಮನು ನಮ್ಮನ್ನು ಕಂಡು ಮೂರು ಶರಗಳನ್ನು ಎಸೆದನು. ನಾನು ಮೊದಲೇ ಆತನಿಂದ ಕಂಗೆಟ್ಟಿದ್ದವನಾದ ಕಾರಣ ಭಯಪಟ್ಟು ಓಡಿಬಂದೆನು. ಅವರಿಬ್ಬರೂ ಬಾಣಗಳಿಂದ ಗಾಯಪಡೆದು ಯಮಲೋಕವನ್ನೈದಿದರು. ದೈವಾಧೀನದಿಂದ ಜೀವಸಹಿತವಾಗಿ ಉಳಿದ ನಾನು ಈ ಆಶ್ರಮದಲ್ಲಿ ಸಂನ್ಯಾಸವನ್ನು ಕೈಕೊಂಡು ತಪಸ್ವಿಯಾಗಿದ್ದೇನೆ. ಈಗಲೂ ಮರಗಳಲ್ಲಿ ನಾರುಬಟ್ಟೆಗಳನ್ನು ಕಟ್ಟಿ ಕೃಷ್ಣಾಜಿನವನ್ನು ಹೊದ್ದುಕೊಂಡು ಬಿಲ್ಲುಬಾಣಗಳನ್ನು ಹಿಡಿದುಕೊಂಡಿರುವ ಶ್ರೀರಾಮನನ್ನು, ಮೃತ್ಯುಪಾಶವನ್ನು ಕೈಯಲ್ಲಿ ಹಿಡಿದಿರುವ ಪ್ರಳಯಕಾಲದ ಯಮನಂತೆ ಕಾಣುತ್ತಿದ್ದೇನೆ! ರಾವಣ, ನನ್ನ ಕಣ್ಣಿಗೆ ಎಲ್ಲಿ ನೋಡಿದರೂ ಸಾವಿರಮಂದಿ ಶ್ರೀರಾಮರು ಕಾಣುತ್ತಿದ್ದಾರೆ. ಈ ಅರಣ್ಯವೆಲ್ಲವೂ ರಾಮರೂಪವಾಗಿಯೇ ತೋರುತ್ತಿದೆ. ಸ್ವಪ್ನದಲ್ಲಿಯೂ ಶ್ರೀರಾಮನನ್ನು ಕಂಡು ಬೆದರುತ್ತ ಎದ್ದು ಕುಳಿತುಕೊಂಡು ಮೂರ್ಛಾಗತನಾಗುತ್ತಿದ್ದೇನೆ. 'ರತ್ನ' 'ರಥ' ಎಂಬ ರಕಾರವನ್ನು ಮೊದಲಾಗುಳ್ಳ ನಾಮೋಚ್ಚಾರಣೆಗಳನ್ನು ಕೇಳಿದರೂ ಆ ಶಬ್ದಗಳು ನನಗೆ ಭಯವನ್ನುಂಟುಮಾಡುತ್ತಿವೆ! ಈ ರೀತಿಯಲ್ಲಿ ನಾನು

ಶ್ರೀರಾಮನ ಪ್ರಭಾವವನ್ನು ಬಲ್ಲೆನು. ಅಂಥ ರಾಮನೊಡನೆ ವಿರೋಧಮಾಡಿಕೊಳ್ಳುವುದು ನಿನಗುಚಿತವಲ್ಲ. ಆತನು ರಣರಂಗದಲ್ಲಿ ಬಲಿಚಕ್ರವರ್ತಿಯನ್ನೂ ನಮುಚಿ ರಾಕ್ಷಸನನ್ನೂ ಸುಲಭವಾಗಿ ಕೊಲ್ಲಬಲ್ಲವನು. ಎಲೈ ರಾವಣನೆ, ನೀನು ಶ್ರೀರಾಮನ ಸಂಗಡ ಯುದ್ಧವನ್ನು ಮಾಡುವುದಕ್ಕೆ ಸಮರ್ಥನಲ್ಲ ಸೀತಾದೇವಿಯನ್ನಪಹರಿಸಿಕೊಂಡು ಬರುವುದೆಂಬ ಕಾರ್ಯವನ್ನು ನಿಲ್ಲಿಸು. ನೀನು ನನ್ನ ಮುಖವನ್ನು ಕಾಣಬೇಕಾದರೆ ನನ್ನೊಡನೆ ಆತನ ಪ್ರಸಂಗವನ್ನು ಹೇಳಬೇಡ. ಲೋಕದಲ್ಲಿ ಪಾಪಿಷ್ಠರಾದ ದುರ್ಜನರ ಸಂಗದಿಂದ ಕುಲಕ್ಷಯ ಹೊಂದಿದ ಧರ್ಮಿಷ್ಠರಾದ ಸತ್ಪುರುಷರು ಬಹಮಂದಿಯುಂಟು. ಹಾಗೆ ನಿನ್ನ ಅಪರಾಧದಿಂದ ನಾನೂ ಕೆಡುವೆನು. ಇಷ್ಟರಮೇಲೆ ನಿನ್ನ ಮನಸ್ಸುಬಂದಂತೆ ನಡೆದುಕೊ. ನಾನು ನಿನ್ನೊಡನೆ ಬರಲಾರೆನು. ಶ್ರೀರಾಮನು ಮಹಾ ತೇಜಸ್ಸುಳ್ಳವನು ; ಸದ್ಗುಣಸಂಪನ್ನನು ; ಮಹಾಬಲವಂತನು ; ಸಮಸ್ತ ರಾಕ್ಷಸಕುಲಕ್ಕೂ ಯಮನು. ಶೂರ್ಪಣಖಿಯ ನಿಮಿತ್ತವಾಗಿ ದುರುಳನಾದ ನಿನ್ನ ತಮ್ಮ ಖರನು ಜನಸ್ಥಾನದಿಂದ ಹೊರಟು ಶ್ರೀರಾಮನನ್ನು ಕೆಣಕಿ ಆತನ ಶರಗಳಿಂದ ರಣರಂಗದಲ್ಲಿ ಸಮಸ್ತ ಚತುರಂಗಬಲಸಹಿತವಾಗಿ ಮಡಿದನು. ನಾನು ನಿನ್ನಲ್ಲಿ ಬಂಧುತ್ವದಿಂದ ನಿನಗೆ ಹಿತವಾದ ಮಾತನ್ನು ಹೇಳಿದೆನಲ್ಲದೆ ಮತ್ತೊಂದಲ್ಲ. ನೀನು ನನ್ನ ಹಿತವಾದ ವಾಕ್ಯವನ್ನು ಕೇಳದ ಪಕ್ಷದಲ್ಲಿ ಸಮಸ್ತ ಬಂಧುಸಹಿತನಾಗಿ ನಾಶವನ್ನೈದುವೆ, ಸಂಶಯವಿಲ್ಲ" ಎಂದು ತತ್ಕಾಲಕ್ಕೆ ಕರ್ಣಕಠೋರವಾಗಿದ್ದರೂ ಮುಂದೆ ಹಿತಕರವಾದ ಮಾತುಗಳನ್ನು ಹೇಳಿದನು.



## ೪೦ ನೆಯ ಅಧ್ಯಾಯ

## ರಾವಣನು ಮಾರೀಚನಮೇಲೆ ಕೋಪಿಸಿದ್ದು

ಈ ರೀತಿಯಲ್ಲಿ ಮಾರೀಚನು ಹೇಳಿದ್ದನ್ನು ಕೇಳಿ ರಾವಣನು ಲೋಕದಲ್ಲಿ ಸಾಯುವವನು ಔಷಧವನ್ನು ನಿರಾಕರಿಸುವಂತೆ ಹಿತೋಪದೇಶವನ್ನು ಮಾಡಿದ ಮಾರೀಚನ ವಾಕ್ಯವನ್ನು ತಿರಸ್ಕರಿಸಿದನು. ಆತನನ್ನು ಕುರಿತು ಹೀಗೆ ಆರ್ಭಟಿಸುತ್ತ ಹೇಳಿದನು ; "ಎಲೈ ಮಾರೀಚನೆ, ನೀನು ಕಾಲೋಚಿತವಲ್ಲದ ಅಸಂಬದ್ಧವಾದ ಮಾತುಗಳನ್ನು ಆಡುತ್ತಿದ್ದೀಯೆ. ನೀನು ಹೇಳಿದ ಮಾತು ಕಲ್ಲುಭೂಮಿಯಲ್ಲಿ ಬಿತ್ತಿದ ಬೀಜದಂತೆ ನಿಷ್ಫಲವಾಗುತ್ತದೆ. ನೀನು ಹೇಳಿದ ಮಾತಿನಿಂದ ಪಾಪಶೀಲನೂ ಮೂರ್ಖನೂ ಮನುಷ್ಯನೂ ಆದ ರಾಮನನ್ನು ಯುದ್ಧದಲ್ಲಿ ಜಯಿಸಬಹುದೆಂದು ತೋರುತ್ತದೆ. ಒಬ್ಬ ಸ್ತ್ರೀಯ ಮಾತನ್ನು ಕೇಳಿ ತಾಯಿತಂದೆಗಳನ್ನೂ ರಾಜ್ಯವನ್ನೂ ಮಿತ್ರವರ್ಗ ವನ್ನೂ ಬಿಟ್ಟು ದಂಡಕಾರಣ್ಯಕ್ಕೆ ಬಂದ ರಾಮನೊಡನೆ ಯುದ್ಧವನ್ನು ಮಾಡಿಯಾದರೂ ಆತನ ಹೆಂಡತಿಯಾದ ಸೀತಾದೇವಿಯನ್ನು ಅವಶ್ಯವಾಗಿ ಅಪಹರಿಸಿಕೊಂಡು ಬರುತ್ತೇನೆ. ಈ ನನ್ನ ಪ್ರಯತ್ನವನ್ನು ಇಂದ್ರಾದಿದೇವತೆಗಳಾದರೂ ಸಮಸ್ತ ಸುರಾಸುರರಾದರೂ ತಿರುಗಿಸಲಾರರು. ನಿನ್ನಲ್ಲಿ ನಾನು ದೋಷ-ನಿರ್ದೋಷ, ಪಾಪ-ಪುಣ್ಯಗಳ ವಿಚಾರವನ್ನು ಕೇಳಲಿಲ್ಲ. ಲೋಕದಲ್ಲಿ ಅರಸನಿಂದ ಐಶ್ವರ್ಯವನ್ನು ಬಯಸುವ ಪ್ರಧಾನನು ಕೈಮುಗಿದುಕೊಂಡು ಆತನಿಗೆ ಅನುಕೂಲವಾಗಿ ಹಿತವಾದ ಶುಭವಾಕ್ಯವನ್ನು ಹೇಳಬೇಕಲ್ಲದೆ, ಪ್ರತಿಕೂಲವಾಗಿ ಅಶುಭವಾದ ವಾಕ್ಯವನ್ನು ಹೇಳಬಾರದು. ನೀನು ಅತ್ಯಂತ ಕರ್ಣಕಠೋರವೂ ಮರ್ಮಭೇದಕವೂ ಮಾನಹೀನವೂ ಆದ ಮಾತುಗಳನ್ನು ನುಡಿಯುತ್ತಿದ್ದೀಯೆ. ಲೋಕದಲ್ಲಿ ಅಭಿಮಾನಿಯಾದವನು ಇಂಥ ಮಾನಹೀನವಾದ

ಮಾತನ್ನು ಕೇಳನು. ಎಲೈ ಮಾರೀಚ, ಅರಸನು ಅಗ್ನಿಯಂತೆ ಕೋಪವುಳ್ಳವನಾಗಿಯೂ ಇಂದ್ರನಂತೆ ಪರಾಕ್ರಮವುಳ್ಳವನಾಗಿಯೂ ಸೋಮನಂತೆ ಶಾಂತಗುಣವುಳ್ಳವನಾಗಿಯೂ ಯಮನಂತೆ ದಂಡನೆ ಮಾಡುವಂಥವನಾಗಿಯೂ ವರುಣನಂತೆ ಪ್ರಸನ್ನತೆಯುಳ್ಳವನಾಗಿಯೂ ಐದು ಪ್ರಕಾರದಿಂದಿರುವನು. ಆದ್ದರಿಂದ ಆತನು ಸರ್ವಪ್ರಕಾರದಲ್ಲಿಯೂ ಪೂಜ್ಯನು. ನೀನು ರಾಜಧರ್ಮವನ್ನರಿಯದೆ ಅಜ್ಞಾನದಿಂದ, ಒಂದು ಕಾರ್ಯಾರ್ಥವಾಗಿ ನಿನ್ನ ಬಳಿಗೆ ಬಂದ ನನ್ನನ್ನು ನಿಷ್ಠುರವಚನದಿಂದ ನುಡಿಯುತ್ತಿದ್ದೀಯೆ. ನಾನು ನಿನ್ನ ಸಮೀಪಕ್ಕೆ ಗುಣದೋಷಗಳನ್ನು ಕೇಳುವುದಕ್ಕೆ ಬರಲಿಲ್ಲ. ಆದ ಕಾರಣ ನೀನು ನನ್ನೊಡನೆ ಗುಣದೋಷಗಳನ್ನು ಹೇಳಲು ಕಾರಣವಿಲ್ಲ. ನಾನು ತೊಡಗುವ ಕಾರ್ಯಕ್ಕೆ ನೀನು ಸಹಾಯವಾಗು. ಬೆಳ್ಳಿಯ ಬೊಟ್ಟುಗಳನ್ನು ಧರಿಸಿ ಕೌತುಕಕರವಾದ ಸುವರ್ಣ ಮೃಗರೂಪವನ್ನು ತಾಳಿ ಸೀತಾದೇವಿಯ ಎದುರಾಗಿ ಸುಳಿದಾಡುತ್ತಿರು. ನಿನ್ನ ಸ್ವರೂಪವನ್ನು ಕಂಡು ಆ ಸೀತಾದೇವಿಯು ಆಶ್ಚರ್ಯಪಟ್ಟು ಶ್ರೀರಾಮನ ಸಂಗಡ ನಿನ್ನನ್ನು ಹಿಡಿದುತಂದು ಕೊಡ ಹೇಳುವಳು. ಆತನು ನಿನ್ನನ್ನು ಅಟ್ಟಿಸಿಕೊಂಡು ಆಶ್ರಮದಿಂದ ದೂರ ಹೋದಮೇಲೆ ನೀನು 'ಹಾ ಲಕ್ಷ್ಮಣಾ! ಹಾ ಸೀತೇ' ಎಂದು ಧ್ವನಿಮಾಡು; ಅದನ್ನು ಕೇಳಿ ಸೀತಾದೇವಿಯು ತನ್ನ ಪತಿಗೆ ವಿಘ್ನವು ಸಂಭವಿಸಿತೆಂದೆಣಿಸಿ ಲಕ್ಷ್ಮಣನನ್ನು ಕಳುಹಿಸುವಳು. ರಾಮಲಕ್ಷ್ಮಣರು ಆಶ್ರಮವನ್ನು ಬಿಟ್ಟು ದೂರಕ್ಕೆ ಹೋಗುವಾಗ ನಾನು, ದೇವೇಂದ್ರನು ಶಚೀದೇವಿಯನ್ನು ತಂದಂತೆ ಸೀತಾ ದೇವಿಯನ್ನು ಅಪಹರಿಸಿ ತರುತ್ತೇನೆ. ನೀನು ಒಳ್ಳೆಯಮಾರ್ಗದಲ್ಲಿ ನಡೆ. ನನ್ನ ಕಾರ್ಯವನ್ನು ಸಾಧ್ಯಮಾಡಿಕೊಡು. ನಾನೂ ರಥಾರೂಢನಾಗಿ ನಿನ್ನೊಡನೆ ದಂಡಕಾರಣ್ಯಕ್ಕೆ ಬರುತ್ತೇನೆ. ರಾಮಲಕ್ಷ್ಮಣರೊಡನೆ ಯುದ್ಧವನ್ನು ಮಾಡದೆ ಅವರನ್ನು ವಂಚಿಸಿ ಸೀತಾದೇವಿಯನ್ನು ಅಪಹರಿಸಿ ಕೊಂಡು ತಿರುಗಿ ಬರೋಣ. ಈ ಕಾರ್ಯಕ್ಕೆ ನೀನು ನನಗೆ ಸಹಾಯಮಾಡದೆ ಇರಕೂಡದು. ಲೋಕದಲ್ಲಿ ಅರಸನಿಗೆ ಪ್ರತಿಕೂಲನಾದ ಮಂತ್ರಿಯು ಜೀವಿಸಲಾರನು. ಶ್ರೀರಾಮನ ಸಮೀಪಕ್ಕೆ ಹೋದರೆ ನಿನ್ನ ಪ್ರಾಣಕ್ಕೆ ಮೃತ್ಯುಬರುವುದೆಂದೆಣಿಸಿ ಹೊರಡದೆ ನನ್ನೊಡನೆ ವಿರೋಧವನ್ನು ಮಾಡಿದರೆ ನಿನ್ನ ಜಾತಕಫಲವು ಈಗಲೇ ತೀರುವುದು. ಈ ಅರ್ಥವನ್ನು ಮನಸ್ಸಿನಲ್ಲಿ ಯಥಾರ್ಥವೆಂದು ವಿಚಾರಿಸಿ ನಿನ್ನ ಮನಸ್ಸುಬಂದಂತೆ ಮಾಡು" ಎಂದು ಅತ್ಯಂತ ಕೋಪಯುಕ್ತನಾಗಿ ಹೇಳಿದನು.



## ೪೧ನೆಯ ಅಧ್ಯಾಯ

## ಮಾರೀಚನು ರಾವಣನನ್ನು ನಿಂದಿಸಿದ್ದು

ಆ ಬಳಿಕ ಮಾರೀಚನು ರಾವಣನನ್ನು ಕುರಿತು ನಿರ್ಭಯನಾಗಿ ಹೀಗೆಂದನು: "ರಾವಣೇಶ್ವರ, ಪುತ್ರಪೌತ್ರ ರಾಜ್ಯಸಹಿತವಾಗಿ ನಾಶವುಂಟಾಗುವ ರೀತಿಯಲ್ಲಿ ನಿನಗೆ ಈ ದುರ್ಬುದ್ಧಿಯನ್ನು ಹೇಳಿದ ಪಾಪಾತ್ಮನಾರು? ಸುಖವಾಗಿರುವ ನಿನ್ನನ್ನು ನೋಡಲಾರದೆ ನಿನ್ನ ಮೇಲಣ ಅಸೂಯೆಯಿಂದ ನಿನ್ನ ಮರಣಕ್ಕೆ ತಕ್ಕ ಉಪಾಯವನ್ನು ಹೀಗೆ ಕಲ್ಪಿಸಿದವರಾರು? ನಿನಗೆ ಇಂಥ ಬುದ್ಧಿಯನ್ನು ಹೇಳಿದವರು ನಿನ್ನ ಶತ್ರುಗಳೆಂಬುದು ಪ್ರಕಟವಾಯಿತು. ಯಾವ ಕ್ಷುದ್ರರಾಕ್ಷಸನು ಸುಖವಾಗಿರುವ ನಿನ್ನನ್ನು ಉಪಾಯದಿಂದ ಕೊಲ್ಲಿಸಬೇಕೆಂದು ಎಣಿಸಿದ್ದಾನೋ—ಯಾವನು ನಿನ್ನ ಅಪರಾಧದಿಂದ ನೀನು ನಾಶವಾಗುವುದನ್ನು ನೋಡಬೇಕೆಂದಿದ್ದಾನೋ ತಿಳಿಯದು. ನಿನ್ನ ಪ್ರಧಾನರು

ಅಧರ್ಮಮಾರ್ಗಪ್ರವರ್ತಕನಾದ ನಿನಗೆ ಏಕೆ ಬುದ್ಧಿಹೇಳದಿದ್ದಾರೋ ತಿಳಿಯಲಿಲ್ಲ. ಲೋಕದಲ್ಲಿ ಪ್ರಧಾನನಾದವನು ದುರ್ವರ್ತನದಲ್ಲಿ ನಡೆಯುವ ಅರಸನನ್ನು ನಿಗ್ರಹಿಸಿಯಾದರೂ ಬುದ್ಧಿಯನ್ನು ಹೇಳಬೇಕು. ನೀನು ಧರ್ಮರಹಸ್ಯವನ್ನು ಗ್ರಹಿಸಲಾರದೆ ಮನಸ್ಸುಬಂದಂತೆ ನಡೆಯುತ್ತಿದ್ದೀಯೆ. ನೀನು ಧರ್ಮಾರ್ಥಕಾಮಕೀರ್ತಿಗಳನ್ನು ಬಯಸದೆ ದುರ್ವರ್ತನದಲ್ಲಿ ನಡೆಯುತ್ತಿದ್ದೀಯೆ. ಆದಕಾರಣ ಪ್ರಧಾನರು ನಿನಗೆ ವಿಪತ್ತುಗಳು ಬಾರದಂತೆ ಕಾಲಕಾಲದಲ್ಲಿ ಬುದ್ಧಿಹೇಳಬೇಕು. ಕ್ರೂರಬುದ್ಧಿಯುಳ್ಳ ಅರಸನು ರಾಜ್ಯಪರಿಪಾಲನವನ್ನು ಮಾಡಲಾರನು. ರಾವಣೇಶ್ವರ, ಪ್ರಜೆಗಳಿಗೆ ಪ್ರತಿಕೂಲವಾಗಿ ನಡಯುತ್ತ ಕೀರ್ತಿಮಾರ್ಗವನ್ನು ಬಿಟ್ಟು ನಡೆಯುವ ಅರಸನಿಗೆ ರಾಜ್ಯಭೋಗವು ನಿಲ್ಲಲಾರದು. ಅರಸನು ಹೇಳುವ ಹಾಗೆ ಮಾಡುವ ಪ್ರಧಾನಿಗಳು ಆ ಅರಸನನ್ನು ಕೆಡಿಸುವುದಲ್ಲದೆ, ಹಳ್ಳತಿಟ್ಟುಗಳನ್ನು ನೋಡಿ ರಥವನ್ನು ನಡೆಯಿಸದೆ ರಥಿಕನನ್ನೂ ರಥವನ್ನೂ ಕೆಡಿಸುವ ಸಾರಥಿಯಂತೆ ತಾವೂ ಕೆಡುವರು. ಧರ್ಮಪ್ರವರ್ತಕರಾದ ಸತ್ಪುರುಷರಾಗಿದ್ದರೂ ಅಪರಾಧಮಾಡಿದವರ ಸಹವಾಸದಿಂದ ಕೆಟ್ಟವರು ಬಹುಮಂದಿಯುಂಟು. ಪ್ರಜೆಗಳಿಗೆ ಪ್ರತಿಕೂಲನಾಗಿ ಕ್ರೂರಬುದ್ಧಿಯುಳ್ಳ ಅರಸನಿಂದ ಆತನ ರಾಜ್ಯದಲ್ಲಿರುವ ಪ್ರಜೆಗಳು ನರಿಯನ್ನನುಸರಿಸುವ ಕುರಿಗಳಂತೆ ನಾಶವನ್ನೈದುವರು. ರಾವಣ, ಕಾಮುಕನಾಗಿ ದುರ್ಬುದ್ಧಿಯಿಂದ ಕ್ರೂರಕರ್ಮವನ್ನು ಮಾಡುವ ನಿನ್ನಿಂದ ಅವಶ್ಯವಾಗಿ ಸಮಸ್ತ ರಾಕ್ಷಸರೂ ನಾಶವನ್ನೈದುವರು. ನಾನು ಶ್ರೀರಾಮನ ಶಸ್ತ್ರಹತಿಯಿಂದ ಮರಣವನ್ನೈದುವುದು ನಿಶ್ಚಯ. ನನಗೆ ವಿಪತ್ತುಬರುವುದೆಂದು ನಾನು ದುಃಖಪಡುವುದಿಲ್ಲ. ಸಮಸ್ತ ಸೇನಾಸಮೇತನಾದ ನೀನು ಶ್ರೀರಾಮನ ಬಾಣಗಳಿಂದ ನಾಶವನ್ನೈದುವೆಯೆಂದು ದುಃಖಪಡುತ್ತೇನೆ. ಆತನು ನನ್ನನ್ನು ಕೊಲ್ಲಲಿ. ನನಗೆ ಅದರ ವಿಚಾರವಿಲ್ಲ. ನಾನು ನಿನ್ನ ಮಾತನ್ನು ಕೇಳಿ ಹತನಾಗಿ ನಿನ್ನ ಕಾರ್ಯವನ್ನು ಆಗಮಾಡುತ್ತೇನೆ. ನೀನು ಕಪಟದಿಂದ ಸೀತಾದೇವಿಯನ್ನು ಅಪಹರಿಸಿಕೊಂಡು ಬಂದರೆ ಸಮಸ್ತ ಬಂಧುಜನಸಹಿತನಾಗಿ ಮರಣವನ್ನೈದುವೆ. ಇದನ್ನು ನೀನೇ ವಿಚಾರಿಸಿಕೊ. ಇನ್ನುಮೇಲೆ, ನಾನು, ನೀನು, ಲಂಕಾನಗರ ರಾಕ್ಷಸರು—ಯಾರೂ ಉಳಿಯುವುದಿಲ್ಲ. ಆಯುಸ್ಸು ಕ್ಷಯವಾಗಿ ಮರಣಕಾಲವು ಸಂನಿಹಿತವಾಗಿರುವವನು ಆಪ್ತರ ವಾಕ್ಯವನ್ನು ಕೇಳದೆ ಲಯವನ್ನೈದುವನು. ನಿನ್ನ ಮಿತ್ರನಾದ ನನ್ನ ಹಿತವಾಕ್ಯವನ್ನು ಕೇಳದಿದ್ದರೆ ನೀನು ಲಯವಾಗುವೆ, ಸಂದೇಹವಿಲ್ಲ" ಎಂದು ಅತ್ಯಂತ ನಿಷ್ಠುರವಾಗಿ ನುಡಿದನು.



೪೨ ನೆಯ ಅಧ್ಯಾಯ

## ಮಾರೀಚನು ಮಾಯಾಮೃಗರೂಪದಿಂದ ಸೀತಾದೇವಿಯ ಬಳಿಗೆ ಬಂದದ್ದು

ಈ ಪ್ರಕಾರ ಮಾರೀಚನು ರಾವಣನಿಗೆ ಅನೇಕವಿಧವಾಗಿ ಹಿತೋಪದೇಶ ಮಾಡಿದರೂ ರಾವಣನು ಕೇಳಲಿಲ್ಲ. ಆಗ ರಾವಣನಿಗೆ ಹೆದರಿ ಮಾರೀಚನು "ರಾವಣೇಶ್ವರ, ನಾವು ಶ್ರೀರಾಮನ ಆಶ್ರಮಕ್ಕೆ ಹೋಗೋಣ. ಶೀಘ್ರವಾಗಿ ಏಳು" ಎಂದು ಕಂಗೆಟ್ಟು ನುಡಿದನು.

ಆ ಮಾತನ್ನು ಕೇಳಿ ರಾವಣನು ಅತ್ಯಂತ ಹರ್ಷಯುಕ್ತನಾಗಿ ಮಾರೀಚನನ್ನು ತಬ್ಬಿಕೊಂಡು ಆತನನ್ನು ಕುರಿತು "ಮಾರೀಚ, ನೀನು ಮಹಾಪರಾಕ್ರಮಿಯಾದ್ದರಿಂದ ನನ್ನ ಮನಸ್ಸಿಗೆ

ಪ್ರಿಯವಾದ ಮಾತನ್ನೇ ನುಡಿದೆ. ಈಗ ನೀನು ಮೊದಲಿನಂತಲ್ಲದೆ ನಿಜವಾದ ಮಾರೀಚನಾಗಿ ಮನೋಹರನಾಗಿ ತೋರುತ್ತಿದ್ದೀಯೆ. ಒಳ್ಳೆಯದಾಯಿತು. ಈ ರಥವನ್ನು ಹತ್ತು. ನಾವು ಶ್ರೀರಾಮನ ಆಶ್ರಮಕ್ಕೆ ಹೋಗೋಣ. ನೀನು ಸೀತಾದೇವಿಯನ್ನು ಮೃಗಸ್ವರೂಪದಿಂದ ಮರಳು ಮಾಡು. ಆಕೆಯು ಒಬ್ಬಳಾಗಿರುವ ಸಮಯದಲ್ಲಿ ನಾನು ಆಕೆಯನ್ನು ಅಪಹರಿಸುತ್ತೇನೆ" ಎಂದು ಹೇಳಿದನು. ಅನಂತರ ಮಾರೀಚನೊಡನೆ ರಥವನ್ನೇರಿ ಆತನ ಆಶ್ರಮದಿಂದ ಹೊರಟು ಮಧ್ಯ ಮಾರ್ಗದಲ್ಲಿ ರಮಣೀಯವಾದ ಪಟ್ಟಣಗಳನ್ನೂ ಮನೋಹರವಾದ ವನಗಳನ್ನೂ ಪರ್ವತಗಳನ್ನೂ ನದಿಗಳನ್ನೂ ನೋಡುತ್ತ ದಂಡಕಾರಣ್ಯವನ್ನು ಹೊಕ್ಕನು. ಅಲ್ಲಿ ಶ್ರೀರಾಮನ ಆಶ್ರಮವನ್ನು ಕಂಡು ಸುವರ್ಣಮಯವಾದ ರಥದಿಂದಿಳಿದು ಮಾರೀಚನನ್ನು ಕುರಿತು "ಮಾರೀಚ, ಕದಳೀವನಮಧ್ಯದಲ್ಲಿ ಅತ್ಯಂತ ರಮಣೀಯವಾಗಿ ರಾಮಾಶ್ರಮವು ಕಾಣಿಸುತ್ತಿದೆ. ನೀನು ಯಾವ ಕಾರ್ಯವನ್ನು ಕುರಿತು ಬಂದೆಯೋ ಆ ಕಾರ್ಯಕ್ಕೆ ತಕ್ಕ ಪ್ರಯತ್ನವನ್ನು ಮಾಡು" ಎಂದು ಹೇಳಿದನು.

ಆ ಮಾತನ್ನು ಕೇಳಿ ಮಾರೀಚನು ಸುವರ್ಣಮಯವಾದ ಮೃಗಸ್ವರೂಪವನ್ನು ತಾಳಿ ಶ್ರೀರಾಮನ ಆಶ್ರಮದ ಬಳಿಯಲ್ಲಿ ಸಂಚರಿಸಲಾರಂಭಿಸಿದನು. ಅತಿಮನೋಹರವಾದ ಸ್ವರೂಪವುಳ್ಳ ಆ ಮೃಗವು ರತ್ನಮಯವಾದ ಕೊಂಬುಗಳುಳ್ಳದ್ದಾಗಿಯೂ ಕೆಂಪೂ ಬಿಳುಪೂ ಕೂಡಿದ ಮುಖಕಾಂತಿಯುಳ್ಳದ್ದಾಗಿಯೂ ಕೆಂದಾವರೆಯಂತೆ, ಕೆಂಗಣಿಗಲ ಹೂವಿನಂತೆ ಮುಖವುಳ್ಳದ್ದಾಗಿಯೂ ಇಂದ್ರನೀಲರತ್ನದಂತೆ ಕಿವಿಯುಳ್ಳದ್ದಾಗಿಯೂ ಕಾಂತಿಯುಕ್ತವಾದ ಹೊಟ್ಟೆಯುಳ್ಳದ್ದಾಗಿಯೂ ಸುವರ್ಣದಂತೆ ಹೊಳೆಯುತ್ತಿದ್ದ ಪಾರ್ಶ್ವಗಳುಳ್ಳದ್ದಾಗಿಯೂ ತಾವರೆದಂಟಿನಂತೆ ಕಾಲುಗಳುಳ್ಳದ್ದಾಗಿಯೂ ವೈಡೂರ್ಯರತ್ನದಂತೆ ಉಗುರುಗಳುಳ್ಳದ್ದಾಗಿಯೂ ಇದ್ದಿತು. ಸೂಕ್ಷ್ಮವಾದ ಜಂಘಗಳುಳ್ಳದ್ದಾಗಿ ಇಂದ್ರಚಾಪದಂತೆ ಮನೋಹರವಾದ ಕಾಂತಿಯಿಂದ ಮೇಲಕ್ಕೆ ನೆಗಹಲ್ಪಟ್ಟ ಬಾಲವುಳ್ಳದ್ದಾಗಿ ಮೋಹಕವಾದ ರೂಪವುಳ್ಳ ಆ ಮೃಗವು ತನ್ನ ಶರೀರಕಾಂತಿಯಿಂದ ಆ ತಪೋವನವೆಲ್ಲವನ್ನೂ ಬೆಳಗಿಸುತ್ತಿತ್ತು, ಸೀತಾದೇವಿಯ ಮನಸ್ಸಿಗೆ ನೋಡಬೇಕೆಂಬ ಆಸೆಯನ್ನು ಹುಟ್ಟಿಸಬೇಕೆಂದು ಆ ಆಶ್ರಮದ ಬಾಗಿಲಿಗೆ ಹೋಯಿತು. ಒಳಗೆ ಹೋಗಿ ಅಲ್ಲಿದ್ದ ಎಳೆ ಹುಲ್ಲುಗಳನ್ನು ಮೇಯುತ್ತ ತನ್ನ ಶರೀರದಲ್ಲಿದ್ದ ಬಿಳಿ ಕುರುಹುಗಳಿಂದ ಮನೋಹರವಾಗಿ ತೋರಿತು. ಆ ಆಶ್ರಮದ ಸಮೀಪದಲ್ಲಿದ್ದ ಮರಗಳ ಎಳೆದಳಿರುಗಳನ್ನು ಭಕ್ಷಿಸುತ್ತ ಕದಳೀವನವನ್ನು ಹೊಕ್ಕು ಗೊರಟೆಗಿಡಗಳನ್ನು ಕದಲಿಸುತ್ತ ಸೀತಾದೇವಿಯ ದೃಷ್ಟಿಗೆ ಗೋಚರವಾಗುವಂತೆ ಸಮೀಪಕ್ಕೆ ಹೋಯಿತು. ಪುನಃ ಓಡಿಹೋಗಿ ಅತ್ತಿತ್ತ ಸಂಚರಿಸುತ್ತ ಕುಣಿದಾಡುತ್ತ ಭೂಮಿಯ ಮೇಲೆ ಮಲಗಿ ಏಳುತ್ತ ಆಶ್ರಮದ ಬಾಗಿಲಲ್ಲಿದ್ದ ಮೃಗಗಳ ಸಮೀಪಕ್ಕೆ ಹೋಗಿ ಅವುಗಳಿಂದ ಸುತ್ತಲ್ಪಟ್ಟಿತು. ಅಲ್ಲಿಂದ ಸೀತಾದೇವಿಯ ಮುಂದೆ ಚಕ್ರಾಕಾರವಾಗಿ ತಿರುಗುತ್ತ ಮೇಲಕ್ಕೆ ನೆಗೆದು ನಾನಾದಿಕ್ಕುಗಳನ್ನೂ ನೋಡತೊಡಗಿತು. ಆ ವನದಲ್ಲಿದ್ದ ಮೃಗಗಳು ಅದ್ಭುತವಾದ ಆ ಮೃಗವನ್ನು ಕಂಡು ಹತ್ತಿರಕ್ಕೆ ಬಂದು ಆಘ್ರಾಣಿಸಿ ಹೊಸಬಗೆಯಾಗಿದ್ದ ವಾಸನೆಯನ್ನು ಕಂಡು ಬೆದರಿ ನಾನಾದಿಕ್ಕುಗಳಿಗೂ ಓಡಲಾರಂಭಿಸಿದವು. ಮಾರೀಚನು ತನ್ನ ಸ್ವರೂಪವನ್ನು ತೋರಿಸಿಕೊಳ್ಳಬಾರದೆಂದು ತನ್ನ ಸಮೀಪಕ್ಕೆ ಬಂದ ಮೃಗಗಳನ್ನು ಭಕ್ಷಣಮಾಡದೆ ನಾಲಿಗೆಯಿಂದ ನೆಕ್ಕುತ್ತ ವಿನೋದವನ್ನು ಮಾಡುತ್ತಿದ್ದನು.

ಆ ಸಮಯದಲ್ಲಿ ಆಶ್ರಮದ ಸಮೀಪದಲ್ಲಿದ್ದ ಕುಸುಮವನದಲ್ಲಿ ಗೊರಟೆ ಸುರಹೊನ್ನೆ ಅಶೋಕ ಮಾವು ಮೊದಲಾದ ಮರಗಳ ಪುಷ್ಪಗಳನ್ನು ಕೊಯ್ಯುತ್ತಿದ್ದ ಸೀತಾದೇವಿಯು ಮುತ್ತಿನಮಣಿಗಳಂತೆಯೂ ರತ್ನಗಳಂತೆಯೂ ನಾನಾವರ್ಣವಾದ ತನುಕಾಂತಿಯುಳ್ಳದ್ದಾಗಿ

ಅತಿರಮಣೀಯವಾಗಿದ್ದ ಆ ಮೃಗವನ್ನು ಕಂಡು ಅತ್ಯಂತ ಪ್ರೀತಿಯುಳ್ಳವಳಾಗಿ ಶುಭದೃಷ್ಟಿಯಿಂದ ನೋಡತೊಡಗಿದಳು. ಅದನ್ನು ಕಂಡು ಆ ಮಾಯಾಮೃಗವು ತಾನು ಇನ್ನೂ ಹತ್ತಿರಕ್ಕೆ ಬಂದು ಸಂಚರಿಸುತ್ತಿರಲು, ಮೊದಲೆಂದೂ ದೃಷ್ಟಿಗೋಚರವಾಗದಿದ್ದ ಅಪೂರ್ವವಾದ ಆ ಮೃಗವನ್ನು ಸೀತೆಯು ಅತ್ಯಂತ ಆಶ್ಚರ್ಯದಿಂದ ನೋಡುತ್ತಿದ್ದಳು.

---

೪೩ ನೆಯ ಅಧ್ಯಾಯ

## ಸೀತಾದೇವಿಯು ಮಾಯಾಮೃಗವನ್ನು ಬಯಸಿದ್ದು

ಆಮೇಲೆ ಸೀತಾದೇವಿಯು ಪುಷ್ಪಗಳನ್ನು ಕೊಯಿದುಕೊಂಡು ಸುವರ್ಣ ರಜತ ಬಿಂದುಗಳಿಂದ ಹೊಳೆಯುತ್ತಿದ್ದ ಆ ಮೃಗವನ್ನು ನೋಡಿ ಶ್ರೀರಾಮನ ಬಳಿಗೆ ಹೋದಳು. ಅಲ್ಲಿ ತನ್ನ ಮೈದುನನಾದ ಲಕ್ಷ್ಮಣನ ಸಂಮುಖದಲ್ಲಿ ಶ್ರೀರಾಮನನ್ನು ಕುರಿತು "ಪ್ರಾಣಕಾಂತ, ಅಗೋ ಅಲ್ಲಿ ಒಂದು ವಿಚಿತ್ರವೂ ಮನೋಹರವೂ ಆದ ಜಿಂಕೆಯು ಕಾಣುತ್ತಿದೆ, ನೋಡು" ಎಂದು ಹೇಳಿದಳು.

ಅದನ್ನು ಕೇಳಿ ಲಕ್ಷ್ಮಣನು ಮನಸ್ಸಿನಲ್ಲಿ ಸಂಶಯಪಟ್ಟು ಶ್ರೀರಾಮನನ್ನು ಕುರಿತು "ಅಣ್ಣ, ಮಾರೀಚನು ಈ ಮಾಯಾಮೃಗಸ್ವರೂಪನಾಗಿ ಇಲ್ಲಿಗೆ ಬಂದನೆಂದು ನನ್ನ ಮನಸ್ಸಿಗೆ ತೋರುತ್ತಿದೆ. ಮಾರೀಚನು ಯಾವಾಗ ಯಾವ ರೂಪವನ್ನು ಬಯಸುವನೋ ಆಗ ಆ ರೂಪವನ್ನು ತಾಳಬಲ್ಲನು. ಕಾಮರೂಪಿಯಾದ ಮಾರೀಚನು ಮಾಯೆಯಿಂದ ಈ ಮೃಗಸ್ವರೂಪವಾಗಿ ಇಲ್ಲಿಗೆ ಬಂದಿದ್ದಾನೆ; ಶ್ರೀರಾಮ, ಆಕಾಶದಲ್ಲಿ ಕಾಣಿಸುವ ಗಂಧರ್ವನಗರದಂತೆ ನಾನಾವರ್ಣವಾಗಿ ರತ್ನಮಯವಾದ ಇಂಥ ಮೃಗವನ್ನು ಲೋಕದಲ್ಲಿ ಎಲ್ಲಿಯೂ ಕಂಡದ್ದಿಲ್ಲ. ಇದು ಮಾಯೆಯಲ್ಲದೆ ಸಹಜವಾದದ್ದಲ್ಲ" ಎಂದು ನುಡಿದನು.

ಸೀತಾದೇವಿಯು ಆ ಮೃಗದಲ್ಲೇ ಪರವಶಳಾಗಿ ಬುದ್ಧಿತೋರದೆ ತನ್ನ ಪತಿಯನ್ನು ಕುರಿತು "ಶ್ರೀರಾಮ, ಮನೋಹರವಾದ ಈ ಮೃಗವು ನನ್ನ ಮನಸ್ಸನ್ನು ಅಪಹರಿಸುತ್ತಿದೆ. ನನಗೆ ವಿನೋದಾರ್ಥವಾಗಿ ಈ ಮೃಗವನ್ನು ತಂದು ಕೊಡು. ಈ ಆಶ್ರಮದಲ್ಲಿ ಮನೋಹರವಾದ ಅನೇಕ ಮೃಗಗಳು ಸಂಚರಿಸುತ್ತಿವೆ. ಕರಡಿಗಳು ಎರಳೆಗಳು ವಾನರಗಳು ಕಿನ್ನರ ಮೃಗಗಳು ಮೊದಲಾದ ಸುಂದರ ಮೃಗಗಳು ಸಂಚರಿಸುತ್ತಿವೆ. ಅವುಗಳೊಳಗೆ ಈ ಮೃಗಕ್ಕೆ ಸರಿಯಾದ ಮೃಗವೊಂದೂ ಇಲ್ಲ. ಈ ಜಿಂಕೆಯು ತೇಜಸ್ಸಿನಿಂದಲೂ ಕಾಂತಿಯಿಂದಲೂ ಅತಿಮನೋಹರವಾಗಿದೆ. ಅಲ್ಲಲ್ಲಿ ರತ್ನಬಿಂದು ರಜತಬಿಂದುಗಳುಳ್ಳದ್ದಾಗಿ ನಾನಾವರ್ಣವಾದ ಶರೀರವುಳ್ಳದ್ದಾಗಿ ಚಂದ್ರನಂತೆ ತನ್ನ ತನುಕಾಂತಿಯಿಂದ ಈ ವನವನ್ನು ಬೆಳಗಿಸುತ್ತಿದೆ. ಈ ಮೃಗಸ್ವರೂಪವನ್ನೂ ಇದರ ಸೌಂದರ್ಯವನ್ನೂ ಇದರ ಮನೋಹರವಾದ ಧ್ವನಿಯನ್ನೂ ಏನೆಂದು ಹೇಳಲಿ? ನಾನಾವರ್ಣದ ಈ ಮೃಗವನ್ನು ಕಂಡು ನನಗೆ ಬಹಳ ಹರ್ಷವಾಗುತ್ತಿದೆ. ಈ ಮೃಗವು ಜೀವಸಹಿತವಾಗಿ ನಿನ್ನ ಕೈಗೆ ಸಿಕ್ಕಿದರೆ ವಿಸ್ಮಯವನ್ನುಂಟುಮಾಡುವುದು. ಕೈಗೆ ಸಿಕ್ಕದೆ ನಿನ್ನ ಬಾಣದಿಂದ ಹತವಾದ ಪಕ್ಷದಲ್ಲಿ ಇದರ ಕೋಮಲವಾದ ಚರ್ಮದಮೇಲೆ ಕುಳಿತುಕೊಳ್ಳಲು ಇಚ್ಛಿಸುತ್ತೇನೆ. ಸ್ತ್ರೀಯರಿಗೆ ಕಂಡದ್ದನ್ನು




" ಅಗೋ ! ಅಲ್ಲಿ ವಿಚಿತ್ರವೂ ಮನೋಹರವೂ ಆದ ಜಿಂಕೆ ಕಾಣುತ್ತಿದೆ "

ಬೇಡುವುದು ಉಚಿತವಲ್ಲ. ಆದರೂ ಈ ಮೃಗದ ರೂಪವನ್ನು ಕಂಡು ನನಗೆ ಅತ್ಯಂತ ಕುತೂಹಲವಾಗಿದೆ" ಎಂದು ಹೇಳಿದಳು.

ಆ ಸಮಯದಲ್ಲಿ ಸುವರ್ಣಮಯವಾದ ರೋಮಗಳುಳ್ಳದ್ದಾಗಿ ಅನರ್ಘ್ಯವಾದ ರತ್ನಗಳಂತೆ ಒಪ್ಪುವ ಕೊಂಬುಗಳುಳ್ಳ ಆ ಮೃಗವು ಉದಯವಾಗುವ ಸೂರ್ಯನಿಂದ ಅಂತರಿಕ್ಷಮಾರ್ಗವು ಬೆಳಗುವಂತೆ ತನ್ನ ತನುಕಾಂತಿಯಿಂದ ಒಪ್ಪಿ ಮೆರೆಯುತ್ತ ಶ್ರೀರಾಮನಿಗೂ ಭ್ರಮೆಯನ್ನುಂಟು ಮಾಡಿತು. ಆತನು ಚಿತ್ರವರ್ಣದ ಆ ಮೃಗಕ್ಕೆ ಮನಸೋತು ಸೀತಾದೇವಿಯಿಂದ ಪ್ರಾರ್ಥಿಸಲ್ಪಟ್ಟವನಾಗಿ ಲಕ್ಷ್ಮಣನನ್ನು ಕುರಿತು ಹೀಗೆಂದನು : "ಲಕ್ಷ್ಮಣ, ಸೀತಾದೇವಿಗೆ ಈ ಮೃಗದಲ್ಲಿ ಇಚ್ಛೆಯಾಗಿರುವುದನ್ನು ನೋಡು. ಇಂಥ ಸುಂದರವಾದ ಮೃಗವು ಈ ವನದಲ್ಲಿ ಮತ್ತೊಂದಿಲ್ಲ. ಇಂದ್ರನ ನಂದನವನದಲ್ಲಿಯೂ ಕುಬೇರನ ಚೈತ್ರರಥವೆಂಬ ವನದಲ್ಲಿಯೂ ಇಲ್ಲ. ಇದರ ರೋಮರೇಖೆಗಳು ಸಾಲುಸಾಲಾಗಿ ಹಿಂದುಮುಂದಾಗಿ ಕನಕಬಿಂದು ರಜತಬಿಂದುಗಳಂತೆ ನಾನಾವಿಧವಾಗಿ ಕಂಗೊಳಿಸುತ್ತಿವೆ. ಇದು ಆಕಳಿಸುವಾಗ ಬಾಯೊಳಗೆ ನಾಲಿಗೆಯ ತುದಿಯು ಪ್ರಜ್ವಲಿಸುವ ಅಗ್ನಿಜ್ವಾಲೆಯಂತೆಯೂ ಮೇಘಮಂಡಲದ ಮಧ್ಯದಲ್ಲಿ ತೋರುವ ಮಿಂಚಿನಂತೆಯೂ ಮಿರುಗುತ್ತಿದೆ. ಇಂದ್ರನೀಲಮಣಿಯಂತೆ ಮುಖವುಳ್ಳದ್ದಾಗಿ ಶಂಖದಂತೆಯೂ ಮುತ್ತಿನಮಣಿಯಂತೆಯೂ ಒಪ್ಪುತ್ತಿರುವ ಹೊಟ್ಟೆಯುಳ್ಳ ಈ ಮೃಗವು ಯಾರ ಮನಸ್ಸನ್ನು ಅಪಹರಿಸದೆ ಇದ್ದೀತು ? ಪುಟವಿಟ್ಟ ಸುವರ್ಣದಂತೆ ತನುಕಾಂತಿಯುಳ್ಳದ್ದಾಗಿ ನಾನಾ ರತ್ನಮಯವಾದ ಈ ದಿವ್ಯಮೃಗವು ಎಲ್ಲರ ಮನಸ್ಸಿಗೂ ಆಶ್ಚರ್ಯವನ್ನುಂಟುಮಾಡುವುದು. ಎಲೈ ಲಕ್ಷ್ಮಣ, ಲೋಕದಲ್ಲಿ ಬೇಟೆಗಾಗಿ ಹೊರಡುವ ಅರಸರು ವನದಲ್ಲಿ ಮೃಗಗಳನ್ನು ಕಂಡರೆ ಮಾಂಸಕ್ಕಾಗಿಯಾದರೂ ವಿಲಾಸಾರ್ಥವಾಗಿಯಾದರೂ ಅವುಗಳನ್ನು ಕೊಲ್ಲುವರಲ್ಲದೆ ಬಿಡುವುದಿಲ್ಲ. ಚಿನ್ನ ರತ್ನಗಳನ್ನು ಬಯಸುವವರು ವನದಲ್ಲಿರುವ ಗಣಿಗಳನ್ನು ಅಗೆದು ಅವನ್ನು ತೆಗೆದುಕೊಳ್ಳದೆ ಸಮ್ಮನಿರರು. ಈ ಮೃಗವು ಮೃಗರತ್ನವಾಗಿರುವುದರಿಂದ ಇದನ್ನು ಉಪೇಕ್ಷೆ ಮಾಡುವುದು ಸರಿಯಲ್ಲ. ತನಗೆ ಇಷ್ಟವಾದ ವಸ್ತು ಲಾಭವಾಗುವ ಕಾರ್ಯದಲ್ಲಿ ತತ್‌ಕ್ಷಣದಲ್ಲೇ ಪ್ರವರ್ತಿಸಿ ಆಮೇಲೆ ಆ ಕಾರ್ಯಕ್ಕೆ ಬರುವ ವಿಘ್ನಗಳಿಗೆ ಪ್ರತೀಕಾರವನ್ನು ಮಾಡಬೇಕು. ಈ ಮೃಗರತ್ನವನ್ನು ಕೊಂದರೂ ಇದರ ಮನೋಹರವಾದ ಚರ್ಮದ ಮೇಲೆ ಸೀತಾದೇವಿಯು ವಿಲಾಸವಾಗಿ ಕುಳಿತುಕೊಂಡಿರುವಳು. ಇದರ ಮೈಮೇಲಣ ರೋಮಗಳ ನಯನುಣುಪುಗಳನ್ನು ನೋಡು. ಮೃದುರೋಮಗಳುಳ್ಳ ಕದಳೀಮೃಗಗಳ ರೋಮಗಳೂ ಉತ್ತರದೇಶ ಕುರಜಾಂಗಲ ದೇಶಗಳ ಮೃಗಗಳ ರೋಮಗಳೂ ಈ ಮೃಗದ ರೋಮಗಳಿಗೆ ಸರಿಯಾಗಲಾರವು. ಈ ಲೋಕದಲ್ಲಿ ಅತ್ಯಂತಾಶ್ಚರ್ಯಕರವಾದ ಮೃಗವು ಇದೇ ಸರಿ. ವನದಲ್ಲಿ ಅಪರಾಧ ಮಾಡದಿರುವ ಮೃಗವನ್ನು ಕೊಲ್ಲಬಾರದಾದರೂ ನೀನು ಈ ಮೃಗವನ್ನು ಕಂಡಾಗಲೇ ಇದು ಮಾಯಾಮೃಗವೆಂದೂ ಮಾರೀಚನೇ ಈ ಆಕಾರವಾಗಿ ಬಂದನೆಂದೂ ಹೇಳಿದೆಯಾದ್ದರಿಂದ ಇದನ್ನು ಅವಶ್ಯವಾಗಿ ಕೊಲ್ಲಬೇಕು. ಪೂರ್ವದಲ್ಲಿ ವಾತಾಪಿ ಇಲ್ವಲರೆಂಬ ರಾಕ್ಷಸರು ಮಾಯೆಯಿಂದ ಬಹುಮಂದಿ ಬ್ರಾಹ್ಮಣರನ್ನು ಕೊಂದಂತೆ ಮಾರೀಚನು ಮೃಗರೂಪದಿಂದ ಬಂದು ದಂಡಕಾರಣ್ಯದಲ್ಲಿದ್ದ ಅನೇಕ ಋಷಿಗಳನ್ನು ಕೊಂದನು. ಕಡೆಯಲ್ಲಿ ವಾತಾಪಿಯು ಅಗಸ್ತ್ಯಮುನಿಗೆ ಅಗೌರವವನ್ನು ಮಾಡಿ ಯಮಲೋಕವನ್ನೈದಿದಂತೆ, ಮಾರೀಚನು ನಮ್ಮನ್ನು ವಂಚಿಸಿ ಮೋಸ ಮಾಡಬೇಕೆಂದು ಈ ಮೃಗರೂಪದಿಂದ ಬಂದಿರುವ ಪಕ್ಷದಲ್ಲಿ ನಮ್ಮ ಶರಹತಿಯಿಂದ ಯಮಲೋಕವನ್ನೈದುವನು. ಲಕ್ಷ್ಮಣ, ನೀನು ಸಾವಧಾನವಾಗಿ ಸೀತಾದೇವಿಯನ್ನು ರಕ್ಷಿಸಿಕೊಂಡಿರು. ನಾನು

ಈ ಮೃಗವನ್ನು ಬೆನ್ನಟ್ಟಿ ಹೋಗಿ ಹಿಡಿದು ತರುತ್ತೇನೆ. ಅಥವಾ ಕೊಂದು ತರುತ್ತೇನೆ. ನಾನು ಹಿಡಿದು ತರುವ ಪರ್ಯಂತ ನೀನು ದೃಢವಾಗಿ ಇಲ್ಲೇ ಇರು. ಸೀತೆಗೆ ಈ ಮೃಗದ ಮೇಲೆ ಅಪೇಕ್ಷೆಯುಂಟಾಗಿರುವುದರಿಂದ ನಮಗೆ ಈ ಮೃಗದ ಚರ್ಮವೇ ಪ್ರಧಾನ. ಆದರೆ ನೀನು ಮೈಮರೆತಿರಬೇಡ. ಇದು ಮಾಯಾಮೃಗವಾಗಿದ್ದರೆ ಇಲ್ಲಿ ಬಂದದ್ದಕ್ಕೆ ಒಂದು ಕಾರಣವಿರಬೇಕು. ಆದಕಾರಣ ನೀನು ಸೀತಾದೇವಿಯನ್ನು ಎಚ್ಚರಿಕೆಯಿಂದ ನೋಡಿಕೊಂಡಿರು. ನಾನು ಈ ಮೃಗವನ್ನು ಶೀಘ್ರದಲ್ಲಿ ಹಿಡಿದು ತರುತ್ತೇನೆ. ಹಾಗಿಲ್ಲದ ಪಕ್ಷದಲ್ಲಿ ಒಂದೇ ಬಾಣದಿಂದ ಅದನ್ನು ಕೊಂದು ಅದರ ಚರ್ಮವನ್ನು ತೆಗೆದುಕೊಂಡು ಶೀಘ್ರವಾಗಿ ಬರುತ್ತೇನೆ. ಸಮೀಪದಲ್ಲಿ ಬುದ್ಧಿವಂತನಾದ ಜಟಾಯುವಿದ್ದಾನೆ. ನೀನು ಆತನನ್ನು ಸಹಾಯಮಾಡಿಕೊಂಡು ಜಾಗರೂಕನಾಗಿರು" ಎಂದು ಲಕ್ಷ್ಮಣನಿಗೆ ಹೇಳಿದನು.

---

## ೪೪ ನೆಯ ಅಧ್ಯಾಯ

## ಮಾರೀಚನ ವಧೆ

ಈ ರೀತಿಯಲ್ಲಿ ಶ್ರೀರಾಮನು ಸೀತಾದೇವಿಯನ್ನು ರಕ್ಷಿಸಿಕೊಂಡಿರುವ ಹಾಗೆ ಲಕ್ಷ್ಮಣನಿಗೆ ಕಟ್ಟುಮಾಡಿ ಸುವರ್ಣಮಯವಾದ ಖಡ್ಗವನ್ನು ತೆಗೆದುಕೊಂಡು ಅಕ್ಷಯಬಾಣ ತೂಣೀರಗಳನ್ನು ಧರಿಸಿ ಆ ಮೃಗವನ್ನು ಹಿಂದಟ್ಟಿ ಹೋದನು. ಆ ಮೃಗವು ಸಂನದ್ಧನಾಗಿ ಬರುತ್ತಿದ್ದ ಶ್ರೀರಾಮನನ್ನು ಕಂಡು ತನ್ನ ಮಾಯೆಯಿಂದ ಆತನಿಗೆ ಮರೆಯಾಗುತ್ತ ತಿರುಗಿ ಕಾಣಿಸಿಕೊಳ್ಳುತ್ತ ಓಡಿಹೋಗ ಲಾರಂಭಿಸಿತು. ಹೀಗೆ ತನ್ನ ತನುಕಾಂತಿಯಿಂದ ವನವನ್ನು ಬೆಳಗಿಸುತ್ತ ಮುಂದೆ ಮುಂದೆ ಓಡುತ್ತಿದ್ದ ಆ ಮೃಗವನ್ನು ಕಂಡು ಶ್ರೀರಾಮನು ಬಿಲ್ಲುಬಾಣಗಳನ್ನು ತೆಗೆದುಕೊಂಡು ಹಿಂದಟ್ಟಿದನು. ಆ ಮೃಗವು ಆತನ ಕೈಗೆ ಸಿಕ್ಕುವಹಾಗೆ ಹತ್ತಿರದಲ್ಲಿ ಸುಳಿಯುತ್ತ, ಬೆದರಿದಂತೆ ಅಂತರಿಕ್ಷಮಾರ್ಗಕ್ಕೆ ನೆಗೆದು ಓಡಿ ಮರೆಯಾಗುತ್ತ, ಮೇಘಮಂಡಲದ ಮರೆಯಲ್ಲಿರುವ ಚಂದ್ರನಂತೆ ವನಮಧ್ಯದಲ್ಲಿ ಕಾಣಿಸುತ್ತ, ಒಂದು ವನದಿಂದ ಮತ್ತೊಂದು ವನಕ್ಕೆ ಹೋಗುತ್ತಿತ್ತು. ಶ್ರೀರಾಮನು ತನ್ನ ಆಶ್ರಮದಿಂದ ಬಹುದೂರ ನಡೆದು ಕಂಗೆಟ್ಟು ಒಂದು ಮರದ ನೆಳಲಲ್ಲಿ ಮೃದುವಾದ ಎಳೆಯ ಹುಲ್ಲಿನ ಮೇಲೆ ಕುಳಿತುಕೊಂಡು ಬಳಲಿಕೆಯನ್ನು ತೀರಿಸಿಕೊಂಡನು. ಪುನಃ ಆ ಮೃಗವು ಆತನ ಸಮೀಪಕ್ಕೆ ಬಂದು ಆತನು ತನ್ನನ್ನು ಹಿಡಿಯಬೇಕೆಂದು ಯತ್ನಮಾಡುವುದನ್ನು ಕಂಡು ಬೆದರಿದ ಹಾಗೆ ಓಡಿಹೋಗಿ ಕ್ಷಣಮಾತ್ರದಲ್ಲಿ ಮರೆಯಾಗಿ ತಿರುಗಿ ಆ ವನಮಧ್ಯದಲ್ಲಿ ಕಾಣಿಸಿಕೊಂಡಿತು. ಆಗ ಶ್ರೀರಾಮನು ಅದು ಮಾಯಾಮೃಗವೆಂದೂ ಅದನ್ನು ಕೊಲ್ಲದೆ ಬಿಡಬಾರದೆಂದೂ ನಿಶ್ಚಯಿಸಿ ಸೂರ್ಯಪ್ರಭೆಯಂತೆ ಪ್ರಜ್ವಲಿಸುವ ಬಾಣವನ್ನು ಬತ್ತಳಿಕೆಯಿಂದ ತೆಗೆದು ತನ್ನ ಘನವಾದ ಬಿಲ್ಲಿನಲ್ಲಿ ಹೂಡಿದನು ; ಕೃಷ್ಣ ಸರ್ಪದಂತೆ ಭೋಂಕರಿಸುತ್ತ ಪ್ರಜ್ವಲಿಸುವ ಯಜ್ಞಪುರುಷನಂತೆ ಕಿಡಿಯನ್ನುಗುಳುತ್ತಲಿದ್ದ ಆ ಬಾಣವನ್ನು ಮೃಗದ ಮೇಲೆ ಎಸೆದನು. ಆ ಬಾಣವು ಸಿಡಿಲಂತೆ ಆ ಮೃಗದ ಎದೆಯಲ್ಲಿ ತಾಕಿ ಉಚ್ಚಳಿಸಿ ಬೀಳಲು ಮೃಗಸ್ವರೂಪವನ್ನು ತಾಳಿದ ಮಾರೀಚನು ಗಾಯಪಡೆದು ಒಂದು ತಾಳೆಯ ಮರದ ಮೇಲಕ್ಕೆ ಹಾರಿ ಬಿದ್ದನು. ಅವನು ಮಹಾಭಯಂಕರವಾಗಿ ಬೊಬ್ಬಿಡುತ್ತ ಪ್ರಾಣ ಹೋಗುವ ಸಮಯದಲ್ಲಿ ರಾವಣನ ಬೋಧನೆಯನ್ನು ಸ್ಮರಿಸಿಕೊಂಡು ಶ್ರೀರಾಮನ ಧ್ವನಿಗೆ ಸಮಾನವಾದ ಧ್ವನಿಯಿಂದ "ಹಾ

ಸೀತೇ ! ಹಾ ಲಕ್ಷ್ಮಣಾ ! " ಎಂದು ಕೂಗಿದನು. ಅನಂತರ ಮೃಗಸ್ವರೂಪವನ್ನು ಬಿಟ್ಟು ರಾಕ್ಷಸರೂಪವುಳ್ಳವನಾಗಿ ಸರ್ವಾಭರಣಭೂಷಿತನಾಗಿ ಅತಿಭಯಂಕರವಾದ ಕೋರೆದಾಡೆಗಳುಳ್ಳವನಾಗಿ ಭೂಮಿಯ ಮೇಲೆ ಬಿದ್ದನು.

ಆಮೇಲೆ ಶ್ರೀರಾಮನು ತನ್ನ ಬಾಣದಿಂದ ಗಾಯಪಡೆದು ಶರೀರವೆಲ್ಲವೂ ರಕ್ತದಿಂದ ನೆನೆದು ಭೂಮಿಯಮೇಲೆ ಹೊರಳುತ್ತಿದ್ದ ಆ ರಾಕ್ಷಸನನ್ನು ಕಂಡನು. ಲಕ್ಷ್ಮಣನು ಆ ಮೃಗವನ್ನು ಕಂಡಾಗಲೇ ಮಾರೀಚನ ಮಾಯೆಯೆಂದು ನುಡಿದದ್ದನ್ನೂ ಸೀತಾದೇವಿಯನ್ನೂ ನೆನೆದು ಮಾರೀಚನು ತನ್ನ ಬಾಣದಿಂದ ಹತನಾದದ್ದು ಒಳ್ಳೆಯದಾಯಿತೆಂದೆಣಿಸಿದನು. ಮಾರೀಚನು ಜೀವವನ್ನು ಬಿಡುವಾಗ "ಹಾ ಸೀತೇ! ಹಾ ಲಕ್ಷ್ಮಣಾ!" ಎಂದು ಕಪಟದಿಂದ ಹಂಬಲಿಸಿದ್ದನ್ನು ಕೇಳಿ ಸೀತಾದೇವಿಯೂ ಮಹಾಪರಾಕ್ರಮಿಯಾದ ಲಕ್ಷ್ಮಣನೂ ಯಾವ ಅವಸ್ಥೆಯನ್ನು ಪಡೆದರೋ ಎಂದು ಚಿಂತಿಸುತ್ತ, ತನ್ನ ಆಶ್ರಮಸ್ಥಿತಿಯನ್ನು ನೆನೆದು ಬೇಗಬೇಗನೆ ಜನಸ್ಥಾನಾಭಿಮುಖನಾಗಿ ಹಿಂತಿರುಗಿದನು.



## ೪೫ ನೆಯ ಅಧ್ಯಾಯ

## ಲಕ್ಷ್ಮಣನು ಸೀತಾದೇವಿಯನ್ನು ಬಿಟ್ಟು ಹೋದದ್ದು

ಇತ್ತ ಸೀತಾದೇವಿಯು ಶ್ರೀರಾಮನ ಧ್ವನಿಯಿಂದ ಮಾರೀಚನು ಮೊರೆಯಿಟ್ಟದ್ದನ್ನು ಕೇಳಿ ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ಶ್ರೀರಾಮನು ಮೊರೆಯಿಟ್ಟ ಧ್ವನಿಯನ್ನು ಕೇಳಿ ನನ್ನ ಮನಸ್ಸು ಸ್ತಿಮಿತದಲ್ಲಿಲ್ಲ. ಜೀವವು ತಳಮಳಿಸುತ್ತಿದೆ. ನಾನು ಯಾವಾಗಲೂ ಶ್ರೀರಾಮನ ದೈನ್ಯಸ್ವರವನ್ನು ಕೇಳಿದವಳಲ್ಲ. ಈಗ ಆತನ ದೈನ್ಯಸ್ವರವನ್ನು ಕೇಳಿದೆನು. ನಿನ್ನ ಸಹಾಯವನ್ನು ಎದುರು ನೋಡುವ ಶ್ರೀರಾಮನನ್ನು ಹುಡುಕಿಕೊಂಡು ಶೀಘ್ರವಾಗಿ ಹೋಗು. ಸಿಂಹಗಳ ನಡುವೆ ಸಿಕ್ಕಿಬಿದ್ದ ಎತ್ತಿನಂತೆ ರಾಕ್ಷಸರ ನಡುವೆ ಸಿಕ್ಕಿ ರಾಮನು ಶರಣಾರ್ಥಿಯಾಗಿ ಕೂಗಿಕೊಳ್ಳುತ್ತಿದ್ದಾನೆ. ಆದಕಾರಣ ನೀನು ಶೀಘ್ರವಾಗಿ ಶ್ರೀರಾಮನ ಧ್ವನಿಯು ಹುಟ್ಟಿದ ಮಾರ್ಗವಾಗಿ ಹೋಗಿ ಆತನನ್ನು ರಕ್ಷಿಸು " ಎಂದು ನುಡಿದಳು.

ಆ ಮಾತನ್ನು ಕೇಳಿ ಲಕ್ಷ್ಮಣನು ತನ್ನ ಅಣ್ಣನಾದ ಶ್ರೀರಾಮನು ಆಜ್ಞಾಪಿಸಿದಂತೆ ಸೀತಾದೇವಿಯನ್ನು ಕಾದುಕೊಂಡು ಆಶ್ರಮದಲ್ಲಿರಬೇಕಲ್ಲದೆ ಹೋಗುವುದು ಯೋಗ್ಯವಲ್ಲವೆಂದು ನಿಶ್ಚಯಿಸಿ ಹೊರಗೆ ಹೊರಡದಿದ್ದನು. ಅದನ್ನು ಕಂಡು ಸೀತಾದೇವಿಯು ಅತ್ಯಂತ ಕೋಪದಿಂದ ಆತನನ್ನು ಕುರಿತು ಗದರಿಸಿದಳು : " ಎಲೈ ಲಕ್ಷ್ಮಣ, ನೀನು ಶ್ರೀರಾಮನಿಗೆ ಶತ್ರುವಾದ ತಮ್ಮನಲ್ಲದೆ ಮಿತ್ರನಲ್ಲ. ಆತನಿಗೆ ಇಂಥ ಅವಸ್ಥೆಯು ಬಂದೂ ಆತನ ಸಮೀಪಕ್ಕೆ ಹೋಗದೆ ಇದ್ದೀಯೆ. ನೀನು ನನ್ನ ಮೇಲಣ ಆಸೆಯಿಂದ ಶ್ರೀರಾಮನಿಗೆ ಕೇಡನ್ನು ಬಯಸುತ್ತಿದ್ದೀಯೆ. ಆತನನ್ನು ಹುಡುಕಿಕೊಂಡು ಹೋಗಬೇಕೆಂಬ ಚಿಂತೆಯಿಲ್ಲದಿದ್ದೀಯೆ. ಈ ವಿಷಯದಲ್ಲಿ ಸಂಶಯವಿಲ್ಲ. ಶ್ರೀರಾಮನಿಗೆ ಒದಗಿರುವ ಕೇಡೇ ನಿನಗೆ ಪ್ರಿಯವಾಗಿದೆ. ನಿನಗೆ ಆತನಲ್ಲಿ ಸ್ನೇಹವಿಲ್ಲ: ಆತನ ದೈನ್ಯಸ್ವರವನ್ನು ಕೇಳಿಯೂ ನನ್ನ ಮಾತನ್ನು ಲಕ್ಷಿಸದೆ ಮೈಮರೆತು ಸುಮ್ಮನಿದ್ದೀಯೆ. ಶ್ರೀರಾಮನಿಗೆ ಏನಾಯಿತೋ ಎಂಬ ಸಂಶಯವುಂಟಾಗಿರುವ ಈ ಸಮಯದಲ್ಲಿ ನಿನ್ನಿಂದ ನನಗಾಗುವ

ಪ್ರಯೋಜನವೇನು ? ನಿನ್ನನ್ನು ನನ್ನ ರಕ್ಷಣಾರ್ಥವಾಗಿ ಶ್ರೀರಾಮನು ಬಿಟ್ಟು ಹೋದದ್ದರಿಂದ ನೀನು ನಾನು ಹೇಳಿದ ಮಾತನ್ನು ಕೇಳಬೇಕಲ್ಲದೆ ಉಪೇಕ್ಷೆಮಾಡಬಾರದು" ಎಂದು ಕಣ್ಣೀರು ಸುರಿಸುತ್ತ ನುಡಿದಳು.

ಲಕ್ಷ್ಮಣನು ಆಕೆಯನ್ನು ಕುರಿತು ಹೀಗೆ ಸಮಾಧಾನವನ್ನು ಹೇಳಿದನು : "ದೇವಿ, ಯಕ್ಷ ರಾಕ್ಷಸ ಗಂಧರ್ವ ಕಿಂಪುರುಷಾದಿಗಳಿಂದ ಶ್ರೀರಾಮನು ಅಪಜಯವನ್ನು ಪಡೆಯುವವನಲ್ಲ. ಮನುಷ್ಯರಲ್ಲಾದರೂ ಗಂಧರ್ವರಲ್ಲಾದರೂ ರಾಕ್ಷಸರಲ್ಲಾದರೂ ಪಿಶಾಚರಲ್ಲಾದರೂ ಆತನಿಗೆದುರಾಗಿ ರಣರಂಗದಲ್ಲಿ ನಿಲ್ಲುವವರೊಬ್ಬರೂ ಇಲ್ಲ. ಯುದ್ಧರಂಗದಲ್ಲಿ ದೇವೇಂದ್ರನಿಗೆ ಸಮಾನನಾದ ಶ್ರೀರಾಮನು ಯಾರಿಗೂ ಗೆಲ್ಲಲು ಶಕ್ಯನಲ್ಲ. ನೀನು ಕಂಗೆಟ್ಟು ಇಂಥ ಮಾತುಗಳನ್ನಾಡಬೇಡ. ನಾನು ಶ್ರೀರಾಮನಿಲ್ಲದ ಸಮಯದಲ್ಲಿ ಈ ವನದಲ್ಲಿ ನಿನ್ನೊಬ್ಬಳನ್ನೇ ಬಿಟ್ಟು ಹೋಗುವುದಕ್ಕೆ ಸಂಮತಿಸೆನು. ಸಮಸ್ತ ದೇವತೆಗಳು ಕೂಡಿದರೂ ಸತ್ತ್ವದಲ್ಲಿ ಶ್ರೀರಾಮನಿಗೆ ಸರಿಯಾಗಲಾರರು. ನೀನು ನಿನ್ನ ಮನಸ್ಸಿನ ಭಯವನ್ನು ಬಿಟ್ಟು ಸುಖವಾಗಿರು. ಶ್ರೀರಾಮನು ದೈನ್ಯದಿಂದ ಎಂದಿಗೂ ಕೂಗಿಕೊಳ್ಳತಕ್ಕವನಲ್ಲ. ಆ ಮೃಗವನ್ನು ಕೊಂದು ಶೀಘ್ರದಲ್ಲಿ ಬರುವನು. ಅಂತರಿಕ್ಷಮಾರ್ಗದಲ್ಲಿ ತೋರುವ ಗಂಧರ್ವನಗರದಂತೆ ವಿಚಿತ್ರವಾಗಿ ಮೃಗರೂಪದಿಂದ ಬಂದ ರಾಕ್ಷಸನು ಹಾಗೆ ಸ್ವರಗೈದಿರಬಹುದು. ಹೇಗಾದರೂ ಆ ಸ್ವರವು ಶ್ರೀರಾಮನ ಸ್ವರವಲ್ಲ. ಆತನು ನಿನ್ನನ್ನು ಕಾದುಕೊಂಡಿರ ಹೇಳಿ ನನ್ನನ್ನು ಬಿಟ್ಟು ಹೋದನು. ಆತನ ಮಾತನ್ನು ಮೀರಿ ಈ ಘೋರಾರಣ್ಯದಲ್ಲಿ ನಿನ್ನೊಬ್ಬಳನ್ನೇ ಬಿಟ್ಟು ಹೋಗಲು ಒಪ್ಪೆನು. ದೇವಿ, ನಾವು ಜನಸ್ಥಾನದಲ್ಲಿದ್ದ ಖರದೂಷಣಾದಿ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನು ಕೊಂದ ಮೇಲೆ ರಾಕ್ಷಸರು ನಮ್ಮಲ್ಲಿ ವೈರವನ್ನು ಬೆಳೆಸಿ ಆಗಾಗ ವಿಚಿತ್ರವಾಗಿ ಕೂಗುತ್ತಿದ್ದಾರೆ" ಎಂದು ನುಡಿದನು.

ಆ ಮಾತನ್ನು ಕೇಳಿ ಸೀತಾದೇವಿಯು ಅತ್ಯಂತ ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ಸತ್ಯಸಂಧನಾದ ಲಕ್ಷ್ಮಣನನ್ನು ಕುರಿತು ಹಂಗಿಸಿ ಮಾತನಾಡಿದಳು : "ಲಕ್ಷ್ಮಣ, ನೀನು ದುರುಳ, ನಿರ್ದಯ, ಕ್ರೂರಕರ್ಮಿ, ಕುಲಗೇಡಿ. ನಿನಗೆ ಶ್ರೀರಾಮನಲ್ಲಿ ಸ್ವಲ್ಪವೂ ಪ್ರೀತಿಯಿಲ್ಲವೆಂದು ನನಗೆ ತೋರುತ್ತದೆ. ಅಲ್ಲದ ಪಕ್ಷದಲ್ಲಿ ಆತನ ದೈನ್ಯೋಕ್ತಿಗಳನ್ನು ಕೇಳಿ ಆತನನ್ನು ಹುಡುಕಿಕೊಂಡು ಹೋಗೆಂದು ನಾನು ಹೇಳಿದರೂ ಪ್ರತಿಕೂಲವಾದ ವಚನಗಳನ್ನು ನುಡಿಯುವೆಯಾ ? ಲಜ್ಜೆಗೆಟ್ಟವನಾಗಿ ಮನಸ್ಸು ಬಂದಂತೆ ನಡೆಯುವ ಶತ್ರುಪ್ರಾದ ನಿನಗೆ ಇಂಥ ಬುದ್ಧಿ ಹುಟ್ಟುವುದು ಆಶ್ಚರ್ಯವಲ್ಲ. ನೀನು ನನಗೋಸ್ಕರವಾಗಿ ಅಯೋಧ್ಯಾಪಟ್ಟಣದಿಂದ ಕಪಟಸ್ನೇಹವನ್ನು ಮಾಡಿಕೊಂಡು ಬಂದಿದ್ದೀಯೆ. ಅಲ್ಲದಿದ್ದರೆ ಭರತನು ನನ್ನನ್ನು ಅಪಹರಿಸಿ ತರಬೇಕೆಂದು ನಿನ್ನನ್ನು ಕಳುಹಿಸಿದನೋ ಏನೋ ತಿಳಿಯದು. ನೀವು ಎಷ್ಟು ಪ್ರಯತ್ನಪಟ್ಟರೂ ನಾನು ನಿಮಗೆ ದಕ್ಕುವವಳಲ್ಲ. ಕನ್ನೈದಿಲೆ ಪುಷ್ಪದಂತೆ ತನುಕಾಂತಿಯುಳ್ಳವನಾಗಿ ತಾವರೆ ಎಸಳುಗಳಂತೆ ಕಣ್ಣುಗಳುಳ್ಳ ಶ್ರೀರಾಮನಿಗೆ ಪ್ರಿಯಳಾದ ಸ್ತ್ರೀಯು ಮತ್ತೊಬ್ಬ ಪುರುಷನನ್ನು ಮನಸ್ಸಿನಲ್ಲಾದರೂ ನೆನೆಯುವಳೆ ? ನೀನು ನಿನ್ನ ಕಣ್ಣುಮುಂದೆ ಶರೀರತ್ಯಾಗ ಮಾಡುವ ನನ್ನನ್ನು ನೋಡುವೆ. ನಾನು ಶ್ರೀರಾಮನನ್ನು ಬಿಟ್ಟು ಒಂದು ಕ್ಷಣಮಾತ್ರವಾದರೂ ಲೋಕದಲ್ಲಿ ಶರೀರಸಹಿತ ನಿಲ್ಲುವವಳಲ್ಲ" ಎಂದು ಅತ್ಯಂತ ಕರ್ಣಕಠೋರವಾದ ಮಾತುಗಳನ್ನು ನುಡಿದಳು.

ಆ ಮಾತುಗಳನ್ನು ಕೇಳಿ ಲಕ್ಷ್ಮಣನ ಶರೀರವೆಲ್ಲವೂ ನಡುಗಲಾರಂಭಿಸಿತು. ಅವನು ಕೈಮುಗಿದುಕೊಂಡು 'ಎಲೌ ತಾಯೆ, ನೀನು ಹೇಳಿದ ಮಾತುಗಳಿಗೆ ನಾನು ಪ್ರತ್ಯುತ್ತರವನ್ನು

ಕೊಡಲಾರೆನು. ನೀನು ನನ್ನ ಇಷ್ಟದೇವತಾಸ್ವರೂಪಳು. ಲೋಕದಲ್ಲಿ ಸ್ತ್ರೀಯರಿಗೆ ನಿಷ್ಠುರ ವಚನವು ಸ್ವಭಾವವಾಗಿರುವುದು. ಸ್ತ್ರೀಯರು ಚಂಚಲಬುದ್ಧಿಯಿಂದ ನಿಷ್ಠುರವಚನಗಳನ್ನು ನುಡಿದು ಧರ್ಮಾಧರ್ಮಗಳನ್ನು ವಿಚಾರಿಸದೆ ಅಣ್ಣತಮ್ಮಂದಿರಿಗೂ ತಂದೆ ಮಕ್ಕಳಿಗೂ ಭೇದವನ್ನು ಹುಟ್ಟಿಸುವುದು ಸ್ವಭಾವ! ದೇವಿ, ನೀನು ನುಡಿಯುವ ಮಾತುಗಳು ನನ್ನ ಎರಡು ಕಿವಿಗಳಲ್ಲಿಯೂ ಕಬ್ಬಿಣದ ಸಲಾಕೆಗಳಂತೆ ಹೊಕ್ಕು ಮನಸ್ಸಿಗೆ ವ್ಯಥೆಯನ್ನುಂಟು ಮಾಡುತ್ತಿವೆ. ನಾನು ಇಂಥ ದುರ್ವಾಕ್ಯಗಳನ್ನು ಸಹಿಸುವವನಲ್ಲ. ನೀನು ಹೇಳಿದ ಮಾತುಗಳನ್ನು ಈ ವನದಲ್ಲಿರುವ ವನದೇವತೆಗಳೂ ಋಷಿಗಳೂ ಕೇಳಿ ಸಾಕ್ಷಿಯಾಗಿರಲಿ. ನನ್ನನ್ನು ಈ ಪ್ರಕಾರವಾಗಿ ನಿಷ್ಠುರವಚನಗಳಿಂದ ನುಡಿಯುವ ನೀನು ಕೆಟ್ಟುಹೋಗುವೆ. ನನ್ನ ಗುರುವಾದ ಶ್ರೀರಾಮನು ಹೇಳಿದಂತೆ ಆತನ ಆಜ್ಞೆಯನ್ನು ಪರಿಪಾಲಿಸಿಕೊಂಡಿರುವ ನನ್ನನ್ನು ನೀನು ನಿನ್ನ ಸ್ತ್ರೀಸ್ವಭಾವದಿಂದ ನಿಷ್ಠುರವಾಗಿ ನುಡಿದೆ. ನೀನು ಸುಖವಾಗಿರು. ನಾನು ಶ್ರೀರಾಮನ ಬಳಿಗೆ ಹೋಗುತ್ತೇನೆ. ನಿನ್ನನ್ನು ಇಲ್ಲಿರುವ ವನದೇವತೆಗಳು ರಕ್ಷಿಸಲಿ! ನನಗೆ ದುರ್ನಿಮಿತ್ತಗಳು ಕಾಣುತ್ತಿವೆ. ನಾನು ತಿರುಗಿ ಬಂದು ನೀನು ಶ್ರೀರಾಮನೊಡನೆ ಕೂಡಿರುವುದನ್ನು ಕಾಣುವೆನೋ ಕಾಣೆನೋ ತಿಳಿಯದು" ಎಂದು ನುಡಿದನು.

ಆ ಮಾತನ್ನು ಕೇಳಿ ಸೀತಾದೇವಿಯು ಕಣ್ಣೀರು ತುಂಬಿ ರೋದನಮಾಡುತ್ತ "ಎಲೈ ಲಕ್ಷ್ಮಣ, ನಾನು ಶ್ರೀರಾಮನಿಲ್ಲದಿದ್ದರೆ ಗೋದಾವರೀನದಿಯಲ್ಲಾದರೂ ಪ್ರವೇಶಮಾಡುವೆನು. ಕೊರಳಿಗೆ ಹಗ್ಗವನ್ನಾದರೂ ಹಾಕಿಕೊಳ್ಳುವೆನು. ಅಲ್ಲದಿದ್ದರೆ ಅಗ್ನಿಯಲ್ಲಾದರೂ ಬೀಳುವೆನು. ವಿಷಪಾನವನ್ನಾದರೂ ಮಾಡಿ ಜೀವವನ್ನು ಬಿಡುವೆನಲ್ಲದೆ ಜೀವವಿಡಿದಿರಲಾರೆನು. ನಾನು ಶ್ರೀರಾಮನನ್ನಲ್ಲದೆ ಮತ್ತೊಬ್ಬ ಪುರುಷನನ್ನು ಪಾದದಿಂದಲಾದರೂ ಮುಟ್ಟುವವಳಲ್ಲ" ಎಂದು ಅತಿಶೋಕದಿಂದ ನುಡಿದು ಕೈಗಳಿಂದ ಹೊಟ್ಟೆಯನ್ನು ಚಚ್ಚಿಕೊಳ್ಳುತ್ತ ಆತನು ಎಷ್ಟು ಸಂತವಿಟ್ಟರೂ ಒಂದು ಮಾತನ್ನಾದರೂ ನುಡಿಯದಿದ್ದಳು.

ಅದನ್ನು ನೋಡಿ ಸತ್ಯಸಂಧನಾದ ಲಕ್ಷ್ಮಣನು ಬೇರೆ ದಾರಿಕಾಣದೆ ಸೀತಾದೇವಿಗೆ ಅಭಿವಂದಿಸಿ ಅವಳನ್ನು ತಿರುತಿರುಗಿ ನೋಡುತ್ತ ಶ್ರೀರಾಮನ ಸಮೀಪಕ್ಕೆ ಹೊರಟುಹೋದನು.



೪೭ ನೆಯ ಅಧ್ಯಾಯ

## ರಾವಣನು ಸೀತಾದೇವಿಯ ಬಳಿಗೆ ಬಂದದ್ದು

ಈ ಪ್ರಕಾರದಲ್ಲಿ ಲಕ್ಷ್ಮಣನು ಶ್ರೀರಾಮನನ್ನು ನೋಡುವುದಕ್ಕಾಗಿ ವೇಗದಿಂದ ತೆರಳಿದನು. ಆ ಸಮಯದಲ್ಲಿ ರಾವಣನು ಕಾಷಾಯವಸ್ತ್ರಗಳನ್ನುಟ್ಟು ಶಿಖಾಯಜ್ಞೋಪವೀತಗಳುಳ್ಳವನಾಗಿ ಪಾದುಕೆಗಳನ್ನು ಮೆಟ್ಟಿ ಕೊಡೆಯನ್ನು ಹಿಡಿದು ಹೆಗಲಮೇಲೆ ಕಮಂಡಲುವನ್ನೂ ದಂಡವನ್ನೂ ಇಟ್ಟುಕೊಂಡು ಸಂನ್ಯಾಸಿವೇಷವನ್ನು ಧರಿಸಿದನು. ಅನಂತರ ಶ್ರೀರಾಮನ ಆಶ್ರಮಕ್ಕೆ ಹೋಗಿ. ಚಂದ್ರಸೂರ್ಯರಿಲ್ಲದ ಸಂಧ್ಯಾಕಾಲದಲ್ಲಿ ಮಹತ್ತಾದ ಅಂಧಕಾರವು ಕವಿಯುವಂತೆ ರಾಮಲಕ್ಷ್ಮಣರಿಲ್ಲದ ಸಮಯದಲ್ಲಿ ಸೀತಾದೇವಿಯ ಸಮೀಪವನ್ನು ಸೇರಿ, ಚಂದ್ರನಿಂದ ವಿರಹಿತಳಾದ ರೋಹಿಣೀನಕ್ಷತ್ರದಂತೆ ಒಪ್ಪುತ್ತಿದ್ದ ಸೀತಾದೇವಿಯನ್ನು ಕಂಡನು. ಆ ಸಮಯದಲ್ಲಿ ತಪೋವನದಲ್ಲಿದ್ದ

ವೃಕ್ಷಗಳೂ ಕೂಡ ಭಯಪಟ್ಟವೊ ಎಂಬಂತೆ ಅಲ್ಲಾಡದಿದ್ದವು. ವಾಯುವು ಬೀಸದಿತ್ತು. ಶೀಘ್ರವಾದ ಪ್ರವಾಹವುಳ್ಳ ಗೋದಾವರೀನದಿಯೂ ಮಂದಪ್ರವಾಹವುಳ್ಳದ್ದಾಗಿತ್ತು. ದುಷ್ಟಚಾರಿತ್ರವುಳ್ಳ ರಾವಣನು ಹುಲ್ಲುಮುಚ್ಚಿ ಆಳವು ತಿಳಿಯದ ಹಾಗಿರುವ, ಬಾವಿಯಂತೆ ರಾಕ್ಷಸಸ್ವರೂಪವು ಎದ್ದು ಕಾಣದಹಾಗೆ ಸೌಮ್ಯಸ್ವರೂಪದ ಯತಿವೇಷವನ್ನು ಧರಿಸಿ ಚಿತ್ರಾನಕ್ಷತ್ರದ ಬಳಿಗೆ ಶನಿಯು ಬಂದಂತೆ ಸೀತಾದೇವಿಯ ಮುಂದೆ ಬಂದು ನಿಂತನು ; ಮೋಹನಾಂಗಿಯೂ ಮನೋಹರ ವಾದ ದಂತಪಂಕ್ತಿಯುಳ್ಳವಳೂ ಪೂರ್ಣಚಂದ್ರನಂತೆ ಮುಖವುಳ್ಳವಳೂ ಪರ್ಣಶಾಲೆಯಲ್ಲಿ ಕುಳಿತುಕೊಂಡು ಶ್ರೀರಾಮಧ್ಯಾನವನ್ನು ಮಾಡುತ್ತ ಪೀತಾಂಬರವನ್ನುಟ್ಟು ಮೊಳಕಾಲಮೇಲೆ ಅಂಗೈಗಳನ್ನಿಟ್ಟುಕೊಂಡು ತಲೆಯೆತ್ತಿ ನೋಡುತ್ತ ಶೋಕಪರವಶಳೂ ಆಗಿದ್ದ ಆ ದೇವಿಯನ್ನು ಕಂಡು ಮದನಬಾಣಗಳಿಗೆ ಗುರಿಯಾದನು. ಮಹಾನಿಷ್ಠನಾದ ಯತಿಯಂತೆ ಉಪನಿಷದ್ವಾಕ್ಯಗಳನ್ನು ಪಠಿಸುತ್ತ ಹತ್ತಿರಕ್ಕೆ ಹೋಗಿ ಕೈಯಲ್ಲಿ ಕಮಲವನ್ನು ಧರಿಸಿದ ಸಾಕ್ಷಾತ್ ಮಹಾಲಕ್ಷ್ಮಿಯಂತೆ ಒಪ್ಪುತ್ತಿದ್ದ ಆ ದೇವಿಯನ್ನು ಕುರಿತು ಹೀಗೆ ಮಾತನಾಡಿದನು : “ ಎಲೌ ಸ್ತ್ರೀಯೆ, ಪೀತಾಂಬರವನ್ನುಟ್ಟುಕೊಂಡು ಪುಟವಿಕ್ಕಿದ ಚಿನ್ನದಂತೆ ತನುಕಾಂತಿಯುಳ್ಳ ನೀನಾರು ? ನಿನ್ನ ಶರೀರವು ಹೊಂದಾವರೆ ಪುಷ್ಪಗಳ ಸಮೂಹಗಳಿಂದ ದೇದೀಪ್ಯಮಾನವಾದ ಎಳೆಯ ತಾವರೆಬಳ್ಳಿಯಂತೆ ಒಪ್ಪುತ್ತಿದೆ ; ನೀನಾರು ? ಸಾಕ್ಷಾತ್ ಭುವನಾಧಿದೇವತೆಯೋ ? ಮಹಾಲಕ್ಷ್ಮಿಯೋ ? ಮೂರು ಲೋಕಗಳನ್ನೂ ಜಯಿಸಿದ ಮನ್ಮಥನ ಕೀರ್ತಿಯೋ ? ಅಪ್ಸರಃಸ್ತ್ರೀಯೋ ? ಮನಸ್ಸುಬಂದಂತೆ ಸಂಚರಿಸುವ ರತೀದೇವಿಯೋ ? ನಿನ್ನ ದಂತಗಳು ಸಣ್ಣವಾಗಿಯೂ ಸಮವಾಗಿಯೂ ನಯವಾಗಿಯೂ ಬಿಳುಪಾಗಿಯೂ ಮನೋಹರ ವಾಗಿವೆ. ನಿನ್ನ ಕಣ್ಣುಗಳು ಕಮಲದ ಎಸಳಿನಂತೆ ತೆರಪಾಗಿ ಕಡೆಗಣ್ಣು ಕೆಂಪಾಗಿ ನುಣುಪಾಗಿವೆ. ನಿನ್ನ ಜಘನ ಪ್ರದೇಶವು ಅತಿವಿಶಾಲವಾಗಿದೆ. ತೊಡೆಗಳು ಆನೆಯ ಸೊಂಡಿಲಂತೆ ಕ್ರಮವರ್ತುಳವಾಗಿ ಕೋಮಲವಾಗಿವೆ. ಮೋಹನಾಂಗಿ, ನದೀಪ್ರವಾಹವು ತೀರಗಳನ್ನು ಕರಗಿಸುವಂತೆ ನಿನ್ನ ರೂಪವು ನನ್ನ ಮನಸ್ಸನ್ನು ಕರಗಿಸುತ್ತಿದೆ. ನಿನ್ನಂಥ ರೂಪವತಿಯಾದ ಸ್ತ್ರೀಯನ್ನು ಮೂರುಲೋಕದಲ್ಲಿಯೂ ನಾನು ಕಾಣಲಿಲ್ಲ. ಈ ಸ್ಥಳದಲ್ಲಿ ಏಕಾಂತವಾಸವಾಗಿರುವ ನಿನ್ನನ್ನು ಕಂಡು ನನಗೆ ಉನ್ಮಾದ ವಾಗುತ್ತಿದೆ. ಈ ಸ್ಥಳವು ಘೋರಾಕಾರರೂ ಕಾಮರೂಪಿಗಳೂ ಆದ ರಾಕ್ಷಸರ ವಾಸಭೂಮಿ. ಇಲ್ಲಿ ವಾಸವಾಗಿರುವುದು ನಿನಗೆ ಯೋಗ್ಯವಲ್ಲ. ನೀನು ರಮಣೀಯವಾದ ಉಪ್ಪರಿಗೆಗಳುಳ್ಳ ಪಟ್ಟಣದ ಸಮೀಪದಲ್ಲಿರುವ ಉಪವನಗಳಲ್ಲಿ ಪರಿಮಳವುಳ್ಳ ಪುಷ್ಪಗಳನ್ನು ಮುಡಿದುಕೊಂಡು ವಿನೋದಾರ್ಥವಾಗಿ ಸಂಚರಿಸುವುದಕ್ಕೆ ಯೋಗ್ಯಳು. ನೀನು ಯಾರೆಂಬುದು ತಿಳಿಯಲಿಲ್ಲ. ನನ್ನ ಮನಸ್ಸಿಗೆ ಸಾಕ್ಷಾತ್ ದೇವತಾಸ್ತ್ರೀಯೆಂದು ತೋರುತ್ತದೆ. ಆದರೆ ಈ ಸ್ಥಳಕ್ಕೆ ದೇವ ಗಂಧರ್ವ ಕಿನ್ನರರು ಬರಲಾರರು. ಇದು ರಾಕ್ಷಸರಿರುವ ಸ್ಥಳ. ಇಲ್ಲಿ ವಾಸವಾಗಿರುವುದು ನಿನಗೆ ಯೋಗ್ಯವಲ್ಲ. ಇಲ್ಲಿಗೆ ನೀನು ಯಾವ ರೀತಿಯಲ್ಲಿ ಬಂದೆಯೋ ತಿಳಿಯಲಿಲ್ಲ. ಇಲ್ಲಿ ಕಪಿಗಳು ಸಿಂಹಗಳು ಚಿರತೆಗಳು ಹೆಬ್ಬುಲಿಗಳು ಕರಡಿಗಳೇ ಮೊದಲಾದ ಅನೇಕ ಮೃಗಗಳೂ ಘೋರವಾದ ಪಕ್ಷಿಗಳೂ ಇವೆ. ಅವುಗಳಿಗೆ ಅಂಜದೆ ನೀನು ಹೇಗಿರುವೆ ? ಭಯಂಕರವಾದ ಆನೆಗಳುಳ್ಳ ಈ ಅರಣ್ಯದಲ್ಲಿ ಹೇಗಿದ್ದೀಯೋ ತಿಳಿಯದು. ನೀನಾರು ? ಯಾರ ಸ್ತ್ರೀ ? ಎಲ್ಲಿಂದ ಬಂದೆ ? ಘೋರರಾದ ರಾಕ್ಷಸರು ಸಂಚರಿಸುವ ಈ ಅರಣ್ಯಕ್ಕೆ ಬಂದ ಕಾರಣವೇನು ? ” ಎಂದು ಕೇಳಿದನು.

ಈ ರೀತಿಯಲ್ಲಿ ನುಡಿದ ದುರಾತ್ಮನಾದ ರಾವಣನನ್ನು ಕಂಡು ಸೀತಾದೇವಿಯು ಆತನು ಪರಿವ್ರಾಜಕನಾದ ಬ್ರಾಹ್ಮಣನೆಂದೆಣಿಸಿ ಅತಿಥಿಸತ್ಕಾರಗಳನ್ನು ಮಾಡಿದಳು. ಅವನಿಗೆ ಪೀಠವನ್ನು ಕೊಟ್ಟು ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಫಲಮೂಲಗಳನ್ನರ್ಪಿಸಿ ಅವುಗಳನ್ನು

ತಿನ್ನಬೇಕೆಂದು ಪ್ರಾರ್ಥಿಸಿದಳು. ಆ ಸಂನ್ಯಾಸಿಯ ಚೇಷ್ಟೆಗಳನ್ನೂ ವಿಕಾರದೃಷ್ಟಿಗಳನ್ನೂ ನೋಡಿ ಬೇಟೆಗೆ ಹೋದ ಶ್ರೀರಾಮನನ್ನೂ ಆತನನ್ನು ಹುಡುಕಿಕೊಂಡು ಹೋದ ಲಕ್ಷ್ಮಣನನ್ನೂ ನಿರೀಕ್ಷಿಸುತ್ತ ಅವರು ಹೋದ ಮಾರ್ಗವನ್ನು ನೋಡುತ್ತಿದ್ದಳು.



## ೪೭ ನೆಯ ಅಧ್ಯಾಯ

## ಸೀತಾದೇವಿಯು ರಾವಣನಿಗೆ ತನ್ನ ವೃತ್ತಾಂತವನ್ನು ಹೇಳಿದ್ದು

ಆಗ ಯತಿವೇಷದಿಂದಿದ್ದ ರಾವಣನು ಸೀತೆಯ ವೃತ್ತಾಂತವನ್ನು ಪುನಃ ಕೇಳಲು ಸೀತಾದೇವಿಯು ತನ್ನ ಸ್ಥಿತಿಯನ್ನು ಯಥಾರ್ಥವಾಗಿ ಹೇಳದಿದ್ದರೆ ಶಾಪವು ಬರುವುದೆಂದೆಣಿಸಿ ಆತನನ್ನು ಕುರಿತು ಈ ರೀತಿಯಲ್ಲಿ ವಿಜ್ಞಾಪಿಸಿದಳು: "ಹೇ ಬ್ರಾಹ್ಮಣ, ನಾನು ಮಿಥಿಲಾಪುರಿಗೆ ಪತಿಯಾದ ಜನಕರಾಜನ ಮಗಳು. ನನ್ನ ಹೆಸರು ಸೀತೆ. ನಾನು ಶ್ರೀರಾಮನ ಪಟ್ಟದರಾಣಿ. ನಾನು ಆತನನ್ನು ವಿವಾಹವಾಗಿ ಅಯೋಧ್ಯಾಪಟ್ಟಣಕ್ಕೆ ಹೋಗಿ ಇಕ್ಷ್ವಾಕುವಂಶಕುಲತಿಲಕನಾದ ದಶರಥರಾಜನ ಮನೆಯಲ್ಲಿ ಸಕಲ ಐಶ್ವರ್ಯಗಳುಳ್ಳವಳಾಗಿ ಸಮಸ್ತ ಭೋಗಗಳನ್ನೂ ಅನುಭವಿಸಿಕೊಂಡು ಹನ್ನೆರಡು ವರುಷಗಳಿದ್ದೆನು. ಹದಿಮೂರನೆಯ ವರುಷದಲ್ಲಿ ನನ್ನ ಮಾವನಾದ ದಶರಥರಾಜನು ತನ್ನ ಜ್ಯೇಷ್ಠಪುತ್ರನಾಗಿ ನನ್ನ ಪತಿಯಾದ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದೆಣಿಸಿ ತಕ್ಕ ಸಿದ್ಧತೆಯನ್ನು ಮಾಡಿದನು. ಆ ಸಮಯದಲ್ಲಿ ದಶರಥರಾಜನಿಗೆ ಕಿರಿಯ ಪತ್ನಿಯಾದ ಕೈಕೇಯಿದೇವಿಯು ದೇವಾಸುರಯುದ್ಧದಲ್ಲಿ ತನಗೆ ಎರಡು ವರಗಳನ್ನು ಕೊಡುವುದಾಗಿ ಹೇಳಿದ್ದ ದಶರಥರಾಜನನ್ನು ಕುರಿತು ಆ ವರಗಳನ್ನು ಆಗ ಕೊಡಬೇಕೆಂದು ಕೇಳಿದಳು. ಆತನು ಸತ್ಯಸಂಧನಾದ್ದರಿಂದ ಕೊಡುವುದಕ್ಕೆ ಸಂಮತಿಸಿ ಆಕೆಯು ಬಯಸಿದ ವರಗಳು ಯಾವುವೆಂದು ಕೇಳಿದನು. ಕೈಕೇಯಿದೇವಿಯು, ಧರ್ಮಸಾಕ್ಷಿಯಾಗಿ ಕೊಡದೆ ತಪ್ಪುವುದಿಲ್ಲವೆಂದು ಆತನಿಂದ ಭಾಷೆಯನ್ನು ತೆಗೆದುಕೊಂಡು ನನ್ನ ಪತಿಯಾದ ಶ್ರೀರಾಮನ ಪಟ್ಟಾಭಿಷೇಕವನ್ನು ನಿಲ್ಲಿಸಿ ಆತನನ್ನು ಹದಿನಾಲ್ಕುವರುಷಗಳ ಕಾಲ ವನವಾಸಕ್ಕೆ ಕಳುಹಿಸಬೇಕೆಂದೂ ತನ್ನ ಮಗನಾದ ಭರತನಿಗೆ ಪಟ್ಟವನ್ನು ಕಟ್ಟಬೇಕೆಂದೂ ಎರಡು ವರಗಳನ್ನು ಬೇಡಿಕೊಂಡಳು. ಹಾಗೆ ಮಾಡದಿದ್ದರೆ ಶರೀರತ್ಯಾಗವನ್ನು ಮಾಡಿಕೊಳ್ಳುವುದಾಗಿ ನಿಷ್ಠುರವಚನಗಳನ್ನು ನುಡಿದು, ದಶರಥರಾಜನು ಅನೇಕ ದ್ರವ್ಯರತ್ನಾಭರಣಗಳನ್ನು ಕೊಡುವುದಾಗಿ ಹೇಳಿದರೂ ಒಡಂಬಡದಿದ್ದಳು. ಆಗ ಶ್ರೀರಾಮನ ವಯಸ್ಸು ಇಪ್ಪತ್ತೈದು ವರುಷ. ನನಗೆ ಹದಿನೆಂಟು ವರುಷಗಳು ತುಂಬಿದ್ದವು. ಬ್ರಾಹ್ಮಣ, ನನ್ನ ಪತಿಯಾದ ಶ್ರೀರಾಮನು ಮೂರುಲೋಕಗಳಲ್ಲಿಯೂ ಮಹಾಪ್ರಸಿದ್ಧನು. ಅವನು ಸದ್ಗುಣಸಂಪನ್ನ, ಸತ್ಯಸಂಧ, ವಿಶಾಲಾಕ್ಷ, ಆಜಾನುಬಾಹು, ಸಮಸ್ತ ಪ್ರಾಣಿಗಳಲ್ಲಿಯೂ ದಯೆಯುಳ್ಳವನು. ದಶರಥರಾಜನು ಕೈಕೇಯಿದೇವಿಗೆ ಮನಸೋತು ಪಟ್ಟಾಭಿಷೇಕವನ್ನು ನಿಲ್ಲಿಸಿ ಅತ್ಯಂತ ವ್ಯಥೆಯಿಂದ ಚಿಂತಾಕ್ರಾಂತನಾಗಿ ಪಟ್ಟಾಭಿಷೇಕನಿಮಿತ್ತವಾಗಿ ತನ್ನ ಸಮೀಪಕ್ಕೆ ಬಂದ ಶ್ರೀರಾಮನೊಡನೆ ಮಾತಾಡದೆ ಸುಮ್ಮನಿದ್ದನು. ಆ ಸಮಯದಲ್ಲಿ ಆ ರಾಜನ ಸಮೀಪದಲ್ಲಿದ್ದ ಕೈಕೇಯಿದೇವಿಯು ಧೈರ್ಯದಿಂದ ಶ್ರೀರಾಮನನ್ನು ಕುರಿತು ಅತ್ಯಂತ ನಿಷ್ಠುರವಚನಗಳಿಂದ 'ನಿನ್ನ ತಂದೆಯಾದ ದಶರಥರಾಜನು ಭರತನಿಗೆ ಪಟ್ಟಾಭಿಷೇಕವನ್ನು ಮಾಡಬೇಕೆಂದೂ ನೀನು ಹದಿನಾಲ್ಕು ವರುಷಗಳು ವನವಾಸಮಾಡಬೇಕೆಂದೂ ಆಜ್ಞಾಪಿಸಿರುವನು. ನೀನು ತಂದೆಯ ಆಜ್ಞೆಯನ್ನು ಮೀರದೆ ವನವಾಸಕ್ಕೆ ಹೋಗು'

ಎಂದಳು. ಆ ಮಾತನ್ನು ಕೇಳಿ ಶ್ರೀರಾಮನು ಮಹಾಪ್ರಸಾದವೆಂದು ಅಂಗೀಕರಿಸಿ ಶಂಕಾತಂಕವಿಲ್ಲದೆ ವನಕ್ಕೆ ಬಂದನು. ಆತನೊಡನೆ ನಾನೂ ಬಂದೆನು. ಆತನಿಗೆ ಸಹಾಯವಾಗಿ ನನ್ನ ಮೈದುನನೂ ಮಹಾಸತ್ಯಸಂಧನೂ ದೃಢವ್ರತನೂ ಆದ ಲಕ್ಷ್ಮಣನೂ ಬಂದನು. ನನ್ನ ಪತಿಯಾದ ಶ್ರೀರಾಮನು ಪರರಿಗೆ ಕೊಡುವವನಲ್ಲದೆ ಒಬ್ಬರಿಂದ ತೆಗೆದುಕೊಳ್ಳುವವನಲ್ಲ. ಸತ್ಯವನ್ನೇ ನುಡಿಯುವವನಲ್ಲದೆ ಅನೃತವನ್ನು ನುಡಿಯುವವನಲ್ಲ. ಶ್ರೀರಾಮನಿಗೆ ಸಹಾಯವಾಗಿ ಬಂದ ಲಕ್ಷ್ಮಣನು ಮಹಾಬಲ ಪರಾಕ್ರಮಿ. ಯುದ್ಧರಂಗದಲ್ಲಿ ಸಮಸ್ತ ಶತ್ರುಸಂಹಾರಕ, ಧರ್ಮಿಷ್ಠ, ದೃಢವ್ರತ, ಬಿಲ್ಲುಗಾರರಲ್ಲಿ ಮಹಾಸಮರ್ಥ. ಶ್ರೀರಾಮನು ಲಕ್ಷ್ಮಣನನ್ನು ಸಹಾಯಮಾಡಿಕೊಂಡು ನನ್ನೊಡನೆ ಹೊರಟು ಜಡೆಗಳನ್ನೂ ನಾರುಬಟ್ಟೆಗಳನ್ನೂ ಧರಿಸಿಕೊಂಡು ಕಂದಮೂಲಫಲಾಹಾರಾದಿಗಳನ್ನು ಸೇವಿಸುತ್ತ ದೃಢವ್ರತನಾಗಿ ದಂಡಕಾರಣ್ಯಕ್ಕೆ ಬಂದನು. ಈ ರೀತಿಯಲ್ಲಿ ನಾವು ಮೂವರೂ ಕೈಕೇಯಿದೇವಿಗೆ ಸಂತೋಷವನ್ನುಂಟುಮಾಡಬೇಕೆಂದು ಗಂಭೀರವಾದ ಈ ವನದಲ್ಲಿ ಸಂಚರಿಸಿಕೊಂಡಿದ್ದೇವೆ. ನೀನು ಒಂದು ಕ್ಷಣಮಾತ್ರ ಇಲ್ಲಿದ್ದರೆ ನನ್ನ ಪತಿಯಾದ ಶ್ರೀರಾಮನು ಬೇಕಾದಷ್ಟು ಆಹಾರವನ್ನು ತೆಗೆದುಕೊಂಡು ಬರುವನು. ದ್ವಿಜಶ್ರೇಷ್ಠ, ನೀನಾರು ? ನಿನ್ನ ಹೆಸರೇನು ? ನಿನ್ನ ಕುಲವಾವುದು ? ನೀನೊಬ್ಬನೇ ಈ ಅರಣ್ಯಕ್ಕೆ ಬಂದ ಕಾರಣವೇನು ? " ಎಂದು ಕೇಳಿದಳು.

ಆಗ ರಾಕ್ಷಸಾಧಿಪತಿಯಾದ ರಾವಣನು ಸೀತಾದೇವಿಯನ್ನು ಕುರಿತು " ಸೀತೆ, ನಾನು ಸಮಸ್ತ ದೇವಾಸುರ ಯಕ್ಷ ಕಿನ್ನರ ವಿದ್ಯಾಧರ ನಾಗರೇ ಮೊದಲಾದವರನ್ನು ಬೆದರಿಸಿ ಅವರ ಸ್ಥಾನಗಳಿಂದ ಅವರನ್ನು ಹೊರಡಿಸಿ ಸಮಸ್ತ ಲೋಕಗಳನ್ನೂ ನನ್ನ ಪರಾಕ್ರಮದಿಂದ ಜಯಿಸಿ ಸಮಸ್ತ ರಾಕ್ಷಸರಿಗೂ ಒಡೆಯನಾದ ರಾವಣೇಶ್ವರನು. ಪುಟವಿಕ್ಕಿದ ಚಿನ್ನದಂತೆ ತನುಕಾಂತಿಯುಳ್ಳವಳಾಗಿ ಪೀತಾಂಬರ ವನ್ನುಟ್ಟಿರುವ ನಿನ್ನನ್ನು ನೋಡಿ ಮದನಬಾಣಗಳಿಗೊಳಗಾಗಿ ಮಿಕ್ಕ ಸ್ತ್ರೀಯರಲ್ಲಿ ಇಚ್ಛೆಯಿಲ್ಲದೆ ನಿನ್ನ ಸಮೀಪಕ್ಕೆ ಬಂದೆನು. ನಾನು ನಾನಾದೇಶಗಳಿಂದ ರೂಪಲಾವಣ್ಯಗಳುಳ್ಳ ವಿಲಾಸವತಿಯರಾದ ಅನೇಕ ಸ್ತ್ರೀಯರನ್ನು ತಂದಿಟ್ಟುಕೊಂಡಿದ್ದೇನೆ. ಅವರೆಲ್ಲರಿಗೂ ನೀನು ಜ್ಯೇಷ್ಠೆಯಾಗಿ ನನ್ನ ಪಟ್ಟದರಾಣಿಯಾಗಿರು. ನನಗೆ ಸಮುದ್ರದ ಮಧ್ಯದಲ್ಲಿ ಲಂಕಾಪುರಿಯೆಂಬ ಪಟ್ಟಣವುಂಟು. ಆ ಪಟ್ಟಣವು ತ್ರಿಕೂಟಪರ್ವತದ ಮೇಲಿದೆ. ಅಂಥ ಪಟ್ಟಣದಲ್ಲಿ ರಮಣೀಯವಾದ ಉದ್ಯಾನ ವನದಲ್ಲಿ ನನ್ನೊಡನೆ ಕ್ರೀಡಿಸಿಕೊಂಡಿರು. ಈ ಅರಣ್ಯದಲ್ಲಿರುವುದು ನಿನಗೆ ಉಚಿತವಲ್ಲ. ನೀನು ನನ್ನ ಭಾರ್ಯೆಯಾದರೆ ಸರ್ವಾಭರಣಭೂಷಿತೆಯರಾದ ಐದು ಸಾವಿರ ಮಂದಿ ಊಳಿಗದ ಸ್ತ್ರೀಯರನ್ನು ನಿನಗೆ ಸೇವೆಮಾಡಿಕೊಂಡಿರುವಂತೆ ನಿಯಮಿಸುತ್ತೇನೆ " ಎಂದು ನುಡಿದನು.

ಆ ಮಾತನ್ನು ಕೇಳಿ ಸೀತಾದೇವಿಯು ಅತ್ಯಂತ ಕೋಪಯುಕ್ತಳಾದಳು. ಅವಳು ರಾವಣನನ್ನು ಲೆಕ್ಕಿಸದೆ ಪ್ರತ್ಯುತ್ತರ ಕೊಟ್ಟಳು : " ಎಲೈ ರಾವಣ, ನಾನು ಮಹಾಮೇರುಪರ್ವತದಂತೆ ಧೀರನೂ ಮಹಾಸಮುದ್ರದಂತೆ ತಡೆಯಲು ಶಕ್ಯನಲ್ಲದವನೂ ದೇವೇಂದ್ರನಿಗೆ ಸಮಾನನೂ ಆದ ಶ್ರೀರಾಮನ ಪಟ್ಟದರಾಣಿ ; ಸರ್ವಲಕ್ಷಣಸಂಪನ್ನನೂ ಸತ್ಯಸಂಧನೂ ಮಹಾಪರಾಕ್ರಮವುಳ್ಳವನೂ ಆದ ಮಹಾಭಾಗ್ಯಶಾಲಿಯಾದ ಶ್ರೀರಾಮನಲ್ಲಿಯೇ ನಿಯಮವ್ರತವುಳ್ಳವಳು. ಆಜಾನುಬಾಹುವೂ ವಿಶಾಲವಕ್ಷನೂ ಸಿಂಹರಾಜನನ್ನು ಅತಿಕ್ರಮಿಸುವ ಪರಾಕ್ರಮವುಳ್ಳವನೂ ಪೂರ್ಣಚಂದ್ರನಂತೆ ಮುಖಕಾಂತಿಯುಳ್ಳವನೂ ಮಹಾತ್ಮನೂ ಆದ ನನ್ನ ಪತಿಗೆ ಸಮಾನರಾದವರಿಲ್ಲ. ಜಂಬುಕವು ಮಹಾಪರಾಕ್ರಮವುಳ್ಳ ಹೆಣ್ಣುಸಿಂಹವನ್ನು ಬಯಸುವಂತೆ ಅಜ್ಞಾನದಿಂದ ನೀನು ನನ್ನನ್ನು ಬಯಸುತ್ತಿದ್ದೀಯೆ. ಮಂದಭಾಗ್ಯನಾದವನು ಮರಣವು ಪ್ರಾಪ್ತವಾದಾಗ ಸ್ವಪ್ನದಲ್ಲಿ ಸುವರ್ಣ ಮಯವಾದ ವೃಕ್ಷಗಳನ್ನು ಕಾಣುವಂತೆ ನೀನು ನನ್ನನ್ನು ಬಯಸುತ್ತಿದ್ದೀಯೆ. ಹಸಿದಿರುವ ಸಿಂಹದ

ಬಾಯಿಯಿಂದ ಅವರ ಕೋರೆಹಲ್ಲನ್ನು ಕೀಳಬಯಸಿದ್ದೀಯೆ. ಕೃಷ್ಣಸರ್ಪದ ಬಾಯಿಯಿಂದ ವಿಷದಂತವನ್ನು ತೆಗೆಯಲಿಚ್ಛಿಸುವವನಂತೆಯೂ ಪ್ರಜ್ವಲಿಸುತ್ತಿರುವ ಅಗ್ನಿಯನ್ನು ವಸ್ತ್ರದಲ್ಲಿ ಕಟ್ಟಲಿಚ್ಛಿಸುವವನಂತೆಯೂ ಶ್ರೀರಾಮನ ಪತ್ನಿಯಾದ ನನ್ನನ್ನು ಅಪಹರಿಸಬಯಸುತ್ತೀಯೆ. ಕಾಲಕೂಟವಿಷವನ್ನು ಪಾನಮಾಡಿ ಬದುಕಲಿಚ್ಛಿಸುವಂತೆ ನನ್ನನ್ನು ಅಪಹರಿಸಿ ಜೀವಿಸಲು ಬಯಸಿದ್ದೀಯೆ. ಸಿಂಹಕ್ಕೂ ನರಿಗೂ ಎಷ್ಟು ವ್ಯತ್ಯಾಸವುಂಟೋ, ಸಮುದ್ರಕ್ಕೂ ಕಾಲುವೆಗೂ ಎಷ್ಟು ಭೇದವುಂಟೋ, ದೇವೋತ್ತಮನಿಗೂ ಕಿರಾತನಿಗೂ ಎಷ್ಟು ತಾರತಮ್ಯವುಂಟೋ, ಸುವರ್ಣಕ್ಕೂ ಸೀಸಕ್ಕೂ ಎಷ್ಟು ಅಂತರವುಂಟೋ, ಶ್ರೀಗಂಧಕ್ಕೂ ಕೆಸರಿಗೂ ಎಷ್ಟು ಭೇದವುಂಟೋ ಅಷ್ಟು ವ್ಯತ್ಯಾಸವು ಶ್ರೀರಾಮನಿಗೂ ನಿನಗೂ ಇದೆ. ಆನೆಗೂ ಬೆಕ್ಕಿಗೂ, ಗರುಡನಿಗೂ ಕಾಗೆಗೂ, ನವಿಲಿಗೂ ಗೂಬೆಗೂ, ಹಂಸಕ್ಕೂ ಹದ್ದಿಗೂ ಇರುವಷ್ಟು ಭೇದವು ಶ್ರೀರಾಮನಿಗೂ ನಿನಗೂ ಇದೆ. ದೇವೇಂದ್ರನಿಗೆ ಸಮಾನನಾದ ಶ್ರೀರಾಮನು ಧನುರ್ಧಾರಿಯಾಗಿ ನಿನ್ನನ್ನು ಎದುರಿಸಿದರೆ, ನೀನು ಏನು ಮಾಡಬಲ್ಲೆ ? ನೊಣದ ಮೇಲೆ ವಜ್ರಾಯುಧವು ಎರಗಿದಂತಾದೀತು. ನಿನಗೆ ನಾನು ಎಂದಿಗೂ ದಕ್ಕಲಾರೆ" ಎಂದು ಕೋಪದಿಂದ ಹೇಳಿ ಬಿರುಗಾಳಿಗೆ ಸಿಕ್ಕಿದ ಬಾಳೆಯ ಗಿಡದಂತೆ ಭಯಶೋಕಗಳಿಂದ ಸೀತೆಯು ನಡುಗುತ್ತಿದ್ದಳು.



## ೪೮ ನೆ ಯ ಅ ಧ್ಯಾ ಯ

## ರಾ ವ ಣ ನ ಆ ತ್ಮ ಶ್ಲಾ ಘ ನೆ

ಅನಂತರ ರಾವಣನು ಹುಬ್ಬನ್ನು ಗಂಟುಹಾಕಿಕೊಂಡು ಆ ದೇವಿಯನ್ನು ಕುರಿತು ಹೀಗೆ ಕಠೋರವಾದ ಮಾತುಗಳನ್ನಾಡಿದನು : " ಎಲೆ ಸ್ತ್ರೀಯೆ, ನಾನು ಕುಬೇರನ ಒಡಹುಟ್ಟಿದವನು. ಆತನು ನನ್ನ ಬಲತಾಯಿಯ ಮಗನು. ನನ್ನ ಹೆಸರು ರಾವಣ. ನನಗೆ ಹತ್ತು ಶಿರಸ್ಸುಗಳುಂಟು. ನಾನು ಮಹಾಪ್ರತಾಪಶಾಲಿ. ದೇವತೆಗಳೂ ಗಂಧರ್ವರೂ ಪಿಶಾಚರೂ ದೇವರ್ಷಿಗಳೂ ಗರುಡ ಗಂಧರ್ವರೂ ಮಹಾಶೇಷನೇ ಮೊದಲಾದ ನಾಗರೂ ನನ್ನನ್ನು ಕಂಡಮಾತ್ರದಲ್ಲೇ ಮೃತ್ಯುವನ್ನು ಕಂಡಂತೆ ಓಡುವರು. ನನ್ನ ಬಲತಾಯಿಯ ಮಗನಾದ ಕುಬೇರನೊಡನೆ ಒಂದು ಕಾರಣದಿಂದ ಯುದ್ಧವನ್ನು ಮಾಡಿ ಆತನನ್ನು ಜಯಿಸಿದೆನು. ಆತನು ಅಂಜಿಕೊಂಡು ತಾನಿದ್ದ ಅಲಕಾಪುರವನ್ನು ಬಿಟ್ಟು ಕೈಲಾಸಪರ್ವತಕ್ಕೆ ಹೋಗಲು ಆತನ ಪುಷ್ಪಕವೆಂಬ ವಿಮಾನವನ್ನು ಅಪಹರಿಸಿಕೊಂಡು ಬಂದೆನು. ಯಾವ ಸ್ಥಳಕ್ಕೆ ಹೋಗಬೇಕೆಂದೆಣಿಸಿದರೂ ಆ ಸ್ಥಳಕ್ಕೆ ಆ ವಿಮಾನವು ತೆಗೆದುಕೊಂಡು ಹೋಗುವುದು. ಸೀತಾದೇವಿ, ನಾನು ಕೋಪಯುಕ್ತನಾಗಿ ಹುಬ್ಬನ್ನು ಗಂಟಿಕ್ಕಿಕೊಂಡು ನಿಂತೆನಾದರೆ ನನ್ನ ಮುಖವನ್ನು ಕಂಡು ಇಂದ್ರಾದಿದೇವತೆಗಳೂ ಕಂಗೆಟ್ಟು ನಾನಾ ದಿಕ್ಕುಗಳಿಗೆ ಓಡುವರು. ನಾನಿರುವ ಸ್ಥಳದಲ್ಲಿ ವಾಯುದೇವನು ಭೀತಿಯಿಂದ ಬಲವಾಗಿ ಬೀಸುವುದಿಲ್ಲ. ಸೂರ್ಯನು ಉಷ್ಣಕಿರಣಗಳನ್ನು ಬಿಡನು. ವೃಕ್ಷಗಳ ಎಲೆಗಳು ಅಲ್ಲಾಡದಿರುವುವು. ನದಿಗಳು ಶೀಘ್ರಗತಿಯಿಂದ ಪ್ರವಹಿಸುವುದಿಲ್ಲ. ಸಮುದ್ರಮಧ್ಯದಲ್ಲಿರುವ ಲಂಕಾಪಟ್ಟಣವು ಯಾವಾಗಲೂ ರಾಕ್ಷಸರಿಂದ ಪರಿಪೂರ್ಣವಾಗಿ ದೇವೇಂದ್ರನ ಅಮರಾವತಿಯಂತೆ ರಮಣೀಯವಾಗಿರುವುದು. ಬೇಡಿದ ಫಲಗಳನ್ನು ಕೊಡುವ ವೃಕ್ಷಗಳುಳ್ಳದ್ದು. ಪಾಂಡುವರ್ಣದ ಹೊರಕೋಟೆಯಿಂದ

ಮನೋಹರವಾಗಿದೆ. ಸುವರ್ಣಮಯವಾದ ಒಳಕೋಟೆಗಳಿಂದ ಕೂಡಿದೆ. ವೈಡೂರ್ಯ ರತ್ನಮಯವಾದ ತೋರಣಗಳಿವೆ. ರಥ ಗಜ ತುರಗ ಪದಾತಿಗಳಿಂದ ಇಟ್ಟಣಿಸಿದೆ. ಯಾವಾಗಲೂ ತಾಳ ಮದ್ದಳ ಧ್ವನಿಗಳಿಂದ ರಮಣೀಯವಾಗಿದೆ. ಮಹಾಮನೋಹರವಾದ ಉದ್ಯಾನವನ ಗಳಿಂದ ಒಪ್ಪುತ್ತಿದೆ. ಅಂಥ ಸ್ಥಳದಲ್ಲಿ ನೀನು ನನ್ನೊಡನೆ ಕೂಡಿದ್ದರೆ ದಿವ್ಯಭೋಗಗಳನ್ನನುಭವಿಸಿ ಕೊಂಡು ಮನುಷ್ಯಭೋಗಗಳನ್ನು ಸ್ಮರಣೆಮಾಡದೆ ಸುಖವಾಗಿರುವೆ. ಅಲ್ಪಾಯುಸ್ಸುಳ್ಳ ಮನುಷ್ಯನಾದ ರಾಮನನ್ನು ಮನಸ್ಸಿನಲ್ಲಿ ನೆನೆಯದಿರುವೆ. ನಿನ್ನ ಪತಿಯಾದ ರಾಮನನ್ನು ದಶರಥರಾಯನು ಅರಿಯದೆ ಹೊರಡಿಸಿದನೆ ? ರಾಮನು ರಣರಂಗದಲ್ಲಿ ಹೇಡಿ. ಅಂಥವನಿಂದ ನಿನಗೆ ಆಗುವ ಪ್ರಯೋಜನವೇನು ? ಇದಲ್ಲದೆ ಆತನು ಸರ್ವಸಂಗಪರಿತ್ಯಾಗವನ್ನು ಮಾಡಿ ರಾಜಭೋಗವನ್ನು ಬಿಟ್ಟು ತಪಸ್ವಿಯಾಗಿ ವನದಲ್ಲಿ ಸಂಚರಿಸಿಕೊಂಡಿದ್ದಾನೆ. ಸಮಸ್ತ ರಾಕ್ಷಸರಿಗೂ ಒಡೆಯನಾದ ನಾನು ಮದನಬಾಣಗಳಿಗೆ ಗುರಿಯಾಗಿ ಮನಸೋತು ನಿನ್ನ ಸಮೀಪಕ್ಕೆ ಬಂದಿರುವುದರಿಂದ ನೀನು ಎದುರುತ್ತರವನ್ನು ನುಡಿಯಕೂಡದು. ಪೂರ್ವದಲ್ಲಿ ಊರ್ವಶಿಯು ಪುರೂರವನನ್ನು ಕಾಲಿನಿಂದ ದಾಟಿ ಕೆಟ್ಟಂತೆ ನೀನು ನನ್ನ ಮಾತನ್ನು ಕೇಳದಿದ್ದರೆ ಕೆಟ್ಟುಹೋಗು ತ್ತೀಯೆ. ನಿನ್ನ ಪತಿಯಾದ ಶ್ರೀರಾಮನು ರಣರಂಗದಲ್ಲಿ ನನ್ನ ಒಂದು ಬೆರಳಿಗೂ ಸಮನಲ್ಲ" ಎಂದು ನುಡಿದನು,

ಸೀತಾದೇವಿಯು ಅತಿಕೋಪದಿಂದ "ಎಲೈ ರಾವಣ, ಸಮಸ್ತದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ಕುಬೇರನನ್ನು ನೀನು ಎದುರಿಸಬಹುದೆ ? ನಿನ್ನ ಒಡಹುಟ್ಟಿದವನಾದ ಕುಬೇರನಿಗೆ ಉಪದ್ರವವನ್ನು ಮಾಡಿದ್ದು ನಿನಗುಚಿತವಲ್ಲ. ಆ ದೋಷದಿಂದ ನೀನೂ ನಿನ್ನ ಸಮೀಪದಲ್ಲಿರುವ ರಾಕ್ಷಸರೂ ನಾಶವನ್ನೈದುವರು. ಎಲೈ ಕ್ರೂರಬುದ್ಧಿಯುಳ್ಳವನೆ, ನೀನು ಕಾಮಬುದ್ಧಿಯಿಂದ ದೇವೇಂದ್ರನ ಪತ್ನಿಯಾದ ಶಚೀದೇವಿಯನ್ನು ಅಪಹರಿಸಿದರೂ ಜೀವದಿಂದಿರುವೆ. ಶ್ರೀರಾಮನ ಪತ್ನಿಯಾದ ನನ್ನನ್ನು ಅಪಹರಿಸಿದರೆ ಮಾತ್ರ ಜೀವಸಹಿತವಾಗಿ ಉಳಿಯಲಾರೆ. ನೀನು ನನ್ನಂಥ ಪತಿವ್ರತಾಸ್ತ್ರೀಯರನ್ನು ಬೆದರಿಸಿದರೆ ಅಮೃತಪಾನವನ್ನು ಮಾಡಿದ್ದರೂ ನಿನಗೆ ಕೇಡು ತಪ್ಪದು" ಎಂದು ನುಡಿದಳು.



## ೪೯ ನೆಯ ಅಧ್ಯಾಯ

## ರಾವಣನು ಸೀತಾದೇವಿಯನ್ನು ಅಪಹರಿಸಿದ್ದು

ಈ ಪ್ರಕಾರ ನುಡಿದ ಸೀತಾದೇವಿಯ ಮಾತನ್ನು ಕೇಳಿ ಪ್ರತಾಪಶಾಲಿಯಾದ ರಾವಣನು ಕೋಪಾಟೋಪದಿಂದ ಒಮ್ಮೆ ಕೈಬಡಿದನು. ಕೂಡಲೆ ಸಂನ್ಯಾಸಿವೇಷವು ತೊಲಗಲು ಭೀಕರವಾದ ನಿಜವೇಷವನ್ನು ಧರಿಸಿ ನಿಂತನು. ಆ ರಾವಣನು "ಎಲೇ ಸೀತೆ, ನಾನು ಕೋಪಿಸಿದರೆ ಸಮುದ್ರ ವನ್ನಾದರೂ ಪಾನಮಾಡುವೆನು. ರಣರಂಗದಲ್ಲಿ ಕಾಲಮೃತ್ಯುವು ಎದುರಾಗಿ ಬಂದರೂ ಕೊಲ್ಲುವೆನು. ನನ್ನ ಶರಸಂಧಾನಗಳಿಂದ ಸೂರ್ಯಗತಿಯನ್ನಾದರೂ ತಡೆಯಬಲ್ಲೆನು. ಈ ಭೂಮಿಯನ್ನು ಇಬ್ಭಾಗವಾಗಿಯಾದರೂ ಒಡೆಯಬಲ್ಲೆನು" ಎಂದು ಆರ್ಭಟಿಸಿದನು. ಪುನಃ ಆ ದೇವಿಯನ್ನು ಕುರಿತು "ಸೀತೆ, ನೀನು ರಾಮನ ಪರಾಕ್ರಮವನ್ನು ಹೇಳುವಾಗ ನಾನು

ಸ್ತ್ರೀಯ ಮಾತು ಉನ್ಮತ್ತಪ್ರಲಾಪವೆಂದು ಉಪೇಕ್ಷೆಯಿಂದ ಕೇಳಿಕೊಂಡಿದ್ದೆನು. ಈಗ ನನ್ನ ಮಾತನ್ನು ಕೇಳು: ನಿನಗೆ ಇಷ್ಟಾರ್ಥವನ್ನು ಕೊಡತಕ್ಕವನಾಗಿ ಕಾಮರೂಪಿಯಾಗಿ ಜಗತ್ಪತಿಯಾದ ಪತಿಯು ನಿನಗೆ ಬೇಕಾದ ಪಕ್ಷದಲ್ಲಿ ನನ್ನನ್ನು ಅಂಗೀಕರಿಸು" ಎಂದು ನುಡಿದನು. ಸೀತಾದೇವಿಯು ಭಯದಿಂದ ಕಂಗೆಟ್ಟಳು. ರಾವಣನು ಆ ದೇವಿಯನ್ನು ಕುರಿತು "ಎಲೇ ಸೀತೆ, ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾದ ನನ್ನನ್ನು ಪತಿಯಾಗಿ ವರಿಸು. ನಾನು ಲೋಕದಲ್ಲಿ ಉತ್ತಮನಾದವನು. ನಿನ್ನ ಸೌಂದರ್ಯಕ್ಕೆ ಸಮಾನನಾದ ಪತಿಯು ನಾನಲ್ಲದೆ ಮತ್ತೊಬ್ಬನಿಲ್ಲ. ನಾನು ನಿನಗೆ ಇಷ್ಟವಿಲ್ಲದ ಕಾರ್ಯವನ್ನು ಒಂದು ಸಾರಿಯಾದರೂ ಮಾಡೆನು ರಾಮನ ಆಸಕ್ತಿಯನ್ನು ಬಿಡು. ನಿನ್ನ ಮನಸ್ಸನ್ನು ನನ್ನಲ್ಲಿರಿಸು. ಅವನು ದೇಶಭ್ರಷ್ಟನಾಗಿ ಬಂದವನು. ದಶರಥಮಹಾರಾಯನು ಪಟ್ಟವನ್ನು ಕಟ್ಟಬೇಕೆಂದಿರುವಾಗ ರಾಜ್ಯಭೋಗವನ್ನು ಬಿಟ್ಟು ಸಾಧುವಿನಂತೆ ಕಾಡಿನಲ್ಲಿ ಅಲೆಯುತ್ತಿದ್ದಾನೆ. ನೀನು ಅಜ್ಞಾನಿ; ರಾಮನಲ್ಲಿ ಯಾವ ಸದ್ಗುಣಗಳಿವೆಯೆಂದು ಆತನಲ್ಲಿ ಅನುರಕ್ತಳಾಗಿದ್ದೀಯೆ ? ಲೋಕದಲ್ಲಿ ನಿನ್ನಂಥ ಮೂಢಳಿಲ್ಲ. ಆತನು ಒಬ್ಬ ಸ್ತ್ರೀಯ ಮಾತನ್ನು ಕೇಳಿ ರಾಜ್ಯಭೋಗವನ್ನೂ ಸಮಸ್ತ ಮಿತ್ರಜನಗಳನ್ನೂ ಬಿಟ್ಟು ಘೋರಾರಣ್ಯಕ್ಕೆ ಬಂದು ವಾಸವಾಗಿದ್ದಾನೆ" ಎಂದು ನುಡಿದನು. ಆಮೇಲೆ ಸೀತಾದೇವಿಯ ಸಮೀಪಕ್ಕೆ ಬಂದು, ಆಕಾಶದಲ್ಲಿ ಬುಧನು ರೋಹಿಣಿಯನ್ನು ಹಿಡಿಯುವಂತೆ ತನ್ನ ಎಡಗೈಯಿಂದ ಅವಳ ತುರುಬನ್ನು ಹಿಡಿದನು. ಆಗ ಕೋರೆದಾಡೆಗಳಿಂದ ಅತಿಭಯಂಕರವಾದ ಮುಖಗಳುಳ್ಳವನಾಗಿ ಕಾಲಮೃತ್ಯುವಿನಂತೆ ಕಾಣುತ್ತಿದ್ದ ಅವನನ್ನು ಕಂಡು ವನದೇವತೆಗಳು ಭಯಪಟ್ಟು ದಿಕ್ಕುದಿಕ್ಕುಗಳಿಗೂ ಓಡಿಹೋಗತೊಡಗಿದರು. ಅದೇ ಕಾಲದಲ್ಲಿ ಅಂತರಿಕ್ಷಮಾರ್ಗದಲ್ಲಿ ಸಂಚರಿಸುವ ಹೇಸರಕತ್ತೆಗಳಿಂದ ಹೇಳ್ಪಿಸಿದ ರಥವು ಸೀತೆಯ ಮುಂದೆ ಕಾಣಿಸಿಕೊಂಡಿತು. ರಾವಣನು ನಿಷ್ಠುರ ವಚನಗಳಿಂದ ಸೀತಾದೇವಿಯನ್ನು ಬೆದರಿಸಿ, 'ರಾಮಾ ರಾಮಾ' ಎಂದು ಮೊರೆಯಿಡುತ್ತ ನಾಗರಹಾವಿನಂತೆ ಮೈಯನ್ನು ಕೊಂಕಿಸಿಕೊಂಡು ಬಿದ್ದಿದ್ದ ಸೀತಾದೇವಿಯನ್ನು ರಥದ ಮೇಲೆ ಹಾಕಿಕೊಂಡು ಖೇಚರಮಾರ್ಗವಾಗಿ ಹೊರಟನು.

ಆ ಸಮಯದಲ್ಲಿ ಸೀತಾದೇವಿಯು ಉನ್ಮಾದಗ್ರಸ್ತಳಂತೆ ಕೂಗಿಕೊಂಡಳು: "ಹಾ ಪರಾಕ್ರಮಶಾಲಿ, ಶ್ರೀರಾಮ, ಹಾ ಲಕ್ಷ್ಮಣ, ನನ್ನ ಚಿತ್ತವೃತ್ತಿಯನ್ನರಿತು ನಡೆಯತಕ್ಕ ನೀವು ಎಲ್ಲಿಗೆ ಹೋದಿರಿ ? ದುರಾತ್ಮನಾದ ರಾವಣನು ಹಿಡಿದುಕೊಂಡು ಹೋಗುತ್ತಿರುವ ನನ್ನನ್ನು ಏತಕ್ಕೆ ರಕ್ಷಿಸದಿದ್ದೀರಿ ? ಶ್ರೀರಾಮ, ರಾವಣನು ಬಲಾತ್ಕಾರದಿಂದ ನನ್ನನ್ನು ಹಿಡಿದುಕೊಂಡು ಹೋಗುತ್ತಿದ್ದಾನೆ. ನನ್ನನ್ನು ಯಾವ ಕಾರಣ ಕೃಪಾದೃಷ್ಟಿಯಿಂದ ನೋಡದಿದ್ದೀಯೆ ? ದುರ್ನೀತಿಯಲ್ಲಿ ನಡೆಯುವ ದುರಾತ್ಮರನ್ನು ಶಿಕ್ಷಿಸುವ ನೀನು, ನನ್ನನ್ನು ಹಿಡಿದುಕೊಂಡು ಹೋಗುವ ದುರಾತ್ಮನಾದ ರಾವಣನನ್ನು ಯಾವಕಾರಣದಿಂದ ಉಪೇಕ್ಷೆಮಾಡಿದ್ದೀಯೆ ? ನನ್ನ ಜನ್ಮಾಂತರದ ಪಾಪಕರ್ಮವು ಫಲ ಕೊಡುವ ಕಾಲ ಬಂದದ್ದರಿಂದ ಆ ಕಾಲವೇ ರಾವಣನಿಗೆ ಅನುಕೂಲವಾಗಿ ನಿನ್ನನ್ನು ಅಗಲುವ ಹಾಗೆ ಮಾಡಿತು. ಈ ಜನಸ್ಥಾನದಲ್ಲಿ ನನ್ನ ಪ್ರಾಣಗಳನ್ನು ಅಪಹರಿಸುವ ದುಃಖವನ್ನು ಪಡೆಯಿಸಿತು. ಅಕಟಕಟಾ ! ಇದರಿಂದ ನನ್ನ ಅತ್ತೆಯಾದ ಕೈಕೇಯೀದೇವಿಯ ಮನಸ್ಸಿಗೆ ಸಂತೋಷವಾದೀತು ! ಧರ್ಮಾತ್ಮ ಶ್ರೀರಾಮ, ನಿನ್ನನ್ನು ಅಗಲಿ ಹೋಗುತ್ತಿದ್ದೇನೆ. ನಾನು, ಪುಷ್ಪಗಳನ್ನು ಕೊಯ್ಯುತ್ತಿದ್ದವಳು, ನನ್ನ ಜನ್ಮಾಂತರದ ಪಾಪಕರ್ಮದಿಂದ ನಿನ್ನನ್ನು ಕರೆದು ಆ ಮಾಯಾಮೃಗವನ್ನು ಹಿಡಿತಂದು ಕೊಡಹೇಳಿ ಕಳುಹಿದೆನು !—ಎಲೈ ವನದೇವತೆಗಳಿರಾ, ರಾವಣನು ಬಲಾತ್ಕಾರದಿಂದ ನನ್ನನ್ನು ಹಿಡಿದುಕೊಂಡು ಹೋಗುತ್ತಿದ್ದಾನೆ. ನೀವೆಲ್ಲರೂ ಸಾಕ್ಷಿಯಾಗಿರಿ. ಈ ವಿಷಯವನ್ನು ಶ್ರೀರಾಮನಿಗೆ

ತಿಳಿಯಹೇಳಿ. ತಾಯಿ–ಗೋದಾವರೀ ನದಿಯೆ, ನಿನಗೆ ನಮಸ್ಕಾರವನ್ನು ಮಾಡುತ್ತೇನೆ. ನನ್ನನ್ನು ರಾವಣನು ಬಲಾತ್ಕಾರದಿಂದ ಹಿಡಿದುಕೊಂಡು ಹೋದನೆಂದು ನನ್ನ ಪತಿಯಾದ ಶ್ರೀರಾಮನೊಡನೆ ಹೇಳು. ಎಲೈ ಮೃಗಗಳಿರಾ, ನಾನು ನಿಮಗೆಲ್ಲರಿಗೂ ನಮಸ್ಕಾರವನ್ನು ಮಾಡುತ್ತೇನೆ. ನನ್ನ ಪ್ರಾಣಕಾಂತನಾದ ಶ್ರೀರಾಮನ ಸಂಗಡ ಆತನ ಪ್ರಾಣಗಳಿಗಿಂತಲೂ ಅಧಿಕಳಾಗಿದ್ದ ನನ್ನನ್ನು ರಾವಣನು ಬಲಾತ್ಕಾರದಿಂದ ಹಿಡಿದುಕೊಂಡು ಹೋದನೆಂದು ಹೇಳಿ. ನಿಮ್ಮ ಮಾತನ್ನು ಕೇಳಿ ಮಹಾಪರಾಕ್ರಮಶಾಲಿಯಾದ ಶ್ರೀರಾಮನು ರಾವಣನನ್ನು ಯುದ್ಧದಲ್ಲಿ ಸಂಹರಿಸಿ ನನ್ನನ್ನು ತಿರುಗಿ ಕರೆತರುವನು. ನನ್ನ ಪತಿಯಾದ ಶ್ರೀರಾಮನು ನಾನು ಯಮಲೋಕವನ್ನೈದಿದರೂ ತಿರುಗಿ ಕರೆತರುವನು" ಎಂದು ದೈನ್ಯಸ್ವರದಿಂದ ಹಂಬಲಿಸಿದಳು. ಮಾರ್ಗದಲ್ಲಿ ಒಂದು ದೊಡ್ಡ ಮರದಮೇಲೆ ಕುಳಿತಿದ್ದ ಜಟಾಯುವನ್ನು ಕಂಡು "ಜಟಾಯು, ಲೋಕದಲ್ಲಿ ಯಾರೂ ದಿಕ್ಕಿಲ್ಲದಿರುವ ಸ್ತ್ರೀಯನ್ನು ಹಿಡಿದುಕೊಂಡು ಹೋಗುವಂತೆ ನನ್ನನ್ನು ಬಲವಂತನಾದ ರಾವಣನು ಹಿಡಿದುಕೊಂಡು ಹೋಗುತ್ತಿದ್ದಾನೆ. ಈತನು ಮಹಾದುರಾತ್ಮನು. ಆಯುಧಪಾಣಿಯಾಗಿ ಅತ್ಯಂತ ಕ್ರೂರಬುದ್ಧಿ ಯುಳ್ಳವನಾಗಿದ್ದಾನೆ. ಈತನನ್ನು ತಡೆದು ಬಿಡಿಸಿಕೊಳ್ಳುವುದಕ್ಕೆ ನಿನಗೆ ಶಕ್ತಿಯಿಲ್ಲ. ನನ್ನ ಪತಿಯಾದ ಶ್ರೀರಾಮನೊಡನೆಯೂ ನನ್ನ ಮೈದುನನಾದ ಲಕ್ಷ್ಮಣನೊಡನೆಯೂ ಈ ಸಂಗತಿಯನ್ನು ವಿವರವಾಗಿ ಹೇಳು" ಎಂದು ಗೋಳಾಡಿದಳು.



## ೫೦ ನೆಯ ಅಧ್ಯಾಯ

## ಜಟಾಯುವು ರಾವಣನಿಗೆ ಹೇಳಿದ ಬುದ್ಧಿವಾದ

ಆಗ ಸೀತಾದೇವಿಯು ಮೊರೆಯಿಟ್ಟ ಧ್ವನಿಯನ್ನು ಕೇಳಿ ಜಟಾಯುವು ಎಚ್ಚೆತ್ತನು. ಅವನು ಕಣ್ಣುತೆರೆದು ರಾವಣನನ್ನೂ ಮೊರೆಯಿಡುವ ಸೀತಾದೇವಿಯನ್ನೂ ಕಂಡನು. ಆ ಜಟಾಯುವು ರಾವಣನನ್ನು ಕುರಿತು ವಿನಯದಿಂದ ಹೀಗೆ ಹೇಳಿದನು: "ಎಲೈ ರಾವಣ, ನಾನು ಪುಣ್ಯಕಥೆಗಳನ್ನು ಕೇಳುವ ಸಮಯದಲ್ಲಿ ನೀನು ಅತ್ಯಂತ ಧರ್ಮಿಷ್ಠನೂ ಮೇರೆ ಮರ್ಯಾದೆಗಳನ್ನು ಬಲ್ಲವನೂ ಸತ್ಯ ಸಂಧನೂ ಎಂದು ಹೇಳಿದ್ದನ್ನು ಕೇಳಿದ್ದೇನೆ. ನಾನು ಸಮಸ್ತ ಹದ್ದುಗಳಿಗೂ ಒಡೆಯನಾದ ಜಟಾಯು. ಇಂದ್ರ ವರುಣರಿಗೆ ಸಮಾನನಾದ ಶ್ರೀರಾಮನು ಸಕಲಲೋಕಗಳಿಗೂ ಹಿತವನ್ನೇ ಮಾಡುವವನು. ದಶರಥಮಹಾರಾಯನು ಮಹಾಪ್ರಸಿದ್ಧನಾಗಿದ್ದವನು. ಆತನ ಮಗನಾಗಿ ಲೋಕನಾಯಕನಾದ ಶ್ರೀರಾಮನ ಪತ್ನಿಯಾದ ಈ ಪತಿವ್ರತಾಶಿರೋಮಣಿಯನ್ನು ಅಪಹರಿಸಿಕೊಂಡು ಹೋಗುವುದು ನಿನಗೆ ಧರ್ಮವಲ್ಲ. ನೀನು ಧರ್ಮಿಷ್ಠನಾಗಿರುವುದರಿಂದ ಪರಸ್ತ್ರೀಯನ್ನು ಅಪಹರಿಸುವುದು ಉಚಿತವಲ್ಲ. ಅರಸನು ರಾಜಸ್ತ್ರೀಯನ್ನು ರಕ್ಷಿಸಬೇಕಲ್ಲದೆ ಕೆಡಿಸಬಾರದು. ಇಂಥ ನೀಚಬುದ್ಧಿಯನ್ನು ಬಿಡು. ಪರಾಕ್ರಮಿಯಾದವನು ಪರಸ್ತ್ರೀಯರಿಗೆ ಎರಡೆಣಿಸಿದರೆ ಲೋಕದಲ್ಲಿ ಅಪಕೀರ್ತಿಗೊಳಗಾಗುವನು. ಲೋಕದಲ್ಲಿ ಧರ್ಮಾಧರ್ಮವನ್ನರಿತು ನಡೆಯುವ ದೊರೆಯು ಎಲ್ಲರೂ ಸಮವೆಂದೆಣಿಸಿ ಪರಸ್ತ್ರೀಯರನ್ನು ಸಂರಕ್ಷಿಸಬೇಕಲ್ಲದೆ ದುರ್ಮಾರ್ಗಕ್ಕೆ ಹೋಗಬಾರದು. ಅರ್ಥಕಾಮಗಳನ್ನು ಬಯಸುವ ಪುರುಷನು ಧರ್ಮಕ್ಕೆ ವಿಘ್ನವು ಬರದಂತೆ ಅವನ್ನು ಸಂಪಾದಿಸಬೇಕಲ್ಲದೆ ಧರ್ಮವಿರೋಧವಾಗಿ ಸಂಪಾದಿಸಬಾರದು. ಸಕಲ ಪುರುಷಾರ್ಥಗಳಲ್ಲಿಯೂ ಧರ್ಮವೇ ಪ್ರಧಾನ

ವಾಗಿರುವುದು. ಚಂಚಲಬುದ್ಧಿಯುಳ್ಳವನೂ ಪಾಪಸ್ವರೂಪಿಯೂ ದುಷ್ಕರ್ಮಿಯೂ ಆದ ನಿನಗೆ ಐಶ್ವರ್ಯವು ಸ್ಥಿರವಾಗಿರದು. ಅತಿಕಾಮಿಯಾದವನ ಕಾಮಬುದ್ಧಿಯನ್ನು ನಿಲ್ಲಿಸಲು ಯಾರಿಗೂ ಶಕ್ಯವಲ್ಲ. ದುರ್ಜನನು ಸತ್ಪುರುಷರಾದ ಪ್ರಜ್ಞಾತ್ಮರು ಎಷ್ಟು ಬೋಧಿಸಿದರೂ ದುಷ್ಕರ್ಮದಲ್ಲಿಯೇ ಪ್ರವರ್ತಿಸುವನಲ್ಲದೆ ಸನ್ಮಾರ್ಗದಲ್ಲಿ ಪ್ರವರ್ತಿಸನು. ಮಹಾಬಲವಂತನಾದ ಶ್ರೀರಾಮನು ತಾನಾಳುವ ರಾಜ್ಯದಲ್ಲಾದರೂ ತಾನಿದ್ದ ಅಯೋಧ್ಯಾಪಟ್ಟಣದಲ್ಲಾದರೂ ಒಂದು ಪ್ರಾಣಿಗಾದರೂ ಅಪರಾಧವನ್ನು ಮಾಡಿದವನಲ್ಲ. ಅಂಥ ನಿರಪರಾಧಿಯ ಪತ್ನಿಯನ್ನು ನೀನು ಕಾರಣವಿಲ್ಲದೆ ಅಪಹರಿಸಿಕೊಂಡು ಹೋಗುತ್ತಿದ್ದೀಯೆ. ಜನಸ್ಥಾನದಲ್ಲಿದ್ದ ಖರನು ಶೂರ್ಪಣಖಿಯ ನಿಮಿತ್ತವಾಗಿ ಯುದ್ಧಕ್ಕೆ ಬಂದು ಶ್ರೀರಾಮನ ಶರಹತಿಯಿಂದ ಲಯವನ್ನೈದಿದನು. ಇದರಲ್ಲಿ ಶ್ರೀರಾಮನ ಅಪರಾಧವೇನಿದೆ ? ಮಹಾಪ್ರತಿಷ್ಠನಾದ ಶ್ರೀರಾಮನ ಪತ್ನಿಯನ್ನು ಅಪಹರಿಸಿಕೊಂಡು ಹೋಗುವುದು ತರವಲ್ಲ. ಶೀಘ್ರದಲ್ಲಿ ಸೀತಾದೇವಿಯನ್ನು ಬಿಟ್ಟು ಕಳುಹಿಸು. ಅಲ್ಲದ ಪಕ್ಷದಲ್ಲಿ ದೇವೇಂದ್ರನ ವಜ್ರಾಯುಧದಿಂದ ವೃತ್ರಾಸುರನು ಲಯವನ್ನೈದಿದಂತೆ ನೀನು ಶ್ರೀರಾಮನ ಕ್ರೂರದೃಷ್ಟಿಯಿಂದ ಯಮನ ನಗರವನ್ನೈದುವೆ. ಮಹಾಕ್ರೂರವಾದ ಕೃಷ್ಣಸರ್ಪವನ್ನು ವಸ್ತ್ರದ ಸೆರಗಿನಿಂದ ಕಟ್ಟುವವನಂತೆ ಕೊರಳಲ್ಲಿ ಸುತ್ತಿದ ಮೃತ್ಯುಪಾಶವನ್ನು ಕಾಣದೆ ಇದ್ದೀಯೆ. ಎಷ್ಟು ಭಾರವನ್ನು ತನ್ನ ಶರೀರವು ಹೊರಬಲ್ಲುದೋ ಅಷ್ಟು ಭಾರವನ್ನೇ ಹೊರಬೇಕಲ್ಲದೆ ತನ್ನ ಶರೀರವನ್ನು ಉರುಳಿಸುವಷ್ಟು ಭಾರವನ್ನು ಹೊರಬಾರದು. ಎಷ್ಟು ಅನ್ನವನ್ನು ಭಕ್ಷಿಸಿದರೆ ಜೀರ್ಣವಾಗುವುದೋ ಅಷ್ಟು ಅನ್ನವನ್ನೇ ಭಕ್ಷಿಸಬೇಕಲ್ಲದೆ ವೆಗ್ಗಳವಾಗಿ ತೆಗೆದುಕೊಳ್ಳಬಾರದು. ಯಾವ ಕರ್ಮವನ್ನು ಮಾಡಿದರೆ ಅಪಕೀರ್ತಿ ಬರದಿರುವುದೋ ಆ ಕರ್ಮವನ್ನೇ ಮಾಡಬೇಕು. ನನಗೆ ಅರುವತ್ತು ಸಾವಿರ ವರುಷಗಳು ಕಳೆದು ವೃದ್ಧಾಪ್ಯವು ಬಂದೂ ನನ್ನ ಕುಲಾಗತವಾದ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದೇನೆ. ನೀನು ಯೌವನಸ್ಥನು ; ಬಿಲ್ಲುಬಾಣಗಳನ್ನು ಧರಿಸಿಕೊಂಡು ರಥಾರೂಢನಾಗಿದ್ದೀಯೆ. ಆದರೂ ನನ್ನ ಕಣ್ಣುಮುಂದೆ ಬಲಾತ್ಕಾರವಾಗಿ ಸೀತಾದೇವಿಯನ್ನು ಅಪಹರಿಸಿಕೊಂಡು ನೀನು ಜೀವಸಹಿತನಾಗಿ ಹೋಗಲಾರೆ. ತರ್ಕಯುಕ್ತಿಗಳು ವೇದವನ್ನು ಕೆಡಿಸಲಾರದಂತೆ ನೀನು ನನ್ನ ಕಣ್ಣುಮುಂದೆ ಈಕೆಯನ್ನು ಅಪಹರಿಸಿಕೊಂಡು ಹೋಗಲಾರೆ. ಎಲೈ ರಾವಣಾ, ನೀನು ಪರಾಕ್ರಮಿಯಾದ ಪಕ್ಷದಲ್ಲಿ ಒಂದು ಕ್ಷಣಮಾತ್ರ ನಿಂತು ನನ್ನೊಡನೆ ಯುದ್ಧವನ್ನು ಮಾಡು. ಯುದ್ಧದಲ್ಲಿ ಶ್ರೀರಾಮನ ಶರಹತಿಯಿಂದ ಖರನು ಲಯವನ್ನೈದಿದಂತೆ ನೀನು ಯಮಮಂದಿರವನ್ನೈದುವೆ. ಶ್ರೀರಾಮನ ಸಂಗಡ ಯುದ್ಧವನ್ನು ಮಾಡಿ ಅನೇಕ ರಾಕ್ಷಸರು ಲಯವನ್ನೈದಿದರು. ನಾರುಬಟ್ಟೆಗಳನ್ನುಟ್ಟು ಜಡೆಗಳನ್ನು ಧರಿಸಿಕೊಂಡು ಮುನಿವೇಷದಿಂದಿರುವ ಶ್ರೀರಾಮನು ಶೀಘ್ರದಲ್ಲಿ ನಿನ್ನನ್ನು ಯಮಲೋಕಕ್ಕೆ ಕಳುಹಿಸುವನು. ರಾಮಲಕ್ಷ್ಮಣರು ದೂರದಲ್ಲಿದ್ದಾರೆ. ನಾನು ನಿನ್ನೊಡನೆ ಬಹಳವಾಗಿ ನುಡಿದು ಪ್ರಯೋಜನವೇನು ? ಎಲೇ ನೀಚರಾಕ್ಷಸ, ನೀನು ಶೀಘ್ರವಾಗಿ ಲಯವಾಗುವೆ. ನೀನು ಶ್ರೀರಾಮನಿಗೆ ಅಪ್ರಿಯವನ್ನು ಮಾಡಿದ್ದೀಯೆ. ನಾನು ಜೀವದಿಂದಿರುವಾಗ ನನ್ನ ಕಣ್ಣು ಮುಂದೆಯೇ ಆತನ ಪಟ್ಟದರಾಣಿಯಾಗಿ ಕಮಲಪತ್ರಾಕ್ಷಿಯಾದ ಸೀತಾದೇವಿಯನ್ನು ಒಡಿದುಕೊಂಡು ಹೋಗುವುದಕ್ಕೆ ನೀನು ಸಮರ್ಥನಲ್ಲ. ಎಲೇ ರಾವಣ, ಒಂದು ಕ್ಷಣಮಾತ್ರವಿದ್ದು ನನ್ನ ಸಾಮರ್ಥ್ಯವನ್ನು ನೋಡು. ಪಕ್ವವಾದ ಫಲವನ್ನು ಮರದಿಂದ ಕೆಡಹುವಂತೆ ಈ ರಥದ ಮೇಲಿಂದ ನಿನ್ನನ್ನು ಕೆಡಹುತ್ತೇನೆ. ನನ್ನ ಶರೀರದಲ್ಲಿ ಪ್ರಾಣವಿರುವ ಪರ್ಯಂತವೂ ನಿನಗೆ ಯುದ್ಧವೆಂಬ ಅತಿಥಿಸತ್ಕಾರವನ್ನು ಮಾಡುತ್ತೇನೆ, ಎಚ್ಚರವಾಗಿರು " ಎಂದು ನುಡಿದನು.



## ೫೧ ನೆಯ ಅಧ್ಯಾಯ

## ಜಟಾಯುಮರಣ

ಈ ಪ್ರಕಾರ ಜಟಾಯುವು ರಾವಣನೊಡನೆ ಕರ್ಣಕಠೋರವಾಗಿ ನುಡಿಯಲು ರಾವಣನು ಅತ್ಯಂತ ಕೋಪಯುಕ್ತನಾಗಿ ಜಟಾಯುವನ್ನು ಅಟ್ಟಿಕೊಂಡು ಹೋದನು. ಆಗ ಅವರಿಬ್ಬರಿಗೂ ಅಂತರಿಕ್ಷಮಾರ್ಗದಲ್ಲಿ ಎರಡು ಮೇಘಗಳಿಗೆ ಯುದ್ಧವಾಗುವಂತೆ ಮಹತ್ತಾದ ಯುದ್ಧವಾಯಿತು. ರಾವಣನು ಅತ್ಯಂತ ಕೂರಲಗುಗಳುಳ್ಳ ಕಣೆಯಂಬುಗಳಿಂದ ಜಟಾಯುವನ್ನು ಹೊಡೆದನು. ಆತನು ಆ ಬಾಣಗಳನ್ನು ತನ್ನ ರೆಕ್ಕೆಗಳ ವಾಯುವೇಗದಿಂದ ಹಾರಿಸಿ ತನ್ನ ತೀಕ್ಷ್ಣವಾದ ಕೊಕ್ಕಿನಿಂದಲೂ ಉಗುರುಗಳಿಂದಲೂ ರಾವಣನನ್ನು ಅಪ್ಪಳಿಸಿ ಆತನ ಶರೀರದಲ್ಲಿ ಅನೇಕ ಗಾಯ ಗಳನ್ನು ಮಾಡಿದನು. ಈ ರೀತಿ ರಾವಣನಿಗೂ ಜಟಾಯುವಿಗೂ ಮಹಾಯುದ್ಧವಾಗುತ್ತಿರಲು ರಾವಣನು ಶತ್ರುವಾದ ಜಟಾಯುವನ್ನು ಕೊಲ್ಲಬೇಕೆಂದು ಅತಿಭಯಂಕರವೂ ಕಾಲಮೃತ್ಯುವಿಗೆ ಸಮಾನವೂ ಆದ ಹತ್ತು ಬಾಣಗಳನ್ನು ತೆಗೆದು ಜಟಾಯುವಿನ ಮೇಲೆ ಎಸೆದನು. ಜಟಾಯುವು ತನ್ನ ಸಾಮರ್ಥ್ಯದಿಂದ ಆ ಬಾಣಗಳನ್ನು ಧ್ವಂಸಮಾಡಿ ರಾವಣನ ರಥದಲ್ಲಿ ದುಃಖಾತಿಶಯದಿಂದ ಕಣ್ಣೀರು ಬಿಡುತ್ತಿದ್ದ ಸೀತಾದೇವಿಯನ್ನು ಕಂಡು ಅತ್ಯಂತ ದುಃಖಾಕ್ರಾಂತನಾಗಿ, ಪುಂಖಾನು ಪುಂಖವಾಗಿ ಬರುತ್ತಿದ್ದ ಅಸ್ತ್ರಗಳನ್ನು ಲೆಕ್ಕಿಸದೆ ರಾವಣನಮೇಲೆ ಬಿದ್ದು ಆತನ ಬಿಲ್ಲುಬಾಣಗಳನ್ನು ಕೊಕ್ಕಿನಿಂದ ಮುರಿದುಹಾಕಿದನು. ರಾವಣನು ಅತ್ಯಂತ ಕೋಪಯುಕ್ತನಾಗಿ ಮತ್ತೊಂದು ಬಿಲ್ಲನ್ನು ತೆಗೆದುಕೊಂಡು ಜಟಾಯುವಿನ ಮೇಲೆ ಶರವರ್ಷಗಳನ್ನು ಕರೆದನು. ಆ ಶರವರ್ಷಗಳನ್ನು ತನ್ನ ರೆಕ್ಕೆಗಳ ಗಾಳಿಯಿಂದ ತಡೆದು ಆ ಶರಸಮೂಹದಲ್ಲಿದ್ದ ಜಟಾಯುವು ಗೂಡಿನೊಳಗಿದ್ದ ಪಕ್ಷಿಯಂತೆ ಒಪ್ಪುತ್ತಿದ್ದನು. ಆ ಬಳಿಕ ಜಟಾಯುವು ರಾವಣನ ಬಾಣಗಳನ್ನು ತನ್ನ ರೆಕ್ಕೆಗಳ ಗಾಳಿಯಿಂದ ಹಾರಿಸಿ ತನ್ನ ಕೊಕ್ಕಿನಿಂದ ಅಗ್ನಿಜ್ವಾಲೆಯಂತೆ ಪ್ರಜ್ವಲಿಸುತ್ತ ಅತಿಪ್ರಕಾಶಮಾನವಾಗಿದ್ದ ಆ ಬಾಣಗಳನ್ನು ಮುರಿದನು. ಸುವರ್ಣಮಯವಾದ ಬಿಲ್ಲನ್ನು ತುಂಡರಿಸಿದನು. ರಥಕ್ಕೆ ಕಟ್ಟಿದ್ದ ಪಿಶಾಚಮುಖವುಳ್ಳವಾಗಿ ವಾಯುವೇಗವುಳ್ಳ ಹೇಸರಕತ್ತೆಗಳನ್ನು ತನ್ನ ರೆಕ್ಕೆಗಳಿಂದ ಹೊಡೆದು ಕೆಡಹಿದನು. ರಥದ ಮೂತಿಯನ್ನು ಕತ್ತರಿಸಿ ಸುವರ್ಣಮಯವಾಗಿ ರತ್ನಖಚಿತವಾದ ಆ ರಥವನ್ನು ನೆಲಕ್ಕೆ ಉರುಳಿಸಿದನು. ಪೂರ್ಣಚಂದ್ರನಂತೆ ಕಾಂತಿಯುಳ್ಳ ಸತ್ತಿಗೆಯನ್ನೂ ಚಾಮರಗಳನ್ನೂ ಕೆಡಹಿ ಕೊಕ್ಕಿನಿಂದ ಸಾರಥಿಯ ಶಿರಸ್ಸನ್ನು ಕತ್ತರಿಸಿದನು. ಆಗ ರಾವಣನು ಸೀತಾದೇವಿಯನ್ನು ಹಿಡಿದುಕೊಂಡು ಭೂಮಿಯ ಮೇಲೆ ಬಿದ್ದನು. ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ ನೋಡುತ್ತಿದ್ದ ದೇವತೆಗಳು ವಿರಥನಾಗಿ ಭೂಮಿಯ ಮೇಲೆ ಬಿದ್ದ ರಾವಣನನ್ನು ಕಂಡು ಜಟಾಯುವನ್ನು ಕೊಂಡಾಡಿದರು. ವೃದ್ಧನಾದ ಜಟಾಯುವು ರಾವಣನನ್ನು ವಿರಥನನ್ನಾಗಿ ಮಾಡಿ ನೆಲಕ್ಕೆ ಕೆಡಹಿದ್ದಕ್ಕಾಗಿ ಆಶ್ಚರ್ಯಪಡುತ್ತಿದ್ದರು.

ಮರುಕ್ಷಣದಲ್ಲಿ ರಾವಣನು ಸೀತಾದೇವಿಯನ್ನು ಎತ್ತಿಕೊಂಡು ಅಂತರಿಕ್ಷಮಾರ್ಗಕ್ಕೆ ನೆಗೆದು ಅತಿಶೀಘ್ರವಾಗಿ ಹೋಗುತ್ತಿರಲು ಜಟಾಯುವು ಆತನನ್ನು ಹಿಂದಟ್ಟಿ ಹೋಗಿ ಅಡ್ಡಗಟ್ಟಿ ಹೀಗೆಂದನು : "ಎಲೇ ರಾವಣ, ವಜ್ರಶಿಲೆಯನ್ನಾದರೂ ಉಚ್ಚಳಿಸಿ ಭೇದಿಸುವಂಥ ಬಾಣಗಳನ್ನು ಧರಿಸಿರುವ ಶ್ರೀರಾಮನ ಪತ್ನಿಯನ್ನು ಅಪಹರಿಸಿಕೊಂಡು ಹೋಗುವ ನೀನು ಮಹಾದುರ್ಬುದ್ಧಿಯು.

ಈ ದುರ್ಬುದ್ಧಿಯಿಂದ ನೀನು ನಿನ್ನ ಬಂಧುವರ್ಗಸಹಿತವಾಗಿ ಲಯಹೊಂದುವೆ. ಹಸಿದವನು ತನ್ನ ತೃಷೆಯು ತೀರಬೇಕೆಂದು ವಿಷಪಾನವನ್ನು ಮಾಡುವಂತೆ ನೀನು ಕಾಮಾಂಧಕಾರದಿಂದ ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗಲೆಳಸಿದೆ. ಅಜ್ಞಾನಿಯಾದವನು ತನ್ನ ಜನ್ಮಾಂತರದ ದುಷ್ಕರ್ಮಫಲದಿಂದ ಕೃತ್ಯಾಕೃತ್ಯವಿವೇಕವಿಲ್ಲದೆ ನಾಶವನ್ನೈದುವನು. ನೀನೂ ಆ ರೀತಿ ನಿನ್ನ ಜನ್ಮಾಂತರದ ದುಷ್ಕರ್ಮಫಲದಿಂದ ನಾಶವನ್ನೈದುವುದಕ್ಕೆ ಕಾಲಪಾಶದಿಂದ ಸೆಳೆಯಲ್ಪಟ್ಟು ಇಲ್ಲಿಗೆ ಬಂದಿರುವೆ. ನೀನು ಮಾಂಸಾಪೇಕ್ಷೆಯಿಂದ ಗಾಳಕ್ಕೆ ಸಿಕ್ಕಿದ ಮತ್ಸ್ಯದಂತೆ ಇಲ್ಲಿಗೆ ಬಂದು ಸಿಕ್ಕಿಕೊಂಡೆ. ರಾಮಲಕ್ಷ್ಮಣರು ನಿನ್ನನ್ನು ಬಿಡುವುದಿಲ್ಲ. ಅವರು ಒಬ್ಬರಿಗೂ ಗೆಲ್ಲಲು ಸಾಧ್ಯರಲ್ಲ. ನೀನು ಮಾಡಿದ್ದು ಚೋರಕೃತ್ಯವಲ್ಲದೆ ಪರಾಕ್ರಮಿಗಳು ಮಾಡುವ ಕೃತ್ಯವಲ್ಲ. ನೀನು ಪರಾಕ್ರಮಿಯಾದ ಪಕ್ಷದಲ್ಲಿ ಒಂದು ಕ್ಷಣಮಾತ್ರ ನಿಂತು ಯುದ್ಧವನ್ನು ಮಾಡಿದರೆ ನಿನ್ನ ತಮ್ಮನಾದ ಖರನು ಶರೀರವನ್ನು ಬಿಟ್ಟಂತೆ ನೀನು ಭೂಮಿಯ ಮೇಲೆ ಶಯನವನ್ನು ಮಾಡುವೆ. ಲೋಕನಾಯಕನಾದ ಬ್ರಹ್ಮದೇವನಾದರೂ ಜನ್ಮಾಂತರದಲ್ಲಿ ಮಾಡಿದ ಕರ್ಮಕ್ಕೆ ಅನುಗುಣವಾದ ಬುದ್ಧಿಯನ್ನು ಪಡೆಯುವನಲ್ಲದೆ ಮೀರಲಾರನು " ಎಂದು ರಾವಣನ ಹಿಂಭಾಗದಲ್ಲೆರಗಿ ಅಂಕುಶದಿಂದ ಆನೆಯ ಕುಂಭಸ್ಥಳವನ್ನು ಸೀಳುವಂತೆ ತನ್ನ ಉಗುರುಗಳಿಂದ ಬೆನ್ನನ್ನು ಸೀಳಿ ಕೊಕ್ಕಿನಿಂದ ಪಕ್ಕೆಗಳನ್ನು ಕಚ್ಚಿ ತಲೆಯ ಕೂದಲನ್ನು ಎಳೆದು ಕಚ್ಚಿ ಕೀಳುತ್ತಿದ್ದನು.

ಆ ಬಳಿಕ ಜಟಾಯುವಿನ ಪೆಟ್ಟುಗಳಿಂದ ಕಂಗೆಟ್ಟ ರಾವಣನು ಅತ್ಯಂತ ಕೋಪಯುಕ್ತನಾಗಿ ತುಟಿಗಳನ್ನು ಕಚ್ಚಿ ಗದೆಯಿಂದ ಜಟಾಯುವನ್ನು ಹೊಡೆದನು. ಆತನು ಆ ಪೆಟ್ಟನ್ನು ತಪ್ಪಿಸಿಕೊಂಡು ತನ್ನ ಕೊಕ್ಕಿನಿಂದ ರಾವಣನ ವಾಮಭಾಗದ ಹತ್ತು ತೋಳುಗಳನ್ನೂ ಕತ್ತರಿಸಿದನು. ಆ ಕೈಗಳು ಬಿದ್ದರೂ ತತ್‌ಕ್ಷಣದಲ್ಲೇ ಹತ್ತು ತೋಳುಗಳು ಹುಟ್ಟಿ ದೀಪಜ್ವಾಲೆಯನ್ನುಗುಳುತ್ತ ಹುತ್ತದಿಂದ ಹೊರಡುವ ಸರ್ಪಗಳಂತೆ ಕಾಣಿಸಿಕೊಂಡವು. ಆಗ ರಾವಣನು ಸಿಟ್ಟಿನಿಂದ ಸೀತಾದೇವಿಯನ್ನು ಕೆಳಗೆ ಬಿಟ್ಟು ಮುಷ್ಟಿಗಳಿಂದಲೂ ಮೊಳಕಾಲುಗಳಿಂದಲೂ ಜಟಾಯುವನ್ನು ಹೊಡೆಯಲು ಆತನು ರಾವಣನ ಮುಖಗಳಿಗೆರಗಿ ಗಾಯವನ್ನು ಮಾಡಿದನು. ಈ ಪ್ರಕಾರ ರಾವಣನಿಗೂ ಜಟಾಯುವಿಗೂ ಎರಡು ಗಳಿಗೆಯವರೆಗೆ ಭೀಕರವಾದ ಯುದ್ಧವಾಯಿತು. ಅನಂತರ ರಾವಣನು ಖಡ್ಗವನ್ನು ತೆಗೆದುಕೊಂಡು ಜಟಾಯುವಿನ ಎರಡು ರೆಕ್ಕೆಗಳನ್ನೂ ಕತ್ತರಿಸಿ ಅಳ್ಳೆಯ ಮೇಲೆ ತಿವಿದು ಕಾಲುಗಳನ್ನು ಕತ್ತರಿಸಿದನು. ಆದರಿಂದ ಜಟಾಯುವು ಗಾಯಪಡೆದು ಭೂಮಿಯಮೇಲೆ ಬಿದ್ದನು. ಆಗ ಮೂರ್ಛೆಗೊಂಡು ನೆಲದಮೇಲೆ ಬಿದ್ದಿದ್ದ ಜಟಾಯುವನ್ನು ಕಂಡು ರಾವಣನಿಗೆ ಸಂತೋಷವಾಯಿತು. ಆಗ ಚಂದ್ರಮುಖಿಯಾದ ಸೀತಾದೇವಿಯು ತನ್ನ ಮಾವನಾದ ದಶರಥರಾಜನಿಗೆ ಸಖನಾದ ಜಟಾಯುವನ್ನು ತಬ್ಬಿಕೊಂಡು ಆತನಿಗೆ ಅಂಥ ಅವಸ್ಥೆ ಬಂದದ್ದಕ್ಕಾಗಿ ದುಃಖಾತಿಶಯದಿಂದ ರೋದನ ಮಾಡತೊಡಗಿದಳು.

---

## ೫೨ನೆಯ ಅಧ್ಯಾಯ

## ರಾವಣನು ಸೀತಾದೇವಿಯನ್ನು ಎತ್ತಿಕೊಂಡು ಹೋದದ್ದು

ಆಗ ರಾವಣನಿಂದ ಗಾಯಪಡೆದು ಬಿದ್ದ ಜಟಾಯುವನ್ನು ನೋಡುತ್ತ ಪೂರ್ಣಚಂದ್ರಮುಖಿಯಾದ ಸೀತಾದೇವಿಯು ಹೀಗೆ ಹಲುಬಿದಳು : " ಜಟಾಯು, ನಿನಗೆ ಈ ಆಪತ್ತು ಒದಗಿತೆ ?

ಶ್ರೀರಾಮ, ದುರಾತ್ಮನಾದ ರಾವಣನು ಹಿಡಿದುಕೊಂಡು ಹೋಗುತ್ತಿರುವ ನನಗೋಸ್ಕರ ಮೃಗಪಕ್ಷಿಗಳೂ ಆತನನ್ನು ಹಿಂದಟ್ಟಿಬಂದು ದುರವಸ್ಥೆಯನ್ನು ಪಡೆಯುತ್ತಿವೆ. ಜಟಾಯುವು ನನ್ನನ್ನು ಬಿಡಿಸಿ ರಕ್ಷಿಸಬೇಕೆಂದು ಬಂದು ರಾವಣನೊಡನೆ ಯುದ್ಧವನ್ನು ಮಾಡಿ ಗಾಯಪಡೆದು ಬಿದ್ದು ಭೂಮಿಯ ಮೇಲೆ ಹೊರಳುತ್ತಿದ್ದಾನೆ. ಶ್ರೀ ರಾಮ, ಲಕ್ಷ್ಮಣ, ನನ್ನ ನಿಮಿತ್ತವಾಗಿ ಬಂದು ಬಿದ್ದ ಜಟಾಯುವನ್ನೂ ನನ್ನನ್ನೂ ನೀವು ಬಂದು ರಕ್ಷಿಸಬಾರದೇಕೆ ? " ಎಂದು ಹಂಬಲಿಸಿದಳು.

ಈ ಪ್ರಕಾರದಲ್ಲಿ ಕಂಗೆಟ್ಟು ತನ್ನ ಸಮೀಪದಲ್ಲಿ ರಾಮಲಕ್ಷ್ಮಣರಿದ್ದ ಹಾಗೆ ಮೊರೆಯಿಡುತ್ತ ಶೋಕಾಗ್ನಿಯಿಂದ ಕಾಂತಿಗುಂದಿದ ಆಭರಣಗಳುಳ್ಳ ಸೀತಾದೇವಿಯ ಬಳಿಗೆ ರಾವಣನು ಧಾವಿಸಿ ಬಂದನು. ಮರವನ್ನು ಸುತ್ತಿಕೊಂಡಿರುವ ಬಳ್ಳಿಯಂತೆ ಜಟಾಯುವನ್ನು ತಬ್ಬಿಕೊಂಡು 'ರಾಮಾ ರಾಮಾ' ಎಂದು ಕೂಗಿ ಮೊರೆಯಿಡುತ್ತಿದ್ದ ಆ ದೇವಿಯನ್ನು ರಾವಣನು ಬಲಾತ್ಕಾರದಿಂದ ಮುಂದಲೆ ಹಿಡಿದೆಳೆದು ಆಕಾಶಮಾರ್ಗವಾಗಿ ಹೊರಟನು.

ಆ ಸಮಯದಲ್ಲಿ ಜಗತ್ತೆಲ್ಲವೂ ಅಕಾಲಪ್ರಳಯವಾದಂತೆ ಅತಿಭಯಂಕರವಾಯಿತು. ಕತ್ತಲೆಯು ಕವಿದು ಸೂರ್ಯಕಾಂತಿಗುಂದಿತು. ವಾಯುಸಂಚಾರ ನಿಂತಿತು. ಬ್ರಹ್ಮದೇವನು ಜ್ಞಾನದೃಷ್ಟಿಯಿಂದ ನಡೆದ ವೃತ್ತಾಂತವನ್ನು ತಿಳಿದು "ಭಲಾ! ಇನ್ನು ದೇವತೆಗಳ ಕಾರ್ಯವು ನೆರವೇರಿತು!" ಎಂದು ಉದ್ಗಾರಮಾಡಿದನು. ದಂಡಕಾರಣ್ಯದಲ್ಲಿದ್ದ ಋಷಿಗಳು ರಾವಣನು ಸೀತಾದೇವಿಯನ್ನು ಬಲಾತ್ಕಾರದಿಂದ ಹಿಡಿದುಕೊಂಡು ಹೋದದ್ದನ್ನು ನೋಡಿದ ದುಃಖದಿಂದಲೂ ಮುಂದೆ ಸ್ತ್ರೀವೈರದಿಂದ ಶ್ರೀರಾಮನು ಅವಶ್ಯವಾಗಿ ರಾವಣನನ್ನು ಕೊಲ್ಲುವನೆಂಬ ಸಂತೋಷ ದಿಂದಲೂ ಸಮಾಧಾನವುಳ್ಳವರಾದರು.

ಇತ್ತ ರಾಮಲಕ್ಷ್ಮಣರನ್ನು ಸ್ಮರಿಸಿ ಹಂಬಲಿಸುತ್ತ ರಾವಣನಿಂದ ಅಂತರಿಕ್ಷಮಾರ್ಗದಲ್ಲಿ ಒಯ್ಯಲ್ಪಡುತ್ತಿದ್ದ ಸೀತಾದೇವಿಯು ಮೇಘಮಂಡಲದಲ್ಲಿ ಹೊಳೆಯುತ್ತಿರುವ ಮಿಂಚಿನಂತೆ ಒಪ್ಪುತ್ತಿದ್ದಳು. ರಾವಣನು ಗಾಳಿಗೆ ಚಲಿಸುತ್ತಿದ್ದ ಸೀತಾದೇವಿಯ ಪೀತಾಂಬರದಿಂದ, ಕಾಡುಗಿಚ್ಚಿನಿಂದ ಬೆಳಗಿಸಲ್ಪಟ್ಟ ಪರ್ವತದಂತೆ ಒಪ್ಪುತ್ತಿದ್ದನು. ಸೀತಾದೇವಿಯು ಮುಡಿದಿದ್ದ ಕೆಂದಾವರೆಯ ಎಸಳುಗಳು ರಾವಣನ ಮೇಲೆ ಬೀಳುತ್ತಿದ್ದವು. ಅಂತರಿಕ್ಷಮಾರ್ಗದಲ್ಲಿ ಹೋಗುತ್ತಿದ್ದ ಸೀತಾದೇವಿಯ ಸುವರ್ಣಪ್ರಭೆಯುಳ್ಳ ಪೀತಾಂಬರವು ಆಕಾಶದಲ್ಲಿ ಗಾಳಿಯಿಂದ ಚಲಿಸುತ್ತಾ ಬಿಸಿಲಲ್ಲಿ ಸೂರ್ಯಕಾಂತಿಯಿಂದ ಕೂಡಿದ ಕೆಂಪುಮೋಡದಂತೆ ತೋರುತ್ತಿತ್ತು. ಸೀತೆಯ ಮುಖವು ರಾಮನಿಂದ ವಿರಹಿತವಾಗಿ ನಾಳವಿಲ್ಲದ ಕಮಲದಂತೆ ಒಪ್ಪುತ್ತಿತ್ತು. ಅಂದವಾದ ಹಣೆಯಿಂದಲೂ ಮೃದುವಾದ ಕೂದಲಿನಿಂದಲೂ ಥಳಥಳನೆ ಹೊಳೆಯುವ ಬಿಳಿ ಹಲ್ಲುಗಳಿಂದಲೂ ಕೂಡಿ ಪದ್ಮಗರ್ಭದಂತೆ ಪ್ರಕಾಶಿಸುವ ಕೊಂಚವೂ ಕುಂದಿಲ್ಲದೆ ಕೆದರಿದ ಕೂದಲುಳ್ಳ ಆಕೆಯ ಮುಖವು ನೀಲಮೇಘವನ್ನು ಭೇದಿಸಿಕೊಂಡು ಹೊರಬಂದ ಚಂದ್ರನಂತೆ ಕಾಣುತ್ತಿತ್ತು. ಸುಂದರವಾದ ಮೂಗಿನಿಂದಲೂ ತುಟಿಗಳಿಂದಲೂ ಸುವರ್ಣಕಾಂತಿಯಿಂದಲೂ ಮೆರೆಯುತ್ತಿದ್ದ ಸುರಿಯುವ ಕಣ್ಣೀರುಳ್ಳ ಸೀತೆಯ ಮುಖವು ಹಗಲಿನಲ್ಲಿ ಉದಯವಾದ ಚಂದ್ರಮಂಡಲದಂತೆ ಕಾಂತಿಹೀನವಾಗಿ ತೋರುತ್ತಿತ್ತು. ಕಮಲಕರ್ಣಿಕೆಯಂತೆ ತನುಕಾಂತಿಯುಳ್ಳ ಸುವರ್ಣಾಭರಣ ಭೂಷಿತೆಯಾದ ಸೀತಾದೇವಿಯು ರಾವಣನ ಸಮೀಪದಲ್ಲಿ ಮೇಘಮಂಡಲದಲ್ಲಿ ಹೊಳೆಯುವ ಮಿಂಚಿನಂತೆ ಪ್ರಕಾಶಿಸುತ್ತಿದ್ದಳು. ರಾವಣನು ಆ ದೇವಿಯ ಭೂಷಣಗಳ ಝಣಝಣತ್ಕಾರಗಳಿಂದ ಗುಡುಗುಗಳಿಂದಲೂ ಮಿಂಚುಗಳಿಂದಲೂ ಕೂಡಿದ ಮೇಘದಂತೆ ಒಪ್ಪುತ್ತಿದ್ದನು. ಅಂತರಿಕ್ಷ

ಮಾರ್ಗದಲ್ಲಿ ಹೋಗುತ್ತಿದ್ದ ಸೀತಾದೇವಿಯ ಮುಡಿಕಟ್ಟಿನಿಂದ ಸಡಲಿ ಬೀಳುತ್ತಿದ್ದ ಪುಷ್ಪಗಳು ಆಕಾಶದಿಂದ ಬೀಳುವ ವೃಷ್ಟಿಯಂತೆ ಭೂಮಿಯಲ್ಲಿ ಬೀಳುತ್ತಿದ್ದವು. ಆ ಪುಷ್ಪವೃಷ್ಟಿಗಳ ಮಧ್ಯದಲ್ಲಿದ್ದ ರಾವಣನು ನಕ್ಷತ್ರಮಂಡಲದಿಂದ ಸುತ್ತುವರಿಯಲ್ಪಟ್ಟ ಮೇರುಪರ್ವತದಂತೆ ಒಪ್ಪುತ್ತಿದ್ದನು. ಸೀತಾದೇವಿಯ ಪಾದಗಳಲ್ಲಿದ್ದ ರತ್ನಖಚಿತವಾದ ಕಾಲಂದಿಗೆಗಳು ಮನೋಹರವಾಗಿ ಸ್ವರಗೈಯುತ್ತ ಭೂಮಿಗೆ ಬಿದ್ದುವು. ಸೀತಾದೇವಿಯ ಆಭರಣಗಳು ನಕ್ಷತ್ರಮಂಡಲದಿಂದ ಪುಣ್ಯಕರ್ಮವು ತೀರಿ ಭೂಲೋಕದಲ್ಲಿ ಬೀಳುವ ನಕ್ಷತ್ರಗಳಂತೆ ಒಪ್ಪುತ್ತಿದ್ದವು. ಸೀತಾದೇವಿಯ ಸ್ತನಮಂಡಲದ ಮಧ್ಯಪ್ರದೇಶದಲ್ಲಿದ್ದ ಮುತ್ತಿನ ಸರವು ಆಕಾಶದಿಂದ ಭೂಮಿಗೆ ಬೀಳುವಾಗ ದೇವಗಂಗೆಯಂತೆ ಮನೋಹರವಾಗಿ ತೋರಿತು. ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗುತ್ತಿದ್ದ ಸಮಯದಲ್ಲಿ ಅವನ ವೇಗದಿಂದುಂಟಾದ ವಾಯುವಿನಿಂದ ವೃಕ್ಷಗಳು ಅಲುಗಾಡುವ ತಮ್ಮ ಎಲೆಗಳೆಂಬ ಹಸ್ತಗಳಿಂದ ಸೀತಾದೇವಿಗೆ ಅಂಜಬೇಡವೆಂದು ಅಭಯವನ್ನು ಕೊಡುತ್ತಿದ್ದ ಹಾಗೂ ತಮ್ಮ ಕೊಂಬೆಗಳಲ್ಲಿದ್ದ ನಾನಾ ವಿಧ ಪಕ್ಷಿಗಳ ಧ್ವನಿಗಳಿಂದ ಅಂಜಬೇಡವೆಂದು ಕೂಗುತ್ತಿದ್ದ ಹಾಗೂ ತೋರುತ್ತಿದ್ದವು. ತಾವರೆಯ ಕೊಳಗಳು ಸೀತಾದೇವಿಯನ್ನು ಕಂಡು ತಮ್ಮಲ್ಲಿದ್ದ ಕಮಲಗಳಿಂದ ಸಡಲಿ ಬೀಳುತ್ತಿದ್ದ ಎಸಳುಗಳಿಂದ ಕಣ್ಣೀರನ್ನು ಬಿಡುವಂತೆಯೂ ತಮ್ಮಲ್ಲಿದ್ದ ಜಲಚರಪಕ್ಷಿಗಳ ಸ್ವರಗಳಿಂದ ರೋದನಮಾಡುವಂತೆಯೂ ಒಪ್ಪುತ್ತಿದ್ದವು. ದಂಡಕಾರಣ್ಯದಲ್ಲಿದ್ದ ಸಿಂಹ ವ್ಯಾಘ್ರಾದಿ ಮೃಗಗಳೂ ಹಂಸ ಮೊದಲಾದ ಪಕ್ಷಿಗಳೂ ಸೀತಾದೇವಿಯನ್ನು ಹಿಂಬಾಲಿಸಿ ಆ ದೇವಿಯ ನೆಳಲಲ್ಲಿ ಆಕೆಯನ್ನೇ ನೋಡುತ್ತ ಹೋಗುತ್ತಿದ್ದವು. ಮಾರ್ಗದಲ್ಲಿದ್ದ ಪರ್ವತಗಳು ತಮ್ಮ ಕೋಡುಗಲ್ಲುಗಳಲ್ಲಿ ಚಲಿಸುತ್ತಿದ್ದ ವೃಕ್ಷಗಳಿಂದ ಕರತಾಡನಗಳನ್ನು ಮಾಡುವಂತೆಯೂ ಹರಿಯುವ ಪ್ರವಾಹಗಳಿಂದ ಕಣ್ಣೀರು ಬಿಡುವಂತೆಯೂ ಮೃಗಾದಿಗರ್ಜನೆಗಳಿಂದ ರೋದನ ಮಾಡುವಂತೆಯೂ ಒಪ್ಪುತ್ತಿದ್ದವು. ಹಾಗೆ ರಾವಣನು ಬಲಾತ್ಕಾರದಿಂದ ಹಿಡಿದುಕೊಂಡು ಹೋಗುತ್ತಿದ್ದ ಸೀತಾದೇವಿಯನ್ನು ಕಂಡು ಸೂರ್ಯನು ದುಃಖಪಡುತ್ತಿದ್ದಾನೋ ಎಂಬಂತೆ ಬಿಳುಪೇರಿದ ಮಂಡಲವುಳ್ಳವನಾದನು. ಆ ವನದೇವತೆಗಳು "ಅಯ್ಯೋ, ಮಹಾತ್ಮನಾದ ಶ್ರೀರಾಮನ ಪಟ್ಟದ ರಾಣಿಯಾದ ಸೀತಾದೇವಿಯನ್ನು ದುರಾತ್ಮನಾದ ರಾವಣನು ಹಿಡಿದುಕೊಂಡು ಹೋಗುತ್ತಾನೆ. ಇನ್ನು ಲೋಕದಲ್ಲಿ ಧರ್ಮವೆತ್ತಣದು? ಸತ್ಯವೆತ್ತಣದು? ಋಜುಮಾರ್ಗವೆತ್ತಣದು? ಪೌರುಷವೆತ್ತಣದು ?" ಎಂದು ಅಲ್ಲಲ್ಲಿ ಒಟ್ಟುಗೂಡಿಕೊಂಡು ರೋದನಮಾಡುತ್ತಿದ್ದರು! ಈ ರೀತಿಯಲ್ಲಿ ಸೀತಾದೇವಿಯು "ಹಾ ರಾಮ ಹಾ ಲಕ್ಷ್ಮಣ!" ಎಂದು ಮೊರೆಯಿಡುತ್ತ ಅಡಿಗಡಿಗೆ ತನ್ನ ಪ್ರಾಣಕಾಂತನಾದ ಶ್ರೀರಾಮನು ಲಕ್ಷ್ಮಣಸಮೇತನಾಗಿ ಬರುವನೆಂದು ತಿರುಗಿ ನೋಡುತ್ತಿದ್ದಳು. ಅವಳ ತಲೆಗೂದಲು ಕೆದರಿಹೋಗಿತ್ತು. ತಿಲಕವು ಅಳಿಸಿಹೋಗಿತ್ತು. ಅವಳು ದುಃಖಾಕ್ರಾಂತಳಾಗಿ ರಾಮಲಕ್ಷ್ಮಣರನ್ನು ಕಾಣದೆ ಮುಖಕಾಂತಿಗುಂದಿ ಗಟ್ಟಿಯಾಗಿ ಅಳುತ್ತಿದ್ದಳು. ಆ ಸೀತಾದೇವಿಯನ್ನು ರಾವಣನು ಅಂತರಿಕ್ಷಮಾರ್ಗದಲ್ಲಿ ಅಪಹರಿಸಿಕೊಂಡು ಹೋದನು.



## ೫೩ ನೆಯ ಅಧ್ಯಾಯ

## ಸೀತಾದೇವಿಯು ರಾವಣನನ್ನು ನಿಂದಿಸಿದ್ದು

ಈ ಪ್ರಕಾರದಲ್ಲಿ ತನ್ನನ್ನು ಅಂತರಿಕ್ಷಮಾರ್ಗದಲ್ಲಿ ತೆಗೆದುಕೊಂಡು ಹೋಗುತ್ತಿದ್ದ ರಾವಣನನ್ನು ನೋಡಿ ಸೀತಾದೇವಿಯು ರೋದನಮಾಡುತ್ತ ದೈನ್ಯಸ್ವರದಿಂದ ಆತನನ್ನು ಕುರಿತು ಹೀಗೆಂದಳು : "ಎಲೈ ನೀಚ, ನೀನು ದುಷ್ಕರ್ಮವನ್ನು ಮಾಡಿಯೂ ಲಜ್ಜೆಯಿಲ್ಲದಿದ್ದೀಯೆ ಯಾರೂ ಇಲ್ಲದ ಸಮಯದಲ್ಲಿ ನನ್ನನ್ನು ಕದ್ದುಕೊಂಡು ಹೋಗಲು ಪ್ರಯತ್ನಿಸಿರುವೆ. ನೀನು ಪರಾಕ್ರಮದಿಂದ ನನ್ನನ್ನು ಎತ್ತಿಕೊಂಡು ಹೋಗಲಾರದೆ ನನ್ನ ಪತಿಯಾದ ಶ್ರೀರಾಮನಿಗೆ ಅಂಜಿಕೊಂಡು, ಮಾಯಾ ಮೃಗರೂಪದಿಂದ ಆತನನ್ನು ಆಶ್ರಮದಿಂದ ಹೊರಗೆ ಹೋಗುವಂತೆ ಮಾಡಿದ್ದೀಯೆ. ನನ್ನ ಮಾವನಾದ ದಶರಥರಾಜನಿಗೆ ಸಖನಾಗಿ ಪಕ್ಷಿರಾಜನಾದ ಜಟಾಯುವು ನನ್ನನ್ನು ಬಿಡಿಸಿ ರಕ್ಷಿಸಬೇಕೆಂದು ಬರಲು ಆತನನ್ನು ಸಂಹರಿಸಿದೆ ಎಲೈ ದುರುಳ, ವೃದ್ಧನಾದ ಜಟಾಯುವನ್ನು ಕೊಂದಾಗಲೇ ನಿನ್ನ ಪರಾಕ್ರಮವನ್ನರಿತೆನು. ನೀನು ನನ್ನ ಪತಿಯಾದ ಶ್ರೀರಾಮನ ಎದುರಿನಲ್ಲಿ ನಿಂತು ಯುದ್ಧವನ್ನು ಮಾಡಿ ಆತನನ್ನು ಜಯಿಸಿ ನನ್ನನ್ನು ತಂದವನಲ್ಲ. ಲೋಕದಲ್ಲಿ ಅತಿನಿಂದ್ಯವಾದ ಚೋರವೃತ್ತಿಯನ್ನಾಶ್ರಯಿಸಿ ಲಜ್ಜೆಯಿಲ್ಲದಿದ್ದೀಯೆ. ಪುರುಷನಿಲ್ಲದ ಸಮಯದಲ್ಲಿ ಪರಸ್ತ್ರೀಯನ್ನು ಅಪಹರಿಸಿದನೆಂದು ನಿನ್ನನ್ನು ಲೋಕದಲ್ಲಿ ನಿಂದಿಸುವರು ನಿನ್ನ ಪೌರುಷವನ್ನೂ ನಿನ್ನ ಧೈರ್ಯವನ್ನೂ ಸುಡು. ನನ್ನೊಡನೆ ಹೇಳಿಕೊಂಡ ನಿನ್ನ ಪರಾಕ್ರಮವನ್ನು ಸುಡಬೇಕು. ನೀನು ಇಂಥ ಅಕೃತ್ಯವನ್ನು ಮಾಡಿ ನಿನ್ನ ವಂಶಕ್ಕೆ ಅಪಕೀರ್ತಿಯನ್ನು ತಂದುಕೊಂಡೆ. ನೀನು ರಾಜಕುಮಾರರಾದ ರಾಮಲಕ್ಷ್ಮಣರ ದೃಷ್ಟಿಗೆ ಗೋಚರನಾದಪಕ್ಷದಲ್ಲಿ ನಿನ್ನ ಸಮಸ್ತ ಸೇನೆಯೊಡನೆ ಕೂಡಿದ್ದರೂ ಒಂದು ಕ್ಷಣಮಾತ್ರವೂ ಜೀವಸಹಿತವಾಗಿರಲಾರೆ. ವನಮಧ್ಯದಲ್ಲಿ ಕಾಡುಗಿಚ್ಚಿನ ಜ್ವಾಲೆಗೆ ಸಿಕ್ಕಿದ ಪಕ್ಷಿಯಂತೆ ನೀನು ರಾಮಲಕ್ಷ್ಮಣರ ಶರಾಗ್ನಿಜ್ವಾಲೆಯನ್ನು ತಾಳಲಾರೆ. ನನ್ನ ಮಾತನ್ನು ಹಿತವೆಂದು ವಿಚಾರಿಸಿ ನನ್ನನ್ನು ಬಿಡು. ಅಲ್ಲದ ಪಕ್ಷದಲ್ಲಿ ನನ್ನ ನಿಮಿತ್ತವಾಗಿ ಕೋಪಹುಟ್ಟಿದರೆ ಲಕ್ಷ್ಮಣಸಮೇತನಾದ ಶ್ರೀರಾಮನು ನಿನ್ನನ್ನು ಯಮಲೋಕವನ್ನೈದಿಸದೆ ಸುಮ್ಮನಿರನು. ದೇವೇಂದ್ರನಿಗೆ ಸಮಾನನೆನಿಸಿದ ನನ್ನ ಪತಿಯಾದ ಶ್ರೀರಾಮನನ್ನು ಕಾಣದಿದ್ದರೆ ನಾನು ಬದುಕುವವಳಲ್ಲ. ನಿನಗೆ ಶ್ರೇಯಸ್ಸಾಗಬೇಕೆಂದೂ ಬಹುಕಾಲ ಬದುಕಿರಬೇಕೆಂದೂ ನಿನಗೆ ಇಚ್ಛೆಯಿಲ್ಲವೆಂದು ತೋರುತ್ತದೆ. ಮೃತ್ಯುವು ಸಮೀಪಿಸಿದ ಪುರುಷನಿಗೆ ಬುದ್ಧಿಯು ವಿಪರೀತವಾಗುವ ಹಾಗೂ ಮರಣವು ಸಮೀಪಿಸಿದವನಿಗೆ ಪಥ್ಯವಸ್ತುವು ರುಚಿಸದ ಹಾಗೂ ನೀನು ಯಮಪಾಶಬದ್ಧನಾದಕಾರಣ ಇಂಥ ಕೃತ್ಯದಲ್ಲಿ ನಿನಗೆ ಭಯವು ಹುಟ್ಟಲಿಲ್ಲ. ಅವಶ್ಯವಾಗಿ ನಿನಗೆ ಮರಣವು ಸನ್ನಿಹಿತವಾಗಿದೆ. ನೀನು ಅತ್ಯಂತ ಪಾಪವನ್ನು ಮಾಡಿದವರಿರುವ ಅಸಿಪತ್ರವನಕ್ಕೆ ಹೋಗುವೆ. ನೀನು ಯಮಲೋಕದಲ್ಲಿ ಉಕ್ಕಿನ ಸಲಾಕೆಗಳಂಥ ಮುಳ್ಳುಗಳಿರುವ ಬೂರುಗದ ವೃಕ್ಷಗಳನ್ನು ತಬ್ಬಿಕೊಳ್ಳುವೆ. ಮಹಾತ್ಮನಾದ ಶ್ರೀರಾಮನಿಗೆ ಇಂಥ ದ್ರೋಹವನ್ನು ಮಾಡಿದೆಯಾದ್ದರಿಂದ ನೀನು ವಿಷಪಾನವನ್ನು ಮಾಡಿದವನಂತೆ ಶ್ರೀರಾಮನಿಂದ ನಾಶವನ್ನೈದುವೆ. ಮಹಾತ್ಮನಾದ ನನ್ನ ಪತಿಗೆ ಇಂಥ ದ್ರೋಹವನ್ನು ಮಾಡಿದ್ದರಿಂದ ನೀನು ಯಾವ ದಿಕ್ಕಿಗೆ ಹೋದರೂ ಜೀವದಿಂದಿರಲು ಸಾಧ್ಯವಿಲ್ಲ ತನ್ನ ತಮ್ಮನಾದ ಲಕ್ಷ್ಮಣನನ್ನೂ ಬಿಟ್ಟು ಒಂಟಿಯಾಗಿಯೇ ನಿಮಿಷಮಾತ್ರದಲ್ಲಿ ಹದಿನಾಲ್ಕುಸಾವಿರಮಂದಿ ರಾಕ್ಷಸರನ್ನು ಕೊಂದ ಮಹಾಪರಾಕ್ರಮಿಯಾದ

ಶ್ರೀರಾಮನು ತನ್ನ ಪ್ರಾಣಕ್ಕೆ ಸಮಾನಳಾದ ಪತ್ನಿಯನ್ನು ಅಪಹರಿಸಿಕೊಂಡು ಹೋಗುವ ನಿನ್ನನ್ನು ತನ್ನ ನಿಶಿತಬಾಣಗಳಿಂದ ಕೊಲ್ಲದಿರನು" ಎಂದು ಅನೇಕ ನಿಷ್ಠುರವಚನಗಳನ್ನು ನುಡಿದು ಭಯ ಶೋಕಗಳಿಂದ ಕಂಗೆಟ್ಟು ದೈನ್ಯದಿಂದ ಹಂಬಲಿಸುತ್ತ ಹಲುಬುತ್ತ ದುಃಖಿಸುತ್ತಿದ್ದಳು.

---

## ೫೪ ನೆಯ ಅಧ್ಯಾಯ

## ರಾವಣನು ಸೀತಾದೇವಿಯೊಡನೆ ಲಂಕೆಯನ್ನು ಸೇರಿದ್ದು

ಈ ರೀತಿಯಲ್ಲಿ ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗುತ್ತಿರಲು ಆ ದೇವಿಯು ತನಗೆ ರಕ್ಷಕರಾರನ್ನೂ ಕಾಣದೆ ಚಿಂತಾಕ್ರಾಂತಳಾಗಿ ಮಧ್ಯಮಾರ್ಗದಲ್ಲಿ ಒಂದು ಪರ್ವತದ ಶಿಖರದ ಮೇಲೆ ಕುಳಿತಿದ್ದ ಐದು ಕಪಿಗಳನ್ನು ಕಂಡಳು. ಅವಳು ತನ್ನ ಮೇಲುಹೊದಿಕೆಯ ಪೀತಾಂಬರದ ಸೆರಗನ್ನು ಹರಿದು ತನ್ನ ಶ್ರೇಷ್ಠವಾದ ಆಭರಣಗಳನ್ನು ಕಟ್ಟಿ ಆ ಕಪಿಗಳ ಮಧ್ಯದಲ್ಲಿ ಆ ಗಂಟನ್ನು ಹಾಕಿದಳು. ಆ ಕಪಿಗಳು ಒಂದು ವೇಳೆ ಶ್ರೀರಾಮನಿಗೆ ತನ್ನ ವೃತ್ತಾಂತವನ್ನು ತಿಳಿಸ ಬಹುದೆಂದು ಅವಳು ಭಾವಿಸಿದಳು. ರಾವಣನು ತನಗೆ ಸೀತಾದೇವಿಯು ಕೈವಶಳಾದ ಸಂತೋಷದಿಂದ ಆ ದೇವಿಯು ಆಭರಣಗಳನ್ನು ಗಂಟುಕಟ್ಟಿ ಹಾಕಿದ್ದನ್ನು ನೋಡಲಿಲ್ಲ. ಆ ಕಪಿಗಳು ಸೀತಾದೇವಿಯು ಹಾಕಿದ ಆಭರಣದ ಗಂಟನ್ನೂ ಅವಳು ಕೂಗಿಕೊಳ್ಳುತ್ತಿರುವುದನ್ನೂ ನೋಡಿದವು.

ಆ ಬಳಿಕ ರಾವಣನು ಪಂಪಾಸರೋವರವನ್ನು ದಾಟಿ ವಿಷಜ್ವಾಲೆಯನ್ನುಗುಳುತ್ತಿರುವ ಸರ್ಪವನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಹೋಗುವಂತೆ ತನಗೆ ಮೃತ್ಯುಸ್ವರೂಪಳಾದ ಸೀತಾದೇವಿಯನ್ನು ಅಪಹರಿಸಿಕೊಂಡು ಅನೇಕ ವನಗಳನ್ನೂ ಪರ್ವತಗಳನ್ನೂ ಸರೋವರಗಳನ್ನೂ ದಾಟಿ, ಬಿಲ್ಲಿನಿಂದ ಬಿಸಿಯಲ್ಪಟ್ಟ ಬಾಣದಂತೆ ಅತಿವೇಗದಿಂದ ತಿಮಿಂಗಿಲ ಮತ್ಸ್ಯಗಳೇ ಮೊದಲಾದ ಜಲಚರ ಪ್ರಾಣಿಗಳಿಗೂ ಸಮಸ್ತ ನದಿಗಳಿಗೂ ಆಶ್ರಯಸ್ಥಾನವಾದ ಸಮುದ್ರವನ್ನು ದಾಟಿಹೋದನು. ಅಂತರಿಕ್ಷಮಾರ್ಗದಲ್ಲಿದ್ದ ಸಿದ್ಧ ಚಾರಣ ಗಂಧರ್ವಾದಿಗಳು ರಾವಣನಿಗೆ ಅಂತ್ಯಕಾಲವು ಸಮೀಪಿಸಿತೆಂದು ನುಡಿಯುತ್ತಿದ್ದರು. ಹೊರಳಾಡುತ್ತಿದ್ದ ಸೀತಾದೇವಿಯನ್ನು ರಾವಣನು ತನ್ನ ಮೃತ್ಯುವನ್ನು ಕೊಂಡುಹೋಗುವಂತೆ ಲಂಕಾಪಟ್ಟಣಕ್ಕೆ ಕೊಂಡುಹೋಗಿ ತನ್ನ ಅಂತಃಪುರವನ್ನು ಪ್ರವೇಶಿಸಿದನು. ಶೋಕಾತಿಶಯದಿಂದ ಮೈಮರೆತಿದ್ದ ಆ ಶೋಭನಾಂಗಿಯನ್ನು ತನ್ನ ಆ ಅರಮನೆಯಲ್ಲಿಳಿಸಿ ಪಿಶಾಚಿಗಳಂತಿದ್ದ ರಾಕ್ಷಸಸ್ತ್ರೀಯರನ್ನು ಕರೆದು "ಎಲೇ ಸ್ತ್ರೀಯರುಗಳಿರಾ, ಈ ದೇವಿಯ ಸಮೀಪಕ್ಕೆ ನನ್ನ ಅಪ್ಪಣೆಯಿಲ್ಲದೆ ಮತ್ತೊಬ್ಬ ಪುರುಷನಾದರೂ ಸ್ತ್ರೀಯಾದರೂ ಬಾರದಿರುವಂತೆ ಕಾದುಕೊಂಡಿರಿ. ಈಕೆಯು ಬಯಸುವ ಸುವರ್ಣರತ್ನಾಭರಣಗಳನ್ನು ಸಂಶಯವಿಲ್ಲದೆ ತಂದುಕೊಡಿರಿ. ಯಾರಾದರೂ ಈಕೆಯ ವಿಷಯದಲ್ಲಿ ನಿಷ್ಠುರವಚನವನ್ನು ನುಡಿದರೆ ಅವರ ಪ್ರಾಣಾಪಹಾರವನ್ನು ಮಾಡುವೆನು" ಎಂದು ಆಜ್ಞಾಪಿಸಿದನು.

ಅನಂತರ ಮಹಾಪ್ರತಾಪಶಾಲಿಯಾದ ರಾವಣನು ಮುಂದಣ ಕಾರ್ಯವನ್ನು ವಿಚಾರಿಸುತ್ತ ಅಂತಃಪುರದಿಂದ ಹೊರಟು ಓಲಗದ ಚಾವಡಿಗೆ ಬಂದು ಮಹಾಪರಾಕ್ರಮಶಾಲಿಗಳಾಗಿ ಮಾಂಸಾಹಾರಿ ಗಳಾದ ಎಂಟು ಮಂದಿ ರಾಕ್ಷಸರನ್ನು ಕರೆಸಿದನು. ಪೂರ್ವದಲ್ಲಿ ಬ್ರಹ್ಮದೇವನು ತನಗೆ ಕೊಟ್ಟ ವ ಗರ್ವಿತನಾದ ರಾವಣನು ಆ ರಾಕ್ಷಸರಿಗೆ ಅನೇಕ ರತ್ನಾಭರಣ ದುಕೂಲ ವಾಹನಾದಿಗಳನ್ನು

ಸಂಮಾನಿಸಿ ಅವರನ್ನು ಕುರಿತು "ಎಲೈ ರಾಕ್ಷಸರುಗಳಿರಾ, ನೀವು ಮಹಾಪರಾಕ್ರಮಿಗಳು; ಅತ್ಯಂತ ಬಲಿಷ್ಠರು. ಅದಲ್ಲದೆ ನನಗೆ ಆಪ್ತರು. ಆದಕಾರಣ ನಿಮಗೊಂದು ಕಾರ್ಯವನ್ನು ಹೇಳುತ್ತೇನೆ. ನಾನು ಜನಸ್ಥಾನದಲ್ಲಿ ನನ್ನ ತಮ್ಮನಾದ ಖರನನ್ನೂ ಆತನಿಗೆ ಸಹಾಯಕರಾಗಿ ತ್ರಿಶಿರ ದೂಷಣಾದೀ ಮೊದಲಾದ ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನೂ ಇರಿಸಿದ್ದೆನಷ್ಟೆ. ರಾಮನೆಂಬ ಒಬ್ಬ ಮನುಷ್ಯನು ಖರನನ್ನೂ ಆ ಹದಿನಾಲ್ಕು ಸಾವಿರ ರಾಕ್ಷಸರನ್ನೂ ಕೊಂದನು. ಈಗ ಜನಸ್ಥಾನವು ಶೂನ್ಯವಾಗಿದೆ. ನನಗೂ ರಾಮನಿಗೂ ಮಹತ್ತರವಾದ ವೈರವು ಬೆಳೆಯಿತು. ನೀವು ಜನಸ್ಥಾನಕ್ಕೆ ಹೋಗಿ ವೃತ್ತಾಂತವನ್ನು ಚೆನ್ನಾಗಿ ವಿಚಾರಿಸಿ ನನಗೆ ಹೊತ್ತುಹೊತ್ತಿಗೂ ಹೇಳಿಕಳುಹಿಸಿರಿ. ನೀವು ಹೋಗುವಾಗ ಎಚ್ಚರವಾಗಿರಿ. ಯಾವಾಗಲೂ ಆತನನ್ನು ಕೊಲ್ಲುವುದಕ್ಕೆ ತಕ್ಕ ಸಮಯವನ್ನು ಹುಡುಕಿಕೊಂಡಿರಿ. ನೀವು ಮಹಾಬಲವಂತರು. ಮಹಾಸಾಮರ್ಥ್ಯವುಳ್ಳವರು. ರಣರಂಗದಲ್ಲಿ ಕುಶಲರು. ಆದ್ದರಿಂದ ನಿಮ್ಮನ್ನು ಜನಸ್ಥಾನಕ್ಕೆ ಕಳುಹಿಸುತ್ತೇನೆ" ಎಂದು ಪ್ರೀತಿಯಿಂದ ನುಡಿದನು. ಆ ರಾಕ್ಷಸರು ಹರ್ಷಪಟ್ಟು ರಾವಣನಿಗೆ ವಂದಿಸಿ ಲಂಕಾಪಟ್ಟಣದಿಂದ ಹೊರಟು ಜನಸ್ಥಾನಕ್ಕೆ ಹೋದರು.



೫೫ ನೆಯ ಅಧ್ಯಾಯ

## ರಾವಣನು ಸೀತಾದೇವಿಗೆ ಹೇಳಿದ ಸಮಾಧಾನ

ಈ ಪ್ರಕಾರ ರಾವಣನು ತನ್ನ ಗಡಿದುರ್ಗವಾದ ಜನಸ್ಥಾನಕ್ಕೆ ಎಂಟು ಮಂದಿ ರಾಕ್ಷಸರನ್ನು ಕಳುಹಿಸಿ ತನ್ನ ಬುದ್ಧಿಮಾಂದ್ಯದಿಂದ ಕೃತಾರ್ಥನಾದೆನೆಂದೆಣಿಸಿದನು. ಅವನು ಮದನಬಾಣಗಳಿಗೆ ಗುರಿಯಾಗಿ ಸೀತಾದೇವಿಯನ್ನೇ ಧ್ಯಾನಮಾಡುತ್ತ ಆ ದೇವಿಯನ್ನು ನೋಡಬೇಕೆಂದು ಅವಳಿದ್ದ ಅರಮನೆಗೆ ಹೋದನು. ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಪತಿವಿಯೋಗದಿಂದುಂಟಾದ ದುಃಖಾತಿಶಯದಿಂದ ಮುಖಕಾಂತಿಗುಂದಿ ಕಣ್ಣೀರನ್ನು ಬಿಡುತ್ತ ದೈನ್ಯಸ್ವರದಿಂದ ರೋದನ ಮಾಡುತ್ತ ಸುಳಿಗಾಳಿಯಿಂದ ಸಮುದ್ರದಲ್ಲಿ ಮುಳುಗಿದ ನೌಕೆಯಂತೆಯೂ ಮೃಗಗಳ ಹಿಂಡಿನಿಂದ ಬೇರೆಯಾಗಿ ನಾಯಿಗಳಿಂದ ಸುತ್ತಲ್ಪಟ್ಟ ಒಂಟಿಯಾದ ಹುಲ್ಲೆಯ ಮರಿಯಂತೆಯೂ ತಲೆಯನ್ನು ಬಗ್ಗಿಸಿಕೊಂಡು ಚಿಂತಾಕ್ರಾಂತಳಾಗಿದ್ದ ಸೀತಾದೇವಿಯನ್ನು ಬಲಾತ್ಕಾರದಿಂದ ಕರೆದುಕೊಂಡು ಹೋಗಿ ತನ್ನ ವೈಭವವನ್ನು ತೋರಿಸಿದನು. ದೇವಮಂದಿರಕ್ಕೆ ಸರಿಯಾದ ಉಪ್ಪರಿಗೆಗಳಿಂದಲೂ ಮೇಲುಮಚ್ಚು ಮಾಳಿಗೆಗಳಿಂದಲೂ ಸರ್ವಾಭರಣಭೂಷಿತರಾದ ಅನೇಕ ಸಾವಿರ ಮಂದಿ ಸ್ತ್ರೀಯರಿಂದಲೂ ನಾನಾ ಪ್ರಕಾರವಾದ ಕ್ರೀಡಾಮೃಗಗಳಿಂದಲೂ ಪಕ್ಷಿಗಳಿಂದಲೂ ನಾನಾರತ್ನಮಯವೂ ಸುವರ್ಣಮಯವೂ ಸ್ಫಟಿಕಶಿಲಾಮಯವೂ ರಜತಮಯವೂ ವಜ್ರವೈಡೂರ್ಯಮಯವೂ ಎನಿಸಿದ ಮನೋಹರವಾದ ಕಂಭಗಳಿಂದಲೂ ದೇವದುಂದುಭಿಧ್ವನಿಯಿಂದಲೂ ಪುಟವಿಕ್ಕಲ್ಪಟ್ಟ ಚಿನ್ನದ ಎಲೆಗಳ ತೋರಣಗಳಿಂದಲೂ ಮನೋಹರವಾದ ಆ ಅರಮನೆಯನ್ನು ತೋರಿಸಿದನು. ರತ್ನಗಳಿಂದ ಅಲಂಕೃತವಾಗಿ ಸುವರ್ಣಮಯವಾದ ಸೋಪಾನಗಳನ್ನು ಹತ್ತಿ ಗಜದಂತಗಳಿಂದಲೂ ಬೆಳ್ಳಿಯಿಂದಲೂ ನಿರ್ಮಿಸಲ್ಪಟ್ಟ ಗವಾಕ್ಷಗಳನ್ನು ವರ್ಣಿಸಿ ಹೇಳಿದನು. ಸುವರ್ಣಮಯವಾದ ಜಾಲಂದರಗಳುಳ್ಳ ಹಾಲುಗಾರೆಯಿಂದ ಮನೋಹರವಾದ ನೆಲಕಟ್ಟುಗಳುಳ್ಳ ಉಪ್ಪರಿಗೆಗಳ ಸಮೂಹಗಳನ್ನು

ತೋರಿಸಿದನು. ಆ ರಾವಣನು ನಾನಾಪ್ರಕಾರವಾದ ವೃಕ್ಷಗಳಿಂದಬ್ಬಿಸಿದ ಉದ್ಯಾನವನಗಳನ್ನು ತೋರಿಸಿ ಪತಿವ್ರತೆಯೂ ಶೋಕಪರಾಯಣೆಯೂ ಆದ ಆ ದೇವಿಯನ್ನು ಅನುಕೂಲಪಡಿಸಿಕೊಳ್ಳಬೇಕೆಂದು ಆಕೆಯನ್ನು ಕುರಿತು ಈ ಮಾತುಗಳನ್ನಾಡಿದನು: " ಸೀತೆ, ನನಗೆ ಮೂವತ್ತೆರಡು ಕೋಟಿ ರಾಕ್ಷಸರ ಬಲವಿದೆ. ಅವರೆಲ್ಲರಿಗೂ ನಾನೊಬ್ಬನೇ ದೊರೆ. ನನ್ನ ಬಳಿಯಲ್ಲಿ ಯಾವಾಗಲೂ ಸಾವಿರ ಮಂದಿ ಊಳಿಗದವರು ಕಾದಿದ್ದಾರೆ. ಇಂಥ ರಾಜ್ಯಾಧಿಪತ್ಯವನ್ನು ನಿನ್ನ ಅಧೀನಮಾಡುತ್ತೇನೆ. ನನ್ನ ಜೀವವನ್ನೂ ನಿನ್ನ ವಶವಾಗಿ ಮಾಡುತ್ತೇನೆ. ನೀನು ನನ್ನ ಪ್ರಾಣಗಳಿಗಿಂತಲೂ ಅಧಿಕಳು. ನನಗೆ ಅನೇಕ ಸಾವಿರ ಮಂದಿ ಸ್ತ್ರೀಯರಿದ್ದಾರೆ. ನೀನು ಅವರೆಲ್ಲರಿಗೂ ನನಗೂ ಒಡತಿಯಾಗಿರು. ನಿನ್ನ ಮನಸ್ಸಿನಲ್ಲಿ ಮತ್ತೊಂದು ಯೋಚನೆಯನ್ನು ಮಾಡದೆ ನನಗನುಕೂಲಳಾಗು. ಕಾಮಬಾಣಗಳಿಂದ ಗಾಯಪಡೆದ ನನ್ನನ್ನು ಕೃಪೆಮಾಡಿ ರಕ್ಷಿಸು. ಈ ಲಂಕಾಪಟ್ಟಣವು ನೂರುಗಾವುದ ವಿಸ್ತಾರವುಳ್ಳ ಸಮುದ್ರದಿಂದ ಪರಿವೇಷ್ಟಿತವಾಗಿದೆ. ಈ ಪಟ್ಟಣವು ದೇವ ದಾನವ ಮಾನವರಲ್ಲಿ ಯಾರಿಗೂ ಸಾಧ್ಯವಾದದ್ದಲ್ಲ. ದೇವತೆಗಳಲ್ಲಿಯೂ ಪಾತಾಳಲೋಕದಲ್ಲಿರುವ ನಾಗರಲ್ಲಿಯೂ ಭೂಮಿಯಲ್ಲಿರುವ ಮನುಷ್ಯರಲ್ಲಿಯೂ ನನ್ನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವರಿಲ್ಲ! ಸೀತಾದೇವಿ, ರಾಜ್ಯಭ್ರಷ್ಟನೂ ಅಲ್ಪಾಯುಷ್ಯವುಳ್ಳವನೂ ದೈನ್ಯವೃತ್ತಿಯನ್ನಾಶ್ರಯಿಸಿದವನೂ ಅಲ್ಪತೇಜಸ್ಕನೂ ಮನುಷ್ಯನೂ ಆದ ರಾಮನಿಂದ ನಿನಗೇನಾಗಬೇಕು ? ನಿನ್ನ ರೂಪಲಾವಣ್ಯಗಳಿಗೆ ಸರಿಯಾದ ನನ್ನನ್ನು ಪತಿಯಾಗಿ ವರಿಸು. ಯೌವನವು ನಿತ್ಯವಾದುದಲ್ಲ. ಆದ್ದರಿಂದ ನನ್ನನ್ನು ಅಂಗೀಕರಿಸಿ ನನ್ನೊಡನೆ ರಮಿಸು. ಇನ್ನು ರಾಮನನ್ನು ಕಣ್ಣಿಂದಲೂ ಕಾಣಲು ಸಾಧ್ಯವಿಲ್ಲ. ಆತನು ಇಲ್ಲಿಗೆ ಬರುವುದಕ್ಕೂ ಈ ಪಟ್ಟಣವನ್ನು ಮನಸ್ಸಿನಲ್ಲಿ ನೆನೆಯುವುದಕ್ಕೂ ಶಕ್ತನಲ್ಲ. ಅಂತರಿಕ್ಷಮಾರ್ಗದಲ್ಲಿ ಸಂಚರಿಸುವ ವಾಯುವನ್ನು ನಿಲ್ಲಿಸುವುದಕ್ಕೂ ಪ್ರಜ್ವಲಿಸುವ ಅಗ್ನಿಜ್ವಾಲೆಯನ್ನು ಕೈಯಲ್ಲಿಟ್ಟುಕೊಳ್ಳುವುದಕ್ಕೂ ಹೇಗೆ ಸಾಧ್ಯವಿಲ್ಲವೋ ಹಾಗೆ ಈ ಲಂಕಾಪಟ್ಟಣಕ್ಕೆ ಬಂದು ನನ್ನ ಬಾಹುಬಲದಿಂದ ಪರಿಪಾಲಿಸಲ್ಪಟ್ಟಿರುವ ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ನೀನು ಈ ಪಟ್ಟಣದಲ್ಲಿದ್ದುಕೊಂಡು ಸಮಸ್ತ ರಾಜ್ಯವನ್ನೂ ಪರಿಪಾಲಿಸು. ನನ್ನಂಥ ಅನೇಕ ರಾಕ್ಷಸರೂ ಇಂದ್ರಾದಿದೇವತೆಗಳೂ ನಿನ್ನ ಸೇವಕರಾಗಿರುವರು. ನೀನು ಸ್ನಾನವನ್ನು ಮಾಡಿ ಸರ್ವಾಭರಣಭೂಷಿತೆಯಾಗಿ ದಿವ್ಯಗಂಧಾನುಲೇಪನಮಾಡಿಕೊಂಡು ಮನೋಹರವಾದ ವಸ್ತ್ರಗಳನ್ನುಟ್ಟು ದೇವತಾಯೋಗ್ಯವಾದ ಸುಗಂಧ ಪುಷ್ಪಗಳನ್ನು ಮುಡಿದು ನನ್ನ ಮನಸ್ಸಿಗೆ ಸಂತೋಷವನ್ನು ಮಾಡು. ನಿನಗೆ ಜನ್ಮಾಂತರದಲ್ಲಿ ಮಾಡಿದ ಪುಣ್ಯವು ಫಲವನ್ನು ಕೊಡುವ ಕಾಲವು ಸಮೀಪವಾಯಿತು. ನಾನು ನನ್ನ ಅಣ್ಣನಾದ ಕುಬೇರನನ್ನು ಜಯಿಸಿ ಸೂರ್ಯಪ್ರಭೆಯಂತೆ ದೇದೀಪ್ಯಮಾನವಾಗಿ ಬೆಳಗುತ್ತಿರುವ ಪುಷ್ಪಕವೆಂಬ ವಿಮಾನವನ್ನು ತೆಗೆದುಕೊಂಡು ಬಂದಿರುವೆನು. ವಾಯುವೇಗ ಮನೋವೇಗವುಳ್ಳದ್ದಾಗಿ ಅತಿವಿಶಾಲವಾಗಿ ರಮಣೀಯವಾದ ಆ ವಿಮಾನದಲ್ಲಿ ನೀನು ಮನಸ್ಸುಬಂದಂತೆ ಸುಖವಾಗಿ ಸಂಚರಿಸು. ವಿಕಸಿತವಾದ ತಾವರೆಯಂತೆ ಮನೋಹರವಾಗಿ ಕಣ್ಗೊಳಿಪ ನಿನ್ನ ಮುಖವು ಕಣ್ಣೀರು ಸುರಿಸುತ್ತಿದ್ದರೆ ರಮಣೀಯವಾಗಿ ಕಾಣಿಸದು " ಎಂದು ನುಡಿದನು.

ಆ ಮಾತನ್ನು ಕೇಳಿ ಸೀತಾದೇವಿಯು ದುಃಖಾತಿಶಯದಿಂದ ಲಜ್ಜಿತಳಾಗಿ ಮುಖವನ್ನು ಮುಚ್ಚಿಕೊಂಡು ಕಣ್ಣೀರುಬಿಡುತ್ತ ತನ್ನ ಪ್ರಾಣಕಾಂತನಾದ ಶ್ರೀರಾಮನನ್ನು ಧ್ಯಾನಮಾಡುತ್ತ ಚಿಂತಾಕ್ರಾಂತಳಾಗಿ ಮುಖಕಾಂತಿಗುಂದಿ ಸುಮ್ಮನಿದ್ದಳು. ರಾವಣನು ಪುನಃ ಆಕೆಯನ್ನು ಕುರಿತು " ಸೀತಾದೇವಿ, ಪಾತಿವ್ರತ್ಯವು ಭಂಗವಾಗುವುದೆಂಬ ಭಯವನ್ನು ಬಿಡು. ಪರಪುರುಷನ ಮುಖವನ್ನು ಹೇಗೆ ನೋಡಲಿ—ಎಂಬ ಲಜ್ಜೆಯನ್ನು ಬಿಡು. ನಿನ್ನ ಮನಸ್ಸಿಗೆ ಹರ್ಷವುಂಟಾಗುವಂತೆ ನಿನ್ನ

ಮನೋಹರವಾದ ಪಾದಗಳಿಗೆ ನನ್ನ ಹತ್ತು ಶಿರಸ್ಸುಗಳಿಂದಲೂ ಸಾಷ್ಟಾಂಗಪೂರ್ವಕ ವಂದನೆ ಮಾಡುತ್ತೇನೆ. ಶೀಘ್ರವಾಗಿ ನನ್ನಲ್ಲಿ ಕೃಪೆಮಾಡು. ನಾನು ಇನ್ನು ನೀನು ಹೇಳಿದಂತೆ ಕೇಳಿಕೊಂಡಿರುವ ಭೃತ್ಯನಾಗುತ್ತೇನೆ. 'ಮಹಾಪರಾಕ್ರಮಿಯಾದ ದಶಕಂಠನು ಯಾರಿಗೂ ದೈನ್ಯದಿಂದ ಶರಣು ಹೊಡೆಯುವವನಲ್ಲ' ಎಂಬ ಮಾತು ಇಂದಿಗೆ ಮುಗಿಯಲಿ" ಎಂದು ನುಡಿದು ಸೀತಾದೇವಿಯು ತನ್ನ ವಶವರ್ತಿಯಾದಳೆಂದೆಣಿಸಿದನು.



೫೬ ನೆಯ ಅಧ್ಯಾಯ

## ರಾವಣನು ಸೀತಾದೇವಿಯನ್ನು ಅಶೋಕವನದಲ್ಲಿಟ್ಟಿದ್ದು

ಈ ಪ್ರಕಾರದಲ್ಲಿ ನುಡಿದ ರಾವಣನ ಮಾತನ್ನು ಕೇಳಿ ಸೀತಾದೇವಿಯು ಒಂದು ತೃಣವನ್ನು ಮಧ್ಯದಲ್ಲಿಟ್ಟು ಅದನ್ನು ನೋಡುತ್ತ ಆತನನ್ನು ಕುರಿತು ಹೀಗೆ ಉತ್ತರಕೊಟ್ಟಳು: "ಎಲೈ ರಾವಣ, ಧರ್ಮಮಾರ್ಗಪ್ರವರ್ತಕನೂ ಸತ್ಯಸಂಧನೂ ಆದ ಶ್ರೀರಾಮನು ಲೋಕದಲ್ಲಿ ಕೀರ್ತಿವಂತನು. ಅವನು ಮಹಾಧರ್ಮಿಷ್ಠ; ಆಜಾನುಬಾಹು; ಇಕ್ಷ್ವಾಕುವಂಶೋದ್ಧಾರಕ; ಅತ್ಯಂತ ತೇಜಸ್ವಿಯಾದವನು; ಅವನೇ ನನಗೆ ಪತಿ; ಅವನೇ ನನ್ನ ಇಷ್ಟದೇವತೆ. ಆತನು ತನ್ನ ತಮ್ಮನಾದ ಲಕ್ಷ್ಮಣನನ್ನು ಕೂಡಿಕೊಂಡು ಬಂದು ನಿನ್ನ ಪ್ರಾಣಗಳನ್ನು ಅಪಹರಿಸದೆ ಬಿಡನು. ನೀನು ಆತನ ಕಣ್ಣುಮುಂದೆ ಬಲಾತ್ಕಾರದಿಂದ ನನ್ನನ್ನು ತರಲು ಉದ್ದೇಶಿಸಿದ್ದರೆ, ಆತನು ಜನಸ್ಥಾನದಲ್ಲಿದ್ದ ಖರನನ್ನು ಯಮಲೋಕಕ್ಕೆ ಕಳುಹಿಸಿದಂತೆ ನಿನ್ನನ್ನೂ ಯಮಲೋಕಕ್ಕೆ ಕಳುಹಿಸುತ್ತಿದ್ದನು. ನೀನು ಕಳುಹಿಸುವ ರಾಕ್ಷಸರು ಗರುಡನ ಸಮಕ್ಷದಲ್ಲಿ ಸರ್ಪಗಳು ಲಯವನ್ನೈದುವಂತೆ ಶ್ರೀರಾಮನ ಶರಹತಿಯಿಂದ ಲಯವನ್ನೈದದೆ ಉಳಿಯರು. ಶ್ರೀರಾಮನ ಎದುರಾಗಿ ನಿಂತ ರಾಕ್ಷಸರ ಶರೀರಗಳನ್ನು, ಗಂಗೆಯು ತಡಿಯನ್ನು ಹೊಯ್ದು ಕೆಡಹುವಂತೆ ಆತನ ಬಾಣಗಳು ಉಚ್ಚಳಿಸಿ ಕೆಡಹುವುವು. ದೇವಾಸುರರಿಂದ ಕೊಲ್ಲಲು ಶಕ್ಯನಲ್ಲದ ಶ್ರೀರಾಮ ನೊಡನೆ ವೈರವನ್ನು ಬೆಳೆಯಿಸಿ ನೀನು ಜೀವಸಹಿತನಾಗಿ ಉಳಿಯಲಾರೆ. ಯಾಗದಲ್ಲಿ ಯೂಪಸ್ತಂಭಕ್ಕೆ ಕಟ್ಟಿದ ಪಶುವು ಹೋಮಕಾಲ ಬರುವವರೆಗೆ ಜೀವಸಹಿತವಾಗಿರುವಂತೆ ನೀನು ನಿನ್ನ ಆಯುಶ್ಶೇಷ ವಿರುವವರೆಗೆ ಬಲಿಷ್ಠನಾದ ಶ್ರೀರಾಮನ ದೃಷ್ಟಿಗೆ ಗೋಚರವಾಗದಿರುವೆ. ಶ್ರೀರಾಮನು ರೋಷದಿಂದ ಪ್ರಜ್ವಲಿಸುವ ತನ್ನ ದೃಷ್ಟಿಯಿಂದ ನಿನ್ನನ್ನು ಕಂಡೊಡನೆಯೇ ದಹಿಸುವನು. ಆತನು ಕೋಪಿಸಿದರೆ ಅಂತರಿಕ್ಷದಲ್ಲಿರುವ ಚಂದ್ರನನ್ನಾದರೂ ಭೂಮಂಡಲಕ್ಕೆ ಕೆಡಹುವನು; ಸಮುದ್ರ ವನ್ನಾದರೂ ಒಣಗಿಸುವನು. ಅಂಥ ಶ್ರೀರಾಮನು ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ರಕ್ಷಿಸುವನಲ್ಲದೆ ಉಪೇಕ್ಷೆಮಾಡನು. ನಿನಗೆ ಬಂದ ಈ ಕೆಟ್ಟ ಬುದ್ಧಿಯು ನಿನ್ನ ಆಯುಸ್ಸಿಗೂ ಐಶ್ವರ್ಯಕ್ಕೂ ಬಲಕ್ಕೂ ಇಂದ್ರಿಯಕ್ಕೂ ಪೆಟ್ಟು ಕೊಡದಿರದು. ಯಾವಾಗಲೂ ಪತಿಯನ್ನಗಲದಿದ್ದ ನನಗೆ ಪತಿವಿಯೋಗವನ್ನು ಮಾಡಿದ ಪಾಪಕರ್ಮದಿಂದ ನಿನಗೆ ಹಾನಿಯುಂಟಾಗಿ ಲಂಕಾಪಟ್ಟಣಕ್ಕೆ ಒಡೆಯನಿಲ್ಲದೆ ಹೋಗುವುದು. ಶ್ರೀರಾಮನು ನಿನ್ನ ಗರ್ವವನ್ನೂ ನಿನ್ನ ಬಲವನ್ನೂ ನಿನ್ನ ಪರಾಕ್ರಮ ವನ್ನೂ ನಿನ್ನ ಏಳಿಗೆಯನ್ನೂ ಸಹಿಸನು. ಪ್ರಾಣಿಗಳಿಗೆ ಯಾವ ಸಮಯದಲ್ಲಿ ವಿನಾಶವು ಸಮೀಪಿಸು ವುದೋ ಆ ಸಮಯದಲ್ಲಿ ಅವರು ಮಾಡಬಾರದ ದುಷ್ಕರ್ಮಗಳನ್ನು ಮಾಡಿ ವಿನಾಶವನ್ನು ಪಡೆದು ಯಮಮಂದಿರವನ್ನೈದುವರು. ಈ ಪ್ರಕಾರ ನಿನಗೂ ನಿನ್ನನ್ನು ಹೊಂದಿರುವ ರಾಕ್ಷಸರಿಗೂ

ಲಂಕಾಪಟ್ಟಣಕ್ಕೂ ನಾಶಕಾಲ ಬಂದದ್ದರಿಂದ ಅಕೃತ್ಯವನ್ನು ಮಾಡಿ ಬಲಾತ್ಕಾರದಿಂದ ನನ್ನನ್ನು ಹಿಡಿದು ತಂದಿಟ್ಟೀಯೆ. ಮಹಾತ್ಮನಾದ ಶ್ರೀರಾಮನ ಪಟ್ಟದ ರಾಣಿಯಾದ ನನ್ನನ್ನು ಪಾಪಾತ್ಮನೂ ರಾಕ್ಷಸಾಧಮನೂ ಆದ ನೀನು ಮುಟ್ಟಲೂ ಯೋಗ್ಯನಲ್ಲ. ವಿಕಸಿತವೂ ಮನೋಹರವೂ ಆದ ಕಮಲಗಳ ಮಧ್ಯದಲ್ಲಿ ರಾಜಹಂಸಪಕ್ಷಿಯೊಡನೆ ವಿಹರಿಸಿಕೊಂಡಿರುವ ಹಂಸಪಕ್ಷಿಯು ಹುಲ್ಲಿನಗೂಡಿನಲ್ಲಿರುವ ನೀರುಕಾಗೆಯನ್ನು ಮುಟ್ಟದಿರುವಂತೆ, ಮಹಾತ್ಮನಾದ ಶ್ರೀರಾಮನೊಡನೆ ವಿಹರಿಸಿಕೊಂಡಿದ್ದ ನಾನು ರಾಕ್ಷಸಾಧಮನಾದ ನಿನ್ನನ್ನು ಕಣ್ಣೆತ್ತಿಯೂ ನೋಡೆನು. ನಾನು ನಿಂದಿತವಾದ ಶರೀರವನ್ನಾದರೂ ಬಿಡುವೆನಲ್ಲದೆ ನಿನ್ನ ಮಾತನ್ನು ಕೇಳೆನು " ಎಂದು ಕೋಪಾತಿಶಯದಿಂದ ನುಡಿದು ತಿರುಗಿ ಮಾತನಾಡದೆ ಸುಮ್ಮನಾದಳು.

ಆಮೇಲೆ ರಾವಣನು ಸೀತಾದೇವಿಗೆ ಅತ್ಯಂತ ಭಯವು ಹುಟ್ಟುವಂತೆ ಆಕೆಯನ್ನು ಕುರಿತು " ಎಲೇ ಸೀತೆ, ನಿನ್ನ ಕಲ್ಲೆದೆಯನ್ನು ಕಂಡೆನು. ನಾನು ಹನ್ನೆರಡು ತಿಂಗಳುಗಳ ಕಾಲ ನಿನ್ನನ್ನು ಪ್ರತೀಕ್ಷಿಸುತ್ತೇನೆ. ಅಷ್ಟರೊಳಗಾಗಿ ನೀನು ನನಗೆ ಅನುಕೂಲಳಾಗದಿದ್ದರೆ ಹನ್ನೆರಡು ತಿಂಗಳಾದ ಕೂಡಲೆ ನನ್ನ ಅಡಿಗೆಯವರು ನಿನ್ನ ಶರೀರವನ್ನು ತುಂಡುತುಂಡಾಗಿ ಕತ್ತರಿಸಿ ಬೆಳಗಿನೂಟಕ್ಕಾಗಿ ಪಾಕವಮಾಡುತ್ತಾರೆ " ಎಂದು ನುಡಿದು ರಾಕ್ಷಸಸ್ತ್ರೀಯರನ್ನು ಕರೆದು ಅತಿಕೋಪದಿಂದ " ಎಲೇ ಸ್ತ್ರೀಯರುಗಳಿರಾ, ಈಕೆಯ ಕಣ್ಣುಮುಂದೆ ರಕ್ತಮಾಂಸಾಹಾರಗಳನ್ನು ಮಾಡುತ್ತ ಭಯಂಕರವಾಗಿ ನಡೆಯುತ್ತ ಇವಳ ಅಹಂಕಾರವನ್ನು ಮುರಿಯಿರಿ " ಎಂದು ಆಜ್ಞಾಪಿಸಿದನು.

ಈ ಮಾತನ್ನು ಕೇಳಿ ಆ ರಾಕ್ಷಸಸ್ತ್ರೀಯರು ಕೈಮುಗಿದುಕೊಂಡು ಮಹಾಪ್ರಸಾದವೆಂದು ಆತನ ಆಜ್ಞೆಯನ್ನು ಶಿರಸಾವಹಿಸಿ ಸೀತಾದೇವಿಯನ್ನು ಸುತ್ತಿಕೊಂಡರು. ಆಗ ರಾವಣನು ಕೋಪಾತಿಶಯದಿಂದ ಭೂಮಂಡಲವು ಒಡೆಯುವಂತೆ ಕಾಲಿನಿಂದ ನೆಲವನ್ನು ಒದ್ದು ಆ ರಾಕ್ಷಸಸ್ತ್ರೀಯರನ್ನು ಕುರಿತು " ಎಲೈ ರಾಕ್ಷಸಿಯರಿರಾ, ಈ ಸೀತೆಯನ್ನು ಅಶೋಕವನಕ್ಕೆ ಹಿಡಿದುಕೊಂಡು ಹೋಗಿ ಯಾರೂ ಕಾಣದ ಸ್ಥಳದಲ್ಲಿಟ್ಟುಕೊಂಡು ಆದರಣೆ ಮಾಡುತ್ತ, ನಿಷ್ಠುರವಾಗಿ ನುಡಿದು ಬೆದರಿಸುತ್ತ, ಮೃದುನುಡಿಗಳಿಂದ ಸಂತಯಿಸುತ್ತ ನಯಭಯಗಳಿಂದ ಕಾಡಾನೆಯನ್ನು ವಶಮಾಡುವಂತೆ ನನ್ನ ವಶಮಾಡಿರಿ " ಎಂದು ಆಜ್ಞಾಪಿಸಿದನು.

ಆ ಮಾತನ್ನು ಕೇಳಿ ಆ ರಾಕ್ಷಸಸ್ತ್ರೀಯರು ಸೀತಾದೇವಿಯನ್ನು ನಾನಾ ಫಲಪುಷ್ಪಗಳಿಂದ ಪರಿಪೂರ್ಣವಾಗಿ ನಾನಾ ಬಗೆಯ ಪಕ್ಷಿಗಳ ಸ್ವರದಿಂದ ರಮಣೀಯವಾದ ಅಶೋಕವನಕ್ಕೆ ಕರೆದುಕೊಂಡು ಹೋದರು. ಆ ಅಶೋಕವನದಲ್ಲಿ ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಸೀತಾದೇವಿಯು ವ್ಯಾಘ್ರಗಳ ಮಧ್ಯದಲ್ಲಿರುವ ಚಿಗರಿಯಂತೆಯೂ ಬಲೆಗೆ ಸಿಕ್ಕಿದ ಹೆಣ್ಣುಹುಲ್ಲೆಯಂತೆಯೂ ದಿಕ್ಕುಗಾಣದೆ ಭಯಗ್ರಸ್ತಳಾದಳು. ಅವಳು ಭಯಂಕರವಾದ ದೃಷ್ಟಿಯುಳ್ಳ ಆ ರಾಕ್ಷಸಸ್ತ್ರೀಯರನ್ನು ನೋಡಿ ಚೈತನ್ಯಗುಂದಿ ಶೋಕಾಕ್ರಾಂತಳಾಗಿ ತನ್ನ ಪತಿಯಾದ ಶ್ರೀರಾಮನನ್ನೇ ತನ್ನ ಇಷ್ಟ ದೈವವೆಂದು ಧ್ಯಾನಮಾಡುತ್ತಿದ್ದಳು.



## ೫೭ ನೆಯ ಅಧ್ಯಾಯ

## ಶ್ರೀರಾಮನು ಲಕ್ಷ್ಮಣನನ್ನು ಸಂಧಿಸಿದ್ದು

ಇತ್ತ ಶ್ರೀರಾಮನು ಮಾಯಾಮೃಗರೂಪದಿಂದ ಬಂದಿದ್ದ ಕಾಮರೂಪಿಯಾದ ಮಾರೀಚನನ್ನು ಕೊಂದು ಸೀತಾದೇವಿಯನ್ನು ನೋಡಬೇಕೆಂಬ ಇಚ್ಛೆಯಿಂದ ತನ್ನ ಆಶ್ರಮಕ್ಕೆ ಬೇಗಬೇಗನೆ ಹಿಂದಿರುಗಿ ಬರುತ್ತಿದ್ದನು. ಆಗ ಹಿಂದುಗಡೆಯಲ್ಲಿ ಒಂದು ನರಿಯು ಕೂಗುತ್ತಿರಲು ಭಯಂಕರವಾದ ಆ ಸ್ವರವನ್ನು ಕೇಳಿ ಮನಸ್ಸಿನಲ್ಲಿ ಹೀಗೆ ಚಿಂತಿಸಲಾರಂಭಿಸಿದನು: "ಹಿಂದುಗಡೆಯಲ್ಲಿ ನರಿಯು ಕೂಗುವುದಕ್ಕೆ ಏನಾದರೂ ಕಾರಣವಿರಬೇಕು. ಸೀತಾದೇವಿಯು ಸುಖದಲ್ಲಿದ್ದಾಳೆಯೋ ಇಲ್ಲವೋ! ನಾನು ಮೃಗರೂಪನಾದ ಮಾರೀಚನನ್ನು ಕೊಂದಾಗ ಆತನು 'ಹಾ ಲಕ್ಷ್ಮಣಾ —ಹತನಾದೆ!' ಎಂದು ಕೂಗಿಕೊಂಡನು. ಅದನ್ನು ಕೇಳಿ ಸೀತೆಯು ನನ್ನ ಧ್ವನಿಯೆಂದೆಣಿಸಿ ಕಂಗೆಟ್ಟು ಲಕ್ಷ್ಮಣನನ್ನು ಕಳುಹಿಸಿರಬೇಕು. ಆತನು ಸೀತಾದೇವಿಯನ್ನು ಒಂಟಿಯಾಗಿ ಬಿಟ್ಟು ಇಲ್ಲಿಗೆ ಹೊರಟಿರಬೇಕು. ಈ ಸಮಯದಲ್ಲಿ ರಾಕ್ಷಸರು ಸೀತಾದೇವಿಯನ್ನು ಕೊಂದಿರಬೇಕು. ಮಾರೀಚನು ಮಾಯಾಮೃಗರೂಪವಾಗಿ ನನ್ನ ಆಶ್ರಮದ ಮುಂದೆ ಸುಳಿದಾಡಿ ಸೀತಾದೇವಿಗೆ ಆಸೆಯನ್ನು ಹುಟ್ಟಿಸಿ ನನ್ನನ್ನು ಆಶ್ರಮದಿಂದ ಬಹುದೂರ ಕರೆದುಕೊಂಡು ಹೋದನು ಸೀತಾದೇವಿಯನ್ನು ಬಿಟ್ಟುಬಂದ ಲಕ್ಷ್ಮಣನಿಗೆ ವನದಲ್ಲಿ ಏನಾಯಿತೋ! ಸೀತೆಗೆ ಏನಾಯಿತೋ! ನಾನು ಜನಸ್ಥಾನದಲ್ಲಿ ಬಹುಮಂದಿ ರಾಕ್ಷಸರನ್ನು ಕೊಂದು ರಾಕ್ಷಸರೊಡನೆ ವಿರೋಧವನ್ನು ಕಟ್ಟಿಕೊಂಡೆನು. ಈಗ ಬಹಳ ದುರ್ನಿಮಿತ್ತಗಳು ಕಂಡುಬರುತ್ತಿವೆ" ಎಂದು ಚಿಂತಿಸುತ್ತ ಜನಸ್ಥಾನಕ್ಕೆ ಹಿಂದಿರುಗುತ್ತಿದ್ದನು. ಆಗ ಅಲ್ಲಿದ್ದ ಮೃಗಪಕ್ಷಿಗಳು ಅವನ ವಾಮಭಾಗಕ್ಕೆ ಬಂದು ಭಯಂಕರವಾದ ಧ್ವನಿಯನ್ನು ಮಾಡಿದವು. ಆ ದುರ್ನಿಮಿತ್ತಗಳನ್ನು ಕಂಡು ಅತಿ ಚಿಂತಾಕ್ರಾಂತನಾಗಿ ಜನಸ್ಥಾನದಲ್ಲಿ ಸೀತಾದೇವಿಯನ್ನೂ ಲಕ್ಷ್ಮಣನನ್ನೂ ಯಾವಾಗ ಕಾಣುವೆನೋ ಎಂದು ವೇಗದಿಂದ ಬರುತ್ತಿದ್ದನು. ಆಗ ಎದುರಿಗೆ ಮುಖಕಾಂತಿಗುಂದಿ ಬರುತ್ತಿದ್ದ ಲಕ್ಷ್ಮಣನನ್ನು ಕಂಡನು. ಲಕ್ಷ್ಮಣನು ಶ್ರೀರಾಮನ ಸಮೀಪಕ್ಕೆ ಬಂದು ಆತನನ್ನು ನೋಡಿ ದುಃಖಪರವಶನಾಗಿ ಚಿಂತೆಗೀಡಾದನು. ಆಮೇಲೆ ಶ್ರೀರಾಮನು ಅನೇಕ ರಾಕ್ಷಸರಿರುವ ವನಮಧ್ಯದಲ್ಲಿ ಸೀತಾದೇವಿಯನ್ನು ಏಕಾಕಿಯಾಗಿ ಬಿಟ್ಟುಬಂದ ಲಕ್ಷ್ಮಣನನ್ನು ಕಂಡು ಸಂಶಯಪಟ್ಟು ಆತನ ಎಡದ ಕೈಯನ್ನು ಹಿಡಿದುಕೊಂಡು ಹೀಗೆಂದನು: "ಲಕ್ಷ್ಮಣ, ನೀನು ಸೀತೆಯನ್ನು ಬಿಟ್ಟುಬಂದದ್ದು ಅಕೃತ್ಯವಾಯಿತು ಸೀತಾದೇವಿಯು ಸುಖದಲ್ಲಿದ್ದಾಳೋ ಇಲ್ಲವೋ ತಿಳಿಯದು. ಲಕ್ಷ್ಮಣ, ನನ್ನ ಮನಸ್ಸಿಗೆ ರಾಕ್ಷಸರು ಸೀತಾದೇವಿಯನ್ನು ಭಕ್ಷಣಮಾಡಿದ ಹಾಗೆ ತೋರುತ್ತದೆ. ಹಾಗಿಲ್ಲದಿದ್ದರೆ ಅವಳನ್ನು ಯಾರಾದರೂ ಎತ್ತಿಕೊಂಡು ಹೋಗಿರಬೇಕು. ನನಗೆ ಅಮಂಗಲಸೂಚಕವಾದ ದುರ್ನಿಮಿತ್ತಗಳಾದವು. ಲಕ್ಷ್ಮಣ, ಸೀತಾದೇವಿಯನ್ನು ಜೀವಸಹಿತವಾಗಿ ಕಾಣುವೆವೋ ಕಾಣೆವೋ ತಿಳಿಯದು. ಮೃಗಪಕ್ಷಿಗಳು ಭಯಂಕರವಾಗಿ ಧ್ವನಿಮಾಡುತ್ತಿವೆ ಮಾಯಾಮೃಗರೂಪನಾದ ಮಾರೀಚನು ನನಗೆ ಆಸೆಯನ್ನು ಹುಟ್ಟಿಸಿ ಬಹುದೂರ ಕರೆದುಕೊಂಡು ಹೋಗಿ ನನ್ನ ಶರಹತಿಯಿಂದ ಮೃತನಾದನು. ನನಗೂ ಸಂಚಾರದಿಂದ ಬಹಳ ಆಯಾಸವುಂಟಾಗಿದೆ. ಇನ್ನು ನನ್ನ ಮನಸ್ಸಿಗೆ ಆತಂಕ ತಪ್ಪದು. ನನ್ನ ಎಡಗಣ್ಣು ಬಹಳ ಹಾರುತ್ತಿದೆ. ಸೀತಾದೇವಿಯು ಮೃತಳಾಗಿರಬೇಕು. ಇಲ್ಲವೆ, ಆಕೆಯನ್ನು ಯಾರಾದರೂ ಅಪಹರಿಸಿಕೊಂಡು ಹೋಗಿರಬೇಕು. ಅಥವಾ ಆಕೆಗೆ ಏನಾದರೂ ಉಪದ್ರವ ಸಂಭವಿಸಿರಬೇಕು" ಎಂದು ಹೇಳಿದನು.

---

## ೫೮ ನೆಯ ಅಧ್ಯಾಯ

## ಶ್ರೀರಾಮನು ಲಕ್ಷ್ಮಣನನ್ನು ನಿಂದಿಸಿದ್ದು

ಆ ಬಳಿಕ ಶ್ರೀರಾಮನು ದುಃಖದಿಂದ ಕುಗಿದ್ದ ಲಕ್ಷ್ಮಣನನ್ನು ಕುರಿತು ಹೀಗೆ ಹೇಳತೊಡಗಿದನು : "ಎಲೈ ಲಕ್ಷ್ಮಣ, ಸೀತಾದೇವಿಯನ್ನು ಬಿಟ್ಟು ನೀನು ಬರಬಹುದೆ? ನಾವು ದಂಡಕಾರಣ್ಯದಲ್ಲಿ ಮೂವರಾಗಿದ್ದೆವು. ಈಗ ಇಬ್ಬರಾದೆವು. ಸೀತೆಯು ಎಲ್ಲಿದ್ದಾಳೊ! ರಾಜ್ಯಭ್ರಷ್ಟನಾಗಿ ದೈನ್ಯ ವೃತ್ತಿಯಿಂದ ದಂಡಕಾರಣ್ಯದಲ್ಲಿ ಸಂಚರಿಸಿಕೊಂಡಿರುವ ನನ್ನ ದುಃಖವನ್ನು ಪರಿಹರಿಸುವ ಶೋಭನಾಂಗಿಯಾದ ಸೀತಾದೇವಿಯು ಎಲ್ಲಿಗೆ ಹೋದಳೊ! ನಾನು ಸೀತಾದೇವಿಯನ್ನುಳಿದು ಸಮಸ್ತ ರಾಜ್ಯಾಧಿಪತ್ಯವನ್ನಾದರೂ ದೇವಲೋಕಾಧಿಪತ್ಯವನ್ನಾದರೂ ಕೊಟ್ಟರೂ ಬಯಸುವವನಲ್ಲ. ನನ್ನ ಪ್ರಿಯಳಾದ ಸೀತಾದೇವಿಯು ಇದ್ದಾಳೋ ಇಲ್ಲವೊ! ಲಕ್ಷ್ಮಣ, ಸೀತಾದೇವಿಯ ನಿಮಿತ್ತವಾಗಿ ನಾನು ಶರೀರತ್ಯಾಗವನ್ನು ಮಾಡಿದ ಮೇಲೆ, ನೀನು ದುಃಖದಿಂದ ದೇಶತ್ಯಾಗವನ್ನು ಮಾಡಿದರೆ ಕೈಕೇಯಿದೇವಿಯು ಅಕಂಟಕವಾಗಿ ರಾಜ್ಯವನ್ನು ಪಡೆದು ಸುಖದಿಂದ ಇದ್ದಾಳು. ಕೌಸಲ್ಯಾ ದೇವಿಯು ಮೃತಪುತ್ರಳಾಗಿ ಶೋಕದಿಂದ ದೀನಳಾಗಿ ಕೈಕೇಯಿದೇವಿಯು ಹೇಳಿದಂತೆ ಇರಬೇಕಾದೀತಲ್ಲವೆ? ಲಕ್ಷ್ಮಣ, ಸೀತಾದೇವಿಯು ಜೀವದಿಂದ ಆಶ್ರಮದಲ್ಲಿದ್ದರೆ ನಾನು ಆ ಆಶ್ರಮವನ್ನು ಪ್ರವೇಶಿಸುವೆನು. ಆ ದೇವಿಯು ಲಯವಾದ ಪಕ್ಷದಲ್ಲಿ ನಾನು ಪ್ರಾಣಗಳನ್ನು ಬಿಡುವೆನು. ಲಕ್ಷ್ಮಣ, ನಾನು ಆಶ್ರಮಕ್ಕೆ ಹೋದರೆ ಸೀತಾದೇವಿಯು ಮುಗುಳುನಗೆಯೊಡಗೂಡಿ ನನ್ನೊಡನೆ ಸಂಭಾಷಣೆಮಾಡದ ಪಕ್ಷದಲ್ಲಿ ನಾನು ಬದುಕಲಾರೆ. ಲಕ್ಷ್ಮಣ, ಸೀತಾದೇವಿಯು ಜೀವದಿಂದಿದ್ದಾಳೊ ಇಲ್ಲವೊ ಹೇಳು. ನೀನು ಮೈಮರೆತಿದ್ದಾಗ ರಾಕ್ಷಸರು ಆಕೆಯನ್ನು ಭಕ್ಷಣ ಮಾಡಿದರೋ ಏನೋ ತಿಳಿಯಲಿಲ್ಲ. ಸುಕುಮಾರಾಂಗಿಯಾದ ಸೀತಾದೇವಿಯು ನನ್ನ ವಿಯೋಗ ದುಃಖದಿಂದ ಕಂಗೆಟ್ಟು ಶೋಕಿಸುತ್ತಿದ್ದಾಳೆಯೆ? ಮಾಯಾಮೃಗವಾಗಿ ಬಂದ ದುರಾತ್ಮನಾದ ಮಾರೀಚನು ನನ್ನ ಶರಹತಿಯಿಂದ ಗಾಯಪಡೆದು ಬೀಳುವಾಗ 'ಹಾ ಲಕ್ಷ್ಮಣಾ! ಎಂದು ಉಚ್ಚ ಸ್ವರದಲ್ಲಿ ಕೂಗಿ ಸತ್ತನು. ಆತನ ಧ್ವನಿಯಿಂದ ನಿನಗೂ ಭಯ ಹುಟ್ಟಿರಬೇಕು. ಸೀತಾದೇವಿಯೂ ಭಯಪಟ್ಟು ನಿನ್ನನ್ನು ಕಳುಹಿಸಲು ನೀನು ಶೀಘ್ರವಾಗಿ ಬಂದಿದ್ದೀಯೆ. ಲಕ್ಷ್ಮಣ, ನೀನು ವನ ಮಧ್ಯದಲ್ಲಿ ಸೀತಾದೇವಿಯನ್ನು ಒಂಟಿಯಾಗಿ ಬಿಟ್ಟು ಬಂದದ್ದು ಸರ್ವಥಾ ಯುಕ್ತವಲ್ಲ. ನಾನು ಖರನನ್ನು ಕೊಂದದ್ದರಿಂದ ರಾಕ್ಷಸರೆಲ್ಲರೂ ಕೂಡಿ ನನಗೆ ಉಪದ್ರವ ಕೊಡಲು ಸಮಯವನ್ನು ನಿರೀಕ್ಷಿಸುತ್ತಿದ್ದಾರೆ. ಅಂಥ ರಾಕ್ಷಸರಿಗೆ ನೀನು ಅವಕಾಶವನ್ನು ಕೊಟ್ಟು ಸೀತಾದೇವಿಯನ್ನು ಬಿಟ್ಟು ಬಂದೆ. ರಾಕ್ಷಸರು ಸೀತೆಯನ್ನು ಕೊಂದಿರಬೇಕು, ಸಂಶಯವಿಲ್ಲ. ಅಕಟಕಟಾ! ಇಂಥ ದುಃಖವು ಪ್ರಾಪ್ತವಾದ ಪಕ್ಷದಲ್ಲಿ ಮುಂದೆ ನಾವು ಮಾಡಬೇಕಾದ ಕೃತ್ಯವಾದರೂ ಏನು?" ಎಂದು ಸೀತಾ ದೇವಿಯ ಧ್ಯಾನವನ್ನು ಮಾಡುತ್ತ, ಕಂಗೆಟ್ಟಿದ್ದ ಲಕ್ಷ್ಮಣನನ್ನು ಜರಿದು ನುಡಿಯುತ್ತ, ಬಳಲಿಕೆ ಯಿಂದಲೂ ಕ್ಷುಧೆಯಿಂದಲೂ ತೃಷೆಯಿಂದಲೂ ಕಂಗೆಟ್ಟು ತನ್ನ ಆಶ್ರಮಕ್ಕೆ ಹಿಂದಿರುಗಿದನು. ಅಲ್ಲಿ ಸೀತಾದೇವಿಯನ್ನು ಕಾಣದೆ ಅವಳು ಸಂಚರಿಸುತ್ತಿದ್ದ ಸ್ಥಳಗಳಲ್ಲೆಲ್ಲ ಹುಡುಕಿ ಎಲ್ಲಿಯೂ ಕಾಣದೆ ಸರ್ವಥಾ ಸೀತಾದೇವಿಯು ನಷ್ಟವಾದಳೆಂದು ಮನಸ್ಸಿನಲ್ಲೆಣಿಸಿ ಅತ್ಯಂತ ದುಃಖಾಕ್ರಾಂತನಾದನು.

## ಲಕ್ಷ್ಮಣನು ಸೀತಾದೇವಿಯನ್ನು ಬಿಟ್ಟುಬಂದ ಕಾರಣವನ್ನು ಹೇಳಿದ್ದು

ಆಮೇಲೆ ಶ್ರೀರಾಮನು ತನ್ನ ಆಶ್ರಮದಲ್ಲಿ ಸೀತಾದೇವಿಯನ್ನು ಒಂಟಿಯಾಗಿ ಬಿಟ್ಟುಬಂದ ಲಕ್ಷ್ಮಣನನ್ನು ಕುರಿತು ದುಃಖಾತಿಶಯದಿಂದ ಈ ಪ್ರಕಾರ ಹೇಳಿದನು : "ಲಕ್ಷ್ಮಣ, ನಾನು ಸೀತಾದೇವಿಯ ರಕ್ಷಣಾರ್ಥವಾಗಿ ನಿನ್ನನ್ನು ಬಿಟ್ಟುಬಂದದ್ದರಿಂದ ನಾನಿಲ್ಲದಾಗ ಆ ದೇವಿಯನ್ನು ಒಂಟಿಯಾಗಿ ಬಿಟ್ಟುಬಂದದ್ದು ಯುಕ್ತವಲ್ಲ. ನೀನು ಏಕಾಕಿಯಾಗಿ ಬಂದಾಗಲೇ ಸೀತೆಯು ಏನಾದಳೋ ಎಂದು ಮನಸ್ಸಿನಲ್ಲಿ ವ್ಯಥೆಯನ್ನುಂಟುಮಾಡುತ್ತಿದ್ದ ಸಂಶಯವು ಯಥಾರ್ಥವಾಯಿತು. ಲಕ್ಷ್ಮಣ, ಸೀತಾದೇವಿಯನ್ನುಳಿದು ನೀನು ಬಂದದ್ದನ್ನು ದೂರದಲ್ಲಿ ಕಂಡಾಗಲೇ ನನ್ನ ಎದೆಯಲ್ಲಿ ನಡುಕ ಹುಟ್ಟಿತು. ಎಡಗಣ್ಣು ಹಾರಿತು. ನೀನು ಹೀಗೆ ಮಾಡಬಹುದೆ ?" ಎಂದು ಕೇಳಿದನು.

ಲಕ್ಷ್ಮಣನು ಅತ್ಯಂತ ವ್ಯಥೆಯಿಂದ ಶ್ರೀರಾಮನನ್ನು ಕುರಿತು ಹೀಗೆಂದನು : "ಶ್ರೀರಾಮ, ನಾನು ಸ್ವತಂತ್ರನಾಗಿ ಸೀತಾದೇವಿಯನ್ನು ಬಿಟ್ಟು ಬರಲಿಲ್ಲ. ಆ ದೇವಿಯು ಅತ್ಯಂತ ನಿಷ್ಠುರವಾಗಿ ನುಡಿದು ನನ್ನನ್ನು ಕಳುಹಿಸಿದಳು. ಆದ್ದರಿಂದ ನಿನ್ನ ಸಮೀಪಕ್ಕೆ ಬಂದೆನು. ಮಾಯಾಮೃಗ ರೂಪನಾದ ಮಾರೀಚನು ಬೀಳುವಾಗ ನಿನ್ನ ಧ್ವನಿಗೆ ಸಮಾನವಾದ ಧ್ವನಿಯಿಂದ 'ಹಾ ಲಕ್ಷ್ಮಣಾ—ಹಾ ಸೀತೇ—ತ್ರಾಹಿ ತ್ರಾಹಿ!' ಎಂದು ಕೂಗಿದ್ದನ್ನು ಸೀತಾದೇವಿಯು ಕೇಳಿ ನಿನ್ನ ಮೇಲಿನ ಸ್ನೇಹಾತಿಶಯದಿಂದ ಅಳುತ್ತ ನನ್ನನ್ನು ನಿನ್ನ ಬಳಿಗೆ ಅಟ್ಟಿದಳು. 'ಆ ದೇವಿಯು ನನ್ನನ್ನು ಹೋಗಬೇಕೆಂದು ಒತ್ತಾಯಪಡಿಸಿದಳು. ನಾನು ಆಕೆಯನ್ನು ಕುರಿತು 'ಎಲೌ ಸೀತಾದೇವಿ, ಲೋಕದಲ್ಲಿ ಶ್ರೀರಾಮನಿಗೆ ಭಯವನ್ನುಂಟುಮಾಡುವ ರಾಕ್ಷಸರಿಲ್ಲ. ನೀನು ಸ್ವಸ್ಥಚಿತ್ತಳಾಗಿರು. ಮಹಾ ಪ್ರತಾಪಶಾಲಿಯಾಗಿ ಅತ್ಯಂತ ಅಭಿಮಾನಿಯಾದ ಶ್ರೀರಾಮನು 'ತ್ರಾಹಿ ತ್ರಾಹಿ' ಎಂಬ ನಿರರ್ಥಕವಾದ ನೀಚವಾಕ್ಯವನ್ನು ನುಡಿಯನು. ಆ ಸ್ವಾಮಿಯು ಸಮಸ್ತ ದೇವತೆಗಳನ್ನೂ ರಕ್ಷಿಸುವ ಸಾಮರ್ಥ್ಯವುಳ್ಳವನು. ಯಾವನೋ ನೀಚರಾಕ್ಷಸನು ನನ್ನ ಅಣ್ಣನ ಧ್ವನಿಯನ್ನನುಕರಿಸಿ ಹೀಗೆ ಕೂಗಿದ್ದಾನೆ. ಸಾಮಾನ್ಯ ಸ್ತ್ರೀಯರು ನುಡಿಯುವಂತೆ ಇಂಥ ಮಾತನ್ನು ನುಡಿಯಬೇಡ. ಭಯವನ್ನು ಬಿಟ್ಟು ಸ್ವಸ್ಥಚಿತ್ತದಿಂದಿರು. ಶ್ರೀರಾಮನನ್ನು ಸೋಲಿಸುವ ಧೀರನು ಇದುವರೆಗೆ ಹುಟ್ಟಿಲ್ಲ, ಮುಂದೆ ಹುಟ್ಟಲಾರನು. ಶ್ರೀರಾಮನು ಸಮರಾಂಗಣದಲ್ಲಿ ಇಂದ್ರಾದಿದೇವತೆಗಳಿಗೂ ಹೆದರುವವನಲ್ಲ" ಎಂದು ಎಷ್ಟುಪ್ರಕಾರವಾಗಿ ಹೇಳಿದರೂ ನನ್ನ ಮಾತನ್ನು ಕೇಳದೆ ಅಜ್ಞಾನದಿಂದ ಕಣ್ಣೀರು ಬಿಡುತ್ತ ಲೋಕದಲ್ಲಿ ನುಡಿಯಬಾರದ ದುರ್ವಚನಗಳಿಂದ ನನ್ನನ್ನು ನಿಂದಿಸಿದಳು. ಅವಳು 'ಎಲೈ ಲಕ್ಷ್ಮಣ, ನೀನು ನನ್ನ ಮಾತಿಗೆ ಪಾಪಬುದ್ಧಿಯಿಂದ ಪ್ರತ್ಯುತ್ತರವನ್ನು ಕೊಡುತ್ತಿರುವೆ. ನಿನ್ನ ಅಣ್ಣನಾದ ಶ್ರೀರಾಮನು ನಾಶಹೊಂದಲೆಂದೂ ಅನಂತರ ನನ್ನನ್ನು ಅಪಹರಿಸಬೇಕೆಂದೂ ಬಯಸಿದ್ದೀಯೆ. ಅಥವಾ ಭರತನು ನನ್ನನ್ನು ಅಪಹರಿಸಿಕೊಂಡು ಬರಹೇಳಿ ನಿನ್ನನ್ನು ಕಳುಹಿಸಿರಬೇಕು! ಹಾ ಲಕ್ಷ್ಮಣಾ ಎಂದು ಮೊರೆಯಿಡುತ್ತಿರುವ ಶ್ರೀರಾಮನನ್ನು ಹುಡುಕಿಕೊಂಡು ಹೋಗದಿರುವ ನೀನು ಶತ್ರುವೇ ಸರಿ. ಮಿತ್ರನಂತೆ ಕಪಟದಿಂದ ನನ್ನ ನಿಮಿತ್ತವಾಗಿ ಶ್ರೀರಾಮನನ್ನು ಕೂಡಿಕೊಂಡು ಬಂದು ಆತನನ್ನು ಕೊಂದು ನನ್ನನ್ನು ವಶಮಾಡಿಕೊಂಡು ಹೋಗಬೇಕೆಂದಿದ್ದೀಯೆ. ಆದ್ದರಿಂದಲೇ ಆಪತ್ತನ್ನು ಹೊಂದಿದ ಆತನ ಸಮೀಪಕ್ಕೆ ಹೋಗದಿದ್ದೀಯೆ, ಎಂದು ಅನೇಕ ನಿಷ್ಠುರವಚನಗಳನ್ನು ನುಡಿದಳು. ನಾನು ಕೋಪಾತಿಶಯದಿಂದ ಆಶ್ರಮದಿಂದ ಹೊರಟು ಬಂದೆನು" ಎಂದು ನುಡಿದನು.

ಶ್ರೀರಾಮನು ವಿರಹತಾಪದಿಂದ ಪರಿತಪಿಸುತ್ತ ಲಕ್ಷ್ಮಣನನ್ನು ಕುರಿತು ಹೇಳಿದನು: "ಲಕ್ಷ್ಮಣ, ನೀನು ನನ್ನ ಸಾಮರ್ಥ್ಯವನ್ನೂ ಸಾಹಸವನ್ನೂ ರಣರಂಗದಲ್ಲಿ ಸಮಸ್ತ ರಾಕ್ಷಸರನ್ನೂ ಸಂಹರಿಸಬಲ್ಲ ಬಲವನ್ನೂ ತಿಳಿದಿದ್ದೀಯೆ. ಆದರೂ ಸೀತೆಯೊಬ್ಬಳನ್ನೇ ಬಿಟ್ಟು ಬಂದಿದ್ದೀಯೆ. ನೀನು ಸ್ತ್ರೀಯ ಮಾತನ್ನು ಕೇಳಿ ಮುಂದಿನ ಕಾರ್ಯವನ್ನು ಯೋಚಿಸದೆ ಸೀತೆಯನ್ನು ಬಿಟ್ಟು ಬಂದದ್ದು ನನ್ನ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ಸೀತಾದೇವಿಯ ಮಾತನ್ನು ಕೇಳಿ ಕೋಪವಶನಾಗಿ ನನ್ನ ಮಾತನ್ನು ಮೀರಿದೆ. ಮಾರೀಚನು ಮಾಯಾಮೃಗವಾಗಿ ನನ್ನನ್ನು ಪ್ರಲೋಭಗೊಳಿಸಲು ನಾನು ಲೀಲಾಮಾತ್ರದಿಂದ ನನ್ನ ಬಿಲ್ಲಿನಲ್ಲಿ ಅಂಬನ್ನು ಹೂಡಿ ಎಸೆದೆನು. ಆ ಬಾಣದಿಂದ ಗಾಯಪಡೆದು ಕಂಗೆಟ್ಟು ದೈನ್ಯಸ್ವರದಿಂದ 'ಹಾ ಲಕ್ಷ್ಮಣಾ' ಎಂದು ಕೂಗುತ್ತ ಮೃಗರೂಪವನ್ನು ಬಿಟ್ಟು ರಾಕ್ಷಸಶರೀರವನ್ನು ಪಡೆದು ಪ್ರಾಣವನ್ನು ಬಿಟ್ಟನು. ನೀನೂ ಆ ರಾಕ್ಷಸನ ಮಾಯೆಗೊಳಗಾಗಿ ಆತನ ಧ್ವನಿಯನ್ನು ನನ್ನ ಧ್ವನಿಯೆಂದೆಣಿಸಿ ಸೀತೆಯನ್ನು ಒಬ್ಬಂಟಿಗಳನ್ನಾಗಿ ಬಿಟ್ಟು ನನ್ನ ಸಮೀಪಕ್ಕೆ ಬಂದದ್ದು ಸರ್ವಥಾ ಯುಕ್ತವಲ್ಲ" ಎಂದು ನುಡಿದನು.

## ೬೦ ನೆಯ ಅಧ್ಯಾಯ

## ಶ್ರೀರಾಮನ ವಿರಹಸಂತಾಪ

ಈ ಪ್ರಕಾರ ಸೀತಾದೇವಿಗೋಸ್ಕರ ಹಂಬಲಿಸುತ್ತಿದ್ದ ಶ್ರೀರಾಮನ ಎಡಗಣ್ಣು ಹಾರತೊಡಗಿತು. ದಾರಿಯಲ್ಲಿ ಎಡವಿದನು. ಮೈಯಲ್ಲಿ ನಡುಕ ಹುಟ್ಟಿತು. ಹೀಗೆ ಅನೇಕ ದುಃಶಕುನಗಳಾಗುತ್ತಿರುವುದನ್ನು ಗಮನಿಸಿ ಶ್ರೀರಾಮನು ಈ ಸಂದರ್ಭದಲ್ಲಿ ಸೀತೆಯು ಕ್ಷೇಮದಲ್ಲಿರಬಹುದೆ? ಎಂದು ಹೇಳಿಕೊಂಡನು. ಸೀತೆಯನ್ನು ನೋಡಬೇಕೆಂಬ ತವಕವು ಬಹಳವಾಯಿತು. ಬೇಗಬೇಗನೆ ಆಶ್ರಮದ ಕಡೆಗೆ ಧಾವಿಸುತ್ತ ಬಂದನು. ಆಶ್ರಮಕ್ಕೆ ಬಂದು ಸುತ್ತಲೂ ನೋಡುತ್ತ ಅಲೆಯುತ್ತ ಪರ್ಣಶಾಲೆಯನ್ನು ಪ್ರವೇಶಿಸಿ ಸೀತೆಯು ಇಲ್ಲದ್ದನ್ನು ಕಂಡು ಹುಚ್ಚನಂತಾದನು. ಹೇಮಂತ ಋತುವಿನಲ್ಲಿ ಕಮಲವಿಲ್ಲದ ತಾವರೆಯಬಳ್ಳಿಯಂತೆ ಸೀತಾವಿಯುಕ್ತವಾದ ಪರ್ಣಶಾಲೆಯು ಶೋಭಾಹೀನವಾಗಿತ್ತು. ಮರಗಳಲ್ಲಿದ್ದ ಹೂವುಗಳು ಬಾಡಿದ್ದುವು. ಪಕ್ಷಿಗಳು ನಿಃಶಬ್ದವಾಗಿದ್ದುವು. ಎಡಬಲವೆಲ್ಲವೂ ಕಾಂತಿಹೀನವಾಗಿ ಅಳುತ್ತಿರುವಂತೆ ಭಾಸವಾಯಿತು. ಆಶ್ರಮದಲ್ಲಿ ಕುಳಿತುಕೊಳ್ಳುವ ಚರ್ಮಗಳೂ, ಚಾಪೆಗಳೂ, ದರ್ಭೆಗಳೂ ಚೆಲ್ಲಾಪಿಲ್ಲಿಯಾಗಿ ಹರಡಿದ್ದುವು. ಶ್ರೀರಾಮನಿಗೆ ದುಃಖವು ಉಕ್ಕಿಬಂದು "ಅಯ್ಯೊ! ಸೀತೆ ಇಲ್ಲ. ಅವಳನ್ನು ಯಾರಾದರೂ ಅಪಹರಿಸಿರಬಹುದೆ? ಅವಳು ಮೃತಳಾಗಿರಬಹುದೆ? ರಾಕ್ಷಸರೇನಾದರೂ ತಿಂದುಹಾಕಿರಬಹುದೆ? ಅಥವಾ ಭಯದಿಂದ ಎಲ್ಲಾದರೂ ಅಡಗಿಕೊಂಡಿರಬಹುದೆ? ಅಥವಾ ಸರೋವರಕ್ಕೆ ವಿನೋದಾರ್ಥವಾಗಿ ಹೋಗಿರಬಹುದೆ? ಇಲ್ಲವೆ, ನೀರನ್ನು ತರಲು ನದಿಗೆ ಹೋಗಿರಬೇಕು" ಎಂದು ಹೇಳಿಕೊಳ್ಳುತ್ತ ಸಕಲ ಪ್ರದೇಶಗಳನ್ನೂ ಹುಡುಕಿದನು. ಸೀತೆಯು ಕಾಣಲಿಲ್ಲ. ಅತ್ತು ಅತ್ತು ಕಣ್ಣು ಕೆಂಪಾಯಿತು. ಮರದಿಂದ ಇನ್ನೊಂದು ಮರದ ಬಳಿಗೆ, ಬೆಟ್ಟದಿಂದ ಇನ್ನೊಂದು ಬೆಟ್ಟದ ಬಳಿಗೆ, ನದಿಯಿಂದ ಇನ್ನೊಂದು ನದಿಯ ಸಮೀಪಕ್ಕೆ ಓಡುತ್ತ ಹುಡುಕುತ್ತ ಶ್ರೀರಾಮನು ಶೋಕಸಮುದ್ರದಲ್ಲಿ ಮುಳುಗಿಹೋದನು.

ಆತನು ಕಂಡ ಕಂಡ ವೃಕ್ಷಗಳನ್ನು ಉದ್ದೇಶಿಸಿ 'ನೀವು ಸೀತೆಯನ್ನು ಕಂಡಿರಾ?' ಎಂದು ಉನ್ಮತ್ತನಂತೆ ವಿಚಾರಿಸತೊಡಗಿದನು. "ಎಲೈ ಕದಂಬವೃಕ್ಷವೆ, ನಿನ್ನನ್ನು ಪ್ರೀತಿಸುತ್ತಿದ್ದ ನನ್ನ

ಜಾನಕಿಯನ್ನು ಕಂಡೆಯಾ ? ಬಿಲ್ವವೃಕ್ಷವೆ, ನಿನ್ನ ಚಿಗುರಿನಂತೆ ಹೊಳೆಯುವ ಶರೀರಕಾಂತಿಯುಳ್ಳ ನನ್ನ ಸೀತೆಯನ್ನು ನೋಡಿದೆಯಾ ? ಅವಳು ಹಳದಿಯ ಬಣ್ಣದ ರೇಶ್ಮೆಯ ಸೀರೆಯನ್ನುಟ್ಟಿದ್ದಳು. ಎಲೈ ಮತ್ತಿಯಮರವೆ, ಜನಕಪುತ್ರಿಯನ್ನು ನೋಡಿದೆಯಾ ? ಅವಳು ಜೀವಿಸಿದ್ದಾಳೆಯೆ ? ಹೇಳು. ಲಕ್ಷ್ಮಣ, ಈ ತಿಲಕವೃಕ್ಷದ ಬಳಿ ದುಂಬಿಗಳು ಆನಂದದಿಂದ ಹಾಡುತ್ತಿವೆ. ಈ ವೃಕ್ಷಕ್ಕೆ ಸೀತೆಯ ಸುದ್ದಿ ಗೊತ್ತಿರಬೇಕು. ಅಶೋಕವೃಕ್ಷವೆ, ಸೀತೆಯ ವೃತ್ತಾಂತವನ್ನು ಹೇಳಿ ನನ್ನನ್ನೂ ಅಶೋಕನನ್ನಾಗಿ ಮಾಡುವೆಯಾ ? ಓ ತಾಳೆಯಮರವೆ, ತಾಳೆಯ ಹಣ್ಣಿನಂತೆ ಸ್ತನಗಳುಳ್ಳ ನನ್ನ ಸೀತೆಯನ್ನು ನೋಡಿದ್ದರೆ ದಯವಿಟ್ಟು ಅವಳ ಸುದ್ದಿಯನ್ನು ಹೇಳು. ಓ ಜಂಬುನೇರಿಳೆಯ ಮರವೆ, ಜಾಂಬೂನದ ವರ್ಣದ ವೈದೇಹಿಯನ್ನು ನೋಡಿದೆಯಾ ? " ಹೀಗೆ ಶ್ರೀರಾಮನು ಮಾವು ಹಲಸು ದಾಳಿಂಬೆ ಮೊದಲಾದ ಮರಗಳನ್ನು ಕೇಳಿದನು. ಯಾವ ಮರವೂ ಉತ್ತರವನ್ನು ಕೊಡಲಿಲ್ಲ. ಇವುಗಳನ್ನು ವಿಚಾರಿಸಿ ಪ್ರಯೋಜನವಿಲ್ಲವೆಂದು ರಘುನಾಥನು ಮೃಗಗಳ ಕಡೆಗೆ ತಿರುಗಿ ಕೇಳತೊಡಗಿದನು : " ಎಲೈ ಜಿಂಕೆ, ನಿನ್ನ ಕಣ್ಣಿನಂತೆಯೇ ನನ್ನ ಸೀತೆಯ ಕಣ್ಣು ಚಂಚಲವಾಗಿ ಸುಂದರವಾಗಿದ್ದಿತು. ನೀನೇನಾದರೂ ಅವಳನ್ನು ನೋಡಿದೆಯಾ ? ನಿನ್ನೊಡನೆ ಅವಳು ಆಟವಾಡಲು ಬರಲಿಲ್ಲವೆ ? ಓ ಗಜರಾಜ, ನಿನಗೆ ಜಾನಕಿಯ ವೃತ್ತಾಂತವು ಗೊತ್ತಿರಬೇಕು. ಅದನ್ನು ದಯೆಮಾಡಿ ನನಗೆ ಹೇಳು. ಎಲೈ ವ್ಯಾಘ್ರವೆ, ಹೆದರಬೇಡ. ನನ್ನ ಸೀತೆಯ ಸುದ್ದಿಯನ್ನು ಹೇಳು. ನಿನಗೆ ನಾನು ಹಿಂಸೆಯನ್ನು ಕೊಡುವುದಿಲ್ಲ" ಅನಂತರ ಮೃಗಗಳೂ ಉತ್ತರವನ್ನು ಕೊಡದಿರಲು ಶ್ರೀರಾಮನು ಶೋಕದಿಂದ ಉನ್ಮತ್ತನಾದನು. ಸೀತೆಯು ಅರಣ್ಯದಲ್ಲಿ ಸುಳಿದಾಡಿದಂತೆ ಕಾಣಿಸಿತು. " ಓ ಪ್ರಿಯೆ, ಕಮಲನೇತ್ರೆ, ನಿನ್ನನ್ನು ನೋಡಿಬಿಟ್ಟೆನು. ಏಕೆ ಓಡಿಹೋಗುತ್ತೀಯೆ ? ಅಗೋ, ಮರದ ಹಿಂದೆ ಮರೆಯಾದಳು. ನನ್ನೊಡನೆ ಮಾತನಾಡದೆ ಅಡಗಿಕೊಂಡಿದ್ದೀಯಾ ? ಸುಂದರಿ, ನಿಲ್ಲು ನಿಲ್ಲು. ನನ್ನಲ್ಲಿ ನಿನಗೆ ಕರುಣೆ ಇಲ್ಲವೆ ? ಯಾವಾಗಲೂ ಇಷ್ಟು ಅತಿರೇಕವಾಗಿ ನೀನು ಹಾಸ್ಯಮಾಡಿದವಳಲ್ಲ. ನನ್ನ ಮೇಲೆ ನಿನಗೇಕೆ ಉಪೇಕ್ಷೆ ? ಸೀತೆ, ನೀನು ಉಟ್ಟಿದ್ದ ರೇಶ್ಮೆಯ ಸೀರೆ ಕಂಡುಹೋಯಿತು ! ಏಕೆ ಸುಮ್ಮನೆ ಓಡುತ್ತಿದ್ದೀಯೆ ? ನಿಲ್ಲು ನಿಲ್ಲು " ಎಂದು ಹಲುಬಿದನು.

ಆಮೇಲೆ ಶ್ರೀರಾಮನು ಲಕ್ಷ್ಮಣನ ಕಡೆಗೆ ತಿರುಗಿ ಹೀಗೆಂದನು : " ಲಕ್ಷ್ಮಣ, ಮಾಂಸಾಹಾರಿಗಳಾದ ರಾಕ್ಷಸರು ಆ ಹುಡುಗಿಯನ್ನು ಕೊಯ್ದು ಕೊಯ್ದು ತಿಂದುಬಿಟ್ಟಿರಬೇಕು. ಆ ಸಮಯದಲ್ಲಿ ಅವಳ ಸುಂದರವಾದ ಮುಖವು ಕೊರಗಿ ಕುಗ್ಗಿ ಎಷ್ಟು ಬಾಡಿಹೋಗಿರಬಹುದು ! ಆ ಸುಂದರವಾದ ದಂತಪಂಕ್ತಿ, ಮನೋಜ್ಞವಾದ ನಾಸಿಕೆ, ಚಂದವಾದ ಓಲೆಗಳು —ಇವುಗಳಿಂದ ವಿರಾಜಿಸುತ್ತಿದ್ದ ಪೂರ್ಣಚಂದ್ರನಂತಹ ಮುಖಕ್ಕೆ ರಾಹು ಹಿಡಿದಂತಾಗಿರಬೇಕು ! ಸಂಪಿಗೆಹೂವಿನಂತೆ ಮೈಬಣ್ಣವಿದ್ದ ಆ ಕೋಮಲಾಂಗಿಯು, ರಾಕ್ಷಸರು ಕೊಯ್ದು ಕೊಯ್ದು ತಿನ್ನುವಾಗ ಎಷ್ಟೊಂದು ಗೋಳಾಡಿರಬೇಕು ! ಪಲ್ಲವದಂತೆ ಮೃದುವಾದ ಕೈಗಳನ್ನು ಆಭರಣಸಹಿತವಾಗಿ ಅತ್ತಿಂದಿತ್ತ ಎಳೆದಾಡುತ್ತ ರಾಕ್ಷಸರು ತಿಂದಿರಬೇಕು ! ರಾಕ್ಷಸರು ತಿನ್ನಲೆಂದೇ ನಾನು ಅವಳನ್ನು ಬಿಟ್ಟುಹೋದಂತಾಯಿತಲ್ಲ ! ಸಕಲ ಬಂಧುಬಾಂಧವರಿದ್ದರೂ ಸೀತೆಯು ಅನಾಥಳಾದಳು. ಅಯ್ಯೋ ! ಲಕ್ಷ್ಮಣ, ನಿನಗೆ ಎಲ್ಲಾದರೂ ಸೀತೆ ಕಾಣಿಸುತ್ತಿದ್ದಾಳೆಯೆ ? ಹಾ ಪ್ರಿಯೆ ! ಹಾ ಸೀತೆ ! ಎಲ್ಲಿ ಹೋದೆ ? " ಎಂದು ಹಲುಬುತ್ತಿದ್ದನು.

ಹೀಗೆ ಹಲುಬುತ್ತ ಶ್ರೀರಾಮನು ವನದಿಂದ ವನಕ್ಕೆ ಓಡುತ್ತ ಎಡವುತ್ತ ಮುಗ್ಗರಿಸುತ್ತ ಹುಚ್ಚನಂತೆ ಮಾತನಾಡುತ್ತ ಹೊಳೆಯ ತೀರದಲ್ಲಿ ಬೆಟ್ಟದ ಕಿಬ್ಬದಿಯಲ್ಲಿ ಎಲ್ಲೆಲ್ಲಿಯೂ ಸೀತಾದೇವಿಯನ್ನು ಹುಡುಕಿದನು.

---

## ೩೧ನೆಯ ಅಧ್ಯಾಯ

## ಶ್ರೀರಾಮನು ಸೀತಾವಿಯೋಗದಿಂದ ದುಃಖಿಸಿದ್ದು

ಆಮೇಲೆ ದಶರಥರಾಯನ ಕುಮಾರನಾದ ಶ್ರೀರಾಮನು ಪರ್ಣಶಾಲೆಯಲ್ಲಿ ಸೀತಾದೇವಿಯನ್ನು ಕಾಣದೆ ಅಲ್ಲಿ ಬಿದ್ದಿದ್ದ ದರ್ಭೆಚಾಪೆಗಳನು ನೋಡಿ ಲಕ್ಷ್ಮಣನ ಎರಡು ಭುಜಗಳನ್ನೂ ಹಿಡಿದುಕೊಂಡು ಹೀಗೆ ವಿಲಾಪಿಸಿದನು: "ಲಕ್ಷ್ಮಣಾ, ಸೀತಾದೇವಿಯು ಎಲ್ಲಿರಬಹುದು ? ಇಲ್ಲಿಂದ ಯಾವ ದಿಕ್ಕಿಗೆ ಹೋಗಿರಬಹುದು ? ಆಕೆಯನ್ನು ಯಾರು ಹಿಡಿದುಕೊಂಡು ಹೋದರೊ ! ಯಾರು ಭಕ್ಷಿಸಿದರೊ ! ಸೀತೆ, ವೃಕ್ಷಗಳ ಮರೆಯಲ್ಲಿ ಅವಿತುಕೊಂಡಿದ್ದೀಯಾ ? ಹಾಸ್ಯಮಾಡಬೇಡ. ನಿನ್ನ ವಿರಹದಿಂದ ದುಃಖಿತನಾಗಿರುವ ನನ್ನನ್ನು ಆಲಿಂಗಿಸು. ನೀನು ಈ ಪರ್ಣಶಾಲೆಯಲ್ಲಿ ಯಾವ ಮೃಗಶಿಶುಗಳೊಡನೆ ವಿನೋದವಾಗಿ ಆಡಿಕೊಂಡಿದ್ದೆಯೋ ಅವು ಈಗ ನಿನ್ನನ್ನು ಕಾಣದೆ ಕಣ್ಣೀರು ಬಿಡುತ್ತ ನಿನ್ನನ್ನೇ ಸ್ಮರಿಸಿಕೊಳ್ಳುತ್ತಿವೆ. ಲಕ್ಷ್ಮಣಾ, ಸೀತಾದೇವಿಯನ್ನು ಕಾಣದೆ ನಾನು ಜೀವದಿಂದಿರಲಾರೆನು. ಆ ದೇವಿಯ ವಿರಹದಿಂದ ಮೃತನಾಗಿ ಪರಲೋಕಕ್ಕೆ ಹೋದರೆ ನಮ್ಮ ತಂದೆ ದಶರಥರಾಯನು ನನ್ನನ್ನು ಕುರಿತು 'ಎಲೈ ಮಾಡಿದ ಪ್ರತಿಜ್ಞೆಯನ್ನು ತಪ್ಪಿದವನೆ, ನೀನು ಅಸತ್ಯವನ್ನು ನುಡಿದೆ. ಪ್ರತಿಜ್ಞೆಯ ಅವಧಿಯು ಮುಗಿಯದೆ ನನ್ನ ಹತ್ತಿರಕ್ಕೆ ಬಂದೆಯಾ ?' ಎಂದು ನುಡಿಯುವನು ! ಸೀತೆ, ನೀನು ಶೋಕಪರವಶನಾಗಿ ಭಗ್ನಮನೋರಥನಾಗಿರುವ ನನ್ನನ್ನು, ಕೀರ್ತಿಯು ಕುಟಿಲನನ್ನು ಬಿಡುವಂತೆ ಬಿಟ್ಟುಹೋಗುವುದುಚಿತವಲ್ಲ. ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ ? ಇನ್ನು ನಾನು ಜೀವದಿಂದಿರಲಾರೆನು" ಎಂದು ವಿಲಾಪಿಸಿದನು.

ಈ ಪ್ರಕಾರದಲ್ಲಿ ಸೀತಾದೇವಿಯನ್ನು ಕಾಣದೆ ಬಹಳವಾಗಿ ವಿಲಾಪಿಸುತ್ತ ಮಹತ್ತಾದ ಕೆಸರಿನಲ್ಲಿ ಸಿಕ್ಕಿ ಬಿದ್ದ ಗಜರಾಜನಂತಿದ್ದ ಶ್ರೀರಾಮನನ್ನು ಕಂಡು ಲಕ್ಷ್ಮಣನು ಹೀಗೆಂದನು: "ಶ್ರೀರಾಮ, ಮಹಾತ್ಮನಾದ ನೀನು ದುಃಖಪಡುವುದುಚಿತವಲ್ಲ. ಇನ್ನು ನಾವಿಬ್ಬರೂ ಸೀತಾದೇವಿಯನ್ನು ನಾನಾದಿಕ್ಕುಗಳಲ್ಲಿಯೂ ಪರ್ವತಗಳಲ್ಲಿಯೂ ಹುಡುಕಿನೋಡೋಣ. ನೀನು ವ್ಯಥೆಯನ್ನು ಬಿಡು. ಇಲ್ಲಿ ಅನೇಕ ಗುಹೆಗಳಿವೆ. ವನಸಂಚಾರಪ್ರಿಯಳಾದ ಸೀತಾದೇವಿಯು ಅಲ್ಲೆಲ್ಲಾದರೂ ಇರಬಹುದು. ಆಕೆಯು ಕಮಲಗಳನ್ನು ತರುವುದಕ್ಕಾದರೂ ಸ್ನಾನಾರ್ಥವಾಗಿಯಾದರೂ ನದಿಗೆ ಹೋಗಿರಬಹುದು. ಇಲ್ಲವೇ ನಮ್ಮನ್ನು ಹಾಸ್ಯಮಾಡಬೇಕೆಂದು ಎಲ್ಲಾದರೂ ಅವಿತುಕೊಂಡಿರಬಹುದು. ನಾವು ಅಲ್ಲೆಲ್ಲಾ ಹುಡುಕಿನೋಡೋಣ ಬಾ" ಎಂದು ಹೇಳಿದನು.

ಆ ಬಳಿಕ ಶ್ರೀರಾಮನು ಲಕ್ಷ್ಮಣನನ್ನು ಕೂಡಿಕೊಂಡು ಪರ್ವತಗಳು ವನಗಳು ಕೊಳಗಳು ನದಿಗಳು ಗುಹೆಗಳು ಮೊದಲಾದ ನಾನಾಸ್ಥಳಗಳಲ್ಲಿಯೂ ಹುಡುಕಿ ನೋಡಿ ಸೀತಾದೇವಿಯನ್ನು ಕಾಣದೆ ಕಂಗೆಟ್ಟು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ, ಶೋಭನಾಂಗಿಯಾದ ಜಾನಕಿಯು ಎಲ್ಲಿಯೂ ಕಾಣಲಿಲ್ಲ. ಇನ್ನು ಮುಂದೆ ಏನು ಮಾಡೋಣ ?" ಎಂದು ಕೇಳಿದನು.

ಲಕ್ಷ್ಮಣನು "ಅಣ್ಣ, ನಿನ್ನ ಮನಸ್ಸಿನಲ್ಲಿ ಖೇದವೇಕೆ ? ದಂಡಕಾರಣ್ಯವೆಲ್ಲವನ್ನೂ ಹುಡುಕಿ ನೋಡೋಣ. ಆದಿಪುರುಷನಾದ ನಾರಾಯಣನು ವಾಮನಾವತಾರದಲ್ಲಿ ಬಲಿಚಕ್ರವರ್ತಿಯನ್ನು ಅಡಗಿಸಿ ಭೂಮಿಯನ್ನು ಪಡೆದಂತೆ ಸೀತಾದೇವಿಯನ್ನು ಪಡೆಯುವೆ" ಎಂದು ನುಡಿದನು.

ಶ್ರೀರಾಮನು "ಲಕ್ಷ್ಮಣ, ಸಮಸ್ತ ವನಗಳನ್ನೂ ನದಿಗಳನ್ನೂ ವಿಕಸಿತವಾದ ಕಮಲಗಳುಳ್ಳ ಸರೋವರಗಳನ್ನೂ ಅರಸಿಯೂ ನನ್ನ ಪ್ರಾಣಗಳಿಗೆ ಸಮಾನಳಾದ ಜಾನಕಿಯನ್ನು ಎಲ್ಲಿಯೂ ಕಾಣಲಿಲ್ಲ" ಎಂದು ನುಡಿದು ವಿರಹಶೋಕದಿಂದ ಕಂಗೆಟ್ಟು ಚೈತನ್ಯಗುಂದಿ ಮಾತನಾಡದೆ ದುಃಖಾಕ್ರಾಂತನಾದನು. ಪ್ರಿಯಬಾಂಧವನಾದ ಲಕ್ಷ್ಮಣನು ವಿನಯದಿಂದ ಕೈಮುಗಿದುಕೊಂಡು ಅನೇಕ ಬಗೆಯಾಗಿ ಸಂತವಿಡುತ್ತಿದ್ದರೂ ಕೇಳದೆ ಶ್ರೀರಾಮನು ಸೀತಾದೇವಿಯನ್ನು ನೆನೆದು ಪುನಃಪುನಃ ಹಂಬಲಿಸುತ್ತಿದ್ದನು.



## ೬೨ ನೆಯ ಅಧ್ಯಾಯ

## ಶ್ರೀರಾಮನ ದುಃಖಾತಿರೇಕ

ಈ ರೀತಿಯಲ್ಲಿ ಸೀತಾದೇವಿಯನ್ನು ಕಾಣದೆ ಧರ್ಮಾತ್ಮನಾದ ಶ್ರೀರಾಮನು ಚೈತನ್ಯಗುಂದಿ ಆ ದೇವಿಯ ನಿರಂತರ ಧ್ಯಾನದಿಂದ ಆಕೆಯನ್ನು ತನ್ನ ಮುಂದುಗಡೆಯಲ್ಲಿ ಕಂಡಂತೆ ಭಾವಿಸಿದನು. ಅವನು ಭ್ರಾಂತಿಯಿಂದ ಹೀಗೆ ಹಲುಬತೊಡಗಿದನು : "ಜಾನಕಿ, ಪ್ರಿಯೆ, ನೀನು ಅಶೋಕವೃಕ್ಷದ ಕೊಂಬೆಗಳ ಮರೆಯಲ್ಲಿ ವಿನೋದಾರ್ಥವಾಗಿ ಇದ್ದುಕೊಂಡು ನನ್ನ ಮನಸ್ಸಿಗೆ ಏಕೆ ಶೋಕವನ್ನುಂಟು ಮಾಡುತ್ತೀಯೆ? ಬಾಳೆಯಮರದ ಹಿಂದೆ ಏಕೆ ಅಡಗಿಕೊಂಡಿದ್ದೀಯೆ? ಈ ರೀತಿಯಲ್ಲಿ ಮರೆಯಾಗಿರುವುದು ನಿನಗೆ ಉಚಿತವಲ್ಲ. ಗೋರಂಟಿಗಿಡಗಳ ಮರೆಯಲ್ಲಿ ನನ್ನನ್ನು ಹಾಸ್ಯಮಾಡ ಬೇಕೆಂದು ಏಕೆ ಮರೆಯಾಗಿದ್ದೀಯೆ? ನನಗೆ ಬಾಧೆಮಾಡುವ ಈ ಹಾಸ್ಯವನ್ನು ಸಾಕುಮಾಡು. ವನವಾಸದಲ್ಲಿ ಹಾಸ್ಯಮಾಡುವುದುಚಿತವಲ್ಲ. ಯಾವಾಗಲೂ ನಿನಗೆ ಹಾಸ್ಯಮಾಡಿಕೊಂಡಿರುವುದೇ ಸ್ವಭಾವವೆಂದು ಬಲ್ಲೆನು. ಎಲೇ ವಿಶಾಲಾಕ್ಷಿ, ಈ ಪರ್ಣಶಾಲೆಯು ಶೂನ್ಯವಾಗಿದೆ. ಶೀಘ್ರವಾಗಿ ಬಾ!—ಲಕ್ಷ್ಮಣ, ನಾನು ಎಷ್ಟು ಬಗೆಯಲ್ಲಿ ಹಂಬಲಿಸಿ ಕರೆಯುತ್ತಿದ್ದರೂ ಸೀತಾದೇವಿಯು ನನ್ನ ಸಮೀಪಕ್ಕೆ ಬರದಿರುವುದರಿಂದ ಅವಶ್ಯವಾಗಿ ರಾಕ್ಷಸರು ಆಕೆಯನ್ನು ಅಪಹರಿಸಿಕೊಂಡು ಹೋಗಿರ ಬೇಕು! ಈ ಮೃಗಸಮೂಹಗಳು ಕಣ್ಣೀರುಬಿಡುತ್ತ ಸೀತಾದೇವಿಯು ರಾಕ್ಷಸರಿಂದ ಭಕ್ಷಿಸಲ್ಪಟ್ಟಳೆಂದು ಸೂಚಿಸುತ್ತಿವೆ. ಹಾ ಜಾನಕಿ, ಕೋಮಲಾಂಗಿ, ಹಾಸ್ಯಮಾಡಬೇಕೆಂದು ಎಲ್ಲಿಗೆ ಹೋದೆ? ಲಕ್ಷ್ಮಣ, ಈ ವೃತ್ತಾಂತವನ್ನು ಕೇಳಿ ಕೈಕೇಯಿದೇವಿಯು ಸಂತೋಷಪಡಬಹುದು. ನಾನು ಅಯೋಧ್ಯಾ ಪಟ್ಟಣದಿಂದ ಹೊರಡುವಾಗ ಸೀತಾದೇವೀಸಹಿತನಾಗಿ ಹೊರಟುಬಂದೆನು. ಇನ್ನು ಆ ದೇವಿಯಿಲ್ಲದೆ ನಾನೊಬ್ಬನೇ ಹೋದರೆ ಜನರು ನನ್ನನ್ನು ದಯಾಶೂನ್ಯನೆಂದು ಹೀಯಾಳಿಸುವರು. ವನವಾಸದ ಮಿತಿ ತೀರಿದಮೇಲೆ ನಾನು ಇಲ್ಲಿಂದ ತಿರುಗಿ ಹೋದರೆ ನನ್ನ ಮಾವನಾದ ಜನಕರಾಜನು ತನ್ನ ಮಗಳ ಕ್ಷೇಮವನ್ನು ಕೇಳಿದರೆ ಏನೆಂದು ಹೇಳಲಿ? ಸೀತೆ, ನೀನಿಲ್ಲದೆ ನಾನೊಬ್ಬನೇ ಹೋದರೆ ನಿನ್ನ ತಂದೆಯಾದ ಮಿಥಿಲಾರಾಜನು ನಿನ್ನನ್ನು ಕಾಣದೆ ಹೇಗೆ ಸಹಿಸಿಕೊಂಡಿರುವನು? ಅಯೋಧ್ಯಾ ಪಟ್ಟಣಕ್ಕೆ ಹೋಗದೆ ನಿನ್ನ ವಿರಹಾಗ್ನಿಯೆಂಬ ಚಿತೆಯಲ್ಲಿ ಬೆಂದು ಸ್ವರ್ಗಲೋಕಕ್ಕೆ ಹೋದರೂ ನೀನಿಲ್ಲದಿದ್ದರೆ ಸ್ವರ್ಗವಾಸವೂ ಶೂನ್ಯವಾಗಿಯೇ ತೋರುವುದು. ಲಕ್ಷ್ಮಣ, ಈ ವನದಲ್ಲಿ ನನ್ನನ್ನು ಬಿಟ್ಟು ನೀನು ಅಯೋಧ್ಯಾಪಟ್ಟಣಕ್ಕೆ ಹೋಗು. ನಾನು ಸೀತಾದೇವಿಯಿಲ್ಲದೆ ಜೀವಿಸಲಾರೆನು. ನೀನು ಅಯೋಧ್ಯಾಪಟ್ಟಣಕ್ಕೆ ಹೋಗಿ ಭರತನನ್ನು ಆಲಿಂಗಿಸಿಕೊಂಡು, ಆತನು ರಾಜ್ಯಪರಿಪಾಲನವನ್ನು ಮಾಡಿಕೊಂಡು ಸುಖವಾಗಿರಬೇಕಾಗಿ ನಾನು ತಿಳಿಸಿದೆನೆಂದು ಅವನಿಗೆ

ಹೇಳು. ನನ್ನ ತಾಯಂದಿರಾದ ಕೌಸಲ್ಯಾದೇವಿ ಕೈಕೇಯೀದೇವಿ ಸುಮಿತ್ರಾದೇವಿ ಮೊದಲಾದವರಿಗೆ ಯಥಾಕ್ರಮವಾಗಿ ಅಭಿವಾದನ ಮಾಡಿ ಅವರೆಲ್ಲರನ್ನೂ ಧರ್ಮದಿಂದ ರಕ್ಷಿಸಿಕೊಂಡಿರು. ಸೀತಾದೇವಿಯು ವಿರಹಸಂತಾಪವನ್ನು ತಾಳಲಾರದೆ ನಾನು ನಾಶವನ್ನೈದಿದೆನೆಂದು ನನ್ನ ತಾಯಿಯಾದ ಕೌಸಲ್ಯಾದೇವಿಯೊಡನೆ ವಿಸ್ತಾರವಾಗಿ ಹೇಳು" ಎಂದು ದುಃಖಾಕ್ರಾಂತನಾಗಿ ದೈನ್ಯದಿಂದ ಹಂಬಲಿಸಿದನು.



## ೬೩ ನೆಯ ಅಧ್ಯಾಯ

## ಶ್ರೀರಾಮನು ವಿಯೋಗದುಃಖದಿಂದ ಹಂಬಲಿಸಿದ್ದು

ಈ ಪ್ರಕಾರ ಸೀತಾದೇವಿಯ ವಿರಹದಿಂದುಂಟಾದ ಶೋಕಾಗ್ನಿಯಿಂದ ಬೆಂದು ಭ್ರಮೆಗೊಂಡು ಶ್ರೀರಾಮನು ಲಕ್ಷ್ಮಣನಿಗೆ ದುಃಖವನ್ನುಂಟುಮಾಡುತ್ತ ಆತನನ್ನು ಕುರಿತು ಹೀಗೆ ಹೇಳಿದನು: "ಲಕ್ಷ್ಮಣಾ, ಲೋಕದಲ್ಲಿ ನನ್ನಂಥ ಪಾಪಿಗಳಿಲ್ಲ. ದುಃಖದ ಮೇಲೆ ದುಃಖವು ಪರಂಪರೆಯಾಗಿ ನನ್ನ ಅಂತಃಕರಣವನ್ನೂ ಎದೆಯನ್ನೂ ಭಿನ್ನಭಿನ್ನವಾಗಿ ಒಡೆಯುತ್ತಿವೆ. ಪೂರ್ವಜನ್ಮಗಳಲ್ಲಿ ನಾನು ಬಹಳ ಪಾಪಕರ್ಮಗಳನ್ನು ಮಾಡಿರಬೇಕು. ಆ ಪಾಪಗಳು ಈಗ ಫಲೋನ್ಮುಖವಾಗಿ ಒಂದರಮೇಲೊಂದಾಗಿ ಬಂದು ನನ್ನನ್ನು ಬಾಧಿಸುತ್ತಿವೆ. ರಾಜ್ಯಪರಿತ್ಯಾಗ, ಬಂಧುವಿರೋಧ, ಪಿತೃವಿಯೋಗ, ಮಾತೃವಿಯೋಗ ಮೊದಲಾದ ದುಃಖಗಳು ವನಕ್ಕೆ ಬಂದಾಗ ನನ್ನ ಅಂತಃಕರಣದಲ್ಲಿ ಅಡಗಿದ್ದುವು. ಒಣಕಟ್ಟಿಗೆಗಳನ್ನು ಹಾಕಿದಾಗ ಕಿಡಿಯು ಬೆಂಕಿಯಾಗಿ ಪ್ರಜ್ವಲಿಸುವಂತೆ ಸೀತಾವಿಯೋಗದಿಂದ ಆ ದುಃಖಗಳೆಲ್ಲವೂ ಉಕ್ಕೇರಿ ತುಂಬಿ ಬರುತ್ತಿವೆ. ಲಕ್ಷ್ಮಣಾ, ರಾಕ್ಷಸರು ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗುತ್ತಿರಲು ಆ ದೇವಿಯು ಭಯದಿಂದ ದೈನ್ಯಬಟ್ಟು ಹಂಬಲಿಸುತ್ತಿದ್ದಾಳೋ ಏನೋ! ಮನೋಹರವಾದ ಸೀತಾದೇವಿಯ ಮುಖವು ರಾಕ್ಷಸರ ವಶವಾಗಿ ರಾಹುವಿನಿಂದ ಆಕ್ರಮಿಸಲ್ಪಟ್ಟ ಚಂದ್ರಮಂಡಲದಂತೆ ಕಾಂತಿಗುಂದಿರಬೇಕು. ಶ್ರೇಷ್ಠವಾದ ಕಂಕಣ ಕಂಠಸರ ಮೊದಲಾದ ಭೂಷಣಗಳಿಂದ ಮನೋಹರವಾದ ಆ ದೇವಿಯ ಕೊರಳನ್ನು ಮಾಂಸಾಹಾರಿಗಳಾದ ರಾಕ್ಷಸರು ಕಡಿದು ರಕ್ತಪಾನವನ್ನು ಮಾಡಿರಬಹುದು. ಯಾರೂ ಇಲ್ಲದ ವನದಲ್ಲಿ ರಾಕ್ಷಸರಿಂದ ಒಡಿಬೆದರಿಸಲ್ಪಟ್ಟ ಸೀತಾದೇವಿಯು ಚಿಟ್ಟಿಭ ಹಕ್ಕಿಯಂತೆ ಕಣ್ಣೀರಿಡುತ್ತ ಮೊರೆಯಿಡುತ್ತಿರಬಹುದು. ಎಲೈ ಲಕ್ಷ್ಮಣಾ, ಈ ಕಲ್ಲರೆಯ ಮೇಲೆ ಸೀತಾದೇವಿಯು ನನ್ನೊಡನೆ ಸರಸಸಂಲಾಪಗಳನ್ನು ಮಾಡುತ್ತ ನಿನ್ನೊಡನೆ ಬೇಕಾದಷ್ಟು ವಿಷಯಗಳನ್ನು ಕುರಿತು ಎಷ್ಟೋ ಸಲ ಮಾತನಾಡಿದ್ದಾಳೆ. ಸಮಸ್ತ ನದಿಗಳಿಗೂ ಉತ್ತಮವಾದ ಗೋದಾವರೀನದಿಗೆ ಹೋಗಿರಬಹುದೆಂಬುದೂ ಸರಿಯಾಗಿ ತೋರುವುದಿಲ್ಲ. ಆಕೆಯು ಯಾವಾಗಲೂ ಅಲ್ಲಿಗೆ ಒಬ್ಬಳಾಗಿ ಹೋದದ್ದಿಲ್ಲ. ಕಮಲದಂತೆ ಮುಖವುಳ್ಳವಳಾಗಿ ತಾವರೆಯ ಎಸಳುಗಳಂತೆ ಕಣ್ಣುಗಳುಳ್ಳವಳಾಗಿ ನನ್ನ ಪ್ರಿಯಳಾದ ಸೀತಾದೇವಿಯು ಒಬ್ಬಳೇ ತಾವರೆಯ ಕೊಳಕ್ಕೆ ಹೋಗಿರುವುದು ಶಕ್ಯವಿಲ್ಲ. ಆಕೆಯು ನನ್ನನ್ನು ಬಿಟ್ಟು ಆ ಕೊಳಕ್ಕೆ ಹೋಗುತ್ತಿರಲಿಲ್ಲ. ನಾನಾಪ್ರಕಾರವಾದ ಪುಷ್ಪಸಮೂಹಗಳಿಂದ ಇಟ್ಟಣಿಸಿರುವ ಪುಷ್ಪವನಕ್ಕೆ ಹೋದಳೇ ಎಂಬ ಯೋಚನೆಯನ್ನು ಮಾಡಿದರೆ, ಮಹಾಭಯವುಳ್ಳ ಸೀತಾದೇವಿಯು ಒಬ್ಬಳೇ ವನಕ್ಕೆ ಮೊದಲು ಯಾವಾಗಲೂ ಹೋದದ್ದಿಲ್ಲ! ಸಮಸ್ತ ಪ್ರಾಣಿಗಳ ಕೃತ್ಯಾಕೃತ್ಯಗಳನ್ನು ಬಲ್ಲಂಥವನಾಗಿ ಸತ್ಯಾಸತ್ಯಗಳಿಗೆ ಸಾಕ್ಷಿಯಾದ ಎಲೈ ಸೂರ್ಯನೆ, ನನ್ನ ಕಾಂತೆಯಾದ ಜಾನಕಿಯು ಎಲ್ಲಿಗೆ ಹೋದಳು? ಹೇಳು. ನೀನು ಸಮಸ್ತ ಲೋಕಗಳ ವೃತ್ತಾಂತವನ್ನೂ

ಕಾಣುವವನು. ನೀನು ಸಮಸ್ತ ಲೋಕಗಳಲ್ಲಿಯೂ ಪ್ರಸಿದ್ಧನಾದ ಕಾರಣ ನನ್ನ ಕಾಂತೆಯಾದ ಜಾನಕಿಯನ್ನು ಯಾರಾದರೂ ಕೊಂದು ತಿಂದಿದ್ದರೂ ಎತ್ತಿಕೊಂಡು ಹೋಗಿದ್ದರೂ ಅವಳು ಕಾಡಿನಲ್ಲಿ ದಾರಿತಪ್ಪಿ ಹೋಗಿದ್ದರೂ ಹೇಳು!" ಎಂದು ಹಂಬಲಿಸುತ್ತ ಮಾತನಾಡುವುದಕ್ಕೂ ಚೈತನ್ಯವಿಲ್ಲದಿದ್ದನು.

ಅದನ್ನು ನೋಡಿ ನ್ಯಾಯಮಾರ್ಗಪ್ರವರ್ತಕನಾದ ಲಕ್ಷ್ಮಣನು ಶ್ರೀರಾಮನನ್ನು ಕುರಿತು ಕಾಲೋಚಿತವಾಗಿ "ಅಣ್ಣ, ಶೋಕವನ್ನು ಬಿಟ್ಟು ಧೈರ್ಯವನ್ನವಲಂಬಿಸಿ ಉತ್ಸಾಹಶಕ್ತಿಯುಳ್ಳವನಾಗಿ ಸೀತಾದೇವಿಯನ್ನು ಹುಡುಕುವುದಕ್ಕೆ ತಕ್ಕ ಯತ್ನವನ್ನು ಮಾಡು. ಲೋಕದಲ್ಲಿ ಉತ್ಸಾಹಶಕ್ತಿಯುಳ್ಳ ಪುರುಷರು ಅತ್ಯಂತ ಆಪತ್ತುಬಂದರೂ ದುಃಖವನ್ನು ಪಡೆಯುವುದಿಲ್ಲ" ಎಂದು ನುಡಿದನು.

ಶ್ರೀರಾಮನು ಆ ಮಾತನ್ನು ಗ್ರಹಿಸದೆ ಧೈರ್ಯವನ್ನವಲಂಬಿಸದೆ ಅತಿಶಯವಾಗಿ ದುಃಖಾಕ್ರಾಂತನಾದನು.



## ೬೪ ನೆಯ ಅಧ್ಯಾಯ

# ಶ್ರೀರಾಮನ ಕೋಪ

ಈ ಪ್ರಕಾರ ಸೀತಾದೇವಿಯನ್ನು ಕಾಣದೆ ವಿರಹದುಃಖದಿಂದ ದೈನ್ಯಬಡುತ್ತಿದ್ದ ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ಸೀತಾದೇವಿಯು ಕಮಲಗಳನ್ನು ತರುವುದಕ್ಕಾಗಿ ಗೋದಾವರೀನದಿಗೆ ಹೋಗಿರಬಹುದು. ನೀನೇ ಆ ನದಿಗೆ ಹೋಗಿ ಚೆನ್ನಾಗಿ ಶೋಧನೆಯನ್ನು ಮಾಡು" ಎಂದು ಹೇಳಿದನು.

ಲಕ್ಷ್ಮಣನು ಗೋದಾವರೀನದಿಗೆ ಹೋಗಿ ಸೀತಾದೇವಿಯನ್ನು ಹುಡುಕಿ ಆ ದೇವಿಯನ್ನು ಕಾಣದೆ ಶ್ರೀರಾಮನ ಸಮೀಪಕ್ಕೆ ಬಂದು "ಶ್ರೀರಾಮ, ಗೋದಾವರೀನದಿಯ ತಡಿಗಳಲ್ಲಿ ಹುಡುಕಿ ನೋಡುತ್ತ ಕೂಗಿದೆನು. ಆ ದೇವಿಯು ಎಲ್ಲಿಯೂ ಇಲ್ಲ" ಎಂದು ಹೇಳಿದನು.

ಶ್ರೀರಾಮನು ಅತ್ಯಂತ ವಿರಹಾತುರನಾಗಿ ತಾನೇ ಗೋದಾವರೀತೀರಕ್ಕೆ ಹೋಗಿ "ಸೀತೆ, ಸೀತೆ, ಎಲ್ಲಿದ್ದೀಯೆ? ಗೋದಾವರೀನದಿಯೆ, ಸೀತಾದೇವಿಯನ್ನು ನೀನು ನೋಡಲಿಲ್ಲವೆ? ಲಕ್ಷ್ಮಣ, ಈ ಮೃಗಗಳ ಭಾವಚೇಷ್ಟೆಗಳನ್ನು ನೋಡು. ಸೀತಾದೇವಿಯ ವೃತ್ತಾಂತ ಹೇಳುವಂತೆ ನನ್ನನ್ನು ಅಡಿಗಡಿಗೆ ನೋಡುತ್ತಿವೆ. ಎಲೈ ಮೃಗಗಳಿರಾ, ಸೀತಾದೇವಿಯು ಯಾವ ದಿಕ್ಕಿಗೆ ಹೋದಳು? ನೀವು ಅರಿತಿದ್ದ ಪಕ್ಷದಲ್ಲಿ ಹೇಳಿರಿ" ಎಂದನು,

ಆಗ ದಂಡಕಾರಣ್ಯದಲ್ಲಿದ್ದ ಮೃಗಗಳು ಕಣ್ಣೀರುಬಿಡುತ್ತ ಎದ್ದು ನಿಂತು ತೆಂಕಣಮುಖವಾಗಿ ಅಂತರಿಕ್ಷಮಾರ್ಗವನ್ನು ನೋಡುತ್ತ ಓಡಿದವು. ಸೀತಾದೇವಿಯನ್ನು ತೆಂಕಣದಿಕ್ಕಿಗೆ ಅಂತರಿಕ್ಷ ಮಾರ್ಗದಲ್ಲಿ ರಾವಣನು ತೆಗೆದುಕೊಂಡುಹೋದನೆಂದು ಕಣ್ಣುಸನ್ನೆಯನ್ನು ಮಾಡುತ್ತಿರುವುವೊ ಎಂಬಂತೆ ಕಾಣಿಸಿಕೊಂಡವು. ಲಕ್ಷ್ಮಣನು ಆ ಮೃಗಗಳ ಭಾವಚೇಷ್ಟೆಗಳನ್ನು ಕಂಡು ಶ್ರೀರಾಮನನ್ನು ಕುರಿತು "ಶ್ರೀರಾಮ, ನೀನು ಈ ಮೃಗಗಳನ್ನು ಕುರಿತು ಸೀತಾದೇವಿಯು ಹೋದ ಮಾರ್ಗವನ್ನು ಕೇಳಲು, ಅವೆಲ್ಲವೂ ಅಂತರಿಕ್ಷವನ್ನು ನೋಡುತ್ತ ದಕ್ಷಿಣದಿಕ್ಕಿಗೆ ಹೋಗುತ್ತಿವೆ. ಇವುಗಳ ಭಾವಚೇಷ್ಟೆಗಳನ್ನು ನೋಡಿದರೆ ಸೀತಾದೇವಿಯು ತೆಂಕಣದಿಕ್ಕಿಗೆ ಅಂತರಿಕ್ಷಮಾರ್ಗದಲ್ಲಿ ಹೋದಳೆಂದು ತಿಳಿದು

ಬರುತ್ತವೆ. ನಾವು ಶೀಘ್ರವಾಗಿ ಮುಂದಕ್ಕೆ ಹೋದರೆ ಸೀತಾದೇವಿಯ ವೃತ್ತಾಂತವನ್ನು ಅರಿಯಬಹುದು" ಎಂದು ಹೇಳಿದನು.

ಶ್ರೀರಾಮನು ಲಕ್ಷ್ಮಣನ ವಾಕ್ಯವನ್ನು ಅಂಗೀಕರಿಸಿ ಅವನೊಡನೆ ದಕ್ಷಿಣದಿಕ್ಕಿಗೆ ಹೊರಟನು. ಅವನು ದಾರಿಯಲ್ಲಿ ಹೂಗಿಡಗಳಿಂದ ಬಹಳವಾಗಿ ಬಿದ್ದಿದ್ದ ಪುಷ್ಪಗಳನ್ನು ಕಂಡು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣಾ, ನಾನು ಅತಿ ಮನಃಪೂರ್ವಕವಾಗಿ ಸರಗಳಾಗಿ ಕಟ್ಟಿ ಸೀತಾದೇವಿಗೆ ಕೊಟ್ಟ ಪುಷ್ಪಗಳೇ ಇವು. ಸೂರ್ಯನೂ ವಾಯುವೂ ಭೂಮಿಯೂ ಈ ಪುಷ್ಪಗಳನ್ನು ಕುರುಹಾಗಿ ತೋರಿಸಿ ನನಗೆ ಪ್ರಿಯವನ್ನು ಮಾಡಬೇಕೆಂದು ಇವನ್ನು ಕಾಣಿಸದೆ ರಕ್ಷಿಸಿಕೊಂಡಿರುವರು" ಎಂದನು. ಮುಂಭಾಗದಲ್ಲಿರುವ ಒಂದು ಪರ್ವತವನ್ನು ಕಂಡು ಅತ್ಯಂತ ಕೋಪಯುಕ್ತನಾಗಿ ರಘುರಾಜನು ಹುಲಿ ಮೃಗಗಳನ್ನು ಕೊಂದು ಬಿಡುವಂತೆ ಆ ಪರ್ವತವನ್ನು ಕುರಿತು "ಎಲೈ ಪರ್ವತವೇ, ಈ ಮಾರ್ಗದಲ್ಲಿ ಸೀತಾದೇವಿಯು ಹೋಗಿರಬೇಕು. ನೀನರಿಯದ ವೃತ್ತಾಂತವಿಲ್ಲ. ನನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನು ತೋರಿಸು. ತೋರಿಸದಿದ್ದರೆ ನಿನ್ನ ತಪ್ಪಲುಗಳನ್ನೂ ಶಿಖರಗಳನ್ನೂ ನಾಶಮಾಡುವೆನು. ನೀನು ನನ್ನ ಬಾಣಾಗ್ನಿಯಿಂದ ಭಸ್ಮರಾಶಿಯಾಗಿ ಮರ ಗಿಡ ಬಳ್ಳಿ ಮೊದಲಾದ ಏನೂ ಇಲ್ಲದೆ ಶೂನ್ಯವಾಗಿಹೋಗುವೆ" ಎಂದು ನುಡಿದನು. ಆ ಪರ್ವತದ ಸಮೀಪದ ವನಭೂಮಿಗಳಲ್ಲಿ ಸುರಿದಿದ್ದ ಹೂಗಳಿಂದ ಸೀತಾದೇವಿಯು ಹೋದ ಮಾರ್ಗವನ್ನು ತಿಳಿದು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣಾ, ಇಲ್ಲಿ ಹರಿಯುವ ಈ ನದಿಯಾದರೂ ನನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನು ತೋರಿಸದ ಪಕ್ಷದಲ್ಲಿ ನನ್ನ ಬಾಣಾಗ್ನಿಯಿಂದ ಇದರ ಜಲವನ್ನು ಒಣಗಿಸಿ ಬಿಡುತ್ತೇನೆ" ಎಂದು ನಿಷ್ಠುರೋಕ್ತಿಗಳನ್ನು ನುಡಿಯುತ್ತ ತನ್ನ ಕ್ರೂರದೃಷ್ಟಿಯಿಂದ ಲೋಕವೆಲ್ಲವನ್ನೂ ದಹಿಸುವಂತೆ ದಿಕ್ಕುಗಳನ್ನು ನೋಡುತ್ತ ಮುಂದೆ ನಡೆದನು. ದಾರಿಯಲ್ಲಿ ದೊಡ್ಡದಾಗಿದ್ದ ರಾಕ್ಷಸನ ಹೆಜ್ಜೆಯನ್ನೂ ಸೀತಾದೇವಿಯ ಹೆಜ್ಜೆಯನ್ನೂ ತುಂಡುತುಂಡಾಗಿ ಮುರಿದು ಬಿದ್ದಿದ್ದ ಬಿಲ್ಲುಬಾಣಗಳನ್ನೂ ಬತ್ತಳಿಕೆಗಳನ್ನೂ ರಥವನ್ನೂ ಕಂಡು ವಿಷಾದದಿಂದ ಲಕ್ಷ್ಮಣನನ್ನು ಕುರಿತು ಹೀಗೆ ಹೇಳಿದನು: "ಎಲೈ ಲಕ್ಷ್ಮಣಾ, ಸೀತಾದೇವಿಯು ಧರಿಸಿದ್ದ ಭೂಷಣಗಳ ಚಿನ್ನದ ಚಿಕ್ಕಚಿಕ್ಕ ಚೂರುಗಳು ಇಲ್ಲಿ ಬಿದ್ದಿವೆ. ನೋಡು. ಆ ದೇವಿಯು ಮುಡಿದಿದ್ದ ಪುಷ್ಪಮಾಲಿಕೆಗಳು ಬಿದ್ದಿವೆ. ಲಕ್ಷ್ಮಣಾ, ಸುತ್ತಲಿರುವ ಈ ಭೂಮಿಯಲ್ಲಿ ರಕ್ತಬಿಂದುಗಳು ಕಾಣುತ್ತಿವೆ. ಇಲ್ಲಿ ಮಾಂಸಾಹಾರಿಗಳಾಗಿ ಕಾಮರೂಪಿಗಳಾದ ರಾಕ್ಷಸರು ಸೀತಾದೇವಿಯನ್ನು ಕಡಿದು ಭಕ್ಷಣಮಾಡಿರಬೇಕು. ಆಕೆಯ ನಿಮಿತ್ತವಾಗಿ ಯಾರೋ ಇಬ್ಬರಿಗೆ ಯುದ್ಧವಾದ ಹಾಗಿದೆ. ರತ್ನಗಳಿಂದ ಕೆತ್ತಲ್ಪಟ್ಟು ಅಪರಂಜಿಯ ಕಟ್ಟುಗಳಿಂದ ಅಲಂಕರಿಸಲ್ಪಟ್ಟ ಧನುಸ್ಸು ಮುರಿದು ತುಂಡುತುಂಡಾಗಿ ಬಿದ್ದಿದೆ. ಇದು ಯಾರ ಧನುಸ್ಸೋ ತಿಳಿಯಲಿಲ್ಲ. ಯಾರೋ ಇಬ್ಬರು ರಾಕ್ಷಸರಿಗೆ ಯುದ್ಧವಾಗಿರಬೇಕು. ಸುವರ್ಣಕವಚವೂ ಉರಸ್ತ್ರಾಣವೂ ದಿವ್ಯಛತ್ರವೂ ಕತ್ತರಿಸಿ ಬಿದ್ದಿವೆ. ಮಹಾಭಯಂಕರವಾದ ಪಿಶಾಚಮುಖಗಳುಳ್ಳ ಹೇಸರಕತ್ತೆಗಳು ಗಾಯಪಡೆದು ಬಿದ್ದಿವೆ. ಸುವರ್ಣಮಯವಾದ ಧ್ವಜದಂಡವು ಬಿದ್ದಿದೆ. ಸಮರಸಂನದ್ಧವಾದ ರಥವು ತುಂಡು ತುಂಡಾಗಿ ಮುರಿದುಬಿದ್ದಿದೆ. ಶರಗಳಿಂದ ಪರಿಪೂರ್ಣವಾದ ಬತ್ತಳಿಕೆಗಳು ಹರಿದುಬಿದ್ದಿವೆ. ಈ ತುಂಡಾದ ಕೈಗಳು ಸಾರಥಿಯದಾಗಿರಬೇಕು. ಈ ಹೆಜ್ಜೆಯು ರಾಕ್ಷಸನದೆಂದು ಪ್ರಕಟವಾಗಿ ಕಾಣುತ್ತಿದೆ. ಆ ರಾಕ್ಷಸನೊಡನೆ ನನಗಿಂತಲೂ ನೂರುಮಡಿ ವಿಶೇಷವಾದ ವೈರವುಳ್ಳವನೊಬ್ಬನು ಯುದ್ಧಮಾಡಿದ್ದಾನೆ. ಕಾಮರೂಪಿಗಳಾಗಿ ಭಯಂಕರಾಕಾರರಾದ ರಾಕ್ಷಸರು ಸೀತಾದೇವಿಯನ್ನು ಎತ್ತಿಕೊಂಡು ಹೋದರೋ — ಕೊಂದು ತಿಂದರೋ ತಿಳಿಯಲಿಲ್ಲ. ಅಕಟಕಟಾ! ರಾಕ್ಷಸರು

ಜಾನಕಿಯನ್ನು ಎತ್ತಿಕೊಂಡು ಹೋಗುವಾಗ ಧರ್ಮದೇವತೆಯಾದರೂ ರಕ್ಷಿಸಬೇಡವೇ ಹೋದಳಲ್ಲ! ಲಕ್ಷ್ಮಣ, ಆ ರಾಕ್ಷಸನನ್ನು ತಡೆದು ಸೀತಾದೇವಿಯನ್ನು ಬಿಡಿಸಿ ನನಗೆ ಉಪಕಾರಮಾಡುವುದಕ್ಕೆ ಸಮರ್ಥರು ಇಲ್ಲದೆ ಹೋದರಲ್ಲವೆ? ಲೋಕದಲ್ಲಿ ಯಾವನು ಕೇವಲ ದಯಾಳುವಾಗಿರುವನೋ ಅವನು ಪ್ರಪಂಚವನ್ನೇ ಸೃಷ್ಟಿಸಬಲ್ಲ ಸಾಮರ್ಥ್ಯವುಳ್ಳವನಾಗಿದ್ದರೂ, ಲೋಕೈಕವೀರನಾಗಿದ್ದರೂ ಸಮಸ್ತಜಂತುಗಳೂ ಅವನನ್ನು ಅಲಕ್ಷ್ಯದಿಂದ ಕಾಣುವುವು. ಅವನ ನಿಜವಾದ ಸಾಮರ್ಥ್ಯ ವನ್ನರಿಯದೆ ಅವನನ್ನು ಅವಮಾನಪಡಿಸುವುವು. ನನ್ನ ಸೌಮ್ಯಗುಣದಿಂದ ನನ್ನ ಸದ್ಗುಣಗಳು ಅವಗುಣಗಳಾಗಿಯೇ ಪರಿಣಮಿಸಿದವು. ಲೋಕದಲ್ಲಿ ಸೂರ್ಯನು ಉದಯವಾದರೆ ಚಂದ್ರನು ಕಾಂತಿ ತಗ್ಗಿ ಅದೃಶ್ಯನಾಗುವಂತೆ ನಾನು ನನ್ನ ಪರಾಕ್ರಮವನ್ನು ತೋರಿಸಿದರೆ, ಸಮಸ್ತ ರಾಕ್ಷಸಕುಲವೂ ಸುಟ್ಟು ಕೆಟ್ಟುಹೋಗುವುದು. ಸಮಸ್ತ ಗುಣಗಳನ್ನೂ ಮರೆಸಿ ನನ್ನ ತೇಜೋಗುಣವನ್ನು ಪ್ರಕಾಶ ಪಡಿಸಿದರೆ, ಯಕ್ಷ ಗಂಧರ್ವ ಕಿನ್ನರ ಕಿಂಪುರುಷ ಪಿಶಾಚ ರಾಕ್ಷಸರಲ್ಲಿ ಯಾರೂ ನನ್ನ ಮುಂದೆ ನಿಲ್ಲಲಾರರು. ಎಲೈ ಲಕ್ಷ್ಮಣ, ನಾನು ನನ್ನ ಬಿಲ್ಲಿನಲ್ಲಿ ಬಾಣಗಳನ್ನು ಹೂಡಿ ಪುಂಖಾನುಪುಂಖವಾಗಿ ಎಸೆದು ಸೂರ್ಯಚಂದ್ರರನ್ನು ಉರುಳಿಸಿ ಅಂಧಕಾರವು ಕವಿಯುವ ಹಾಗೆ ಮಾಡುತ್ತೇನೆ. ವಾಯುವು ಚಲಿಸದ ಹಾಗೆ ಮಾಡುತ್ತೇನೆ. ಪರ್ವತಗಳನ್ನು ಚೂರ್ಣಮಾಡುತ್ತೇನೆ. ಸಮುದ್ರವು ಬತ್ತಿಹೋಗುವ ಹಾಗೆಯೂ ತರು ಬಳ್ಳಿ ಮೊದಲಾದವುಗಳು ಭಸ್ಮವಾಗುವಹಾಗೆಯೂ ಮಾಡುತ್ತೇನೆ. ಲೋಕಗಳನ್ನು ನಾಶಮಾಡುತ್ತೇನೆ. ದಿಗ್ದೇವತೆಗಳಾದರೂ ನನ್ನ ಪ್ರಾಣಕಾಂತೆಯಾದ ಜಾನಕಿಯನ್ನು ತೋರಿಸದಿದ್ದರೆ ಈ ಕ್ಷಣದಲ್ಲಿಯೇ ನನ್ನ ಬಾಣಗಳ ಪರಾಕ್ರಮವನ್ನು ಕಾಣುವರು. ಎಲೈ ಲಕ್ಷ್ಮಣ, ನನ್ನ ಬಿಲ್ಲಿನಿಂದ ಎಸೆಯಲ್ಪಡುವ ಬಾಣಗಳಿಂದ ಇಟ್ಟಣಿಸಲ್ಪಡುವ ಅಂತರಿಕ್ಷಮಾರ್ಗದಲ್ಲಿ ದೇವತೆಗಳು ಸಂಚರಿಸದಂತೆ ಮಾಡುತ್ತೇನೆ. ನಾನು ಸೀತಾದೇವಿಯ ನಿಮಿತ್ತವಾಗಿ ಶರಸಂಧಾನಮಾಡಿ ದೇವದಾನವರಾಕ್ಷಸಾದಿ ಗಳೆಲ್ಲರನ್ನೂ ಲಯವನ್ನೈದಿಸುತ್ತೇನೆ" ಎಂದು ಕೋಪಾಟೋಪದಿಂದ ಕಣ್ಣುಗಳನ್ನು ಕೆಂಪುಮಾಡಿ ಕೊಂಡು ಬಿಲ್ಲನ್ನು ಹಿಡಿದು ಹೆದೆಯನ್ನೇರಿಸಿ ಝೇಂಕಾರಮಾಡಿದನು. ಪ್ರಳಯಕಾಲಾಗ್ನಿಯಂತೆ ಅತಿ ಭಯಂಕರವಾದ ಒಂದು ಬಾಣವನ್ನು ಹೂಡಿ ಲಕ್ಷ್ಮಣನನ್ನು ನೋಡುತ್ತ "ಎಲೈ ಲಕ್ಷ್ಮಣ, ಲೋಕದಲ್ಲಿ ಕಾಲತುಂಬಿದವರಿಗೆ ಮೃತ್ಯುದೇವತೆಯು ಹೇಗೆ ಅನಿವಾರ್ಯವೋ, ಹಾಗೆ ನನ್ನ ಶರಗಳಿಗೆ ಗುರಿಯಾದವರಿಗೆ ಮೃತ್ಯು ತಪ್ಪದು. ಆದ್ದರಿಂದ ಯಾರಾದರೂ ನನ್ನ ಪ್ರಾಣಕಾಂತೆಯಾದ ಜಾನಕಿಯನ್ನು ತಂದುಕೊಡದಿದ್ದರೆ ಭೂಮಂಡಲವನ್ನು ಸಮಸ್ತ ವನಪರ್ವತ ಸಹಿತವಾಗಿ ಉರುಳಿಸಿ ತಲೆಕೆಳಗುಮಾಡುತ್ತೇನೆ" ಎಂದು ಆರ್ಭಟಿಸಿದನು.



೬೫ ನೆಯ ಅಧ್ಯಾಯ

## ಲಕ್ಷ್ಮಣನು ಶ್ರೀರಾಮನಿಗೆ ಹೇಳಿದ ಸಮಾಧಾನ

ಈ ಪ್ರಕಾರದಲ್ಲಿ ಶ್ರೀರಾಮನು ವಿರಹತಾಪದಿಂದ ಕಂಗೆಟ್ಟು ಸೀತಾದೇವಿಯನ್ನು ನಾನಾದಿಕ್ಕು ಗಳಲ್ಲಿಯೂ ಹುಡುಕಿ ಕಾಣದೆ ಪ್ರಳಯಕಾಲಾಗ್ನಿಯಂತೆ ಅತ್ಯಂತ ಕೋಪಯುಕ್ತನಾದನು. ಹೆದೆಯೇರಿಸಿದ ಬಿಲ್ಲನ್ನು ನೋಡುತ್ತ ಅಡಿಗಡಿಗೆ ನಿಟ್ಟುಸಿರುಬಿಡುತ್ತ ಪ್ರಳಯಕಾಲದ ರುದ್ರನಂತೆ ಆವೇಶ ತಳೆದನು. ಎಂದೂ ಕಾಣದ ಅವನ ಕೋಪಾತಿರೇಕವನ್ನು ಕಂಡು ಲಕ್ಷ್ಮಣನು ಹೀಗೆಂದನು :

" ಶ್ರೀರಾಮ, ಸ್ವಾದುಗುಣಸಂಪತ್ತಿಯುಕ್ತನಾದ ನೀನು ಈಗ ಕೋಪಪರವಶನಾಗಿ ನಿನ್ನ ಸ್ವಭಾವ ಗುಣವನ್ನು ಬಿಡಬಹುದೆ ? ಚಂದ್ರನಲ್ಲಿ ಸಮಸ್ತ ಜಗತ್ತಿಗೂ ಸಂತೋಷಕರವಾದ ಕಾಂತಿಯೂ ಸೂರ್ಯನಲ್ಲಿ ತೇಜಸ್ಸೂ ವಾಯುವಿನಲ್ಲಿ ಚಲನವೂ ಭೂಮಿಯಲ್ಲಿ ಕ್ಷಮೆಯೂ ಇರುವಂತೆ ನಿನ್ನಲ್ಲಿ ಸೌಜನ್ಯಗುಣವೂ ಸರ್ವಜೀವದಯಾಪರತ್ವವೂ ಇವೆಯೆಂದು ನೀನು ಲೋಕದಲ್ಲಿ ಕೀರ್ತಿ ಪಡೆದಿರುವೆ. ಲೋಕದಲ್ಲಿ ಒಬ್ಬ ಪ್ರಾಣಿಯು ಅಪರಾಧಮಾಡಿದರೆ ಅವನ ಅಪರಾಧಕ್ಕಾಗಿ ಸರ್ವ ಪ್ರಾಣಿಗಳನ್ನೂ ಸಂಹರಿಸಬೇಕೆಂಬುದು ನೀತಿಯಲ್ಲ. ಲೋಕದಲ್ಲಿ ಒಬ್ಬನ ಅಪರಾಧಕ್ಕಾಗಿ ಬಲವಂತನು ಬಹುಮಂದಿಯನ್ನು ಕೊಲ್ಲುವುದು ನ್ಯಾಯಸಂಮತವಲ್ಲ. ಅರಸರು ಒಬ್ಬನು ಅಪರಾಧವನ್ನು ಮಾಡಿದರೆ ಆ ಅಪರಾಧದ ಬಲಾಬಲಗಳನ್ನು ವಿಚಾರಿಸಿ ಅವನನ್ನು ಮಾತ್ರವೇ ದಂಡಿಸುವರಲ್ಲದೆ ಉಳಿದವರನ್ನು ದಂಡಿಸರು. ಸಮಸ್ತ ಪ್ರಾಣಿಗಳಿಗೂ ಶರಣ್ಯನಾಗಿ ಕೃಪಾಳುವಾದ ನಿನಗೆ ನಿನ್ನ ಪತ್ನಿಯು ನಷ್ಟಳಾಗುವುದನ್ನು ಯಾರು ತಾನೇ ಸಹಿಸುವರು ? ಸೀತಾದೇವಿಯನ್ನು ಯಾವನು ಅಪಹರಿಸಿರುವನೋ ಅವನನ್ನು ಹುಡುಕೋಣ. ನೀನು ಧನುರ್ಧಾರಿಯಾಗಿ ಅನ್ವೇಷಣೆ ಮಾಡುತ್ತಾ ಹೊರಡು. ನಾನು ನಿನಗೆ ಸಹಾಯಮಾಡುತ್ತೇನೆ. ಈ ವನದಲ್ಲಿರುವ ಋಷಿಗಳೂ ನಮಗೆ ನೆರವಾಗುತ್ತಾರೆ. ಪರ್ವತಗಳು ಗುಹೆಗಳು ಸಮುದ್ರಗಳು ವನಗಳು ಕೊಳಗಳು ದೇವಗಂಧರ್ವಲೋಕಗಳು ಮೊದಲಾದ ಸಮಸ್ತ ಸ್ಥಾನಗಳಲ್ಲಿಯೂ ಸೀತಾದೇವಿಯನ್ನು ಹುಡುಕೋಣ. ಅಪಹರಿಸಿದವನನ್ನು ಕಂಡುಹಿಡಿಯೋಣ. ಶ್ರೀರಾಮ, ಅನಂತರ ನಯ ವಿನಯಗಳಿಂದ ಕೇಳಿದರೂ ಸೀತೆಯನ್ನೊಪ್ಪಿಸದಿದ್ದರೆ, ವಜ್ರಾಯುಧಸದೃಶಗಳಾದ ನಿನ್ನ ನಿಶಿತಬಾಣಗಳನ್ನು ಪ್ರಯೋಗಿಸಿ ತಕ್ಕುದನ್ನು ಮಾಡಬಹುದು " ಎಂದು ಸಮಾಧಾನ ಹೇಳಿದನು.



## ೬೬ ನೆಯ ಅಧ್ಯಾಯ

## ಲಕ್ಷ್ಮಣನು ಶ್ರೀರಾಮನಿಗೆ ಔಚಿತ್ಯವನ್ನು ಹೇಳಿದ್ದು

ಈ ಪ್ರಕಾರ ಸೀತಾದೇವಿಯ ವಿರಹದಿಂದ ಅನಾಥನಂತೆ ಕಂಗೆಟ್ಟು ಚೈತನ್ಯಗುಂದಿ ಹಂಬಲಿಸುತ್ತಿದ್ದ ಶ್ರೀರಾಮನನ್ನು ಕಂಡು, ಲಕ್ಷ್ಮಣನು ಆತನ ಪಾದಗಳನ್ನು ಮುಟ್ಟಿ ನಮಸ್ಕರಿಸಿ ವಿನಯದಿಂದ ಹೇಳಿದನು : " ಅಣ್ಣ, ದೇವತೆಗಳು ಅತಿಪ್ರಯಾಸದಿಂದ ಅಮೃತವನ್ನು ಪಡೆದಂತೆ ದಶರಥರಾಜನು ತಪಸ್ಸಿನಿಂದಲೂ ಅನೇಕ ವ್ರತೋಪವಾಸನಿಯಮಗಳಿಂದಲೂ ನಿನ್ನನ್ನು ಪಡೆದು ನಿನ್ನ ಕಲ್ಯಾಣಗುಣಗಳಿಂದ ಬದ್ಧನಾಗಿ ನಿನ್ನ ವಿಯೋಗದಿಂದ ದೇವಲೋಕವನ್ನೈದಿದನು. ನೀನೇ ಇಂಥ ದುಃಖವನ್ನು ಸಹಿಸಿಕೊಳ್ಳಲಾರದಿದ್ದರೆ ಪ್ರಾಕೃತನಾದ ಯಾವ ಮನುಷ್ಯನು ಸಹಿಸಿಕೊಂಡಾನು ? ನೀನು ದುಃಖಬಂದದ್ದಕ್ಕಾಗಿ ಸಮಸ್ತ ಲೋಕಗಳನ್ನೂ ದಹಿಸಿದರೆ ಜನರನ್ನು ರಕ್ಷಿಸತಕ್ಕವರಾರು ? ಮನುಷ್ಯರಿಗೆ ಸುಖದುಃಖಗಳು ಬಂದಾಗ ಅವೆರಡನ್ನೂ ಸಮವಾಗಿ ಭಾವಿಸಿ ಸುಖಬಂದಾಗ ಹೆಚ್ಚದೆ ದುಃಖಬಂದಾಗ ಕುಗ್ಗದೆ ಇರಬೇಕಲ್ಲದೆ, ದುಃಖವು ಬಂದಾಗ ಕೋಪದಿಂದ ಪರರಿಗೆ ಉಪದ್ರವ ವನ್ನುಂಟುಮಾಡಬಾರದು. ಪೂರ್ವದಲ್ಲಿ ನಹುಷರಾಯನ ಮಗನಾದ ಯಯಾತಿರಾಯನು ಇಂದ್ರಲೋಕವನ್ನು ಪಡೆದು ಪುನಃ ಭೂಮಿಯಲ್ಲಿ ಬಿದ್ದನು. ನಮ್ಮ ಪುರೋಹಿತನಾದ ವಸಿಷ್ಠ ಮುನೀಶ್ವರನು ತನ್ನ ನೂರುಮಂದಿ ಮಕ್ಕಳನ್ನೂ ಕಳೆದುಕೊಂಡನು. ಸರ್ವಲೋಕಪೂಜ್ಯಳಾದ

ಭೂದೇವಿಯು ಚಲಿಸುತ್ತಿದ್ದಾಳೆ. ಸಮಸ್ತ ಜಗತ್ತುಗಳಿಗೂ ಕಣ್ಣುಗಳಂತೆ ಇದ್ದು ಸರ್ವವಸ್ತುಗಳನ್ನೂ ಪ್ರಕಾಶಮಾಡುವ ಚಂದ್ರಸೂರ್ಯರು ರಾಹುವಿನಿಂದ ಗ್ರಹಣವನ್ನೈದುತ್ತಿದ್ದಾರೆ. ಶ್ರೀರಾಮ, ಲೋಕದಲ್ಲಿರುವ ಸಮಸ್ತ ಪ್ರಾಣಿಗಳೂ ಇಂದ್ರಾದಿ ದೇವತೆಗಳೂ ದೈವಗತಿಯನ್ನು ಮೀರಲಾರದೆ ಹೋಗಿದ್ದಾರೆ. ಇಂದ್ರಾದಿ ದೇವತೆಗಳಿಗೂ ಸುಖದುಃಖಗಳುಂಟು. ಸೀತಾದೇವಿಯು ನಷ್ಟಳಾಗಲಿ. ಅಪಹೃತಳಾಗಲಿ—ಯಾವ ಸಂದರ್ಭದಲ್ಲಿಯೂ ನೀನು ಅಲ್ಪಮನುಷ್ಯರಂತೆ ಶೋಕಮಾಡುವುದು ಉಚಿತವಲ್ಲ. ಸುಖದುಃಖಗಳನ್ನು ಸಮಾನವಾಗಿ ಕಾಣಬೇಕು. ನಿನ್ನಂಥ ಮಹಾತ್ಮರು ಮಹತ್ತಾದ ದುಃಖವು ಪ್ರಾಪ್ತವಾದರೂ ಶೋಕಪಡರು. ಜ್ಞಾನದೃಷ್ಟಿಯಿಂದ ವಿಚಾರಿಸಿ ನೋಡು. ಲೋಕದಲ್ಲಿ ಜ್ಞಾನಿಗಳು ಧ್ಯಾನಾಸಕ್ತರಾಗಿ ಜ್ಞಾನದೃಷ್ಟಿಯಿಂದಲೇ ತಮ್ಮ ಶುಭಾಶುಭಗಳನ್ನು ವಿಚಾರಿಸಿಕೊಳ್ಳುವರು. ಕ್ರಿಯೆಯಲ್ಲಿ ತೊಡಗಿದ ಹೊರತು ಜನ್ಮಾಂತರದ ಪಾಪಪುಣ್ಯಗಳು ಫಲವನ್ನು ಕೊಡುವುದಿಲ್ಲವೆಂದು ಪೂರ್ವದಲ್ಲಿ ನೀನೇ ನನಗೆ ಉಪದೇಶ ಮಾಡಿದ್ದೀಯೆ. ಸಾಕ್ಷಾತ್ ಬೃಹಸ್ಪತಿಯಾದರೂ ನಿನಗೆ ಬೋಧಿಸುವುದಕ್ಕೆ ಸಮರ್ಥನಲ್ಲ. ಹಾಗಿರಲು ನಾನು ನಿನಗೆ ಬೋಧಿಸಲು ಸಮರ್ಥನೇ! ಶ್ರೀರಾಮ, ನೀನು ಮಹಾಪ್ರಾಜ್ಞನು. ನಿನ್ನ ತತ್ತ್ವಜ್ಞಾನವು ಸೀತಾದೇವಿಯ ವಿರಹದುಃಖದಿಂದ ಮರೆಯಾಗಿರುವುದರಿಂದ ನಾನು ಅದನ್ನು ಸ್ಮರಣೆಗೆ ತಂದುಕೊಟ್ಟೆನಲ್ಲದೆ ನಿನಗೆ ಬೋಧನೆಯನ್ನು ಮಾಡಲಿಲ್ಲ. ಶ್ರೀರಾಮ, ನೀನು ನಿನ್ನ ದಿವ್ಯಮಾನುಷಾವತಾರವನ್ನೂ ನಿನ್ನ ಪರಾಕ್ರಮಾತಿಶಯವನ್ನೂ ವಿಚಾರಿಸಿಕೊಂಡು ನಿನ್ನ ಶತ್ರುಗಳಾದ ರಾಕ್ಷಸರ ವಧೆಗೆ ತಕ್ಕ ಯೋಚನೆಯನ್ನು ಮಾಡು. ನಿನಗೆ ಸಮಸ್ತ ಭೂತಗಳನ್ನು ವಿನಾಶಮಾಡುವುದರಿಂದ ಬರುವ ಪ್ರಯೋಜನವೇನು? ಆದ್ದರಿಂದ ನಮಗೆ ಶತ್ರುವಾದವನಾರೆಂದು ವಿಚಾರಿಸಿ ಅವನನ್ನು ಕೊಲ್ಲುವುದಕ್ಕೆ ಯತ್ನಮಾಡು" ಎಂದು ನುಡಿದನು.



## ೬೭ನೆಯ ಅಧ್ಯಾಯ

## ಜಟಾಯುವಿನ ದರ್ಶನ

ಈ ರೀತಿಯಲ್ಲಿ ಲಕ್ಷ್ಮಣನು ಸೀತಾವಿಯೋಗದುಃಖದಿಂದ ಕೋಪಾಕ್ರಾಂತನಾದ ಶ್ರೀರಾಮನ ದುಃಖವನ್ನು ಪರಿಹರಿಸಲು ಸಮಾಧಾನವಚನಗಳನ್ನಾಡಿದನು. ಶ್ರೀರಾಮನು ತಾನು ಜ್ಯೇಷ್ಠನಾದರೂ ತಮ್ಮನಾದ ಲಕ್ಷ್ಮಣನ ವಾಕ್ಯಗಳ ಗುಣವನ್ನು ಗ್ರಹಿಸಿ ತನ್ನ ಕೋಪವನ್ನು ತಗ್ಗಿಸಿದನು. ಅವನು ತನ್ನ ಬಿಲ್ಲನ್ನೂರಿಕೊಂಡು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ನಾವಿನ್ನೇನು ಮಾಡೋಣ? ಯಾವ ದಿಕ್ಕಿಗೆ ಹೋಗೋಣ? ಯಾವ ಉಪಾಯದಿಂದ ಸೀತಾದೇವಿಯನ್ನು ಹುಡುಕೋಣ? ವಿಚಾರಮಾಡು" ಎಂದು ಚಿಂತಾಕ್ರಾಂತನಾಗಿ ಹೇಳಿದನು.

ಲಕ್ಷ್ಮಣನು "ಅಣ್ಣ, ಈ ಜನಸ್ಥಾನವೆಂಬ ಸ್ಥಳವು ಯಾವಾಗಲೂ ಬಹುಜನ ರಾಕ್ಷಸರಿಂದ ಇಟ್ಟಣಿಸಿರುವುದು. ಈ ಪರ್ವತದಲ್ಲಿ ಅನೇಕ ದುರ್ಗಗಳೂ ನಾನಾ ಮೃಗಸಮೂಹದಿಂದಿಟ್ಟಣಿಸಿದ ಗುಹೆಗಳೂ ಕಿನ್ನರ ಕಿಂಪುರುಷ ಗಂಧರ್ವಾದಿಗಳಿರುವ ಸ್ಥಾನಗಳೂ ಇವೆ. ನಾವು ಈ ಸ್ಥಾನಗಳಿಗೆ ಹೋಗಿ ನೋಡೋಣ. ನಿನ್ನಂಥ ಮಹಾತ್ಮರಾದ ಬುದ್ಧಿವಂತರು ಮಹತ್ತಾದ ಆಪತ್ತುಗಳು ಬಂದರೂ, ಬಿರುಗಾಳಿಯ ವೇಗದಿಂದ ಪರ್ವತಗಳು ಚಲಿಸದಂತೆ ಕಂಗೆಡರು" ಎಂದು ಹೇಳಿದನು.

ಅನಂತರ ಅವರಿಬ್ಬರೂ ಮುಂದೆ ಹೋಗುತ್ತ ಮಾರ್ಗದಲ್ಲಿ ಮಹಾಶರೀರನಾದ ಜಟಾಯುವು ಬಿದ್ದಿರುವುದನ್ನು ಕಂಡರು. ಶ್ರೀರಾಮನು ಜಟಾಯುವೆಂದರಿಯದೆ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ಅಗೋ ನೋಡು! ಯಾವನೋ ಒಬ್ಬ ರಾಕ್ಷಸನು ಮಾರೀಚನಂತೆ ಕಪಟದಿಂದ ಹದ್ದಿನ ರೂಪದಿಂದ ಬಿದ್ದುಕೊಂಡಿದ್ದಾನೆ. ಇವನು ಸೀತಾದೇವಿಯನ್ನು ಭಕ್ಷಣಮಾಡಿರಬೇಕು. ಏನೂ ಅರಿಯದವನಂತೆ ಸುಖವಾಗಿ ಮಲಗಿದ್ದಾನೆ. ಘೋರವಾದ ನನ್ನ ಬಾಣಗಳಿಂದ ಈ ರಾಕ್ಷಸನನ್ನು ಕೊಲ್ಲುತ್ತೇನೆ" ಎಂದು ನುಡಿದನು.

ಸಮಸ್ತ ಭೂಮಂಡಲವೂ ಕಂಪಿಸುವಂತೆ ಅಟ್ಟಿ ಬರುತ್ತಿದ್ದ ಶ್ರೀರಾಮನನ್ನು ಕಂಡು ಜಟಾಯುವು ನೊರೆಸಹಿತವಾದ ರಕ್ತವನ್ನುಗುಳುತ್ತ ಹೀನಸ್ವರದಿಂದ "ಶ್ರೀರಾಮ, ಸಂಜೀವನೀಮೂಲಿಕೆಯನ್ನು ಅರಸುವಂತೆ ಯಾವಳನ್ನು ಅರಸಿಕೊಂಡು ಬಂದೆಯೋ ಆ ಸೀತಾದೇವಿಯನ್ನೂ ನನ್ನ ಪ್ರಾಣಗಳನ್ನೂ ಪಾಪಿಯಾದ ರಾವಣನು ಅಪಹರಿಸಿಕೊಂಡು ಹೋದನು. ನಾನು ಆ ದೇವಿಯನ್ನು ಬಿಡಿಸಿಕೊಳ್ಳಬೇಕೆಂದು ಅವನೊಡನೆ ಯುದ್ಧವನ್ನು ಮಾಡಿ ರಾವಣನನ್ನೂ ಆತನ ರಥವನ್ನೂ ಹೊಯ್ದು ಕೆಡಹಿದೆನು. ಮುರಿದು ಬಿದ್ದಿರುವ ಈ ಬಿಲ್ಲು ರಾವಣನದು. ಮುರಿದು ಬಿದ್ದಿರುವ ಈ ರಥವು ಆತನದು. ಗಾಯಪಡೆದು ಬಿದ್ದಿರುವ ಆ ರಾಕ್ಷಸನು ಅವನ ಸಾರಥಿ. ನಾನು ನನ್ನ ಗರಿಗಳ ಪೆಟ್ಟಿನಿಂದ ರಾವಣನ ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ಕೆಡಹಿ ಮಹತ್ತಾದ ಯುದ್ಧವನ್ನು ಮಾಡಿ ಆತನನ್ನು ಕಂಗೆಡಿಸಿದೆನು. ನಾನು ಬಳಲಿದ್ದ ಸಮಯದಲ್ಲಿ ಅವನು ನನ್ನ ಗರಿಗಳನ್ನು ಕತ್ತರಿಸಿ ತನ್ನ ಖಡ್ಗದಿಂದ ಅಳ್ಳೆಯ ಮೇಲೆ ತಿವಿದು ನನ್ನನ್ನು ಕೊಂದು ಸೀತಾದೇವಿಯನ್ನೆತ್ತಿಕೊಂಡು ಅಂತರಿಕ್ಷ ಮಾರ್ಗದಲ್ಲಿ ಹೋದನು. ಈ ಪ್ರಕಾರದಲ್ಲಿ ಮೊದಲೇ ರಾವಣನ ಆಯುಧದಿಂದ ಗಾಯಪಡೆದು ಬಿದ್ದಿರುವ ನನ್ನನ್ನು ನೀನೂ ಹೊಡೆಯಬೇಡ" ಎಂದು ನುಡಿದನು.

ಶ್ರೀರಾಮನು ಸೀತಾದೇವಿಯ ವೃತ್ತಾಂತವನ್ನು ಕೇಳಿ ಬಿಲ್ಲನ್ನು ಕೆಳಗೆ ಬಿಟ್ಟು ಜಟಾಯುವನ್ನು ತಬ್ಬಿಕೊಂಡು ಲಕ್ಷ್ಮಣಸಮೇತನಾಗಿ ರೋದಿಸಿದನು. ಅನಂತರ ಒಂಟಿಯಾಗಿ ರಾವಣನೊಡನೆ ಯುದ್ಧಮಾಡಿ ಗಾಯಪಡೆದು ನಿಟ್ಟುಸಿರುಬಿಡುತ್ತಿದ್ದ ಜಟಾಯುವನ್ನು ಕಂಡು ಅತ್ಯಂತ ದುಃಖಾಕ್ರಾಂತನಾಗಿ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ಇದುವರೆಗೂ ರಾಜ್ಯಭ್ರಷ್ಟನಾಗಿ ಬಂದ ದುಃಖವೂ ಸೀತಾದೇವಿಯ ವಿಯೋಗದುಃಖವೂ ಇದ್ದವು. ಈಗ ಅವುಗಳ ಜೊತೆಯಲ್ಲಿ ನಮ್ಮ ಪಿತೃಸಖನಾದ ಜಟಾಯುವಿನ ಮರಣಾವಸ್ಥೆಯೆಂಬ ದುಃಖವೊಂದುಂಟಾಗಿ ಭಾಗ್ಯಹೀನನಾದ ನನ್ನ ದೇಹವನ್ನು ಸುಡುತ್ತಿದೆ. ನನ್ನ ದುರ್ಭಾಗ್ಯವೆಷ್ಟೆಂದರೆ, ನಾನು ಮುಟ್ಟಿದರೆ ಸಮುದ್ರವೂ ಒಣಗಿ ಹೋಗುವುದು. ಲೋಕದಲ್ಲಿ ನನ್ನಂಥ ಭಾಗ್ಯಹೀನರಿಲ್ಲ. ನಮ್ಮ ಪಿತೃಸಖನಾಗಿ ವೃದ್ಧನಾದ ಜಟಾಯುವು ನನ್ನ ಭಾಗ್ಯಹೀನತೆಯಿಂದ ಗಾಯಪಡೆದು ಬಿದ್ದಿದ್ದಾನೆ" ಎಂದು ನುಡಿದು ತನ್ನ ತಂದೆಯಾದ ದಶರಥರಾಯನನ್ನು ಕಂಡಂತೆ ಭಾವಿಸಿ ವೇದನೆಯಿಂದ ನಿಟ್ಟುಸಿರುಬಿಡುತ್ತಿದ್ದ ಜಟಾಯುವನ್ನು ಅಪ್ಪಿಕೊಂಡನು. ಆಮೇಲೆ "ಎಲೈ ಜಟಾಯು, ನನ್ನ ಪ್ರಾಣಕಾಂತೆಯಾದ ಸೀತಾದೇವಿಯ ವೃತ್ತಾಂತವನ್ನು ವಿಸ್ತಾರವಾಗಿ ಹೇಳು" ಎಂದು ನುಡಿಯುತ್ತ ಮೂರ್ಛಿತನಾಗಿ ಬಿದ್ದನು.

---

೭೮ ನೆಯ ಅಧ್ಯಾಯ

## ಶ್ರೀರಾಮನು ಜಟಾಯುವಿಗೆ ಅಗ್ನಿಸಂಸ್ಕಾರಾದಿಗಳನ್ನು ಮಾಡಿದ್ದು

ಆಮೇಲೆ ಶ್ರೀರಾಮನು ಘೋರಸ್ವರೂಪನಾದ ರಾವಣನಿಂದ ಗಾಯಪಡೆದು ಬಿದ್ದ ಜಟಾಯುವನ್ನು ನೋಡಿ ಮಂತ್ರಾಲೋಚನೆಯಲ್ಲಿ ಚತುರನಾದ ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ಜಟಾಯುವು ನಮ್ಮ ಕಾರ್ಯನಿಮಿತ್ತವಾಗಿ ರಾವಣನೊಡನೆ ಯುದ್ಧವನ್ನು ಮಾಡಿ ಆತನ ಅಸ್ತ್ರದಿಂದ ಗಾಯಪಟ್ಟು ಪ್ರಾಣಗಳನ್ನು ಬಿಡುತ್ತಿದ್ದಾನೆ. ಕಂಗೆಟ್ಟು ಸ್ವರಹೀನನಾಗಿ ನನ್ನನ್ನು ನೋಡುತ್ತಿದ್ದಾನೆ!" ಎಂದನು. ಅನಂತರ "ಜಟಾಯು, ನಿನಗೆ ಮಾತನಾಡುವುದಕ್ಕೆ ಶಕ್ತಿಯಿದ್ದ ಪಕ್ಷದಲ್ಲಿ ಸೀತಾದೇವಿಯ ವೃತ್ತಾಂತವನ್ನು ವಿಸ್ತಾರವಾಗಿ ಹೇಳು. ರಾವಣನು ಸೀತಾದೇವಿಯನ್ನು ಯಾವಕಾರಣ ಅಪಹರಿಸಿಕೊಂಡು ಹೋದನು? ಆತನಿಗೆ ನಾನು ಮಾಡಿದ ಅಪರಾಧವೇನು? ಆತನು ಸೀತಾದೇವಿಯನ್ನು ಒಯ್ಯುವಾಗ ಕಳಂಕವಿಲ್ಲದ ಚಂದ್ರಮಂಡಲದಂತೆ ಒಪ್ಪುತ್ತಿರುವ ಜಾನಕಿಯ ಮುಖವು ಹೇಗಿತ್ತು? ಆ ದೇವಿಯು ಏನು ಹೇಳಿದಳು? ರಾವಣನ ಪರಾಕ್ರಮವೆಂಥದು? ಅವನ ಸ್ವರೂಪವೇನು? ಅವನಿರುವ ಸ್ಥಳವಾವುದು?" ಎಂದು ಕೇಳಿದನು.

ಧರ್ಮಾತ್ಮನಾದ ಜಟಾಯುವು ಮೆಲ್ಲಗೆ ಮಾತಾಡುತ್ತ ಆತನನ್ನು ಕುರಿತು "ಶ್ರೀರಾಮ, ರಾವಣನು ನನ್ನ ಗರಿಗಳನ್ನು ಕತ್ತರಿಸಿ ಗಾಯಮಾಡಿ ಸೀತಾದೇವಿಯನ್ನೆತ್ತಿಕೊಂಡು ತೆಂಕಣದಿಕ್ಕಿಗೆ ಹೋದನು. ರಾಮ, ನನ್ನ ಕಣ್ಣು ಒಳಕ್ಕೆ ಸೇದಿಕೊಳ್ಳುತ್ತಿದೆ. ಪ್ರಾಣ ಹೋಗುವುದರಲ್ಲಿದೆ. ಮರಣಸೂಚಕವಾದ ಸುವರ್ಣವೃಕ್ಷಗಳು ಕಾಣಿಸುತ್ತಿವೆ. ರಾವಣನು ವಿಂದವೆಂಬ ಮುಹೂರ್ತದಲ್ಲಿ ನಿನ್ನ ಪತ್ನಿಯನ್ನು ಅಪಹರಿಸಿದನು. ಆ ಮುಹೂರ್ತದಲ್ಲಿ ಅಪಹೃತವಾದ ವಸ್ತು ಪುನಃ ಅದರ ಸ್ವಾಮಿಗೆ ದೊರಕುತ್ತದೆ. ಆದ್ದರಿಂದ ಸೀತಾದೇವಿಯು ನಿನಗೆ ನಿಶ್ಚಯವಾಗಿಯೂ ದೊರೆಯುತ್ತಾಳೆ; ಚಿಂತಿಸಬೇಡ. ರಾವಣನಿಗೆ ವಿನಾಶಕಾಲವು ಸಮೀಪಿಸಿತು. ರಾವಣನು ವಿಶ್ರವಸ್ಸಿನ ಮಗ, ಕುಬೇರನ ತಮ್ಮ" ಎಂದು ಹೇಳುತ್ತಿರುವಾಗಲೇ ಅವನ ಬಾಯಿಯಿಂದ ರಕ್ತವು ಸುರಿಯಿತು. ಜಟಾಯುವಿನ ಪ್ರಾಣಪಕ್ಷಿ ಹಾರಿಹೋಯಿತು.

ಆಮೇಲೆ ಶ್ರೀರಾಮನು ಲೋಕಾಂತರವನ್ನೈದಿದ ಜಟಾಯುವನ್ನು ಕಂಡು ಅತ್ಯಂತ ದುಃಖಪಟ್ಟು ಲಕ್ಷ್ಮಣನನ್ನು ಕುರಿತು ಈ ರೀತಿ ನುಡಿದನು: "ಜಟಾಯುವು ಬಹುಮಂದಿ ರಾಕ್ಷಸರಿರುವ ಈ ಅರಣ್ಯದಲ್ಲಿ ಬಹುಕಾಲ ಯಾವ ಭಯವೂ ಇಲ್ಲದೆ ಸುಖವಾಗಿದ್ದನು. ಈತನು ಹುಟ್ಟಿ ಬಹಳ ವರುಷಗಳಾದವು. ಇವನು ಈಗ ನಮ್ಮ ಕಾರ್ಯಕ್ಕಾಗಿ ಶರೀರವನ್ನು ಬಿಟ್ಟನು. ಲೋಕದಲ್ಲಿ ಯಾರೂ ಕಾಲಗತಿಯನ್ನು ಮೀರಿದವರಿಲ್ಲ. ಜಟಾಯುವು ನಮಗೆ ಹಿತವನ್ನು ಮಾಡಿದನು. ಈತನು ಪರೋಪಕಾರಿ. ಸೀತಾದೇವಿಯ ನಿಮಿತ್ತವಾಗಿ ರಾವಣನೊಡನೆ ಯುದ್ಧವನ್ನು ಮಾಡಿ ನಮ್ಮ ಕಾರ್ಯಕ್ಕೋಸ್ಕರ ಪ್ರಾಣವನ್ನು ಬಿಟ್ಟನು. ಲಕ್ಷ್ಮಣ, ಲೋಕದಲ್ಲಿ ಧರ್ಮಿಷ್ಠರಾಗಿ ಪರೋಪಕಾರಿಗಳಾದ ಮಹಾತ್ಮರು ಅನೇಕರಿದ್ದಾರೆ. ಪಕ್ಷಿಜಾತಿಗಳಲ್ಲಿಯೂ ಪರೋಪಕಾರಕ್ಕಾಗಿ ತಮ್ಮ ಪ್ರಾಣಗಳನ್ನು ಬಿಡುವ ಉತ್ತಮಜೀವಿಗಳಿವೆ. ನನಗೆ ಸೀತಾದೇವಿಯ ವಿಯೋಗದುಃಖಕ್ಕೆ ಸಮಾನವಾದ ಇನ್ನೊಂದು ದುಃಖವು ಪ್ರಾಪ್ತವಾಯಿತು. ಜಟಾಯುವಿನ ಮರಣದಿಂದ, ದಶರಥರಾಯನ ಮರಣದಿಂದ ಬಂದ ದುಃಖಕ್ಕೆ ಸಮಾನವಾದ ದುಃಖವು ಸಂಭವಿಸಿತು. ಲಕ್ಷ್ಮಣ,

ನಮಗೆ ಜಟಾಯುವು ಪೂಜ್ಯನೂ ಮಾನ್ಯನೂ ಆದಕಾರಣ ಈತನಿಗೆ ದೇಹಸಂಸ್ಕಾರವನ್ನು ಮಾಡಬೇಕು. ನೀನು ಕಾಷ್ಠಗಳನ್ನು ಕೂಡಿಸಿ ಚಿತೆಯನ್ನು ನಿರ್ಮಿಸು. ನಮ್ಮ ಕಾರ್ಯಕ್ಕೋಸುಗ ಶರೀರವನ್ನು ಬಿಟ್ಟ ಜಟಾಯುವನ್ನು ಚಿತೆಯಮೇಲಿಟ್ಟು ದಹಿಸೋಣ. ಜಟಾಯುವು ಯಜ್ಞಾದಿ ಸತ್ಕರ್ಮಗಳನ್ನು ಮಾಡಿದ ಪುಣ್ಯಾತ್ಮರಿಗೆ ಯಾವ ಲೋಕಗಳುಂಟಾಗುವುವೋ ಅಂಥ ಲೋಕಗಳಿಗೆ ನನ್ನ ಅಪ್ಪಣೆಯಿಂದ ಹೋಗಲಿ" ಎಂದು ಹೇಳಿದನು. ಅನಂತರ "ಜಟಾಯು, ನನ್ನಿಂದ ಸತ್ಕರಿಸಲ್ಪಟ್ಟ ನೀನು ಉತ್ತಮವಾದ ಪುಣ್ಯಲೋಕಗಳಿಗೆ ಹೋಗು" ಎಂದು ನುಡಿದು ತಂದೆಗೆ ಮಾಡುವಂತೆ ಆತನಿಗೆ ಅಗ್ನಿಸಂಸ್ಕಾರಗಳನ್ನು ಮಾಡಿದನು. ಶ್ರೀರಾಮನು ದುಃಖಾಕ್ರಾಂತನಾಗಿ ಅರಣ್ಯಕ್ಕೆ ಹೋಗಿ ಒಂದು ಕೃಷ್ಣಸಾರಂಗ ಮೃಗವನ್ನು ಕೊಂದು ತಂದು ಅದರ ಮಾಂಸವನ್ನು ಜಟಾಯುವಿಗೆ ಅರ್ಪಿಸಿ ಎಳೆಯ ಹುಲ್ಲಿನಮೇಲೆ ವಾಯಸಪಿಂಡವನ್ನಿಕ್ಕಿ ತಂದೆಗೆ ಪಿತೃಕಾರ್ಯವನ್ನು ಮಾಡುವಂತೆ ಪಿತೃಕಾರ್ಯವನ್ನು ಮಾಡಿ ಸ್ವರ್ಗಾರೋಹಣಸೂಕ್ತಗಳನ್ನು ಜಪಿಸಿ ಲಕ್ಷ್ಮಣನ ಸಮೇತನಾಗಿ ಗೋದಾವರೀನದಿಗೆ ಹೋಗಿ ವಿಧ್ಯುಕ್ತಪ್ರಕಾರದಲ್ಲಿ ಸ್ನಾನವನ್ನು ಮಾಡಿ ಜಟಾಯುವಿಗೆ ತರ್ಪಣವನ್ನು ಕೊಟ್ಟನು. ಈ ಪ್ರಕಾರದಲ್ಲಿ ರಾಮಲಕ್ಷ್ಮಣರಿಂದ ಶಾಸ್ತ್ರೋಕ್ತಪ್ರಕಾರವಾಗಿ ಸಂಸ್ಕರಿಸಲ್ಪಟ್ಟ ಜಟಾಯುವು ಉತ್ತಮವಾದ ಗತಿಯನ್ನು ಪಡೆದನು. ಆ ಬಳಿಕ ರಾಮಲಕ್ಷ್ಮಣರು ಸೀತಾದೇವಿಯನ್ನು ಹುಡುಕುತ್ತ ವಿಷ್ಣುವೂ ದೇವೇಂದ್ರನೂ ಸ್ವರ್ಗಲೋಕದಲ್ಲಿ ಸಂಚರಿಸುವಂತೆ ಆ ವನದಲ್ಲಿ ಸಂಚರಿಸುತ್ತಿದ್ದರು.



## ೬೯ ನೆಯ ಅಧ್ಯಾಯ

## ರಾಮಲಕ್ಷ್ಮಣರು ಕಬಂಧನಿಗೆ ಸಿಕ್ಕಿದ್ದು

ಅನಂತರ ರಾಮಲಕ್ಷ್ಮಣರು ದಂಡಕಾರಣ್ಯದಿಂದ ತೆಂಕಲಾಗಿ ನಡೆದು ಮರ ಗಿಡ ಬಳ್ಳಿಗಳಿಂದಿಟ್ಟಣಿಸಿ ಸಂಚರಿಸುವುದಕ್ಕೆ ಅಸಾಧ್ಯವಾಗಿ ಭಯಂಕರವಾದ ಆ ಅರಣ್ಯವನ್ನು ದಾಟಿ ಜನಸ್ಥಾನದಿಂದ ಮುಂದೆ ಮೂರು ಹರಿದಾರಿ ನಡೆದು ನಾನಾವರ್ಣಗಳಾದ ಪುಷ್ಪಗಳುಳ್ಳ ವೃಕ್ಷಗಳಿಂದಲೂ ಮೃಗಪಕ್ಷಿಗಳಿಂದಲೂ ಇಟ್ಟಣಿಸಿದ್ದಾಗಿ ಕಾರ್ಮುಗಿಲು ಕವಿದಂತೆ ಅಂಧಕಾರವುಳ್ಳ ಕ್ರೌಂಚಾರಣ್ಯವನ್ನು ಪ್ರವೇಶಿಸಿದರು. ಆ ವನದಲ್ಲಿ ಸೀತಾದೇವಿಯನ್ನು ಹುಡುಕಿ ಕಾಣದೆ ಅತ್ಯಂತ ದುಃಖಿತರಾಗಿ ಅಲ್ಲಿಂದ ಮುಂದೆ ಮೂರು ಹರಿದಾರಿ ನಡೆದು ಮತಂಗಮುನೀಶ್ವರನ ಆಶ್ರಮದ ಸಮೀಪದಲ್ಲಿ ನಾನಾ ದುಷ್ಟಮೃಗಗಳಿಂದಲೂ ಪಕ್ಷಿಗಳಿಂದಲೂ ಇಟ್ಟಣಿಸಿ ಬಹು ಘೋರವಾಗಿದ್ದ ಒಂದು ವನದಲ್ಲಿ ಪಾತಾಳಲೋಕಕ್ಕೆ ಸಮಾನವಾಗಿ ಗಾಢಾಂಧಕಾರವುಳ್ಳ ಒಂದು ಗುಹೆಯ ಸಮೀಪದಲ್ಲಿ ಅಯೋಮುಖಿಯೆಂಬ ಒಬ್ಬ ರಾಕ್ಷಸಿಯನ್ನು ಕಂಡರು. ಆ ರಾಕ್ಷಸಿಯು ಬಹಳ ದೊಡ್ಡದಾದ ಶರೀರವುಳ್ಳವಳು; ವಿಕಾರವಾದ ಕಣ್ಣುಗಳುಳ್ಳವಳು; ಕ್ಷುದ್ರಪ್ರಾಣಿಗಳಿಗೆ ಭಯವನ್ನುಂಟುಮಾಡುವವಳು. ಹೇಯವಾದ ರೌದ್ರಸ್ವರೂಪವುಳ್ಳವಳು. ತೇಲಾಡುವ ಹೊಟ್ಟೆಯುಳ್ಳವಳು. ಮಹಾತೀಕ್ಷ್ಣವಾದ ಕೋರೆದಾಡೆಗಳುಳ್ಳವಳು. ಗಜಚರ್ಮದಂತೆ ಕಠಿಣವಾದ ಚರ್ಮವುಳ್ಳವಳು. ಅವಳು ತಲೆಗೂದಲನ್ನು ಕೆದರಿಕೊಂಡು ಮೃಗಗಳನ್ನು ಹಿಡಿದು ತಿನ್ನುತ್ತಿದ್ದಳು. ಆ ರಾಕ್ಷಸಿಯು ರಾಮಲಕ್ಷ್ಮಣರು ಹೋಗುವುದನ್ನು ಕಂಡು ಮುಂದುಗಡೆಯಲ್ಲಿ ದಾರಿಯನ್ನು ಸವರಿಕೊಂಡು ಹೋಗುತ್ತಿದ್ದ ಲಕ್ಷ್ಮಣನ ಸಮೀಪಕ್ಕೆ ಬಂದು ಆತನನ್ನು ಕುರಿತು "ಎಲೈ ಪುರುಷನೇ, ನಾವಿಬ್ಬರೂ ರಮಿಸಿಕೊಂಡಿರೋಣ, ಬಾ. ನಾನು

ಮಾಡಿದ ಪುಣ್ಯದಿಂದ ನಿನ್ನಂಥ ಪುರುಷನನ್ನು ಪಡೆದೆನು. ನೀನು ಈ ವನಮಧ್ಯದಲ್ಲಿರುವ ಮನೋಹರವಾದ ಪರ್ವತದ ತಪ್ಪಲುಗಳಲ್ಲಿಯೂ ನದಿಗಳ ಮಳಲೊಟ್ಟುಗಳಲ್ಲಿಯೂ ನನ್ನೊಡನೆ ಕ್ರೀಡಿಸಿಕೊಂಡಿರು. ನನ್ನ ಹೆಸರು ಅಯೋಮುಖಿ. ನಮ್ಮ ಆಯುಸ್ಸನ್ನು ಆನಂದದಿಂದ ಕಳೆಯೋಣ " ಎಂದು ಹೇಳುತ್ತ ಲಕ್ಷ್ಮಣನನ್ನು ಹಿಡಿದುಕೊಂಡಳು.

ಆ ಮಾತನ್ನು ಕೇಳಿ ಲಕ್ಷ್ಮಣನು ಅತ್ಯಂತ ಕೋಪಯುಕ್ತನಾಗಿ ಖಡ್ಗವನ್ನು ತೆಗೆದುಕೊಂಡು ಅಯೋಮುಖಿಯ ಕಿವಿಮೂಗುಗಳನ್ನು ಕೊಯ್ದುಹಾಕಲು ಆಕೆಯು ತಾನು ಬಂದ ದಾರಿಗೊಂಡು ಭಯಂಕರವಾದ ಧ್ವನಿಯಿಂದ ಮೊರೆಯಿಡುತ್ತ ಓಡಿಹೋದಳು. ಆಮೇಲೆ ರಾಮಲಕ್ಷ್ಮಣರು ಆ ವನದಲ್ಲಿ ಸಂಚರಿಸುತ್ತಿರುವ ಸಮಯದಲ್ಲಿ ಲಕ್ಷ್ಮಣನು ಕೈಮುಗಿದುಕೊಂಡು ತೇಜಸ್ವಿಯಾದ ಶ್ರೀರಾಮನನ್ನು ಕುರಿತು "ಶ್ರೀರಾಮ, ನನ್ನ ಎಡಭುಜವು ಹಾರುತ್ತಿದೆ. ಆದ್ದರಿಂದ ನಮಗೆ ಯಾವುದೋ ವಿಘ್ನವು ಉಂಟಾಗುವ ಹಾಗಿದೆ. ಅಲ್ಲದೆ ಎಲ್ಲಿ ನೋಡಿದರೂ ದುರ್ನಿಮಿತ್ತಗಳನ್ನು ಕಾಣುತ್ತಿರುವೆನು. ಆದಕಾರಣ ನೀನು ಬಿಲ್ಲಿಗೆ ಹೆದೆಯನ್ನೇರಿಸಿ ಸಾವಧಾನವಾಗಿರು. ಈ ದುರ್ನಿಮಿತ್ತಗಳಿಂದ ನಿನಗೇನಾದರೂ ವಿಘ್ನವು ಸಂಭವಿಸಬಹುದು. ಮುಂದುಗಡೆ ನಮಗೆ ಜಯವಾಗುತ್ತದೆಯೆಂಬುದನ್ನು ಸೂಚಿಸುತ್ತ ಮಂಜುಳಕಪಕ್ಷಿಯು ಸ್ವರಗೈಯುತ್ತಿದೆ. ಅದನ್ನು ನೋಡಿದರೆ ಮುಂದೆ ಯಾರೊಡನೆಯೋ ನಮ್ಮಿಬ್ಬರಿಗೂ ಯುದ್ಧ ನಡೆದು ನಮಗೆ ಜಯವಾಗುವ ಹಾಗಿದೆ " ಎಂದು ನುಡಿದನು.

ಆ ಮೇಲೆ ರಾಮಲಕ್ಷ್ಮಣರು ಮುಂದಕ್ಕೆ ಹೋಗುತ್ತಿರುವಾಗ ಆ ವನದಲ್ಲಿ ಮಹತ್ತಾದ ಒಂದು ಧ್ವನಿಯು ಹುಟ್ಟಿ ಸರ್ವತ್ರ ವ್ಯಾಪಿಸಿತು. ರಾಮಲಕ್ಷ್ಮಣರು ಅದನ್ನು ಕೇಳಿ ನಾನಾದಿಕ್ಕುಗಳನ್ನೂ ನೋಡುತ್ತ ಮುಂದುಗಡೆಯಲ್ಲಿ ಪರ್ವತಾಕಾರವಾದ ಶರೀರವುಳ್ಳ ಒಬ್ಬ ಘೋರರಾಕ್ಷಸನನ್ನು ಕಂಡರು. ಅವನಿಗೆ ಶಿರಸ್ಸೂ ಇರಲಿಲ್ಲ, ಕಂಠವೂ ಇರಲಿಲ್ಲ. ಅವನ ತಲೆಯು ಹೊಟ್ಟೆಯಲ್ಲಿ ಹುದುಗಿತ್ತು, ಕಬಂಧಾಕಾರದ ಆ ದೈತ್ಯನು ಉದ್ದವಾದ ರೋಮಗಳಿಂದ ವ್ಯಾಪ್ತನಾಗಿ ಗುಡುಗಿನಂತೆ ಗರ್ಜಿಸುತ್ತಿದ್ದನು. ಅಗ್ನಿಜ್ವಾಲೆಯಂತೆ ಬೆಳಗುತ್ತಿದ್ದ ಒಂದು ಕಣ್ಣು ಹೊಟ್ಟೆಯ ಮಧ್ಯದಲ್ಲಿ ಹೊಳೆಯುತ್ತಿತ್ತು. ಕೋರೆದಾಡೆಗಳನ್ನು ಚಾಚಿಕೊಂಡು ನಾಲಿಗೆಯನ್ನು ಸವರಿಕೊಳ್ಳುತ್ತಿದ್ದನು. ಒಂದು ಯೋಜನ ಪರಿಮಿತವಾದ ಕೈಗಳಿಂದ ಸಿಂಹ ಕರಡಿ ಆನೆ ಮುಂತಾದವುಗಳನ್ನು ಹಿಡಿದು ಬಾಯಿಯಲ್ಲಿ ತುರಿಕೊಳ್ಳುತ್ತಿದ್ದನು. ಆಗ ಕಬಂಧನು ತನ್ನ ಭುಜಗಳನ್ನು ನೀಡಿ ರಾಮಲಕ್ಷ್ಮಣರನ್ನು ಹಿಡಿದು ಭಕ್ಷಣಮಾಡುವುದಕ್ಕೆ ಯತ್ನಮಾಡಲು, ಕೊಂಬುಳ್ಳ ಎತ್ತುಗಳು ಮೂಗಿಗೆ ಕಟ್ಟಿದ ಹಗ್ಗದಿಂದ ಸೆಳೆಯಲ್ಪಡುವಂತೆ ಕಬಂಧನ ಭುಜಗಳಿಂದ ಸೆಳೆಯಲ್ಪಡುತ್ತಿದ್ದ ಖಡ್ಗಪಾಣಿಗಳೂ ಬಲಿಷ್ಠರೂ ಆದ ಅವರಿಬ್ಬರಲ್ಲಿ ಶ್ರೀರಾಮನು ಮಾತ್ರ ಧೈರ್ಯವನ್ನಾಶ್ರಯಿಸಿ ಕಂಗೆಡದಿದ್ದನು. ಲಕ್ಷ್ಮಣನು ಬಾಲಕನಾದ್ದರಿಂದ ಧೈರ್ಯವನ್ನು ತಂದುಕೊಳ್ಳಲಾರದೆಯೇ ಭಯಪಟ್ಟು ಮುಖಕಾಂತಿ ಗುಂದಿ ಶ್ರೀರಾಮನನ್ನು ಕುರಿತು "ಶ್ರೀರಾಮ, ಈ ರಾಕ್ಷಸರ ಕೈಗೆ ಸಿಕ್ಕಿ ಭಯಪಟ್ಟಿರುವ ನನ್ನನ್ನು ನೋಡು. ನೀನು ನನ್ನನ್ನು ಈತನಿಗೆ ಬಲಿಯಾಗಿ ಕೊಟ್ಟು ನಿನ್ನನ್ನು ಬಿಡಿಸಿಕೊಂಡು ಹೋಗು. ನೀನು ನಮ್ಮ ಪಿತೃಪಿತಾಮಹಾದಿಗಳಿಂದ ಪರಿಪಾಲಿಸಲ್ಪಟ್ಟ ರಾಜ್ಯಕ್ಕೆ ಹೋಗಿ ಸುಖವಾಗಿರು. ನಾನು ನಿನ್ನ ಸೇವೆಮಾಡುತ್ತ ಬಂದೆನೆಂಬುದನ್ನು ಆಗಾಗ ನೆನಪು ಮಾಡಿಕೊ " ಎಂದು ಹಲುಬಿದನು.

ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ನೀನು ಮಹಾಪರಾಕ್ರಮಿ. ನಿನ್ನಂಥವರು ಕಂಗೆಡುವರೆ ? ವೃಥಾ ಅಂಜಬೇಡ " ಎಂದು ಲಕ್ಷ್ಮಣನಿಗೆ ಧೈರ್ಯ ಹೇಳಿದನು.

ಆ ಸಮಯದಲ್ಲಿ ಕಬಂಧನು ಅವರನ್ನು ಕುರಿತು "ಎಲೈ ಪುರುಷರುಗಳಿರಾ, ನೀವು ಕೊಬ್ಬಿದ ವೃಷಭದಂತೆ ಹೆಕ್ಕತ್ತುಗಳುಳ್ಳವರಾಗಿ ಬಿಲ್ಲು ಬಾಣ ಖಡ್ಗಗಳನ್ನು ಧರಿಸಿಕೊಂಡಿದ್ದೀರಿ. ನೀವಾರು ? ಏನುಕಾರಣ ಬಂದಿರಿ ? ನೀವು ಇನ್ನು ಜೀವಸಹಿತವಾಗಿ ಹೋಗಲು ಸಾಧ್ಯವಿಲ್ಲ" ಎಂದು ಆರ್ಭಟಿಸಿದನು.

ಆ ಮಾತನ್ನು ಕೇಳಿ ಶ್ರೀರಾಮನು ಬಾಡಿದ ಮುಖವುಳ್ಳವನಾಗಿ ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ನಮಗೆ ಆಪತ್ತಿನ ಮೇಲೆ ಆಪತ್ತು ಬರುತ್ತಿದೆ. ರಾವಣನಿಂದ ಅಪಹರಿಸಲ್ಪಟ್ಟ ಸೀತಾದೇವಿಯನ್ನು ಕಾಣದೆ ವಿಪತ್ತಿಗೆ ಸಿಕ್ಕಿಕೊಂಡೆವು. ಕಾಲದ ಮಹಿಮೆಯನ್ನು ಏನೆಂದು ಹೇಳಬೇಕು ? ಜನರು ಎಷ್ಟೇ ಬಲಿಷ್ಠರಾಗಿದ್ದರೂ, ಶಸ್ತ್ರಾಸ್ತ್ರಗಳಲ್ಲಿ ಪ್ರವೀಣರಾಗಿದ್ದರೂ ಕಾಲದ ಕೈಗೆ ಸಿಕ್ಕಿ ಮಳಲಿನ ಸೇತುವೆಯಂತೆ ಅಳಿದುಹೋಗುವರು" ಎಂದು ಹೇಳಿದನು.



## ೭೦ ನೆಯ ಅಧ್ಯಾಯ

## ಕಬಂಧನ ತೋಳುಗಳನ್ನು ಕತ್ತರಿಸಿದ್ದು

ಆಮೇಲೆ ಕಬಂಧನು ತನ್ನ ಭುಜಗಳೆಂಬ ಬಲೆಗೆ ಸಿಕ್ಕಿದ ರಾಮಲಕ್ಷ್ಮಣರನ್ನು ಕುರಿತು "ಎಲೈ ಮನುಷ್ಯರುಗಳಿರಾ, ಕ್ಷುಧೆಯಿಂದ ಕಂಗೆಟ್ಟಿರುವ ನನ್ನನ್ನು ನೋಡಿ ಏಕೆ ಸುಮ್ಮನಿದ್ದೀರಿ ? ನನ್ನ ಆಹಾರಾರ್ಥವಾಗಿ ದೈವವೇ ನಿಮ್ಮನ್ನು ಇಲ್ಲಿಗೆ ತಂದು ಬಿಟ್ಟಿತು" ಎಂದು ನುಡಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಶ್ರೀರಾಮನನ್ನು ಕುರಿತು "ಅಣ್ಣಾ, ಕಬಂಧನು ನಮ್ಮಿಬ್ಬರನ್ನೂ ಹಿಡಿದು ತಿನ್ನಬೇಕೆಂದಿದ್ದಾನೆ. ಈ ಸಮಯದಲ್ಲಿ ನಾವು ಕಂಗೆಟ್ಟು ಸುಮ್ಮನಿರುವುದು ಯೋಗ್ಯವಲ್ಲ. ನಾವಿಬ್ಬರೂ ಖಡ್ಗಗಳಿಂದ ಈ ರಾಕ್ಷಸನ ಎರಡು ತೋಳುಗಳನ್ನೂ ಕತ್ತರಿಸಿ ಹಾಕೋಣ. ಈ ರಾಕ್ಷಸನು ಬಲವಾದ ಶರೀರವುಳ್ಳವನು. ಅತ್ಯಂತ ಪರಾಕ್ರಮಿ. ಯಾಗದಲ್ಲಿ ಯೂಪಸ್ತಂಭಕ್ಕೆ ಕಟ್ಟಿದ ಪಶುವನ್ನು ಕೊಲ್ಲುವಂತೆ ಯುದ್ಧಕ್ಕೆ ಬರದಿರುವ ಈತನನ್ನು ಕೊಲ್ಲುವುದು ಕ್ಷತ್ರಿಯರಿಗೆ ಯೋಗ್ಯವಲ್ಲ" ಎಂದು ನುಡಿದನು.

ಆ ಮಾತನ್ನು ಕೇಳಿ ಕಬಂಧನು ತನ್ನ ಭಯಂಕರವಾದ ಬಾಯಿಯನ್ನು ತೆರೆದುಕೊಂಡು ರಾಮಲಕ್ಷ್ಮಣರನ್ನು ನುಂಗುವುದಕ್ಕೆ ಯತ್ನಮಾಡಲು, ದೇಶಕಾಲಗಳನ್ನು ಬಲ್ಲ ಆ ವೀರರು ಅವನ ಎರಡು ತೋಳುಗಳನ್ನೂ ತಮ್ಮ ಖಡ್ಗಗಳಿಂದ ಕತ್ತರಿಸಿದರು. ಶ್ರೀರಾಮನು ಬಲಭುಜವನ್ನು ಕತ್ತರಿಸಿದನು. ಪರಾಕ್ರಮಿಯಾದ ಲಕ್ಷ್ಮಣನು ಎಡಭುಜವನ್ನು ಕತ್ತರಿಸಿದನು. ಈ ರೀತಿಯಲ್ಲಿ ರಾಮಲಕ್ಷ್ಮಣರಿಂದ ಕತ್ತರಿಸಲ್ಪಟ್ಟ ಭುಜಗಳುಳ್ಳ ಕಬಂಧನು ಮೇಘದ ಗುಡುಗಿನಂತೆ ಭಯಂಕರವಾದ ಧ್ವನಿಯಿಂದ ಆಕಾಶ ಭೂಮಿ ದಿಕ್ಕುಗಳಲ್ಲಿ ಪ್ರತಿಧ್ವನಿ ಹುಟ್ಟುವಂತೆ ಗೋಳಿಡುತ್ತ, ಮೈಯೆಲ್ಲಾ ರಕ್ತಮಯವಾಗಿ ಭೂಮಿಯಲ್ಲಿ ಬಿದ್ದನು. ಅವನು ದೈನ್ಯದಿಂದ ರಾಮಲಕ್ಷ್ಮಣರನ್ನು ಕುರಿತು "ಎಲೈ ಪುರುಷರೆ, ನೀವಾರು ? ನೀವು ಬಹು ಪರಾಕ್ರಮಿಗಳಾಗಿದ್ದೀರಿ" ಎಂದು ಕೇಳಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು "ಎಲೈ ರಾಕ್ಷಸನೆ, ಈತನು ಇಕ್ಷ್ವಾಕುವಂಶದಲ್ಲಿ ಜನಿಸಿದವನು. ಈತನ ಹೆಸರು ಶ್ರೀರಾಮ. ಈತನು ಮಹಾಕೀರ್ತಿವಂತನು. ನಾನು ಈತನ ತಮ್ಮ, ನನ್ನ ಹೆಸರು ಲಕ್ಷ್ಮಣ. ನಮ್ಮ ಬಲತಾಯಿಯಾದ ಕೈಕೇಯಿದೇವಿಯು ತನ್ನ ಮಗನಿಗೆ ರಾಜ್ಯಾಧಿಪತ್ಯವು

ಸಿಗಬೇಕೆಂದು ಈತನನ್ನು ದೇಶಭ್ರಷ್ಟನನ್ನಾಗಿ ಮಾಡಿ ಹೊರಡಿಸಿದಳು. ಆದಕಾರಣ ಈತನು ತನ್ನ ಪತ್ನೀಸಮೇತನಾಗಿ ಈ ವನಕ್ಕೆ ಬಂದನು. ನಾನು ಈತನ ಅನುಜನಾದ್ದರಿಂದ ಈತನಿಗೆ ಸಹಾಯವಾಗಿ ಬಂದೆನು. ನಾವು ಮೂವರು ದಂಡಕಾರಣ್ಯದಲ್ಲಿ ವಾಸಮಾಡುವಾಗ ರಾಕ್ಷಸನೊಬ್ಬನು ನಾವಿಬ್ಬರೂ ಹೊರಗೆ ಹೋಗಿದ್ದ ಸಮಯದಲ್ಲಿ ಈತನ ಪತ್ನಿಯನ್ನು ಅಪಹರಿಸಿಕೊಂಡು ಹೋದನು. ನಾವು ಆ ದೇವಿಯನ್ನು ಅರಸಿಕೊಂಡು ಇಲ್ಲಿಗೆ ಬಂದೆವು. ಎಲೈ ರಾಕ್ಷಸನೆ, ನೀನಾರು ? ಏನು ಕಾರಣ ಈ ವನದಲ್ಲಿ ಶಿರಸ್ಸಿಲ್ಲದ ಮುಂಡದಂತೆ ತಿರುಗಾಡುತ್ತಿದ್ದೀಯೆ ? ನಿನ್ನ ಮುಖವು ಎದೆಯ ಮೇಲೆ ಕಾಣಿಸುತ್ತಿರುವುದೇಕೆ ? " ಎಂದು ಕೇಳಿದನು.

ಆ ಮಾತನ್ನು ಕೇಳಿ ಕಬಂಧನು ಇಕ್ಷ್ವಾಕುವಂಶದಲ್ಲಿ ಅವತರಿಸಿದ ರಘುನಾಥನಿಂದ ತನಗೆ ಮೋಕ್ಷವುಂಟಾಗುವುದೆಂದು ಪೂರ್ವದಲ್ಲಿ ದೇವೇಂದ್ರನು ನುಡಿದ ವಚನವನ್ನು ಸ್ಮರಿಸಿಕೊಂಡು ರಾಮಲಕ್ಷ್ಮಣರನ್ನು ಕುರಿತು " ಎಲೈ ರಾಮಲಕ್ಷ್ಮಣರುಗಳಿರಾ, ನಾನು ಜನ್ಮಾಂತರದಲ್ಲಿ ಮಾಡಿದ ಪುಣ್ಯಾತಿಶಯದಿಂದಲೂ ದೈವಗತಿಯಿಂದಲೂ ನಿಮ್ಮನ್ನು ಕಂಡೆನು. ದೈವಾನುಕೂಲದಿಂದಲೇ ನಿಮ್ಮಿಂದ ನನ್ನ ಭುಜಗಳು ಕತ್ತರಿಸಲ್ಪಟ್ಟವು. ನನ್ನ ರೂಪವು ವಿಕಾರವಾದದ್ದಕ್ಕೆ ಕಾರಣವನು ಹೇಳುತ್ತೇನೆ, ಕೇಳಿರಿ " ಎಂದನು.

---

## ೭೧ನೆಯ ಅಧ್ಯಾಯ

## ಕಬಂಧನ ಪೂರ್ವವೃತ್ತಾಂತ

ಕಬಂಧನು ಹೀಗೆಂದನು : " ಶ್ರೀರಾಮ, ಪೂರ್ವಜನ್ಮದಲ್ಲಿ ನಾನು ಅತಿತೇಜಸ್ವಿಯೂ ಅತ್ಯಂತ ಸೌಂದರ್ಯಗುಣಸಂಯುಕ್ತನೂ ಆಗಿ ಚಂದ್ರ ಸೂರ್ಯ ದೇವೇಂದ್ರರಂತೆ ತನುಕಾಂತಿಯುಳ್ಳವನಾಗಿದ್ದೆನು ಆದ್ದರಿಂದ ಹಿಗ್ಗಿ ಗರ್ವಿಸಿ ಸಮಸ್ತ ಜನರನ್ನೂ ಜರಿದು ನುಡಿಯುತ್ತ ಘೋರರೂಪವನ್ನು ತಾಳಿ ವನದಲ್ಲಿದ್ದ ತಪಸ್ವಿಗಳಾದ ಋಷಿಗಳನ್ನು ಬೆದರಿಸುತ್ತಲಿದ್ದೆನು. ಒಂದು ದಿವಸ ವನದಲ್ಲಿ ಫಲಪುಷ್ಪಾದಿಗಳನ್ನು ಸಂಪಾದನೆ ಮಾಡುತ್ತಿದ್ದ ಸ್ಥೂಲಶಿರನೆಂಬ ಮುನೀಶ್ವರನನ್ನು ಬೆದರಿಸಲು ಆತನು ನನಗೆ ಘೋರವಾದ ರಾಕ್ಷಸಜನ್ಮ ಬರಲೆಂದು ಶಾಪವನ್ನು ಕೊಟ್ಟನು. ಆಗ ನಾನು ಆ ಮುನಿಯ ಪಾದಗಳನ್ನು ಹಿಡಿದುಕೊಂಡು ತಪ್ಪಾಯಿತೆಂದು ನುಡಿದು ನನಗೆ ಕೊಟ್ಟ ಶಾಪವು ಎಂದಿಗೆ ವಿಮೋಚನವಾಗುವುದೆಂದು ಪ್ರಾರ್ಥನೆ ಮಾಡಿಕೊಂಡೆನು. ಆಗ ಆ ಮುನೀಶ್ವರನು ದಯೆಯಿಂದ ನನ್ನನ್ನು ಕುರಿತು ' ಎಲೈ ದುಷ್ಟ, ಯಾವಾಗ ಇಕ್ಷ್ವಾಕುವಂಶದಲ್ಲಿ ಅವತರಿಸಿದ ಶ್ರೀರಾಮನು ನಿನ್ನ ಭುಜಗಳನ್ನು ಕತ್ತರಿಸುವನೋ ಆಗ ನಿನ್ನ ಘೋರರೂಪವು ಹೋಗಿ ಯಥಾಪ್ರಕಾರವಾದ ರೂಪವು ಬರುವುದು ' ಎಂದು ಶಾಪವಿಮೋಚನಸಮಯವನ್ನು ಹೇಳಿದನು. ಅನಂತರ ನಾನು ಘೋರವಾದ ರಾಕ್ಷಸರೂಪದಿಂದ ದೇವೇಂದ್ರನೊಡನೆ ಯುದ್ಧಮಾಡಲು ಆತನು ಕೋಪಿಸಿಕೊಂಡು ವಜ್ರಾಯುಧದಿಂದ ನನ್ನನ್ನು ಹೊಡೆದನು. ಅದರಿಂದ ನನ್ನ ದೇಹವು ನಜ್ಜುಗುಜ್ಜಾಗಿ ತಲೆಯೂ ಮೊಳಕಾಲುಗಳೂ ದೇಹದಲ್ಲಿ ಹುದುಗಿಹೋದವು. ನಾನು ಬ್ರಹ್ಮದೇವನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿ ಆ ದೇವನನ್ನು ಸಂತೋಷಪಡಿಸಲು ಆತನು ಚಿರಂಜೀವಿತ್ವವನ್ನು ಕೊಟ್ಟಿದ್ದನು. ಆದ್ದರಿಂದ ನಾನು ವಜ್ರಾಯುಧದ ಪೆಟ್ಟಿಗೆ ಸಾಯಲಿಲ್ಲ.

ಈ ರೀತಿಯಲ್ಲಿ ನನಗೆ ಇಂಥ ರೂಪವು ಬಂದಿತು. ಆಮೇಲೆ ನಾನು ಕಂಗೆಟ್ಟು ದೇವೇಂದ್ರನನ್ನು ಕುರಿತು ಶಿರಸ್ಸಿಲ್ಲದ ಬಳಿಕ ಆಹಾರವಿಲ್ಲದೆ ನಾನು ಜೀವಿಸುವುದು ಹೇಗೆಂದು ಕೇಳಿದೆನು. ಆಗ ದೇವೇಂದ್ರನು ನನಗೆ ಒಂದುಯೋಜನಪರಿಮಿತವಾದ ಭುಜಗಳನ್ನು ಕೊಟ್ಟು ಹೊಟ್ಟೆಯಮೇಲೆ ಶಿರಸ್ಸನ್ನು ಕಲ್ಪಿಸಿ ಈ ಭುಜಗಳನ್ನು ನೀಡಿ ಇವುಗಳ ಮಧ್ಯದಲ್ಲಿ ಸಿಕ್ಕಿದ ಸಿಂಹ ಶಾರ್ದೂಲ ಗಜ ಮೊದಲಾದ ಪ್ರಾಣಿಗಳನ್ನು ಸೆಳೆದು ಭಕ್ಷಣಮಾಡಿಕೊಂಡಿರಬೇಕೆಂದು ಹೇಳಿದನು. ಆಮೇಲೆ ನಾನು ಆತನನ್ನು ಹೆಗ್ಗಳವಾಗಿ ಪ್ರಾರ್ಥನೆಮಾಡಿ ನನಗೆ ನನ್ನ ಮೊದಲಿನ ರೂಪವು ಯಾವಾಗ ಬಂದು ಸುಖದಲ್ಲಿರುವೆನೆಂದು ಕೇಳಲು, ಆತನು ಕೃಪೆಯಿಂದ ನನ್ನನ್ನು ಕುರಿತು 'ಯಾವಾಗ ಇಕ್ಷ್ವಾಕು ವಂಶದ ರಾಜಕುಮಾರರಾದ ರಾಮಲಕ್ಷ್ಮಣರು ನಿನ್ನ ಭುಜಗಳನ್ನು ಕತ್ತರಿಸುವರೋ, ಆಗ ನಿನ್ನ ಶಾಪವು ವಿಮೋಚನವಾಗಿ ನೀನು ಮೊದಲಿನ ರೂಪವನ್ನು ಪಡೆದು ಸ್ವರ್ಗಲೋಕವನ್ನೈದುವೆ' ಎಂದು ಹೇಳಿದನು. ಆದ್ದರಿಂದ ನಾನು ಈ ಘೋರವಾದ ಶರೀರವುಳ್ಳವನಾಗಿ ಈ ವನದಲ್ಲಿ ಸಂಚರಿಸಿಕೊಂಡು ಯಾವಾಗ ನೀವು ಬರುವಿರೋ ಎಂದು ನನ್ನ ಭುಜಗಳನ್ನು ಗಾವುದದೂರದವರೆಗೆ ನೀಡಿಕೊಂಡು ಅವುಗಳ ಮಧ್ಯದಲ್ಲಿ ಸಿಕ್ಕಿದ ಪ್ರಾಣಿಗಳನ್ನು ಆಹಾರಮಾಡಿಕೊಂಡಿದ್ದೇನೆ. ಶ್ರೀರಾಮ, ನೀನು ನನ್ನ ದೇಹಕ್ಕೆ ಅಗ್ನಿಸಂಸ್ಕಾರಮಾಡಿದರೆ ನಾನು ನಿನಗೆ ಒಂದು ಹಿತೋಪದೇಶವನು ಮಾಡುತ್ತೇನೆ" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಹೀಗೆಂದನು : "ಎಲೈ ಕಬಂಧ, ನಾನು ಜನಸ್ಥಾನದಿಂದ್ದ ಹೊರಗೆ ಹೋದ ಸಮಯದಲ್ಲಿ ರಾವಣನು ಏಕಾಕಿಯಾಗಿದ್ದ ನನ್ನ ಪತ್ನಿ ಸೀತಾದೇವಿಯನ್ನು ಎತ್ತಿ ಕೊಂಡು ಹೋದನು. ನಾನು ಆತನ ಹೆಸರನ್ನು ಮಾತ್ರ ತಿಳಿದಿರುವೆನೇ ಹೊರತು ಆತನ ಸ್ವರೂಪಾದಿಗಳನ್ನೂ ಸ್ಥಳವನ್ನೂ ಅವನ ಪ್ರಭಾವವನ್ನೂ ಅರಿತವನಲ್ಲ. ಈ ರೀತಿಯಲ್ಲಿ ಶೋಕ ದಿಂದ ಕಂಗೆಟ್ಟು ದಿಕ್ಕುದಿಕ್ಕುಗಳಲ್ಲಿ ಓಡಾಡುತ್ತಿರುವ ನಮ್ಮಲ್ಲಿ ಕೃಪೆಯನ್ನು ಮಾಡಿ ನಮಗೆ ಉಪಕಾರವನ್ನು ಮಾಡು. ಕಬಂಧ, ಈ ಅರಣ್ಯದಲ್ಲಿರುವ ಕಾಡಾನೆಗಳು ಮುರಿದ ಒಣಕಾಷ್ಠಗಳನ್ನು ತಂದು ಒಂದು ಹಳ್ಳದಲ್ಲಿಟ್ಟು ನಿನ್ನ ಶರೀರವನ್ನು ದಹನಮಾಡುತ್ತೇವೆ. ನೀನು ನಮಗೆ ಒಂದು ಉಪಕಾರಮಾಡು. ಸೀತಾದೇವಿಯನ್ನು ಯಾರು ಅಪಹರಿಸಿದ್ದಾರೆ ? ಆಕೆಯು ಎಲ್ಲಿದ್ದಾಳೆ ? ಎಂಬ ವೃತ್ತಾಂತವನ್ನು ವಿಶೇಷವಾಗಿ ತಿಳಿದು ಹೇಳು" ಎಂದು ಕೇಳಿದನು.

ಕಬಂಧನು "ಶ್ರೀರಾಮ, ಈಗ ನನಗೆ ದಿವ್ಯಜ್ಞಾನವಿಲ್ಲ. ಈ ಅವಸ್ಥೆಯಲ್ಲಿ ಸೀತಾದೇವಿಯನ್ನು ಹಿಡಿದುಕೊಂಡು ಹೋದವನ ವೃತ್ತಾಂತವನ್ನು ತಿಳಿಯಲಾರೆನು. ನೀನು ಈ ರಾಕ್ಷಸಶರೀರವನ್ನು ದಹನಮಾಡಿದರೆ ನನ್ನ ಪೂರ್ವಸ್ವರೂಪವನ್ನು ಪಡೆದು ದಿವ್ಯಜ್ಞಾನದಿಂದ ಸೀತಾದೇವಿಯ ವೃತ್ತಾಂತವನ್ನು ಹೇಳುವುದಕ್ಕೆ ನನಗೆ ಸಾಮರ್ಥ್ಯವುಂಟಾಗುವುದು. ನನ್ನ ದಿವ್ಯಜ್ಞಾನವು ಘೋರವಾದ ರಾಕ್ಷಸಶಾಪದಿಂದ ನಷ್ಟವಾಗಿದೆ. ನನ್ನ ಅಪರಾಧದಿಂದಲೇ ನನಗೆ ಈ ವಿಕಾರವಾದ ರೂಪವು ಪ್ರಾಪ್ತವಾಯಿತು. ಶ್ರೀರಾಮ, ಸೂರ್ಯನು ಅಸ್ತಂಗತನಾಗುವುದಕ್ಕಿಂತ ಮೊದಲೇ ನನ್ನ ಶರೀರ ವನ್ನು ಒಂದು ಹಳ್ಳದಲ್ಲಿರಿಸಿ ಕಾಷ್ಠಗಳಿಂದ ದಹನಮಾಡು. ಹೀಗೆ ನನ್ನ ರಾಕ್ಷಸಶರೀರವನ್ನು ನೀನು ದಹಿಸಿದರೆ ನಾನು ನಿನ್ನ ಹಸ್ತಸ್ಪರ್ಶದಿಂದ ದಿವ್ಯದೇಹವನ್ನು ಪಡೆದು ದಿವ್ಯಜ್ಞಾನದಿಂದ ನಿನ್ನ ಕಾರ್ಯಕ್ಕೆ ಸಹಾಯವಾಗುವ ಪುರುಷನನ್ನು ತಿಳಿಸುವೆನು. ನೀನು ಆ ಪುರುಷನೊಡನೆ ಸ್ನೇಹವನ್ನು ಮಾಡಿದೆಯಾದರೆ ಆತನು ನಿನಗೆ ಸಹಾಯವಾಗಿ ಸೀತಾದೇವಿಯನ್ನು ಅಪಹರಿಸಿಕೊಂಡು ಹೋದವನ ವೃತ್ತಾಂತವನ್ನು ವಿಚಾರಿಸಿ ಹೇಳುವನು. ಆ ಪುರುಷನು ಮಹಾಪರಾಕ್ರಮಿ. ಸ್ವರ್ಗ ಮರ್ತ್ಯ

ಪಾತಾಳಗಳಲ್ಲಿ ಆತನರಿಯದ ವೃತ್ತಾಂತವಿಲ್ಲ. ಆತನು ಒಂದು ಕಾರಣಾಂತರದಿಂದ ಮೂರುಲೋಕಗಳನ್ನೂ ಸಂಚರಿಸಿ ಆ ಲೋಕಗಳ ವೃತ್ತಾಂತಗಳನ್ನು ತಿಳಿದಿದ್ದಾನೆ" ಎಂದ ಹೇಳಿದನು.



## ೭೨ ನೆಯ ಅಧ್ಯಾಯ

## ಕಬಂಧನು ಹೇಳಿದ ಸುಗ್ರೀವನ ವೃತ್ತಾಂತ

ಆಮೇಲೆ ರಾಮಲಕ್ಷ್ಮಣರು ಪರ್ವತಗಳ ತಪ್ಪಲಲ್ಲಿದ್ದ ಕಾಷ್ಠಗಳನ್ನು ಕಡಿದು ಅಗ್ನಿಯನ್ನುಂಟು ಮಾಡಿ ಒಂದು ಹಳ್ಳದಲ್ಲಿ ಚಿತೆಯನ್ನೊಡ್ಡಿ ಆ ಚಿತೆಯ ಮೇಲೆ ಕಬಂಧನ ಶರೀರವನ್ನಿಟ್ಟು ಅಗ್ನಿ ಪ್ರದಾನಮಾಡಿದರು. ಆ ಶರೀರವು ಆಜ್ಯಪಿಂಡದಂತೆ ಉರಿಯಲು ಕಬಂಧನು ಆ ಚಿತೆಯನ್ನು ಭೇದಿಸಿಕೊಂಡು ಹೊಗೆಯಿಲ್ಲದ ಯಜ್ಞಪುರುಷನಂತೆ ಅಂತರಿಕ್ಷಮಾರ್ಗಕ್ಕೆ ನೆಗೆದು ನಿಂತನು. ಅವನು ದಿವ್ಯದೇಹವುಳ್ಳವನಾಗಿಯೂ ದಿವ್ಯಾಂಬರಗಳನ್ನುಟ್ಟು ದಿವ್ಯಮಾಲ್ಯಾಲಂಕೃತನಾಗಿಯೂ ದಿವ್ಯ ಚಂದನಲಿಪ್ತಾಂಗನಾಗಿಯೂ ದಿವ್ಯಾಭರಣಭೂಷಿತನಾಗಿಯೂ ಸೂರ್ಯಪ್ರಭೆಯಂತೆ ದೇದೀಪ್ಯಮಾನವಾದ ರಥಾರೂಢನಾಗಿಯೂ ತನ್ನ ತನುಕಾಂತಿಯಿಂದ ಸಮಸ್ತ ದಿಕ್ಕುಗಳನ್ನೂ ಬೆಳಗಿಸುತ್ತಿದ್ದನು. ಅವನು ಶ್ರೀರಾಮನನ್ನು ಕುರಿತು ಈ ಮಾತುಗಳನ್ನಾಡಿದನು: "ಶ್ರೀರಾಮ, ನೀನು ಸೀತಾದೇವಿಯನ್ನು ಕಾಣುವ ಉಪಾಯವನ್ನು ಹೇಳುವೆನು, ಕೇಳು: ಲೋಕದಲ್ಲಿ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯಗಳೆಂಬ ಷಡ್ಗುಣಗಳು ಅರಸರಿಗೆ ಕಾರ್ಯಸಾಧನಗಳಾದ ಆರು ಗುಣಗಳು. ಆಪತ್ತುಗಳನ್ನು ಪಡೆದವನೇ ಆಪದ್ಗತನಿಗೆ ಸಹಾಯ ಮಾಡುವನು. ಶ್ರೀರಾಮ, ನೀನೂ ಲಕ್ಷ್ಮಣನೂ ದುರವಸ್ಥೆಯನ್ನು ಪಡೆದವರಾಗಿದ್ದೀರಿ. ನೀವು ಹೇಗೆ ಸ್ತ್ರೀವಿಯೋಗದಿಂದ ಆಪತ್ತನ್ನು ಪಡೆದಿದ್ದೀರೋ ಆ ರೀತಿಯಲ್ಲಿಯೇ ಸುಗ್ರೀವನೆಂಬವನು ಸ್ತ್ರೀನಿಮಿತ್ತವಾಗಿ ಆಪತ್ತನ್ನು ಪಡೆದಿದ್ದಾನೆ. ವಾಲಿಯೆಂಬವನೂ ಸುಗ್ರೀವನೂ ಅಣ್ಣತಮ್ಮಂದಿರು. ಅವರಿಬ್ಬರಿಗೂ ಕಲಹವಾಗಲು ಬಲವಂತನಾದ ವಾಲಿಯು ಸುಗ್ರೀವನನ್ನು ಸೋಲಿಸಿ ಹೊಡೆದು ಹೊರಡಿಸಿದನು. ಸುಗ್ರೀವನು ನಾಲ್ಕುಮಂದಿ ಕಪಿಗಳ ಸಹಿತನಾಗಿ ತನ್ನ ರಾಜ್ಯವನ್ನು ಬಿಟ್ಟು ಋಷ್ಯಮೂಕಪರ್ವತದಲ್ಲಿದ್ದಾನೆ. ನೀನು ಆತನನೊಡನೆ ಸ್ನೇಹವನ್ನು ಮಾಡಿಕೊಂಡರೆ ಆತನು ಸಮಸ್ತ ಕಾರ್ಯವನ್ನೂ ನೆರವೇರಿಸಿಕೊಡುವನು. ಆತನೊಡನೆ ಸ್ನೇಹವನ್ನು ಮಾಡಿಕೊಳ್ಳದ ಪಕ್ಷದಲ್ಲಿ ಸೀತಾದೇವಿಯನ್ನರಸುವುದಕ್ಕೆ ಉಪಾಯಾಂತರವನ್ನು ಕಾಣೆನು. ಸುಗ್ರೀವನು ಮಹಾಪರಾಕ್ರಮಿ, ಸತ್ಯಸಂಧ, ವಿನಯಗುಣಸಂಪನ್ನ, ಬುದ್ಧಿವಂತ, ಮಹಾಧೈರ್ಯವುಳ್ಳವನು, ಮಹಾತ್ಮ, ಮಹಾದಕ್ಷ. ಅಂಥ ಪರಾಕ್ರಮಿಯಾದ ಸುಗ್ರೀವನು ವಾಲಿಯಿಂದ ಹೊರಡಿಸಲ್ಪಟ್ಟು ಋಷ್ಯಮೂಕಪರ್ವತದಲ್ಲಿದ್ದಾನೆ. ಆತನ ಸಮೀಪಕ್ಕೆ ನೀವು ಹೋದರೆ ಆತನು ನಿಮಗೆ ಮಿತ್ರನಾಗಿ ಸೀತಾದೇವಿಯನ್ನರಸುವುದಕ್ಕೆ ಸಹಾಯವಾಗುವನು. ಶ್ರೀರಾಮ, ನೀನು ಮನಸ್ಸಿನಲ್ಲಿ ವ್ಯಥೆಪಡಬೇಡ. ನಿನ್ನ ಕಾರ್ಯವು ಸುಗ್ರೀವನಿಂದಲೇ ಆಗಬೇಕಲ್ಲದೆ ಮತ್ತೊಬ್ಬನಿಂದಾಗಲಾರದು. ಆತನೊಡನೆ ಸ್ನೇಹವನ್ನು ಮಾಡಿಕೊಳ್ಳುವುದಕ್ಕೆ ಇದೇ ಸಮಯ. ನೀನು ತಡಮಾಡದೆ ಆತನ ಸಮೀಪಕ್ಕೆ ಹೋಗು. ಸುಗ್ರೀವನು ಯಜ್ಞಪುರುಷನ ಸಾಕ್ಷಿಯಾಗಿ ನಿನ್ನ ಮಿತ್ರತ್ವವನ್ನು ಪಡೆದು ನಿನಗೆ ದ್ರೋಹ ಬಗೆಯದೆ ಸಹಾಯಮಾಡುತ್ತ ಅನುಕೂಲನಾಗಿರುವನು. ಆತನು ಮಾಡಿದ ಉಪಕಾರವನ್ನು ಮರೆಯದವನು, ಕಾಮರೂಪಿ. ನಿನ್ನ ಕಾರ್ಯವನ್ನು ಮಾಡಿಕೊಡುವುದಕ್ಕೆ ಸಮರ್ಥ. ಆತನು ನೆನೆದ ಕಾರ್ಯವು ಆಯಿತೆಂದೇ ನಿಶ್ಚಯಿಸಬೇಕು. ಆತನಿಗೆ

ಉಪಕಾರಮಾಡಿದರೂ ಸರಿ ಮಾಡದಿದ್ದರೂ ಸರಿ, ನಂಬಿದವರ ಕೆಲಸವನ್ನು ನೆರವೇರಿಸಿ ಕೊಡುವನು. ಸುಗ್ರೀವನು ಬ್ರಹ್ಮದೇವನ ಮಾನಸಪುತ್ರನಾದ ಋಕ್ಷರಜಸ್ಸೆಂಬವನ ಮಗನು. ಆತನು ಪಂಪಾ ತೀರದಲ್ಲಿ ವಾಲಿಗೆ ಹೆದರಿಕೊಂಡು ಸಂಚರಿಸುತ್ತಿರುವನು. ಅವನು ಸೂರ್ಯನ ಔರಸಪುತ್ರ. ಅಂಥ ಸುಗ್ರೀವನನ್ನು ವಾಲಿಯು ಕಪಟದಿಂದ ಹೊರಡಿಸಿದ್ದರಿಂದ ಅವನು ಋಷ್ಯಮೂಕಪರ್ವತದಲ್ಲಿ ನೆಲೆಸಿದ್ದಾನೆ. ನೀನು ಆ ಪರ್ವತಕ್ಕೆ ಹೋಗಿ ಸುಗ್ರೀವನೊಡನೆ ಸ್ನೇಹವನ್ನು ಮಾಡಿಕೊ. ಆತನು ರಾಕ್ಷಸರು ವಾಸವಾಗಿರುವ ನಾನಾ ಸ್ಥಳಗಳನ್ನು ಬಲ್ಲನು. ನಾನಾ ಜಾತಿವಿಶೇಷಗಳನ್ನೂ ತನ್ನ ನಿಪುಣತೆಯಿಂದ ತಿಳಿಯುವನು. ಶ್ರೀರಾಮ, ಸುಗ್ರೀವನು ಸೂರ್ಯನು ಬೆಳಗುತ್ತಿರುವ ಭೂಮಂಡಲ ದೊಳಗಿನ ಸಮಸ್ತ ವೃತ್ತಾಂತವನ್ನೂ ಬಲ್ಲವನು. ಆತನರಿಯದ ವೃತ್ತಾಂತವಿಲ್ಲ. ಆತನು ತನ್ನ ಸಮೀಪದಲ್ಲಿರುವ ಕಪಿಗಳನ್ನು ಕಳುಹಿಸಿ ನಾನಾ ಪರ್ವತ ಗುಹೆ ಗಿರಿ ದುರ್ಗ ಮೊದಲಾದ ಸ್ಥಳಗಳಲ್ಲಿ ಅರಸಿ ನಿನ್ನ ಪತ್ನಿಯಾದ ಸೀತಾದೇವಿಯನ್ನು ಹುಡುಕಿ ಕೊಡುವನು. ಮಹಾಮೇರುಪರ್ವತ ಪಾತಾಳಲೋಕ ಮೊದಲಾದವನ್ನೇ ಪ್ರವೇಶ ಮಾಡಿಯಾದರೂ ಸೀತಾದೇವಿಯನ್ನು ತಂದು ಒಪ್ಪಿಸುವನು. ಸಂಶಯವಿಲ್ಲ" ಎಂದು ಕಬಂಧನು ನುಡಿದನು.



೭೩ ನೆಯ ಅಧ್ಯಾಯ

## ಕಬಂಧನ ಸ್ವರ್ಗಾರೋಹಣ

ಈ ಪ್ರಕಾರ ನುಡಿದು ಕಬಂಧನು ಶ್ರೀರಾಮನಿಗೆ ಸೀತಾದೇವಿಯನ್ನು ಹುಡುಕಿಕೊಂಡು ಹೋಗುವ ಮಾರ್ಗವನ್ನು ತೋರಿಸಿ ಪುನಃ ಹೇಳಿದನು: "ಶ್ರೀರಾಮ, ಇಲ್ಲಿಂದ ಪಶ್ಚಿಮದಿಕ್ಕಿನಲ್ಲಿ ಎಲ್ಲಿ ನೋಡಿದರೂ ಫಲಪುಷ್ಪಗಳಿಂದ ಪರಿಪೂರ್ಣವಾದ ಮಾವು ನೇರಲು ಹಲಸು ಅಶ್ವತ್ಥ ಕರ್ಣಿಕಾರ ತಿಲಕ ಮಲ್ಲಿಗೆ ಮೊದಲಾದ ವೃಕ್ಷಲತೆಗಳು ಮನೋಹರವಾಗಿರುವುವು. ಆ ಮರಗಳನ್ನು ಹತ್ತಿ ಕೈಗೆ ಸಿಕ್ಕುವ ಫಲಪುಷ್ಪಗಳನ್ನು ಮನಸ್ಸು ಬಂದಂತೆ ಕಿತ್ತು ಉಪಯೋಗಿಸಬಹುದು. ನೀವು ಮುಂದೆ ಒಂದು ವನದಿಂದ ಮತ್ತೊಂದು ವನಕ್ಕೂ ಒಂದು ಪರ್ವತದಿಂದ ಮತ್ತೊಂದು ಪರ್ವತಕ್ಕೂ ಹೋಗುತ್ತ ಅನೇಕ ವನಗಳನ್ನು ದಾಟಿ ಮನೋಹರವಾದ ಪಂಪಾತೀರಕ್ಕೆ ಹೋಗಿರಿ. ಆ ಪಂಪಾ ತೀರವು ಸಮಮಾರ್ಗವುಳ್ಳದ್ದಾಗಿಯೂ ಸಂಚರಿಸುವುದಕ್ಕೆ ಸುಲಭವಾದ ತಡಿಯುಳ್ಳದ್ದಾಗಿಯೂ ಕನ್ನೈದಿಲೆ ಕಮಲಗಳಿಂದ ಒಪ್ಪುವಂಥಾದ್ದಾಗಿಯೂ ಹಂಸ ಚಕ್ರವಾಕ ಸಾರಸಪಕ್ಷಿಗಳ ಮನೋಹರವಾದ ಧ್ವನಿಯುಳ್ಳದ್ದಾಗಿಯೂ ಇರುವುದು. ಅಲ್ಲಿರುವ ಪಕ್ಷಿಗಳು ಮನುಷ್ಯರನ್ನು ಕಂಡು ಬೆದರುವುದಿಲ್ಲ. ಅವುಗಳನ್ನು ಯಾರೂ ಕೊಲ್ಲುತ್ತಿಲ್ಲ. ಅಲ್ಲಿರುವ ಪರ್ವತ ಗುಹಾದಿಗಳಲ್ಲಿ ಸಂಚರಿಸುವ ಕಾಡುಹಂದಿ ಕೃಷ್ಣಸಾರಂಗ ಎರಳೆ ಮೊದಲಾದ ಮೃಗಗಳನ್ನು ನೀವು ಉಪಯೋಗಿಸ ಬಹುದು. ಉತ್ತಮವಾದ ಕಮಲಗಳಿಂದ ಪರಿಮಳಯುಕ್ತವಾಗಿಯೂ ಆರೋಗ್ಯಕರವಾಗಿಯೂ ಇರುವ ಮನೋಹರವಾದ ಉದಕವನ್ನು ತಾವರೆ ಎಲೆಯ ಪೊಟ್ಟಣಗಳಲ್ಲಿ ಲಕ್ಷ್ಮಣನು ನಿನಗೆ ತಂದುಕೊಡುವನು. ಅವುಗಳನ್ನು ಸ್ವೀಕರಿಸಿ ಪಂಪಾತೀರಕ್ಕೆ ಉದಕನಿಮಿತ್ತವಾಗಿ ಬರುವ ನಾನಾ ವಿಚಿತ್ರವಾದ ಮೃಗಗಳನ್ನು ನೋಡುತ್ತ ನಿನ್ನ ಮನಸ್ಸಿನಲ್ಲಿರುವ ದುಃಖವನ್ನು ಸ್ವಲ್ಪಮಟ್ಟಿಗೆ ಪರಿಹರಿಸಿಕೊಳ್ಳಬಹುದು. ಆ ವನದಲ್ಲಿರುವ ಪುಷ್ಪಗಳು ಕಂದುವುದೂ ಇಲ್ಲ, ಒಣಗುವುದೂ ಇಲ್ಲ. ಅದೇನು ಕಾರಣವೆಂದರೆ: ಆ ವನದಲ್ಲಿ ತಪಸ್ಸುಮಾಡಿಕೊಂಡಿದ್ದ ಮತಂಗನೆಂಬ ಮಹರ್ಷಿಯ

ಶಿಷ್ಯರು ವನಾಂತರದಲ್ಲಿ ಸಂಚರಿಸಿ ಅಲ್ಲಲ್ಲಿರುವ ಪುಷ್ಪಗಳನ್ನು ಹೊತ್ತುಕೊಂಡು ಬರುವಾಗ ಅವರ ಶರೀರದ ಬೆವರಹನಿಗಳು ಭೂಮಿಯಮೇಲೆ ಬೀಳುತ್ತಿದ್ದವು. ಆ ಬಿಂದುಗಳು ಅಂಥ ಪುಷ್ಪಗಳಾಗಿವೆ. ಆ ಋಷಿಗಳೆಲ್ಲರೂ ಸ್ವರ್ಗವನ್ನೈದಿದರು. ಹಾಗಾದರೂ ಅವರ ಸೇವೆಯನ್ನು ಮಾಡಿಕೊಂಡಿದ್ದ ಶಬರಿಯೆಂಬವಳು ವಿರಕ್ತೆಯಾಗಿ ಚಿರಂಜೀವಿಯಾಗಿ ಈಗಲೂ ಇದ್ದಾಳೆ. ಶ್ರೀರಾಮಾ, ಸರ್ವಲೋಕಪೂಜ್ಯನಾಗಿ ಪರಮಪುರುಷಾವತಾರನಾದ ನಿನ್ನ ದರ್ಶನವನ್ನು ಮಾಡಿ ಆಕೆಯು ಸ್ವರ್ಗಲೋಕಕ್ಕೆ ಹೋಗುವಳು. ಆದಕಾರಣ ನೀನು ಅವಶ್ಯವಾಗಿ ಪಂಪಾತೀರಕ್ಕೆ ಹೋಗಿ ಅದರ ತೀರದ ಪಡುವಣ ತಡಿಯನ್ನು ಹತ್ತಿನೋಡಿದರೆ ಒಂದು ಆಶ್ರಮವು ಕಾಣಿಸುವುದು. ಆ ಆಶ್ರಮವು ಮಹಾಗೋಪ್ಯವಾಗಿರುವುದು. ಆನೆಗಳೂ ಸರ್ಪಗಳೂ ಮತಂಗಮುನಿಯ ಪ್ರಭಾವದಿಂದ ಆ ಆಶ್ರಮಕ್ಕೆ ಹೋಗಲಾರವು. ಅದರಲ್ಲಿರುವ ವನದಲ್ಲಿ ಮತಂಗಮುನೀಶ್ವರನು ತಪಸ್ಸು ಮಾಡಿಕೊಂಡಿದ್ದನು. ಆದ್ದರಿಂದ ಅದು ಮತಂಗವನವೆಂದು ಪ್ರಸಿದ್ಧವಾಗಿದೆ. ಋಷ್ಯಮೂಕ ಪರ್ವತವು ಪಂಪಾತೀರದ ಮೂಡಣ ಭಾಗದಲ್ಲಿ ಅನೇಕ ಪುಷ್ಪಫಲಸಮೇತವಾದ ವನಗಳಿಂದ ಮನೋಹರವಾಗಿರುವುದು. ಆ ಪರ್ವತವನ್ನು ಹತ್ತುವುದಕ್ಕೆ ಯಾರಿಗೂ ಅಸಾಧ್ಯವು. ಅದರ ಮೇಲುಭಾಗದಲ್ಲಿ ನಿದ್ರೆಮಾಡತಕ್ಕವನಿಗೆ ಸ್ವಪ್ನದಲ್ಲಿ ಧನರಾಶಿಯು ಕಂಡರೆ ಎಚ್ಚರವಾದಾಗ ಅದು ಅವನಿಗೆ ದೊರೆಯುವುದು. ಆಚಾರಹೀನನು ಆ ಪರ್ವತವನ್ನು ಹತ್ತಬಾರದು. ಹತ್ತಿದರೆ ಅವನನ್ನು ರಾಕ್ಷಸರು ಎತ್ತಿಕೊಂಡು ಹೋಗಿ ಕೊಲ್ಲುವರು. ಮತಂಗಾರಣ್ಯದಲ್ಲಿರುವ ಮರಿಯಾನೆಗಳು ವಾದ್ಯಧ್ವನಿ ಮಾಡುತ್ತಿರುವುವು. ದೊಡ್ಡ ಆನೆಗಳು ಮೇಘಗಳಂತೆ ನೀಲವರ್ಣವಾಗಿಯೂ ಘನಗಾತ್ರವಾಗಿಯೂ ಅತಿವೇಗವುಳ್ಳವಾಗಿಯೂ ಇರುವುವು. ಮತ್ತೊಂದು ವನದಿಂದ ಬರುವ ಆನೆಗಳನ್ನು ತಿವಿದು ಕೆಡಹಿ ಕೊಂಬುಗಳು ರಕ್ತಮಸಗಿರುವವು. ಆ ಆನೆಗಳು ಪಂಪಾತೀರಕ್ಕೆ ಬಂದು ನಿರ್ಮಲವಾದ ಉದಕವನ್ನು ಪಾನಮಾಡಿಕೊಂಡು ವನದಲ್ಲಿ ಸಂಚರಿಸಿಕೊಂಡಿರುವುವು. ಶ್ರೀರಾಮ, ಆ ವನದಲ್ಲಿ ನೀಲವರ್ಣವಾಗಿಯೂ ಹೊಂಬಣ್ಣವಾಗಿಯೂ ಇರುವ ಕರಡಿ ಕೃಷ್ಣಸಾರಂಗ ಮೊದಲಾದ ಮೃಗಗಳು ಸಂಚರಿಸುತ್ತಿರುವುವು. ಆ ಮೃಗಗಳ ಕ್ರೀಡಾವಿಶೇಷ ಗಳನ್ನು ನೋಡಿದರೆ ದುಃಖವು ಶಾಂತವಾಗುತ್ತದೆ. ಋಷ್ಯಮೂಕಪರ್ವತದಲ್ಲಿ ಶಿಲೆಯಿಂದ ಮುಚ್ಚಲ್ಪಟ್ಟ ಒಂದು ದೊಡ್ಡ ಗುಹೆ ಇದೆ. ಆ ಗುಹೆಯೊಳಗೆ ಹೋಗುವುದು ಬಹಳ ಕಷ್ಟ. ಆ ಗುಹೆಯ ಮುಂದುಗಡೆಯಲ್ಲಿ ಅತ್ಯಂತ ಶೀತೋದಕವುಳ್ಳ ಒಂದು ಮಡುವಿದೆ. ಆ ಮಡುವಿನ ಬಳಿಯಲ್ಲಿ ಅನೇಕ ಕಂದಮೂಲಗಳೂ ನಾನಾ ಫಲಪುಷ್ಪಗಳಿಂದ ಇಟ್ಟಣಿಸಿದ ವೃಕ್ಷಗಳೂ ಇವೆ. ಆ ಗುಹೆಯಲ್ಲಿ ಸುಗ್ರೀವನು ನಾಲ್ಕುಮಂದಿ ಕಪಿಗಳ ಸಹಿತ ವಾಸವಾಗಿದ್ದಾನೆ. ಒಂದೊಂದು ಸಮಯದಲ್ಲಿ ಆ ಪರ್ವತದ ಕೋಡುಗಲ್ಲಿನ ಮೇಲೆಯೂ ಇರುತ್ತಾನೆ" ಎಂದು ನುಡಿದನು.

ಈ ಪ್ರಕಾರವಾಗಿ ಶ್ರೀರಾಮನೊಡನೆ ಹೇಳಿ ಅಂತರಿಕ್ಷಮಾರ್ಗದಲ್ಲಿ ದಿವ್ಯಾಭರಣ ಭೂಷಿತನಾಗಿ ಒಪ್ಪುತ್ತಿದ್ದ ಕಬಂಧನನ್ನು ಕುರಿತು ರಾಮಲಕ್ಷ್ಮಣರು "ಎಲೈ ಕಬಂಧನೆ, ನೀನು ನಿನ್ನ ಲೋಕಕ್ಕೆ ಹೋಗು" ಎಂದು ಹೇಳಿದರು.

ಕಬಂಧನು "ಎಲೈ ರಾಮಲಕ್ಷ್ಮಣರುಗಳಿರಾ, ನಿಮ್ಮ ಕಾರ್ಯವು ಸಾಧ್ಯವಾಗುವುದು. ನೀವು ಮುಂದೆ ಪ್ರಯಾಣಮಾಡಿರಿ" ಎಂದು ನುಡಿದನು. ರಾಮಲಕ್ಷ್ಮಣರು ಸಂತೋಷಯುಕ್ತರಾಗಿ ಆತನನ್ನು ಬೀಳ್ಕೊಟ್ಟು ಋಷ್ಯಮೂಕಪರ್ವತಕ್ಕೆ ಹೊರಟರು. ಕಬಂಧನು ತನ್ನ ಪೂರ್ವರೂಪವನ್ನು ಪಡೆದು ಅಂತರಿಕ್ಷಮಾರ್ಗದಲ್ಲಿ ನಿಂತು "ಶ್ರೀರಾಮ, ನೀನು ಅವಶ್ಯವಾಗಿ ಸುಗ್ರೀವನ ಸಂಗಡ ಸ್ನೇಹವನ್ನು ಮಾಡಿಕೊ" ಎಂದು ಹೇಳಿ ಸ್ವರ್ಗಲೋಕಕ್ಕೆ ಹೋದನು.

## ೭೪ ನೆಯ ಅಧ್ಯಾಯ

## ಶಬರಿಯ ದರ್ಶನ

ಆಮೇಲೆ ರಾಮಲಕ್ಷ್ಮಣರು ಕಬಂಧನು ಹೇಳಿದಂತೆ ಪಡುವಲಾಗಿ ತಿರುಗಿ ಪಂಪಾತೀರವನ್ನು ಕುರಿತು ತೆರಳಿದರು. ಋಷ್ಯಮೂಕಪರ್ವತದಲ್ಲಿದ್ದ ಸುಗ್ರೀವನನ್ನು ಕಾಣಬೇಕೆಂದು ಅನೇಕ ವನಗಳನ್ನೂ ಪರ್ವತಗಳನ್ನೂ ದಾಟಿ ಪಂಪಾಸರೋವರದ ಪಡುವಲ ತೀರಕ್ಕೆ ಹೋದರು ಅಲ್ಲಿ ಶಬರಿಯ ರಮ್ಯವಾದ ಆಶ್ರಮವನ್ನು ಕಂಡು ಅದನ್ನು ಪ್ರವೇಶಿಸಿದರು. ಆಗ ತಪಸಿದ್ಧಳಾದ ಶಬರಿಯು ಎದ್ದುನಿಂತು ಕೈಮುಗಿದಳು. ಅವಳು ರಾಮಲಕ್ಷ್ಮಣರ ಪಾದಗಳನ್ನು ಮುಟ್ಟಿ ವಂದಿಸಿ ಪಾದ್ಯಾದಿಗಳಿಂದ ವಿಧಿವತ್ತಾಗಿ ರಾಮಲಕ್ಷ್ಮಣರನ್ನು ಉಪಚರಿಸಿದಳು. ಅನಂತರ ಶ್ರೀರಾಮನು "ಹೇ ತಪೋಧನೆ, ನಿರ್ವಿಘ್ನವಾಗಿ ನಿನ್ನ ತಪಸ್ಸು ಸಾಗುತ್ತಿದೆಯೆ? ಆಹಾರನಿಯಮವನ್ನು ಪಾಲಿಸುತ್ತ ಕೋಪವನ್ನು ಜಯಿಸಿರುವೆಯಾ? ನಿನ್ನ ಮನಸ್ಸಿಗೆ ಶಾಂತಿ ದೊರಕಿದೆಯೆ? ನೀನು ಮಾಡಿದ ಗುರುಶುಶ್ರೂಷೆಯು ಫಲಿಸಿತೆ?" ಎಂದು ಕೇಳಿದನು.

ಶಬರಿಯು "ಶ್ರೀರಾಮ, ಈಗ ನಿನ್ನ ಸಂದರ್ಶನದಿಂದ ನನಗೆ ತಪಸ್ಸಿದ್ಧಿಯೊದಗಿತು. ನನ್ನ ಜನ್ಮವು ಸಫಲವಾಯಿತು. ಈಗಲೇ ನನಗೆ ಸ್ವರ್ಗಲೋಕವು ಪ್ರಾಪ್ತವಾಯಿತು. ಶ್ರೀರಾಮ, ಪರಮಪುರುಷಾವತಾರನಾದ ನೀನು ನಾನು ಮಾಡಿದ ಪೂಜೆಯನ್ನು ಕೈಕೊಂಡು ಕೃಪಾದೃಷ್ಟಿಯಿಂದ ನನ್ನನ್ನು ನೋಡಿದಾಗಲೇ ಉತ್ತಮವಾದ ಸದ್ಗತಿಯನ್ನು ಪಡೆದೆನು! ಶ್ರೀರಾಮ, ನೀನು ಚಿತ್ರಕೂಟ ಪರ್ವತಕ್ಕೆ ಬಂದ ಸಮಯದಲ್ಲಿ ಈ ಆಶ್ರಮದಲ್ಲಿದ್ದ ಮಹಾತ್ಮರಾದ ಋಷಿಗಳು ವಿಮಾನಾರೂಢರಾಗಿ ಸ್ವರ್ಗಲೋಕಕ್ಕೆ ಹೋಗುತ್ತ, ಬಹುಕಾಲ ತಮ್ಮ ಸೇವೆಯನ್ನು ಮಾಡಿಕೊಂಡಿದ್ದ ನನ್ನನ್ನು ಕುರಿತು 'ಶಬರಿ, ಪುರುಷೋತ್ತಮನಾದ ಶ್ರೀರಾಮನು ಇಲ್ಲಿಗೆ ಬರುವನು. ನೀನು ಈ ಆಶ್ರಮದಲ್ಲಿಯೇ ಇದ್ದು ಲಕ್ಷ್ಮಣಸಮೇತನಾದ ಶ್ರೀರಾಮನ ದರ್ಶನವನ್ನು ಮಾಡು. ಆತನಿಗೆ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನು ಮಾಡು. ಆತನ ಕೃಪಾವಲೋಕನದಿಂದ ಶಾಶ್ವತವಾದ ಸ್ವರ್ಗಲೋಕವನ್ನು ಪಡೆಯುವೆ' ಎಂದು ಹೇಳಿ ಸ್ವರ್ಗಲೋಕವನ್ನೈದಿದರು. ಶ್ರೀರಾಮ, ಆದಕಾರಣ ನಾನು ಈ ಪಂಪಾತೀರದಲ್ಲಿ ದೊರಕುವ ನಾನಾ ಬಗೆಯ ಹಣ್ಣುಗಳನ್ನು ನಿನಗೋಸ್ಕರ ಸಂಗ್ರಹಿಸಿದ್ದೆನು. ಈಗ ಅವುಗಳನ್ನು ನಿನಗೆ ಸಮರ್ಪಿಸಿ ಕೃತಾರ್ಥಳಾದೆನು" ಎಂದು ನುಡಿದಳು.

ಆ ಮಾತನ್ನು ಕೇಳಿ ಧರ್ಮಾತ್ಮನಾದ ಶ್ರೀರಾಮನು ಸುಜ್ಞಾನಿಯಾದ ಶಬರಿಯನ್ನು ಕುರಿತು "ತಪಸ್ವಿನಿ, ನಾವು ಕಬಂಧನ ಮುಖದಿಂದ ನಿನ್ನ ಪ್ರಭಾವವನ್ನು ಕೇಳಿದೆವು. ಈಗ ನಿನ್ನ ಪ್ರಭಾವವನ್ನು ಪ್ರತ್ಯಕ್ಷವಾಗಿ ಕಂಡೆವು. ನಾವು ನಿನ್ನ ತಪೋವನವನ್ನು ಚೆನ್ನಾಗಿ ನೋಡಬೇಕು" ಎಂದು ನುಡಿದನು.

ಶಬರಿಯು ಮಹಾಪ್ರಸಾದವೆಂದು ಶ್ರೀರಾಮನ ವಾಕ್ಯವನ್ನಂಗೀಕರಿಸಿ ಆತನನ್ನು ಕುರಿತು "ಶ್ರೀರಾಮ, ಇದೇ ನನ್ನ ತಪೋವನ. ಈ ತಪೋವನದಲ್ಲಿ ಮನೋಹರವಾದ ಮೃಗಪಕ್ಷಿಗಳು ವಿನೋದದಿಂದ ವಿಹರಿಸಿಕೊಂಡಿವೆ. ಇದೇ ಮತಂಗವನ. ಇಲ್ಲಿ ಮಹಾತ್ಮರಾದ ನನ್ನ ಗುರುಗಳು ವಾಸವಾಗಿದ್ದರು. ಈ ಗುಹೆಯಲ್ಲಿರುವ ತೀರ್ಥವನ್ನು ಆ ಋಷಿಗಳು ಮಂತ್ರಗಳಿಂದ ಪವಿತ್ರ ಮಾಡಿದರು. ಪಂಪಾತೀರಕ್ಕೆ ಪಡುವಲಾಗಿರುವ ಈ ಆಶ್ರಮದಲ್ಲಿ ನಾನು ಆ ಋಷಿಗಳಿಗೆ ಬಹುಕಾಲ

ಸೇವಾ ಸತ್ಕಾರಗಳನ್ನು ಮಾಡಿಕೊಂಡಿದ್ದೆನು. ಇಲ್ಲಿದ್ದ ಋಷಿಗಳು ವ್ರತೋಪವಾಸ ನಿಯಮಗಳಿಂದ ಶರೀರದಂಡನೆಯನ್ನು ಮಾಡಿಕೊಂಡಿದ್ದರು. ಅವರು ಫಲಪುಷ್ಪಗಳನ್ನು ತರಲಾರದಿದ್ದರೆ ಆ ಋಷಿಗಳ ತಪಃಪ್ರಭಾವದಿಂದ ಈ ವನದಲ್ಲಿರುವ ವೃಕ್ಷಗಳು ತಾವೇ ತಮ್ಮ ಫಲಪುಷ್ಪಗಳನ್ನು ಅವರಿಗೆ ತಂದುಕೊಡುತ್ತಿದ್ದವು. ಆ ಮುನಿಗಳು ಸ್ನಾನಮಾಡಿ ಹಾಕಿದ ಬಟ್ಟೆಗಳು ಇನ್ನೂ ಒದ್ದೆಯಾಗಿವೆ, ನೋಡು. ಅವರು ಪೂಜಿಸಿದ ದೇವತೆಗಳ ಮೇಲಿನ ಹೂಗಳು ಇನ್ನೂ ಬಾಡದೆ ಇವೆ, ನೋಡು. ಇದೇ ಈ ವನದ ಪ್ರಭಾವ. ನಾನು ಈ ವನದಲ್ಲಿ ಆ ಋಷಿಗಳು ಹೋದ ಪುಣ್ಯಲೋಕಕ್ಕೆ ಹೋಗಬೇಕೆಂಬ ಇಚ್ಛೆಯಿಂದ ಆ ಋಷಿಗಳ ಸೇವೆಯನ್ನು ಮಾಡಿಕೊಂಡಿದ್ದೆನು" ಎಂದು ಹೇಳಿದಳು.

ಆಗ ಲಕ್ಷ್ಮಣಸಮೇತನಾದ ಶ್ರೀರಾಮನು ಅತ್ಯಾಶ್ಚರ್ಯಕರವಾದ ಆ ಮತಂಗಾಶ್ರಮದ ಪ್ರಭಾವವನ್ನು ನೋಡಿ ಸಂತೋಷಯುಕ್ತನಾಗಿ ವ್ರತಸ್ಥೆಯಾದ ಶಬರಿಯನ್ನು ಕುರಿತು "ಹೇ ತಪಸ್ವಿನಿ, ನೀನು ಮಾಡಿದ ಸತ್ಕಾರದಿಂದ ನಾನು ಸಂತೋಷಪಟ್ಟೆನು. ನೀನು ನಿನ್ನ ಮನಸ್ಸಿನಲ್ಲಿ ಯಾವ ಪುಣ್ಯಲೋಕಕ್ಕೆ ಹೋಗಬೇಕೆಂದೆಣಿಸಿದ್ದೀಯೋ ಆ ಲೋಕಕ್ಕೆ ಹೋಗು!" ಎಂದು ಹೇಳಿದನು.

ಆಗ ಜಟಾಧಾರಿಯೂ ಕೃಷ್ಣಾಜಿನವನ್ನು ಧರಿಸಿದವಳೂ ವೃದ್ಧೆಯೂ ಆದ ಶಬರಿಯು ಅಗ್ನಿಯಲ್ಲಿ ತನ್ನ ಶರೀರವನ್ನು ಹೋಮಮಾಡಿದಳು. ಕೂಡಲೆ ಅವಳು ದಿವ್ಯಾಂಬರವನ್ನೂ ದಿವ್ಯಗಂಧಾನುಲೇಪನವನ್ನೂ ಪಡೆದ ದಿವ್ಯಶರೀರವನ್ನು ಧರಿಸಿ ಮಿಂಚಿನಂತೆ ಬೆಳಗುತ್ತ, ತನ್ನ ಗುರುಗಳು ಹೋಗಿ ಸೇರಿದ ದಿವ್ಯಲೋಕವನ್ನು ಪಡೆದಳು.



೭೫ನೆಯ ಅಧ್ಯಾಯ

## ಶ್ರೀರಾಮನು ಪಂಪಾಸರೋವರದ ಬಳಿಗೆ ಹೋದದ್ದು

ಈ ಪ್ರಕಾರದಲ್ಲಿ ಶಬರಿಯು ತನ್ನ ಪುಣ್ಯಾತಿಶಯದಿಂದ ಸ್ವರ್ಗಲೋಕವನ್ನೈದಲು ಲಕ್ಷ್ಮಣ ಸಮೇತನಾದ ಶ್ರೀರಾಮನು ಮತಂಗಾಶ್ರಮದಲ್ಲಿದ್ದ ಋಷಿಗಳ ಮಹಿಮೆಯನ್ನು ನೆನೆದು ಆಶ್ಚರ್ಯ ಪಡುತ್ತ ಲಕ್ಷ್ಮಣನನ್ನು ಕುರಿತು "ಎಲೈ ಲಕ್ಷ್ಮಣ, ನಾವು ಮಹಾತ್ಮರಾದ ಋಷಿಗಳ ಆಶ್ಚರ್ಯಕರ ವಾದ ಚರಿತೆಯನ್ನೂ ಈ ಆಶ್ರಮದ ಮಹಿಮೆಯನ್ನೂ ಕೇಳಿದೆವು; ಈ ಆಶ್ರಮದಲ್ಲಿ ಮೃಗಪಕ್ಷಿಗಳು ಶಂಕಾತಂಕವಿಲ್ಲದೆ ಮನುಷ್ಯರಲ್ಲಿ ವಿಶ್ವಾಸದಿಂದಿವೆ. ಇಲ್ಲಿ ಆ ಋಷಿಗಳ ತಪಸ್ಸಾಮರ್ಥ್ಯದಿಂದ ಸಮಸ್ತ ಸಮುದ್ರಗಳ ತೀರ್ಥಗಳೂ ಸನ್ನಿಹಿತವಾಗಿವೆ. ನಾವು ಈ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ನಮ್ಮ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ಕೃತಾರ್ಥರಾಗುವೆವು. ನನ್ನ ಮನಸ್ಸಿಗೆ ಅತ್ಯಂತ ಹರ್ಷವಾಗಿದೆ. ಲಕ್ಷ್ಮಣ, ಸೀತಾದೇವಿಯನ್ನರಸುವುದಕ್ಕಾಗಿ ನನ್ನ ಮನಸ್ಸು ಸುಗ್ರೀವನ ಕಡೆಗೆ ಧಾವಿಸುತ್ತಿದೆ" ಎಂದು ನುಡಿದನು.

ಲಕ್ಷ್ಮಣನು "ಅಣ್ಣ, ನನ್ನ ಮನಸ್ಸಿನಲ್ಲಿಯೂ ಹಾಗೆಯೇ ಮಾಡಬೇಕೆಂದು ಕುತೂಹಲವಾಗಿದೆ. ಇನ್ನು ನಾವು ಪಂಪಾತೀರಕ್ಕೆ ತೆರಳೋಣ" ಎಂದು ನುಡಿದನು.

ಆ ಬಳಿಕ ಶ್ರೀರಾಮನು ಲಕ್ಷ್ಮಣಸಮೇತನಾಗಿ ಅನೇಕ ಪುಷ್ಪಗಳಿಂದ ಮನೋಹರವಾದ ವನಗಳನ್ನು ನೋಡುತ್ತ ಹಂಸಾದಿ ಪುಣ್ಯಪಕ್ಷಿಗಳ ಮನೋಹರವಾದ ಸ್ವರಗಳನ್ನು ಕೇಳುತ್ತ



ಶ್ರೀರಾಮಲಕ್ಷ್ಮಣರಿಗೆ ಶಬರಿಯ ಉಪಚಾರ

ನಾನಾವಿಧವಾದ ವೃಕ್ಷಗಳನ್ನು ನೋಡುತ್ತ ಮಧ್ಯಮಾರ್ಗದಲ್ಲಿದ್ದ ಮತಂಗಸರಸ್ಸೆಂಬ ರಮಣೀಯವಾದ ಮಡುವನ್ನು ಕಂಡನು ಅದರಲ್ಲಿ ಸ್ನಾನವನ್ನು ಮಾಡಿ ಮುಂದೆ ನಡೆದು ಪಕ್ಷಿಗಳ ಮನೋಹರವಾದ ಸ್ವರಗಳನ್ನು ಕೇಳಿದನು.

ರಾಮಲಕ್ಷ್ಮಣರಿಬ್ಬರೂ ಮುಂದೆ ನಡೆದು ಹೋಗಿ ಪಂಪಾಸರೋವರವನ್ನು ಕಂಡರು. ಆ ಸರೋವರವು ಕಮಲಗಳಿಂದ ರಂಜಿಸುತ್ತಿತ್ತು. ಸುತ್ತಲೂ ತಿಲಕ, ಅಶೋಕ, ಪುಂನಾಗ, ಬಕುಲ ಮುಂತಾದ ಪುಷ್ಪಿತವೃಕ್ಷಗಳಿಂದ ಶೋಭಿಸುತ್ತಿದ್ದ ಉಪವನಗಳಿಂದ ಒಪ್ಪುತ್ತಿತ್ತು. ಶೀತಲವೂ ಸ್ವಚ್ಛವೂ ಆದ ಜಲದಿಂದ ಪೂರ್ಣವಾಗಿತ್ತು. ಸೌಗಂಧಿಕ ಪುಷ್ಪಗಳಿಂದ ಕೆಂಪಾಗಿಯೂ ಕುಮುದಗಳಿಂದ ಬಿಳುಪಾಗಿಯೂ ನೈದಿಲೆಗಳಿಂದ ಕಪ್ಪಾಗಿಯೂ ಶೋಭಿಸುತ್ತಿದ್ದ ಆ ಸರೋವರವು ಚಿತ್ರವರ್ಣದ ಜಮಖಾನದಂತೆ ಮನೋಹರವಾಗಿತ್ತು. ಮೀನುಗಳು ಪುಷ್ಕಳವಾಗಿ ಸಂಚರಿಸುತ್ತಿದ್ದವು. ಪಕ್ಕದಲ್ಲಿ ನವಿಲುಗಳು ಕೇಕೆ ಹಾಕುತ್ತಿದ್ದವು. ಶ್ರೀರಾಮನು ಅದನ್ನು ನೋಡುತ್ತಿರಲು ಅವನ ವಿರಹಾಗ್ನಿಯು ಕೆರಳಿ ಸೀತೆಯನ್ನು ನೆನೆದು ದುಃಖಿಸಲಾರಂಭಿಸಿದನು. ಅವನು ಲಕ್ಷ್ಮಣನನ್ನು ಕುರಿತು "ಲಕ್ಷ್ಮಣ, ಆಗೋ, ಅಲ್ಲಿ ಕಾಣುತ್ತಿರುವುದೇ ಋಷ್ಯಮೂಕಪರ್ವತ. ಪರಾಕ್ರಮಿಯಾದ ಸುಗ್ರೀವನೆಂಬ ವಾನರೇಂದ್ರನು ಅಲ್ಲಿಯೇ ಇರಬೇಕು. ನೀನು ಹೋಗಿ ಅವನನ್ನು ಕಂಡು ಬಾ. ಲಕ್ಷ್ಮಣ, ಸೀತೆಯನ್ನು ಕಳೆದುಕೊಂಡು ನಾನು ಬದುಕಿರುವುದು ಹೇಗೆ ?" ಎಂದು ಹೇಳುತ್ತ ಲಕ್ಷ್ಮಣನೊಡನೆ ಪಂಪಾತೀರಕ್ಕೆ ಆಗಮಿಸಿದನು.

ಇಂತು ಉತ್ತಮ ಕ್ಷತ್ರಿಯ ಕುಲೋದ್ಭವ, ಬಿರುದೆಂತೆಂಬರ ಗಂಡ, ಗಜಬೇಂಟೆಕಾರ, ಸಮಸ್ತಶತ್ರುಸಂಘ
ಜೀಮೂತ ಜಂಝಾಮಾರುತ, ಪ್ರತ್ಯರ್ಥಿ ಪೃಥ್ವೀಪತಿ ವನ ದಾವಾನಲ, ಸಮಸ್ತ ವಿದ್ವಜ್ಜನ ಸಮುದಾಯ
ಕಲ್ಪಭೂಜಾತ, ಆಶ್ರಿತಜನ ಸುರಧೇನು, ಕಾಮಿನೀಜನ ನೂತನ ಪಂಚಬಾಣ, ಚೌಷಷ್ಟಿ
ಕಲಾಪ್ರವೀಣ, ಮಹಿಷಾಪುರವರಾಧೀಶ, ಚಾಮರಾಜವಂಶೋದ್ಧಾರಕ, ತಿಮ್ಮರಾಜ
ತನೂಜ ನರಸರಾಜ ಗರ್ಭದುಗ್ಧಸಿಂಧುಸುಧಾಕರ, ಶ್ರೀಲಕ್ಷ್ಮೀಕಾಂತ ಪಾದಾರ
ವಿಂದ ದ್ವಂದ್ವನಿಷ್ಯಂದಮಾನಂದ ಮಕರಂದ ಬಿಂದುಸಂದೋಹಾಸ್ವಾದನ
ನಿರ್ಮಲೀಕೃತಾಂತಃಕರಣ, ತ್ರಿಣಯನೇಶ್ವರಸದ್ಭಕ್ತಿಯುಕ್ತ
ಮಹಾಬಲಾಚಲವಾಸ, ಶ್ರೀಚಾಮುಂಡಿಕಾಂಬಾ ಸದ್ಭಕ್ತಿ
ಮಂಡಿತರಾದ ಶ್ರೀಚಾಮರಾಜ ಒಡೆಯರವರಿಂದ
ಲೋಕೋಪಕಾರಾರ್ಥವಾಗಿ ಬುಧಜನಸಂಮತಿ
ಯಿಂದ ಕರ್ಣಾಟಕಭಾಷಾವಚನ ರಚನೆ
ಯಾದ ಶ್ರೀಚಾಮರಾಜೋಕ್ತಿ
ವಿಲಾಸವೆಂಬ ಕನ್ನಡ
ರಾಮಾಯಣದಲ್ಲಿ

## ಅರಣ್ಯಕಾಂಡವು ಸಮಾಪ್ತವಾಯಿತು

ಜಟಿಲಂ ಚೀರವಸನಂ ದಂಡಕಾರಣ್ಯವಾಸಿನವ್ |
ಮುನಿವೇಷಧರಂ ಧ್ಯಾಯೇದಾರಣ್ಯೇ ಕಾಂಡ ಉತ್ತಮೇ ||



ಜಟಾಯೋರುದ್ಧರ್ತಾ ಜನಕತನಯಾಕೀಲಿತಮನಾಃ
ಪದಂ ಪ್ರಾಪ್ತಾ ಯಸ್ಯಾಧಮಕುಲಭವಾ ಚಾಪಿ ಶಬರೀ ।
ಸಸೌಮಿತ್ರಿಃ ಸ್ತುತ್ಯೋ ವಿಮಲಧಿಷಣೈರ್ವೇದವಚಸಾ-
ಮಗಮ್ಯಃ ಶ್ರೀರಾಮೋ ಲಸತು ಮಮ ಚಿತ್ತೇ ರಘುಪತಿಃ ॥

ಲೋಕಾಭಿರಾಮಂ ರಣರಂಗಧೀರಂ
ರಾಜೀವನೇತ್ರಂ ರಘುವಂಶನಾಥಮ್ ।
ಕಾರುಣ್ಯರೂಪಂ ಕರುಣಾಕರಂ ತಂ
ಶ್ರೀರಾಮಚಂದ್ರಂ ಶರಣಂ ಪ್ರಪದ್ಯೇ ॥

ಆರಾಮಃ ಕಲ್ಪವೃಕ್ಷಾಣಾಂ ವಿರಾಮಃ ಸಕಲಾಪದಾಮ್ ।
ಅಭಿರಾಮಸ್ತ್ರಿಲೋಕಾನಾಂ ರಾಮಃ ಶ್ರೀಮಾನ್ ಸ ನಃ ಪ್ರಭುಃ ॥

ಶ್ರೀಃ





ಶ್ರೀ ಹನೂಮತೇ ನಮಃ

# ಕಿ ಷ್ಕಿಂ ಧಾ ಕಾಂ ಡ



## ೧ ನೆಯ ಅಧ್ಯಾಯ

## ಶ್ರೀರಾಮನು ಋಷ್ಯಮೂಕಪರ್ವತವನ್ನು ಸೇರಿದ್ದು

ಈ ರೀತಿಯಲ್ಲಿ ಲಕ್ಷ್ಮಣಸಮೇತನಾದ ಶ್ರೀರಾಮನು ಕಮಲಗಳಿಂದಲೂ ಕನ್ನೈದಿಲೆ ಪುಷ್ಪಗಳಿಂದಲೂ ಜಲಚರಪ್ರಾಣಿಗಳಿಂದಲೂ ಮನೋಹರವಾದ ಪಂಪಾಸರೋವರವನ್ನು ನೋಡಿ ವಿರಹಾಗ್ನಿಯಿಂದ ಕೆರಳಿದ ಮದನಬಾಣಗಳಿಗೊಳಗಾಗಿ ಲಕ್ಷ್ಮಣನನ್ನು ಕುರಿತು ಹೀಗೆಂದನು : "ಲಕ್ಷ್ಮಣ, ಈ ಪಂಪಾತೀರವು ವೈಡೂರ್ಯರತ್ನದಂತೆ ನಿರ್ಮಲವಾದ ಉದಕವುಳ್ಳದ್ದಾಗಿ ವಿಕಸಿತವಾದ ಕಮಲಗಳಿಂದಲೂ ಕನ್ನೈದಿಲೆ ಪುಷ್ಪಗಳಿಂದಲೂ ಪುಷ್ಪಿತವಾದ ವೃಕ್ಷಗಳಿಂದಲೂ ರಮಣೀಯವಾಗಿದೆ. ಸಮೀಪದಲ್ಲಿರುವ ಈ ವನವೂ ಮನೋಹರವಾಗಿದೆ. ಈ ವನದಲ್ಲಿರುವ ವೃಕ್ಷಗಳು ಅತ್ಯಂತ ಉನ್ನತವಾಗಿ ಅನೇಕ ಶಿಖರಗಳುಳ್ಳ ಪರ್ವತಗಳಂತೆ ಒಪ್ಪುತ್ತಿವೆ. ಇಂಥ ಕ್ಷೇತ್ರದಲ್ಲಿಯೂ ವಿರಹತಾಪದಿಂದ ಕಂಗೆಟ್ಟಿರುವ ನನ್ನನ್ನು ಮನೋವ್ಯಥೆಗಳು ಬಾಧಿಸುತ್ತಿವೆ. ಮೊದಲು ಭರತನಿಗೆ ಪಟ್ಟವಾಗಬೇಕೆಂದಿದ್ದ ಕೈಕೇಯೀದೇವಿಯಿಂದ ಹೊರಡಿಸಲ್ಪಟ್ಟು ರಾಜ್ಯಭ್ರಷ್ಟನಾಗಿ ಬಂದದ್ದೊಂದು ದುಃಖ. ಆಮೇಲೆ ಸೀತಾದೇವಿಯ ವಿಯೋಗವಾದದ್ದೊಂದು ದುಃಖ. ಹೀಗೆ ಅನೇಕ ದುಃಖಪರಂಪರೆಯಿಂದ ನೊಂದಿರುವ ನನಗೆ ಈ ಪಂಪಾತೀರವು ಹೆಚ್ಚು ವ್ಯಥೆಯನ್ನುಂಟುಮಾಡುತ್ತಿದೆ. ನಾನಾವರ್ಣದ ಪುಷ್ಪಗಳಿಂದ ಹರಹಲ್ಪಟ್ಟ ಎಳೆಗರಿಕೆಗಳುಳ್ಳ ಈ ಪಂಪಾತೀರವು ಚಿತ್ರವರ್ಣದ ರತ್ನಕಂಬಳಿಗಳಿಂದ ಅಲಂಕರಿಸಲ್ಪಟ್ಟಂತೆ ಒಪ್ಪುತ್ತಿದೆ. ಕುಸುಮಿತವಾದ ಎಳೆಯಬಳ್ಳಿಗಳಿಂದ ಸುತ್ತುವರಿಯಲ್ಪಟ್ಟು ಫಲಪುಷ್ಪಗಳಿಂದ ನಿಬಿಡವಾದ ಈ ವೃಕ್ಷಗಳು ಮನ್ಮಥೋದ್ರೇಕದಿಂದ ಪುಳಕಿತರಾದ ಸ್ತ್ರೀಯರು ತಮ್ಮ ಪ್ರಾಣಕಾಂತರನ್ನು ಆಲಿಂಗನಮಾಡುತ್ತಿರಲು, ಆ ಆಲಿಂಗನಸುಖಾತಿಶಯದಿಂದ ಪುಳಕಿತರಾದ ಪುರುಷರಂತೆ ಒಪ್ಪುತ್ತಿವೆ. ಲಕ್ಷ್ಮಣ, ಈ ವಸಂತಕಾಲವು ಶೈತ್ಯ ಸೌರಭ್ಯ ಮಾಂದ್ಯಗಳೆಂಬ ಗುಣತ್ರಯದಿಂದ ರಮಣೀಯ ವಾಗಿಯೂ ಮನ್ಮಥೋದ್ರೇಕವನ್ನುಂಟುಮಾಡುವ ಗಾಳಿಯುಳ್ಳದ್ದಾಗಿಯೂ ಇದೆ. ವೃಕ್ಷಗಳು

ಪರಿಮಳಭರಿತವಾದ ಪುಷ್ಪಸಮೂಹಗಳಿಂದ ಇಟ್ಟಣಿಸಿವೆ. ಎಲ್ಲಿ ನೋಡಿದರೂ ಮೇಘಗಳು ಮಳೆಗರೆಯುವಂತೆ ವನಮಧ್ಯದಲ್ಲಿರುವ ವೃಕ್ಷಗಳು ಪುಷ್ಪವೃಷ್ಟಿಯನ್ನು ಕರೆಯುತ್ತಿವೆ. ಋಷ್ಯಮೂಕಪರ್ವತದ ತಪ್ಪಲುಗಳಲ್ಲಿರುವ ಪುಷ್ಪಿತವಾದ ಮರಗಳು ವಾಯುವಿನಿಂದ ಅಲ್ಲಾಡುತ್ತ ತಮ್ಮ ಪುಷ್ಪಗಳಿಂದ ವನಭೂಮಿಯೆಲ್ಲವನ್ನೂ ಹರಡುತ್ತಿವೆ. ತಂಗಾಳಿಯು ಪುಷ್ಪಿತವಾದ ಕೊಂಬೆಗಳ ಅಗ್ರಭಾಗಗಳಲ್ಲಿರುವ ತುಂಬಿಹಿಂಡುಗಳ ಝೇಂಕಾರದಿಂದ ಗಾನಮಾಡುತ್ತ, ಆ ವೃಕ್ಷಗಳಿಂದ ಬೀಳುವ ಕುಸುಮಗಳೊಡನೆ ಕ್ರೀಡಿಸುತ್ತಿರುವಂತೆ ಒಪ್ಪುತ್ತಿದೆ. ಈ ಪರ್ವತದ ಗುಹೆಗಳಿಂದ ಹೊರಡುವ ಗಾಳಿಯು ಕೋಗಿಲೆಗಳ ರಮಣೀಯವಾದ ಧ್ವನಿಯಿಂದ ಗಾನಮಾಡುವ ಹಾಗೂ ಹಣ್ಣೆಲೆಗಳು ಬೀಳುವ ಚಟಚಟತ್ಕಾರಧ್ವನಿಯಿಂದ ತಾಳಹಾಕುವ ಹಾಗೂ ಚಲಿಸುತ್ತಿರುವ ಕುಸುಮಿತವಾದ ಲತೆಗಳಿಂದ ನರ್ತನ ಮಾಡುವ ಹಾಗೂ ಕಾಣುತ್ತಿದೆ. ವಾಯುವಿನಿಂದ ಚಲಿಸಲ್ಪಟ್ಟ ಪುಷ್ಪಿತವಾದ ಮರದ ಕೊಂಬೆಗಳು ಒಂದರೊಡನೊಂದು ಕೂಡಿಕೊಂಡು ಮನ್ಮಥನ ಪುಷ್ಪತೋರಣಗಳೋ ಎಂಬಂತೆ ಶೋಭಿಸುತ್ತಿವೆ. ತಂಗಾಳಿಯು ದಾರಿಯ ಬಳಲಿಕೆಯನ್ನು ಪರಿಹರಿಸುತ್ತಿದೆ. ಪುಷ್ಪಗಳ ಪರಿಮಳದಿಂದ ತುಂಬಿದ ಈ ವನದ ವೃಕ್ಷಗಳು ತುಂಬಿ ಹಿಂಡಿನ ಝೇಂಕಾರದಿಂದ ಗಾನಮಾಡುವಂತೆ ಪ್ರಕಾಶಿಸುತ್ತಿವೆ. ಋಷ್ಯಮೂಕಪರ್ವತವು ತನ್ನ ಮನೋಹರವಾದ ತಪ್ಪಲುಗಳಲ್ಲಿ ಪುಷ್ಪಿತವಾದ ಮರಗಳುಳ್ಳದ್ದಾಗಿ ರಮಣೀಯವಾಗಿ ರಂಜಿಸುತ್ತಿದೆ. ಈ ವನದಲ್ಲಿ ಬೆಟ್ಟದಾವರೆ ವೃಕ್ಷಗಳು ಪುಷ್ಪಗಳಿಂದ ಇಟ್ಟಣಿಸಿ ಪೀತಾಂಬರವನ್ನು ಹೊದ್ದಿರುವ ಪುರುಷರಂತೆ ವಿರಾಜಿಸುತ್ತಿವೆ. ಎಲೈ ಲಕ್ಷ್ಮಣ, ನಾನಾ ಪಕ್ಷಿಗಳ ಸ್ವರವುಳ್ಳ ಈ ವಸಂತಕಾಲವು ಸೀತಾದೇವಿಯ ವಿರಹಾಗ್ನಿಯಿಂದ ಕಂಗೆಟ್ಟಿರುವ ನನ್ನ ಮನಸ್ಸಿಗೆ ಅತ್ಯಂತ ವ್ಯಥೆಯನ್ನುಂಟುಮಾಡುತ್ತಿದೆ. ಹೀಗೆ ವಿರಹತಾಪದಿಂದ ನೊಂದಿರುವ ನನ್ನನ್ನು ಬಾಧಿಸಲೋಸುಗ ಮನ್ಮಥನನ್ನು ಕರೆಯುತ್ತಿವೆಯೋ ಎಂಬಂತೆ ಕೋಗಿಲೆಗಳು ಸ್ವರಗೈಯುತ್ತಿವೆ. ನಾವು ದಂಡಕಾರಣ್ಯದಲ್ಲಿದ್ದ ಸಮಯದಲ್ಲಿ ಸೀತಾದೇವಿಯು ಈ ಮಂಡಗೋಳಲೆಪಕ್ಷಿಯ ಸ್ವರವನ್ನು ಕೇಳಿದರೆ ನನ್ನನ್ನು ಕುರಿತು ' ಪ್ರಾಣಕಾಂತ, ಈ ಪಕ್ಷಿಯ ರಮಣೀಯವಾದ ಸ್ವರವನ್ನು ಕೇಳು ' ಎಂದು ನುಡಿದು ಸಂತೋಷಪಡುತ್ತಿದ್ದಳು. ಎಲೈ ಲಕ್ಷ್ಮಣ, ಅತ್ಯಂತಾನಂದದಿಂದ ಸ್ವರಗೈಯುವ ನಾನಾ ಪ್ರಕಾರವಾದ ಪಕ್ಷಿಗಳು ಪುಷ್ಪಿತವಾದ ಮರ ಗಿಡ ಬಳ್ಳಿಗಳಿಗೆ ಬಂದು ಎರಗುತ್ತಿವೆ. ಪುರುಷಪಕ್ಷಿಗಳು ಸ್ತ್ರೀಪಕ್ಷಿಗಳೊಡನೆ, ಗಂಡುದುಂಬಿಗಳು ಹೆಣ್ಣುದುಂಬಿಗಳೊಡನೆ, ಅತ್ಯಂತ ಸಂತೋಷದಿಂದ ಕೂಡಿಕೊಂಡು ಮಧುರವಾಗಿ ಸ್ವರಗೈಯುತ್ತಿವೆ. ಲಕ್ಷ್ಮಣ, ನಿಡಿದಾದ ಕೇಶಪಾಶಗಳಿಂದ ಸುಂದರಳಾಗಿದ್ದ ಮೃದುಭಾಷ್ಷಿಣಿಯಾದ ನನ್ನ ಸೀತೆ ಇಲ್ಲದಿದ್ದ ಮೇಲೆ ಈ ಜೀವಿತದಿಂದ ನನಗೆ ಆಗಬೇಕಾದದ್ದೇನು ? ಈ ವಸಂತಕಾಲವು ಸೀತಾದೇವಿಯು ನನ್ನ ಸಮೀಪದಲ್ಲಿಲ್ಲದಿರುವಾಗ ಬರಬಾರದಿತ್ತು. ಸೀತಾದೇವಿಯ ವಿಯೋಗದಿಂದುಂಟಾದ ವಿರಹಾಗ್ನಿಯು ಮದನಬಾಣಗಳಿಂದ ಕೆರಳಿ ವಸಂತಮಾರುತದಿಂದ ಅಧಿಕಜ್ವಾಲೆಯುಳ್ಳದ್ದಾಗಿ ನನ್ನನ್ನು ದಹಿಸುತ್ತಿದೆ. ಜಾನಕಿಯನ್ನು ಕಾಣದೆ ಪುಷ್ಪಿತವಾದ ಈ ವೃಕ್ಷಗಳನ್ನು ನೋಡುವ ನನ್ನ ಶರೀರದಲ್ಲಿ ಹುಟ್ಟಿದ ಮದನಾಗ್ನಿಯು ನನ್ನನ್ನು ಬಾಧಿಸುತ್ತ ನನ್ನ ಮನಸ್ಸನ್ನು ಆ ದೇವಿಯ ಸಮೀಪಕ್ಕೆ ಒಯ್ಯುತ್ತಿದೆ. ಸೀತಾದೇವಿಯು ನನ್ನ ದೃಷ್ಟಿಗೆ ಗೋಚರಿಸದೆಯೇ ವಿರಹಶೋಕವನ್ನುಂಟು ಮಾಡುತ್ತಿದ್ದಾಳೆ. ವಸಂತಕಾಲವು ಈಗ ಬಂದದ್ದರಿಂದ ನನ್ನ ವಿರಹಾಗ್ನಿಯು ಪ್ರಜ್ವಲಿಸುತ್ತಿದೆ. ಈ ವನದಲ್ಲಿರುವ ಗಂಡು ನವಿಲುಗಳು ತಮ್ಮ ಗರಿಗಳನ್ನು ಕೆದರಿಕೊಂಡು ಹೆಣ್ಣು ನವಿಲುಗಳೊಡನೆ ಕೂಡಿವೆ. ಇವು ಮೊದಲೇ ಮದನಬಾಣಗಳಿಂದ ಕಂಗೆಟ್ಟಿರುವ ನನಗೆ ಮತ್ತಷ್ಟು ಮದನ ತಾಪವನ್ನುಂಟುಮಾಡುತ್ತಿವೆ. ಲಕ್ಷ್ಮಣ, ಈ ಪರ್ವತದ ತಪ್ಪಲಲ್ಲಿ ಗಂಡು ನವಿಲುಗಳು ಗರಿಗಳನ್ನು

ಕೆದರಿಕೊಂಡು ನರ್ತನವನ್ನು ಮಾಡುತ್ತಿರಲು ಅವನ್ನು ಕಂಡು ಹೆಣ್ಣುನವಿಲುಗಳೂ ನರ್ತನವನ್ನು ಮಾಡುತ್ತಿವೆ. ಲಕ್ಷ್ಮಣ, ಸೀತಾರಹಿತನಾದ ನನಗೆ ಈ ವಸಂತಕಾಲವು ಕಳೆಯುವುದಕ್ಕೆ ಅಸಾಧ್ಯವಾಗಿದೆ. ಈ ವಸಂತಕಾಲದಲ್ಲಿ ವನದಲ್ಲಿರುವ ವೃಕ್ಷಗಳ ವಿಕಸಿತವಾದ ಪುಷ್ಪಗಳು ನಿಷ್ಫಲವಾಗುತ್ತಿವೆ. ಮನೋಹರವಾದ ಈ ಪುಷ್ಪಗಳು ಭೋಗಿಗಳಾದ ಸೊಗಸುಗಾರರಿಗೆ ಉಪಯೋಗವಾಗದೆ ತುಂಬಿಗಳ ಝೇಂಕಾರದಿಂದ ಕೂಡಿ ರೋದನಮಾಡಿಕೊಂಡು ಕೆಳಗೆ ಬೀಳುವಂತೆ ಉದುರುತ್ತಿವೆ. ಈ ವಸಂತಕಾಲವು ಸೀತಾದೇವಿಯಿರುವ ಕಡೆಯಲ್ಲಿಯೂ ಪ್ರಾಪ್ತವಾಗಿರುವ ಪಕ್ಷದಲ್ಲಿ ನನಗೆ ಶೋಕಾಗ್ನಿಯನ್ನುಂಟುಮಾಡುತ್ತಿರುವಂತೆಯೇ ಆ ದೇವಿಗೂ ವಿರಹಶೋಕವನ್ನುಂಟು ಮಾಡುತ್ತಿರುವುದು. ವಸಂತಕಾಲವು ಸೀತಾದೇವಿಯಿರುವ ಸ್ಥಳದಲ್ಲುಂಟಾದರೆ ಕಮಲದಳಾಯ ತಾಕ್ಷಿಯಾದ ಆ ದೇವಿಯು ನನ್ನನ್ನು ಬಿಟ್ಟು ಕಾಲವನ್ನು ಕಳೆಯಲಾರಳು. ಯುವತಿಯೂ ಕಮಲಪತ್ರಾಕ್ಷಿಯೂ ಮೃದುಭಾಷಿಣಿಯೂ ಆದ ನನ್ನ ಸೀತಾದೇವಿಯು ನನ್ನನ್ನು ಬಿಟ್ಟು ಈ ವಸಂತಕಾಲವನ್ನು ಕಳೆದು ಜೀವಿಸಲಾರಳು. ನನ್ನ ಮನಸ್ಸಿನಲ್ಲಿ ಸೀತಾದೇವಿಯ ವೃತ್ತಾಂತವನ್ನು ವಿಚಾರಿಸಿದರೆ ನನ್ನ ವಿರಹಾಗ್ನಿಯಿಂದ ಕಂಗೆಟ್ಟ ಆ ದೇವಿಯು ಈ ವಸಂತಕಾಲದಲ್ಲಿ ಜೀವವಿಡಿದು ನಿಲ್ಲಲಾರಳೆಂದು ತೋರುತ್ತದೆ. ಸೀತಾದೇವಿಯ ಅಂತರಂಗವು ನನ್ನಲ್ಲಿರುವುದು. ನನ್ನ ಅಂತರಂಗವು ಆ ದೇವಿಯಲ್ಲೇ ಆಸಕ್ತವಾಗಿರುವುದು. ಪುಷ್ಪಗಳ ಪರಿಮಳದಿಂದೊಡಗೂಡಿ ಶೀತಳವಾಗಿ ಮೃದು ಗತಿಯಾಗಿರುವ ವಾಯುವು ನನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನೇ ಧ್ಯಾನಮಾಡುತ್ತಿರುವ ನನ್ನ ಶರೀರದ ಮೇಲೆ ಸೋಕಿ ವಜ್ರಾಯುಧದಂತೆ ವೇದನೆಯನ್ನುಂಟುಮಾಡುತ್ತಿದೆ. ಮೊದಲು ಸೀತಾಸಮೇತನಾದ ನನಗೆ ಸುಖವನ್ನುಂಟುಮಾಡುತ್ತಿದ್ದ ಗಾಳಿಯು ಈಗ ಆ ದೇವಿಯ ವಿರಹ ಶೋಕದಿಂದ ನೊಂದಿರುವ ನನ್ನನ್ನು ಬಾಧೆಪಡಿಸುತ್ತಿದೆ. ಈ ಮರದ ಕೊಂಬೆಯಲ್ಲಿ ಕುಳಿತುಕೊಂಡು ತನ್ನ ಹೆಣ್ಣುಪಕ್ಷಿಯನ್ನು ಕಾಣದೆ ಈ ಹಕ್ಕಿಯು ಹಂಬಲಿಸುತ್ತಿದೆ. ಈ ಪಂಪಾತೀರ್ಥವು ಉದಕ ಪಾನಾರ್ಥವಾಗಿ ಬರುತ್ತಿರುವ ಕಾಡಾನೆಗಳಿಂದಲೂ ಇತರ ಮೃಗಗಳಿಂದಲೂ ಅತಿರಮಣೀಯವಾಗಿ ಒಪ್ಪುತ್ತಿದೆ. ಲಕ್ಷ್ಮಣ, ವಾಯುವಿನಿಂದ ಎಬ್ಬಿಸಲ್ಪಟ್ಟ ತೆರೆಗಳಿಂದ ಚಲಿಸುತ್ತಿರುವ ಕಮಲಗಳು ಈ ಪಂಪಾತೀರ್ಥದ ಮನೋಹರತೆಯನ್ನು ಕಂಡು ತಲೆದೂಗಿ ನೋಡುತ್ತ ಆಶ್ಚರ್ಯಪಡುತ್ತಿವೆಯೋ ಎಂಬಂತೆ ತೋರುತ್ತಿದೆ. ಮೊದಲು ಸೀತಾದೇವಿಯ ಸಮೇತನಾಗಿದ್ದಾಗ ನನಗೆ ಯಾವ ವಸ್ತುಗಳು ರಮಣೀಯವಾಗಿದ್ದವೋ ಆ ವಸ್ತುಗಳು ಸೀತಾದೇವಿಯ ವಿರಹದಿಂದ ಕಂಗೆಟ್ಟಿರುವ ನನಗೆ ಅಸಹ್ಯವಾಗಿ ತೋರುತ್ತಿವೆ. ಲಕ್ಷ್ಮಣ, ವಿಕಸಿತವಾದ ಕಮಲಗಳನ್ನು ನೋಡಿದರೆ ಸೀತಾದೇವಿಯ ಕಣ್ಣುಗಳು ಸ್ಮರಣೆಗೆ ಬರುತ್ತಿವೆ. ಕಮಲಗಳ ಮೇಲೆ ಬೀಸುವ ತಂಗಾಳಿಯು ಸೀತಾದೇವಿಯ ಉಚ್ಛ್ವಾಸಮಾರುತದಂತೆ ಮನೋಹರವಾಗಿದೆ. ಶ್ರೀಗಂಧ ಅಶೋಕ ಮೊದಲಾದ ವೃಕ್ಷಗಳು ಪುಷ್ಪಿತವಾದ ಲತೆಗಳಿಂದ ಸುತ್ತುವರಿಯಲ್ಪಟ್ಟಿರುವುದನ್ನು ನೋಡು. ಎಲ್ಲಿ ನೋಡಿದರೂ ತಾರುಣ್ಯಮದದಿಂದ ಗರ್ವಿತರಾದ ರಮಣಿಯರಂತೆ ಪುಷ್ಪಿತವಾದ ಲತೆಗಳು ಒಪ್ಪುತ್ತಿವೆ, ನೋಡು" ಎಂದು ಹಂಬಲಿಸಿದನು.

ಹೀಗೆ ಸೀತಾನ್ವೇಷಣೆಗೋಸ್ಕರ ಅಲೆಯುತ್ತ ಪುನಃ ಲಕ್ಷ್ಮಣನಿಗೆ ಈ ರೀತಿಯಲ್ಲಿ ಶ್ರೀರಾಮನು ಹೇಳಿದನು: "ಲಕ್ಷ್ಮಣ, ನೋಡು. ಈ ವನದಲ್ಲಿ ಕೆಲವು ವೃಕ್ಷಗಳು ಪುಷ್ಪಗಳಿಂದ ಪರಿಪೂರ್ಣವಾಗಿಯೂ ಪುಷ್ಪರಸಭರಿತವಾಗಿಯೂ ಇವೆ. ಕೆಲವು ವೃಕ್ಷಗಳು ಮೊಗ್ಗುಗಳಿಂದ ಪರಿಪೂರ್ಣವಾಗಿ ಶ್ಯಾಮಲವರ್ಣವಾಗಿ ಒಪ್ಪುತ್ತಿವೆ. ಈ ಪರ್ವತದ ತಪ್ಪಲುಗಳ ಭೂಮಿಯು ವೃಕ್ಷಗಳಿಂದ ಉದುರಿದ ಪುಷ್ಪಗಳಿಂದ ಇಟ್ಟಣಿಸಿ ಮನ್ಮಥನ ಪುಷ್ಪಮಯವಾದ ಸುಪ್ಪತ್ತಿಗೆಯೋ

ಎಂಬಂತೆ ಕಾಣುತ್ತಿದೆ. ವೃಕ್ಷಗಳಿಂದ ಉದುರಿದ ನಾನಾವರ್ಣದ ಪುಷ್ಪಗಳಿಂದ ಹರಹಲ್ಪಟ್ಟ ಈ ಭೂಮಿಯು ಚಿತ್ರವಾದ ರತ್ನಗಂಬಳಿಯಿಂದ ಕೂಡಿದಂತೆ ಒಪ್ಪುತ್ತಿದೆ. ಈ ವಸಂತಕಾಲದಲ್ಲಿ ಸಮಸ್ತ ವೃಕ್ಷಗಳೂ ಪುಷ್ಪಿತವಾಗಿವೆ. ಈ ಪುಷ್ಪಗಳ ಸೌಭಾಗ್ಯವನ್ನೇನೆಂದು ಹೇಳಲಿ! ಪುಷ್ಪಿತವಾದ ಈ ವೃಕ್ಷಗಳು ತಮ್ಮ ಅಗ್ರಭಾಗದಲ್ಲಿ ಮಂದಮಾರುತದಿಂದ ಕಂಪಿಸಲ್ಪಟ್ಟ ತಳಿರುಗಳೆಂಬ ಕೈಗಳಿಂದ ತಾವು ಮನ್ಮಥನಿಗೆ ಸಹಾಯವಾಗಬೇಕೆಂದು ಸನ್ನೆಮಾಡುತ್ತ ತುಂಬಿಗಳ ಧ್ವನಿಯಿಂದ ಕೂಗಿ ಕರೆಯುತ್ತಿವೆಯೋ ಎಂಬಂತೆ ಶೋಭಿಸುತ್ತಿವೆ. ಚಕ್ರವಾಕಪಕ್ಷಿಗಳು ಹೆಣ್ಣುಪಕ್ಷಿಗಳೊಡನೆ ನೀರೊಳಗೆ ಮುಳುಗುತ್ತ ಏಳುತ್ತ ಎಷ್ಟು ಆನಂದದಲ್ಲಿವೆ! ಇಂಥ ವಸಂತಕಾಲದಲ್ಲಿ ನಾನು ಸೀತಾದೇವಿಯನ್ನು ಕಂಡರೆ ಈ ಪಂಪಾತೀರದಲ್ಲಿ ಅತ್ಯಂತ ಸಂತೋಷಯುಕ್ತನಾಗಿರುವೆನು. ನಾನು ದೇವಲೋಕಾಧಿಪತ್ಯ ವನ್ನಾದರೂ ರಾಜ್ಯಾಧಿಪತ್ಯವನ್ನಾದರೂ ಬಯಸೆನು. ನಾನು ಸೀತಾದೇವಿಯ ಸಮೇತನಾಗಿ ಪಂಪಾತೀರದ ಎಳೆಯ ಹುಲ್ಲಿನಮೇಲೆ ವಿಹರಿಸುತ್ತ ತೃಪ್ತನಾಗಿರುವೆನು. ಈ ವಸಂತಕಾಲದಲ್ಲಿ ಈ ಪಂಪಾತೀರದಲ್ಲಿರುವ ಕುಸುಮಿತವಾದ ವನದಲ್ಲಿ ಸೀತಾದೇವಿಯನ್ನು ಕಂಡೆನಾದರೆ, ಇವೆಲ್ಲವೂ ನನಗೆ ಸುಖಸಾಧನವಾಗುವುವು. ಲಕ್ಷ್ಮಣ, ಜಾನಕಿಯು ನನ್ನ ಸಮೀಪದಲ್ಲಿ ತಂಗಾಳಿಯ ಸುಖವನ್ನನುಭವಿಸಿದ ಳಾದರೆ ನನ್ನ ಜನ್ಮವು ಸಫಲವಾಗುವುದು. ಕಮಲದ ಪರಿಮಳದಿಂದ ಕೂಡಿದ್ದಾಗಿ ಸಮಸ್ತ ದುಃಖವನ್ನೂ ಪರಿಹರಿಸುವಂಥ ಈ ತಂಗಾಳಿಯನ್ನು ಧನ್ಯರಾದವರು ಸ್ತ್ರೀಸಮೇತರಾಗಿ ಸೇವಿಸುವರು. ಜಾನಕಿಯನ್ನು ಬಿಟ್ಟು ಅಯೋಧ್ಯಾಪಟ್ಟಣಕ್ಕೆ ಹೋದರೆ ನನ್ನ ಕುಶಲವನ್ನು ವಿಚಾರಿಸಲು ಬರುವ ಜನಕರಾಯನು ಸೀತಾದೇವಿಯೆಲ್ಲೆಂದು ಸಭೆಯಲ್ಲಿ ಕೇಳಿದರೆ ಆತನಿಗೆ ಏನೆಂದು ಉತ್ತರವನ್ನು ಕೊಡಲಿ? ರಾಜ್ಯಭ್ರಷ್ಟನಾದ ನನ್ನನ್ನು ಹಿಂಬಾಲಿಸಿ ಬಂದ ಸೀತಾದೇವಿಯ ನಿಷ್ಕಳಂಕವಾದ ಮುಖವನ್ನು ಕಾಣದೆ ನನ್ನ ಮನಸ್ಸಿಗೆ ಬಹು ವ್ಯಥೆಯಾಗುತ್ತಿದೆ. ಮುಗುಳುನಗೆ ಯೊಡಗೂಡಿದವಳಾದ ಸೀತಾದೇವಿಯ ಅಭಿಪ್ರಾಯಗರ್ಭಿತವಾದ ಮೃದುಮಧುರ ವಾಕ್ಯವನ್ನು ಇನ್ನೆಂದಿಗೆ ಕೇಳುವೆನು? ನಾನು ಸೀತಾದೇವಿಯನ್ನು ಬಿಟ್ಟು ಅಯೋಧ್ಯಾಪಟ್ಟಣಕ್ಕೆ ಹೋದರೆ ನನ್ನ ತಾಯಿಯಾದ ಕೌಸಲ್ಯಾದೇವಿಯು ತನ್ನ ಸೊಸೆಯೆಲ್ಲಿದ್ದಾಳೆಂದು ಕೇಳಿದರೆ ಏನು ಹೇಳಲಿ? ಲಕ್ಷ್ಮಣ, ನೀನು ಭರತನ ಸಮೀಪಕ್ಕೆ ಹೋಗು. ನಾನು ಸೀತಾದೇವಿಯನ್ನಳಿದು ಜೀವಿಸಲಾರೆನು" ಎಂದು ಅನಾಥನಂತೆ ಹಂಬಲಿಸುತ್ತಿದ್ದನು.

ಆಗ ಶ್ರೀರಾಮನನ್ನು ಕುರಿತು ಲಕ್ಷ್ಮಣನು ಸಮಾಧಾನ ಹೇಳಿದನು: "ಪುರುಷೋತ್ತಮ, ದುಃಖವನ್ನು ಸಹಿಸಿಕೊ; ನಿನ್ನಂಥ ಮಹಾತ್ಮರು ಹೀಗೆ ಹಂಬಲಿಸುವುದು ಯೋಗ್ಯವಲ್ಲ. ಸೀತಾದೇವಿಯ ಅಗಲಿಕೆಯಿಂದುಂಟಾದ ದುಃಖವನ್ನು ಬಿಡು. ಅತ್ಯಂತ ಸ್ನೇಹಪಾತ್ರರಾದವರ ವಿಯೋಗಕಾಲದಲ್ಲಿ ಉಚಿತವಾದ ಕಾರ್ಯವನ್ನು ಮಾಡದಿದ್ದರೆ ದುಃಖವು ದೇಹವನ್ನು ಸುಡುವುದು. ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಎಲ್ಲಿಗೆ ಹೋದಾನು? ಪಾತಾಳಲೋಕವನ್ನು ಹೊಕ್ಕರೂ ಮತ್ತಾವ ಲೋಕವನ್ನೇ ಹೊಕ್ಕರೂ ಆತನು ಬದುಕಲಾರನು. ನಾವು ಆತನಿರುವ ಸ್ಥಳವನ್ನು ಮೊದಲು ತಿಳಿದುಕೊಳ್ಳೋಣ. ಆಮೇಲೆ ಅವನು ನಮ್ಮೊಡನೆ ಸಂಧಿಯನ್ನು ಮಾಡಿ ಕೊಂಡು ಸೀತಾದೇವಿಯನ್ನು ಪ್ರತ್ಯರ್ಪಿಸಿದರೆ ಬದುಕಿಕೊಂಡಾನು. ಇಲ್ಲದಿದ್ದರೆ ಯಮಲೋಕವ ನ್ನೈದುವನೆಂದು ನಿಶ್ಚಯಿಸು. ರಾವಣನು ಸೀತಾದೇವಿಯ ಸಹಿತವಾಗಿ ಭೂಗರ್ಭವನ್ನು ಹೊಕ್ಕರೂ ಬದುಕಲಾರನು. ನೀನು ಈ ಕಾರ್ಪಣ್ಯಬುದ್ಧಿಯನ್ನು ಬಿಟ್ಟು ಸ್ವಸ್ಥಚಿತ್ತನಾಗು. ಕ್ಷತ್ರಿಯನು ಉತ್ಸಾಹಶಕ್ತಿಯನ್ನೇ ದೃಢವಾಗಿ ಆಶ್ರಯಿಸಬೇಕು. ಉತ್ಸಾಹಶಕ್ತಿಗಿಂತಲೂ ಅಧಿಕವಾದ ಶಕ್ತಿಯಿಲ್ಲ. ಉತ್ಸಾಹಯುಕ್ತನಾದವನಿಗೆ ಲೋಕದಲ್ಲಿ ಅಸಾಧ್ಯವಾದ ವಸ್ತುವು ಒಂದೂ ಇಲ್ಲ. ಉತ್ಸಾಹಶಕ್ತಿ

ಯುಳ್ಳ ಪುರುಷರು ಯಾವ ಸಮಯದಲ್ಲಿಯೂ ದುಃಖವನ್ನೈದರು. ಆದಕಾರಣ ಉತ್ಸಾಹಶಕ್ತಿಯನ್ನಾಶ್ರಯಿಸಿ ಸೀತಾದೇವಿಯನ್ನು ಅರಸಿ ಕಾರ್ಯವನ್ನು ಸಾಧಿಸೋಣ. ನೀನು ಈ ವಿರಹಶೋಕವನ್ನು ಸಾಕುಮಾಡಿ ನಿನ್ನ ಕಾಮುಕತ್ವವನ್ನು ಬಿಡು. ನೀನು ಮಹಾತ್ಮನಾದ ಪರಮಪುರುಷನೆಂದು ಅರಿಯೆಯಾ ? " ಎಂದು ಲಕ್ಷ್ಮಣನು ಬೋಧಿಸಿದನು.

ಅದನ್ನು ಕೇಳಿ ಅತ್ಯಂತಪರಾಕ್ರಮಿಯಾದ ಶ್ರೀರಾಮನು ಶೋಕಮೋಹಗಳನ್ನು ಬಿಟ್ಟು ಧೈರ್ಯಗುಣವನ್ನಾಶ್ರಯಿಸಿದನು. ಪಂಪಾಸರೋವರವನ್ನು ದಾಟಿ ಪರ್ವತಜರಿಗಳನ್ನೂ ವನಗಳನ್ನೂ ನೋಡುತ್ತ ಚಿಂತಾಕ್ರಾಂತನಾಗಿ ಋಷ್ಯಮೂಕಪರ್ವತದಲ್ಲಿದ್ದ ಸುಗ್ರೀವನನ್ನರಸುತ್ತ ಪ್ರಯಾಣಮಾಡಿದನು.

ಆಗ ಸಮಸ್ತಕಪಿಗಳಿಗೂ ಅಧಿಪತಿಯಾಗಿ ಬಲವಂತನಾದ ಸುಗ್ರೀವನು ಋಷ್ಯಮೂಕಪರ್ವತದ ಸಮೀಪದಲ್ಲಿ ಸಂಚರಿಸುತ್ತಿದ್ದ ರಾಮಲಕ್ಷ್ಮಣರನ್ನು ಕಂಡನು. ಅವರು ವಾಲಿಯ ಪಕ್ಷದವರೆಂದು ಅವನು ಅತ್ಯಂತ ಭಯಪಟ್ಟು ವ್ಯಾಕುಲಚಿತ್ತನಾಗಿ ಚಿಂತಾಭಾರದಲ್ಲಿ ಮುಳುಗಿಹೋದನು. ಆಗ ಅವನ ಪರಿವಾರದಲ್ಲಿದ್ದ ಕಪಿಗಳೂ ಅದನ್ನು ಕಂಡು ತಾವೂ ಭಯಪಟ್ಟು ಆ ಸ್ಥಳವನ್ನು ಬಿಟ್ಟು ವೇಗದಿಂದ ಮತ್ತೊಂದು ಸ್ಥಳವನ್ನೈದಲಾರಂಭಿಸಿದವು.



## ೨ನೆಯ ಅಧ್ಯಾಯ

## ಹನುಮಂತನು ಶ್ರೀರಾಮನ ಬಳಿಗೆ ಹೋದದ್ದು

ಈ ಪ್ರಕಾರ ದಿವ್ಯಾಯುಧಪಾಣಿಗಳಾದ ರಾಮಲಕ್ಷ್ಮಣರು ಋಷ್ಯಮೂಕಪರ್ವತದ ಸಮೀಪದಲ್ಲಿ ಸಂಚರಿಸುತ್ತಿರಲು, ಸುಗ್ರೀವನು ಅವರನ್ನು ಕಂಡು ಮನಸ್ಸಿನಲ್ಲಿ ಅವರನ್ನು ವಾಲಿಯು ಕಳುಹಿಸಿರಬಹುದೆಂದು ಭಯಪಟ್ಟುಕೊಂಡನು. ಯಾವ ಸ್ಥಳದಲ್ಲಿಯೂ ಸ್ಥಿರವಾಗಿ ನಿಲ್ಲದೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುತ್ತ ಆ ಸ್ಥಳದಲ್ಲಿರುವುದು ಕ್ಷೇಮವೋ ಅಲ್ಲವೋ ಎಂದು ಮನಸ್ಸಿನಲ್ಲಿ ಯೋಚಿಸುತ್ತ ತನ್ನ ಸಮೀಪದಲ್ಲಿದ್ದ ಕಪಿಗಳನ್ನು ಕರೆದು ಮಂತ್ರಾಲೋಚನೆಯನ್ನು ಮಾಡಲಾರಂಭಿಸಿದನು. ಅವನು ಪ್ರಧಾನಿಗಳನ್ನು ಕುರಿತು "ಎಲೈ ಮಂತ್ರಿಗಳಿರಾ, ಈ ಭಟರನ್ನು ವಾಲಿಯು ಕಳುಹಿಸಿರಬೇಕು, ಸಂಶಯವಿಲ್ಲ. ಅವರು ಆಯುಧಪಾಣಿಗಳಾಗಿದ್ದರೂ ನಾರುಬಟ್ಟೆಗಳನ್ನುಟ್ಟು ಕಪಟದಿಂದ ಈ ವನದಲ್ಲಿ ದಿಕ್ಕುದಿಕ್ಕುಗಳನ್ನು ನೋಡಿಕೊಂಡು ಬರುತ್ತಿದ್ದಾರೆ" ಎಂದು ಹೇಳಿದನು.

ಆ ಮಾತನ್ನು ಕೇಳಿ ಆ ಪ್ರಧಾನರು ಬಿಲ್ಲುಬಾಣಗಳನ್ನು ಧರಿಸಿಕೊಂಡಿದ್ದ ರಾಮಲಕ್ಷ್ಮಣರನ್ನು ನೋಡಿ ಆ ಪರ್ವತಶಿಖರದಿಂದ ಮತ್ತೊಂದು ಶಿಖರಕ್ಕೆ ಹೋದರು. ಈ ವೃತ್ತಾಂತವನ್ನರಿತು ಸುಗ್ರೀವನ ಪರಿವಾರದಲ್ಲಿದ್ದ ಕಪಿಗಳೆಲ್ಲರೂ ಬಂದು, ವಾಲಿಯ ಕಪಟಕೃತ್ಯದಿಂದ ಕಂಗೆಟ್ಟಿದ್ದ ಸುಗ್ರೀವನ ಸಮೀಪದಲ್ಲಿ ಕೈಮುಗಿದುಕೊಂಡು ನಿಂತರು. ಆ ಸಮಯದಲ್ಲಿ ನುಡಿಜಾಣ್ಮೆಯುಳ್ಳ ಹನುಮಂತನು ಕೈಮುಗಿದುಕೊಂಡು ಸುಗ್ರೀವನನ್ನು ಕುರಿತು "ಎಲೈ ಸ್ವಾಮಿ, ನೀನು ಕಂಗೆಡಬೇಡ. ಹೇಗಾದರೂ ನಾವು ಈ ಪರ್ವತವನ್ನು ಸೇರಿದೆವು. ಇಲ್ಲಿ ವಾಲಿಯಿಂದ ಭಯವಿಲ್ಲ. ಯಾವನೊಬ್ಬನ ಭಯದಿಂದ ಕಂಗೆಟ್ಟು ನೀನಿಲ್ಲಿಗೆ ಬಂದೆಯೋ ಅಂಥ ವಾಲಿಯು ಇಲ್ಲಿಗೆ ಬರಲಾರನು. ನೀನು ಸುಮ್ಮನೆ ಬೆದರಬೇಡ. ನಿನ್ನ ಬುದ್ಧಿಯು ಚಂಚಲವಾದ ಕಾರಣ ಮನಸ್ಸಿನಲ್ಲಿ ಧೈರ್ಯವನ್ನು

ತಂದುಕೊಳ್ಳದೆ ಇದ್ದೀಯೆ. ನೀನು ಬುದ್ಧಿವಂತನಾಗಿ ಈ ಭಟರ ಇಂಗಿತಗಳನ್ನು ತಿಳಿದು ಮಾಡಬೇಕಾದ ಕಾರ್ಯವನ್ನು ವಿಚಾರಿಸು. ಬುದ್ಧಿಹೀನನಾದ ಅರಸನು ಪ್ರಜೆಗಳನ್ನು ಪರಿಪಾಲಿಸಲಾರನು " ಎಂದು ಹೇಳಿದನು.

ಆ ವಾಕ್ಯವನ್ನು ಕೇಳಿ ಸುಗ್ರೀವನು ಹನುಮಂತನನ್ನು ಕುರಿತು ಹೇಳಿದನು : " ಎಲೈ ಹನುಮಂತ, ಈ ಭಟರನ್ನು ನೋಡು. ಇವರು ನಿಡಿದಾದ ತೋಳುಗಳುಳ್ಳವರೂ ವಿಶಾಲವಾದ ಕಣ್ಣುಗಳುಳ್ಳವರೂ ಆಗಿ ಬಿಲ್ಲು ಬಾಣ ಖಡ್ಗಗಳನ್ನು ಧರಿಸಿ ಸಾಕ್ಷಾತ್ ದೇವೋತ್ತಮರಂತೆ ಒಪ್ಪುತ್ತಿದ್ದಾರೆ. ಇವರನ್ನು ಕಂಡರೆ ಲೋಕದಲ್ಲಿ ಯಾರಿಗೆ ತಾನೆ ಭಯಹುಟ್ಟದು ? ನನ್ನ ಮನಸ್ಸಿಗೆ ವಾಲಿಯು ಏನೋ ವಿಪತ್ತನ್ನು ತರಲು ಇವರನ್ನು ಕಳುಹಿಸಿರಬಹುದೆಂದು ತೋರುತ್ತದೆ. ಲೋಕದಲ್ಲಿ ಅರಸರು ಸ್ವಕಾರ್ಯಾರ್ಥವಾಗಿ ಅನೇಕಜನರೊಡನೆ ಸ್ನೇಹಮಾಡಿಕೊಳ್ಳುವರು. ಆದಕಾರಣ ಅವರನ್ನು ನಂಬಬಾರದು. ಲೋಕದಲ್ಲಿ ಅರಸರು ಬೇಹುಗಾರರಿಂದಲೇ ಶತ್ರುಗಳನ್ನು ಜಯಿಸುವರು. ಆ ಬೇಹುಗಾರರು ಉಪಾಯದಿಂದ ನಂಬಿಸಿ ಸಮಯಬಂದಾಗ ಪೆಟ್ಟುಹಾಕುವರು. ಅವರನ್ನು ಯಾವ ಸಮಯದಲ್ಲಿಯೂ ನಂಬಬಾರದು. ಆದಕಾರಣ ನೀನು ಒಬ್ಬ ಮನುಷ್ಯನ ರೂಪದಿಂದ ಅವರ ಸಮೀಪಕ್ಕೆ ಹೋಗು. ಅವರನ್ನು ಸರಿಯಾಗಿ ನೋಡಿ ಅವರೊಡನೆ ಸಂಭಾಷಣೆ ಮಾಡಿ ಅವರ ವಚನಪ್ರಮಾಣಗಳಿಂದ ಅವರ ಇಂಗಿತಭಾವಗಳನ್ನು ತಿಳಿದುಕೊ. ಅವರಿಗೆ ನಿನ್ನ ಮೇಲೆ ವಿಶ್ವಾಸಹುಟ್ಟುವ ರೀತಿಯಲ್ಲಿ ವಿನಯೋಕ್ತಿಗಳಿಂದ ಮೃದುನುಡಿಗಳನ್ನು ನುಡಿದು, ಬಿಲ್ಲುಬಾಣಗಳನ್ನು ಧರಿಸಿಕೊಂಡು ಶುದ್ಧಾತ್ಮರೂ ಮಹಾತ್ಮರೂ ಆದ ಆ ಭಟರು ಇಲ್ಲಿಗೆ ಬಂದ ಕಾರಣವನ್ನು ತಿಳಿದುಕೊ. ಅವರ ಮಾತುಗಳನ್ನು ಮನಸ್ಸಿನಲ್ಲಿ ಗ್ರಹಿಸಿ ಅವರ ಸೌಮ್ಯಸ್ವಭಾವ ದುಷ್ಟಸ್ವಭಾವಗಳನ್ನು ತಿಳಿದುಕೊಂಡು ಬಾ " ಎಂದು ಹೇಳಿದನು.

ಆ ಬಳಿಕ ವಾಯುಪುತ್ರನಾದ ಹನುಮಂತನು ಸುಗ್ರೀವನ ವಾಕ್ಯವನ್ನು ಮಹಾಪ್ರಸಾದವೆಂದು ಅಂಗೀಕರಿಸಿ ಮಹಾಬಲಪರಾಕ್ರಮಿಗಳಾದ ರಾಮಲಕ್ಷ್ಮಣರ ಸಮೀಪಕ್ಕೆ ಹೋದನು.



### ೩ ನೆಯ ಅಧ್ಯಾಯ

## ಲಕ್ಷ್ಮಣನು ಹನುಮಂತನಿಗೆ ತಮ್ಮ ವೃತ್ತಾಂತವನ್ನು ಹೇಳಿದ್ದು

ಈ ರೀತಿಯಲ್ಲಿ ಮಹಾತ್ಮನಾದ ಸುಗ್ರೀವನ ಮಾತನ್ನು ಕೇಳಿ ಹನುಮಂತನು ಋಷ್ಯಮೂಕ ಪರ್ವತದಿಂದ ರಾಮಲಕ್ಷ್ಮಣರಿದ್ದ ಸ್ಥಳಕ್ಕೆ ನೆಗೆದನು. ಅವನು ಕಪಿರೂಪವನ್ನು ಬಿಟ್ಟು ಸಂನ್ಯಾಸಿವೇಷವನ್ನು ಧರಿಸಿಕೊಂಡು ರಾಮಲಕ್ಷ್ಮಣರನ್ನು ಕಂಡು ನಮಸ್ಕರಿಸಿ ವಿನಯದಿಂದ ಅವರನ್ನು ಕುರಿತು ಹೀಗೆಂದನು : " ಎಲೈ ವೀರರೆ, ನಿಮ್ಮ ರೂಪವನ್ನು ನೋಡಿದರೆ ವ್ರತನಿಯಮವುಳ್ಳವರಾದ ರಾಜರ್ಷಿಗಳಂತೆ ಒಪ್ಪುತ್ತಿದ್ದೀರಿ. ನೀವು ಅತ್ಯಂತ ತನುಕಾಂತಿಯುಳ್ಳವರು. ಈ ದೇಶಕ್ಕೆ ಹೇಗೆ ಬಂದಿರಿ ? ನೀವು ಮಹಾಧೈರ್ಯವಂತರು. ನಾರುಬಟ್ಟೆ ಕೃಷ್ಣಾಜಿನಗಳನ್ನು ಧರಿಸಿಕೊಂಡಿರುವ ನೀವಾರು ? ನೀವು ಮಹಾದುಃಖಾಕ್ರಾಂತರಾಗಿ ನಿಟ್ಟುಸಿರುಬಿಡುತ್ತ ಸಮಸ್ತ ಪ್ರಾಣಿಗಳಿಗೂ ದುಃಖವನ್ನುಂಟುಮಾಡುತ್ತಿದ್ದೀರಿ. ನೀವು ಸಿಂಹದಂತೆ

ಗಂಭೀರದೃಷ್ಟಿಯುಳ್ಳವರು. ಸಿಂಹರಾಜನಿಗಿಂತಲೂ ವಿಶೇಷವಾದ ಪರಾಕ್ರಮವುಳ್ಳವರು. ನಿಮ್ಮ ಕೈಯಲ್ಲಿರುವ ಬಿಲ್ಲುಬಾಣಗಳು ಇಂದ್ರಚಾಪದಂತೆ ಮನೋಹರವಾಗಿವೆ. ನಿಮ್ಮ ಆಕಾರವನ್ನು ನೋಡಿದರೆ ಸಮಸ್ತ ಶತ್ರುಗಳನ್ನು ಜಯಿಸುವಿರೆಂದು ತೋರುತ್ತದೆ. ನೀವು ಮಹಾರೂಪ ಸಂಪನ್ನರಾಗಿ ಐಶ್ವರ್ಯವಂತರಾಗಿದ್ದೀರಿ. ನಿಮ್ಮ ಭುಜಗಳು ಆನೆಯ ಸೊಂಡಿಲಂತೆ ಮನೋಹರವಾಗಿ ಒಪ್ಪುತ್ತಿವೆ. ನಿಮ್ಮನ್ನು ನೋಡಿದರೆ ಮದವೇರಿದ ವೃಷಭರಾಜನಂತೆ ಒಪ್ಪುತ್ತಿದ್ದೀರಿ. ನಿಮ್ಮ ದೇಹಕಾಂತಿಯಿಂದ ಈ ಪರ್ವತವೆಲ್ಲವೂ ಬೆಳಗುತ್ತಿದೆ. ನೀವು ರಾಜ್ಯಾಧಿಪತ್ಯಕ್ಕೆ ಯೋಗ್ಯವಾದ ದೇವತಾವಂಶದವರು, ಮನುಷ್ಯರಲ್ಲ. ನೀವು ಈ ದೇಶಕ್ಕೆ ಬಂದ ಕಾರಣವೇನು ? ನೀವು ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಗಳುಳ್ಳವರು. ಮಹಾಪರಾಕ್ರಮಿಗಳು. ಹಾಗಾದರೂ ಜಡೆಗಳನ್ನು ಧರಿಸಿಕೊಂಡಿದ್ದೀರಿ. ರೂಪದಲ್ಲಿ ಒಬ್ಬರಿಗೊಬ್ಬರು ಸಮಾನರಾಗಿದ್ದೀರಿ. ನೀವು ದೈವವಿಲಾಸದಿಂದ ಭೂಲೋಕಕ್ಕೆ ಬಂದ ಚಂದ್ರಸೂರ್ಯರಂತೆ ಒಪ್ಪುತ್ತಿದ್ದೀರಿ. ತೆರವಾದ ಎದೆಕಟ್ಟುಗಳುಳ್ಳವರಾಗಿಯೂ ಮಹಾಬಲವಂತರಾಗಿಯೂ ಮನುಷ್ಯಾವತಾರಮಾಡಿದ ದೇವತೆಗಳಂತೆಯೂ ಒಪ್ಪುತ್ತಿದ್ದೀರಿ. ಸಿಂಹ ರಾಜನಂತೆ ಹೆಕ್ಕತ್ತುಳ್ಳವರಾಗಿ ಅತ್ಯಂತ ಉತ್ಸಾಹಶಕ್ತಿಯುಳ್ಳವರಾಗಿದ್ದೀರಿ. ನಿಮ್ಮ ತೋಳುಗಳು ನಿಡಿದಾಗಿ ಕ್ರಮವರ್ತುಳವಾಗಿ ಲಾಳವಿಂಡಿಗೆಯಂತೆ ಒಪ್ಪುತ್ತಿವೆ. ನಿಮ್ಮ ಭುಜಗಳು ಭುಜಕೀರ್ತಿಯೇ ಮೊದಲಾದ ದಿವ್ಯಾಭರಣಗಳಿಗೆ ಯೋಗ್ಯವಾಗಿವೆ. ಇಂಥ ಭುಜಗಳನ್ನು ಏಕೆ ಅಲಂಕರಿಸಿಕೊಳ್ಳ ದಿದ್ದೀರಿ ? ನಿಮ್ಮನ್ನು ನೋಡಿದರೆ ಈ ಭೂಮಂಡಲವನ್ನು ರಕ್ಷಿಸುವುದಕ್ಕೆ ಸಮರ್ಥರಾದವರೆಂದು ತೋರುತ್ತದೆ. ನೀವು ಸಮುದ್ರಪರ್ಯಂತವಾಗಿ ಹಿಮವತ್ಸೇತುಮಧ್ಯದಲ್ಲಿರುವ ಸಮಸ್ತ ಭೂಮಂಡಲಕ್ಕೂ ರಕ್ಷಕರೆಂದು ತೋರುತ್ತಿದೆ. ಚಿನ್ನದ ಮುಲಾಮುಳ್ಳ ರತ್ನಖಚಿತವಾದ ನಿಮ್ಮ ಬಿಲ್ಲುಗಳು ಇಂದ್ರಚಾಪದಂತೆ ಒಪ್ಪುತ್ತಿವೆ. ಮೆರೆಯುತ್ತಿರುವ ಸರ್ಪಗಳಂತೆ ಶತ್ರುಗಳ ಪ್ರಾಣಾಪಹಾರ ಮಾಡುವ ಕೂರಲಗುಳ್ಳ ಭಯಂಕರವಾದ ಅಂಬುಗಳಿಂದ ಪರಿಪೂರ್ಣವಾದ ನಿಮ್ಮ ಬತ್ತಳಿಕೆಗಳು ರಮಣೀಯವಾಗಿ ಒಪ್ಪುತ್ತಿವೆ. ನಿಮ್ಮ ಖಡ್ಗಗಳು ಪೊರೆಬಿಟ್ಟ ಮಹಾಸರ್ಪಗಳಂತೆ ಒಪ್ಪುತ್ತಿವೆ. ಎಲೈ ವೀರರೆ, ನನ್ನೊಡನೆ ನೀವು ಏಕೆ ಮಾತನಾಡದಿದ್ದೀರಿ ? ಇನ್ನು ನನ್ನ ವೃತ್ತಾಂತವನ್ನು ಕೇಳಿ : ಧರ್ಮಾತ್ಮನಾಗಿ ಸತ್ಯವಾದಿಯಾದ ಸುಗ್ರೀವನು ನಿಮ್ಮೊಡನೆ ಸ್ನೇಹವನ್ನು ಬಯಸುತ್ತಿರುವನು. ನಾನು ಆತನ ಪ್ರಧಾನನು ; ವಾಯುಪುತ್ರನು. ನನ್ನ ಹೆಸರು ಹನುಮಂತ. ನಾನು ಸುಗ್ರೀವನ ಕಾರ್ಯವನ್ನು ಸಾಧಿಸಿ ಆತನ ಚಿತ್ತಪ್ರಸಾದವನ್ನು ಪಡೆಯಬೇಕೆಂದು ವಾನರರೂಪವನ್ನು ಮರೆಸಿಕೊಂಡು ಸಂನ್ಯಾಸಿವೇಷದಿಂದ ಋಷ್ಯಮೂಕಪರ್ವತದಿಂದ ಇಲ್ಲಿಗೆ ಬಂದೆನು. ನಾನು ಕಾಮರೂಪಿ. ಯಾವ ಸ್ಥಳಕ್ಕೆ ಹೋಗಬೇಕಾದರೂ ಹೋಗುವ ಸಾಮರ್ಥ್ಯವುಳ್ಳವನು" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ತನ್ನ ಬಲಭಾಗದಲ್ಲಿದ್ದ ಲಕ್ಷ್ಮಣನನ್ನು ಕುರಿತು ಹೀಗೆಂದನು : "ಎಲೈ ಲಕ್ಷ್ಮಣ, ಈತನು ಕಪೀಶ್ವರನೂ ಮಹಾತ್ಮನೂ ಆದ ಸುಗ್ರೀವನ ಪ್ರಧಾನನು. ಸುಗ್ರೀವನೊಡನೆ ಸ್ನೇಹವನ್ನು ಬಯಸುತ್ತಿರುವ ನಮ್ಮನ್ನು ಅರಸಿಕೊಂಡು ಬಂದಿದ್ದಾನೆ. ಲಕ್ಷ್ಮಣ, ಸುಗ್ರೀವನ ಪ್ರಧಾನನಾದ ಈತನೊಡನೆ ಸಂಭಾಷಣೆಮಾಡು. ಈತನು ನುಡಿಜಾಣ್ಮೆಯುಳ್ಳವನು, ಈತನೊಡನೆ ವಿನಯದಿಂದ ಮಾತನಾಡು. ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದಗಳ ರಹಸ್ಯಗಳನ್ನು ತಿಳಿಯದವನು ಇಷ್ಟು ಚೆನ್ನಾಗಿ ಮಾತನಾಡಲಾರ. ಈತನು ವ್ಯಾಕರಣ ಶಾಸ್ತ್ರದಲ್ಲಿ ಮಹಾವಿದ್ವಾಂಸನೆಂದು ತೋರುತ್ತದೆ. ಇಷ್ಟು ಮಾತುಗಳನ್ನು ನುಡಿದರೂ ಮರವೆ ಯಿಂದಲಾದರೂ ಒಂದು ಅಪಶಬ್ದವನ್ನೂ ನುಡಿಯಲಿಲ್ಲ. ಈತನು ಮಾತನಾಡುವಾಗ

ಮುಖದಲ್ಲಾದರೂ ಕಣ್ಣುಗಳಲ್ಲಾದರೂ ಹಣೆಯಲ್ಲಾದರೂ ಹುಬ್ಬುಗಳಲ್ಲಾದರೂ ಮಿಕ್ಕ ಯಾವುವೇ ಇವನ ಅಂಗಗಳಲ್ಲಾದರೂ ಯಾವ ವಿಕಾರವೂ ಕಾಣಿಸಲಿಲ್ಲ. ಅತಿವಿಸ್ತಾರವೂ ಸಂದಿಗ್ಧವೂ ವಿಲಂಬಿತವೂ ಅತಿಶೀಘ್ರೋಚ್ಚರಿತವೂ ಆಗದೆ, ಕರ್ಣಕಠೋರವಾಗಿರದೆ, ಉರಃಸ್ಥವೂ ಕಂಠಗತವೂ ಎನಿಸಿದ ಈತನ ವಾಕ್ಯವು ಮಧ್ಯಮಸ್ವರದಲ್ಲಿದ್ದು ಕಿವಿಗಿಂಪಾಗಿದೆ. ಇಂಥ ಪ್ರಧಾನದೂತನು ಯಾವ ದೊರೆಯ ಬಳಿಯಲ್ಲಿರುವನೋ ಅವನ ಕಾರ್ಯವು ನಿರ್ವಿಘ್ನವಾಗಿ ನೆರವೇರುವುದು" ಎಂದು ಹೇಳಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ವಾನರಶ್ರೇಷ್ಠನಾದ ಹನುಮಂತನನ್ನು ಕುರಿತು "ಎಲೈ ವಾಯುಪುತ್ರನೆ, ನಿನ್ನ ಮುಖದಿಂದ ಮಹಾತ್ಮನಾದ ಸುಗ್ರೀವನ ವೃತ್ತಾಂತವನ್ನು ಕೇಳಿದೆವು. ಅವನ ಉತ್ತಮಗುಣಗಳನ್ನು ನಾವು ಮೊದಲೇ ಕೇಳಿದ್ದೆವು. ನಾವು ಸುಗ್ರೀವನನ್ನೇ ನೋಡಬೇಕೆಂದು ಬಂದಿದ್ದೇವೆ. ಇನ್ನು ಮುಂದೆ ನೀನು ಹೇಳಿದಂತೆ ಮಾಡುವೆವು" ಎಂದು ಹೇಳಿದನು.

ಹನುಮಂತನಿಗೆ ಅತ್ಯಂತ ಸಂತೋಷವಾಯಿತು. ತನ್ನ ಒಡೆಯನಾದ ಸುಗ್ರೀವನ ಕಾರ್ಯವು ಸಿದ್ಧಿಯಾಗುವುದೆಂದು ತಿಳಿದು ರಾಮಲಕ್ಷ್ಮಣರಿಗೂ ಸುಗ್ರೀವನಿಗೂ ಸಖ್ಯವನ್ನು ಮಾಡಿಕೊಡಬೇಕೆಂದು ನಿಶ್ಚಯಿಸಿದನು.



೪ನೆಯ ಅಧ್ಯಾಯ

## ಹನುಮಂತನು ರಾಮಲಕ್ಷ್ಮಣರನ್ನು ಸುಗ್ರೀವನ ಬಳಿಗೆ ಕರೆದುಕೊಂಡು ಹೋದದ್ದು

ಆಗ ಹನುಮಂತನು ಅತ್ಯಂತ ಸಂತುಷ್ಟಚಿತ್ತನಾಗಿ ಮಹಾತ್ಮನಾದ ಸುಗ್ರೀವನಿಗೆ ರಾಜ್ಯ ಪ್ರಾಪ್ತಿಯಾಗುವುದೆಂದೂ ಒಳ್ಳೆಯ ಸಮಯದಲ್ಲಿ ಶ್ರೀರಾಮನು ಅಲ್ಲಿಗೆ ಬಂದನೆಂದೂ ಮನಸ್ಸಿನಲ್ಲಿ ನಿಶ್ಚಯಿಸಿದನು. ಮಾತನಾಡುವುದರಲ್ಲಿ ಚತುರನಾದ ಆ ಹನುಮಂತನು ರಾಮನನ್ನು ಕುರಿತು "ನರಶ್ರೇಷ್ಠ, ನೀನು ಈ ವೀರನನ್ನು ಕರೆದುಕೊಂಡು ಈ ಘೋರಾರಣ್ಯಕ್ಕೆ ಏಕೆ ಬಂದೆ ?" ಎಂದು ಪ್ರಶ್ನೆಮಾಡಿದನು.

ಶ್ರೀರಾಮನು ಲಕ್ಷ್ಮಣನ ಮುಖವನ್ನು ನೋಡಲು ಆತನು ಹನುಮಂತನನ್ನು ಕುರಿತು ಹೀಗೆ ಉತ್ತರಕೊಟ್ಟನು : "ಎಲೈ ವಾಯುಪುತ್ರ, ದಶರಥನೆಂಬ ಮಹಾರಾಜನು ಧರ್ಮಿಷ್ಠನಾಗಿ ಚಾತುರ್ವರ್ಣ್ಯವನ್ನು ಪರಿಪಾಲಿಸುತ್ತ ರಾಜ್ಯಭಾರಮಾಡಿಕೊಂಡಿದ್ದನು. ಅವನನ್ನು ದ್ವೇಷಿಸತಕ್ಕವನೊಬ್ಬನೂ ಇಲ್ಲ. ಅವನು ಯಾರನ್ನೂ ದ್ವೇಷಿಸುತ್ತಿರಲಿಲ್ಲ. ಸಾಕ್ಷಾತ್ ಬ್ರಹ್ಮದೇವನಂತೆ ಧರ್ಮವತ್ಸಲನಾಗಿ ಅಗ್ನಿಷ್ಟೋಮಾದಿಯಾಗಗಳನ್ನು ನೆರವೇರಿಸುತ್ತಿದ್ದನು. ಈ ಶ್ರೀರಾಮನು ಆತನ ಜ್ಯೇಷ್ಠಪುತ್ರ: ಸರ್ವಜಂತುಗಳನ್ನೂ ರಕ್ಷಿಸಬಲ್ಲ ಪರಾಕ್ರಮಿ. ದಶರಥನ ಮಕ್ಕಳಲ್ಲಿ ಇವನೇ ಅತ್ಯುತ್ತಮ ಗುಣಶಾಲಿ; ಪಿತೃವಾಕ್ಯ ಪರಿಪಾಲಕ. ಒಂದಾನೊಂದು ಕಾರಣದಿಂದ ರಾಜ್ಯಭ್ರಷ್ಟನಾಗಿ ತನ್ನ ಪತ್ನಿಯಾದ ಸೀತಾದೇವಿಯೊಡನೆಯೂ ತಮ್ಮನಾದ ನನ್ನೊಡನೆಯೂ ಈ ಅರಣ್ಯಕ್ಕೆ ಬಂದನು. ಈತನ ಸದ್ಗುಣಗಳಿಗೆ ಮಾರುಹೋಗಿ ನಾನು ಈತನ ಸೇವಕನಾಗಿ ಬಂದಿದ್ದೇನೆ. ನನ್ನ ಹೆಸರು ಲಕ್ಷ್ಮಣ.. ಸುಖಾರ್ಹನೂ ಸರ್ವಭೂತಗಳಲ್ಲಿ ದಯಾಶೀಲನೂ ಮಹಾತ್ಮನೂ ಆದ ಈತನ ಪತ್ನಿ

ಯನ್ನು, ನಾವು ಇಲ್ಲದಾಗ ಒಬ್ಬ ರಾಕ್ಷಸನು ಅಪಹರಿಸಿಕೊಂಡು ಹೋಗಿದ್ದಾನೆ. ಆ ರಾಕ್ಷಸನ ವಿಷಯ ನಮಗೆ ತಿಳಿಯದು ಶಾಪವಶದಿಂದ ರಾಕ್ಷಸನಾಗಿದ್ದ ಒಬ್ಬ ಗಂಧರ್ವನು ಶ್ರೀರಾಮನನ್ನು ಕುರಿತು "ನಿನ್ನ ಪತ್ನಿಯನ್ನು ಯಾವನು ಅಪಹರಿಸಿದ್ದಾನೆಂಬುದನ್ನೂ ಅವಳು ಎಲ್ಲಿರುವಳೆಂಬುದನ್ನೂ ಸುಗ್ರೀವನೆಂಬ ಕಪೀಶ್ವರನು ಪತ್ತೆಮಾಡಿಕೊಡುತ್ತಾನೆ ಆ ಕಪೀಶ್ವರನು ಅತ್ಯಂತ ಸಮರ್ಥನೂ ಪರಾಕ್ರಮಿಯೂ ಆಗಿದ್ದಾನೆ" ಎಂದು ಹೇಳಿ ಸ್ವರ್ಗಲೋಕಕ್ಕೆ ಹೋದನು ಆ ಪ್ರಕಾರ ನಾವು ಸುಗ್ರೀವನನ್ನು ಹುಡುಕಿಕೊಂಡು ಬಂದಿದ್ದೇವೆ ಶ್ರೀರಾಮನೂ ನಾನೂ ಈಗ ಸುಗ್ರೀವನ ಮರೆ ಹೊಕ್ಕಿದ್ದೇವೆ. ಹಿಂದೆ ಬೇಕಾದಷ್ಟು ಐಶ್ವರ್ಯವನ್ನು ದಾನಮಾಡಿ ಜಗತ್ಪ್ರಸಿದ್ಧನಾಗಿ ಲೋಕನಾಥ ನೆನಿಸಿಕೊಂಡ ಶ್ರೀರಾಮನು ಸುಗ್ರೀವನಿಗೆ ಶರಣಾಗಿದ್ದಾನೆ. ಧರ್ಮವತ್ಸಲನಾದ ದಶರಥಚಕ್ರವರ್ತಿಯ ಪುತ್ರನೂ ಶರಣಾಗತರಕ್ಷಕನೂ ಆದ ಈತನು ಈಗ ಈ ವಿಪತ್ತಿನಲ್ಲಿ ಸಿಕ್ಕಿಕೊಂಡಿದ್ದಾನೆ. ನನಗೆ ಪೂಜ್ಯನಾದ ಅಗ್ರಜನೂ ರಘುಕುಲಶ್ರೇಷ್ಠನೂ ಆದ ಈ ಮಹಾತ್ಮನು ಸುಗ್ರೀವನ ಸಹಾಯವನ್ನು ಯಾಚಿಸುತ್ತಿದ್ದಾನೆ. ಯಾವಾತನ ಅನುಗ್ರಹಕ್ಕಾಗಿ ಸಕಲಪ್ರಜೆಗಳೂ ಹಾತೊರೆಯುತ್ತಿದ್ದರೋ ಅಂಥ ಮಹಾಪುರುಷನು ಇಂದು ಸುಗ್ರೀವನ ಬಳಿಗೆ ಸ್ನೇಹಾರ್ಥಿಯಾಗಿ ಬಂದಿದ್ದಾನೆ. ಈ ಮಹಾತ್ಮನಾದ ರಘುನಾಥನು ಕಷ್ಟದಲ್ಲಿ ಸಿಕ್ಕಿ ಸಹಾಯಾರ್ಥಿಯಾಗಿ ಬಂದಿರಲು, ವಾನರೇಂದ್ರನಾದ ಸುಗ್ರೀವನು ಕಾಲೋಚಿತವಾದ್ದನ್ನು ಮಾಡುತ್ತಾನೆಂದು ಆಶಿಸುತ್ತೇನೆ" ಎಂದು ಲಕ್ಷ್ಮಣನು ಹೇಳಿದನು.

ಹನುಮಂತನು "ಎಲೈ ಲಕ್ಷ್ಮಣ, ನಿಮ್ಮಂಥ ಸದ್ಗುಣಸಂಪನ್ನರೂ ಜಿತೇಂದ್ರಿಯರೂ ಮಹಾತ್ಮರೂ ಆದ ಉತ್ತಮಪುರುಷರನ್ನು ಕಂಡು ನಿಮ್ಮೊಡನೆ ಸಂಭಾಷಣೆಮಾಡುವಂಥ ಪುಣ್ಯವು ಸುಗ್ರೀವನಿಗುಂಟಾಯಿತು; ಸುಗ್ರೀವನು ದೇವೇಂದ್ರನ ಮಗನಾದ ವಾಲಿಯಿಂದ ಯುದ್ಧದಲ್ಲಿ ಪರಾಜಿತನಾಗಿ ರಾಜ್ಯಭ್ರಷ್ಟನಾಗಿ ತನ್ನ ಸ್ತ್ರೀಯನ್ನು ಬಿಟ್ಟು ಈ ವನಕ್ಕೆ ಬಂದಿದ್ದಾನೆ. ಆತನು ನಿಮ್ಮಂಥ ಮಹಾತ್ಮರ ಸಹಾಯದಿಂದ ವಾಲಿಯನ್ನು ಜಯಿಸಿ ತನ್ನ ರಾಜ್ಯವನ್ನೂ ಪತ್ನಿಯನೂ ಪಡೆಯಬೇಕೆಂದು ಯತ್ನಮಾಡಿಕೊಂಡಿದ್ದಾನೆ. ಆದಕಾರಣ ಕಾರ್ಯಾರ್ಥಿಯಾದ ಸುಗ್ರೀವನು ನನ್ನನ್ನು ಕೂಡಿಕೊಂಡು ಸೀತಾದೇವಿಯನ್ನರಸಲು ನಿಮಗೆ ಅವಶ್ಯವಾಗಿ ಸಹಾಯವಾಗುವನು" ಎಂದು ನುಡಿದು ರಾಮಲಕ್ಷ್ಮಣರನ್ನು ಸುಗ್ರೀವನ ಸಮೀಪಕ್ಕೆ ಬರುವಂತೆ ಕೇಳಿಕೊಂಡನು.

ಆ ಮಾತನ್ನು ಕೇಳಿ ಶ್ರೀರಾಮನು ಲಕ್ಷ್ಮಣಸಮೇತನಾಗಿ ಹನುಮಂತನನ್ನು ಶ್ಲಾಘಿಸಿದನು. ಲಕ್ಷ್ಮಣನು ಶ್ರೀರಾಮನನ್ನು ಕುರಿತು "ಶ್ರೀರಾಮ, ವಾಯುಪುತ್ರನಾದ ಹನುಮಂತನು ಸಂತೋಷಕರವೂ ಹಿತವೂ ಆದ ವಚನಗಳನ್ನು ನುಡಿದನು. ಈಗ ಸುಗ್ರೀವನು ಕಾರ್ಯಾರ್ಥಿಯಾಗಿರು ವುದರಿಂದ ಆತನ ಕಾರ್ಯನಿಮಿತ್ತವಾಗಿಯೇ ಈತನು ಇಲ್ಲಿಗೆ ಬಂದಿರುವನು. ಇದರಿಂದ ನಮ್ಮ ಕಾರ್ಯವು ಸಾಧ್ಯವಾಗುವುದೆಂದು ತಿಳಿಯುತ್ತದೆ. ವಾಯುಪುತ್ರನಾದ ಈ ಹನುಮಂತನು ಅನೃತವನ್ನು ನುಡಿಯನು" ಎಂದು ಹೇಳಿದನು.

ಆಮೇಲೆ ವಾಯುಪುತ್ರನೂ ಕಪಿನಾಯಕನೂ ಕೀರ್ತಿವಂತನೂ ಮಹಾಪ್ರಾಜ್ಞನೂ ಆದ ಹನುಮಂತನು ಸಂನ್ಯಾಸಿವೇಷವನ್ನು ಬಿಟ್ಟು ಕಪಿಸ್ವರೂಪನಾಗಿ ರಾಮಲಕ್ಷ್ಮಣರನ್ನು ಬೆನ್ನಮೇಲೆ ಕುಳ್ಳಿರಿಸಿಕೊಂಡು ತನ್ನೊಡೆಯನಾದ ಸುಗ್ರೀವನ ಕಾರ್ಯವು ಸಾಧ್ಯವಾಯಿತೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಕೊಂಡು ಸುಗ್ರೀವನಿದ್ದೆಡೆಗೆ ಹೋದನು.



## ೫ ನೆಯ ಅಧ್ಯಾಯ

## ಶ್ರೀರಾಮ ಸುಗ್ರೀವರು ಸ್ನೇಹಮಾಡಿಕೊಂಡದ್ದು

ಈ ಪ್ರಕಾರ ಹನುಮಂತನು ರಾಮಲಕ್ಷ್ಮಣರನ್ನು ಸುಗ್ರೀವನಿದ್ದ ಸ್ಥಳಕ್ಕೆ ಕರೆದುಕೊಂಡು ಬಂದನು. ಅವರು ಬಂದ ವೃತ್ತಾಂತವನ್ನು ಸುಗ್ರೀವನಿಗೆ ತಿಳುಹಿಸಿ ಅವರನ್ನು ಆತನ ಎದುರಲ್ಲಿ ಬಿಟ್ಟು ಆತನನ್ನು ಕುರಿತು "ಸುಗ್ರೀವ, ಈತನು ಶ್ರೀರಾಮ. ಮಹಾಪ್ರಾಜ್ಞ, ಮಹಾಪರಾಕ್ರಮಿ. ತನ್ನ ತಮ್ಮನಾದ ಲಕ್ಷ್ಮಣನಿಂದ ಸಮೇತನಾಗಿ ನಿನ್ನೊಡನೆ ಸ್ನೇಹಮಾಡಿಕೊಳ್ಳಬೇಕೆಂದು ಬಂದಿದ್ದಾನೆ ಈತನನ್ನು ಅಂಗೀಕರಿಸು. ಈತನು ಮಹಾಪೂಜ್ಯನು" ಎಂದು ಹೇಳಿದನು

ಮೊದಲು ಶ್ರೀರಾಮನನ್ನು ಕಂಡು ಆತನು ವಾಲಿಯ ಭಟನೆಂದು ಭಯಪಟ್ಟಿದ್ದ ವಾನರಾಧಿಪತಿಯಾದ ಸುಗ್ರೀವನು ಹನುಮಂತನ ಮಾತನ್ನು ಕೇಳಿ ಅತ್ಯಂತ ಸಂತೋಷಯುಕ್ತನಾಗಿ ಭಯವನ್ನು ಬಿಟ್ಟು ಶ್ರೀರಾಮನಿಗೆ ಸತ್ಕಾರಗಳನ್ನು ಮಾಡಿಸಿದನು. ವಾನರರೂಪವನ್ನು ಬಿಟ್ಟು ಮನುಷ್ಯರೂಪವನ್ನು ತಾಳಿ ಶ್ರೀರಾಮನನ್ನು ಕುರಿತು "ಶ್ರೀರಾಮ, ನೀನು ಧರ್ಮಾತ್ಮ; ವಿನಯಗುಣಸಂಪನ್ನ; ಸಮಸ್ತ ಪ್ರಾಣಿಗಳಲ್ಲಿಯೂ ದಯೆಯುಳ್ಳವನು. ನಿನ್ನ ಸದ್ಗುಣಗಳನ್ನು ಈ ಮೊದಲೇ ಹನುಮಂತನು ನನಗೆ ಹೇಳಿದ್ದಾನೆ. ಆ ಗುಣಗಳನ್ನು ಈಗ ನಿನ್ನಲ್ಲಿ ಪ್ರತ್ಯಕ್ಷವಾಗಿ ಕಾಣುತ್ತಿದ್ದೇನೆ. ನನ್ನೊಡನೆ ಸ್ನೇಹವನ್ನು ಮಾಡಬೇಕೆಂಬ ಬುದ್ಧಿಯು ನಿನ್ನಲ್ಲಿರುವ ಪಕ್ಷದಲ್ಲಿ ನನ್ನ ಕೈಹಿಡಿದುಕೊಂಡು ಸಂಶಯವಿಲ್ಲದೆ ಸ್ನೇಹವನ್ನು ಬೆಳಸು" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಅತ್ಯಂತ ಸಂತೋಷಯುಕ್ತನಾಗಿ ತನ್ನ ದಕ್ಷಿಣಹಸ್ತದಿಂದ ಸುಗ್ರೀವನ ದಕ್ಷಿಣಹಸ್ತವನ್ನು ಹಿಡಿದು ಹತ್ತಿರಕ್ಕೆಳೆದು ತಬ್ಬಿಕೊಂಡನು. ಆಮೇಲೆ ಹನುಮಂತನು ಯಜ್ಞಪುರುಷನನ್ನು ಪ್ರಜ್ವಲಿಸಿ ಶ್ರೀರಾಮ ಸುಗ್ರೀವರ ಬಳಿಯಲ್ಲಿ ನಿಂತುಕೊಂಡನು. ಅವರು ಯಜ್ಞಪುರುಷನನ್ನು ವಿಧ್ಯುಕ್ತಪ್ರಕಾರದಲ್ಲಿ ಅರ್ಚನೆಮಾಡಿ ಪ್ರದಕ್ಷಿಣೆಗಳನ್ನು ಮಾಡಿ ಅನ್ಯೋನ್ಯವಾಗಿ ಸ್ನೇಹದ ಪ್ರತಿಜ್ಞೆಯನ್ನು ಸ್ವೀಕರಿಸಿದರು. ಅನಂತರ ಅನ್ಯೋನ್ಯವಾಗಿ ಮಾತನಾಡಲಾರಂಭಿಸಿದರು. ಶ್ರೀರಾಮನು "ಸುಗ್ರೀವ, ನೀನು ನನಗೆ ಅಂತರಂಗಶುದ್ಧನಾದ ಸಖನು. ನಿನ್ನ ಸುಖದುಃಖಗಳೇ ನನ್ನ ಸುಖದುಃಖಗಳು" ಎಂದು ನುಡಿದನು.

ಆಗ ಸುಗ್ರೀವನು ಅತ್ಯಂತ ಸಂತುಷ್ಟಚಿತ್ತನಾಗಿ ಪಲ್ಲವಿತವೂ ಕೋರಕಿತವೂ ಆದ ಮರದ ಕೊಂಬೆಗಳನ್ನು ಹಾಕಿಸಿ ಶ್ರೀರಾಮನೊಡನೆ ಕುಳಿತುಕೊಂಡನು. ಆಗ ಹನುಮಂತನು ಚಂದನವೃಕ್ಷಗಳ ತಳಿರುಗಳ ಕೊಂಬೆಗಳನ್ನು ಮುರಿದು ತಂದು ಹಾಸಿ ಲಕ್ಷ್ಮಣನನ್ನು ಕುಳ್ಳಿರಿಸಿದನು. ಸುಗ್ರೀವನು ಅತ್ಯಂತ ಸಂತೋಷಯುಕ್ತನಾಗಿ ಮೃದುನುಡಿಯಿಂದ ಶ್ರೀರಾಮನನ್ನು ಕುರಿತು "ಶ್ರೀರಾಮ, ನನ್ನ ಅಣ್ಣನಾದ ವಾಲಿಯು ನನ್ನ ಸ್ತ್ರೀಯನ್ನು ಅಪಹರಿಸಿಕೊಂಡು ನನ್ನನ್ನು ಹೊಡೆದು ರಾಜ್ಯಭ್ರಷ್ಟನನ್ನಾಗಿ ಮಾಡಿ ಹೊರಡಿಸಿದನು. ನಾನು ಎಲ್ಲಿಯೂ ಗತ್ಯಂತರವನ್ನು ಕಾಣದೆ ಈ ಅರಣ್ಯಕ್ಕೆ ಬಂದು ಭಯದಿಂದ ಕಂಗೆಟ್ಟು ಸಂಚರಿಸುತ್ತಿದ್ದೇನೆ. ನಾನು ವಾಲಿಯಿಂದ ಬಹುನೊಂದೆನು. ಆತನಿಂದ ನೊಂದು ದುಃಖಪಡುವ ನನಗೆ ನೀನು ಅಭಯವನ್ನು ಕೊಟ್ಟು ರಕ್ಷಿಸಿ ನನ್ನ ಭಯವನ್ನು ಪರಿಹರಿಸಬೇಕು" ಎಂದು ನುಡಿದನು.




ಹನುಮಂತನು ಶ್ರೀರಾಮಲಕ್ಷ್ಮಣರನ್ನು ಸುಗ್ರೀವನಿದ್ದ ಸ್ಥಳಕ್ಕೆ ಕರೆದುಕೊಂಡು ಬಂದನು

ಧರ್ಮಜ್ಞನೂ ತೇಜಸ್ವಿಯೂ ಆದ ಶ್ರೀರಾಮನು ಮುಗುಳುನಗೆಯೊಡಗೂಡಿ ಸುಗ್ರೀವನನ್ನು ಕುರಿತು "ಸುಗ್ರೀವ, ಲೋಕದಲ್ಲಿ ಮಿತ್ರತ್ವಕ್ಕೆ ಉಪಕಾರವೇ ಫಲ. ನನ್ನೊಡನೆ ನೀನು ಮಿತ್ರತ್ವವನ್ನು ಮಾಡಿದ್ದಕ್ಕೆ ಫಲವುಂಟಾಗುವಂತೆ, ನನ್ನಲ್ಲಿರುವ ಸೂರ್ಯಪ್ರಭೆಯಂತೆ ಕಾಂತಿಯುಳ್ಳ ಎಂದೂ ನಿಷ್ಫಲವಾಗದ ಬಾಣಗಳಿಂದ ನಿನ್ನ ಪ್ರಾಣಕಾಂತೆಯನ್ನಪಹರಿಸಿದ ವಾಲಿಯನ್ನು ಯಮಲೋಕವನ್ನೈದಿಸುವೆನು. ನನ್ನ ಬಾಣಗಳು ವಾಯುವೇಗ ಮನೋವೇಗವುಳ್ಳವು. ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದವು. ಕೃಷ್ಣಸರ್ಪದಂತೆ ಅತಿಭಯಂಕರವಾದವು. ಅಂಥ ಬಾಣಗಳಿಂದ ದೊಡ್ಡದಾದ ಪರ್ವತವು ವಜ್ರಾಯುಧದಿಂದ ಚೂರ್ಣೀಕೃತವಾಗಿ ಬೀಳುವಂತೆ ವಾಲಿಯು ಗಾಯಪಡೆದು ಬೀಳುವನೆಂದು ನಿಶ್ಚಯಿಸು" ಎಂದು ಪ್ರತಿಜ್ಞೆಮಾಡಿದನು.

ಸುಗ್ರೀವನು ಆ ವಾಕ್ಯವನ್ನು ಕೇಳಿ ಅತ್ಯಂತ ಸಂತೋಷದಿಂದ ಶ್ರೀರಾಮನನ್ನು ಕುರಿತು "ಶ್ರೀರಾಮ, ನಿನ್ನ ಅನುಗ್ರಹದಿಂದ ನಾನು ನನ್ನ ರಾಜ್ಯವನ್ನೂ ಸ್ತ್ರೀಯನ್ನೂ ಪಡೆಯುವೆನು. ನೀನು ನನ್ನ ವೈರಿಯೂ ಒಡಹುಟ್ಟಿದವನೂ ಆದ ವಾಲಿಯನ್ನು ಕೊಂದು ಪುನಃ ಅವನು ನನ್ನನ್ನು ಹಿಂಸಿಸದಂತೆ ಎಸಗು" ಎಂದು ನುಡಿದನು. ಹೀಗೆ ರಾಮಸುಗ್ರೀವರು ಸ್ನೇಹವನ್ನು ಮಾಡಿಕೊಳ್ಳಲಾಗಿ ಅದೇ ಸಮಯದಲ್ಲಿ ಸೀತಾದೇವಿಗೆ ಶುಭಸೂಚಕವಾಗಿ ಎಡಗಣ್ಣು ಅದುರಿತು. ವಾಲಿರಾವಣರಿಗೆ ಅಶುಭಸೂಚಕವಾಗಿ ಆಗಲೇ ಎಡಗಣ್ಣು ಅದುರಿತು.

---

## ೬ ನೆಯ ಅಧ್ಯಾಯ

## ಶ್ರೀರಾಮನು ಸೀತಾದೇವಿಯ ಆಭರಣಗಳನ್ನು ನೋಡಿ ದುಃಖಿಸಿದ್ದು

ಸುಗ್ರೀವನು ಶ್ರೀರಾಮನನ್ನು ಕುರಿತು ಹೀಗೆಂದನು: "ಶ್ರೀರಾಮ, ನನ್ನ ಪ್ರಧಾನನಾದ ಈ ಹನುಮಂತನು, ನೀನು ಲಕ್ಷ್ಮಣನೊಡನೆ ಈ ವನಕ್ಕೆ ಬಂದ ವೃತ್ತಾಂತವನ್ನು ನನ್ನ ಸಂಗಡ ಹೇಳಿದನು. ರಾವಣನು ನೀವಿಲ್ಲದ ಸಮಯವನ್ನು ನೋಡಿಕೊಂಡಿದ್ದು ಕಪಟವೇಷದಿಂದ ಮೋಸಮಾಡಿ ಸೀತಾದೇವಿಯನ್ನಪಹರಿಸಿಕೊಂಡು ಹೋದುದನ್ನೂ ನಿಮ್ಮ ತಂದೆಯಾದ ದಶರಥಮಹಾರಾಯನ ಸಖನಾದ ಜಟಾಯುವು ಮಧ್ಯಮಾರ್ಗದಲ್ಲಿ ಅಡ್ಡಗಟ್ಟಲು ಆತನನ್ನು ಕೊಂದು ಅಂತರಿಕ್ಷಮಾರ್ಗದಲ್ಲಿ ಆ ದೇವಿಯನ್ನು ಕೊಂಡೊಯ್ದುದನ್ನೂ ಕೇಳಿದೆನು. ಆದರೇನಾಯಿತು! ಸ್ತ್ರೀವಿಯೋಗದುಃಖವು ನಿನಗೆ ಶೀಘ್ರದಲ್ಲಿ ಪರಿಹಾರವಾಗುವುದು. ಪೂರ್ವದಲ್ಲಿ ನಾರಾಯಣನು ಮತ್ಸ್ಯಾವತಾರದಿಂದ ಸಮುದ್ರದಲ್ಲಿ ಮುಳುಗಿದ ವೇದಗಳನ್ನುದ್ಧರಿಸಿ ತಂದಂತೆ ರಾವಣನು ಅಪಹರಿಸಿಕೊಂಡು ಹೋದ ಸೀತಾದೇವಿಯನ್ನು ನಾನು ಅರಸಿ ತರುವೆನು. ಸೀತಾದೇವಿಯು ಪಾತಾಳಲೋಕದಲ್ಲಿದ್ದರೂ ಅಂತರಿಕ್ಷಮಾರ್ಗದಲ್ಲಿದ್ದರೂ ತಂದುಕೊಡುತ್ತೇನೆ. ಶ್ರೀರಾಮ, ಲೋಕದಲ್ಲಿ ವಿಷದ ಕಷಾಯವನ್ನು ಭಕ್ಷಣಮಾಡಿ ದಕ್ಕಿಸಿಕೊಳ್ಳಲಾಗದಂತೆ ದೇವದಾನವರಾದರೂ ನಿನ್ನ ಪತ್ನಿಯನ್ನು ಅಪಹರಿಸಿ ತಪ್ಪಿಸಿಕೊಳ್ಳಲಾರರು. ಆದಕಾರಣ ದುಃಖವನ್ನು ಬಿಡು. ಎಲ್ಲಿದ್ದರೂ ನಿನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನು ತಂದುಕೊಡುತ್ತೇನೆ. ಕ್ರೂರಕರ್ಮಿಯಾದ ರಾವಣನು ಸೀತಾದೇವಿಯನ್ನು ಅಪಹರಿಸಿದ್ದಾನೆಂದು ನಾನು ಊಹೆಯಿಂದ ತಿಳಿದೆನು. ನಾಗಸ್ತ್ರೀಯಂತೆ ಸುಕುಮಾರಾಂಗಿಯಾದ ಒಬ್ಬ ಸ್ತ್ರೀಯು ರಾವಣನ ಬಳಿಯಲ್ಲಿ 'ಹಾ ರಾಮ, ರಾಮ, ಲಕ್ಷ್ಮಣ' ಎಂದು ಮೊರೆಯಿಡುತ್ತ

ಹೋಗುತ್ತಿದ್ದಳು. ಆಕೆಯೇ ಸೀತಾದೇವಿಯಾಗಿರಬೇಕು. ಈ ಪರ್ವತದಲ್ಲಿ ನಾನು ನಾಲ್ಕುಮಂದಿ ಕಪಿಗಳ ಸಹಿತನಾಗಿರಲು ನಮ್ಮನ್ನು ಕಂಡು ಆ ದೇವಿಯು ತನ್ನ ಮೇಲುಹೊದಿಕೆಯ ಪೀತಾಂಬರದ ಸೆರಗನ್ನು ಹರಿದು ಆ ಸೆರಗಿನಲ್ಲಿ ತಾನು ತೊಟ್ಟಿದ್ದ ದಿವ್ಯಾಭರಣಗಳನ್ನು ಕಟ್ಟಿ ನಮ್ಮ ಬಳಿ ಎಸೆದಳು. ಅವು ನನ್ನ ಹತ್ತಿರ ಇವೆ. ಈಗ ತರಿಸುತ್ತೇನೆ, ನೋಡು" ಎಂದನು.

ಆ ಮಾತನ್ನು ಕೇಳಿ ಶ್ರೀರಾಮನು "ಸುಗ್ರೀವ, ಈ ವಿಷಯವನ್ನು ಇಷ್ಟುಹೊತ್ತಿನವರೆಗೂ ಹೇಳದಿರಬಹುದೆ ? ಶೀಘ್ರದಲ್ಲಿ ಆ ಆಭರಣಗಳನ್ನು ತರಿಸು" ಎಂದು ಹೇಳಿದನು.

ಸುಗ್ರೀವನು ಅತಿಶೀಘ್ರದಲ್ಲಿ ತಾನಿದ್ದ ಗುಹೆಯ ಒಳಗೆ ಹೋಗಿ ಸೀತಾದೇವಿಯು ಮೇಲು ಹೊದಿಕೆಯ ಸೆರಗಿನಲ್ಲಿ ಕಟ್ಟಿದ್ದ ಗಂಟನ್ನು ತೆಗೆದುಕೊಂಡುಬರಲು, ಶ್ರೀರಾಮನು ಗಂಟನ್ನು ಬಿಚ್ಚಿ ಸೀತಾದೇವಿಯ ಆಭರಣಗಳನ್ನು ನೋಡಿ ಕಂಬನಿದುಂಬಿದನು. ಅವನು ಮಂಜುಮುಸುಕಿದ ಚಂದ್ರಮಂಡಲದಂತೆ ಮುಖಕಾಂತಿಗುಂದಿ ಸೀತಾದೇವಿಯ ಮೇಲಣ ಹಂಬಲಿಕೆಯಿಂದ ಧೈರ್ಯಗುಂದಿ "ಹಾ ಸೀತೆ" ಎಂದು ಹಂಬಲಿಸುತ್ತ ಭೂಮಿಯಮೇಲೆ ಬಿದ್ದನು. ಆ ಆಭರಣಗಳನ್ನು ತನ್ನ ಎದೆಯಮೇಲಿಟ್ಟುಕೊಂಡು ಕೋಪಕೆರಳಿದ ಸರ್ಪದಂತೆ ಬಿಸುಸುಯ್ದನು. ಶ್ರೀರಾಮನು ಸಮೀಪದಲ್ಲಿದ್ದ ಲಕ್ಷ್ಮಣನನ್ನು ನೋಡಿ ರೋದನಮಾಡುತ್ತ "ಲಕ್ಷ್ಮಣ, ರಾವಣನು ಸೀತಾದೇವಿಯನ್ನಪಹರಿಸಿಕೊಂಡು ಹೋಗುವಾಗ ಆ ದೇವಿಯು ತನ್ನ ಮೇಲುಹೊದಿಕೆಯ ವಸ್ತ್ರವನ್ನು ಹರಿದು ತಾನು ತೊಟ್ಟಿದ್ದ ದಿವ್ಯಭೂಷಣಗಳನ್ನು ಗಂಟುಕಟ್ಟಿ ಎಳೆಯ ಹುಲ್ಲಿನ ಭೂಮಿಯಲ್ಲಿ ಹಾಕಿದಳಂತೆ!" ಎಂದು ನುಡಿದನು. ಆಮೇಲೆ ಅವುಗಳನ್ನು ಲಕ್ಷ್ಮಣನು ನೋಡಿ 'ಅಣ್ಣ, ಈ ಕೇಯೂರಗಳನ್ನೂ ಕುಂಡಲಗಳನ್ನೂ ನಾನು ಕಾಣೆ. ಈ ನೂಪುರಗಳು ಮಾತ್ರ ಸೀತಾದೇವಿಯ ಕಾಲುಗಳಲ್ಲಿದ್ದವೇ ಹೌದು. ನಿತ್ಯವೂ ಆ ದೇವಿಯ ಪಾದಗಳಿಗೆ ವಂದಿಸುವಾಗ ನಾನು ಇವುಗಳನ್ನು ನೋಡುತ್ತಿದ್ದೆ" ಎಂದನು. ಶ್ರೀರಾಮನು ಸುಗ್ರೀವನನ್ನು ಕುರಿತು "ಸುಗ್ರೀವ, ನನ್ನ ಪ್ರಾಣಕಾಂತೆಯಾದ ಸೀತಾದೇವಿಯ ದಿವ್ಯಾಭರಣಗಳನ್ನು ಹೇಗೆ ತೋರಿಸಿದೆಯೋ ಆ ರೀತಿಯಲ್ಲಿಯೇ ನನ್ನ ಪತ್ನಿಯಾದ ಸೀತಾದೇವಿಯನ್ನು ಅಪಹರಿಸಿಕೊಂಡು ಹೋದ ರಾಕ್ಷಸಾಧಮನಿರುವ ಸ್ಥಳವನ್ನೂ ತೋರಿಸಿದೆಯಾದರೆ, ಆ ರಾಕ್ಷಸನನ್ನು ಅವನ ಸಕಲಬಂಧುಗಳೊಡನೆ ಯಮಲೋಕಕ್ಕೆ ಕಳುಹಿಸುತ್ತೇನೆ. ರಾವಣನು ತನಗೆ ಮೃತ್ಯುಕಾಲವು ಬಂದದ್ದರಿಂದ ಇಂಥ ಅಕೃತ್ಯವನ್ನು ಮಾಡಿದನು. ಸುಗ್ರೀವ, ನನ್ನ ಕಾಂತೆಯಾದ ಸೀತಾದೇವಿಯನ್ನಪಹರಿಸಿಕೊಂಡು ಹೋದ ನನ್ನ ಶತ್ರುವಾದ ರಾವಣನಿರುವ ಸ್ಥಳವನ್ನು ಹೇಳು. ನಾನು ಅವನನ್ನು ಶೀಘ್ರದಲ್ಲಿಯೇ ಯಮಲೋಕವನ್ನೈದಿಸುತ್ತೇನೆ" ಎಂದು ಹೇಳಿದನು.



## ೭ ನೆಯ ಅಧ್ಯಾಯ

## ಶ್ರೀರಾಮನು ಸುಗ್ರೀವನಿಗೆ ಕೊಟ್ಟ ಅಭಯ

ಶ್ರೀರಾಮನು ಹೀಗೆ ಕೇಳಲು ಸುಗ್ರೀವನು ಆತನ ದೈನ್ಯವನ್ನು ನೋಡಿ ದುಃಖಾಕ್ರಾಂತನಾಗಿ ಕೈಮುಗಿದುಕೊಂಡು "ಶ್ರೀರಾಮ, ನೀಚಜನ್ಮದಲ್ಲಿ ಹುಟ್ಟಿದ ರಾವಣನ ಸಾಮರ್ಥ್ಯವನ್ನೂ ಅವನಿರುವ ಸ್ಥಳವನ್ನೂ ಅವನ ಸ್ವರೂಪವನ್ನೂ ನಾನರಿತವನಲ್ಲ. ಆದರೂ ನನ್ನ ಬುದ್ಧಿ

ಚಾತುರ್ಯದಿಂದ ಸೀತಾದೇವಿಯನ್ನರಸಿಕೊಂಡು ಬರುವೆನು. ನೀನು ನಿನ್ನ ಮನಸ್ಸಿನ ದುಃಖವನ್ನು ಬಿಟ್ಟು ಸ್ವಸ್ಥಚಿತ್ತನಾಗು. ನಿನ್ನಂತೆ ನಾನೂ ವಿಯೋಗಾರ್ತನಾಗಿದ್ದೇನೆ. ನನ್ನ ಹಿರಿಯಣ್ಣನಾದ ವಾಲಿಯಿಂದ ಅಪಹರಿಸಲ್ಪಟ್ಟ ಸ್ತ್ರೀಯನ್ನು ನೆನೆದು ದುಃಖಿಸದಿದ್ದೇನೆ. ಮಹಾತ್ಮನೂ ವಿನಯ ಧೈರ್ಯಾದಿಗುಣಸಂಪನ್ನನೂ ಆದ ನೀನು ಮನೋವ್ಯಥೆ ಬಂದರೂ ಶತ್ರುಗಳಿಂದ ಕಂಗೆಟ್ಟರೂ ಪ್ರಾಣ ಸಂಶಯವಾದ ಭಯಬಂದರೂ ಕಂಗೆಡಬಾರದು. ಶ್ರೀರಾಮ, ನಾನು ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ. ನನ್ನ ಮೇಲಿನ ಕೃಪೆಯಿಂದ ಧೈರ್ಯಗುಣವನ್ನಾಶ್ರಯಿಸಿ ಶೋಕವನ್ನು ಬಿಡು" ಎಂದು ಪ್ರಾರ್ಥಿಸಿಕೊಂಡನು.

ಹಾಗೆ ಸುಗ್ರೀವನಿಂದ ಸಂತವಿಡಲ್ಪಟ್ಟ ಶ್ರೀರಾಮನು ತನ್ನ ಉತ್ತರೀಯದ ಸೆರಗಿನಿಂದ ಕಣ್ಣೀರನ್ನು ಒರಸಿಕೊಂಡನು. ಆಮೇಲೆ ಸ್ವಸ್ಥಚಿತ್ತನಾಗಿ ಹರ್ಷದಿಂದ ಸುಗ್ರೀವನನ್ನು ತಬ್ಬಿಕೊಂಡು ಆತನನ್ನು ಕುರಿತು "ಸುಗ್ರೀವ, ನೀನು ನನ್ನನ್ನು ಈ ಪ್ರಕಾರದಲ್ಲಿ ಸಂತವಿಟ್ಟದ್ದರಿಂದ ನನ್ನ ಮನಸ್ಸಿಗೆ ಧೈರ್ಯವಾಯಿತು. ಆಪತ್ಕಾಲದಲ್ಲಿ ನನಗೆ ನಿನ್ನಂಥ ಸ್ನೇಹಿತನು ದೊರಕಿದ್ದು ಪುಣ್ಯಫಲ. ಇನು ನನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನರಸಿಕೊಂಡು ಬರುವುದಕ್ಕೆ ಯತ್ನಮಾಡು. ಈ ಕಾರ್ಯವು ನಿನ್ನಿಂದಲೇ ಸಾಧ್ಯವಾಗಬೇಕು. ಇನ್ನು ನಿನ್ನ ಕಾರ್ಯವೇನು? ಅದನ್ನು ನಿಶ್ಚಯವಾಗಿಯೂ ಸಾಧಿಸಿಕೊಡುತ್ತೇನೆ. ಈ ವಚನವು ಸತ್ಯವೆಂದು ತಿಳಿ. ನಾನು ಅಸತ್ಯವನ್ನು ನುಡಿಯುವವನಲ್ಲ. ನನ್ನ ಸತ್ಯಸಾಕ್ಷಿಯಾಗಿ ನಿನಗೊಂದು ಮಾತುಕೊಟ್ಟೆನು. ಆದ್ದರಿಂದ ಮೊದಲು ನಾನು ನಿನ್ನ ಕಾರ್ಯವನ್ನು ಸಾಧ್ಯಮಾಡಿ ಕೊಟ್ಟಮೇಲೆ ನೀನು ನನ್ನ ಕಾರ್ಯವನ್ನು ಸಾಧಿಸಬಹುದು" ಎಂದು ನುಡಿದನು.

ಆ ಮಾತನ್ನು ಕೇಳಿ ಸುಗ್ರೀವನು ಅತ್ಯಂತ ಸಂತೋಷಯುಕ್ತನಾಗಿ ತನ್ನ ನಾಲ್ವರು ಪ್ರಧಾನರನ್ನು ಕೂಡಿಕೊಂಡು ರಾಮಲಕ್ಷ್ಮಣರೊಡನೆ ಅನ್ಯೋನ್ಯ ಸುಖದುಃಖಾದಿಗಳನ್ನು ಮಾತನಾಡಿಕೊಂಡನು. ಶ್ರೀರಾಮನ ಮಾತನ್ನು ಕೇಳಿ ಸುಗ್ರೀವನು ತನ್ನ ಕಾರ್ಯವು ಸಾಧ್ಯವಾಗುವುದೆಂದು ಸಂತೋಷಪಟ್ಟನು. ಸುಗ್ರೀವನ ಮಾತನ್ನು ಕೇಳಿ ಶ್ರೀರಾಮನು ತನ್ನ ಕಾರ್ಯವು ಸಾಧ್ಯವಾಯಿತೆಂದು ಅತರಂಗದಲ್ಲಿ ಸಂತೋಷಿಸಿದನು.



## ೮ ನೆ ಯ ಅ ಧ್ಯಾ ಯ

## ವಾಲಿಯನ್ನು ವಧಿಸುತ್ತೇನೆಂದು ಶ್ರೀರಾಮನ ಪ್ರತಿಜ್ಞೆ

ಸುಗ್ರೀವನು ಶ್ರೀರಾಮನನ್ನು ಕುರಿತು "ಶ್ರೀರಾಮ, ನಿನ್ನಂಥ ಪರಮಪುರುಷನು ನನಗೆ ಸಖನಾದ್ದರಿಂದ ನನಗೆ ದೇವತಾಕೃಪೆಯುಂಟಾಯಿತು. ನಿನ್ನ ಸಹಾಯದಿಂದ ನನಗೆ ಸ್ವರ್ಗ ಲೋಕಾಧಿಪತ್ಯವಾದರೂ ಸಾಧ್ಯವಾಗುವುದು., ಇನ್ನು ಈ ಕಪಿರಾಜ್ಯಾಧಿಪತ್ಯ ಸಿಗುವುದರಲ್ಲಿ ಆಶ್ಚರ್ಯವೇನು? ನೀನು ನನಗೆ ಅಗ್ನಿಸಾಕ್ಷಿಯಾಗಿ ಮಿತ್ರನಾದ್ದರಿಂದ ನನ್ನ ಸಮಸ್ತಬಂಧುಗಳಲ್ಲಿಯೂ ಮಿತ್ರರಲ್ಲಿಯೂ ನಾನೇ ಭಾಗ್ಯವಂತನು. ನಾನು ನಿನಗೆ ಯೋಗ್ಯನಾದ ಸಖನೆಂದೆಣಿಸು. ನನ್ನ ಗುಣಗಳನ್ನು ಮುಂದೆ ಕಾಣುವೆ. ನನ್ನ ಸಾಮರ್ಥ್ಯವನ್ನೂ ನನ್ನ ಗುಣಕಥನಗಳನ್ನೂ ನಾನೇ ಹೇಳಿಕೊಳ್ಳಬಾರದು. ಲೋಕದಲ್ಲಿ ಮಹಾತ್ಮರಾದವರ ಮಿತ್ರತ್ವವು ದಿನದಿನಕ್ಕೂ ಅನ್ಯೋನ್ಯ

ಪ್ರೀತಿಯನ್ನುಂಟುಮಾಡುವುದಲ್ಲದೆ ಹಾನಿಯನ್ನುಂಟುಮಾಡದು. ಸತ್ಪುರುಷರು ಸತ್ಪುರುಷರ ಮಿತ್ರತ್ವವನ್ನು ಬಯಸುವರಲ್ಲದೆ ಚಿನ್ನ ಬೆಳ್ಳಿ ರತ್ನಾಭರಣಗಳನ್ನು ಬಯಸರು. ಐಶ್ವರ್ಯವಂತನಾದರೂ ದರಿದ್ರನಾದರೂ ದುಃಖಿಯಾದರೂ ಸುಖಿಯಾದರೂ ಕ್ಷಮೆಯುಳ್ಳವನಾಗಿ ಕಪಟವಿಲ್ಲದಿರುವ ಸ್ನೇಹಿತನೇ ಪರಗತಿಸಾಧನನೆಂದು ಸತ್ಪುರುಷರು ತಿಳಿಯುತ್ತಾರೆ. ಶ್ರೀರಾಮ, ಮಹಾತ್ಮರು ಸ್ನೇಹಿತರ ಕಾರ್ಯನಿಮಿತ್ತವಾಗಿ ಧನವನ್ನಾದರೂ ಬಿಡುವರು. ಕಡೆಗೆ ಸ್ನೇಹನಿಮಿತ್ತವಾಗಿ ದೇಶತ್ಯಾಗವನ್ನಾದರೂ ಮಾಡುವರು. ಶ್ರೀರಾಮ, ನನಗೆ ನನ್ನ ಭಾಗ್ಯವಶದಿಂದ ನಿನ್ನ ಸ್ನೇಹವು ಸಂಭವಿಸಿತು " ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು " ಸುಗ್ರೀವ, ಹೌದು " ಎಂದು ಸಂತೋಷಪಟ್ಟು ಸುಗ್ರೀವ ನೊಡನೆ ಅನೇಕ ಪ್ರಿಯವಚನಗಳನ್ನು ನುಡಿಯತೊಡಗಿದನು. ಆಮೇಲೆ ಸುಗ್ರೀವನು ಇಕ್ಕೆಲದಲ್ಲಿದ್ದ ವೃಕ್ಷಗಳನ್ನು ನೋಡಿ ಸಮೀಪದಲ್ಲಿ ಪಲ್ಲವಿತವೂ ಪುಷ್ಪಿತವೂ ಆದ ಮರದ ಕಿರುಗೊಂಬೆಗಳನ್ನು ಮುರಿದು ಶ್ರೀರಾಮನಿಗೆ ಆಸನವನ್ನು ಮಾಡಿ ಕುಳ್ಳಿರಿಸಿ ತಾನೂ ಕುಳಿತುಕೊಂಡನು. ಹನುಮಂತನೂ ಮನೋಹರವಾಗಿದ್ದ ತಳಿರುಗಳುಳ್ಳ ಕೊಂಬೆಗಳನ್ನು ಮುರಿದು ಲಕ್ಷ್ಮಣನಿಗೆ ಕುಳ್ಳಿರ ಹೇಳಿದನು. ಈ ಪ್ರಕಾರ ರಾಮಲಕ್ಷ್ಮಣರು ಸ್ವಸ್ಥಚಿತ್ತರಾಗಿ ಕುಳಿತುಕೊಂಡಿರುವ ಸಮಯದಲ್ಲಿ ಸುಗ್ರೀವನು ಶ್ರೀರಾಮನನ್ನು ಕುರಿತು ವಿನಯಯುಕ್ತವಾದ ಮೃದುನುಡಿಯಿಂದ "ಶ್ರೀರಾಮ, ನಾನು ನನ್ನ ಅಣ್ಣನಾದ ವಾಲಿಯಿಂದ ಪರಾಜಿತನಾದೆನು. ಅದಲ್ಲದೆ ವಾಲಿಯು ನನ್ನ ಸ್ತ್ರೀಯನ್ನು ಅಪಹರಿಸಿದನು. ಅದರಿಂದ ನಾನು ದುಃಖಾಕ್ರಾಂತನಾಗಿ ಆತನಿಗೆ ಅಂಜಿಕೊಂಡು ಭಯದಿಂದ ಕಂಗೆಟ್ಟು ಋಷ್ಯಮೂಕಪರ್ವತದಲ್ಲಿ ಸಂಚರಿಸಿಕೊಂಡಿದ್ದೇನೆ. ಎಲೈ ಲೋಕನಾಯಕನಾದ ಶ್ರೀರಾಮನೆ, ವಾಲಿಯಿಂದ ಭಯಪಟ್ಟಿರುವ ನನ್ನ ಭಯವನ್ನು ಪರಿಹರಿಸಿ ರಕ್ಷಿಸುವುದಕ್ಕೆ ನೀನೇ ಸಮರ್ಥನಲ್ಲದೆ ಮತ್ತೊಬ್ಬರಲ್ಲ " ಎಂದು ನುಡಿದನು.

ಆ ಮಾತನ್ನು ಕೇಳಿ ಧರ್ಮಜ್ಞನಾದ ಶ್ರೀರಾಮನು ನಸುನಗುತ್ತ ಸುಗ್ರೀವನನ್ನು ಕುರಿತು " ಸುಗ್ರೀವ, ಲೋಕದಲ್ಲಿ ಮಿತ್ರತ್ವಕ್ಕೆ ಉಪಕಾರವೇ ಫಲ. ಮಿತ್ರರಿಗೆ ಅಪಕಾರಮಾಡುವುದೇ ದುರ್ಗುಣ. ನಾನು ನಿನಗೆ ಮಿತ್ರನಾದ್ದರಿಂದ, ನಿನ್ನ ಸ್ತ್ರೀಯನ್ನಪಹರಿಸಿದ ವಾಲಿಯನ್ನು ಸಂಹರಿಸು ವುದೇ ನಿನಗೆ ಮಾಡುವ ಉಪಕಾರ. ಈ ನನ್ನ ಶರಗಳನ್ನು ನೋಡು. ಇವು ಕುಮಾರಸ್ವಾಮಿಯಾದ ಷಣ್ಮುಖನಿರುವ ಶರವಣದಲ್ಲಿ ಹುಟ್ಟಿದವು. ಸರ್ಪದಂತೆ ಅತಿಭಯಂಕರವಾಗಿವೆ. ದೇವೇಂದ್ರನ ವಜ್ರಾಯುಧದಂತೆ ಅತ್ಯಂತ ಬಲವುಳ್ಳವು. ಇಂಥ ಬಾಣಗಳಿಂದ, ದೇವೇಂದ್ರನು ವಜ್ರಾಯುಧದಿಂದ ಪರ್ವತವನ್ನು ಚೂರ್ಣಮಾಡಿದಂತೆ ನಿನಗೆ ಅಪರಾಧವನ್ನು ಮಾಡಿದ ವಾಲಿಯನ್ನು ಕೊಲ್ಲುವೆನು " ಎಂದು ನುಡಿದನು.

ಸುಗ್ರೀವನು ಅತ್ಯಂತಹರ್ಷಯುಕ್ತನಾಗಿ " ಶ್ರೀರಾಮ, ಲೋಕದಲ್ಲಿ ದುಃಖದಿಂದ ನೊಂದವರನ್ನು ನೀನೇ ರಕ್ಷಿಸಬೇಕು. ನೀನು ನನಗೆ ಪ್ರಾಣಮಿತ್ರನೆಂದು ನಿನ್ನೊಡನೆ ನನ್ನ ದುಃಖವನ್ನು ಹೇಳಿಕೊಳ್ಳುತ್ತಿದ್ದೇನೆ. ನೀನು ನನಗೆ ಅಗ್ನಿಸಾಕ್ಷಿಕವಾಗಿ ' ಅಂಜಬೇಡ ' ಎಂದು ನಿನ್ನ ಬಲಗೈಯಿಂದ ನನ್ನ ಕೈಹಿಡಿದು ಮಿತ್ರನಾಗಿದ್ದೀಯೆ. ನಾನು ನನ್ನ ನಾಕ್ಷಿಯಾಗಿ ನೀನು ನನ್ನ ಪರಮಾಪ್ತನೆಂದು ನನ್ನ ಅಂತರಂಗಸ್ಥಿತಿಯನ್ನು ಹೇಳುತ್ತೇನೆ. ನನ್ನ ದುಃಖವು ನನ್ನ ಮನಸ್ಸನ್ನು ದಹಿಸುತ್ತಲಿದೆ " ಎಂದು ನುಡಿದು ಕಣ್ಣೀರು ತುಂಬಲು ಮಾತನಾಡುವುದಕ್ಕೆ ಶಕ್ತಿಯಿಲ್ಲದೆ ಧೈರ್ಯದಿಂದ, ನದೀಪ್ರವಾಹವನ್ನು ತಡೆಯುವ ತಡಿಯಂತೆ ಕಣ್ಣೀರ ವೇಗವನ್ನು ತಡೆದು ಬಿಸುಸುಯ್ದನು. ಅನಂತರ ಅತ್ಯಂತ ತೇಜಸ್ವಿ

ಯೂದ ಶ್ರೀರಾಮನನ್ನು ಕುರಿತು ಹೀಗೆಂದನು : “ ಶ್ರೀರಾಮ, ಬಲವಂತನಾದ ವಾಲಿಯು ತನ್ನ ಬಲಗರ್ವದಿಂದ ನನ್ನನ್ನು ಬೆದರಿಸಿ ಅನೇಕ ನಿಷ್ಠುರವಚನಗಳನ್ನು ನುಡಿದು ನನ್ನ ಪ್ರಾಣಕಾಂತೆಯನ್ನು ಅಪಹರಿಸಿಕೊಂಡು ನನ್ನನ್ನು ರಾಜ್ಯಭ್ರಷ್ಟನನ್ನಾಗಿಮಾಡಿ ಹೊರಡಿಸಿರುವನು. ನನಗನುಕೂಲರಾಗಿದ್ದ ಕಪಿಗಳನ್ನು ಸೆರೆಹಾಕಿದನು. ಈಗಲೂ ನನ್ನನ್ನು ಕಂಡರೆ ಸಂಹರಿಸಬೇಕೆಂದೇ ಯತ್ನಮಾಡಿ ಕೊಂಡಿದ್ದಾನೆ. ನಾನು ಆತನ ಕಡೆಯವರಾದ ಬಹುಮಂದಿ ವಾನರರನ್ನು ಕೊಂದೆನು. ಆದ್ದರಿಂದ ಆತನು ಮೋಸದಿಂದ ಯಾರನ್ನಾದರೂ ಕಳುಹಿಸಿ ಕೊಲ್ಲಿಸುವನೆಂಬ ಶಂಕೆಯಿಂದ ನಿಮ್ಮನ್ನು ಕಂಡು ಸಮೀಪಕ್ಕೆ ಬರದೆ ಭೀತಿಯಿಂದಿದ್ದೆನು. ಲೋಕದಲ್ಲಿ ಭಯವು ಬಂದರೆ ಕಂಗೆಡದಿರುವವನಾರು ? ಹನುಮಂತನೇ ಮೊದಲಾದ ಈ ನಾಲ್ಕು ಕಪಿಗಳು ನನ್ನನ್ನು ರಕ್ಷಿಸಿಕೊಂಡಿರುವುದರಿಂದ ನಾನು ಈ ಋಷ್ಯಮೂಕಪರ್ವತದಲ್ಲಿ ಅತ್ಯಂತ ಪ್ರಯಾಸದಿಂದ ಪ್ರಾಣವಿಡಿದಿದ್ದೇನೆ. ಇವರು ಯಾವಾಗಲೂ ನನ್ನ ಸಮೀಪದಲ್ಲಿರುವರು. ಇದು ನನ್ನ ವೃತ್ತಾಂತ. ಇದನ್ನು ಸಂಕ್ಷೇಪವಾಗಿ ಹೇಳಿದೆನು. ನನ್ನ ಅಣ್ಣನಾದ ವಾಲಿಯೇ ನನಗೆ ಶತ್ರು. ಆತನು ನಾಶವಾದಂದಿಗೆ ನನ್ನ ದುಃಖವು ಶಮನವಾಗು ವುದು. ನನ್ನ ದುಃಖವು, ವಾಲಿಯು ಜೀವಂತನಾಗಿರುವಷ್ಟು ಕಾಲವೂ ಹೋಗದು. ಇದನ್ನು ದುಃಖಾತಿಶಯದಿಂದ ಹೇಳುತ್ತೇನೆ. ಲೋಕದಲ್ಲಿ ದುಃಖಿಯಾದವನಿಗೂ ಸುಖಿಯಾದವನಿಗೂ ಸಖನೇ ಪ್ರಾಣರಕ್ಷಕನು ” ಎಂದು ಸುಗ್ರೀವನು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು “ ಸುಗ್ರೀವ, ನಿಮ್ಮಿಬ್ಬರಿಗೂ ಇಂಥ ವೈರವು ಬರಲು ಕಾರಣವೇನು ? ಕಾರಣವನ್ನು ನಾನು ತಿಳಿದು ಮುಂದಿನ ಕರ್ತವ್ಯವನ್ನು ನಿಶ್ಚಯಿಸುತ್ತೇನೆ. ನಿನಗೆ ವಾಲಿಯು ಮಾಡಿದ ಅವಮಾನವನ್ನು ಕೇಳಿ ನನ್ನ ಎದೆ ನಡುಗುತ್ತದೆ. ವರ್ಷಕಾಲದ ಮೇಘದಿಂದ ಜಲಪ್ರವಾಹವು ಹೆಚ್ಚಾಗುವಂತೆ ಪ್ರತಿನಿಮಿಷದಲ್ಲಿಯೂ ನನ್ನ ಕೋಪವು ಹೆಚ್ಚುತ್ತಿದೆ. ಸುಗ್ರೀವ, ನಾನು ಬಿಲ್ಲಿಗೆ ಹೆದೆಯನ್ನೇರಿಸುವುದಕ್ಕೆ ಮೊದಲೇ ನಿನ್ನ ವೃತ್ತಾಂತವನ್ನು ಹೇಳು. ನನ್ನ ಬಾಣಗಳನ್ನು ನೋಡಿದೆಯಲ್ಲ! ಇನ್ನು ನಿನ್ನ ಶತ್ರುವಾದ ವಾಲಿಯು ಹತನಾಗುವನೆಂದು ನಂಬು ” ಎಂದು ನುಡಿದನು.



## ೯ನೆಯ ಅಧ್ಯಾಯ

## ವಾಲಿಸುಗ್ರೀವರಿಗೆ ವಿರೋಧವು ಬಂದ ವೃತ್ತಾಂತ

ಅನಂತರ ಸುಗ್ರೀವನು ಶ್ರೀರಾಮನಿಗೆ ತನಗೂ ವಾಲಿಗೂ ವೈರವು ಬಂದದ್ದಕ್ಕೆ ಕಾರಣವನ್ನು ವಿಸ್ತಾರವಾಗಿ ನಿರೂಪಿಸಿದನು : “ ಶ್ರೀರಾಮ, ನನ್ನ ಅಣ್ಣನಾದ ವಾಲಿಯು ಮಹಾಬಲವಂತನು. ಮಹಾಪರಾಕ್ರಮಿ. ಸಮಸ್ತ ಶತ್ರುಗಳನ್ನೂ ಜಯಿಸಿದವನು. ನಮ್ಮ ತಂದೆಗೆ ಬಹು ಅನುಕೂಲ ನಾದವನು. ಮೊದಲು ನನಗೂ ಅತ್ಯಂತ ಇಷ್ಟನಾಗಿದ್ದವನು. ನಮ್ಮ ತಂದೆಯು ಸ್ವರ್ಗಸ್ಥನಾದ ಮೇಲೆ ಮಂತ್ರಿಗಳೆಲ್ಲರೂ ಕೂಡಿ ವಾಲಿಯು ಜ್ಯೇಷ್ಠಪುತ್ರನೆಂದು ಆತನಿಗೆ ಪಟ್ಟವನ್ನು ಕಟ್ಟಿ ಕಪಿರಾಜ್ಯಾಧಿಪತ್ಯವನ್ನು ಕೊಟ್ಟರು. ಆತನು ಪರಂಪರಾಗತವಾಗಿ ಬಂದ ನಮ್ಮ ರಾಜ್ಯಾಧಿಪತ್ಯವನ್ನು ಪರಿಪಾಲಿಸಿಕೊಂಡಿರಲು ನಾನು ಆತನು ಹೇಳಿದಂತೆ ಕೇಳಿಕೊಂಡು ಆತನ ಸೇವಕನ ಹಾಗಿದ್ದೆನು. ಕೆಲವು ದಿವಸಗಳಾದ ಮೇಲೆ ಒಂದು ದಿನ ದುಂದುಭಿ ಎಂಬ ರಾಕ್ಷಸನ ಮಗನಾದ ಮಾಯಾವಿ

ಎಂಬವನು ವಾಲಿಯೊಡನೆ ವೈರವನ್ನು ಬೆಳಸಿ ಆತನಿಗೆ ಅನೇಕ ಉಪದ್ರವಗಳನ್ನು ಮಾಡ ತೊಡಗಿದನು. ಆಗ ಒಂದು ದಿನ ಸಮಸ್ತ ಪ್ರಾಣಿಗಳೂ ಪ್ರೈಮರೆತು ನಿದ್ರೆಮಾಡುತ್ತಿದ್ದ ಅರ್ಧರಾತ್ರಿಯ ಸಮಯದಲ್ಲಿ ಕಿಷ್ಕಿಂಧಾಪಟ್ಟಣಕ್ಕೆ ಬಂದು ಆ ಪಟ್ಟಣದ ಬಾಗಿಲನ್ನು ಅಡ್ಡಗಟ್ಟಿ ಬೊಬ್ಬಿಟ್ಟು ಕೂಗಿ ವಾಲಿಯನ್ನು ಯುದ್ಧಕ್ಕೆ ಬರಹೇಳಿದನು. ಮಲಗಿದ್ದ ವಾಲಿಯು ಮಾಯಾವಿಯ ಭಯಂಕರವಾದ ಧ್ವನಿಯನ್ನು ಕೇಳಿ ಸಹಿಸಲಾರದೆ ಎದ್ದು ಅತ್ಯಂತ ಕೋಪಯುಕ್ತನಾಗಿ ಆ ರಾಕ್ಷಸ ನನ್ನು ಸಂಹರಿಸುವುದಕ್ಕಾಗಿ ಹೊರಟು ಬಂದನು. ನಾನು ನಮಸ್ಕಾರವನ್ನು ಮಾಡಿ ತಡೆದು ಬೇಡಿ ಕೊಂಡರೂ ಸ್ತ್ರೀಯರು ತಡೆದು ನಿಲ್ಲಿಸಿದರೂ ನಿಲ್ಲದೆ ನಮ್ಮನ್ನು ನೂಕಿಬಿಟ್ಟು ಕೋಪಾಟೋಪದಿಂದ ಅತಿವೇಗವಾಗಿ ಹೋಗುತ್ತಿದ್ದನು. ಹಿರಿಯಣ್ಣನೆಂಬ ವ್ಯಾಮೋಹದಿಂದ ನಾನು ಆತನ ಹಿಂದೆ ಹೋದೆನು. ಮಾಯಾವಿಯು ವಾಲಿಯನ್ನೂ ನನ್ನನ್ನೂ ನೋಡಿ ಅತಿಭಯದಿಂದ ಕಂಗೆಟ್ಟು ಓಡುತ್ತಿರಲು ನಾವಿಬ್ಬರೂ ಕಾಡುಮೇಡೆನ್ನದೆ ಅವನನ್ನು ಹಿಂದಟ್ಟಿಕೊಂಡು ಹೋದೆವು. ನಾವು ಹೋದ ಮಾರ್ಗವು ಚಂದ್ರನಿಂದ ಪ್ರಕಾಶಮಾನವಾಗಲು ಮಾಯಾವಿಯು ಅತಿ ವೇಗದಿಂದ ಒಂದು ಅತ್ಯಂತ ಘೋರಾರಣ್ಯವನ್ನು ಹೊಕ್ಕು ಅಲ್ಲಿದ್ದ ಗುಹೆಯೊಂದನ್ನು ಪ್ರವೇಶಿಸಿದನು. ವಾಲಿಯು ಆ ಗುಹೆಯನ್ನು ನೋಡಿ ಅತ್ಯಂತ ಕೋಪಕೆರಳಿ ನನ್ನನ್ನು ಕುರಿತು ' ಎಲೈ ಸುಗ್ರೀವ, ನೀನು ಈ ಗುಹೆಯ ಬಾಗಿಲನ್ನು ಕಾದುಕೊಂಡು ಜತನವಾಗಿರು ನಾನು ಗುಹೆಯ ಒಳ ಹೊಕ್ಕು ನನ್ನ ಶತ್ರುವಾದ ಮಾಯಾವಿಯನ್ನು ಕೊಂದು ಬರುತ್ತೇನೆ. ನಾನು ತಿರುಗಿ ಬರುವವರೆಗೂ ಜಾಗರೂಕನಾಗಿರು ' ಎಂದು ಹೇಳಿದನು. ಆಗ ನಾನು ಸರ್ವಥಾ ಅಂಧಕಾರಯುಕ್ತವಾದ ಆ ಗುಹೆಯನ್ನು ಪ್ರವೇಶಿಸುವುದು ಸರಿಯಲ್ಲವೆಂದು ವಾಲಿಯ ಪಾದಗಳನ್ನು ಮುಟ್ಟಿ ಬೇಡಿಕೊಂಡೆನು. ಅವನು ಕೋಪಾಟೋಪದಿಂದ ನನ್ನನ್ನು ಕಾಲಿಂದ ಒದ್ದು ಆ ಬಿಲವನ್ನು ಪ್ರವೇಶಿಸಿದನು. ಆ ಬಳಿಕ ಆತನು ಬರುವನೆಂದು ಒಂದು ವರುಷದವರೆಗೆ ಅಲ್ಲಿಯೇ ಕಾದುಕೊಂಡಿದ್ದೆನು. ಆಮೇಲೂ ಬಾರದಿರಲು ಆತನು ಏನಾದನೋ ಎಂದು ಮತ್ತೂ ಕೆಲವು ದಿವಸಗಳವರೆಗೆ ಸಂಶಯದಿಂದ ಕಾದಿದ್ದೆನು. ಆ ಸಮಯದಲ್ಲಿ ಆ ಗುಹೆಯ ಬಾಗಿಲಿಂದ ನೊರೆಗೂಡಿದ ರಕ್ತಪ್ರವಾಹವು ಬಂದಿತು ಅದನ್ನು ಕಂಡು ಗುಹೆಯೊಳಗುಂಟಾದ ಕೋಲಾಹಲಧ್ವನಿಯನ್ನೂ ಬೊಬ್ಬಿಡುತ್ತಿದ್ದ ರಾಕ್ಷಸ ಧ್ವನಿಯನ್ನೂ ಕೇಳಿ ವಾಲಿಯು ಪರಲೋಕವನ್ನೈದಿದನೆಂದೆಣಿಸಿ ದೊಡ್ಡ ಪರ್ವತಕ್ಕೆ ಸಮಾನವಾದ ಒಂದು ಕಲ್ಲನ್ನು ಆ ಗುಹೆಯ ಬಾಗಿಲಲ್ಲಿ ಚಾಚಿ ಅತ್ಯಂತ ದುಃಖಾಕ್ರಾಂತನಾಗಿ ವಾಲಿಗೆ ಉತ್ತರಕ್ರಿಯೆ ಗಳನ್ನು ಮಾಡಿ ಕಿಷ್ಕಿಂಧಾಪಟ್ಟಣಕ್ಕೆ ಬಂದು ಲಜ್ಜಿತನಾಗಿ ಒಂದು ದಿಕ್ಕಿನಲ್ಲಿ ಮರೆಯಾಗಿದ್ದೆನು ಆಗ ಮಂತ್ರಿಗಳೆಲ್ಲರೂ ಕೂಡಿ ರಾಜ್ಯಕ್ಕೆ ಅರಸನಿಲ್ಲದಿರಬಾರದೆಂದು ಮಂತ್ರಾಲೋಚನೆಯನ್ನು ಮಾಡಿ ನನಗೆ ಪಟ್ಟವನ್ನು ಕಟ್ಟಿದರು. ನಾನು ಧರ್ಮದಿಂದ ರಾಜ್ಯಪರಿಪಾಲನವನ್ನು ಮಾಡಿ ಕೊಂಡಿದ್ದೆನು. ಹಾಗಿರುವಲ್ಲಿ ಗುಹೆಯನ್ನು ಹೊಕ್ಕ ವಾಲಿಯು ಶತ್ರುವಾದ ಮಾಯಾವಿಯನ್ನು ಕೊಂದು ಕಿಷ್ಕಿಂಧಾಪಟ್ಟಣಕ್ಕೆ ಬಂದು, ರಾಜ್ಯಪರಿಪಾಲನಮಾಡುತ್ತಿದ್ದ ನನ್ನನ್ನು ನೋಡಿ ಅತ್ಯಂತ ಕೋಪಯುಕ್ತನಾಗಿ ಮಂತ್ರಿಗಳನ್ನು ಬಹು ನಿಷ್ಠುರವಚನಗಳಿಂದ ದೂಷಿಸಿದನು. ಶ್ರೀರಾಮ, ನಾನು ಆತನಿಗೆ ವಿನಯದಿಂದ ಕಾಲುಮುಟ್ಟಿ ವಂದನೆಮಾಡಿ ನಡೆದ ವೃತ್ತಾಂತವನ್ನು ವಿವರಿಸಿದೆನು. ಆದರೆ ವಾಲಿಯು ಪ್ರಸನ್ನನಾಗಲಿಲ್ಲ."



## ೧೦ ನೆಯ ಅಧ್ಯಾಯ

## ವಾಲಿಯು ಸುಗ್ರೀವನನ್ನು ರಾಜ್ಯದಿಂದ ಹೊರಡಿಸಿದ ವೃತ್ತಾಂತ

" ಶ್ರೀರಾಮ, ಈ ರೀತಿಯಲ್ಲಿ ಅತ್ಯಂತ ಕೋಪಯುಕ್ತನಾದ ವಾಲಿಗೆ ಕೋಪಶಾಂತಿಯಾಗುವಂತೆ ನಾನು ಪ್ರಿಯೋಕ್ತಿಯಿಂದ ಸಂತವಿಟ್ಟು ಹೀಗೆಂದೆನು ' ಅಣ್ಣ, ಭಾಗ್ಯವಶದಿಂದ ನೀನು ವೈರಿಯನ್ನು ಜಯಿಸಿ ಬಂದೆ. ನಾನು ಕೃತಾರ್ಥನಾದೆನು. ಅನೇಕ ಸಲಾಕೆಗಳಿಂದ ನಿರ್ಮಿಸಲ್ಪಟ್ಟು ಪೂರ್ಣಚಂದ್ರನಂತೆ ಬೆಳಗುತ್ತಿರುವ ರಾಜಚಿಹ್ನೆಗಳಾದ ಈ ಶ್ವೇತಚ್ಛತ್ರವನ್ನೂ ಚಾಮರಗಳನ್ನೂ ಅಂಗೀಕರಿಸು ನೀನು ಬಹುದಿವಸ ಗುಹೆಯಲ್ಲಿ ಸಂಚರಿಸಿ ಕಷ್ಟಪಟ್ಟಿದ್ದೀಯೆ. ನಾನು ನಿನ್ನ ಮಾತನ್ನು ಮೀರದೆ ಒಂದು ವರುಷದವರೆಗೆ ಗುಹೆಯ ಬಾಗಿಲನ್ನು ಕಾದುಕೊಂಡಿದ್ದು ಆಮೇಲೆ ಗುಹೆಯ ಬಾಗಿಲಿಂದ ರಕ್ತಪ್ರವಾಹವು ಬರುತ್ತಿದ್ದುದನ್ನು ಕಂಡು ಅತಿದುಃಖಾಕ್ರಾಂತನಾಗಿ ದೊಡ್ಡ ಪರ್ವತದ ಕೋಡುಗಲ್ಲಿನಂತಿದ್ದ ಒಂದು ಕಲ್ಲನ್ನು ಆ ಗುಹೆಯ ಬಾಗಿಲಿಗೆ ಮರೆಮಾಡಿ ಇಲ್ಲಿಗೆ ಬಂದೆನು. ಆಗ ಪ್ರಧಾನರೆಲ್ಲರೂ ಕೂಡಿ ರಾಜ್ಯಕ್ಕೆ ಅರಸನಿಲ್ಲದಿರಕೂಡದೆಂದು ನನಗೆ ಕಪಿನಾಯಕಪಟ್ಟವನ್ನು ಕಟ್ಟಿ ಕಿಷ್ಕಿಂಧೆಯ ರಾಜ್ಯಭಾರವನ್ನು ಒಪ್ಪಿಸಿದರು. ನಾನು ಮಾಡಿದ ಪುಣ್ಯದಿಂದ ನೀನು ಜಯವನ್ನು ಪಡೆದು ಬಂದದ್ದು ಚೆನ್ನಾಯಿತು ನೀನು ಮೊದಲಿನಂತೆಯೇ ರಾಜ್ಯಪರಿಪಾಲನವನ್ನು ಮಾಡು. ನೀನಿಲ್ಲದಿದ್ದ ಕಾರಣ ನಾನು ಈ ರಾಜ್ಯವನ್ನು ಪರಿಪಾಲನೆಮಾಡಿಕೊಂಡಿದ್ದೆನು. ಈ ರಾಜ್ಯ ದುರ್ಗ ಬಲ ಕೋಶ ಪ್ರಧಾನರಿಂದ ಸಹಿತವಾದ ಸಮಸ್ತಾಧಿಪತ್ಯವನ್ನೂ ನಿನಗೆ ತಿರುಗಿ ಕೊಟ್ಟಿರುವೆನು. ನಿನಗೆ ನನ್ನಲ್ಲಿ ನಿಷ್ಕಾರಣವಾಗಿ ರೋಷವು ಬೇಡ. ನಾನು ನಿನಗೆ ಕೈಮುಗಿದು ಸಾಷ್ಟಾಂಗವೆರಗಿ ಬೇಡಿಕೊಳ್ಳುತ್ತೇನೆ. ಮಂತ್ರಿಗಳೂ ಪ್ರಜೆಗಳೂ ಸೇರಿ ಬಲಾತ್ಕಾರದಿಂದ ನನಗೆ ರಾಜ್ಯಾಧಿಪತ್ಯವನು. ಕೊಟ್ಟರು. ಈ ರಾಜ್ಯದಲ್ಲಿ ನೀನೂ ಇಲ್ಲದೆ ನಾನೂ ಇಲ್ಲದೆ ಸುಮ್ಮನಿರಬಾರದೆಂದು ಮಂತ್ರಾಲೋಚನೆ ಮಾಡಿ ಸಚಿವರು ರಾಜ್ಯವನ್ನು ನನ್ನ ವಶಮಾಡಿದರು. ಈ ರಾಜ್ಯವನ್ನು ನೀನೇ ಪರಿಪಾಲಿಸಿಕೊಂಡಿರು ' ಎಂದುಅತಿ ವಿನಯದಿಂದ ಹೇಳಿದೆನು.

ವಾಲಿಯು ನನ್ನನ್ನು ಬಹು ನಿಷ್ಠುರವಾಗಿ ನುಡಿದು ಮಂತ್ರಿಗಳನ್ನೂ ಸ್ನೇಹಿತರನ್ನೂ ಕರೆದು ಅವರ ಮಧ್ಯದಲ್ಲಿ ನನ್ನನ್ನು ದಂಡಿಸಿ ಆಡಬಾರದ ನುಡಿಗಳನ್ನಾಡಿ ಹೀಗೆಂದನು : ' ಎಲೈ ಮಂತ್ರಿಗಳಿರಾ, ನೀವೆಲ್ಲರೂ ಬಲ್ಲಿರಷ್ಟೆ. ಅರ್ಧರಾತ್ರಿಯ ಸಮಯದಲ್ಲಿ ಮಾಯಾವಿಯು ಈ ಪಟ್ಟಣದ ಬಾಗಿಲಲ್ಲಿ ಬಂದು ನಿಂತುಕೊಂಡು ನನ್ನನ್ನು ಯುದ್ಧಕ್ಕೆ ಬರಹೇಳಿ ಕರೆದನು. ನಾನು ಆ ಅಸುರನ ಭಯಂಕರವಾದ ಧ್ವನಿಯನ್ನು ಕೇಳಿ ಅರಮನೆಯಿಂದ ಹೊರಟು ಆತನನ್ನು ಅಟ್ಟಿಕೊಂಡು ಹೋಗುತ್ತಿರಲು ಪಾಪಿಷ್ಠನಾದ ಈ ಸುಗ್ರೀವನು ನನ್ನೊಡನೆ ಬಂದನು. ನಮ್ಮಿಬ್ಬರನ್ನು ನೋಡಿ ಮಾಯಾವಿಯು ಭಯಪಟ್ಟು ವೇಗದಿಂದ ಓಡಿಹೋಗಿ ಒಂದು ಗುಹೆಯನ್ನು ಹೊಕ್ಕನು. ನಾನು ಆ ಗುಹೆಯನ್ನು ಹೊಕ್ಕಾದರೂ ಅವನನ್ನು ಕೊಂದು ತಿರುಗಿಬರಬೇಕೆಂದು ಪ್ರತಿಜ್ಞೆಯನ್ನು ಮಾಡಿ, ನಾನು ತಿರುಗಿಬರುವವರೆಗೆ ಆ ಗುಹೆಯ ಬಾಗಿಲನ್ನು ಕಾದುಕೊಂಡಿರಲು ಆಜ್ಞೆಮಾಡಿ, ಇವನನ್ನು ಗುಹೆಯ ಬಾಗಿಲಲ್ಲಿರಿಸಿ ಗುಹೆಯೊಳಕ್ಕೆ ಹೋದೆನು. ಅಲ್ಲಿ ಆ ರಾಕ್ಷಸರನ್ನು ಅರಸಿಕೊಂಡು ಹೋಗಿ ಆತನನ್ನು ಕೊಂದೆನು. ಅಷ್ಟರೊಳಗೆ ಒಂದು ವರುಷವು ಕಳೆಯಿತು. ಆ ರಾಕ್ಷಸನ ರಕ್ತ[illegible] ಆ ಗುಹೆಯನ್ನು ತುಂಬಿಕೊಂಡು ಬಾಗಿಲಲ್ಲಿ ಹೊರಹೊಮ್ಮಿಬಂದಿತು. ಆಮೇಲೆ ನಾನು ಹೊರ[illegible]

ಬರಲು ಯತ್ನಿಸಿ ಬಾಗಿಲಲ್ಲಿ ದೊಡ್ಡ ಶಿಲೆಯು ಇದ್ದುದರಿಂದ 'ಸುಗ್ರೀವಾ—ಸುಗ್ರೀವಾ' ಎಂದು ಬಹಳವಾಗಿ ಕೂಗಿಕೊಂಡೆನು. ಪ್ರತಿವಚನವನ್ನು ಕೇಳದೆ ಮನಸ್ಸಿನಲ್ಲಿ ಬಹುದುಃಖಪಟ್ಟು ಕಾಲಲ್ಲಿ ಒದೆಯಲು ಆ ಬಾಗಿಲಲ್ಲಿದ್ದ ಕಲ್ಲು ಉರುಳಿಹೋಯಿತು. ಆಮೇಲೆ ನಾನು ಆ ಬಾಗಿಲಿನಿಂದ ಹೊರಟುಬಂದೆನು. ಸುಗ್ರೀವನು ನನ್ನ ರಾಜ್ಯವನ್ನು ಬಯಸಿ ಗುಹೆಯಲ್ಲಿ ಹೊಕ್ಕ ನಾನು ತಿರುಗಿ ಬಾರದಹಾಗೆ ಗುಹೆಯ ಬಾಗಿಲಿಗೆ ದೊಡ್ಡಗುಂಡುಕಲ್ಲನ್ನು ಚಾಚಿದನು' ಎಂದು ಪ್ರಧಾನರೊಡನೆಯೂ ಸಮಸ್ತ ಪರಿಜನ ಪುರಜನರೊಡನೆಯೂ ನುಡಿದು ಅತ್ಯಂತ ಕೋಪಯುಕ್ತನಾಗಿ ತಾನೇ ಸಮಸ್ತ ರಾಜ್ಯವನ್ನೂ ಆಕ್ರಮಿಸಿ ನನ್ನ ಸ್ತ್ರೀಯನ್ನೂ ಅಪಹರಿಸಿಕೊಂಡನು.

ಆಮೇಲೆ ಆತನ ದ್ವೇಷಬುದ್ಧಿಯನ್ನು ಕಂಡು ನಾನು ಕಿಷ್ಕಿಂಧಾಪಟ್ಟಣದಲ್ಲಿರುವುದಕ್ಕೆ ಭಯಪಟ್ಟೆನು. ನನ್ನ ಸ್ತ್ರೀಯನ್ನು ಅಪಹರಿಸಿದನೆಂಬ ದುಃಖದಿಂದ ಈ ಋಷ್ಯಮೂಕಪರ್ವತಕ್ಕೆ ಬಂದೆನು. ಈ ಪ್ರಕಾರದಲ್ಲಿ ನನಗೂ ವಾಲಿಗೂ ಮಹತ್ತಾದ ವೈರವು ಹುಟ್ಟಿತು. ನಿರಪರಾಧಿಯಾದ ನನಗೆ ವಾಲಿಯೊಡನೆ ವಿರೋಧವುಂಟಾಯಿತು. ಆತನ ಭಯದಿಂದ ಕಂಗೆಟ್ಟು ಈ ಪರ್ವತದಲ್ಲಿರುವ ನನ್ನನ್ನು ನೀನು ಕೃಪಾದೃಷ್ಟಿಯಿಂದ ನೋಡಿ ರಕ್ಷಿಸು" ಎಂದು ಹೇಳಿದನು.

ಆ ಮಾತನ್ನು ಕೇಳಿ ಶ್ರೀರಾಮನು ಪ್ರಸನ್ನಮುಖನಾಗಿ ನಸುನಗುತ್ತ "ಎಲೈ ಸುಗ್ರೀವ, ಸೂರ್ಯಮಂಡಲದಂತೆ ನೋಡುವುದಕ್ಕೆ ಅಶಕ್ಯವೂ ಅತಿತೀಕ್ಷ್ಣವೂ ಅಮೋಘವೂ ಆದ ನನ್ನ ಶರಗಳನ್ನು ನೋಡು. ಈ ಶರಗಳು ವಾಲಿಯ ದೇಹವನ್ನು ಉರುಳಿಸದೆ ಬಿಡವು. ನಿನ್ನ ಚರಿತ್ರೆಯನ್ನು ಕೇಳಿದ ನನಗೆ ಪಾಪಸ್ವರೂಪನಾಗಿಯೂ ನಿನ್ನ ಶತ್ರುವಾಗಿಯೂ ಇರುವ ವಾಲಿಯು ನನ್ನ ಶರಹತಿಯಿಂದ ಗಾಯಪಡೆದು ಬೀಳುವವರೆಗೆ ತಾಳ್ಮೆಯೆಂತು ಬರಬೇಕು? ಶೋಕವೆಂಬ ಸಮುದ್ರದಲ್ಲಿ ಮುಳುಗಿದ ನಿನ್ನನ್ನುದ್ಧರಿಸಿ ಧನ್ಯನನ್ನಾಗಿ ಮಾಡುವೆನು. ನೀನು ಅಪರಿಮಿತವಾದ ಮಾಂಗಲ್ಯವನ್ನು ಪಡೆಯುವೆ" ಎಂದು ಹೇಳಿದನು.



### ೧೧ನೆಯ ಅಧ್ಯಾಯ

## ಸುಗ್ರೀವನು ಶ್ರೀರಾಮನನ್ನು ಪರೀಕ್ಷಿಸಿದ್ದು

ಈ ರೀತಿಯಲ್ಲಿ ಉತ್ಸಾಹಶಕ್ತಿಯನ್ನೂ ಪರಾಕ್ರಮವನ್ನೂ ಉಂಟುಮಾಡುವ ಶ್ರೀರಾಮನ ಮಾತನ್ನು ಕೇಳಿ ಸುಗ್ರೀವನು ಶ್ರೀರಾಮನನ್ನು ಕೊಂಡಾಡಿದನು. ಅವನು ಕೈಮುಗಿದುಕೊಂಡು ಹೀಗೆಂದನು: "ಶ್ರೀರಾಮ, ನೀನು ಕೋಪಿಸಿದರೆ ಪ್ರಳಯಕಾಲಾಗ್ನಿಯಂತೆ ನಿಶಿತವಾದ ನಿನ್ನ ಶರಗಳಿಂದ ಸಮಸ್ತ ಲೋಕಗಳನ್ನೂ ದಹಿಸಬಲ್ಲೆ. ಆದರೂ ಮಹಾಪರಾಕ್ರಮಿಯಾದ ವಾಲಿಯ ಸಾಮರ್ಥ್ಯವನ್ನೂ ಬಲವನ್ನೂ ಹೇಳುತ್ತೇನೆ, ಸಾವಧಾನವಾಗಿ ಕೇಳು: ವಾಲಿಯು ಪ್ರತಿದಿನವೂ ಪಡುವಣ ಸಮುದ್ರಕ್ಕೆ ಹೋಗಿ ಅಲ್ಲಿಂದ ಮೂಡಲ ಸಮುದ್ರಕ್ಕೆ ಹಾರುವನು. ಅಲ್ಲಿಂದ ತೆಂಕಣ ಸಮುದ್ರಕ್ಕೆ ಹೋಗಿ ಕಡೆಯಲ್ಲಿ ಬಡಗಣ ಸಮುದ್ರಮಾರ್ಗವಾಗಿ ಸೂರ್ಯೋದಯಕ್ಕೆ ಮುಂಚೆಯೇ ಸಂತೋಷದಿಂದ ಸಂಚರಿಸಿಕೊಂಡು ಬರುವನು. ನಿತ್ಯವೂ ದೊಡ್ಡ ಪರ್ವತದ ಕೋಡುಗಲ್ಲುಗಳನ್ನು ವಿನೋದಾರ್ಥವಾಗಿ ಕಿತ್ತು ಈಡಾಡುವನು. ತನ್ನ ಭುಜಬಲವನ್ನು ತಿಳಿಯಬೇಕೆಂದು ದೊಡ್ಡ ಮರಗಳನ್ನು ಕಿತ್ತಾಡುವನು. ಒಂದು ಸಮಯದಲ್ಲಿ ಕೈಲಾಸಪರ್ವತದ ಕೋಡುಗಲ್ಲಿಗೆ ಸಮಾನನೂ

ಸಾವಿರ ಆನೆಗಳ ಶಕ್ತಿಯುಳ್ಳವನೂ ಮಹಾಪರಾಕ್ರಮಿಯೂ ಆದ ದುಂದುಭಿಯೆಂಬ ರಾಕ್ಷಸನು ಬ್ರಹ್ಮದೇವನು ಕೊಟ್ಟ ವರದಿಂದ ಪ್ರೇಮರಿತು ಅತ್ಯಂತ ಘನಗಾತ್ರವಾದ ಶರೀರವುಳ್ಳ ಮಹಿಷಾಕಾರನಾಗಿ ಸಮುದ್ರಕ್ಕೆ ಹೋಗಿ ' ಎಲೈ ಸಮುದ್ರರಾಜನೆ, ನಾನು ನಿನ್ನೊಡನೆ ಯುದ್ಧಮಾಡ ಬೇಕೆಂದು ಬಂದೆನು. ನೀನು ನನ್ನೊಡನೆ ಯುದ್ಧಮಾಡು ' ಎಂದು ಕರೆದನು.

ಧರ್ಮಾತ್ಮನಾದ ಸಮುದ್ರರಾಜನು ದುಂದುಭಿಯನ್ನು ಕುರಿತು ' ಎಲೈ ದುಂದುಭಿಯೆ, ನಾನು ನಿನ್ನ ಸಂಗಡ ಯುದ್ಧವನ್ನು ಮಾಡುವುದಕ್ಕೆ ಸಮರ್ಥನಲ್ಲ. ನೀನು ಸಮರಾಂಗಣದಲ್ಲಿ ಮಹಾಸಮರ್ಥನು. ಆದರೂ ನಿನ್ನೊಡನೆ ಯುದ್ಧವನ್ನು ಮಾಡುವುದಕ್ಕೆ ಸಮರ್ಥನಾದವನನ್ನು ಹೇಳುತ್ತೇನೆ ಕೇಳು : ಸಮಸ್ತ ತಪಸ್ವಿಗಳಿಗೂ ಆಧಾರವಾಗಿ ಪರಮೇಶ್ವರನಿಗೆ ಮಾವನಾದ ಹಿಮವಂತನೆಂದು ಪ್ರಸಿದ್ಧನಾದ ಪರ್ವತರಾಜನಿದ್ದಾನೆ. ಆತನು ನಿನಗೆ ಯುದ್ಧವನ್ನು ಕೊಟ್ಟು ಹರ್ಷವನ್ನು ಮಾಡುವನು ' ಎಂದು ನುಡಿದನು.

ಆ ಮಾತನ್ನು ಕೇಳಿ ದುಂದುಭಿಯು ಸಮುದ್ರರಾಜನು ತನ್ನೊಡನೆ ಯುದ್ಧವನ್ನು ಮಾಡದಿದ್ದುದರಿಂದ ಆತನನ್ನು ಹೇಡಿಯೆಂದೆಣಿಸಿ ಹಿಮವತ್ಪರ್ವತಕ್ಕೆ ಹೋಗಿ ಆ ಪರ್ವತದ ಕೋಡುಗಲ್ಲುಗಳನ್ನು ಹತ್ತಿ ಅಲ್ಲಿದ್ದ ಬಂಡೆಗಳನ್ನು ಕಿತ್ತಾಡಲಾರಂಭಿಸಿದನು. ಹಿಮವತ್ಪರ್ವತನು ಭಯಪಟ್ಟು ಸೌಮ್ಯರೂಪವನ್ನು ತಾಳಿ ದುಂದುಭಿಯನ್ನು ಕುರಿತು ' ಎಲೈ ದುಂದುಭಿಯೆ, ನೀನು ನನ್ನ ಕೋಡುಗಲ್ಲಿನ ಮೇಲೆ ಕುಳಿತುಕೊಂಡು ಇಲ್ಲಿರುವ ಶಿಲೆಗಳನ್ನು ಕಿತ್ತಾಡುತ್ತ ಏಕೆ ನನಗೆ ವ್ಯಥೆಯನ್ನುಂಟುಮಾಡುತ್ತಿರುವೆ ? ನಾನು ಒಂದು ದಿವಸವಾದರೂ ಜಗಳವನ್ನು ಕಂಡವನಲ್ಲ ; ತಪಸ್ವಿಗಳಿಗೆ ಆಶ್ರಯನಾಗಿರುವೆನು ' ಎಂದು ನುಡಿದನು.

ದುಂದುಭಿಯು ಕೋಪಾಟೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು " ಎಲೈ ಹಿಮವತ್ಪರ್ವತನೆ, ನೀನು ನನ್ನ ಭಯದಿಂದ ಯುದ್ಧಮಾಡುವುದಕ್ಕೆ ಸಮರ್ಥನಲ್ಲದಿದ್ದೀಯೆ. ನನ್ನ ಸಂಗಡ ಯುದ್ಧಮಾಡುವುದಕ್ಕೆ ಸಮರ್ಥನಾದ ಪುರುಷನನ್ನು ಹೇಳು " ಎಂದು ಕೇಳಿದನು.

ಹಿಮವಂತನು ' ಎಲೈ ದುಂದುಭಿಯೆ, ದೇವೇಂದ್ರನ ಮಗನಾದ ವಾಲಿಯು ಮಹಾ ಸಮರ್ಥನು. ಆತನು ಕಿಷ್ಕಿಂಧಾಪಟ್ಟಣದಲ್ಲಿದ್ದಾನೆ. ಆತನು ನಿನ್ನೊಡನೆ ದ್ವಂದ್ವಯುದ್ಧವನ್ನು ಮಾಡಲು ಸಮರ್ಥನು. ಪೂರ್ವದಲ್ಲಿ ದೇವೇಂದ್ರನು ನಮುಚಿ ಎಂಬ ರಾಕ್ಷಸನಿಗೆ ಯುದ್ಧವನ್ನು ಕೊಟ್ಟಂತೆ ನಿನಗೆ ವಾಲಿಯು ಯುದ್ಧವನ್ನು ಕೊಡುವನು. ನೀನು ಯುದ್ಧವನ್ನು ಮಾಡಬೇಕಾದ ಪಕ್ಷದಲ್ಲಿ ಆತನ ಸಮೀಪಕ್ಕೆ ಹೋಗು. ವಾಲಿಯು ಯುದ್ಧರಂಗದಲ್ಲಿ ಮಹಾನಿಪುಣನು ' ಎಂದು ಹೇಳಿದನು.

ಆ ಮಾತನ್ನು ಕೇಳಿ ದುಂದುಭಿಯು ಕೋಪಾಕ್ರಾಂತನಾಗಿ ಕಿಷ್ಕಿಂಧಾಪಟ್ಟಣಕ್ಕೆ ಬಂದು ಬಲವಾದ ಕೊಂಬುಗಳುಳ್ಳ ಕೋಣದ ಸ್ವರೂಪವನ್ನು ತಾಳಿ, ವರ್ಷಾಕಾಲದಲ್ಲಿ ತೋರುವ ನೀರುಂಡ ಮೇಘದಂತೆ ನುಗ್ಗಿಬಂದನು. ತನ್ನ ಬಲಗರ್ವದಿಂದ ಕಿಷ್ಕಿಂಧಾಪಟ್ಟಣದ ಬಾಗಿಲನ್ನು ಅಡ್ಡಗಟ್ಟಿ ಆ ಪಟ್ಟಣದಲ್ಲಿದ್ದ ಸಮಸ್ತ ಪ್ರಾಣಿಗಳಿಗೂ ಭಯವಾಗುವಂತೆ ಬೊಬ್ಬಿಟ್ಟು ಕೂಗಿ ಸಮೀಪದಲ್ಲಿದ್ದ ಮರಗಳನ್ನು ಕಿತ್ತಾಡುತ್ತ ತನ್ನ ತೋಳುಗಳಿಂದ ಭೂಮಿಯನ್ನು ಒದೆಯುತ್ತ ಮದಸೊಕ್ಕಿದ ಆನೆಯಂತೆ ತನ್ನ ಕೊಂಬುಗಳಿಂದ ಪಟ್ಟಣದ ಬಾಗಿಲನ್ನು ತಿವಿಯುತ್ತ ಕೋಲಾಹಲವನ್ನು ಮಾಡುತ್ತಿದ್ದನು. ಅದನ್ನು ಕೇಳಿ ತನ್ನ ಅಂತಃಪುರದಲ್ಲಿದ್ದ ವಾಲಿಯು ನಕ್ಷತ್ರಗಳೊಡಗೂಡಿದ ಚಂದ್ರನು ಹೊರಡುವಂತೆ ತನ್ನ ಅಂತಃಪುರದಲ್ಲಿದ್ದ ಸ್ತ್ರೀಯರಿಂದ ಸಮೇತನಾಗಿ ದುಂದುಭಿಯನ್ನು

ಅಟ್ಟಿಬಂದು ಆತನನ್ನು ಕುರಿತು ಮೃದುನುಡಿಯಿಂದ ' ಎಲೈ ದುಂದುಭಿಯೆ, ನೀನೇನು ಕಾರಣವಾಗಿ ಕಿಷ್ಕಿಂಧಾಪಟ್ಟಣದ ಬಾಗಿಲನ್ನಡ್ಡಗಟ್ಟಿ ಇಲ್ಲಿಂದ ಬೊಬ್ಬಿಟ್ಟು ಕೂಗುತ್ತಿದ್ದೀಯೆ ? ನನ್ನ ಪರಾಕ್ರಮವನ್ನು ನೀನು ಬಲ್ಲೆಯಷ್ಟೆ ! ಇಲ್ಲಿರಬೇಡ. ಇಲ್ಲಿಂದ ಹಿಂದಿರುಗಿ ನಿನ್ನ ಪ್ರಾಣಗಳನ್ನು ಉಳಿಸಿಕೊ ' ಎಂದು ಹೇಳಿದನು.

ದುಂದುಭಿಯು ಅತ್ಯಂತ ಕೋಪಯುಕ್ತನಾಗಿ ' ಎಲೈ ವಾಲಿಯೆ, ನೀನು ನಿನ್ನ ಸ್ತ್ರೀಯರ ಸಮೀಪದಲ್ಲಿ ಪೌರುಷವನ್ನು ಹೇಳಿಕೊಳ್ಳಬೇಡ. ಈಗ ನನ್ನೊಡನೆ ಯುದ್ಧವನ್ನು ಮಾಡಿದರೆ ನನ್ನ ಸಾಮರ್ಥ್ಯವನ್ನು ಕಾಣುವೆ; ಈಗ ನನ್ನ ಕೋಪವನ್ನು ತಡೆದುಕೊಂಡಿರುತ್ತೇನೆ. ನೀನು ಈ ರಾತ್ರಿಯಲ್ಲಿ ನಿನ್ನ ಸತಿಯೊಡನೆ ವಿಹರಿಸುತ್ತ ಸುಖವಾಗಿರು. ನಿನ್ನ ಪರಿವಾರಕ್ಕೆ ಉಚಿತವಾದ ಉಡುಗೊರೆಗಳನ್ನು ಕೊಟ್ಟು ಸಂತವಿಟ್ಟು ನಿನಗೆ ಸಹಾಯವಾಗಿರುವ ಬಂಧುಗಳನ್ನು ಸಂಮಾನಿಸಿ ಪಟ್ಟಣಗಳಲ್ಲಿರುವ ಪ್ರಜೆಗಳನ್ನು ಸಂತವಿಡು. ನೀನು ಸ್ತ್ರೀಲೋಲನಾಗಿದ್ದೀಯೆ. ರಾಜನೀತಿಯಲ್ಲಿ ಸ್ತ್ರೀಲೋಲನಾಗಿ ಮದಿಸಿರುವವನೊಡನೆ ಯುದ್ಧವು ಸಲ್ಲದೆಂದು ಹೇಳಿದೆ. ಕಾಮದಿಂದ ಮದಿಸಿದವನೊಡನೆಯೂ ಉನ್ಮಾದದಿಂದ ಮೈಮರೆತವನೊಡನೆಯೂ ಮಲಗಿದ್ದವನೊಡನೆಯೂ ಆಯುಧವಿಲ್ಲದವನೊಡನೆಯೂ ಯುದ್ಧವನ್ನು ಮಾಡಿ ಕೊಲ್ಲುವವನು ಭ್ರೂಣಹತ್ಯಾಪಾಪಫಲ ವನ್ನೈದುವನು. ಆದಕಾರಣ ಕಾಮಮೋಹಿತನಾಗಿರುವ ನೀನು ತಿರುಗಿ ಹೋಗಿ ನಿನ್ನ ಮನಸ್ಸು ಬಂದಂತೆ ಭೋಗಗಳನ್ನನುಭವಿಸಿ ನಾಳೆಯ ಪ್ರಾತಃಕಾಲದಲ್ಲಿ ಬಾ. ಆಗ ನಿನಗೆ ತಕ್ಕ ಬುದ್ಧಿಯನ್ನು ಕಲಿಸುವೆನು " ಎಂದು ಹೇಳಿದನು.

ಆ ಮಾತನ್ನು ಕೇಳಿ ವಾಲಿಯು ತಾರಾದೇವಿಯೇ ಮೊದಲಾದ ತನ್ನ ಸ್ತ್ರೀಯರನ್ನು ಮನೆಗೆ ಕಳುಹಿಸಿ ' ಎಲೈ ದುಂದುಭಿಯೆ, ನನ್ನನ್ನು ನೀನು ಮೋಹದಿಂದ ಮದಿಸಿದವನೆಂದೆಣಿಸಬೇಡ. ನಾನು ಯುದ್ಧರಂಗದಲ್ಲಿ ನಿನ್ನನ್ನು ಕೊಲ್ಲಬೇಕೆಂದು ಮದಿಸಿದ್ದೇನೆ. ನೀನು ನನ್ನೊಡನೆ ಯುದ್ಧವನ್ನು ಮಾಡುವುದಕ್ಕೆ ಅಂಜದ ಪಕ್ಷದಲ್ಲಿ ಯುದ್ಧಸಂನದ್ಧನಾಗು ' ಎಂದು ನುಡಿದನು. ಅನಂತರ ವಾಲಿಯು ಅತ್ಯಂತ ಕೋಪಯುಕ್ತನಾಗಿ ತನ್ನ ತಂದೆಯಾದ ದೇವೇಂದ್ರನು ಕೊಟ್ಟ ಸುವರ್ಣದ ಹಾರವನ್ನು ಹಾಕಿಕೊಂಡು ಯುದ್ಧಸಂನದ್ಧನಾದನು. ಕೋಣದ ಸ್ವರೂಪದಿಂದ ಪರ್ವತದ ಆಕಾರದಲ್ಲಿದ್ದ ದುಂದುಭಿಯ ಕೊಂಬುಗಳನ್ನು ಹಿಡಿದು ತಿರುಗಿಸಿ ನೆಲಕ್ಕೆ ಅಪ್ಪಳಿಸಿ ಕೆಡಹಿ ಬೊಬ್ಬಿಟ್ಟು ಕೂಗಿದನು. ಆಗ ಆ ಕೋಣದ ಕಿವಿಗಳಿಂದ ರಕ್ತಪ್ರವಾಹವು ಸುರಿಯಲಾರಂಭಿಸಿತು. ಆ ಬಳಿಕ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಬುದ್ಧಿಯಿಂದ ವಾಲಿ ದುಂದುಭಿಯರಿಗೆ ಮಹಾಘೋರವಾದ ಯುದ್ಧವಾಯಿತು. ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ವಾಲಿಯು ಮುಷ್ಟಿಗಳಿಂದಲೂ ಮೊಣಕಾಲು ಗಳಿಂದಲೂ ಕಲ್ಲರೆಗಳಿಂದಲೂ ದೊಡ್ಡಮರಗಳಿಂದಲೂ ಹೊಡೆಯುತ್ತಿರಲು ದುಂದುಭಿಯು ಸತ್ತ್ವಗುಂದಿದನು. ಆಮೇಲೆ ವಾಲಿಯು ಒಂದು ಕ್ಷಣಮಾತ್ರ ತಳಹರಿಸಿಕೊಂಡು ದುಂದುಭಿಯನ್ನು ಉಗುರುಗಳಿಂದ ಸೀಳಿ ಭೂಮಿಯ ಮೇಲೆ ಕೆಡಹಿ ಕೈಗಳಿಂದ ಶರೀರವನ್ನು ಮುರಿದು ನೆಲಕ್ಕೆ ಅಪ್ಪಳಿಸಲು ಆತನು ಸತ್ತುಹೋದನು. ಆಮೇಲೆ ವಾಲಿಯು, ಪರಾಜಿತನಾದ ದುಂದುಭಿಯ ಶರೀರವನ್ನು ತನ್ನ ಭುಜಬಲದಿಂದ ಎಸೆಯಲು ಆ ಶರೀರವು ಒಂದು ಗಾವುದದೂರ ಹೋಗಿ ಬಿದ್ದಿತು. ಆ ಸಮಯದಲ್ಲಿ ದುಂದುಭಿಯ ಬಾಯಿಯಿಂದ ಸುರಿಯುತ್ತಿದ್ದ ರಕ್ತಬಿಂದುಗಳು ಗಾಳಿಯಿಂದ ಮತಂಗಮುನೀಶ್ವರನ ಆಶ್ರಮದಲ್ಲಿ ಬಿದ್ದವು. ಆ ಮುನೀಶ್ವರನು ಆ ರಕ್ತಬಿಂದುಗಳನ್ನು ನೋಡಿ ಕೋಪಯುಕ್ತನಾಗಿ ಅವನ್ನು ತನ್ನ ಆಶ್ರಮದಲ್ಲಿ ಚೆಲ್ಲಿದವರಾರೆಂದು ವಿಚಾರಿಸಲು ಹೊರಕ್ಕೆ ಬಂದನು. ಅಲ್ಲಿ ದೊಡ್ಡ ಪರ್ವತಾಕಾರವಾಗಿ ಬಿದ್ದಿದ್ದ ದುಂದುಭಿಯ ಶರೀರವನ್ನು ನೋಡಿ

ತನ್ನ ತಪಸ್ಸಾಮರ್ಥ್ಯದಿಂದುಂಟಾದ ಜ್ಞಾನದೃಷ್ಟಿಯಿಂದ ವಾನರಾಧಿಪತಿಯಾದ ವಾಲಿಯು ಮಹಿಷಾಕಾರನಾದ ದುಂದುಭಿಯನ್ನು ಕೊಂದು ಆತನ ಶರೀರವನ್ನು ಅಲ್ಲಿಗೆ ಎಸೆದಿದ್ದಾನೆಂದು ತಿಳಿದನು. ಆಗ ಮತಂಗಮುನಿಯು ಅತ್ಯಂತ ಕೋಪಯುಕ್ತನಾಗಿ 'ವಾಲಿಯು ಮದೋನ್ಮತ್ತನಾಗಿ ದುಂದುಭಿಯನ್ನು ಕೊಂದ ಗರ್ವದಿಂದ ಈ ಶರೀರವನ್ನು ಇಲ್ಲಿ ಹಾಕಿದ್ದಾನೆ. ದುಂದುಭಿಯ ರಕ್ತದಿಂದ ನನ್ನ ತಪೋವನವು ಅಶುಚಿಯಾಯಿತು. ಈ ಶರೀರವು ಬಿದ್ದ ರಭಸದಿಂದ ಈ ಆಶ್ರಮದಲ್ಲಿದ್ದ ವೃಕ್ಷಗಳೆಲ್ಲವೂ ಮುರಿದುಹೋದವು. ಆದಕಾರಣ ಅಜ್ಞಾನಿಯಾದ ವಾಲಿಯು ಇಲ್ಲಿಗೆ ಸುತ್ತಲಿರುವ ಒಂದು ಗಾವುದದಾರಿಯೊಳಗೆ ಕಾಲಿಟ್ಟರೆ ಆತನ ಶರೀರವು ಲಯವಾಗಲಿ! ಆತನ ಅಧಿಕಾರಿವರ್ಗಕ್ಕೆ ಸೇರಿ ಈ ವನದಲ್ಲಿರುವ ವಾನರಗಳು ಇಲ್ಲಿಂದ ಹೊರಟುಹೋಗಲಿ! ಹೋಗದಿದ್ದರೆ ಅವಕ್ಕೂ ಶಾಪವನ್ನು ಕೊಡುವೆನು. ಮಕ್ಕಳನ್ನು ರಕ್ಷಿಸುವಂತೆ ರಕ್ಷಿಸಿಕೊಂಡಿದ್ದ ನನ್ನ ಆಶ್ರಮದಲ್ಲಿರುವ ಚಿಗುರೆಲೆಗಳನ್ನೂ ಹಣ್ಣುಕಾಯಿಗಳನ್ನೂ ಕೆಡಿಸುತ್ತ ಈ ಕಪಿಗಳು ಇಲ್ಲಿದ್ದು ಮಾಡುವುದೇನು? ಈ ಆಶ್ರಮದಲ್ಲಿರುವ ಕಪಿಗಳಿಗೆ ಇದೊಂದು ದಿನ ಅವಕಾಶವನ್ನು ಕೊಡುತ್ತೇನೆ. ಈಹೊತ್ತು ಹೋಗದೆ ನಾಳೆ ಕಾಣಿಸಿಕೊಳ್ಳುವ ಕಪಿಯು ಅನೇಕ ಸಾವಿರ ವರುಷಗಳ ಪರ್ಯಂತ ಶಿಲೆಯಾಗಿ ಹೋಗಲಿ!' ಎಂದು ಶಪಿಸಿದನು.

ಆ ಮಾತುಗಳನ್ನು ಕೇಳಿ ಅಲ್ಲಿದ್ದ ಕಪಿಗಳು ವಾಲಿಯ ಸಮೀಪಕ್ಕೆ ಹೋದವು. ಆತನು ಆ ಕಪಿಗಳನ್ನು ಕಂಡು 'ಎಲೈ ಕಪಿಗಳಿರಾ, ನೀವೇನುಕಾರಣ ಬಂದಿರಿ? ನೀವೆಲ್ಲರೂ ಸುಖದಲ್ಲಿದ್ದೀರಿ ತಾನೆ?' ಎಂದು ಕೇಳಿದನು.

ಆ ಕಪಿಗಳು 'ಜೀಯ, ನಾವು ಮತಂಗಮುನೀಶ್ವರನ ಆಶ್ರಮದಲ್ಲಿದ್ದೆವು. ನಿನ್ನಿಂದ ಹತನಾದ ದುಂದುಭಿಯ ರಕ್ತಬಿಂದುಗಳು ಈಹೊತ್ತು ಆ ಮುನೀಶ್ವರನ ಆಶ್ರಮದಲ್ಲಿ ಬೀಳಲು ಆತನು ಕೋಪಯುಕ್ತನಾಗಿ ಜ್ಞಾನದೃಷ್ಟಿಯಿಂದ ಅದು ನಿನ್ನ ಕೃತ್ಯವೆಂದು ತಿಳಿದನು. ನೀನು ಆತನ ಆಶ್ರಮದ ಸುತ್ತಲಿರುವ ಒಂದು ಗಾವುದ ದೂರದಲ್ಲಿ ಸಂಚರಿಸಿದೆಯಾದರೆ ಪಂಚತ್ತ್ವವನ್ನೈದುವೆ ಯೆಂದೂ, ನಿನಗೆ ಸಂಬಂಧಿಸಿದ ಕಪಿಗಳಲ್ಲಿ ಯಾವನಾದರೂ ನಾಳೆ ಅಲ್ಲಿ ಕಾಣಿಸಿಕೊಂಡರೆ ಆ ಕಪಿಯು ಅನೇಕ ಸಾವಿರ ವರುಷಗಳ ವರೆಗೆ ದೊಡ್ಡ ಕಲ್ಲಾಗಿ ಬೀಳುವನೆಂದೂ ಶಾಪವನ್ನು ಕೊಟ್ಟನು. ಆದಕಾರಣ ನಾವು ಅಂಜಿಕೊಂಡು ಮತಂಗಮುನೀಶ್ವರನ ಆಶ್ರಮವನ್ನು ಬಿಟ್ಟು ಇಲ್ಲಿಗೆ ಬಂದೆವು' ಎಂದು ಹೇಳಿದವು.

ಆ ಮಾತನ್ನು ಕೇಳಿ ವಾಲಿಯು ಭಯಪಟ್ಟು ಮತಂಗಮುನೀಶ್ವರನ ಸಮೀಪಕ್ಕೆ ಹೋಗಿ ಕೈಮುಗಿದು ಶಾಪವಿಮೋಚನಕ್ಕಾಗಿ ಬಹಳವಾಗಿ ಬೇಡಿಕೊಂಡನು. ಆ ಮುನೀಶ್ವರನು ವಾಲಿಯನ್ನು ಉದಾಸೀನಮಾಡಿ ತನ್ನ ಆಶ್ರಮಕ್ಕೆ ಹೋದನು. ಅಂದಿನಿಂದ ವಾಲಿಯು ಮತಂಗಮುನೀಶ್ವರನ ಶಾಪಕ್ಕೆ ಭಯಪಟ್ಟು ಋಷ್ಯಮೂಕಪರ್ವತಕ್ಕೆ ಬರುವುದಿಲ್ಲ. ಆದಕಾರಣ ನಾನು ಇಲ್ಲಿ ಈ ನಾಲ್ವರು ವಾನರರೊಡನೆ ಅತಿದುಃಖದಿಂದ ಸಂಚರಿಸಿಕೊಂಡಿದ್ದೇನೆ. ಅಗೋ, ದುಂದುಭಿಯ ಶುಷ್ಕವಾದ ಶರೀರವು ಪರ್ವತಾಕಾರವಾಗಿ ಅಲ್ಲಿ ಬಿದ್ದಿದೆ. ವಾಲಿಯು ತನ್ನ ಬಲಾತಿಶಯದಿಂದ ಆ ಶರೀರವನ್ನು ಇಲ್ಲಿಗೆ ಎಸೆದನು. ಅದಲ್ಲದೆ ವಾಲಿಯು ಅಲ್ಲಿ ಕಾಣುತ್ತಿರುವ ಏಳು ಸಾಲವೃಕ್ಷಗಳಲ್ಲಿ ಒಂದೊಂದು ಮರವನ್ನೂ ಅಲ್ಲಾಡಿಸಿ ಎಲೆಗಳೆಲ್ಲಾ ಉದುರಿಹೋಗುವಂತೆ ಮಾಡಲು ಸಮರ್ಥನಾಗಿದ್ದಾನೆ. ಅಂಥ ಪರಾಕ್ರಮಿಯಾದ ವಾಲಿಯನ್ನು, ರಾಜಪುತ್ರ, ನೀನು ಸಂಹರಿಸ ಬಲ್ಲೆಯಾ?" ಎಂದು ಕೇಳಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಸುಗ್ರೀವನನ್ನು ಕುರಿತು "ಎಲೈ ಸುಗ್ರೀವನೆ, ಯಾವ ಕಾರ್ಯವನ್ನು ಮಾಡಿ ತೋರಿಸಿದರೆ ಶ್ರೀರಾಮನು ವಾಲಿಯನ್ನು ಸಂಹರಿಸಲಾಪ್ಪವನೆಂದು ನೀನು ನಂಬುತ್ತೀಯೆ ? " ಎಂದು ಕೇಳಿದನು.

ಸುಗ್ರೀವನು "ಲಕ್ಷ್ಮಣ, ಪೂರ್ವದಲ್ಲಿ ವಾಲಿಯು ಈ ಮರಗಳಲ್ಲಿ ಒಂದೊಂದು ಮರವನ್ನೂ ಅನೇಕ ಬಾರಿ ಅಲ್ಲಾಡಿಸಿ ಎಲೆಗಳನ್ನು ಉದುರಿಸಿದ್ದಾನೆ. ಇವುಗಳಲ್ಲೊಂದು ಮರವನ್ನು ಶ್ರೀರಾಮನು ಒಂದೇ ಬಾಣದಿಂದ ಹೊಡೆದು ತಟಹಾಯಿಸುವಂತೆ ರಂಧ್ರಮಾಡಲಿ. ವಾಲಿಯಿಂದ ಹತನಾದ ದುಂದುಭಿಯ ಶರೀರವನ್ನು ತನ್ನ ಪಾದಾಂಗುಷ್ಠದಿಂದ ಇನ್ನೂರು ಬಿಲ್ಲು ಪ್ರಮಾಣದ ವರೆಗೆ ಎಸೆಯಲಿ. ಆಗ ವಾಲಿಯನ್ನು ಕೊಲ್ಲುವನೆಂದು ನನ್ನ ಮನಸ್ಸಿಗೆ ವಿಶ್ವಾಸಹುಟ್ಟುವುದು" ಎಂದು ನುಡಿದನು. ಪುನಃ ಒಂದು ಕ್ಷಣಮಾತ್ರ ಧ್ಯಾನಮಾಡಿ ಹೀಗೆಂದನು : "ಶ್ರೀರಾಮ, ವಾಲಿಯು ಮಹಾಸಮರ್ಥ ; ಅತಿಪರಾಕ್ರಮಿ ; ಅತ್ಯಂತ ಬಲಪೌರುಷಗಳುಳ್ಳವನು ; ಸಮರಾಂಗಣದಲ್ಲಿ ಹಿಮ್ಮೆಟ್ಟದವನು. ದೇವತೆಗಳಿಗೂ ಅಸಾಧ್ಯವಾದ ಸಾಹಸವನ್ನು ಮಾಡಿದವನು. ಆತನ ಸಾಹಸವನ್ನು ನೆನೆದು ಭಯಪಟ್ಟು ಈ ಪರ್ವತದಲ್ಲಿದ್ದೇನೆ. ಇಲ್ಲಿ ನನಗೆ ಅನುಕೂಲರಾದವರು ಹನುಮಂತನೇ ಮೊದಲಾದ ನಾಲ್ಕು ಪ್ರಧಾನರಲ್ಲದೆ ಮತ್ತಾರೂ ಇಲ್ಲ. ದೈವಾನುಕೂಲದಿಂದ ಈ ವನದಲ್ಲಿ ನನಗೆ ಮಿತ್ರತ್ವವು ದೊರಕಿತು. ಹಿಮವತ್ಪರ್ವತದಂತೆ ಧೀರನಾದ ನಿನ್ನ ಸ್ನೇಹವನ್ನು ಪಡೆದೆನು. ಬಲವಂತನಾದ ವಾಲಿಯ ಬಲಪೌರುಷಗಳನ್ನು ಹೇಳಿದೆನು. ಸಮರಾಂಗಣದಲ್ಲಿ ನಿನ್ನ ಶೌರ್ಯವನ್ನು ನಾನು ಕಂಡಿಲ್ಲ. ನಾನು ನಿನ್ನ ಶೌರ್ಯವನ್ನು ತೂಕಮಾಡುತ್ತಿಲ್ಲ. ನಿನಗೆ ಅವಮಾನ ಮಾಡುವುದಕ್ಕಾಗಿ ನಾನು ತೊಡಗಿಲ್ಲ ಅಥವಾ ನಿನ್ನನ್ನು ಹೆದರಿಸುತ್ತಿಲ್ಲ. ವಾಲಿಯ ಭಯಂಕರ ವಾದ ಪರಾಕ್ರಮವನ್ನು ನೋಡಿ ನನ್ನ ಮನಸ್ಸು ಕಂಗೆಡುತ್ತಿದೆ. ಎಲೈ ಶ್ರೀರಾಮ, ನಿನ್ನ ವಾಕ್ಯವೂ ನೀನು ಮಾಡಿಕೊಟ್ಟ ಪ್ರಮಾಣವೂ ನಿನ್ನ ಧೈರ್ಯವೇ ಮೊದಲಾದವೆಲ್ಲವೂ ಬೂದಿಮುಚ್ಚಿದ ಕೆಂಡ ದಂತಿರುವ ನಿನ್ನ ತೇಜೋವಿಶೇಷವನ್ನು ಸೂಚಿಸುತ್ತಿವೆ" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಸುಗ್ರೀವನನ್ನು ಕುರಿತು "ಸುಗ್ರೀವ, ನಿನಗೆ ನನ್ನ ಪರಾಕ್ರಮವು ಗೊತ್ತಿಲ್ಲದ ಪಕ್ಷದಲ್ಲಿ ನಿನಗೆ ಗೊತ್ತಾಗುವಂತೆ ಮಾಡಿ ವಿಶ್ವಾಸವನ್ನು ಹುಟ್ಟಿಸುತ್ತೇನೆ" ಎಂದು ನುಡಿದು ದುಂದುಭಿಯ ಶರೀರವನ್ನು ಪಾದಾಂಗುಷ್ಠದಿಂದ ಲೀಲಾಮಾತ್ರದಲ್ಲಿ ಮೇಲಕ್ಕೆ ಒದೆಯಲು ಆ ಶರೀರವು ಹತ್ತುಗಾವುದ ದೂರವನ್ನು ದಾಟಿ ಬಿದ್ದಿತು.

ಅದನ್ನು ನೋಡಿ ಸುಗ್ರೀವನು ಸೂರ್ಯಪ್ರಭೆಯಂತೆ ತನುಕಾಂತಿಯುಳ್ಳ ಶ್ರೀರಾಮನನ್ನು ಕುರಿತು ಹೀಗೆಂದನು : "ಶ್ರೀರಾಮ, ನನ್ನ ಅಣ್ಣನಾದ ವಾಲಿಯು ದುಂದುಭಿಯೊಡನೆ ಯುದ್ಧವನ್ನು ಮಾಡಿ ಸತ್ತ್ವಗೆಟ್ಟಿದ್ದ ಸಮಯದಲ್ಲಿ ಮಾಂಸಪೂರಿತವಾದ ದುಂದುಭಿಯ ಹಸಿಯ ಶರೀರವನ್ನು ಒಂದು ಗಾವುದ ದೂರದವರೆಗೆ ಎತ್ತಿ ಎಸೆದನು. ಈಗ ಒಣಗಿ ಮಾಂಸವಿಲ್ಲದೆ ಹುಲ್ಲಿನಂತೆ ಹಗುರವಾದ ಆ ಶರೀರವನ್ನು ಪಾದಾಂಗುಷ್ಠದಿಂದ ಹತ್ತು ಗಾವುದದೂರ ಹೋಗಿ ಬೀಳುವಂತೆ ಎಸೆದ ಮಾತ್ರದಿಂದಲೇ ನಿನ್ನಲ್ಲಿ ವಾಲಿಗಿಂತಲೂ ಬಲಾಧಿಕ್ಯವುಂಟೆಂದು ತಿಳಿಯಲು ಸಾಧ್ಯವಿಲ್ಲ. ಶ್ರೀರಾಮ, ವಾಲಿಯಿಂದಲೇ ದುಂದುಭಿಯ ಹಸಿಯ ಶರೀರವು ಒಂದು ಗಾವುದ ದೂರ ಎಸೆಯಲ್ಪಟ್ಟಿರುವಾಗ, ಒಣಶರೀರವು ಹತ್ತುಗಾವುದದವರೆಗೆ ನಿನ್ನಿಂದ ಎಸೆಯಲ್ಪಟ್ಟುದು ಆಶ್ಚರ್ಯ ವಲ್ಲ. ಆದ್ದರಿಂದ ನಿನ್ನ ಈ ಮಹಾಧನುಸ್ಸಿಗೆ ಹೆದೆಯೇರಿಸಿ ಒಂದು ಸಾಲವೃಕ್ಷವನು ನಿನ್ನ ಬಾಣ ದಿಂದ ಭೇದಿಸು. ನಿಶ್ಚಯವಾಗಿಯೂ ಅದನ್ನು ಭೇದಿಸಬಲ್ಲೆ. ಆದರಿಂದ ನನಗೆ ಸಂತೋಷವಾಗುವುದು.

ನೀನು ತೇಜಸ್ವಿಗಳಲ್ಲಿ ಸೂರ್ಯನಂತೆಯೂ, ಮಹಾಪರ್ವತಗಳಲ್ಲಿ ಹಿಮಾಲಯದಂತೆಯೂ ಮೃಗಗಳಲ್ಲಿ ಸಿಂಹದಂತೆಯೂ ಮನುಷ್ಯರಲ್ಲಿ ಶ್ರೇಷ್ಠನೂ ಶೂರನೂ ಆಗಿದ್ದೀಯೆ " ಎಂದನು.



## ೧೨ ನೆಯ ಅಧ್ಯಾಯ

## ಶ್ರೀರಾಮನು ವಾಲಿಸುಗ್ರೀವರ ಭೇದವನ್ನು ತಿಳಿಯದೆ ವಾಲಿಯನ್ನು ಬಿಟ್ಟಿದ್ದು

ಈ ಪ್ರಕಾರ ಸುಗ್ರೀವನು ನುಡಿಯಲು ಶ್ರೀರಾಮನು ಆತನ ಸಂದೇಹಪರಿಹಾರಕ್ಕಾಗಿ ತನ್ನ ಭಯಂಕರವಾದ ಬಿಲ್ಲನ್ನು ತೆಗೆದು ಹೆದೆಯನ್ನೇರಿಸಿದನು. ಆ ಬಿಲ್ಲಿನಲ್ಲಿ ಭೀಕರವಾದ ಒಂದು ಅಂಬನ್ನು ಹೂಡಿ ಸುಗ್ರೀವನು ಹೇಳಿದ ಮರಗಳನ್ನು ಗುರಿಮಾಡಿ ಎಸೆದನು. ಚಿನ್ನದ ಮುಲಾಮುಳ್ಳ ಆ ಬಾಣವು ಆ ಏಳು ಮರಗಳನ್ನೂ ತಟಹಾಯ್ದು ಪರ್ವತದ ತಪ್ಪಲನ್ನು ಭೇದಿಸಿ ಪುನಃ ಬಂದು ಶ್ರೀರಾಮನ ಬತ್ತಳಿಕೆಯನ್ನು ಸೇರಿತು. ಸುಗ್ರೀವನು ಆ ಬಾಣದ ಬಲವನ್ನು ಕಂಡು ಶ್ರೀರಾಮನಿಗೆ ಸಮಾನರಾದ ಪರಾಕ್ರಮಿಗಳಿಲ್ಲವೆಂದು ಆಶ್ಚರ್ಯಪಟ್ಟು, ಆತನು ವಾಲಿಯನ್ನು ಸಂಹರಿಸುವುದಕ್ಕೆ ಸಮರ್ಥನೆಂದು ನಿಶ್ಚಯಿಸಿದನು. ಅವನು ಶ್ರೀರಾಮನಿಗೆ ಕೈಮುಗಿದು ಹರ್ಷದಿಂದ " ಶ್ರೀರಾಮ, ಲೋಕದಲ್ಲಿ ಧನುರ್ವಿದ್ಯಾಪಾರಂಗತರಾದ ವೀರಭಟರಲ್ಲಿ ನೀನೇ ಶ್ರೇಷ್ಠನು. ಸಮಸ್ತ ದೇವಾಸುರರನ್ನಾದರೂ ನೀನು ಬಾಣಗಳಿಂದ ಕೊಲ್ಲುವುದಕ್ಕೆ ಸಮರ್ಥನು. ವಾಲಿಯನ್ನು ಕೊಲ್ಲುವೆಯೆಂದು ಹೇಳುವುದೇನು ? ಒಂದು ಬಾಣದಿಂದ ಏಳು ಮರಗಳನ್ನು ಕೆಡಹಿ ಭೂಮಿಯಲ್ಲಿ ತಾಗುವಂತೆ ಶರಸಂಧಾನ ಮಾಡುವ ನಿನಗೆ ಎದುರಾಗಿ ರಣರಂಗದಲ್ಲಿ ನಿಲ್ಲುವವರಾರು ? ನನ್ನ ಮನಸ್ಸಿನಲ್ಲಿದ್ದ ಸಂದೇಹವು ತೀರಿತು. ನನ್ನ ದುಃಖವೂ ನಿವೃತ್ತವಾಯಿತು. ವರುಣ ದೇವೇಂದ್ರರಿಗೆ ಸಮಾನನಾದ ನಿನ್ನ ಸ್ನೇಹವನ್ನು ಪಡೆದು ನನ್ನ ಮನಸ್ಸಿಗೆ ಮಹಾಸಂತೋಷವಾಯಿತು. ಇಂದೇ ನನಗೆ ಶತ್ರುವಾಗಿ ವಾಲಿಯನ್ನು ಕೊಂದು ನನ್ನ ಇಷ್ಟಾರ್ಥವನ್ನು ಸಲ್ಲಿಸಿಕೊಡಬೇಕೆಂದು ನಾನು ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ " ಎಂದು ನುಡಿದನು. ಶ್ರೀರಾಮನು " ಸುಗ್ರೀವ, ನಾನು ಇಲ್ಲಿಂದ ಕಿಷ್ಕಿಂಧಾ ಪಟ್ಟಣಕ್ಕೆ ಬರುತ್ತೇನೆ. ನೀನು ಮೊದಲೇ ಹೋಗಿ ಅಣ್ಣನೆಂದು ಹೇಳಿಸಿಕೊಂಡಿರುವ ವಾಲಿಯನ್ನು ಯುದ್ಧಕ್ಕೆ ಆಹ್ವಾನಿಸು. ನಾನು ನಿನ್ನ ಹಿಂದುಗಡೆಯಲ್ಲಿ ಬರುತ್ತೇನೆ " ಎಂದು ಹೇಳಿದನು.

ಆ ಮಾತನ್ನು ಕೇಳಿ ಸುಗ್ರೀವನು ವೇಗದಿಂದ ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ವಾಲಿಯನ್ನು ಯುದ್ಧಕ್ಕೆ ಕರೆದು ಗರ್ಜಿಸಿದನು. ಆ ಗರ್ಜನೆಯ ಧ್ವನಿಯನ್ನು ಕೇಳಿ ವಾಲಿಯು ಅತ್ಯಂತ ಕೋಪಯುಕ್ತನಾಗಿ ಮಹಾಮೇರುಪರ್ವತದಿಂದ ಸೂರ್ಯನಂತೆ ಅರಮನೆಯಿಂದ ಹೊರಬಂದನು. ಅನಂತರ ವಾಲಿ ಸುಗ್ರೀವರಿಬ್ಬರಿಗೂ ಬುಧಾಂಗಾರಕರಿಗೆ ಯುದ್ಧವಾಗುವಂತೆ ಯುದ್ಧವಾರಂಭವಾಯಿತು. ಅಂಗೈಗಳಿಂದಲೂ ವಜ್ರಾಯುಧದಂತಿರುವ ಮುಷ್ಟಿಗಳಿಂದಲೂ ಒಬ್ಬರನ್ನೊಬ್ಬರು ಹೊಯ್ಯುತ್ತ ಅತ್ಯಂತ ಕೋಪಾಟೋಪದಿಂದ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಬುದ್ಧಿಯಿಂದ ಹೋರಾಡಲಾರಂಭಿಸಿದರು. ಆ ಸಮಯದಲ್ಲಿ ಶ್ರೀರಾಮನು ವಾಲಿಯನ್ನು ಕೊಲ್ಲಬೇಕೆಂದು ಉದ್ದೇಶಿಸಿ ಶರೀರಾಕಾರಸ್ವರೂಪಗಳಿಂದ ಒಬ್ಬರಿಗೊಬ್ಬರು ಭೇದವಿಲ್ಲದೆ ಅಶ್ವಿನೀದೇವತೆಗಳಂತೆ ಇದ್ದ ವಾಲಿಸುಗ್ರೀವರನ್ನು ನೋಡಿ, ಅವರಿಬ್ಬರಲ್ಲಿ ವಾಲಿ ಯಾವನು—ಸುಗ್ರೀವನಾವನೆಂಬ ಭೇದವನ್ನು ತಿಳಿಯಲಾರದೆಯೇ ತನ್ನ ಬಾಣವನ್ನು ಬಿಲ್ಲಿಗೆ ಹೂಡದೆ ಸಂಶಯದಿಂದ ಸುಮ್ಮನಿದ್ದನು. ಅಷ್ಟರೊಳಗೆ ವಾಲಿಯು ತನ್ನ ಮುಷ್ಟಿಯಿಂದ ಸುಗ್ರೀವನನ್ನು ಹೊಡೆದನು. ಆತನ ಪೆಟ್ಟನ್ನು

ತಡೆಯಲಾರದೆ ಸುಗ್ರೀವನು ಋಷ್ಯಮೂಕಪರ್ವತಕ್ಕೆ ಓಡಿಹೋದನು. ವಾಲಿಯು ಮತಂಗ ಮುನೀಶ್ವರನ ಶಾಪದಿಂದ ಭಯಪಟ್ಟು ಋಷ್ಯಮೂಕಪರ್ವತಕ್ಕೆ ಹಿಂದಟ್ಟಿ ಹೋಗದೆ " ಎಲೇ ಸುಗ್ರೀವ, ನಿನ್ನ ಮೇಲಿನ ದಯೆಯಿಂದ ಈಹೊತ್ತು ಬಿಟ್ಟೆನು " ಎಂದು ನುಡಿದು ಕಿಷ್ಕಿಂಧಾ ಪಟ್ಟಣಕ್ಕೆ ಹೋದನು.

ಆಮೇಲೆ ಶ್ರೀರಾಮನು ಚಿಂತಾಕ್ರಾಂತನಾಗಿ ತನ್ನ ತಮ್ಮನಾದ ಲಕ್ಷ್ಮಣನನ್ನೂ ಹನುಮಂತನನ್ನೂ ಕೂಡಿಕೊಂಡು ಸುಗ್ರೀವನ ಬಳಿಗೆ ಬಂದನು. ಸುಗ್ರೀವನು ಲಜ್ಜೆಯಿಂದ ತಲೆಬಗ್ಗಿಸಿಕೊಂಡು " ಶ್ರೀರಾಮ, ನನ್ನಿಂದ ವಾಲಿಯನ್ನು ಯುದ್ಧಕ್ಕೆ ಕರೆಯಿಸಿದೆ. ನಿನ್ನ ಪರಾಕ್ರಮವನ್ನು ತೋರಿಸಿದೆ. ನಾನು ಪೆಟ್ಟುತಿನ್ನುವಂತೆ ಮಾಡಿದೆ. ಇದಲ್ಲವೆ ನೀನು ಮಾಡಿದ್ದು ? ನಾನು ವಾಲಿಯೊಡನೆ ಯುದ್ಧ ಮಾಡುವ ಸಮಯದಲ್ಲಿ ಆತನನ್ನು ಕೊಲ್ಲುವುದಾಗಿ ನುಡಿದು ಯುದ್ಧಮಾಡುತ್ತಿದ್ದ ಸಮಯದಲ್ಲಿ ಕೊಲ್ಲದೆ ಸುಮ್ಮನಿದ್ದೆ. ಇದು ನಿನಗೆ ಉಚಿತವೆ ? " ಎಂದು ಕೇಳಿದನು.

ಶ್ರೀರಾಮನು ಹೀಗೆ ಉತ್ತರ ಹೇಳಿದನು : " ಸುಗ್ರೀವ, ನನ್ನ ಮಾತನ್ನು ಕೇಳು. ಕೋಪಮಾಡಿ ಕೊಳ್ಳಬೇಡ. ನಾನು ಯಾವ ಕಾರಣ ವಾಲಿಯ ಮೇಲೆ ಶರಸಂಧಾನವನ್ನು ಮಾಡದಿದ್ದೆನೆಂದರೆ : ನೀವಿಬ್ಬರೂ ತೊಟ್ಟ ಆಭರಣಗಳಿಂದಲೂ ಶರೀರಾಕಾರಗಳಿಂದಲೂ ನಡೆಯಿಂದಲೂ ಮಾತಿನಿಂದಲೂ ನೋಟದಿಂದಲೂ ಪರಾಕ್ರಮದಿಂದಲೂ ಸಮಾನರಾಗಿದ್ದೀರಿ. ನಿಮ್ಮಿಬ್ಬರಲ್ಲಿ ವಾಲಿ ಯಾರು—ನೀನಾರು ಎಂಬ ಭೇದವನ್ನು ತಿಳಿಯಲಾರದೆ ಸಮಸ್ತ ಶತ್ರುಗಳ ಪ್ರಾಣಗಳನ್ನಪಹರಿಸುವ ನನ್ನ ಬಾಣಗಳನ್ನು ಸಂಧಾನಮಾಡದಿದ್ದೆನು. ಮೊದಲು ನಿನ್ನನ್ನು ವಾಲಿಯೆಂದೆಣಿಸಿ ಶರಸಂಧಾನಮಾಡಲೆತ್ನಿಸಿ ಆಮೇಲೆ ನೀನಿರಬಹುದೆಂಬ ಸಂದೇಹದಿಂದ ಸುಮ್ಮನಾದೆನು. ನಾನು ತಿಳಿಯದೆ ಬಾಣವನ್ನೆಸೆಯುವುದರಿಂದ ನನ್ನ ಪ್ರಾಣಸಖನಾದ ನೀನು ಹೋದರೆ, ಆ ಬಳಿಕ ಕೋಪದಿಂದ ವಾಲಿಯ ಮೇಲೆಯೂ ಅಂಬನ್ನು ತೊಟ್ಟರೆ, ನಿಮ್ಮ ವಂಶಕ್ಕೆಲ್ಲಾ ಹಾನಿಬರುವುದೆಂದು ಸುಮ್ಮನಿದ್ದೆನು. ಅದಲ್ಲದೆ ನಿನ್ನನ್ನು ವಾಲಿಯೆಂದು ಶರಸಂಧಾನಮಾಡುವುದರಿಂದ ಹಾನಿಯಾದರೆ ನನ್ನಲ್ಲಿ ಅಜ್ಞಾನವೂ ಮೂಢತ್ವವೂ ಪ್ರಮಾಣಹೀನತೆಯೂ ಮಕ್ಕಳಾಟಿಕೆಯೂ ಇದೆಯೆಂದು ಜನರು ತಿಳಿದುಕೊಳ್ಳುವರು. ವಿಶ್ವಾಸ ಘಾತಕನೆಂಬ ಮಹತ್ತಾದ ಅಪವಾದವು ನನಗೆ ಸಂಭವಿಸುವುದು. ನಾನೂ ಲಕ್ಷ್ಮಣನೂ ಸೀತಾ ದೇವಿಯೂ ನಿನ್ನ ಅಧೀನರಾಗಿದ್ದೇವೆ. ಆದಕಾರಣ ನೀನು ನನ್ನಲ್ಲಿ ಸಂಶಯವನ್ನು ಮಾಡದೆ ಪುನಃ ವಾಲಿಯೊಡನೆ ಯುದ್ಧವನ್ನು ಮಾಡು. ನಾನು ಒಂದು ಕ್ಷಣಮಾತ್ರದಲ್ಲಿ ಆತನನ್ನು ಕೊಲ್ಲುತ್ತೇನೆ. ಇಂದು ನನ್ನ ಶರಹತಿಯಿಂದ ವಾಲಿಯು ಗಾಯಪಡೆದು ಬಿದ್ದು ಹೊರಳುವುದನ್ನು ನೀನು ಕಾಣುವೆ. ಆದರೆ ನಿಮ್ಮಿಬ್ಬರ ಭೇದವನ್ನು ತಿಳಿಯುವುದಕ್ಕೆ ಒಂದು ಉಪಾಯವನ್ನು ಹೇಳುತ್ತೇನೆ ಕೇಳು. ನೀವಿಬ್ಬರೂ ಯುದ್ಧವನ್ನು ಮಾಡುವ ಸಮಯದಲ್ಲಿ ನಿನ್ನ ಸ್ವರೂಪವು ತಿಳಿಯುವಂತೆ ಒಂದು ಕುರುಹನ್ನು ಮಾಡಿಕೊ. ಕುಸುಮಿತವಾದ ನಾಗಪುಷ್ಪಿಯ ಲತೆಯನ್ನು ಕೊರಳಿಗೆ ಅಲಂಕಾರವಾಗಿ ಧರಿಸಿಕೊಂಡರೆ ನೀನು ಸುಗ್ರೀವನೆಂದು ನನಗೆ ಕುರುಹಾಗಿರುವುದು " ಎಂದು ನುಡಿದು ಲಕ್ಷ್ಮಣನನ್ನು ಕರೆದು " ಎಲೈ ಲಕ್ಷ್ಮಣ, ನೀನು ಮಹಾತ್ಮನಾದ ಸುಗ್ರೀವನಿಗೆ ಪುಷ್ಪಿತವಾದ ನಾಗಪುಷ್ಪಿಯ ಲತೆಯನ್ನು ತಂದು ಕೊರಳಿಗೆ ಹಾಕು " ಎಂದು ಹೇಳಿದನು.

ಆಗ ಲಕ್ಷ್ಮಣನು ಆ ವನದಲ್ಲಿ ಹುಡುಕಿ ಕುಸುಮಿತವಾದ ಒಂದು ನಾಗಪುಷ್ಪಿಯ ಲತೆಯನ್ನು ತಂದು ಆತನ ಕೊರಳಿಗೆ ಹಾಕಿದನು. ಆಗ ಸುಗ್ರೀವನು ಬಲಾಕಾಪಕ್ಷಿಗಳ ಮಾಲೆಯಿಂದ ಕೂಡಿದ ಸಂಜೆಯ ಮೇಘದಂತೆ ಒಪ್ಪುತ್ತಿದ್ದನು.



## ೧೩ ನೆಯ ಅಧ್ಯಾಯ

## ಸಪ್ತಜನಾಶ್ರಮದ ವರ್ಣನೆ

ಆ ಬಳಿಕ ಶ್ರೀರಾಮನು ಸುವರ್ಣಮಯವಾದ ಬಿಲ್ಲಿಗೆ ಹೆದೆಯನ್ನೇರಿಸಿ ಯುದ್ಧಸಾಧಕವಾದ ಸೂರ್ಯಪ್ರಭೆಯಂತೆ ಕಾಂತಿಯುಳ್ಳ ಅಂಬುಗಳನ್ನು ತೆಗೆದುಕೊಂಡು ಋಷ್ಯಮೂಕಪರ್ವತವನ್ನು ಬಿಟ್ಟು ವಾಲಿಯ ಭುಜಬಲಪರಾಕ್ರಮದಿಂದ ರಕ್ಷಿಸಲ್ಪಟ್ಟ ಕಿಷ್ಕಿಂಧೆಗೆ ಸುಗ್ರೀವನನ್ನು ಮುಂದಿಟ್ಟು ಕೊಂಡು ಹೊರಟನು. ಆತನ ಹಿಂದೆ ಲಕ್ಷ್ಮಣನೂ ಹನುಮಂತ ನೀಲ ನಳ ತಾರರೂ ಹೊರಟರು. ಹೀಗೆ ಅವರು ಕಿಷ್ಕಿಂಧಾಪಟ್ಟಣಕ್ಕೆ ಹೋಗುತ್ತ ಮಧ್ಯಮಾರ್ಗದಲ್ಲಿ ಅನೇಕ ಪುಷ್ಪಿತವಾದ ವೃಕ್ಷಗಳನ್ನೂ ನಿರ್ಮಲೋದಕವುಳ್ಳ ಬೇರೆಬೇರೆ ಸಮುದ್ರಗಾಮಿಗಳಾದ ನದಿಗಳನ್ನೂ ಅನೇಕ ಪರ್ವತಗಳನ್ನೂ ಆ ಪರ್ವತಗಳ ನಿರ್ಝರಗಳನ್ನೂ ಗುಹೆಗಳನ್ನೂ ಭಯಂಕರವಾದ ಅನೇಕ ಬಿಲಗಳನ್ನೂ ವೈಡೂರ್ಯರತ್ನದಂತೆ ನಿರ್ಮಲವಾದ ಎಸಳುಗಳುಳ್ಳ ಕಮಲಗಳಿಂದಲೂ ಒಪ್ಪುತ್ತಿರುವ ಮಾರ್ಗದಲ್ಲಿದ್ದ ಕೆರೆಗಳನ್ನೂ ಅಲ್ಲಿರುವ ಹಂಸ ಸಾರಸ ನೀರುಕೋಳಿ ಚಕ್ರವಾಕ ಮೊದಲಾದ ಪಕ್ಷಿಗಳನ್ನೂ ಕಿವಿಗಿಂಪಾಗಿ ಸ್ವರಗೈಯುತ್ತಿದ್ದ ಪಕ್ಷಿಗಳನ್ನೂ ಕೋಮಲವಾದ ಎಳೆಹುಲ್ಲನ್ನು ಮೇಯುತ್ತ ಭಯವಿಲ್ಲದೆ ಸಂಚರಿಸುತ್ತಿದ್ದ ಮೃಗಗಳನ್ನೂ ನೋಡುತ್ತ ಹೋಗುತ್ತಿದ್ದರು. ಆ ಸಮಯದಲ್ಲಿ ಮನೋಹರವಾದ ಒಂದು ವನವನ್ನು ಕಂಡು ಶ್ರೀರಾಮನು ಸುಗ್ರೀವನನ್ನು ಕುರಿತು "ಸುಗ್ರೀವ, ನೀರುಂಡ ಮೇಘದಂತೆ ರಮಣೀಯವಾಗಿ ಸುತ್ತಲೂ ಕದಳೀವನವುಳ್ಳ ಈ ವನವಾರದು ? ಯಾವ ಕಾರಣದಿಂದ ಈ ವನವು ಇಂಥ ಗಿರಿಪ್ರದೇಶದಲ್ಲಿಯೂ ಮನೋಹರವಾಗಿದೆ ? ಈ ವನದ ವಿಷಯವನ್ನು ಕೇಳುವುದಕ್ಕೆ ನನ್ನ ಮನಸ್ಸಿಗೆ ಕುತೂಹಲವಾಗುತ್ತಿದೆ. ಈ ವನದ ಮಹಿಮೆಯನ್ನು ಹೇಳು" ಎಂದು ಕೇಳಿದನು.

ಆ ಮಾತನ್ನು ಕೇಳಿ ಸುಗ್ರೀವನು "ಶ್ರೀರಾಮ, ಕೇಳು : ಈ ವನವು ವಿಸ್ತೀರ್ಣವಾದದ್ದು. ಇದು ಮುನಿಗಳ ಒಂದು ಆಶ್ರಮ. ನಂದನವನದಂತೆ ಸಂಪನ್ನತೆಯುಳ್ಳುದು ಅತ್ಯಂತ ಸ್ವಾದುವಾದ ಕಂದಮೂಲಫಲಗಳುಳ್ಳುದು. ಈ ಆಶ್ರಮದಲ್ಲಿ ಅನೇಕ ವ್ರತನಿಯಮಗಳುಳ್ಳ ಸಪ್ತಜನರೆಂಬ ತಪಸ್ವಿಗಳಿದ್ದರು. ಅವರೆಲ್ಲರೂ ತೀಕ್ಷ್ಣವಾದ ವ್ರತವನ್ನು ಹಿಡಿದು ತಲೆಕೆಳಗಾಗಿ ನೀರಿನಲ್ಲಿ ಮುಳುಗಿ ತಪಸ್ಸನ್ನು ಮಾಡುತ್ತಿದರು. ಅವರು ಈ ವನದಲ್ಲಿ ಏಳು ರಾತ್ರಿಗಳಿಗೊಂದು ಬಾರಿ ಗಾಳಿಯನ್ನು ಕುಡಿದು ಏಳುನೂರು ವರ್ಷಗಳ ಕಾಲ ತಪಸ್ಸನ್ನು ಮಾಡಿ ಕೊನೆಗೆ ಸಶರೀರರಾಗಿ ಸ್ವರ್ಗವನ್ನು ಸೇರಿದರು. ಅಂಥ ಋಷಿಗಳ ತಪೋಮಹಿಮೆಯಿಂದ ಈ ವನವು ದೇವಾಸುರರಿಗೂ ಆಕ್ರಮಿಸಲು ಅಸಾಧ್ಯವಾಗಿದೆ. ಅಜ್ಞಾನದಿಂದ ಈ ವನವನ್ನು ಹೊಕ್ಕ ಮೃಗಪಕ್ಷಿಗಳಾದರೂ ಮನುಷ್ಯರಾದರೂ ತಿರುಗಿ ಬರುವಂತಿಲ್ಲ. ಈ ವನದಲ್ಲಿ ಎಲ್ಲಿ ನೋಡಿದರೂ ಭೂಷಣಗಳ ಧ್ವನಿಗಳೂ ತಾಳಮದ್ದಳೆಗಳ ಧ್ವನಿಯೂ ಗಾನಸ್ವರಗಳೂ ಕೇಳಲ್ಪಡುವುವು. ಇದು ಯಾವಾಗಲೂ ದಿವ್ಯವಾದ ಗಂಧಪರಿಮಳ ವುಳ್ಳದ್ದಾಗಿರುವುದು. ಈ ವನಮಧ್ಯದಲ್ಲಿ ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿಗಳೆಂಬ ಅಗ್ನಿತ್ರಯಗಳು ಜ್ವಲಿಸುತ್ತಿರುವುವು. ಕಾಣುತ್ತಿರುವ ಈ ಹೊಗೆಯು ವೃಕ್ಷಾಗ್ರಗಳನ್ನು ದಟ್ಟವಾಗಿಸುತ್ತ ಮೇಘದಿಂದ ಮುಚ್ಚಲ್ಪಟ್ಟ ವೈಡೂರ್ಯದ ಬೆಟ್ಟಗಳಂತೆ ತೋರುವುವು. ಶ್ರೀರಾಮ, ನೀನು ಸಾವಧಾನನಾಗಿ ಲಕ್ಷ್ಮಣಸಮೇತ ಕೈಮುಗಿದುಕೊಂಡು ಇಲ್ಲಿರುವ ಋಷಿಗಳಿಗೆ ಅಭಿವಾದನಮಾಡು.

ಈ ಋಷಿಗಳಿಗೆ ಅಂತರಂಗಶುದ್ಧಿಯಿಂದ ನಮಸ್ಕಾರವನ್ನು ಮಾಡುವವರ ಶರೀರಕ್ಕೆ ಬಾಧೆಯು ಬರಲಾರದು" ಎಂದು ಹೇಳಿದನು.

ಆ ಮಾತನ್ನು ಕೇಳಿ ಶ್ರೀರಾಮನು ಲಕ್ಷ್ಮಣಸಮೇತನಾಗಿ ಕೈಮುಗಿದುಕೊಂಡು ಅಲ್ಲಿದ್ದ ತಪಸ್ವಿಗಳಿಗೆ ಅಭಿವಾದನಮಾಡಿದನು. ತರುವಾಯ ಹನುಮಂತನೇ ಮೊದಲಾದ ನಾಲ್ಕುಮಂದಿ ಕಪಿನಾಯಕರೊಡನೆ ಸುಗ್ರೀವನನ್ನು ಮುಂದಿಟ್ಟುಕೊಂಡು ಅನ್ಯೋನ್ಯ ಸಂಭಾಷಣೆ ಮಾಡುತ್ತ ಆ ಆಶ್ರಮವನ್ನು ದಾಟಿ ವಾಲಿಯ ಭುಜಬಲಪರಾಕ್ರಮದಿಂದ ರಕ್ಷಿಸಲ್ಪಟ್ಟ ಕಿಷ್ಕಿಂಧಾಪಟ್ಟಣಕ್ಕೆ ಹೋದನು.



೧೪ ನೆಯ ಅಧ್ಯಾಯ

## ಸುಗ್ರೀವನು ವಾಲಿಯನ್ನು ಯುದ್ಧಕ್ಕೆ ಕರೆದದ್ದು

ಹೀಗೆ ಸುಗ್ರೀವನು ರಾಮಲಕ್ಷ್ಮಣರನ್ನೂ ತನ್ನ ಪ್ರಧಾನರಾದ ಹನುಮಂತನೇ ಮೊದಲಾದ ನಾಲ್ವರು ಕಪಿನಾಯಕರನ್ನೂ ಕರೆದುಕೊಂಡು ಕಿಷ್ಕಿಂಧಾಪಟ್ಟಣಕ್ಕೆ ಹೋದನು. ಅಲ್ಲಿ ಹನುಮಂತನೇ ಮೊದಲಾದವರನ್ನು ಕೂಡಿಕೊಂಡು ಪ್ರಳಯಕಾಲದ ಮೇಘವು ಗುಡುಗುವಂತೆ ಬೊಬ್ಬಿಟ್ಟು ಕೂಗಿ ಮೇಘಮಂಡಲವು ಒಡೆಯುವಂತೆ ಅತಿಭಯಂಕರವಾದ ಧ್ವನಿಯಿಂದ ವಾಲಿಯನ್ನು ಯುದ್ಧಕ್ಕೆ ಕರೆದನು. ಸುಗ್ರೀವನು ಬಾಲಸೂರ್ಯನಂತೆ ತೇಜಸ್ಸುಳ್ಳವನಾಗಿಯೂ ಕೊಬ್ಬಿದ ಸಿಂಹರಾಜನಂತೆ ಸಂಚಾರವುಳ್ಳವನಾಗಿಯೂ ಮೆರೆಯುತ್ತ ಮಹಾದಕ್ಷನಾದ ಶ್ರೀರಾಮನನ್ನು ನೋಡಿ "ಶ್ರೀರಾಮ, ಸುತ್ತಲೂ ಶತ್ರುವಾನರರು ಬರದಂತೆ ಹಾಕಿದ ಉರುಳುಬಲೆಗಳುಳ್ಳ ಸುವರ್ಣಮಯವಾದ ಕೊತ್ತಳಗಳುಳ್ಳ ತೆಕ್ಕೆಯಗಳೇ ಮೊದಲಾದ ದುರ್ಗಸಂವರಣಗಳಿಂದ ಸಜ್ಜುಮಾಡಲ್ಪಟ್ಟ ಕಿಷ್ಕಿಂಧಾಪಟ್ಟಣಕ್ಕೆ ನಾವು ಬಂದೆವು. ಕಾಲವು ಯೋಗ್ಯಸಮಯದಲ್ಲಿ ಲತೆಯನ್ನು ಫಲಪುಷ್ಪಗಳಿಂದ ಸಮೃದ್ಧವನ್ನಾಗಿ ಮಾಡುವಂತೆ ನೀನು ಈಗ ನಿನ್ನ ಪ್ರತಿಜ್ಞೆಯನ್ನು ಸಫಲವಾಗಿ ಮಾಡು" ಎಂದು ಹೇಳಿದನು.

ಶ್ರೀರಾಮನು "ಸುಗ್ರೀವ, ಈ ದಿನ ನೀನು ನಾಗಪುಷ್ಪೀಲತೆಯಿಂದ ಚಿಹ್ನಿತನಾಗಿದ್ದೀಯೆ. ಲಕ್ಷ್ಮಣನು ಈ ಹಾರವನ್ನು ನಿನ್ನ ಕೊರಳಿಗೆ ಹಾಕಿರುವುದರಿಂದ, ನಕ್ಷತ್ರಮಾಲೆಯಿಂದ ಪರಿವೃತನಾದ ಸೂರ್ಯನಂತೆ ಬೆಳಗುತ್ತಿದ್ದೀಯೆ. ಇಂದು ನಿನಗೆ ವಾಲಿಯಿಂದ ಬಂದ ಭಯವನ್ನು ಒಂದು ಬಾಣದಿಂದ ಪರಿಹರಿಸುತ್ತೇನೆ. ನೀನು ನಿನ್ನ ಶತ್ರುವಾದ ವಾಲಿಯನ್ನು ತೋರಿಸಿದ ಮಾತ್ರದಲ್ಲಿಯೇ ನನ್ನ ಬಾಣದಿಂದ ಆತನು ಗಾಯಪಡೆದು ಬಿದ್ದು ಧೂಳಲ್ಲಿ ಹೊರಳುವುದನ್ನು ಕಾಣುವೆ. ಇಂದು ನನ್ನ ದೃಷ್ಟಿಗೋಚರನಾದ ವಾಲಿಯು ಹತನಾಗದೆ ಜೀವದಿಂದಿದ್ದರೆ ನೀನು ನನ್ನ ಮೇಲೆ ಕೋಪಿಸು. ಈ ಮೊದಲು ನಾನು ಒಂದೇ ಬಾಣದಿಂದ ಏಳು ಮರಗಳನ್ನು ಒಂದೇ ಬಾರಿ ಹೊಡೆದು ಕೆಡಹಿದುದನ್ನು ಕಂಡ ನೀನು ರಾಮನು ವಾಲಿಯನ್ನು ಕೊಲ್ಲುವುದರಲ್ಲಿ ಸಂಶಯವಿಲ್ಲವೆಂದು ನಿಶ್ಚಯಿಸಿಕೊಂಡಿದ್ದೆ. ಎಂಥ ಆಪತ್ತು ಬಂದರೂ ನಾನು ಆಡಿದ ಮಾತನ್ನು ತಪ್ಪುವವನಲ್ಲ. ಸುಗ್ರೀವ, ನೀನು ಈಗ ಯುದ್ಧಕ್ಕೆ ಕೂಗಿ ಕರೆದದ್ದು ವಾಲಿಯ ನಾಶಕ್ಕೆ ಸೂಚಕವಾಗಿದೆ. ಈಗ ಇನ್ನೊಮ್ಮೆ ಆರ್ಭಟಿಸಿ ಕೂಗಿ ಕರೆ. ಯುದ್ಧಪ್ರಿಯನಾದ ವಾಲಿಯು ೨

ವೇಗದಿಂದ ಬರುವನು. ಆತನು ನಿನ್ನ ಪರಾಕ್ರಮವನ್ನು ಬಲ್ಲನು. ಪರಾಕ್ರಮವುಳ್ಳವರು ಸ್ತ್ರೀಯರ ಸಮೀಪದಲ್ಲಿರುವಾಗ ಶತ್ರುಗಳ ಧ್ವನಿಯನ್ನು ಕೇಳಿ ಸಹಿಸಲಾರರು" ಎಂದು ಹೇಳಿದನು.

ಆ ಬಳಿಕ ಸುಗ್ರೀವನು ಪುನಃ ಮೇಘಮಂಡಲವು ಒಡೆಯುವಂತೆ ಬೊಬ್ಬಿಟ್ಟು ಕೂಗಿದನು. ಅದನ್ನು ಕೇಳಿ ಕಾಮುಕನಾದ ಅರಸನ ದುರ್ನೀತಿಯಿಂದ ಆತನ ರಾಜ್ಯದಲ್ಲಿರುವ ಕುಲಾಂಗನೆಯರು ಭಯಪಟ್ಟು ಓಡುವಂತೆಯೂ ಯುದ್ಧರಂಗದಲ್ಲಿ ಮುರಿದ ರಾವುತರ ಕುದುರೆಗಳು ಪಲಾಯನ ಮಾಡುವಂತೆಯೂ ಆ ವನದಲ್ಲಿದ್ದ ಮೃಗಗಳು ಓಡಿಹೋದವು. ನಕ್ಷತ್ರಗಳು ಭೋಗಾದೃಷ್ಟವು ತೀರಿದ ಬಳಿಕ ನಕ್ಷತ್ರಲೋಕದಿಂದ ಭೂಲೋಕಕ್ಕೆ ಬೀಳುವಂತೆ, ಅಂತರಿಕ್ಷಮಾರ್ಗದಲ್ಲಿ ಸಂಚರಿಸುತ್ತಿದ್ದ ಪಕ್ಷಿಗಳು ಭೂಮಿಯ ಮೇಲೆ ಬಿದ್ದವು. ಬಿರುಗಾಳಿಯಿಂದೇಳುವ ತೆರೆಗಳಿಂದ ಸಮುದ್ರವು ಉಕ್ಕುವಂತೆ ಪರಾಕ್ರಮಾತಿಶಯದಿಂದ ಹೆಚ್ಚಿದ ತೇಜಸ್ಸುಳ್ಳ ಸುಗ್ರೀವನು ಗುಡುಗಿನಂತೆ ಬೊಬ್ಬಿಟ್ಟು ಕೂಗುತ್ತ ಅತ್ಯಂತ ಶೌರ್ಯವುಳ್ಳವನಾಗಿ ಯುದ್ಧಸಂನದ್ಧನಾದನು.



## ೧೫ ನೆಯ ಅಧ್ಯಾಯ

## ತಾರಾದೇವಿಯು ವಾಲಿಗೆ ಹೇಳಿದ ನೀತಿ

ಈ ಪ್ರಕಾರ ಬೊಬ್ಬಿಟ್ಟು ಕೂಗುತ್ತಿದ್ದ ತನ್ನ ತಮ್ಮನಾದ ಸುಗ್ರೀವನ ಗರ್ಜನೆಯನ್ನು ಅತ್ಯಂತ ಕೋಪಯುಕ್ತನಾಗಿ ವಾಲಿಯು ಕೇಳಿದನು. ಅವನು ರೋಷದಿಂದ ಸಂಧ್ಯಾಕಾಲದ ಮೇಘಕ್ಕೆ ಸಮಾನವಾದ ಶರೀರಕಾಂತಿಯುಳ್ಳವನಾಗಿ ರಾಹುತುಡುಕಿದ ಸೂರ್ಯನಂತೆ ಕಾಂತಿಗುಂದಿದನು. ರೋಷದಿಂದ ಪ್ರಜ್ವಲಿಸುತ್ತಿದ್ದ ಆ ವಾಲಿಯು ಸುಗ್ರೀವನ ಆರ್ಭಟಧ್ವನಿಯನ್ನು ಕೇಳಿದೊಡನೆಯೇ ಅತಿವೇಗದಿಂದ ಹೊರಟು ತನ್ನ ಪಾದಹತಿಯಿಂದ ಭೂಮಿಯನ್ನು ಒಡೆಯುವಂತೆ ಬರುತ್ತಿದ್ದನು. ಅದನ್ನು ಕಂಡು ಆತನ ಸ್ತ್ರೀಯಾದ ತಾರಾದೇವಿಯು ಬೆದರಿ ಕಂಗೆಟ್ಟು ಆತನನ್ನು ಸ್ನೇಹಾತಿಶಯದಿಂದ ಹಿಡಿದು ತಬ್ಬಿಕೊಂಡು ನಿಲ್ಲಿಸಿ ಆತನಿಗೆ ಶ್ರೇಯಸ್ಕರವೂ ಹಿತವೂ ಆದ ಮಾತುಗಳಿಂದ ಹೀಗೆಂದಳು: "ಪ್ರಾಣಕಾಂತ, ವರ್ಷಾಕಾಲದ ನದೀಪ್ರವಾಹದಂತೆ ಪ್ರತಿಕ್ಷಣದಲ್ಲಿಯೂ ಹೆಚ್ಚುತ್ತಿರುವ ಈ ರೋಷವನ್ನು, ಬಾಡಿದ ಪುಷ್ಪಮಾಲೆಯನ್ನು ತೆಗೆದೆಸೆಯುವಂತೆ ತ್ಯಜಿಸು. ನಾಳೆ ಪ್ರಾತಃಕಾಲದಲ್ಲಿ ಸುಗ್ರೀವನ ವೃತ್ತಾಂತವನ್ನು ಚೆನ್ನಾಗಿ ವಿಚಾರಿಸಿಕೊಂಡು ಯುದ್ಧಕ್ಕೆ ಹೋಗು. ಈಗ ಹೋಗಬೇಡ. ಸುಗ್ರೀವನೊಬ್ಬನೇ ಅಲ್ಲ. ನಿನಗೆ ಬಹಳ ಮಂದಿ ಶತ್ರುಗಳುಂಟು. ನೀನು ಹೀಗೆ ಅತಿವೇಗದಿಂದ ಯುದ್ಧಕ್ಕೆ ಹೋಗುವುದು ನನ್ನ ಮನಸ್ಸಿಗೆ ಸರಿಯೆನಿಸುತ್ತಿಲ್ಲ. ನಿನ್ನೆ ಸುಗ್ರೀವನು ಯುದ್ಧಕ್ಕೆ ಬಂದು ನಿನ್ನ ಮುಷ್ಟಿಪ್ರಹಾರಗಳಿಂದ ಗಾಯಪಡೆದು ನೊಂದು ಮುರಿದುಹೋದನು. ಇಂದು ತಿರುಗಿ ಬಂದು ನಿನ್ನನ್ನು ಸಮರಕ್ಕೆ ಕರೆಯುತ್ತಿರುವುದು ನನ್ನ ಮನಸ್ಸಿಗೆ ಸಂಶಯವನ್ನುಂಟು ಮಾಡುತ್ತಿದೆ. ನಿನ್ನೆ ಮುರಿದು ಹೋದವನು ಇಂದು ತಿರುಗಿ ಬಂದು ಗರ್ವಿತನಾಗಿ ನಿನ್ನನ್ನು ಯುದ್ಧಕ್ಕೆ ಬೊಬ್ಬಿಟ್ಟು ಕೂಗುವುದು ಅಲ್ಪಕಾರ್ಯವಲ್ಲ. ಏನಾದರೂ ಒಂದು ವಿಶೇಷಕಾರಣವಿರಬೇಕು. ಸುಗ್ರೀವನು ಯಾರನ್ನಾದರೂ ಸಹಾಯಮಾಡಿಕೊಂಡಲ್ಲದೆ ಇಲ್ಲಿಗೆ ಬರಲಾರನು. ಒಬ್ಬರ ಸಹಾಯದಿಂದಲೇ ಇಲ್ಲಿಗೆ ಬಂದು ಗರ್ಜಿಸುತ್ತಿದ್ದಾನೆ. ಸುಗ್ರೀವನು ಸ್ವಭಾವದಿಂದ ಮಹಾನಿಪುಣ;

ಅತ್ಯಂತ ಬುದ್ಧಿಸಂಪನ್ನ. ಒಬ್ಬನ ಪರಾಕ್ರಮವನ್ನು ಪರೀಕ್ಷಿಸಿ ನೋಡದೆ ಅವನ ಸಹಾಯವನ್ನು ಮಾಡಿಕೊಳ್ಳನು. ಪ್ರಾಣಕಾಂತ, ನಾನು ಒಂದು ವೃತ್ತಾಂತವನ್ನು ಕೇಳಿದ್ದೇನೆ. ಅದೇನೆಂದರೆ, ಅಂಗದಕುಮಾರನು ವಿನೋದಾರ್ಥವಾಗಿ ವನಕ್ಕೆ ಹೋದಾಗ ಆತನಿಗಾಪ್ತರಾದ ಬೇಹುಗಾರರಿಂದ ಕೇಳಿದ ಒಂದು ವೃತ್ತಾಂತವನ್ನು ನನ್ನೊಡನೆ ಹೇಳಿದನು. ಅಯೋಧ್ಯಾಪಟ್ಟಣಕ್ಕೆ ಒಡೆಯನಾದ ದಶರಥರಾಯನ ಇಬ್ಬರು ಕುಮಾರರು ಬಂದಿದ್ದಾರಂತೆ. ಅವರ ಹೆಸರು ರಾಮಲಕ್ಷ್ಮಣರಂತೆ. ಅವರು ಇಕ್ಷ್ವಾಕುವಂಶದ ರಾಜರಂತೆ. ಅವರು ತಮ್ಮ ಇಷ್ಟಾರ್ಥವನ್ನು ಸಲ್ಲಿಸಕೊಳ್ಳಬೇಕೆಂದು ಸುಗ್ರೀವನೊಡನೆ ಸ್ನೇಹವನ್ನು ಮಾಡಿಕೊಂಡಿದ್ದಾರಂತೆ. ಶ್ರೀರಾಮನು ದಶರಥರಾಯನ ನಾಲ್ವರು ಕುಮಾರರಲ್ಲಿ ಜ್ಯೇಷ್ಠನಾಗಿ ರಣಪಂಡಿತನಾದವನಂತೆ. ಪ್ರಳಯಕಾಲಾಗ್ನಿಯಂತೆ ಸಮಸ್ತ ಶತ್ರುಗಳನ್ನೂ ಸಂಹರಿಸುವವನಂತೆ. ಸಮಸ್ತ ಸತ್ಪುರುಷರಿಗೂ ಆಶ್ರಯನಾದವನೂ ಕಂಗೆಟ್ಟವರಿಗೆ ಅಭಯವನ್ನು ಕೊಡುವವನೂ ಅನಾಥರಕ್ಷಕನೂ ಅತಿಕೀರ್ತಿವಂತನೂ ಮಹಾಜ್ಞಾನಿಯೂ ಆಗಿರುವನಂತೆ. ಪರ್ವತವು ಸಮಸ್ತ ಗೈರಿಕಾದಿಧಾತುಗಳಿಗೂ ಸಮುದ್ರವು ಸಮಸ್ತ ರತ್ನಗಳಿಗೂ ಆಧಾರವಾದಂತೆ ಆತನು ಸಮಸ್ತ ಸದ್ಗುಣಗಳಿಗೂ ಆಧಾರವಾದವನಂತೆ. ಆದಕಾರಣ ಮಹಾತ್ಮನಾದ ಶ್ರೀರಾಮನೊಡನೆ ಯುದ್ಧವನ್ನು ಮಾಡುವುದು ನಿನಗುಚಿತವಲ್ಲ. ಪ್ರಾಣನಾಥ, ಶ್ರೀರಾಮನೊಡನೆ ವಿರೋಧಮಾಡುವ ಬುದ್ಧಿಯನ್ನು ಬಿಟ್ಟು ನನ್ನ ಮಾತನ್ನು ಕೇಳಿ ಹಿತವೆಂದು ವಿಚಾರಿಸು. ಸುಗ್ರೀವನನ್ನು ಕರೆದು ಯುವರಾಜಪಟ್ಟವನ್ನು ಕಟ್ಟು. ನಿನ್ನ ತಮ್ಮನಾದ ಸುಗ್ರೀವನೊಡನೆ ಹಗೆತನವನ್ನು ಬೆಳಸಬೇಡ. ನಿನಗೆ ಶ್ರೀರಾಮನೊಡನೆ ಸ್ನೇಹಮಾಡಿಕೊಂಡಿರುವುದೇ ಯುಕ್ತ. ಸುಗ್ರೀವನೊಡನೆ ವೈರವನ್ನು ಬಿಟ್ಟು ಆತನನ್ನು ಸಂಮಾನಿಸಿ ಆತನಲ್ಲಿ ಪ್ರೀತಿಯನ್ನು ತೋರಿಸುವುದೇ ನಿನಗೆ ಯೋಗ್ಯ. ಸುಗ್ರೀವನು ಎಲ್ಲಿದ್ದರೂ ನಿನಗೆ ಹಿತನಾದ ಬಂಧುವೇ ಸರಿ. ಆತನಿಗಿಂತ ನಿನಗೆ ಶ್ರೇಷ್ಠ ಬಂಧುಗಳಿನ್ನಾರಿದ್ದಾರೆ ? ನೀನು ಆತನಿಗೆ ಉಚಿತವಾದ ಮರ್ಯಾದೆಯಿಂದ ಸತ್ಕಾರವನ್ನು ಮಾಡಿ ನಿನ್ನಲ್ಲಿ ವಿಶ್ವಾಸವು ಹುಟ್ಟುವಂತೆ ಮಾಡಿಕೊ. ಆತನು ನಿನ್ನ ಮೇಲಿನ ವೈರವನ್ನು ಬಿಟ್ಟು ನಿನ್ನ ಸಮೀಪದಲ್ಲಿರಲಿ. ನಿನ್ನ ತಮ್ಮನಾದ ಸುಗ್ರೀವನೊಡನೆ ಸ್ನೇಹವನ್ನು ಬೆಳಸಿಕೊಂಡಿರುವುದಕ್ಕಿಂತ ನಿನಗೆ ಮತ್ತೊಂದು ಹೆಚ್ಚಿನ ಕಾರ್ಯವಿಲ್ಲ. ನಿನ್ನ ಮನಸಿನಲ್ಲಿ ನಾನು ನಿನಗೆ ಹಿತಳಾದವಳೆಂದೆಣಿಸಿರುವ ಪಕ್ಷದಲ್ಲಿ—ನಿನಗೆ ನನ್ನಲ್ಲಿ ಪ್ರೀತಿಯಿರುವ ಪಕ್ಷದಲ್ಲಿ ನನ್ನ ಮಾತನ್ನು ಕೇಳು. ನಾನು ನಿನಗೆ ಕೈಮುಗಿದು ಬೇಡಿಕೊಳ್ಳುವೆನು. ನಾನು ಹೇಳಿದ ಮಾತನ್ನು ಹಿತವೆಂದು ನಂಬಿ ಈ ರೋಷವನ್ನು ಬಿಡು. ಯಾವ ಪ್ರಕಾರದಲ್ಲಾದರೂ ಶ್ರೀರಾಮನೊಡನೆ ವಿರೋಧವನ್ನು ಮಾಡಿಕೊಳ್ಳುವುದು ನಿನಗೆ ಯೋಗ್ಯವಲ್ಲ" ಎಂದು ಅನೇಕ ನೀತಿವಚನಗಳನ್ನು ನುಡಿದಳು.

---

## ೧೬ ನೆಯ ಅಧ್ಯಾಯ

## ಶ್ರೀರಾಮನು ವಾಲಿಯ ಮೇಲೆ ಬಾಣವನ್ನು ಪ್ರಯೋಗಿಸಿದ್ದು

ಹೀಗೆ ಹಿತೋಪದೇಶವನ್ನು ಹೇಳುತ್ತಿದ್ದ ತಾರಾದೇವಿಯನ್ನು ಗದರಿಸಿ ವಾಲಿಯು "ಎಲೇ ತಾರೇ, ಗರ್ಜಿಸುತ್ತಿರುವ ನನ್ನ ಶತ್ರುವಾದ ಸುಗ್ರೀವನ ಮೇಲಿರುವ ಕೋಪವನ್ನು ತಡೆಯಲಾರೆನು. ಯುದ್ಧರಂಗದಲ್ಲಿ ಹಿಮ್ಮೆಟ್ಟದೆ ಯುದ್ಧವನ್ನು ಮಾಡುವ ಪರಾಕ್ರಮಿಗಳಿಗೆ ಶತ್ರುಗಳು ಬೊಬ್ಬಿಡುವ

ಧ್ವನಿಯನ್ನು ಕೇಳುವುದು ಅವಮಾನಕರವಾದದ್ದು. ಹಾಗಿರುವಲ್ಲಿ ಸುಗ್ರೀವನ ಕೋಲಾಹಲ ಧ್ವನಿಯನ್ನು ಹೇಗೆ ತಾನೆ ಸಹಿಸಿಕೊಂಡಿರಲಿ ? ಶತ್ರುಗಳ ಅದ್ಧರಣೆಯನ್ನು ಸಹಿಸುವುದು ಪರಾಕ್ರಮಿಗಳಿಗೆ ಮರಣಾವಸ್ಥೆಯಾಗಿ ತೋರುವುದು. ಸುಗ್ರೀವನು ನನ್ನೊಡನೆ ಯುದ್ಧವನ್ನು ಮಾಡಬೇಕೆಂದು ಆರ್ಭಟಿಸಿ ಕೂಗುವ ಧ್ವನಿಯನ್ನು ನಾನು ಸಹಿಸಲಾರೆನು. ತಾರಾದೇವಿ, ನೀನು ಶ್ರೀರಾಮನೊಡನೆ ಹಗೆತನವು ಬೇಡವೆಂದು ಹೇಳಿದರೂ ಕೇಳದೆ ನಾನು ಹೋಗುತ್ತಿದ್ದೇನೆಂದು ಕೋಪಿಸಬೇಡ. ಶ್ರೀರಾಮನು ಧರ್ಮಿಷ್ಠ, ಕೃತಜ್ಞ. ಅಂಥವನು ನನ್ನಲ್ಲಿ ಪಾಪಬುದ್ಧಿಯನ್ನೆಣಿಸನು. ನೀನು ಅಂಜಬೇಡ. ಈ ಸ್ತ್ರೀಯರನ್ನು ಕರೆದುಕೊಂಡು ಹಿಂದಿರುಗು ನೀನು ಹೇಳಿದ ಮಾತು ಒಳ್ಳೆಯದಾಯಿತು. ನೀನು ನನ್ನ ಮೇಲಿನ ಸ್ನೇಹದಿಂದಲೂ ಭಕ್ತಿಯಿಂದಲೂ ಹಿತವನ್ನು ಮಾಡಬೇಕೆಂಬ ಬುದ್ಧಿಯಿಂದಲೂ ಹೀಗೆ ಹೇಳಿದ್ದೀಯೆ. ನಾನು ಸುಗ್ರೀವನೊಡನೆ ಯುದ್ಧವನ್ನು ಮಾಡಿ ಆತನ ಗರ್ವವನ್ನು ಪರಿಹರಿಸುವೆನು. ಆದರೆ ಆತನ ಪ್ರಾಣಾಪಹಾರವನ್ನು ಮಾಡೆನು. ನಾನು ಮುಷ್ಟಿಪ್ರಹಾರಗಳಿಂದಲೂ ದೊಡ್ಡ ಮರಗಳಿಂದಲೂ ಹೊಡೆದೆನಾದರೆ ಅವನು ಕಂಗೆಟ್ಟು ಓಡುವನು. ನನ್ನ ಬಲದ ಮುಂದೆ ದುರಾತ್ಮನಾದ ಸುಗ್ರೀವನು ನಿಲ್ಲಲಾರನು. ತಾರಾದೇವಿ, ನೀನು ನನ್ನ ಮೇಲಿನ ಪ್ರೀತಿಯಿಂದ ಮಾತನಾಡಿದ್ದೀಯೆ. ಅಲ್ಲಿಗೆ ನೀನು ಬರಬೇಡ, ನನ್ನಾಣೆ ; ನೀನು ಮನೆಗೆ ತಿರುಗಿಹೋಗು. ನಾನು ನನ್ನ ತಮ್ಮನಾದ ಸುಗ್ರೀವನನ್ನು ಸಮರದಲ್ಲಿ ಜಯಿಸಿ ತಿರುಗಿ ಬರುತ್ತೇನೆ" ಎಂದು ನುಡಿದು ಆ ದೇವಿಯನ್ನು ಆಲಿಂಗಿಸಿಕೊಂಡನು.

ತಾರಾದೇವಿಯು ದುಃಖಾಕ್ರಾಂತೆಯಾಗಿ ಕಣ್ಣೀರುಬಿಡುತ್ತ ತನ್ನ ಪತಿಯಾದ ವಾಲಿಗೆ ಪ್ರದಕ್ಷಿಣೆಯನ್ನು ಮಾಡಿ ಆತನಿಗೆ ಸಮರಾಂಗಣದಲ್ಲಿ ಜಯವಾಗಬೇಕೆಂದು ದೇವತೆಗಳಿಗೆ ಕೈಮುಗಿದು ಬೇಡಿಕೊಂಡು ಚಿಂತಾಕ್ರಾಂತೆಯಾಗಿ ತನ್ನ ಸಂಗಡ ಬಂದ ದಾದಿಯರನ್ನು ಕೂಡಿಕೊಂಡು ತನ್ನ ಅರಮನೆಗೆ ಹಿಂದಿರುಗಿ ಹೋದಳು.

ಆಮೇಲೆ ವಾಲಿಯು ಅತ್ಯಂತ ಕೋಪಾಟೋಪದಿಂದ ಸರ್ಪದಂತೆ ನಿಟ್ಟುಸಿರುಬಿಡುತ್ತ ವೇಗದಿಂದ ನಡೆದು ಸುಗ್ರೀವನನ್ನು ಕೊಲ್ಲಬೇಕೆಂದು ನಾನಾದಿಕ್ಕುಗಳನ್ನೂ ನೋಡಿದನು. ಒಂದು ದಿಕ್ಕಿನಲ್ಲಿ ಅಗ್ನಿಯಂತೆ ತನ್ನ ತನುಕಾಂತಿಯಿಂದ ದಿಕ್ಕುಗಳನ್ನು ಬೆಳಗಿಸುತ್ತ ದೇದೀಪ್ಯಮಾನನಾಗಿದ್ದ ಸುಗ್ರೀವನನ್ನು ಕಂಡು ಕೋಪ ಕೆರಳಿ ಕೈಯನ್ನು ಮೇಲಕ್ಕೆ ನೆಗಹಿಕೊಂಡು ಸುಗ್ರೀವನ ಕಡೆಗೆ ಧಾವಿಸಿದನು. ಆತನು ಎದುರಾಗಿ ಯುದ್ಧಕ್ಕೆ ಬರಲು ಆತನನ್ನು ಕರೆದು "ಎಲೈ ಸುಗ್ರೀವ, ನಿನ್ನ ಪ್ರಾಣಾಪಹಾರವನ್ನು ಮಾಡುವ ನನ್ನ ಮುಷ್ಟಿಯು ನಿನ್ನ ಶಿರಸ್ಸಿನ ಮೇಲೆ ಬೀಳುತ್ತಿದೆ, ನೋಡು" ಎಂದು ಆರ್ಭಟಿಸಿ ಹೊಡೆದನು. ಸುಗ್ರೀವನು ಆ ಮುಷ್ಟಿಘಾತದಿಂದ ಗಾಯಪಡೆದು ಹಿಮ್ಮೆಟ್ಟಿ ವಜ್ರಾಯುಧದ ಪೆಟ್ಟಿಗೆ ಚೂರ್ಣೀಕೃತವಾದ ಪರ್ವತದಂತೆ ಶರೀರವೆಲ್ಲವೂ ರಕ್ತಮಯವಾಗಿ ಅತ್ಯಂತ ಕೋಪದಿಂದ ಒಂದು ದೊಡ್ಡ ಮರವನ್ನು ಕಿತ್ತು ವಾಲಿಯ ಮೇಲೆ ಹಾಕಿದನು. ಆಗ ವಜ್ರಾಯುಧದ ಪೆಟ್ಟಿನಿಂದ ಪರ್ವತವು ಬೀಳುವಂತೆಯೂ ಭಾರದಿಂದ ಸಮುದ್ರದಲ್ಲಿ ಮುಳುಗುವ ಹಡಗಿನಂತೆಯೂ ವಾಲಿಯು ಕಂಗೆಟ್ಟು ಭೂಮಿಯಲ್ಲಿ ಬಿದ್ದನು. ಈ ರೀತಿಯಲ್ಲಿ ಗರುಡವೇಗವುಳ್ಳ ಮಹಾಬಲಪರಾಕ್ರಮಿಗಳಾದ ವಾಲಿಸುಗ್ರೀವರಿಬ್ಬರೂ ಅಂತರಿಕ್ಷಮಾರ್ಗದಲ್ಲಿ ಚಂದ್ರಸೂರ್ಯರಂತೆ ಒಪ್ಪುತ್ತ ಒಬ್ಬರನ್ನೊಬ್ಬರು ಜಯಿಸಬೇಕೆಂದು ರಣಭೂಮಿಯಲ್ಲಿ ಹೋರಾಡುತ್ತಿರುವ ಸಮಯದಲ್ಲಿ ಸೂರ್ಯಪುತ್ರನಾದ ಸುಗ್ರೀವನು ಬಲಹೀನನಾಗಿ ವಾಲಿಯಿಂದ ಮುರಿದು ಶ್ರೀರಾಮನಿಗೆ ವಾಲಿಯನ್ನು ಕಣ್ಣುಸನ್ನೆಯಿಂದ ತೋರಿಸುತ್ತಿದ್ದನು. ಈ ಪ್ರಕಾರದಲ್ಲಿ ಮರಗಳಿಂದಲೂ ಕೊಂಬೆಗಳಿಂದಲೂ ವಜ್ರಾಯುಧದ ಅಲಗಿನಂತೆ ಅತಿತೀಕ್ಷ್ಣವಾದ ಉಗುರುಗಳಿಂದಲೂ ಮುಷ್ಟಿಗಳಿಂದಲೂ ಘೋರವಾದ ಯುದ್ಧವನ್ನು

ಮಾಡುತ್ತಿದ್ದ ವಾಲಿಸುಗ್ರೀವರು ದೇವೇಂದ್ರ ವೃತ್ರಾಸುರರಂತೆ ಒಬ್ಬರನೊಬ್ಬರು ಬೆದರಿಸುತ್ತ ಬೊಬ್ಬಿಟ್ಟು ಕೂಗುತ್ತ ಅತ್ಯದ್ಭುತವಾಗಿ ಮೆರೆಯುತ್ತಿದ್ದರು. ಕಡೆಯಲ್ಲಿ ಸುಗ್ರೀವನು ಸೋತು ಕಂಗೆಟ್ಟು ನಾನಾದಿಕ್ಕುಗಳನ್ನೂ ನೋಡುತ್ತ ಅಡಿಗಡಿಗೆ ಶ್ರೀರಾಮನನ್ನು ನೋಡುತ್ತಿದ್ದನು. ಶ್ರೀರಾಮನು ಸುಗ್ರೀವನು ಕಂಗೆಟ್ಟಿದ್ದನ್ನು ಕಂಡು ಆತನು ವಾಲಿಯೊಡನೆ ಸಮರದಲ್ಲಿ ನಿಲ್ಲಲಾರ ನೆಂದೂ ವಾಲಿಯನ್ನು ಕೊಲ್ಲದಿದ್ದರೆ ತನಗೆ ಅಪಕೀರ್ತಿ ಬರುವುದೆಂದೂ ಮನಸ್ಸಿನಲ್ಲೆಣಿಸಿ ಒಂದು ಬಾಣವನ್ನು ತೆಗೆದು ಬಿಲ್ಲಿಗೆ ಹೂಡಿ ಬಿಲ್ಲನಾರಿಯನ್ನು ಕಿವಿಯವರೆಗೂ ಸೆಳೆಯಲು ಆ ಧ್ವನಿಗೆ ಮೃಗಪಕ್ಷಿಗಳೆಲ್ಲವೂ ಹೆದರಿ ಓಡಿದವು. ಆಗ ಶ್ರೀರಾಮನು ಪ್ರಯೋಗಿಸಿದ ಆ ಬಾಣವು ವಜ್ರಾಯುಧದಂತೆ ಮೊರೆಯುತ್ತ ಪ್ರಜ್ವಲಿಸುವ ಅಗ್ನಿಗೆ ಸಮಾನವಾದ ಜ್ವಾಲೆಯುಳ್ಳದ್ದಾಗಿ ವಾಲಿಯ ಎದೆಯಲ್ಲಿ ತಾಕಿತು. ಅದರಿಂದ ಗಾಯಪಡೆದು ವಾಲಿಯು ಪರಾಕ್ರಮಗುಂದಿ ದೇವೇಂದ್ರನ ರಥದಲ್ಲಿರುವ ತೆಕ್ಕೆಯವು ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬೀಳುವಂತೆ ಭೂಮಿಯ ಮೇಲೆ ಬಿದ್ದನು. ಈ ಪ್ರಕಾರ ಪುರುಷೋತ್ತಮನಾದ ಶ್ರೀರಾಮನು ಚಿನ್ನದ ಮುಲಾಮಿನಿಂದ ಅಲಂಕರಿಸಲ್ಪಟ್ಟು ಪ್ರಳಯಕಾಲದ ಯಮನಂತಿದ್ದ ತನ್ನ ಬಾಣವನ್ನು ಪರಮೇಶ್ವರನು ತನ್ನ ಹಣೆಯಲ್ಲಿರುವ ಪ್ರಳಯಕಾಲಾಗ್ನಿಯನ್ನು ಸಂಧಾನಮಾಡುವಂತೆ ವಾಲಿಯ ಮೇಲೆ ಸಂಧಾನ ಮಾಡಲು, ಆ ರಾಮಬಾಣದಿಂದ ಗಾಯಪಡೆದ ವಾಲಿಯ ಶರೀರವು ರಕ್ತದಿಂದ ನೆನೆದು, ವಾಯುವಿನಿಂದ ಕೊಡಹಲ್ಪಟ್ಟ ಪುಷ್ಪಗಳಿರುವ ಅಶೋಕಮರದಂತೆಯೂ ಭೂಲೋಕಕ್ಕೆ ಬಿದ್ದ ದೇವೇಂದ್ರನ ತೆಕ್ಕೆಯದಂತೆಯೂ ಕಂಗೆಟ್ಟು ಮೂರ್ಛಿತನಾಗಿ ಬಿದ್ದನು.

---

## ೧೭ ನೆಯ ಅಧ್ಯಾಯ

## ವಾಲಿಯು ಶ್ರೀರಾಮನನ್ನು ನಿಂದಿಸಿದ್ದು

ಹೀಗೆ ರಾಮಬಾಣದಿಂದ ಎದೆಯಲ್ಲಿ ಗಾಯಪಡೆದು ರಣಧೀರನೂ ಸರ್ವಾಭರಣಭೂಷಿತನೂ ಆದ ವಾಲಿಯು ಕತ್ತರಿಸಲ್ಪಟ್ಟ ಮರದಂತೆ ಭೂಮಿಯಲ್ಲಿ ಕೈಕಾಲುಗಳನ್ನು ನೀಡಿಕೊಂಡು ಬಿದ್ದನು. ಆಗ ಚಂದ್ರೋದಯವಿಲ್ಲದ ಆಕಾಶದಂತೆ ಆ ರಣಭೂಮಿಯು ಭಯಂಕರವಾಗಿ ತೋರುತ್ತಿತ್ತು. ಆತನ ಶರೀರವು ಭೂಮಿಯಲ್ಲಿ ಬಿದ್ದಿದ್ದರೂ ತೇಜಸ್ಸಿನಿಂದ ಒಪ್ಪುತ್ತಿತ್ತು. ಪೂರ್ವದಲ್ಲಿ ವಾಲಿಯ ತಂದೆಯಾದ ದೇವೇಂದ್ರನು ಕೊಟ್ಟ ಸುವರ್ಣಮಯವಾದ ಕಂಠಸರವು ಆತನ ಪ್ರಾಣಗಳನ್ನು ತಡೆದುಕೊಂಡು ದೇಹಕ್ಕೆ ಮಹತ್ತರವಾದ ಕಾಂತಿಯನ್ನು ಕೊಡುತ್ತಿದ್ದಿತು. ವಾಲಿಯು ತನ್ನ ಕೊರಳಲ್ಲಿದ್ದ ಆ ಚಿನ್ನದ ಕಂಠಮಾಲೆಯಿಂದ ಸಂಧ್ಯಾಕಾಲದ ಕೆಂಪಿನಿಂದ ಸುತ್ತುವರಿಯಲ್ಪಟ್ಟ ಮೇಘಮಂಡಲದಂತೆ ತೋರುತ್ತಿದ್ದನು. ಗಾಯಪಡೆದು ಬಿದ್ದಿದ್ದ ಆತನ ಕೊರಳಲ್ಲಿದ್ದ ಕಾಂಚನಮಯವಾದ ಕಂಠಮಾಲೆ, ಆತನ ದೇಹಕಾಂತಿ, ಎದೆಯಲ್ಲಿ ನಾಟಿಕೊಂಡ ಸುವರ್ಣಮಯವಾದ ಬಾಣ–ಇವು ಮೂರೂ ಆತನ ದೇಹಲಕ್ಷ್ಮಿಯೇ ಮೂರು ಪ್ರಕಾರವಾಗಿ ಆದಂತೆ ಶೋಭಿಸುತ್ತಿದ್ದವು. ಶ್ರೀರಾಮನಿಂದ ಪ್ರಯೋಗಿಸಲ್ಪಟ್ಟ ಆ ಬಾಣವು ಎದೆಯಲ್ಲಿ ತಾಕಿ ಆತನಿಗೆ ಸ್ವರ್ಗದ ದಾರಿಯನ್ನು ತೋರಿಸುತ್ತಿತ್ತೋ ಎಂಬಂತೆ ಒಪ್ಪುತ್ತಿತ್ತು. ಆಗ ಶ್ರೀರಾಮನು, ಜ್ವಾಲೆಯಿಲ್ಲದ ಯಜ್ಞಪುರುಷ ನಂತೆಯೂ ಋಷಿಗಳ ಶಾಪದಿಂದ ಸ್ವರ್ಗದಿಂದ ಬಿದ್ದ ಯಯಾತಿಯ ತಂದೆಯಾದ ನಹುಷನಂತೆಯೂ ಮಹಾಪ್ರಳಯದಲ್ಲಿ ಅಂತರಿಕ್ಷಲೋಕದಿಂದ ಬಿದ್ದ ಸೂರ್ಯನಂತೆಯೂ ದೇವೇಂದ್ರನಂತೆಯೂ

ನೋಡುವುದಕ್ಕೆ ಅಶಕ್ಯವಾದ ಕಾಂತಿಯುಳ್ಳ ವಿಶಾಲವಾದ ಎದೆಕಟ್ಟುಳ್ಳ ನಿಡಿದಾದ ತೋಳುಗಳುಳ್ಳ ಪ್ರಕಾಶಮಾನವಾದ ಮುಖವುಳ್ಳ ಪಚ್ಚೆಯ ಕಾಂತಿಯಂತೆ ಕಣ್ಣುಗಳುಳ್ಳ ವಾಲಿಯ ಶರೀರವನ್ನು ಕಂಡು ಅತ್ಯಂತ ಆಶ್ಚರ್ಯಪಟ್ಟು ವಾಲಿಯ ಸಮೀಪಕ್ಕೆ ಹೋದನು. ತನ್ನನ್ನೂ ಲಕ್ಷ್ಮಣನನ್ನೂ ನೋಡುತ್ತಿದ್ದ ವಾಲಿಯನ್ನು ಗೌರವದೃಷ್ಟಿಯಿಂದ ಕಂಡನು. ವಾಲಿಯು ಶ್ರೀರಾಮನನ್ನೂ ಲಕ್ಷ್ಮಣನನ್ನೂ ನೋಡಿ ಶ್ರೀರಾಮನನ್ನು ಕುರಿತು ಧರ್ಮಶಾಸ್ತ್ರಾನುಸಾರವಾಗಿಯೂ ವಿನಯವಾಗಿಯೂ ನಿಷ್ಠುರವಾಗಿಯೂ ಇರುವ ಮಾತುಗಳಿಂದ ಹೀಗೆ ಹಂಗಿಸಿದನು: "ಶ್ರೀರಾಮ, ಬೇರೆ ಕಡೆಗೆ ಮುಖವನ್ನು ತಿರುಗಿಸಿ ಯುದ್ಧಮಾಡುತ್ತಿದ್ದ ನನ್ನನ್ನು ಕೊಂದು ಯಾವ ಸದ್ಗುಣವನ್ನು ಪಡೆದೆ? ನಾನು ಮತ್ತೊಬ್ಬನೊಡನೆ ಯುದ್ಧವನ್ನು ಮಾಡುತ್ತಿದ್ದಾಗ ವ್ಯರ್ಥವಾಗಿ ನಿನ್ನ ಬಾಣಗಳಿಂದ ಹತನಾಗಿದ್ದೇನೆ. ನೀನು ಮಹಾಸತ್ಕುಲಪ್ರಸೂತನೂ ಸಾತ್ತ್ವಿಕಗುಣಸಂಪನ್ನನೂ ಅತಿತೇಜಸ್ವಿಯೂ ವ್ರತಾಚಾರಗಳನ್ನು ಮಾಡುವವನೂ ಕಾರುಣ್ಯಗುಣವುಳ್ಳವನೂ ಪ್ರಜಾಪಾಲಕನೂ ಸಮಸ್ತ ಪ್ರಾಣಿಗಳಲ್ಲಿಯೂ ದಯೆಯುಳ್ಳವನೂ ಉತ್ಸಾಹಶಕ್ತಿಯುಳ್ಳವನೂ ಕಾಲೋಚಿತವನ್ನು ಬಲ್ಲವನೂ ದೃಢವ್ರತನೂ ಎಂದು ಸಮಸ್ತ ಪ್ರಾಣಿಗಳೂ ಸಾರುತ್ತಿವೆ. ಲೋಕದಲ್ಲಿ ಅರಸರ ಲಕ್ಷಣಗಳಾದ ಕ್ಷಮೆ, ಇಂದ್ರಿಯನಿಗ್ರಹ, ಮನೋನಿಗ್ರಹ, ಧೈರ್ಯ, ಸತ್ಯ, ಪರಾಕ್ರಮ, ಅಪರಾಧ ಮಾಡಿದವರನ್ನು ದಂಡಿಸುವುದೇ ಮೊದಲಾದವು ನಿನ್ನಲ್ಲಿರುವುವೆಂದು ಮನಸ್ಸಿನಲ್ಲಿ ನಿಶ್ಚಯಿಸಿ ನೀನು ಚಂಚಲಚಿತ್ತನಲ್ಲವೆಂಬ ವಿಶ್ವಾಸದಿಂದ ಇಲ್ಲಿಗೆ ಬಂದೆನು. ನೀನು ಇಲ್ಲಿಗೆ ಬಂದದ್ದನ್ನು ನಾನು ಮೊದಲೇ ತಿಳಿದಿದ್ದೆನು. ನಾನು ಕಿಷ್ಕಿಂಧಾಪಟ್ಟಣದಿಂದ ಹೊರಟು ಬರುವಾಗ ನನ್ನ ಪತ್ನಿಯಾದ ತಾರಾದೇವಿಯು ನನ್ನನ್ನು ತಡೆದು ನೀನು ಸುಗ್ರೀವನಿಗೆ ಸಹಾಯವಾಗಿ ಬಂದಿರುವುದನ್ನು ಹೇಳಿದಳು. ಈಗ ನನ್ನ ಪ್ರಾರಬ್ಧಕರ್ಮವು ತಟ್ಟಿತು. ಅದು ಹಾಗಿರಲಿ, ಮತ್ತೊಬ್ಬನೊಡನೆ ಯುದ್ಧವನ್ನು ಮಾಡುತ್ತಿದ್ದವನನ್ನು ಮೋಸದಿಂದ ಹೊಡೆದು ಕೆಡಹುವುದು ನಿನಗುಚಿತವೆ? ನೀನು ಮೋಸದಿಂದ ಕೊಲ್ಲುವೆಯೆಂಬುದನ್ನರಿಯದೆ ನೀನಿದ್ದ ದಿಕ್ಕನ್ನು ನೋಡದಿದ್ದೆನು. ಆತ್ಮಘಾತಕನಾಗಿ ಧರ್ಮದ್ರೋಹಿಯಾಗಿ ಮೋಸಗಾರನಾಗಿ ಹುಲ್ಲುಕೌಚಿದ ಹಾಳುಭಾವಿಯಂತಿರುವ ನಿನ್ನನ್ನು ಅರಿಯದೆ ಹೋದೆನು. ಬೂದಿಮುಚ್ಚಿದ ಕೆಂಡದಂತೆ ಕಪಟದಿಂದ ನಿನ್ನ ಪಾಪಸ್ವರೂಪವನ್ನು ಮರೆಸಿಕೊಂಡು ತಪಸ್ವಿವೇಷವನ್ನು ಧರಿಸಿ ಧರ್ಮಿಷ್ಠನಂತೆ ಸಂಚರಿಸುತ್ತಿರುವ ನಿನ್ನನ್ನು ಅರಿಯದೆ ಹೋದೆನು. ನಾನು ನಿನ್ನ ದೇಶಕ್ಕಾದರೂ ನಿನ್ನ ಪಟ್ಟಣಕ್ಕಾದರೂ ಯಾವ ಉಪದ್ರವವನ್ನೂ ಮಾಡಿದವನಲ್ಲ. ಇಂಥ ನನಗೆ ಲೋಕದಲ್ಲಿ ನಗೆಗೀಡಾದ ದ್ರೋಹವನ್ನು ಮಾಡಿದೆ. ವನದಲ್ಲಿ ಕಂದಮೂಲ ಫಲಾದಿಗಳನ್ನು ಸೇವಿಸುತ್ತ ನಿನ್ನೊಡನೆ ಯುದ್ಧವನ್ನು ಮಾಡದಿದ್ದ ನನ್ನನ್ನು ಕಪಟಾಚಾರವುಳ್ಳ ನೀನು ವ್ಯರ್ಥವಾಗಿ ಕೊಂದೆ. ಪಾಪಾತ್ಮನಾದ ನೀನು ಧರ್ಮಮಾರ್ಗಪ್ರವರ್ತಕವಾದ ಇಕ್ಷ್ವಾಕುವಂಶದಲ್ಲಿ ಜನಿಸಿ ಧರ್ಮಿಷ್ಠನೆನಿಸಿಕೊಂಡು ಪಾಪಬುದ್ಧಿಯಿಂದ ಸಂಚರಿಸುತ್ತಿದ್ದೀಯೆ. ಶ್ರೀರಾಮ, ವನದಲ್ಲಿ ಕಂದಮೂಲಫಲಾಹಾರಗಳನ್ನು ಮಾಡಿಕೊಂಡು ಸಂಚರಿಸುವುದು ಕಪಿಗಳಾದ ನಮ್ಮ ಸ್ವಭಾವ. ನೀನು ಪುರುಷೋತ್ತಮನಾಗಿ ರಾಜಶ್ರೇಷ್ಠರಾದ ರಾಜರ್ಷಿಗಳ ಕುಲದಲ್ಲಿ ಹುಟ್ಟಿದವನು. ಅರಸರು ಭೂಮಿ ಚಿನ್ನ ಬೆಳ್ಳಿ ಮೊದಲಾದ ವಸ್ತುಗಳಲ್ಲಿ ಯಾವುದಾದರೊಂದನ್ನು ಬಯಸಿ ಒಬ್ಬರನ್ನು ದಂಡಿಸುವರು. ನನ್ನಲ್ಲಿ ಯಾವ ವಸ್ತುವಿದೆಯೆಂದು ನನ್ನನ್ನು ಕೊಂದೆ? ನೀತಿ ವಿನಯ ನಿಗ್ರಹಾನುಗ್ರಹಗಳಿಂದ ಒಂದರಿಂದೊಂದು ಕೆಡದ ಹಾಗೆ ನಡೆಯಿಸುವುದು ರಾಜಧರ್ಮ. ಅರಸರು ಕಾಮುಕರಾಗಿ ವಿನಯಾದಿಗುಣಗಳನ್ನತಿಕ್ರಮಿಸಿ ತಮ್ಮ ಮನಸ್ಸುಬಂದಂತೆ ನಡೆಯುವರೆ? ಶ್ರೀರಾಮ, ನೀನು ಎಲ್ಲವನ್ನೂ ಬಲ್ಲವನಾದರೂ ಮರ್ಯಾದೆಯನ್ನು ತಪ್ಪಿ

ನನ ಮೇಲೆ ಕೋಪವನ್ನು ತೋರಿಸಿದೆ. ನೀನು ರಾಜಧರ್ಮವನ್ನು ಬಿಟ್ಟು ಬೇಡರಂತೆ ಕೇವಲ ಧನುರ್ವಿದ್ಯಾಪರಾಯಣನಾಗಿದ್ದೀಯೆ. ನೀನು ಧರ್ಮಮಾರ್ಗವನ್ನರಿತವನಲ್ಲ. ನೀನು ಇಂದ್ರಿಯ ವಶನಾಗಿ ದುರ್ಬುದ್ಧಿಯಿಂದ ನಿರಾಪರಾಧಿಯಾದ ನನ್ನನ್ನು ಕೊಂದು ದೊಡ್ಡ ಅಪರಾಧವನ್ನು ಮಾಡಿದೆ. ನೀನು ಸತ್ಪುರುಷರ ಸಭೆಗೆ ಹೋದರೆ ಅವರಿಗೆ ಏನೆಂದು ಉತ್ತರವನ್ನು ಕೊಡುತ್ತೀಯೆ ? ಅಪರಾಧ ಮಾಡದವನನ್ನು ಕೊಲ್ಲುವವನು, ಬ್ರಾಹ್ಮಣನನ್ನು ಕೊಲ್ಲುವವನು, ಕಳ್ಳನನ್ನು ದಂಡಿಸದೆ ಇರುವವನು, ದೈವವಿಲ್ಲವೆನ್ನುವವನು, ಧರ್ಮವನ್ನು ಅಲ್ಲಗಳೆದು ನುಡಿಯುವವನು, ಚಾಡಿಹೇಳುವವನು, ನಿಂದೆಯನ್ನು ಹೊತ್ತಿರುವವನು, ಸ್ನೇಹಿತನನ್ನು ಕೊಲ್ಲುವವನು, ಗುರುಪತ್ನೀಗಾಮಿ ಇವರೇ ಮೊದಲಾದವರು ನರಕಲೋಕವನ್ನೈದುವರು. ಶ್ರೀರಾಮ, ನೀನು ನನ್ನನ್ನು ಕೊಂದದ್ದರಿಂದ ನಿನಗೆ ಬಂದ ಪ್ರಯೋಜನವೇನು ? ಸತ್ಪುರುಷರು ಕಪಿಗಳ ಚರ್ಮ ಅಸ್ಥಿ ರೋಮಗಳನ್ನು ಮುಟ್ಟರು. ಧರ್ಮಿಷ್ಠರಿಗೆ ನನ್ನ ಮಾಂಸವು ಭಕ್ಷಿಸುವುದಕ್ಕೆ ಯೋಗ್ಯವಲ್ಲ. ಉಗುರುಗಳುಳ್ಳ ಐದುಬಗೆಯ ಮೃಗಗಳೇ ಬ್ರಾಹ್ಮಣ ಕ್ಷತ್ರಿಯರಿಗೆ ಭಕ್ಷಣಯೋಗ್ಯವಾಗಿವೆ. ನಾನು ಆ ಮೃಗಜಾತಿಗಳೊಳಗೆ ಒಂದಕ್ಕೂ ಸಂಬಂಧಿಸಿದವನಲ್ಲ. ಹಾಗಾದರೂ ನನ್ನನ್ನು ವ್ಯರ್ಥವಾಗಿ ಕೊಂದೆ. ವಿದುಷಿಯಾದ ನನ್ನ ಪತ್ನಿಯಾದ ತಾರಾದೇವಿಯು ನನ್ನನ್ನು ಹೋಗಬೇಡವೆಂದು ತಡೆದಳು. ಹಾಗಾದರೂ ಮೃತ್ಯುವಶನಾಗಿ ಅಜ್ಞಾನದಿಂದ ಇಲ್ಲಿಗೆ ಬಂದೆನು ! ಪಂಚತ್ವವನ್ನೈದಿದ ಪುರುಷನಿಂದ ಪತಿವ್ರತೆಯೂ ಶೀಲವಂತೆಯೂ ಆದ ಸ್ತ್ರೀಯು ವಿಧವೆಯಾಗುವಂತೆ, ನಿನ್ನಿಂದ ಕೊಲ್ಲಲ್ಪಟ್ಟ ನನ್ನಿಂದ ನನ್ನ ಭೂಮಿಯು ಒಡೆಯನಿಲ್ಲದ್ದಾಯಿತು ! ಅಕಟಕಟಾ—ಅಂತರಂಗದಲ್ಲಿ ಪರರಿಗೆ ದ್ರೋಹವನ್ನೆಣಿಸುವವನಾಗಿಯೂ ಕ್ಷುದ್ರನಾಗಿಯೂ ಅನೃತವನ್ನು ನುಡಿಯುವವನಾಗಿಯೂ ಪಾಪಿಷ್ಠನೂ ಆದ ನೀನು ಮಹಾತ್ಮನಾದ ದಶರಥರಾಯನ ಉದರದಲ್ಲಿ ಹೇಗೆ ಜನಿಸಿದೆ ? ಸಚ್ಚರಿತ್ರವೆಂಬ ಹಗ್ಗವನ್ನು ಕಿತ್ತೆಸೆದ, ಸನ್ಮಾರ್ಗವನ್ನು ಮೀರಿದ, ಧರ್ಮವೆಂಬ ಅಂಕುಶವನ್ನು ಲೆಕ್ಕಿಸದ ರಾಮನೆಂಬ ಮದ್ದಾನೆಯಿಂದ ನಾನು ಕೊಲ್ಲಲ್ಪಟ್ಟೆನು ! ನೀನು ಮಾಡಿದ ಕೃತ್ಯವು ಲೋಕದಲ್ಲಿ ನಿಂದಿತವಾದದ್ದು. ಅಶುಭವಾದದ್ದು. ಅಕೃತ್ಯವಾದದ್ದು. ಇಂಥ ದುರಾಚಾರವನ್ನು ಮಾಡಿದ ಬಳಿಕ ಸತ್ಪುರುಷರ ಗೋಷ್ಠಿಗೆ ಹೋದರೆ ನಿನ್ನ ಪರಾಕ್ರಮವನ್ನೇನೆಂದು ಹೇಳಿಕೊಳ್ಳುವೆ ? ನಿನಗೆ ದ್ರೋಹವನ್ನು ಮಾಡಿದವರಲ್ಲಿ ನಿನ್ನ ಪರಾಕ್ರಮವನ್ನು ತೋರಿಸದಿದ್ದೀಯೆ. ನೀನು ನನ್ನ ಕಣ್ಣಿಗೆ ಕಾಣಿಸಿಕೊಂಡು ನನ್ನೊಡನೆ ಯುದ್ಧವನ್ನು ಮಾಡಿದ್ದರೆ ಈಗಲೇ ನಿನಗೆ ಯಮದರ್ಶನವನ್ನು ಮಾಡಿಸುತ್ತಿದ್ದೆನು. ಸಮರದಲ್ಲಿ ಯಾರಿಗೂ ಅಸಾಧ್ಯನಾದ ನನ್ನನ್ನು ದೃಷ್ಟಿಗೆ ಗೋಚರಿಸದೆಯೆ ನೀನು, ಪಾನಮತ್ತರಾಗಿ ಮಲಗಿಕೊಂಡಿರುವ ಮನುಷ್ಯರನ್ನು ಸರ್ಪವು ಕಚ್ಚಿ ಕೊಲ್ಲುವಂತೆ ಸಂಹರಿಸಿದೆ. ಸುಗ್ರೀವನಿಗೆ ಪ್ರಿಯವನ್ನು ಮಾಡಬೇಕೆಂದು ನನ್ನನ್ನು ಸಂಹರಿಸಿದೆ. ನನ್ನನ್ನು ಕೊಲ್ಲದೆಯೇ ನಿನಗಾಗಬೇಕಾದ ಪ್ರಯೋಜನವನ್ನು ನನ್ನೊಡನೆ ಹೇಳಿದ್ದರೆ ನಾನೊಬ್ಬನೇ ನಿನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನು ತಂದುಕೊಡುತ್ತಿದ್ದೆನು. ನಿನ್ನ ಸ್ತ್ರೀಯನ್ನಪಹರಿಸಿದ ರಾವಣನ ಕೊರಳಿಗೆ ಹಗ್ಗವನ್ನು ಹಾಕಿ ಹಿಡಿದು ತಂದು ನಿನ್ನ ವಶಕ್ಕೆ ಒಪ್ಪಿಸುತ್ತಿದ್ದೆನು. ಇಲ್ಲವೇ ರಾವಣನನ್ನು ರಣರಂಗದಲ್ಲಿ ಕೊಲ್ಲುತ್ತಿದ್ದೆನು. ಸೀತಾದೇವಿಯು ಸಮುದ್ರಮಧ್ಯದಲ್ಲಿದ್ದರೂ ಪಾತಾಳಲೋಕದಲ್ಲಿದ್ದರೂ ನಿನ್ನ ಅಪ್ಪಣೆಯಿಂದ ಲೀಲಾಮಾತ್ರದಿಂದ ತಂದು ನಿನ್ನ ವಶಕ್ಕೆ ಒಪ್ಪಿಸುತ್ತಿದ್ದೆನು. ನೀನು ನನ್ನನ್ನು ಕೊಲ್ಲದಿದ್ದ ಪಕ್ಷದಲ್ಲಿ ನನ್ನ ಕಾಲವು ತುಂಬಿ ಸ್ವರ್ಗಸ್ಥನಾದಮೇಲೆ ಸುಗ್ರೀವನು ರಾಜ್ಯವನ್ನು ಪಡೆಯುತ್ತಿದ್ದನು. ನಾನು ನಿನ್ನ ಸಂಗಡ ಯುದ್ಧಕ್ಕೆ ಬಂದವನಲ್ಲ. ನೀನು ನನ್ನನ್ನು ಕೊಂದದ್ದು ಉಚಿತವಲ್ಲ. ನಾನು ಸುಗ್ರೀವನೊಡನೆ ಯುದ್ಧವನ್ನು ಮಾಡುವಾಗ ನೀನು

ಮೋಸದಿಂದ ನನ್ನನ್ನು ಕೊಂದದ್ದು ನಿನಗೆ ಧರ್ಮವಲ್ಲ. ಹಾಗಾದರೂ ನಿನ್ನಲ್ಲಿ ತಪ್ಪಿಲ್ಲವೆಂದು ಭಾವಿಸುತ್ತೇನೆ. ಕಾಲವನ್ನತಿಕ್ರಮಿಸಲು ಯಾರಿಗೂ ಶಕ್ಯವಲ್ಲ. ಕಾಲವು ಮನುಷ್ಯನಿಗೆ ಸುಖ ದುಃಖಗಳನ್ನನುಭವಿಸಬೇಕಾದ ಕಾಲಗಳಲ್ಲಿ ಸುಖದುಃಖಭೋಗಗಳನ್ನು ಕೊಡದೆ ಬಿಡದು. ಶ್ರೀರಾಮ, ನೀನು ಮುಂದಿನ ಕಾಲೋಚಿತವಾದ ಕಾರ್ಯವನ್ನು ಕಾಣು" ಎಂದು ವ್ಯಥೆಪಡುತ್ತ ಸೂರ್ಯಪ್ರಭೆಯಂತೆ ಕಾಂತಿಯುಳ್ಳ ಶ್ರೀರಾಮನನ್ನು ನೋಡುತ್ತ ಸುಮ್ಮನಾದನು.



೧೮ ನೆ ಯ ಅ ಧ್ಯಾ ಯ

## ವಾ ಲಿ ವ ಧೆ ಯ ನ್ನು ಶ್ರೀ ರಾ ಮ ನು ಸ ಮ ರ್ಥಿ ಸಿ ದ್ದು

ಈ ಪ್ರಕಾರ ಶ್ರೀರಾಮನ ಬಾಣದಿಂದ ಗಾಯಪಡೆದು ಬಿದ್ದ ವಾಲಿಯು ಶ್ರೀರಾಮನನ್ನು ಅನೇಕ ನಿಷ್ಠುರೋಕ್ತಿಗಳಿಂದ ನಿಂದಿಸಿದನು. ಆ ಮಾತುಗಳನ್ನು ಕೇಳಿ ಶ್ರೀರಾಮನು ಮಂಜು ಮುಸುಕಿದ ಸೂರ್ಯನಂತೆಯೂ ನೀರಿಲ್ಲದ ಮೇಘದಂತೆಯೂ ಕಾಂತಿಗುಂದಿದ ವಾಲಿಯನ್ನು ನೋಡಿ ಧರ್ಮಾರ್ಥ ಗಳೊಡಗೂಡಿದ ಮಾತುಗಳಿಂದ ಹೀಗೆ ಹೇಳಿದನು: "ಎಲೈ ವಾಲಿ, ನೀನು ಧರ್ಮಾರ್ಥ ಕಾಮಗಳೆಂಬ ಮೂರು ಪುರುಷಾರ್ಥಗಳ ಸ್ವರೂಪವನ್ನು ಅರಿತವನಲ್ಲ. ಕಾಲೋಚಿತವಾದ ಸಮಯವನ್ನರಿಯದೆ ಮಕ್ಕಳಾಟಿಕೆಯಿಂದ ನನ್ನನ್ನು ಜರಿದು ನುಡಿಯುತ್ತಿದ್ದೀಯೆ. ನೀನು ಬುದ್ಧಿವಂತರಾಗಿ ಪೂಜ್ಯರಾದ ವೃದ್ಧರೊಡನೆ ಯಾವಾಗಲೂ ಸಂಭಾಷಣೆ ಮಾಡಿದವನಲ್ಲ. ಆದಕಾರಣ ನಿನ್ನ ಚಂಚಲಬುದ್ಧಿಯಿಂದ ನನ್ನನ್ನು ಜರಿದು ನುಡಿಯುತ್ತಿದ್ದೀಯೆ. ಸಮಸ್ತ ಭೂಮಂಡಲವೂ ಇಕ್ಷ್ವಾಕುವಂಶದ ರಾಜರ ವಶವಾಗಿರುವುದು. ಈ ಭೂಮಂಡಲದೊಳಗಿರುವ ಮನುಷ್ಯಮೃಗಪಕ್ಷಿಗಳ ನಿಗ್ರಹಾನುಗ್ರಹಗಳಿಗೆ ಕರ್ತನಾಗಿ ಭರತನು ರಾಜ್ಯಪರಿಪಾಲನವನ್ನು ಮಾಡಿಕೊಂಡಿದ್ದಾನೆ. ಆತನು ಧರ್ಮಾರ್ಥಕಾಮಗಳ ತತ್ತ್ವವಿಚಾರವನ್ನು ಬಲ್ಲವನು. ದುಷ್ಟ ನಿಗ್ರಹ ಶಿಷ್ಟಪರಿಪಾಲನಗಳನ್ನು ಮಾಡುವುದರಲ್ಲಿ ಮಹಾದಕ್ಷ. ನೀತಿ ನಯಾದಿ ಗುಣಗಳಲ್ಲಿ ನಿಪುಣ. ಆತನಲ್ಲಿ ಸತ್ಯ ದಯೆ ವಿಕ್ರಮಗಳು ಸಹಜವಾಗಿರುವುವು. ಆತನು ದೇಶಕಾಲಗಳನ್ನು ಬಲ್ಲವನು. ಆತನ ಅಪ್ಪಣೆಯಿಂದ ನಾವೂ ಇನ್ನು ಕೆಲವು ದೊರೆಗಳೂ ಈ ಭೂಮಂಡಲದಲ್ಲಿ ಧರ್ಮವನ್ನು ಪರಿಪಾಲಿಸುವುದಕ್ಕಾಗಿ ಸಂಚರಿಸಿಕೊಂಡಿರುವೆವು. ರಾಜರಾಜೋತ್ತಮನಾಗಿ ಧರ್ಮಮಾರ್ಗ ಪ್ರವರ್ತಕನಾದ ಭರತನು ಸಮಸ್ತ ಭೂಮಂಡಲವನ್ನೂ ಪರಿಪಾಲಿಸಿಕೊಂಡಿರುವುದರಿಂದ ಧರ್ಮವನ್ನು ಬಿಟ್ಟು ನಡೆಯುವವರನ್ನು ಆತನ ಆಜ್ಞೆಯಿಂದ ದಂಡಿಸುತ್ತಿದ್ದೇವೆ. ನೀನು ಧರ್ಮಮಾರ್ಗವನ್ನು ಬಿಟ್ಟು ಕಾಮುಕನಾಗಿ ರಾಜಧರ್ಮಗಳನ್ನು ಬಿಟ್ಟು ಲೋಕದಲ್ಲಿ ಮಾಡಬಾರದ ಕೃತ್ಯಗಳನ್ನು ಮಾಡುತ್ತಿದ್ದೀಯೆ. ಈ ಲೋಕದಲ್ಲಿ ಹಿರಿಯ ಅಣ್ಣನೂ ತಂದೆಯೂ ವಿದ್ಯೆಯನ್ನು ಕಲಿಸಿದವನೂ—ಇವರು ಮೂವರು ತಂದೆಗಳು ಎಂಬ ಧರ್ಮಶಾಸ್ತ್ರವುಂಟು. ಆದ್ದರಿಂದ ಮನುಷ್ಯನು ತಮ್ಮನನ್ನೂ ಮಗನನ್ನೂ ಗುಣವಂತನಾದ ಶಿಷ್ಯನನ್ನೂ ತನ್ನ ಮಕ್ಕಳಂತೆಯೇ ಕಾಣಬೇಕು. ವಾಲಿ, ಲೋಕದಲ್ಲಿ ಧರ್ಮವು ಸುಲಭಗ್ರಾಹ್ಯವಲ್ಲ. ಧರ್ಮವನ್ನೂ ಪುಣ್ಯಪಾಪ ಗಳನ್ನೂ ಹೃದಯಕಮಲದಲ್ಲಿರುವ ಪರಮಾತ್ಮನೇ ಬಲ್ಲನು. ಜಾತ್ಯಂಧರೊಡನೆ ಸೇರಿದ ಕುರುಡನು ಸರಿಯಾದ ದಾರಿಯನ್ನು ಕಾಣದಂತೆ ನೀನು ಚಪಲಬುದ್ಧಿಯುಳ್ಳವನಾಗಿ ಚಪಲರಾದ ಕಪಿಗಳೊಡನೆ

ಕೂಡಿದ್ದರಿಂದ ಧರ್ಮರಹಸ್ಯವನ್ನು ಬಲ್ಲವನಲ್ಲ. ನೀನು ಚಪಲಬುದ್ಧಿಯಿಂದ ನನ್ನನ್ನು ಜರಿದು ನುಡಿಯುತ್ತಿದ್ದೀಯೆ. ನೀನು ನಿರಪರಾಧಿಯಾಗಿದ್ದಿದ್ದರೆ ನಾನು ನಿನ್ನನ್ನು ಕೊಲ್ಲುತ್ತಿರಲಿಲ್ಲ, ನೀನು ನಿನ್ನ ಒಡಹುಟ್ಟಿದ ತಮ್ಮನ ಸ್ತ್ರೀಯಲ್ಲಿ ಜಾರತ್ವವನ್ನು ಮಾಡುತ್ತಿದ್ದೆ. ಹೀಗೆ ಧರ್ಮಮಾರ್ಗವನ್ನು ಬಿಟ್ಟು ಅಧರ್ಮಮಾರ್ಗದಲ್ಲಿ ನಡೆದದ್ದರಿಂದ ನಿನ್ನನ್ನು ಸಂಹರಿಸಿದೆನು. ಧರ್ಮವಿರುದ್ಧವಾದ ಮಾರ್ಗದಲ್ಲಿ ನಡೆಯುವವರನ್ನು ದಂಡಿಸಬೇಕಲ್ಲದೆ ಸುಮ್ಮನಿರಬಾರದು. ಆದಕಾರಣ ಕ್ಷತ್ರಿಯ ಕುಲೋತ್ತಮನಾದ ನನಗೆ ನಿನ್ನನ್ನು ಕೊಂದದ್ದು ಪಾತಕವಲ್ಲ. ಧರ್ಮಶಾಸ್ತ್ರವನ್ನು ಬಲ್ಲವರು, ಮಗಳಲ್ಲಿಯೂ ಒಡಹುಟ್ಟಿದವಳಲ್ಲಿಯೂ ತಮ್ಮನ ಸ್ತ್ರೀಯಲ್ಲಿಯೂ ಸೊಸೆಯಲ್ಲಿಯೂ ಕಾಮಬುದ್ಧಿಯಿಂದ ಎರಡೆಣಿಸುವವನನ್ನು ಕೊಲ್ಲಬೇಕೆಂದು ಹೇಳುವರು. ಈಗ ಭರತನು ರಾಜ್ಯಪರಿಪಾಲನವನ್ನು ಮಾಡಿಕೊಂಡಿದ್ದಾನೆ. ಆತನ ಆಜ್ಞೆಯಂತೆ ನಾವು ಧರ್ಮರಕ್ಷಣೆಗಾಗಿ ಸಂಚರಿಸುತ್ತಿದ್ದೇವೆ. ಅಂಥ ನಾವು ದುರ್ಮಾರ್ಗದಲ್ಲಿ ನಡೆಯುತ್ತಿರುವ ನಿನ್ನನ್ನು ಕೊಲ್ಲದೆ ಉಪೇಕ್ಷಿಸಲು ಹೇಗೆ ಸಾಧ್ಯ ? ಭರತನು ಪ್ರಾಜ್ಞನಾಗಿ ದುಷ್ಟನಿಗ್ರಹವನ್ನೂ ಶಿಷ್ಟಪರಿಪಾಲನವನ್ನೂ ಮಾಡಿಕೊಂಡು ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿರುವನು. ನಾವು ಆತನ ಆಜ್ಞೆಯಿಂದ ನಿನ್ನಂಥ ದುರ್ಮಾರ್ಗಿಗಳನ್ನು ದಂಡಿಸುತ್ತಿದ್ದೇವೆ. ಸುಗ್ರೀವನು ನನ್ನ ತಮ್ಮನಾದ ಲಕ್ಷ್ಮಣನಂತೆ ನನ್ನೊಡನೆ ಸ್ನೇಹವನ್ನು ಮಾಡಿಕೊಂಡು ತನ್ನ ರಾಜ್ಯನಿಮಿತ್ತವಾಗಿಯೂ ತನ್ನ ಸ್ತ್ರೀನಿಮಿತ್ತವಾಗಿಯೂ ನನ್ನ ಸಂಗಡ ಇದ್ದಾನೆ. ನಾನು ಮೊದಲು ಹನುಮಂತನೇ ಮೊದಲಾದ ಕಪಿನಾಯಕರ ಸಂಮುಖದಲ್ಲಿ ನಿನ್ನನ್ನು ಕೊಂದು ಸುಗ್ರೀವನಿಗೆ ರಾಜ್ಯವನ್ನೂ ಸ್ತ್ರೀಯನ್ನೂ ಬಿಡಿಸಿಕೊಡುವುದಾಗಿ ನಂಬಿಕೆಯನ್ನು ಕೊಟ್ಟಿದ್ದೆನು. ಹಾಗೆ ಕೊಟ್ಟಮಾತಿಗೆ ತಪ್ಪಬಾರದಾದ ಕಾರಣ ನಿನ್ನನ್ನು ಸಂಹರಿಸಿದೆನು. ನಿನ್ನ ನಿಗ್ರಹವು ನ್ಯಾಯವೋ ಅನ್ಯಾಯವೋ ಎಂಬುದನ್ನು ನೀನೇ ವಿಚಾರಿಸಿಕೊ. ಧರ್ಮವನ್ನು ಪರಿಪಾಲಿಸಬೇಕೆನ್ನುವನು ಅವಶ್ಯವಾಗಿ ತನ್ನನ್ನು ನಂಬಿದ ಸ್ನೇಹಿತನಿಗೆ ಉಪಕಾರವನ್ನು ಮಾಡಬೇಕು. ಆದಕಾರಣ ನಿನ್ನನ್ನು ನಿಗ್ರಹಮಾಡಿದ್ದು ಧರ್ಮವೆಂದೇ ತಿಳಿ. ವಾಲಿ, ಮನುವಿನಿಂದ ಹೇಳಲ್ಪಟ್ಟ ಧರ್ಮಗಳನ್ನು ಕೇಳು : ಪಾಪಮಾಡಿದ ಮನುಷ್ಯನನ್ನು ಅರಸನು ಧರ್ಮಶಾಸ್ತ್ರೋಕ್ತಪ್ರಕಾರ ದಂಡಿಸಿದರೆ ಆ ಮನುಷ್ಯನು ರಾಜದಂಡದಿಂದ ಶುದ್ಧಾತ್ಮನಾಗಿ ಸತ್ಕರ್ಮಗಳನ್ನು ಮಾಡಿದ ಸತ್ಪುರುಷರೈದುವ ಲೋಕಕ್ಕೆ ಹೋಗುವನು. ಪಾಪವನ್ನು ಮಾಡಿದವನು ಧರ್ಮಪ್ರವರ್ತಕನಾದ ಅರಸನ ದಂಡನೆಗೊಳಗಾಗಿದ್ದರೂ ಪಶ್ಚಾತ್ತಾಪದಿಂದ ಗಂಗಾಪ್ರವಾಹವೇ ಮೊದಲಾದವುಗಳಲ್ಲಿ ತನ್ನ ಶರೀರವನ್ನು ಕೆಡಹಿದರೆ ತಾನು ಮಾಡಿದ ಪಾಪದಿಂದ ಬಿಡುಗಡೆಯನ್ನೈದುವನು. ಅರಸನು ಧರ್ಮಾಧರ್ಮಗಳನ್ನು ಶಾಸ್ತ್ರಾನುಸಾರವಾಗಿ ವಿಚಾರಿಸಿ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡದೆ ದ್ರವ್ಯಲೋಭದಿಂದ ಉಪೇಕ್ಷೆಮಾಡಿದರೆ ಆ ಪಾಪವನ್ನು ತಾನೇ ಪಡೆಯುವನು. ಹೀಗಿರುವುದರಿಂದ ನಾನು ನಿನ್ನನ್ನು ಕೊಲ್ಲದಿರಬಾರದು. ನನ್ನ ವಂಶದ ಮಾಂಧಾತರಾಯನು ಪಾಪಿಯಾದ ಒಬ್ಬ ಶ್ರಮಣನಿಗೆ ಇದೇ ರೀತಿಯಲ್ಲಿ ದಂಡವನ್ನು ವಿಧಿಸಿದ್ದಾನೆ. ಪಾಪವನ್ನು ಮಾಡುವ ಅಜ್ಞಾನಿಗಳಾದ ಮನುಷ್ಯರಿಗೆ ಧರ್ಮಿಷ್ಠರಾದ ಅರಸರು ಧರ್ಮಶಾಸ್ತ್ರಪ್ರಕಾರದಲ್ಲಿ ಅವರ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಕೊಟ್ಟರೆ ಆ ಪಾಪಿಗಳು ತಾವು ಮಾಡಿದ ಪಾಪದಿಂದ ಬಿಡುಗಡೆಯನ್ನೈದಿ ಶುದ್ಧಾತ್ಮರಾಗುವರು. ವಾನರೇಂದ್ರ, ನೀನು ನಿನ್ನ ಮನಸ್ಸಿನಲ್ಲಿರುವ ದುಃಖವನ್ನು ಬಿಡು. ನಾವು ಧರ್ಮದ ವಿಷಯದಲ್ಲಿ ಸ್ವತಂತ್ರರಲ್ಲ. ನಿನ್ನ ಅಪರಾಧಕ್ಕೆ ತಕ್ಕ ದಂಡನೆಯನ್ನು ಮಾಡಿದ್ದೇವೆ. ನಾವು ಕಾರಣವಿಲ್ಲದೆ ನಿನ್ನನ್ನು ಕೊಂದವರಲ್ಲ. ನೀನು ನನ್ನ ಮೇಲಿನ ಕೋಪವನ್ನು ಬಿಟ್ಟು ನನ್ನ ಮಾತನ್ನು ಕೇಳು. ನನಗೆ ನಿನ್ನನ್ನು ಕೊಂದದ್ದರಿಂದ ಮನಸ್ತಾಪವಿಲ್ಲ. ನಿನ್ನ ಮೇಲೆ

ಕೋಪವೂ ಇಲ್ಲ. ಬೇಟೆಗಾರರು ಕಾಡಿನಲ್ಲಿ ಬಲೆಗಳಿಂದಲೂ ಹಗ್ಗಗಳಿಂದಲೂ ಮತ್ತಿತರ ಸಾಧನಗಳಿಂದಲೂ ಬೇಟೆಯಾಡಿ ಮೃಗಗಳನ್ನು ಕೊಲ್ಲುವರು. ಕೆಲವನ್ನು ಎದುರಾಗಿ ನಿಂತು ಹೊಡೆಯುವರು; ಮತ್ತೆ ಕೆಲವನ್ನು ಮರೆಯಲ್ಲಿಯೇ ನಿಂತು ಕೊಲ್ಲುವರು. ಹೀಗೆ ನಾನಾ ವಿಧವಾದ ಕಪಟ ವ್ಯಾಪಾರದಿಂದ ಕಾಡುಮೃಗಗಳನ್ನು ಕೊಲ್ಲುವರು. ಮಾಂಸಾರ್ಥಿಗಳಾದವರು ಕಾಡಿನಲ್ಲಿ ಓಡುತ್ತಿರುವ ಮೃಗಗಳನ್ನೂ ಹಿಂಮುಖವಾದವನ್ನೂ ಮತ್ತಾವುದೇ ಸ್ಥಿತಿಯಲ್ಲಿರುವವನ್ನೂ ಸ್ವಲ್ಪವೂ ದಯೆಯಿಲ್ಲದೆ ಕೊಂದುಬಿಡುವರು. ನಾವು ವನದಲ್ಲಿ ಬೇಟೆಯಾಡುತ್ತ ದುಷ್ಟಮೃಗಗಳನ್ನು ಕೊಲ್ಲುವವರಾದಕಾರಣ ನಿನ್ನನ್ನು ಕೊಂದದ್ದರಿಂದ ನಮಗೆ ದೋಷವಿಲ್ಲ. ಧರ್ಮಿಷ್ಠರಾದ ರಾಜರ್ಷಿಗಳೂ ಬೇಟೆಯಾಡಿ ಸಿಕ್ಕಿದ ಮೃಗಗಳನ್ನು ಸಂಹರಿಸುವರು. ಆದ್ದರಿಂದ ನಾನು ನಿನ್ನನ್ನು ಶಾಖಾಮೃಗವೆಂದು ತಿಳಿದು ಸಂಹರಿಸಿದೆನಲ್ಲದೆ ಮತ್ತೊಂದಲ್ಲ. ಆದ್ದರಿಂದ ನೀನು ನನ್ನೊಡನೆ ಯುದ್ಧಮಾಡದಿದ್ದರೂ ನಿನ್ನನ್ನು ಕೊಲ್ಲುವುದು ಅಧರ್ಮವಲ್ಲ. ರಾಜ್ಯವನ್ನಾಳುವ ಅರಸರು ಸಮಸ್ತ ಪ್ರಾಣಿಗಳಿಗೂ ರಕ್ಷಕರು. ಅವರು ಸುಖದುಃಖಗಳಿಗೂ ಕರ್ತರು. ಆದ್ದರಿಂದ ನಾವು ರಾಜ್ಯಪರಿಪಾಲನವನ್ನು ಮಾಡುತ್ತಿರುವ ಭರತನ ಅಪ್ಪಣೆಯಿಂದ ರಾಜ್ಯದಲ್ಲಿರುವ ದುಷ್ಟರನ್ನು ಸಂಹರಿಸುತ್ತೇವೆ. ಅರಸರು ಮನುಷ್ಯರೂಪದಿಂದ ಸಂಚರಿಸುವ ದೇವತೆಗಳು. ದೇವತೆಗಳಂತೆ ದುಷ್ಟನಿಗ್ರಹ ಶಿಷ್ಟಪರಿಪಾಲನವನ್ನು ಮಾಡುವ ಅರಸರನ್ನು ಉಪೇಕ್ಷಾಬುದ್ಧಿಯಿಂದ ಕಾಣಬಾರದು. ಅವರೊಡನೆ ನಿಷ್ಠುರವಾಗಿ ನುಡಿಯಬಾರದು. ಅವರನ್ನು ನಿಂದಿಸಬಾರದು. ಅವರನ್ನು ವಿರೋಧಿಸಬಾರದು. ನೀನು ಧರ್ಮರಹಸ್ಯವನ್ನರಿಯದೆ ಮನಸ್ಸಿನಲ್ಲಿ ರೋಷವನ್ನುಂಟುಮಾಡಿಕೊಂಡು ಕುಲಾಗತವಾದ ಧರ್ಮದಲ್ಲಿ ನಡೆಯುವ ನನ್ನನ್ನು ದೂಷಣೆ ಮಾಡುತ್ತಿದ್ದೀಯೆ." ಎಂದು ನುಡಿದನು.

ಆ ಮಾತನ್ನು ಕೇಳಿ ವಾಲಿಯು ಅತ್ಯಂತ ವ್ಯಥೆಪಟ್ಟು ಕೈಮುಗಿದುಕೊಂಡು ಶ್ರೀರಾಮನನ್ನು ಕುರಿತು " ಶ್ರೀರಾಮ, ನೀನು ಹೇಳಿದ ಮಾತುಗಳೆಲ್ಲವೂ ಯಥಾರ್ಥವಾದವು. ಅದಕ್ಕೆ ಸಂಶಯವಿಲ್ಲ. ಉತ್ತಮನಾದ ನಿನಗೆ ಅಧರ್ಮಿಯಾದ ನಾನು ಉತ್ತರ ಹೇಳಲು ಶಕ್ತನಲ್ಲ. ನಾನು ನಿನ್ನೊಡನೆ ಅಜ್ಞಾನದಿಂದ ನುಡಿದ ಮಾತುಗಳು ಯುಕ್ತವಲ್ಲ. ಆ ಮಾತುಗಳನ್ನು ನೀನು ಕ್ಷಮಿಸು. ನೀನು ಸಕಲ ತತ್ತ್ವಾರ್ಥರಹಸ್ಯಗಳನ್ನೂ ಬಲ್ಲವನು. ಸಮಸ್ತ ಪ್ರಾಣಿಗಳಿಗೂ ಹಿತವನ್ನೇ ಚಿಂತಿಸುವವನು. ಕಾರ್ಯಾಕಾರ್ಯಗಳನ್ನು ಬಲ್ಲವನು. ನಾನು ಕೊಬ್ಬಿ ಧರ್ಮಮಾರ್ಗವನ್ನು ಬಿಟ್ಟು ನಡೆದೆನು. ಶ್ರೀರಾಮ, ನೀನು ನನಗೆ ಧರ್ಮೋಪದೇಶವನ್ನು ಮಾಡಿ ದಯೆಯಿಂದ ರಕ್ಷಿಸು " ಎಂದು ಕಣ್ಣೀರು ತುಂಬಿಕೊಂಡು ಹೀನಸ್ವರದಿಂದ ಕೆಸರಲ್ಲಿ ಬಿದ್ದ ಆನೆಯಂತೆ ಉದ್ವಿಗ್ನನಾದನು. ಪುನಃ ಶ್ರೀರಾಮನನ್ನು ನೋಡಿ ಹೀಗೆಂದನು : " ಶ್ರೀರಾಮ, ನಾನು ನನ್ನನ್ನೂ ನನ್ನ ಬಂಧುಗಳನ್ನೂ ಕುರಿತು ದುಃಖಪಡುವವನಲ್ಲ. ನನ್ನ ಕುಮಾರನಾದ ಅಂಗದನನ್ನು ಕುರಿತು ದುಃಖಪಡುತ್ತಿದ್ದೇನೆ. ಅಂಗದಕುಮಾರನನ್ನು ಬಾಲ್ಯಾವಸ್ಥೆಯಿಂದ ಅತಿಶಯವಾಗಿ ಲಾಲಿಸಿ ರಕ್ಷಿಸುತ್ತಿದ್ದೆನು. ಆತನು ಒಂದು ಕ್ಷಣಮಾತ್ರವಾದರೂ ನನ್ನನ್ನು ಕಾಣದಿದ್ದರೆ ನೀರು ಬತ್ತಿದ ಕೆರೆಯಂತೆ ದೀನನಾಗುವನು. ಆತನು ಇನ್ನೂ ಬಾಲಕ ; ಬುದ್ಧಿ ಬಲ್ಲವನಲ್ಲ. ನನಗೆ ಆತನೊಬ್ಬನೇ ಮಗನು. ಶ್ರೀರಾಮ, ಆ ಕುಮಾರನನ್ನು ನೀನು ಯಾವ ಪ್ರಕಾರದಲ್ಲಾದರೂ ರಕ್ಷಿಸು. ಸುಗ್ರೀವನನ್ನೂ ಅಂಗದನನ್ನೂ ಸಮವಾಗಿ ಎಣಿಸಿ ರಕ್ಷಿಸು. ನೀನು ಕೃತ್ಯಾಕೃತ್ಯಗಳನ್ನು ಬಲ್ಲವನು. ಆದಕಾರಣ ಅವರಿಬ್ಬರಿಗೂ ರಕ್ಷಕನೂ ಶಿಕ್ಷಕನೂ ನೀನೇ ಅಲ್ಲದೆ ಮತ್ತೊಬ್ಬರಿಲ್ಲ. ಶ್ರೀರಾಮ, ನಿನ್ನ ತಮ್ಮನಾದ ಲಕ್ಷ್ಮಣನನ್ನು ನೋಡಿಕೊಳ್ಳುವಂತೆ ಸುಗ್ರೀವನಲ್ಲಿಯೂ ಅಂಗದನಲ್ಲಿಯೂ ದಯೆಯನ್ನಿಟ್ಟು

ರಕ್ಷಿಸು. ನಾನು ಮಾಡಿದ ಅಪರಾಧದಿಂದ ವಿಧವೆಯಾದ ತಾರಾದೇವಿಯನ್ನು ಸುಗ್ರೀವನು ಅವಮನ್ನಣೆಮಾಡದಂತೆ ನೋಡಿಕೊ. ನೀನು ಸುಗ್ರೀವನನ್ನು ಅಂಗೀಕರಿಸಿದ ಮೇಲೆ ಆತನು ನಿನ್ನ ಚಿತ್ತವೃತ್ತಿಗೆ ತಕ್ಕಂತೆ ನಡೆದರೆ ನಿನ್ನ ಕೃಪೆಯಿಂದ ಆತನಿಗೆ ದೇವಲೋಕವಾದರೂ ಸಾಧ್ಯವಾಗುವುದು. ನಾನು ನಿನ್ನಿಂದ ಮರಣವನ್ನು ನಿರೀಕ್ಷಿಸಿಕೊಂಡೇ ತಾರಾದೇವಿಯು ತಡೆದರೂ ನನ್ನ ತಮ್ಮನಾದ ಸುಗ್ರೀವನೊಡನೆ ಯುದ್ಧಕ್ಕೆ ಬಂದೆನು " ಎಂದು ನುಡಿದನು.

ಶ್ರೀರಾಮನು ಧರ್ಮರಹಸ್ಯಯುಕ್ತವಾದ ವಾಕ್ಯಗಳಿಂದ ವಾಲಿಯನ್ನು ಸಂತವಿಟ್ಟು " ವಾನರೇಶ್ವರ, ವಾಲಿ, ನೀನು ಚಿಂತಿಸಬೇಡ. ನಾವು ನಿನಗೆ ಧರ್ಮಲಾಭವಾಗಬೇಕೆಂದೇ ಹೀಗೆ ಮಾಡಿದೆವು. ಅಪರಾಧವನ್ನು ಮಾಡಿ ಅರಸನಿಂದ ತನ್ನ ಅಪರಾಧಕ್ಕೆ ತಕ್ಕ ದಂಡನೆಯನ್ನು ಪಡೆಯುವವನೂ ಹಾಗೆ ದಂಡಿಸತಕ್ಕ ಅರಸನೂ ಸದ್ಗತಿಯನ್ನು ಪಡೆಯುವರು. ಆದಕಾರಣ ನಾನು ಮಾಡಿದ ದಂಡನೆಯಿಂದ ನೀನು ಪಾಪದಿಂದ ಬಿಡುಗಡೆಯನ್ನೈದುವೆ. ನೀನು ನಿನ್ನ ಅಜ್ಞಾನವನ್ನೂ ದುಃಖವನ್ನೂ ಬಿಡು. ಬ್ರಹ್ಮಲಿಖಿತವನ್ನು ಮೀರಲು ಯಾರಿಗೂ ಶಕ್ಯವಿಲ್ಲ. ಅಂಗದನನ್ನು ನೀನು ನೋಡಿಕೊಂಡಿದ್ದಂತೆ ನಾವೂ ನೋಡಿಕೊಳ್ಳುತ್ತೇವೆ. ಅವನೂ ನಮ್ಮಲ್ಲಿ ಯೋಗ್ಯಮರ್ಯಾದೆಯಿಂದ ನಡೆದುಕೊಳ್ಳುವನು. ಸಂದೇಹ ಬೇಡ " ಎಂದನು.

ಧರ್ಮಮಾರ್ಗಪ್ರವರ್ತಕನೂ ಮಹಾತ್ಮನೂ ಆದ ಶ್ರೀರಾಮನ ಹಿತವಚನಗಳನ್ನು ಕೇಳಿ ವಾಲಿಯು ಆತನನ್ನು ಕುರಿತು " ಶ್ರೀರಾಮ, ನೀನು ದೇವೇಂದ್ರನಂತೆ ಭಯಂಕರವಾದ ಪರಾಕ್ರಮವುಳ್ಳವನು. ನಿನ್ನ ಬಾಣದಿಂದ ಗಾಯಪಟ್ಟು ಬಿದ್ದ ದುಃಖದಿಂದ ನಿನ್ನನ್ನು ನಿಷ್ಠುರವಾಗಿ ನುಡಿದೆನು. ನರೇಂದ್ರ, ನನ್ನ ವಾಕ್ಯದಲ್ಲಿ ಯಾವ ದೋಷವಿದ್ದರೂ ಕ್ಷಮಿಸಿ ರಕ್ಷಿಸು " ಎಂದು ನುಡಿದನು.



## ೧೯ ನೆಯ ಅಧ್ಯಾಯ

## ಹತನಾದ ವಾಲಿಯನ್ನು ನೋಡಲು ತಾರೆಯ ಆಗಮನ

ಈ ಪ್ರಕಾರ ವಾಲಿಯು ಸುಗ್ರೀವನು ಎಸೆದ ಕಲ್ಲುಗಳಿಂದಲೂ ಮರಗಳಿಂದಲೂ ಗಾಯಪಡೆದು ಶ್ರೀರಾಮನು ಪ್ರಯೋಗಿಸಿದ ಬಾಣದಿಂದ ಮುರಿದು ಬಿದ್ದ ವೃತ್ತಾಂತವನ್ನು ಕೇಳಿ ತಾರಾದೇವಿಯು ತನ್ನ ಅರಮನೆಯಿಂದ ಹೊರಟಳು. ಆಗ ಕಿಷ್ಕಿಂಧಾಪಟ್ಟಣದಲ್ಲಿದ್ದ ಕಪಿನಾಯಕರು ರಣರಂಗದಲ್ಲಿದ್ದ ವಾಲಿಯು ರಾಮಬಾಣದಿಂದ ಗಾಯಪಡೆದು ಬಿದ್ದನೆಂಬ ಜನಜನಿತವಾದ ವಾರ್ತೆಯನ್ನು ಕೇಳಿ ನಾನಾ ದಿಕ್ಕುಗಳಿಗೆ ಓಡಲಾರಂಭಿಸಿದರು. ತಾರಾದೇವಿಯು ಅವರನ್ನು ಕುರಿತು " ಎಲೈ ಕಪಿನಾಯಕರುಗಳಿರಾ, ನಿಮ್ಮ ಒಡೆಯನಾದ ವಾಲಿಯನ್ನು ಬಿಟ್ಟು ಓಡಿಬರಬಹುದೆ ? ಸುಗ್ರೀವನು ತನಗೆ ಶತ್ರುವಾದ ವಾಲಿಯನ್ನು ಶ್ರೀರಾಮನಿಂದ ಬೀಳಿಸಿದ ಮಾತ್ರದಿಂದ ನಿಮಗಾದುದೇನು ? ಸುಗ್ರೀವನಿಂದ ನಿಮಗೆ ಭಯವೇನು ? " ಎಂದು ಕೇಳಿದಳು.

ಆ ಮಾತನ್ನು ಕೇಳಿ ಕಾಮರೂಪಿಗಳಾದ ಆ ಕಪಿನಾಯಕರು ಕಾಲೋಚಿತವೂ ಹಿತವೂ ಆದ ಮಾತುಗಳಿಂದ ಆ ದೇವಿಯನ್ನು ಕುರಿತು ಹೀಗೆಂದರು : " ತಾರಾದೇವಿ, ನೀನು ಬುದ್ಧಿವಂತಳಾದರೆ ನಿನ್ನ ಕುಮಾರನಾದ ಅಂಗದನನ್ನು ರಕ್ಷಿಸಿಕೊಂಡಿರು. ಸಾಕ್ಷಾತ್ ಯಮನೇ ಶ್ರೀರಾಮನ ರೂಪದಿಂದ

ಬಂದು ವಾಲಿಯನ್ನು ಕೊಂದನು. ವಾಲಿಯು ಸುಗ್ರೀವನ ಸಂಗಡ ಯುದ್ಧವನ್ನು ಮಾಡುತ್ತ ಅನೇಕ ವೃಕ್ಷಗಳನ್ನೂ ಕಲ್ಲುಗಳನ್ನೂ ಎಸೆಯುತ್ತಿರುವ ಸಮಯದಲ್ಲಿ, ಶ್ರೀರಾಮನು ವಜ್ರಾಯುಧಕ್ಕೆ ಸಮಾನವಾದ ಬಾಣಗಳನ್ನು ಆತನ ಮೇಲೆ ಪ್ರಯೋಗಿಸಿದನು. ಆದರಿಂದ ವಾಲಿಯು ಗಾಯ ಪಡೆದು ಬಲ ಮುರಿದು ಬಿದ್ದನು. ದೇವೇಂದ್ರನಿಗೆ ಪರಾಕ್ರಮದಲ್ಲಿ ಸಮಾನನಾದ ವಾಲಿಯು ಬಿದ್ದಮೇಲೆ ಅಂಗದನನ್ನು ಕರೆದುಕೊಂಡು ಹೋಗುವುದು ಉಚಿತವಲ್ಲ. ನೀನು ಅಂಗದನನ್ನು ರಕ್ಷಿಸಿಕೊಂಡು ಆತನಿಗೆ ಪಟ್ಟಾಭಿಷೇಕವನ್ನು ಮಾಡು. ಆತನು ತನ್ನ ಸ್ವಸ್ಥಾನದಲ್ಲಿದ್ದರೆ ನಾವೆಲ್ಲರೂ ಸೇವೆಯನ್ನು ಮಾಡಿಕೊಂಡಿರುವೆವು. ಅಲ್ಲದ ಪಕ್ಷದಲ್ಲಿ ಈಗಲೇ ಅಲ್ಲಲ್ಲಿ ಬೆಟ್ಟಗಳನ್ನು ಸೇರಿಕೊಳ್ಳುವೆವು. ಸುಗ್ರೀವನ ಕಡೆಯವರಿಗೆ ನಾವು ಈ ಹಿಂದೆ ಅಪಕಾರ ಮಾಡಿದ್ದೇವೆ. ಅವರಲ್ಲಿ ಕೆಲವರಿಗೆ ಭಾರ್ಯೆಯರಿದ್ದಾರೆ. ಕೆಲವರಿಗೆ ಇಲ್ಲ. ಆದರಿಂದ ನಮಗೆ ಭಯವುಂಟು. ನಾವು ಶ್ರೀರಾಮನ ಬಲವನ್ನು ಕಂಡೂ ಇಲ್ಲಿರಲು ಅಂಜುತ್ತೇವೆ" ಎಂದು ದೂರವಲ್ಲಿ ನಿಂತುಕೊಂಡು ನುಡಿದರು.

ತಾರಾದೇವಿಯು ಅವರನ್ನು ಕುರಿತು "ಎಲೈ ಕಪಿಗಳೆ, ನನ್ನ ಪ್ರಾಣಕಾಂತನಾದ ವಾಲಿಯು ಹೋದ ಮೇಲೆ ನನಗೆ ಈ ರಾಜ್ಯದಿಂದಲಾದರೂ ನನ್ನ ಮಗನಾದ ಅಂಗದನಿಂದಲಾದರೂ ಏನು ಕಾರ್ಯ? ಕಡೆಗೆ ನನ್ನ ಶರೀರವಿದ್ದು ತಾನೇ ಏನು ಪ್ರಯೋಜನ? ರಾಮಬಾಣದಿಂದ ಗಾಯ ಪಡೆದು ಬಿದ್ದ ವಾಲಿಯ ಸಮೀಪಕ್ಕೆ ಹೋಗಿ ಆತನ ಪಾದಗಳ ಮೇಲೆ ಬೀಳುವೆನು" ಎಂದು ನುಡಿದಳು. ಅನಂತರ, ಅತ್ಯಂತ ದುಃಖಾಕ್ರಾಂತಳಾಗಿ ಕೈಗಳಿಂದ ಎದೆಯನ್ನೂ ಮುಖವನ್ನೂ ಚಚ್ಚಿಕೊಳ್ಳುತ್ತ ಓಡುತ್ತ ಹೋಗಿ ಯುದ್ಧರಂಗದಲ್ಲಿ ಒಪ್ಪುಟ್ಟದವನೂ ದಾನವರನ್ನು ಸಂಹರಿಸಿದವನೂ ದೇವೇಂದ್ರನು ವಜ್ರಾಯುಧದ ಪೆಟ್ಟಿನಿಂದ ಸಮಸ್ತ ಪರ್ವತಗಳನ್ನೂ ಚೂರ್ಣ ಮಾಡುವಂತೆ ತನ್ನ ಮುಷ್ಟಿಯ ಪೆಟ್ಟಿನಿಂದ ಸಮಸ್ತ ಶತ್ರುಗಳನ್ನೂ ಜರ್ಝರಿತಮಾಡಿದವನೂ ಬಿರುಗಾಳಿಯಿಂದ ಮೇಘವು ಗುಡುಗುವಂತೆ ಆರ್ಭಟಿಸುತ್ತಿದ್ದವನೂ ಆದ ವಾಲಿಯು, ಸಿಂಹರಾಜನಿಂದ ಹತವಾದ ಇನ್ನೊಂದು ಸಿಂಹದಂತೆ ಮಹಾಬಲಪರಾಕ್ರಮಿಯಾದ ಶ್ರೀರಾಮನ ಬಾಣದಿಂದ ಗಾಯಪಡೆದು ನೆಲದಮೇಲೆ ಬಿದ್ದಿರುವುದನ್ನು ಕಂಡಳು. ಸಮೀಪದಲ್ಲಿಯೇ ಧನುಸ್ಸನ್ನು ಊರಿಕೊಂಡು ನಿಂತಿದ್ದ ಶ್ರೀರಾಮನನ್ನೂ ಲಕ್ಷ್ಮಣನನ್ನೂ ತನ್ನ ಗಂಡನ ತಮ್ಮನಾದ ಸುಗ್ರೀವನನ್ನೂ ನೋಡಿದಳು. ಅವರೆಲ್ಲರನ್ನೂ ಲಕ್ಷಿಸದೆ ತಾರೆಯು ರಣರಂಗದಲ್ಲಿ ಹತನಾಗಿ ಮಲಗಿದ್ದ ವಾಲಿಯ ಬಳಿಗೆ ಹೋಗಿ ದುಃಖಾತಿಶಯದಿಂದ ಮೂರ್ಛೆಹೋದಳು. ಪುನಃ ಎಚ್ಚತ್ತು "ಹಾ ಆರ್ಯಪುತ್ರ" ಎಂದು ಗೋಳಾಡಲಾರಂಭಿಸಿದಳು. ಅಷ್ಟರಲ್ಲಿ ಅಂಗದನೂ ಅಲ್ಲಿಗೆ ಬಂದುದನ್ನು ನೋಡಿ ಸುಗ್ರೀವನ ಮನಸ್ಸು ಕರಗಿ ಅವನು ಅತ್ಯಂತ ವಿಷಣ್ಣನಾದನು.



## ೨೦ ನೆಯ ಅಧ್ಯಾಯ

## ತಾರಾದೇವಿಯ ರೋದನ

ಬಿರುಗಾಳಿಯಿಂದ ಬೇರುಸಹಿತವಾಗಿ ಬಿದ್ದ ವೃಕ್ಷದಂತೆ, ರಾಮಬಾಣದಿಂದ ರಣರಂಗದಲ್ಲಿ ಬಿದ್ದಿದ್ದ ವಾಲಿಯನ್ನು ಕಂಡು ತಾರಾದೇವಿಯು ಅತ್ಯಂತ ದುಃಖಾಕ್ರಾಂತೆಯಾಗಿ ಹಂಬಲಿಸ

ತೊಡಗಿದಳು : "ಪ್ರಾಣಕಾಂತ, ನಿನ್ನ ಮುಂದುಗಡೆಯಲ್ಲಿರುವ ನನ್ನೊಡನೆ ಏಕೆ ಮಾತನಾಡ ದಿದ್ದೀಯೆ ? ನಿನ್ನಂಥ ದೊರೆಗಳು ಹೀಗೆ ಭೂಶಯನಮಾಡುವುದು ಉಚಿತವೆ ? ಮಂಚದ ಮೇಲೆ ಮಲಗಬಾರದೆ ? ಅಕಟಕಟಾ—ನಿನಗೆ ಈ ಭೂದೇವಿಯು ನನಗಿಂತಲೂ ಅತಿ ಪ್ರಿಯಳಾದಳೆ ? ಪ್ರಾಣಹೋಗುವ ಸಮಯದಲ್ಲಿ ನಿನ್ನ ಪ್ರಿಯಳಾದ ನನ್ನನ್ನು ಬಿಟ್ಟು ಭೂದೇವಿ ಯನ್ನು ಬಿಡದೆ ಆಕೆಯಮೇಲೆ ಕೈನೀಡಿಕೊಂಡು ಮಲಗಿದ್ದೀಯೆ. ಅಯ್ಯೋ ! ಇಲ್ಲಿ ಗಾಯಪಡದು ಬಿದ್ದಿರುವ ನಿನ್ನನ್ನು ಕಂಡು ನನ್ನ ಎದೆಯು ಅನೇಕ ಭಾಗಗಳಾಗಿ ಒಡೆಯದಿರುವುದರಿಂದ ಅದು ಕಲ್ಲೆದೆಯಾಗಿರಬೇಕು. ಹೇ ವೀರ, ಧರ್ಮಮಾರ್ಗಪ್ರವರ್ತಕನಾದ ನಿನ್ನಿಂದ ಕಿಷ್ಕಿಂಧೆಯಂತೆ ರಮ್ಯವಾಗಿರುವ ಮತ್ತೊಂದು ಪಟ್ಟಣವು ಸ್ವರ್ಗಮಾರ್ಗದಲ್ಲಿ ನಿರ್ಮಿತವಾಗಿರಬೇಕು. ಅತ್ಯಂತ ಪರಿಮಳಪುಷ್ಪಗಳುಳ್ಳ ಉದ್ಯಾನವನಗಳಲ್ಲಿ ಅನುಭವಿಸಿಕೊಂಡಿದ್ದ ಭೋಗಗಳು ಈಗ ತೀರಿ ಹೋದವೆ ? ನಾನು ನಿರಾಶೆಯಿಂದ ಸಂತೋಷಗುಂದಿ ಶೋಕವೆಂಬ ಸಮುದ್ರದಲ್ಲಿ ಮುಳುಗಿ ಹೋದೆನು. ವಾನರೇಂದ್ರ, ನೀನು ಸುಗ್ರೀವನ ಸ್ತ್ರೀಯನ್ನು ಅಪಹರಿಸಲು ಆತನು ನಿನ್ನನ್ನು ಈ ಭೂಲೋಕದಿಂದ ಹೊರಡಿಸಿದನು. ಈ ವಿಪತ್ತನ್ನು ನೀನೇ ತಂದುಕೊಂಡೆ ! ನಿನ್ನಿಂದ ಶ್ರೇಯಸ್ಸನ್ನು ಪಡೆಯಬೇಕೆಂದಿದ್ದ ನಾನು ಇಂದು ಹತಾಶಳಾದೆನು. ನಾನು ಯಾವಾಗಲೂ ನಿನಗೆ ಹಿತವನ್ನೇ ಬಯಸಿ ನಿನಗೆ ಹಿತವಾದ ಮಾತುಗಳನ್ನೇ ಆಡುತ್ತಿದ್ದೆನು. ರೂಪಯೌವನಗಳಿಂದ ಹೆಮ್ಮೆಗೊಂಡಿರುವ ಅಪ್ಸರೆಯರ ಚಿತ್ತವನ್ನು ನಿನ್ನ ಸೌಂದರ್ಯವು ಕಡೆಯಬಲ್ಲದು. ನೀನು ನನ್ನ ಮಾತನ್ನು ಕೇಳದೆ ಸುಗ್ರೀವನೊಡನೆ ಯುದ್ಧಕ್ಕೆ ಹೊರಟಾಗಲೆ ನಿನಗೆ ಕೊನೆಗಾಲ ಸಮೀಪಿಸಿತೆಂದು ತಿಳಿದೆನು. ಸುಕುಮಾರನೂ ಸುಖೋಚಿತನೂ ಆದ ಈ ಅಂಗದಕುಮಾರನು ಇನ್ನುಮೇಲೆ, ಕ್ರುದ್ಧನಾಗಿರುವ ಚಿಕ್ಕಪ್ಪನ ಬಳಿ ಯಾವ ಅವಸ್ಥೆಯನ್ನು ಪಡೆಯುವನೊ ! ಹೇ ಮಗು, ಅಂಗದ, ನಿನ್ನ ತಂದೆಯನ್ನು ಚೆನ್ನಾಗಿ ನೋಡು. ಇನ್ನು ಮುಂದೆ ಇವನನ್ನು ನೀನು ಕಾಣಲಾರೆ. ಹೇ ಪ್ರಾಣನಾಥ, ನಿನ್ನ ಪ್ರಿಯಪುತ್ರನಾದ ಅಂಗದನು ಬಂದಿದ್ದಾನಲ್ಲ ? ಅವನನ್ನು ಏಕೆ ಮಾತನಾಡಿಸುವುದಿಲ್ಲ ? ಶ್ರೀರಾಮನು ನಿನ್ನನ್ನು ಕೊಂದು ಮಹತ್ತರವಾದ ಅಕೃತ್ಯವನ್ನು ಮಾಡಿದನು. ಸುಗ್ರೀವನಿಗೆ ನಂಬಿಕೆಯನ್ನು ಕೊಟ್ಟು ಆತನ ಕಾರ್ಯವನ್ನು ಸಾಧಿಸಿ ಆತನ ಋಣವನ್ನು ತೀರಿಸಿಕೊಂಡನು. ಎಲೈ ಸುಗ್ರೀವ, ನಿನ್ನ ಮನೋರಥವು ಸಂದಿತಲ್ಲವೆ ? ನಿನ್ನ ಸ್ತ್ರೀಯಾದ ರುಮೆಯನ್ನು ಸಾಧಿಸಿಕೊಂಡೆಯಲ್ಲವೆ ? ನಿನ್ನ ಶತ್ರುವಾದ ಅಣ್ಣನನ್ನು ಕೊಂದದ್ದರಿಂದ ಇನ್ನುಮೇಲೆ ನೀನು ಮನಸ್ಸಿನ ವ್ಯಥೆಯನ್ನು ಬಿಟ್ಟು ರಾಜ್ಯಭೋಗವನ್ನನುಭವಿಸು. ಹೇ ವಾನರೇಶ್ವರ, ಈ ರೀತಿ ಹಂಬಲಿಸುತ್ತಿರುವ ನನ್ನನ್ನು ಯಾವ ಕಾರಣ ಮಾತನಾಡಿಸದಿದ್ದೀಯೆ ? ಇಗೋ, ನಿನ್ನ ಸ್ತ್ರೀಯರೆಲ್ಲರೂ ಬಂದಿದ್ದಾರೆ. ಇವರನ್ನು ಯಾವ ಕಾರಣ ಕಣ್ಣುತೆರೆದು ನೋಡದಿದ್ದೀಯೆ ?" ಎಂದು ಗೋಳಾಡಿದಳು.

ಆಗ ತಾರಾದೇವಿಯ ಹಂಬಲಿಕೆಯನ್ನು ಕೇಳಿ ವಾನರಸ್ತ್ರೀಯರೆಲ್ಲರೂ ಅತ್ಯಂತ ದುಃಖಾ ಕ್ರಾಂತೆಯರಾಗಿ ಅಂಗದಕುಮಾರನನ್ನು ತಬ್ಬಿಕೊಂಡು ರೋದನಮಾಡತೊಡಗಿದರು. ಪುನಃ ತಾರಾದೇವಿಯು ತನ್ನ ಪತಿಯಾದ ವಾಲಿಯನ್ನು ನೋಡುತ್ತ "ಪ್ರಾಣಕಾಂತ, ಅಂಗದಕುಮಾರನನ್ನು ಬಿಟ್ಟು ನೀನು ಯಾವ ಕಾರಣ ದೂರಯಾತ್ರೆ ಹೊರಟೆ ? ವಾನರೇಂದ್ರ, ನೀನು ನಿನ್ನ ಮಗನಲ್ಲಿ ಅತ್ಯಂತ ವ್ಯಾಮೋಹವುಳ್ಳವನು. ಸದ್ಗುಣಸಂಪನ್ನನಾದ ಈ ಮಗನನ್ನು ಬಿಟ್ಟುಹೋಗುವುದು ನಿನಗುಚಿತವೆ ? ನಿನಗೆ ಅಂಗದಕುಮಾರನಾದರೂ ನಾನಾದರೂ ಮಾಡಿದ ಅಪರಾಧವೇನು ? ನನ್ನನ್ನೂ ಈ ಕುಮಾರನನ್ನೂ ಬಿಟ್ಟು ಏಕೆ ದೀರ್ಘಯಾತ್ರೆ ಹೊರಟೆ ? ನಾನು ನಿನಗೆ ಮಾಡಿದ ಅಪರಾಧವೇನಿದ್ದರೂ ಮನ್ನಿಸಬೇಕೆಂದು ನಿನ್ನ ಪಾದಗಳಿಗಭಿವಂದಿಸಿ ಬೇಡಿಕೊಳ್ಳುತ್ತೇನೆ" ಎಂದು

ಅತಿದೈನ್ಯದಿಂದ ಅಳುತ್ತ ಉಳಿದ ವಾನರಸ್ತ್ರೀಯರನ್ನು ಕರೆಯುತ್ತ ವಾಲಿಯ ಸಮೀಪದಲ್ಲಿಯೇ ಶರೀರವನ್ನು ಬಿಡಬೇಕೆಂದು ನಿಶ್ಚಯಿಸಿಕೊಂಡಳು.



## ೨೧ ನೆಯ ಅಧ್ಯಾಯ

## ಹನುಮಂತನು ತಾರಾದೇವಿಗೆ ಹೇಳಿದ ಸಮಾಧಾನ

ಆ ಸಮಯದಲ್ಲಿ ಕಪಿನಾಯಕನಾದ ಹನುಮಂತನು, ನಕ್ಷತ್ರಲೋಕದಲ್ಲಿದ್ದು ಭೋಗಾದೃಷ್ಟವು ತೀರಲು ಭೂಲೋಕಕ್ಕೆ ಬಿದ್ದ ನಕ್ಷತ್ರವೋ ಎಂಬಂತೆ ಇದ್ದ ತಾರಾದೇವಿಯನ್ನು ಕುರಿತು ಹೀಗೆ ಸಮಾಧಾನ ಹೇಳಿದನು : "ಎಲೌ ತಾರಾದೇವಿ, ಲೋಕದಲ್ಲಿ ಪ್ರಾಣಿಗಳು ತಾವು ಮಾಡಿದ ಪುಣ್ಯ ಪಾಪಗಳ ಫಲವನ್ನು ಪಡೆದೇ ತೀರುತ್ತಾರೆ. ಸ್ವಯಂಶೋಚ್ಯಳೂ ದೀನಳೂ ಆದ ನೀನು ಯಾರಿಗಾಗಿ ಶೋಕಿಸುತ್ತೀಯೆ ? ನೀರಿನ ಗುಳ್ಳೆಯಂತೆ ಕ್ಷಣಭಂಗುರವಾದ ಈ ಶರೀರಕ್ಕಾಗಿ ಏಕೆ ದುಃಖಿಸುವೆ ? ನಿನ್ನ ಪುತ್ರನಾದ ಅಂಗದನನ್ನು ನೋಡುತ್ತ ಶೋಕವನ್ನು ತಡೆದುಕೊ. ಮುಂದಿನ ಕರ್ತವ್ಯ ವೇನೆಂಬುದನ್ನು ಚಿಂತಿಸು. ಪ್ರಾಣಿಗಳ ಜನನಮರಣಗಳು ಯಾವಾಗಲೆಂಬುದು ಯಾರಿಗೂ ತಿಳಿಯದು. ಲಕ್ಷಗಟ್ಟಲೆ ಕಪಿಗಳಿಗೆ ಆಹಾರವನ್ನು ಕೊಟ್ಟು ಸಾಕುತ್ತಿದ್ದ ವಾನರೇಂದ್ರನಾದ ವಾಲಿಗೂ ಈ ರೀತಿ ಮರಣಬಂದಿತು. ಈ ವಾಲಿಯು ಸಾಮ ದಾನ ಕ್ಷಮೆಗಳಲ್ಲಿ ನಿಪುಣನಾಗಿ ಪುಣ್ಯವಂತನಾಗಿದ್ದನು. ಅವನಿಗೆ ಮುಂದೆ ಧರ್ಮಿಷ್ಠರಿಗೆ ದೊರಕುವ ಸದ್ಗತಿಯೇ ದೊರಕುತ್ತದೆ. ಈಗ ಸಕಲವಾನರರೂ ಅಂಗದನೂ ನಿನ್ನ ಅಧೀನರು ; ವಾನರರಾಜ್ಯಾಧಿಪತ್ಯವೆಲ್ಲ ನಿನ್ನ ವಶದಲ್ಲಿದೆ. ವಾಲಿಯ ಸಂಗಡಿಗರಾದ ಕಪಿನಾಯಕರನ್ನು ಸಂತವಿಟ್ಟು ಒಡೆಯನಿಲ್ಲದ ರಾಜ್ಯಕ್ಕೆ ನಿನ್ನ ಮಗನಾದ ಅಂಗದನನ್ನು ಒಡೆಯನನ್ನಾಗಿ ಮಾಡಿ ಮುಂದೆ ನಿನ್ನ ವಂಶವು ಪರಂಪರೆಯಾಗಿ ನಡೆಯು ವಂತೆ ಯತ್ನಮಾಡು. ಈಗ ಕಾಲೋಚಿತವಾದ ಕಾರ್ಯವು ವಾಲಿಗೆ ಸಂಸ್ಕಾರಮಾಡಬೇಕಾದದ್ದು. ಆಮೇಲೆ ಅಂಗದನಿಗೆ ಪಟ್ಟವನ್ನು ಕಟ್ಟಿ ಆತನು ಸಿಂಹಾಸನದಮೇಲೆ ಕುಳಿತಿರುವುದನ್ನು ನೋಡಿ ನಿನ್ನ ಮನಸ್ಸಿನ ದುಃಖವನ್ನು ಕಳೆದುಕೊ " ಎಂದು ನುಡಿದನು.

ಆ ಮಾತನ್ನು ಕೇಳಿ ತಾರಾದೇವಿಯು ಪತಿವಿಯೋಗದುಃಖದಿಂದ ಕಂಗೆಟ್ಟು ಹನುಮಂತನನ್ನು ಕುರಿತು "ಹನುಮಂತ, ನನಗೆ ಅಂಗದನಂಥ ನೂರುಮಂದಿ ಕುಮಾರರಿದ್ದರೂ ಗಾಯಪಡೆದು ಬಿದ್ದಿರುವ ಈ ನನ್ನ ಪತಿಯ ಶರೀರವನ್ನು ಆಲಿಂಗಿಸಿಕೊಂಡ ಸುಖಕ್ಕೆ ಸರಿಬಾರದು. ನಾನು ಈ ರಾಜ್ಯವನ್ನು ಬಯಸುವವಳಲ್ಲ. ಅಂಗದನ ವಿಷಯ ನನಗೆ ತಿಳಿಯದು. ಮುಂದಿನ ಕಾರ್ಯವನ್ನು ಅಂಗದನ ಚಿಕ್ಕಪ್ಪನಾದ ಸುಗ್ರೀವನು ವಿಚಾರಿಸಿಕೊಳ್ಳಲಿ. ಹನುಮಂತ, ಮಗನಿಗೆ ತಂದೆಯೇ ಗತಿಯಲ್ಲದೆ ತಾಯಿಯಲ್ಲ. ನನಗೆ ಕಪಿನಾಯಕನಾದ ವಾಲಿಯೇ ಹೊರತು ಮತ್ತೊಬ್ಬನು ಗತಿಯಲ್ಲ. ರಣರಂಗದಲ್ಲಿ ಹಿಮ್ಮೆಟ್ಟದೆ ಯುದ್ಧಮಾಡಿ ಗಾಯಪಡೆದು ರಣಭೂಮಿಯಲ್ಲಿ ಮಲಗಿರುವ ವಾಲಿಯ ಶಯನವನ್ನು ಸೇವಿಸುವುದೇ ನನಗೆ ಯೋಗ್ಯವಾದದ್ದು " ಎಂದು ನುಡಿದಳು.



## ೨೨ ನೆಯ ಅಧ್ಯಾಯ

## ವಾಲಿಯ ಮರಣ

ಈ ಪ್ರಕಾರ ತಾರಾದೇವಿಯು ಹಂಬಲಿಸುತ್ತಿರಲು ಕಂಠಗತಪ್ರಾಣನಾದ ವಾಲಿಯು ನಿಟ್ಟುಸಿರುಬಿಡುತ್ತ ಅಂಗದನನ್ನು ಕರೆದು." ಅಂಗದ, ನಿನ್ನ ಚಿಕ್ಕಪ್ಪನಾದ ಸುಗ್ರೀವನನ್ನು ನೋಡು " ಎಂದು ನುಡಿದು ಸುಗ್ರೀವನನ್ನು ಕರೆದು ಮೆಲ್ಲಗೆ ಹೀಗೆಂದನು: " ಸುಗ್ರೀವ, ನೀನು ಇನ್ನು ದೋಷಗಳನ್ನೆಣಿಸಬೇಡ. ಮುಂದೆ ಬರಲಿರುವ ದುರ್ದಶೆಯು ನನಗೆ ಬುದ್ಧಿಮೋಹವನ್ನುಂಟು ಮಾಡಿತು. ನಾನು ಮಾಡಿದ ಅಕೃತ್ಯದಿಂದ ನನಗೂ ನಿನಗೂ ಒಟ್ಟಿಗೆ ದುಃಖವುಂಟಾಯಿತು. ಲೋಕದಲ್ಲಿ ಅಣ್ಣತಮ್ಮಂದಿರ ಮಿತ್ರತ್ತ್ವವೇ ಸ್ಥಿರವಾದದ್ದು. ನಾನು ಇಂದೇ ಯಮನ ಮಂದಿರವನ್ನು ಸೇರುತ್ತೇನೆಂದು ತಿಳಿ. ನೀನು ಒಡನೆ ರಾಜ್ಯಾಧಿಪತ್ಯವನ್ನು ವಹಿಸಿಕೊ. ನಾನು ರಾಜ್ಯಾಧಿಪತ್ಯವನ್ನೂ ಅಪರಿಮಿತವಾದ ಐಶ್ವರ್ಯವನ್ನೂ ಮಹತ್ತಾದ ಕೀರ್ತಿಯನ್ನೂ ನನ್ನ ಜೀವವನ್ನೂ ಬಿಟ್ಟು ಹೋಗುತ್ತಿದ್ದೇನೆ. ಈ ಅವಸ್ಥೆಯಲ್ಲಿ ಒಂದು ಮಾತು ಹೇಳುತ್ತೇನೆ. ಆ ಮಾತು ನಿನಗೆ ಕಠಿಣವಾದರೂ ನಡೆಸುವೆಯೆಂದು ನಂಬಿದ್ದೇನೆ. ಎಂದೂ ದುಃಖವನ್ನರಿಯದ ಬುದ್ಧಿವಂತನಾದ ಅಂಗದಕುಮಾರನು ದುಃಖಾತಿಶಯದಿಂದ ಕಣ್ಣೀರುಬಿಡುತ್ತ ಕಂಗೆಟ್ಟು ಭೂಮಿಯಲ್ಲಿ ಬಿದ್ದಿರುವುದನ್ನು ನೋಡು. ಈ ಕುಮಾರನು ನನ್ನ ಪ್ರಾಣಗಳಿಗಿಂತಲೂ ಅಧಿಕನಾದವನು. ನಾನು ಹೋದ ಮೇಲೆ ಇವನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗನೆಂದು ರಕ್ಷಿಸು. ಈ ಕುಮಾರನಿಗೆ ನೀನೇ ತಂದೆಯೆಂದು ಭಾವಿಸು. ಅಂಗದನು ನಿನಗೆ ಸಮಾನವಾದ ಪರಾಕ್ರಮವುಳ್ಳವನು. ಈತನಿಗೆ ಅಂಜದಿರುವಂತೆ ಅಭಯವನ್ನು ಕೊಟ್ಟು ರಕ್ಷಿಸಿಕೊಂಡಿರು. ನಿನಗೆ ರಾಕ್ಷಸರೊಡನೆ ಕದನ ಬಂದಲ್ಲಿ ಈತನು ನಿನಗಿಂತಲೂ ಮೊದಲೇ ಹೋಗಿ ಅವರೊಡನೆ ಯುದ್ಧಮಾಡುವನು. ಈತನು ಮಹಾ ಬಲಶಾಲಿ; ಮಹಾಪರಾಕ್ರಮಿ. ರಣರಂಗದಲ್ಲಿ ನಿನ್ನ ಚಿತ್ತಕ್ಕೆ ಸಂತೋಷವುಂಟಾಗುವಂತೆ ಕಾರ್ಯವನ್ನು ಮಾಡುವನು. ತಾರಾದೇವಿಯು ಸುಷೇಣನ ಮಗಳು. ಇವಳು ಸೂಕ್ಷ್ಮವಾದ ಕಾರ್ಯಗಳನ್ನು ನಿಶ್ಚಯಿಸುವುದರಲ್ಲಿ ನಿಪುಣತೆಯುಳ್ಳವಳು. ದೊಡ್ಡ ಆಪತ್ತು ಬರುವ ಸಮಯದಲ್ಲಿ ಈ ದೇವಿಯು ಯೋಚನೆಮಾಡಿ ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿ ಹೇಳುವಳು. ಆ ಕಾರ್ಯವನ್ನು ಮಾಡುವುದರಿಂದ ಆಪತ್ತು ತೊಲಗುವುದು. ನೀನು ಈ ದೇವಿಯ ವಾಕ್ಯವನ್ನು ಮೀರಬೇಡ. ನೀನು ಶ್ರೀರಾಮನ ಕಾರ್ಯವನ್ನು ಸಾಧ್ಯಮಾಡಿಕೊಡದಿದ್ದರೆ ನಿನಗೆ ದೋಷವು ಸಂಭವಿಸುವುದು. ಸುಗ್ರೀವ, ಪೂರ್ವದಲ್ಲಿ ದೇವೇಂದ್ರನು ನನಗೆ ಕೊಟ್ಟ ಸುವರ್ಣಮಯವಾದ ಕಂಠಮಾಲೆಯನ್ನು ಧರಿಸಿಕೊ. ಈ ಕಂಠಮಾಲೆಯಲ್ಲಿ ಐಶ್ವರ್ಯವು ಸ್ಥಿರವಾಗಿರುವುದು " ಎಂದು ನುಡಿದನು.

ಆಗ ಸುಗ್ರೀವನು ಮನಗರಗಿ ಹರ್ಷಗುಂದಿ ರಾಹು ತುಡುಕಿದ ಚಂದ್ರಮಂಡಲದಂತೆ ಕಾಂತಿಹೀನನಾದನು. ಅವನು ವಾಲಿಯ ಮಾತನ್ನು ಮೀರದೆ ಶಾಂತನಾಗಿ ವಾಲಿಯ ಇಚ್ಛೆಯಂತೆ ಆ ಕಂಠಮಾಲೆಯನ್ನು ತೆಗೆದುಕೊಂಡನು. ಆ ಬಳಿಕ ವಾಲಿಯು, ಪ್ರಾಣಗಳು ಕಂಠಗತವಾಗುತ್ತಿರಲು ಅಂಗದನನ್ನು ಕರೆದು ಈ ರೀತಿ ಹೇಳಿದನು · " ಅಂಗದ, ನೀನು ದೇಶಕಾಲಗಳನ್ನರಿತು ಕ್ಷಮೆಯನ್ನು

ತಾಳು. ಸುಖದುಃಖಗಳು ಬಂದಲ್ಲಿ ಹಿಗ್ಗದೆಯೂ ಕುಗ್ಗದೆಯೂ ಸುಗ್ರೀವನು ಹೇಳುವಂತೆ ಕೇಳಿಕೊಂಡಿರು. ನಾನು ರಕ್ಷಿಸಿಕೊಂಡಿದ್ದಂತೆಯೇ ಸುಗ್ರೀವನೂ ನಿನ್ನನ್ನು ರಕ್ಷಿಸಿಕೊಂಡಿರುವನು. ನೀನು ಬಲ್ಲವರು ನಡೆಯುವ ಮಾರ್ಗದಲ್ಲಿಯೇ ನಡೆ. ಶತ್ರುಗಳು ಹೇಳಿದಂತೆ ಕೇಳಬೇಡ. ಮಗನೆ, ನೀನು ಯಾವಾಗಲೂ ಸ್ವಾಮಿಕಾರ್ಯತತ್ಪರನಾಗಿ ಮನಸ್ಸಿನಲ್ಲಿ ರೋಷ ತಳೆಯದೆಯೆ ಸುಗ್ರೀವನು ಹೇಳಿದಂತೆ ಕೇಳಿಕೊಂಡಿರು. ಅರಸರಲ್ಲಿ ಅತಿಸ್ನೇಹವನ್ನು ಮಾಡಬೇಡ. ಸ್ನೇಹ ಮಾಡದೆಯೂ ಇರಬೇಡ. ಅವರೊಡನೆ ಅತಿಸ್ನೇಹವನ್ನು ಮಾಡುವವರೂ ಸ್ನೇಹವನ್ನು ಮಾಡದೆಯೆ ಉಪೇಕ್ಷೆ ಮಾಡುವವರೂ ಕೆಡುವರು. ಆದಕಾರಣ ನೀನು ಮುಂದಿನ ಕಾರ್ಯವನ್ನು ಅಂತರ್ದೃಷ್ಟಿಯಿಂದ ವಿವೇಚಿಸಿ ಅದರಂತೆ ನಡೆದುಕೊಂಡು ಸುಖವಾಗಿರು ” ಎಂದು ಹೇಳಿ ಕಣ್ಣುಬಾಯಿಗಳನ್ನು ಬಿಟ್ಟನು. ಆಗ ಅವನ ದಂತಗಳೂ ಭಯಂಕರವಾದ ಕೋರೆದಾಡೆಗಳೂ ಕಾಣಿಸಿಕೊಂಡವು. ವಾಲಿಯು ಲೋಕಾಂತರವನ್ನೈದಿದನು. ಅದನ್ನು ನೋಡಿ ಹನುಮಂತನೇ ಮೊದಲಾದ ಕಪಿಶ್ರೇಷ್ಠರು ಕಣ್ಣೀರುಬಿಟ್ಟು ಶೋಕಪಡಲಾರಂಭಿಸಿದರು. ಕಿಷ್ಕಿಂಧಾಪಟ್ಟಣವು ಶೂನ್ಯವಾಗಿ ತೋರಿತು. ಉದ್ಯಾನವನಗಳೂ ಆ ಪಟ್ಟಣವನ್ನು ಬಳಸಿದ್ದ ಉಪವನಗಳೂ ಕಪಿಗಳ ಸಂಚಾರವಿಲ್ಲದೆ ಶೋಭಾರಹಿತವಾದವು. ವಾಲಿಯಂತೆ ತೋಟಗಳನ್ನೂ ಉಪವನಗಳನ್ನೂ ಫಲಪುಷ್ಪಸಮೃದ್ಧ ವಾಗಿ ಮಾಡುವವರಾರು ? ಪೂರ್ವದಲ್ಲಿ ವಾಲಿಯು ಗೋಲಭನೆಂಬ ಗಂಧರ್ವನೊಡನೆ ಹದಿನೈದು ವರ್ಷಗಳ ಪರ್ಯಂತ ಹಗಲಿರುಳೆನ್ನದೆ ಯುದ್ಧಮಾಡಿ ಆತನನ್ನು ಕೊಂದನು. ಅಂಥ ಪರಾಕ್ರಮಿಯೂ ಕೋರೆದಾಡೆಗಳಿಂದ ಅತಿಭಯಂಕರನೂ ಆದ ವಾನರಾಧಿಪತಿಯು ರಣರಂಗದಲ್ಲಿ ಬಿದ್ದನು ! ಮಹಾಪರಾಕ್ರಮವುಳ್ಳ ಸಿಂಹರಾಜನೊಡನೆ ಯುದ್ಧಮಾಡಿ ಗೋವುಗಳಿಗಧಿಪತಿಯಾದ ವೃಷಭರಾಜನು ಬಿದ್ದರೆ ಗೋವುಗಳು ಕಂಗೆಡುವಂತೆ, ವಾಲಿಯು ಶ್ರೀರಾಮನಿಂದ ಹತನಾಗಲು ಸಮಸ್ತ ಕಪಿಕುಲದವರೂ ಕಂಗೆಟ್ಟು ರೋದನಮಾಡುತ್ತಿದ್ದರು. ಮೃತನಾದ ಗಂಡನ ಮುಖವನ್ನು ನೋಡಿ ದುಃಖಸಾಗರಮಗ್ನಳಾದ ತಾರೆಯು ಬುಡಕತ್ತರಿಸಿದ ದೊಡ್ಡಮರವನ್ನು ಆಶ್ರಯಿಸಿದ ಲತೆಯಂತೆ ವಾಲಿಯನ್ನಪ್ಪಿಕೊಂಡು ಭೂಮಿಯ ಮೇಲೆ ಬಿದ್ದಳು.



## ೩೩ ನೆಯ ಅಧ್ಯಾಯ

## ತಾರೆಯ ಶೋಕ

ತಾರಾದೇವಿಯು, ರಾಮಬಾಣದಿಂದ ಗಾಯಪಡೆದು ಬಿದ್ದ ವಾಲಿಯ ಮುಖವನ್ನು ಆಘ್ರಾಣಿಸುತ್ತ ಹೀಗೆಂದು ಗೋಳಾಡಿದಳು : “ ವಾನರೇಂದ್ರ, ಕಲ್ಲುಗಳಿಂದ ಇಟ್ಟಣಿಸಿದ ವೀರಶಯನಸ್ಥಾನವಾದ ಈ ರಣಭೂಮಿಯಲ್ಲಿ ಏಕೆ ಮಲಗಿದ್ದೀಯೆ ? ನನ್ನ ಮಾತನ್ನು ಏಕೆ ಕೇಳದಿರುವೆ ? ಅಕಟಕಟಾ, ನಿನಗೆ ಈ ಭೂದೇವಿಯು ನನಗಿಂತಲೂ ಅತಿಪ್ರಿಯಳಾದಳು. ಅವಳನ್ನಪ್ಪಿಕೊಂಡು ಮಲಗಿದ ಮಾತ್ರದಿಂದಲೇ ನನ್ನೊಡನೆ ಮಾತನಾಡದಿರಬಹುದೆ ? ಮಹಾ ಪರಾಕ್ರಮಿಯಾದ ನೀನು ಸುಗ್ರೀವನ ವಶವಾಗಿ ಪ್ರಾಣವನ್ನು ಬಿಟ್ಟದ್ದು ದೈವಗತಿಯಲ್ಲದೆ ಇನ್ನೇನು ? ಸುಗ್ರೀವನೇ ನಿನಗಿಂತ ಪರಾಕ್ರಮದಲ್ಲಿ ದೊಡ್ಡವನಾದನು. ಹೇ ಸಾಹಸಿ, ಬಲಿಷ್ಠನಾದ ನಿನ್ನನ್ನು ಸಮಸ್ತ ಕಪಿನಾಯಕರೂ ಸೇವಿಸುತ್ತಿದ್ದರು. ಇಷ್ಟುಮಂದಿ ಕಪಿನಾಯಕರ ಹಂಬಲಿಕೆ ಯನ್ನೂ ಅಂಗದನ ರೋದನಧ್ವನಿಯನ್ನೂ ನನ್ನ ಮಾತುಗಳನ್ನೂ ಕೇಳದೆಯೇ ನೀನು

ಮಲಗಿರಬಹುದೆ ? ಮಹಾಪರಾಕ್ರಮಿಗಳಿಗೆ ಶಯನಸ್ಥಳವಾದ ಈ ರಣರಂಗದಲ್ಲಿ ನಿನ್ನಿಂದ ಹತರಾಗಿ ಬಹುಮಂದಿ ಶತ್ರುಗಳು ವೀರಶಯನವನ್ನು ಮಾಡಿದರು. ಅಂಥ ವೀರಭೂಮಿಯಲ್ಲಿ ರಾಮಬಾಣದಿಂದ ಹತನಾಗಿ ಈಗ ನೀನೊಬ್ಬನೇ ಮಲಗಿರಬಹುದೆ ? ರಣಪ್ರಿಯ ವಾಲಿ, ನೀನು ಸತ್ಪುರುಷರನ್ನು ಸತ್ಕಾರಮಾಡಿದವನು. ಅಂಥ ನೀನು ಅನಾಥೆಯಾದ ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ ? ಶೂರನಾದವನಿಗೆ ಹೆಣ್ಣು ಕೊಡಬಾರದೆಂಬ ನೀತಿಯು ನನ್ನಲ್ಲಿ ಪ್ರತ್ಯಕ್ಷವಾಯಿತು. ಅತಿಪರಾಕ್ರಮಿಯಾದ ನಿನಗೆ ಪತ್ನಿಯಾದ ನಾನು ವಿಧವೆಯಾದೆನು. ನನ್ನ ಅಭಿಮಾನವೂ ಸ್ಥಿರವಾದ ಐಶ್ವರ್ಯವೂ ಇಂದಿಗೆ ತೊಲಗಿದವು. ಆಳವನ್ನು ತಿಳಿಯಲು ಶಕ್ಯವಿಲ್ಲದ ಅತಿವಿಶಾಲವಾದ ಶೋಕವೆಂಬ ಸಮುದ್ರದಲ್ಲಿ ಮುಳುಗಿದೆನು. ನನ್ನ ಪ್ರಾಣಕಾಂತನಾದ ನಿನ್ನ ಮರಣವನ್ನು ಕಂಡೂ ಅನೇಕ ಭಾಗವಾಗಿ ಒಡೆಯದಿರುವ ನನ್ನ ಎದೆಯು ಕಲ್ಲೆದೆಯಾಗಿರಬೇಕು. ಪ್ರಾಣನಾಥ, ನಿನಗೆ ನಾನೇ ಪ್ರಿಯಸಖಿಯೂ ನನಗೆ ನೀನೇ ಪ್ರಾಣಕಾಂತನೂ ಆಗಿದ್ದೆವು ! ಅಕಟಕಟಾ—ಅತಿಪರಾಕ್ರಮಿಯಾದ ನೀನು ರಣರಂಗದಲ್ಲಿ ಮುರಿದು ಲೋಕಾಂತರವನ್ನೈದಿದೆಯಲ್ಲವೆ ? ಲೋಕದಲ್ಲಿ ಮಕ್ಕಳೂ ಐಶ್ವರ್ಯವೂ ಧನಧಾನ್ಯಗಳೂ ಎಷ್ಟೇ ಇದ್ದರೂ ಪತಿಯಿಲ್ಲದವಳು ವಿಧವೆಯೆನಿಸಿಕೊಳ್ಳುವಳು ! ಹೇ ವೀರ, ಉತ್ತಮವೂ ಮೃದುವೂ ಆದ ಸುಪ್ಪತ್ತಿಗೆಯಮೇಲೆ ಮಲಗಿದ್ದ ನೀನು ಈಗ ರಕ್ತದಿಂದ ನೆನೆದ ಭೂಮಿಯ ಮೇಲೆ ಹೇಗೆ ಮಲಗಿದ್ದೀಯೆ ? ಧೂಳು ಬೆರೆತು ರಕ್ತಮಸಗಿದ ನಿನ್ನ ಶರೀರವನ್ನು ನನ್ನ ಭುಜಗಳಿಂದ ಆಲಿಂಗಿಸಿಕೊಳ್ಳುವುದು ಹೇಗೆ ? ಸುಗ್ರೀವನು ಶ್ರೀರಾಮನ ಒಂದೇ ಬಾಣದಿಂದ ತನ್ನ ಭಯವನ್ನು ಪರಿಹರಿಸಿಕೊಂಡು ಈ ಭಯಂಕರವಾದ ರಣರಂಗದಲ್ಲಿ ಜಯಪಡೆದು ಕೃತಾರ್ಥನಾದನು ! " ಎಂದು ಹಂಬಲಿಸತೊಡಗಿದಳು.

ಆ ಸಮಯದಲ್ಲಿ ಸುಗ್ರೀವನ ಪ್ರಧಾನನಾದ ನೀಲನು, ಪರ್ವತದ ಗುಹೆಯಲ್ಲಿ ಅಡಗಿದ್ದ ಕೃಷ್ಣಸರ್ಪವನ್ನು ಎಳೆದು ತೆಗೆಯುವಂತೆ ವಾಲಿಯ ಶರೀರದಲ್ಲಿ ನೆಟ್ಟಿದ್ದ ರಾಮಬಾಣವನ್ನು ಕಿತ್ತನು. ಆಗ ವಾಲಿಯ ಶರೀರದಿಂದ ಸುರಿಯುತ್ತಿದ್ದ ರಕ್ತಧಾರೆಗಳು ಸಾಯಂಕಾಲದ ಸೂರ್ಯನಿಂದ ಹೊರಬರುವ ಕಿರಣಗಳಂತೆ ಕಂಡವು. ಹಾಗೆ ರಾಮಬಾಣದಿಂದ ಗಾಯಪಡೆದು ರಕ್ತದಿಂದ ನೆನೆದು ಧೂಳುಮಸಗಿದ ವಾಲಿಯ ಶರೀರವನ್ನು ತನ್ನ ಕಣ್ಣೀರಿಂದ ತೊಳೆಯುತ್ತಿರುವಳೋ ಎಂಬಂತೆ ತಾರಾದೇವಿಯು ಧಾರಾವರ್ತವಾಗಿ ಕಣ್ಣೀರನ್ನು ಸುರಿಸುತ್ತಿದ್ದಳು. ಅವಳು ರಣಭೂಮಿಯಲ್ಲಿ ರಕ್ತದಿಂದ ನೆನೆದ ಸರ್ವಾಂಗವುಳ್ಳ ತನ್ನ ಪತಿಯನ್ನು ನೋಡಿ ಅತ್ಯಂತ ದುಃಖಾಕ್ರಾಂತೆಯಾಗಿ ತನ್ನ ಮಗನಾದ ಅಂಗದನನ್ನು ಕುರಿತು "ಅಂಗದ, ನಿನ್ನ ತಂದೆಯಾದ ವಾಲಿಯ ಭಯಂಕರವಾದ ಮರಣಾವಸ್ಥೆಯನ್ನು ನೋಡು. ಅತಿಪರಾಕ್ರಮಿಯಾದ ವಾಲಿಯ ಪ್ರಾಣವು ಹೋಯಿತು. ಬಾಲಸೂರ್ಯನಂತೆ ಹೊಳೆಯುತ್ತ ಯಮನ ಮಂದಿರಕ್ಕೆ ಹೋಗುತ್ತಿರುವ ನಿನ್ನ ತಂದೆಗೆ ನಮಸ್ಕಾರವನ್ನು ಮಾಡು " ಎಂದು ಹೇಳಿದಳು.

ಅಂಗದನು ತನ್ನ ಕೋಮಲವಾದ ಕೈಗಳಿಂದ ಅಭಿವಂದಿಸಿ " ಅಪ್ಪ, ನಾನು-ಅಂಗದನು ಅಭಿವಾದನಮಾಡುತ್ತಿದ್ದೇನೆ " ಎಂದನು. ಆಗ ಶೋಕಗ್ರಸ್ತಳಾದ ತಾರಾದೇವಿಯು " ಸ್ವಾಮಿ, ಅಂಗದನು ಅಭಿವಾದನಮಾಡಿದರೆ ನೀನು 'ದೀರ್ಘಾಯುಷ್ಮಂತನಾಗಿರು' ಎಂದು ಹರಸುತ್ತಿದ್ದೆ. ಈಗ ಏಕೆ ನೀನು ಮಾತನಾಡದಿದ್ದೀಯೆ ? ಪ್ರಾಣಕಾಂತ, ವನದಲ್ಲಿರುವ ಸಿಂಹರಾಜನಿಂದ ಹತನಾಗಿ ಬಿದ್ದಿರುವ ಶ್ರೇಷ್ಠವಾದ ವೃಷಭವನ್ನು ಗೋವು ತನ್ನ ಕರುವಿನ ಸಹಿತವಾಗಿ ಬಂದು ಪ್ರೀತಿದೋರುವಂತೆ ಗತಪ್ರಾಣನಾದ ನಿನ್ನನ್ನು ನಾನೂ ಅಂಗದನೂ ಎಷ್ಟು ಲಾಲಿಸಿದರೇನು ?

ವಾನರೇಂದ್ರ, ನೀನು ಸಂಗ್ರಾಮಯಾಗವನ್ನು ಮಾಡಿ ಅನೇಕ ಆಯುಧಗಳಿಂದ ಹೊರಟ ರಕ್ತಪ್ರವಾಹಗಳೆಂಬ ಅವಭೃಥದಲ್ಲಿ ನಿನ್ನ ಪತ್ನಿಯನ್ನು ಬಿಟ್ಟು ಒಬ್ಬನೇ ಸ್ನಾನಮಾಡಬಹುದೆ ? ನಿನ್ನ ತಂದೆಯಾದ ದೇವೇಂದ್ರನು ನಿನಗೆ ಕೊಟ್ಟ ಸುವರ್ಣ ಕಂಠಮಾಲೆಯು ಏನಾಯಿತು ? ಸೂರ್ಯನು ಅಸ್ತಂಗತನಾದರೂ ಅವನ ಪ್ರಭೆಯು ಮೇರುವನ್ನು ಬಿಡದಂತೆ ಪ್ರಾಣವು ಬಿಟ್ಟುಹೋದರೂ ರಾಜಲಕ್ಷ್ಮಿಯು ನಿನ್ನನ್ನು ಬಿಡದಿದೆ. ನನ್ನ ಹಿತವಚನವನ್ನು ನೀನು ಕೇಳದೆ ಹೋದೆ. ಸಂಗ್ರಾಮದಲ್ಲಿ ನೀನು ಹತನಾದ್ದರಿಂದ ನಾನೂ ಅಂಗದಕುಮಾರನೂ ಹತರಾದಂತೆಯೇ ಸರಿ. ರಾಜಲಕ್ಷ್ಮಿಯು ನಿನ್ನೊಡನೆ ನನ್ನನ್ನೂ ಬಿಟ್ಟು ಹೊರಟಳು " ಎಂದು ಗೋಳಾಡಿದಳು.



## ೨೪ ನೆಯ ಅಧ್ಯಾಯ

## ಶ್ರೀರಾಮನು ತಾರೆಗೆ ಹೇಳಿದ ಸಮಾಧಾನ

ಆಮೇಲೆ ಸುಗ್ರೀವನು ಶೋಕವೆಂಬ ಸಮುದ್ರದಲ್ಲಿ ಮುಳುಗಿದ್ದ ತಾರಾದೇವಿಯನ್ನೂ ತನ್ನ ಅಣ್ಣನಾದ ವಾಲಿಯ ವಧೆಯನ್ನೂ ಕಂಡು ಕಂಗೆಟ್ಟನು. ಅವನು ಕಣ್ಣೀರನ್ನು ಸುರಿಸುತ್ತ ಭೃತ್ಯರನ್ನು ಕೂಡಿಕೊಂಡು ಶ್ರೀರಾಮನ ಸಮೀಪಕ್ಕೆ ಹೋಗಿ ಆತನನ್ನು ಕುರಿತು ಹೀಗೆಂದನು: " ಶ್ರೀರಾಮ, ವಾಲಿಯ ಸ್ತ್ರೀಯಾದ ತಾರಾದೇವಿಯು ಶೋಕಪಡುತ್ತಿರುವಳು. ಅಂಗದಕುಮಾರನೂ ದುಃಖಪಡುತ್ತಿರುವನು. ನನಗೆ ರಾಜ್ಯಾಧಿಪತ್ಯದಲ್ಲಿ ಮನಸ್ಸಿಲ್ಲ. ನಾನು ನನ್ನ ದೇಶದಿಂದಲೂ ಕೋಶದಿಂದಲೂ ಹೊರಡಿಸಲ್ಪಟ್ಟೆನಾದ್ದರಿಂದ ವೈಮನಸ್ಯದಿಂದ ವಾಲಿಯ ಕೊಲೆಗೆ ಒಡಂಬಟ್ಟೆನು. ಆತನು ರಣರಂಗದಲ್ಲಿ ಲೋಕಾಂತರವನ್ನೈದಿದಮೇಲೆ ನನ್ನ ಮನಸ್ಸಿಗೆ ಮಹಾವ್ಯಥೆಯಾಗುತ್ತಿದೆ. ನನಗೆ ರಾಜ್ಯಾಧಿಪತ್ಯಕ್ಕಿಂತಲೂ ಕಂದ ಮೂಲ ಫಲಾಹಾರಗಳನ್ನು ಮಾಡಿಕೊಂಡು ಋಷ್ಯಮೂಕ ಪರ್ವತದಲ್ಲಿರುವುದು ಉತ್ತಮವೆಂದು ತೋರುತ್ತಿದೆ. ವಾಲಿಯು ಹೋದ ಮೇಲೆ ಸ್ವರ್ಗಾಧಿಪತ್ಯವು ಸಿಕ್ಕರೂ ನನ್ನ ಮನಸ್ಸಿಗೆ ಸಂತೋಷವಾಗದು. ಶ್ರೀರಾಮ, ಅಂಗದನು ಪಿತೃಮರಣದ ದುಃಖವನ್ನು ಸಹಿಸಿಕೊಂಡು ಬದುಕಿರುವನೋ ಇಲ್ಲವೋ ಎಂಬುದು ಸಂದೇಹಾಸ್ಪದವಾಗಿದೆ. ಶ್ರೀರಾಮ, ನೀನೇ ನನಗೆ ರಕ್ಷಕನು. ನಾನು ನನ್ನ ಅಣ್ಣನೂ ಮಹಾತ್ಮನೂ ಆದ ವಾಲಿಯನ್ನು ಕೊಂದು ರಾಜ್ಯಪರಿಪಾಲನವನ್ನು ಮಾಡಿಕೊಂಡಿರಲು ಹೇಗೆ ಒಡಂಬಡಲಿ ? ನನಗೆ ಕಿಷ್ಕಿಂಧಾಪಟ್ಟಣವನ್ನು ಪ್ರವೇಶಿಸುವುದಕ್ಕೆ ಮನಸ್ಸಿಲ್ಲ. ಶ್ರೀರಾಮ, ವಾಲಿಯನ್ನು ಕೊಲ್ಲಿಸಿ ದುರ್ಬುದ್ಧಿಯಿಂದ ಮಾಡಬಾರದ ಕೃತ್ಯಗಳನ್ನು ಮಾಡಿ ದುರಾತ್ಮನಾದೆನೆಂದು ಈಗ ನನ್ನ ಪ್ರಾಣಗಳು ತಲ್ಲಣಿಸುತ್ತಿವೆ. ನನ್ನ ವಿಜ್ಞಾಪನೆಯನ್ನು ಕೇಳು : ನನ್ನನ್ನು ರಾಜ್ಯಾಧಿಪತ್ಯದಲ್ಲಿರಿಸಬೇಡ. ವಾಲಿಯು ನನಗೆ ಒಡಹುಟ್ಟಿದ ಹಿರಿಯಣ್ಣನು. ಧರ್ಮದಿಂದಲೇ ನನ್ನನ್ನು ರಕ್ಷಿಸಿಕೊಂಡು ಬಂದನು. ನಾನು ನನ್ನ ದುರ್ಬುದ್ಧಿಯಿಂದ ನನ್ನ ಕ್ರೋಧವನ್ನೂ ಕಾಮುಕತ್ವವನ್ನೂ ಕಪಿಸ್ವಭಾವವನ್ನೂ ತೋರಿಸಿದೆನು. ದೇವೇಂದ್ರನು ತನ್ನ ಅಣ್ಣನಾದ ತ್ವಷ್ಟೃಬ್ರಹ್ಮನನ್ನು ಕೊಂದು ಅಪರಿಮಿತವಾದ ಪಾಪವನ್ನೈದಿದಂತೆ, ನಾನು ಲೋಕದಲ್ಲಿ ಮಾಡಬಾರದ ಘೋರವಾದ ಪಾಪಕ್ಕೊಳಗಾದೆನು. ಇಂದ್ರನಿಗೆ ಬಂದ ಮಹಾಪಾತಕವನ್ನು ಭೂಮಿ, ಜಲ, ವೃಕ್ಷಗಳೂ ಸ್ತ್ರೀಯರೂ ಹಂಚಿಕೊಂಡರು. ಕಪಿಯಾದ ನನ್ನ ಪಾಪವನ್ನು ಯಾರು ಹಂಚಿಕೊಳ್ಳುವರು ? ನಾನು

ಈ ರಾಜ್ಯಾಧಿಪತ್ಯವನ್ನೊಲ್ಲೆನು. ಈ ಪ್ರಜೆಗಳನ್ನು ಸಂತವಿಡಲಾರೆನು. ನಾನು ನನ್ನ ವಂಶಕ್ಷಯಕ್ಕೆ ಕಾರಣವೂ ಲೋಕನಿಂದಿತವೂ ಆದ ಕ್ಷುದ್ರಕೃತ್ಯವನ್ನು ಮಾಡಿದೆನು. ಮಳೆಗಾಲದಲ್ಲಿ ಮೇಘಗಳಿಂದ ಬೀಳುವ ಮಳೆಹನಿಗಳು ಒಂದನ್ನೊಂದು ಕೂಡಿ ಹಳ್ಳಗಳನ್ನು ತುಂಬುತ್ತ ರಭಸಯುಕ್ತವಾದ ಪ್ರವಾಹವನ್ನು ಮಾಡುವಂತೆ ವಾಲಿವಧೆಯು ನನಗೆ ಕ್ಷಣಕ್ಷಣಕ್ಕೂ ದುಃಖವನ್ನು ಅಧಿಕವಾಗಿ ಮಾಡುತ್ತಿದೆ. ಅಗ್ನಿಯಲ್ಲಿ ಹಾಕಿದ ಸುವರ್ಣವು ತನ್ನಲ್ಲಿರುವ ಕಿಟ್ಟಗಳನ್ನು ಬಿಟ್ಟು ತಾನು ಬೇರೆಯಾಗುವಂತೆ, ನನ್ನ ಸದ್ವರ್ತನವು ನನ್ನ ಹೃದಯದಲ್ಲಿ ದುರ್ಬುದ್ಧಿಯನ್ನು ಹೊರಸೂಸಿ ತಾನು ಹೊರಟುಹೋಗುತ್ತಿದೆ. ಶ್ರೀರಾಮ, ನನ್ನಿಂದ ಕಪಿವಂಶವೂ ಅಂಗದನ ಪ್ರಾಣಗಳೂ ಅರ್ಧ ಹೋಗಿ ಅರ್ಧ ಉಳಿಯಿತೆಂದು ನನ್ನ ಮನಸ್ಸಿಗೆ ತೋರುತ್ತಿದೆ. ಅಂಗದಕುಮಾರನು ಸೌಜನ್ಯಗುಣವುಳ್ಳವನು. ಸತ್ಪುರುಷರಿಂದ ಕೊಂಡಾಡಲು ಯೋಗ್ಯನು. ಆತನಿಗೆ ಸರಿಯಾದವರಿಲ್ಲ. ಮಹಾಪರಾಕ್ರಮಿಯಾದ ವಾಲಿಯು ಹೋದಮೇಲೆ ಇನ್ನು ಶೌರ್ಯದ ಹೆಸರನ್ನು ಎತ್ತುವವರಾರು ? ಅಂಗದಕುಮಾರನು ಜೀವದಿಂದಿದ್ದು ರಾಜ್ಯಪರಿಪಾಲನವನ್ನು ಮಾಡಿಕೊಂಡಿದ್ದರೆ ಆತನನ್ನು ನೋಡಿಕೊಂಡು ತಾರಾದೇವಿಯೂ ಜೀವದಿಂದಿರುವಳು. ಆತನು ಜೀವಿಸದ ಪಕ್ಷದಲ್ಲಿ ತಾರಾದೇವಿಯು ಜೀವದಿಂದಿರಲಾರಳು. ನಾನು ಅಗ್ನಿಪ್ರವೇಶವನ್ನು ಮಾಡಿ ಶರೀರತ್ಯಾಗವನ್ನು ಮಾಡುತ್ತೇನೆ. ಅದಕ್ಕೆ ನೀನು ಸಂಮತಿಸು. ಸೀತಾದೇವಿಯನ್ನು ಹುಡುಕಿಕೊಂಡು ಬರುವುದಾಗಿ ಹೇಳಿದ ನನ್ನ ಪ್ರತಿಜ್ಞೆಯನ್ನು ಹನುಮಂತನೇ ಮೊದಲಾದ ಕಪಿಶ್ರೇಷ್ಠರು ಪರಿಪಾಲಿಸುವರು. ಅವರು ನಿನ್ನ ಪತ್ನಿಯಾದ ಸೀತಾದೇವಿಯನ್ನು ಹುಡುಕಿ ತಂದು ಕೊಡುವರು. ನಾನು ಹೋದರೂ ನಿನ್ನ ಕಾರ್ಯವು ಈ ಕಪಿಶ್ರೇಷ್ಠರಿಂದ ಸಾಧ್ಯವಾಗುವುದು. ಕುಲಗೇಡಿಯೂ ಪಾಪಿಯೂ ಆದ ನಾನು ಈ ಭೂಮಿಯಲ್ಲಿ ಜೀವದಿಂದಿರುವುದು ಯೋಗ್ಯವಲ್ಲ" ಎಂದು ದುಃಖಾತಿಶಯದಿಂದ ನುಡಿದನು.

ಆ ಮಾತನ್ನು ಕೇಳಿ ಲೋಕರಕ್ಷಕನಾದ ಶ್ರೀರಾಮನು ಒಂದು ಕ್ಷಣಮಾತ್ರ ಚಿಂತಾಕ್ರಾಂತನಾದನು. ಆಗ ಭೂಮಿಯನ್ನು ನೋಡುತ್ತ ಕಣ್ಣೀರುಬಿಡುತ್ತ ಪತಿಯೋಗದಿಂದ ಕಂಗೆಟ್ಟು ರೋದನಮಾಡುತ್ತ ತನ್ನ ಪತಿಯ ಶರೀರವನ್ನು ತಬ್ಬಿಕೊಂಡು ಹಂಬಲಿಸುತ್ತಿದ್ದ ತಾರಾದೇವಿಯನ್ನು ಶ್ರೀರಾಮನು ಕೃಪಾದೃಷ್ಟಿಯಿಂದ ನೋಡಿದನು. ಹನುಮಂತನೇ ಮೊದಲಾದ ಕಪಿನಾಯಕರು ಆತನ ಮನೋಭಾವವನ್ನು ತಿಳಿದು ತಾರಾದೇವಿಯನ್ನು ಹಿಡಿದೆಬ್ಬಿಸಿ ಆತನ ಸಮೀಪಕ್ಕೆ ಕರೆತಂದರು. ತಾರಾದೇವಿಯು, ಬಿಲ್ಲುಬಾಣಗಳನ್ನು ಧರಿಸಿಕೊಂಡು ತನ್ನ ತನುಕಾಂತಿಯಿಂದ ಸೂರ್ಯನಂತೆ ಬೆಳಗುತ್ತ ಲಕ್ಷ್ಮಣಸಮೇತನಾಗಿದ್ದ ಶ್ರೀರಾಮನನ್ನು ಕಂಡು ಆತನ ಪುರುಷಲಕ್ಷಣವನ್ನೂ ಆಕಾರವನ್ನೂ ತೇಜಸ್ಸನ್ನೂ ನೋಡಿ ಆತನು ಶ್ರೀರಾಮನೆಂದು ತಿಳಿದುಕೊಂಡಳು. ಅವಳು ಶ್ರೀರಾಮನ ಸಮೀಪಕ್ಕೆ ಹೋಗಿ ಅತ್ಯಂತ ಶೋಕಾಕ್ರಾಂತಳಾಗಿ ರಣರಂಗದಲ್ಲಿ ಅಸಹಾಯಶೂರನಾದ ಆ ಸ್ವಾಮಿಯನ್ನು ಕುರಿತು ಹೀಗೆಂದಳು : "ಶ್ರೀರಾಮ, ನೀನು ಅಪ್ರಮೇಯ, ಜಿತೇಂದ್ರಿಯ, ಧರ್ಮಿಷ್ಠ, ಸತ್ಯಸ್ವರೂಪ, ಕೀರ್ತಿವಂತ, ವಿಚಕ್ಷಣ. ಕ್ಷಮೆಯಲ್ಲಿ ಭೂಮಿಗೆ ಸಮಾನ. ಕೆಂಪಾದ ಕಣ್ಣುಗಳುಳ್ಳವನಾಗಿ ಬಿಲ್ಲುಬಾಣಗಳನ್ನು ಧರಿಸಿದ ಮಹಾಬಲವಂತ. ನೀನು ದಿವ್ಯದೇಹವನ್ನು ತಳೆದ ಪುರುಷೋತ್ತಮ. ಕಮಲದಳಾಯತಾಕ್ಷ ; ನೀನು ನನ್ನ ಪತಿಯಾದ ವಾಲಿಯನ್ನು ಯಾವ ಬಾಣದಿಂದ ಸಂಹರಿಸಿದೆಯೋ ಅದೇ ಬಾಣದಿಂದ ನನ್ನನ್ನೂ ಕೊಂದುಬಿಡು. ನಾನು ನನ್ನ ಪತಿಯಾದ ವಾಲಿಯ ಸಮೀಪಕ್ಕೆ ಹೋಗುವೆನು. ಶ್ರೀರಾಮ, ನನ್ನ ಪತಿಯಾದ ವಾಲಿಯು ಸ್ವರ್ಗಲೋಕಕ್ಕೆ ಹೋದರೂ ನನ್ನನ್ನು ಕಾಣದೆ ಸುಖದಿಂದಿರನು. ಸ್ವರ್ಗಲೋಕದಲ್ಲಿ ದೇವಸ್ತ್ರೀಯರನ್ನು ಪಡೆದರೂ ನಾನಿಲ್ಲದಿದ್ದರೆ—ಸೀತಾದೇವಿಯ ವಿರಹಶೋಕದಿಂದ ಕಂಗೆಟ್ಟು ನೀನು ಶೋಕಪಡುತ್ತಿರುವಂತೆಯೇ ನನ್ನ ಪತಿಯಾದ ವಾಲಿಯೂ ಶೋಕಪಡುತ್ತಿರುವನು.

ಶ್ರೀರಾಮ, ಯೌವನಾವಸ್ಥೆಯುಳ್ಳ ಪುರುಷನು ಸ್ತ್ರೀಯನ್ನಗಲಿದರೆ ಎಷ್ಟು ಶೋಕಿಸುವನೆಂಬುದನ್ನು ನೀನು ಬಲ್ಲೆ. ಆ ದುಃಖವನ್ನು ಬಲ್ಲ ನೀನು ವಾಲಿಯು ನನ್ನನ್ನು ಕಾಣದೆ ದುಃಖಪಡದಿರುವಂತೆ ಮಾಡುವುದು ಯೋಗ್ಯ. ಸ್ತ್ರೀವಧೆಯನ್ನು ಮಾಡಬಾರದಾದರೂ ನನ್ನ ವಧೆಯಿಂದ ನಿನಗೆ ಆ ಪಾಪವು ಬರಲಾರದು. ವಾಲಿಯ ಅರ್ಧಶರೀರವೆಂದು ಭಾವಿಸಿ ನನ್ನನ್ನು ಕೊಂದೆಯಾದರೆ ಅದರಿಂದ ಸ್ತ್ರೀವಧೆಮಾಡಿದ ದೋಷವು ತಟ್ಟದು. ಸ್ತ್ರೀಯರು ಪುರುಷರ ಅರ್ಧಶರೀರವಾದ್ದರಿಂದ ಅವರನ್ನು ಕೊಂದರೆ ಅರ್ಧಶರೀರವನ್ನು ಕೊಂದಹಾಗಲ್ಲದೆ ಸ್ತ್ರೀವಧೆಯಾಗದು. ಶ್ರೀರಾಮ, ಲೋಕದಲ್ಲಿ ಸಮಸ್ತ ದಾನಗಳಿಗೂ ಪ್ರಧಾನವಾದದ್ದು ಕನ್ಯಾದಾನ. ನೀನು ನನ್ನ ಪ್ರಾಣಕಾಂತನಾದ ವಾಲಿಗೆ ಸ್ವರ್ಗಲೋಕವನ್ನು ಕೊಟ್ಟದ್ದರಿಂದ ಧರ್ಮಶಾಸ್ತ್ರವನ್ನು ವಿಚಾರಿಸಿಕೊಂಡು ನನ್ನನ್ನು ನಿನ್ನ ಬಾಣಕ್ಕೆ ಗುರಿಮಾಡಿ ಸ್ವರ್ಗಲೋಕದಲ್ಲಿರುವ ವಾಲಿಗೆ ನನ್ನನ್ನು ದಾನಮಾಡಿದರೆ ನಿನಗೆ ಧರ್ಮವುಂಟಾಗುವುದಲ್ಲದೆ ಸ್ತ್ರೀವಧೆಯ ದೋಷವುಂಟಾಗದು. ಪತಿವಿಯೋಗದಿಂದ ಕಂಗೆಟ್ಟು ಅನಾಥೆಯಾದ ನನ್ನನ್ನು ಕೊಲ್ಲದಿರುವುದು ಯೋಗ್ಯವಲ್ಲ. ಶ್ರೀರಾಮ, ಕಪಿಶ್ರೇಷ್ಠನಾದ ವಾಲಿಯೊಡನೆ ವಿಹರಿಸಿಕೊಂಡಿದ್ದೆನು. ಆತನನ್ನು ಬಿಟ್ಟು ನಾನು ಒಂದು ಕ್ಷಣಮಾತ್ರವಾದರೂ ಜೀವಿಸಲಾರೆನು" ಎಂದು ನುಡಿದಳು.

ಮಹಾತ್ಮನಾದ ಶ್ರೀರಾಮನು ತಾರಾದೇವಿಯನ್ನು ಸಮಾಧಾನಪಡಿಸುತ್ತ "ಎಲೌ ವೀರಪತ್ನಿಯಾದ ತಾರಾದೇವಿಯೆ, ನೀನು ಅತಿಯಾಗಿ ದುಃಖಪಡಬೇಡ. ಲೋಕದಲ್ಲಿ ಬ್ರಹ್ಮಲಿಖಿತವನ್ನು ಯಾರಿಗೂ ಮೀರಲಳವಲ್ಲ. ಬ್ರಹ್ಮದೇವನು ಸಮಸ್ತ ಪ್ರಾಣಿಗಳಿಗೂ ಸುಖದುಃಖಗಳನ್ನು ಕೊಡುತ್ತಿರುವನು. ಆಯಾ ಕಾಲಗಳಲ್ಲಿ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳೂ ಬ್ರಹ್ಮದೇವನ ಕಟ್ಟಳೆಯಲ್ಲಿರುವುವಲ್ಲದೆ ಆತನನ್ನು ಮೀರಲಾರವು. ನೀನು ನಿನ್ನ ಮಗನಿಗೆ ಯುವರಾಜಪದವಿಯನ್ನು ಕೊಟ್ಟು ಸುಖವಾಗಿರು. ಲೋಕದಲ್ಲಿ ಪರಾಕ್ರಮಿಗಳು ಸಂಗ್ರಾಮದಲ್ಲಿ ಮಡಿಯುವುದು ಸಹಜವಾದದ್ದು. ಆದಕಾರಣ ವೀರಪತ್ನಿಯರು ದುಃಖಪಡಕೂಡದು" ಎಂದು ಸಂತವಿಟ್ಟನು.

ಮಹಾತ್ಮನಾದ ಶ್ರೀರಾಮನ ವಾಕ್ಯವನ್ನು ಕೇಳಿ ವೀರಪತ್ನಿಯಾದ ತಾರಾದೇವಿಯು ಗಟ್ಟಿಯಾಗಿ ಅಳುವುದನ್ನು ನಿಲ್ಲಿಸಿದಳು.

---

## ೨೫ನೆಯ ಅಧ್ಯಾಯ

## ಅಂಗದನು ವಾಲಿಗೆ ಅಗ್ನಿಸಂಸ್ಕಾರಮಾಡಿದ್ದು

ಆಮೇಲೆ ಲಕ್ಷ್ಮಣಸಮೇತನಾದ ಶ್ರೀರಾಮನು ಸುಗ್ರೀವನನ್ನೂ ತಾರಾದೇವಿಯನ್ನೂ ಅಂಗದನನ್ನೂ ಸಂತವಿಡುತ್ತ ಅವರನ್ನು ಕುರಿತು ಈ ರೀತಿಯಲ್ಲಿ ಸಂತೈಸಿದನು : "ಸುಗ್ರೀವ, ತಾರಾದೇವಿ, ಅಂಗದ, ನೀವು ಇನ್ನು ಶೋಕಪಡುವುದರಿಂದ ಆಗುವ ಕಾರ್ಯವೇನು ? ಲೋಕದಲ್ಲಿ ಅತಿ ಶೋಕವನ್ನು ಮಾಡಿದರೆ ಮೃತನಿಗೆ ಮಂಗಳವುಂಟಾಗಲಾರದು. ಕಾಲಗತಿಯನ್ನಾರೂ ಮೀರಲಾರರು. ಕಾಲವು ಸ್ವತಂತ್ರವಾಗಿ ಮನುಷ್ಯರು ಮಾಡಿದ ಪುಣ್ಯಪಾಪಗಳಿಗೆ ತಕ್ಕಹಾಗೆ ಸುಖದುಃಖಗಳನ್ನು ಕೊಡದೆ ಬಿಡದು. ಕಾಲವು ಒಬ್ಬರ ಆಜ್ಞೆಗೊಳಗಾಗದು. ಕಾಲಕ್ಕೆ ಬಂಧುತ್ವವಿಲ್ಲ. ಕಾಲದ ಮುಂದೆ ಪರಾಕ್ರಮವು ನಡೆಯದು. ಕಾಲಕ್ಕೆ ಮಿತ್ರರೂ ಇಲ್ಲ—ಜ್ಞಾತಿ ಬಂಧುಗಳೂ ಇಲ್ಲ

ಅದನ್ನು ವಶಪಡಿಸಿಕೊಳ್ಳಲು ಯಾವ ಉಪಾಯವೂ ಇಲ್ಲ. ಅದು ಒಬ್ಬರಿಗೂ ವಶವಾಗುವುದಿಲ್ಲ. ಲೋಕದಲ್ಲಿ ಬುದ್ಧಿವಂತನು ಕಾಲದ ಪರಿಣಾಮವನ್ನು ಕಂಡುಕೊಳ್ಳಬೇಕು. ಕಾಲವು ಮನುಷ್ಯರಿಗೆ ಧರ್ಮಬುದ್ಧಿಯನ್ನು ಹುಟ್ಟಿಸಬೇಕಾದ ಸಮಯದಲ್ಲಿ ಧರ್ಮಬುದ್ಧಿಯನ್ನೂ ಅರ್ಥಪ್ರಾಪ್ತಿ ಯನ್ನುಂಟುಮಾಡಬೇಕಾದ ಸಮಯದಲ್ಲಿ ಅರ್ಥಲಾಭವನ್ನೂ ಕಾಮವನ್ನುಂಟುಮಾಡಬೇಕಾದ ಸಮಯದಲ್ಲಿ ಕಾಮವನ್ನೂ ಉಂಟುಮಾಡುವುದು. ವಾಲಿಯು ತನ್ನ ಜನ್ಮಾಂತರದಲ್ಲಿ ಪ್ರಕೃತಿ ಗುಣದಿಂದಲೂ ಸಾಮದಾನಾದಿ ನಾಲ್ಕು ಉಪಾಯಗಳಿಂದಲೂ ನಡೆಸಿದ ಕರ್ಮಗಳಿಗೆ ತಕ್ಕ ಫಲವನ್ನು ಪಡೆದನು. ಆತನು ಮೊದಲೇ ತನ್ನ ಜಾತಿಧರ್ಮದಲ್ಲಿ ನಡೆದು ಸ್ವರ್ಗಸಾಧನವಾದ ಸತ್ಕರ್ಮವನ್ನು ಮಾಡಿದ್ದನು. ಈಗ ರಣರಂಗದಲ್ಲಿ ಹಿಮ್ಮೆಟ್ಟದೆ ಶರೀರವನ್ನು ಬಿಟ್ಟು ವೀರಸ್ವರ್ಗ ವನ್ನು ಪಡೆದನು. ಆತನಿಗೆ ಈ ಅವಸ್ಥೆಯು ಬಂದದ್ದು ಕಾಲಗತಿಯಿಂದಲೇ ಸರಿ. ಆದಕಾರಣ ನೀವಿನ್ನು ಶೋಕವನ್ನು ನಾಕುಮಾಡಿ ಮುಂದಿನ ಕಾಲೋಚಿತವಾದ ಕಾರ್ಯವನ್ನು ಮಾಡಿ" ಎಂದು ನುಡಿದನು.

ಆಗ ಅಸಹಾಯಶೂರನಾದ ಲಕ್ಷ್ಮಣನು ಸುಗ್ರೀವನನ್ನು ಕುರಿತು ವಿನಯದಿಂದ "ಸುಗ್ರೀವ, ನೀನು ಪರಾಕ್ರಮಿಯಾದ ವಾಲಿಗೆ ಅಂತ್ಯಕರ್ಮವನ್ನು ಮಾಡಲು ಪ್ರಯತ್ನಿಸು. ತಾರೆಯನ್ನೂ ಅಂಗದನನ್ನೂ ಮುಂದಿಟ್ಟುಕೊಂಡು ಒಣಗಿದ ಶ್ರೀಗಂಧದ ಮರದ ಕೊರಡುಗಳನ್ನು ಕತ್ತರಿಸಿ ವಾಲಿಗೆ ಅಗ್ನಿಸಂಸ್ಕಾರವನ್ನು ಮಾಡು. ಕಂಗೆಟ್ಟಿರುವ ಅಂಗದನನ್ನು ಸಂತವಿಡು. ಈ ಮಕ್ಕಳಾಟದ ಬುದ್ಧಿಯನ್ನು ಬಿಡು. ಕಿಷ್ಕಿಂಧಾಪಟ್ಟಣವು ನಿನ್ನ ಅಧೀನವಾದದ್ದು. ಅಂಗದನು ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ವಾಲಿಯ ಸಂಸ್ಕಾರಕ್ಕೆ ತಕ್ಕ ಎಣ್ಣೆ, ತುಪ್ಪ, ಗಂಧಮಾಲ್ಯಾದಿ ವಸ್ತುಗಳನ್ನು ತರಿಸಲಿ— ಎಲೈ ತಾರ, ಕಪಿಶ್ರೇಷ್ಠ, ನೀನು ಶೀಘ್ರವಾಗಿ ಹೋಗಿ ವಾಲಿಯ ಪಲ್ಲಕ್ಕಿಯನ್ನು ತೆಗೆಸಿಕೊಂಡು ಬಾ" ಎಂದು ನುಡಿದು ಶ್ರೀರಾಮನ ಸಮೀಪದಲ್ಲಿ ನಿಂತುಕೊಂಡನು.

ತಾರನು ಶೀಘ್ರವಾಗಿ ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ಮೃತನಾದ ವಾಲಿಗೆ ತಕ್ಕದ್ದೂ ದಿವ್ಯವಾದ ಸಿಂಹಪೀಠವುಳ್ಳದ್ದೂ ದೇವೇಂದ್ರನ ವಿಮಾನಕ್ಕೆ ಸಮಾನವಾದದ್ದೂ ಚಿನ್ನದ ಮುಲಾಮಿನಿಂದ ವಿಚಿತ್ರ ವಾಗಿ ನಿರ್ಮಿಸಲ್ಪಟ್ಟದ್ದೂ ಸುವರ್ಣಪ್ರತಿಮೆಗಳುಳ್ಳದ್ದೂ ಸಿದ್ಧರ ವಿಮಾನದೋಪಾದಿಯಲ್ಲಿ ಜಾಲಾಂತರಗಳುಳ್ಳದ್ದೂ ದಿವ್ಯವಾದ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟದ್ದೂ ಸಮವೂ ಚತು ರಶ್ರವೂ ಆದ ಚೌಮೂಲೆಗಳುಳ್ಳದ್ದೂ ಕಮಲಗಳಿಂದ ಮನೋಹರವಾದದ್ದೂ ಆದ ಒಂದು ಪಲ್ಲಕ್ಕಿ ಯನ್ನು ಹೊರಿಸಿಕೊಂಡು ಬಂದನು. ಅದನ್ನು ನೋಡಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು "ಈ ವಾಲಿಯ ಶರೀರವನ್ನು ಬೇಗನೆ ತೆಗೆದುಕೊಂಡು ಹೋಗಿ ಅಗ್ನಿಸಂಸ್ಕಾರವನ್ನು ಮಾಡಲಿ" ಎಂದು ಹೇಳಿದನು.

ಆಗ ಸುಗ್ರೀವನು ವಾಲಿಯ ಶರೀರವನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ ಅಂಗದನ ಸಹಾಯದಿಂದ ವಾಲಿಯನ್ನು ಪಲ್ಲಕ್ಕಿಯಲ್ಲಿ ಏರಿಸಿದನು. ಕಪಿನಾಯಕರನ್ನು ಕರೆದು "ಎಲೈ ವಾನರರೆ, ಅಗ್ನಿಸಂಸ್ಕಾರಕ್ಕೆ ಉಚಿತವಾದ ದಾನಧರ್ಮಗಳನ್ನು ಮಾಡುತ್ತ ಅಣ್ಣನ ದೇಹವನ್ನು ಸಾಗಿಸಿರಿ. ರಾಜೋಚಿತವಾದ ಮರ್ಯಾದೆಯೊಡನೆ ಯಾವ ನ್ಯೂನತೆಯೂ ಇಲ್ಲದಂತೆ ನಮ್ಮ ಒಡೆಯನ ಔರ್ಧ್ವದೈಹಿಕವನ್ನು ನೆರವೇರಿಸತಕ್ಕದ್ದು" ಎಂದು ಆಜ್ಞಾಪಿಸಿದನು.

ಆಗ ಕಪಿನಾಯಕರು ಪ್ರೇತನಾದ ವಾಲಿಗೆ ಸರ್ವಾಲಂಕಾರವನ್ನು ಮಾಡಿ ಪಲ್ಲಕ್ಕಿಯಮೇಲಿಟ್ಟು ಆತನನ್ನೆತ್ತಿಕೊಂಡು ಹೊರಟರು. ಆಗ ತಾರಾದೇವಿಯೇ ಮೊದಲಾದ ವಾನರಸ್ತ್ರೀಯರು ಉರಸ್ತಾಡನ ಶಿರಸ್ತಾಡನಗಳೊಡನೆ ರೋದನಮಾಡುತ್ತ ಹಿಂದೆ ಹೋದರು.

ಆ ಬಳಿಕ ಸುಗ್ರೀವನು ನದೀತೀರದಲ್ಲಿ ಮನೋಹರವಾಗಿದ್ದ ಮಳಲೊಟ್ಟುಗಳನ್ನು ಸೇರಿ ನೀರು ಸಮೀಪದಲ್ಲಿರುವ ರಮ್ಯವಾದ ಒಂದು ಸ್ಥಳದಲ್ಲಿ ಪಲ್ಲಕ್ಕಿಯನ್ನಿಳಿಸಿದನು. ತಾರಾದೇವಿಯು ಪಲ್ಲಕ್ಕಿಯಲ್ಲಿದ್ದ ವಾಲಿಯ ಶರೀರವನ್ನು ನೋಡಿ ಅತ್ಯಂತ ದುಃಖಾಕ್ರಾಂತೆಯಾಗಿ "ಮಹಾರಾಜ, ಇಲ್ಲಿ ನೆರೆದಿರುವ ಪ್ರಜೆಗಳನ್ನೇಕೆ ನೋಡದಿದ್ದೀಯೆ ? ನನ್ನೊಡನೆ ಸಂಭಾಷಣವನ್ನೇಕೆ ಮಾಡದಿದ್ದೀಯೆ ? ನೀನು ಲೋಕಾಂತರವನ್ನೈದಿದ್ದರೂ ನಿನ್ನ ಮುಖಕಾಂತಿಯು ಸಾಯಂಕಾಲದ ಸೂರ್ಯಪ್ರಭೆಯಂತೆ ಒಪ್ಪುತ್ತಿದೆ. ಸ್ವಲ್ಪವಾದರೂ ನಿನ್ನ ಮುಖವು ಕಾಂತಿಗುಂದಿಲ್ಲ. ಕಾಲನೇ ಶ್ರೀರಾಮನ ರೂಪವಾಗಿ ಬಂದು ನಿನ್ನ ಪ್ರಾಣಗಳನ್ನಪಹರಿಸಿದನು. ನಿನ್ನ ಪ್ರಾಣಕಾಂತೆಯರಾದ ವಾನರಸ್ತ್ರೀಯರು ಅದೆಷ್ಟೋ ದೂರದಿಂದ ಕಾಲುನಡಿಗೆಯಲ್ಲಿಯೇ ಬಂದಿದ್ದಾರೆ. ಇವರನ್ನು ಕಣ್ಣು ತೆರೆದು ನೋಡಿ ಎದ್ದು ಕುಳಿತುಕೊ. ನಮ್ಮ ಸಮೀಪದಲ್ಲಿರುವ ಸುಗ್ರೀವನನ್ನೇಕೆ ಕಣ್ಣು ತೆರೆದು ನೋಡದಿದ್ದೀಯೆ ? ಸಮಸ್ತ ಕಪಿನಾಯಕರೂ ಪರಿಜನ ಪುರಜನರೂ ನಿನ್ನನ್ನು ಸುತ್ತುವರಿದು ನಿಂತಿರುವರು. ಇವರನ್ನು ಮನೆಗೆ ಕಳುಹಿಸಿ ಶ್ರೀರಾಮನ ಆಜ್ಞೆಯಿಂದ ಈ ನದೀತೀರದಲ್ಲಿರುವ ಮಳಲೊಟ್ಟುಗಳಲ್ಲಿ ನಿನ್ನ ಮನಸ್ಸುಬಂದಂತೆ ವಿಹರಿಸಿಕೊಂಡಿರೋಣ" ಎಂದು ಹೇಳುತ್ತ ವಾನರ ಸ್ತ್ರೀಯರೊಡನೆ ರೋದಿಸುತ್ತಿದ್ದಳು. ಆ ಧ್ವನಿಯಿಂದ ಸಮಸ್ತ ವನಗಳೂ ರೋದನ ಮಾಡುತ್ತಿದ್ದವೋ ಎಂಬಂತೆ ಪ್ರತಿಧ್ವನಿಯುಂಟಾಗುತ್ತಿದ್ದಿತು.

ಈ ರೀತಿಯಲ್ಲಿ ಬಿದ್ದು ಹೊರಳುತ್ತಿದ್ದ ತಾರಾದೇವಿಯನ್ನು ಇತರ ಸ್ತ್ರೀಯರು ಹಿಡಿದೆತ್ತಲು ಸುಗ್ರೀವನು ಅಂಗದನನ್ನು ಕೂಡಿಕೊಂಡು ರೋದನಮಾಡುತ್ತ ವಾಲಿಯ ಶರೀರವನ್ನು ಸುಗಂಧ ಕಾಷ್ಠಗಳ ಚಿತೆಯಮೇಲಿರಿಸಿದನು. ಅಂಗದನು ವಿಧ್ಯುಕ್ತಪ್ರಕಾರವಾಗಿ ಅಪಸವ್ಯದಿಂದ ತತ್ಕಾಲೋಚಿತ ವಾದ ಹೋಮವನ್ನು ಮಾಡಿ ಆ ಚಿತೆಗೆ ಅಗ್ನಿಸ್ಪರ್ಶಮಾಡಿದನು. ಕಪಿನಾಯಕರು ವಿಧ್ಯುಕ್ತವಾಗಿ ವಾಲಿಗೆ ಸಂಸ್ಕಾರವನ್ನು ಮಾಡಿ ನದಿಗೆ ಹೋಗಿ ತರ್ಪಣಾದಿಕ್ರಿಯೆಗಳನ್ನು ನೆರವೇರಿಸಿದರು. ಆ ಸಮಯದಲ್ಲಿ ಶ್ರೀರಾಮಲಕ್ಷ್ಮಣರೂ ದುಃಖಿತರಾಗಿದ್ದರು. ಹೀಗೆ ಸುಗ್ರೀವನು ತನ್ನ ಕರ್ತವ್ಯವನ್ನು ನಿರ್ವಹಿಸಿ ಅತ್ಯಂತ ವ್ಯಾಕುಲಚಿತ್ತನಾಗಿ ಶ್ರೀರಾಮನ ಸಮೀಪಕ್ಕೆ ಹೋದನು.



## ೨೬ ನೆಯ ಅಧ್ಯಾಯ

## ಸುಗ್ರೀವನ ಪಟ್ಟಾಭಿಷೇಕ

ಈ ಪ್ರಕಾರ ಅಂಗದಕುಮಾರನು ವಾಲಿಗೆ ಸಂಸ್ಕಾರವನ್ನು ಮಾಡಿದಮೇಲೆ ಸುಗ್ರೀವನು ಅಂಗದಸಹಿತನಾಗಿ ಶ್ರೀರಾಮನ ಸಮೀಪಕ್ಕೆ ಹೋಗಲು ಹನುಮಂತನೇ ಮೊದಲಾದ ಕಪಿನಾಯಕರು ಕೈಮುಗಿದುಕೊಂಡು, ಋಷಿಗಳು ಬ್ರಹ್ಮದೇವನನ್ನು ಸುತ್ತಿಕೊಂಡಿರುವಂತೆ ಶ್ರೀರಾಮನನ್ನು ಸುತ್ತಿಕೊಂಡು ನಿಂತರು. ಆ ಬಳಿಕ ಹನುಮಂತನು ಕೈಮುಗಿದುಕೊಂಡು ಶ್ರೀರಾಮನನ್ನು ಕುರಿತು "ಶ್ರೀರಾಮ, ನಿನ್ನ ಕೃಪೆಯಿಂದ ಸುಗ್ರೀವನಿಗೆ ಅನೇಕ ಬಲಸಂಪನ್ನರೂ ಮಹಾಪರಾಕ್ರಮಿಗಳೂ ಆದ ಕಪಿನಾಯಕರಿಗೆ ಅಸಾಧ್ಯವಾದ ಕಿಷ್ಕಿಂಧಾಧಿಪತ್ಯವು ಪ್ರಾಪ್ತವಾಯಿತು. ಇನ್ನು ನಿನ್ನ ಅಪ್ಪಣೆಯಿಂದ ಈತನು ಅಂಗದ ಸಮೇತನಾಗಿ ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ವಾಲಿಗೆ ಮಾಡಬೇಕಾದ ಕಾರ್ಯಗಳನ್ನು ಮಾಡಿ ಮಂಗಳಸ್ನಾನವನ್ನೆಸಗಲಿ. ನಾನಾ ಪ್ರಕಾರವಾದ ಸುಗಂಧಾನುಲೇಪನ ಸುಗಂಧಪುಷ್ಪಮಾಲಿಕೆಗಳಿಂದ

ನಿನ್ನನ್ನು ಅರ್ಚನೆಮಾಡುವ ಸೌಭಾಗ್ಯವನ್ನು ಪಡೆಯಲಿ. ಆದಕಾರಣ ನೀನು ಕಿಷ್ಕಿಂಧಾಪಟ್ಟಣಕ್ಕೆ ಬಂದು ಸುಗ್ರೀವನು ಮಾಡುವ ಸತ್ಕಾರವನ್ನು ಕೈಕೊಂಡು ಆತನಿಗೆ ಒಡೆಯನಾಗಿ ಅಭಯವನ್ನು ಕೊಟ್ಟು ಪರಿಪಾಲಿಸಿಕೊಂಡಿರಬೇಕು " ಎಂದು ಪ್ರಾರ್ಥಿಸಿಕೊಂಡನು.

ಶ್ರೀರಾಮನು ಹನುಮಂತನನ್ನು ಕುರಿತು " ಹನುಮಂತ, ನಾನು ಅಯೋಧ್ಯಾಪಟ್ಟಣದಿಂದ ಬಂದಾಗ ನನ್ನ ತಂದೆಯಾದ ದಶರಥರಾಯನೊಡನೆ, ಹದಿನಾಲ್ಕು ವರ್ಷಗಳ ಪರ್ಯಂತ ಯಾವ ನಗರವನ್ನೂ ಗ್ರಾಮವನ್ನೂ ಪ್ರವೇಶಿಸದೆ ವನದಲ್ಲಿ ವಾಸವಾಗಿರುವೆನೆಂದು ಪ್ರತಿಜ್ಞೆಮಾಡಿ ಬಂದಿದ್ದೇನೆ. ಆ ಪ್ರತಿಜ್ಞೆಯನ್ನು ಪರಿಪಾಲಿಸಬೇಕಲ್ಲದೆ ಅದನ್ನು ತಪ್ಪಿ ಪಟ್ಟಣಗಳಿಗೆ ನಾನು ಪ್ರವೇಶ ಮಾಡಬಾರದು. ಸುಗ್ರೀವನು ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ಪಟ್ಟಾಭಿಷೇಕವನ್ನು ಹೊಂದಿ ಕಪಿ ರಾಜ್ಯವನ್ನು ಪರಿಪಾಲಿಸಿಕೊಂಡು ಸುಖವಾಗಿರಲಿ " ಎಂದು ನುಡಿದನು. ಬಳಿಕ ಸುಗ್ರೀವನನ್ನು ಕುರಿತು " ಸುಗ್ರೀವ, ನೀನು ವಿದ್ಯಾವಂತ. ಮಹಾಬಲವಂತ. ನೀನು ಪಟ್ಟಾಭಿಷಿಕ್ತನಾಗಿ ಅಂಗದನಿಗೆ ಯುವರಾಜಪಟ್ಟವನ್ನು ಕಟ್ಟು. ಅಂಗದನು ತನ್ನ ತಂದೆಯಾದ ವಾಲಿಗೆ ಸಮಾನಪರಾಕ್ರಮವುಳ್ಳ ವನು. ಈತನು ಯುವರಾಜಪಟ್ಟಕ್ಕೆ ಯೋಗ್ಯನು. ಈಗ ವರ್ಷಾಕಾಲದ ಮೊದಲನೆಯ ತಿಂಗಳಾದ ಶ್ರಾವಣಮಾಸವು ಬಂದಿದೆ. ಎಲ್ಲಿ ನೋಡಿದರೂ ಹಳ್ಳಕೊಳ್ಳಗಳು ತುಂಬಿಕೊಂಡು ಸಂಚರಿಸುವುದಕ್ಕೆ ಅಸಾಧ್ಯವಾಗಿವೆ. ಇದು ರಾಜಕಾರ್ಯಕ್ಕೆ ಸಮಯವಲ್ಲ. ನೀನು ಕಿಷ್ಕಿಂಧಾಪಟ್ಟಣಕ್ಕೆ ಹೋಗು. ನಾನು ಈ ಮಾಲ್ಯವತ್ಪರ್ವತದಲ್ಲಿ ಲಕ್ಷ್ಮಣಸಮೇತನಾಗಿ ಈ ವರ್ಷಾಕಾಲವನ್ನು ಕಳೆಯುತ್ತೇನೆ. ಈ ಪರ್ವತದಲ್ಲಿ ತಂಗಾಳಿತೀಡುವ ವಿಶಾಲವಾದ ಒಂದು ಗುಹೆಯಿದೆ. ಆ ಗುಹೆಯ ಸಮೀಪದಲ್ಲಿ ನಿರ್ಮಲೋದಕವುಳ್ಳ ತಾವರೆಯ ಕೊಳಗಳಿವೆ. ಶರತ್ಕಾಲವು ರಾವಣನ ವಧೆಯನ್ನು ಮಾಡುವುದಕ್ಕೆ ಯೋಗ್ಯವಾದ ಸಮಯ. ಸುಗ್ರೀವ, ನೀನು ನಿನ್ನ ಅರಮನೆಗೆ ಹೋಗಿ ಪಟ್ಟಾಭಿಷೇಕವನ್ನು ಮಾಡಿಕೊಂಡು ರಾಜ್ಯಪರಿಪಾಲನವನ್ನು ಮಾಡುತ್ತ ನಿನ್ನ ಸ್ನೇಹಿತರನ್ನು ಕೂಡಿಕೊಂಡಿರು " ಎಂದು ಆಜ್ಞಾಪಿಸಿದನು.

ಅನಂತರ ಸುಗ್ರೀವನು ವಾಲಿಯಿಂದ ರಕ್ಷಿತವಾದ ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ಮಂತ್ರಿಗಳನ್ನು ಕರೆಯಿಸಲು ಅವರು ಸುಗ್ರೀವನಿಗೆ ಪಟ್ಟಾಭಿಷೇಕಮಾಡುವುದಾಗಿ ನಾಲ್ಕು ಸಮುದ್ರಗಳಿಂದಲೂ ಗಂಗಾದಿ ಸಕಲ ಪುಣ್ಯತೀರ್ಥಗಳಿಂದಲೂ ಪುಣ್ಯಸರಸ್ಸುಗಳಿಂದಲೂ ಸುವರ್ಣಕಲಶಗಳಲ್ಲಿ ಉದಕಗಳನ್ನು ತರಿಸಿದರು. ಅವರೆಲ್ಲರೂ ಒಟ್ಟುಗೂಡಿ ಶ್ರೀಗಂಧ ಪುಷ್ಪಮೊಲಿಕೆ ಚಂದನ ಗಂಧ ಜೇನುತುಪ್ಪ ತುಪ್ಪ ಮೊಸರು ಬಿಳಿಯ ಅಕ್ಷತೆಗಳಿಂದಲೂ ವರುಣದೇವತಾಕವಾದ ಮಂತ್ರಗಳಿಂದ ಮಂತ್ರಿಸಲ್ಪಟ್ಟ ಸುವರ್ಣಕಲಶೋದಕಗಳಿಂದಲೂ ಅಭಿಷೇಕವನ್ನು ಮಾಡಿಸಿ ಸಮಿಚ್ಛರುಗಳನು ಬ್ರಾಹ್ಮಣರಿಂದ ಹೋಮಮಾಡಿಸಿದರು. ಆ ಬಳಿಕ ಸುಗ್ರೀವನನ್ನು ವಸ್ತ್ರಾಭರಣ ದಿವ್ಯಗಂಧಾನು ಲೇಪನಗಳಿಂದ ಅಲಂಕರಿಸಿ ಆಸ್ಥಾನಮಂಟಪದಲ್ಲಿ ಸಿಂಹಾಸನದ ಮೇಲೆ ಮೂಡಣ ಮುಖವಾಗಿ ಕುಳ್ಳಿರಿಸಿ ದೇವತೆಗಳು ದೇವೇಂದ್ರನಿಗೆ ಸ್ವರ್ಗಾಧಿಪತ್ಯವನ್ನು ಕೊಟ್ಟು ಪಟ್ಟಾಭಿಷೇಕವನ್ನು ಮಾಡು ವಂತೆ, ಗಜ ಗವಾಕ್ಷ ಗವಯ ಶರಭ ಗಂಧಮಾದನ ಮೈಂದ ದ್ವಿವಿದ ಹನುಮಂತರೇ ಮೊದಲಾದ ಕಪಿಶ್ರೇಷ್ಠರು ಆತನಿಗೆ ಪಟ್ಟಾಭಿಷೇಕಮಾಡಿ ನಮಸ್ಕಾರವನ್ನು ಮಾಡಿದರು. ಸುಗ್ರೀವನು ಅವರನ್ನು ಕೈಹಿಡಿದೆಬ್ಬಿಸಿ ಅವರಿಗೆ ವಸ್ತ್ರಾಭರಣಾದಿ ಉಡುಗೊರೆಗಳನ್ನು ಕೊಟ್ಟು ವ್ಯಾಘ್ರಚರ್ಮಸಹಿತವಾಗಿ ರತ್ನಖಚಿತವಾದ ಸಿಂಹಪೀಠದ ಮೇಲೆ ಕುಳಿತು ಪರಿಜನ ಪುರಜನರಿಗೆ ಕಾಣಿಸಿಕೊಂಡನು. ಬಳಿಕ ಅಂಗದಕುಮಾರನಿಗೆ ಯುವರಾಜಪಟ್ಟವನ್ನು ಕಟ್ಟಿದನು. ಆ ಸಮಯದಲ್ಲಿ ಸಕಲ ಪ್ರಧಾನರೂ

ಕಪಿನಾಯಕರೂ ಸುಗ್ರೀವನನ್ನು ನೋಡಿ ಜಯ ಜಯ ಎಂದು ನುಡಿಯುತ್ತ ಸಾಕ್ಷಾತ್ ಪುರುಷೋತ್ತಮನಾಗಿ ಲಕ್ಷ್ಮಣಸಮೇತನಾದ ಶ್ರೀರಾಮನು ಸರ್ವೋತ್ತಮನೆಂದು ಕೊಂಡಾಡಿದರು.

ಈ ಪ್ರಕಾರದಲ್ಲಿ ಶ್ರೀರಾಮನ ಅನುಗ್ರಹದಿಂದ ಕಿಷ್ಕಿಂಧಾಧಿಪತಿಯಾದ ಸುಗ್ರೀವನು ಪಟ್ಟಾಭಿಷೇಕವನ್ನು ಮಾಡಿಕೊಂಡು ತೋರಣಪತಾಕಾದಿಗಳಿಂದ ಅಲಂಕರಿಸಲ್ಪಟ್ಟ ಕಿಷ್ಕಿಂಧಾಪಟ್ಟಣ ದಲ್ಲಿ ತನ್ನ ಪತ್ನಿಯಾದ ರುಮಾದೇವಿಯನ್ನು ಕೂಡಿಕೊಂಡು ಸ್ವರ್ಗಲೋಕದಲ್ಲಿ ಶಚೀದೇವಿಯೊಡನೆ ವಿನೋದಿಸಿಕೊಂಡಿರುವ ದೇವೇಂದ್ರನಂತೆ ಅತ್ಯಂತ ಹರ್ಷೋತ್ಸವದಿಂದಿದ್ದನು.



## ೨೭ ನೆಯ ಅಧ್ಯಾಯ

## ಮಾಲ್ಯವತ್ಪರ್ವತದಲ್ಲಿ ಶ್ರೀರಾಮಲಕ್ಷ್ಮಣರ ವಾಸ

ಈ ರೀತಿಯಲ್ಲಿ ಸುಗ್ರೀವನು ಪಟ್ಟಾಭಿಷಿಕ್ತನಾಗಿ ತನ್ನ ಅರಮನೆಯಲ್ಲಿ ಸುಖವಾಗಿರಲು ಲಕ್ಷ್ಮಣಸಮೇತನಾದ ಶ್ರೀರಾಮನು ಸಿಂಹ ಶಾರ್ದೂಲಾದಿ ಮೃಗಗಳಿಂದ ಇಟ್ಟಣಿಸಿ ಮೇರು ಪರ್ವತಕ್ಕೆ ಸಮಾನವಾಗಿಯೂ ಅತ್ಯಂತ ಪವಿತ್ರವಾಗಿಯೂ ಇರುವ ಮಂಗಳಪ್ರದವಾದ ಮಾಲ್ಯವತ್ಪರ್ವತಕ್ಕೆ ಹೋದನು. ಆ ಪರ್ವತದ ಮೇಲ್ಭಾಗದಲ್ಲಿ ಮನೋಹರವಾದ ಒಂದು ಗುಹೆಯನ್ನು ಕಂಡು ಲಕ್ಷ್ಮಣನನ್ನು ಕುರಿತು ಹೀಗೆಂದನು : "ಲಕ್ಷ್ಮಣ, ಈ ಪರ್ವತದಲ್ಲಿ ತಂಗಾಳಿ ಯಿರುವ ರಮಣೀಯವೂ ವಿಶಾಲವೂ ಆಗಿರುವ ಈ ಗುಹೆಯನ್ನು ನೋಡು. ನಾವು ಈ ವರ್ಷಾ ಕಾಲವು ಕಳೆಯುವವರೆಗೆ ಈ ಗುಹೆಯಲ್ಲಿ ವಾಸಿಸೋಣ. ಈ ಪರ್ವತದ ಶಿಖರವು ಕರಿಯ ಶಿಲೆ ಗಳಿಂದಲೂ ಕೆಂಪು ಶಿಲೆಗಳಿಂದಲೂ ಬಿಳಿಯ ಶಿಲೆಗಳಿಂದಲೂ ಮನೋಹರವಾಗಿದೆ. ಇದು ನಾನಾ ಗೈರಿಕಾದಿ ಧಾತುಗಳಿಂದಲೂ ನಿರ್ಝರೋದಕಗಳಿಂದಲೂ ಕುಸುಮಿತವಾದ ವೃಕ್ಷಗಳಿಂದಲೂ ಪಲ್ಲವಿತವಾದ ಲತೆಗಳಿಂದಲೂ ಪುಷ್ಪಿತವಾದ ಮಲ್ಲಿಗೆ ಇರುವಂತಿಗೆ ಮೊದಲಾದ ಲತೆಗಳಿಂದಲೂ ಕದಂಬ ಮತ್ತಿ ಸಜ್ಜರಸ ವೃಕ್ಷಗಳಿಂದಲೂ ರಮಣೀಯವಾಗಿದೆ. ಅನೇಕ ಕಮಲಗಳಿಂದ ರಮಣೀಯ ವಾದ ಕೊಳವು ಈ ಗುಹೆಯ ಸಮೀಪದಲ್ಲಿದೆ. ಈ ಗುಹೆಯು ನೈಋತ್ಯದಿಕ್ಕಿನಿಂದ ಈಶಾನ್ಯದಿಕ್ಕಿಗೆ ಹರಡಿಕೊಂಡು ವಿಶಾಲವಾಗಿದೆ. ಇದರ ಪಡುವಣ ಭಾಗವು ಉನ್ನತವಾಗಿರುವುದರಿಂದ ವಾಸ ಮಾಡುವುದಕ್ಕೆ ಅನುಕೂಲವಾಗಿದೆ. ಈ ಗುಹೆಯ ಬಾಗಿಲಲ್ಲಿ ವಿಶಾಲವಾಗಿಯೂ ನಿಡಿದಾಗಿಯೂ ಕರಿಯದಾಗಿಯೂ ಮನೋಹರವಾಗಿಯೂ ಒಪ್ಪುತ್ತಿರುವ ಕಲ್ಲರೆಯಿದೆ. ತ್ರಿಕೂಟಪರ್ವತದಂತೆ ಈ ಗುಹೆಯ ತೆಂಕಣಭಾಗದಲ್ಲಿ ನಾನಾಧಾತುಗಳಿಂದ ಮನೋಹರವಾಗಿ ಕೈಲಾಸಪರ್ವತದಂತೆ ಬಿಳುಪಾದ ಶಿಖರವಿದೆ. ತ್ರಿಕೂಟಪರ್ವತದ ಸಮೀಪದಲ್ಲಿ ಗಂಗೆಯು ಇರುವಂತೆ ಇಲ್ಲಿ ಮೂಡಣ ಪ್ರವಾಹವುಳ್ಳ ಒಂದು ನದಿಯಿದೆ. ಈ ನದಿಯು ತೀರದಲ್ಲಿರುವ ಕುಸುಮಿತವೂ ಮನೋಹರವೂ ಆದ ಸಂಪಿಗೆ ಅಶೋಕ ಬೆಟ್ಟದಾವರೆ ತಿಲಕ ಸಾಲವೃಕ್ಷ ತಮಾಲವೃಕ್ಷ ಗೊರಟೆ ಬಕುಳ ತಾಳಿ ಹಿರಿತಾಳಿ ಕದ್ವಾಳಿ ಮಾವು ಹಲಸು ನೇರಳೆ ಮೊದಲಾದ ವೃಕ್ಷಗಳಿಂದ ಅಲಂಕರಿಸಲ್ಪಟ್ಟದ್ದಾಗಿ, ವಸ್ತ್ರಾಭರಣಗಳಿಂದ ಅಲಂಕೃತಳಾದ ಸ್ತ್ರೀಯಂತೆ ಒಪ್ಪುತ್ತಿದೆ. ಅನ್ಯೋನ್ಯಪ್ರೀತಿಯುಳ್ಳ ಚಕ್ರವಾಕ, ಹಂಸ, ಸಾರಸ, ನವಿಲು ಮೊದಲಾದ ಪಕ್ಷಿಗಳ ಧ್ವನಿಗಳಿಂದ ರಮಣೀಯವಾಗಿಯೂ ಮಳಲೊಟ್ಟುಗಳಿಂದಲೂ ದಿಕ್ಕುದಿಕ್ಕುಗಳಲ್ಲಿರುವ ಚಂದನವೃಕ್ಷಗಳಿಂದಲೂ ಅಲಂಕರಿಸಲ್ಪಟ್ಟ ದ್ದಾಗಿಯೂ ಮನೋಹರವಾಗಿದೆ. ಈ ಪರ್ವತದಲ್ಲಿ ಹರಿಯುತ್ತಿರುವ ನದೀತೀರದಲ್ಲಿನ

ಈ ಗುಹೆಯಲ್ಲಿ ವಾಸಮಾಡಿಕೊಂಡಿರೋಣ. ಎಲೈ ಲಕ್ಷ್ಮಣ, ಇದರ ಸಮೀಪದಲ್ಲಿ ಸುಗ್ರೀವನ ಪಟ್ಟಣವಿರುವುದು. ಇಲ್ಲಿ ಅನೇಕ ಮದ್ದಳೆ ಗೀತಧ್ವನಿಗಳೂ ಆನಂದಾತಿಶಯದಿಂದ ಬೊಬ್ಬಿಡುವ ಕಪಿಗಳ ಧ್ವನಿಗಳೂ ಕೇಳಿಸುತ್ತಿವೆ. ಸುಗ್ರೀವನು ತನ್ನ ರಾಜ್ಯವನ್ನು ಪಡೆದು ತನ್ನ ಪತ್ನಿಯನ್ನೂ ಸ್ನೇಹಿತರನ್ನೂ ಕೂಡಿಕೊಂಡು ಐಶ್ವರ್ಯವುಳ್ಳವನಾಗಿ ಸುಖಿಸಿಕೊಂಡಿರುವನು" ಎಂದು ನುಡಿದು ಲಕ್ಷ್ಮಣಸಮೇತನಾಗಿ ಆ ಗುಹೆಯಲ್ಲಿ ವಾಸಮಾಡುತ್ತ ತನ್ನ ಪ್ರಾಣಕ್ಕಿಂತಲೂ ಅತ್ಯಧಿಕಳಾದ ಸೀತಾದೇವಿಯನ್ನು ಸ್ಮರಿಸಿ ದುಃಖಾಕ್ರಾಂತನಾಗಿ ಕಣ್ಣೀರುಬಿಡುತ್ತ ಹಗಲಿರುಳೂ ಆಹಾರ ನಿದ್ರೆಗಳನ್ನು ಸರಿಯಾಗಿ ಸೇವಿಸದೆ ಪ್ರಲಾಪಿಸುತ್ತಿದ್ದನು.

ಅದನ್ನು ಕಂಡು ಲಕ್ಷ್ಮಣನು ಚಿಂತಾಕ್ರಾಂತನಾಗಿ ಶ್ರೀರಾಮನನ್ನು ಕುರಿತು ಹೀಗೆಂದನು: "ಅಣ್ಣ, ನೀನು ವ್ಯಥೆಪಡಬೇಡ. ಯಾವಾಗಲೂ ಶೋಕಪಡುವವರಿಗೆ ಸಮಸ್ತ ಕಾರ್ಯಗಳೂ ಕೆಡುವುವು. ಈಗ ನೀನು ಕಾರ್ಯಾರ್ಥಿಯಾಗಿದ್ದೀಯೆ. ನೀನು ದೈವಸಹಾಯವನ್ನು ಬಯಸಿಕೊಂಡು ನಿನ್ನ ಇಷ್ಟದೇವತೆಯಲ್ಲಿ ವಿಶ್ವಾಸವುಳ್ಳವನಾಗಿಯೂ ಧರ್ಮಶೀಲನಾಗಿಯೂ ಇದ್ದೀಯೆ. ಮುಂದೆ ಕಾರ್ಯಸಿದ್ಧಿಯಾಗುವ ಮಾರ್ಗವನ್ನು ಕಾಣು. ನೀನು ಕುಟಿಲಮಾರ್ಗದಲ್ಲಿ ನಡೆಯುವ ಶತ್ರುಗಳನ್ನು ಸಂಹರಿಸುವುದರಲ್ಲಿ ಸಮರ್ಥನು. ಆದಕಾರಣ ನಿನಗೆ ಶತ್ರುವಾದ ರಾವಣನನ್ನು ಸಮೂಲವಾಗಿ ಕೊಂದು ಜಯಲಕ್ಷ್ಮಿಯನ್ನು ಪಡೆದು ಸಮುದ್ರ ಪರ್ಯಂತವಾದ ಭೂಮಂಡಲವನ್ನು ಪರಿಪಾಲಿಸು. ನೀನು ಭೂಮ್ಯಾಕಾಶಗಳನ್ನು ತಾರುಮಾರು ಮಾಡುವುದಕ್ಕೆ ಸಮರ್ಥನಾಗಿರುವುದರಿಂದ ರಾವಣನನ್ನು ಕೊಲ್ಲುವುದು ನಿನಗೆ ಕಷ್ಟವಲ್ಲ. ಈ ವರ್ಷಾಕಾಲವು ಹೋಗಿ ಶರತ್ಕಾಲವು ಬರುವ ಪರ್ಯಂತ ಸಹಿಸಿಕೊ. ಸಮಸ್ತ ಬಲಸಮೇತನಾದ ರಾವಣನನ್ನು ನೀನು ನಿಶ್ಚಯವಾಗಿ ಕೊಲ್ಲುವೆ. ಈಗ ನಿನ್ನ ಪರಾಕ್ರಮವು ಬೂದಿಮುಚ್ಚಿದ ಕೆಂಡದಂತೆ ಕಾಣಿಸದಿದೆ. ಆದಕಾರಣ ನಾನು ನಿನ್ನ ಪರಾಕ್ರಮವನ್ನು ನಿನಗೆ ಜ್ಞಾಪಿಸಿಕೊಡುತ್ತಿದ್ದೇನೆ" ಎಂದು ನುಡಿದನು.

ಶ್ರೀರಾಮನು ಲಕ್ಷ್ಮಣನ ಹಿತವಾಕ್ಯವನ್ನು ಕೇಳಿ "ಲಕ್ಷ್ಮಣ, ನೀನು ಹೇಳಿದ ಮಾತು ಯಥಾರ್ಥವೇ ಸರಿ. ಸಮಸ್ತ ಕಾರ್ಯವನ್ನೂ ಕೆಡಿಸುವ ದುಃಖವನ್ನು ಬಿಟ್ಟೆನು. ಪರಾಕ್ರಮವನ್ನುಂಟುಮಾಡುವ ಉತ್ಸಾಹಶಕ್ತಿಯನ್ನು ಕೈಗೊಂಡೆನು. ನೀನು ಹೇಳಿದಂತೆ ಶರತ್ಕಾಲವು ಬರುವ ಪರ್ಯಂತ ತಾಳಹರಿಸಿಕೊಂಡಿರುತ್ತೇನೆ. ಶರತ್ಕಾಲವು ಬಂದರೆ ನದಿಗಳು ತಗ್ಗುವುವು. ಸುಗ್ರೀವನ ಮನಸ್ಸು ನಮ್ಮ ಕಾರ್ಯವನ್ನು ಮಾಡಿಕೊಡಬೇಕೆಂದು ಪ್ರಸನ್ನ ವಾಗುವುದು. ಲೋಕದಲ್ಲಿ ಧೈರ್ಯಗುಣಸಂಪನ್ನನಾದ ಪುರುಷನು ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡದಿರನು" ಎಂದು ನುಡಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಕೈಮುಗಿದುಕೊಂಡು ತನ್ನ ವಿನಯಗುಣಸಂಪತ್ತಿಯನ್ನು ತೋರಿಸುತ್ತ "ಶ್ರೀರಾಮ, ನೀನು ಹೇಳಿದ ಮಾತುಗಳೆಲ್ಲವೂ ಸತ್ಯವೇ ಸರಿ. ಶರತ್ಕಾಲವು ಬಂದಮೇಲೆ ಸುಗ್ರೀವನು ಅತಿಶೀಘ್ರವಾಗಿ ನಿನ್ನ ಕಾರ್ಯವನ್ನು ಸಾಧ್ಯಮಾಡುವನು. ಆದಕಾರಣ ನೀನು ಶತ್ರುನಿಗ್ರಹವನ್ನು ಮಾಡುವುದಕ್ಕಾಗಿ ನದೀಪ್ರವಾಹಗಳ ಉಬ್ಬು ತಗ್ಗುವ ಪರ್ಯಂತ ಶರತ್ಕಾಲದ ಬರವನ್ನು ಎದುರುನೋಡುತ್ತ ಕೋಪವನ್ನು ಸಹಿಸಿಕೊಂಡಿರು. ನಾವು ನಾಲ್ಕು ತಿಂಗಳುಗಳ ಪರ್ಯಂತ ಇಲ್ಲಿರೋಣ. ಆಮೇಲೆ ಶತ್ರುಸಂಹಾರವನ್ನು ಮಾಡು" ಎಂದು ಸಮಾಧಾನವನ್ನು ಹೇಳಿದನು.

## ೨೮ನೆಯ ಅಧ್ಯಾಯ

## ವರ್ಷಾಕಾಲ ವರ್ಣನೆ

ಒಂದು ದಿನ ಶ್ರೀರಾಮನು ಲಕ್ಷ್ಮಣನನ್ನು ಕುರಿತು ವರ್ಷಾಕಾಲವನ್ನು ವರ್ಣಿಸುತ್ತ ಹೀಗೆ ಹೇಳಿದನು : "ಲಕ್ಷ್ಮಣ, ವರ್ಷಾಕಾಲವು ಪ್ರಾಪ್ತವಾಯಿತು. ಎಲ್ಲಿ ನೋಡಿದರೂ ಆಕಾಶವು ಪರ್ವತಾಕಾರವಾದ ಮೇಘಗಳಿಂದ ದಟ್ಟವಾಗಿ ಇಟ್ಟಣಿಸಿದೆ. ಆಕಾಶವು ಸೂರ್ಯಕಿರಣಗಳಿಂದ ಸಮುದ್ರದ ಸಾರವನ್ನು ತೆಗೆದುಕೊಂಡು ಕಾರ್ತಿಕಮಾಸದಿಂದ ಆಷಾಢಮಾಸದವರೆಗೆ ಒಂಬತ್ತು ತಿಂಗಳು ಉದಕಗರ್ಭವನ್ನು ಧರಿಸಿ ಶ್ರಾವಣಮಾಸದಲ್ಲಿ ಸಮಸ್ತ ಜೀವಿಗಳಿಗೂ ರಸಾಯನದಂತೆ ಆಧಾರವಾದ ಮಳೆಯನ್ನು ಕರೆಯುತ್ತಿದೆ. ವರ್ಷಾಕಾಲದಲ್ಲಾಗುವ ಕೊಡಸಿಗೆ ಮುತ್ತಿ ಮೊದಲಾದ ಪುಷ್ಪಗಳನ್ನು ತಂದು ಮಾಲೆಯನ್ನು ಕಟ್ಟಿ ಈ ಮೇಘಪಂಕ್ತಿಗಳೆಂಬ ಸೋಪಾನವನ್ನೇರಿ ಸೂರ್ಯಮಂಡಲಕ್ಕೆ ಹೋಗಿ ಸೂರ್ಯನನ್ನು ಅರ್ಚನೆಮಾಡಬಹುದೆಂಬಂತೆ ಮೇಘಗಳ ಸಾಲುಗಳು ಒಪ್ಪುತ್ತಿವೆ. ಸಂಧ್ಯಾಕಾಲದ ಕೆಂಪುಳ್ಳದ್ದಾಗಿ ಎರಡು ತುದಿಗಳಲ್ಲಿ ಬಿಳುಪಾದ ಮೇಘಗಳೆಂಬ ವಸ್ತ್ರದ ತುಂಡುಗಳಿಂದ ಸುತ್ತಿ ಕಟ್ಟಲ್ಪಟ್ಟ ಗಾಯವುಳ್ಳದೋ ಎಂಬಂತೆ ಆಕಾಶವು ಒಪ್ಪುತ್ತಿದೆ. ಮೊದಲು ಗ್ರೀಷ್ಮಕಾಲದಲ್ಲಿ ಸೂರ್ಯಕಿರಣಗಳಿಂದ ಪರಿತಪಿಸಲ್ಪಟ್ಟು ಈಗ ಮಳೆಹನಿಗಳಿಂದ ನೆನೆದು ಸೆಕೆಯನ್ನೆಬ್ಬಿಸುತ್ತಿರುವ ಈ ಭೂಮಿಯು ವಿರಹಶೋಕವನ್ನು ಸಹಿಸಲಾರದೆ ನಿಟ್ಟುಸಿರು ಬಿಡುತ್ತಿರುವ ಸೀತಾದೇವಿಯಂತೆ ಒಪ್ಪುತ್ತಿದೆ. ವಿಕಸಿತವಾದ ಮತ್ತಿಯ ಮರಗಳಿಂದಲೂ ತಾಳೆಯಗಿಡಗಳಿಂದಲೂ ಮನೋಹರವಾದ ಈ ಪರ್ವತವು ವರ್ಷಧಾರೆಗಳಿಂದ ಪಟ್ಟಾಭಿಷೇಕವನ್ನು ಮಾಡಿಕೊಳ್ಳುವ ಸುಗ್ರೀವನೋ ಎಂಬಂತೆ ಒಪ್ಪುತ್ತಿದೆ. ಪರ್ವತಗಳು ಮೇಘಗಳೆಂಬ ಕೃಷ್ಣಾಜಿನ ಯಜ್ಞೋಪವೀತಗಳನ್ನು ಧರಿಸಿಕೊಂಡು, ಸುತ್ತಲುಂಟಾಗುವ ಧ್ವನಿಗೆ ಪ್ರತಿಧ್ವನಿ ಕೊಡುತ್ತಿರುವ ತಮ್ಮ ಗುಹೆಗಳಲ್ಲಿ ಹೊಕ್ಕ ಗಾಳಿಯ ಧ್ವನಿಯಿಂದ ಅಧ್ಯಯನಮಾಡುವ ಬ್ರಹ್ಮಚಾರಿಗಳೋ ಎಂಬಂತೆ ಒಪ್ಪುತ್ತಿವೆ. ಗುಡುಗುತ್ತಿರುವ ನೀಲಮೇಘಗಳು ಮಿಂಚುಗಳೆಂಬ ಚಾವಟಿ ಪೆಟ್ಟಿನ ವೇದನೆಯಿಂದ ಮೆಲ್ಲಗೆ ತೆರಳುತ್ತಿವೆ. ನೀಲವರ್ಣವಾದ ಮೇಘಮಂಡಲದಲ್ಲಿ ಹೊಳೆಯುವ ಮಿಂಚು ಶ್ಯಾಮಲವರ್ಣನಾದ ರಾವಣನ ಬಳಿಯಲ್ಲಿ ಕುಳಿತುಕೊಂಡು ಬಿಸುಸುಯ್ಯುತ್ತಿದ್ದ ಸೀತಾದೇವಿಯಂತೆ ಒಪ್ಪುತ್ತಿದೆ ! ದಿಕ್ಕುಗಳು ಮೇಘಗಳಿಂದ ವ್ಯಾಪಿಸಲ್ಪಟ್ಟು ಚಂದ್ರಸೂರ್ಯರು ಕಾಣಿಸದಿರುವುದರಿಂದ ಕತ್ತಲೆಗವಿದು ಕಾಮುಕರಾದವರಿಗೆ ಅನುಕೂಲವಾಗಿದೆ. ಎಲೈ ಲಕ್ಷ್ಮಣ, ವಿರಹಶೋಕದಿಂದ ಕಂಗೆಟ್ಟಿರುವ ನನಗೆ ವಿರಹಾಗ್ನಿಯನ್ನುಂಟುಮಾಡುತ್ತ ಪುಷ್ಪಿತವಾಗಿ ನಿಂತಿರುವ ಕೊಡಸಿನ ಮರಗಳನ್ನು ನೋಡು. ಈ ವರ್ಷಾಕಾಲದಲ್ಲಿ ಭೂಮಿಯು ಧೂಳು ತಗ್ಗಿದೆ. ಗಾಳಿಯು ಅತಿಶೀತವಾಗಿದೆ. ಎಲ್ಲಿ ನೋಡಿದರೂ ಮಳೆಯಿಂದ ನೆನೆದ ಭೂಮಿಯಲ್ಲಿ ಸೆಕೆಯುಂಟಾಗುತ್ತಿದೆ. ದಾರಿಹೋಕರ ಸಂಚಾರವು ಅಡಗಿದೆ. ಅರಸರ ದಂಡಯಾತ್ರೆಯು ನಿಲ್ಲಲು ಭಟರು ತಮ್ಮ ಸ್ತ್ರೀಯರಿರುವ ಸ್ಥಳಕ್ಕೆ ತಿರುಗಿ ಹೋಗುತ್ತಿದ್ದಾರೆ. ಚಕ್ರವಾಕಪಕ್ಷಿಗಳು ಮಾನಸಸರೋವರದಲ್ಲಿದ್ದು ವರ್ಷಾಕಾಲವನ್ನು ಕಳೆಯಬೇಕೆಂದು ತಮ್ಮ ಸ್ತ್ರೀಪಕ್ಷಿಗಳನ್ನು ಕೂಡಿಕೊಂಡು ಹೋಗುತ್ತಿವೆ. ಮಾರ್ಗಗಳಲ್ಲಿ ಕುದುರೆ ಮೊದಲಾದ ವಾಹನಗಳ ಸಂಚಾರವಿಲ್ಲ. ಮೇಘಗಳಿಂದ ಮುಚ್ಚಲ್ಪಟ್ಟ ಆಕಾಶಮಂಡಲವು ಒಂದು ದಿಕ್ಕಿನಲ್ಲಿ ಬೆಳಕಾಗಿಯೂ ಮತ್ತೊಂದು ದಿಕ್ಕಿನಲ್ಲಿ ಕತ್ತಲೆಗವಿದೂ ಇದೆ.

ಪರ್ವತಗಳು ಕೆಂಪಾದ ಗೈರಿಕಾದಿ ಧಾತುಗಳಿಂದಲೂ ನವಿಲುಗಳ ಧ್ವನಿಗಳಿಂದಲೂ ನೀರು ಹರಿಯುತ್ತಿರುವ ಗಿರಿನದಿಗಳಿಂದಲೂ ಮನೋಹರವಾಗಿವೆ. ಎಲ್ಲಿ ನೋಡಿದರೂ ಪಲ್ಲವಿತವಾದ ಮಾವಿನಮರಗಳಿಂದ ಮಾವಿನಹಣ್ಣುಗಳು ಗಾಳಿಯಿಂದ ತೊಟ್ಟುಕಳೆದು ಬೀಳುತ್ತಿವೆ. ಮಿಂಚು ಗಳೆಂಬ ಪತಾಕೆಗಳುಳ್ಳವಾಗಿ ಬೆಳ್ಳಕ್ಕಿಗಳ ಪಂಕ್ತಿಗಳೆಂಬ ಸರಪಣಿಗಳುಳ್ಳವಾಗಿ ಪರ್ವತಾಕಾರವಾದ ಮೇಘಗಳು ಗುಡುಗಿನ ಧ್ವನಿಗಳಿಂದ ಯುದ್ಧರಂಗದಲ್ಲಿ ಪರಬಲದಿಂದ ಮುರಿದೋಡುವ ಆನೆಗಳೋ ಎಂಬಂತೆ ಒಪ್ಪುತ್ತಿವೆ. ಪರ್ವತದ ತಪ್ಪಲುಗಳು ಮಳೆನೀರಿನ ಪ್ರವಾಹದಿಂದಲೂ ಎಳೆ ಗರಿಕೆಗಳ ಮೇಲೆ ನರ್ತನಮಾಡುವ ನವಿಲುಗಳಿಂದಲೂ ಕುಳಿತಿರುವ ಬೆಳ್ಳಕ್ಕಿಗಳಿಂದಲೂ ಮೆರೆಯುವ ವನಗಳುಳ್ಳವಾಗಿ ಮನೋಹರವಾಗಿ ಒಪ್ಪುತ್ತಿವೆ. ನೀರುಂಡ ಮೇಘಗಳನ್ನು ಬಯಸಿ ಸಾಲಾಗಿ ಹೋಗುವ ಬೆಳ್ಳಕ್ಕಿಗಳು ಬಿರುಗಾಳಿಯಿಂದ ಚೆದರಿ ಮೇಘಮಂಡಲಕ್ಕೆ ಅಲಂಕರಿಸಲ್ಪಟ್ಟ ಬೆಳ್ದಾವರೆಮಾಲೆಯೋ ಎಂಬಂತೆ ಒಪ್ಪುತ್ತಿವೆ. ಭೂಮಿಯು ಇಂದ್ರಗೋಪ ಹುಳುಗಳಿಂದ ಬೆರಸಲ್ಪಟ್ಟ ಎಳೆಯ ಹುಲ್ಲುಳ್ಳದ್ದಾಗಿ ಚಿತ್ರಿತವಾದ ಹಸಿರುಬಟ್ಟೆಯನ್ನು ಹೊದ್ದಿರುವ ಸ್ತ್ರೀಯಂತೆ ಒಪ್ಪುತ್ತಿದೆ. ವರ್ಷಾಕಾಲವು ಪ್ರಾಪ್ತವಾದ್ದರಿಂದ ನದಿಗಳು ವೇಗದಿಂದ ಸಮುದ್ರವನ್ನೈದುತ್ತಿವೆ. ಬೆಳ್ಳಕ್ಕಿಗಳು ಅತಿಹರ್ಷದಿಂದ ಮೇಘಮಂಡಲವನ್ನೈದುತ್ತಿವೆ. ಈಗ ಕಾಮುಕಿಯರಾದ ಸ್ತ್ರೀಯರು ತಮ್ಮ ಪುರುಷರ ಬಳಿಗೈದುತ್ತಿರುವರು. ವನಗಳು ನರ್ತನಮಾಡುವ ನವಿಲುಗಳುಳ್ಳವಾಗಿವೆ. ವೃಷಭಗಳು ಗೋವುಗಳಲ್ಲಿ ಕಾಮಾತುರವುಳ್ಳವಾಗಿವೆ. ಭೂಮಿಯು ಪೈರುಪಚ್ಚೆಗಳಿಂದ ರಮಣೀಯ ವಾಗಿದೆ. ನದಿಗಳು ವೆಗ್ಗಳವಾಗಿ ಪ್ರವಹಿಸುತ್ತಿವೆ. ಮೇಘಗಳು ಮಳೆಗರೆಯುತ್ತಿವೆ. ಮದ್ದಾನೆಗಳು ಆನಂದದಿಂದ ಬೃಂಹಿತಧ್ವನಿಮಾಡುತ್ತಿವೆ. ವನಗಳು ಪುಷ್ಪಿತವಾಗಿಯೂ ಫಲಿತವಾಗಿಯೂ ರಮಣೀಯವಾಗಿ ಒಪ್ಪುತ್ತಿವೆ. ಈಗ ವಿರಹಿಗಳು ತಮ್ಮ ಪ್ರಾಣವಲ್ಲಭರನ್ನು ನೆನೆದು ಧ್ಯಾನ ಮಾಡುತ್ತಿರುವರು. ಎಲ್ಲಿ ನೋಡಿದರೂ ನವಿಲುಗಳು ಕುಣಿಯುತ್ತಿವೆ. ಕಪಿಗಳು ಸಮೃದ್ಧವಾಗಿ ಸಿಕ್ಕುತ್ತಿರುವ ಆಹಾರಗಳಿಂದ ನೆಮ್ಮದಿಯಿಂದಿರುವುವು. ಮಸಿಯ ಚೂರ್ಣಕ್ಕೆ ಸಮಾನವಾದ ಕಾಂತಿ ಯುಳ್ಳ ರಸಭರಿತವಾದ ವೃಕ್ಷಫಲಗಳಿಂದ ಇಟ್ಟಣಿಸಿರುವ ನೇರಿಳೆಮರದ ಕೊಂಬೆಗಳು ದುಂಬಿಗಳಿಂದ ಮುಚ್ಚಿಹೋದಂತೆ ಕಾಣುತ್ತಿವೆ. ಮಿಂಚೆಂಬ ಪತಾಕೆಗಳಿಂದ ಅಲಂಕರಿಸಲ್ಪಟ್ಟದ್ದಾಗಿ ಗರ್ಜನೆಯೆಂಬ ಗಂಭೀರಧ್ವನಿಯುಳ್ಳ ಮೇಘಗಳು ಯುದ್ಧಸಂನದ್ಧವಾಗಿ ನಿಂತಿರುವ ಆನೆಗಳಂತೆ ಕಾಣುತ್ತಿವೆ. ಪರ್ವತದ ವನಾಂತರಗಳಲ್ಲಿ ಸಂಚರಿಸುವ ಕಾಡಾನೆಗಳು ಗುಡುಗಿನ ಧ್ವನಿಯನ್ನು ಕೇಳಿ ಶತ್ರುಗಜದ ಧ್ವನಿಯೆಂಬ ಸಂಶಯದಿಂದ ಯುದ್ಧಕ್ಕಾಗಿ ಹಿಂದಿರುಗಿ ಬರುತ್ತಿವೆ. ಮೃಗಪಕ್ಷಿಗಳಿಗೆ ಆಶ್ರಯವಾದ ವನಗಳು ತಮ್ಮಲ್ಲಿರುವ ದುಂಬಿಗಳ ಝೇಂಕಾರಗಳಿಂದ ಗಾನಮಾಡುವಂತೆಯೂ ಪುಷ್ಪಿತವಾದ ಕಡಬ ಸಜ್ಜರಸ ಅಶ್ವತ್ಥ ಮತ್ತಿಗಳಲ್ಲಿ ಕುಳಿತಿರುವ ನವಿಲುಗಳಿಂದ ನರ್ತನಮಾಡುವಂತೆಯೂ ತೋರುತ್ತಿವೆ ! ಎಲೆಗಳ ಮೇಲೆ ಬೀಳುವ ಮಳೆಹನಿಗಳನ್ನು ಪಕ್ಷಿಗಳು ಅಮೃತವೆಂದೆಣಿಸುತ್ತಿವೆಯೊ ಎಂಬಂತೆ ತೃಷೆಯಿಂದ ಕಂಗೆಟ್ಟು ಬಂದು ಅತ್ಯಂತ ಸಂತೋಷದಿಂದ ಪಾನಮಾಡುತ್ತಿವ. ತಂತಿಯ ಮಧುರಸ್ವರದಿಂದಲೂ ತಾಳಮದ್ದಳೆಗಳ ಧ್ವನಿಯಿಂದಲೂ ಕೂಡಿದ ಸಂಗೀತವೋ ಎಂಬಂತೆ ದುಂಬಿಗಳ ಝೇಂಕಾರವು ಕಪಿಗಳ ಕಂಠಸ್ವರದಿಂದಲೂ ಗುಡುಗಿನ ಧ್ವನಿಯಿಂದಲೂ ಕೂಡಿ ಒಪ್ಪುತ್ತಿವೆ. ತಮ್ಮ ಸ್ಥಾನಗಳಲ್ಲಿ ಮಲಗಿರುವ ಕಪಿಗಳು ಗುಡುಗಿನ ಧ್ವನಿಯಿಂದೆದ್ದು ನಿದ್ರೆಯನ್ನು ಬಿಟ್ಟು ಮಳೆಯಲ್ಲಿ ನೆನೆದು ಕೂಗಿಕೊಳ್ಳುತ್ತಿವೆ. ಆನೆಗಳು ಮದದಿಂದ ಧ್ವನಿಗೈಯುತ್ತಿರಲು ನವಿಲುಗಳು ವೃಕ್ಷಗಳಲ್ಲಿ ಮನೋಹರವಾಗಿ ಸಂಚರಿಸುತ್ತಿವೆ. ಕೆರೆಗಳೂ ನದಿಗಳೂ ಕೊಳಗಳೂ ಭಾವಿಗಳೂ ತುಂಬಿ ಉದಕಪ್ರವಾಹಗಳಿಂದ ಭೂಮಂಡಲವೆಲ್ಲವೂ ಪರಿಪೂರ್ಣವಾಗಿದೆ. ಮಳೆಯ

ಆರ್ಭಟದೊಡನೆ ಗಾಳಿಯು ಕೋಲಾಹಲವಾಗಿ ಬೀಸುತ್ತಿದೆ. ಎಲ್ಲಿ ನೋಡಿದರೂ ನದಿಗಳು ಉಕ್ಕುತ್ತ ಅಡ್ಡತಿಡ್ಡಾದ ಮಾರ್ಗದಲ್ಲಿ ಹರಿಯುತ್ತಿವೆ. ಅರಸರು ಮನುಷ್ಯರಿಂದ ತರಲ್ಪಡುವ ಉದಕಕುಂಭಗಳಿಂದ ಅಭಿಷೇಕಮಾಡಿಸಿಕೊಳ್ಳುವಂತೆ, ಪರ್ವತಗಳು ದೇವತೆಗಳಿಂದ ಮೇಘಗಳೆಂಬ ಉದಕಕುಂಭಗಳಿಂದ ಅಭಿಷೇಕಮಾಡಲ್ಪಡುತ್ತಿವೆಯೊ ಎಂಬಂತೆ ಒಪ್ಪುತ್ತಿವೆ. ಮೇಘಮಂಡಲದಿಂದ ಆಚ್ಛಾದಿತನಾಗಿ ಅಂತರಿಕ್ಷದಲ್ಲಿ ಸೂರ್ಯನು ಕಾಣಿಸನು. ಪರ್ವತದ ತಪ್ಪಲುಗಳ ಕೋಡುಗಲ್ಲುಗಳ ಕಲ್ಲರೆಗಳ ಮೇಲೆ ಬೀಳುವ ವಜ್ರರೋದಕಗಳು ಆ ಪರ್ವತಕ್ಕೆ ಅಲಂಕರಿಸಲ್ಪಟ್ಟ ಮುತ್ತಿನ ಸರಗಳಂತೆ ಒಪ್ಪುತ್ತಿವೆ. ಈಗ ಸೂರ್ಯಾಸ್ತಮಯಸಮಯವನ್ನು ತಮ್ಮ ಗೂಡುಗಳನ್ನು ಸೇರುತ್ತಿರುವ ಪಕ್ಷಿಗಳಿಂದಲೂ ಕಮಲಗಳಿಂದಲೂ ವಿಕಸಿತವಾಗುವ ಇರುವಂತಿಗೆಗಳಿಂದಲೂ ತಿಳಿಯಬಹುದಾಗಿದೆ. ಲಕ್ಷ್ಮಣ, ಈ ಭಾದ್ರಪದವು ಸಾಮಶಾಖಾಧ್ಯಾಯಿಗಳಾದ ಬ್ರಾಹ್ಮಣರಿಗೆ ಸಾಮಗಾನಮಾಡುವುದಕ್ಕೆ ಸಮಯವಾಗಿದೆ. ಈಗ ಭರತನು ಸಮಸ್ತ ಸಾಮಗ್ರಿಗಳನ್ನು ಸಂಪಾದಿಸಿಕೊಂಡು ಸ್ವಸ್ಥಚಿತ್ತನಾಗಿರುವನು. ಎಲೈ ಲಕ್ಷ್ಮಣ, ಈ ಸಮಯದಲ್ಲಿ ಸರಯೂನದಿಯು ಪ್ರವಾಹ ಉಬ್ಬಿ ಮೊರೆಯುತ್ತಿದ್ದರೆ ಅಯೋಧ್ಯಾಪಟ್ಟಣವು ನನ್ನ ಬರವನ್ನು ನೋಡುತ್ತ ಕೂಗುತ್ತಿದೆಯೋ ಎಂಬಂತೆ ಒಪ್ಪುತ್ತಿರಬಹುದು. ಈ ಸಮಯದಲ್ಲಿ ಶತ್ರುವನ್ನು ಜಯಿಸಿ ರಾಜ್ಯಾಧಿಪತ್ಯವನ್ನು ವಹಿಸಿಕೊಂಡು ತನ್ನ ಸ್ತ್ರೀಸಮೇತನಾಗಿರುವ ಸುಗ್ರೀವನು ಹರ್ಷದಿಂದ ಸುಖಿಸಿಕೊಂಡಿರುವನು. ಲಕ್ಷ್ಮಣ, ಮೊದಲು ರಾಜ್ಯಭ್ರಷ್ಟನಾಗಿ ಆಮೇಲೆ ಸೀತಾರಹಿತನಾದ ನಾನು ಪ್ರವಾಹದಿಂದ ಕೊರೆದುಹೋದ ನದಿಯ ತಡಿಯಂತೆ ಕುಸಿದುಹೋಗುತ್ತಿದ್ದೇನೆ. ನನಗೆ ಸೀತಾವಿಯೋಗದಿಂದುಂಟಾದ ದುಃಖದಿಂದ ನಮ್ಮ ಶತ್ರುವಾದ ರಾವಣನು ಅಸಾಧ್ಯನೆಂದು ತೋರುತ್ತಿದೆ. ಲಕ್ಷ್ಮಣ, ಸಂಚರಿಸುವುದಕ್ಕೆ ಶಕ್ಯವಲ್ಲದ ಈ ಮಾರ್ಗಗಳನ್ನು ನೋಡು. ಶರಣಾಗತನಾದ ಸುಗ್ರೀವನನ್ನು ನಿಂದಿಸುವುದಕ್ಕೆ ಅವಕಾಶವಿಲ್ಲ ಬಹುಕಾಲ ಸ್ತ್ರೀವಿಯೋಗದಿಂದ ನೊಂದು ಈಗ ಆಕೆಯೊಡನೆ ಕೂಡಿರುವ ಸುಗ್ರೀವನನ್ನು ನನ್ನ ಕಾರ್ಯನಿಮಿತ್ತವಾಗಿ ನಿಷ್ಠುರವಾಗಿ ನುಡಿಯಲು ಮನಬಾರದು. ಆತನು ಈ ವರ್ಷಾಕಾಲದಲ್ಲಿ ಸುಖವಾಗಿದ್ದು ಶರತ್ಕಾಲವು ಬಂದ ಮೇಲೆ ನಾವು ಮಾಡಿದ ಉಪಕಾರವನ್ನು ಮರೆಯದೆ ನಮ್ಮ ಕಾರ್ಯವನ್ನು ಮಾಡುವನು ಕೃತಜ್ಞನಾದ ಪುರುಷನು ಮಾಡಿದ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡದಿರನು !" ಎಂದು ನುಡಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಕೈಮುಗಿದುಕೊಂಡು ತನ್ನ ವಿನಯಗುಣಸಂಪತ್ತಿಯನ್ನು ತೋರಿಸುತ್ತ ಶ್ರೀರಾಮನನ್ನು ಕುರಿತು "ಶ್ರೀರಾಮ, ನೀನು ಹೇಳಿದ್ದೆಲ್ಲವೂ ಯಥಾರ್ಥವು. ಸುಗ್ರೀವನು ಶತ್ರುಗಳನ್ನು ನಿಗ್ರಹಿಸುವುದರಲ್ಲಿ ಕಾಲವಿಳಂಬವನ್ನು ಮಾಡುವವನಲ್ಲ. ನೀನು ಈ ವರ್ಷಾಕಾಲ ಕಳೆದು ಶರತ್ಕಾಲ ಬರುವವರೆಗೆ ಸಹನೆಯಿಂದಿರು" ಎಂದು ಬಿನ್ನವಿಸಿಕೊಂಡನು.



## ೨೯ ನೆಯ ಅಧ್ಯಾಯ

# ಹನುಮಂತನು ಶ್ರೀರಾಮನ ಕಾರ್ಯವನ್ನು ಮಾಡಬೇಕೆಂದು ಸುಗ್ರೀವನಿಗೆ ಹೇಳಿದ್ದು

ಅತ್ತ ಹನುಮಂತನು ವರ್ಷಾಕಾಲವು ಕಳೆದು ಶರತ್ಕಾಲವು ಬರುತ್ತಿರಲು ಬೆಳದಿಂಗಳಿಂದ ನಿರ್ಮಲವಾಗಿಯೂ ಸಾರಸಪಕ್ಷಿಗಳಿಂದ ಪರಿಪೂರ್ಣವಾಗಿಯೂ ಇರುವ ಆಕಾಶಮಂಡಲವನ್ನು ನೋಡಿದನು. ಆಗ ಸಮಸ್ತ ಇಷ್ಟಾರ್ಥಗಳನ್ನೂ ಮನಸ್ಸಿಗನುಕೂಲರಾದ ಸ್ತ್ರೀಯನ್ನೂ ರಾಜ್ಯವನ್ನೂ ಪಡೆದು ಸ್ತ್ರೀಲೋಲನಾಗಿ ತನ್ನ ಸ್ತ್ರೀಯರೊಡನೆ ರಮಿಸಿಕೊಂಡು ಸಮಸ್ತ ರಾಜ್ಯಭಾರವನ್ನೂ ಮಂತ್ರಿಗಳ ವಶಮಾಡಿ ರಾಜ್ಯಭಾರದ ಚಿಂತೆಯಿಲ್ಲದೆ ಕಾಮುಕನಾಗಿದ್ದ ಸುಗ್ರೀವನನ್ನು ಕುರಿತು ಹೀಗೆಂದನು : " ಸುಗ್ರೀವ, ಕಾಲದೇಶಗಳ ತತ್ತ್ವವಿಚಾರವನ್ನು ಬಲ್ಲ ಶ್ರೀರಾಮನು ಧರ್ಮಜ್ಞನೆಂದು ಹೇಳಿಸಿಕೊಂಡಿದ್ದಾನೆ. ಆತನು ಅಪರಿಮಿತವಾದ ಪ್ರಭಾವವುಳ್ಳವನು ಸದ್ಗುಣಗಳಲ್ಲಿ ಆತನಿಗೆ ಸಮಾನರಾದವರಿಲ್ಲ. ಅವನು ಮೊದಲು ನಿನ್ನ ಕಾರ್ಯವನ್ನು ಸಾಧ್ಯಮಾಡಿಕೊಟ್ಟನು. ನೀನು ವಿಳಂಬವಿಲ್ಲದೆ ಆತನ ಕಾರ್ಯವನ್ನು ಮಾಡಿಕೊಡು ಕಪಿನಾಯಕರನ್ನು ಕರೆಕಳುಹಿಸು. ಕಾಲಾತಿಕ್ರಮವಾದೀತೆಂಬ ಅಂಜಿಕೆಯಿಲ್ಲದಿದ್ದರೆ ಕಾರ್ಯವು ಕೆಡುವುದು ಯಾವುದೊಂದು ಉಪಕಾರವನ್ನು ಮಾಡದವರಿಗೂ ಕೂಡ ಉಪಕಾರಮಾಡುವ ಸ್ವಭಾವವುಳ್ಳವನು ನೀನು. ಹೀಗಿರುವಾಗ ನಿನಗೆ ರಾಜ್ಯವನ್ನೂ ಧನವನ್ನೂ ಕೊಟ್ಟು ಮಹೋಪಕಾರಮಾಡಿರುವ ಶ್ರೀರಾಮನ ವಿಷಯದಲ್ಲಿ ನೀನು ಕೃತಜ್ಞತೆಯನ್ನು ತೋರಿಸಬೇಡವೆ ? ನೀನು ಶ್ರೀರಾಮನಿಗೆ ಪ್ರೀತಿಯನ್ನುಂಟು ಮಾಡಬೇಕೆಂದಿದ್ದರೆ ಯಾವ ಕಾರಣ ಆತನ ಕಾರ್ಯವನ್ನು ಮಾಡದಿದ್ದೀಯೆ ? ಸಮಸ್ತ ದೇವಾಸುರ ನರೋರಗಾದಿಗಳನ್ನೂ ತನ್ನ ಬಾಣಗಳಿಂದ ನಾಶಗೊಳಿಸಲು ಸಮರ್ಥನಾದ ಶ್ರೀರಾಮನು ನಿನ್ನ ಸಹಾಯವನ್ನು ಬಯಸಿಕೊಂಡಿದ್ದಾನೆ ಆತನು ತನ್ನ ಬಾಣಪ್ರಯೋಗದಿಂದ ಶಂಕಾತಂಕವಿಲ್ಲದೆ ನಿನ್ನ ಕಾರ್ಯವನ್ನು ಸಾಧ್ಯಮಾಡಿದನು. 'ಅವನ ಪ್ರಾಣಕಾಂತೆಯಾದ ಸೀತಾದೇವಿಯನ್ನು ಭೂಮಿಯ ಮೇಲಿದ್ದರೂ ಅಂತರಿಕ್ಷಮಾರ್ಗದಲ್ಲಿದ್ದರೂ ಎಲ್ಲೇ ಇದ್ದರೂ ನಾವು ಹುಡುಕಿ ತರಬೇಡವೆ ? ದೇವ ದಾನವ ಗಂಧರ್ವರೇ ಮೊದದಲಾದವರೂ ಆತನಿಗೆ ದ್ರೋಹವನ್ನು ಮಾಡಲಾರರು. ಇನ್ನು ರಾಕ್ಷಸರ ಪಾಡೇನು ? ಸುಗ್ರೀವ, ಮೊದಲು ನಿನಗೆ ಉಪಕಾರವನ್ನು ಮಾಡಿದ ಬಲವಂತನಾದ ಶ್ರೀರಾಮನಿಗೆ ನೀನು ಅವಶ್ಯವಾಗಿ ಪ್ರಿಯವಾದ ಕಾರ್ಯವನ್ನು ಮಾಡು. ಪಾತಾಳಲೋಕದಲ್ಲಿ ಭೂಲೋಕದಲ್ಲಿ ಉದಕಮಧ್ಯದಲ್ಲಿ ಅಂತರಿಕ್ಷಮಾರ್ಗದಲ್ಲಿ—ಎಲ್ಲಿ ಬೇಕಾದರೂ ಅಲ್ಲಿ ನಮಗೆ ಸಂಚಾರವುಂಟು. ನಿನ್ನ ಆಜ್ಞಾಬಲದಿಂದ ನಾವಾರಿಗೂ ಅಂಜೆವು. ನೀನೇಕೆ ನಮಗೆ ಆಜ್ಞಾಪಿಸದಿದ್ದೀಯೆ ? ನಾವು ಮುಂದೆ ಮಾಡತಕ್ಕದೇನು ? " ಎಂದು ಬಿನ್ನವಿಸಿದನು.

ಆ ಮಾತನ್ನು ಕೇಳಿ ಸುಗ್ರೀವನು ಗುಣಸಂಪನ್ನತೆಯಿಂದಲೂ ಸದ್ಬುದ್ಧಿಯಿಂದಲೂ ಕಪಿನಾಯಕನಾದ ನೀಲನನ್ನು ಕರೆದು ' ನೀಲ, ಸಮಸ್ತ ಸೇನಾಪತಿಗಳನ್ನೂ ಕರೆಸಿ ಶೀಘ್ರವಾಗಿ ಸೇನೆಯನ್ನು ಕೂಡಿಸುವುದಕ್ಕೆ ಯತ್ನಮಾಡು. ಗಡಿಗಳಲ್ಲಿರುವ ಕಪಿನಾಯಕರನ್ನು ಕರೆಕಳುಹಿಸು. ಮುಂದಣ ಕಾರ್ಯದೃಷ್ಟಿಯನ್ನು ನೀನು ಚೆನ್ನಾಗಿ ಬಲ್ಲೆ. ಹದಿನೈದು ದಿವಸಗಳೊಳಗಾಗಿ ಯಾವ ಕಪಿನಾಯಕನಾದರೂ ತನ್ನ ಸೇನೆಯನ್ನು ಕೂಡಿಕೊಂಡು ಬರದಿದ್ದರೆ ಆತನಿಗೆ ಶರೀರಾಂತವಾದ

ಆಜ್ಞೆಯನ್ನು ಮಾಡಿಸುವೆನು. ನೀನು ಹಿರಿಯರಾಗಿ ಕಾರ್ಯಜ್ಞರಾದ ಕಪಿನಾಯಕರನ್ನು ಕರೆಯಿಸು" ಎಂದು ಹೇಳಿ ಆಸ್ಥಾನಮಂಟಪದಿಂದ ಅರಮನೆಗೆ ಹೋದನು.

೩೦ ನೆಯ ಅಧ್ಯಾಯ

## ಶರತ್ಕಾಲದ ವರ್ಣನೆ; ಶ್ರೀರಾಮನು ಸುಗ್ರೀವನ ಮೇಲೆ ಕೋಪಿಸಿದ್ದು

ಇತ್ತ ಶ್ರೀರಾಮನು ವರ್ಷಾಕಾಲವನ್ನು ಕಳೆದು ಶೋಕಪಡುತ್ತ ನಿರ್ಮಲವಾದ ಚಂದ್ರಮಂಡಲವನ್ನೂ ಬಿಳುಪಾದ ಮೇಘಮಂಡಲವನ್ನೂ ಬೆಳದಿಂಗಳಿಂದ ಬಿಳುಪಾದ ಆಕಾಶವನ್ನೂ ನೋಡಿದನು. ಸುಗ್ರೀವನು ಕಾಮಾತುರದಿಂದ ಸ್ತ್ರೀಲೋಲನಾಗಿ ಅಂತಃಪುರದಲ್ಲಿರುವುದನ್ನೂ ತಾನು ಸೀತಾದೇವಿಯ ವಿಯೋಗದುಃಖದಿಂದ ಕಷ್ಟಪಡುತ್ತಿರುವುದನ್ನೂ ನೆನೆಸಿಕೊಂಡನು. ಸುಗ್ರೀವನು ತನಗೆ ಹೇಳಿದ್ದ ಸಂಕೇತಕಾಲವೂ ಕಳೆದುಹೋಯಿತು. ಇದೆಲ್ಲವನ್ನೂ ನೋಡಿ ರಾಮನಿಗೆ ತಡೆಯಲಾರದ ಸಂಕಟವುಂಟಾಯಿತು. ಹಾಗೆಯೇ ಮೂರ್ಛೆಹೋದನು. ಆದರೆ ಒಂದು ಕ್ಷಣದಲ್ಲಿ ಎಚ್ಚತ್ತು ಮಿಂಚುಗಳಿಲ್ಲದೆ ನಿರ್ಮಲವಾದ ಗಗನವನ್ನು ನೋಡಿ ನಾನಾ ಧಾತುಗಳಿಂದ ಅಲಂಕರಿಸಲ್ಪಟ್ಟ ಮಾಲ್ಯವತ್ಪರ್ವತದ ಕೋಡುಗಲ್ಲುಗಳನ್ನು ನೋಡುತ್ತ ತನ್ನ ಪ್ರಾಣಕಾಂತೆಯಾದ ಸೀತಾದೇವಿಯನ್ನು ನೆನೆದು ಚಿಂತಿಸಿದನು: "ಸಾರಸಪಕ್ಷಿಯ ಧ್ವನಿಯಂತೆ ಮನೋಹರವಾದ ನುಡಿಗಳುಳ್ಳ ಬಾಲಕಿಯಾದ ಜಾನಕಿಯು ನನ್ನ ವಿರಹದುಃಖವನ್ನು ಹೇಗೆ ತಾಳುವಳು! ಸುವರ್ಣದಂತೆ ನಿರ್ಮಲವಾದ ಕಾಂತಿಯುಳ್ಳ ಬಂದುಗೆಯ ಪುಷ್ಪಗಳನ್ನು ನೋಡಿ ನನ್ನನ್ನು ಕಾಣದೆ ಸೀತಾದೇವಿಯು ಹೇಗೆ ತಳಹರಿಸಿಕೊಂಡಿರುವಳು! ಅಮೃತದಂತೆ ಮಧುರವಾದ ನುಡಿಯುಳ್ಳ ಸೀತಾದೇವಿಯು ಮಲಗಿರುವಾಗ ಕಳಹಂಸಪಕ್ಷಿಗಳ ಧ್ವನಿಯುಂಟಾದರೂ ಎಚ್ಚತ್ತು ಏಳುವಳು. ಅಂಥ ಸೀತೆಯು ಈಗ ಯಾವ ಅವಸ್ಥೆಯಲ್ಲಿರುವಳೋ? ತನ್ನ ಸುತ್ತಲೂ ಸಂಚರಿಸುತ್ತಿದ್ದ ಚಕ್ರವಾಕಪಕ್ಷಿಗಳ ಮನೋಹರವಾದ ಧ್ವನಿಯನ್ನು ಕೇಳಿ ಸಂತೋಷಿಸುತ್ತಿದ್ದ, ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಗಳುಳ್ಳ ಸೀತಾದೇವಿಯು ಹೇಗಿದ್ದಾಳೋ? ಈ ಶರತ್ಕಾಲದಲ್ಲಿ ನಿರ್ಮಲೋದಕವುಳ ನದಿಗಳನ್ನೂ ಕೊಳಗಳನ್ನೂ ಭಾವಿಗಳನ್ನೂ ಪುಷ್ಪಿತವಾದ ವನಗಳನ್ನೂ ನೋಡಿ ಹುಲ್ಲೆಯ ಕಣ್ಣಿನಂತೆ ಕಣ್ಣುಗಳುಳ್ಳ ಜಾನಕಿಯನ್ನು ಕಾಣದೆ ಮನಸ್ಸಿಗೆ ವ್ಯಥೆಯಾಗುತ್ತಿದೆ. ಅಕಟಕಟಾ— ಮನ್ಮಥನು ಶರತ್ಕಾಲದಲ್ಲಿ ಮದಿಸಿರುವನು. ಆತನಾದರೂ ನನ್ನ ವಿರಹದಿಂದ ಕಂಗೆಟ್ಟ ಜಾನಕಿಯ ಕೋಮಲವಾದ ಶರೀರವನ್ನು ಕಂಡು ದಯೆಯಿಂದ ಬಾಧಿಸದಿರಬಾರದೆ!" ಎಂದು ಹಂಬಲಿಸಿದನು.

ಆಗ ಫಲಗಳನ್ನು ತರಬೇಕೆಂದು ಹೋದ ಲಕ್ಷ್ಮಣನು ಪರ್ವತದ ತಪ್ಪಲುಗಳಲ್ಲಿ ಸಂಚರಿಸಿ ಮರಗಳಿಂದ ರಸವತ್ತಾದ ಫಲಗಳನ್ನು ಸಂಗ್ರಹಿಸಿಕೊಂಡು ಬಂದು ಸೀತಾದೇವಿಯ ವಿರಹತಾಪದಿಂದ ಮೌನಸ್ಥನಾಗಿ ನಿರ್ಜನಪ್ರದೇಶದಲ್ಲಿ ಏಕಾಕಿಯಾಗಿದ್ದ ಶ್ರೀರಾಮನನ್ನು ಕಂಡು ದುಃಖಿತನಾಗಿ ಆತನನ್ನು ಕುರಿತು ಹೀಗೆಂದನು: "ಶ್ರೀರಾಮ, ಲೋಕದಲ್ಲಿ ಮನುಷ್ಯರು ಧೈರ್ಯಗೆಟ್ಟಮೇಲೇನು ಪ್ರಯೋಜನ? ತನ್ನ ಪರಾಕ್ರಮಕ್ಕೆ ಹಾನಿಬಂದಂತೆ ಚಿಂತಿಸಿ ಪ್ರಯೋಜನವೇನು? ತೊಡಗಿದ ಕಾರ್ಯಕ್ಕೆ ಯತ್ನವನ್ನು ಮಾಡದಿದ್ದರೆ ಪ್ರಯೋಜನವೇನು? ನೀನು ಏಕಾಗ್ರಚಿತ್ತನಾಗಿ ಉತ್ಸಾಹ ಶಕ್ತಿಯೊಡಗೂಡಿ ಕಾಲಕ್ಕೆ ತಕ್ಕ ಮಿತ್ರಸಂಪತ್ತಿಯನ್ನು ಮಾಡಿಕೊಂಡಿದ್ದೀಯೆ. ಅಣ್ಣ, ನಿನ್ನ

ಪ್ರಾಣಕಾಂತೆಯಾದ ಸೀತಾದೇವಿಯು ಒಡೆಯರಿಲ್ಲದವಳೆಂದು ತಿಳಿಯಬೇಡ. ಆ ದೇವಿಯು ಯಾರಿಗೂ ಸಾಧ್ಯವಾದವಳಲ್ಲ. ಲೋಕದಲ್ಲಿ ಎಷ್ಟು ಪರಾಕ್ರಮಿಯಾದರೂ ಅಗ್ನಿಜ್ವಾಲೆಯನ್ನು ಹೊಕ್ಕು ಜೀವಿಸಲಾರನು. ಆ ಮರ್ಯಾದೆಯಲ್ಲಿ ಶತ್ರುಗಳಿಗಸಾಧ್ಯಳಾದ ಸೀತಾದೇವಿಯನ್ನಪಹರಿಸಿ ಜೀವಿಸುವವನಿಲ್ಲ" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಈ ರೀತಿಯಲ್ಲಿ ಹೇಳಿದನು: "ಲಕ್ಷ್ಮಣ, ನೀನು ಹೇಳಿದ ಮಾತು ಹಿತವಾದ ನೀತಿಯೊಡಗೂಡಿದುದು. ಇನ್ನು ಮುಂದೆ ಅವಶ್ಯವಾಗಿ ಸೀತಾದೇವಿಯನ್ನರಸಲು ತಕ್ಕ ಪ್ರಯತ್ನವನ್ನು ಮಾಡಬೇಕು. ಮನುವಂಶದಲ್ಲಿ ಹುಟ್ಟಿದ ರಾಜರು ಕೈಗೊಂಡ ಕಾರ್ಯಕ್ಕೆ ಫಲವಾಗದೆಂಬುದಿಲ್ಲ. ದೇವೇಂದ್ರನು ಮಳೆಗರೆದು ಭೂಮಿಯನ್ನು ತೃಪ್ತಿಪಡಿಸಿ ಬೆಳೆಗಳನ್ನುಂಟುಮಾಡಿ ಕೃತಕೃತ್ಯನಾಗಿ ತನ್ನ ಕಾರ್ಯವನ್ನು ತೀರಿಸಿಕೊಂಡನು. ಮೇಘಗಳು ಗಂಭೀರವಾಗಿ ಗರ್ಜಿಸುತ್ತ ಉದಕಗಳನ್ನು ಭೂಮಿಗೆ ಕರೆದು ಬಳಲಿದವು. ನೀಲವರ್ಣವಾದ ಮೇಘಗಳು ಸಮಸ್ತ ದಿಕ್ಕುಗಳನ್ನೂ ನೀಲವರ್ಣವಾಗಿ ಮಾಡಿ ಮದಾವಸ್ಥೆಯುಳ್ಳ ಆನೆಗಳಂತೆ ಮಂದಗತಿಯಿಂದ ಸಂಚರಿಸುತ್ತಿವೆ. ಮಳೆಯ ಧಾರೆಗಳಿಂದ ತೊಳೆಯಲ್ಪಟ್ಟ ತಪ್ಪಲುಗಳುಳ್ಳ ಪರ್ವತಗಳು ಚಂದ್ರಕಿರಣಗಳಿಂದ ಅನುಲೇಪಿಸಲ್ಪಟ್ಟಂತೆ ಒಪ್ಪುತ್ತಿವೆ. ಲಕ್ಷ್ಮಣ, ಈಗ ಶರತ್ಕಾಲವು ಎಳೆಯ ಬಾಳೆಗಳಲ್ಲಿಯೂ ಚಂದ್ರಸೂರ್ಯನಕ್ಷತ್ರಗಳ ಕಾಂತಿಗಳಲ್ಲಿಯೂ ಕಪಿನಾಯಕರ ನುಡಿ ಸೊಬಗುಗಳಲ್ಲಿಯೂ ತನ್ನ ಕಾಂತಿಯನ್ನು ಭಾಗಮಾಡಿರಿಸಿದಂತೆ ಒಪ್ಪುತ್ತಿದೆ! ಅಲ್ಲಲ್ಲಿ ಹಂಸದಂಪತಿಗಳೂ ಚಕ್ರವಾಕದಂಪತಿಗಳೂ ಜೊತೆಜೊತೆಯಾಗಿ ಸೇರಿ ಪ್ರೀತಿಯಿಂದ ಒಂದಕ್ಕೊಂದು ಇದಿರಾಗಿ ಕುಳಿತು ಕಮಲಧೂಳಿಗಳಿಂದ ತುಂಬಿದ ಗರಿಗಳನ್ನು ಬಿಚ್ಚಿಕೊಂಡು ನದೀತೀರದ ಮರಳು ದಿಣ್ಣೆಗಳ ಮೇಲೆ ಆನಂದದಿಂದ ವಿಹರಿಸುತ್ತಿರುವುವು. ಮದವೇರಿದ ಆನೆಗಳಲ್ಲಿಯೂ ಕೊಬ್ಬಿದ ಎತ್ತುಗಳ ಮಂದೆಯಲ್ಲಿಯೂ ನಿರ್ಮಲೋದಕವುಳ್ಳ ನದಿಗಳಲ್ಲಿಯೂ ಈ ಶರತ್ಕಾಲದ ಸೊಬಗನ್ನು ವಿಭಾಗಿಸಿಟ್ಟಂತಿರುವುದು. ನದಿಗಳ ಉದಕಪ್ರವಾಹವು ತಗ್ಗಿದೆ. ಕಲ್ಹಾರಪುಷ್ಪದಂತೆ ಶೈತ್ಯವಾದ ತಂಗಾಳಿ ಬೀಸುತ್ತಿದೆ. ಮೇಘಾಂಧಕಾರದಿಂದ ಬಿಡಲ್ಪಟ್ಟ ದಿಕ್ಕುಗಳು ಪ್ರಕಾಶಿಸುತ್ತಿವೆ. ಸೂರ್ಯನ ಜ್ವಾಲೆಯಿಂದ ಭೂಮಿಯಲ್ಲಿದ್ದ ಕೆಸರು ಒಣಗಿ ಅಲ್ಲಲ್ಲಿ ಧೂಳು ಏಳುತ್ತಿದೆ. ಅನ್ಯೋನ್ಯ ವೈರವುಳ್ಳ ಅರಸರ ದಂಡಯಾತ್ರೆಗೆ ಸಮಯವು ಬಂದಿದೆ. ಈ ಶರತ್ಕಾಲದಲ್ಲಿ ಮೇವಿನಿಂದ ಉಬ್ಬಿ ಕೊಬ್ಬಿದ ವೃಷಭಗಳು ಧೂಳುಮಸಗಿದ ಶರೀರವುಳ್ಳುವಾಗಿ ಗೋಸಮೂಹಗಳ ಮಧ್ಯದಲ್ಲಿ ಗುಟರುಹಾಕುತ್ತಿವೆ. ಹೆಣ್ಣಾನೆಗಳು ವನದಲ್ಲಿ ಸಂಚರಿಸುತ್ತ ಮನ್ಮಥವಿಕಾರವುಳ್ಳ ತಮ್ಮ ಪತಿಗಳಾದ ಮದ್ದಾನೆಗಳನ್ನು ಹಿಂಬಾಲಿಸುತ್ತಿವೆ. ನವಿಲುಗಳು ತಮಗೆ ಭೂಷಣವಾದ ಗರಿಗಳನ್ನು ಬಿಚ್ಚಲಾರದೆ ಉಡುಗಿಸಿಕೊಂಡು ನದೀತೀರದಲ್ಲಿ ಸಾರಸಪಕ್ಷಿಗಳ ಸಮೂಹದಿಂದ ನಿರಾಕರಿಸಲ್ಪಟ್ಟಂತೆ ಸಂಚರಿಸುತ್ತಿವೆ. ಕಾಡಾನೆಗಳು ಭೂಮಿಗೆ ಭೂಷಣಗಳಾದ ತಾವರೆಕೊಳಗಳಲ್ಲಿರುವ ಕೊಳರ್ವಕ್ಕಿ ಚಕ್ರವಾಕ ಮೊದಲಾದ ಪಕ್ಷಿಗಳನ್ನು ಬೆದರಿಸಿ ಸೊಂಡಿಲುಗಳಿಂದ ಉದಕವನ್ನು ಹುಯ್ದು ಅಪ್ಪಳಿಸಿ ಪಾನ ಮಾಡುತ್ತಿವೆ. ಹಂಸಪಕ್ಷಿಗಳು ಕೆಸರಿಲ್ಲದ ಮಳಲೊಟ್ಟುಗಳಿಂದಲೂ ಸಾರಸಪಕ್ಷಿಗಳ ಮನೋಹರವಾದ ಧ್ವನಿಗಳಿಂದಲೂ ಮೆರೆಯುತ್ತಿರುವ ನದಿಗಳಲ್ಲಿ ಹರ್ಷದಿಂದ ಈಜಾಡುತ್ತಿವೆ. ಈಗ ನದಿಗಳಲ್ಲಿಯೂ ಮೇಘಗಳಲ್ಲಿಯೂ ಗಾಳಿಯಲ್ಲಿಯೂ ನವಿಲುಗಳಲ್ಲಿಯೂ ಮೊದಲಿದ್ದ ಸದ್ದು ಅಡಗಿಹೋಗಿದೆ. ಕಪಿಗಳಲ್ಲಿಯೂ ಉತ್ಸಾಹವಡಗಿ ಅವುಗಳ ಧ್ವನಿಯು ಕುಗ್ಗಿಹೋಗಿರುವುದು. ಸರ್ಪಗಳು ಮಳೆಗಾಲದಲ್ಲಿ ಕುಂಡಲಾಕಾರವಾಗಿ ಸುತ್ತಿಕೊಂಡು ಹೊರಗೆ ಬರದೆ ಕ್ಷುಧೆಯಿಂದ ಕಂಗೆಟ್ಟಿದ್ದು ಈಗ ತಮ್ಮ ಬಿಲಗಳಿಂದ ಮೆಲ್ಲಗೆ ಹೊರಹೊರಡುತ್ತಿವೆ. ಚಂದ್ರಮಂಡಲದಿಂದ ಪ್ರಕಾಶಮಾನವಾಗಿ

ನಕ್ಷತ್ರಗಳೆಂಬ ಕಣ್ಣುಗಳನ್ನು ಪಡೆದು ಬೆಳದಿಂಗಳೆಂಬ ಶ್ವೇತವಸ್ತ್ರವುಳ್ಳ ರಾತ್ರಿಯು ಬಿಳಿಯ ಬಟ್ಟೆಯುಟ್ಟ ಸ್ತ್ರೀಯಂತೆ ಒಪ್ಪುತ್ತಿದೆ. ಚೆನ್ನಾಗಿ ಬೆಳೆದ ಭತ್ತದ ತೆನೆಗಳನ್ನು ಭಕ್ಷಣಮಾಡಿ ಹರ್ಷಗೊಂಡ ಸಾರಸಪಕ್ಷಿಗಳ ಸಮೂಹವು ಅಂತರಿಕ್ಷಮಾರ್ಗದಲ್ಲಿ ಹೋಗುತ್ತ ಬಿರುಗಾಳಿಯಿಂದ ಚದರಿಸಲ್ಪಟ್ಟು ಆಕಾಶಕ್ಕೆ ಅಲಂಕರಿಸಿದ ಪುಷ್ಪಸರವೋ ಎಂಬಂತೆ ಒಪ್ಪುತ್ತಿದೆ. ವಿಕಸಿತವಾದ ನೈದಿಲೆ ಪುಷ್ಪಗಳುಳ್ಳ ಮಡುಗಳು ಮೇಘೋದಯವಿಲ್ಲದೆ ಪೂರ್ಣಚಂದ್ರನನ್ನು ಬಳಸಿರುವ ನಕ್ಷತ್ರಗಳಿಂದ ಇಟ್ಟಣಿಸಿದ ಅಂತರಿಕ್ಷಮಾರ್ಗದಂತೆ ಒಪ್ಪುತ್ತಿವೆ. ಪುಷ್ಪಿತವಾದ ವನದಲ್ಲಿ ಸಂಚಾರಮಾಡುತ್ತ ಮಕರಂದಪಾನದಲ್ಲಿ ಲೋಲುಪ್ತಿಯುಳ್ಳ ಹೆಣ್ಣುದುಂಬಿಗಳೊಡಗೂಡಿ ಗಂಡುದುಂಬಿಗಳು ಅತ್ಯಂತ ಸಂತೋಷಯುಕ್ತವಾಗಿ ಮದಿಸಿ ತಾವರೆಯ ಪುಷ್ಪದಳಗಳಿಂದ ಕೆದರಲ್ಪಟ್ಟ ಪರಿಮಳಯುಕ್ತವಾದ ತಂಗಾಳಿಯನ್ನು ಹಿಂಬಾಲಿಸಿ ಹೋಗುತ್ತಿವೆ. ನಿರ್ಮಲವಾದ ಉದಕ, ವಿಕಸಿತವಾದ ನೈದಿಲೆ, ಕ್ರೌಂಚಪಕ್ಷಿಗಳ ಧ್ವನಿ, ಮಂದಗತಿಯುಳ್ಳ ವಾಯು, ನಿರ್ಮಲವಾದ ಚಂದ್ರಮಂಡಲ—ಇವೆಲ್ಲವೂ ಶರತ್ಕಾಲದ ಸಮಯವನ್ನು ಸೂಚಿಸುತ್ತಿವೆ. ಚಕ್ರವಾಕಪಕ್ಷಿಗಳಿಂದಲೂ ಪಾಚಿಗಳಿಂದಲೂ ದುಕೂಲದಂತಿರುವ ನೊದೆಯ ಹೂಗಳಿಂದಲೂ ಶೋಭಿಸುವ ಈ ನದೀಮುಖಗಳು ಗೋರೋಚನ ತಿಲಕದಿಂದಲೂ ಮಕರಿಕಾದಿ ಪತ್ರರಚನೆಯಿಂದಲೂ ಒಪ್ಪುತ್ತಿರುವ ಸ್ತ್ರೀಯರ ಮುಖದಂತೆ ಕಾಣುವುವು. ಲಕ್ಷ್ಮಣ, ದಂಡಯಾತ್ರೆಹೊರಡುವ ಅರಸರಿಗೆ ಇದೇ ಪ್ರಥಮಯಾತ್ರಾಕಾಲ. ಇನ್ನೂ ಸುಗ್ರೀವನನ್ನು ಕಾಣೆನು. ಕಳೆದ ವರ್ಷಾಕಾಲದಲ್ಲಿ ಆತನು ಮಾಡಿರುವ ಸನ್ನಾಹವನ್ನೂ ಕಾಣೆನು. ಕಳೆದ ನಾಲ್ಕು ತಿಂಗಳುಗಳನ್ನು ನಾನು ವಿರಹಶೋಕದಿಂದ ನೂರು ವರುಷಗಳನ್ನು ಕಳೆದಂತೆ ಕಳೆದೆನು. ಚಕ್ರವಾಕಪಕ್ಷಿಯು ವನಮಧ್ಯದಲ್ಲಿ ತನ್ನ ಪತಿಯೊಡನೆ ವಿನೋದದಿಂದ ಸಂಚರಿಸುವಂತೆ ನನ್ನ ಪ್ರಾಣಕಾಂತೆಯಾದ ಸೀತಾದೇವಿಯು ಈ ವಿಷಮವಾದ ದಂಡಕಾರಣ್ಯದಲ್ಲಿ ನನ್ನನ್ನು ಎಡೆಬಿಡದೆ ಹಿಂಬಾಲಿಸುತ್ತಿದ್ದಳು. ರಾಜ್ಯಭ್ರಷ್ಟನಾಗಿ ದಿಕ್ಕಿಲ್ಲದೆ ಅಲೆಯುತ್ತಿರುವುದನ್ನೂ, ರಾವಣನಿಂದ ಭಂಗಹೊಂದಿರುವುದನ್ನೂ, ಮನೆಮಠಗಳನ್ನೂ ಹೆಂಡತಿಯನ್ನೂ ಕಳೆದುಕೊಂಡು ಇಷ್ಟು ದೂರದೇಶಕ್ಕೆ ಹೊರಟುಬಂದಿರುವುದನ್ನೂ ನೋಡಿ ದುರಾತ್ಮನಾದ ಸುಗ್ರೀವನು ನನ್ನನ್ನು ತುಚ್ಛಭಾವದಿಂದ ಕಾಣುತ್ತಿರುವಂತಿದೆ. ನಾನು ದೈನ್ಯದಿಂದ ಆತನಲ್ಲಿಗೆ ಹೋಗಿ 'ನೀನೇ ಗತಿ' ಎಂದು ಮರೆಹೊಕ್ಕುದನ್ನು ಕಂಡು ಅವನು ನನ್ನಲ್ಲಿ ಅಲಕ್ಷ್ಯ ತೋರಿದನು. ಲಕ್ಷ್ಮಣ, ಕಿಷ್ಕಿಂಧಾಪಟ್ಟಣಕ್ಕೆ ಹೋಗು. ಸುಗ್ರೀವನು ತನ್ನ ಮೂರ್ಖತನದಿಂದ ಸ್ತ್ರೀಲೋಲನಾಗಿರುವನು. ಉಪಕಾರವನ್ನು ಮಾಡಿದವರಿಗೆ ಯಾವನು ಪ್ರತ್ಯುಪಕಾರವನ್ನು ಮಾಡುವುದಾಗಿ ಮಾತು ಕೊಟ್ಟು ಆ ಮಾತಿಗೆ ತಪ್ಪುವನೋ ಆತನು ಪುರುಷಾಧಮನು. ಲೋಕಸಮ್ಮತವಾದ ಕಾರ್ಯವನ್ನಾದರೂ ಲೋಕವಿರುದ್ಧವಾದ ಕಾರ್ಯವನ್ನಾದರೂ ಮಾಡಿಕೊಡುವುದಾಗಿ ಮಾತು ಕೊಟ್ಟಬಳಿಕ ಪರಾಕ್ರಮಿಯಾದವನು ಆ ಮಾತಿಗೆ ತಪ್ಪಬಾರದು. ಉಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರ ಮಾಡದವನ ಶರೀರವನ್ನು ಮಾಂಸಾಹಾರಿಗಳಾದ ನರಿಗಳೇ ಮೊದಲಾದವೂ ಮುಟ್ಟವು. ಮಿಂಚಿನ ಹೊಳೆಯಂತೆ ಹೊಳೆಯುವ ಚಿನ್ನದ ಕಟ್ಟುಗಳುಳ್ಳ ನನ್ನ ಬಿಲ್ಲನ್ನು ನೋಡಬೇಕೆಂದು ಸುಗ್ರೀವನಿಗೆ ಇಚ್ಛೆಯುಂಟಾಗಿರಬೇಕು. ರಣರಂಗದಲ್ಲಿ ದೇವೇಂದ್ರನ ವಜ್ರಾಯುಧದಂತೆ ಆರ್ಭಟಿಸುವ ನನ್ನ ಧನುಸ್ಸಿನ ಧ್ವನಿಯನ್ನು ಸುಗ್ರೀವನು ಕೇಳಲಿಚ್ಛಿಸಿದ್ದಾನೋ ಏನೋ ತಿಳಿಯಲಿಲ್ಲ. ಪರಾಕ್ರಮಿಯಾದ ನಿನ್ನ ಸಹಾಯವಿರುವಾಗ ನನ್ನ ಕಾರ್ಯಕ್ಕೆ ಯೋಚನೆಯೇನು ? ಲಕ್ಷ್ಮಣ, ಯಾವ ಕಾರ್ಯನಿಮಿತ್ತವಾಗಿ ಸುಗ್ರೀವನಿಗೆ ಸಹಾಯವನ್ನು ಮಾಡಿದೆವೋ ಆ ಕಾರ್ಯದ ಮಹತ್ತ್ವವನ್ನು ಆತನು ಅರಿಯದೆ ಹೋದನು. ವರ್ಷಾಕಾಲದ ನಾಲ್ಕುತಿಂಗಳು ಕಳೆದಮೇಲೆ ನಮ್ಮ

ಕಾರ್ಯವನ್ನು ಆಗುಮಾಡಿಕೊಡುವುದಾಗಿ ಮಾತುಕೊಟ್ಟು ನಾಲ್ಕುತಿಂಗಳು ಕಳೆದಮೇಲೂ ಸ್ತ್ರೀಲೋಲನಾಗಿ ಏನೂ ಮಾಡದಿದ್ದಾನೆ. ಸುಗ್ರೀವನು ತನ್ನ ಪ್ರಧಾನರನ್ನೂ ಪರಿವಾರವನ್ನೂ ಕೂಡಿಕೊಂಡು ನನ್ನಲ್ಲಿ ದಯೆದೋರದೆ ಹೋದನು. ನೀನು ಸುಗ್ರೀವನೊಡನೆ ನನ್ನ ರೋಷದ ಪರಿಸ್ಥಿತಿಯನ್ನು ತಿಳಿಸಿಹೇಳು. ನನ್ನ ಬಾಣದಿಂದ ವಾಲಿಯೊಬ್ಬನೇ ಹತನಾದರೂ ಸ್ವರ್ಗಸ್ಥನಾದ ಆತನ ಮಾರ್ಗವು ಸಂಕುಚಿತವಾಗಿಲ್ಲವೆಂದು ತಿಳಿಸು. ಕಾಲೋಚಿತವನ್ನರಿತು ವಾಲಿಯು ಹೋದ ಮಾರ್ಗಕ್ಕೆ ಹೋಗದೆ ತಾನು ಹೇಳಿದಂತೆ ನಡೆದುಕೊಳ್ಳಬೇಕೆಂದೂ ಹಾಗಿಲ್ಲದಿದ್ದರೆ ಆತನನ್ನೂ ಆತನ ಬಂಧುಗಳನ್ನೂ ಸಂಹರಿಸುವೆನೆಂದೂ ಹೇಳು. ಲಕ್ಷ್ಮಣ, ನೀನು ಕಾಲೋಚಿತವನ್ನರಿತು ಕಾರ್ಯಕ್ಕೆ ಹಿತವಾದ ಮಾತುಗಳೆಲ್ಲವನ್ನೂ ಹೇಳು. ನನಗೆ ಆತನು ಕೊಟ್ಟ ಮಾತನ್ನು ಜ್ಞಾಪಿಸಿಕೊಡು. ನನ್ನ ಬಾಣಗಳಿಂದ ಹತನಾಗಿ ಯಮಲೋಕದಲ್ಲಿರುವ ವಾಲಿಯನ್ನು ನೋಡುವುದಕ್ಕೆ ಹೋಗಲು ತಕ್ಕಯೋಚನೆಯನ್ನು ಮಾಡದಿರುವ ಹಾಗೂ ಹೇಳು " ಎಂದನು.



೩೧ ನೆಯ ಅಧ್ಯಾಯ

## ಲಕ್ಷ್ಮಣನು ಸುಗ್ರೀವನ ಬಳಿಗೆ ಹೋದದ್ದು

ಈ ಪ್ರಕಾರ ಸೀತಾದೇವಿಯ ವಿರಹಶೋಕದಿಂದ ಕಂಗೆಟ್ಟು ಕೋಪಕೆರಳಿ ಸುಗ್ರೀವನ ಮೇಲೆ ಕೋಪಿಸಿಕೊಂಡು ನುಡಿಯುತ್ತಿದ್ದ ಶ್ರೀರಾಮನನ್ನು ಕುರಿತು ಬಲಾಧಿಕನಾದ ಲಕ್ಷ್ಮಣನು ಹೀಗೆಂದನು : " ಅಣ್ಣ, ಸುಗ್ರೀವನು ಸನ್ಮಾರ್ಗದಲ್ಲಿರುವಂತೆ ಕಾಣಲಿಲ್ಲ. ತನ್ನ ಕಾರ್ಯವು ಫಲಿಸಿತೆಂದು ನಮ್ಮನ್ನು ಲೆಕ್ಕಿಸದಿರುವನು. ಆತನು ಬುದ್ಧಿವಂತನಾಗಿ ವಾನರರಾಜ್ಯ ಸುಖವನ್ನನುಭವಿಸಲಾರನು. ಅಜ್ಞಾನದಿಂದ ಸ್ತ್ರೀಲೋಲನಾಗಿದ್ದಾನೆ. ನಿನ್ನ ಅಪ್ಪಣೆಯಿಂದ ನಾನು ಆತನಿಗೆ ತಕ್ಕ ಬುದ್ಧಿಯನ್ನು ಕಲಿಸುತ್ತೇನೆ. ಅವನೂ ಸ್ವರ್ಗಸ್ಥನಾದ ವಾಲಿಯನ್ನು ಹಿಂಬಾಲಿಸಲಿ. ದುರ್ಗುಣವುಳ್ಳ ಸುಗ್ರೀವನಿಗೆ ರಾಜ್ಯಾಧಿಪತ್ಯವನ್ನು ಕೊಡುವುದು ಯೋಗ್ಯವಲ್ಲ. ನನಗೆ ಕೋಪೋದ್ರೇಕವುಂಟಾಗಿದೆ. ಇಂದೇ ಸುಗ್ರೀವನನ್ನು ಕೊಲ್ಲುತ್ತೇನೆ. ವಾಲಿಯ ಮಗನಾದ ಅಂಗದನು ಸಮಸ್ತ ಕಪಿನಾಯಕರನ್ನೂ ಕೂಡಿಕೊಂಡು ಸೀತಾದೇವಿಯನ್ನರಸಿ ತರುವನು " ಎಂದು ಬಿನ್ನವಿಸಿ ಅತ್ಯಂತ ಕೋಪಯುಕ್ತನಾಗಿ ಧನುರ್ಬಾಣಗಳನ್ನು ಹಿಡಿದು ಹೊರಟನು.

ಅದನ್ನು ನೋಡಿ ಸಮಸ್ತ ಧರ್ಮರಹಸ್ಯವನ್ನು ಬಲ್ಲ ಶ್ರೀರಾಮನು ಸಮಾಧಾನ ಹೇಳುತ್ತ " ಎಲೈ ಲಕ್ಷ್ಮಣ, ಲೋಕದಲ್ಲಿ ನಿನ್ನಂಥ ಪರಾಕ್ರಮಿಗಳಿಲ್ಲ. ಈ ರೀತಿಯಲ್ಲಿ ನೀನು ಕೋಪಮಾಡ ಸಲ್ಲದು. ಕೋಪವನ್ನು ಧೈರ್ಯಗುಣದಿಂದ ಮೆಟ್ಟುವವನೇ ಪುರುಷೋತ್ತಮನೆನಿಸಿಕೊಳ್ಳುವನು. ಸದ್ವರ್ತನವುಳ್ಳ ನೀನು ಇಂಥ ಕೋಪವನ್ನು ಮಾಡಬೇಡ. ಸುಗ್ರೀವನಲ್ಲಿ ಮೊದಲಿನಂತೆ ಸ್ನೇಹದಿಂದಲೂ ವಿಶ್ವಾಸದಿಂದಲೂ ಕಾಲವು ಮೀರುತ್ತ ಬಂದಿತೆಂಬುದನ್ನು ತಿಳಿಸು " ಎಂದು ಹೇಳಿದನು.

ಆ ಮಾತನ್ನು ಕೇಳಿ ಪುರುಷೋತ್ತಮನಾದ ಲಕ್ಷ್ಮಣನು ಶೋಕಾಗ್ನಿಯಿಂದ ಪರಿತಪಿಸುತ್ತ ಇಂದ್ರಚಾಪಕ್ಕೆ ಸರಿಮಿಗಿಲೆನಿಸಿಕೊಳ್ಳುವ ಪ್ರಳಯಕಾಲದ ಯಮನಂತೆ ಭಯಂಕರವಾಗಿ ತೋರುವ ಬಿಲ್ಲನ್ನು ತೆಗೆದುಕೊಂಡು ಚಂಡವಾಯುವಿನ ವೇಗದಲ್ಲಿ ಹೊರಟನು. ಅವನು ಮರಗಳನ್ನೂ

ಕಲ್ಲರೆಗಳನ್ನೂ ತನ್ನ ಗಮನವೇಗದಿಂದ ಮದ್ದಾನೆಯಂತೆ ಈಡಾಡುತ್ತ ಸುಗ್ರೀವನಿಂದ ಪರಿಪಾಲಿಸಲ್ಪಟ್ಟ ಕಿಷ್ಕಿಂಧಾಪಟ್ಟಣವನ್ನು ಸೇರಿದನು. ಆ ಪಟ್ಟಣದ ಬಳಿ ಸಂಚರಿಸುತ್ತಿದ್ದ ಭೀಮಬಲರಾದ ಕಪಿಗಳನ್ನು ಕಂಡನು. ಆ ಕಪಿಗಳು ಪರಾಕ್ರಮಿಯಾದ ಲಕ್ಷ್ಮಣನನ್ನು ಕಂಡು ಪರ್ವತ ವನಾಂತರಗಳಲ್ಲಿದ್ದ ದೊಡ್ಡ ಮರಗಳನ್ನೂ ಕಲ್ಲರೆಗಳನ್ನೂ ಕೋಡುಗಲ್ಲುಗಳನ್ನೂ ತೆಗೆದುಕೊಂಡು ಯುದ್ಧಸನ್ನದ್ಧರಾಗಿ ಬಂದರು. ಲಕ್ಷ್ಮಣನು ತನ್ನೊಡನೆ ಆ ಕಪಿಗಳು ಯುದ್ಧಕ್ಕೆ ಬಂದದ್ದನ್ನು ಕಂಡು ಒಣಕಾಷ್ಠಗಳಲ್ಲಿ ಅಗ್ನಿಜ್ವಾಲೆಯು ಹೊಳೆಯುವಂತೆ ಅತ್ಯಂತ ವೆಗ್ಗಳವಾಗಿ ಕೋಪಯುಕ್ತನಾದನು. ಪ್ರಳಯಕಾಲದ ಮೃತ್ಯುವಿನಂತೆ ಭಯಂಕರನಾದ ಲಕ್ಷ್ಮಣನನ್ನು ಕಂಡು ಆ ಕಪಿಗಳು ದಿಕ್ಕುದಿಕ್ಕಿಗೆ ಓಡಿಹೋದವು. ಕೆಲವು ಕಪಿಗಳು ಸುಗ್ರೀವನ ಅರಮನೆಗೆ ಹೋಗಿ ಲಕ್ಷ್ಮಣನು ಮಹಾಕೋಪದಿಂದ ಬಂದಿದ್ದ ವೃತ್ತಾಂತವನ್ನು ತಿಳುಹಿಸಲು ಕಾಮುಕನಾಗಿ ತಾರಾದೇವಿ ಯೊಡಗೂಡಿದ್ದ ಸುಗ್ರೀವನು ತನ್ನ ಪ್ರಧಾನಿಗಳನ್ನು ಕರೆದು ಲಕ್ಷ್ಮಣನು ಬಂದ ಕಾರ್ಯವನ್ನು ವಿಚಾರಿಸಬೇಕೆಂದು ಹೇಳಿಕಳಿಸಿದನು. ಆ ಪ್ರಧಾನಿಗಳಿಂದ ಆಜ್ಞಪ್ತರಾದ ಆ ಕಪಿನಾಯಕರು ಕಿಷ್ಕಿಂಧಾಪಟ್ಟಣದಿಂದ ಹೊರಟುಬಂದರು. ಅವರಲ್ಲಿ ಕೆಲವರು ನೂರು ಆನೆಗಳ ಬಲವುಳ್ಳವರು. ಕೆಲವರು ಸಾವಿರ ಆನೆಗಳ ಸತ್ತ್ವವುಳ್ಳವರು. ಅನೇಕ ಕಪಿಗಳು ಮರಗಳನ್ನು ಬೇರುಸಹಿತವಾಗಿ ಕಿತ್ತುಕೊಂಡು ಕೋಟೆಯ ಹೊರವಲಯದಲ್ಲಿ ನಿಂತರು. ಅವರನ್ನು ಕಂಡು ಲಕ್ಷ್ಮಣನು ಕೋಪಯುಕ್ತನಾಗಿ ಸುಗ್ರೀವನ ಸಾಹಸವನ್ನೂ ಶ್ರೀರಾಮನ ಕಾರ್ಯಗತಿಯನ್ನೂ ವಿಚಾರಿಸಿ ಮುಂದಕ್ಕೆ ನಡೆಯುತ್ತ ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡನು: ಬಾಣದ ಅಲಗೆಂಬ ನಾಲಿಗೆಯುಳ್ಳವನಾಗಿ ಬಿಲ್ಲೆಂಬ ದೇಹವುಳ್ಳವನಾಗಿ ಪರಾಕ್ರಮವೆಂಬ ವಿಷವುಳ್ಳವನಾಗಿ ಐದುಹೆಡೆಯ ಸರ್ಪದಂತಾದನು. ಪ್ರಳಯಕಾಲಾಗ್ನಿಯಂತೆ ಪ್ರಜ್ವಲಿಸುತ್ತ ಕೋಪಕೆರಳಿದ ಮದ್ದಾನೆಯಂತಿದ್ದ ಲಕ್ಷ್ಮಣನನ್ನು ಅಂಗದಕುಮಾರನು ಬಂದು ಕಾಣಿಸಿಕೊಂಡನು. ಅವನು ಲಕ್ಷ್ಮಣನ ಕೋಪಾಟೋಪವನ್ನು ಕಂಡು ಭಯಪಟ್ಟು ಕಂಗೆಟ್ಟು ನಿಂತನು. ಆಗ ಲಕ್ಷ್ಮಣನು "ಅಂಗದ, ನಿನ್ನ ಚಿಕ್ಕಪ್ಪನಾದ ಸುಗ್ರೀವನೊಡನೆ 'ಶ್ರೀರಾಮನ ತಮ್ಮನಾದ ಲಕ್ಷ್ಮಣನು, ವಿರಹಶೋಕದಿಂದ ಕಂಗೆಟ್ಟಿರುವ ಶ್ರೀರಾಮನ ದುಃಖವನ್ನು ಕಂಡು ತಾಳಲಾರದೆ ಬಂದು ಹೊರಬಾಗಿಲಲ್ಲಿರುವನು. ಆತನ ಮಾತು ನಿನಗೆ ಪ್ರಿಯವಾದ ಪಕ್ಷದಲ್ಲಿ ಶೀಘ್ರವಾಗಿ ಹೊರಟು ಬಾ' ಎಂದು ತಿಳಿಸು" ಎಂಬುದಾಗಿ ಹೇಳಿದನು.

ಅಂಗದನು ಅತ್ಯಂತ ಭಯಪಟ್ಟು ಅಂತಃಪುರದಲ್ಲಿದ್ದ ಸುಗ್ರೀವನ ಸಮೀಪಕ್ಕೆ ಹೋಗಿ ಲಕ್ಷ್ಮಣನು ಬಂದ ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿಯೂ ಸುಗ್ರೀವನು ನಿವ್ರಾಂಗನೆಯ ತೋಳ್ತೆಕ್ಕೆಯನ್ನು ಬಿಡದೆ ಕಾಮಮೋಹಿತನಾಗಿ ಮೈಮರೆತಿದ್ದನು.

ಇತ್ತ ಲಕ್ಷ್ಮಣನ ಕೋಪಾಟೋಪವನ್ನು ಕಂಡು ಕಪಿಗಳು ಕಿಲಕಿಲ ಶಬ್ದಮಾಡುತ್ತ ಭಯಪಟ್ಟು ಲಕ್ಷ್ಮಣನನ್ನು ಸಂತವಿಡುತ್ತಿದ್ದವು. ದೇವೇಂದ್ರನ ವಜ್ರಾಯುಧಕ್ಕೆ ಸಮಾನವಾದ ಬಲವುಳ್ಳ ಧನುರ್ಧಾರಿಯಾದ ಲಕ್ಷ್ಮಣನನ್ನು ಕಂಡು ಸಮಸ್ತ ಕಪಿಗಳೂ ಕೂಗಿಕೊಂಡವು. ಆ ಮಹತ್ತಾದ ಧ್ವನಿಯನ್ನು ಕೇಳಿ ಸುಗ್ರೀವನು ಎಚ್ಚತ್ತರೂ ಕಾಮೋನ್ಮಾದದಿಂದ ಕಣ್ಣು ಬಿಡಲಾರದವನಾಗಿದ್ದನು. ಅಂಗದನು ಲಕ್ಷ್ಮಣನು ಬಂದ ವೃತ್ತಾಂತವನ್ನು ಹೇಳಲು ಅದನ್ನು ಗ್ರಹಿಸುವುದಕ್ಕೆ ಶಕ್ತನಾಗಲಿಲ್ಲ. ಆಗ ಸುಗ್ರೀವನ ಪ್ರಾಣಸಖರಾದ ಪ್ಲಕ್ಷ ಪ್ರಭಾಸ ಎಂಬ ಇಬ್ಬರು ಪ್ರಧಾನರೂ ಸುಗ್ರೀವನನ್ನು ಕುರಿತು "ಸುಗ್ರೀವ, ಲಕ್ಷ್ಮಣನು ಬಹು ನಿಷ್ಠುರವಚನಗಳನ್ನು ನುಡಿಯುತ್ತ ಕೋಪದಿಂದ ಬಂದಿದ್ದಾನೆ. ಅವನಿಂದ ಹಾನಿಬರುವುದಕ್ಕೆ ಮೊದಲೇ ಆತನನ್ನು ಸಂತವಿಟ್ಟು ಆತನ ಕೋಪವನ್ನು ತಗ್ಗಿಸು.

ಶ್ರೀರಾಮಲಕ್ಷ್ಮಣರಿಬ್ಬರೂ ಸತ್ಯಸಂಧರು; ಮಹಾತ್ಮರು. ಆ ಪುಣ್ಯವಂತರು ನಿನಗೆ ಸ್ನೇಹಿತರಾಗಿ ಕೈಬಿಟ್ಟುಹೋಗಿದ್ದ ರಾಜ್ಯವನ್ನು ತಿರುಗಿಸಿಕೊಟ್ಟರು. ಶ್ರೀರಾಮನ ತಮ್ಮನಾದ ಲಕ್ಷ್ಮಣನು ಬಿಲ್ಲುಬಾಣಗಳನ್ನು ಧರಿಸಿಕೊಂಡು ಹೊರಬಾಗಿಲಲ್ಲಿ ನಿಂತಿದ್ದಾನೆ. ಆತನನ್ನು ಕಂಡು ಕಪಿಗಳು ನಡುಗುತ್ತ ಮೊರೆಯಿಟ್ಟು ಕೂಗುತ್ತಿವೆ. ಲಕ್ಷ್ಮಣನು ನುಡಿಜಾಣ್ಮೆಯುಳ್ಳವನು. ಕಾರ್ಯಾರ್ಥಿಯಾದ ಶ್ರೀರಾಮನ ಅಪ್ಪಣೆಯಿಂದ ಬಂದು ತಾನು ಬಂದ ವೃತ್ತಾಂತವನ್ನು ನಿನ್ನ ಮಗನಾದ ಅಂಗದನೊಡನೆ ಹೇಳಿ ಕಳುಹಿಸಿರುವನು. ಸುಗ್ರೀವ, ಲಕ್ಷ್ಮಣನು ಅತ್ಯಂತ ಕೋಪದೃಷ್ಟಿಯಿಂದ ಕಪಿಗಳನ್ನು ನೋಡುತ್ತಲಿದ್ದಾನೆ. ನೀನು ನಿನ್ನ ಕೋಪವನ್ನು ತಳಹರಿಸಿಕೊಂಡು ನಿನ್ನ ಸ್ತ್ರೀಯರು ಮಕ್ಕಳು ಬಂಧುಬಳಗ ಸಮೇತನಾಗಿ ಆತನಿಗೆ ಕಾಣಿಸಿಕೊಂಡು ಸಾಷ್ಟಾಂಗವೆರಗಿ ಸಂತವಿಡು. ಶ್ರೀರಾಮನು ಹೇಳಿ ಕಳುಹಿಸಿದ ಮಾತನ್ನು ಕೇಳಿ ಸತ್ಯವನ್ನು ಬಿಡದೆ ಶ್ರೀರಾಮನ ಸಮಯವನ್ನು ಕಾದು ಆತನು ಹೇಳುವಂತೆ ಮಾಡುವುದೇ ಯುಕ್ತವಾದದ್ದು" ಎಂದು ಹೇಳಿದರು.



೩೨ ನೆಯ ಅಧ್ಯಾಯ

## ಹನುಮಂತನು ಸುಗ್ರೀವನಿಗೆ ಹೇಳಿದ ನೀತಿ

ಆಮೇಲೆ ಸುಗ್ರೀವನು ಅಂಗದನ ಮೂಲಕ ಲಕ್ಷ್ಮಣನು ಮಹಾಕೋಪಯುಕ್ತನಾಗಿ ಬಂದಿದ್ದ ವೃತ್ತಾಂತವನ್ನು ಕೇಳಿ ಹೆದರಿ ತನ್ನ ಶಯ್ಯಾಗೃಹದಿಂದ ಹೊರಟನು. ಲಕ್ಷ್ಮಣನು ಬಂದ ಕಾರ್ಯದ ಗುರುಲಘುತ್ವಗಳನ್ನು ವಿಚಾರಿಸಲು ಮಂತ್ರಾಲೋಚನೆಯಲ್ಲಿ ನಿಪುಣರಾದ ಮಂತ್ರಿಗಳನ್ನು ಕರೆಯಿಸಿ ಅವರನ್ನು ಕುರಿತು "ಎಲೈ ಮಂತ್ರಿಗಳಿರಾ, ನಾನು ಶ್ರೀರಾಮನನ್ನು ನಿಷ್ಠುರವಾಗಿ ನುಡಿದವನಲ್ಲ. ಆತನಿಗೆ ಮತ್ತಾವ ದ್ರೋಹವನ್ನಾದರೂ ಮಾಡಿದವನಲ್ಲ. ಲಕ್ಷ್ಮಣನು ಯಾವ ಕಾರಣ ಕೋಪ ಮಾಡಿಕೊಂಡಿದ್ದಾನೋ ಅದನ್ನು ತಿಳಿದು ಹೇಳಿ. ಯಾವಾಗಲೂ ನನ್ನ ಮರ್ಮವನ್ನು ತಿಳಿಯುತ್ತ ಸಮಯಬಂದಾಗ ನನ್ನನ್ನು ಕೆಡಿಸಬೇಕೆಂದಿರುವ ಶತ್ರುಗಳು ಈಗ ಭೇದವನ್ನುಂಟುಮಾಡಿದಹಾಗಿದೆ. ಇನ್ನು ನಾವು ಮುಂದೆ ಮಾಡಬೇಕಾದ ಕಾರ್ಯವೇನು? ಲಕ್ಷ್ಮಣನ ಅಭಿಪ್ರಾಯವೇನು? ಇವುಗಳನ್ನು ವಿಚಾರಿಸಿರಿ" ಎಂದು ಹೇಳಿದನು.

ಅದನ್ನು ಕೇಳಿ ಆ ಪ್ರಧಾನರಲ್ಲಿ ಮುಖ್ಯನಾದ ಹನುಮಂತನು ಒಂದು ಮುಹೂರ್ತಮಾತ್ರ ಯೋಚನೆಮಾಡಿ ಕಾರ್ಯವನ್ನು ನಿಶ್ಚಯಿಸಿ ಸಮಸ್ತ ಮಂತ್ರಿಗಳ ಮಧ್ಯದಲ್ಲಿದ್ದ ಸುಗ್ರೀವನನ್ನು ಕುರಿತು ಹೀಗೆಂದನು: "ಸುಗ್ರೀವ, ಸರ್ವಥಾ ಶ್ರೀರಾಮನು ನಿನಗೆ ಮಾಡಿದ ಉಪಕಾರವನ್ನು ನೀನು ಮರತೆ. ಆತನು ಮಹಾಪರಾಕ್ರಮಿ. ಭಯಪಟ್ಟಿದ್ದ ನಿನಗೆ ಪ್ರಿಯವನ್ನು ಮಾಡಬೇಕೆಂದು ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ವಾಲಿಯನ್ನು ಕೊಂದನು. ಮಳೆಗಾಲ ಹೋಗಿ ಶರತ್ಕಾಲವು ಬಂದರೂ ನೀನು ಆತನ ಬಳಿಗೆ ಹೋಗದುದರಿಂದ ನಿನ್ನ ಮೇಲಿನ ಸ್ನೇಹಾತಿಶಯ ದಿಂದಲೇ ಕೋಪಮಾಡಿಕೊಂಡು ಕಳುಹಿಸಿದ್ದಾನೆ. ನೀನು ಗರ್ವದಿಂದ ಕಾಲವನ್ನರಿಯದೆ ಹೋದೆ. ಎಲ್ಲಿ ನೋಡಿದರೂ ಸಪ್ತಚ್ಛದಗಳು ಪುಷ್ಪಿತವಾಗಿವೆ. ಚಂದ್ರಸೂರ್ಯನಕ್ಷತ್ರಗಳೂ ಆಕಾಶವೂ ಮೇಘಗಳಿಂದ ಬಿಡಲ್ಪಟ್ಟು ಶುಭ್ರವಾಗಿ ಹೊಳೆಯುತ್ತಿವೆ. ನದಿಗಳೂ ಕೊಳಗಳೂ ಪ್ರವಾಹ ತಗ್ಗಿ ನಿರ್ಮಲೋದಕದಿಂದ ರಮಣೀಯವಾಗಿವೆ. ಈ ಶರತ್ಕಾಲವು ಅರಸರಿಗೆ ಶತ್ರುಗಳಮೇಲೆ ದಂಡೆತ್ತಿ

ಹೋಗಲು ಯೋಗ್ಯವಾದ ಕಾಲ. ನೀನು ಸ್ತ್ರೀಲೋಲನಾಗಿ ಮದಿಸಿ ಕಾಲವನ್ನರಿಯದೆ ಹೋದೆ. ಆದಕಾರಣ ಲಕ್ಷ್ಮಣನು ಕೋಪಿಸಿಕೊಂಡು ಬಂದಿದ್ದಾನೆ. ಸ್ತ್ರೀವಿಯೋಗದಿಂದ ನೊಂದ ಮಹಾತ್ಮನಾದ ಶ್ರೀರಾಮನು ಸಿಟ್ಟುಸಿರುಬಿಡುತ್ತ ನಿಷ್ಠುರವಾಗಿ ನುಡಿದನೆಂದು ಕಪಿನಾಯಕರು ಇಲ್ಲಿಗೆ ಬಂದು ಹೇಳಿದರೆ ಅದಕ್ಕಾಗಿ ಕೋಪಿಸುವುದು ನಿನಗೆ ಉಚಿತವಲ್ಲ. ಅಪರಾಧವನ್ನು ಮಾಡಿದ ನೀನು ಲಕ್ಷ್ಮಣನಿಗೆ ಕೈಮುಗಿದು ವಿನಯವಚನಗಳನ್ನು ನುಡಿಯುವುದೇ ಶ್ರೇಯಸ್ಕರ. ಲೋಕದಲ್ಲಿ ಅರಸರು ಮಂತ್ರಿಗಳನ್ನು ಕರೆದು ಕಾರ್ಯಸ್ಥಿತಿಯನ್ನು ಕೇಳಿದರೆ ತತ್ಕಾಲಕ್ಕೆ ನಿಷ್ಠುರವಾಗಿದ್ದರೂ ಮುಂದಕ್ಕೆ ಹಿತವಾದ ಕಾರ್ಯಸ್ಥಿತಿಯನ್ನೇ ಹೇಳಬೇಕು. ಆದಕಾರಣ ನಾನು ಭಯವಿಲ್ಲದೆ ಇಂಥ ಮಾತನ್ನು ಬಿನ್ನಹಮಾಡಿದೆನು. ಶ್ರೀರಾಮನು ಕೋಪಕೆರಳಿ ಬಿಲ್ಲುಬಾಣಗಳನ್ನು ತೆಗೆದುಕೊಂಡನಾದರೆ ದೇವಾಸುರ ಗಂಧರ್ವಸಹಿತವಾದ ಸಮಸ್ತ ಜಗತ್ತನ್ನೂ ಒಂದು ಕ್ಷಣದೊಳಗೆ ಕೈವಶಮಾಡಿಕೊಳ್ಳಬಲ್ಲನು. ಮೊದಲು ನಿನಗೆ ಶ್ರೀರಾಮನು ಮಾಡಿದ ಉಪಕಾರವನ್ನು ಬಲ್ಲ ನೀನು ನಿನ್ನ ಸ್ತ್ರೀ ಪುತ್ರ ಜ್ಞಾತಿ ದಾಯಾದಿ ಸಹಿತನಾಗಿ ಆತನಿಗೆ ಸಾಷ್ಟಾಂಗವೆರಗಿ ಕೈಮುಗಿದು ಸಂತವಿಡುತ್ತಿರುವುದೇ ಯೋಗ್ಯ. ಪ್ರತಿಯಾಗಿ ಕೋಪವನ್ನು ಮಾಡುವುದು ನೀತಿಯಲ್ಲ. ಪತಿವ್ರತಾ ಸ್ತ್ರೀಯು ತನ್ನ ಪತಿ ಹೇಳಿದಂತೆ ಕೇಳಿಕೊಂಡು ಆತನ ವಶವಾಗಿರುವಂತೆ ನೀನು ಶ್ರೀರಾಮನ ಆಜ್ಞೆಯನ್ನು ಮೀರದೆ ಅವನು ಹೇಳಿದಂತೆ ನಡೆದುಕೊ. ದೇವೇಂದ್ರನ ಪರಾಕ್ರಮಕ್ಕೆ ಸರಿಮಿಗಿಲೆನಿಪ ಶ್ರೀರಾಮನ ಬಲವನ್ನು ನಿನ್ನ ಮನಸ್ಸೇ ಬಲ್ಲದು " ಎಂದು ಹಿತೋಪದೇಶನಾಡಿದನು.



### ೩೩ ನೆಯ ಅಧ್ಯಾಯ

## ತಾರೆಯು ಲಕ್ಷ್ಮಣನಿಗೆ ಹೇಳಿದ ಸಮಾಧಾನ

ಇತ್ತ ಲಕ್ಷ್ಮಣನು ರಾಮಾಜ್ಞೆಯಂತೆ ಬಂದು ಕಿಷ್ಕಿಂಧಾನಗರವನ್ನು ಪ್ರವೇಶಿಸಿದನು. ಮಹಾಬಲಶಾಲಿಗಳೂ ದ್ವಾರಪಾಲಕರೂ ಆದ ವಾನರರು ಲಕ್ಷ್ಮಣನನ್ನು ಕಂಡು ಕೈಮುಗಿದು ನಿಂತುಕೊಂಡರು. ಕೋಪದಿಂದ ಬುಸುಗುಟ್ಟುತ್ತಿದ್ದ ಆ ದಶರಥಪುತ್ರನನ್ನು ನೋಡಿ ಕಪಿನಾಯಕರು ಹೆದರಿ ದೂರದಲ್ಲಿ ಸರಿದು ನಿಂತರು. ಸೌಮಿತ್ರಿಯು ರಮ್ಯವೂ ವಿಶಾಲವೂ ಆದ ಕಿಷ್ಕಿಂಧಾ ಗುಹೆಯನ್ನು ಪ್ರವೇಶಿಸಿದನು. ಅದು ಅನೇಕ ಉಪ್ಪರಿಗೆಯ ಭವನಗಳಿಂದಲೂ ಅರಳಿದ ನಾನಾ ಬಗೆಯ ವೃಕ್ಷಗಳಿಂದಲೂ ಶೋಭಿಸುತ್ತಿತ್ತು. ಕಾಮರೂಪಿಗಳೂ ದೇವಗಂಧರ್ವಪುತ್ರರೂ ಆದ ವಾನರರು ದಿವ್ಯಮಾಲ್ಯಾಂಬರಗಳನ್ನು ಧರಿಸಿದ್ದರು. ವಿಶಾಲವಾದ ರಸ್ತೆಗಳ ಇಕ್ಕೆಲಗಳಲ್ಲಿಯೂ ಸುಗಂಧಿಯಾದ ವಿವಿಧ ಮದ್ಯಗಳನ್ನು ಮಾರುತ್ತಿದ್ದರು. ದಾರಿಯಲ್ಲಿ ಸೌಮಿತ್ರಿಯು ಅಂಗದ ಮೈಂದ, ದ್ವಿವಿದ, ಗವಯ, ಗವಾಕ್ಷ, ಶರಭ, ಸೂರ್ಯಾಕ್ಷ, ಹನುಮಂತ ಮೊದಲಾದ ವಾನರ ಶ್ರೇಷ್ಠರ ದಿವ್ಯಭವನಗಳನ್ನು ನೋಡುತ್ತ ಹೋದನು. ಆ ಭವನಗಳಲ್ಲಿ ಧನಧಾನ್ಯಗಳೂ ಉತ್ತಮ ಸ್ತ್ರೀಯರೂ ತುಂಬಿದ್ದರು. ಮುಂದೆ ಹೋಗುತ್ತ ಲಕ್ಷ್ಮಣನು ಬಿಳಿಯ ಪ್ರಾಕಾರದಿಂದ ಪರಿವೃತವಾದ ಸುಗ್ರೀವನ ಅರಮನೆಯನ್ನು ಕಂಡನು. ಕೈಲಾಸಶಿಖರಗಳಂತೆ ಉನ್ನತವೂ ಶುಭ್ರವೂ ಆದ ಗೋಪುರಗಳಿಂದ ಆ ಭವನವು ಸುಂದರವಾಗಿ ತೋರುತ್ತಿದ್ದಿತು. ಒಳ್ಳೆಯ ದಟ್ಟವಾದ ನೆರಳನ್ನು ಕೊಡುವ ದಿವ್ಯಪುಷ್ಪಫಲಗಳಿಂದ ವಿರಾಜಿಸುವ ವೃಕ್ಷಗಳು ಪ್ರಾಕಾರದೊಳಗೆ ಕಂಗೊಳಿಸುತ್ತಿದ್ದವು.

ಶಸ್ತ್ರಧಾರಿಗಳಾದ ಕಪಿಗಳು ಬಾಗಿಲನ್ನು ಕಾಯುತ್ತಿದ್ದರು. ಅರಮನೆಯು ಚಿನ್ನದ ತೋರಣದಿಂದ ಅಲಂಕೃತವಾಗಿತ್ತು.

ಮಹಾಬಲಶಾಲಿಯಾದ ಲಕ್ಷ್ಮಣನು ನೇರವಾಗಿ ಅರಮನೆಯೊಳಕ್ಕೆ ಹೋಗುತ್ತಿರಲು ಯಾರೂ ಅವನನ್ನು ತಡೆಯಲಿಲ್ಲ. ಅವನು ಜನಸಮೃದ್ಧವಾದ ಏಳು ಕಕ್ಷ್ಯೆಗಳನ್ನು ದಾಟಿಹೋಗಿ ವಿಶಾಲವಾದ ಸುಗ್ರೀವನ ಅಂತಃಪುರವನ್ನು ಕಂಡನು. ಅದಕ್ಕೆ ಬಿಗಿಯಾದ ಕಾವಲಿತ್ತು. ಅಲ್ಲಲ್ಲಿ ಸುವರ್ಣಮಯವೂ ರಜತಮಯವೂ ಆದ ವಿವಿಧಾಕಾರದ ಮಂಚಗಳನ್ನೂ ಪೀಠಗಳನ್ನೂ ಇಟ್ಟಿದ್ದರು. ಒಂದೇ ಸಮನಾಗಿ ಮಧುರವಾದ ವೀಣಾಧ್ವನಿಯೂ ಸಂಗೀತವೂ ಸುತ್ತಲೂ ವಿಜೃಂಭಿಸುತ್ತಿತ್ತು. ಲಕ್ಷ್ಮಣನು ಆ ಸುಗ್ರೀವಭವನದಲ್ಲಿ ರೂಪಯೌವನಗರ್ವಿತೆಯರಾದ ಬಹುಮಂದಿ ಸುಂದರ ಸ್ತ್ರೀಯರನ್ನು ಕಂಡನು. ಅವರೆಲ್ಲರೂ ಚಿತ್ರವಿಚಿತ್ರವಾದ ಪುಷ್ಪಹಾರಗಳಿಂದಲೂ ವಿವಿಧಾಭರಣ ಗಳಿಂದಲೂ ಅಲಂಕೃತರಾಗಿದ್ದರು. ಸುಗ್ರೀವನ ಅನುಚರರೆಲ್ಲರೂ ತೃಪ್ತರಾಗಿ ಉತ್ತಮವಸ್ತ್ರ ಗಳಿಂದ ಭೂಷಿತರಾಗಿ ಆನಂದದಿಂದ ಸಂಚರಿಸುವುದನ್ನು ಲಕ್ಷ್ಮಣನು ಕಂಡನು. ಹೆಂಗಸರ ನೂಪುರಗಳ ಧ್ವನಿಯನ್ನೂ ಕಾಂಚೀದಾಮಗಳ ಝಣತ್ಕಾರವನ್ನೂ ಕೇಳಿ ಲಕ್ಷ್ಮಣನಿಗೆ ನಾಚಿಕೆ ಯಾಯಿತು. ಆ ವೀರನು ಮರುಕ್ಷಣದಲ್ಲಿ ಕ್ರುದ್ಧನಾಗಿ ತನ್ನ ಧನುಸ್ಸನ್ನು ಠೇಂಕರಿಸಿ ದಿಕ್ಕುಗಳನ್ನು ಮೊಳಗಿಸಿದನು.

ಆಗ ಅಂತಃಪುರದಲ್ಲಿದ್ದ ಸುಗ್ರೀವನು ಆ ಧ್ವನಿಯನ್ನು ಕೇಳಿ ಲಕ್ಷ್ಮಣನು ಸಮೀಪಕ್ಕೆ ಬಂದನೆಂದು ತಿಳಿದುಕೊಂಡನು. ಅಂಗದನ ವಾಕ್ಯವು ಸತ್ಯವೆಂದು ಅವನು ಮನಸ್ಸಿಗೆ ತಂದುಕೊಂಡು ತಾರಾದೇವಿಯನ್ನು ಕರೆದು ಹೀಗೆಂದನು : " ತಾರೆ, ಲಕ್ಷ್ಮಣನು ಸ್ವಭಾವದಿಂದ ಮೃದುಹೃದಯ. ಈಗ ಆತನು ಕೋಪಯುಕ್ತನಾಗಿ ಬಂದಿರುವಂತೆ ಕಾಣುತ್ತಿದೆ. ಆತನಿಗೆ ಕೋಪಬರುವುದಕ್ಕೆ ಕಾರಣವೇನೋ ತಿಳಿಯದು. ನೀನು ಆ ಕಾರಣವನ್ನು ಯುಕ್ತಿಯಿಂದ ವಿಚಾರಿಸು. ಲಕ್ಷ್ಮಣನು ನಿಷ್ಕಾರಣವಾಗಿ ಕೋಪಿಸುವವನಲ್ಲ. ಆತನಿಗೆ ನಾವು ಅಪರಾಧವನ್ನು ಮಾಡಿದೆವೆಂದು ಮನಸ್ಸಿನಲ್ಲೆಣಿಸಿಕೊಂಡಿದ್ದಾನೋ ಏನೋ ತಿಳಿಯಲಿಲ್ಲ. ಈ ಕಾರ್ಯವನ್ನು ಆಲೋಚಿಸಿ ತಿಳಿದು ಹೇಳು. ನೀನೇ ಹೋಗಿ ಆತನ ಮನಸ್ಸಿನಲ್ಲಿರುವುದನ್ನು ತಿಳಿದು ಬಂದು ಹೇಳುವುದುತ್ತಮ. ಆತನೊಡನೆ ಮಾತನಾಡುವಾಗ ಮೃದುನುಡಿಗಳನ್ನು ಉಪಯೋಗಿಸು. ಆತನ ಸಮೀಪಕ್ಕೆ ನಾನು ಹೋಗಬಹುದಾದ ಸಮಯವನ್ನು ಬಂದು ಹೇಳು. ಚಿತ್ತಶುದ್ಧಿಯುಳ್ಳವರಾದ ಮಹಾತ್ಮರು ಪರಸ್ತ್ರೀಯರ ವಿಷಯದಲ್ಲಿ ಕೋಪವನ್ನು ಮಾಡರು. ನೀನು ಹೋಗಿ ಮೃದುವಾಕ್ಯಗಳಿಂದ ಕೋಪಶಾಂತಿಯನ್ನು ಮಾಡು. ಆಮೇಲೆ ನಾನು ಬಂದು ಅವನನ್ನು ಕಾಣಿಸಿಕೊಂಡು ಮಾತನಾಡುತ್ತೇನೆ " ಎಂದು ಹೇಳಿದನು.

ತಾರಾದೇವಿಯು ಮಧುಪಾನದಿಂದ ಮತ್ತಳಾಗಿ ಎಡಹುತ್ತ ಕಾಂಚೀದಾಮವನ್ನು ಧ್ವನಿಗೈಯುತ್ತ ಲಕ್ಷ್ಮಣನ ಸಮೀಪಕ್ಕೆ ಹೋಗಿ ನಿಂತಳು. ಮಹಾತ್ಮನಾದ ಲಕ್ಷ್ಮಣನು ಉದಾಸೀನ ಬುದ್ಧಿಯಿಂದ ಆ ತಾರಾದೇವಿಯನ್ನು ನೋಡದೆ ನೆಲವನ್ನು ನೋಡುತ್ತ ಸುಗ್ರೀವನ ಸ್ತ್ರೀಯೋ ತನ್ನ ಸಮೀಪಕ್ಕೆ ಬಂದಳೆಂದು ಶಾಂತನಾದನು. ಆಗ ಮಧುಪಾನವನ್ನು ಮಾಡಿದ್ದ ತಾರಾದೇವಿಯು ಲಜ್ಜೆದೊರೆದು ಲಕ್ಷ್ಮಣನನ್ನು ನೋಡಿ ಆತನನ್ನು ಕುರಿತು ಸ್ನೇಹದಿಂದಲೂ ಪ್ರೌಢತ್ವದಿಂದಲೂ "ಎಲೈ ಲಕ್ಷ್ಮಣ, ನಿನಗೆ ಕೋಪವು ಬರುವುದಕ್ಕೆ ಕಾರಣವೇನು ? ಸುಗ್ರೀವನು ನೀನು ಹೇಳಿದ ಮಾತುಗಳನ್ನು ಮೀರಲಿಲ್ಲ. ನೀನು ಹೀಗೆ ಕೋಪಿಸಿದರೆ ನಿನ್ನನ್ನು ಎದುರಿಸುವವರಾರು ?

ಒಣಮರಗಳುಳ್ಳ ವನದಲ್ಲಿ ನುಗ್ಗಿ ಬರುವ ಕಾಳ್ಗಿಚ್ಚಿಗೆ ಎದುರಾಗಿ ಯಾರು ಬಂದಾರು ?" ಎಂದು ಕೇಳಿದಳು.

ಸಾಂತ್ವನಪೂರ್ವಕವಾಗಿ ಸ್ನೇಹಪರಿಸಿದ ತಾರಾದೇವಿಯ ಮಾತನ್ನು ಕೇಳಿ ಲಕ್ಷ್ಮಣನು ಹರ್ಷಯುಕ್ತನಾದನು. ಅವನು ಸ್ನೇಹಪೂರ್ವಕವಾಗಿ ಅವಳನ್ನು ಕುರಿತು "ತಾರಾದೇವಿ, ನಿನ್ನ ಪತಿಯಾದ ಸುಗ್ರೀವನು ಕಾಮುಕನಾಗಿ ಧರ್ಮಾರ್ಥಗಳನ್ನು ಕೆಡಿಸಿಕೊಂಡನು. ತನ್ನ ರಾಜಧರ್ಮವನ್ನರಿಯದೆಯೂ ದುಃಖಿತರಾದ ನಮ್ಮನ್ನು ವಿಚಾರಿಸದೆಯೂ ತನ್ನ ಮಂತ್ರಿಗಳನ್ನು ಕೂಡಿಕೊಂಡು ಮಧುಪಾನವನ್ನು ಮಾಡುತ್ತ ಮತ್ತನಾಗಿರುವನು. ಮೊದಲು ನಾಲ್ಕು ತಿಂಗಳವರೆಗೂ ಮಳೆಗಾಲವನ್ನು ಸಹಿಸಿಕೊಂಡಿರಹೇಳಿ ಕಾಲಮಿತಿಯನ್ನು ಗೊತ್ತುಮಾಡಿದನು. ಆ ನಾಲ್ಕು ತಿಂಗಳುಗಳು ಕಳೆದಮೇಲೂ ಸ್ತ್ರೀಲೋಲನಾಗಿ ನಮ್ಮನ್ನು ಮರೆತಿರುವನು. ಮದ್ಯಪಾನವು ಧರ್ಮಾರ್ಥಗಳನ್ನು ಕೆಡಿಸುವಂತಹುದು. ಆತನು ಉಪಕಾರಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡದೆ ಧರ್ಮವನ್ನು ಬಿಟ್ಟಿದ್ದಾನೆ. ದಂಡಯಾತ್ರೆ ಹೊರಡುವ ಕಾಲದಲ್ಲಿ ಶತ್ರುಗಳ ಮೇಲೆ ದಂಡಯಾತ್ರೆ ಹೊರಡದಂತೆಯೂ ನಮ್ಮ ಕಾರ್ಯವನ್ನು ಆಗುಗೊಳಿಸದಂತೆಯೂ ಮಾಡಿ ದ್ರೋಹವನ್ನೆಸಗಿದ್ದಾನೆ. ತಾರಾದೇವಿ, ನೀನು ಸಮಸ್ತ ಕಾರ್ಯರಹಸ್ಯವನ್ನು ಬಲ್ಲವಳು. ಈಗ ನಾವು ಏನುಮಾಡಬೇಕೋ ಅದನ್ನು ನೀನೇ ವಿಚಾರಿಸಿ ಹೇಳು" ಎಂದು ನುಡಿದನು.

ಧರ್ಮಾರ್ಥಯುಕ್ತವಾದ ನೀತಿಯೊಡಗೂಡಿದ ಲಕ್ಷ್ಮಣನ ವಾಕ್ಯವನ್ನು ಕೇಳಿ ತಾರಾದೇವಿಯು ಶ್ರೀರಾಮನ ಕಾರ್ಯಸಿದ್ಧಿಯಾಗುವುದಕ್ಕಾಗಿ ಆತನನ್ನು ಕುರಿತು ಹೀಗೆ ಹೇಳಿದಳು: "ಎಲೈ ಲಕ್ಷ್ಮಣ, ನಿಮ್ಮ ಕಾರ್ಯವನ್ನು ಮಾಡುವುದಕ್ಕೆ ತಕ್ಕ ಕಾಲವು ಮೀರಿತೆಂದೆಣಿಸಬೇಡ. ಹಾಗೆ ಮೀರಿದರೂ ನಿನ್ನ ಸೇವಕನಾದ ಸುಗ್ರೀವನಲ್ಲಿ ಕೋಪಮಾಡಸಲ್ಲದು. ಯಾವಾಗಲೂ ನಿಮ್ಮ ಸೇವೆಯನ್ನೇ ಮಾಡಬೇಕೆಂದು ಯತ್ನಮಾಡಿಕೊಂಡಿರುವವನು ಒಂದು ಬಾರಿ ತಪ್ಪಿದರೂ ನೀವು ಸಹಿಸಿಕೊಳ್ಳಬೇಕು. ರಾಜಕುಮಾರರಲ್ಲಿ ಉತ್ತಮನಾದ ನೀನು ಸಾಮಾನ್ಯಜನರ ವಿಷಯದಲ್ಲಿ ಕೋಪಮಾಡುವುದು ನೀತಿಯಲ್ಲ. ಸತ್ಯಸಂಧನೂ ತಪಸ್ವಿಯೂ ಆದ ನಿನ್ನಂಥ ಪುರುಷನೇ ಕೋಪಮಾಡಬಹುದೆ ? ಲಕ್ಷ್ಮಣ, ನಿಮ್ಮ ಕಾರ್ಯಗೌರವವನ್ನೂ ನಿನ್ನ ರೋಷವನ್ನೂ ಬಲ್ಲೆನು. ನೀವು ಮೊದಲು ಸುಗ್ರೀವನಿಗೆ ಮಾಡಿದ ಉಪಕಾರವನ್ನೂ ಬಲ್ಲೆನು. ನೀವು ಮಾಡಿದ ಉಪಕಾರಕ್ಕೆ ನಾವು ಮಾಡಬೇಕಾದ ಪ್ರತ್ಯುಪಕಾರವನ್ನೂ ನಿಮ್ಮ ಬಲವನ್ನೂ ಸ್ನೇಹಿತರಿಗೆ ಹಿತವನ್ನು ಬಯಸುವ ನಿಮ್ಮ ಅಂತರಂಗವನ್ನೂ ಬಲ್ಲೆನು. ಸುಗ್ರೀವನು ಕಾಮಾಸಕ್ತನಾಗಿ ನಿಮ್ಮ ಕಾರ್ಯದಲ್ಲಿ ಆಲಸ್ಯವುಳ್ಳವನಾಗಿರುವುದನ್ನೂ ಶ್ರೀರಾಮನು ವಿರಹಶೋಕದಿಂದ ಕಂಗೆಟ್ಟು ವಿಷಯಾದಿ ಸಮಸ್ತ ಸುಖಗಳನ್ನು ಬಿಟ್ಟಿರುವುದನ್ನೂ ಬಲ್ಲೆನು. ಕಾಮಾತುರನಾದ ಪುರುಷನು ಧರ್ಮಾರ್ಥಗಳನ್ನು ಸಂಪಾದಿಸುವ ಕಾಲವನ್ನರಿಯನು. ಸುಗ್ರೀವನು ಕಾಮದಲ್ಲಿ ಲೋಲುಪ್ತಿಯುಳ್ಳವನಾಗಿ ಲಜ್ಜೆಯನ್ನು ತೊರೆದು ಕಾರ್ಯಗತಿಯನ್ನರಿಯದಿದ್ದಾನೆ. ನಿನ್ನ ಒಡಹುಟ್ಟಿದವನೆಂದು ತಿಳಿದು ಸುಗ್ರೀವನ ಅಪರಾಧವನ್ನು ಕ್ಷಮಿಸು. ಲೋಕದಲ್ಲಿ ತಪಸ್ವಿಗಳೂ ಕೂಡ ಕಾಮಾಧೀನರಾಗಿ ಮೋಹವಶರಾಗಿದ್ದಾರೆ. ಸುಗ್ರೀವನು ಜಾತಿಯಲ್ಲಿ ಕಪಿಯೂ ಚಪಲನೂ ಆದ್ದರಿಂದ ವಿಷಯಸುಖಾನುಭವಗಳನ್ನು ಬಿಡದೆಯೂ ನೀತಿಮಾರ್ಗವನ್ನು ಕಾಣದೆಯೂ ಇದ್ದಾನೆ" ಎಂದು ಸಮಾಧಾನ ದಮಾತುಗಳನ್ನಾಡಿದಳು. ಮತ್ತೆ ಲಕ್ಷ್ಮಣನ ಮೃದುಹೃದಯವನ್ನು ಕಂಡು ತನ್ನ ಪತಿಗೆ ಹಿತವಾದ ಕಾರ್ಯವನ್ನು ಚಿಂತಿಸುತ್ತ ಆತನನ್ನು ಕುರಿತು "ಎಲೈ ಲಕ್ಷ್ಮಣ, ಸುಗ್ರೀವನು ಕಾಮುಕನಾಗಿ ಸ್ತ್ರೀಲೋಲನಾಗಿದ್ದರೂ ನೀನು ಬರುವುದಕ್ಕೆ ಮೊದಲೇ ಹನುಮಂತನು ಶರತ್ಕಾಲವು ಬಂದಿತೆಂದೂ ಶ್ರೀರಾಮನ

ಕಾರ್ಯವನ್ನು ಸಾಧ್ಯಮಾಡಿಕೊಡುವುದಕ್ಕೆ ಸಮಯವಾದ್ದರಿಂದ ಸುಮ್ಮನಿರಕೂಡದೆಂದೂ ತಿಳುಹಿಸಿದನು. ಆಗಲೇ ಸುಗ್ರೀವನು ಸೇನಾಪತಿಗಳನ್ನು ಕರೆಯಿಸಿ ಸಮಸ್ತ ಸೇನೆಯನ್ನು ಮೇಳೈಸಬೇಕೆಂದು ಕಟ್ಟುಮಾಡಿದ್ದಾನೆ. ಈಗ ನಾನಾ ದಿಕ್ಕುಗಳಲ್ಲಿಯೂ ಪರ್ವತಗಳಲ್ಲಿಯೂ ಇದ್ದ ಅನೇಕ ಕೋಟಿ ವಾನರರು ಬಂದಿದ್ದಾರೆ. ನೀನು ಸುಗ್ರೀವನ ಅಭಿಮಾನವನ್ನು ಕಾದು ಪರಿಪಾಲಿಸು. ನಿನ್ನ ಮಿತ್ರನಾದ ಸುಗ್ರೀವನ ಮನೆಯನ್ನೂ ಸಂಪತ್ತನ್ನೂ ನೋಡು. ಒಳಗೆ ಬಾ" ಎಂದು ಕರೆದಳು.

ಲಕ್ಷ್ಮಣನು ಆ ಅಂತಃಪುರಕ್ಕೆ ಹೋಗಿ ರತ್ನಖಚಿತವಾದ ಸಿಂಹಾಸನದಲ್ಲಿ ಅನರ್ಘ್ಯವಾದ ಹಾಸಿಗೆಯ ಮೇಲೆ ಕುಳಿತುಕೊಂಡು ಬಾಲಸೂರ್ಯನಿಗೆ ಸಮಾನವಾದ ದಿವ್ಯಸ್ವರೂಪವುಳ್ಳವನಾಗಿ ದಿವ್ಯಾಭರಣಭೂಷಿತನಾಗಿದ್ದ ಸುಗ್ರೀವನನ್ನು ಕಂಡನು. ಆ ಸುಗ್ರೀವನು ರುಮಾದೇವಿಯನ್ನು ಆಲಿಂಗಿಸಿಕೊಂಡು ಸ್ತ್ರೀಪರಿವಾರದ ಮಧ್ಯದಲ್ಲಿ ಸಿಂಹಾಸನದ ಮೇಲೆ ಕುಳಿತಿದ್ದನು. ಅದನ್ನು ಕಂಡು ಲಕ್ಷ್ಮಣನ ನೇತ್ರಗಳು ಕೋಪದಿಂದ ಕೆಂಡವಾದವು.



## ೩೪ ನೆಯ ಅಧ್ಯಾಯ

## ಲಕ್ಷ್ಮಣನು ಸುಗ್ರೀವನನ್ನು ನಿಂದಿಸಿದ್ದು

ಆಗ ಅತ್ಯಂತ ಕ್ರುದ್ಧನಾಗಿ ಬೆಂಕಿಯಂತೆ ಪ್ರಜ್ವಲಿಸುತ್ತ ಸರ್ಪದಂತೆ ನಿಟ್ಟುಸಿರು ಬಿಡುತ್ತ ಎದುರಿಗೆ ಬಂದ ಲಕ್ಷ್ಮಣನನ್ನು ಕಂಡ ಕೂಡಲೆ ಸುಗ್ರೀವನು ಖಿನ್ನನಾದನು. ಅವನು ಕೂಡಲೆ ಅಲಂಕೃತವಾದ ಇಂದ್ರಧ್ವಜದಂತೆ ತನ್ನ ಸಿಂಹಾಸನದಿಂದ ಕೆಳಕ್ಕೆ ಇಳಿದನು. ತಾರೆಗಳು ಚಂದ್ರನನ್ನು ಬಳಸಿಕೊಳ್ಳುವಂತೆ ರುಮೆ ಮೊದಲಾದ ಸ್ತ್ರೀಯರು ಥಟ್ಟನೆ ಎದ್ದು ಸುಗ್ರೀವನನ್ನು ಬಳಸಿಕೊಂಡು ನಿಂತರು. ಮಧುಪಾನದಿಂದ ರಕ್ತನೇತ್ರನಾಗಿದ್ದ ಸುಗ್ರೀವನು ಲಕ್ಷ್ಮಣನಿಗೆ ಕೈಮುಗಿದು ನಿಂತುಕೊಂಡನು. ಆಗ ಲಕ್ಷ್ಮಣನು ಕೋಪದಿಂದ ಸುಗ್ರೀವನನ್ನು ಸಂಬೋಧಿಸಿ ಹೇಳಿದನು: "ಎಲೈ, ರಾಜನು ಸತ್ತ್ವಗುಣಪೂರ್ಣನೂ ದಯಾವಂತನೂ ಜಿತೇಂದ್ರಿಯನೂ ಆಗಿದ್ದರೆ ಜಗತ್ತಿನಲ್ಲಿ ಮರ್ಯಾದೆಯಿಂದ ವೃದ್ಧಿಹೊಂದುವನು. ಅವನು ಕೃತಜ್ಞನೂ ಸತ್ಯವಾದಿಯೂ ಆಗಿರಬೇಕು. ಯಾವನು ಉಪಕಾರಿಗಳಾದ ಮಿತ್ರರನ್ನೂ ಮರೆತು ಮಾತಿಗೆ ತಪ್ಪಿನಡೆಯುತ್ತ ಅಧರ್ಮದಲ್ಲಿ ನಿರತನಾಗುವನೊ, ಅವನಿಗಿಂತ ಪಾಪಾತ್ಮನು ಇನ್ನೊಬ್ಬನಿಲ್ಲ. ಒಂದು ಅಶ್ವಕ್ಕಾಗಿ ಸುಳ್ಳು ಹೇಳಿದರೆ ನೂರು ಅಶ್ವಗಳನ್ನು ಕೊಂದ ದೋಷವು ತಗುಲುತ್ತದೆ. ಒಂದು ಹಸುವಿಗಾಗಿ ಸುಳ್ಳು ಹೇಳಿದರೆ ಸಾವಿರ ಹಸುಗಳನ್ನು ಕೊಂದ ದೋಷವು ಬರುತ್ತದೆ. ಹಾಗೆ ಮನುಷ್ಯನೊಬ್ಬನಿಗೆ ಮಾತುಕೊಟ್ಟು ಸುಳ್ಳು ಹೇಳಿದರೆ ಆತ್ಮಹತ್ಯಾದೋಷವೂ ಬಂಧುಹತ್ಯಾದೋಷವೂ ಬರುತ್ತವೆ. ಎಲೈ ವಾನರೇಶ್ವರ, ಮಿತ್ರನಿಂದ ಉಪಕೃತನಾದವನು ಪ್ರತ್ಯುಪಕಾರವನ್ನು ಮಾಡದೆ ಕೃತಘ್ನನಾಗಿ ನಡೆದರೆ ಅವನು ವಧಾರ್ಹನಾಗುತ್ತಾನೆ. ಗೋಹತ್ಯಾಕಾರಿಗೂ, ಸುರಾಪಾಯಿಗೂ, ಕಳ್ಳನಿಗೂ, ವ್ರತಭ್ರಷ್ಟನಿಗೂ ಪ್ರಾಯಶ್ಚಿತ್ತವಿದೆ. ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲವೆಂದು ಬ್ರಹ್ಮದೇವನು ಹೇಳಿದ್ದಾನೆ. ಸುಗ್ರೀವ, ನೀನು ಅಯೋಗ್ಯ; ಕೃತಘ್ನ; ಸುಳ್ಳು ಹೇಳತಕ್ಕವನು. ಶ್ರೀರಾಮನಿಂದ ಉಪಕೃತನಾಗಿ ಈಗ ಅವನಿಗೆ ಪ್ರತ್ಯುಪಕಾರ ಮಾಡಬೇಕೆಂಬ ಚಿಂತೆಯನ್ನೇ ಬಿಟ್ಟಿದ್ದೀಯೆ. ಎಲೈ ವಾನರ, ನೀನು ಸೀತಾದೇವಿಯನ್ನು ಹುಡುಕುವುದಕ್ಕೆ ಪ್ರಯತ್ನಿಸಬೇಡವೆ? ಶ್ರೀರಾಮನ ವಿಷಯದಲ್ಲಿ

ನಿನಗೆ ಕೃತಜ್ಞತೆ ಬೇಡವೆ ? ನೀನು ಕೃತಘ್ನನಾಗಿ ಪಾಮರರಂತೆ ಕ್ಷುದ್ರಸುಖದಲ್ಲಿ ಮುಳುಗಿದ್ದೀಯೆ. ನೀನು ಕಪ್ಪೆಯಂತೆ ಕೂಗುತ್ತಿದ್ದ ಸರ್ಪವೆಂದು ಶ್ರೀರಾಮನಿಗೆ ಗೊತ್ತಾಗದೆ ಹೋಯಿತು. ಆ ಮಹಾತ್ಮನು ನಿನ್ನ ಮೇಲೆ ಅನುಗ್ರಹಿಸಿ ಕಪಿರಾಜ್ಯಾಧಿಪತ್ಯವನ್ನು ನಿನಗೆ ಕೊಡಿಸಿದನು. ನೀನು ದುರಾತ್ಮ. ನಿನಗೆ ಮಾಡಿದ ಉಪಕಾರವನ್ನು ನೀನು ಸ್ಮರಿಸಿಕೊಳ್ಳದಹೋದರೆ ತೀಕ್ಷ್ಣಾಸ್ತ್ರಗಳಿಂದ ವಾಲಿ ಹೋದ ದಾರಿಯನ್ನು ನೀನು ಹಿಡಿಯಬೇಕಾದೀತು. ವಾಲಿಯು ಹತನಾಗಿ ಹಿಡಿದ ಮಾರ್ಗ ವೇನೂ ಕಟ್ಟಿಹೋಗಿಲ್ಲ. ಸುಗ್ರೀವ, ಮಾತುಕೊಟ್ಟಂತೆ ನಡೆದುಕೊ. ವಾಲಿಯ ದಾರಿಯನ್ನು ಹಿಡಿಯಬೇಡ. ಶ್ರೀರಾಮನ ಕೋದಂಡದಿಂದ ಜಿಗಿದು ಬರುವ ವಜ್ರಾಯುಧಸಮಾನವಾದ ಬಾಣಗಳ ರುಚಿಯನ್ನು ನೀನು ಕಂಡಿಲ್ಲ. ಆದ್ದರಿಂದ ರಾಮಕಾರ್ಯವನ್ನು ವಿಚಾರಿಸದೆ ಗ್ರಾಮ್ಯ ಸುಖದಲ್ಲಿ ಆಸಕ್ತನಾಗಿದ್ದೀಯೆ " ಎಂದು ಲಕ್ಷ್ಮಣನು ಸುಗ್ರೀವನನ್ನು ಎಚ್ಚರಿಸಿದನು.



೩೫ ನೆಯ ಅಧ್ಯಾಯ

## ತಾರಾದೇವಿಯು ಲಕ್ಷ್ಮಣನನ್ನು ಸಂತೈಸಿದ್ದು

ಈ ಪ್ರಕಾರ ಸುಗ್ರೀವನನ್ನು ನಿಷ್ಠುರವಚನಗಳಿಂದ ಅದ್ದರಿಸಿ ನುಡಿಯುತ್ತ ತೇಜಸ್ಸಿನಿಂದ ಯಜ್ಞಪುರುಷನಂತೆ ಬೆಳಗುತ್ತಿದ್ದ ಲಕ್ಷ್ಮಣನನ್ನು ಕುರಿತು ಚಂದ್ರಮುಖಿಯಾದ ತಾರಾದೇವಿಯು ಹೀಗೆ ನುಡಿದಳು : " ಲಕ್ಷ್ಮಣ, ಈ ರೀತಿಯಲ್ಲಿ ನಿಷ್ಠುರವಚನಗಳನ್ನು ನುಡಿಯುವುದು ನಿನಗುಚಿತ ವಲ್ಲ. ವಾನರಾಧಿಪತಿಯಾದ ಸುಗ್ರೀವನು ಇಂಥ ನಿಷ್ಠುರೋಕ್ತಿಗಳನ್ನು ಕೇಳುವುದಕ್ಕೆ ಅರ್ಹನಲ್ಲ. ಅವನು ಮಾಡಿದ ಉಪಕಾರವನ್ನು ಮರೆಯುವವನಲ್ಲ. ಮಿತ್ರರಲ್ಲಿ ಕಾಪಟ್ಯವನ್ನು ಮಾಡಿ ದ್ರೋಹವನ್ನೆಣಿಸುವವನಲ್ಲ. ನಿಷ್ಠುರಗಾರನಲ್ಲ. ಮಾಡಬೇಕಾದ ಕಾರ್ಯವನ್ನು ಮಾಡದಿರುವ ವನಲ್ಲ. ಆಡಿದ ಮಾತನ್ನು ತಪ್ಪುವವನಲ್ಲ. ಶ್ರೀರಾಮನು ಸುಗ್ರೀವನಿಗೆ ಯಾರಿಂದಲೂ ಸಾಧ್ಯವಾಗದ ಕಾರ್ಯವನ್ನು ಮಾಡಿಕೊಟ್ಟಿರುವನು. ಆತನ ಕೃಪೆಯಿಂದ ಕೀರ್ತಿಯನ್ನೂ ಎಂದಿಗೂ ಕೇಡಿಲ್ಲದ ರಾಜ್ಯಾಧಿಪತ್ಯವನ್ನೂ ರುಮಾದೇವಿಯನ್ನೂ ನನ್ನನ್ನೂ ಪಡೆದಿರುವನು. ಮೊದಲು ಸುಗ್ರೀವನು ದುಃಖವನ್ನನುಭವಿಸಿಕೊಂಡಿದ್ದು ಈಗ ವಿಷಯಸುಖವನ್ನು ಪಡೆದು ಮೋಹಿಸಿ ಸ್ತ್ರೀಲೋಲನಾಗಿ ಶ್ರೀರಾಮನ ಕಾರ್ಯವನ್ನು ಸಾಧಿಸುವ ಮಾರ್ಗವನ್ನು ಕಾಣದಿದ್ದಾನೆ. ಪೂರ್ವದಲ್ಲಿ ವಿಶ್ವಾಮಿತ್ರಮುನಿಯು ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿರಲು ಆತನ ತಪೋಜ್ವಾಲೆಯಿಂದ ಜಗತ್ತೆಲ್ಲವೂ ಕಂಗೆಟ್ಟು ದೇವತೆಗಳಿಗೆ ಮೊರೆಯಿಟ್ಟಿತು. ದೇವತೆಗಳು ಘೃತಾಚಿಯೆಂಬ ದೇವಸ್ತ್ರೀ ಯನ್ನು ಕಳುಹಿಸಿದರು. ಆ ದೇವಾಂಗನೆಯು ವಿಶ್ವಾಮಿತ್ರಮುನೀಶ್ವರನ ಆಶ್ರಮಕ್ಕೆ ಹೋಗಿ ಹಾವ ಭಾವ ವಿಲಾಸ ವಿಭ್ರಮಗಳಿಂದ ಆತನ ಮನಸ್ಸನ್ನು ಕರಗಿಸಿ ಮದನಬಾಣಗಳಿಗೊಳಗು ಮಾಡಿದಳು. ಆ ಮುನಿಯು ಆಕೆಯೊಡನಿದ್ದು ಹತ್ತುವರುಷಗಳ ವರೆಗೆ ಸಂಧ್ಯಾವಂದನೆ ಜಪ ಹೋಮಾದಿಗಳನ್ನು ಕಾಲಕಾಲಗಳಲ್ಲಿ ಮಾಡದೆ ಮೈಮರೆತನು. ಅಂಥ ತಪಸ್ವಿಯ ಗತಿಯೇ ಹಾಗೆ ಆಗಿರಲಾಗಿ ಸುಗ್ರೀವನ ಪಾಡೇನು ? ಅವನು ಕಾಮವಶನಾಗಿ ಕಾಲವನ್ನರಿಯದಿದ್ದರೆ ನೀವು ಕ್ಷಮಿಸಬೇಕು. ಲಕ್ಷಣ, ನೀನು ಸುಗ್ರೀವನು ಮಾಡಿಕೊಂಡಿರುವ ಕಾರ್ಯದ ವ್ಯವಸ್ಥಿತಿಯನ್ನು ವಿಚಾರಿಸದೆಯೇ ಪ್ರಾಕೃತಜನರಂತೆ ಕೋಪವನ್ನು ಮಾಡಸಲ್ಲದು. ಸತ್ತ್ವಗುಣಸಂಪನ್ನರಾದ

ಪುರುಷೋತ್ತಮರು ಕಾರ್ಯವನ್ನು ವಿಚಾರಿಸಿ ನಿಶ್ಚಯಿಸದೆ ಕೋಪವನ್ನು ಮಾಡರು. ನಾನು ಸುಗ್ರೀವನ ನಿಮಿತ್ತವಾಗಿ ಬೇಡಿಕೊಳ್ಳುತ್ತಲಿರುವೆನು. ನೀನು ಅವಶ್ಯವಾಗಿ ಈ ಕೋಪಾಟೋಪವನ್ನು ಬಿಡು. ನಿನ್ನ ನಿಮಿತ್ತವಾಗಿ ಸುಗ್ರೀವನು ಸಮಸ್ತ ರಾಜ್ಯವನ್ನೂ ಧನಧಾನ್ಯ ಭಂಡಾರಗಳೇ ಮೊದಲಾದ ವಸ್ತುಗಳನ್ನೂ ಅಂಗದನನ್ನೂ ರುಮಾದೇವಿಯನ್ನೂ ನನ್ನನ್ನೂ ಬಿಡಹೇಳಿದರೂ ಬಿಡುವನೆಂದು ನನ್ನ ಮನಸ್ಸಿಗೆ ತೋರುತ್ತಿದೆ. ಸುಗ್ರೀವನೊಬ್ಬನೇ ರಣರಂಗದಲ್ಲಿ ರಾವಣನನ್ನು ಕೊಂದು ಸೀತಾದೇವಿಯನ್ನು ಕರೆದುಕೊಂಡು ಬಂದು ಶ್ರೀರಾಮನಿಗೆ ಒಪ್ಪಿಸಲು ಸಮರ್ಥನು. ಆದರೂ ಲಂಕಾಪಟ್ಟಣದಲ್ಲಿ ಅನೇಕ ಕೋಟಿ ಮಂದಿ ಕಾಮರೂಪಿಗಳಾದ ರಾಕ್ಷಸರಿದ್ದಾರೆ. ಅವರೆಲ್ಲರನ್ನು ಕೊಂದಲ್ಲದೆ ರಾವಣನನ್ನು ಜಯಿಸಲಾಗದು. ಸಹಾಯವಿಲ್ಲದವರಿಗೆ ರಾವಣನು ಸಾಧ್ಯವಾಗುವವನಲ್ಲವೆಂದು ಪೂರ್ವದಲ್ಲಿ ಕಪಿನಾಯಕನಾದ ವಾಲಿಯು ಹೇಳುತ್ತಿದ್ದನು. ನಾನು ಆ ಮಾತನ್ನು ಸುಗ್ರೀವನೊಡನೆ ಹೇಳಿದೆನು. ಆದಕಾರಣ ಸುಗ್ರೀವನು ತನಗೆ ಸಹಾಯಾರ್ಥವಾಗಿ ನಾನಾ ದಿಕ್ಕುಗಳಿಂದ ಅನೇಕ ಮಂದಿ ಕಪಿನಾಯಕರನ್ನು ಕರೆಕಳುಹಿಸಿ ಅವರ ಬರವನ್ನು ನಿರೀಕ್ಷಿಸಿಕೊಂಡಿದ್ದಾನೆ. ನೀನು ಬರುವುದಕ್ಕೆ ಮೊದಲೇ ಸುಗ್ರೀವನು ಅನೇಕ ಬಲವಂತರಾದ ಕಪಿನಾಯಕರನ್ನು ಸಹಾಯಮಾಡಿಕೊಂಡು ಶ್ರೀರಾಮನ ಕಾರ್ಯವನ್ನು ಸಾಧ್ಯಮಾಡಿಕೊಡಬೇಕೆಂದು ಯತ್ನಮಾಡಿರುವನು. ಇನ್ನುಮೇಲೆ ಕೋಟಿಗಟ್ಟಲೆ ಕಪಿನಾಯಕರು ಬಂದು ನಿನ್ನನ್ನು ಕಾಣಿಸಿಕೊಳ್ಳುವರು. ನೀನು ಕೋಪವನ್ನು ಬಿಡು. ಕೆಂಪಾದ ಕಣ್ಣುಗಳುಳ್ಳ ನಿನ್ನ ಮುಖವನ್ನು ನೋಡಿ ಸುಗ್ರೀವನ ಅರಮನೆಯಲ್ಲಿರುವ ವಾನರಸ್ತ್ರೀಯರೇ ಮೊದಲಾದವರೆಲ್ಲರೂ ಭಯಪಡುತ್ತಿದ್ದಾರೆ. ನೀನು ಶಾಂತನಾಗು" ಎಂದು ತಾರೆಯು ಬೇಡಿಕೊಂಡಳು.



### ೩೬ ನೆಯ ಅಧ್ಯಾಯ

## ಲಕ್ಷ್ಮಣನು ಸುಗ್ರೀವನನ್ನು ಶ್ರೀರಾಮನ ಬಳಿಗೆ ಕರೆದದ್ದು

ಈ ರೀತಿಯಲ್ಲಿ ಲಕ್ಷ್ಮಣನು ತಾರಾದೇವಿಯಿಂದ ಧರ್ಮರಹಸ್ಯಗರ್ಭಿತವಾದ ಸಮಾಧಾನದ ಮಾತುಗಳನ್ನು ಕೇಳಿ, ಆ ದೇವಿಯ ಮಾತುಗಳನ್ನಂಗೀಕರಿಸಿ ಸುಗ್ರೀವನ ಮೇಲೆ ಕೋಪವನ್ನು ಬಿಟ್ಟು ಶಾಂತಚಿತ್ತನಾದನು. ಬಳಿಕ ಸುಗ್ರೀವನು ಒದ್ದೆಯಾದ ವಸ್ತ್ರವನ್ನು ಪರಿತ್ಯಾಗಮಾಡುವಂತೆ ಭಯವನ್ನು ಬಿಟ್ಟನು. ತಾನು ಅಲಂಕರಿಸಿಕೊಂಡಿದ್ದ ಪುಷ್ಪಸರಗಳನ್ನು ತೆಗೆದು ಹಾಕಿ ಗರ್ವವನ್ನು ಬಿಟ್ಟು ಲಕ್ಷ್ಮಣನ ಸಮೀಪಕ್ಕೆ ಹೋಗಿ ವಿನಯಗುಣಸಂಪತ್ತಿಯುಳ್ಳವನಾಗಿ ಆತನಿಗೆ ಹರ್ಷವನ್ನುಂಟುಮಾಡುತ್ತ ಆತನನ್ನು ಕುರಿತು ಹೀಗೆಂದನು: "ಎಲೈ ಲಕ್ಷ್ಮಣ, ಹೋದ ರಾಜ್ಯಾಧಿಪತ್ಯವೂ ಸಮಸ್ತವಾದ ಐಶ್ವರ್ಯವೂ ಎಂದಿಗೂ ಕೇಡಿಲ್ಲದ ಕೀರ್ತಿಯೂ ಶ್ರೀರಾಮನ ಕೃಪೆಯಿಂದ ತಿರುಗಿ ಬಂದವು. ಲೋಕದಲ್ಲಿ ಸಕಲ ಸಚ್ಚರಿತ್ರಗಳಿಂದ ಪ್ರಖ್ಯಾತಿಪಡೆದ ಆ ಸ್ವಾಮಿಯ ಪರಾಕ್ರಮಕ್ಕೆ ಸರಿಯಾದ ಪರಾಕ್ರಮವುಳ್ಳವರಾರು ? ಮಹಾಮಹಿಮೆಯುಳ್ಳ ಧರ್ಮಾತ್ಮನಾದ ಶ್ರೀರಾಮನು ತನ್ನ ಭುಜಬಲ ಪರಾಕ್ರಮಗಳಿಂದ ನನ್ನ ಸಹಾಯವೆಂಬ ನೆವಮಾತ್ರದಿಂದ ಸಮರದಲ್ಲಿ ರಾವಣನನ್ನು ಕೊಂದು ಸೀತಾದೇವಿಯನ್ನು ಕರೆದುಕೊಂಡು ಬರುವನು. ಮಹತ್ತಾದ ಏಳು ಮರಗಳನ್ನು ಒಂದೇ ಬಾಣದಿಂದ ಕತ್ತರಿಸಿದ ಮಹಾತ್ಮನಿಗೆ ಮತ್ತೊಬ್ಬರ ಸಹಾಯದಿಂದ ಆಗುವ ಕಾರ್ಯವೇನು ?

ಆತನ ಬಿಲ್ಲಿನಾರಿಯ ಧ್ವನಿಯಿಂದಲೇ ಸಮಸ್ತ ಪರ್ವತಸಹಿತವಾದ ಭೂಮಿಯು ನಡುಗುವುದು. ಸಕಲ ಬಲಸಹಿತನಾದ ರಾವಣನನ್ನು ಸಂಹಾರಮಾಡುವುದಕ್ಕೆ ಹೋಗುವ ಶ್ರೀರಾಮನ ಹಿಂದೆ ಹೋಗಿ ನಾನು ಆತನ ಕಾರ್ಯಕ್ಕೆ ಸಹಾಯವಾದೆನೆಂಬ ಮಹಾಕೀರ್ತಿಯನ್ನು ಪಡೆಯುವೆನು. ಲಕ್ಷ್ಮಣ, ನಿನ್ನ ಅನುರಾಗಪಾತ್ರನಾದ ನನ್ನ ಅಪರಾಧವನ್ನು ಸಹಿಸು. ಲೋಕದಲ್ಲಿ ಅಪರಾಧಮಾಡದ ಸೇವಕರಾರು ? " ಎಂದು ನುಡಿದನು.

ಆ ಮಾತನ್ನು ಕೇಳಿ ಲಕ್ಷ್ಮಣನು ಪ್ರೀತಿಯಿಂದ ಸುಗ್ರೀವನನ್ನು ಕುರಿತು "ಸುಗ್ರೀವ, ನನ್ನ ಅಣ್ಣನಾದ ಶ್ರೀರಾಮನು ಇಲ್ಲಿಯ ತನಕ ಮಿತ್ರರಿಲ್ಲದವನಾಗಿದ್ದು ಈಗ ವಿನಯಸಂಪನ್ನನಾದ ನಿನ್ನಿಂದ ಸಮಿತ್ರನಾದನು. ನಿನ್ನ ಸತ್ಯಕ್ಕೂ ಮಹಿಮೆಗೂ ಸರಿಯುಂಟೆ ? ನೀನು ಕಪಿರಾಜ್ಯಾಧಿಪತ್ಯಕ್ಕೆ ಯೋಗ್ಯನು. ನೀನು ಹೇಳಿದ ಮಾತುಗಳೆಲ್ಲವೂ ಸತ್ಯವಾದವು. ವಾನರೇಂದ್ರ, ಸ್ವಯಂ ಸಮರ್ಥನೂ ಅನವಾಯಶೂರನೂ ಆಗಿದ್ದರೂ ವಿನಯದಿಂದ ಮಾತನಾಡತಕ್ಕವನು, ನನ್ನ ಅಣ್ಣನನ್ನೂ ನಿನ್ನನ್ನೂ ಬಿಟ್ಟರೆ ಇನ್ನು ಯಾರುಂಟು ? ದೈವಗತಿಯಿಂದ ನಮಗೆ ನಿನ್ನ ಮಿತ್ರತ್ವವು ದೊರಕಿ ಸಹಾಯವುಂಟಾಯಿತು. ಇನ್ನು ನೀನು ಪ್ರಯಾಣವಾಗಿ ಹೊರಟು ನನ್ನೊಡನೆ ಬಂದು, ನಿನ್ನ ಸಖನಾದ ಶ್ರೀರಾಮನ ದುಃಖವನ್ನು ಪರಿಹರಿಸಿ ಆತನನ್ನು ಸಂತವಿಸು. ವಿರಹಶೋಕದಿಂದ ಕಂಗೆಟ್ಟ ಶ್ರೀರಾಮನನ್ನು ನೋಡಿ ನಿನ್ನೊಡನೆ ನಿಷ್ಠುರವಾಗಿ ನುಡಿದೆನು. ಅದನ್ನು ಮರೆತು ಬಿಡು " ಎಂದು ಸಮಾಧಾನವನ್ನು ಹೇಳಿದನು.



೩೭ ನೆಯ ಅಧ್ಯಾಯ

## ಸುಗ್ರೀವನು ಕಪಿಸೇನೆಗಳನ್ನು ಕೂಡಿಸಿದ್ದು

ಈ ಪ್ರಕಾರ ಮಹಾತ್ಮನಾದ ಲಕ್ಷ್ಮಣನು ಸಂತವಿಡಲು ಸುಗ್ರೀವನು ಸಮೀಪದಲ್ಲಿದ್ದ ಹನುಮಂತನನ್ನು ಕರೆದು "ಹನುಮಂತ, ಮಹೇಂದ್ರಪರ್ವತ ಹಿಮವತ್ಪರ್ವತ ವಿಂಧ್ಯಪರ್ವತ ಕೈಲಾಸಪರ್ವತ ಮಂದರಗಿರಿ ಬಾಲಸೂರ್ಯನ ಕಾಂತಿಯಂತೆ ಒಪ್ಪುವ ಪಂಚಶೈಲಗಳು ಹಸ್ತಾಚಲ ಪದ್ಮಾಚಲ ಅಂಜನಗಿರಿ ಧೂಮ್ರಗಿರಿಯೇ ಮೊದಲಾದ ಪರ್ವತಗಳ ಗುಹೆಗಳಲ್ಲಿಯೂ ಇತರ ಸ್ಥಾನಗಳಲ್ಲಿಯೂ ವಾಸಮಾಡುತ್ತ ನಾನಾವರ್ಣವಾಗಿಯೂ ಮಹಾಬಲವುಳ್ಳವಾಗಿಯೂ ಆನೆಗಳಿಗೂ ಮೇಘಗಳಿಗೂ ಸಮಾನವಾದ ಶರೀರಾಕಾರವುಳ್ಳವಾಗಿಯೂ ಮಧುಪಾನಮಾಡಿಕೊಂಡಿರುವ ಕಪಿಗಳನ್ನು ಕರೆಕಳುಹಿಸು. ನಾನು ಮೊದಲು ಕಳುಹಿಸಿದ ಕಪಿನಾಯಕರು ಕಪಿಗಳನ್ನು ಕರೆದುಕೊಂಡು ಶೀಘ್ರದಲ್ಲಿ ಬರುವ ಹಾಗೆ ಇನ್ನೂ ಕೆಲವು ಕಪಿನಾಯಕರನ್ನು ಕಳುಹಿಸು. ಕೆಲವರನ್ನು ಸಮಸ್ತ ದಿಕ್ಕುಗಳಲ್ಲಿರುವ ಕಪಿಗಳನ್ನೂ ಕರೆದುಕೊಂಡು ಶೀಘ್ರವಾಗಿ ಬರುವಹಾಗೆ ಕಟ್ಟುಮಾಡಿ ಕಳುಹಿಸು. ಇನ್ನು ಹತ್ತುದಿನಗಳೊಳಗಾಗಿ ಎಲ್ಲರೂ ಬಂದು ಸೇರಬೇಕೆಂದು ನನ್ನ ಆಜ್ಞೆ. ಈ ರಾಜಾಜ್ಞೆಯನ್ನು ಮೀರಿದ ಕಪಿಗಳನ್ನು ಮರಣದಂಡನೆಗೆ ಒಳಪಡಿಸುತ್ತೇನೆ " ಎಂದು ಹೇಳಿದನು.

ಆ ಮಾತನ್ನು ಕೇಳಿ ಹನುಮಂತನು ಅತಿವೇಗವುಳ್ಳ ಕಪಿನಾಯಕರನ್ನು ಕಳುಹಿಸಲು, ಅವರು ಆಕಾಶದಲ್ಲಿ ಪಕ್ಷಿಗಳು ಹೋಗುವಂತೆ ಶೀಘ್ರವಾಗಿ ಹೋಗಿ ಸಮುದ್ರದ ತಡಿಗಳಲ್ಲಿಯೂ ವನಗಳಲ್ಲಿಯೂ ಪರ್ವತಗುಹೆಗಳಲ್ಲಿಯೂ ಇದ್ದ ಕಪಿನಾಯಕರಿಗೆ, ಕಾಲಮೃತ್ಯುವಿಗೆ ಸಮಾನವಾದ ಸುಗ್ರೀವನ

ಆಜ್ಞೆಯನ್ನು ತಿಳಿಸಿದರು. ಅದನ್ನು ಕೇಳಿ ನಾನಾದಿಕ್ಕುಗಳಲ್ಲಿದ್ದ ಕಪಿನಾಯಕರು ತಮ್ಮ ತಮ್ಮ ಸೇನೆಗಳನ್ನು ಕೂಡಿಕೊಂಡು ಶೀಘ್ರವಾಗಿ ಬರಲಾರಂಭಿಸಿದರು. ಅಂಜನಗಿರಿಯಿಂದ ಬಂದ ಮಹಾಬಲವಂತರಾದ ಕಪಿಗಳು ಮೂರುಕೋಟಿ, ಅಸ್ತಮಯಪರ್ವತದಿಂದ ಬಂದ ಸುವರ್ಣಕಾಯರಾದ ಕಪಿಗಳು ಹತ್ತುಕೋಟಿ, ಕೈಲಾಸಪರ್ವತದಿಂದ ಬಂದ ಸಿಂಹದಂತೆ ಬಲಪರಾಕ್ರಮವುಳ್ಳ ಕಪಿಗಳು ಸಾವಿರಕೋಟಿ, ಹಿಮವತ್ಪರ್ವತವನ್ನಾಶ್ರಯಿಸಿಕೊಂಡು ಕಂದಮೂಲ ಫಲಾಹಾರಗಳನ್ನು ಮಾಡಿಕೊಂಡಿದ್ದ ಕಪಿಗಳು ಸಾವಿರಕೋಟಿ, ವಿಂಧ್ಯಪರ್ವತದಿಂದ ಬಂದ ಯಜ್ಞಪುರುಷನಿಗೆ ಸಮಾನರಾದ ಕಪಿಗಳು ಒಂದುಸಾವಿರ ಕೋಟಿ, ಕ್ಷೀರಸಮುದ್ರದ ತಡಿಯಲ್ಲಿರುವ ತಮಾಲವೆಂಬ ವನದಲ್ಲಿ ತೆಂಗಿನಕಾಯಿಗಳ ನೀರನ್ನೇ ಆಹಾರಮಾಡಿಕೊಂಡಿದ್ದ ಕಪಿಗಳು ಲೆಕ್ಕವಿಲ್ಲದಷ್ಟು, ವನಗಳಿಂದಲೂ ಗುಹೆಗಳಿಂದಲೂ ನದೀತೀರಗಳಿಂದಲೂ ಬಂದ ಕಪಿಗಳೂ ಲೆಕ್ಕವಿಲ್ಲದವಾಗಿದ್ದುವು! ಈ ಪ್ರಕಾರ ಸೂರ್ಯೋದಯದಲ್ಲಿ ಸೂರ್ಯಮಂಡಲವನ್ನೇ ಕೌಂಚಿದವೋ ಎಂಬಂತೆ ಕಪಿಸೇನೆಯು ಬರಲಾರಂಭಿಸಿತು. ಆ ಕಪಿಗಳನ್ನು ಕರೆತರುವುದಕ್ಕೆ ಕಿಷ್ಕಿಂಧಾಪಟ್ಟಣದಿಂದ ಹೋದ ಕಪಿನಾಯಕರು ಮಹತ್ತಾದ ವನಗಳುಳ್ಳ ಹಿಮವತ್ಪರ್ವತವನ್ನು ಕಂಡರು. ಅಲ್ಲಿ ಹಿಂದೆ ಒಂದು ದೊಡ್ಡ ಅಶ್ವಮೇಧಯಾಗವು ನಡೆದಿತ್ತು. ಅಲ್ಲಿ ಅಮೃತಸಮಾನವಾದ ಹಣ್ಣುಹಂಪಲುಗಳು ಯಥೇಚ್ಛವಾಗಿ ಬೆಳೆದಿದ್ದುವು. ಆ ಹಣ್ಣುಗಳನ್ನು ತಿಂದರೆ ಒಂದು ತಿಂಗಳವರೆಗೆ ಆಹಾರಾಪೇಕ್ಷೆ ಇಲ್ಲದೆ ಇರಬಹುದಾಗಿತ್ತು. ಅಂಥ ಹಣ್ಣುಗಳನ್ನೂ ಗಡ್ಡೆಗೆಣಸುಗಳನ್ನೂ ತೆಗೆದುಕೊಂಡು ಕಪಿನಾಯಕರೆಲ್ಲರೂ ಬಂದು ಸುಗ್ರೀವನಿಗೆ ಕಾಣಿಕೆಯನ್ನರ್ಪಿಸಿದರು. ಇನ್ನೂ ಬಹುಪ್ರದೇಶಗಳಿಂದ ವಾನರರು ತಂಡತಂಡವಾಗಿ ಬರುತ್ತಿದ್ದಾರೆಂಬ ಸಂತೋಷದ ವಾರ್ತೆಯನ್ನು ಸುಗ್ರೀವನಿಗೆ ಮುಟ್ಟಿಸಿದರು.

## ೩೮ನೆಯ ಅಧ್ಯಾಯ

## ಸುಗ್ರೀವನು ಶ್ರೀರಾಮನನ್ನು ಕಾಣಿಸಿಕೊಂಡದ್ದು

ಇತ್ತ ಸುಗ್ರೀವನಿಗೆ ಸಂತೋಷವಾಗುವಂತೆ ಲಕ್ಷ್ಮಣನು ಆತನನ್ನು ಕುರಿತು "ಸುಗ್ರೀವ, ಇನ್ನು ನಿನ್ನ ಚಿತ್ತಕ್ಕೆ ಹರ್ಷವಾದ ಪಕ್ಷದಲ್ಲಿ ಶ್ರೀರಾಮನಿರುವ ಎಡೆಗೆ ಹೋಗೋಣ" ಎಂದು ಹೇಳಿದನು.

ಆ ಮಾತನ್ನು ಕೇಳಿ ಸುಗ್ರೀವನು ಪ್ರೀತಿಯಿಂದ "ಲಕ್ಷ್ಮಣ, ನೀನು ಹೇಳಿದ ಪ್ರಕಾರ ನಾನು ಕೇಳಿಕೊಂಡಿರುವೆನು. ನನಗೆ ಸಂತೋಷವಾಯಿತು. ಶ್ರೀರಾಮನ ಸಮೀಪಕ್ಕೆ ಹೋಗೋಣ ಬಾ" ಎಂದು ಹೇಳಿ ತಾರಾದೇವಿಯೇ ಮೊದಲಾದ ಸ್ತ್ರೀಯರನ್ನು ಅಂತಃಪುರಕ್ಕೆ ಕಳುಹಿಸಿ ತನ್ನ ಪ್ರಧಾನರನ್ನು ಕರೆದು ಶೀಘ್ರವಾಗಿ ಪಾಲಕಿಯನ್ನು ಸಜ್ಜುಗೊಳಿಸಲು ಕಟ್ಟುಮಾಡಿದನು.

ಆ ಪ್ರಧಾನರು ಮಹಾಪ್ರಸಾದವೆಂದು ಆತನ ವಾಕ್ಯವನ್ನು ಶಿರಸಾವಹಿಸಿ ಶೀಘ್ರದಲ್ಲಿ ಪಾಲಕಿಯನ್ನು ತಂದರು. ಸುಗ್ರೀವನು ಆ ಪಾಲಕಿಯನ್ನು ನೋಡಿ ಸಂತೋಷದಿಂದ ಲಕ್ಷ್ಮಣನನ್ನು ಸಂತವಿಟ್ಟು, ಆತನೊಡನೆ ಪಾಲಕಿಯನ್ನೇರಿಕೊಂಡು ಶ್ವೇತಚ್ಛತ್ರ ಶ್ವೇತಚಾಮರ ಶಂಖ ಭೇರಿ ಮೊದಲಾದ ರಾಜಚಿಹ್ನೆಗಳಿಂದ ದೇದೀಪ್ಯಮಾನವಾಗಿ ಒಪ್ಪುತ್ತ ಆಯುಧಪಾಣಿಗಳಾದ ಅನೇಕ ಕಪಿನಾಯಕರನ್ನು ಕೂಡಿಕೊಂಡು ಶ್ರೀರಾಮನ ಸಮೀಪಕ್ಕೆ ಹೋದನು. ಅನಂತರ ಸುಗ್ರೀವನು

ಸಮಸ್ತ ಕಪಿನಾಯಕರೂ ಕೈಮುಗಿದುಕೊಂಡಿರಲು ಶ್ರೀರಾಮನಿಗೆ ಸಾಷ್ಟಾಂಗವಾಗಿ ವಂದಿಸಿದನು. ಮಹತ್ತಾದ ತಟಾಕದಲ್ಲಿ ತಾವರೆಯ ಮೊಗ್ಗುಗಳು ಇಟ್ಟಣಿಸಿರುವಂತೆ ಒಪ್ಪುತ್ತಿದ್ದ ಆ ಕಪಿಸೇನೆಯನ್ನು ಕಂಡು ಶ್ರೀರಾಮನು ಅತ್ಯಂತ ಪ್ರೀತಿಯುಳ್ಳವನಾದನು. ಸುಗ್ರೀವನನ್ನು ತನ್ನ ಹಸ್ತಗಳಿಂದ ಹಿಡಿದೆತ್ತಿ ತೋಳುಗಳಿಂದ ತಬ್ಬಿಕೊಂಡು ಕುಳ್ಳಿರಿಸಿ ಆತನನ್ನು ಕುರಿತು " ಎಲೈ ಸುಗ್ರೀವ, ಲೋಕದಲ್ಲಿ ಯಾವ ಮನುಷ್ಯನು ಅರ್ಥವನ್ನು ಸಂಪಾದಿಸುವ ಕಾಲದಲ್ಲಿ ಧರ್ಮಕಾಮಗಳಿಗೆ ವಿರುದ್ಧವಲ್ಲದಂತೆಯೂ ಧರ್ಮವನ್ನು ಸಂಪಾದಿಸುವ ಕಾಲದಲ್ಲಿ ಅರ್ಥಕಾಮಗಳಿಗೆ ವಿರುದ್ಧ ವಲ್ಲದಂತೆಯೂ ಕಾಮವನ್ನು ಸಂಪಾದಿಸುವ ಕಾಲದಲ್ಲಿ ಧರ್ಮಾರ್ಥಗಳಿಗೆ ವಿರುದ್ಧವಲ್ಲದಂತೆಯೂ ಪುರುಷಾರ್ಥಗಳನ್ನು ಸಂಪಾದಿಸುವನೋ ಆತನೇ ಲೋಕನಾಯಕನಾಗುವನು. ಹಾಗಲ್ಲದೆ ಧರ್ಮಾರ್ಥಗಳನ್ನು ಕೆಡಿಸಿ ಕಾಮವನ್ನು ಸಂಪಾದಿಸುವವನು, ವೃಕ್ಷದ ಮೇಲೆ ಮಲಗಿ ಮೈಮರೆತವನು ಕೆಳಗೆ ಬಿದ್ದಮೇಲೆ ಎಚ್ಚರಹೊಂದುವಂತೆ ಅಧೋಗತಿಯನ್ನು ಹೊಂದಿದ ಮೇಲೆಯೇ ಜಾಗರೂಕನಾಗುವನು. ಮಿತ್ರಸಂಗ್ರಹಮಾಡಿಕೊಂಡು ಶತ್ರುಗಳನ್ನು ನಿಗ್ರಹಿಸಿ ಧರ್ಮಾರ್ಥ ಕಾಮಗಳೆಂಬ ಪುರುಷಾರ್ಥತ್ರಯವನ್ನು ಕಾಲವರಿತು ಸಂಪಾದಿಸುವ ಪುರುಷನು ಧರ್ಮದಿಂದ ಸುಖಿಯಾಗಿರುವನು. ಸುಗ್ರೀವ, ಈಗ ದಂಡಯಾತ್ರೆ ಹೊರಡುವ ಸಮಯ. ನೀನು ನಿನ್ನ ಮಂತ್ರಿಗಳೊಡನೆ ಯೋಚನೆಯನ್ನು ಮಾಡಿ ಸನ್ನದ್ಧನಾಗು " ಎಂದು ನುಡಿದನು.

ಸುಗ್ರೀವನು ಶ್ರೀರಾಮನನ್ನು ಕುರಿತು " ಶ್ರೀರಾಮ, ನಾನು ನಷ್ಟವಾದ ರಾಜ್ಯ ಐಶ್ವರ್ಯ ಕೀರ್ತಿಗಳನ್ನು ನಿನ್ನ ಕೃಪೆಯಿಂದ ತಿರುಗಿ ಪಡೆದೆನು. ಲೋಕದಲ್ಲಿ ಪರರು ಮಾಡಿದ ಉಪಕಾರವನ್ನು ಮರೆತವನೇ ಪುರುಷಾಧಮನು. ಭೂಮಂಡಲದಲ್ಲಿ ಬಲಶಾಲಿಗಳಾದ ಸಕಲ ವಾನರಶ್ರೇಷ್ಠರು ನಮಗೆ ಸಹಾಯಕರಾಗಿ ಬರುತ್ತಿದ್ದಾರೆ. ಕೆಲವರು ಈಗಾಗಲೇ ಬಂದಿರುತ್ತಾರೆ. ಅವರ ಸಂಖ್ಯೆ ಅಪರಿಮಿತವಾದುದು. ಮೇರು ಮಂದರ ಪರ್ವತಗಳಂತೆ ಅವರು ಮಹಾಕಾಯರು ; ಮಹ ಪರಾಕ್ರಮಿಗಳು. ಕೋಟಿಗಟ್ಟಲೆ ಅವರು ಬಂದು ನಮಗೆ ನೆರವಾಗುತ್ತಾರೆ. ಅವರೆಲ್ಲರೂ ಕಾಮರೂಪಿಗಳು ; ದೃಢಕಾಯರು. ಅವರೆಲ್ಲರೂ ನಿನಗೆ ಸಹಾಯವಾಗಿ ಬಂದು ನಿನ್ನ ಶತ್ರುವಾದ ರಾವಣನನ್ನು ಆತನ ಪರಿವಾರಸಹಿತವಾಗಿ ಸಂಹರಿಸಿ ಸೀತಾದೇವಿಯನ್ನು ಕರೆದುಕೊಂಡು ಬರುವರು " ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಅತಿಹರ್ಷಯುಕ್ತನಾಗಿ ಸುಗ್ರೀವನನ್ನು ಸಂಮಾನಿಸಿ ಮುಂದಣ ಕಾರ್ಯಸ್ಥಿತಿಗೆ ತಕ್ಕ ಯೋಚನೆಯನ್ನು ಮಾಡತೊಡಗಿದನು.

---

## ೪೦ ನೆಯ ಅಧ್ಯಾಯ

## ಕಪಿಸೇನೆಗಳ ಆಗಮನ

ಅನಂತರ ಶ್ರೀರಾಮನು, ಕೈಮುಗಿದುಕೊಂಡು ನಿಂತಿದ್ದ ಸುಗ್ರೀವನನ್ನು ತೋಳುಗಳಿಂದ ತಬ್ಬಿಕೊಂಡು ಹೀಗೆ ನುಡಿದನು : " ಸುಗ್ರೀವ, ದೇವೇಂದ್ರನು ಮಳೆಗರೆಯುವುದೂ ಸೂರ್ಯನು ತನ್ನ ಪ್ರಭೆಯಿಂದ ಅಂತರಿಕ್ಷಮಾರ್ಗವನ್ನು ಬೆಳಕುಮಾಡುವುದೂ ಚಂದ್ರನು ಬೆಳದಿಂಗಳಿಂದ ರಾತ್ರಿಯ ಅಂಧಕಾರವನ್ನು ತೊಲಗಿಸಿ ನಿರ್ಮಲವಾಗಿ ಮಾಡುವುದೂ ಸ್ವಭಾವವಲ್ಲದೆ ಆಶ್ಚರ್ಯವಲ್ಲ.

ಹಾಗೆಯೇ ನೀನು ಮಿತ್ರಕಾರ್ಯವನ್ನು ಸಾಧಿಸುವುದಕ್ಕಾಗಿ ಈ ರೀತಿಯಲ್ಲಿ ಪ್ರತ್ಯುಪಕಾರವನ್ನು ಮಾಡುವುದು ಆಶ್ಚರ್ಯವಲ್ಲ. ಸುಗ್ರೀವ, ನೀನು ಯಾವಾಗಲೂ ಪ್ರಿಯಭಾಷಿಯೆಂಬುದನ್ನು ಬಲ್ಲೆನು. ನಿನ್ನ ಸಹಾಯದಿಂದ ನಾನು ಸಮಸ್ತ ಶತ್ರುಗಳನ್ನೂ ಜಯಿಸುವೆನು. ನೀನು ನನ್ನ ಮಿತ್ರನಾದ್ದರಿಂದ ನನಗೆ ಸಹಾಯಕನಾಗಬೇಕು. ರಾವಣನು ತನ್ನ ವಿನಾಶಕಾಲವು ಬಂದದ್ದರಿಂದ ಶತಹ್ರದನು ಶಚೀದೇವಿಯನ್ನು ಅಪಹರಿಸಿದಂತೆ, ಸೀತಾದೇವಿಯನ್ನು ಅಪಹರಿಸಿಕೊಂಡು ಹೋದನು. ದೇವೇಂದ್ರನು ಶತಹ್ರದನನ್ನೂ ಪುಲೋಮನನ್ನೂ ಸಂಹರಿಸಿ ಶಚೀದೇವಿಯನ್ನು ತಂದಂತೆ ನಾನು ಸಮರದಲ್ಲಿ ರಾವಣನನ್ನು ಕೊಂದು ಸೀತಾದೇವಿಯನ್ನು ತರುತ್ತೇನೆ" ಎಂದು ನುಡಿದನು.

ಆ ಸಮಯದಲ್ಲಿ ಮಹತ್ತಾದ ಕೆಂಧೂಳಿಯು ಕವಿದು ಸೂರ್ಯಪ್ರಭೆಯೂ ದಿಕ್ಕುಗಳೂ ಕಾಣದಿರುವ ಹಾಗಾಯಿತು. ಸಮಸ್ತ ಪರ್ವತವನಸಹಿತವಾದ ಭೂಮಿಯು ಕಂಪಿಸಿತು. ಆಗ ಪರ್ವತಗಳಿಗೆ ಸಮಾನವಾದ ಶರೀರವುಳ್ಳವರಾಗಿಯೂ ಅತಿತೀಕ್ಷ್ಣವಾದ ಕೋರೆದಾಡೆಗಳುಳ್ಳವ ರಾಗಿಯೂ ಮಹಾಬಲವಂತರಾಗಿಯೂ ಗುಡುಗಿನಂತೆ ಗಂಭೀರವಾಗಿ ಬೊಬ್ಬಿಡುವವರಾಗಿಯೂ ಪ್ರಾತಃಕಾಲದ ಸೂರ್ಯಪ್ರಭೆಯಂತೆ ಶರೀರಕಾಂತಿಯುಳ್ಳವರಾಗಿಯೂ ಚಂದ್ರನ ಪ್ರಭೆಯಂತೆ ಬಿಳುಪಾದ ಶರೀರಕಾಂತಿಯುಳ್ಳವರಾಗಿಯೂ ಕಮಲಗಳ ಕೇಸರಗಳಂತೆ ಸುವರ್ಣಮಯವಾದ ಶರೀರಕಾಂತಿಯುಳ್ಳವರಾಗಿಯೂ ಇದ್ದ ನೂರುಕೋಟಿ ಕಪಿಗಳೊಡನೆ ಹರಿಯೆಂಬ ಕಪಿನಾಯಕನು ಬಂದು ಸುಗ್ರೀವನಿಗೆ ಕಾಣಿಸಿಕೊಂಡನು. ಆಮೇಲೆ ಮಹಾಮೇರುಪರ್ವತದಂತೆ ಆಕಾರವುಳ್ಳವನಾಗಿ ತಾರಾದೇವಿಯ ತಂದೆಯಾದ ಸುಷೇಣನೆಂಬ ಕಪಿನಾಯಕನು ಅನೇಕವಾದ ಕಪಿಸೇನೆಯೊಡನೆ ಬಂದು ಕಾಣಿಸಿಕೊಂಡನು. ಬಳಿಕ ರುಮಾದೇವಿಯ ತಂದೆಯಾದ ವಿಭುವೆಂಬ ಸುಗ್ರೀವನ ಮಾವನು ಅನೇಕ ಕೋಟಿ ಕಪಿಸೇನೆಯೊಡನೆ ಕೂಡಿಕೊಂಡು ಬಂದು ಕಾಣಿಸಿಕೊಂಡನು. ಕಮಲಗಳ ಕೇಸರಗಳಂತೆ ತನುಕಾಂತಿಯುಳ್ಳವನೂ ಬಾಲಸೂರ್ಯನಂತೆ ತೇಜಸ್ಸುಳ್ಳವನೂ ಅತ್ಯಂತ ಬುದ್ಧಿವಂತನೂ ಸಮಸ್ತ ಕಪಿಗಳಿಗೆ ಒಡೆಯನೂ ಆದ ಹನುಮಂತನ ತಂದೆಯಾದ ಕೇಸರಿಯು ಅನೇಕ ಸೇನೆಯನ್ನು ಕೂಡಿಕೊಂಡು ಬಂದನು. ಗೋಲಾಂಗೂಲವೆಂಬ ಕಪಿಜಾತಿಗೆ ಒಡೆಯನಾಗಿ ಮಹಾಬಲಪರಾಕ್ರಮಿಯಾದ ಗವಾಕ್ಷನು ಅನೇಕಸಾವಿರ ವೀರಭಟರೊಡನೆ ಬಂದು ಸೇರಿದನು. ಕರಡಿಗಳಿಗೆ ಒಡೆಯನಾಗಿ ಮಹಾಬಲವಂತನಾದ ಧೂಮ್ರನು ಇಪ್ಪತ್ತುಸಾವಿರಕೋಟಿ ಸೈನ್ಯದೊಡನೆ ಬಂದನು. ದರೀಮುಖನೆಂಬ ಕಪಿನಾಯಕನು ಸಾವಿರಕೋಟಿ ಕಪಿಗಳೊಡನೆ ಕಾಣಿಸಿಕೊಂಡನು. ಅಶ್ವಿನೀದೇವತೆಗಳ ಮಕ್ಕಳಾಗಿ ಮಹಾಬಲವಂತರಾದ ಮೈಂದ ದ್ವಿವಿದರು ಕೋಟಿಸಾವಿರ ಕಪಿಗಳೊಡನೆ ಬಂದು ಉಪಸ್ಥಿತರಾದರು. ಮಹಾಬಲವಂತನಾದ ಗಜನು ಮೂರು ಕೋಟಿ ಕಪಿಗಳೊಡನೆ ಬಂದು ಸೇರಿದನು. ಕರಡಿಗಳಿಗೆ ನಾಯಕನಾದ ಜಾಂಬವಂತನು ಹತ್ತುಕೋಟಿ ಕರಡಿಗಳೊಡಗೂಡಿ ಬಂದು ಕಾಣಿಸಿಕೊಂಡನು. ರುಮಣ್ವಂತನೆಂಬ ಕಪಿನಾಯಕನು ನೂರುಕೋಟಿ ಕಪಿಗಳೊಡನೆ ಬಂದನು. ಗಂಧಮಾದನನು ಸಾವಿರಕೋಟಿ ಕಪಿಗಳೊಡನೆ ಬಂದು ಕಾಣಿಸಿಕೊಂಡನು. ಆಮೇಲೆ ತನ್ನ ತಂದೆಯಾದ ವಾಲಿಗೆ ಸಮವಾದ ಪರಾಕ್ರಮವುಳ್ಳ ಅಂಗದನು ಅಸಂಖ್ಯಾತ ವಾನರರೊಡನೆ ಬಂದು ಸುಗ್ರೀವನ ಎದುರಿಗೆ ನಿಂತನು. ನಕ್ಷತ್ರದಂತೆ ಕಾಂತಿಯುಳ್ಳ ತಾರನು ಐದುಕೋಟಿ ಕಪಿನಾಯಕರನ್ನು ಕೂಡಿಕೊಂಡು ಬಂದು ಕಾಣಿಸಿಕೊಂಡನು. ಇಂದ್ರಜಾನುವು ಹನ್ನೊಂದುಕೋಟಿ ಕಪಿನಾಯಕರೊಡನೆ ಬಂದು ಕಾಣಿಸಿಕೊಂಡನು. ತರುವಾಯ ಬಾಲಸೂರ್ಯನ ಕಾಂತಿಯಂತೆ ತನುಕಾಂತಿಯುಳ್ಳ ರಂಭನು ಹನ್ನೊಂದುಸಾವಿರದ ಒಂದುನೂರು ಕಪಿಗಳೊಡನೆ ಬಂದು

ಕಾಣಿಸಿಕೊಂಡನು. ದುರ್ಮುಖನು ಎರಡುಕೋಟಿ ಕಪಿಗಳೊಡನೆ ಬಂದು ಸೇರಿದನು. ಕೈಲಾಸ ಪರ್ವತದ ಕೋಡುಗಲ್ಲಿಗೆ ಸಮಾನವಾದ ಶರೀರವುಳ್ಳ, ಭೀಮಪರಾಕ್ರಮಿಗಳಾದ ಸಾವಿರಕೋಟಿ ಕಪಿಗಳೊಡನೆ ಹನುಮಂತನು ಬಂದು ನಿಂತನು. ಮಹಾಪರಾಕ್ರಮಿಯಾದ ನಳನು ನೂರುಕೋಟಿ ಕಪಿಗಳೊಡನೆ ಕೂಡಿಕೊಂಡು ಬಂದು ಅಲ್ಲಿಗೆ ಸೇರಿದನು. ದಧಿಮುಖನು ಹತ್ತುಕೋಟಿ ಕಪಿಗಳೊಡನೆ ಬಂದು ಕಾಣಿಸಿಕೊಂಡನು. ಸುಗ್ರೀವನ ಸಮೀಪದಲ್ಲಿ ಕಾಮರೂಪಿಗಳಾಗಿ ಮಹಾತ್ಮರಾಗಿದ್ದ ಶರಭ ಕುಮುದ ವಹ್ನಿ ರಂಹಸೇ ಮೊದಲಾದ ಅನೇಕಮಂದಿ ಕಪಿನಾಯಕರು ತಮ್ಮ ತಮ್ಮ ಸೇನೆಗಳನ್ನು ಕೂಡಿಕೊಂಡು ಸಮಸ್ತ ಭೂಮಂಡಲವನ್ನೂ ವ್ಯಾಪಿಸಿಕೊಂಡು ಬೊಬ್ಬಿಡುತ್ತ, ಕುಪ್ಪಳಿಸುತ್ತ, ಸೂರ್ಯನನ್ನು ಮೇಘಸಮೂಹಗಳು ಸುತ್ತಿಬರುವಂತೆ ಸುಗ್ರೀವನ ಸುತ್ತಲೂ ನಿಂತಿರಲು, ಸಕಲಸೇನಾಪತಿಗಳು ಆತನ ಸಮೀಪದಲ್ಲಿ ಕೈಮುಗಿದುಕೊಂಡು ನಿಂತಿದ್ದರು! ಅವರ ಲೆಕ್ಕವನ್ನು ಹೇಳುವುದಕ್ಕೆ ಶಕ್ಯವಿಲ್ಲ! ಆ ಬಳಿಕ ಸುಗ್ರೀವನು ಆ ಕಪಿನಾಯಕರನ್ನು ಶ್ರೀರಾಮನಿಗೆ ತೋರಿಸುತ್ತ ಅವರ ದೇಶಗಳನ್ನೂ ಪರಾಕ್ರಮಗಳನ್ನೂ ಹೆಸರುಗಳನ್ನೂ ಹೇಳಿ ಆತನ ಅಪ್ಪಣೆಯಿಂದ ಅವರನ್ನು ಪರ್ವತದ ತಪ್ಪಲುಗಳಲ್ಲಿ ಪಾಳೆಯವಿಳಿಸಿದನು. ಶ್ರೀರಾಮನು ಆ ವಾನರರ ಪರಾಕ್ರಮಪ್ರಾರ್ಥೆಯನ್ನು ಕೇಳಿ ಸಂತುಷ್ಟನಾದನು.



## ೪೦ ನೆಯ ಅಧ್ಯಾಯ

# ಸುಗ್ರೀವನು ಸೀತಾದೇವಿಯನ್ನು ಹುಡುಕುವುದಕ್ಕಾಗಿ ಸೇನೆಗಳನ್ನು ಕಳಿಸಿದ್ದು

ಆಮೇಲೆ ಸುಗ್ರೀವನು ಅತ್ಯಂತ ಹರ್ಷಯುಕ್ತನೂ ಪರಬಲಾಂತಕನೂ ಪುರುಷೋತ್ತಮನೂ ಆದ ಶ್ರೀರಾಮನನ್ನು ಕುರಿತು "ಶ್ರೀರಾಮ, ಮಹಾಬಲವಂತರಾಗಿಯೂ ಕಾಮರೂಪಿಗಳಾಗಿಯೂ ದೇವೇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವುಳ್ಳವರಾಗಿಯೂ ಇರುವ ಈ ಕಪಿನಾಯಕರು ತಮ್ಮ ಸೇನೆಗಳನ್ನು ಕೂಡಿಕೊಂಡು ಬಂದಿರುವರು. ಇವರು ಸಮಸ್ತ ಕಾರ್ಯಗಳನ್ನೂ ಸಾಧಿಸುವುದರಲ್ಲಿ ಪ್ರವೀಣರು. ಇವರಲ್ಲಿ ಕೆಲವರು ಭೂಮಿಯಲ್ಲಿಯೂ ಉದಕದಲ್ಲಿಯೂ ಸಂಚರಿಸ ಬಲ್ಲರು. ಕೆಲವರು ಪರ್ವತಗಳಲ್ಲಿ ಸಂಚರಿಸಬಲ್ಲರು. ನಾನಾದೇಶಗಳಲ್ಲಿದ್ದ ಈ ಕಪಿನಾಯಕರೆಲ್ಲರೂ ನಿನ್ನ ಸೇವೆಗಾಗಿ ಬಂದದ್ದರಿಂದ ನಿನ್ನ ಆಜ್ಞೆಯಲ್ಲಿದ್ದು ನಿನ್ನ ಕಾರ್ಯವನ್ನು ಸಾಧ್ಯಮಾಡುವರು. ಇನ್ನು ನಿನ್ನ ಮನಸ್ಸಿನಲ್ಲೆಣಿಸಿರುವ ಕಾರ್ಯವನ್ನು ಈ ಕಪಿನಾಯಕರಿಗೆ ತಿಳುಹಿಸು. ನಿನ್ನ ಕಾರ್ಯವನ್ನು ನಾನು ಬಲ್ಲವನು. ಆದರೂ ಇವರಿಗೆ ನೀನೇ ಆಜ್ಞೆಮಾಡು" ಎಂದು ನುಡಿದನು.

ಆ ಮಾತನ್ನು ಕೇಳಿ ಶ್ರೀರಾಮನು ಸುಗ್ರೀವನನ್ನು ಆಲಿಂಗಿಸಿ "ಸುಗ್ರೀವ, ಸೀತಾದೇವಿಯು ಜೀವಸಹಿತವಾಗಿ ಇರುವಳೊ ಇಲ್ಲವೊ ಎಂಬ ವೃತ್ತಾಂತವನ್ನು ತಿಳಿಯಬೇಕು. ರಾವಣನಿರುವ ದೇಶವನ್ನು ಕಂಡದ್ದಿಲ್ಲ. ಆದ್ದರಿಂದ ಮೊದಲು ಆತನಿರುವ ದೇಶವನ್ನೂ ಅಲ್ಲಿ ಸೀತಾದೇವಿ ಯಿರುವುದನ್ನೂ ತಿಳಿದು ಆಮೇಲೆ ನಿನ್ನ ಸಹಾಯದಿಂದ ಕಾಲೋಚಿತವಾದ ಕಾರ್ಯವನ್ನು ಮಾಡಬೇಕು. ರಾವಣನಿರುವ ಸ್ಥಳವನ್ನು ಕಾಣುವುದಕ್ಕೆ ನನ್ನಿಂದಲಾದರೂ ಲಕ್ಷ್ಮಣನಿಂದಲಾದರೂ ಆಗದು. ಈ ಕಾರ್ಯವನ್ನು ನಿಶ್ಚಯಿಸುವುದಕ್ಕೆ ನೀನೇ ಸಮರ್ಥನು. ಸುಗ್ರೀವ, ನಮಗೆ ನೀನೇ

ಸಖನಲ್ಲದೆ ಮತ್ತೊಬ್ಬರಿಲ್ಲ. ನೀನು ಮಹಾಪ್ರಾಜ್ಞ. ಕಾಲೋಚಿತವನ್ನು ಬಲ್ಲವನು. ನನ್ನ ಕಾರ್ಯಸ್ಥಿತಿಯನ್ನು ನೀನು ಬಲ್ಲೆಯಾದ್ದರಿಂದ ನೀನು ಈ ಕಾರ್ಯವನ್ನು ನಿಶ್ಚಯಿಸುವುದಕ್ಕೆ ಸಮರ್ಥರಾದ ಕಪಿನಾಯಕರನ್ನು ಆಜ್ಞಾಪಿಸು. ನೀನು ಯಾವಾಗಲೂ ನನಗೆ ಹಿತವಾದ ಕಾರ್ಯದಲ್ಲಿ ಪ್ರೀತಿಯುಳ್ಳವನು. ನೀನು ಕಾರ್ಯಜ್ಞ" ಎಂದು ನುಡಿದನು.

ಸುಗ್ರೀವನು ಮಹಾಪ್ರಸಾದವೆಂದು ಅಂಗೀಕರಿಸಿ ರಾಮಲಕ್ಷ್ಮಣರ ಸಂಮುಖದಲ್ಲಿ ಗುಡುಗಿನಂತೆ ಗಂಭೀರವಾದ ಧ್ವನಿಯುಳ್ಳ ವಿನತನೆಂಬ ಕಪಿನಾಯಕನನ್ನು ಕರೆದು ಹೀಗೆಂದನು : "ವಿನತ, ನೀನು ಸೂರ್ಯಚಂದ್ರರ ಮಕ್ಕಳಾದ ಕಪಿನಾಯಕರನ್ನು ಕೂಡಿಕೊಂಡು ದೇಶಕಾಲಗಳನ್ನು ವಿಚಾರಿಸಿಕೊಂಡು ನೀತಿಯನ್ನರಿತು ಮೂಡಣ ದಿಕ್ಕಿಗೆ ಹೋಗಿ ಅಲ್ಲಿ ರಾವಣನಿರುವ ಸ್ಥಳವನ್ನು ಅರಿಸಿ ಸೀತಾದೇವಿಯನ್ನು ಕಂಡು ಬಾ. ನಿನ್ನ ಜೊತೆಯಲ್ಲಿ ಒಂದು ಲಕ್ಷ ವಾನರರು ಹೋಗಲಿ. ಆ ದಿಕ್ಕಿನಲ್ಲಿರುವ ಗಿರಿದುರ್ಗಗಳಲ್ಲಿಯೂ ವನಾಂತರಗಳಲ್ಲಿಯೂ ಸೀತೆಯನ್ನರಸು. ಬಳಿಕ ಭಾಗೀರಥೀ ಕೌಶಿಕೀ ಸರಯೂ ಯಮುನಾನದೀತೀರಗಳಲ್ಲಿರುವ ಪರ್ವತಗಳಲ್ಲಿ ಹುಡುಕಿ ಮುಂದೆ ಸರಸ್ವತೀನದೀತೀರಕ್ಕೆ ಹೋಗಿ ನೋಡು. ಆಮೇಲೆ ಸಿಂಧೂನದಿಗೆ ಹೋಗಿ ಅಲ್ಲಿಂದ ಮುಂದೆ ವಜ್ರಮಣಿಯಂತೆ ನಿರ್ಮಲೋದಕವುಳ್ಳ ಶೋಣನದಿಗೆ ಹೋಗು. ಕಾಲಮಹೀ ಬ್ರಹ್ಮಮಾಲಾ ವಿದೇಹ ಮಾಳವ ಕಾಶಿ ಕೋಸಲ ಮಾಗಧ ಪುಂಡ್ರ ಅಂಗ ದೇಶಗಳಿಗೆ ಹೋಗಿ ಶ್ರೀರಾಮನ ಪಟ್ಟದ ಅರಸಿಯಾದ ಸೀತಾದೇವಿಯನ್ನು ಹುಡುಕಿನೋಡು. ಸಮುದ್ರ ತೀರಗಳಲ್ಲಿಯೂ ಮಂದರಗಿರಿಪರ್ವತದ ಶಿಖರಗಳಲ್ಲಿಯೂ ಮೀನುಗಳನ್ನೇ ಆಹಾರಮಾಡಿ ಕೊಂಡಿರುವವರಾಗಿಯೂ ಉದಕದೊಳಗೆ ಸಂಚರಿಸಿಕೊಂಡು ನರವ್ಯಾಘ್ರವೆಂಬ ಹೆಸರುಳ್ಳವರಾಗಿಯೂ ಹುಲಿಯಮುಖವುಳ್ಳವರಾಗಿಯೂ ಇರುವ ಕಿರಾತರಿರುವರು. ಆ ಸ್ಥಾನಗಳಲ್ಲಿ ಹುಡುಕಿರಿ. ಮುಂದೆ ಯವದ್ವೀಪ ಸಿಕ್ಕುವುದು. ಆಮೇಲೆ ಶಿಶಿರಪರ್ವತ. ಮುಂದೆ ಶೋಣನದಿಯನ್ನು ದಾಟಿದ ಮೇಲೆ ಸಮುದ್ರ ಸಿಗುತ್ತದೆ. ಅಲ್ಲೆಲ್ಲಾ ಹುಡುಕಿರಿ. ಮುಂದೆ ಕ್ಷೀರಸಮುದ್ರವನ್ನು ಹಾಯ್ದು ಹೋದರೆ ಋಷಭವೆಂಬ ಪರ್ವತವು ಕಾಣುತ್ತದೆ. ಅಲ್ಲಿಂದ ಮುಂದೆ ಸುವರ್ಣ ಮಯವಾದ ಕನಕಾಚಲವಿದೆ. ವಾನರರೆ, ಅಲ್ಲಿ ನೀವು ಸಹಸ್ರಶೀರ್ಷನಾದ ಅನಂತನೆಂಬ ಮಹಾಸರ್ಪವನ್ನು ನೋಡುವಿರಿ. ಅನಂತರ ಉದಯಪರ್ವತವಿದೆ. ನೀವು ಸೀತಾದೇವಿಯನ್ನು ಆ ಸ್ಥಳಗಳಲ್ಲಿ ಚೆನ್ನಾಗಿ ಶೋಧಿಸಿ ನೋಡಬೇಕು. ಆ ಉದಯಪರ್ವತದ ಶಿಖರವು ಸ್ವರ್ಗ ಪರ್ಯಂತವಾಗಿ ವ್ಯಾಪಿಸಿದೆ. ಹಿಂದೆ ವಾಮನಾವತಾರದಲ್ಲಿ ಶ್ರೀಮನ್ನಾರಾಯಣನು ಒಂದು ಪಾದವನ್ನು ಈ ಪರ್ವತದ ಶಿಖರದ ಮೇಲಿಟ್ಟು ಇನ್ನೊಂದನ್ನು ಮೇರುಪರ್ವತದ ಶಿಖರದ ಮೇಲೆ ಇಟ್ಟನು. ಉದಯಪರ್ವತದ ಉತ್ತರದ ಕಡೆಯಿಂದ ಸೂರ್ಯನು ಜಂಬೂದ್ವೀಪವನ್ನು ಸುತ್ತುವರಿಯುತ್ತಾನೆ. ಅಲ್ಲಿ ವೈಖಾನಸ ವಾಲಖಿಲ್ಯರೆಂಬ ಮಹರ್ಷಿಗಳಿರುವರು. ಅವರು ಸೂರ್ಯಪ್ರಭೆಯಂತೆ ಪ್ರಕಾಶಮಾನವಾಗಿ ಬೆಳಗುತ್ತಿರುವರು. ಅಲ್ಲಿಂದ ಮುಂದೆ ಸುದರ್ಶನವೆಂಬ ದ್ವೀಪವಿರುವುದು. ಆ ಸ್ಥಳಗಳಲ್ಲಿ ರಾವಣನನ್ನೂ ಸೀತಾದೇವಿಯನ್ನೂ ಹುಡುಕಿ ನೋಡಿರಿ. ಅಲ್ಲಿಂದ ಪೂರ್ವದಿಕ್ಕಿಗೆ ಮುಂದೆ ಹೋಗಲು ಸಾಧ್ಯವಿಲ್ಲ. ಸೂರ್ಯಚಂದ್ರರು ಅಲ್ಲಿ ಉದಯಿಸುವುದಿಲ್ಲ. ಯಾವಾಗಲೂ ಕತ್ತಲೆ ತುಂಬಿರುತ್ತದೆ. ಅಲ್ಲಿಂದ ಮುಂದೆ ಏನಿದೆಯೋ ನಮಗೆ ತಿಳಿಯದು. ಎಲೈ ವಾನರರೆ, ಉದಯಪರ್ವತದವರೆಗೂ ನೀವು ಹೋಗಿ ಸೀತಾದೇವಿಯನ್ನು ಅರಸಬೇಕು. ಒಂದು ತಿಂಗಳೊಳಗೆ ನೀವು ಹಿಂದಿರುಗಬೇಕು. ಹಿಂದಿರುಗದಿದ್ದರೆ ನಿಮಗೆ ಮರಣದಂಡನೆಯನ್ನು ವಿಧಿಸುತ್ತೇನೆ. ರಘುನಾಥನ ಪತ್ನಿಯನ್ನು ಹುಡುಕಿ ಕಾರ್ಯಸಿದ್ಧಿಯನ್ನು ಪಡೆಯಿರಿ. ಅನಂತರ

ನೀವು ಸುಖದಿಂದ ಬಾಳುತ್ತಿರಬಹುದು" ಎಂದು ಸುಗ್ರೀವನು ವಿನತಾದಿ ಕಪಿನಾಯಕರಿಗೆ ಆಜ್ಞಾಪಿಸಿದನು.

೪೧ ನೆಯ ಅಧ್ಯಾಯ

## ಸುಗ್ರೀವನು ಸೀತಾದೇವಿಯನ್ನು ಹುಡುಕುವುದಕ್ಕಾಗಿ ಕಪಿಗಳನ್ನು ತೆಂಕಣ ದಿಕ್ಕಿಗೆ ಕಳುಹಿಸಿದ್ದು

ಈ ಪ್ರಕಾರ ಸುಗ್ರೀವನು ಸೀತಾದೇವಿಯನ್ನರಸಿ ಬರುವ ನಿಮಿತ್ತವಾಗಿ ಕೆಲವು ವಾನರ ಬಲವನ್ನು ಮೂಡಣ ದಿಕ್ಕಿಗೆ ಹೋಗ ಹೇಳಿ ತೆಂಕಣ ದಿಕ್ಕಿನಲ್ಲಿ ಹುಡುಕುವುದಕ್ಕೆ ಅಗ್ನಿಪುತ್ರನಾದ ನೀಲ, ವಾಯುಪುತ್ರನಾದ ಹನುಮಂತ, ಬ್ರಹ್ಮದೇವನ ಮಗನಾದ ಜಾಂಬವಂತ, ಸುಹೋತ್ರ ಶರಾರಿ ಶರಗುಲ್ಮ ಗಜ ಗವಾಕ್ಷ ಸುಷೇಣ ಋಷಭ ಮೈಂದ ದ್ವಿವಿದ ವಿಜಯ ಗಂಧಮಾದನ ಉಲ್ಕಾಮುಖ ಅಸಂಗ ಮೊದಲಾದ ಮಹಾಪರಾಕ್ರಮಿಗಳಾದ ಕಪಿನಾಯಕರನ್ನು ಕೂಡಿಸಿ ಅವರೆಲ್ಲರಿಗೂ ಅಂಗದನನ್ನು ಅಧಿಪತಿಯನ್ನಾಗಿ ಮಾಡಿ ಅವರನ್ನು ಕುರಿತು ಹೀಗೆ ಹೇಳಿದನು: "ಎಲೈ ಕಪಿನಾಯಕರುಗಳಿರಾ, ನೀವು ದಕ್ಷಿಣ ದಿಕ್ಕಿಗೆ ಹೋಗಬೇಕು. ವಿಂಧ್ಯಪರ್ವತದಲ್ಲಿ ಸೀತಾದೇವಿಯನ್ನೂ ರಾವಣನನ್ನೂ ಅರಸಿನೋಡಿ. ಅಲ್ಲಿಂದ ಮುಂದೆ ದೊಡ್ಡ ಪರ್ವತಗಳಿಂದ ದಾಟುವುದಕ್ಕೆ ದುರ್ಘಟವಾಗಿರುವ ನರ್ಮದಾತೀರಕ್ಕೆ ಹೋಗಿ ನೋಡಿ. ಬಳಿಕ ಗೋದಾವರಿ ಕೃಷ್ಣವೇಣಿ ಮಹಾನದಿ ವರದ ಮುಂತಾದ ನದಿಗಳ ಬಳಿ ಸೀತಾದೇವಿಯನ್ನು ಹುಡುಕಬೇಕು. ಅನಂತರ ವಿದರ್ಭದೇಶ ಮಾಹಿಷಕದೇಶ ಕಳಿಂಗದೇಶಗಳಲ್ಲಿಯೂ ದಂಡಕಾರಣ್ಯ ದಲ್ಲಿರುವ ಪರ್ವತಗಳಲ್ಲಿಯೂ ಗುಹೆಗಳಲ್ಲಿಯೂ ನದೀತೀರಗಳಲ್ಲಿಯೂ ನೋಡಿ. ಆಮೇಲೆ ಆಂಧ್ರದೇಶ ಪುಂಡ್ರಕದೇಶ ಚೋಳದೇಶ ಪಾಂಡ್ಯದೇಶ ಕೇರಳದೇಶಗಳಲ್ಲಿಯೂ ಸೀತಾದೇವಿಯನ್ನು ನೀವು ಅನ್ವೇಷಣೆ ಮಾಡತಕ್ಕದ್ದು. ಬಳಿಕ ಶ್ರೀಗಂಧವೃಕ್ಷಗಳುಳ್ಳ ಮಲಯಪರ್ವತದಲ್ಲಿಯೂ ದೇವತಾಯೋಗ್ಯವಾದ ಉದಕಪ್ರವಾಹವುಳ್ಳ ಕಾವೇರೀತೀರದಲ್ಲಿಯೂ ತಾಮ್ರಪರ್ಣೀ ತೀರದಲ್ಲಿಯೂ ಹುಡುಕಿ ಮಲಯಪರ್ವತದ ಅಗ್ರಭಾಗದಲ್ಲಿ ಸೂರ್ಯಪ್ರಭೆಯಂತೆ ತನುಕಾಂತಿಯುಳ್ಳ ಅಗಸ್ತ್ಯಮುನೀಶ್ವರನನ್ನು ದರ್ಶನಮಾಡಿರಿ. ತಾಮ್ರಪರ್ಣೀತೀರದಲ್ಲಿರುವ ಗ್ರಾಮಗಳಲ್ಲಿ ನೋಡಿ. ಅಲ್ಲಿಂದ ಮುಂದೆ ಮುತ್ತಿನ ಮಣಿಗಳಿಂದ ಅಲಂಕರಿಸಲ್ಪಟ್ಟ ಪಾಂಡ್ಯ ದೇಶದ ಪಟ್ಟಣಗಳಲ್ಲಿ ಹುಡುಕಿ, ಅಲ್ಲಿಂದ ಸಮುದ್ರತೀರಕ್ಕೆ ಹೋಗಿ ಆ ಸಮುದ್ರದ ಮಧ್ಯ ಪ್ರದೇಶದಲ್ಲಿ ಸುವರ್ಣಮಯವಾಗಿರುವ ಮಹೇಂದ್ರಪರ್ವತವನ್ನು ನೋಡಿ. ಆ ಸಮುದ್ರದ ಪಡುವಣ ತೀರದಲ್ಲಿ ಒಂದು ದ್ವೀಪವಿರುವುದು. ಆ ದ್ವೀಪವು ನೂರುಗಾವುದ ದೂರದಲ್ಲಿರು ವುದರಿಂದ ಭೂಚರಪ್ರಾಣಿಗಳ ಸಂಚಾರಕ್ಕೆ ದುರ್ಘಟವಾಗಿರುವುದು. ಆ ದ್ವೀಪದಲ್ಲಿ ಸೀತಾದೇವಿ ಯಿರಬಹುದೆಂದು ತೋರುವುದರಿಂದ ಅಲ್ಲಿ ವಿಶೇಷವಾಗಿ ಅರಸಿ ನೋಡಬೇಕು. ದುರಾತ್ಮನೂ ದೇವೇಂದ್ರನ ಸಂಪತ್ತಿಗಿಂತಲೂ ಅಧಿಕವಾದ ಸಂಪತ್ತುಳ್ಳವನೂ ರಾಕ್ಷಸಾಧಿಪತಿಯೂ ಆದ ರಾವಣನಿಗೆ ಅದೇ ವಾಸಸ್ಥಾನವಾಗಿರುವುದು! ಆ ದಕ್ಷಿಣಸಮುದ್ರದಲ್ಲಿ ಅಂಗಾರಕೆಯೆಂಬ ರಾಕ್ಷಸಿಯು ಪ್ರಾಣಿಗಳ ಛಾಯೆಯನ್ನು ಹಿಡಿದೆಳೆದು ಆ ಪ್ರಾಣಿಗಳನ್ನು ಭಕ್ಷಿಸುವಳು. ನೀವು

ಆ ಸ್ಥಳಗಳಿಗೆ ಹೋಗಿ ಶ್ರೀರಾಮನ ಪಟ್ಟದರಾಣಿಯಾದ ಸೀತಾದೇವಿಯನ್ನರಸಿನೋಡಿರಿ ಆ ಬಳಿಕ ಮುಂದೆ ಹೋದರೆ ಸಮುದ್ರಮಧ್ಯದಲ್ಲಿ ಸಿದ್ಧಚಾರಣಾದಿಗಳಿಂದ ಸೇವಿಸಲ್ಪಟ್ಟದ್ದಾಗಿಯೂ ಚಂದ್ರಸೂರ್ಯಪ್ರಭೆಯಂತೆ ಪ್ರಕಾಶಮಾನವಾದ್ದಾಗಿಯೂ ಸಮುದ್ರೋದಕದಿಂದ ಸುತ್ತುವರಿಯಲ್ಪಟ್ಟದ್ದಾಗಿಯೂ ನಾನಾವರ್ಣವಾಗಿ ಅತ್ಯುನ್ನತವಾದ ಶಿಖರಗಳಿಂದ ಆಕಾಶವನ್ನು ತುಡುಕುವಂತೆ ಒಪ್ಪುತ್ತಿರುವ ಪುಷ್ಪಿತಕವೆಂಬ ಪರ್ವತವಿರುವುದು. ಆ ಪರ್ವತದ ಒಂದು ಶಿಖರವು ಸುವರ್ಣಮಯವಾಗಿರುವುದು. ಅದನ್ನು ಸೂರ್ಯನು ಸೇವಿಸುತ್ತಿರುವನು. ಮತ್ತೊಂದು ಶಿಖರವು ರಜತಮಯವಾಗಿ ಬಿಳುಪಾಗಿರುವುದು ಅದನ್ನು ಚಂದ್ರನು ಸೇವಿಸುತ್ತಿರುವನು ಆ ಪರ್ವತದ ಶಿಖರಗಳು ಮಾಡಿದ ಉಪಕಾರವನ್ನು ಮರೆಯುವ ಕೃತಘ್ನರಿಗೂ 'ದೈವವಿಲ್ಲ ಧರ್ಮವಿಲ್ಲ'ವೆಂಬ ನಾಸ್ತಿಕಬುದ್ಧಿಯುಳ್ಳ ಪಾಪಾತ್ಮರಿಗೂ ಕಾಣಿಸವು ಆ ಪರ್ವತಕ್ಕೆ ನೀವು ಸಾಷ್ಟಾಂಗ ದಂಡಪ್ರಣಾಮಗಳನ್ನು ಮಾಡಿ ಮುಂದೆ ಹದಿನಾಲ್ಕುಗಾವುದ ದೂರ ಹೋಗಿ ಸೂರ್ಯವಾನ್ ಎಂಬ ಪರ್ವತವನ್ನು ದರ್ಶನಮಾಡಿಕೊಂಡು ಮುಂದೆ ವೈದ್ಯುತ ಎಂಬ ಪರ್ವತಕ್ಕೆ ಹೋಗಿರಿ ಆ ಪರ್ವತದಲ್ಲಿ ಬೇಡಿದ ಇಷ್ಟಾರ್ಥಗಳನ್ನು ಕೊಡುವ ಮರಗಳುಳ್ಳ ವನಗಳಲ್ಲಿ ಹುಡುಕಿ ಅಲ್ಲಿರುವ ದಿವ್ಯವಾದ ಕಂದಮೂಲಫಲಗಳನ್ನು ಆಹಾರಮಾಡಿ ಶ್ರೇಷ್ಠವಾದ ಜೇನುತುಪ್ಪವನ್ನು ತೆಗೆದುಕೊಂಡು ಮುಂದೆ ಹೋದರೆ ಕಣ್ಮನಗಳಿಗೆ ಮನೋಹರವಾದ ಕುಂಜರಪರ್ವತವು ತೋರುವುದು ಆ ಪರ್ವತವು ಒಂದುಗಾವುದ ವಿಸ್ತಾರವುಳ್ಳದ್ದಾಗಿ ಹತ್ತುಗಾವುದ ಉನ್ನತವುಳ್ಳದ್ದಾಗಿರುವುದು. ಅಲ್ಲಿ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಅಗಸ್ತ್ಯಮಹಾಮುನಿಯ ಆಶ್ರಮವಿರುವುದು ಮುಂದೆ ಭೋಗವತಿಯೆಂಬ ಪಟ್ಟಣವಿರುವುದು. ಆ ಪಟ್ಟಣವು ಸಮಸ್ತ ಸರ್ಪಗಳಿಗೂ ಆವಾಸಸ್ಥಾನವಾಗಿ ಸರ್ಪಗಳಿಂದ ರಕ್ಷಿಸಲ್ಪಟ್ಟಿರುವುದು. ಅಲ್ಲಿ ವಾಸುಕಿಯೆಂಬ ಮಹಾಭಯಂಕರನಾದ ಸರ್ಪರಾಜನಿರುವನು. ನೀವು ಆ ಪಟ್ಟಣದಲ್ಲಿ ಅರಸಿ ನೋಡಿರಿ. ಅದರ ಸಮೀಪದಲ್ಲಿರುವ ಋಷಭವೆಂಬ ಪರ್ವತವನ್ನು ಹುಡುಕಿರಿ. ಅಲ್ಲಿಂದ ಮುಂದೆ ಮಹಾಭಯಂಕರವಾದ ಪಿತೃಲೋಕಗಳಿರುವುವು. ಅಲ್ಲಿ ಅಂಧಕಾರವು ಕವಿದಿರುವ ಯಮನ ಪಟ್ಟಣವಿರುವುದು. ಆ ದಿಕ್ಕು ನಿಮಗೆ ಹೊಕ್ಕು ನೋಡುವುದಕ್ಕೆ ಅಶಕ್ಯವಾದದ್ದು. ಅಲ್ಲಿಂದ ಮುಂದೆ ಯಾರಿಗೂ ಸಂಚರಿಸಲು ಶಕ್ಯವಲ್ಲ! ಈಗ ನಾನು ಹೇಳಿದ ಸಮಸ್ತ ಪ್ರದೇಶಗಳಲ್ಲಿಯೂ ಸೀತಾದೇವಿಯನ್ನು ಹುಡುಕಿಕೊಂಡು ಬನ್ನಿ. ಸೀತಾದೇವಿಯನ್ನು ಕಂಡು ಆ ಸಂತೋಷವಾರ್ತೆಯನ್ನು ಹೇಳುವಾತನಿಗೆ ನನಗಿರುವ ಐಶ್ವರ್ಯಕ್ಕೆ ಸಮಾನವಾದ ಭಾಗ್ಯವನ್ನು ಕೊಟ್ಟು ಸುಖವಾಗಿರುವ ಹಾಗೆ ಮಾಡುವೆನು. ಆತನು ನನ್ನ ಪ್ರಾಣಗಳಿಗಿಂತಲೂ ವೆಗ್ಗಳವಾದ ಪ್ರಿಯಸಖನಾಗುವನು. ಆತನು ಅನೇಕ ಅಪರಾಧಗಳನ್ನು ಮಾಡಿದರೂ ನನ್ನ ಮಿತ್ರನಾಗಿಯೇ ಇರುವನು. ಎಲೈ ಕಪಿನಾಯಕರುಗಳಿರಾ, ನೀವು ಅನೇಕ ಸದ್ಗುಣಗಳುಳ್ಳವರಾಗಿ ಸತ್ಕುಲಗಳಲ್ಲಿ ಅವತರಿಸಿದವರು ; ಅಪರಿಮಿತವಾದ ಬಲಪರಾಕ್ರಮವುಳ್ಳವರು. ನೀವು ಶ್ರೀರಾಮನ ಪಟ್ಟದ ರಾಣಿಯಾದ ಸೀತಾದೇವಿಯನ್ನು ಅರಸಿಕೊಂಡು ಬಂದು ವೆಗ್ಗಳವಾದ ಐಶ್ವರ್ಯವನ್ನೂ ಅಪರಿಮಿತವಾದ ಕೀರ್ತಿಯನ್ನೂ ಪಡೆದು ಸುಖವಾಗಿರಿ" ಎಂದು ಹೇಳಿದನು.



## ೪೨ ನೆಯ ಅಧ್ಯಾಯ

# ಸುಗ್ರೀವನು ಕಪಿಗಳನ್ನು ಪಡುವಣ ದಿಕ್ಕಿಗೆ ಕಳುಹಿಸಿದ್ದು

ಈ ಪ್ರಕಾರ ಸುಗ್ರೀವನು ಅಂಗದನೇ ಮೊದಲಾದ ಕಪಿನಾಯಕರನ್ನು ತೆಂಕಣ ದಿಕ್ಕಿಗೆ ನೇಮಿಸಿ ತನಗೆ ಮಾವನಾಗಿ ತಾರಾದೇವಿಗೆ ತಂದೆಯಾಗಿ ಮಹಾಬಲಪರಾಕ್ರಮವುಳ್ಳ ಸುಷೇಣನೆಂಬ ಕಪಿಶ್ರೇಷ್ಠನನ್ನು ತನ್ನ ಮಾವನೆಂಬ ಗೌರವದಿಂದ ಕೈಮುಗಿದು ನಮಸ್ಕರಿಸಿದನು ಆಮೇಲೆ ಮರೀಚಿಬ್ರಹ್ಮನ ಮಗನೂ ಅನೇಕ ಕಪಿನಾಯಕರಿಗೆ ಅಧಿಪತಿಯೂ ಪರಾಕ್ರಮಶಾಲಿಯೂ ಬುದ್ಧಿವಂತನೂ ಗರುತ್ಮಂತನಂತೆ ಅತಿ ವೇಗವುಳ್ಳವನೂ ಆದ ಅರ್ಚಿಷ್ಮಂತನೆಂಬ ಕಪಿನಾಯಕನನ್ನೂ ಆತನ ತಮ್ಮಂದಿರಾದ ಕಪಿನಾಯಕರನ್ನೂ ಕರೆದು ಅವರೆಲ್ಲರನ್ನೂ ಕುರಿತು ಹೀಗೆಂದನು : " ಎಲೈ ಕಪಿನಾಯಕರುಗಳಿರಾ, ನೀವು ಸುಷೇಣನನ್ನು ಮುಂದಿಟ್ಟುಕೊಂಡು ಆತನು ಹೇಳಿದಂತೆ ಕೇಳಿಕೊಂಡು ಪಡುವಣ ದಿಕ್ಕಿಗೆ ಹೋಗಿ ಸೀತಾದೇವಿಯನ್ನು ಹುಡುಕಿರಿ ಆ ದಿಕ್ಕಿನಲ್ಲಿರುವ ಸೌರಾಷ್ಟ್ರ ಬಾಹ್ಲೀಕ ಮಂತಾದ ದೇಶಗಳಿಗೆ ಹೋಗಿ ಅಲ್ಲಿರುವ ಪಟ್ಟಣಗಳಲ್ಲಿಯೂ ಪುನ್ನಾಗ ಕುಕ್ಷಿ ತಾಳಿವನಗಳಲ್ಲಿಯೂ ಸಮುದ್ರಗಾಮಿನಿಗಳಾದ ನದಿಗಳಲ್ಲಿಯೂ ಋಷಿಗಳ ಆಶ್ರಮಗಳಲ್ಲಿಯೂ ಅರಣ್ಯಗಳಲ್ಲಿಯೂ ಪರ್ವತಗಳಲ್ಲಿಯೂ ಕಲ್ಲು ಭೂಮಿಗಳುಳ್ಳ ಸ್ಥಳಗಳಲ್ಲಿಯೂ ನೋಡಿ. ಅಲ್ಲಿಂದ ಸಮುದ್ರತೀರಕ್ಕೆ ಹೋಗಿ ಅಲ್ಲಿ ಅನೇಕವಾಗಿರುವ ತಾಳೆಯ ವನಗಳಲ್ಲಿಯೂ ತೆಂಗಿನ ತೋಪುಗಳಲ್ಲಿಯೂ ಪರ್ವತಗಳಲ್ಲಿಯೂ ವನಾಂತರಗಳಲ್ಲಿಯೂ ನೋಡಿ. ಆ ಸಮುದ್ರತೀರದಲ್ಲಿರುವ ಜಟೀಪುರಿ ಅವಂತೀಪಟ್ಟಣಗಳಲ್ಲಿಯೂ ಆ ದೇಶಗಳಲ್ಲಿರುವ ವಿಶಾಲವಾದ ಪಟ್ಟಣಗಳಲ್ಲಿಯೂ ವನಾಂತರಗಳಲ್ಲಿಯೂ ಸಿಂಧೂನದಿ ಸಮುದ್ರ ಸಂಗಮದಲ್ಲಿಯೂ ಸೋಮಗಿರಿಯೆಂಬ ಪರ್ವತದಲ್ಲಿಯೂ ಆ ಪರ್ವತದ ತಪ್ಪಲುಗಳಲ್ಲಿಯೂ ಪಾರಿಯ[redacted]ವೆಂಬ ಪರ್ವತದಲ್ಲಿಯೂ ನೋಡಿ. ಆ ಪರ್ವತದಲ್ಲಿ ಇಪ್ಪತ್ತುನಾಲ್ಕುಕೋಟಿ ಗಂಧರ್ವರಿರುವರು [redacted]ಅವರು ಕಾಮರೂಪಿಗಳಾಗಿ ಮಹಾಭಯಂಕರಾಕಾರರಾಗಿ ಯಜ್ಞಪುರುಷನಿಗೆ ಸಮಾನವಾದ ತನುಕಾಂತಿಯುಳ್ಳವರಾಗಿರುವರು. ಅವರ ಸಮೀಪಕ್ಕೆ ಹೋಗಬೇಡಿ. ಅವರು ಸತ್ತ್ವಗುಣವುಳ್ಳವರು; ಮಹಾಬಲವಂತರು ; ಯಾರಿಗೂ ಸಾಧ್ಯವಾಗದವರಾಗಿ ಆ ಸ್ಥಳಗಳಲ್ಲಿ ಕಂದಮೂಲ ಫಲಗಳನ್ನು ರಕ್ಷಿಸಿಕೊಂಡಿರುವರು. ಅವರ ಎಲ್ಲೆಯೊಳಗೆ ಕಂದಮೂಲ ಫಲಗಳನ್ನು ಮುಟ್ಟದೆ ಉಪಾಯದಿಂದ ಸೀತಾದೇವಿಯನ್ನರಸಿ ಕಾಣಬೇಕು. ಅಲ್ಲಿ ನಾನಾಪ್ರಕಾರವಾದ ವೃಕ್ಷಗಳಿಂದ ಇಟ್ಟಣಿಸಿದ ವಜ್ರಗಿರಿಯೆಂಬ ಪರ್ವತವಿದೆ. ಆ ಪರ್ವತವು ನೂರುಗಾವುದ ಉನ್ನತವೂ ನೂರುಗಾವುದ ಹರಹೂ ಉಳ್ಳದ್ದಾಗಿರುವುದು. ಅದರಲ್ಲಿ ಅನೇಕ ಗುಹೆಗಳಿರುವುವು. ಆ ಗುಹೆಗಳಲ್ಲಿ ಸೀತಾದೇವಿಯನ್ನು ಅರಸಿನೋಡಿ. ಆ ಸಮುದ್ರದ ಅಗ್ರಭಾಗದಲ್ಲಿ ಚಕ್ರವಾಕವೆಂಬ ಪರ್ವತವಿರುವುದು. ಆ ಪರ್ವತದಲ್ಲಿ ವಿಶ್ವಕರ್ಮನು ಸಾವಿರ ಅಲಗುಗಳುಳ್ಳ ಸುದರ್ಶನವೆಂಬ ಚಕ್ರವನ್ನು ನಿರ್ಮಿಸಿದನು. ಪುರುಷೋತ್ತಮನಾದ ನಾರಾಯಣನು ಆ ಗಿರಿಯಲ್ಲಿ ಪಂಚಜನನೆಂಬ ದಾನವನನ್ನೂ ಹಯಗ್ರೀವನೆಂಬ ದಾನವನನ್ನೂ ಕೊಂದು ಪಾಂಚಜನ್ಯವೆಂಬ ಶಂಖವನ್ನೂ ಸುದರ್ಶನವೆಂಬ ಚಕ್ರವನ್ನೂ ತಂದನು. ಚಕ್ರವಾಕಗಿರಿಯ ತಪ್ಪಲುಗಳಲ್ಲಿ ವಿಶಾಲವಾದ ಗುಹೆಗಳಿವೆ. ಅವುಗಳಲ್ಲಿ ರಾವಣನನ್ನೂ ಸೀತಾದೇವಿಯನ್ನೂ ಹುಡುಕಿ ಇನ್ನೂ ಪಡುವಲಾಗಿ ನಡೆದರೆ ಅರುವತ್ತು ಸಾವಿರ ಸುವರ್ಣಮಯವಾದ ಪರ್ವತಗಳು ಬಾಲಸೂರ್ಯನಂತೆ ಅತಿಪ್ರಕಾಶಮಾನವಾಗಿ ಒಪ್ಪುತ್ತಿರುವುವು.

ಅಲ್ಲಿ ಸುವರ್ಣಮಯವಾದ ವೃಕ್ಷಗಳು ಸದಾಕಾಲದಲ್ಲೂ ಪುಷ್ಪಫಲಗಳಿಂದ ಮನೋಹರವಾಗಿರುವುವು ಆ ಅರುವತ್ತು ಸಾವಿರ ಪರ್ವತಗಳ ಮಧ್ಯದಲ್ಲಿ ಪರ್ವತರಾಜನಾದ ಮಹಾಮೇರುಪರ್ವತವಿರುವುದು. ಆ ಪರ್ವತಕ್ಕೆ ಪೂರ್ವದಲ್ಲಿ ಆದಿತ್ಯನು 'ಎಲೈ ಪರ್ವತರಾಜನೆ, ನಿನ್ನಲ್ಲಿ ಆಶ್ರಯಮಾಡಿಕೊಂಡಿರುವ ವೃಕ್ಷಾದಿಗಳೆಲ್ಲವೂ ಸುವರ್ಣದಂತೆ ತನುಕಾಂತಿಯುಳ್ಳವಾಗಲಿ! ನಿನ್ನ ಸಮೀಪಕ್ಕೆ ಬಂದು ನಿನ್ನಲ್ಲಿ ವಾಸಮಾಡುವವರೂ ಸುವರ್ಣದಂತೆ ದಿವ್ಯಕಾಂತಿಯುಳ್ಳವರಾಗಲಿ!' ಎಂದು ವರವನ್ನು ಕೊಟ್ಟನು ಮಹಾಮೇರುಪರ್ವತಕ್ಕೆ ವಿಶ್ವೇದೇವತೆಗಳು ಅಷ್ಟವಸುಗಳು ಮರುತ್ತುಗಳು ಮೊದಲಾದವರು ಬಂದು ಸಾಯಂಕಾಲ ಸಂಧ್ಯಾವಂದನೆಗಳನ್ನು ಮಾಡಿ ಸೂರ್ಯೋಪಾಸನವನ್ನು ಮಾಡುವರು. ಆಮೇಲೆ ಸೂರ್ಯನು ಆ ದೇವತೆಗಳು ಮಾಡಿದ ಪೂಜೆಯನ್ನು ಕೈಕೊಂಡು ಆ ಪರ್ವತದ ಪಡುವಣ ದಿಕ್ಕಿನಲ್ಲಿ ಮರೆಯಾಗಿ ಅಸ್ತಂಗತನಾಗುವನು ಸೂರ್ಯನು ಹತ್ತು ಸಾವಿರ ಗಾವುದಗಳ ದಾರಿಯನ್ನು ಅರ್ಧ ಮುಹೂರ್ತದಲ್ಲಿ ದಾಟುವನು ಮಹಾಮೇರುಪರ್ವತದ ಪಡುವಣ ದಿಕ್ಕಿನ ಕೋಡುಗಲ್ಲಿನ ಮೇಲೆ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ರತ್ನಖಚಿತವೂ ಸುವರ್ಣಮಯವೂ ಆದ ದಿವ್ಯಗೃಹ ಒಂದುಂಟು ಅದು ಮಹಾತ್ಮನಾದ ವರುಣನ ಅರಮನೆ ಆ ಅರಮನೆಯು ನಾನಾಪ್ರಕಾರವಾದ ಉಪ್ಪರಿಗೆಗಳಿಂದಲೂ ಚಿತ್ರಗಳಿಂದಲೂ ರಮಣೀಯವಾಗಿರುವುದು. ಅದರಲ್ಲಿಯೂ ಅಲ್ಲಲ್ಲಿರುವ ದುರ್ಘಟವಾದ ಸ್ಥಳಗಳಲ್ಲಿಯೂ ಸೀತಾದೇವಿಯನ್ನರಸಿ ಕಾಣಿರಿ. ಮಹಾಮೇರುಪರ್ವತದಲ್ಲಿ ಬ್ರಹ್ಮದೇವನಿಗೆ ಸಮಾನನಾಗಿ ಧರ್ಮರಹಸ್ಯವನ್ನು ಬಲ್ಲ ತಪಸ್ವಿಯಾದ ಮೇರುಸಾವರ್ಣಿಯೆಂಬ ಋಷೀಶ್ವರನಿರುವನು. ಆ ಋಷೀಶ್ವರನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಸೀತಾದೇವಿಯ ವೃತ್ತಾಂತವನ್ನು ಕೇಳಿರಿ ಎಲೈ ಕಪಿನಾಯಕರುಗಳಿರಾ, ಈ ಸ್ಥಳಗಳೇ ಕಪಿಗಳಿಗೆ ಸಂಚರಿಸುವುದಕ್ಕೆ ಸಾಧ್ಯವಾದವುಗಳು ಆಮೇಲೆ ಸೂರ್ಯಸಂಚಾರವಿಲ್ಲದ ಭೂಮಿಯನ್ನು ನಾನು ಅರಿತವನಲ್ಲ. ನೀವು ಸೀತಾದೇವಿಯನ್ನರಸಿ ಕಂಡು ಒಂದು ತಿಂಗಳೊಳಗೆ ಬನ್ನಿ. ತಿಂಗಳ ಮೇಲೆ ವಿಳಂಬಮಾಡಿಕೊಂಡಿರಬೇಡಿ. ಈ ಕಪಿನಾಯಕರಲ್ಲಿ ಯಾರು ಒಂದು ತಿಂಗಳೊಳಗಾಗಿ ಬರದಿರುವರೋ ಅವರಿಗೆ ಪ್ರಾಣಾಂತ್ಯವಾದ ಆಜ್ಞೆಯನ್ನು ಮಾಡಿಸುವೆನು. ಆದಕಾರಣ ನೀವು ನಾನು ಹೇಳಿದ ಸ್ಥಾನಗಳಿಗೆ ಹೋಗಿ ಸೀತಾದೇವಿಯನ್ನರಸಿಕೊಂಡು ಬನ್ನಿ. ಸುಷೇಣನು ನನಗೆ ಮಾವನಾಗಿ ಗುರುವಿಗೆ ಸಮಾನನಾದವನು. ನೀವು ಆತನ ಮಾತಿಗೊಳಗಾಗಿರಿ. ನೀವು ಪಡುವಣ ದಿಕ್ಕಿಗೆ ಹೋಗಿ ಸೀತಾದೇವಿಯನ್ನರಸಿ ಕಂಡು ಬಂದಿರಾದರೆ ನಮಗೆ ಉಪಕಾರವನ್ನು ಮಾಡಿದ ಶ್ರೀರಾಮನಿಗೆ ಪ್ರತ್ಯುಪಕಾರವನ್ನು ಮಾಡಿ ಕೃತಾರ್ಥರಾಗುವೆವು. ಸೀತಾದೇವಿಯನ್ನು ಕಂಡುಬರುವ ಕಾರ್ಯಪ್ರಸಂಗದಲ್ಲಿ ಆವಶ್ಯಕವಾಗುವ ಇತರ ಕಾರ್ಯಗಳನ್ನು ದೇಶಕಾಲಗಳನ್ನರಿತು ನೆರವೇರಿಸಿ" ಎಂದು ಆಜ್ಞಾಪಿಸಿದನು.

ಆ ಮಾತನ್ನು ಕೇಳಿ ಆ ಕಪಿನಾಯಕರು ಸುಷೇಣನನ್ನು ಮುಂದಿಟ್ಟುಕೊಂಡು ವರುಣನಿಂದ ಪರಿಪಾಲಿಸಲ್ಪಟ್ಟ ಪಶ್ಚಿಮದಿಕ್ಕಿನಲ್ಲಿ ಸೀತಾದೇವಿಯನ್ನರಸಿ ಕಾಣುವುದಕ್ಕೋಸ್ಕರ ತೆರಳಿದರು.



೪೩ ನೆಯ ಅಧ್ಯಾಯ

## ಸುಗ್ರೀವನು ಸೀತಾದೇವಿಯನ್ನರಸುವುದಕ್ಕಾಗಿ ಕಪಿಗಳನ್ನು ಬಡಗಣ ದಿಕ್ಕಿಗೆ ಕಳುಹಿಸಿದ್ದು

ತರುವಾಯ ಸುಗ್ರೀವನು ಮಹಾಸಮರ್ಥನಾದ ಶತವಲಿಯನ್ನು ಕರೆದು ಆತನನ್ನು ಕುರಿತು ತನಗೂ ಶ್ರೀರಾಮನಿಗೂ ಹಿತವಾದ ಮಾತುಗಳಿಂದ ಹೀಗೆ ಆಜ್ಞಾಪಿಸಿದನು "ಶತವಲಿ, ನೀನು ನಿನಗೆ ಸಮಾನರೂ ಯಮನ ಮಕ್ಕಳೂ ನಿನ್ನ ಮಂತ್ರಿಗಳೂ ಆದ ಕಪಿನಾಯಕರನ್ನು ಕೂಡಿಕೊಂಡು ಬಡಗಣ ದಿಕ್ಕಿಗೆ ಹೋಗು. ಹಿಮವತ್ಪರ್ವತಪರ್ಯಂತ ಸಂಚಾರಮಾಡಿ ಶ್ರೀರಾಮನ ಪಟ್ಟದ ರಾಣಿಯಾದ ಸೀತಾದೇವಿಯನ್ನರಸಿ ಬಾ. ಈ ಸಮಯದಲ್ಲಿ ಶ್ರೀರಾಮನ ಕಾರ್ಯವನ್ನು ಸಾಧ್ಯಮಾಡಿದೆವಾದರೆ ನಾವೆಲ್ಲರೂ ಆತನ ಕರುಣೆಯಿಂದ ಕೃತಾರ್ಥರಾಗುವೆವು ನಾವು ಆತನಿಂದ ಮೊದಲೇ ಉಪಕಾರವನ್ನು ಪಡೆದವರು. ಆತನಿಗೆ ಪ್ರತ್ಯುಪಕಾರವನ್ನು ಮಾಡಿದರೆ ನಮ್ಮ ಜನ್ಮವು ಸಫಲವಾಗುವುದು. ನಾವು ಶ್ರೀರಾಮನಿಂದ ಉಪಕಾರವನ್ನು ಪಡೆದು ಪ್ರತ್ಯುಪಕಾರವನ್ನು ಮಾಡದಿರ ಬಾರದು. ಇದನ್ನು ನಿನ್ನ ಮನಸ್ಸಿಗೆ ಸರಿತಂದುಕೊಂಡು ನನಗೋಸ್ಕರ ಸೀತಾದೇವಿಯನ್ನರಸಿಕೊಂಡು ಬರಬೇಕು. ಶ್ರೀರಾಮನು ಸಾಮಾನ್ಯ ಮನುಷ್ಯನಲ್ಲ. ಆತನು ಪುರುಷೋತ್ತಮನು. ನಮ್ಮಲ್ಲಿ ಬಹು ಪ್ರೀತಿಯುಳ್ಳವನು. ಆದಕಾರಣ ನೀವು ಬಡಗಣ ದಿಕ್ಕಿಗೆ ಹೋಗಿ ಆ ದಿಕ್ಕಿನಲ್ಲಿರುವ ವನದುರ್ಗ ಜಲದುರ್ಗ ಗಿರಿದುರ್ಗ ಮೊದಲಾದ ಪ್ರದೇಶಗಳಲ್ಲಿಯೂ ಪಟ್ಟಣಗಳಲ್ಲಿಯೂ ನಿಮ್ಮ ಪರಾಕ್ರಮಕ್ಕೆ ತಕ್ಕಹಾಗೆ ವಿಚಾರಿಸಿ ಸೀತಾದೇವಿಯನ್ನು ಹುಡುಕಿರಿ. ಆ ಬಡಗಣದಿಕ್ಕಿನಲ್ಲಿರುವ ಮ್ಲೇಚ್ಛ, ಪುಳಿಂದ ಶೂರಸೇನ, ಪ್ರಸ್ಥಲ, ಭರತದೇಶ, ಕುರು, ಮಾದ್ರ, ಕಾಂಭೋಜ, ಯವನ, ಶಕ, ಆರಟ್ಟ, ಬಾಹ್ಲಿಕ, ಋಷಿಕ, ಪೌರವ, ಟಂಕಣ, ಚೀನ, ಪರಮಚೀನ ಮೊದಲಾದ ದೇಶಗಳಲ್ಲಿ ಹುಡುಕಿನೋಡಿ. ಆಮೇಲೆ ದೇವಗಂಧರ್ವರಿಂದ ಸೇವಿಸಲ್ಪಟ್ಟ ಸೋಮಾಶ್ರಮಕ್ಕೆ ಹೋಗಿ ಅಲ್ಲಿಂದ ಮುಂದೆ ದೊಡ್ಡ ತಪ್ಪಲುಗಳುಳ್ಳ ಕಾಳಗಿರಿಯೆಂಬ ಪರ್ವತಕ್ಕೆ ಹೋಗಿ ಆ ಪರ್ವತದ ಗುಹೆಗಳಲ್ಲಿಯೂ ಜರಿಗಳಲ್ಲಿಯೂ ಅರಸಿನೋಡಿ. ಅಲ್ಲಿಂದ ಮುಂದೆ ಹೇಮಗರ್ಭವೆಂಬ ಪರ್ವತಕ್ಕೆ ಹೋಗಿ ಅಲ್ಲಿಂದ ಮುಂದೆ ಸಮಸ್ತ ಪಕ್ಷಿಗಳಿಗೂ ಆಶ್ರಯಸ್ಥಾನವಾದ ದೇವಸಖವೆಂಬ ಹೆಸರುಳ್ಳ ಪರ್ವತಕ್ಕೆ ಹೋಗಿ. ಆ ಪರ್ವತ ದಲ್ಲಿರುವ ವನಸಮೂಹಗಳಲ್ಲಿಯೂ ಗುಹೆಗಳಲ್ಲಿಯೂ ಅರಸಿನೋಡಿ. ಅಲ್ಲಿಂದ ಮುಂದೆ ನೂರು ಗಾವುದಪರ್ಯಂತ ಪರ್ವತಗಳೂ ನದಿಗಳೂ ವನಗಳೂ ಪಟ್ಟಣಗಳೂ ಪ್ರಾಣಿಗಳೂ ಇಲ್ಲದ ಮರಳುಗಾಡನ್ನು ದಾಟಿ ಮುಂದೆ ಹೋದರೆ ಮನೋಹರವೂ ಅತಿಬಿಳುಪೂ ಆದ ಕೈಲಾಸಪರ್ವತವನ್ನು ಕಂಡು ಅತ್ಯಂತ ಸಂತೋಷಪಡುವಿರಿ. ಆ ಪರ್ವತದ ಬಡಗಣ ಶಿಖರದಲ್ಲಿ ವಿಶ್ವಕರ್ಮನಿಂದ ನಿರ್ಮಿತವಾಗಿಯೂ ರತ್ನಖಚಿತವಾಗಿಯೂ ಸುವರ್ಣಮಯವಾಗಿಯೂ ಇರುವ ರಮಣೀಯವಾದ ಕುಬೇರನ ಮನೆಯು ಇರುವುದು. ಅಲ್ಲಿ ಸುವರ್ಣಕಮಲಗಳಿಂದ ಪರಿಪೂರ್ಣವೂ ವಿಶಾಲವೂ ಹಂಸಪಕ್ಷಿ ಕೊಳರ್ವಕ್ಕಿಗಳಿಂದ ಪರಿಪೂರ್ಣವೂ ಎನಿಸಿದ ಒಂದು ಕೊಳವಿರುವುದು, ಅದರಲ್ಲಿ ಸಮಸ್ತ ಯಕ್ಷರಿಗೂ ಅಧಿಪತಿಯಾದ ಕುಬೇರನು ಅಪ್ಸರಃಸ್ತ್ರೀಯರೊಡನೆಯೂ ಗುಹ್ಯಕರೆಂಬ ದೇವತೆ ಗಳೊಡನೆಯೂ ಕೂಡಿಕೊಂಡು ಜಲಕ್ರೀಡೆಯಾಡುತ್ತಿರುವನು. ಅಲ್ಲಿ ಯಾರಿಗೂ ಪ್ರವೇಶಮಾಡು ವುದಕ್ಕೆ ಅಸಾಧ್ಯವಾದ ಕ್ರೌಂಚವೆಂಬ ಬಿಲದ್ವಾರವಿರುವುದು. ಆ ಬಿಲದ್ವಾರವನ್ನು ಹೊಕ್ಕು

ಹೋಗುವಲ್ಲಿ ಸಾವಧಾನದಿಂದಿರಿ. ಆ ಬಿಲದಲ್ಲಿ ಸಮಸ್ತ ದೇವತೆಗಳಿಂದಲೂ ಪೂಜಿಸಲು ಯೋಗ್ಯರೂ ಮಹಾತ್ಮರೂ ಮಹಾವೀರರೂ ಸೂರ್ಯಪ್ರಭೆಯಂತೆ ತನುಕಾಂತಿಯುಳ್ಳವರೂ ಆದ ಋಷಿಗಳಿರುವರು. ಅವರನ್ನು ನೋಡಿ ವಿಚಾರಿಸಿ. ಆ ಕ್ರೌಂಚಪರ್ವತದ ತಪ್ಪಲುಗಳಲ್ಲಿ ಅನೇಕ ಕೋಡುಗಲ್ಲುಗಳೂ ದೊಡ್ಡ ಕಲ್ಲರೆಗಳೂ ಇರುವುವು. ಅಲ್ಲಿ ಹುಡುಕಿನೋಡಿ. ಅಲ್ಲಿಂದ ಮುಂದೆ ಮರಗಳಿಲ್ಲದ ಕಾಮಶೈಲವೆಂಬ ಬೆಟ್ಟವಿರುವುದು. ಅಲ್ಲಿ ಸಮಸ್ತ ಪಕ್ಷಿಗಳಿಗೂ ಆಶ್ರಯವಾದ ಮಾನಸಸರೋವರ ವಿರುವುದು. ಆ ಬೆಟ್ಟವು ದೇವದಾನವರೇ ಮೊದಲಾದವರಿಗೂ ಸಂಚರಿಸುವುದಕ್ಕೆ ಅಸಾಧ್ಯವಾದದ್ದು. ಆ ದೇಶವನ್ನು ದಾಟಿ ಸಮಸ್ತ ಸಿದ್ಧರಿಂದಲೂ ಋಷಿಗಳಿಂದಲೂ ಇಟ್ಟಣಿಸಲ್ಪಟ್ಟ ವಾಲಖಿಲ್ಯಾಶ್ರಮಕ್ಕೆ ಹೋಗಿ ತಪಸ್ಸಾಮರ್ಥ್ಯದಿಂದ ಶುದ್ಧಾತ್ಮರಾದ ವಾಲಖಿಲ್ಯರಿಗೆ ನಮಸ್ಕಾರವನ್ನು ಮಾಡಿ ಸೀತಾದೇವಿಯ ವೃತ್ತಾಂತವನ್ನು ಕೇಳಿ. ಅಲ್ಲಿ ಹಂಸಪಕ್ಷಿಗಳಿಂದ ರಮಣೀಯವಾದ ವೈಖಾನಸವೆಂಬ ಕೊಳವಿರುವುದು. ಆ ಕೊಳಕ್ಕೆ ನಿತ್ಯದಲ್ಲೂ ಜಲಪಾನಾರ್ಥವಾಗಿ ಅನೇಕ ಹೆಣ್ಣಾನೆಗಳನ್ನು ಕೂಡಿಕೊಂಡು ಬರುವ ಸಾರ್ವಭೌಮವೆಂಬ ಕುಬೇರನ ಗಜವನ್ನು ನೋಡಿರಿ. ಅಲ್ಲಿಂದ ಮುಂದೆ ಹೋದರೆ ಚಂದ್ರ ಸೂರ್ಯ ನಕ್ಷತ್ರಗಳಿಲ್ಲದ್ದಾದರೂ ಯಾವಾಗಲೂ ತಪಸ್ವಿಗಳಿಂದ ಪ್ರಕಾಶಮಾನವಾಗಿ ಒಪ್ಪುವ ಒಂದು ದೇಶವಿರುವುದು. ಅಲ್ಲಿ ಮಹಾತ್ಮರಾಗಿ ತಮ್ಮ ತನುಕಾಂತಿಯಿಂದ ಬೆಳಗುತ್ತಿರುವ ತಪಸ್ವಿಗಳಿರುವರು. ಅಲ್ಲಿಂದ ಮುಂದೆ ಶೈಲೋದವೆಂಬ ಒಂದು ನದಿ ಇರುವುದು. ಆ ನದಿಯ ಎರಡು ತೀರಗಳಲ್ಲಿಯೂ ಬಿದಿರುಗಳು ಒಂದು ತೀರದಿಂದ ಮತ್ತೊಂದು ತೀರಕ್ಕೆ ಬಗ್ಗಿರುವುವು. ಅಲ್ಲಿರುವ ಋಷಿಗಳು ಆ ಬಿದಿರುಗಳನ್ನು ಹಿಡಿದುಕೊಂಡು ಒಂದು ತಡಿಯಿಂದ ಮತ್ತೊಂದು ತಡಿಗೆ ಸಂಚರಿಸುತ್ತಿರುವರು. ಆ ನದಿಯು ಪುಣ್ಯವನ್ನು ಮಾಡಿದವರಿಗೆ ಸಮಸ್ತಭೋಗಗಳನ್ನೂ ಕೊಡುತ್ತಿರುವುದು. ಅದರ ತೀರದಲ್ಲಿ ಪುಷ್ಪಫಲಗಳಿಂದ ಇಟ್ಟಣಿಸಿದ ವನಗಳಿರುವುವು. ಆ ವನಗಳಲ್ಲಿ ಎಲ್ಲಿ ನೋಡಿದರೂ ದಿವ್ಯವಾದ ಪಕ್ಷಿಗಳು ಸ್ವರಗೈಯುತ್ತಿರುವುವು. ವೃಕ್ಷಗಳು ದಿವ್ಯಗಂಧವುಳ್ಳವಾಗಿಯೂ ರಸವತ್ತಾಗಿಯೂ ನುಣುಪಾಗಿಯೂ ಇದ್ದು ಮನಸ್ಸಿಗೆ ಬೇಕಾದ ಫಲಗಳನ್ನು ಕೊಡುತ್ತಿರುವುವು. ಕೆಲವು ವೃಕ್ಷಗಳು ಪಾನಯೋಗ್ಯವಾದ ಪಾನೀಯಗಳನ್ನೂ ಸ್ವಾದುವಾದ ಭಕ್ಷ್ಯಗಳನ್ನೂ ಕೊಡುವುವು. ಆ ವನಗಳಲ್ಲಿ ನವಯೌವನವುಳ್ಳ ಕೋಮಲಾಂಗಿಯರಾದ ಗಂಧರ್ವ ಕಿನ್ನರ ಸಿದ್ಧವಿದ್ಯಾಧರಾದಿ ಸ್ತ್ರೀಯರೊಡನೆ ದೇವತೆಗಳು ರಮಿಸಿಕೊಂಡಿರುವರು. ಅಲ್ಲಿರುವ ಪ್ರಾಣಿಗಳು ಪುಣ್ಯಾತ್ಮರು. ಅಲ್ಲಿಂದ ಮುಂದೆ ಉತ್ತರಸಮುದ್ರದ ಸಮೀಪದಲ್ಲಿ ನಾನಾರತ್ನಮಯವಾದ ಸೋಮಗಿರಿಯೆಂಬ ಪರ್ವತವಿದೆ. ಆ ಪ್ರದೇಶದಲ್ಲಿ ಸೂರ್ಯ ಸಂಚಾರವಿಲ್ಲದಿದ್ದರೂ ಆ ಗಿರಿಯು ಸೂರ್ಯಪ್ರಭೆಯಂತೆ ಒಪ್ಪುವ ತನ್ನ ತೇಜಸ್ಸಿನಿಂದ ಬೆಳಗುತ್ತಿರುವುದು. ಅಲ್ಲಿ ವಿಶ್ವಾತ್ಮಕನಾಗಿ ಷಡ್ಗುಣೈಶ್ವರ್ಯಸಂಪನ್ನನಾಗಿ ಏಕಾದಶರುದ್ರಾತ್ಮಕನಾದ ಪರಮೇಶ್ವರನಿರುವನು. ಅಲ್ಲಿ ಸಮಸ್ತ ದೇವತೆಗಳಿಗೂ ಒಡೆಯನಾದ ಬ್ರಹ್ಮರ್ಷಿಗಳಿಂದ ಸುತ್ತುವರಿಯಲ್ಪಟ್ಟ ಬ್ರಹ್ಮದೇವನಿರುವನು. ಉತ್ತರಕುರುದೇಶಗಳಿಗೆ ಬಡಗಲಾಗಿರುವ ಆ ಸೋಮಗಿರಿಗೆ ಅವಶ್ಯವಾಗಿ ಹೋಗಿ ಸೀತಾದೇವಿಯನ್ನರಸಬೇಕು. ಉಳಿದ ಪ್ರಾಣಿಗಳಿಗೆ ಅಲ್ಲಿ ಸಂಚರಿಸುವುದಕ್ಕೆ ಅಸಾಧ್ಯ. ಇವೇ ವಾನರರಿಗೆ ಸಂಚರಿಸುವುದಕ್ಕೆ ಯೋಗ್ಯವಾದ ಸ್ಥಳಗಳು. ಅಲ್ಲಿಂದ ಮುಂದೆ ಸೂರ್ಯಸಂಚಾರವಿಲ್ಲದ್ದರಿಂದ ದಿಕ್ಕುಗಳು ಕಾಣುವುದಿಲ್ಲ. ಅವಕ್ಕಾಚೆಯ ಕಡೆಯಲ್ಲಿ ದೇಶಗಳಿಲ್ಲ. ಎಲೈ ಕಪಿನಾಯಕರುಗಳಿರಾ, ನೀವು ಬಡಗಣ ದಿಕ್ಕಿಗೆ ಹೋಗಿ ನಾನು ಹೇಳಿದ ಸ್ಥಾನಗಳಲ್ಲಿಯೂ ಮತ್ತಿತರ ದೇಶಗಳಲ್ಲಿಯೂ ಹುಡುಕಿ ಯಾವ ಪ್ರಕಾರದಿಂದಲಾದರೂ ಸೀತಾದೇವಿಯನ್ನು ಕಂಡುಬಂದು ಶ್ರೀರಾಮನಿಗೆ ಸಂತೋಷವನ್ನುಂಟುಮಾಡಿ. ಅದರಿಂದ ನನಗೆ

ಅತ್ಯಂತ ಶೀಘ್ರವಾದ ಮನೋವೇಗವುಳ್ಳವರಾಗುವಿರಿ. ನೀವು ಸೀತಾದೇವಿಯನ್ನರಸಿಕೊಂಡು ಬಂದು ಕೃತಾರ್ಥರಾಗಿ ನನ್ನಿಂದ ಸತ್ಕಾರಗಳನ್ನು ಪಡೆದು ಸಮಸ್ತ ಶತ್ರುಗಳನ್ನೂ ಜಯಿಸಿ ಸುಖವಾಗಿ" ಎಂದು ನುಡಿದನು.

—:o:—

## ೪೪ನೆಯ ಅಧ್ಯಾಯ

# ಶ್ರೀರಾಮನು ಹನುಮಂತನಿಗೆ ತನ್ನ ಮುದ್ರೆಯುಂಗುರವನ್ನು ಕೊಟ್ಟಿದ್ದು

ಈ ಪ್ರಕಾರ ಸುಗ್ರೀವನು ಸೀತಾದೇವಿಯನ್ನರಸುವುದಕ್ಕೆ ಕಪಿನಾಯಕರನ್ನು ಕಳುಹಿಸಿ ಹನುಮಂತನು ಆ ಕಾರ್ಯವನ್ನು ಸಾಧ್ಯಮಾಡುವುದಕ್ಕೆ ಸಮರ್ಥನೆಂದೆಣಿಸಿ ಆತನನ್ನು ಕುರಿತು ವಿಶೇಷ ಉಪಚಾರಪೂರ್ವಕವಾಗಿ ಹೀಗೆಂದನು: "ಹನುಮಂತ, ನೀನು ಭೂಲೋಕದಲ್ಲಿಯೂ ಅಂತರಿಕ್ಷಲೋಕದಲ್ಲಿಯೂ ಉದಕದಲ್ಲಿಯೂ ಸಂಚರಿಸಬಲ್ಲೆಯೆಂಬುದಕ್ಕೆ ಸಂದೇಹವಿಲ್ಲ. ರಾಕ್ಷಸಲೋಕದಲ್ಲಿಯೂ ಗಂಧರ್ವಲೋಕದಲ್ಲಿಯೂ ನಾಗಲೋಕದಲ್ಲಿಯೂ ದೇವಲೋಕದಲ್ಲಿಯೂ ಸಮಸ್ತ ಪರ್ವತಗಳಲ್ಲಿಯೂ ನೀನರಿಯದ ಪ್ರದೇಶಗಳಿಲ್ಲ. ನೀನು ಸಂಚರಿಸದ ಭೂಮಿಯೇ ಇಲ್ಲ. ವಾಯುವೇಗ ಮನೋವೇಗಗಳೂ ನಿನ್ನ ವೇಗದಲ್ಲಿ ಅಡಕವಾಗಿರುವುವು. ಸಮಸ್ತ ತೇಜಸ್ಸುಗಳೂ ನಿನ್ನ ತೇಜಸ್ಸಿನಲ್ಲಿ ಅಡಕವಾಗಿರುವುವು. ಹನುಮಂತ, ಬಲವೂ ಬುದ್ಧಿಪರಾಕ್ರಮಗಳೂ ದೇಶಕಾಲ ಪರಿಜ್ಞಾನ ನೀತಿಗಳೂ ನಿನ್ನಲ್ಲೇ ಇರುವುವು. ಆದಕಾರಣ ಶ್ರೀರಾಮನ ಕಾರ್ಯಸಾಧನೆಗೆ ತಕ್ಕ ವಿವೇಕವು ನಿನ್ನಲ್ಲಿಯೇ ಇದೆಯೆಂದು ನಿಶ್ಚಯಿಸಿದೆನು. ನಿನ್ನಿಂದಲೇ ಸಮಸ್ತ ಕಾರ್ಯಗಳೂ ಸಾಧ್ಯವಾಗಬೇಕೆಂದು ನಿಶ್ಚಯಿಸಿದ್ದೇನೆ" ಎಂದು ಹೇಳಿದನು.

ಆ ಸಮಯದಲ್ಲಿ ಶ್ರೀರಾಮನು ಹನುಮಂತನನ್ನು ನೋಡಿ ಈತನು ಅತ್ಯಂತಸಮರ್ಥನಾಗಿದ್ದರೆ ಸುಗ್ರೀವನು ಅಷ್ಟು ಉಪಚಾರದ ಮಾತನ್ನು ಆತನಿಗೆ ಹೇಳುತ್ತಿರಲಿಲ್ಲ ಎಂದು ಮನಸ್ಸಿನಲ್ಲೆಣಿಸಿ 'ಶ್ರೀರಾಮ' ಎಂಬ ನಾಮಾಂಕಿತವುಳ್ಳ ತನ್ನ ಮುದ್ರೆಯುಂಗುರವನ್ನು ಸೀತಾದೇವಿಯ ಕೈಯಲ್ಲಿ ಕೊಟ್ಟರೆಯಾದರೆ ಸೀತಾದೇವಿಯು ನಿನ್ನನ್ನು ನನ್ನ ಸಮೀಪದಿಂದ ಬಂದವನೆಂದು ವಿಶ್ವಾಸದಿಂದ ಕಂಡು ಭಯವಿಲ್ಲದೆ ನಿನ್ನೊಡನೆ ಸಂಭಾಷಣೆಮಾಡುವಳು. ಹನುಮಂತ, ನೀನು ಮಹಾಬಲವಂತ; ಮಹಾಪರಾಕ್ರಮಿ. ಅದಲ್ಲದೆ ಸುಗ್ರೀವನು ನಿನ್ನ ಮೇಲೆಯೇ ಈ ಕಾರ್ಯಸ್ಥಿತಿಯನ್ನು ವಹಿಸಿರುವನು. ಆದಕಾರಣ ನನ್ನ ಮನಸ್ಸಿಗೆ ನಿನ್ನಿಂದಲೇ ನನ್ನ ಕಾರ್ಯವಾಗುವುದೆಂದು ತೋರುತ್ತಿದೆ" ಎಂದನು.

ಹನುಮಂತನು ಮಹಾಪ್ರಸಾದವೆಂದು ಆ ಮುದ್ರೆಯುಂಗುರವನ್ನು ಕೈಯಲ್ಲಿ ತೆಗೆದು ಶಿರಸಾವಹಿಸಿಕೊಂಡು ಶ್ರೀರಾಮನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಅನಂತರ ಮಹಾಬಲವುಳ್ಳ ತನ್ನ ಸೇನೆಯನ್ನು ಕೂಡಿಕೊಂಡು ಅದರ ಮಧ್ಯದಲ್ಲಿ, ಮೇಘದ ಮರೆಯಿಲ್ಲದ ಅಂತರಿಕ್ಷಮಾರ್ಗದಲ್ಲಿ ನಕ್ಷತ್ರಸಮೂಹದಿಂದ ಒಪ್ಪುತ್ತಿರುವ ನಿರ್ಮಲವಾದ ಮಂಡಲವುಳ್ಳ ಚಂದ್ರನಂತೆ ಒಪ್ಪುತ್ತಿದ್ದನು.

---

## ೪೫ ನೆಯ ಅಧ್ಯಾಯ

## ಕಪಿಗಳು ಸೀತಾದೇವಿಯನ್ನು ಹುಡುಕುವುದಕ್ಕೆ ಹೊರಟದ್ದು

ಈ ಪ್ರಕಾರವಾಗಿ ಸುಗ್ರೀವನು ಸೀತಾದೇವಿಯನ್ನು ಹುಡುಕುವುದಕ್ಕೆ ತಕ್ಕ ಕಪಿನಾಯಕರನ್ನು ಆಯಾ ದಿಕ್ಕಿಗೆ ನೇಮಿಸಿ ಅವರನ್ನು ಕುರಿತು ' ಎಲೈ ಕಪಿಗಳಿರಾ, ನಾನು ಹೇಳಿದ ಪ್ರಕಾರದಲ್ಲಿ ನೀವು ಸಂಚರಿಸಿ ಸೀತಾದೇವಿಯನ್ನರಸಿ ಕರೆದುಕೊಂಡು ಬನ್ನಿರಿ ' ಎಂದು ಆಜ್ಞಾಪಿಸಿದನು

ಆ ಕಪಿನಾಯಕರು ಸುಗ್ರೀವನ ಆಜ್ಞೆಯನ್ನು ಶಿರಸಾವಹಿಸಿ ತಮ್ಮ ತಮ್ಮ ಮಾರ್ಗವನ್ನು ಹಿಡಿದು ಶಲಭಗಳಂತೆ ತಂಡತಂಡವಾಗಿ ಆಕಾಶಮಾರ್ಗವನ್ನು ಅಡರಿದರು. ಆ ಕಪಿವೀರರು ಕೂಗುತ್ತ ಗರ್ಜಿಸುತ್ತ ನಗೆದಾಡುತ್ತ ಬೊಬ್ಬಿಡುತ್ತ ತಮಗೆ ನೇಮಿಸಿದ ದಿಕ್ಕುಗಳನ್ನು ನೋಡುತ್ತ ಒಬ್ಬರಿಗೊಬ್ಬರು " ನಾನೇ ರಾವಣನನ್ನು ಕೊಂದು ಸೀತಾದೇವಿಯನ್ನು ತರುವೆನು " " ನಾನೊಬ್ಬನೇ ಸಮರದಲ್ಲಿ ರಾವಣನನ್ನು ಕೊಂದು ಸೀತಾದೇವಿಯನ್ನು ಕರದುಕೊಂಡು ಬರುವನು " ' ನಾನೇ ಆ ದೇವಿಯು ಪಾತಾಳಲೋಕದಲ್ಲಿದ್ದರೂ ಕರೆತರುವೆನು " " ನಾನು ಸಮಸ್ತ ವೃಕ್ಷಗಳನ್ನೂ ಮುರಿಯುವನು " ' ನಾನು ಸಮಸ್ತ ಪರ್ವತಗಳನ್ನೂ ಚೂರ್ಣಮಾಡುವೆನು " " ನಾನು ಭೂಮಂಡಲವನ್ನು ಇಬ್ಬಗೆಯಾಗಿ ಸೀಳುವೆನು " " ನಾನು ಸಮುದ್ರವನ್ನು ಕದಡಿಬಿಡುವೆನು " " ನಾನು ಒಂದು ಗಾವುದದಾರಿ ನೆಗೆಯುವೆನು " " ನಾನು ನೂರುಗಾವುದ ದಾರಿಗಿಂತಲೂ ಅಧಿಕವಾಗಿ ನೆಗೆದೇನು " " ನಾನು ಸೀತಾದೇವಿಯು ಭೂಮಂಡಲದಲ್ಲಿದ್ದರೂ ಸಮುದ್ರದಲ್ಲಿದ್ದರೂ ಪರ್ವತಗಳಲ್ಲಿದ್ದರೂ ವನಗಳಲ್ಲಿದ್ದರೂ ಪಾತಾಳಲೋಕದಲ್ಲಿದ್ದರೂ ಹೋಗಿ ನೋಡಿಬರುವೆನು " " ನಾನು ಭಯವಿಲ್ಲದೆ ಎಲ್ಲಿಗಾದರೂ ಹೋಗಬಲ್ಲೆನು " ಎಂದು ಪೌರುಷವನ್ನು ತೋರಿಸಿಕೊಳ್ಳುತ್ತ ಪ್ರಯಾಣಬೆಳಸಿದರು.



## ೪೬ ನೆಯ ಅಧ್ಯಾಯ

## ಸುಗ್ರೀವನು ಭೂಪ್ರದಕ್ಷಿಣ ಮಾಡಿದ ವೃತ್ತಾಂತ

ಈ ಪ್ರಕಾರ ಸಮಸ್ತ ಕಪಿನಾಯಕರೂ ಸುಗ್ರೀವನಿಂದ ಕಳುಹಿಸಿಕೊಂಡು ಹೋದಮೇಲೆ ಶ್ರೀರಾಮನು ಸುಗ್ರೀವನನ್ನು ಕುರಿತು " ಸುಗ್ರೀವ, ನೀನು ಭೂಮಂಡಲದಲ್ಲಿರುವ ದಿಕ್ಕುಗಳನ್ನೂ ಸಮಸ್ತ ಸ್ಥಳಗಳನ್ನೂ ಹೇಳಿದೆಯಲ್ಲ. ಇವನ್ನೆಲ್ಲಾ ನೀನು ಬಲ್ಲ ಪರಿ ಯಾವುದು ? " ಎಂದು ಕೇಳಿದನು.

ಸುಗ್ರೀವನು ಹೀಗೆಂದನು : ' ಶ್ರೀರಾಮ, ನಾನು ಸಮಸ್ತ ದೇಶಗಳಲ್ಲಿಯೂ ಕಂಡು ಬಂದ ವೃತ್ತಾಂತವನ್ನು ವಿಸ್ತಾರವಾಗಿ ಹೇಳುವೆನು ಕೇಳು . ಪೂರ್ವದಲ್ಲಿ ವಾಲಿಯು ಮಹಿಷಾಕಾರನಾದ ದುಂದುಭಿಯನ್ನು ಕೊಂದ ವೃತ್ತಾಂತವನ್ನು ಈ ಮೊದಲೇ ನಿನಗೆ ಹೇಳಿರುವೆನು. ಹಾಗೆ ವಾಲಿಯು ದುಂದುಭಿಯನ್ನು ಅಟ್ಟಿಕೊಂಡು ಹೋಗಿ ಮಲಯಪರ್ವತದ ಗುಹೆಯಲ್ಲಿ ಆತನನ್ನು ಕೊಂದು ಆ ಗುಹೆಯ ಬಾಗಿಲಿಗೆ ಚಾಚಿದ್ದ ದೊಡ್ಡ ಕಲ್ಲನ್ನು ಕೆಡಹಿ ಕಿಷ್ಕಿಂಧಾಪಟ್ಟಣಕ್ಕೆ ಬಂದನು ಆಗ

ಪಟ್ಟವನ್ನು ಕಟ್ಟಿಕೊಂಡು ಸಮಸ್ತ ಪ್ರಜೆಗಳನ್ನೂ ಪರಿಪಾಲಿಸುತ್ತ ರಾಜ್ಯವನ್ನಾಳಿಕೊಂಡಿದ್ದ ನನ್ನನ್ನು ಕೊಲ್ಲಬೇಕೆಂದು ಅಟ್ಟಿಕೊಂಡು ಬಂದನು. ನಾನು ನನ್ನ ಪ್ರಧಾನರಾದ ನಾಲ್ವರು ಕಪಿನಾಯಕರ ಸಹಿತನಾಗಿ ಓಡಿದರೂ ನನ್ನನ್ನು ಎಡಬಿಡದೆ ಹಿಂಬಾಲಿಸಿಕೊಂಡು ಬರುತ್ತಿದ್ದನು. ನಾನು ನಾನಾ ನದಿಗಳನ್ನೂ ಪರ್ವತಗಳನ್ನೂ ಅರಣ್ಯಗಳನ್ನೂ ಹೊಕ್ಕು ಸಮಸ್ತ ಭೂಮಂಡಲವನ್ನೂ ಗೋವಿನ ಹೆಜ್ಜೆಯನ್ನು ದಾಟುವಂತೆ ದಾಟಿ ಮೂಡಣ ದಿಕ್ಕಿಗೆ ಹೋದೆನು. ಅಲ್ಲಿರುವ ಪರ್ವತಗಳನ್ನೂ ಅವುಗಳಲ್ಲಿರುವ ಗುಹೆಗಳನ್ನೂ ಜರಿಗಳನ್ನೂ ಕೋಡುಗಲ್ಲುಗಳನ್ನೂ ನೋಡಿ ಮುಂದೆ ನಾನಾ ಗೈರಿಕಾದಿಧಾತುಗಳಿಂದ ಅಲಂಕರಿಸಲ್ಪಟ್ಟ ಉದಯಪರ್ವತಕ್ಕೆ ಹೋದೆನು. ವಾಲಿಯು ಅಲ್ಲಿಗೆ ಅಟ್ಟಿಕೊಂಡು ಬರಲು ಅಲ್ಲಿಂದ ತಿರುಗಿ ತೆಂಕಣ ದಿಕ್ಕಿಗೆ ಬಂದು ನಾನಾಪ್ರಕಾರವಾದ ಚಂದನ ವೃಕ್ಷಗಳಿಂದ ಪರಿಪೂರ್ಣವಾಗಿದ್ದ ವಿಂಧ್ಯಪರ್ವತವನ್ನು ಸೇರಿದೆನು. ಆ ಪರ್ವತದ ಗುಹೆಗಳು ವನಗಳು ಜರಿಗಳು ಮೊದಲಾದ ಸ್ಥಳಗಳಿಗೆ ಹೋದೆನು. ವಾಲಿಯು ಅಲ್ಲಿಗೂ ಅಟ್ಟಿಕೊಂಡು ಬರಲು ಪಡುವಣ ದಿಕ್ಕಿಗೆ ಹೋಗಿ ಅಲ್ಲಿರುವ ಗಿರಿ ಗುಹೆ ನದಿ ವನ ಕೊಳ ಮೊದಲಾದವುಗಳಲ್ಲಿ ಸಂಚರಿಸಿ ಅಸ್ತಮಯಪರ್ವತಕ್ಕೆ ಹೋದೆನು. ಅಲ್ಲಿಗೂ ವಾಲಿಯೂ ಬರಲು ಬಡಗಣ ದಿಕ್ಕಿಗೆ ಹೋಗಿ ಹಿಮವತ್ಪರ್ವತವನ್ನು ನೋಡಿ ಬಡಗಣ ಸಮುದ್ರತೀರಕ್ಕೆ ಹೋಗಿ ಎಲ್ಲಿಯೂ ನಿಲ್ಲುವುದಕ್ಕೆ ಅವಕಾಶವಿಲ್ಲದೆ ಕಂಗೆಟ್ಟೆನು. ಆ ಸಮಯದಲ್ಲಿ ನನ್ನನ್ನೆಡಬಿಡದೆ ಸಂಗಡ ಬರುತಿದ್ದ ಬುದ್ಧಿವಂತನಾದ ಹನುಮಂತನು ಒಂದು ಉಪಾಯವನ್ನು ತಿಳಿದು ನನ್ನನ್ನು ಕುರಿತು 'ಸುಗ್ರೀವ, ನಾನು ಇಷ್ಟು ದಿನಗಳೂ ಮರೆತಿದ್ದೆನು. ಪೂರ್ವದಲ್ಲಿ ಮತಂಗಮುನೀಶ್ವರನು, ವಾಲಿಯು ಆತನ ಆಶ್ರಮದ ಎಲ್ಲೆಯನ್ನು ಮೆಟ್ಟಿದರೆ ಆತನ ತಲೆಯು ಸಹಸ್ರ ಹೋಳಾಗಲೆಂದು ಶಾಪವನ್ನು ಕೊಟ್ಟನು. ಆದಕಾರಣ ಆ ಮುನೀಶ್ವರನ ಆಶ್ರಮಕ್ಕೆ ವಾಲಿಯು ಬರಲಾರನು. ನಾವು ಮತಂಗಮುನೀಶ್ವರನ ಆಶ್ರಮದಲ್ಲಿ ವಾಲಿಯ ಭಯವಿಲ್ಲದೆ ಸುಖವಾಗಿರಬಹುದು' ಎಂದು ಹೇಳಿದನು.

ಆ ಬಳಿಕ ನಾನು ಮತಂಗಮುನೀಶ್ವರನ ಆಶ್ರಮದ ಬಳಿಯಲ್ಲಿರುವ ಋಷ್ಯಮೂಕಪರ್ವತದಲ್ಲಿ ವಾಸವಾಗಿದ್ದೆನು. ಆ ಮುನೀಶ್ವರನ ಶಾಪಭಯದಿಂದ ವಾಲಿಯು ಇಲ್ಲಿಗೆ ಬಂದು ಉಪದ್ರವ ಮಾಡದಿದನು. ಈ ರೀತಿಯಲ್ಲಿ ನಾನು ಸಮಸ್ತ ಭೂಮಂಡಲವನ್ನೂ ಪ್ರತ್ಯಕ್ಷವಾಗಿ ಕಂಡೆನು" ಎಂದು ನುಡಿದನು.



## ೪೭ ನೆಯ ಅಧ್ಯಾಯ

## ಸೀತಾದೇವಿಯನ್ನು ಕಾಣದೆ ನಾನಾ ದಿಕ್ಕುಗಳಿಗೆ ಹೋದ ಕಪಿಗಳು ಹಿಂದಿರುಗಿ ಬಂದದ್ದು

ಆಮೇಲೆ ಸೀತಾದೇವಿಯನ್ನರಸುವುದಕ್ಕೆ ನಾನಾದಿಕ್ಕಿಗೆ ಹೋದ ಕಪಿನಾಯಕರು ನದೀತೀರಗಳು ಸಮುದ್ರತೀರಗಳು ಕೊಳಗಳು ಪರ್ವತಗಳು ಮೊದಲಾದ ನಾನಾ ಸ್ಥಳಗಳಲ್ಲಿ ಹುಡುಕುತ್ತ ಸಾಯಂಕಾಲವಾದಮೇಲೆ ಪುಷ್ಪಗಳುಳ್ಳ ವನಗಳನ್ನು ಸೇರಿಕೊಂಡು ರಾತ್ರಿಯನ್ನು ಕಳೆಯುತ್ತ ಮಾರನೆಯ ಪ್ರಾತಃಕಾಲದಲ್ಲಿ ಪುನಃ ಹುಡುಕುತ್ತ ಎಲ್ಲೆಲ್ಲಿಯೂ ಸಂಚರಿಸುತ್ತಿದ್ದರು. ಒಂದು ತಿಂಗಳು ಕಳೆದ ಮೇಲೆ ಮೂಡಣ ದಿಕ್ಕಿಗೆ ಹೋದ ವಿನುತನು ಆ ದಿಕ್ಕಿನಲ್ಲಿದ್ದ ಸಮಸ್ತ ಸ್ಥಳಗಳಲ್ಲಿಯೂ

ಮತ್ತು ಸೀತಾದೇವಿಯನ್ನು ಕಾಣದೆ ತಿರುಗಿ ಬಂದನು. ಬಡಗಣ ದಿಕ್ಕಿಗೆ ಹೋದ ಶತವಲಿಯು ಆ ದಿಕ್ಕಿನಲ್ಲಿದ್ದ ಹಿಮವತ್ಪರ್ವತ ಮೊದಲಾದ ಪರ್ವತಗಳು ನದೀತೀರಗಳು ಮೊದಲಾದ ಸ್ಥಳಗಳಲ್ಲಿ ಅರಸಿ ಕಾಣದೆ ತಿರುಗಿಬಂದನು. ಪಡುವಣ ದಿಕ್ಕಿಗೆ ಹೋದ ಸುಷೇಣನು ಆ ದಿಕ್ಕಿನಲ್ಲಿದ್ದ ಪರ್ವತಗಳು ಜರಿಗಳು ಗುಹೆಗಳು ನದೀತೀರಗಳು ವನಾಂತರಗಳು ಮೊದಲಾದ ಸ್ಥಳಗಳಲ್ಲಿ ಸೀತಾ ದೇವಿಯನ್ನರಸಿ ಕಾಣದ ತಿರುಗಿ ಬಂದನು. ಶ್ರೀರಾಮನ ಸಮ್ಮುಖದಲ್ಲಿದ್ದ ಸುಗ್ರೀವನಿಗೆ ಅವರೆಲ್ಲರೂ ವಂದಿಸಿ "ಸುಗ್ರೀವ, ನೀನು ಆಜ್ಞಾಪಿಸಿದ ದಿಕ್ಕುಗಳಿಗೆ ನಾವು ಹೋಗಿ ಅಲ್ಲಿರುವ ಪರ್ವತಗಳು ಗುಹೆಗಳು ಕೊಳಗಳು ದೇಶಗಳು ವಿಷಮವಾದ ಸ್ಥಳಗಳು ಮೊದಲಾದವುಗಳಲ್ಲಿ ಅರಸಿನೋಡಿ ಸೀತಾದೇವಿಯನ್ನು ಕಾಣದೆ ತಿರುಗಿಬಂದೆವು. ಆದರೂ ತೆಂಕಣ ದಿಕ್ಕಿಗೆ ಹೋದ ಮಹಾಬಲವಂತನಾದ ಹನುಮಂತನು ಸೀತಾದೇವಿಯನ್ನರಸಿ ಕಂಡು ಬರುವನೆಂದು ನಂಬುತ್ತೇವೆ" ಎಂದು ಹೇಳಿದರು.



೪೮ ನೆಯ ಅಧ್ಯಾಯ

## ಅಂಗದಾದಿಗಳು ತೆಂಕಣ ದಿಕ್ಕಿನಲ್ಲಿ ಸೀತಾದೇವಿಯನ್ನು ಹುಡುಕಿದ್ದು

ಆಮೇಲೆ ತೆಂಕಣ ದಿಕ್ಕಿಗೆ ಹೋದ ಅಂಗದಕುಮಾರ ಹನುಮಂತನೇ ಮೊದಲಾದವರು ಬಹುದೂರ ಹೋಗಿ ವಿಂಧ್ಯಪರ್ವತದ ಗುಹೆಗಳಲ್ಲಿಯೂ ವನಗಳಲ್ಲಿಯೂ ಪರ್ವತಾಗ್ರಗಳಲ್ಲಿಯೂ ಕೊಳಗಳಲ್ಲಿಯೂ ಸೀತಾದೇವಿಯನ್ನರಸಿ ಎಲ್ಲಿಯೂ ಕಾಣದೆ ಅಲ್ಲಲ್ಲಿ ಕಂದಮೂಲ ಫಲಾಹಾರಗಳನ್ನು ಮಾಡಿಕೊಂಡು ಮುಂದೆ ಹೊರಟರು. ಉದಕವಿಲ್ಲದೆಯೂ ಜನಸಂಚಾರವಿಲ್ಲದೆಯೂ ಇದ್ದ ಭಯಂಕರವಾದ ಒಂದು ಅರಣ್ಯದಲ್ಲಿ ಸೀತೆಯನ್ನು ಅರಸಿನೋಡಿದರು. ಅಲ್ಲಿಯೂ ಕಾಣದೆ ಕಂಗೆಟ್ಟು ಆ ಪ್ರದೇಶವನ್ನು ದಾಟಿ ಮುಂದೆ ಹೋಗಿ ಮನೋಹರವಾದ ನೆಳಲುಳ್ಳ ವೃಕ್ಷಗಳಿಂದಲೂ ಪುಷ್ಪಿತವಾದ ಕಮಲಗಳುಳ್ಳ ಕೊಳಗಳಿಂದಲೂ ಅತ್ಯಂತ ಪರಿಮಳವಿರುವ ಪುಷ್ಪಗಳುಳ್ಳ ಲತೆ ಗಳಿಂದಲೂ ರಮಣೀಯವಾದ ಒಂದು ವನವನ್ನು ಕಂಡರು. ಮಹಾತ್ಮನೂ ಸತ್ಯವಾದಿಯೂ ತಪಸ್ವಿಯೂ ಆದ ಕಂಡು-ಎಂಬ ಮಹರ್ಷಿಯ ಹತ್ತುವರುಷದ ಪುತ್ರನು ಆ ವನದಲ್ಲಿ ಮೃತಿಹೊಂದಿ ದನು. ಅದ್ದರಿಂದ ಮುನೀಶ್ವರನು ಅತ್ಯಂತ ಕೋಪಯುಕ್ತನಾಗಿ ಆ ವನವು ಅನೇಕ ಪುಷ್ಪಫಲಗಳುಳ್ಳ ದ್ದಾದರೂ ಯಾರೊಬ್ಬರಿಗೂ ಆಶ್ರಯವಾಗದೆಯೂ ಮೃಗಪಕ್ಷಿಗಳಿಗೆ ಯೋಗ್ಯವಲ್ಲದೆಯೂ ಹೋಗ ಲೆಂದು ಶಾಪವನ್ನು ಕೊಟ್ಟನು. ಆದಕಾರಣ ಅಲ್ಲಿ ಮೃಗಪಕ್ಷಿಗಳೇ ಮೊದಲಾದ ಯಾವ ಜಂತುವೂ ಇರಲಿಲ್ಲ. ಆ ವನವನ್ನು ದಾಟಿ ಮುಂದೆ ಅನೇಕ ಪರ್ವತಗಳಲ್ಲಿಯೂ ಜರಿಗಳಲ್ಲಿಯೂ ನೋಡಿ ಕಾಣದೆ ಅಲ್ಲಿಂದ ಮುಂದೆ ಹೋಗಿ ಒಂದು ಅರಣ್ಯದಲ್ಲಿ ಅತ್ಯಂತ ಭಯಂಕರನಾದ ಒಬ್ಬ ರಾಕ್ಷಸನನ್ನು ಆ ವಾನರರು ಕಂಡರು. ಎಲ್ಲರೂ ಸೇರಿ ಒಗ್ಗಟ್ಟಾಗಿ ನಿಂತಿರಲು ಆ ರಾಕ್ಷಸನು ಅವರನ್ನು ಕುರಿತು "ಎಲೈ ಕಪಿಗಳಿರಾ, ನೀವು ನನ್ನ ಆಹಾರಕ್ಕಾಗಿ ಬಂದ ಹಾಗಾಯಿತು, ನಿಮ್ಮ ವಿಧಿಯು ನಿಮ್ಮನ್ನು ಇಲ್ಲಿಗೆ ಕಳುಹಿಸಿತು" ಎಂದು ನುಡಿಯುತ್ತ ಕೈಗಳನ್ನೆತ್ತಿಕೊಂಡು ಅಟ್ಟಿಕೊಂಡು ಬಂದನು. ಆಗ ವಾಲಿಯ ಪುತ್ರನಾದ ಅಂಗದಕುಮಾರನು ಅವನನ್ನು ರಾವಣನಾಗಿರಬೇಕೆಂದೆಣಿಸಿ ಅಂಗೈಯಿಂದ ಅಪ್ಪಳಿಸಿ ಹೊಡೆದನು. ಆ ಪೆಟ್ಟಿನಿಂದ ಗಾಯಪಡೆದು ಆ ರಾಕ್ಷಸನು ರಕ್ತಮಯನಾಗಿ ದೇವೇಂದ್ರನ ವಜ್ರಾಯುಧದ ಪೆಟ್ಟಿನಿಂದ ಪರ್ವತವು ಬೀಳುವಂತೆ ಭೂಮಿಯಲ್ಲಿ ಬಿದ್ದು ಶರೀರವನ್ನು ಬಿಟ್ಟನು.

ಆಮೇಲೆ ಆ ಕಪಿನಾಯಕರು ಅಲ್ಲಿಂದ ಮುಂದೆ ಹೋಗುತ್ತ ಅನೇಕ ಘೋರಾರಣ್ಯಗಳಲ್ಲಿಯೂ ಗುಹೆಗಳಲ್ಲಿಯೂ ಸೀತೆಯನ್ನು ಅರಸಿ ಕಾಣದೆ ಕಂಗೆಟ್ಟು ಮಹಾಚಿಂತಾಕ್ರಾಂತರಾಗಿ ಒಂದು ಮರದಡಿಯನ್ನು ಸೇರಿದರು.



## ೪೯ ನೆಯ ಅಧ್ಯಾಯ

## ಅಂಗದನು ಕಪಿಗಳಿಗೆ ಧೈರ್ಯ ಹೇಳಿದ್ದು

ಆಮೇಲೆ ಅಂಗದನು ಸಮಸ್ತ ಕಪಿನಾಯಕರನ್ನೂ ಕರೆದು " ಎಲೈ ಕಪಿನಾಯಕರುಗಳಿರಾ, ನಾವು ಅನೇಕ ವನಗಳು ಪರ್ವತಗಳು ನದಿಗಳು ದುರ್ಗಗಳು ಗುಹೆಗಳೇ ಮೊದಲಾದ ಸ್ಥಳಗಳಲ್ಲಿ ಸೀತಾದೇವಿಯನ್ನರಸಿದರೂ ಆ ದೇವಿಯ ಸುದ್ದಿಯನ್ನೇ ಕೇಳದಿರುವೆವಲ್ಲವೆ ? ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ತೆಂಕಣದಿಕ್ಕಿಗೆ ಹೋದನೆಂಬ ಜನ ಜನಿತ ವಾರ್ತೆಯನ್ನು ಕೇಳಿರುವೆವಾದ್ದರಿಂದ ಸುಗ್ರೀವನ ಆಜ್ಞೆಯಂತೆ ಈ ದಿಕ್ಕಿನಲ್ಲಿಯೇ ಅರಸಿಕೊಂಡು ಮುಂದೆ ಹೋಗೋಣ. ಎಲ್ಲರೂ ಒಂದೇ ಮನಸ್ಸುಳ್ಳವರಾಗಿ ಒಬ್ಬರಿಗೊಬ್ಬರು ಧೈರ್ಯಹೇಳಿಕೊಂಡು ನಿದ್ರಾಲಸ್ಯಗಳನ್ನು ಬಿಟ್ಟು ಶರೀರದ ಬಳಲಿಕೆಯನ್ನು ಗಣನೆಮಾಡದಿರಬೇಕು. ನಾವು ಯಾವಬಗೆಯಲ್ಲಾದರೂ ಸೀತಾದೇವಿಯನ್ನರಸಿ ಕಾಣಬೇಕು. ಒಂದು ಕಾರ್ಯವನ್ನು ಸಾಧಿಸಬೇಕಾದರೆ ಮನಸ್ಸಿನಲ್ಲಿ ಉತ್ಸಾಹವೂ ದಕ್ಷತೆಯೂ ಧೈರ್ಯವೂ ಇದ್ದರೆ ಆ ಕಾರ್ಯವು ಸಿದ್ಧಿಯಾಗುವುದೆಂದು ಹೇಳುವರು. ಆದಕಾರಣ ನೀವು ನಿಮ್ಮ ಬಳಲಿಕೆಯನ್ನು ನೋಡಬೇಡಿ. ಕಷ್ಟಪಟ್ಟು ಪ್ರಯತ್ನಮಾಡಿದರೆ ನಿಶ್ಚಯವಾಗಿಯೂ ಕಾರ್ಯಸಿದ್ಧಿಯಾಗುವುದು. ಸುಗ್ರೀವನು ಮಹಾಕೋಪಶೀಲನು. ನಿಷ್ಠುರವಾದ ಆಜ್ಞೆಯನ್ನು ಮಾಡುವವನು. ಅಂಥವನಿಗೆ ಅಂಜಬೇಕು. ಶ್ರೀರಾಮನಿಗೆ ಪ್ರಿಯವಾದ ಕಾರ್ಯವನ್ನು ಸಾಧ್ಯಮಾಡಬೇಕು. ನಾನು ನಿಮಗೆ ಹಿತವಾದ ಮಾತನ್ನು ಹೇಳಿರುವೆನು. ನಿಮಗೆ ಯುಕ್ತವೆಂದು ತೋರಿದರೆ ಅದರಂತೆ ಮಾಡೋಣ " ಎಂದನು.

ಆ ಮಾತನ್ನು ಕೇಳಿ ಗಂಧಮಾದನನು ತೃಷೆಯಿಂದ ಕಂಗೆಟ್ಟವನಾಗಿ ಮೆಲ್ಲಗೆ " ಎಲೈ ಕಪಿನಾಯಕರೆ, ಅಂಗದಕುಮಾರನು ಹೇಳಿದ ಮಾತು ನಾವು ಬಂದ ಕಾರ್ಯಕ್ಕೆ ಅನುಕೂಲವಾಗಿ ನಮಗೆಲ್ಲರಿಗೂ ಹಿತವಾದದ್ದು. ಇನ್ನು ನಾವು ನಾನಾಪರ್ವತಗಳಲ್ಲಿಯೂ ಗುಹೆಗಳಲ್ಲಿಯೂ ಕಾನನಗಳಲ್ಲಿಯೂ ಸುಗ್ರೀವನು ಹೇಳಿದ ಮತ್ತಿತರ ಸ್ಥಳಗಳಲ್ಲಿಯೂ ಅರಸಿ ನೋಡುವುದೇ ಯೋಗ್ಯವಾದದ್ದು " ಎಂದು ಅಂಗದನ ಮಾತಿಗೆ ಅನುಸಾರವಾಗಿ ಹೇಳಿದನು.

ತರುವಾಯ ಬಲವಂತರಾದ ಆ ಕಪಿನಾಯಕರೆಲ್ಲರೂ ಎದ್ದು ವಿಂಧ್ಯಪರ್ವತದಿಂದ ತೆಂಕಣ ದಿಕ್ಕೆಲ್ಲವನ್ನೂ ಹುಡುಕ ಹೊರಟರು. ದಾರಿಯಲ್ಲಿ ಶರತ್ಕಾಲದ ಮೇಘದಂತೆ ಬಿಳುಪಾದ ಬೆಳ್ಳಿಯ ಬೆಟ್ಟವನ್ನು ಕಂಡು ಆ ಬೆಟ್ಟದಲ್ಲಿದ್ದ ಜರಿಗಳಲ್ಲಿಯೂ ಗುಹೆಗಳಲ್ಲಿಯೂ ಕೋಡುಗಲ್ಲುಗಳಲ್ಲಿಯೂ ಹುಡುಕಿ ನಿಷ್ಫಲರಾದರು. ಮುಂದೆ ಇದ್ದ ಅನೇಕ ಪರ್ವತಗಳಲ್ಲಿಯೂ ಲೋಧ್ರವನಗಳಲ್ಲಿಯೂ ಹುಡುಕಿ ಆ ಬೆಳ್ಳಿಯ ಬೆಟ್ಟದ ಕೋಡುಗಲ್ಲಿನ ತುದಿಯನ್ನೇರಿ ಸುತ್ತಲೂ ನೋಡಿ ಸೀತಾದೇವಿಯನ್ನು ಕಾಣದೆ ಶಕ್ತಿಗುಂದಿ ಮತ್ತೊಂದು ದೊಡ್ಡ ಬೆಟ್ಟವನ್ನು ಹತ್ತಿದರು. ಅಲ್ಲಿದ್ದ ಗುಹೆಗಳಲ್ಲಿಯೂ ಕಲ್ಲರೆಗಳಲ್ಲಿಯೂ ನೋಡಿ ಆ ದೇವಿಯನ್ನು ಕಾಣದೆ ಭೂಮಿಗಿಳಿದು ಕಂಗೆಟ್ಟು ಒಂದು ಮರದಡಿಯಲ್ಲಿ ಕ್ಷಣಮಾತ್ರ

ಕುಳಿತುಕೊಂಡಿದ್ದು ಆಯಾಸವನ್ನು ಪರಿಹರಿಸಿಕೊಂಡರು. ಬಳಿಕ ಹನುಮದಾದಿ ಸಕಲ ವಾನರ ಶ್ರೇಷ್ಠರೂ ದಕ್ಷಿಣ ದಿಕ್ಕನ್ನು ಪೂರ್ಣವಾಗಿ ಶೋಧಿಸಿಬಿಡಬೇಕೆಂದು ನಿಶ್ಚಯಿಸಿ ಮುಂದೆ ಹೊರಟರು.



೫೦ ನೆಯ ಅಧ್ಯಾಯ

## ಸ್ವಯಂಪ್ರಭೆಯ ಗುಹೆಗೆ ಅಂಗದಾದಿಗಳ ಪ್ರವೇಶ

ಈ ರೀತಿಯಲ್ಲಿ ಅಂಗದಕುಮಾರ ತಾರ ಹನುಮಂತ ಮೊದಲಾದ ಕಪಿನಾಯಕರು ವಿಂಧ್ಯಪರ್ವತದಲ್ಲಿರುವ ಗುಹೆಗಳಲ್ಲಿಯೂ ಸಿಂಹಶಾರ್ದೂಲಾದಿ ಮೃಗಗಳು ಸಂಚರಿಸುವ ಘೋರಾರಣ್ಯಗಳಲ್ಲಿಯೂ ದೊಡ್ಡ ಕಲ್ಲರೆಗಳಲ್ಲಿಯೂ ಭಯಂಕರವೂ ಮಹಾವಿಷಮವೂ ಆದ ಜರಿಗಳಲ್ಲಿಯೂ ಆ ಪರ್ವತದ ಪಡುವಣ ದಿಕ್ಕಿನಲ್ಲಿಯೂ ತೆಂಕಣ ದಿಕ್ಕಿನಲ್ಲಿಯೂ ಇರುವ ಶಿಖರಗಳಲ್ಲಿಯೂ ಸೀತಾದೇವಿಯನ್ನು ಹುಡುಕುತ್ತಿರಲು ಕೆಲವು ಕಾಲವು ಕಳೆಯಿತು. ಉಳಿದ ಪ್ರಾಣಿಗಳಿಗೆ ಸಂಚರಿಸುವುದಕ್ಕೆ ಅಸಾಧ್ಯವಾದ ಸ್ಥಳಗಳಲ್ಲಿ ಹನುಮಂತನು ಸೀತಾದೇವಿಯನ್ನರಸ ತೊಡಗಿದನು. ಆಮೇಲೆ ಗಜ ಗವಯ ಶರಭ ಗಂಧಮಾದನ ಮೈಂದ ದ್ವಿವಿದ ಹನುಮಂತ ಜಾಂಬವಂತ ಅಂಗದ ಮೊದಲಾದವರು ತಮ್ಮ ತಮ್ಮ ಬಲಗಳನ್ನು ವಿಂಗಡಿಸಿಕೊಂಡು ಪ್ರತ್ಯೇಕವಾಗಿ ಪರ್ವತಪ್ರದೇಶಗಳನ್ನೆಲ್ಲ ಅರಸಿನೋಡಿದರು. ಪುನಃ ತೆಂಕಣ ದಿಕ್ಕಿಗೆ ಹೋಗಿ ಎಲ್ಲರೂ ಹಸಿವು ತೃಷೆಗಳಿಂದ ಕಂಗೆಟ್ಟು ಋಕ್ಷಬಿಲವೆಂಬ ಒಂದು ದೊಡ್ಡ ಬಿಲವನ್ನು ಕಂಡರು. ಆ ಬಿಲದಿಂದ ಹೊರಟು ಬರುತ್ತಿದ್ದ ಹಂಸ ಸಾರಸ ಚಕ್ರವಾಕ ಕೊಳರ್ವಕ್ಕಿ ಮೊದಲಾದ ಪಕ್ಷಿಗಳು ಕಮಲಗಳ ಧೂಳುಗಳಿಂದ ಹೊಂಬಣ್ಣವಾಗಿದ್ದುದನ್ನು ಕಂಡು ಆ ಬಿಲದ ಸಮೀಪಕ್ಕೆ ಹೋದರು. ಅದನ್ನು ಪ್ರವೇಶಿಸಲು ಮೊದಲು ಭಯಪಟ್ಟರು. ಆಮೇಲೆ ತಮ್ಮ ಬಲ ತೇಜೋಗರ್ವಗಳಿಂದ ಭಯವನ್ನು ಬಿಟ್ಟು ಅವಶ್ಯವಾಗಿ ಅದರೊಳಗೆ ಹೋಗಿ ನೋಡಬೇಕೆಂದು ಉತ್ಸುಕರಾದರು. ಮಹಾ ಗಭೀರವಾದ ಆ ಬಿಲವನ್ನು ಹೊಕ್ಕು ದೇವೇಂದ್ರನ ಅರಮನೆಗಿಂತಲೂ ಅತಿರಮ್ಯವೂ ಮನೋಹರವೂ ಆದ ಆ ಬಿಲದ್ವಾರವನ್ನು ಕಂಡರು. ಆಗ ಪರ್ವತದ ಶಿಖರಕ್ಕೆ ಸಮಾನವಾದ ಶರೀರವುಳ್ಳ ಹನುಮಂತನು ಸುವರ್ಣದಂತೆ ತನುಕಾಂತಿಯುಳ್ಳ ಮಿಕ್ಕ ಕಪಿನಾಯಕರನ್ನು ಕರೆದು "ಎಲೈ ಕಪಿನಾಯಕರುಗಳಿರಾ, ನಾವೆಲ್ಲರೂ ತೆಂಕಣದಿಕ್ಕಿಗೆ ಬಂದು ಅನೇಕ ಪರ್ವತಗಳಲ್ಲಿ ತಿರುಗಿ ಬಹು ಪ್ರಯಾಸದಿಂದ ಹುಡುಕಿದರೂ ಸೀತಾದೇವಿಯನ್ನು ಕಾಣದೆ ಹೋದೆವು. ಈ ಬಿಲದಿಂದ ನೆನೆದ ಗರಿಯುಳ್ಳ ಹಂಸಪಕ್ಷಿ ಮೊದಲಾದವುಗಳು ಬರುತ್ತಿವೆ. ಈ ಬಿಲದಲ್ಲಿ ಅವಶ್ಯವಾಗಿ ಒಂದು ಸರೋವರವಾದರೂ ದೊಡ್ಡ ಮಡುವಾದರೂ ಇರಬೇಕು. ನಾವು ಈ ಬಿಲವನ್ನು ಪ್ರವೇಶಿಸಿ ನಮ್ಮ ನೀರಡಿಕೆಯನ್ನು ಪರಿಹರಿಸಿಕೊಂಡು ಸೀತಾದೇವಿಯನ್ನು ಅರಸಿಕೊಂಡು ಬರೋಣ" ಎಂದು ನುಡಿದನು.

ಆ ಬಳಿಕ ಕಪಿನಾಯಕರು ಆತನನ್ನು ಕೂಡಿಕೊಂಡು ಚಂದ್ರಸೂರ್ಯರ ಪ್ರಕಾಶವಿಲ್ಲದೆ ಭಯಂಕರವಾಗಿದ್ದ ಆ ಬಿಲವನ್ನು ಹೊಕ್ಕರು. ಅಲ್ಲಿಂದ ಸಿಂಹಶಾರ್ದೂಲಾದಿಮೃಗಗಳೂ ಪಕ್ಷಿಗಳೂ ಹೊರಬರುತ್ತಿರುವುದನ್ನು ಕಂಡರು. ಅಂಧಕಾರದಿಂದ ಒಬ್ಬರನ್ನೊಬ್ಬರು ಕಾಣದೆ ಪರಸ್ಪರರ ಕೈಗಳನ್ನು ಹಿಡಿದುಕೊಂಡು ಕತ್ತಲೆಯಲ್ಲಿಯೇ ಒಳಗೆ ಹೋದರು.

ಆ ಕಪಿನಾಯಕರು ಹಸಿವು ಬಾಯಾರಿಕೆಗಳಿಂದ ಬಳಲಿ ನೀರು ಸಿಕ್ಕೀತೆಂಬ ಪ್ರತ್ಯಾಸೆಯಿಂದ ಹೀಗೆಯೇ ಹೋಗುತ್ತಿರಲು ಅತ್ಯಂತ ಪ್ರಕಾಶಮಾನವಾದ ಒಂದು ಪ್ರದೇಶವನ್ನು ಕಂಡರು. ಅಲ್ಲಿ ಸಾಲ ತಾಲ ತಮಾಲ ಚಂಪಕಾದಿ ವಿವಿಧ ವೃಕ್ಷಗಳು ಹೂಗಳಿಂದ ಶೋಭಿಸುತ್ತಿದ್ದವು. ನಾನಾ ಬಗೆಯ ಬಳ್ಳಿಗಳು ಚಿಗುರುಗಳಿಂದ ವಿರಾಜಿಸುತ್ತಿದ್ದವು. ವಜ್ರವೈಡೂರ್ಯಾದಿ ಮಣಿಗಳಿಂದ ಕಟ್ಟಿದ ಕಟ್ಟೆಗಳೂ ಜಗುಲಿಗಳೂ ಅಂದವಾಗಿ ಬೆಳಗುತ್ತಿದ್ದವು. ಶುಭ್ರಜಲದಿಂದ ತುಂಬಿದ ಸರೋವರಗಳು ತಾವರೆಯ ಗಿಡಗಳಿಂದ ಮನೋಹರವಾಗಿ ಒಪ್ಪುತ್ತಿದ್ದವು. ಮರಗಳಲ್ಲಿ ರಸಮಯ ವಾದ ಹಣ್ಣುಗಳು ತುಂಬಿದ್ದವು. ಎಲ್ಲೆಲ್ಲಿಯೂ ವಿವಿಧವರ್ಣದ ವಸ್ತ್ರಗಳೂ ಶಲ್ಯಗಳೂ ಕಂಬಳಿಗಳೂ ತೂಗುಹಾಕಲ್ಪಟ್ಟಿದ್ದವು. ಕಪಿಗಳು ಅವುಗಳನ್ನು ನೋಡುತ್ತ ಆಶ್ಚರ್ಯಚಕಿತರಾಗಿ ಮುಂದೆ ಹೋಗುತ್ತಿರಲು ಸ್ವಲ್ಪದೂರದಲ್ಲಿ ಕೃಷ್ಣಾಜಿನವನ್ನುಟ್ಟು ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಒಬ್ಬ ತಪಸ್ವಿನಿಯು ಕಾಣಿಸಿದಳು. ವಾನರರೆಲ್ಲರೂ ಆಶ್ಚರ್ಯದಿಂದ ಅವಳ ಬಳಿಗೆ ಹೋಗಿ ನಿಂತುಕೊಳ್ಳಲು, ಹನುಮಂತನು ಆ ತಪಸ್ವಿನಿಯನ್ನು ಕುರಿತು "ನೀನು ಯಾರು? ಈ ಗುಹೆ ಯಾರದು?" ಎಂಬುದಾಗಿ ಕೈಮುಗಿದುಕೊಂಡು ವಿನಯದಿಂದ ಪ್ರಶ್ನೆಮಾಡಿದನು.



೫೧ ನೆಯ ಅಧ್ಯಾಯ

## ಸ್ವಯಂಪ್ರಭೆಯು ಆಂಜನೇಯಾದಿಗಳಿಗೆ ಮಾಡಿದ ಆತಿಥ್ಯ

ಅಲ್ಲಿ ಕೃಷ್ಣಾಜಿನವನ್ನು ಹೊದ್ದು ಆಹಾರನಿಯಮದಿಂದ ತಪಸ್ಸನ್ನು ಮಾಡಿಕೊಂಡಿದ್ದ ಸ್ವಯಂಪ್ರಭೆಯೆಂಬ ಆ ಸ್ತ್ರೀಯನ್ನು ಕುರಿತು ಹನುಮಂತನು ಪುನಃ ಹೀಗೆಂದನು: "ಮಹಾತ್ಮಳೆ, ನಾನೂ ಈ ಕಪಿನಾಯಕರೂ ಹಸಿವು ತೃಷೆಗಳಿಂದ ಕಂಗೆಟ್ಟು, ಈ ಬಿಲವನ್ನು ಪ್ರವೇಶಿಸಿದೆವು. ಈಗ ನಿನ್ನ ಸನ್ನಿಧಾನದಲ್ಲಿರುವ ಅತ್ಯದ್ಭುತವಾದ ಭೋಗವಸ್ತುಗಳನ್ನು ಕಂಡು ವಿಸ್ಮಿತರಾಗಿದ್ದೇವೆ. ಈ ಸ್ವಯಂಪ್ರಕಾಶದೇಶದಲ್ಲಿ ಬಾಲಸೂರ್ಯನ ಕಾಂತಿಯಂತೆ ಕಾಂತಿಯುಳ್ಳ ಸುವರ್ಣ ಮಯವಾದ ವೃಕ್ಷಗಳಿವೆ. ಈ ವನದಲ್ಲಿ ರಮಣೀಯವಾದ ಕಂದ ಮೂಲ ಫಲಗಳಿವೆ. ಎಲ್ಲಿ ನೋಡಿದರೂ ರಜತಮಯವಾದ ಮನೆಗಳೂ ಸುವರ್ಣಮಯವಾದ ವಿಮಾನಗಳೂ ಅಪರಂಜಿಯಲ್ಲಿ ಮಾಡಿದ ಗವಾಕ್ಷಗಳೂ ಇರುವ ಈ ಅರಮನೆಯ ಬಾಗಿಲುಗಳಲ್ಲಿ ಕುಸುಮಿತವಾದ ಪರಿಮಳ ವುಳ್ಳ ಪುಷ್ಪಗಳಿಂದಲೂ ಪಕ್ವವಾದ ಫಲಗಳಿಂದಲೂ ಇಟ್ಟಣಿಸಿದ ಸುವರ್ಣಮಯವಾದ ವೃಕ್ಷಗಳಿವೆ. ನಿರ್ಮಲೋದಕವುಳ್ಳ ಈ ಕೊಳಗಳಲ್ಲಿ ಸುವರ್ಣಮಯವಾದ ಕಮಲಗಳಿರುವುವಲ್ಲದೆ ಸುವರ್ಣವರ್ಣದ ಆಮೆಗಳೂ ಮೀನುಗಳೂ ಸಂಚರಿಸುತ್ತಿವೆ. ಈ ಅರಮನೆಯು ಯಾರದು? ಇದು ನಿನ್ನ ತಪಸ್ಸಾಮರ್ಥ್ಯದಿಂದ ಉಂಟಾದದ್ದೊ?—ಅಲ್ಲದಿದ್ದರೆ ಮತ್ತೊಬ್ಬರ ತಪಸ್ಸಿನ ಫಲವೊ? ಈ ವಿಷಯವನ್ನು ಅರಿಯದ ನಮಗೆ ಯಥಾರ್ಥವನ್ನು ತಿಳಿಸು" ಎಂದು ಹನುಮಂತನು ಕೇಳಿದನು.

ಸ್ವಯಂಪ್ರಭೆಯು ಹನುಮಂತನನ್ನು ಕುರಿತು ಹೀಗೆ ಉತ್ತರಿಸಿದಳು: "ಹೇ ವಾನರೋತ್ತಮ, ಪೂರ್ವದಲ್ಲಿ ಮಾಯಾವಿಯಾದ ಮಯನೆಂಬ ದಾನವಶಿಲ್ಪಿಯು ತನ್ನ ಮಾಯಾಚಾತುರ್ಯದಿಂದ ಸುವರ್ಣಮಯವಾದ ಈ ವನವನ್ನು ನಿರ್ಮಿಸಿದನು. ಮಯನು ಸಮಸ್ತ ದಾನವರಿಗೂ ಗೃಹವನ್ನು

ನಿರ್ಮಾಣ ಮಾಡುವುದರಿಂದ ದಾನವಶಿಲ್ಪಿಯೆನಿಸಿಕೊಂಡಿರುವನು. ಆತನು ತನ್ನ ಸಾಮರ್ಥ್ಯದಿಂದ ಈ ವನವನ್ನು ನಿರ್ಮಿಸಿದನು. ಆತನು ಬ್ರಹ್ಮದೇವನನ್ನು ಕುರಿತು ತಪಸ್ಸುಮಾಡಿ ಶುಕ್ರಪ್ರಣೀತವಾದ ಶಿಲ್ಪಶಾಸ್ತ್ರವೆಲ್ಲವನ್ನೂ ವಶವಾಗುವಂತೆ ವರಪಡೆದನು. ಆತನು ಅತ್ಯಂತ ಮನೋಹರವಾದ ಈ ವನವನ್ನೂ ಅರಮನೆಯನ್ನೂ ನಿರ್ಮಿಸಿ ಇಲ್ಲಿ ಹೇಮೆ ಎಂಬ ಅಪ್ಸರಃಸ್ತ್ರೀಯೊಡನೆ ಕೆಲವು ಕಾಲವಿದ್ದನು. ಆಮೇಲೆ ಆತನ ಸಂಪತ್ತನ್ನು ಸಹಿಸಲಾರದೆ ದೇವೇಂದ್ರನು ತನ್ನ ವಜ್ರಾಯುಧವನ್ನು ತೆಗೆದುಕೊಂಡು ಆತನನ್ನು ಕೊಂದನು. ಆಗ ಬ್ರಹ್ಮದೇವನು ಹೇಮೆ ಎಂಬ ಅಪ್ಸರಃಸ್ತ್ರೀಗೆ ಸುವರ್ಣಮಯವಾದ ಈ ಗೃಹವನ್ನೂ ದಿವ್ಯವಾದ ಭೋಗವನ್ನೂ ಕೊಟ್ಟನು. ನಾನು ಮೇರುಸಾವರ್ಣಿ ಎಂಬ ಋಷೀಶ್ವರನ ಮಗಳು. ನನ್ನ ಹೆಸರು ಸ್ವಯಂಪ್ರಭೆ. ನಾನು ಹೇಮೆಯಃ ಈ ಮನೆಯನ್ನು ಕಾದುಕೊಂಡಿರುವೆನು. ಆ ದೇವಸ್ತ್ರೀಯು ನನ್ನ ಪ್ರಿಯಸಖಿಯೂ ನೃತ್ಯಗೀತಗಳಲ್ಲಿ ಮಹಾ ಪ್ರೌಢೆಯೂ ಆಗಿರುವಳು. ಆಕೆಯು ನನಗೆ ಬೇರೆ ಯಾರಿಂದಲೂ ತಿರಸ್ಕಾರವುಂಟಾಗದಂತೆ ವರವನ್ನೂ ಕೊಟ್ಟಳಾದಕಾರಣ ನಾನು ಇಲ್ಲಿದ್ದೇನೆ. ಕಪೀಶ್ವರ, ನೀನು ಇಲ್ಲಿಗೆ ಬಂದ ಕಾರಣವೇನು ? ಈ ವನವನ್ನು ನೀವು ಹೇಗೆ ಕಂಡಿರಿ ? ಈ ವನವನ್ನು ಹೊಕ್ಕುಬರುವುದು ಪ್ರಾಣಿಗಳಿಗೆ ದುರ್ಘಟವಾಗಿರುವುದು. ಯಾವ ಪ್ರಕಾರದಿಂದಾದರೂ ನೀವು ಬಂದದ್ದು ಒಳ್ಳೆಯದಾಯಿತು. ನೀವು ಶುಚಿಯಾಗಿ ದಿವ್ಯಗಂಧವುಳ್ಳ ಕಂದ ಮೂಲ ಫಲಗಳನ್ನು ಸೇವಿಸಿರಿ. ಅಮೃತೋಪಮವಾದ ಉದಕವನ್ನು ಪಾನಮಾಡಿರಿ. ದಾರಿಯ ಬಳಲಿಕೆಯನ್ನು ಪರಿಹಾರಮಾಡಿಕೊಂಡು ನೀವು ಬಂದ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿರಿ " ಎಂದಳು.



೫೨ನೆಯ ಅಧ್ಯಾಯ

## ಸ್ವಯಂಪ್ರಭೆಯು ಹನುಮದಾದಿಗಳನ್ನು ಬಿಲದಿಂದ ಹೊರಗೆ ತಂದುಬಿಟ್ಟದ್ದು

ಈ ಪ್ರಕಾರ ನುಡಿದು ಧರ್ಮರಹಸ್ಯವನ್ನು ಬಲ್ಲ ಸ್ವಯಂಪ್ರಭೆಯು ಆ ಕಪಿನಾಯಕರು ಫಲಹಾರವನ್ನು ಮಾಡಿದ ಬಳಿಕ ಅವರನ್ನು ಕುರಿತು " ಎಲೈ ಕಪಿನಾಯಕರುಗಳಿರಾ, ನಿಮ್ಮ ಬಳಲಿಕೆಯು ಪರಿಹಾರವಾದ ಪಕ್ಷದಲ್ಲಿ ನೀವು ಬಂದ ವೃತ್ತಾಂತವನ್ನು ವಿಸ್ತಾರವಾಗಿ ಕೇಳಬೇಕೆಂದು ನನಗೆ ಅಪೇಕ್ಷೆಯಾಗಿದೆ. ನಿಮ್ಮ ಕಾರ್ಯಸ್ಥಿತಿಯನ್ನು ವಿಸ್ತಾರವಾಗಿ ಹೇಳಿ " ಎಂದಳು.

ಆ ಮಾತನ್ನು ಕೇಳಿ ಹನುಮಂತನು ಆಕೆಯನ್ನು ಕುರಿತು ತಮ್ಮ ವೃತ್ತಾಂತವನ್ನು ಹೇಳಿದನು : " ಎಲೌ ಸ್ವಯಂಪ್ರಭೆ, ಸಮಸ್ತಲೋಕಕ್ಕೂ ಒಡೆಯನೂ ದೇವೇಂದ್ರ ವರುಣರಿಗೆ ಸಮಾನನೂ ಆದ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನನ್ನೂ ತನ್ನ ಪಟ್ಟದ ರಾಣಿಯಾದ ಸೀತಾದೇವಿಯನ್ನೂ ಕರೆದುಕೊಂಡು ದಂಡಕಾರಣ್ಯಕ್ಕೆ ಬಂದನು. ಆ ಅರಣ್ಯದಲ್ಲಿರುವ ಜನಸ್ಥಾನದಲ್ಲಿ ಆತನ ಪತ್ನಿಯಾದ ಸೀತಾದೇವಿಯನ್ನು ಮೋಸದಿಂದ ರಾವಣನು ಅಪಹರಿಸಿಕೊಂಡು ಹೋದನು. ನಾವೆಲ್ಲರೂ ಆ ದೇವಿಯನ್ನರಸಿಕೊಂಡು ಬಂದು ಈ ತೆಂಕಣ ದಿಕ್ಕಿನ ಸಮಸ್ತ ಸ್ಥಾನಗಳಲ್ಲಿಯೂ ಕಾಣದೆ ಹಸಿವು ತೃಷೆಗಳಿಂದ ಕಂಗೆಟ್ಟು ಬಂದು ಮರದಡಿಯನ್ನು ಸೇರಿದೆವು. ಸೀತಾದೇವಿಯನ್ನು ಕಾಣದ್ದರಿಂದ ಚಿಂತಾಸಮುದ್ರದಲ್ಲಿ ಮುಳುಗಿ ಧ್ಯಾನಮಾಡುತ್ತ ನಾನಾದಿಕ್ಕುಗಳನ್ನೂ ನೋಡುತ್ತ ಈ ಬಿಲ

ದ್ವಾರವನ್ನು ಕಂಡೆವು. ಈ ಬಿಲದ್ವಾರವು ಅನೇಕ ವೃಕ್ಷಗಳಿಂದಲೂ ಬಳ್ಳಿಗಳಿಂದಲೂ ಆವೃತವಾಗಿದ್ದಿತು ಈ ಗುಹೆಯ ಬಾಗಿಲಿಂದ ಹಂಸ ಚಕ್ರವಾಕ ಸಾರಸ ಕೊಳರ್ವಕ್ಕಿ ಮೊದಲಾದ ಪಕ್ಷಿಗಳು ಬರುತ್ತಿರಲು ಅವುಗಳನ್ನು ಕಂಡು ಈ ಬಿಲದಲ್ಲಿ ಉದಕವಿರಬಹುದೆಂದೆಣಿಸಿ ನಾವು ಈ ಬಿಲವನ್ನು ಹೊಕ್ಕೆವು. ಈ ಅಂಧಕಾರದಲ್ಲಿ ಏನನ್ನೂ ಕಾಣದೆ ಒಬ್ಬರನ್ನೊಬ್ಬರು ಕೈಗಳನ್ನು ಹಿಡಿದು ಕೊಂಡು ಅತಿಪ್ರಯಾಸದಿಂದ ಈ ಸ್ವಯಂಪ್ರಕಾಶದೇಶಕ್ಕೆ ಬಂದು ಧರ್ಮಸ್ವರೂಪಳಾದ ನಿನ್ನನ್ನು ಕಂಡು ನೀನು ಕೊಟ್ಟ ಕಂದ ಮೂಲ ಫಲಾಹಾರಗಳಿಂದ ಹಸಿವು ತೃಷೆಗಳನ್ನು ತೀರಿಸಿಕೊಂಡೆವು. ಹಸಿವು ತೃಷೆಗಳಿಂದ ಕಂಗೆಟ್ಟು ಶರೀರವನ್ನು ಬಿಡುವುದರಲ್ಲಿದ್ದ ನಮ್ಮನ್ನು ಕೃಪೆಯಿಂದ ರಕ್ಷಿಸಿದೆ. ಎಲೌ ದೇವಿ, ನಿನಗೆ ನಾವು ಮಾಡುವ ಪ್ರತ್ಯುಪಕಾರವೇನು ? ಹೇಳು " ಎಂದು ಕೇಳಿದನು.

ಆ ಮಾತನ್ನು ಕೇಳಿ ಸ್ವಯಂಪ್ರಭೆಯು " ವಾನರೋತ್ತಮ, ನಿಮಗೆ ಆತಿಥ್ಯವನ್ನು ಮಾಡಿ ನಾನು ಸುಪ್ರೀತಳಾದೆನು. ಧರ್ಮಾಚರಣೆಯನ್ನು ಮಾಡಿಕೊಂಡಿರುವ ನನಗೆ ಮತ್ತೊಬ್ಬರಿಂದ ಪಡೆಯತಕ್ಕದೇನೂ ಇಲ್ಲ " ಎಂದು ನುಡಿದಳು.

ಹನುಮಂತನು " ಹೇ ತಪಸ್ವಿನಿ, ನಾವೆಲ್ಲರೂ ಧರ್ಮಶೀಲಳಾದ ನಿನ್ನ ಮರೆಹೊಕ್ಕೆವು. ಸುಗ್ರೀವನು ಒಂದು ತಿಂಗಳೊಳಗೆ ಬರಹೇಳಿ ನಮಗೆ ಕಟ್ಟುಮಾಡಿ ಕಳುಹಿಸಿರುವನು. ನಮಗೆ ಆ ಗಡುವು ಮೀರುತ್ತ ಬಂದಿತು. ಈ ಬಿಲವನ್ನು ದಾಟಿಸಿ ಸುಗ್ರೀವನ ಭಯದಿಂದ ಕಂಗೆಟ್ಟಿರುವ ನಮ್ಮನ್ನು ರಕ್ಷಿಸು. ನಾವು ಇಲ್ಲಿ ಬಂದದ್ದರಿಂದ ಕಾರ್ಯವಿಳಂಬವಾಗಿ ಪ್ರಾಣಾಂತವಾದ ದಂಡನೆಯು ನಮಗೆ ಕಾದಿದೆ " ಎಂದು ನುಡಿದನು.

ಅದನ್ನು ಕೇಳಿ ಸ್ವಯಂಪ್ರಭೆಯು " ಈ ಬಿಲಕ್ಕೆ ಒಂದು ಪ್ರಾಣಿಯಾದರೂ ಬರುವಂತಿಲ್ಲ. ಒಂದುವೇಳೆ ಬಂದರೆ ಜೀವಸಹಿತವಾಗಿ ತಿರುಗಿ ಹೋಗುವುದಿಲ್ಲ. ಹಾಗಾದರೂ ನಿಮ್ಮ ಮೇಲಣ ಕೃಪೆಯಿಂದ ನಿಮ್ಮೆಲ್ಲರನ್ನೂ ಈ ಬಿಲದಿಂದ ದಾಟಿಸುತ್ತೇನೆ. ನೀವೆಲ್ಲರೂ ಕಣ್ಣುಗಳನ್ನು ಮುಚ್ಚಿಕೊಳ್ಳಿರಿ. ಯಾರಿಗೂ ಕಣ್ಣುಮುಚ್ಚದೆ ಈ ಬಿಲದಿಂದ ಹೊರಡುವುದಕ್ಕೆ ಶಕ್ಯವಿಲ್ಲ " ಎಂದು ನುಡಿದಳು.

ಆ ಮಾತನ್ನು ಕೇಳಿ ಹನುಮಂತನೇ ಮೊದಲಾದ ಕಪಿನಾಯಕರು ತಮ್ಮ ಕೈಗಳಿಂದ ಕಣ್ಣು ಗಳನ್ನು ಮುಚ್ಚಿಕೊಂಡರು ಆಮೇಲೆ ಕಣ್ಣುಮುಚ್ಚಿಕೊಂಡಿದ್ದ ಆ ಕಪಿನಾಯಕರನ್ನು ಧರ್ಮ ಚಾರಿಣಿಯೂ ತಪಸ್ವಿನಿಯೂ ಆದ ಸ್ವಯಂಪ್ರಭೆಯು ಕಣ್ಣುಮುಚ್ಚಿ ಕಣ್ಣು ತೆರೆಯುವಹೊತ್ತಿನೊಳ ಗಾಗಿ ಬಿಲದಿಂದ ಹೊರಗೆ ಕರೆತಂದಳು. ಅವಳು ಅವರನ್ನು ಸಂತವಿಟ್ಟು " ಎಲೈ ಕಪಿನಾಯಕರು ಗಳಿರಾ, ನೀವಿನ್ನು ಕಣ್ಣುತೆರೆದು ನೋಡಿ. ಇದು ವಿಂಧ್ಯಪರ್ವತ. ಈ ಪರ್ವತವು ನಾನಾವೃಕ್ಷ ಗಳಿಂದಲೂ ಬಳ್ಳಿಗಳಿಂದಲೂ ರಮಣೀಯವಾಗಿದೆ. ಇದು ಪ್ರಸ್ರವಣಶೈಲ. ಇದೇ ಮಹಾ ಸಮುದ್ರ. ಇನ್ನು ನೀವು ನಿಮ್ಮ ಮನಸ್ಸು ಬಂದಕಡೆಗೆ ಹೋಗಿ ಸುಖವಾಗಿರಿ, ನಾನು ಹೋಗುತ್ತೇನೆ " ಎಂದು ಹೇಳಿ ತನ್ನ ಗುಹೆಯನ್ನು ಪ್ರವೇಶಿಸಿದಳು.



## ೫೩ ನೆಯ ಅಧ್ಯಾಯ

## ಅಂಗದಾದಿಗಳು ಸೀತಾದೇವಿಯನ್ನು ಕಾಣದೆ ಚಿಂತಿಸಿದ್ದು

ಅನಂತರ ಆ ವಾನರರು ಮುಂದೆ ಪ್ರಯಾಣಮಾಡಿ ಅತ್ಯಂತ ಭಯಂಕರವೂ ಘೋರವಾದ ಅಲೆಗಳೊಡನೆ ಭೀಕರವಾಗಿ ಗರ್ಜಿಸುತ್ತಿರುವುದೂ ಆದ ವಿಶಾಲವಾದ ಸಮುದ್ರವನ್ನು ನೋಡಿದರು. ಮಯನಿಂದ ನಿರ್ಮಿತವಾದ ಸ್ವಯಂಪ್ರಭಾಗುಹೆಯನ್ನು ಪ್ರವೇಶಿಸಿ ಅಲೆದಾಡುತ್ತಿದ್ದಾಗಲೇ ಸುಗ್ರೀವನು ಗೊತ್ತುಮಾಡಿದ ಒಂದು ತಿಂಗಳ ಅವಧಿ ಕಳೆದುಹೋಯಿತು. ಆಗ ಈ ಕಪಿನಾಯಕರು ಪರ್ವತದ ಒಂದು ತಪ್ಪಲಿನಲ್ಲಿ ಕುಳಿತು ಸೀತಾದೇವಿಯು ಸಿಗದಿದ್ದುದರಿಂದ ಚಿಂತಿಸತೊಡಗಿದರು. ಸುತ್ತಲೂ ಇದ್ದ ಗಿಡಮರಗಳು ಚಿಗುರಿದ್ದನ್ನು ನೋಡಿ ವಸಂತಕಾಲವು ಸಮೀಪಿಸಿತೆಂದು ಭಾವಿಸಿ ಭಯಾವಿಷ್ಟರಾದರು. ಒಬ್ಬರಿಗೊಬ್ಬರು ಆ ವಿಷಯವನ್ನು ಕುರಿತು ಮಾತನಾಡುತ್ತ ಸುಗ್ರೀವನು ಗೊತ್ತುಮಾಡಿದ ಅವಧಿಯು ಕಳೆದರೂ ಕಾರ್ಯವು ನೆರವೇರಲಿಲ್ಲವೆಂಬ ಚಿಂತೆಯಿಂದ ಅವರು ಬಹಳ ಖಿನ್ನರಾದರು. ಆಗ ಮಹಾಪ್ರತಾಪಶಾಲಿಯೂ ದೃಢಗಾತ್ರನೂ ಯುವರಾಜನೂ ಆದ ಅಂಗದನು ಆ ವಾನರಮುಖ್ಯರನ್ನುದ್ದೇಶಿಸಿ ಹೀಗೆಂದನು : " ಎಲೈ ವಾನರರೆ, ಸುಗ್ರೀವನು ಆಜ್ಞಾಪಿಸಿದಂತೆ ಒಂದು ಮಾಸದ ಅವಧಿಯು ಕಳೆದು ಹೋಯಿತು ನಿಮಗೆ ಇದು ತಿಳಿಯದೆ ? ನಾವು ಆಶ್ವಯುಜ ಮಾಸದ ಕಡೆಯಲ್ಲಿ ಒಂದು ತಿಂಗಳ ಅವಧಿಯನ್ನು ಪಡೆದು ಹೊರಟು ಬಂದೆವು. ತಿಂಗಳು ಕಳೆದು. ಹೋಯಿತು. ನೀತಿಮಾರ್ಗದಲ್ಲಿ ನೀವೆಲ್ಲರೂ ವಿಶಾರದರು ; ಕಾರ್ಯಸಾಧನಕುಶಲರು. ರಾಜಾಜ್ಞೆಯಂತೆ ನಡೆದು ರಾಜನ ಹಿತದಲ್ಲಿ ಆಸಕ್ತರಾದವರು ಸುಗ್ರೀವನ ಆಜ್ಞೆಯಂತೆ ನೀವೆಲ್ಲರೂ ನನ್ನೊಡನೆ ಹೊರಟುಬಂದಿದ್ದೀರಿ • ಕಪಿರಾಜನಾದ ಸುಗ್ರೀವನ ಆಜ್ಞೆಯನ್ನು ಉಲ್ಲಂಘಿಸಿದರೆ ಯಾವನು ತಾನೆ ಸುಖದಿಂದ ಜೀವಿಸಿಯಾನು ? ಆದ್ದರಿಂದ ನಮಗೆ ಮರಣದಂಡನೆ ಒದಗುವುದೆಂದು ತಿಳಿಯುತ್ತೇನೆ. ಈಗ ನಮಗೆ ಯಾವ ದಾರಿ ಸರಿಯಾದದ್ದು ? ನಾವೆಲ್ಲರೂ ಪ್ರಾಯೋಪವೇಶನಮಾಡುವುದೇ ಸರಿಯೆಂದು ನನಗೆ ಅನ್ನಿಸುತ್ತದೆ. ಸುಗ್ರೀವನು ಸಹಜವಾಗಿ ಉಗ್ರಸ್ವಭಾವದವನು. ನಾವು ಅಪರಾಧಿಗಳಾಗಿ ಹೋಗಿ ನಿಂತರೆ ಅವನು ನಮ್ಮನ್ನೆಂದಿಗೂ ಕ್ಷಮಿಸುವುದಿಲ್ಲ. ಸೀತಾದೇವಿಯ ವೃತ್ತಾಂತವನ್ನೂ ತಿಳಿಯದೆ ಕಾಲವನ್ನು ಮೀರಿ ನಾವು ಹೋದರೆ ನಮಗೆ ಮರಣದಂಡನೆಯೇ ಸಿದ್ಧವಾಗುತ್ತದೆ ಆದಕ್ಕಿಂತ ನಾವು ಇಲ್ಲಿಯೇ ಇದ್ದು ಉಪವಾಸದಿಂದ ಶರೀರವನ್ನು ಬಿಡುವುದೇ ಒಳ್ಳೆಯದು. ನನ್ನ ಮೇಲೆ ಸುಗ್ರೀವನಿಗೆ ಪ್ರೀತಿಯಿದೆಯೆಂದು ತಿಳಿಯಬೇಡಿ. ಅವನೇನೂ ಮರುಕದಿಂದ ನನಗೆ ಯುವರಾಜ ಪದವಿಯನ್ನು ಕೊಡಲಿಲ್ಲ. ನರೇಂದ್ರನಾದ ಶ್ರೀರಾಮನ ಇಚ್ಛೆಗೆ ಮಣಿದು ಅವನು ನನ್ನನ್ನು ಯುವರಾಜನನ್ನಾಗಿ ಮಾಡಬೇಕಾಯಿತು. ಆ ಕಪಿರಾಜನಿಗೆ ನನ್ನ ಮೇಲೆ ಹಳೆಯ ವೈರವು ಇದ್ದೇ ಇದೆ. ಈ ಸಮಯದಲ್ಲಿ ರಾಜಾಜ್ಞೆಯನ್ನು ಉಲ್ಲಂಘಿಸಿದೆನೆಂಬ ನೆವದಿಂದ ಅವನು ನನ್ನನ್ನು ಕೊಲ್ಲಿಸುತ್ತಾನೆ. ನನ್ನ ವಧೆಯನ್ನು ನೋಡುವ ಕಷ್ಟ ನನ್ನ ಮಿತ್ರರಿಗೇಕೆ ಬರಬೇಕು ? ಪವಿತ್ರವಾದ ಈ ಸಮುದ್ರತೀರದಲ್ಲಿ ಪ್ರಾಯೋಪವೇಶದಿಂದ ನಾನು ಪ್ರಾಣವನ್ನು ಬಿಡುವೆನು " ಎಂದು ಅಂಗದನು ಹೇಳಿದನು.

ಆ ಮಾತನ್ನು ಕೇಳಿ ಅಲ್ಲಿದ್ದ ಕಪಿನಾಯಕರು ದೈನ್ಯದಿಂದ ಅಂಗದಕುಮಾರನನ್ನು ಕುರಿತು ಅಂಗದಕುಮಾರ, ಸುಗ್ರೀವನು ಸ್ವಭಾವದಿಂದ ಕ್ರೂರಬುದ್ಧಿಯುಳ್ಳವನು. ಮೇಲಾಗಿ

ಶ್ರೀರಾಮನಿಗೆ ಪ್ರಿಯಭಕ್ತನು. ಆತನು ಹೇಳಿದ ಸಮಯವು ಮೀರಿತು. ಸೀತಾದೇವಿಯನ್ನು ಕಾಣದೆ ನಾವು ಆತನ ಬಳಿಗೆ ಹೋದರೆ ಆತನು ಶ್ರೀರಾಮನಿಗೆ ತನ್ನ ವಿಶ್ವಾಸವನ್ನು ತೋರಿಸಬೇಕೆಂದು ನಮ್ಮನ್ನು ಕೊಲ್ಲಿಸುವನು. ಸಂಶಯವಿಲ್ಲ. ಲೋಕದಲ್ಲಿ ಅಪರಾಧವನ್ನು ಮಾಡಿದವರು ಒಡೆಯನ ಸಮೀಪಕ್ಕೆ ಹೋಗುವುದು ಯೋಗ್ಯವಲ್ಲ. ನಾವು ಸುಗ್ರೀವನ ಬಳಿ ಪ್ರಧಾನವಾದ ಅಧಿಕಾರದಲ್ಲಿ ಇರತಕ್ಕವರು. ನಾವು ಇಲ್ಲಿಯೇ ಇದ್ದು ಸೀತಾದೇವಿಯನ್ನರಸುವುದಕ್ಕೆ ತಕ್ಕ ಪ್ರಯತ್ನವನ್ನು ಮಾಡಬೇಕು. ಸೀತಾದೇವಿಯನ್ನು ಕಾಣದೆ ಸುಮ್ಮನೆ ಹೋದರೆ ಯಮಲೋಕವನ್ನೈದುವೆವು " ಎಂದು ನುಡಿದರು.

ಆ ಮಾತನ್ನು ಕೇಳಿ ತಾರನು " ಎಲೈ ಕಪಿನಾಯಕರುಗಳಿರಾ, ನನ್ನದೊಂದು ಯೋಚನೆಯನ್ನು ಕೇಳಿ. ನೀವು ದುಃಖವನ್ನು ಬಿಡಿ. ದಾನವಶಿಲ್ಪಿಯಾದ ಮಯನಿಂದ ನಿರ್ಮಿಸಲ್ಪಟ್ಟು ಪ್ರಾಣಿಗಳಿಗೆ ಪ್ರವೇಶ ಮಾಡುವುದಕ್ಕೆ ಅಸಾಧ್ಯವಾದ ಮನೋಹರವಾದ ವೃಕ್ಷಗಳೂ ಕಂದಮೂಲಫಲ ಸ್ವಾದೂದಕಗಳೂ ಇರುವ ಆ ಬಿಲವನ್ನು ಪ್ರವೇಶಿಸಿ ಸುಖದಲ್ಲಿರೋಣ. ಆ ಬಿಲದಲ್ಲಿದ್ದರೆ ದೇವೇಂದ್ರನಿಂದಲಾದರೂ ಶ್ರೀರಾಮನಿಂದಲಾದರೂ ಸುಗ್ರೀವನಿಂದಲಾದರೂ ನಮಗೆ ಭಯವಿಲ್ಲ " ಎಂದು ನುಡಿದನು.



## ೫೪ ನೆಯ ಅಧ್ಯಾಯ

## ಹನುಮಂತನು ಅಂಗದನಿಗೆ ಹೇಳಿದ ಬುದ್ಧಿವಾದ

ಆ ಬಳಿಕ ಹನುಮಂತನು ಅಂಗದಕುಮಾರನ ಬುದ್ಧಿಚಾತುರ್ಯವನ್ನು ನೋಡಿ ಆತನಿಗೆ ಸರ್ವಥಾ ರಾಜ್ಯಲಕ್ಷ್ಮಿಯು ಕೈಸಾರಿದಳೆಂದು ನಿಶ್ಚಯಿಸಿದನು. ಅಂಗದನು ಅಷ್ಟಗುಣೋಪೇತವಾದ ಬುದ್ಧಿಯಿಂದಲೂ ಚತುರುಪಾಯಗಳಿಂದಲೂ ಚತುರ್ದಶಗುಣಗಳಿಂದಲೂ ಕೂಡಿರುವನೆಂದು ತಿಳಿದುಕೊಂಡನು. ಅಂಗದನಾದರೋ ಬುದ್ಧಿಯಲ್ಲಿ ಬೃಹಸ್ಪತಿಗೂ ಕಾರ್ಯದಲ್ಲಿ ತಂದೆಯಾದ ವಾಲಿಗೂ ಸಮಾನನು. ಸ್ವಾಮಿಯಾದ ಸುಗ್ರೀವನ ಆಜ್ಞೆಯನ್ನು ಪಾಲಿಸುವುದಕ್ಕಾಗಿ ಅತ್ಯಂತ ಶ್ರಮಿಸಿದವನು. ಅವನನ್ನು ನೋಡಿ ಹನುಮಂತನು ಈ ಕುಮಾರನು ಯೋಗ್ಯನೆಂದು ನಿರ್ಣಯಿಸಿದನು. ಮೊದಲು ತನ್ನ ವಾಕ್ಚಾತುರ್ಯದಿಂದ ಕಪಿಗಳಲ್ಲಿಯೇ ಉಪವಾಸದ ವಿಷಯದಲ್ಲಿ ಅಭಿಪ್ರಾಯಭೇದವನ್ನು ಹುಟ್ಟಿಸಿ, ಅನಂತರ ಅಂಗದನಿಗೆ ಈ ರೀತಿ ಬುದ್ಧಿವಾದವನ್ನು ಹೇಳಿದನು : " ಅಂಗದ, ನೀನು ಯುದ್ಧರಂಗವನ್ನು ಕಂಡರೆ ಹರ್ಷದಿಂದ ಯುದ್ಧಮಾಡುವುದಕ್ಕೆ ನುಗ್ಗತಕ್ಕವನು. ನಿನ್ನ ತಂದೆಯಾದ ವಾಲಿಯಂತೆ ಕಪಿರಾಜ್ಯದ ಭಾರವನ್ನು ವಹಿಸುವುದಕ್ಕೆ ಸಮರ್ಥನು. ಈ ಕಪಿಗಳು ಯಾವಾಗಲೂ ಸ್ಥಿರಬುದ್ಧಿಯುಳ್ಳವರಲ್ಲ. ಸ್ತ್ರೀಯರೂ ಮಕ್ಕಳೂ ಇರತಕ್ಕ ಈ ಕಪಿನಾಯಕರು ನಿನ್ನ ಮಾತನ್ನು ಕೇಳುವವರಲ್ಲ. ಜಾಂಬವಂತ ನೀಲ ಸುಹೋತ್ರ ಮೊದಲಾದವರು ಸಾಮದಾನಾದಿ ಉಪಾಯಗಳಿಂದ ಸಾಧ್ಯವಾಗುವವರಲ್ಲ. ಇವರನ್ನು ದಂಡದಿಂದ ಸಾಧ್ಯಮಾಡುವುದಕ್ಕೂ ಆಗದು. ಇವರೆಲ್ಲರೂ ಸುಗ್ರೀವನಲ್ಲಿ ನಿಷ್ಠೆಯಿಂದ ಇದ್ದಾರೆ. ನೀನು ತಾರನ ಮಾತನ್ನು ಕೇಳಿ ಸುಗ್ರೀವನ ಬಳಿಗೆ ಹೋಗದೆ ಈ ಬಿಲದಲ್ಲಿ ಮರೆಮಾಚಿಕೊಂಡಿರುವುದು ನ್ಯಾಯವಲ್ಲ. ಸುಗ್ರೀವನು ಬಲವಂತನು. ಆತನಿಗಿಂತಲೂ ನೀನು ಬಲಹೀನನು. ಬಲಹೀನನಾದವನು ಬಲವಂತನೊಡನೆ ವಿರೋಧವನ್ನು ಮಾಡಿಕೊಂಡು ಅದನ್ನು ಮರೆತಿರುವುದು

ಯೋಗ್ಯವಲ್ಲ. ಈ ಗುಹೆಯು ದೇವೇಂದ್ರನಿಗಾದರೂ ಶ್ರೀರಾಮನಿಗಾದರೂ ಸುಗ್ರೀವನಿಗಾದರೂ ಸಾಧ್ಯವಲ್ಲವೆಂದು ತಾರನು ನುಡಿದನು. ಈ ಗುಹೆಯನ್ನು ಒಡೆದುಹಾಕುವುದಕ್ಕೆ ಲಕ್ಷ್ಮಣನ ಬಾಣಗಳು ಸಮರ್ಥವಾಗಿವೆ. ಮಯನು ಈ ಗುಹೆಯಲ್ಲಿ ಇರುವಾಗ ದೇವೇಂದ್ರನು ತನ್ನ ಸಿಡಿಲೆಂಬ ಆಯುಧದಿಂದ ಆತನನ್ನು ಕೊಂದನೆಂದು ಈ ಗುಹೆಯಿಲ್ಲಿರುವ ಸ್ವಯಂಪ್ರಭೆಯು ಹೇಳಿದಳಲ್ಲವೆ! ಲಕ್ಷ್ಮಣನು ತನ್ನ ನಿಶಿತಬಾಣಗಳಿಂದ ಒಂದು ದೊನ್ನೆಯನ್ನು ಸೀಳುವಂತೆ ಈ ಗುಹೆಯನ್ನು ಒಡೆದು ಹಾಕಬಲ್ಲನು. ವಜ್ರಾಯುಧಕ್ಕೂ ಸಿಡಿಲಿಗೂ ಸಮಾನವಾದ, ಪರ್ವತಗಳನ್ನೂ ಚೂರ್ಣಮಾಡಬಲ್ಲ ಅನೇಕ ಬಾಣಗಳು ಲಕ್ಷ್ಮಣನ ಹತ್ತಿರ ಇವೆ. ನೀನು ಈ ಗುಹೆಯಲ್ಲಿರಬೇಕೆಂದು ಯೋಚನೆ ಮಾಡುವ ಪಕ್ಷದಲ್ಲಿ ಕಪಿನಾಯಕರೆಲ್ಲರೂ ಹಸಿವು ತೃಷೆಗಳಿಂದ ಕಂಗೆಟ್ಟು, ನಾನಾಪ್ರದೇಶಗಳನ್ನೂ ತಿರುಗಿ ದುಃಖಪಟ್ಟಿರುವುದರಿಂದ ತಮ್ಮ ಸ್ತ್ರೀಯರನ್ನೂ ಮಕ್ಕಳನ್ನೂ ನೆನೆದು ನಿನ್ನನ್ನು ಬಿಟ್ಟು ಹೋಗುವರಲ್ಲದೆ ನಿನ್ನೊಡನೆ ಇರಲಾರರು. ನೀನು ನಿನ್ನ ಬಂಧುಗಳನ್ನೂ ಸ್ನೇಹಿತರನ್ನೂ ಬಿಟ್ಟು ಇಲ್ಲಿದ್ದರೆ ಒಂದು ತೃಣಕ್ಕಿಂತಲೂ ಕಡೆಯಾಗೆಣಿಸಲ್ಪಡುವೆ. ಲಕ್ಷ್ಮಣನ ಉಗ್ರವಾದ ಬಾಣಗಳು ಯಾರಿಗೂ ಸಹಿಸುವುದಕ್ಕೆ ಅಸಾಧ್ಯವಾದವು. ನೀನು ನಮ್ಮೊಡನೆ ಬಂದ ಮೇಲೆ ನಾವು ಹೇಳಿದಂತೆ ಇದ್ದೆಯಾದರೆ ಸುಗ್ರೀವನು ಕ್ರಮವಾಗಿ ನಿನಗೆ ರಾಜ್ಯಾಧಿಪತ್ಯವನ್ನು ಕೊಡುವನು. ನಿನ್ನ ಚಿಕ್ಕಪ್ಪನಾದ ಸುಗ್ರೀವನು ಹಿತವನ್ನು ಬಲ್ಲವನು; ಧರ್ಮಿಷ್ಠ, ದೃಢವ್ರತ, ಶುಚಿತ್ವವುಳ್ಳವನು, ಪ್ರತಿಜ್ಞಾಪರಿಪಾಲಕ. ಅವನು ನಿನ್ನನ್ನು ಸಂಮಾನಿಸುವನಲ್ಲದೆ ದಂಡಿಸನು. ನಿನ್ನ ತಾಯಿಯಾದ ತಾರಾದೇವಿಗೆ ಸಂತೋಷವನ್ನುಂಟುಮಾಡಬೇಕೆಂಬ ಬುದ್ಧಿಯಿಂದ ತನ್ನ ಪ್ರಾಣವನ್ನಾದರೂ ಕೊಡುವನು. ಆತನಿಗೆ ನೀನಲ್ಲದೆ ಬೇರೆ ಮಕ್ಕಳಿಲ್ಲ. ಆದಕಾರಣ ನೀನು ಸುಗ್ರೀವನ ಮನಸ್ಸಿಗೂ ಶ್ರೀರಾಮನ ಮನಸ್ಸಿಗೂ ಸಂತೋಷವಾಗುವಂತೆ ಇನ್ನೂ ಉಳಿದಿರುವ ಸ್ಥಾನಗಳಲ್ಲಿ ಸೀತಾದೇವಿಯನ್ನರಸಿ ಕಾಣುವುದಕ್ಕೆ ತಕ್ಕ ಉಪಾಯವನ್ನು ಮಾಡಬೇಕು" ಎಂದು ವಿವೇಕವನ್ನು ಹೇಳಿದನು.

---

## ೫೫ ನೆಯ ಅಧ್ಯಾಯ

## ಅಂಗದಾದಿಗಳು ಪ್ರಾಯೋಪವೇಶಕ್ಕೆ ಕುಳಿತದ್ದು

ಈ ಪ್ರಕಾರದಲ್ಲಿ ಹನುಮಂತನು ಅಂಗದನಿಗೆ ಧರ್ಮರಹಸ್ಯಪೂರ್ಣವಾದ ವಿಚಾರವನ್ನು ಉಪದೇಶಿಸಲು, ಅಂಗದನು ಅವನಿಗೆ ಪ್ರತ್ಯುತ್ತರವನ್ನು ಕೊಡುತ್ತ ಹೇಳಿದನು: "ಹನುಮಂತ, ಸುಗ್ರೀವನಲ್ಲಿ ಸ್ಥಿರಬುದ್ಧಿ, ದೃಢತ್ವ, ಇಂದ್ರಿಯನಿಗ್ರಹ, ಋಜುಮಾರ್ಗ, ಪರಾಕ್ರಮವೇ ಮೊದಲಾದ ಸದ್ಗುಣಗಳು ಇಲ್ಲ. ಇದ್ದಿದ್ದರೆ ತನ್ನ ಅಣ್ಣನ ಭಾರ್ಯೆಯನ್ನು ಸ್ವೀಕರಿಸುವ ಹೇಯವಾದ ಕಾರ್ಯಕ್ಕೆ ಕೈಹಾಕುತ್ತಿದ್ದನೆ? ತನ್ನ ಅಣ್ಣನು ಗುಹೆಯೊಳಕ್ಕೆ ರಾಕ್ಷಸರೊಡನೆ ಯುದ್ಧಮಾಡುವುದಕ್ಕಾಗಿ ಹೋದಾಗ ಹೊರಗಿನಿಂದ ಗುಹೆಯನ್ನು ಮುಚ್ಚಿ ಮನೆಗೆ ಬಂದ ದುರಾತ್ಮನಿಗೆ ಧರ್ಮದ ಜ್ಞಾನವಿದೆಯೆ? ಸಹಾಯ ಮಾಡುತ್ತೇನೆಂದು ಕೈಹಿಡಿದು ಮಾತುಕೊಟ್ಟು ತನ್ನ ಕಾರ್ಯವಾದ ಮೇಲೆ ತೆಪ್ಪಗೆ ಅರಮನೆಯಲ್ಲಿ ಕುಳಿತು ಶ್ರೀರಾಮನನ್ನೇ ಮರೆತುಬಿಟ್ಟ ಸುಗ್ರೀವನು ಇನ್ನು ಯಾರ ಉಪಕಾರವನ್ನು ನೆನೆಸಿಕೊಂಡಾನು? ಈಗ ಸೀತೆಯನ್ನು ಹುಡುಕಲು

ವಾನರರಿಗೆ ಅವನು ಆಜ್ಞೆಮಾಡಿದ್ದು ಲಕ್ಷ್ಮಣನ ಭಯದಿಂದಲೇ ಹೊರತು ಅಧರ್ಮದ ಭಯದಿಂದಲ್ಲ. ಸುಗ್ರೀವನಲ್ಲಿ ಧರ್ಮಬುದ್ಧಿಯಿಲ್ಲ. ಅಂಥ ಪಾಪಿಯೂ ಕೃತಘ್ನನೂ ಉಪಕಾರವನ್ನು ಮರೆಯತಕ್ಕವನೂ ಆದ ಚಂಚಲಸ್ವಭಾವದ ಸುಗ್ರೀವನನ್ನು ಯಾವ ಸಾಧುಪುರುಷನೂ ನಂಬಬಾರದು. ಅವನು ಹೇಗಾದರೂ ಇರಲಿ. ಅವನ ಶತ್ರುವಿನ ಮಗನಾದ ನನಗೆ ಅವನು ರಾಜ್ಯಾಧಿಪತ್ಯವನ್ನು ಎಂದಿಗಾದರೂ ಬಿಟ್ಟು ಕೊಡುವನೆ ? ನನ್ನನ್ನು ಅವನು ಉದ್ಧಾರ ಮಾಡುತ್ತಾನೆಯೆ ? ಒಂದು ಸಾಮಾನ್ಯ ಕಾರಣವು ಸಿಕ್ಕಿದರೂ ಸಾಕು. ಆ ನೀಚನು ನನ್ನನ್ನು ಬಂಧಿಸಿ ಕಾರಾಗೃಹದಲ್ಲಿ ಇಡಿಸುತ್ತಾನೆ. ಸೆರೆಸಿಕ್ಕಿ ಅಲ್ಲಿ ಸಾಯುವುದಕ್ಕಿಂತ ಇಲ್ಲಿ ಪ್ರಾಯೋಪವೇಶವನ್ನು ಮಾಡಿ ಸಾಯುವುದೇ ಲೇಸು. ಎಲೈ ಕಪಿಗಳಿರಾ, ನೀವೆಲ್ಲರೂ ನನ್ನ ಶರೀರತ್ಯಾಗಕ್ಕೆ ಅಪ್ಪಣೆಕೊಟ್ಟು ನನ್ನಿಂದ ಬೀಳ್ಕೊಂಡು ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ಸುಖವಾಗಿರಿ. ನಾನು ಈ ಸಮುದ್ರತೀರದಲ್ಲಿ ಪ್ರಾಯೋಪವೇಶಮಾಡಿ ಶರೀರವನ್ನು ಬಿಡುತ್ತೇನೆ. ದರ್ಭೆಗಳನ್ನು ದಕ್ಷಿಣಾಗ್ರವಾಗಿ ಹಾಸಿಕೊಂಡು ಆ ಹಾಸಿಗೆಯ ಮೇಲೆ ಕುಳಿತು ಪ್ರಾಣಗಳು ಶರೀರವನ್ನು ಬಿಟ್ಟು ತೊಲಗುವ ಪರ್ಯಂತ ಉದಕಾಹಾರಗಳನ್ನು ಬಿಟ್ಟಿರುವೆನು. ಎಲೈ ಕಪಿನಾಯಕರುಗಳಿರಾ, ನೀವು ಕಿಷ್ಕಿಂಧಾಪಟ್ಟಣಕ್ಕೆ ಹೋಗಿ ಸುಗ್ರೀವನಿಗೆ 'ಅಂಗದಕುಮಾರನು ನಮಸ್ಕಾರ ಹೇಳಿಕಳುಹಿಸಿದನು ಚೆನ್ನಾಗಿದ್ದಾನೆ' ಎಂದು ಹೇಳಿ ಬಲವಂತರಾದ ರಾಮಲಕ್ಷ್ಮಣರಿಗೂ ನಾನು ನಮಸ್ಕಾರ ಹೇಳಿ ಕಳುಹಿಸಿದೆನೆಂದು ಹೇಳಿ ನನ್ನ ತಾಯಿಯಾದ ತಾರಾದೇವಿಯು ದುಃಖಪಡದ ಹಾಗೆ ಸಂತವಿಟ್ಟು ನನಗೆ ಉಪಕಾರವನ್ನು ಮಾಡಿ ! ತಾರಾದೇವಿಯು ನನ್ನ ಮೇಲೆ ಮಹಾ ಪ್ರೀತಿಯುಳ್ಳವಳು. ನಾನು ಇಲ್ಲಿ ಶರೀರವನ್ನು ಬಿಟ್ಟೆನೆಂಬ ಸುದ್ದಿಯನ್ನು ಕೇಳಿದರೆ ಜೀವವನ್ನು ಹಿಡಿದಿರಲಾರಳು" ಎಂದು ನುಡಿದು ತನಗಿಂತಲೂ ಹಿರಿಯರಾದ ಕಪಿನಾಯಕರಿಗೆ ಅಭಿವಂದಿಸಿ ದರ್ಭೆಯನ್ನು ಹಾಸಿ ಮರಣವನ್ನು ನಿಶ್ಚಯಿಸಿ ಕುಳಿತನು.

ಆ ಕುಮಾರನನ್ನು ಕಂಡು ಮಿಕ್ಕ ಕಪಿನಾಯಕರು ರೋದನಮಾಡುತ್ತ ಉಷ್ಣವಾದ ಕಣ್ಣೀರನ್ನು ಬಿಡುತ್ತ ಮಹಾದುಃಖಾಕ್ರಾಂತರಾಗಿ ಸುಗ್ರೀವನನ್ನು ನಿಂದಿಸುತ್ತ ವಾಲಿಯನ್ನು ಕೊಂಡಾಡಲಾರಂಭಿಸಿದರು. ಅನಂತರ ಆ ಕಪಿಗಳೆಲ್ಲರೂ ನೀರಿನಲ್ಲಿ ಕೈಕಾಲು ತೊಳೆದುಕೊಂಡು ಸಮುದ್ರದ ಉತ್ತರತೀರದಲ್ಲಿ ದಕ್ಷಿಣಾಗ್ರವಾಗಿ ದರ್ಭೆಗಳನ್ನು ಹಾಸಿ, ತಾವೂ ಉಪವಾಸದಿಂದ ಪ್ರಾಣವನ್ನು ಬಿಡಬೇಕೆಂದು ನಿಶ್ಚಯಿಸಿ ಅಂಗದನ ಸುತ್ತಲೂ ಕುಳಿತರು. ಅವರೆಲ್ಲರೂ ಹಿಂದಿನ ಕಥೆಗಳನ್ನು ಹೇಳಿಕೊಳ್ಳುತ್ತಿದ್ದರು. ಶ್ರೀರಾಮನು ವನವಾಸಕ್ಕೆ ಬಂದ ಕಾರಣ, ದಶರಥರಾಜನ ಮರಣ, ಜನಸ್ಥಾನದಲ್ಲಿ ಶ್ರೀರಾಮನು ಹದಿನಾಲ್ಕು ಸಾವಿರ ಮಂದಿ ರಾಕ್ಷಸರನ್ನು ಸಂಹರಿಸಿದ ವೃತ್ತಾಂತ, ಸೀತಾಪಹರಣ ವೃತ್ತಾಂತ, ಜಟಾಯುವಿನ ಮರಣದ ಸುದ್ದಿ, ವಾಲಿವಧೆ-ಮೊದಲಾದವು ಗಳನ್ನು ಕುರಿತು ಮಾತನಾಡುತ್ತಿದ್ದರು. ಶ್ರೀರಾಮನ ಉಗ್ರವಾದ ಕೋಪಪರಾಕ್ರಮಗಳನ್ನು ಸ್ಮರಿಸಿಕೊಂಡ ಕೂಡಲೇ ಆ ಕಪಿಗಳಿಗೆ ಬಹಳ ಭಯವಾಯಿತು. ಹೀಗೆ ಆ ಕಪಿಗಳ ಮಾತು, ಕೂಗು, ಹಾಹಾಕಾರಗಳಿಂದ ಪರ್ವತದ ತಪ್ಪಲೆಲ್ಲವೂ ಪ್ರತಿಧ್ವನಿಗಳಿಂದ ತುಂಬಿಹೋಯಿತು. ಗುಡುಗುವ ಮೋಡಗಳಿಂದ ತುಂಬಿದ ಆಕಾಶದಂತೆ ಕೋಲಾಹಲಧ್ವನಿಯು ಎಲ್ಲೆಲ್ಲಿಯೂ ಮೊಳಗಿತು.



## ೫೭ನಯ ಅಧ್ಯಾಯ

## ಸಂಪಾತಿಯು ಜಟಾಯುವಿನ ವೃತ್ತಾಂತವನ್ನು ಕೇಳಿದ್ದು

ಈ ರೀತಿ ಅಂಗದನೇ ಮೊದಲಾದ ಕಪಿನಾಯಕರು ಸಮುದ್ರತೀರದಲ್ಲಿದ್ದ ವಿಂಧ್ಯಪರ್ವತದ ತಪ್ಪಲಲ್ಲಿ ಪ್ರಾಯೋಪವೇಶದಿಂದ ಶರೀರತ್ಯಾಗವನ್ನು ಮಾಡಬೇಕೆಂದು ಕುಳಿತಿದ್ದ ಸಮಯದಲ್ಲಿ, ಜಟಾಯುವಿನ ಅಣ್ಣನಾಗಿ ಮಹಾಪರಾಕ್ರಮಿಯಾಗಿ ಸ್ಥಿರಜೀವಿಯಾದ ಸಂಪಾತಿ ಎಂಬ ಗೃಧ್ರರಾಜನು ಆ ಪರ್ವತದ ಕೋಡುಗಲ್ಲಿನಿಂದಿಳಿದು ಆ ಕಪಿನಾಯಕರು ಪ್ರಾಯೋಪವೇಶಕ್ಕೆ ಕುಳಿತಿದ್ದ ಸ್ಥಳಕ್ಕೆ ಬಂದನು. ಆತನು ಕಪಿಗಳನ್ನು ನೋಡಿ ಹರ್ಷದಿಂದ ಗಟ್ಟಿಯಾಗಿ ಹೇಳಿಕೊಂಡನು : " ಬ್ರಹ್ಮದೇವನು ತಾನು ಸೃಷ್ಟಿಸಿದ ಪ್ರಾಣಿಗಳಿಗೆ ಕಲ್ಪಿಸಿದ ಆಹಾರವನ್ನು ತಾನೇ ಕೊಡಿಸಿ ಕೊಡುವನು. ಆದ್ದರಿಂದ ಈ ಕಪಿಗಳು ನನ್ನ ಭಕ್ಷಣಕ್ಕೆ ಒದಗಿ ಬಂದರು. ನನಗೆ ಬಹುಕಾಲದಿಂದ ಆಹಾರವಿಲ್ಲದಿತ್ತು. ಈಗ ಈ ಕಪಿಗಳ ಸಾಲಿನಲ್ಲಿ ಒಬ್ಬೊಬ್ಬರನ್ನಾಗಿ ತಿನ್ನುತ್ತ ಹೋಗುತ್ತೇನೆ."

ಪಕ್ಷಿರಾಜನಾದ ಸಂಪಾತಿಯು ಆ ಮಾತನ್ನು ಕೇಳಿ ಅಂಗದಕುಮಾರನು ಮನಸ್ಸಿನಲ್ಲಿ ಭಯಪಟ್ಟು, ಹನುಮಂತನನ್ನು ಕುರಿತು ಹೀಗೆಂದನು : " ಹನುಮಂತ, ಸಾಕ್ಷಾತ್ ಯಮನೇ ಈ ಹದ್ದಿನ ರೂಪದಿಂದ ನಮ್ಮೆಲ್ಲರನ್ನೂ ನಾಶಮಾಡಬೇಕೆಂದು ಈ ಸ್ಥಳಕ್ಕೆ ಬಂದಿದ್ದಾನೆ! ಅಕಟಕಟಾ ! ಮರಣವಂತೂ ತಪ್ಪದು. ನಾವು ಸುಗ್ರೀವನ ಕಾರ್ಯವನ್ನೂ ಸಲ್ಲಿಸಲಿಲ್ಲ ; ಶ್ರೀರಾಮನ ಕಾರ್ಯವನ್ನೂ ಮಾಡಲಿಲ್ಲ. ಇಷ್ಟುಮಂದಿ ಕಪಿನಾಯಕರಿಗೂ ಒಂದೇ ಬಾರಿ ಮೃತ್ಯುವು ಬಂದಿತು. ಸೀತೆಗೆ ಉಪಕಾರವನ್ನು ಮಾಡುವುದಕ್ಕಾಗಿ ಗೃಧ್ರರಾಜನಾದ ಜಟಾಯುವು ದೇಹವನ್ನು ಬಿಟ್ಟು ಕೃತಾರ್ಥನಾದನು. ನಮ್ಮಂತೆ ಅನೇಕ ತಿರ್ಯಗ್ಜಂತುಗಳು ಶ್ರೀರಾಮನಿಗೋಸ್ಕರ ಪ್ರಾಣವನ್ನು ಬಿಟ್ಟು ಧನ್ಯತೆಯನ್ನು ಪಡೆಯುತ್ತವೆ. ಜಟಾಯುವು ರಾವಣನೊಡನೆ ಯುದ್ಧಮಾಡಿ ಶ್ರೀರಾಮನ ಪ್ರೀತ್ಯರ್ಥವಾಗಿ ತನ್ನ ದೇಹವನ್ನರ್ಪಿಸಿದನು. ನಾವೂ ಶ್ರೀರಾಮನ ಕಾರ್ಯನಿಮಿತ್ತವಾಗಿ ಹೊರಬಂದು ನಮ್ಮ ಕೈಲಾದಷ್ಟೂ ವನಾಂತರಗಳಲ್ಲಿ ಸಂಚರಿಸಿ ಸೀತಾದೇವಿಯನ್ನು ಕಾಣದೆ ಹೋದೆವು. ಜಟಾಯುವು ರಣರಂಗದಲ್ಲಿ ರಾವಣನಿಂದ ಗಾಯಪಡೆದು ಶರೀರವನ್ನು ಬಿಟ್ಟು ಸುಗ್ರೀವನ ಭಯವಿಲ್ಲದೆ ಸದ್ಗತಿಯನ್ನೈದಿದನು. ನಾವು ಬಂದ ಕಾರ್ಯವು ಕೈಗೂಡಲಿಲ್ಲ, ಸುಗ್ರೀವನ ಭಯವು ತಪ್ಪಲಿಲ್ಲ. ಶ್ರೀರಾಮನ ವನವಾಸದಿಂದ ದಶರಥರಾಯನು ಸ್ವರ್ಗಸ್ಥನಾದನು. ರಾವಣನು ಸೀತಾದೇವಿಯನ್ನಪಹರಿಸಿಕೊಂಡು ಹೋದನು. ಸೀತಾದೇವಿಯ ನಿಮಿತ್ತವಾಗಿ ಜಟಾಯುವು ಸ್ವರ್ಗಸ್ಥನಾದನು. ಹೀಗಿರುವಲ್ಲಿ ಶ್ರೀರಾಮನ ಕಾರ್ಯನಿಮಿತ್ತವಾಗಿ ಬಂದ ನಮ್ಮಂಥ ಕಪಿನಾಯಕರಿಗೆ ಜೀವದ ಮೇಲಣ ಆಸೆಯೇನು ? ದಶರಥರಾಯನು ಕೈಕೇಯೀದೇವಿಗೆ ವರವನ್ನು ಕೊಟ್ಟಿದ್ದರಿಂದ ಶ್ರೀರಾಮ ಲಕ್ಷ್ಮಣ ಸೀತಾದೇವಿಯರಿಗೆ ವನವಾಸವಾಯಿತು ಶ್ರೀರಾಮನ ಕೋಪದಿಂದ ಅನೇಕ ರಾಕ್ಷಸರೂ ನಾಶವಾದರು " ಎಂದು ಹಂಬಲಿಸುತ್ತ ನುಡಿದನು.

ಆ ಮಾತನ್ನು ಕೇಳಿ ಸಂಪಾತಿಯು ಮನಕರಗಿ ದಯೆಹುಟ್ಟಿ ಅಂಗದಾದಿಗಳನ್ನು ಕುರಿತು ಹೀಗೆ ಕೇಳಿದನು : " ಎಲೈ ಕಪಿನಾಯಕರುಗಳಿರಾ, ನೀವಾರು ? ನನ್ನ ಪ್ರಾಣಗಳಿಗೆ ಸಮಾನನಾಗಿ ನನ್ನ ಪ್ರಿಯಸಹೋದರನಾದ ಜಟಾಯುವಿನ ಮರಣವಾರ್ತೆಯನ್ನು ಹೇಳಿದವರಾರು ? ಆ ಮಾತನ್ನು ಕೇಳಿ ನನ್ನ ಎದೆಯು ನಡುಗುತ್ತಿದೆ. ಕಪಿನಾಯಕರೆ, ನನ್ನ ತಮ್ಮನಾದ ಜಟಾಯುವಿನ

ಪ್ರಸಂಗವನ್ನು ಬಹಳ ಕಾಲದ ಮೇಲೆ ಕೇಳಿ ನನ್ನ ಮನಸ್ಸಿಗೆ ಸಂತೋಷವಾಗುತ್ತಿದೆ. ನೀವು ಅಂಜಬೇಡಿ. ಜನಸ್ಥಾನದಲ್ಲಿದ್ದ ಜಟಾಯುವಿಗೆ ಕೋಸಲದೇಶದಲ್ಲಿದ್ದ ದಶರಥರಾಯನು ಹೇಗೆ ಸಖನಾದನು ? ದಶರಥರಾಯನ ಜ್ಯೇಷ್ಠಪುತ್ರನಾಗಿ ಗುರುಭಕ್ತನಾದ ಶ್ರೀರಾಮನು ಎಲ್ಲಿದ್ದಾನೆ ? ಅತ್ಯಂತ ಉನ್ನತವಾದ ಈ ವಿಂಧ್ಯಪರ್ವತದ ಕೋಡುಗಲ್ಲಿನ ಮೇಲಿರುವ ನನ್ನ ಗರಿಗಳು ಸೂರ್ಯನ ಪ್ರಭೆಯಿಂದ ಸೀದು ಹೋದದ್ದರಿಂದ ಈ ಪರ್ವತದಿಂದಿಳಿದು ಹೋಗುವುದಕ್ಕೆ ನನಗೆ ಸಾಮರ್ಥ್ಯವಿಲ್ಲ " ಎಂದು ನುಡಿದನು.



## ೫೭ ನೆಯ ಅಧ್ಯಾಯ

## ಅಂಗದನು ಸಂಪಾತಿಗೆ ಹೇಳಿದ ವೃತ್ತಾಂತ

ಬಳಿಕ ಸಂಪಾತಿಯು ತನ್ನ ತಮ್ಮನಾದ ಜಟಾಯುವಿನ ಮರಣವಾರ್ತೆಯನ್ನು ಕೇಳಿ ದುಃಖಾತಿಶಯದಿಂದ ಸ್ವರಗುಂದಿ ಮೆಲ್ಲಗೆ ಮಾತಾಡತೊಡಗಿದನು. ಆಗ ಸಂಪಾತಿಯ ಮಾತನ್ನು ವಾನರರು ನಂಬದೆ ತಮ್ಮೊಳಗೆ ತಾವೇ ಆಲೋಚನೆಯನ್ನು ಮಾಡುತ್ತ "ಭಯಂಕರನಾದ ಈ ಗೃಧ್ರರಾಜನು ನಮ್ಮೆಲ್ಲರನ್ನೂ ಭಕ್ಷಿಸುವನು. ಪ್ರಾಯೋಪವೇಶಕ್ಕೆ ಕುಳಿತ ನಮ್ಮನ್ನು ಭಕ್ಷಿಸಿದರೆ ಒಳ್ಳೆಯದೇ ಆಗುವುದು. ನಮ್ಮ ಅಪೇಕ್ಷೆ ಬೇಗನೆ ಸಿದ್ಧಿಸುವುದು " ಎಂದು ನಿಶ್ಚಯಿಸಿದರು.

ಆ ಸಮಯದಲ್ಲಿ ಅಂಗದನು ಸಂಪಾತಿಯನ್ನು ಕುರಿತು ಹೀಗೆ ಹೇಳಿದನು : " ಎಲೈ ಪಕ್ಷಿರಾಜನೆ, ನನ್ನ ಮುತ್ತಯ್ಯನು ಋಕ್ಷರಜಸ್ಸೆಂಬ ಕಪಿನಾಯಕನು. ಆತನಿಗೆ ವಾಲಿ ಸುಗ್ರೀವರೆಂಬ ಕುಮಾರರು ಜನಿಸಿದರು. ಅವರಿಬ್ಬರಲ್ಲಿ ವಾಲಿಯು ಜ್ಯೇಷ್ಠಪುತ್ರನು ; ಸಮಸ್ತ ಕಪಿರಾಜ್ಯವನ್ನೂ ಕಟ್ಟಿಯಾಳಿದ ಮಹಾಪರಾಕ್ರಮಿ. ನಾನು ಆತನ ಮಗನು. ಇಕ್ಷ್ವಾಕುವಂಶದಲ್ಲಿ ಜನಿಸಿ ಲೋಕನಾಯಕನಾದ ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣನನ್ನೂ ತನ್ನ ಪಟ್ಟದ ರಾಣಿಯಾದ ಸೀತಾದೇವಿಯನ್ನೂ ಕೂಡಿಕೊಂಡು ಮುನಿವೇಷವನ್ನು ಧರಿಸಿಕೊಂಡು ದಂಡಕಾರಣ್ಯದಲ್ಲಿರುವ ಸಮಯದಲ್ಲಿ ರಾವಣನು ಮೋಸದಿಂದ ಸೀತಾದೇವಿಯನ್ನು ಅಪಹರಿಸಿಕೊಂಡು ಹೋದನು. ಆಗ ಆ ದೇವಿಯು 'ಎಲೈ ವನದೇವತೆಗಳಿರಾ - ವೃಕ್ಷಗಳಿರಾ—ಪಕ್ಷಿಗಳಿರಾ, ದಶರಥರಾಯನ ಸೊಸೆಯಾಗಿ ಶ್ರೀರಾಮನ ಪಟ್ಟದ ರಾಣಿಯಾದ ನನ್ನನ್ನು ರಾವಣನು ಎತ್ತಿಕೊಂಡು ಹೋದನೆಂದು ಶ್ರೀರಾಮನೊಡನೆ ಹೇಳಿ ' ಎಂದು ಮೊರೆಯಿಡುತ್ತ ಹೋಗುತ್ತಿದ್ದಳಂತೆ. ಆ ಮಾತನ್ನು ಕೇಳಿ ಜಟಾಯುವು ರಾವಣನು ಹಿಡಿದುಕೊಂಡು ಹೋಗುತ್ತಿದ್ದ ಸೀತಾದೇವಿಯನ್ನು ಕಂಡು ಆತನೊಡನೆ ಯುದ್ಧವನ್ನು ಮಾಡಿ ಆತನ ರಥವನ್ನು ಮುರಿದು ಆ ದೇವಿಯನ್ನು ಕೆಳಗಿಳಿಸಿ ವೃದ್ಧನಾದಕಾರಣ ಸ್ವಲ್ಪ ಬಳಲಿ ಸುಧಾರಿಸಿಕೊಳ್ಳುತ್ತಿದ್ದನು. ಆ ಸಮಯದಲ್ಲಿ ರಾವಣನು ಜಟಾಯುವಿನ ಅಳ್ಳೆಯಮೇಲೆ ತಿವಿಯಲು ಆತನ ಖಡ್ಗದಿಂದ ಗಾಯಪಡೆದು ಬಿದ್ದು ಪ್ರಾಣವನ್ನು ಹಿಡಿದುಕೊಂಡಿದ್ದು ಶ್ರೀರಾಮನು ಅಲ್ಲಿಗೆ ಬಂದಾಗ ಸೀತಾದೇವಿಯ ವೃತ್ತಾಂತವನ್ನೂ ತಾನು ರಾವಣನೊಡನೆ ಯುದ್ಧಮಾಡಿದ ವೃತ್ತಾಂತವನ್ನೂ ಹೇಳಿ ತನ್ನ ಶರೀರವನ್ನು ಬಿಟ್ಟು ಉತ್ತಮವಾದ ಲೋಕವನ್ನು ಪಡೆದನು. ಆಮೇಲೆ ಶ್ರೀರಾಮನು ತನ್ನ ತಂದೆಯಾದ ದಶರಥರಾಯನ ಸಖನೆಂದೆಣಿಸಿ ಜಟಾಯುವಿಗೆ ಅಗ್ನಿಸಂಸ್ಕಾರವನ್ನು

ಮಾಡಿ ಅಲ್ಲಿಂದ ಹೊರಟು ಸೀತಾದೇವಿಯನ್ನರಸುತ್ತ, ಮಹಾತ್ಮನಾಗಿ ನನಗೆ ಚಿಕ್ಕಪ್ಪನಾದ ಸುಗ್ರೀವನೊಡನೆ ಸ್ನೇಹವನ್ನು ಮಾಡಿಕೊಂಡು ತನ್ನ ಸಖನಾದ ಸುಗ್ರೀವನಿಗೆ ಪ್ರಿಯವನ್ನು ಮಾಡಬೇಕೆಂಬ ಬುದ್ಧಿಯಿಂದ ನನ್ನ ತಂದೆಯಾದ ವಾಲಿಯನ್ನು ಕೊಂದು ಸುಗ್ರೀವನಿಗೆ ಕಪಿರಾಜ್ಯಾಧಿಪತ್ಯವನ್ನು ಕಟ್ಟಿದನು. ಸುಗ್ರೀವನು ತನಗೆ ಉಪಕಾರವನ್ನು ಮಾಡಿದ ಶ್ರೀರಾಮನಿಗೆ ಪ್ರತ್ಯುಪಕಾರವನ್ನು ಮಾಡಬೇಕೆಂಬ ಬುದ್ಧಿಯಿಂದ ಶ್ರೀರಾಮನ ಪಟ್ಟದರಾಣಿಯಾದ ಸೀತಾದೇವಿಯನ್ನರಸಿ ತರಹೇಳಿ ಕಳುಹಿಸಲು ನಾವಿಲ್ಲಿಗೆ ಬಂದೆವು. ನಾವು ಎಲ್ಲಾ ಪ್ರದೇಶಗಳಲ್ಲಿಯೂ ಸೀತಾದೇವಿಯನ್ನರಸಿ ನೋಡಿ ರಾತ್ರಿಯಲ್ಲಿ ಸೂರ್ಯಪ್ರಭೆಯನ್ನು ಕಾಣಲಾರದಂತೆ ಆ ದೇವಿಯನ್ನು ಕಾಣದೆ ಹೋದೆವು. ಈ ಪ್ರಕಾರ ದಂಡಕಾರಣ್ಯವೇ ಮೊದಲಾದ ವನಗಳಲ್ಲಿಯೂ ಮಿಕ್ಕ ಪ್ರದೇಶಗಳಲ್ಲಿಯೂ ಆ ದೇವಿಯನ್ನು ಕಾಣದೆ ಮಯನೆಂಬ ದೇವಶಿಲ್ಪಿಯಿಂದ ನಿರ್ಮಿಸಲ್ಪಟ್ಟ ಒಂದು ಮಾಯಾಬಿಲವನ್ನು ಹೊಕ್ಕು ಅಲ್ಲಿಯೂ ಕಾಣದೆ ಕಂಗೆಟ್ಟೆವು. ಅಷ್ಟರೊಳಗೆ ಸುಗ್ರೀವನು ನೇಮಿಸಿದ ಒಂದು ತಿಂಗಳ ಮಿತಿಯು ಕಳೆಯಿತು. ಸುಗ್ರೀವನು ನಾವು ಹೊರಡುವಾಗ ಒಂದು ತಿಂಗಳೊಳಗಾಗಿ ಸೀತಾದೇವಿಯನ್ನರಸಿ ಕೊಂಡು ಬರದವರಿಗೆ ಶರೀರಾಂತವಾದ ಆಜ್ಞೆಯನ್ನು ಮಾಡಿಸುವುದಾಗಿ ಹೇಳಿಕಳುಹಿಸಿರುವನು. ನಾವು ಬಂದ ಕಾರ್ಯವನ್ನು ಸಾಧ್ಯಮಾಡದೆ ಸುಗ್ರೀವನು ಕಟ್ಟಳೆಮಾಡಿದ ಮಿತಿಯು ತುಂಬಿದಮೇಲೆ ಅಪರಾಧಿಗಳಾಗಿ ಕಿಷ್ಕಿಂಧಾಪಟ್ಟಣಕ್ಕೆ ಹೋದರೆ ಆತನೂ ರಾಮಲಕ್ಷ್ಮಣರೂ ಕೋಪಿಸಿಕೊಂಡು ನಮಗೆಲ್ಲರಿಗೂ ಮರಣಾಂತವಾದ ಆಜ್ಞೆಯನ್ನು ಮಾಡುವರು. ಆದಕಾರಣ ನಾವು ಅವರ ಆಜ್ಞೆಗೊಳಗಾಗಿ ಶರೀರವನ್ನು ಬಿಡುವುದಕ್ಕಿಂತಲೂ ಈ ಪುಣ್ಯಕ್ಷೇತ್ರವಾದ ಸಮುದ್ರತೀರದಲ್ಲಿ ಶರೀರವನ್ನು ಬಿಡುವುದೇ ಯೋಗ್ಯವೆಂದು ನಿಶ್ಚಯಿಸಿಕೊಂಡು ಇಲ್ಲಿ ಪ್ರಾಯೋಪವೇಶಕ್ಕೆ ಕುಳಿತೆವು" ಎಂದು ಸಂಪಾತಿಗೆ ಹೇಳಿದನು.



## ೫೮ ನೆಯ ಅಧ್ಯಾಯ

## ಸಂಪಾತಿಯು ಸೀತಾದೇವಿಯಿರುವ ಸ್ಥಳವನ್ನು ಅಂಗದನಿಗೆ ಹೇಳಿದ್ದು

ಆ ಬಳಿಕ ಗಂಭೀರಧ್ವನಿಯುಳ್ಳ ಸಂಪಾತಿಯು ಆ ಕಪಿನಾಯಕರ ದೈನ್ಯವನ್ನು ಕಂಡು ಮನಕರಗಿ ಕಣ್ಣೀರು ತುಂಬಲು ಅವರನ್ನು ಕುರಿತು ಪ್ರೀತಿವಚನಗಳನ್ನು ನುಡಿಯುತ್ತ ಹೀಗೆಂದನು: "ಎಲೈ ಕಪಿನಾಯಕರುಗಳಿರಾ, ನನ್ನ ತಮ್ಮನಾದ ಜಟಾಯುವು ರಾವಣನೊಡನೆ ಯುದ್ಧವನ್ನು ಮಾಡಿ ಶರೀರವನ್ನು ಬಿಟ್ಟನೆಂಬ ಸುದ್ದಿಯನ್ನು ಕೇಳಿದೆನು. ಈಗ ಆತನನ್ನು ಕೊಂದ ವೈರಿಯಾದ ರಾವಣನನ್ನು ಕೊಲ್ಲುವುದಕ್ಕೆ ನನ್ನ ಗರಿ ಸೀದಿರುವುದರಿಂದಲೂ ನನ್ನ ವೃದ್ಧಾಪ್ಯದಿಂದಲೂ ಶಕ್ತಿಯಿಲ್ಲದೆ ಸುಮ್ಮನೆ ಇರಬೇಕಾಗಿದೆ. ಜಟಾಯುವೂ ನಾನೂ ಅಣ್ಣತಮ್ಮಂದಿರು. ನಾವು ಒಬ್ಬರನ್ನೊಬ್ಬರು ಅತಿಶಯಿಸ ಬೇಕೆಂಬ ಪಂಥದಿಂದ ಮೇಲಕ್ಕೆ ಹೋಗುತ್ತ ನಮ್ಮ ರೆಕ್ಕೆಗಳಿಂದ ಆಕಾಶಮಂಡಲವನ್ನು ವ್ಯಾಪಿಸಿ ಕೊಂಡು ಸೂರ್ಯಮಂಡಲಕ್ಕೆ ಹಾರಿಹೋದೆವು. ಮಧ್ಯಾಹ್ನಸಮಯವಾಗಲು ಸೂರ್ಯಕಿರಣ ಗಳಿಂದ ನನ್ನ ತಮ್ಮನಾದ ಜಟಾಯುವು ಸೀದುಹೋಗುವನೆಂಬ ಭಯದಿಂದ ನಮ್ಮ ಸ್ನೇಹಭಾವ ವನ್ನು ನೆನೆದು ನಾನು ಜಟಾಯುವಿಗೆ ಮೇಲುಭಾಗದಲ್ಲಿ ಸೂರ್ಯಕಿರಣಗಳು ಆತನ ಮೇಲೆ ಬೀಳದಹಾಗೆ ಮರೆಯಾಗಿ ನಿಂತೆನು. ಆದರಿಂದಾಗಿ ದಹಿಸಲ್ಪಟ್ಟು ಗರಿಸೀದು ಈ ವಿಂಧ್ಯಪರ್ವತದಲ್ಲಿ

ಬಿದ್ದೆನು. ಅದುಮೊದಲಾಗಿ ನಾನು ಈ ವಿಂಧ್ಯಪರ್ವತದಲ್ಲೇ ಇದ್ದು ಯಾವ ದಿಕ್ಕಿಗೂ ಹೋಗಲಾರದೆ ಜಟಾಯುವಿನ ವೃತ್ತಾಂತವನ್ನರಿಯದಿರುವೆನು " ಎಂದು ನುಡಿದನು.

ಆ ಮಾತನ್ನು ಕೇಳಿ ಅಂಗದನು ಸಂಪಾತಿಯನ್ನು ಕುರಿತು " ಸಂಪಾತಿ, ನೀನು ಬಹುಕಾಲದಿಂದ ಅರಿಯದಿದ್ದ ಜಟಾಯುವಿನ ವೃತ್ತಾಂತವನ್ನು ನಾನು ಹೇಳಿದೆನಾದ್ದರಿಂದ ನೀನು ರಾವಣನಿರುವ ಸ್ಥಳವನ್ನು ತಿಳಿದಿದ್ದರೆ ಹೇಳು ; ರಾಕ್ಷಸಾಧಮನಾದ ರಾವಣನು ಅವಿವೇಕದಿಂದ ಸೀತಾದೇವಿಯನ್ನು ಅಪಹರಿಸಿಕೊಂಡು ಹೋದನು. ಆತನಿರುವ ಸ್ಥಾನವು ಇಲ್ಲಿಗೆ ಸಮೀಪವೊ ದೂರವೊ ಹೇಳು " ಎಂದು ಕೇಳಿದನು.

ಮಹಾತ್ಮನಾದ ಸಂಪಾತಿಯು ಆ ಕಪಿನಾಯಕರಿಗೆ ಸಂತೋಷಪುಟ್ಟುವಹಾಗೆ ತಾನರಿತವರೆಗೂ ರಾವಣನಿರುವ ಸ್ಥಳವನ್ನು ಹೇಳಬೇಕೆಂದೆಣಿಸಿ ಅಂಗದಾದಿಗಳನ್ನು ಕುರಿತು ಇಂತೆಂದನು : " ಎಲೈ ಕಪಿನಾಯಕರುಗಳಿರಾ, ನಾನು ವಚನಮಾತ್ರದಿಂದಲಾದರೂ ಶ್ರೀರಾಮನಿಗೆ ಪ್ರಿಯೋಪಕಾರವನ್ನು ಮಾಡುತ್ತೇನೆ. ನಾನು ಈ ಉದಕದಲ್ಲಿರುವ ವರುಣಲೋಕವನ್ನು ಬಲ್ಲೆನು. ವಾಮನಾವತಾರ ಮಾಡಿದ ಪರಮಪುರುಷನು ಬಲಿಚಕ್ರವರ್ತಿಯಿಂದ ಭೂದಾನವನ್ನು ಪಡೆದು ಭೂಮಿಯನ್ನಳೆಯುವುದಕ್ಕಾಗಿ ತ್ರಿವಿಕ್ರಮನಾಗಿ ಅಡಿಯಿಟ್ಟ ಮೂರುಪಾದಗಳನ್ನೂ ನೋಡಿದೆನು. ದೇವಾಸುರರು ಸಮುದ್ರ ಮಂಥನವನ್ನು ಮಾಡಿ ಅಮೃತವನ್ನು ತೆಗೆದದ್ದನ್ನೂ ಕಂಡಿದ್ದೇನೆ. ಶ್ರೀರಾಮನ ಕಾರ್ಯಕ್ಕೆ ನೆರವಾಗುವುದು ನನ್ನ ಕರ್ತವ್ಯ. ನನಗೆ ವೃದ್ಧಾಪ್ಯದಿಂದ ತನುಕಾಂತಿಗುಂದಿ ಪ್ರಾಣಗಳು ಶಿಥಿಲವಾಗಿವೆ. ರಾವಣನು ಎತ್ತಿಕೊಂಡು ಹೋಗುತ್ತಿದ್ದಾಗ ರೂಪಲಾವಣ್ಯವತಿಯಾಗಿ ಸರ್ವಾಭರಣಭೂಷಿತೆಯಾಗಿ ನವಯೌವನ ಕೋಮಲಾಂಗಿಯಾದ ಒಬ್ಬ ಸ್ತ್ರೀಯು ' ಹಾ ರಾಮಾ— ಹಾ ಲಕ್ಷ್ಮಣಾ ' ಎಂದು ಮೊರೆಯಿಡುತ್ತ ಹೋಗುತ್ತಿದ್ದುದ್ದನ್ನು ನಾನು ಕಂಡೆನು. ಆ ದೇವಿಯು ಮೈಮುರಿದು ಕಾಲುಗಳನ್ನು ನೀಡಿ ತನ್ನ ಆಭರಣಗಳನ್ನು ಈಡಾಡುತ್ತಿರಲು ಆಕೆಯು ಉಟ್ಟಿದ್ದ ಪೀತಾಂಬರದ ಸೆರಗು ಪರ್ವತಾಗ್ರದಲ್ಲಿರುವ ಸೂರ್ಯಪ್ರಭೆಯಂತೆ ಕಾಣುತಿತ್ತು. ಆ ದೇವಿಯು ಕಾರ್ಮುಗಿಲುಗಳೊಡ್ಡುಗಳಲ್ಲಿ ಅಂತರಿಕ್ಷಮಾರ್ಗದಲ್ಲೊಪ್ಪುತ್ತಿರುವ ಮಿಂಚಿನಂತೆ ಕಪ್ಪಾದ ರಾವಣನ ಸಮೀಪದಲ್ಲಿ ಕಾಣುತ್ತಿದ್ದಳು ! ' ರಾಮಾ ರಾಮಾ ' ಎಂದು ಮೊರೆಯಿಡುತ್ತಿದ್ದುದರಿಂದ ಆಕೆಯೇ ಸೀತಾದೇವಿಯಾಗಿರಬೇಕು ! ಎಲೈ ಕಪಿನಾಯಕರುಗಳಿರಾ, ರಾವಣನಿರುವ ಸ್ಥಾನವನ್ನು ಹೇಳುತ್ತೇನೆ ಕೇಳಿ : ರಾವಣನು ವಿಶ್ರವಸುವಿನ ಮಗನು. ಕುಬೇರನ ತಮ್ಮನು. ಲಂಕಾಪಟ್ಟಣದಲ್ಲಿರುವನು. ಲಂಕಾದ್ವೀಪವು ಸಮುದ್ರಮಧ್ಯದಲ್ಲಿ ಇಲ್ಲಿಗೆ ನೂರುಗಾವುದ ದೂರದಲ್ಲಿರುವುದು. ಆ ದ್ವೀಪದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನು ಸುವರ್ಣಮಯವಾದ ಚಾವಡಿಗಳಿಂದಲೂ ಸುವರ್ಣಮಯವಾದ ಉಪ್ಪರಿಗೆಗಳಿಂದಲೂ ಅತಿರಮಣೀಯವಾದ ಲಂಕಾಪಟ್ಟಣವನ್ನು ನಿರ್ಮಿಸಿದನು. ಆ ಪಟ್ಟಣದಲ್ಲಿ ರಾವಣನ ವಶದಲ್ಲಿ ಸೀತಾದೇವಿಯು ಹೊಂಬಣ್ಣದ ಸೀರೆಯನ್ನುಟ್ಟುಕೊಂಡು ಮುಖಕಾಂತಿಗುಂದಿ ದೈನ್ಯಭಾವದಿಂದ ರಾಕ್ಷಸಸ್ತ್ರೀಯರ ಕಾವಲಿನಲ್ಲಿ ಸೆರೆಯಾಗಿದ್ದಾಳೆ. ಸಮುದ್ರದಿಂದ ಸುತ್ತುವರಿಯಲ್ಪಟ್ಟ ಲಂಕಾದ್ವೀಪದಲ್ಲಿ ಜನಕರಾಯನ ಮಗಳಾದ ಸೀತಾದೇವಿಯು ಇದ್ದಾಳೆ. ನೀವು ನೂರುಗಾವುದದಾರಿ ಸಮುದ್ರವನ್ನು ದಾಟಿ ಈ ಸಮುದ್ರದ ತೆಂಕಣತೀರಕ್ಕೆ ಹೋಗಿ ಲಂಕಾಪಟ್ಟಣವನ್ನು ಪ್ರವೇಶಿಸಿದರೆ ರಾವಣನನ್ನು ಕಾಣುವಿರಿ. ಸೀತಾದೇವಿಯನ್ನೂ ಕಾಣುವಿರಿ. ನೀವು ತಾಮಸಮಾಡದೆ ವೇಗದಿಂದ ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಹೋದರೆ ಸೀತಾದೇವಿಯನ್ನು ಕಂಡು ತಿರುಗಿಬರುವಿರಿ. ಈ ವಿಷಯದಲ್ಲಿ ಸಂಶಯವಿಲ್ಲ ! ನಾನು ಅಂತರಿಕ್ಷಲೋಕ

ಪರ್ಯಂತ ಹೋಗಿ ನಾನಾ ದಿಕ್ಕುಗಳನ್ನೂ ಕಾಣುವೆನು. ಅಂತರಿಕ್ಷಲೋಕಕ್ಕೆ ಪಕ್ಷಿಗಳೆಲ್ಲವೂ ಹೋಗುವುವಾದರೂ ಅದಕ್ಕೂ ತಾರತಮ್ಯವುಂಟು. ಅಂತರಿಕ್ಷಮಾರ್ಗದಲ್ಲಿರುವ ಸಪ್ತಸ್ಕಂಧಗಳಲ್ಲಿ ಭೂಲೋಕದಿಂದ ಮೊದಲನೆಯ ಸ್ಕಂಧಪರ್ಯಂತ ಧಾನ್ಯೋಪಜೀವಿಗಳಾದ ಪಕ್ಷಿಗಳು ಸಂಚರಿಸುವುವು. ಎರಡನೆಯ ಸ್ಕಂಧಪರ್ಯಂತ ವಾಯಸಗಳಿಗೆ ಸಂಚಾರವುಂಟು. ಮೂರನೆಯ ಸ್ಕಂಧಪರ್ಯಂತ ಕ್ರೌಂಚಪಕ್ಷಿ ಮೊದಲಾದವುಗಳಿಗೆ ಸಂಚಾರವುಂಟು. ಗಿಡಗಗಳಿಗೆ ನಾಲ್ಕನೆಯ ಸ್ಕಂಧಪರ್ಯಂತ ಸಂಚಾರವುಂಟು. ಹದ್ದುಗಳಿಗೆ ಐದನೆಯ ಸ್ಕಂಧದವರೆಗೂ ಸಂಚಾರವುಂಟು. ರೂಪ ಯೌವನ ಪರಾಕ್ರಮವುಳ್ಳ ಹಂಸಪಕ್ಷಿಗಳಿಗೆ ಆರನೆಯ ಸ್ಕಂಧಪರ್ಯಂತ ಸಂಚಾರವುಂಟು. ಗರುತ್ಮಂತನಿಗೆ ಸಪ್ತಸ್ಕಂಧಪರ್ಯಂತವೂ ಸಂಚಾರವುಂಟು. ನಾವು ಗರುತ್ಮಂತನ ವಂಶದಲ್ಲಿ ಹುಟ್ಟಿದವರಾದ ಕಾರಣ ನಮಗೆ ಎಷ್ಟು ದೂರ ಹೋಗಲೂ ಸಾಮರ್ಥ್ಯವಿದೆ. ಅದಕಾರಣ ನಾನು ಎಲ್ಲಾ ದೇಶಗಳನ್ನೂ ಬಲ್ಲೆನು. ಮಾಂಸಾಹಾರಿಯಾದ ರಾವಣನು ಲೋಕದಲ್ಲಿ ನಿಂದಿತವಾದ ದುಷ್ಕರ್ಮವನ್ನು ಮಾಡಿದನು. ನೀವು ನನ್ನ ತಮ್ಮನಾದ ಜಟಾಯುವನ್ನು ರಾವಣನು ಕೊಂದನೆಂದು ಹೇಳಿದ್ದರಿಂದ ರಾವಣನು ನನಗೆ ಶತ್ರುವಾಗಿದ್ದಾನೆ. ನೀವು ಲಂಕಾಪಟ್ಟಣಕ್ಕೆ ಹೋಗಿ ಸೀತಾದೇವಿಯನ್ನು ಕಂಡು ಬಂದರೆ ನಿಮ್ಮಿಂದ ರಾವಣನು ನಾಶವಾಗುವನು. ಆಗ ನಾನು ನನ್ನ ವೈರಿಯಾದ ರಾವಣನ ಹಗೆಯನ್ನು ತೀರಿಸಿಕೊಂಡವನಾಗುವೆನು. ನಾನು ಇಲ್ಲಿಂದಲೇ ಲಂಕಾಪಟ್ಟಣದಲ್ಲಿರುವ ರಾವಣನನ್ನೂ ಸೀತಾದೇವಿಯನ್ನೂ ಕಾಣುತ್ತಿದ್ದೇನೆ. ನನಗೆ ಗರುತ್ಮಂತ ನಂತೆ ದಿವ್ಯವಾದ ದೃಷ್ಟಿಪಾಟವವಿದೆ. ಅದರಿಂದಲೂ ಆಹಾರಬಲದಿಂದಲೂ ನನಗೆ ನೂರು ಯೋಜನ ಪರ್ಯಂತ ಸಂಚಾರವೂ ಅಲ್ಲಿ ನಡೆಯುವ ವೃತ್ತಾಂತಗಳೂ ಕಾಣಿಸುವುವು; ಇದೀಗ ನನ್ನ ವೃತ್ತಾಂತ. ಇನ್ನು ಮುಂದೆ ನೀವು ಸಮುದ್ರವನ್ನು ದಾಟಿಹೋಗುವ ಉಪಾಯವನ್ನು ಕಾಣಿರಿ. ನೀವು ಅವಶ್ಯವಾಗಿ ಸೀತಾದೇವಿಯನ್ನು ಕಂಡು ನಿಮ್ಮ ಇಷ್ಟಾರ್ಥವನ್ನು ಪಡೆಯುವಿರಿ. ಸಂಶಯವಿಲ್ಲ. ನನ್ನನ್ನು ನೀವು ಸಮುದ್ರತೀರಕ್ಕೆ ಕರೆದುಕೊಂಡು ಹೋದರೆ ನಾನು ಸ್ವರ್ಗಸ್ಥನಾದ ಜಟಾಯುವಿಗೆ ತಿಲತರ್ಪಣಗಳನ್ನು ಕೊಡುತ್ತೇನೆ " ಎಂದು ನುಡಿದನು.

ಆ ಮಾತನ್ನು ಕೇಳಿದ ಕಪಿನಾಯಕರು ಸೂರ್ಯಕಿರಣಗಳಿಂದ ಗರಿಗಳು ಸೀದಿದ್ದ ಸಂಪಾತಿ ಯನ್ನು ಸಮುದ್ರತೀರಕ್ಕೆ ಹೊತ್ತುಕೊಂಡು ಹೋಗಿ ಆತನು ತನ್ನ ತಮ್ಮನಾದ ಜಟಾಯುವಿಗೆ ಉದಕಕ್ರಿಯೆಯನ್ನು ಮಾಡಿದಬಳಿಕ ತಿರುಗಿ ಹೊತ್ತುಕೊಂಡು-ಬಂದು ಮೊದಲಿದ್ದ ಸ್ಥಳದಲ್ಲಿ ಬಿಟ್ಟು ಆತನ ಮುಖವಾರ್ತೆಯಿಂದ ಸೀತಾದೇವಿಯ ವೃತ್ತಾಂತವನ್ನು ಕೇಳಿ ಅತ್ಯಂತ ಸಂತುಷ್ಟಚಿತ್ತರಾದರು.



೫೯ ನೆಯ ಅಧ್ಯಾಯ

## ಸಂಪಾತಿಯು ಅಂಗದಾದಿಗಳಿಗೆ ಶ್ರೀರಾಮನ ಕಾರ್ಯವನ್ನು ಮಾಡಬೇಕೆಂದು ಹೇಳಿದ್ದು

ಈ ಪ್ರಕಾರ ಸಂಪಾತಿಯಿಂದ ನುಡಿಯಲ್ಪಟ್ಟ ಅಮೃತೋಪಮವಾದ ವಾಕ್ಯವನ್ನು ಕೇಳಿ ಅಂಗದಕುಮಾರನೇ ಮೊದಲಾದ ಕಪಿನಾಯಕರು ಅತ್ಯಂತ ಸಂತುಷ್ಟಚಿತ್ತರಾದರು. ಆಗ ಜಾಂಬವಂತನು ಎದ್ದು ನಿಂತು ಸಂಪಾತಿಯನ್ನು ಕುರಿತು " ಎಲೈ ಸಂಪಾತಿಯೆ, ಇನ್ನೊಂದು ಬಾರಿ

ಸೀತಾದೇವಿಯ ವೃತ್ತಾಂತವನ್ನು ವಿಸ್ತಾರವಾಗಿ ಹೇಳು. ಆ ದೇವಿಯು ಎಲ್ಲಿದ್ದಾಳೆ? ಆಕೆಯನ್ನು ಎತ್ತಿಕೊಂಡು ಹೋದವರಾರು? ಅವರು ಹೋಗುವ ಸಮಯದಲ್ಲಿ ಕಂಡವರಾರು? ಈ ವೃತ್ತಾಂತಗಳನ್ನು ವಿಸ್ತಾರವಾಗಿ ಹೇಳಿದರೆ ಸಪ್ತಷಷ್ಟಿಮಂದಿ ಕಪಿನಾಯಕರಿಗೂ ನೀನೇ ರಕ್ಷಕನಾಗಿ ಜೀವಗಳನ್ನುಳಿಸಿದವನಾಗುವೆ. ಸೀತಾದೇವಿಯನ್ನು ಅಪಹರಿಸಿದವನು ವಜ್ರಾಯುಧಕ್ಕೆ ಸಮಾನವಾದ ರಾಮಲಕ್ಷ್ಮಣರ ಬಾಣಸಾಮರ್ಥ್ಯವನ್ನರಿತವನಲ್ಲವೆ ? " ಎಂದು ಕೇಳಿದನು.

ಆಗ ಸಂಪಾತಿಯು ಸಮಸ್ತಕಪಿನಾಯಕರೂ ಅಂಜದಿರುವ ಹಾಗೆ ಅಭಯವನ್ನು ಕೊಟ್ಟು ಸಂತೈಸಿ ಇಂತೆಂದನು : " ಎಲೈ ಕಪಿನಾಯಕರುಗಳಿರಾ, ನಾನು ಸೀತಾದೇವಿಯನ್ನು ರಾವಣನು ಎತ್ತಿಕೊಂಡು ಹೋದ ವೃತ್ತಾಂತವನ್ನು ಹೇಳುತ್ತೇನೆ, ಕೇಳಿ. ನಾನು ವಿಶಾಲವಾದ ಪರ್ವತದಲ್ಲಿ ಬಿದ್ದು ವೃದ್ಧನಾಗಿ ಪರಾಕ್ರಮಗುಂದಿರಲು ನನ್ನ ಮಗನಾದ ಸುಪಾರ್ಶ್ವನು ನನಗೆ ವೇಳೆವೇಳೆಗೆ ಆಹಾರವನ್ನು ತಂದು ಕೊಟ್ಟು ರಕ್ಷಿಸುತ್ತಿರುವನು. ಪಕ್ಷಿಜಾತಿಗಳಿಗೆ ಯಾವಾಗಲೂ ಆಹಾರವು ಹೇರಳವಾಗಿರಬೇಕು. ಗಂಧರ್ವರು ಯಾವಾಗಲೂ ಅತಿಕಾಮಿಗಳಾಗಿರುವರು. ಸರ್ಪಗಳು ಯಾವಾಗಲೂ ಅತಿಕೋಪವುಳ್ಳವಾಗಿರುವುವು. ಮೃಗಗಳು ಯಾವಾಗಲೂ ಅತಿಭಯವುಳ್ಳವಾಗಿರುವುವು. ಪಕ್ಷಿಗಳು ಯಾವಾಗಲೂ ಕ್ಷುಧೆಯುಳ್ಳವಾಗಿರುವುವು. ನಾವು ಪಕ್ಷಿಗಳಾದ ಕಾರಣ ಅತ್ಯಂತ ಕ್ಷುಧೆಯುಳ್ಳವರು. ನನ್ನ ಮಗನಾದ ಸುಪಾರ್ಶ್ವನು ಪ್ರತಿ ದಿನವಲ್ಲಿಯೂ ಪ್ರಾತಃಕಾಲದಲ್ಲೆದ್ದು ಹೋಗಿ ಸಾಯಂಕಾಲದ ಹೊತ್ತಿಗೆ ಆಹಾರವನ್ನು ಹೇರಳವಾಗಿ ತಂದುಕೊಡುವನು. ಒಂದು ದಿನ ಆತನು ಮಾಂಸಾದಿ ಆಹಾರಗಳನ್ನೊಂದನ್ನೂ ತರದೆ ಸುಮ್ಮನೆ ಬಂದನು. ನಾನು ಕಾರಣವನ್ನು ಕೇಳಲಾಗಿ ಆ ಕುಮಾರನು ನನಗೆ ಆಹಾರವನ್ನು ತಂದು ಕೊಡದೆ ಹೋದದ್ದಕ್ಕಾಗಿ ಸಂಕೋಚಪಡುತ್ತಾ ನನ್ನನ್ನು ಕುರಿತು ಹೀಗೆ ಹೇಳಿದನು : ' ನಾನು ನಿನಗೆ ಆಹಾರವನ್ನು ತರಬೇಕೆಂದು ಅಂತರಿಕ್ಷಮಾರ್ಗಕ್ಕೆ ಹೋಗಿ ಮಹೇಂದ್ರಪರ್ವತದ ಬಾಗಿಲನ್ನಡ್ಡಗಟ್ಟಿಕೊಂಡಿದ್ದೆನು. ಮಹೇಂದ್ರಪರ್ವತದ ಗುಹೆಗೆ ಸಮುದ್ರತೀರದಲ್ಲಿ ಸಂಚರಿಸುವ ಪ್ರಾಣಿಗಳೆಲ್ಲವೂ ಬರುವುವು. ಅವೆಲ್ಲವನ್ನೂ ಅಡ್ಡಗಟ್ಟಿ ಹಿಡಿದು ತರಬೇಕೆಂದು ನಾನು ಕಾದಿದ್ದ ಸಮಯದಲ್ಲಿ, ಅಲ್ಲಿಗೆ ಅಂಜನಪರ್ವತಕ್ಕೆ ಸಮಾನವಾದ ತನುಕಾಂತಿಯುಳ್ಳ ಒಬ್ಬ ಪುರುಷನು ಬಾಲಸೂರ್ಯಪ್ರಭೆಯಂತೆ ತನುಕಾಂತಿಯುಳ್ಳ ಒಬ್ಬ ಸ್ತ್ರೀಯನ್ನು ಎತ್ತಿಕೊಂಡು ಬಂದನು. ಅದನ್ನು ಕಂಡು ಅವರಿಬ್ಬರೂ ನಮ್ಮ ಆಹಾರಕ್ಕೆ ಒದಗಿದರೆಂದು ನಿಶ್ಚಯಿಸಿಕೊಂಡೆನು. ಆ ಪುರುಷನು ಅನೇಕ ವಿನಯೋಕ್ತಿಗಳಿಂದ ನನ್ನನ್ನು ಸಂತವಿಟ್ಟು ತನಗೆ ಸ್ವಲ್ಪ ದಾರಿಯನ್ನು ಬಿಡಬೇಕೆಂದು ಪ್ರಾರ್ಥಿಸಿದನು. ನಾನು ಶರಣಾಗತರಾಗಿ ವಿನಯವಚನಗಳಿಂದ ಸಂತವಿಟ್ಟವರನ್ನು ಕೊಲ್ಲಬಾರದೆಂಬ ವಚನವನ್ನು ಸ್ಮರಿಸಿಕೊಂಡೆನಲ್ಲದೆ ನೀಚರಾದವರೂ ಮೊರೆಯಿಟ್ಟವರನ್ನು ಕೊಲ್ಲದಿರುವಾಗ ನನ್ನಂಥವನು ಕೊಲ್ಲಬಹುದೇ ಎಂದೂ ಯೋಚಿಸಿ ಆತನಿಗೆ ದಾರಿಯನ್ನು ಬಿಟ್ಟುಕೊಟ್ಟೆನು. ಆತನು ಅತಿವೇಗದಿಂದ ಆ ಸ್ತ್ರೀಯನ್ನು ಎತ್ತಿಕೊಂಡು ಹೋದನು. ಆಮೇಲೆ ನನ್ನನ್ನು ಕಂಡ ಸಮಸ್ತ ಋಷಿಗಳೂ ರಾವಣನಿಗೆ ದಾರಿಯನ್ನು ಬಿಟ್ಟು ಜೀವವನ್ನುಳಿಸಿಕೊಂಡೆಯೆಂದು ಹೇಳಿದರು. ಆ ಋಷಿಗಳು ನನ್ನೊಡನೆ ಆಡಿದ ಮಾತುಗಳಿಂದ ಆತನೇ ರಾವಣನೆಂದೂ ಹೊಂಬಣ್ಣದ ಸೀರೆಯನ್ನುಟ್ಟು ಶೋಕಾತಿಶಯದಿಂದ ' ರಾಮಾ—ಲಕ್ಷ್ಮಣಾ ' ಎಂದು ಮೊರೆಯಿಡುತ್ತಿದ್ದ ಆ ದೇವಿಯು ಜನಕರಾಯನ ಮಗಳಾದ ಶ್ರೀರಾಮನ ಪಟ್ಟದರಾಣಿಯಾದ ಸೀತಾದೇವಿಯೆಂದೂ ತೋರುತ್ತದೆ! ನನಗೆ ಕಾಲಾತಿಕ್ರಮವಾಗಿ ಮಾಂಸಾಹಾರವು ದೊರಕದೆ ಹೋಯಿತು ' ಎಂದು ನನ್ನೊಡನೆ ಹೇಳಿದನು.

ಆ ಮಾತನ್ನು ಕೇಳಿಯೂ ನನಗೆ ರಾವಣನನ್ನು ಅಷ್ಟಗಟ್ಟಿ ಆತನೊಡನೆ ಯುದ್ಧವನ್ನು ಮಾಡಿ ಆತನನ್ನು ಕೊಲ್ಲಬೇಕೆಂಬ ಬುದ್ಧಿ ಹುಟ್ಟಲಿಲ್ಲ. ಪಕ್ಷಿಗಳಿಗೆ ಗರಿಗಳು ಹೋದ ಬಳಿಕ ಪರಾಕ್ರಮವಿದ್ದೂ ಫಲವೇನು ? ನಾನು ನನ್ನ ಬುದ್ಧಿಗೆ ತೋರಿದಷ್ಟು ವಾಕ್ಸಹಾಯವನ್ನು ಮಾಡಿರುವೆನು. ನಿಮಗೆ ಪೌರುಷ ಹುಟ್ಟುವಂಥ ಮಾತುಗಳಿಂದ ಹಿತವನ್ನು ಹೇಳಿರುವೆನು. ಶ್ರೀರಾಮನ ಕಾರ್ಯವೇ ನನ್ನ ಕಾರ್ಯ. ನೀವೆಲ್ಲರೂ ಬಲವಂತರು. ಬುದ್ಧಿವಂತರು. ಮಹಾಪರಾಕ್ರಮಿಯಾದ ಸುಗ್ರೀವನ ಅಪ್ಪಣೆಯಿಂದ ಬಂದವರು. ಆದಲ್ಲದೆ ರಾಮಲಕ್ಷ್ಮಣರ ಬಾಣಗಳು ಅತ್ಯಂತ ಕೂರಲಗುಳ್ಳವಾಗಿ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ಸಂಹರಿಸುವಂಥವು. ರಾವಣನು ಅತ್ಯಂತ ತೇಜೋಬಲವುಳ್ಳವನಾದರೂ ಸಮರ್ಥರಾದ ನಿಮಗೆ ಸಾಧ್ಯವಾಗುವನು. ಇನ್ನು ಬಹಳ ಮಾತುಗಳಿಂದ ಕಾರ್ಯವೇನು ? ನೀವು ಸೀತಾದೇವಿಯನ್ನು ಕಂಡು ಬರುವುದಕ್ಕೆ ತಕ್ಕ ಕಾರ್ಯವನ್ನು ನಿಶ್ಚಯಿಸಿಕೊಂಡು ಹೊರಡಿ. ನಿಮ್ಮಂಥ ಬುದ್ಧಿವಂತರು ಕಾರ್ಯಬಂದಲ್ಲಿ ಕಾಲವಿಳಂಬವನ್ನು ಮಾಡುವುದು ಯೋಗ್ಯವಲ್ಲ" ಎಂದನು.



## ೬೦ ನೆಯ ಅಧ್ಯಾಯ

## ಸಂಪಾತಿಯ ಗರಿಗಳು ಸೀದುಹೋದ ವೃತ್ತಾಂತ

ಅನಂತರ ತನ್ನ ಸುತ್ತಲೂ ಕುಳಿತಿದ್ದ ಕಪಿನಾಯಕರನ್ನು ಕುರಿತು ಸಂಪಾತಿಯು ಪುನಃ ಹೇಳಿದನು : "ಎಲೈ ಕಪಿನಾಯಕರುಗಳಿರಾ, ನೀವೆಲ್ಲರೂ ಸದ್ದುಮಾಡದೆ ಏಕಾಗ್ರ ಚಿತ್ತದಲ್ಲಿ ಕೇಳಿ. ನಾನು ನನ್ನ ತಮ್ಮನಾದ ಜಟಾಯುವಿನ ಮೇಲಣ ಛಲದಿಂದ ಸೂರ್ಯ ಮಂಡಲವನ್ನು ಕಾಣಬೇಕೆಂದು ಹೋಗಿ ಸೂರ್ಯಕಿರಣ ಜ್ವಾಲೆಯಿಂದ ಗರಿಸೀದು ಈ ಪರ್ವತದ ವನದಲ್ಲಿ ಬಿದ್ದು ಮೂರ್ಛಾಗತನಾಗಿ ಆರು ದಿವಸಗಳು ಚೈತನ್ಯಗುಂದಿದ್ದು ಆಮೇಲೆ ಎಚ್ಚತ್ತು ನಾನಾ ದಿಕ್ಕುಗಳನ್ನು ನೋಡುತ್ತ ಈ ಪರ್ವತವನ್ನು ನೋಡಿ, ಇದು ತೆಂಕಣ ಸಮುದ್ರತೀರದಲ್ಲಿರುವ ವಿಂಧ್ಯಪರ್ವತವೆಂದು ನಿಶ್ಚಯಿಸಿದೆನು. ದೈವಾನುಕೂಲದಿಂದ ನಾನು ಅಂತರಿಕ್ಷಮಾರ್ಗದಿಂದ ಬಿದ್ದ ಸ್ಥಳವು ನಿಶಾಕರನೆಂಬ ಮುನೀಶ್ವರನ ಪುಣ್ಯಾಶ್ರಮವಾಗಿತ್ತು. ನಿಶಾಕರಮುನಿಯು ಆ ಆಶ್ರಮದಲ್ಲಿ ಅತ್ಯಂತ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ಒಂದು ದಿನ ನಾನು ಬಹುಪ್ರಯಾಸದಿಂದ ತೆವಳುತ್ತ ಆತನ ಆಶ್ರಮಕ್ಕೆ ಹೋಗಿ ಕಾಣಿಸಿಕೊಂಡೆನು. ಆ ನಿಶಾಕರಮುನಿಯು ನನ್ನನ್ನು ಕಂಡು ಒಂದು ಕ್ಷಣಮಾತ್ರದಲ್ಲಿ ಹೊರಟುಬಂದು ನನ್ನನ್ನು ಕುರಿತು 'ನಿನ್ನ ಗರಿಗಳು ಸೀದು ನೀನು ವಿವರ್ಣ ವಾಗಿ ಬಂದದ್ದರಿಂದ ನಿನ್ನ ಸ್ವರೂಪವನ್ನು ಅರಿಯದೆ ಹೋದೆನು. ನಿನ್ನ ಗರಿಗಳು ಯಾವಕಾರಣ ಸೀದುಹೋದವು ? ನಿನ್ನ ಶರೀರದಲ್ಲಿ ಎಲ್ಲಿ ನೋಡಿದರೂ ಗಾಯಗಳಾಗಿವೆ. ಮೊದಲು ವಾಯು ವೇಗವುಳ್ಳವರಾಗಿ ಅಣ್ಣತಮ್ಮಂದಿರಾದ ನೀವಿಬ್ಬರೂ ಬರುತ್ತಿದ್ದಿರಿ. ನೀವೀರ್ವರೂ ಸಮಸ್ತ ಹದ್ದುಗಳಿಗೂ ಅರಸರು. ಸಂಪಾತಿ, ಜಟಾಯುವು ನಿನ್ನ ತಮ್ಮನು. ನೀವಿಬ್ಬರೂ ಮನುಷ್ಯ ರೂಪದಿಂದ ನನ್ನ ಪಾದಸೇವೆಯನ್ನು ಮಾಡಿ ಹೋಗುತ್ತಿದ್ದಿರಿ. ಎಲೈ ಸಂಪಾತಿ, ನಿನ್ನ ಗರಿಗಳು ಏಕೆ ಹೋದವು ? ನಿನಗೇನು ವ್ಯಾಧಿ ಸಂಭವಿಸಿತು ? ನಿನ್ನ ಶತ್ರುಗಳಾರಾದರೂ ನಿನ್ನ ಗರಿಗಳನ್ನು ಕತ್ತರಿಸಿಹಾಕಿದರೆ ? ನೀನು ವಿವರ್ಣವಾದ ಸಂಗತಿಯನ್ನು ಹೇಳು' ಎಂದು ಕೇಳಿದನು."



೬೧ ನೆಯ ಅಧ್ಯಾಯ

## ಸಂಪಾತಿ ಜಟಾಯುಗಳು ಸೂರ್ಯನ ಸಮೀಪಕ್ಕೆ ಹೋದ ವೃತ್ತಾಂತ

ಸಂಪಾತಿಯು ಹೇಳಿದನು : " ಎಲೈ ವಾನರಶ್ರೇಷ್ಠರೆ, ಆಗ ನಾನು ನಿಶಾಕರಮುನಿಯನ್ನು ಕುರಿತು ಹೀಗೆಂದೆನು : ' ಮುನಿಗಳೆ, ನನ್ನ ಮೈಯೆಲ್ಲಾ ವ್ರಣದಿಂದ ಗಾಸಿಯಾಗಿದೆ. ಬಹಳ ಆಯಾಸದಿಂದ ನರಳುತ್ತಿದ್ದೇನೆ. ಹೆಚ್ಚು ಮಾತನಾಡಲು ನನಗೆ ಶಕ್ತಿಯಿಲ್ಲ. ನಾನೂ ನನ್ನ ತಮ್ಮನಾದ ಜಟಾಯುವೂ ಅಹಂಕಾರದಿಂದ ನಮ್ಮೀರ್ವರ ಪರಾಕ್ರಮವನ್ನು ಪರೀಕ್ಷಿಸಬೇಕೆಂದು ಆಕಾಶದಲ್ಲಿ ಹಾರತೊಡಗಿದೆವು. ಕೈಲಾಸಶಿಖರದಲ್ಲಿರುವ ಋಷಿಗಳೆದುರಿಗೆ ನಾವಿಬ್ಬರೂ ಸೂರ್ಯನ ಹಿಂದೆ ಹಾರಿ ಹೋಗಬೇಕೆಂದು ಪಣವನ್ನು ತೊಟ್ಟಿದ್ದೆವು. ನಾವು ಆಕಾಶದಲ್ಲಿ ಹಾರುತ್ತ ಭೂಮಂಡಲದಲ್ಲಿರುವ ಪರ್ವತಗಳನ್ನೂ ನದಿಗಳನ್ನೂ ಅರಣ್ಯಗಳನ್ನೂ ನೋಡುತ್ತಿದ್ದೆವು. ಹಿಮವಂತ, ವಿಂಧ್ಯ ಮತ್ತು ಮೇರುಪರ್ವತಗಳು ದೂರದಿಂದ ನಾವು ನೋಡುವಾಗ ನೀರಿನಲ್ಲಿರುವ ಆನೆಗಳಂತೆ ಕಾಣಿಸುತ್ತಿದ್ದವು. ನಾವಿಬ್ಬರೂ ಸೂರ್ಯನ ಬಳಿಗೆ ಹೋಗುತ್ತ ಹೋಗುತ್ತ ಬಳಲಿಹೋದೆವು. ಆಯಾಸದಿಂದ ಮೈ ಬೆವರಿತು. ಎಚ್ಚರದಪ್ಪವಂತಾಯಿತು. ಯಾವುದು ದಕ್ಷಿಣ ದಿಕ್ಕು, ಯಾವುದು ಆಗ್ನೇಯ ದಿಕ್ಕು, ಯಾವುದು ಪಶ್ಚಿಮ ದಿಕ್ಕು ಎಂಬುದು ತಿಳಿಯದೆಹೋಯಿತು. ಪ್ರಳಯಕಾಲದ ಬೆಂಕಿಯಿಂದ ಸುಟ್ಟುಹೋಗುತ್ತಿದ್ದೇವೋ ಎಂಬಂತೆ ಆಯಿತು. ಬುದ್ಧಿಕೆಟ್ಟಿತು. ಆಗ ನಾನು ಮೇಲಕ್ಕೆ ನೋಡಲು ಸೂರ್ಯನು ಭೂಮಿಯಷ್ಟು ದೊಡ್ಡದಾಗಿ ಕಾಣಿಸಿದನು. ಅಷ್ಟರಲ್ಲಿ ಜಟಾಯುವು ನನಗೆ ಹೇಳದೆಯೇ ಹಾರಾಟವನ್ನು ಮುಗಿಸಿ ಭೂಮಿಯ ಕಡೆಗೆ ಹಿಂತಿರುಗಿದನು. ನಾನು ಅದನ್ನು ಕಂಡು ನನ್ನ ರೆಕ್ಕೆಗಳಿಂದ ಅವನಿಗೆ ನೆರಳನ್ನುಂಟುಮಾಡುತ್ತ ನಾನೂ ಕೆಳಗಿಳಿದೆನು. ಜಟಾಯುವು ಸೂರ್ಯಪ್ರಭೆಯಿಂದ ಸುಟ್ಟುಹೋದಾನೆಂದು ನನಗೆ ಭಯವಾಗಿದ್ದಿತು. ಅಷ್ಟರಲ್ಲಿ ವಾಯುಪಥದಿಂದ ಇಳಿಯುವಾಗ ನನ್ನ ರೆಕ್ಕೆಗಳು ಸೂರ್ಯಪ್ರಕಾಶಕ್ಕೆ ಸಿಕ್ಕಿ ಸುಟ್ಟುಹೋದವು. ನಾನು ರೆಕ್ಕೆ ಸುಟ್ಟವನಾಗಿ ಜಡನಂತಾದೆನು. ಕೂಡಲೆ ಈ ಪರ್ವತದ ಮೇಲೆ ಬಿದ್ದುಹೋದೆನು. ಜಟಾಯುವು ಜನಸ್ಥಾನದಲ್ಲಿ ಬಿದ್ದುಹೋಗಿರಬೇಕೆಂದು ನನ್ನ ಊಹೆ. ಮುನಿಗಳೆ, ನನಗೆ ಪಕ್ಷಿರಾಜ್ಯಾಧಿಪತ್ಯ ಹೋಯಿತು. ತಮ್ಮನು ಏನಾದನೋ ತಿಳಿಯದು. ರೆಕ್ಕೆಗಳು ಸುಟ್ಟುಹೋದವು. ನನ್ನ ಪೌರುಷವಡಗಿತು. ಇನ್ನು ನಾನು ಏಕೆ ಬದುಕಿರಬೇಕು ? ಈ ಪರ್ವತಶೃಂಗದಿಂದ ಧುಮುಕಿ ಪ್ರಾಣವನ್ನು ಬಿಡುತ್ತೇನೆ ' ಎಂದು ನಾನು ನಿಶಾಕರಮುನಿಗೆ ಹೇಳಿದೆನು."

---

೬೨ ನೆಯ ಅಧ್ಯಾಯ

## ಸಂಪಾತಿಗೆ ಗರಿಗಳು ತಿರುಗಿ ಹುಟ್ಟಿದ್ದು

ಸಂಪಾತಿಯು ಪುನಃ ಹೇಳಿದನು : " ಎಲೈ ಕಪಿನಾಯಕರುಗಳಿರಾ, ಈ ಪ್ರಕಾರವಾಗಿ ನಾನು ನಿಶಾಕರಮುನಿಯ ಸಂಗಡ ಹೇಳಿ ದುಃಖಾತಿಶಯದಿಂದ ರೋದನಮಾಡುತ್ತಿರಲು, ಆ ಮುನೀಶ್ವರನು

ಒಂದು ಕ್ಷಣಮಾತ್ರ ಧ್ಯಾನಮಾಡಿ ಜ್ಞಾನದೃಷ್ಟಿಯಿಂದ ಭವಿಷ್ಯದ್ವರ್ತಮಾನಗಳನ್ನು ತಿಳಿದು ನನ್ನನ್ನು ಕುರಿತು 'ಎಲೈ ಸಂಪಾತಿಯೆ, ನಿನಗೆ ಮೊದಲಿನಂತೆಯೇ ರೆಕ್ಕೆಗಳೂ ಗರಿಗಳೂ ಹುಟ್ಟುವುವು. ಎಂದಿನಂತೆಯೇ ನಿನಗೆ ದೂರದೃಷ್ಟಿಯುಂಟಾಗುವುದು. ನಿನ್ನ ಪ್ರಾಣಗಳು ದೃಢವಾಗುವುವು. ನಿನ್ನ ಬಲಪರಾಕ್ರಮಗಳು ಮೊದಲಂತೆ ಉಂಟಾಗುವುವು. ಈ ವಿಷಯವನ್ನು ನಾನು ನನ್ನ ಜ್ಞಾನ ದೃಷ್ಟಿಯಿಂದ ನಿಶ್ಚಯಿಸಿದೆನು. ಮುಂದೆ ದಶರಥನೆಂಬ ರಾಜನು ಇಕ್ಷ್ವಾಕುವಂಶದಲ್ಲಿ ಜನಿಸುವನು. ಆ ರಾಜನಿಗೆ ಮಹಾತೇಜಸ್ವಿಯಾದ ಶ್ರೀರಾಮನೆಂಬ ಕುಮಾರನು ಅವತರಿಸುವನು. ಆತನು ಒಂದು ಕಾರ್ಯನಿಮಿತ್ತವಾಗಿ ತನ್ನ ತಂದೆಯಾದ ದಶರಥರಾಜನಿಂದ ಆಜ್ಞಪ್ತನಾಗಿ ವನವಾಸಕ್ಕೆ ಬಂದು ಜನಸ್ಥಾನದಲ್ಲಿರುವನು. ಆಗ ಮಹಾಪರಾಕ್ರಮಿಯಾದ ರಾವಣನು ಆತನ ಪಟ್ಟದ ರಾಣಿಯಾದ ಸೀತಾದೇವಿಯನ್ನು ಎತ್ತಿಕೊಂಡು ಹೋಗುವನು. ಆ ದೇವಿಯ ಮನಸ್ಸನ್ನು ಒಲಿಸಿ ಅವಳನ್ನು ತನ್ನ ವಶಪಡಿಸಿಕೊಳ್ಳಬೇಕೆಂದು ರಾವಣನು ಸೀತಾದೇವಿಯನ್ನು ತನ್ನ ಮನೆಯಲ್ಲಿರಿಸಿ ಕೊಂಡು ಭಕ್ಷ್ಯಭೋಜ್ಯಗಳನ್ನು ಕೊಡುವನು. ಆ ದೇವಿಯು ತನ್ನ ಪ್ರಾಣಕಾಂತನಾದ ಶ್ರೀರಾಮನ ವಿರಹದುಃಖದಿಂದ ಆ ಭೋಜ್ಯವಸ್ತುಗಳನ್ನು ಮುಟ್ಟದಿರುವಳು. ಆ ವೃತ್ತಾಂತವನ್ನು ಕೇಳಿ ದೇವೇಂದ್ರನು ದಿವ್ಯವಾದ ಪರಮಾನ್ನವನ್ನು ದೇವತೆಗಳ ಕೈಯಲ್ಲಿ ಕಳುಹಿಸುವನು. ಸೀತಾ ದೇವಿಯು ಆ ದಿವ್ಯಪರಮಾನ್ನವನ್ನು ದೇವೇಂದ್ರನು ಕಳುಹಿಸಿದ್ದೆಂದು ತಿಳಿದು ಅದನ್ನು ಮೂರು ಭಾಗ ಮಾಡುವಳು. ಒಂದು ಭಾಗವನ್ನು 'ಈ ಪರಮಾನ್ನವು ಶ್ರೀರಾಮನಿಗೆ ಸಮರ್ಪಿತ' ಎಂದು ಭೂಮಿಯಲ್ಲಿರಿಸಿ, ಇನ್ನೊಂದು ಭಾಗವನ್ನು 'ಈ ಪರಮಾನ್ನವು ಲಕ್ಷ್ಮಣನಿಗೆ ಅರ್ಪಿತ' ಎಂದು ಭೂಮಿಯಲ್ಲಿರಿಸುವಳು. ಆ ದೇವಿಯು ಮಿಕ್ಕ ಭಾಗವನ್ನು ಶ್ರೀರಾಮನ ಪ್ರಸಾದವೆಂದು ತಾನು ತೆಗೆದುಕೊಂಡು ದೇವೇಂದ್ರನು ಕಳುಹಿಸಿದ ಆ ದಿವ್ಯಾನ್ನದ ಮಹಿಮೆಯಿಂದ ಹಸಿವು ತೃಷೆಗಳಿಲ್ಲದೆ ದಿವ್ಯದೇಹಿಯಾಗುವಳು. ಆಮೇಲೆ ಶ್ರೀರಾಮನ ದೂತರಾದ ಕೆಲವು ಕಪಿನಾಯಕರು ಸೀತಾದೇವಿಯನ್ನರಸಿಕೊಂಡು ಬರುವರು. ಅವರೊಡನೆ ಸೀತಾದೇವಿಯನ್ನು ರಾವಣನು ಹಿಡಿದುಕೊಂಡು ಹೋದ ವೃತ್ತಾಂತವನ್ನು ನೀನು ಹೇಳುವೆ. ಆದರಿಂದ ನೀನು ಮೊದಲಿನಂತೆಯೇ ದೃಷ್ಟಿಸಾಮರ್ಥ್ಯವನ್ನೂ ಬಲವನ್ನೂ ಪಡೆಯುವೆ. ನೀನು ಶ್ರೀರಾಮನು ಅವತರಿಸುವವರೆಗೆ ಕಾದಿದ್ದರೆ ನಿನ್ನ ಗರಿಗಳು ಮೊದಲಿನಂತೆಯೇ ಹುಟ್ಟುವುವು. ನೀನು ಈ ಸ್ಥಳ ದಲ್ಲಿಯೇ ಇದ್ದರೆ ಶ್ರೀರಾಮಲಕ್ಷ್ಮಣರ ಕಾರ್ಯವನ್ನೂ ಸಮಸ್ತ ಬ್ರಾಹ್ಮಣರ ಮತ್ತು ಇಂದ್ರಾದಿ ದೇವತೆಗಳ ಕಾರ್ಯವನ್ನೂ ನೆರವೇರಿಸಿಕೊಟ್ಟಂತಾಗುವುದು. ನಾನು ರಾಮಲಕ್ಷ್ಮಣರನ್ನು ನೋಡಬೇಕೆಂದು ಮನಸ್ಸಿನಲ್ಲಿ ಬಯಸಿಕೊಂಡಿದ್ದೇನೆ. ಆದರೆ ನಾನು ಬಹುಕಾಲ ಪ್ರಾಣಗಳನ್ನು ಧರಿಸಿಕೊಂಡು ನಿಲ್ಲಲಾರೆನು. ನಾನು ಸ್ವಲ್ಪ ಕಾಲದಲ್ಲೇ ಶರೀರವನ್ನು ಬಿಡುವೆನು' ಎಂದು ಅನೇಕ ಪ್ರಿಯವಚನಗಳಿಂದ ನನ್ನನ್ನು ಸಂತವಿಟ್ಟು ತನ್ನ ಆಶ್ರಮಕ್ಕೆ ಹೋದನು."

---

## ೬೩ನೆಯ ಅಧ್ಯಾಯ.

## ಸಂಪಾತಿಗೆ ಗರಿಗಳು ಹುಟ್ಟಿದ್ದು

ಸಂಪಾತಿಯು ಮತ್ತೆ ಹೇಳಿದನು : "ಆ ಬಳಿಕ ನಾನು ಆಕೋಡುಗಲ್ಲಿನಿಂದ ಮೆಲ್ಲಮೆಲ್ಲಗೆ ವಿಂಧ್ಯ ಪರ್ವತವನ್ನು ಹತ್ತಿ ನಿಶಾಕರಮುನಿಯ ಮಾತನ್ನು ನೆನೆದು ನಿಮ್ಮ ಬರವನ್ನು ಕಾದುಕೊಂಡಿದ್ದೆನು.

ಆ ಕಾಲದಿಂದ ಇಂದಿಗೆ ನೂರು ವರುಷಗಳು ಸಂಪೂರ್ಣವಾದವು. ಈ ಪ್ರಕಾರ ನಿಶಾಕರ ಮುನಿಯು ಹೇಳಿ ಮಹಾಪ್ರಸ್ಥಾನವನ್ನು ಹೊಂದಿದ ಮೇಲೆ ನಾನು ಬಹುಕಾಲದಿಂದ ನಿಮ್ಮನ್ನು ಎದುರುನೋಡಿಕೊಂಡು ದುಃಖಿಸುತ್ತಿರುವೆನು. ನನಗೆ ಮರಣಹೊಂದಬೇಕೆಂದು ಬುದ್ಧಿ ಹುಟ್ಟಿದರೂ ನಿಶಾಕರಮುನಿಯ ವಾಕ್ಯಗಳನ್ನೇ ಮನಸ್ಸಿನಲ್ಲಿರಿಸಿಕೊಂಡು ನನ್ನ ಪ್ರಾಣಗಳನ್ನು ರಕ್ಷಿಸಿಕೊಂಡಿರುವೆನು. ಯಜ್ಞಪುರುಷನ ಪ್ರಭೆಯು ಅಂಧಕಾರವನ್ನು ತೊಲಗಿಸುವಂತೆ ಆ ಮುನಿಯು ಹೇಳಿದ ಬುದ್ಧಿಯು ನನ್ನ ದುಃಖಾಂಧಕಾರವನ್ನು ತೊಲಗಿಸಿರುವುದು. ನಾನು ರಾವಣನ ಪರಾಕ್ರಮವನ್ನು ಬಲ್ಲವನಾದ್ದರಿಂದ ಸೀತಾದೇವಿಯನ್ನು ಎತ್ತಿಕೊಂಡು ಹೋಗುತ್ತಿದ್ದ ರಾವಣನನ್ನು ಕಂಡು ಬಂದ ನನ್ನ ಮಗನಾದ ಸುಪಾರ್ಶ್ವನನ್ನು ಕುರಿತು ಸೀತಾದೇವಿಯನ್ನು ಉಪೇಕ್ಷೆಮಾಡಿ ರಾವಣನನ್ನು ಬಿಟ್ಟು ಬಂದದ್ದಕ್ಕಾಗಿ ಬಹಳವಾಗಿ ಕೋಪಿಸಿಕೊಂಡೆನು. ರಾಮಲಕ್ಷ್ಮಣರು ಸೀತಾದೇವಿಯ ವಿಯೋಗದಿಂದ ದುಃಖಾಕ್ರಾಂತರಾಗಿರುವರು. ನನಗೆ ದಶರಥರಾಜನ ಸ್ನೇಹದಿಂದ, ನನ್ನ ಮಗನು ಒಳ್ಳೆಯದನ್ನು ಮಾಡದೆ ಹೋದನಲ್ಲ ಎಂದು ದುಃಖವಾಗಿದೆ" ಎಂದು ಸಂಪಾತಿಯು ನುಡಿದನು.

ಆ ಸಮಯದಲ್ಲಿ ಅಂಗದಾದಿ ಕಪಿನಾಯಕರು ನೋಡುತ್ತಿರಲು ಸಂಪಾತಿಗೆ ಗರಿಗಳು ಹುಟ್ಟಿದವು. ಆತನು ಕೆಂಪಾದ ಗರಿಗಳಿಂದ ಮನೋಹರವಾದ ತನ್ನ ಶರೀರವನ್ನು ನೋಡಿ ಅತ್ಯಂತ ಸಂತೋಷಪಟ್ಟು ಆ ಕಪಿನಾಯಕರನ್ನು ಕುರಿತು "ಎಲೈ ಕಪಿನಾಯಕರೆ, ಮಹಾತ್ಮನಾದ ನಿಶಾಕರಮುನಿಯ ಪ್ರಭಾವದಿಂದ ನನಗೆ ಸೂರ್ಯಕಿರಣಜ್ವಾಲೆಯಿಂದ ಸೀದುಹೋದ ಗರಿಗಳು ತಿರುಗಿ ಹುಟ್ಟಿದವು. ನನಗೆ ಯೌವನಾವಸ್ಥೆಯಲ್ಲಿ ಎಂಥ ಪರಾಕ್ರಮವಿತ್ತೋ ಅಂಥ ಪರಾಕ್ರಮವುಂಟಾಗಿ ನನ್ನ ಶರೀರವು ಮೊದಲಿನಂತೆ ತೇಜಸ್ಸುಳ್ಳದ್ದಾಗಿದೆ. ನಿಶಾಕರಮುನಿಯು ಹೇಳಿದ ಮಾತುಗಳ ಪ್ರಕಾರ ಕೆಲವು ಕಾರ್ಯಗಳು ಸಿದ್ಧಿಸಿರುವುದರಿಂದ ಮಿಕ್ಕ ಕಾರ್ಯಗಳೂ ಸಿದ್ಧಿಸದಿರವು. ಆದ್ದರಿಂದ ನೀವು ಸೀತಾದೇವಿಯನ್ನು ಹುಡುಕುವುದಕ್ಕೆ ತಕ್ಕ ಪ್ರಯತ್ನವನ್ನು ಅವಶ್ಯವಾಗಿ ಮಾಡಿರಿ. ನನಗೆ ಈಗ ಗರಿಹುಟ್ಟಿಬಂದಿದೆ. ಇದು ಮುಂದೆ ನಿಮ್ಮ ಕಾರ್ಯವು ನೆರವೇರುವುದಕ್ಕೆ ಒಳ್ಳೆಯ ಶಕುನ" ಎಂದು ನುಡಿದು ಮುಂದೆ ಪರಗತಿಯನ್ನು ಸಂಧಿಸಿಕೊಳ್ಳಬೇಕೆಂಬ ಬುದ್ಧಿಯಿಂದ ವಿಂಧ್ಯಪರ್ವತದ ಕೋಡುಗಲ್ಲಿನಿಂದ ಖೇಚರಮಾರ್ಗವಾಗಿ ಹೋದನು.

ಆಮೇಲೆ ಹನುಮಂತನೇ ಮೊದಲಾದ ಕಪಿನಾಯಕರು ಸಂಪಾತಿಯ ಮಾತನ್ನು ಕೇಳಿ ಹರ್ಷಪಟ್ಟು "ನಮಗಿನ್ನು ಕಾರ್ಯಸಿದ್ಧಿಯಾಗುವುದು. ನಾವಿನ್ನು ಸೀತಾದೇವಿಯನ್ನು ಕಂಡು ನಮ್ಮ ಒಡೆಯನಾದ ಸುಗ್ರೀವನ ಸಮೀಪಕ್ಕೆ ಹೋಗಬೇಕು. ಅದಕ್ಕೆ ಎಂಥ ಪ್ರಯತ್ನವನ್ನಾದರೂ ಮಾಡಬೇಕು" ಎಂದು ನಿಶ್ಚಯಿಸಿ ದಕ್ಷಿಣದಿಕ್ಕಿಗೆ ಹೊರಟರು.



## ೬೪ನೆಯ ಅಧ್ಯಾಯ

## ಸಮುದ್ರಲಂಘನಕ್ಕಾಗಿ ಮಂತ್ರಾಲೋಚನೆ

ಈ ರೀತಿಯಲ್ಲಿ ಸಂಪಾತಿಯು ಸೀತಾದೇವಿಯಿದ್ದ ಸ್ಥಳವನ್ನು ಹೇಳಲಾಗಿ ಕಪಿನಾಯಕರೆಲ್ಲರೂ ಆನಂದದಿಂದ ಸಿಂಹದಂತೆ ಗರ್ಜಿಸುತ್ತ ದಕ್ಷಿಣಸಮುದ್ರದ ತೀರಕ್ಕೆ ಬಂದು ಸೇರಿದರು. ಆ ವೀರರು ಉತ್ತರತೀರದಲ್ಲಿ ನಿಂತು ಈ ಲೋಕದ ಪ್ರತಿಬಿಂಬವೋ ಎಂಬಂತೆ ಅಪಾರವಾಗಿದ್ದ ಸಮುದ್ರವನ್ನು

ಕಂಡರು. ಆ ಸಮುದ್ರವಾದರೋ ನೀರಿನಲ್ಲಿ ಈಜಾಡುತ್ತಿದ್ದ ಭಯಂಕರವಾದ ಜಲಚರಜಂತುಗಳಿಂದಲೂ ಅಪ್ಪಳಿಸುತ್ತಿದ್ದ ಭೀಕರವಾದ ಅಲೆಗಳಿಂದಲೂ ವ್ಯಾಪ್ತವಾಗಿತ್ತು. ಒಂದು ಕಡೆ ಜಲರಾಶಿಯು ಶಾಂತವಾಗಿದ್ದುದರಿಂದ ಸಮುದ್ರವು ನಿದ್ರಿಸುತ್ತಿದೆಯೋ ಎಂಬಂತೆಯೂ ಇನ್ನೊಂದು ಕಡೆ ಅಲೆಗಳು ಚಲಿಸುತ್ತಿದ್ದುದರಿಂದ ಕುಣಿಯುತ್ತಿದೆಯೋ ಎಂಬಂತೆಯೂ ಮತ್ತೆ ಕೆಲವು ಕಡೆ ಪರ್ವತಾಕಾರವಾದ ತರಂಗಗಳಿಂದ ಯುಕ್ತವಾಗಿಯೂ ಇತ್ತು. ಪಾತಾಳವಾಸಿಗಳಾದ ರಾಕ್ಷಸರು ಅಲ್ಲಲ್ಲಿ ಸಂಚರಿಸುತ್ತಿದ್ದರು. ಅಪಾರವಾದ ಆ ಸಾಗರವನ್ನು ಕಂಡು ಆಕಾಶದಂತೆ ಹರಡಿರುವ ಈ ಸಾಗರವನ್ನು ದಾಟುವುದು ಹೇಗೆಂದು ಕಪಿಶ್ರೇಷ್ಠರಿಗೆ ಬಹಳ ಚಿಂತೆಯಾಯಿತು. ಹೀಗೆ ವಿಷಣ್ಣವದನರಾದ ಕಪಿವೀರರನ್ನು ನೋಡಿ ಬಲಶಾಲಿಯೂ ವಾಲಿಪುತ್ರನೂ ಆದ ಅಂಗದನು ಧೈರ್ಯಹೇಳುತ್ತ ಹೀಗೆಂದನು : "ಎಲೈ ವೀರರೆ, ನೀವು ಚಿಂತಾಕ್ರಾಂತರಾಗಬೇಡಿ. ಚಿಂತೆಯೆಂಬುದು ದೊಡ್ಡ ದೋಷ. ಚಿಂತೆಯು ವೀರರನ್ನು ಕೂಡ, ಕ್ರುದ್ಧವಾದ ಸರ್ಪವು ಬಾಲಕರನ್ನು ಕಚ್ಚುವಂತೆ ಹಿಂಸಿಸಿ ನಾಶಪಡಿಸುವುದು. ಪೌರುಷವನ್ನು ತೋರಿಸಬೇಕಾದ ಸಂದರ್ಭದಲ್ಲಿ ಯಾವನು ಚಿಂತೆಯಿಂದ ಕಂದುವನೋ ಅಂಥ ತೇಜೋಹೀನನ ಕಾರ್ಯವು ಎಂದಿಗೂ ಸಿದ್ಧಿಸದು" ಎಂದನು.

ಹೀಗೆ ವಾಲಿಪುತ್ರನು ಸಮಾಧಾನ ಹೇಳುತ್ತಿರುವಾಗ ಸೂರ್ಯಾಸ್ತವಾಗಿ ರಾತ್ರಿಯು ಪ್ರಾಪ್ತವಾಯಿತು. ಆ ರಾತ್ರಿಯು ಕಳೆಯಲಾಗಿ ಮಾರನೆಯ ದಿನ ಅಂಗದನು ಕಪಿವೀರರನ್ನು ಮಂತ್ರಾಲೋಚನೆಗಾಗಿ ಕರೆದನು. ಆ ಕಪಿಸೈನ್ಯವು, ಮರುತ್ತುಗಳು ದೇವೇಂದ್ರನನ್ನು ಸುತ್ತುಗಟ್ಟಿ ಕುಳ್ಳಿರುವಂತೆ, ಅಂಗದನ ಸುತ್ತಲೂ ಬಂದು ನೆರೆಯಿತು. ಅಂಗದನನ್ನಾಗಲಿ ಹನುಮಂತನನ್ನಾಗಲಿ ಬಿಟ್ಟರೆ ಆ ಕಪಿಸೈನ್ಯವನ್ನು ತಡೆಗಟ್ಟಿ ಹಿಡಿತದಲ್ಲಿಟ್ಟುಕೊಳ್ಳಲು ಇನ್ನು ಯಾರಿಗೆ ಸಾಧ್ಯವಾದೀತು ? ಅಂಗದನು ಅಲ್ಲಿ ನೆರೆದಿದ್ದ ಹಿರಿಯರಾದ ಭಟರ ಅನುಮತಿಯನ್ನು ಪಡೆದು ಅವರೆಲ್ಲರನ್ನೂ ಕುರಿತು ಈ ರೀತಿಯಲ್ಲಿ ಪ್ರಶ್ನೆಮಾಡಿದನು : "ಎಲೈ ವೀರರೆ, ಈಗ ಈ ಸಾಗರವನ್ನು ದಾಟಿಹೋಗಿ ಕಾರ್ಯವನ್ನು ಸಾಧಿಸತಕ್ಕ ವೀರನಾರು ? ಸುಗ್ರೀವನಿಗೆ ಸತ್ಯಸಂಧನೆಂದು ಹೆಸರನ್ನು ತರುವ ಧೀರನಾರು ? ನೂರುಯೋಜನಗಳನ್ನು ದಾಟಿ ಹೋಗಿ ನಮ್ಮೆಲ್ಲರನ್ನೂ ಮಹಾಸಂಕಟದಿಂದ ಪಾರುಮಾಡಿಸುವ ಶೂರನಾರು ? ಯಾವ ಮಹಾತ್ಮನ ಪ್ರಭಾವದಿಂದ ನಾವು ಕಾರ್ಯವನ್ನು ಸಾಧಿಸಿಕೊಂಡು ಹಿಂದಿರುಗಿ ಸುಖದಿಂದ ಮನೆಗೆ ಸೇರಿ ನಮ್ಮ ಹೆಂಡತಿಮಕ್ಕಳನ್ನು ನೋಡಬಲ್ಲೆವು ? ಯಾರ ಅನುಗ್ರಹದಿಂದ ನಾವು ಕಿಷ್ಕಿಂಧೆಗೆ ಹೋಗಿ ಮಹಾಪರಾಕ್ರಮಿಗಳಾದ ರಾಮಲಕ್ಷ್ಮಣರನ್ನೂ ಸುಗ್ರೀವನನ್ನೂ ಧೈರ್ಯದಿಂದ ನೋಡಬಲ್ಲೆವು ? ನಿಮ್ಮಲ್ಲಿ ಯಾವನಾದರೂ ಕಪಿವೀರನು ಈ ಸಾಗರವನ್ನು ದಾಟಿಹೋಗಲು ಸಮರ್ಥನಾಗಿದ್ದರೆ ಆತನು ಕೂಡಲೆ ಮುಂದೆ ಬಂದು ನಮಗೆ ಅಭಯಪ್ರದಾನವನ್ನು ಮಾಡಲಿ" ಎಂದು ಕೇಳಿದನು.

ಆಗ ಅಂಗದನ ಮಾತನ್ನು ಕೇಳಿ ಯಾರೂ ಮಾತನಾಡಲಿಲ್ಲ. ಸಮಸ್ತ ವಾನರಸೇನೆಯೂ ಮೂಕವಾಗಿ ಚಲಿಸದೆ ಕುಳಿತಿತ್ತು. ಅದನ್ನು ಕಂಡು ಅಂಗದನು ಪುನಃ "ಎಲೈ ವಾನರರೆ, ನೀವೆಲ್ಲರೂ ಮಹಾಬಲಿಷ್ಠರು, ಅಸದೃಶಪರಾಕ್ರಮವುಳ್ಳವರು, ಉತ್ತಮಕುಲದಲ್ಲಿ ಹುಟ್ಟಿದವರು. ಎಷ್ಟೋಸಲ ನಿಮ್ಮ ಸಾಹಸಕಾರ್ಯಗಳಿಗಾಗಿ ಹೆಸರುಪಡೆದವರು. ಆದರೂ ಸಮುದ್ರಲಂಘನ ಮಾಡಲು ಹಿಂಜರಿಯುತ್ತಿದ್ದೀರಿ. ಒಳ್ಳೆಯದು. ಎಲೈ ವೀರರೆ, ನಿಮ್ಮಲ್ಲಿ ಒಬ್ಬೊಬ್ಬರಿಗೂ ಎಷ್ಟು ದೂರ ಹಾರಲು ಸಾಮರ್ಥ್ಯವಿದೆ ? ಅದನ್ನಾದರೂ ಹೇಳಿರಿ" ಎಂದು ಕೇಳಿದನು.



## ೬೫ ನೆಯ ಅಧ್ಯಾಯ

## ಕಪಿವೀರರು ತಮ್ಮ ಪರಾಕ್ರಮವನ್ನು ಹೇಳಿಕೊಂಡಿದ್ದು

ಅಂಗದನ ವಾಕ್ಯವನ್ನು ಕೇಳಿ ಕಪಿವೀರರು ಎದ್ದು ನಿಂತು ತಮ್ಮ ತಮ್ಮ ಬಲಪರಾಕ್ರಮಗಳನ್ನು ಹೇಳಿಕೊಂಡರು. ಗಜನೆಂಬ ವಾನರನು ಎದ್ದು ನಿಂತು 'ನಾನು ಹತ್ತುಯೋಜನ ದೂರ ಹಾರಬಲ್ಲೆನು' ಎಂದು ಹೇಳಲು, ಗವಾಕ್ಷನು 'ನಾನು ಇಪ್ಪತ್ತುಯೋಜನ ದೂರ ಹಾರಬಲ್ಲೆನು' ಎಂದನು. ಗವಯನು 'ನಾನು ಮೂವತ್ತುಗಾವುದ ಹೋಗಬಲ್ಲೆನು' ಎಂದು ಕೂಗಲು, ಶರಭನು 'ನಾನು ನಲವತ್ತುಗಾವುದ ಹೋಗಬಲ್ಲೆನು' ಎಂದು ಕೂಗಿ ಹೇಳಿದನು. ಅನಂತರ ಗಂಧಮಾದನನು 'ನಿಃಸಂದೇಹವಾಗಿ ನಾನು ಐವತ್ತುಗಾವುದ ನೆಗೆಯುತ್ತೇನೆ' ಎನ್ನಲಾಗಿ, ಮೈಂದನು ನನಗೆ ಅರುವತ್ತುಗಾವುದ ನೆಗೆಯುವ ಶಕ್ತಿ ಇದೆ' ಎಂದನು. ಆಗ ವೀರನಾದ ದ್ವಿವಿದನು 'ನಾನು ಎಪ್ಪತ್ತುಯೋಜನದವರೆಗೆ ಹೋಗಬಲ್ಲೆನು. ಸಂದೇಹವಿಲ್ಲ' ಎಂದು ಘೋಷಿಸಿದನು. ಕಪಿಶ್ರೇಷ್ಠನಾದ ಸುಷೇಣನು "ಎಲೈ ವಾನರರೆ, ನಾನು ಎಂಭತ್ತುಗಾವುದದವರೆಗೆ ನೆಗೆಯಬಲ್ಲೆನು" ಎಂದು ನುಡಿದನು.

ಹೀಗೆ ವಾನರರು ತಮ್ಮ ಸಾಮರ್ಥ್ಯವನ್ನು ಹೇಳಿಕೊಂಡ ಮೇಲೆ ವೃದ್ಧನಾದ ಜಾಂಬವಂತನು ಅವರನ್ನು ಸಮಾಧಾನಪಡಿಸುತ್ತ ಈ ರೀತಿ ನುಡಿದನು: "ಪೂರ್ವದಲ್ಲಿ ನಮಗೂ ಸ್ವಲ್ಪಮಟ್ಟಿಗೆ ಪರಾಕ್ರಮವಿತ್ತು. ಈಗ ವಯಸ್ಸಾಯಿತು. ಮುಪ್ಪು ಬಂದಿತು. ಆದರೂ ಕಾರ್ಯಸ್ವರೂಪವು ಗಂಭೀರವಾದ್ದರಿಂದ ಉಪೇಕ್ಷೆಮಾಡಿ ಸುಮ್ಮನಿರುವುದು ಸರಿಯಲ್ಲ. ಶ್ರೀರಾಮನೂ ಸುಗ್ರೀವನೂ ಈ ಮಹತ್ತರವಾದ ಕಾರ್ಯಕ್ಕೆ ದೃಢನಿರ್ಧಾರದಿಂದ ಕೈಹಾಕಿದ್ದಾರೆ. ಕಾಲವು ಬದಲಾಗಿದೆ. ಆದರೂ ನನ್ನ ಸಾಮರ್ಥ್ಯವೇನೆಂಬುದನ್ನು ಕೇಳಿರಿ. ಈಗ ನಾನು ತೊಂಭತ್ತುಯೋಜನದವರೆಗೆ ಸಂದೇಹವಿಲ್ಲದೆ ಹೋಗಬಲ್ಲೆನು. ಪೂರ್ವದಲ್ಲಿ ಮಹಾವಿಷ್ಣುವು ವಾಮನಾವತಾರದಿಂದ ಬಲಿಚಕ್ರವರ್ತಿಯ ಯಜ್ಞಮಂಟಪಕ್ಕೆ ಬಂದಿದ್ದನು. ಆಗ ಆತನು ಮಹಾಶರೀರನಾಗಿ ಬೆಳೆದು ಮೂರುಲೋಕಗಳನ್ನೂ ಆಕ್ರಮಿಸಲು ಹೊರಟಾಗ ನಾನು ಅವನಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿದ್ದೆನು. ಆ ಯೌವನಕಾಲದಲ್ಲಿ ನನಗೆ ಅಪ್ರತಿಮವಾದ ಪರಾಕ್ರಮವಿತ್ತು. ಈಗ ಮುದುಕನಾಗಿದ್ದೇನೆ, ಹೆಚ್ಚುದೂರ ಹಾರಲು ಸಾಮರ್ಥ್ಯವಿಲ್ಲ. ಆದ್ದರಿಂದ ತೊಂಭತ್ತು ಯೋಜನದವರೆಗೆ ಹಾರಬಲ್ಲೆ. ಆದರೇನು? ಇದರಿಂದ ಕಾರ್ಯಸಿದ್ಧಿಯಾಗುವುದಿಲ್ಲ" ಎಂದು ಹೇಳಿದನು.

ಆಗ ವಾನರೋತ್ತಮನಾದ ಅಂಗದನು ಮಹಾಪ್ರಾಜ್ಞನಾದ ಜಾಂಬವಂತನ ಒಪ್ಪಿಗೆಯನ್ನು ಪಡೆದು "ಎಲೈ ವಾನರೋತ್ತಮರೆ, ನಾನು ನೂರುಯೋಜನಗಳ ದೂರವನ್ನು ಲಂಘಿಸಿ ಹೋಗಬಲ್ಲೆನು. ಆದರೆ ಹಿಂದಿರುಗಿ ಬರಲು ಸಾಧ್ಯವಾಗುತ್ತದೆಯೋ ಇಲ್ಲವೋ ನನಗೆ ನಿಶ್ಚಯವಿಲ್ಲ" ಎಂದನು. ಆಗ ವಾಗ್ವಿಶಾರದನಾದ ಜಾಂಬವಂತನು ಈ ರೀತಿ ಹೇಳಿದನು: "ಅಂಗದಕುಮಾರ, ನೀನು ನೂರುಯೋಜನವಾಗಲಿ ಸಾವಿರಯೋಜನವಾಗಲಿ ಲಂಘಿಸಬಹುದು. ಹಿಂದಿರುಗಿಯೂ ಬರಬಹುದು. ನಿನಗೆ ಆ ಸಾಮರ್ಥ್ಯ ಉಂಟು. ಆದರೆ ಇದು ಸರಿಯಲ್ಲ. ನೀನು ನಮಗೆ ಯುವರಾಜನಾದ ಸ್ವಾಮಿಯಾಗಿದ್ದೀಯೆ. ನೀನು ನಮ್ಮನ್ನು

ಕಳುಹಿಸಬೇಕೇ ಹೊರತು ನೀನೇ ಸೇವಕನಂತೆ ದೂತನಾಗಿ ಹೋಗಬಾರದು. ನೀನು ನಮಗೆ ಅಧಿಪತಿ. ನಿನ್ನನ್ನು ನಾವು ಸರ್ವವಿಧದಲ್ಲಿಯೂ ರಕ್ಷಿಸಿಕೊಳ್ಳಬೇಕು. ಸೇನಾಪತಿಯನ್ನು ಸೈನಿಕರು ರಕ್ಷಿಸಬೇಕಾದದ್ದು ಕರ್ತವ್ಯ. ಈ ಕಾರ್ಯಸಿದ್ಧಿಗೆ ನೀನೇ ಮೂಲವಾಗಿದ್ದೀಯೆ. ವಾನರಶ್ರೇಷ್ಠ, ನೀನು ಬುದ್ಧಿಪೌರುಷಸಂಪನ್ನನಾಗಿದ್ದೀಯೆ. ನೀನು ನಮ್ಮ ಸ್ವಾಮಿಪುತ್ರನೂ ಹೌದು, ಸ್ವಾಮಿಯೂ ಹೌದು. ನೀನು ನಮಗೆ ಬೆಂಬಲವನ್ನೂ ಪ್ರೋತ್ಸಾಹವನ್ನೂ ಕೊಡುತ್ತಿದ್ದರೆ ನಾವು ಈ ಕಾರ್ಯವನ್ನು ಹೇಗಾದರೂ ಸಾಧಿಸುತ್ತೇವೆ" ಎಂದನು. ಅದನ್ನು ಕೇಳಿ ಅಂಗದನು ಪುನಃ ಈ ರೀತಿ ಹೇಳಿದನು: "ಜಾಂಬವಂತ, ನಾನು ಸಮುದ್ರವನ್ನು ಲಂಘಿಸದೆ ಹೋದರೆ ಇನ್ನು ಇದನ್ನು ಲಂಘಿಸಲು ಸಮರ್ಥನಾದ ವೀರನಾರು? ಮತ್ತೆ ನಾವು ಪ್ರಾಯೋಪವೇಶವನ್ನೇ ಮಾಡಬೇಕಾದ ಪರಿಸ್ಥಿತಿ ಬರುತ್ತದೆ. ಕಪೀಶ್ವರನಾದ ಸುಗ್ರೀವನ ಆಜ್ಞೆಯನ್ನು ಪಾಲಿಸದೆ ನಾವು ಹಿಂದಿರುಗಲು ಸಾಧ್ಯವೆ? ಹಿಂದಿರುಗಿದರೂ ಪ್ರಾಣವನ್ನುಳಿಸಿಕೊಳ್ಳಲು ಸಾಧ್ಯವೆ? ಸುಗ್ರೀವನು ನಿಗ್ರಹಾನುಗ್ರಹ ಸಮರ್ಥನಾಗಿದ್ದಾನೆ. ಅವನ ಅಪ್ಪಣೆಯನ್ನು ಉಲ್ಲಂಘಿಸಿದರೆ ಮರಣವು ನಮಗೆ ಅನಿವಾರ್ಯವೇ ಸರಿ. ಆದ್ದರಿಂದ ಮಹಾಬುದ್ಧಿಶಾಲಿಯಾದ ನೀನೇ ಮುಂದೆ ಗತಿಯೇನೆಂದು ಚಿಂತಿಸಬೇಕಾಗಿದೆ" ಎಂದನು.

ಆಗ ಕಾರ್ಯಸಾಧನಚತುರನಾದ ಜಾಂಬವಂತನು "ಅಂಗದ, ಈ ಕಾರ್ಯವು ಯಾವ ಕೊರತೆಯೂ ಇಲ್ಲದೆ ಸಾಧ್ಯವಾಗುವುದು. ಈ ಕಾರ್ಯವನ್ನು ಸಾಧಿಸಬಲ್ಲ ವೀರನನ್ನು ನಿನಗೆ ನಾನು ತೋರಿಸಿಕೊಡುತ್ತೇನೆ" ಎಂದು ಹೇಳಿದನು. ಅನಂತರ ಒಂದು ಮೂಲೆಯಲ್ಲಿ ಯಾವ ಮಾತನ್ನೂ ಆಡದೆ ಸುಮ್ಮನೆ ಸುಖವಾಗಿ ಕುಳಿತಿದ್ದ ಕಪಿಶ್ರೇಷ್ಠನಾದ ಹನುಮಂತನ ಕಡೆಗೆ ಜಾಂಬವಂತನು ಕೈದೋರಿಸಿದನು.



## ೬೬ ನೆಯ ಅಧ್ಯಾಯ

## ಜಾಂಬವಂತನು ಹನುಮಂತನನ್ನು ಸಮುದ್ರವನ್ನು ದಾಟಬೇಕೆಂದು ಪ್ರಾರ್ಥಿಸಿದ್ದು

ಆ ಬಳಿಕ ಜಾಂಬವಂತನು ಕಂಗೆಟ್ಟಿದ್ದ ಕಪಿಸೇನೆಯನ್ನು ನೋಡಿ ಹನುಮಂತನನ್ನು ಕುರಿತು ಹೀಗೆಂದನು: "ಎಲೈ ಹನುಮಂತ, ನೀನು ಮಹಾಪರಾಕ್ರಮಿಯಾದವನು: ಸಕಲ ಶಾಸ್ತ್ರಾರ್ಥ ರಹಸ್ಯವನ್ನು ಬಲ್ಲವನು. ನೀನು ನಿನ್ನ ಪರಾಕ್ರಮವನ್ನು ಹೇಳಿಕೊಳ್ಳದೆ ಯಾವ ಕಾರಣ ಸುಮ್ಮನಿದ್ದೀಯೆ? ನೀನು ಬಲದಲ್ಲಿ ಸುಗ್ರೀವನಿಗೆ ಸರಿಯಾದವನು. ತೇಜಸ್ಸಿನಿಂದಲೂ ಶರೀರ ಬಲದಿಂದಲೂ ರಾಮಲಕ್ಷ್ಮಣರಿಗೆ ಸಮಾನನಾದವನು. ಲೋಕದಲ್ಲಿ ವಿನತೆಯ ಮಗನಾದ ಗರುತ್ಮಂತನು ಮಹಾಬಲವಂತನು; ಸಮಸ್ತ ಪಕ್ಷಿಗಳಿಗೂ ಒಡೆಯನು. ಆತನು ಸಮುದ್ರವನ್ನು ದಾಟಿ ಹೋಗುವಾಗ ಆತನ ಗರಿಗಳ ಬಲವನ್ನು ಅನೇಕಬಾರಿ ನೋಡಿದ್ದೇನೆ. ನಿನ್ನ ಬಲವು ಗರುತ್ಮಂತನ ಬಲಕ್ಕೆ ಸಮಾನವಾದುದು. ನಿನ್ನ ಪರಾಕ್ರಮವೂ ನಿನ್ನ ತೇಜಸ್ಸೂ ಗರುತ್ಮಂತನ ತೇಜೋಬಲಗಳಿಗೆ ಕಡಿಮೆಯಾದವಲ್ಲ! ಪುಂಜಿಕಸ್ಥಳೆಯೆಂಬ ಅಪ್ಸರಃಸ್ತ್ರೀಯು ಶಾಪವಶದಿಂದ ಕುಂಜರನೆಂಬ ವಾನರೋತ್ತಮನಿಗೆ ಪುತ್ರಿಯಾಗಿ ಜನಿಸಿದಳು. ಅವಳ ಹೆಸರು ಅಂಜನಾದೇವಿ.

ಅವಳು ಕಾಮರೂಪಿಣಿಯಾಗಿ ಕೇಸರಿ ಎಂಬ ವಾನರಶ್ರೇಷ್ಠನ ಪತ್ನಿಯಾಗಿದ್ದಳು. ಅವಳು ಒಮ್ಮೆ ಏಕಾಕಿನಿಯಾಗಿ ಸಂಚರಿಸುತ್ತಿರಲು ವಾಯುದೇವನು ಕಾಮಮೋಹಿತನಾಗಿ ಅವಳನ್ನು ಆಲಿಂಗಿಸಿಕೊಂಡನು. ಆಗ ಅಂಜನಾದೇವಿಯು ಕುಪಿತಳಾಗಲು ವಾಯುದೇವನು 'ದೇವಿ, ಕೋಪಿಸಬೇಡ, ನಾನು ದಿಕ್ಪಾಲಕನಾದ ವಾಯು. ನಿನಗೆ ಮಹಾತೇಜಸ್ವಿಯೂ, ಅಪ್ರತಿಮಪರಾಕ್ರಮಿಯೂ, ಬುದ್ಧಿಶಾಲಿಯೂ ಆದ ಪುತ್ರನು ಜನಿಸುವನು. ಅವನ ಸಾಮರ್ಥ್ಯ ನನಗೆ ಸಮಾನವಾಗಿರುತ್ತದೆ' ಎಂದು ವರವನ್ನು ಕೊಟ್ಟು ಮಾಯವಾದನು.

ಆಮೇಲೆ ನಿನ್ನ ತಾಯಿಯಾದ ಅಂಜನಾದೇವಿಯು ಕೆಲವು ಕಾಲದಲ್ಲಿಯೇ ಒಂದು ಗುಹೆಯಲ್ಲಿ ನಿನ್ನನ್ನು ಪಡೆದಳು. ನೀನು ಅವತರಿಸಿದಾಗ ಸೂರ್ಯೋದಯವಾಗಲು ಕೆಂಪಾದ ಸೂರ್ಯಮಂಡಲವನ್ನು ಕಂಡು ಅದು ಪಕ್ವವಾದ ಒಂದು ಫಲವೆಂದೆಣಿಸಿ ಸೂರ್ಯಮಂಡಲವನ್ನು ತೆಗೆದುನುಂಗಬೇಕೆಂದು ಮೂನ್ನೂರು ಗಾವುದದೂರ ಅಂತರಿಕ್ಷಮಾರ್ಗದಲ್ಲಿ ಮೇಲಕ್ಕೆ ನೆಗೆದು ಹೋಗುತ್ತ ಸೂರ್ಯತೇಜಸ್ಸಿನಿಂದ ತನುಕಾಂತಿಗುಂದದಿರಲು ದೇವೇಂದ್ರನು ಅತ್ಯಂತ ಕೋಪದಿಂದ ತನ್ನ ವಜ್ರಾಯುಧದಿಂದ ನಿನ್ನನ್ನು ಹೊಡೆದನು. ಆ ಆಯುಧವು ನಿನ್ನ ಮುಸುಡಿನ ವಾಮಭಾಗದಲ್ಲಿ ತಾಕಿತು. ಆದ್ದರಿಂದ ನಿನಗೆ ಹನುಮಂತ ಎಂಬ ಪ್ರಸಿದ್ಧವಾದ ಹೆಸರುಂಟಾಯಿತು. ಆಮೇಲೆ ನಿನ್ನ ತಂದೆಯಾದ ವಾಯುದೇವನು ಗಾಯಪಡೆದ ನಿನ್ನನ್ನು ಕಂಡು ಅತ್ಯಂತ ದುಃಖಪಟ್ಟು ಕೋಪಯುಕ್ತನಾಗಿ ಸಮಸ್ತ ಪ್ರಾಣಿಗಳಲ್ಲಿಯೂ ವಾಯುವು ಸಂಚರಿಸದಂತೆ ಮಾಡಲು ಇಂದ್ರಾದಿ ಸಮಸ್ತ ದೇವತೆಗಳು, ಚೈತನ್ಯಗುಂದಿದ ಪ್ರಾಣಿಸಮೂಹಗಳು ಕಂಗೆಟ್ಟಿದ್ದನ್ನು ನೋಡಿ ನಿನ್ನ ತಂದೆಯಾದ ವಾಯುದೇವನನ್ನು ಸಂತವಿಟ್ಟರು. ಆಗ ಬ್ರಹ್ಮದೇವನು ನಿನಗೆ ಶಸ್ತ್ರಾಸ್ತ್ರಗಳಿಂದ ಮರಣವಿಲ್ಲದ ಹಾಗೆ ವರವನ್ನು ಕೊಟ್ಟನು. ನಿನ್ನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ಅದರಿಂದ ಗಾಯವಡೆಯದಿದ್ದ ನಿನ್ನ ಶರೀರವನ್ನು ಕಂಡು ಇಂದ್ರನು ಸುಪ್ರೀತನಾಗಿ ನಿನಗೆ ಸ್ವೇಚ್ಛಾಮರಣವಲ್ಲದೆ ಮತ್ತೊಂದರಿಂದ ಮರಣವಿಲ್ಲದ ಹಾಗೆ ವರವನ್ನು ಕೊಟ್ಟನು! ನೀನು ಕೇಸರಿಯೆಂಬ ಕಪಿರಾಜನಿಗೆ ಕ್ಷೇತ್ರಜಕುಮಾರ, ವಾಯುವಿನ ಔರಸಪುತ್ರ. ಆದ್ದರಿಂದ ನೀನು ಸಮುದ್ರಾದಿಗಳನ್ನು ದಾಟುವಲ್ಲಿ ವಾಯುವಿಗೆ ಸಮಾನವಾದ ವೇಗವುಳ್ಳವನು. ಈಗ ನಾನು ಮುಪ್ಪನ್ನು ಪಡೆದು ಸತ್ತ್ವಗುಂದಿ ಬಲಹೀನನಾಗಿದ್ದೇನೆ. ನೀನು ಸರ್ವಗುಣಸಂಪನ್ನ. ಈ ಕಪಿನಾಯಕರಲ್ಲಿ ಈ ಸಮುದ್ರವನ್ನು ದಾಟಿ ಹೋಗುವುದಕ್ಕೆ ನೀನೇ ಸಮರ್ಥನು. ನಾನು ನಾರಾಯಣನ ತ್ರಿವಿಕ್ರಮಾವತಾರಕಾಲದಲ್ಲಿ ಈ ಭೂಮಿಯನ್ನು ಇಪ್ಪತ್ತೊಂದುಬಾರಿ ಪ್ರದಕ್ಷಿಣಮಾಡಿದೆನು. ಅಲ್ಲಲ್ಲಿ ಪರ್ವತಾಂತರಗಳಲ್ಲಿದ್ದ ಔಷಧಿಗಳನ್ನು ತಂದುಕೊಟ್ಟು ದೇವತೆಗಳ ಕೈಯಲ್ಲಿ ಕ್ಷೀರಸಮುದ್ರವನ್ನು ಮಥನಮಾಡಿಸಿದೆನು. ಈಗ ನನಗೆ ಅಂಥ ಸಾಮರ್ಥ್ಯವಿಲ್ಲ. ಈ ಕಪಿಸೇನೆಯು ನಿನ್ನ ಸಾಮರ್ಥ್ಯವನ್ನು ನೋಡಬೇಕೆಂದು ಉತ್ಸುಕವಾಗಿದೆ. ಎಲೈ ಹನುಮಂತನೆ, ಏಳು. ನಿನ್ನ ಶರೀರವನ್ನು ಬೆಳೆಸಿ ಈ ಸಮುದ್ರವನ್ನು ದಾಟು. ಸಮಸ್ತ ಪ್ರಾಣಿಗಳಿಗೂ ನೀನೇ ಗತಿ. ಈ ಕಪಿನಾಯಕರೆಲ್ಲರೂ ದಿಕ್ಕುತೋಚದವರಾಗಿರುವರು. ನೀನು ಯಾವಕಾರಣ ಉಪೇಕ್ಷೆಮಾಡುತ್ತಿದ್ದೀಯೆ? ನಾರಾಯಣನು ತ್ರಿವಿಕ್ರಮಾವತಾರದಲ್ಲಿ ಭೂಮಂಡಲವನ್ನು ತನ್ನ ಪಾದದೊಳಗೆ ಅಡಕಮಾಡಿಕೊಂಡಂತೆ ನೀನು ಈ ಸಮುದ್ರವನ್ನು ನೂರುಗಾವುದದಾರಿ ಪರ್ಯಂತ ನಿನ್ನ ಪಾದದೊಳಗೆ ಅಡಕಮಾಡಿಕೊ" ಎಂದು ನುಡಿದನು.

ಆ ಮಾತನ್ನು ಕೇಳಿ ಹನುಮಂತನು ಹರ್ಷದಿಂದ ಉಬ್ಬಿ ಸಮಸ್ತ ಕಪಿಸೇನೆಗೂ ಸಂತೋಷವನ್ನುಂಟುಮಾಡುತ್ತ ವಿರಾಡ್ರೂಪನ ಹಾಗೆ ಬೆಳೆದನು.

---

## ೬೭ ನೆಯ ಅಧ್ಯಾಯ

## ಹನುಮಂತನು ಸಮುದ್ರವನ್ನು ದಾಟಲು ಸಮ್ಮತಿಸಿದ್ದು

ಈ ಪ್ರಕಾರ ಹನುಮಂತನು ನೂರುಗಾವುದದಾರಿ ಅಗಲವಾದ ಸಮುದ್ರವನ್ನು ದಾಟುವುದ ಕ್ಕೋಸ್ಕರ ಉಬ್ಬಿ ಬೆಳೆಯುತ್ತಿರಲು ಆತನನ್ನು ಕಂಡು ಆ ಕಪಿನಾಯಕರು ತಮ್ಮ ತಮ್ಮ ಮನಸ್ಸಿನಲ್ಲಿದ್ದ ದುಃಖವನ್ನು ಬಿಟ್ಟು ಹರ್ಷಯುಕ್ತರಾಗಿ ಗರ್ಜಿಸತೊಡಗಿದರು. "ಹನುಮಂತನು ಮಹಾಬಲವಂತನು" ಎಂದು ಸ್ತೋತ್ರವನ್ನು ಮಾಡುತ್ತ ಸಂತೋಷಪಡುತ್ತ ಆಶ್ಚರ್ಯಪಡುತ್ತ ನಾನಾದಿಕ್ಕುಗಳಲ್ಲಿಯೂ ನಿಂತುಕೊಂಡು ನೋಡುತ್ತಿದ್ದರು. ತ್ರಿವಿಕ್ರಮಾವತಾರದ ಕಾಲದಲ್ಲಿ ಭೂಮಿಯನ್ನಳೆಯುತ್ತ ನಾರಾಯಣನು ಸಮಸ್ತ ಪ್ರಜೆಗಳನ್ನೂ ನೋಡುತ್ತಿದ್ದಂತೆ ಜಾಂಬವಂತನೇ ಮೊದಲಾದ ಸಮಸ್ತ ಕಪಿನಾಯಕರನ್ನೂ ನೋಡುತ್ತ ಅವರಿಂದ ಜಯಜಯ ಎಂದು ಕೊಂಡಾಡಿಸಿ ಕೊಂಡು ಮಹಾಬಲವಂತನಾದ ಹನುಮಂತನು ಅತ್ಯಂತ ವೆಗ್ಗಳವಾಗಿ ಬೆಳೆದನು. ಅವನು ತನ್ನ ಬಾಲವನ್ನು ಸುರುಟಿಕೊಂಡು ಹರ್ಷಯುಕ್ತನಾಗಿ ತನ್ನ ತೇಜಸ್ಸಿನಿಂದ ನಾನಾ ದಿಕ್ಕುಗಳನ್ನೂ ಬೆಳಗಿಸುತ್ತ ತನ್ನ ಸ್ವರೂಪವು ರಮಣೀಯವಾಗಿ ತೋರುತ್ತಿರಲು ಹೊಗೆಯಿಲ್ಲದ ಯಜ್ಞಪುರುಷನಂತೆ ರಮಣೀಯವಾಗಿ ಒಪ್ಪುತ್ತ ಸಂತೋಷಾತಿಶಯದಿಂದ ಶರೀರವೆಲ್ಲವೂ ಪುಳಕಿತವಾಗಲು ಆ ಕಪಿ ನಾಯಕರ ಮಧ್ಯದಲ್ಲಿ ಬಂದು ಜಾಂಬವಂತನೇ ಮೊದಲಾದ ಕಪಿವೃದ್ಧರಿಗೆ ಅಭಿವಂದಿಸಿ ಅವರನ್ನು ಕುರಿತು ಹೀಗೆಂದನು: "ಎಲೈ ಕಪಿನಾಯಕರುಗಳಿರಾ, ಆಕಾಶದಲ್ಲಿ ಸಂಚರಿಸುವ ಅಪರಿಮಿತವಾದ ಶಕ್ತಿಯುಳ್ಳ ಯಜ್ಞಪುರುಷನಿಗೆ ಸಖನಾದ, ಪರ್ವತಾಗ್ರಗಳಲ್ಲಿ ಸಂಚರಿಸುವ ವಾಯುದೇವನಂತೆ ನಾನೂ ಅತಿ ವೇಗವುಳ್ಳವನು. ನಾನು ವಾಯುದೇವನ ಮಗನು. ಈ ಸಮುದ್ರವನ್ನು ವಾಯುವಿಗೆ ಸಮಾನವಾಗಿ ದಾಟಬಲ್ಲೆನು. ಗಗನವನ್ನು ತುಡುಕುತ್ತ ಅತಿವಿಶಾಲವಾದ ಮಹಾಮೇರುಪರ್ವತ ವನ್ನಾದರೂ ಸಾವಿರಸಾರಿ ಪ್ರದಕ್ಷಿಣೆ ಮಾಡಬಲ್ಲೆನು. ನನ್ನ ಭುಜಗಳಿಂದ ಸಮುದ್ರವನ್ನೆತ್ತರಿಸಿ ನೂಕಿಬಿಟ್ಟೆನಾದರೆ ಸಮಸ್ತ ವನಸಹಿತವಾದ ಭೂಮಂಡಲವೂ ಸಮುದ್ರೋದಕದಿಂದ ಪರಿಪೂರ್ಣ ವಾಗುವುದು. ಆಕಾಶಮಾರ್ಗದಲ್ಲಿ ಅತಿವೇಗದಿಂದ ಸಂಚರಿಸುವ ಗರುಡನ ಬಳಿಗೆ ಸಾವಿರಬಾರಿ ಹೋಗಿಬರುವ ಸಾಮರ್ಥ್ಯವು ನನಗುಂಟು. ಸೂರ್ಯನು ಉದಯಪರ್ವತದಲ್ಲಿ ಉದಯವಾಗಿ ಅಸ್ತಮಯಪರ್ವತದಲ್ಲಿ ಅಸ್ತಮಯವಾಗುವ ಪರ್ಯಂತ ಭೂಮಿಯನ್ನು ಮುಟ್ಟದೆ ಆತನೊಡನೆ ಸಂಚರಿಸಿಕೊಂಡಿದ್ದು ತಿರುಗಿ ಬರಬಲ್ಲೆನು. ಅಂತರಿಕ್ಷಮಾರ್ಗದಲ್ಲಿ ಸಂಚರಿಸುವ ನಕ್ಷತ್ರಗಳೆಲ್ಲವನ್ನೂ ಅತಿಕ್ರಮಿಸಿ ಹೋಗುವೆನು. ಸಮುದ್ರವನ್ನು ಹೀರಿ ಒಣಗಿಸುವೆನು. ಭೂಮಿಯನ್ನು ಇಬ್ಭಾಗೆ ಯಾಗಿ ಒಡೆದೇನು. ಪರ್ವತಗಳನ್ನು ಚೂರ್ಣಮಾಡಿಯೇನು. ಸಮುದ್ರವನ್ನು ಹೊಕ್ಕು ಅದನ್ನು ನನ್ನ ಪಾದವೇಗದಿಂದ ಕದಡಿಬಿಟ್ಟೇನು. ಆಕಾಶಮಾರ್ಗದಲ್ಲಿ ತಡೆಯಿಲ್ಲದೆ ನನಗೆ ಸಂಚಾರವುಂಟು. ಎಲೈ ಕಪಿನಾಯಕರೆ, ನಾನು ಮಹಾಮೇರುಪರ್ವತಕ್ಕೆ ಸಮಾನವಾದ ಶರೀರದೊಡನೆ ಸಮುದ್ರವನ್ನು ದಾಟುವುದನ್ನು ಸಮಸ್ತ ಪ್ರಾಣಿಗಳೂ ನೋಡಲಿ! ನಾನು ಅಂತರಿಕ್ಷಮಾರ್ಗದಲ್ಲಿ ಹೋಗುವಾಗ ಸಮಸ್ತ ದಿಕ್ಕುಗಳನ್ನೂ ವ್ಯಾಪಿಸಿಕೊಂಡು ಆಕಾಶವನ್ನು ನುಂಗುವಂತೆ ಸಮಸ್ತ ಮೇಘಗಳನ್ನೂ ಒಡೆದು ತುಂಡುತುಂಡು ಮಾಡಿಕೊಂಡು ಸಮಸ್ತ ಪರ್ವತಗಳಿಗೂ ಕಂಪನವನ್ನು ಹುಟ್ಟಿಸುತ್ತ ಸಮುದ್ರವನ್ನು ದಾಟುವುದನ್ನು ನೀವೇ ಕಾಣುವಿರಿ. ನನಗೆ ಸಮಾನವಾದ ಬಲವು ಗರುಡ

ವಾಯುಗಳಲ್ಲಲ್ಲದೆ ಮತ್ತೊಬ್ಬರಲ್ಲಿಲ್ಲ. ಎವೆಯಾಡುವಷ್ಟರಲ್ಲಿ ಮಿಂಚು ಹೊಳೆಯುವಂತೆ ನಾನು ಮೇಘಮಂಡಲಕ್ಕೆ ನೆಗೆದು ತಿರುಗಿ ಬರಬಲ್ಲೆನು. ತ್ರಿವಿಕ್ರಮಾವತಾರಕಾಲದಲ್ಲಿ ಸ್ವರ್ಗಲೋಕಕ್ಕೆ ಪಾದವನ್ನು ನೀಡಿದ ಪರಮಪುರುಷನಂತೆ ನಾನು ಸಮುದ್ರವನ್ನು ದಾಟುವುದನ್ನು ಸಮಸ್ತ ಪ್ರಾಣಿಗಳೂ ನೋಡಲಿ! ನನ್ನ ಸಾಮರ್ಥ್ಯವನ್ನು ನಾನೇ ಬಲ್ಲೆನು. ಸರ್ವಥಾ ಸೀತಾದೇವಿಯನ್ನು ಕಂಡು ಬರುವೆನು. ನೀವೆಲ್ಲರೂ ನಿಮ್ಮ ಮನಸ್ಸಿಗೆ ಸಂತೋಷವನ್ನುಂಟುಮಾಡಿಕೊಳ್ಳಿ; ನಾನು ಗಮನವೇಗದಲ್ಲಿ ಗರುಡನಿಗೆ ಸಮಾನನಾಗಿದ್ದೇನೆ. ನನ್ನ ಮನಸ್ಸಿನ ಹರ್ಷವನ್ನು ನೋಡಿದರೆ ಹತ್ತುಸಾವಿರಗಾವುದ ದಾರಿ ನೆಗೆದು ಹೋಗಿ ತಿರುಗಿ ಬರಬಲ್ಲೆನೆಂದು ತೋರುತ್ತದೆ. ಬ್ರಹ್ಮದೇವನನ್ನಾದರೂ ವಜ್ರಪಾಣಿಯಾದ ದೇವೇಂದ್ರನನ್ನಾದರೂ ಬದಿಗೊತ್ತಿ ಅಮೃತವನ್ನು ತರಬಲ್ಲೆನು. ಲಂಕಾದ್ವೀಪವನ್ನು ಕಿತ್ತು ತರಬಲ್ಲೆನೆಂದು ನನ್ನ ಬುದ್ಧಿಗೆ ತೋರುತ್ತದೆ" ಎಂದು ನುಡಿದನು.

ಈ ಪ್ರಕಾರ ನುಡಿಯುತ್ತ ಗರ್ಜಿಸುತ್ತಿದ್ದ ಅತಿಬಲವಂತನಾದ ಹನುಮಂತನನ್ನು ಆತನ ಸಂಗಡ ಬಂದ ಕಪಿನಾಯಕರು ಹರ್ಷದಿಂದ ನೋಡುತ್ತಿದ್ದರು; ಆ ಸಮಯದಲ್ಲಿ ಸಮಸ್ತ ಕಪಿನಾಯಕರ ವಿಷಾದವನ್ನು ಪರಿಹರಿಸುತ್ತಿದ್ದ ಹನುಮಂತನ ಮಾತನ್ನು ಕೇಳಿ ಜಾಂಬವಂತನು ಆತನನ್ನು ಕುರಿತು "ಎಲೈ ವಾಯುಪುತ್ರನಾದ ಹನುಮಂತನೆ, ನೀನು ನಿನ್ನ ಜ್ಞಾತಿಗಳಾದ ಕಪಿನಾಯಕರ ಮನೋವ್ಯಥೆಯನ್ನು ತೊಲಗಿಸಿದೆ; ಆದ್ದರಿಂದ ಪುಣ್ಯಾತ್ಮರಾದ ಈ ಕಪಿನಾಯಕರೆಲ್ಲರೂ ನಿನ್ನ ಕಾರ್ಯಸಿದ್ಧಿಯಾಗುವಂತೆ ತಮ್ಮ ತಮ್ಮ ಇಷ್ಟದೇವತೆಗಳನ್ನು ಪ್ರಾರ್ಥನೆ ಮಾಡುತ್ತಿರುವರು; ನೀನು ನಿನ್ನ ಗುರುಕಟಾಕ್ಷದ ಕೃಪೆಯಿಂದಲೂ ಸಮಸ್ತ ಋಷಿಗಳ ಕೃಪೆಯಿಂದಲೂ ವೃದ್ಧರಾದ ಕಪಿನಾಯಕರ ಆಶೀರ್ವಾದದಿಂದಲೂ ಸಮುದ್ರವನ್ನು ದಾಟಿ ತಿರುಗಿಬರುವ ಪರ್ಯಂತ ನಾವೆಲ್ಲರೂ ಒಂದೇ ಪಾದದಲ್ಲಿ ನಿಂತುಕೊಂಡು ನಿನಗೋಸ್ಕರ ಕಾಯುತ್ತಿರುವೆವು. ಸಮಸ್ತ ಕಪಿನಾಯಕರ ಪ್ರಾಣಗಳೆಲ್ಲವೂ ನಿನ್ನ ಕೈಯಲ್ಲಿರುವುವು" ಎಂದು ನುಡಿದನು.

ಆಮೇಲೆ ಹನುಮಂತನು ಹರ್ಷದಿಂದ ಆ ಕಪಿನಾಯಕರನ್ನು ಕುರಿತು "ಎಲೈ ವೀರರೆ, ನಾನು ಇಲ್ಲಿಂದ ನೆಗೆದೆನಾದರೆ ನನ್ನ ಪಾದವೇಗವನ್ನು ಈ ಭೂಮಿಯು ತಾಳಲಾರದು; ಈ ಮಹೇಂದ್ರಪರ್ವತವು ಕೋಡುಗಲ್ಲುಗಳಿಂದ ಇಟ್ಟಣಿಸಿ ಗಟ್ಟಿಮುಟ್ಟಾಗಿದೆ: ಪುಷ್ಪಿತವಾದ ನಾನಾ ವೃಕ್ಷಗಳಿಂದಲೂ ಗೈರಿಕಾದಿ ಧಾತುಗಳಿಂದಲೂ ಅನೇಕ ಜರಿಗಳಿಂದಲೂ ರಮಣೀಯವಾದ ಈ ಮಹೇಂದ್ರಪರ್ವತದ ಶಿಖರದಮೇಲೆ ನಿಂತುಕೊಂಡು ಸಮುದ್ರವನ್ನು ದಾಟಲು ನೆಗೆದರೆ ಈ ಪರ್ವತಶಿಖರವು ನನ್ನ ವೇಗವನ್ನು ತಾಳಿಕೊಂಡೀತು" ಎಂದು ನುಡಿದು ನಾನಾಪ್ರಕಾರವಾದ ವೃಕ್ಷಗಳಿಂದಲೂ ನಾನಾ ಮೃಗಗಳಿಂದಲೂ ಎಳೆಯ ಗರಿಕೆಗಳಿಂದಲೂ ಸಿಂಹ ಶಾರ್ದೂಲ ಮದ್ದಾನೆಗಳಿಂದಲೂ ಮನೋಹರವಾದ ಮಹೇಂದ್ರಪರ್ವತವನ್ನೇರಿದನು. ಆತನ ಪಾದಾಘಾತದಿಂದ ಕಂಗೆಟ್ಟು ಮಹೇಂದ್ರಪರ್ವತವು ಸಿಂಹರಾಜನಿಂದ ಆಕ್ರಮಿಸಲ್ಪಟ್ಟ ಗಜರಾಜನಂತೆ ಘೋರಿಡುತ್ತಿತ್ತು! ಅಲ್ಲಿದ್ದ ಕೆರೆಕಟ್ಟೆಗಳೆಲ್ಲವೂ ಒಡೆದುಹೋದವು. ಸಮಸ್ತ ಮೃಗಪಕ್ಷಿಗಳೂ ಬೆದರಿ ಓಡಿದವು. ಮರಗಳೆಲ್ಲವೂ ಕದಲುತ್ತಿದ್ದವು. ಅಲ್ಲಿದ್ದ ಸರ್ಪಗಳು ತಮ್ಮ ತಮ್ಮ ಸ್ಥಾನಗಳಲ್ಲೇ ಮರೆಯಾದವು; ಕೆಲವು ಸರ್ಪಗಳು ತಮ್ಮ ಬಿಲಗಳಿಂದ ಹೊರಟು ಅರ್ಧಶರೀರವಾಗಿ ಕಾಣಿಸಿಕೊಂಡು ಮೊರೆಯಿಡುತ್ತಿದ್ದವು! ಮಹೇಂದ್ರಪರ್ವತವು ಈ ರೀತಿಯಲ್ಲಿ ಕದಲುತ್ತ ಭೂಮಿಯ ಪತಾಕೆಯೊ ಎಂಬಂತೆ ಒಪ್ಪುತ್ತಿತ್ತು! ಸಮಸ್ತ ಋಷಿಗಳೂ ಬೆದರಿ ಓಡುತ್ತಿದ್ದರು! ಈ ಪ್ರಕಾರ ಅತಿವೇಗವುಳ್ಳ ಹನುಮಂತನು ಸಮುದ್ರವನ್ನು

ದಾಟಬೇಕೆಂಬ ಬುದ್ಧಿಯಿಂದ ಮಹೇಂದ್ರಪರ್ವತವನ್ನು ಹತ್ತಿ ಮನಸ್ಸಿನಲ್ಲಿ ಲಂಕಾದ್ವೀಪಕ್ಕೆ ಹೋಗಬೇಕೆಂದು ನಿಶ್ಚಯಿಸಿಕೊಂಡನು.

ಇಂತು ಉತ್ತಮಕ್ಷತ್ರಿಯಕುಲೋದ್ಭವ, ಬಿರುದೆಂತೆಂಬರ ಗಂಡ, ಗಜಬೇಂಟೆಕಾರ, ಸಮಸ್ತಶತ್ರುಸಂಘ
ಜೀಮೂತ ಜಂಝಾಮಾರುತ, ಪ್ರತ್ಯರ್ಥಿ ಪೃಥ್ವೀಪತಿ ವನ ದಾವಾನಲ, ಸಮಸ್ತವಿದ್ವಜ್ಜನ ಸಮುದಾಯ
ಕಲ್ಪಭೂಜಾತ, ಆಶ್ರಿತಜನ ಸುರಧೇನು, ಕಾಮಿನೀಜನ ನೂತನ ಪಂಚಬಾಣ, ಚೌಷಷ್ಟಿ
ಕಲಾಪ್ರವೀಣ, ಮಹಿಷಾಪುರವರಾಧೀಶ, ಚಾಮರಾಜವಂಶೋದ್ಧಾರಕ, ತಿಮ್ಮರಾಜ
ತನೂಜ ನರಸರಾಜ ಗರ್ಭದುಗ್ಧಸಿಂಧುಸುಧಾಕರ, ಶ್ರೀಲಕ್ಷ್ಮೀಕಾಂತ ಪಾದಾರ
ವಿಂದ ದ್ವಂದ್ವನಿಷ್ಯಂದಾಮಂದ ಮಕರಂದ ಬಿಂದುಸಂದೋಹಾಸ್ವಾದನ
ನಿರ್ಮಲೀಕೃತಾಂತಃಕರಣ, ತ್ರಿಣಯನೇಶ್ವರಸದ್ಭಕ್ತಿಯುಕ್ತ
ಮಹಾಬಲಾಚಲಾವಾಸ, ಶ್ರೀಚಾಮುಂಡಿಕಾಂಬಾ ಸದ್ಭಕ್ತಿ
ಮಂಡಿತರಾದ ಶ್ರೀಚಾಮರಾಜ ಒಡೆಯರವರಿಂದ
ಲೋಕೋಪಕಾರಾರ್ಥವಾಗಿ ಬುಧಜನಸಂಮತಿ
ಯಿಂದ ಕರ್ಣಾಟಕಭಾಷಾವಚನ ರಚನೆ
ಯಾದ ಶ್ರೀಚಾಮರಾಜೋಕ್ತಿ
ವಿಲಾಸವೆಂಬ ಕನ್ನಡ
ರಾಮಾಯಣದಲ್ಲಿ

## ಕಿಷ್ಕಿಂಧಾಕಾಂಡವು ಸಮಾಪ್ತವಾಯಿತು

ಸುಗ್ರೀವಾದಿಯುತಂ ಶ್ರೀಶಂ ಭಸ್ಮಾಂಗಾವೃತವಿೀಶ್ವರವತ್ ।
ಮಹೇಶ್ವರಸಮಂ ಧ್ಯಾಯೇತ್ ಕಿಷ್ಕಿಂಧಾಕಾಂಡ ಉತ್ತಮೇ ॥

